

# RIG-VEDA SAMHITA

# ಋಗ್ವೇದ ಸಂಹಿತಾ

## ಐತರೇಯಬ್ರಾಹ್ಮಣಂ

ಮೂರನೆಯಭಾಗ (ಅಧ್ಯಾಯಗಳು ೩೧–೪೦)

ಮತ್ತು

## ॥ ಐತರೇಯಾರಣ್ಯಕಂ ॥

(ಐತರೇಯೋಪನಿಷತ್ಸಹಿತವಾಗಿ)

ಅನುವಾದಕ :

ಆಸ್ಥಾನ ಮಹಾವಿದ್ವಾನ್,

ಹೆಚ್. ಪಿ. ವೆಂಕಟರಾವ್.

ವಿನಾಯಕ್ ಪ್ರೆಸ್

ಮೈಸೂರು


ಋಗ್ವೇದಸಂಹಿತಾ
ಭಾಗ ೩೩
ಐತರೇಯಬ್ರಾಹ್ಮಣಂ (ಮೂರನೆಯ ಭಾಗ)
ಮತ್ತು
ಐತರೇಯಾರಣ್ಯಕಂ (ಐತರೇಯೋಪನಿಷತ್ಸಹಿತ)

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಭಾಗ—೩೩

# RIG-VEDA

# ಋಗ್ವೇದ ಸಂಹಿತಾ

ಸಾಯಣಭಾಷ್ಯಯುತವೂ, ಕರ್ನಾಟಕಭಾಷಾವಿವರಣೆಸಹಿತವೂ ಆದ

## ಐತರೇಯಬ್ರಾಹ್ಮಣಂ

ಮೂರನೆಯಭಾಗ (ಅಧ್ಯಾಯಗಳು ೩೧–೪೦)

ಮತ್ತು

## ॥ ಐತರೇಯಾರಣ್ಯಕಂ ॥

(ಐತರೇಯೋಪನಿಷತ್ಸಹಿತವಾಗಿ)

*Translated with Exhaustive Critical Notes & Explanations*

*by*

Asthana Mahavidwan

H. P. VENKATA RAO

*Editor*



*Printed at*

Sri Vinayak Printing Works, Mysore.

1961

# ಪೀಠಿಕೆ

ಋಗ್ವೇದದ ಈ ಭಾಗದಲ್ಲಿ ಐತರೇಯಬ್ರಾಹ್ಮಣವು ಮುಗಿದು ಐತರೇಯಾರಣ್ಯಕವೂ ಮುಗಿದಿದೆ. ಐತರೇಯ ಬ್ರಾಹ್ಮಣದಲ್ಲಿರುವ ಒಟ್ಟು ೪೦ ಅಧ್ಯಾಯಗಳಲ್ಲಿ ಹಿಂದಿನ ಭಾಗಗಳಲ್ಲಿ ೩೦ ಅಧ್ಯಾಯಗಳೂ, ಈ ಭಾಗದಲ್ಲಿ ಕೊನೆಯ ೧೦ ಅಧ್ಯಾಯಗಳೂ ಸೇರಿವೆ. ಇದರ ಜತೆಗೆ ಆರಣ್ಯಕದ ೧೮ ಅಧ್ಯಾಯಗಳೂ ಸೇರಿವೆ.

ಐತರೇಯಬ್ರಾಹ್ಮಣದ ವಿಷಯದಲ್ಲಿ ಹೇಳಬೇಕಾದ ವಿವರಣೆಗಳನ್ನು ಹಿಂದಿನ ಎರಡು ಭಾಗಗಳಲ್ಲಿಯೇ ಹೇಳಿರುವುದ ರಿಂದ ಇಲ್ಲಿ ಪುನಃ ಹೇಳಬೇಕಾದ ವಿಷಯಗಳೇನೂ ಇರುವುದಿಲ್ಲ. ಮೂರು ಭಾಗಗಳಲ್ಲಿ ೪೦ ಅಧ್ಯಾಯಗಳಿಂದ ಕೂಡಿರುವ ಈ ಬ್ರಾಹ್ಮಣ ಗ್ರಂಥದಲ್ಲಿ ಯಜ್ಞಯಾಗಾದಿವಿಷಯಗಳನ್ನೂ ಅದರಲ್ಲಿಯೂ ಋಗ್ವೇದಕ್ಕೆ ಸಂಬಂಧಪಟ್ಟ, ಎಂದರೆ ಹೋತೃ ಮತ್ತು ಅವನ ಸಹಾಯಕರಾದ ಋತ್ವಿಜರು ಅನುಸರಿಸಬೇಕಾದ ನಿಯಮಗಳು, ಪಠಿಸಬೇಕಾದ ಮಂತ್ರಗಳು. ನಾನಾ ಕಾರ್ಯಕಲಾಪಗಳು, ಆ ಕಾರ್ಯಕಲಾಪಗಳು ಹೇಗೆ ಉಂಟಾದವು, ಅವುಗಳನ್ನು ಏತಕ್ಕೆ ಮಾಡಬೇಕು ಮುಂತಾದ ವಿಷಯಗಳ ವಿಸ್ತಾರವಾದ ವಿವರಣೆಯಿದೆ. ಎಂದರೆ ಯಜ್ಞಮಾಡುವುದಕ್ಕಾಗಿ ವಿಧಿಸಿರುವ ದೀಕ್ಷಾವಿಧಿ ಮೊದಲುಗೊಂಡು ಯಜ್ಞದ ಪರಿಸಮಾಪ್ತಿಯಾದ ಅವಭೃಥಸ್ನಾನದವರೆಗೂ ಅನುಸರಿಸಬೇಕಾದ ವಿಧಿನಿಯಮಗಳನ್ನೂ ಅವಶ್ಯವಾದ ಮಂತ್ರ ಗಳನ್ನೂ ಅರ್ಥವತ್ತಾಗಿಯೂ ಕಾರಣಸಹಿತವಾಗಿಯೂ ವಿವರಿಸಲಾಗಿದೆ. ಇತರ ವೇದಗಳ ಬ್ರಾಹ್ಮಣಗ್ರಂಥಗಳಲ್ಲಿ ಇಷ್ಟು ವಿಸ್ತಾರವಾದ ಮತ್ತು ಕಾರಣ ಸಹಿತವಾದ ವಿವರಣೆ ಇರುವುದಿಲ್ಲ. ಆದ್ದರಿಂದ ಈ ಗ್ರಂಥವು ಅತ್ಯವಶ್ಯಕವೆಂದು ಎಲ್ಲರಿಂದಲೂ ಅಂಗೀಕರಿಸಲ್ಪಟ್ಟಿರುವುದು.

ಆರಣ್ಯಕವೆಂಬ ಗ್ರಂಥವು, ಈ ಬ್ರಾಹ್ಮಣಗ್ರಂಥದ ಕೊನೆಯ ಭಾಗವೆಂದೂ ಇದರಲ್ಲಿ ಅತಿರಹಸ್ಯವಾದ ವಿಷಯಗಳಿರು ವುದರಿಂದ ಸಾಮಾನ್ಯಜನರಿಗೆ ತಿಳಿಯದಂತೆ ಗುರುವು ಶಿಷ್ಯನಿಗೆ ಅರಣ್ಯದಲ್ಲಿ ಮಾತ್ರ ಬೋಧಿಸಬೇಕೆಂದು ನಿಯಮವಿರುವುದ ರಿಂದ ಈ ಗ್ರಂಥಕ್ಕೆ ಆರಣ್ಯಕವೆಂಬ ಹೆಸರು ಬಂದಿದೆ. ಇದೇ ರೀತಿಯಾಗಿರುವ ಆರಣ್ಯಕ ಗ್ರಂಥಗಳು ಇತರ ವೇದಗಳಲ್ಲಿಯೂ ಇರುವವು. ಪ್ರಸಕ್ತವಾದ ಈ ಐತರೇಯಾರಣ್ಯಕದಲ್ಲಿ, ಐತರೇಯೋಪನಿಷತ್ (೬-೧೮ ಅಧ್ಯಾಯಗಳು ಎಂಬ ಪ್ರಸಿದ್ಧವಾದ ಉಪನಿಷತ್ತಿರುವುದು. ಇದು ಮುಖ್ಯವಾದ ಉಪನಿಷತ್ತುಗಳಲ್ಲಿ ಒಂದಾಗಿರುವುದು. ಈ ವಿಧವಾದ ಉಪನಿಷದ್ಗ್ರಂಥಗಳಲ್ಲಿ ಎಲ್ಲಾ ದೇಶದ (ಅದರಲ್ಲಿಯೂ ಪಾಶ್ಚಿಮಾತ್ಯದೇಶದ) ತತ್ತ್ವಾಭಿಮಾನಿಗಳಿಗೆ ಅತ್ಯಾಸಕ್ತಿ ಇರುವುದು. ಇವು ಅನೇಕ ಸಾವಿರ ವರ್ಷಗಳ ಹಿಂದೆ ರಚಿತವಾಗಿದ್ದರೂ ಈಗಿನ (Modern) ತತ್ತ್ವ (Science) ಗಳಿಗೆ ಹೊಂದಿಕೊಂಡೇ ಇರುವವು. ಇವುಗಳನ್ನು ಅಧ್ಯಯನ (ಅರ್ಥವತ್ತಾಗಿ ಅಭ್ಯಾಸ) ಮಾಡುವುದರಿಂದ ಜನರ ಜ್ಞಾನವು ಹೆಚ್ಚುವುದಲ್ಲದೆ ಪ್ರಪಂಚ (Universe) ವಿಷಯದಲ್ಲಿ ನಿಜವಾದ ಪರಿಜ್ಞಾನವುಂಟಾಗುವುದು.

ಅತಿ ಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನೂ ಅದಕ್ಕೆ ಸೇರಿದ ಇತರ ಗ್ರಂಥಗಳನ್ನೂ ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹಾತ್ಕಾರ್ಯದಿಂದ ಪಂಡಿತಪಾಮರಾದಿಯಾದ ಸಕಲ

ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂ ಪಂಡಿತರೂ ಪ್ರಜಾನುರಾಗಿಗಳೂ ದೈವಭಕ್ತಿತತ್ಪರರೂ, ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ** ಮಹಾಪ್ರಭುವರ್ಯರೂ, ಮತ್ತು ವಿದ್ಯಾಭಿಮಾನಿಗಳೂ ಪ್ರಜಾಹಿತೈಷಿಗಳೂ ಆದ ಮೈಸೂರು ಸರ್ಕಾರದ ಸಚಿವರೂ ಬಹುದ್ರವ್ಯಸಾಧ್ಯವಾದ ಈ ಗ್ರಂಥ ಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ ಅವರ ಕುಟುಂಬಕ್ಕೂ, ನಮ್ಮ ಘನ ಸರ್ಕಾರದ ಸಚಿವರಿಗೂ ಮತ್ತು ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಪರಮೇಶ್ವರನು ಐಹಿಕಫಲಗಳಾದ ಆಯುರಾರೋಗ್ಯೈಶ್ವರ್ಯಾದಿ ಸಕಲ ಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಿಕಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು.
ಪ್ಲವನಾಮ ಸಂ॥ ಮಾರ್ಗಶೀರ್ಷ ಶುದ್ಧ ಸಪ್ತಮೀ ಗುರುವಾರ
14-12-1961

ಅನುವಾದಕ
ಹೆಚ್.ಪಿ. ವೆಂಕಟರಾವ್,
ಆಸ್ಥಾನ ಮಹಾವಿದ್ವಾನ್

# ವಿಷಯಾನುಕ್ರಮಣಿಕೆ

## ಐತರೇಯಬ್ರಾಹ್ಮಣ—ಮೂರನೆಯ ಭಾಗ

ಇಲ್ಲಿಗೆ ಐತರೇಯ ಬ್ರಾಹ್ಮಣದ ವಿಷಯಾನುಕ್ರಮಣಿಕೆ ಸಮಾಪ್ತವು

———

# ಐತರೇಯಾರಣ್ಯಕವು





॥ಶ್ರೀಃ॥

॥ ಶ್ರೀ ಮಹಾಗಣಾಧಿಪತಿಯೇನಮಃ ॥

---

ಸಾಯಣಭಾಷ್ಯ ಸಹಿತಂ

# ಐತರೇಯ ಬ್ರಾಹ್ಮಣಂ



ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ

ಐತರೇಯ ಬ್ರಾಹ್ಮಣವು



## ತೃತೀಯೋ ಭಾಗಃ

ಮೂರನೆಯ ಭಾಗವು

ಅಧ್ಯಾಯಗಳು ೩೧—೪೦

## ಏಕತ್ರಿಂಶೋಽಧ್ಯಾಯೇ ಪ್ರಥಮಃ ಖಂಡಃ

ಮೂವತ್ತೊಂದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ಯಜ್ಞದಲ್ಲಿ ಪಾತ್ರಗಳನ್ನು ವಹಿಸುವ ನಾನಾ ಋತ್ವಿಕ್ಕುಗಳಿಗೆ ಯಜ್ಞಪಶುವಿನ
ನಾನಾ ಭಾಗಗಳನ್ನು ವಿಭಾಗಿಸಿ ಹಂಚುವ ಕ್ರಮ ಇತ್ಯಾದಿ]



ವರ್ಣಿತಂ ಶಸ್ತ್ರಜಾತಂ ತು ಹೋತೃಹೋತ್ರಕಗೋಚರಃ ।
ಪಶೋರುಪವ್ರತೀಯಸ್ಯ ವಿಭಾಗಸ್ತ್ವಥ ಕಥ್ಯತೇ ॥

ಆಶ್ವಲಾಯನಃ ಸತ್ರಿಣಾಂ ಧರ್ಮೇಷ್ವೇವಮಾಹ—ಸುತ್ಯಾಸು ಹವಿರುಚ್ಛಿಷ್ಟಭಕ್ಷಾ ಏವ ಸ್ಯುರ್ಧಾನಾಃ ಕರಂಭಃ ಪರಿವಾಪಃ ಪುರೋಳಾಶಃ ಪಯಸ್ಯೇತಿ ತೇಷಾಂ ಯದ್ಯತ್ಕಾಮಯೇರಂ-

ಸ್ತತ್ತದುಪಕಲ್ಪಯೇಯುರಿತಿ । ಪ್ರಾಣಧಾರಣಾಯ ಯಥಾ ಪರ್ಯಾಪ್ಯತೇ ತಥಾ ಹವಿಃಶೇಷಸ್ಯಾಧಿಕ್ಯೇನ ಸಂಪಾದನಮುಪಕಲ್ಪನಂ । ಏವಂ ಬಹುವಿಧಾನ್ಹವಿಃಶೇಷಭಕ್ಷಾನುಕ್ತ್ವಾ ಪುನರಪ್ಯಂತ ಏವಮುವಾಚ—ಅಪಿ ವಾನ್ಯತ್ರ ಸಿದ್ಧಂ ಗಾರ್ಹಪತ್ಯೇ ಪುನರಧಿಶ್ರಿತ್ಯೋಪವ್ರತಯೇರನ್ನಾನ್ಯಾನ್ವಾ ಪಥ್ಯಾನ್ಭಕ್ಷಾನಾಮೂಲಫಲೇಭ್ಯ ಏತೇನ ವರ್ತಯೇಯುಃ ಪಶುನಾ ಚೇತಿ । ಅನ್ಯತ್ರ ಸಿದ್ಧಂ ಗೃಹೇ ಪಕ್ವಮನ್ನಂ ಪುನರಪಿ ಗಾರ್ಹಪತ್ಯೇ ಸಕೃದವಸ್ಥಾಪ್ಯೋಪವ್ರತಯೇರನ್ನುಪಭುಂಜೀರನ್ । ಅನ್ಯಾನ್ವಾ ಲಡ್ಡುಕಮಂಡಕಾದೀನ್ಭಕ್ಷಾನ್ಪಥ್ಯಾನಜೀರ್ಣಾದಿದೋಷರಹಿತಾನ್ಮೂಲಫಲಪರ್ಯಂತಮಿಚ್ಛಯಾ ಸ್ವೀಕುರ್ಯಾತ್ । ಏತೇನ ಸುತ್ಯಾದಿನೇಷು ಸನ್ನಿಹಿತೇನ ಸವನೀಯಪಶುನಾ ಚ ವರ್ತಯೇಯುರ್ಜೀವನಸ್ವರೂಪಾಂ ವೃತ್ತಿಂ ಸಂಪಾದಯೇಯುಃ । ಇತ್ಯೇವಂ ಸವನೀಯಪಶುರೂಪಸ್ಯ ಹವಿಷಃ ಶೇಷಭಕ್ಷಣೇನ ಸತ್ತ್ರಿಣಾಂ ಜೀವನಮಪ್ಯಭಿಹಿತಂ । ತಸ್ಮಿನ್ಪಶೌ ಕಸ್ಯ ಕೋ ವಿಭಾಗ ಇತಿ ಜಿಜ್ಞಾಸಾಯಾಂ ತದ್ವಿಭಾಗಕಥನಂ ಪ್ರತಿಜಾನೀತೇ ॥

ಇದುವರೆಗೂ ಶಸ್ತ್ರ ಎಂಬ ಯಜ್ಞದಲ್ಲಿ ಪಠಿಸಬೇಕಾದ ಮಂತ್ರಗಳ ಸಮೂಹವನ್ನೂ ಅವುಗಳನ್ನು ಪಠಿಸಬೇಕಾದ ಹೋತೃ ಎಂಬ ಋತ್ವಿಜನ ಮತ್ತು ಅವನ ಸಹಾಯಕವರ್ಗದ ಇತರ ಋತ್ವಿಜರ ವಿಷಯವನ್ನೂ ವಿವರಿಸಿದ್ದಾಯಿತು. ಈಗ ಯಜ್ಞದಲ್ಲಿ ಆಹುತಿಗಳ ಹೋಮಾನಂತರ, ಯಜ್ಞಪಶುವಿನ ನಾನಾ ಅಂಗಗಳನ್ನು ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ಹೋಮ ಮಾಡಿದನಂತರ ಉಳಿಯುವ ಹವಿಃಶೇಷವನ್ನು ಯಜ್ಞದಲ್ಲಿ ಭಾಗವಹಿಸುವ ಋತ್ವಿಕ್ಕುಗಳು ಮತ್ತು ಯಜ್ಞಮಾಡುವ ಯಜಮಾನ, ಅವನ ಪತ್ನೀ ಮುಂತಾದ ಯಜ್ಞದಲ್ಲಿ ಪಾತ್ರವಹಿಸುವ ಜನರಿಗೆ ವಿಭಾಗಮಾಡುವ ಕ್ರಮವನ್ನು ಇಲ್ಲಿ ವಿವರಿಸಲಾಗುವುದು,

ಸೂತ್ರಕಾರರಾದ ಆಶ್ವಲಾಯನ ಮಹರ್ಷಿಯು ಸತ್ತ್ರಯಾಗವನ್ನು ಮಾಡುವ ಋತ್ವಿಕ್ಕುಗಳು ಮತ್ತು ಯಜಮಾನರು ಹವಿಃಶೇಷಭಕ್ಷಣಮಾಡುವ ವಿಷಯದಲ್ಲಿ ಆಚರಿಸಬೇಕಾದ ಕ್ರಮವನ್ನು ಈ ರೀತಿ ವಿವರಿಸಿರುವರು—ಸೋಮಯಾಗದಲ್ಲಿ ಸೋಮರಸವನ್ನು ಹಿಂಡಿ ಸಿದ್ಧಪಡಿಸಿ ಅಗ್ನಿಯಲ್ಲಿ ಮಂತ್ರಸಹಿತವಾಗಿ ಆಹುತಿಗಳನ್ನರ್ಪಿಸಿ ಹೋಮಮಾಡಿದನಂತರ ಉಳಿಯುವ ಹವಿಶೇಷವು ಐದು ವಿಧವಾಗಿರುವುದು. ಈ ಹವಿಃಶೇಷವನ್ನು ಯಜ್ಞಮಾಡುವ ಯಜಮಾನನೂ ಅವನ ಪತ್ನಿಯೂ, ಋತ್ವಿಕ್ಕುಗಳೂ ಭಕ್ಷಿಸಬೇಕೆಂದು ವಿಧಿ ಇದೆ. ಹವಿಃಶೇಷದಲ್ಲಿ ಮೇಲೆ ಹೇಳಿದ ಐದುವಿಧಗಳಾದ ಹವಿಶ್ಶೇಷವಲ್ಲದೆ ಯಜ್ಞಪಶುವಿನ ಅಂಗಗಳನ್ನು ಹೋಮ ಮಾಡಿ ಉಳಿದ ಭಾಗವೂ ಹವಿಃಶೇಷವೆಂದು ಹೇಳಲ್ಪಡುವುದು. ಮೇಲೆ ಹೇಳಿದ ಐದುವಿಧ ಹವಿರ್ದ್ರವ್ಯಗಳಾವುವೆಂದರೆ—ಧಾನಾಃ ಕರಂಭಃ ಪರಿವಾಪಃ ಪುರೋಡಾಶಃ ಪಯಸ್ಯಾ ಎಂದು ಐದು ವಿಧಗಳಾಗಿರುವವು. ಇವುಗಳಿಗೆ ಪಂಚವಿಧ ಹವಿಸ್ಸುಗಳು ಅಥವಾ ಹವಿಷ್ಪಂಕ್ತಿ ಎಂಬ ಹೆಸರು ರೂಢಿಯಲ್ಲಿರುವುದು. ಈ ವಿಷಯವನ್ನು ನಾವು ಹಿಂದೆಯೆ ಪ್ರಸ್ತಾಪಿಸಿದ್ದೇವೆ. ಆದರೂ ಸಂಧರ್ಭಾನುಸಾರವಾಗಿ ಇವುಗಳ ವಿಷಯವನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುತ್ತೇವೆ.

ಈಗ ಯಜ್ಞಗಳಲ್ಲಿ ನಡೆಯುವ ಸವನಕರ್ಮಸಂಬಂಧವಾದ ಪುರೋಡಾಶಾದಿಗಳನ್ನೂ ಧಾನಾದಿಹೋಮದ್ರವ್ಯಗಳನ್ನೂ ವಿವರಿಸುವರು. ಧಾನಾದಿ ದ್ರವ್ಯರೂಪವಾದ ಹೋಮದ್ರವ್ಯಗಳ ಸಮೂಹವು ಅಥವಾ ಪಂಕ್ತಿಯು ಯಾವ ಸೋಮಯಾಗದಲ್ಲಿ ಕಂಡುಬರುವುದೋ ಎಂದರೆ ವಿನಿಯೋಗಮಾಡಲ್ಪಡುವುದೋ ಅಂತಹ ಯಜ್ಞಕ್ಕೆ ಹವಿಷ್ಪಂಕ್ತಿಯೆಂದು ಹೆಸರು. ಈ ವಿಧವಾದ ಯಜ್ಞಸ್ವರೂಪವನ್ನು ತಿಳಿದು ಯಾವ ಪುರುಷನು ಅದರಂತೆ ಆಚರಿಸುವನೋ ಅವನು ಆ ಯಜ್ಞಾನುಷ್ಠಾನದಿಂದ ಸಕಲ ಸಮೃದ್ಧಿಯನ್ನೂ ಪಡೆಯುವನು. ಚೆನ್ನಾಗಿ ಹುರಿದ ಯವ ಅಥವಾ

ತಂಡುಲ (ಅಕ್ಕಿಗೆ) ಗೆ ಧಾನಾಃ ಎಂದು ಹೆಸರು. ಈ ವಿಷಯದಲ್ಲಿ ಆಪಸ್ತಂಬರು ಹೀಗೆ ಹೇಳಿರುವರು—**ಕಪಾಲಾನಾಮುಪಧಾನಕಾಲೇ ಪ್ರಥಮಕಪಾಲಮಂತ್ರೇಣ ಧಾನಾರ್ಥಂ ಲಾಜಾರ್ಥಂ ಕಪಾಲೇ ಅಧಿಶ್ರಿತ್ಯ ತಂಡುಲಾನೋಪ್ಯ ಧಾನಾಃ ಕರೋತಿ । ವ್ರೀಹೀನೋಪ್ಯ ಲಾಜಾನ್ಕರೋತಿ । ಪುರೋಡಾಶಮಧಿಶ್ರಿತ್ಯ ಆಮಿಕ್ಷಾವತ್ಪಯಸ್ಯಾಂ ಕರೋತಿ । ಉದ್ವಾಸನಕಾಲೇ ಧಾನಾ ಉದ್ವಾಸ್ಯ ವಿಭಾಗಮಂತ್ರೇಣ ವಿಭಜ್ಯಾರ್ಧಾ ಆಜ್ಯೇನ ಸಂಯೌತಿ । ಅರ್ಧಾ ಪಿಷ್ಟಾನಾಮಾವೃತಾ ಸಕ್ತೂನ್ ಕರೋತಿ । ಮಂಥಂ ಸಂಯುತಂ ಕರಂಭ ಇತ್ಯಾಚಕ್ಷತೇ । ಲಾಜಾ ಪರಿವಾಪ ಇತಿ । ನಖೈರ್ಲಾಜೇಭ್ಯಃ ಸ್ತುಷಾ ಸಂಹರತಿ** (ಆಪ. ಶ್ರೌ. ೧೨-೪-೯ ರಿಂದ ೧೪) ಎಂದರೆ ಅದರ ವಿವರಣೆಯು ಹೀಗಿರುವುದು—ಕಪಾಲಗಳನ್ನು ಸಿದ್ಧಪಡಿಸುವಾಗ ಎಂದರೆ ಮಣ್ಣಿನಿಂದ ಕಪಾಲ ಅಥವಾ ಹೆಂಚನ್ನು (ಕಾವಲಿ) ನಿರ್ಮಿಸುವಾಗ ಮೊದಲನೆಯ ಕಪಾಲವನ್ನು ನಿರ್ಮಿಸಿದನಂತರ ಅದರ ಮೇಲೆ ಅಕ್ಕಿಯನ್ನು ಹುರಿದು **ಧಾನಾಃ** ಎಂಬ ದ್ರವ್ಯವನ್ನು ಸಿದ್ಧಪಡಿಸಬೇಕು ಮತ್ತು ಆ ಕಪಾಲದ ಮೇಲೆ ಭತ್ತವನ್ನು ಹಾಕಿ ಅರಳನ್ನು ಸಿದ್ಧಪಡಿಸಬೇಕು ಈ ಅರಳಿಗೆ ಪರಿವಾಪವೆಂದು ಹೆಸರು. ಪುರೋಡಾಶವೆಂದರೆ ಎಲ್ಲರಿಗೂ ಗೊತ್ತಿರುವಂತೆ ಅಕ್ಕಿಯ ಹಿಟ್ಟನ್ನು ಚೆನ್ನಾಗಿ ಕಲಸಿ ಉಂಡೆಗಳನ್ನಾಗಿಮಾಡಿ ಕ್ಲೃಪ್ತಸಂಖ್ಯೆಯ ಕಪಾಲಗಳ ಮೇಲೆ ಬೇಯಿಸಿ ಸಿದ್ಧಪಡಿಸಬೇಕು. ಧಾನಾ ಎಂಬ ದ್ರವ್ಯವನ್ನು ಎರಡು ಭಾಗಮಾಡಿ ಒಂದಕ್ಕೆ ಆಜ್ಯವನ್ನು ಬೆರಸಿ ಮತ್ತೊಂದು ಭಾಗವನ್ನು ಹಿಟ್ಟನ್ನು ಮಾಡಿ ಅದಕ್ಕೆ ಕಲಸಿ ಸಕ್ತುವನ್ನಾಗಿ (ಹಿಟ್ಟಿನ ಉಂಡೆ) ಮಾಡಬೇಕು. ಮೊಸರಿನಿಂದ ಕಲಸಿದ ಹಿಟ್ಟಿಗೆ ಕರಂಭವೆಂದು ಹೆಸರು. ಅರಳಿಗೆ ಪರಿವಾಪವೆಂದು ಹೆಸರು. ಆ ಅರಳಿನಲ್ಲಿರುವ ಭತ್ತದ ದೊಟ್ಟನ್ನು ಕೈಯಲ್ಲಿನ ಉಗುರುಗಳಿಂದ ತೆಗೆದುಹಾಕಬೇಕು ಎಂದು. ಧಾನಾ-ಕರಂಭ-ಪರಿವಾಪ-ಪಯಸ್ಯಾ-ಪುರೋಡಾಶ ಎಂಬ ಹವಿರ್ದ್ರವ್ಯಗಳಿಂತ ಯುಕ್ತವಾದ ಯಜ್ಞಕ್ಕೆ ಹವಿಷ್ಪಂಕ್ತಿಯೆಂದು ಹೇಳಲ್ಪಡುವುದು. ಈ ಐದು ವಿಧವಾದ ಹವಿಷ್ಪಂಕ್ತಿಯು ಶಾಖಾಂತರದಲ್ಲಿ ಎಂದರೆ ತೈತ್ತಿರೀಯ ಸಂಹಿತೆಯಲ್ಲಿ ಈ ರೀತಿ ಹೇಳಲ್ಪಟ್ಟಿರುವುದು—**ಬ್ರಹ್ಮವಾದಿನೋ ವದಂತಿ ನರ್ಚಾ ನ ಯಜುಷಾ ಪಂಕ್ತಿರಾಪ್ಯತೇಽಥ ಕಿಂ ಯಜ್ಞಸ್ಯ ಪಾಂಕ್ತತ್ವಮಿತಿ । ಧಾನಾಃ, ಕರಂಭಃ ಪರಿವಾಪಂ ಪುರೋಡಾಶಃ ಪಯಸ್ಯಾ; ತೇನ ಪಂಕ್ತಿರಾಪ್ಯತೇ । ತದ್ಯಜ್ಞಸ್ಯ ಪಾಂಕ್ತತ್ವಂ** (ತೈ. ಸಂ. ೬-೫-೧೧-೪,೫) ಎಂದರೆ ಬ್ರಹ್ಮವಾದಿಗಳು ಈ ರೀತಿ ಹೇಳುತ್ತಾರೆ. ಋಗ್ವೇದದ ಋಕ್ಕುಗಳಿಂದಾಗಲಿ, ಯಜುರ್ವೇದದ ಮಂತ್ರಗಳಿಂದಾಗಲಿ ಯಜ್ಞಕ್ಕೆ ಹವಿಷ್ಪಂಕ್ತಿಯೆಂದು ಹೆಸರು ಬರುವುದಿಲ್ಲ. ಆದರೆ ಧಾನಾಃ ಕರಂಭಃ ಪರಿವಾಪಂ ಪುರೋಡಾಶ, ಪಯಸ್ಯಾ ಎಂಬ ಐದುವಿಧ ಹವಿರ್ದ್ರವ್ಯಗಳಿಂದ ಯಜ್ಞಕ್ಕೆ ಪಾಂಕ್ತತ್ವ (ಹವಿಷ್ಪಂಕ್ತಿ) ಎಂಬ ಹೆಸರು ಉಂಟಾಗುವುದು ಎಂದಿದೆ

ಈ ಐದುವಿಧವಾದ ಹವಿಃಶೇಷದಲ್ಲಿ ಋತ್ವಿಗಾದಿಗಳು ತಮಗೆ ಬೇಕಾದಷ್ಟನ್ನು ಪಡೆದು ಭಕ್ಷಿಸಬಹುದು (ಆ. ಶ್ರೌ. ೧೨-೮-೩೨, ೩೩). ಇಲ್ಲಿ **ಉಪವಿಗುಲ್ಪನಂ** ಎಂಬ ಶಬ್ದಪ್ರಯೋಗವಿದೆ. ಪ್ರಾಣಧಾರಣೆಗೆ ಎಷ್ಟು ಆಹಾರವು ಅವಶ್ಯಕವೋ ಆದಕ್ಕಿಂತ ಹೆಚ್ಚುಭಾಗವನ್ನು ಪಡೆಯುವುದಕ್ಕೆ **ಉಪವಿಗುಲ್ಪನಂ** ಎಂದು ಹೆಸರು. ಈ ಹವಿಃಶೇಷದ ಭಕ್ಷಣದಿಂದ ತೃಪ್ತಿಯಾಗದಿದ್ದರೆ ಎಂದರೆ ಹಸಿವು ಪರಿಹಾರವಾಗದಿದ್ದರೆ ಅವುಗಳ ಜತೆಗೆ ಗಾರ್ಹಪತ್ಯಾಗ್ನಿಯಲ್ಲಿ (ಎಂದರೆ ಮನೆಯಲ್ಲಿ ಅಗ್ನಿಯ ಮೂಲಕ ಪಕ್ವಮಾಡಿದ) ಪಕ್ವಮಾಡಿದ ಇತರ ಪರಿಕರಗಳನ್ನೂ ಫಲಮೂಲಾದಿಗಳನ್ನೂ ಯಜ್ಞಪಶುವಿನ ಹವಿಃಶೇಷವನ್ನೂ ಭಕ್ಷಿಸಬಹುದು (ಆ. ಶ್ರೌ. ೧೨-೮-೩೪ರಿಂದ೪೪) ಎಂದು ಆಶ್ವಲಾಯನರೇ ಹೇಳಿದಾರೆ. ಅಥವಾ ಇತರ ಕಡೆಗಳಲ್ಲಿ ಪಕ್ವಮಾಡಿದ ಸಿದ್ಧಾನ್ನವನ್ನು ಗಾರ್ಹಪತ್ಯಾಗ್ನಿಯಲ್ಲಿ ತಂದಿರಿಸಿ ಅನಂತರ ಅದನ್ನು ಭಕ್ಷಿಸಬಹುದು. ಇದಲ್ಲದೆ ಎಂದರೆ ಇಲ್ಲಿ ಹೇಳಿರುವ ಇತರವಿಧವಾದ ಲಾಡು, ಮಂಡಿಗೆ ಮುಂತಾದ ಭಕ್ಷ್ಯಗಳನ್ನೂ ತಿನ್ನಬಹುದು. ಆದರೆ ಇವುಗಳು ಪಥ್ಯವಾಗಿಯೂ ಅಜೀರ್ಣಾದಿ ಉಪದ್ರವಗಳಿಗೆ ಅವಕಾಶಕೊಡದೆ ಸುಲಭವಾಗಿ ಜೀರ್ಣಿಸುವಂತೆಯೂ ದೋಷರಹಿತವಾಗಿಯೂ ಇರಬೇಕು.

ಇಚ್ಛೆಯಿದ್ದಲ್ಲಿ ಫಲಮೂಲಗಳನ್ನೂ ಸ್ವೀಕರಿಸಬಹುದು. ಎಂದು ಹೇಳಿರುವನು ಸುತ್ಯಾದಿನಗಳಲ್ಲಿ (ಸುತ್ಯಾದಿನವೆಂದರೆ ಸೋಮಾಭಿಷವಣವನ್ನು ಆಚರಿಸುವ ದಿನ–ಯಜ್ಞದಲ್ಲಿ ಕೊನೆಯದಿನ) ಸವನೀಯ ಯಜ್ಞಪಶುವಿನ ಹವಿಶ್ಶೇಷವನ್ನೂ ಭಕ್ಷಿಸಬೇಕು. ಈಗ ಯಜ್ಞಪಶುವೆಂಬ ಹವಿಶ್ಶೇಷಭಾಗದಲ್ಲಿ ಯಾರಾರಿಗೆ ಯಾವ ಯಾವ ಭಾಗವು ಸೇರಬೇಕು ಎಂಬ ಕ್ರಮವನ್ನು ಎಂದರೆ ಪಶುವಿಭಾಗ ಕ್ರಮವನ್ನು ವಿವರಿಸುವರು—

ಅಥಾತಃ ಪಶೋರ್ವಿಭಕ್ತಿಸ್ತಸ್ಯ ವಿಭಾಗಂ ವಕ್ಷ್ಯಾಮಃ ।

**ಅಥ ಹೋತೃಹೋತ್ರಕಶಸ್ತ್ರನಿರ್ಣಯಾನಂತರಂ ಯತಃ ಶಸ್ತ್ರಾದ್ಯನುಷ್ಠಾಯಿನಾಂ ಸತ್ರಿಣಾಂ ಜೀವನೋಪಾಯೋಽಪೇಕ್ಷಿತೋಽತಃ ಕಾರಣಾತ್ಸವನೀಯಸ್ಯ ಪಶೋರ್ವಿಭಕ್ತಿಃ ಕಥ್ಯತೇ । ವಿಭಕ್ತಿಶಬ್ದಸ್ಯೈವ ವ್ಯಾಖ್ಯಾನಂ ತಸ್ಯೇತ್ಯಾಹ ।**

ಇದುವರೆಗೂ ಹಿಂದಿನ ಅಧ್ಯಾಯಗಳಲ್ಲಿ ಋಗ್ವೇದ ಸಂಬಂಧವಾದ ಶಸ್ತ್ರಮಂತ್ರಗಳಲ್ಲಿ ಹೋತೃ ಹೋತೃವಿನ ಸಹಾಯಕರಾದ ಹೋತ್ರಕರೆಂಬ ಋತ್ವಿಜರು ಯಾವ ಯಾವ ಮಂತ್ರಗಳನ್ನು ಯಾವ ಯಾವ ಕಾಲದಲ್ಲಿ ಪಠಿಸಬೇಕು ಎಂಬ ವಿಷಯವು ನಿರ್ಣಯಿಸಲ್ಪಟ್ಟಿತು. ಈಗ ಯಜ್ಞದಲ್ಲಿ ಪ್ರಾಣಧಾರಣೆಗಾಗಿಯೂ ಜೀವನೋಪಾಯಕ್ಕಾಗಿಯೂ ಆಹಾರವನ್ನು ದೊರಕಿಸಿಕೊಳ್ಳುವ ಸಮಯದಲ್ಲಿ ಹೋಮಶೇಷವಾಗಿ ಉಳಿದ ಸವನೀಯ (ಯಜ್ಞಪಶು) ಪಶುವಿನ ಯಾವ ಯಾವ ಅಂಗವು ಯಾವ ಋತ್ವಿಕ್ ಮೊದಲಾದವರಿಗೆ ಸೇರಬೇಕು ಎಂಬ ವಿಚಾರವನ್ನು ಹೇಳುವುದಕ್ಕಾಗಿ ಯಜ್ಞಪಶುವನ್ನು ವಿಭಾಗಮಾಡುವ ಕ್ರಮವನ್ನು ಮುಂದೆ ಹೇಳುವಂತೆ ವಿವರಿಸಿರುವರು.

ಹನೂ ಸಜಿಹ್ವೇ ಪ್ರಸ್ತೋತುಃ ಶ್ಯೇನಂ ವಕ್ಷ ಉದ್ಗಾತುಃ ಕಂಠಃ ಕಾಕುದ್ರಃ ಪ್ರತಿಹರ್ತುರ್ದಕ್ಷಿಣಾ ಶ್ರೋಣಿರ್ಹೋತುಃ ಸವ್ಯಾ ಬ್ರಹ್ಮಣೋ ದಕ್ಷಿಣಂ ಸಕ್ಥಿ ಮೈತ್ರಾವರುಣಸ್ಯ ಸವ್ಯಂ ಬ್ರಾಹ್ಮಣಾ-ಚ್ಛಂಸಿನೋ ದಕ್ಷಿಣಂ ಪಾರ್ಶ್ವಂ ಸಾಂಸಮಧ್ವರ್ಯೋಃ ಸವ್ಯಮು-ಪಗಾತೄಣಾಂ ಸವ್ಯೋಂಽಸಃ ಪ್ರತಿಪ್ರಸ್ಥಾತುರ್ದಕ್ಷಿಣಂ ದೋರ್ನೇ-ಷ್ಟುಃ ಸವ್ಯಂ ಪೋತುರ್ದಕ್ಷಿಣ ಊರುರಚ್ಛಾವಾಕಸ್ಯ ಸವ್ಯ ಆಗ್ನೀ-ಧ್ರಸ್ಯ ದಕ್ಷಿಣೋ ಬಾಹುರಾತ್ರೇಯಸ್ಯ ಸವ್ಯಃ ಸದಸ್ಯಸ್ಯ ಸದಂ ಚಾ-ನೂಕಂ ಚ ಗೃಹಪತೇರ್ದಕ್ಷಿಣೌ ಪಾದೌ ಗೃಹಪತೇರ್ವ್ರತಪ್ರದಸ್ಯ ಸವ್ಯೌ ಪಾದೌ ಗೃಹಪತೇರ್ಭಾರ್ಯಾಯೈ ವ್ರತಪ್ರದಸ್ಯೌಷ್ಠ ಏನ-ಯೋಃ ಸಾಧಾರಣೋ ಭವತಿ ತಂ ಗೃಹಪತಿರೇವ ಪ್ರಶಿಂಷ್ಯಾ-ಜ್ಜಾಘನೀಂ ಪತ್ನೀಭ್ಯೋ ಹರಂತಿ ತಾಂ ಬ್ರಾಹ್ಮಣಾಯ ದದ್ಯುಃ

ಸ್ಕಂಧ್ಯಾಶ್ಚ ಮಣಿಕಾಸ್ತಿಸ್ರಶ್ಚ ಕೀಕಸಾ ಗ್ರಾವಸ್ತುತಸ್ತಿಸ್ರಶ್ಚೈವ ಕೀಕಸಾ ಅರ್ಧಂ ಚ ವೈಕರ್ತಸ್ಯೋನ್ನೇತುರರ್ಧಂ ಚೈವ ವೈಕರ್ತಸ್ಯ ಕ್ಲೋಮಾ ಚ ಶಮಿತುಸ್ತದ್ಬ್ರಾಹ್ಮಣಾಯ ದದ್ಯಾದ್ಯದ್ಯಬ್ರಾಹ್ಮಣಃ ಸ್ಯಾಚ್ಛಿರಃ ಸುಬ್ರಹ್ಮಣ್ಯಾಯೈ ಯಃ ಶ್ವಃಸುತ್ಯಾಂ ಪ್ರಾಹ ತಸ್ಯಾ-ಜಿನಮಿಳಾ ಸರ್ವೇಷಾಂ ಹೋತುರ್वಾ ॥

ವಕ್ಷ್ಯಾಮ ಇತಿ ಪ್ರತಿಜ್ಞಾತೋ ಯೋ ವಿಭಾಗಸ್ತಂ ದರ್ಶಯತಿ–ಜಿಹ್ವಯಾ ಸಹಿತಂ ಹನೂದ್ವಯಂ ಪ್ರಸ್ತೋತುರ್ಭಾಗಃ । ಶ್ಯೇನಾಕಾರಂ ವಕ್ಷ ಉದ್ಗಾತುರ್ವಿಭಾಗಃ । ಯಃ ಕಂಠೋ ಯಶ್ಚ ಕಾಕುದ್ರಃ ಕಾಕುದಂ ತದುಭಯಂ ಪ್ರತಿಹರ್ತುರ್ವಿಭಾಗಃ । ಶ್ರೋಣಿರೂರುಮೂಲಂ ತದುಭಯಂ ದಕ್ಷಿಣಸವ್ಯರೂಪಂ ಕ್ರಮೇಣ ಹೋತುರ್ಬ್ರಹ್ಮಣೋ ವಿಭಾಗಃ । ಊರ್ವಧೋಭಾಗಃ ಸಕ್ಥಿ ತಚ್ಚೋಭಯಂ ಕ್ರಮೇಣ ಮೈತ್ರಾವರುಣಬ್ರಾಹ್ಮಣಾಚ್ಛಂಸಿನೋರ್ವಿಭಾಗಃ । ದಕ್ಷಿಣಾಂಸೇನ ಯುಕ್ತಂ ದಕ್ಷಿಣಂ ಪಾರ್ಶ್ವಮಧ್ವರ್ಯೋರ್ಭಾಗಃ । ಸವ್ಯಂ ಪಾರ್ಶ್ವಮಾತ್ರಮುಪಗಾತೄಣಾಂ ಭಾಗಃ । ಸವ್ಯೋಽಂಸಃ ಪ್ರತಿಪ್ರಸ್ಥಾತುರ್ಭಾಗಃ । ದೋರ್ಬಾಹುಸ್ತಚ್ಚೋಭಯಂ ಕ್ರಮೇಣ ನೇಷ್ಟೃಪೋ-ತ್ರೋರ್ಭಾಗಃ । ಊರುದ್ವಯಂ ಕ್ರಮೇಣಾಚ್ಛಾವಾಕಾಗ್ನೀಧ್ರಯೋರ್ಭಾಗಃ । ಸಕ್ಥಿಶಬ್ದೇ-ನಾಧೋಭಾಗಸ್ಯಾಭಿಹಿತತ್ವಾದೂರ್ಧ್ವಭಾಗ ಊರುಶಬ್ದೇನ ವಿವಕ್ಷಿತಃ । ಬಾಹುದ್ವಯಂ ಕ್ರಮೇ-ಣಾಽಽತ್ರೇಯಸದಸ್ಯಯೋರ್ಭಾಗಃ । ದೋರ್ಬಾಹುಶಬ್ದಯೋರರ್ಥೈಕ್ಯೇಽಪ್ಯಧೋಭಾಗೋ-ರ್ಧ್ವಭಾಗಾಭ್ಯಾಂ ಭೇದೋ ದ್ರಷ್ಟವ್ಯಃ । ಸದಾನೂಕಶಬ್ದೌ ಪೂರ್ವಾಚಾರ್ಯೈರ್ವ್ಯಾಖ್ಯಾತೌ—

ಅನೂಕಂ ಮೂತ್ರಬಸ್ತಿಃ ಸ್ಯಾತ್ಸಾಸ್ನೇತ್ಯೇಕೇ ವದಂತಿ ಚ ।
ಸದಂ ತು ಪೃಷ್ಠವಂಶಃ ಸ್ಯಾದೇತದ್ಗೃಹಪತೇರ್ದ್ವಯಂ ಇತಿ ॥

ಯಃ ಪುಮಾನ್ಗೃಹಪತೇರ್ವ್ರತಪ್ರದೋ ಭೋಜನದಾಯೀ ತಸ್ಯ ದಕ್ಷಿಣೌ ಪಾದೌ ಭಾಗಃ । ಗೃಹಪತೇರ್ಯಾ ಭಾರ್ಯಾ ತಸ್ಯೈ ಚ ವ್ರತಪ್ರದೋ ಯಃ ಪುಮಾಂಸ್ತಸ್ಯೈವ ಸವ್ಯೌ ಪಾದೌ ಭಾಗಃ । ಅತ್ರ ಪುರೋವರ್ತಿನೋಃ ಪಾದಯೋರ್ಬಾಹುತ್ವೇನಾಭಿಹಿತತ್ವಾತ್ಪಾಶ್ಚಾತ್ಯಾವೇವ ಪಾದಶಬ್ದೇನ ವಿವಕ್ಷಿತೌ । ತತ್ರೈಕಸ್ಮಿನ್ನಪಿ ದಕ್ಷಿಣೇ ಪಾದೇ ದ್ವಿವಚನಮವಯವಾಪೇಕ್ಷಂ । ಏವಮುತ್ತರತ್ರಾಪಿ । ಯೋಽಯಮೋಷ್ಠಃ ಸೋಽಯಮನಯೋರ್ವ್ರತಪ್ರದಯೋಃ ಸಾಧಾರಣೋ ಭಾಗೋ ಭವತಿ ತಂ ಭಾಗಂ ಗೃಹಪತಿರೇವ ಪ್ರಶಿಂಷ್ಯಾತ್ತ್ರವಾಯಂ ತವಾಯಮಿತಿ ವಿಭಜ್ಯ ಪ್ರದದ್ಯಾತ್ । ಜಾಘನೀಂ ಪುಚ್ಛಂ ತಾಂ ಪತ್ನೀಭ್ಯೋ ಹರಂತಿ ದದ್ಯುಃ । ತಾಶ್ಚ ಪತ್ನ್ಯಸ್ತಾಂ ಜಾಘನೀಂ ಬ್ರಾಹ್ಮಣಾಯ ಕಸ್ಮೈಚಿದ್ದದ್ಯುಃ । ಸ್ಕಂಧೇ ಭವಾಃ ಸ್ಕಂಧ್ಯಾ ಮಣಿಸದೃಶಾ ಮಾಂಸಖಂಡಾ ಮಣಿಕಾ ಏಕಸ್ಮಿ-ನ್ಪಾರ್ಶ್ವೇ ಸ್ಥಿತಾ ಮಾಂಸಶಕಲಾಸ್ತಿಸ್ರಃ ಕೀಕಸಾ ಮಣಿಕಾಃ ಕೀಕಸಾಶ್ಚೇತ್ಯುಭಯಂ ಗ್ರಾವಸ್ತುತೋ ಭಾಗಃ । ಇತರಪಾರ್ಶ್ವೇ ಸ್ಥಿತಾಸ್ತಿಸ್ರಃ ಕೀಕಸಾ ವೈಕರ್ತಃ ಪ್ರೌಢೋ ಮಾಂಸಖಂಡಸ್ತಸ್ಯಾರ್ಧಂ

**ಪೂರ್ವೋಕ್ತೈಕೀಕಸಾತ್ರಯಂ ಚೋನ್ನೇತುರ್ಭಾಗಃ। ಯತ್ತು ವೈಕರ್ತಸ್ಯೇತರದರ್ಧಂ ಯಚ್ಚ ಹೃದಯಪಾರ್ಶ್ವವರ್ತೀ ಕ್ಲೋಮಶಬ್ದಾಭಿಧೋ ಮಾಂಸಖಂಡಸ್ತದುಭಯಂ ಶಮಿತುರ್ಭಾಗಃ। ಅಯಂ ಶಮಿತಾ ಯದ್ಯಬ್ರಾಹ್ಮಣಃ ಸ್ಯಾತ್ತದಾ ಸ್ವೇನ ಸ್ವೀಕೃತಂ ತದುಭಯಮನ್ಯಸ್ಮೈ ಬ್ರಾಹ್ಮಣಾಯ ದದ್ಯಾತ್। ಯಚ್ಛಿರೋಽಸ್ತಿ ತತ್ಸುಬ್ರಹ್ಮಣ್ಯಾಯೈ ಸುಬ್ರಹ್ಮಣ್ಯಾಭಿಧಾನರ್ತ್ವಿಜೇ ದದ್ಯಾತ್। ಶ್ವಃಸುತ್ಯೇತಿ ನಿಗದನಾಮು ತಾಂ ಚಾಗ್ನೀಧ್ರೋ ಬ್ರೂತೇ। ತಥಾ ಚಾಽಽಶ್ವಲಾಯನ ಆಹ—'ಆಗ್ನೀಧ್ರಃ ಶ್ವಃ ಸುತ್ಯಾಂ ಪ್ರಾಹ' ಇತಿ। ಅಜಿನಂ ಚರ್ಮ ತಸ್ಯಾಽಽಗ್ನೀಧ್ರಸ್ಯ ಭಾಗಃ। ಇಳಾ ಸವನೀಯಪಶೋಃ ಸಂಬಂಧೀ ಯೋಽಯಮಿಳಾಭಾಗಃ ಸ ಸರ್ವೇಷಾಂ ಸಾಧಾರಣಃ। ಯದ್ವಾ ಹೋತುರಸಾಧಾರಣಃ ॥**

ಯಜ್ಞಪಶುವಿನ ವಿಭಾಗವನ್ನು ವಿವರಿಸಲಾಗುವುದು ಎಂದು ಹೇಳಿರುವುದನ್ನು ಇಲ್ಲಿ ಕ್ರಮವಾಗಿ ಹೇಳುವರು:— ಯಜ್ಞಪಶುವಿನ ಹವಿಃಶೇಷವಲ್ಲಿರುವ ನಾನಾ ಭಾಗಗಳಲ್ಲಿ ಎಂದರೆ ಅವಯವಗಳಲ್ಲಿ ಯಾವ ಯಾವ ಭಾಗವು ಯಾವ ಯಾವ ಋತ್ವಿಜನಿಗೆ ಸೇರಬೇಕು ಎಂಬ ವಿಷಯವು ಇಲ್ಲಿ ವಿವರಿಸಲ್ಪಟ್ಟಿದೆ:—

೧. **ಜಿಹ್ವಯಾ ಸಹಿತಂ ಹನೂದ್ವಯಂ ಪ್ರಸ್ತೋತುರ್ಭಾಗಃ**— ಯಜ್ಞಪಶುವಿನ ಎರಡು ದವಡೆಗಳ ಪ್ರಸ್ತೋತೃವೆಂಬ ಋತ್ವಿನ ಭಾಗವು. ಮತ್ತು ನಾಲಗೆಯು

೨. **ಶ್ಯೇನಾಕಾರಂ ವಕ್ಷ ಉದ್ಗಾತುರ್ಭಾಗಃ**— ಶ್ಯೇನಪಕ್ಷಿಯ ಆಕಾರದಂತಿರುವ ಹೃದಯವು ಉದ್ಗಾತೃವೆಂಬ ಋತ್ವಿಜನಿಗೆ ಸೇರಬೇಕು.

೩. **ಯಃ ಕಂಠಃ ಯಶ್ಚ ಕಾಕುದ್ರಃ (ಕಾಕುದಂ) ತದುಭಯಂ ಪ್ರತಿಹರ್ತುರ್ಭಾಗಃ**— ಕಂಠವೂ ತಾಲುವೂ ಪ್ರತಿಹರ್ತೃವಿಗೆ ಸೇರಬೇಕು

೪. **ಶ್ರೋಣಿಃ ಊರುಮೂಲಂ (ದಕ್ಷಿಣಭಾಗಂ) ಹೋತುಃ**— ಸೊಂಟದಲ್ಲಿ ಕೆಳಗಿನ ಬಲಭಾಗವು ಹೋತೃವಿಗೆ ಸೇರಬೇಕು

೫. **ಶ್ರೋಣಿಃ ಊರುಮೂಲಂ (ಸವ್ಯಂ) ಬ್ರಹ್ಮಣಃ**— ಸೊಂಟದ ಬಲಭಾಗವು ಬ್ರಹ್ಮನೆಂಬ ಋತ್ವಿಜನಿ ಸೇರಬೇಕು

೬. **ಊರ್ವಧೋಭಾಗಃ (ಸಕ್ಥಿ) ಮೈತ್ರಾವರುಣಸ್ಯ**— ಭಲಭಾಗದ ತೊಡೆಯು ಮೈತ್ರಾವರುಣನೆಂಬ ಋತ್ವಿಜನಿಗೆ ಸೇರಬೇಕು

೭. **ಊರ್ವಧೋಭಾಗಃ (ಸವ್ಯಂ) ಬ್ರಾಹ್ಮಣಾಚ್ಛಂಸಿನಃ**— ಎಡತೊಡೆಯು ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನಿಗೆ ಸೇರಬೇಕು

೮. **ದಕ್ಷಿಣಾಂಸೇನ ಯುಕ್ತಂ ದಕ್ಷಿಣಂ ಪಾರ್ಶ್ವಮಧ್ವರ್ಯೋರ್ಭಾಗಃ**— ಉದರದ ಬಲಪಾರ್ಶ್ವವು ಹೆಗಲು ಸಹಿತವಾಗಿ ಅಧ್ವರ್ಯುವಿಗೆ ಸೇರಬೇಕು

**೯. ಸವ್ಯಂ ಪಾರ್ಶ್ವಮಾತ್ರಮುಪಗಾತ್ರ್ಯಾಣಾಂ ಭಾಗಃ—** ಉದರದ ಎಡಪಾರ್ಶ್ವವು ಉಪಗಾತೃ ಎಂಬ ಋತ್ವಿಜರಿಗೆ ಸೇರಬೇಕು

**೧೦. ಸವ್ಯಃ ಅಂಸಃ ಪ್ರತಿಪ್ರಸ್ಥಾತುರ್ಭಾಗಃ—** ಎಡಭಾಗದ ಹೆಗಲಿನ ಭಾಗವು ಪ್ರತಿಪ್ರಸ್ಥಾತೃ ಎಂಬ ಋತ್ವಿಜನಿಗೆ ಸೇರಬೇಕು

**೧೧. ದೋಃ ಬಾಹುಃ (ದಕ್ಷಿಣಂ) ನೇಷ್ಟುಃ ಭಾಗಃ—**ಬಲಭಾಗದ ಬಾಹುವು. ನೇಷ್ಟೃವಿಗೆ ಸೇರಬೇಕು.

**೧೨. ದೋಃ ಬಾಹುಃ (ಸವ್ಯಂ) ಪೋತುಃ ಭಾಗಃ**—ಎಡಭಾಗದ ಬಾಹುವು ಪೋತೃವೆಂಬ ಋತ್ವಿಜನಿಗೆ ಸೇರಬೇಕು.

**೧೩. ದಕ್ಷಿಣಂ ಊರುಭಾಗಂ ಅಚ್ಛಾವಾಕಸ್ಯ**—ಬಲಭಾಗದ ತೊಡೆಯು ಅಚ್ಛಾವಾಕನಿಗೆ

**೧೪. ಸವ್ಯಂ ಊರುಭಾಗಂ ಆಗ್ನೀಧ್ರಸ್ಯ**—ಎಡಭಾಗದ ತೊಡೆಯು ಆಗ್ನೀಧ್ರನಿಗೆ

**೧೫. ದಕ್ಷಿಣಂ ಬಾಹುಂ ಆತ್ರೇಯಸ್ಯ**—ಬಲಗಡೆಯ ಬಾಹುವಿನ ಮೇಲುಭಾಗವು ಆತ್ರೇಯನಿಗೆ (ಅತ್ರಿ ಗೋತ್ರದವನಿಗೆ)

**೧೬. ಸವ್ಯಂ ಬಾಹುಂ ಸದಸ್ಯಸ್ಯ**—ಎಡಗಡೆಯ ಬಾಹುವಿನ ಮೇಲುಭಾಗವು ಸದಸ್ಯನಿಗೆ

**೧೭. ಸದಂ ಅನುಕಂ ಚ ಗೃಹಪತೇಃ**—ಬೆನ್ನುಮೂಳೆ ಮತ್ತು ಮೂತ್ರಕೋಶವು ಯಜ್ಞಮಾಡುವ ಯಜಮಾನನಿಗೆ

**೧೮. ಯಃ ಪುಮಾನ್ ಗೃಹಪತೇರ್ವ್ರತಪ್ರದೋ ಭೋಜನದಾಯೀ ತಸ್ಯ ದಕ್ಷಿಣೌ ಪಾದೌ ಭಾಗಃ**—ಭೋಜನಪ್ರದನಾದ ಯಜಮಾನನಿಗೆ ಬಲಭಾಗದ ಎರಡು ಕಾಲುಗಳು

**೧೯. ಗೃಹಪತೇರ್ಯಾ ಭಾರ್ಯಾ ತಸ್ಯೈ ಚ ವ್ರತಪ್ರದೋ ಯಃ ಪುಮಾನ್ ತಸ್ಯೈವ ಸವ್ಯೌ ಪಾದೌ ಭಾಗಃ**—ಭೋಜನ ಪ್ರದನಾದ ಯಜ್ಞಕರ್ತನ ಪತ್ನೀಗೆ ಎಡಭಾಗದ ಎರಡು ಕಾಲುಗಳು.

**೨೦. ಯೋಽಯಮೋಷ್ಠಃ ಸೋಽಯಂ ಏನಯೋರ್ವ್ರಪ್ರದಯೋಃ ಸಾಧಾರಣಃ ಭಾಗೋ ಭವತಿ**—ಭೋಜನಪ್ರದರಾದ ಯಜ್ಞಕರ್ತಾ ಮತ್ತು ಅವನ ಪತ್ನಿಯರಿಗೂ ತುಟಿ ಎಂಬ ಭಾಗವು ಸಮನಾಗಿ ಸೇರಬೇಕು ಇದನ್ನು ಭಾಗಮಾಡುವಾಗ ಯಜ್ಞಕರ್ತನೇ ಮಾಡಬೇಕು. ಎಂದರೆ ತನಗೆ ಈ ಭಾಗವು ತನ್ನ ಪತ್ನಿಗೆ ಈ ಭಾಗವು ಎಂದು ಸ್ಪಷ್ಟಪಡಿಸಬೇಕು.

**೨೧. ಜಾಘನೀಂ ಪುಚ್ಛಂ ಪತ್ನೀಭ್ಯೋ ಹರಂತಿ ದದ್ಯುಃ। ತಾಶ್ಚ ಪತ್ನ್ಯಃ ತಾಂ ಜಾಘನೀಂ ಬ್ರಾಹ್ಮಣಾಯ ಕಸ್ಮೈಚಿತ್ ದದ್ಯುಃ**—ಪಶುವಿನ ಬಾಲವನ್ನು ಯಜಮಾನನ ಪತ್ನಿಯರಿಗೆ ಕೊಡುವರು—ಅದನ್ನು ಪತ್ನಿಯರು ಯಾವನೊಬ್ಬ ಬ್ರಾಹ್ಮಣನಿಗೆ ಕೊಡುವರು.

೨೨. **ಸ್ಕಂಧ್ಯಾಃ ಮಣಿಕಾಃ ಏಕಸ್ಮಿನ್ ಪಾರ್ಶ್ವೇ ಸ್ಥಿತಾ ಕೀಕಸಾಶ್ಚ ಗ್ರಾವಸ್ತುತೋ ಭಾಗಃ ।** ಕತ್ತಿನ ಮೇಲಿರುವ ಮಾಂಸಖಂಡ ಸಹಿತವಾದ ಮಣಿಕ ಮತ್ತು ಕೀಕಸ ಎಂಬ ಭಾಗಗಳನ್ನು ಗ್ರಾವಸ್ತುತ್ ಎಂಬ ಋತ್ವಿಜನಿಗೆ ಕೊಡಲಾಗುವುದು.

೨೩. **ಇತರಪಾರ್ಶ್ವೇ ಸ್ಥಿತಾಃ ತ್ರಿಸಃ ಕೀಕಸಾಃ ಮಾಂಸಖಂಡಃ ಚೋನ್ನೇತುರ್ಭಾಗಃ**—ಇತರ ಪಾರ್ಶ್ವದಲ್ಲಿರುವ ಕೀಕಸ ಎಂಬ ಮೂರು ಮಾಂಸಖಂಡಗಳು ಉನ್ನೇತೃವೆಂಬ ಋತ್ವಿಜನಿಗೆ ಸೇರಬೇಕು.

೨೪. **ಯಶ್ಚ ಹೃದಯಪಾರ್ಶ್ವವರ್ತೀ ಮಾಂಸಖಂಡಃ ಶಮಿತುರ್ಭಾಗಃ ಅಯಂ ಶಮಿತಾ ಯದಿ ಅಬ್ರಾಹ್ಮಣಃ ಸ್ಯಾತ್ ತದಾ ತೇನ ಸ್ವೀಕೃತಂ ತದುಭಯಮನ್ಯಸ್ಮೈ ಬ್ರಾಹ್ಮಣಾಯ ದದ್ಯಾತ್**— ಕತ್ತಿನ ಮೇಲೆ ಇರುವ ಮಾಂಸಖಂಡವೂ ಎಡಭಾಗದ ಕ್ಲೋಮ ಎಂಬ ಭಾಗವೂ ಯಜ್ಞಪಶುವನ್ನು ವಧೆಮಾಡುವ ಶಮಿತೃವೆಂಬ ಋತ್ವಿಜನಿಗೆ ಸೇರಬೇಕು. ಶಮಿತೃವು ಬ್ರಾಹ್ಮನಾಗಿರದಿದ್ದಲ್ಲಿ, ಅವನು ಅದನ್ನು ಒಬ್ಬ ಬ್ರಾಹ್ಮಣನಿಗೆ ಕೊಡಬೇಕು.

೨೫. **ಯಚ್ಛಿರೋಽಸ್ತಿ ತತ್ ಸುಬ್ರಹ್ಮಣ್ಯಾಭಿಧಾನರ್ತ್ವಿಜೇ ದದ್ಯಾತ್**— ಪಶುವಿನ ಶಿರಸ್ಸನ್ನು ನಾಳೆ ಸುತ್ಯಾದಿನವೆಂದು ಹೇಳುವ ಸುಬ್ರಹ್ಮಣ್ಯ ಎಂಬ ಋತ್ವಿಜನಿಗೆ ಕೊಡಬೇಕು.

೨೬. **ಅಜಿನಂ ಚರ್ಮ ತಸ್ಯಾಗ್ನೀಧ್ರಸ್ಯ ಭಾಗಃ**— ಪಶುವಿನ ಚರ್ಮವನ್ನು ಅಗ್ನೀಧ್ರನೆಂಬ ಋತ್ವಿಜನಿಗೆ ಕೊಡಬೇಕು

**ಸವನೀಯಪಶೋಃ ಸಂಬಂಧೀ ಯೋಽಯಮಿಳಾಭಾಗಃ ಸ ಸರ್ವೇಷಾಂ ಸಾಧಾರಣಃ**— ಯಜ್ಞಪಶುವಿನ ಸಂಬಂಧವಾದ ಇಳಾ ಎಂಬ ಭಾಗವು ಎಲ್ಲಾ ಋತ್ವಿಜರಿಗೂ ಸೇರತಕ್ಕದ್ದು ಆದರೆ ಹೋತೃವಿಗೆ ಐಚ್ಛಿಕವಾದುದು

**ತಾ ವಾ ಏತಾಃ ಷಟ್‌ತ್ರಿಂಶತಮೇಕಪದಾ ಯಜ್ಞಂ ವಹಂತಿ ಷಟ್‌ತ್ರಿಂಶದಕ್ಷರಾ ವೈ ಬೃಹತೀ ಬಾರ್ಹತಾಃ ಸ್ವರ್ಗಾ ಲೋಕಾಃ ಪ್ರಾಣಾಂಶ್ಚೈವ ತತ್ಸ್ವರ್ಗಾಂಶ್ಚ ಲೋಕಾನಾಪ್ನುವಂತಿ ಪ್ರಾಣೇಷು ಚೈವ ತತ್ಸ್ವರ್ಗೇಷು ಚ ಲೋಕೇಷು ಪ್ರತಿತಿಷ್ಠಂತೋ ಯಂತಿ ।**

ಉಕ್ತಾನಾಂ ಪಶುವಿಭಕ್ತೀನಾಂ ಸಂಖ್ಯಾಂ ಪ್ರಶಂಸತಿ–ತಾ ವೈ ಹನ್ವಾದಯ ಇಳಾಂತಾಃ ಶ್ರುತ್ಯೋಕ್ತಾ ಅಸ್ಮಾಭಿರಪಿ ದೃಶ್ಯಮಾನಾಃ ಷಟ್ತ್ರಿಂಶತಂ ಷಟ್ತ್ರಿಂಶತ್ಸಂಖ್ಯಾಕಾ ಏಕಪದಾ ಹನುರ್ಜಿಹ್ವೇತ್ಯೇವಮೇಕೈಕೇನ ಪದೇನಾಭಿಧೀಯಮಾನಾಃ ಪಶುವಿಭಕ್ತಯೋ ಯಜ್ಞಂ ವಹನ್ತಿ ಯಜ್ಞಸ್ಯ ನಿರ್ವಾಹಂ ಕುರ್ವಂತಿ । ಸಂಖ್ಯಾ ಚೇಯಂ ಪೂರ್ವಾಚಾರ್ಯೈರ್ವ್ಯಾಖ್ಯಾತಾ––

‘ತತ್ರ (ಊರೂ) ಪಾದೌ (ಚ) ತೌ ದ್ವೌ ದ್ವಾವನ್ಯೇ ದ್ವಾತ್ರಿಂಶದೇವ ಹಿ ।
ಹನ್ವಾದೀಳಾಂತಮುಕ್ತಂ ತಾಃ ಷಟ್ತ್ರಿಂಶದ್ಭಕ್ತಯಃ ಪಶೋಃ ’॥ ಇತಿ

**ಅತಃ ಸಂಖ್ಯಾಸಾಮ್ಯಾದಿಯಂ ವಿಭಕ್ತಿರ್ಬೃಹತೀರೂಪಾ । ಸ್ವರ್ಗಲೋಕಾಶ್ಚ ಬೃಹತ್ಯಾ ಸಂಪಾದಯಿತುಂ ಶಕ್ಯತ್ವಾದ್ಬಾರ್ಹತಾಃ । ತತ್ತೇನ ಪಶುವಿಭಾಗೇನ ಸತ್ರಿಣಃ ಪ್ರಾಣಾನ್ಸ್ವರ್ಗ- ಲೋಕಾನಪಿ ಪ್ರಾಪ್ನುವಂತಿ ಪಶ್ವವಯವಾನಾಂ ಪ್ರಾಣಾಧಾರತ್ವಾತ್ । ತೇನ ವಿಭಾಗೇನ ಸತ್ರಿಣೋಽ- ಸ್ಮಿಞ್ಜನ್ಮನಿ ಪ್ರಾಣೇಷು ಪ್ರತಿಷ್ಠಿತಾ ವರ್ತಂತೇ ಜನ್ಮಾಂತರೇಷು ಬೃಹತೀದ್ವಾರಾ ಸ್ವರ್ಗೇಷು ಲೋಕೇಷು ಪ್ರತಿಷ್ಠಿತಾ ವರ್ತಂತೇ ।**

ಇದುವರಿಗೂ ಹೇಳಿದ ಪಶುವಿಭಾಗದ ಸಂಖ್ಯೆಯನ್ನು ವಿವರಿಸುವರು—ಮೇಲೆ ವಿವರಿಸಿರುವಂತೆ ಯಜ್ಞಪಶುವಿನ ಭಾಗಗಳಾದ ಹನೂ ಎಂದು ಮೊದಲುಗೊಂಡು ಇಳಾ ಎನ್ನುವವರೆಗೂ ಇರುವ ಮೂವತ್ತಾರು ಪ್ರತ್ಯೇಕ ವಿಭಾಗಗಳನ್ನು ಹೇಳಿದ್ದಾಯಿತು. ಇವೆಲ್ಲವೂ ಯಜ್ಞವನ್ನು ನಿರ್ವಹಿಸುವವು. ಈ ಮೂವತ್ತಾರು ಎಂಬ ವಿಭಾಗಸಂಖ್ಯೆಯನ್ನು ಹಿಂದಿನ ಯಾಜ್ಞಿಕಕುಶಲರೆಲ್ಲರೂ ಅನುಮೋದಿಸಿರುವರು. ಈ ಸಂಖ್ಯೆಯು (ವಿಭಾಗಗಳು) ಮೂವತ್ತಾರು ಇರುವುದರಿಂದ ಮೂವತ್ತಾರು ಅಕ್ಷರಗಳುಳ್ಳ ಬೃಹತೀಛಂದಸ್ಸಿನ ಸ್ವರೂಪವಾಗಿ (ಪ್ರತೀಕ) ವಾಗಿರುವುದು. ಈ ವಿಧವಾದ ಮೂವತ್ತಾರು ಸಂಖ್ಯಾಯು- ಕ್ತವಾದ ಬೃಹತೀಛಂದಸ್ಸಿನಿಂದ ಯಜ್ಞ ಮಾಡುವ ಯಜಮಾನರು ತಮ್ಮಪ್ರಾಣಗಳನ್ನು ಕಾಪಾಡಿಕೊಂಡು ಸ್ವರ್ಗಲೋಕಗಳನ್ನು ಪಡೆಯುವರು ಎಂದರೆ ಯಜ್ಞಪಶುವಿನ ಅವಯವಗಳನ್ನು ಬೃಹತೀಛಂದಸ್ಸಿನ ೩೬ ಅಕ್ಷರ ಸಂಖ್ಯೆಗೆ ಅನುಸಾರವಾಗಿ ವಿಭಾಗಮಾಡುವ ಯಜಮಾನರು ಈ ಜನ್ಮದಲ್ಲಿ ಸುಖವಾಗಿ ಜೀವಿಸಿರುವರು. ಅನಂತರ ಬೃಹತೀಛಂದಸ್ಸಿನ ಸಾಮರ್ಥ್ಯದಿಂದ ಸ್ವರ್ಗಲೋಕದಲ್ಲಿಯೂ ಸುಖದಿಂದ ಇರುವರು.

### ಸ ಏಷ ಸ್ವರ್ಗ್ಯಃ ಪಶುರ್ಯ ಏನಮೇವಂ ವಿಭಜಂತಿ ।

**ಪಶುಂ ಪ್ರಶಂಸತಿ—ಯೇ ಸತ್ರಿಣ ಏನಂ ಪಶುಮೇವಮುಕ್ತೇನ ಪ್ರಕಾರೇಣ ವಿಭಕ್ತಂ ಕುರ್ವಂತಿ ತೇಷಾಂ ಸತ್ರಿಣಾಂ ಸ ಏಷ ಪಶುಃ ಸ್ವರ್ಗ್ಯಃ ಸ್ವರ್ಗಾಯ ಹಿತೋ ಭವತಿ ॥**

ಯಜ್ಞಪಶುವನ್ನು ಪ್ರಶಂಸೆಮಾಡುವರು—ಯಜ್ಞವನ್ನು ಮಾಡುವ ಯಾವ ಯಜಮಾನರು (ಋತ್ವಿಜರೂ ಸೇರಿ) ಯಜ್ಞಪಶುವನ್ನು ಮೇಲೆ ಹೇಳಿದ ಪ್ರಕಾರವಾಗಿ ಭಾಗಮಾಡುವರೋ ಅವರಿಗೆ ಆ ಪಶುವಿನ ಮೂಲಕವೇ ಸ್ವರ್ಗಲೋಕವು ಪ್ರಾಪ್ತಿಯಾಗುವುದು.

### ಅಥ ಯೇಽತೋಽನ್ಯಥಾ ತದ್ಯಥಾ ಸೇಳಗಾ ವಾ ಪಾಪಕೃತೋ ವಾ ಪಶುಂ ವಿಮಥ್ನೀರಂಸ್ತಾದೃಕ್ತತ್ ॥

**ಪ್ರಕಾರಾಂತರೇಣ ವಿಭಾಗಂ ನಿಂದತಿ—ಅಥೋಕ್ತವಿಭಾಗಪ್ರಶಂಸಾನಂತರಮಿತರ ನಿಂದೋ- ಚ್ಯತ ಇತಿ ಶೇಷಃ । ಯೇ ಸತ್ರಿಣೋಽತಃ ಪೂರ್ವೋಕ್ತವಿಭಾಗಾದನ್ಯಥಾ ಪ್ರಕಾರಾಂತರೇಣ ವಿಭಜಂತ ಇತ್ಯನುವರ್ತತೇ ತತ್ತೇಷಾಂ ನಿದರ್ಶನಮುಚ್ಯತೇ । ಇಳಾಶಬ್ದೇನಾನ್ನಮುಚ್ಯತೇ । ತೇನ ಸಹ ವರ್ತತ ಇತಿ ಸೇಳಮನ್ನಬಹುಲೋ ದೇಶಸ್ತಂ ಗಚ್ಛಂತೀತಿ ಸೇಳಗಾ ವಿಹಿತಕರ್ಮಾ- ನನುಷ್ಠಾಯಿನಃ ಕೇವಲೋದರಪೋಷಣಪರಾಯಣಾ ಇತ್ಯರ್ಥಃ । ಪಾಪಕೃತಃ ಪ್ರತಿಷಿದ್ಧಕರ್ಮ- ಕಾರಿಣಃ । ತೇ ಚ ದ್ವಿವಿಧಾ ಯಥಾ ಪಶುಂ ವಿಮಥ್ನೀರನ್ಕೇವಲಂ ಮಾಂಸಭಕ್ಷಣಾರ್ಥಮೇವ ಹನ್ಯುಸ್ತಾದೃಗೇವ ತದನ್ಯಥಾವಿಭಜನಂ ದ್ರಷ್ಟವ್ಯಂ ॥**

ಪಶುವಿಭಾಗ ಕ್ರಮವನ್ನು ಬೇರೆ ವಿಧವಾಗಿ ಮಾಡಿದರೆ ಅದರಿಂದುಂಟಾಗುವ ಹಾನಿಯನ್ನು ಪ್ರದರ್ಶಿಸಿ ನಿಂದಿಸುವರು– ಯಜ್ಞೋಕ್ತ ಪ್ರಕಾರವಾಗಿ ಪಶುವಿಭಾಗ ಕ್ರಮವನ್ನನುಸರಿಸದೆ ಮನಸ್ಸು ಬಂದಂತೆ ಯಜ್ಞಪಶುವನ್ನು ವಿಭಾಗಿಸಿದಲ್ಲಿ ಮಾಂಸ ಭಕ್ಷಣಾರ್ಥವಾಗಿ ಮಾತ್ರ ಪಶುವನ್ನು ವಧೆಮಾಡಿ ಕತ್ತರಿಸಿದ ಪಾಪಕ್ಕೆ ಯಜ್ಞಕರ್ತರು ಗುರಿಯಾಗುವರು. ಹೀಗೆ ಮಾಡುವುದರಿಂದ ಯಜ್ಞಫಲವು ಲಭಿಸದೇ ಇರುವುದಲ್ಲದೆ ಕೇವಲ ಪಾಪವನ್ನೇ ಪಡೆದಂತಾಗುವುದು ಎಂದಭಿಪ್ರಾಯವು.

ತಾಂ ವಾ ಏತಾಂ ಪಶೋರ್ವಿಭಕ್ತಿಂ ಶ್ರೌತ ಋಷಿರ್ದೇವಭಾಗೋ ವಿದಾಂಚಕಾರ ತಾಮು ಹಾಪ್ರೋಚ್ಯೈವಾಸ್ಮಾಲ್ಲೋಕಾದು-ಚ್ಚಕ್ರಾಮತ್ ॥

ಉಕ್ತಂ ಪಶುವಿಭಾಗಂ ತದ್ದ್ರಷ್ಟೃಮಹರ್ಷಿದ್ವಾರಾ ಪ್ರಶಂಸತಿ– ತಾಮೇತಾಂ ಪೂರ್ವೋಕ್ತಾಂ ಪಶುವಿಭಕ್ತಿಂ ಶ್ರುತನಾಮಕಸ್ಯ ಮುನೇಃ ಪುತ್ರೋ ಮಹರ್ಷಿರ್ದೇವಭಾಗಾಖ್ಯೋ ಮಹರ್ಷಿರ್ವಿದಾಂ-ಚಕಾರ ಜ್ಞಾತವಾನ್। ತಾಮು ಹ ತಾಮೇವ ಸ್ವೇನ ಜ್ಞಾತಾಂ ವಿಭಕ್ತಿಮಪ್ರೋಚ್ಯೈವ ರಹಸ್ಯವಿದ್ಯೇತಿ ಮತ್ವಾ ಕಸ್ಮೈಚಿದಪ್ಯಕಥಯಿತ್ವೈವಾಸ್ಮಾಲ್ಲೋಕಾದುಚ್ಚಕ್ರಾಮದುತ್ಕ್ರಾಂತವಾನ್ಮೃತ ಇತ್ಯರ್ಥಃ ॥

ಈ ಪಶುವಿಭಾಗಕ್ರಮವನ್ನು ವೇದಮಂತ್ರದ್ರಷ್ಟೃವಾದ ಋಷಿಯಮೂಲಕ ಪ್ರಶಂಸೆಮಾಡುವರು—ಹಿಂದೆ ಹೇಳಿದ ಯಜ್ಞಪಶುವಿನ ವಿಭಾಗಕ್ರಮವನ್ನು ಹಿಂದೆ ಶ್ರುತ ಎಂಬ ಹೆಸರಿನ ಋಷಿಯ ಪುತ್ರನಾದ ದೇವಭಾಗನೆಂಬ ಮಹರ್ಷಿಯು ದಿವ್ಯ ಜ್ಞಾನದಿಂದ ಕಂಡುಹಿಡಿದನು. ಆದರೆ ಈ ವಿಭಾಗಕ್ರಮವನ್ನು ಅತಿ ರಹಸ್ಯವೆಂದು ಭಾವಿಸಿ ಆ ಋಷಿಯು ಇದನ್ನು ಯಾರಿಗೂ ತಿಳಿಸದೆ ಈ ಲೋಕದಿಂದ (ಮೃತನಾದಬಳಿಕ) ಪರಲೋಕಕ್ಕೆ ಹೋದನು.

ತಾಮು ಹ ಗಿರಿಜಾಯ ಬಾಭ್ರವ್ಯಾಯಾಮನುಷ್ಯಃ ಪ್ರೋವಾಚ ತತೋ ಹೈನಾಮೇತದರ್ವಾಜ್ಮನುಷ್ಯಾ ಅಧೀಯತೇಽಧೀಯತೇ ॥

ಕಥಂ ತರ್ಹಿ ತತ್ಸಂಪ್ರದಾಯ ಇತ್ಯಾಶಂಕ್ಯಾಽಽಹ— ತಾಮು ಹ ತಾಮೇವ ಪಶುವಿಭಕ್ತಿಮ-ಮನುಷ್ಯೋ ಮನುಷ್ಯವತಿರಿಕ್ತಃ ಕಶ್ಚಿದ್ಗಂಧರ್ವಾದಿರ್ಬಾಭ್ರವ್ಯಾಯ ಬಭ್ರೋರಪತ್ಯಾಯ ಗಿರಿಜ-ನಾಮಕಾಯ ಮಹರ್ಷಯೇ ಪ್ರೋವಾಚ। ಏತದರ್ವಾಜ್ಮನುಷ್ಯಾ ಏತಸ್ಮಾದ್ಗಿರಿಜಾಖ್ಯಾನ್ಮಹರ್ಷೇರ-ರ್ವಾಚೀನಾಃ ಸರ್ವೇ ಮನುಷ್ಯಾಸ್ತತಸ್ತಸ್ಯ ಗಿರಿಜಾಖ್ಯಸ್ಯ ಸಕಾಶಾದೇನಾಂ ಪಶುವಿಭಕ್ತಿಮಧೀಯತೇ। ಪದಾಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ॥

ಆದರೆ ಈ ಸಂಪ್ರದಾಯವು ಹೇಗೆ ಬಳಕೆಗೆ ಬಂದಿತೆಂಬ ವಿಷಯವನ್ನು ವಿವರಿಸುವರು—ಹಿಂದೆ ಹೇಳಿದ ದೇವಭಾಗನೆಂಬ ಋಷಿಯು ಮನುಷ್ಯರಾದವರಾರಿಗೂ ತಿಳಿಸದೆ ಹೋದರೂ ಗಂಧರ್ವಾದಿಗಳಿಗೆ ತಿಳಿಸಿದ್ದನು. ಆ ಗಂಧರ್ವರಲ್ಲಿ ಬಾಭ್ರವ್ಯ ಎಂದರೆ ಬಭ್ರುವಿನ ಮಗನಾದ ಗಿರಿಜ ಎಂಬ ಮಹರ್ಷಿಗೆ ತಿಳಿದಿದ್ದಿತು. ಈ ಋಷಿಗಿಂತ ಈಚಿನವರಾದ ಕೆಲವು ಮನುಷ್ಯರು ಗಿರಿಜ ಎಂಬ ಮಹರ್ಷಿಯಿಂದ ಈ ಪಶುವಿಭಾಗಕ್ರಮವನ್ನು ಅರಿತುಕೊಂಡು ಪ್ರಚಾರಮಾಡಿದರು. ಆಗಿನಿಂದಲೂ ಮನುಷ್ಯರಾದ ಯಜ್ಞಕರ್ತರು ಈ ಸಂಪ್ರದಾಯವನ್ನೇ ಅನುಸರಿಸುತ್ತಾ ಬಂದಿರುವರು. **ಅಧೀಯತೇ** ಎಂಬ ಪದವು ಇಲ್ಲಿ ದ್ವಿರುಕ್ತವಾಗಿದೆ. ಇದು ಅಧ್ಯಾಯವು ಮುಗಿಯಿತೆಂಬುವುದನ್ನು ಸೂಚಿಸುವುದು.

*English Translation*

**(The distribution of the different parts of the sacrificial animal among the priests)**

Now follows the division of the different parts of the sacrificial animal (among the priests). We shall describe it. The two jawbones with the tongue are to be given to the Prastotar ; The breast in the form of an eagle to the Udagatar ; the throat with the palate to the Pratihartar ; the lower part of the right loins to the Hotar ; the left to the Brahma; the right thigh to the Maitravaruna ; the left to the Brahmanachhamsi; the right side with the shoulder to the Adhvaryu, the left side to those who accompany the chants ; The left shoulder to the Pratipasthatar ; the lower part of the right arm to the Neshtar; the lower part of the left arm to the Potar; the upper part of the right arm tothe Atreya, the left to the Sadasya; the back bone and the urinal bladder tothe Grihapati (sacrificer); the right feet to the Grihapati who gives a feasting; the left feet to the wife of that Grihapati who gives a feasting; the upper lip is common to both the Grihapati and his wife, whifch is to be divided by the Grihapati. They offer the tail of the animal to wives, but they should give it to a Brahmana; the fleshy processes (manikah) on the neck and three gristles (kikasah) to the Gravastut; three other gristles and one-half of the fleshy part of the back (vaikartta) to the Unnetar; the other half of the fleshy part on the neck and the left lobe (kloma) to the slaughterer, who should present it to a Brahmana, if he himself would not happen to be a Brahmana. The head is to be given to the Subrahmanya, the skin belongs to him (the Subrahmanya) who spoke, svah sutyam (to- morow at the Soma sacrifice), that part of the sacrificial animal at a Soma sacrifice which belongs to Ila (sacrificial food) is common to all the priests; only for the Hotar it is optional.

All these portions of the sacrificial animal amount to thirty-six single pieces, each of which represents the pada (foot) of a verse by which the

sacrifice is carried up. The Brihati metre consists of thirty six syllables; and the heavenly worlds are of the Brihati nature. In this way by dividing the animal into thirty-six parts they gain life in this world and the heavens, and having become established in both this and that world they walk there.

To those who divide the sacrificial animal in the way mentioned, it becomes the guide to heaven. But those who make the division otherwise are like scoundrels and miscreants who kill an animal merely for gratifying their lust after flesh.

This division of the sacrificial animal was invented by the Rishi Devabhaga, a son of Sruta. When he was departing from this life, he did not entrust the secret to any one. But a supernatural being communicated it to Girija, the son of Babhru. Since his time men study it.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಏಕತ್ರಿಂಶೋಧ್ಯಾಯಸ್ಯ ಪ್ರಥಮಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣ್ಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಏಕತ್ರಿಂಶೋಽಧ್ಯಾಯಃ ಸಮಾಪ್ತಃ

ಇಲ್ಲಿಗೆ ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ
ಮೂವತ್ತೊಂದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವಾದುದು.

ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



# ಅಥೈತರೇಯಬ್ರಾಹ್ಮಣೇ ದ್ವಾತ್ರಿಂಶಾಧ್ಯಾಯೇ ಪ್ರಥಮಃ ಖಂಡಃ

## ಮೂವತ್ತೆರಡನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

[ಅಗ್ನಿಹೋತ್ರವೆಂಬ ಕರ್ಮದಲ್ಲಿ ಸಂಭವಿಸುವ ಲೋಪದೋಷ, ಅನಾಹುತ, ವಿಘ್ನ ಮುಂತಾದವುಗಳಿಗೆ ಹೇಳಿರುವ ಪ್ರಾಯಶ್ಚಿತ್ತ ಇತ್ಯಾದಿ]

---

[ಅಗ್ನಿಹೋತ್ರಮಾಡುವ ಯಜ್ಞಕರ್ತನು ಮೃತನಾದಲ್ಲಿ ಅನುಸರಿಸಬೇಕಾದ ಪ್ರಾಯಶ್ಚಿತ್ತಾದಿ ಕ್ರಮಗಳು]

---

**ಸತ್ರಿಣಾಂ ವರ್ಣಿತಂ ಕಾರ್ಯಂ ಪ್ರಾಯಶ್ಚಿತ್ತಂ ಬ್ರವೀತ್ಯಥ ।**
**ಚೋದ್ಯೋತ್ತರ ಪ್ರಕಾರೇಣ ಸುಸ್ಪಷ್ಟಮಿತಿ ಗೃಹ್ಯತಾಂ ॥**

ಇದುವರೆಗೂ ಯಜ್ಞಕರ್ತರು ಮುಂತಾದವರು ಯಜ್ಞದಲ್ಲಿ ನಿರ್ವಹಿಸಬೇಕಾದ ನಿಯಮಗಳನ್ನು ವಿವರಿಸಿದ್ದಾಯಿತು. ಈಗ ಯಜ್ಞದಲ್ಲಿ ಸಂಭವಿಸಬಹುದಾದ ವಿಘ್ನ, ಲೋಪದೋಷ ಮುಂತಾದವುಗಳ ಪರಿಹಾರಕ್ಕೆ ಮಾಡಬೇಕಾದ ಪ್ರಾಯಶ್ಚಿತ್ತ ಮೊದಲಾದ ವಿಧಾನಗಳನ್ನು ಸ್ಪಷ್ಟವಾಗಿ ಪ್ರಶ್ನೋತ್ತರರೂಪವಾಗಿ ವಿವರಿಸಲಾಗುವುದು. ಪ್ರಾರಂಭದಲ್ಲಿ ಮೊದಲನೆಯ ಪ್ರಶ್ನೆಯನ್ನೂ ಅದಕ್ಕೆ ಉತ್ತರರೂಪವಾದ ಸಮಾಧಾನವನ್ನೂ ಹೇಳುವರು—

**ತದಾಹುರ್ಯ ಆಹಿತಾಗ್ನಿರುಪವಸಥೇ ಮ್ರಿಯೇತ ಕಥಮಸ್ಯ ಯಜ್ಞಃ ಸ್ಯಾದಿತಿ ನೈನಂ ಯಾಜಯೇದಿತ್ಯಾಹುರನಭಿಪ್ರಾಪ್ತೋ ಹಿ ಯಜ್ಞಂ ಭವತೀತಿ ।**

**ತತ್ರ ಪ್ರಥಮಚೋದ್ಯೋತ್ತರೇ ದರ್ಶಯತಿ—ತತ್ರ ಯಜ್ಞವೈಕಲ್ಯವಿಷಯೇ ಕೇಚಿದ್ಬ್ರಹ್ಮವಾದಿನಃ ಪೃಚ್ಛಂತಿ । ಯಃ ಪುಮಾನಾಹಿತಾಗ್ನಿಃ ಸನ್ನುಪವಸಥಾಖ್ಯೇ ಸುತ್ಯಾದಿನಾತ್ಪೂರ್ವದಿನೇ ಮ್ರಿಯೇತಾಸ್ಯ ಯಜ್ಞಃ ಕಥಂ ಪ್ರವರ್ತತ ಇತಿ ಪ್ರಶ್ನಃ । ತಸ್ಯೇದಮುತ್ತರಮೇನಂ ಮೃತಂ ನ ಯಾಜಯೇದಿತ್ಯಭಿಜ್ಞಾ ಆಹುಃ । ತತ್ರೇಯಮುಪಪತ್ತಿಃ । ಸುತ್ಯಾಯಾ ಅನುಪಕ್ರಾಂತತ್ವಾದಯಂ ಯಜ್ಞಮನಭಿಪ್ರಾಪ್ತ ಏವ ಭವತಿ । ತಸ್ಮಾದ್ಯಾಗೋ ನ ಯುಕ್ತಃ ।**

ಪ್ರಾರಂಭದಲ್ಲಿ ಬ್ರಹ್ಮವಾದಿಗಳೆಂಬ ಯಜ್ಞಾನುಷ್ಠಾನ ಕುಶಲರು ಈರೀತಿ ಪ್ರಶ್ನೆಮಾಡುವರು— ಇಲ್ಲಿ ಆಹಿತಾಗ್ನಿಃ ಎಂದರೆ ಯಜ್ಞಾದಿಗಳನ್ನು ಹಿಂದೆ ಮಾಡಿ ಮುಂದೆ ಆಜೀವಪರ್ಯಂತರ ತನ್ನ ಮನೆಯಲ್ಲಿ ಗಾರ್ಹಪತ್ಯಾಗ್ನಿಯನ್ನುಸ್ಥಾಪಿಸಿ ಆ ಅಗ್ನಿಯಲ್ಲಿ ಪ್ರತಿದಿನವೂ ಸಾಯಂಪ್ರಾತಃ ಕಾಲಗಳಲ್ಲಿ ಗೃಹಸ್ಥಧರ್ಮವಿಹಿತವಾದ ಅಗ್ನಿಹೋತ್ರವನ್ನು ಆಹುತಿಪೂರ್ವಕವಾಗಿ ಮತ್ತು ವಿಧ್ಯುಕ್ತವಾಗಿ ಆಚರಿಸುವ ಪುರುಷನಿಗೆ **ಆಹಿತಾಗ್ನಿ** ಎಂದು ಹೆಸರು. ಆಹಿತಾಗ್ನಿಯಾದ ಇಂತಹ ಪುರುಷನು

ಮುಂಚೆ ತಾನು ಮಾಡಬೇಕೆಂದಿರುವ ಸೋಮ ಅಥವಾ ಇತರ ಯಾಗವನ್ನು ತಕ್ಕ ಸಲಕರಣೆಗಳಿಂದ ಮಾಡಲು ಪ್ರಾರಂಭಿಸಿ ಸುತ್ಯಾದಿನಕ್ಕೆ (ಸೋಮರಸವನ್ನು ಹಿಂಡಿ ಅರ್ಪಿಸುವ ದಿನಕ್ಕೆ ಸುತ್ಯಾದಿನವೆಂದು ಹೆಸರು) ಹಿಂದಿನ ದಿನವೇ ಮೃತನಾದಲ್ಲಿ ಆಗ ಏನು ಮಾಡಬೇಕು ? ನಡೆಯುತ್ತಿರುವ ಯಜ್ಞವನ್ನು ಮುಂದುವರಿಸಬೇಕೇ ಬೇಡವೇ ? ಎಂಬುದು ಬ್ರಹ್ಮವಾದಿಗಳು ಕೇಳುವ ಪ್ರಶ್ನೆಯು. ಇದಕ್ಕೆ ಉತ್ತರವು ಈ ರೀತಿಯಾಗಿರುವುದು—ಸುತ್ಯಾ ದಿನಕ್ಕೆ ಹಿಂದಿನ ದಿನ ಯಜ್ಞಕರ್ತನು ಮೃತನಾದಲ್ಲಿ ಅವನು ನಡೆಸುತ್ತಿದ್ದ ಯಜ್ಞವನ್ನು ಮುಂದುವರಿಸದೇ ಅಲ್ಲಿಗೇ ನಿಲ್ಲಿಸಬೇಕು. ಸುತ್ಯಾದಿನವಲ್ಲಿ ಮಾಡುವ ಕಾರ್ಯಕಲಾಪಗಳು ಅತಿ ಮುಖ್ಯವಾದ್ದರಿಂದ ಅದನ್ನು ಮಾಡುವುದಕ್ಕೆ ಮೊದಲೇ ಯಜ್ಞಕರ್ತನು ಮೃತನಾಗಿರುವಾಗ ಯಜ್ಞವನ್ನು ಉಪಕ್ರಮ (ಪ್ರಾರಂಭ) ಮಾಡಿಲ್ಲವೆಂದು ಭಾವಿಸಬೇಕು. ಆದ್ದರಿಂದ ಪ್ರಾರಂಭಮಾಡದಿರುವ ಯಜ್ಞವನ್ನು ಮುಂದುವರಿಸುವುದು ಹೇಗೆ? ಯಜ್ಞವು ಎಲ್ಲಿಯವರೆಗೆ ಸಾಗಿದ್ದರೆ ಅಲ್ಲಿಗೇ ನಿಲ್ಲಿಸಬೇಕು, ಮುಂದೆ ಮಾಡಕೂಡದು ಎಂಬುದು ಉತ್ತರವು.

**ತದಾಹುರ್ಯ ಆಹಿತಾಗ್ನಿರಧಿಶ್ರಿತೇಽಗ್ನಿಹೋತ್ರೇ ಸಾನ್ನಾಯ್ಯೇ ವಾ ಹವಿಷ್ಷು ವಾ ಮ್ರಿಯೇತ ಕಾ ತತ್ರ ಪ್ರಾಯಶ್ಚಿತ್ತಿರಿತ್ಯತ್ರೈವೈನಾ-ನ್ಯನುಪರ್ಯಾದಧ್ಯಾದ್ಯಥಾ ಸರ್ವಾಣಿ ಸಂದಹ್ಯೇರನ್ ಸಾ ತತ್ರ ಪ್ರಾಯಶ್ಚಿತ್ತಿಃ ||**

ದ್ವಿತೀಯ ಪ್ರಶ್ನೋತ್ತರೇ ದರ್ಶಯತಿ–ಅಗ್ನಿಹೋತ್ರೇ ತತ್ಸಾಧನಭೂತೇ ಪಯಸಿ ಕಾರ್ಯಾರ್ಥಂ ವಹ್ನಾವಧಿಶ್ರಿತೇ ಸತಿ ತಥಾ ಸಾನ್ನಾಯ್ಯೇ ದರ್ಶಪೂರ್ಣಮಾಸಾರ್ಥೇ ಕ್ಷೀರೇಽಧಿಶ್ರಿತೇ ಸತಿ ತಥಾ ಹವಿಷ್ಷು ಪುರೋಡಾಶಾದಿಷ್ವಧಿಶ್ರಿತೇಷು ಯಜಮಾನಸ್ಯ ಮರಣೇ ಕಿಂ ಪ್ರಾಯಶ್ಚಿತ್ತಮಿತಿ ಪ್ರಶ್ನಃ । ಪ್ರಾಯೋ ನಾಶಸ್ತಸ್ಯ ಚಿತ್ತಂ ಸಮಾಧಾನಂ। ಅತ್ರೈವ ಯಜಮಾನದಹನದೇಶ ಏವೈನಾನಿ ಕ್ಷೀರಾದೀನ್ಯನುಪರ್ಯಾದಧ್ಯಾತ್ । ಯಜಮಾನಮನು ಪರಿತಃ ಕ್ಷಿಪೇತ್। ಯೇನ ಪ್ರಕಾರೇಣ ಸರ್ವಾಣಿ ತಾನಿ ಯಜಮಾನೇನ ಸಂಭೂಯ ದಹ್ಯೇರಂಸ್ತಥಾ ಪ್ರಕ್ಷಿಪೇತ್। ಸಾ ತಾದೃಶೀ ಕ್ರಿಯಾ ತತ್ರ ದೋಷೇ ಪ್ರಾಯಶ್ಚಿತ್ತಿರ್ಭವತಿ ॥

ಈಗ ಎರಡನೆಯ ಪ್ರಶ್ನೋತ್ತರವನ್ನು ವಿವರಿಸುವರು—ಅಗ್ನಿಹೋತ್ರಕ್ಕೆ ಸಾಧನಭೂತವಾದ ಹಾಲು, ದರ್ಶಪೂರ್ಣ ಮಾಸವೆಂಬ ಇಷ್ಟಿಯಲ್ಲಿ ಉಪಯೋಗಿಸಬೇಕಾದ ಸಾನ್ನಾಯ್ಯ ಎಂದು ಹೇಳಲ್ಪಡುವ ಕ್ಷೀರ (ಹಾಲು) ಮತ್ತು ಪುರೋಡಾಶವೇ ಮೊದಲಾದ ಹವಿರ್ದ್ರವ್ಯಗಳು ಮೊದಲಾದವುಗಳನ್ನು ಹೋಮಾರ್ಥವಾಗಿ ಅಗ್ನಿಯ ಸಮೀಪದಲ್ಲಿ ಸಿದ್ಧಪಡಿಸಿ ಇಡಲಾಗಿರುತ್ತದೆ. ಇವುಗಳನ್ನು ಅಗ್ನಿಯಲ್ಲಿ ಹಾಕಿ ಹೋಮಮಾಡುವುದಕ್ಕೆ ಮುಂಚೆಯೇ ಯಜ್ಞಕರ್ತನು ಎಂದರೆ ಯಜ್ಞ ಮಾಡುವ ಯಜಮಾನನು ಮೃತನಾದಲ್ಲಿ ಆಗ ಏನು ಮಾಡಬೇಕು ? ಈ ಸಿದ್ಧಪಡಿಸಿ ಇಟ್ಟಿರುವ ಹವಿರ್ದ್ರವ್ಯಗಳನ್ನು ಹೇಗೆ ವಿನಿಯೋಗಿಸಬೇಕು ಎಂಬುದು ಪ್ರಶ್ನೆಯು. ಇದಕ್ಕೆ ಉತ್ತರವು— ಈ ಹವಿರ್ದ್ರವ್ಯಗಳನ್ನು ಅಗ್ನಿಯಲ್ಲಿ ಹಾಕಿ ಇನ್ನೂ ಹೋಮಮಾಡಿರುವುದಿಲ್ಲವಾದ್ದರಿಂದ ಹೋಮಕಾರ್ಯವು ನೆರವೇರಿದಂತಾಗಲಿಲ್ಲ. ಆದ್ದರಿಂದ ಆ ಹವಿರ್ದ್ರವ್ಯಗಳನ್ನು, ಯಜಮಾನನನ್ನು ಚಿತೆಯ ಮೇಲಿಟ್ಟು ದಹಿಸುವ ಸಮಯದಲ್ಲಿ ಚಿತೆಯ (ಅಗ್ನಿಗೆ ಸಮೀಪದಲ್ಲಿ) ಸುತ್ತಲೂ ಅವುಗಳೂ ದಹಿಸುವಂತೆ ಇಡಬೇಕು ಎಂದರೆ ಮೃತನ ಶರೀರದ ಜತೆಯಲ್ಲಿಯೇ ಆ ಹವಿರ್ದ್ರವ್ಯಗಳನ್ನು ದಹಿಸಿ ಭಸ್ಮಮಾಡಬೇಕು ಈ ವಿಧಾನವೇ ಇಲ್ಲಿ ಪ್ರಾಯಶ್ಚಿತ್ತಿಯು.

ತದಾಹುರ್ಯ ಆಹಿತಾಗ್ನಿರಾಸನ್ನೇಷು ಹವಿಃಷು ಮ್ರಿಯೇತ ಕಾ
ತತ್ರ ಪ್ರಾಯಶ್ಚಿತ್ತಿರಿತಿ ಯಾಭ್ಯ ಏವ ತಾನಿ ದೇವತಾಭ್ಯೋ
ಹವೀಂಷಿ ಗೃಹೀತಾನಿ ಭವಂತಿ ತಾಭ್ಯಃ ಸ್ವಾಹೇತ್ಯೇವೈನಾನ್ಯಾ-
ಹವನೀಯೇ ಸರ್ವಹುಂತಿ ಜುಹುಯಾತ್ಸಾ ತತ್ರ ಪ್ರಾಯಶ್ಚಿತ್ತಿಃ ।

ತೃತೀಯೇ ಪ್ರಶ್ನೋತ್ತರೇ ದರ್ಶಯತಿ– ಹವಿಃಷು ಪುರೋಡಾಶಾದಿಷು ವೇದ್ಯಾಮಾಸನ್ನೇಷು ಯಜಮಾನಮರಣೇ ಯಾಭ್ಯೋ ದೇವತಾಭ್ಯಃ ಪೂರ್ವಂ ತಾನಿ ಹವೀಂಷ್ಯುಪಕ್ರಾಂತಾನಿ ತಾಭ್ಯಸ್ತದ್ದೇವತಾನಾಮಾನಿ ಚತುರ್ಥ್ಯಂತಾನ್ಯುಚ್ಚಾರ್ಯ ಸ್ವಾಹೇತ್ಯನೇನೈವ ಮಂತ್ರೇಣೈತಾನಿ ಹವೀಂಷಿ ಸರ್ವಹುಂತಿ ನಿಃಶೇಷೇಣ ಯಥಾ ಸರ್ವಾಣಿ ಹುತಾನಿ ಭವಂತಿ ತಥಾಽಽಹವನೀಯೇ ಜುಹುಯಾತ್ ॥

ಮೂರನೆಯ ಪ್ರಶ್ನೋತ್ತರವನ್ನು ಹೇಳುವರು—ಮೇಲೆ ಹೇಳಿದ ಪುರೋಡಾಶಾದಿಹವಿರ್ದ್ರವ್ಯಗಳನ್ನು ಯಜ್ಞವೇದಿಯಲ್ಲಿ ಇಟ್ಟು ಸಿದ್ಧಪಡಿಸಿದನಂತರ ಯಜ್ಞಕರ್ತನು ಮೃತನಾದಲ್ಲಿ ಏನು ಮಾಡಬೇಕು ಎಂಬುದು ಪ್ರಶ್ನೆಯು. ಈ ಸಂದರ್ಭದಲ್ಲಿ ಪುರೋಡಾಶಾದಿ ಹವಿಸ್ಸುಗಳನ್ನು ನಿರ್ದಿಷ್ಟ ದೇವತೆಗಳಿಗೆ ಚತುರ್ಥ್ಯಂತವಾಗಿಯೂ ಸ್ವಾಹಾಕಾರ ಪೂರ್ವಕವಾಗಿಯೂ ಹವಿಃಶೇಷವು ಉಳಿಯದಂತೆ ಎಲ್ಲವನ್ನೂ ಆಹವನೀಯಾಗ್ನಿಯಲ್ಲಿ ಅರ್ಪಿಸಿ ಹೋಮಮಾಡಬೇಕು. ಈ ವಿಷಯದಲ್ಲಿ ಇದೇ ಪ್ರಾಯಶ್ಚಿತ್ತಿ ವಿಧಾನವು.

ತದಾಹುರ್ಯ ಆಹಿತಾಗ್ನಿಃ ಪ್ರವಸನ್ಮ್ರಿಯೇತ ಕಥಮಸ್ಯಾಗ್ನಿ-
ಹೋತ್ರಂ ಸ್ಯಾದಿತ್ಯಭಿವಾನ್ಯವತ್ಸಾಯಾಃ ಪಯಸಾ ಜುಹು-
ಯಾದನ್ಯದಿವೈತತ್ಪಯೋ ಯದಭಿವಾನ್ಯವತ್ಸಾಯಾ ಅನ್ಯದಿವೈ-
ತದಗ್ನಿಹೋತ್ರಂ ಯತ್ಪ್ರೇತಸ್ಯ ॥

ಚತುರ್ಥೇ ಪ್ರಶ್ನೋತ್ತರೇ ದರ್ಶಯತಿ– ಅಗ್ನಿಹೋತ್ರಂ ಭಾರ್ಯಾಸಮೀಪೇ (ಸಂ)ಸ್ಥಾಪ್ಯ ಗ್ರಾಮಾಂತರೇ ಪ್ರವಸನ್ಗತಃ ಸನ್ಯದಿ ಮ್ರಿಯೇತ ತದಾನೀಂ ಸ್ವಗೃಹೇ ಪುತ್ರಾದಿರಭಿವಾನ್ಯವತ್ಸಾಯಾಃ ಪಯಸಾಽಗ್ನಿಹೋತ್ರಂ ಜುಹುಯಾತ್ । ವಾ ಗತಿಗಂಧನಯೋರಿತಿ ಧಾತೋರಭಿಪೂರ್ವಸ್ಯಾ-ಭಿವಾ ಇತಿ ರೂಪಂ ॥ ಅನ್ಯಸ್ಯಾ ಗೋ ವತ್ಸಃ ಸ್ವಾನ್ಯವತ್ಸಃ । ಅಭಿಪ್ರಾಪ್ತೋಽನ್ಯವತ್ಸೋ ಯಸ್ಯಾ ಗೋಃ ಸೇಯಮಭಿವಾನ್ಯವತ್ಸಾ ಪೋಷಣಾದಿಪ್ರಕಾರೇಣೋಪಸ್ಥಿತೇತ್ಯರ್ಥಃ । ಏತಾದೃಶ್ಯಾ ಅಭಿವಾನ್ಯ-ವತ್ಸಾಯಾ ಯತ್ಪಯೋಽಸ್ತ್ಯೇತದನ್ಯದಿವ ದೈನಂದಿನಾಗ್ನಿಹೋತ್ರೀಯಪಯಸಃ ಸಕಾಶಾದನ್ಯದೇವೈ-ತದ್ದ್ರವ್ಯಂ । ಪ್ರೇತಸ್ಯಾಪಿ ಯದಗ್ನಿಹೋತ್ರಮೇತದನ್ಯದಿವೈತನ್ನಿತ್ಯಾಗ್ನಿಹೋತ್ರಾದನ್ಯದೇವ ಕರ್ಮಾಂ-ತರಂ ತತ್ಸಮಾನಧರ್ಮಕಂ ಪುತ್ರಾದಿಕರ್ತೃಕಂ । ಅತಃ ಪ್ರೇತಸ್ಯಾಧಿಕಾರಾಭಾವೇಽಪಿ ಪುತ್ರಾದೇರಧಿ-ಕಾರಸದ್ಭಾವಾದನುಷ್ಠಾನಮುಪಪದ್ಯತ ಇತ್ಯರ್ಥಃ ॥

ನಾಲ್ಕನೆಯ ಪ್ರಶ್ನೋತ್ತರವನ್ನು ವಿವರಿಸಿರುವರು—ಅಗ್ನಿಹೋತ್ರವನ್ನು ಮಾಡಬೇಕೆಂದು ಹೋಮದ್ರವ್ಯಾದಿಗಳನ್ನು ತನ್ನ ಪತ್ನಿಯ ಸಮೀಪದಲ್ಲಿ ಸಿದ್ಧಪಡಿಸಿಟ್ಟು ಯಜಮಾನನು ಗ್ರಾಮಾಂತರಕ್ಕೆ ಹೋಗಿರುವಾಗ ಅಲ್ಲಿಯೇ ಮೃತನಾದಲ್ಲಿ ಆಗ ಏನು ಮಾಡಬೇಕು ? ಎಂದರೆ—ಯಾವ ದೇವತೆಗಳನ್ನುದ್ದೇಶಿಸಿ ಹೋಮದ್ರವ್ಯಗಳನ್ನು ಹಸುವಿನ ಹಾಲನ್ನು ಎಂದರೆ ಆ ಹಸುವಿನ ಕರುವಲ್ಲವೆ ಬೇರೆ ಕರುವನ್ನು ಬಿಟ್ಟು ಕರೆದ ಹಾಲನ್ನು ಉಪಯೋಗಿಸಿ ಹೋಮಮಾಡಬೇಕು. ಇಂತಹ ಹಸುವಿನ ಹಾಲಿನಿಂದ ಹೋಮಮಾಡಿದರೆ ಮೃತನಾದವನು ಹೋಮಮಾಡಿದಂತೆಯೇ ಆಗುವುದು. ಅಥವಾ ನಿತ್ಯವೂ ಉಪಯೋಗಿಸುತ್ತಿದ್ದ ಹಸುವಿಗೆ ಬದಲಾಗಿ ಬೇರೆ ಇನ್ನೊಂದು ಹಸುವಿನ ಹಾಲನ್ನಾದರೂ ಉಪಯೋಗಿಸಬಹುದು. ಇದನ್ನು ಮೃತನ ಪುತ್ರನೂ ಮಾಡಬಹುದು.

**ಅಪಿ ವಾ ಯತ ಏವ ಕುತಶ್ಚ ಪಯಸಾ ಜುಹುಯುಃ ।**

**ತತ್ರೈವ ಪಕ್ಷಾಂತರಮಾಹ—ಅಭಿವಾನ್ಯವತ್ಸಾಯಾ ಇತಿ ನಿಯಮೋ ನಾಸ್ತಿ ಕಿಂತು ಯತಃ ಕುತೋ ಯಸ್ಯಾಃ ಕಸ್ಯಾಶ್ಚಿದ್ಗೋಃ ಪಯಸಾ ಪುತ್ರಾದಯೋ ಜುಹುಯುರಿತಿ ॥**

ಅಥವಾ ಇತರ ಯಾವ ಹಸುವಿನ ಹಾಲಿನಿಂದಾಗಲಿ ಮೃತನ ಪುತ್ರರಲ್ಲಿ ಯಾರಾದರೂ ಹೋಮ ಮಾಡಬಹುದು.

**ಅಥಾಪ್ಯಾಹುರೇವಮೇವೈನಾನಜಸ್ರಾನಜುಹ್ವತ ಇಂಧೀರನ್ನಾ ಶರೀ-ರಾಣಾಮಾಹರ್ತೋರಿತಿ ।**

**ಪುನರಪಿ ಪಕ್ಷಾಂತರಮಾಹ—ಅಪಿ ಚಾನ್ಯೇ ಯಾಜ್ಞಿಕಾಃ ಪಕ್ಷಾಂತರಮಾಹುಃ । ದೇಶಾಂತರೇ ಮೃತಸ್ಯ ಪ್ರೇತಸ್ಯ ಶರೀರಾಣಾಮಸ್ಥ್ಯಾದಿಪ್ರೇತಾವಯವಾನಾಮಾಹರ್ತೋರಾಹರಣ-ಪರ್ಯಂತಮೇನಾನಾಹವನೀಯಾದೀಂಸ್ತ್ರೀನಗ್ನೀನಜಸ್ರಾನುಪಶಮರಹಿತಾನಜುಹ್ವತೋ ಹೋಮ-ರಹಿತಾನೇವಮೇವಾಸಮಾಪ್ತೇರನ್ಯೈವ ಪ್ರಕಾರೇಣೇಂಧೀರನ್ಪ್ರಜ್ವಾಲಯೇಯುರಿತಿ। ಹೋಮಾಭಾವೇಽಪಿ ತ್ರಯೋಽಪ್ಯಗ್ನಯೋ ನೋಪಶಾಮ್ಯಂತಿ ತಥಾ ಪ್ರೇತಾಸ್ಥಿಸಮಾನಯನಪರ್ಯಂತಂ ಪ್ರಜ್ವಾಲ-ಯೇದಿತ್ಯರ್ಥಃ ॥**

ಮೇಲೆ ಹೇಳಿದ ಪ್ರಾಯಶ್ಚಿತ್ತದ ವಿಷಯವನ್ನು ಇನ್ನೊಂದು ವಿಧವಾಗಿ ಹೇಳುವರು— ಅಗ್ನಿಹೋತ್ರಮಾಡುವವನು ದೇಶಾಂತರಕ್ಕೆ ಹೋಗಿದ್ದಾಗ ಅಲ್ಲಿ ಮೃತನಾದಲ್ಲಿ ಆಗ ಮೃತನದಹನಾದಿ ಉತ್ತರಕ್ರಿಯಾದಿಗಳೆಲ್ಲವೂ ಮುಗಿದು ಅಸ್ಥಿ ಸಂಚಯನಕ್ಕಾಗಿ ಆತನ ಶರೀರದ ಅಸ್ಥಿಗಳನ್ನು (ಮೂಳೆಗಳನ್ನು) ನದಿಯೇ ಮೊದಲಾದ ಜಲಾಶಯಗಳಲ್ಲಿ ಹಾಕುವುದಕ್ಕಾಗಿ ಸ್ವಗ್ರಾಮಕ್ಕೆ ತರುವ ಪರ್ಯಂತರವೂ ಅಗ್ನಿಹೋತ್ರಿಯಾದವನ ಮನೆಯಲ್ಲಿ ಕಾಪಾಡಿ ಇಟ್ಟಿದ್ದ ಅಗ್ನಿಗಳನ್ನು ಎಂದರೆ ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ ಎಂಬ ಮೂರು ಅಗ್ನಿಗಳನ್ನು ಆರಿಹೋಗದಂತೆ ಇಂಧನಾದಿಗಳಿಂದ ಪ್ರಜ್ವಲಗೊಳಿಸುತ್ತಾ (ಉರಿಯುತ್ತಿರುವಂತೆ) ಇರಬೇಕು. ಹೀಗೆಯೇ ಅಸ್ಥಿಗಳನ್ನು ತರುವ ಪರ್ಯಂತವೂ ಅಗ್ನಿಗಳು ಜ್ವಲಿಸುತ್ತಿರಬೇಕು. ಇದು ಪ್ರಕಾರಾಂತರ ಪ್ರಾಯಶ್ಚಿತ್ತವು.

**ಯದಿ ಶರೀರಾಣಿ ನ ವಿದ್ಯೇರನ್ಪರ್ಣಶರಃ ಷಷ್ಟಿಸ್ತ್ರೀಣಿ ಚ ಶತಾನ್ಯಾಹೃತ್ಯ ತೇಷಾಂ ಪುರುಷರೂಪಕಮಿವ ಕೃತ್ವಾ ತಸ್ಮಿಂಸ್ತಾಮಾವೃತಂ ಕುರ್ಯುರಥೈನಾಚ್ಛರೀರೈರಾಹೃತೈಃ ಸಂಸ್ಪರ್ಶ್ಯೋದ್ವಾಸಯೇಯುಃ**

ಪ್ರೇತಾಸ್ಥಿವಿನಾಶೇ ಕಿಂ ಕರ್ತವ್ಯಮಿತ್ಯಾಶಂಕ್ಯಾಽಽಹ—ಯದಿ ಕಥಂಚಿಚ್ಛರೀರಾಣಿ ಅಸ್ಥ್ಯಾದೀನಿ ನ ವಿದ್ಯೇರನ್ನಿನಶ್ಯೇಯುಸ್ತದಾ ಪರ್ಣಶರಃ ಪಲಾಶವೃಕ್ಷಸ್ಯ ಚ್ಛಿನ್ನಾನ್ ವೃಂತಾನ್ ಷಷ್ಟ್ಯುತ್ತರಶತತ್ರಯಸಂಖ್ಯಾಕಾನಾಹೃತ್ಯ ತೇಷಾಂ ವೃಂತಾನಾಂ ಸಂಬಂಧಿ ಪುರುಷರೂಪಕಮಿವ ಕೃತ್ವಾ ಮನುಷ್ಯಸದೃಶಂ ಕಿಂಚಿದ್ರೂಪಂ ನಿರ್ಮಾಯ ತಸ್ಮಿನ್ರೂಪೇ ತಾಮಾವೃತಂ ಪ್ರೇತಶರೀರೋ-ಚಿತಂ ಪ್ರಕಾರಂ ದಹನಪಿಂಡದಾನಾದಿರೂಪಂ ಕುರ್ಯುಃ। ಅಥ ತದಾನೀಂ ಕೃತ್ರಿಮರೂಪ-ದಹನಕಾಲ ಏನಾನಾಹವನೀಯಾದ್ಯಗ್ನೀನ್ ಶ್ಮಶಾನೇ ನೀತ್ವಾ ಸಮಾಹೃತೈಸ್ತೈಃ ಪಲಾಶವೃಂತ-ನಿರ್ಮಿತೈಃ ಶರೀರಾವಯವೈಃ ಸಂಸ್ಪರ್ಶ್ಯ ಸಂಸ್ಪೃಷ್ಟಂ ಕೃತ್ವೋದ್ವಾಸಯೇಯುಃ ॥

ಒಂದು ವೇಳೆ ಮೃತಶರೀರದ ಅಸ್ಥಿಗಳು ನಾಶವಾಗಿ ದೊರೆಯದಿರುವ ಪಕ್ಷದಲ್ಲಿ ಕೆಳಗೆ ಹೇಳುವ ಕ್ರಮವನ್ನನುಸರಿಸಬೇಕು. ಕಾರಣಾಂತರದಿಂದ ಮೃತಶರೀರವು ನಷ್ಟವಾಗಿ ಸಿಕ್ಕದಿದ್ದಲ್ಲಿ. ಆಗ ಪಲಾಶ (ಮುತ್ತುಗದ) ವೃಕ್ಷದ ಕಡ್ಡಿಗಳನ್ನು ೩೬೦ ಉಪಯೋಗಿಸಿ ಶರೀರದ ಆಕಾರವನ್ನು ಹೋಲುವಂತೆ ರಚಿಸಿ ಅದನ್ನೇ ಮೃತಶರೀರವೆಂದುಭಾವಿಸಿ ಯಥಾವಿಧಿಯಾಗಿ ದಹನಾದಿ ಉತ್ತರಕ್ರಿಯಾದಿಗಳನ್ನು ಮಾಡಬೇಕು ಆ ಕೃತ್ರಿಮರೂಪದಹನಕಾಲದಲ್ಲಿ ಮೃತನು ತನ್ನ ಗೃಹದಲ್ಲಿ ಕಾಪಾಡುತ್ತಿದ್ದ ಆಹವನೀಯಾದಿ ಅಗ್ನಿಗಳನ್ನು ಸ್ಮಶಾನಕ್ಕೆ ತಂದು ಆ ಕೃತ್ರಿಮ ಕಳೇಬರಕ್ಕೆ ಸಂಸ್ಪರ್ಶಮಾಡಿ ಅನಂತರ ಆ ಅಗ್ನಿಗಳನ್ನು ಉದ್ವಾಸನಮಾಡಬೇಕು. ಉತ್ತರಕ್ರಿಯಾದಿಗಳನ್ನೂ ಮಾಡಿ ಮುಗಿಸಬೇಕು.

**ಅಧ್ಯರ್ಧಶತಂ ಕಾಯೇ ಸಕ್ಥಿನೀ ದ್ವಿಪಂಚಾಶೇ ಚ ವಿಂಶೇ ಚೋರೂ ದ್ವಿಪಂಚವಿಂಶೇ ಶೇಷಂ ತು ಶಿರಸ್ಯುಪರಿ ದಧ್ಯಾತ್ ಸಾ ತತ್ರ ಪ್ರಾಯಶ್ಚಿತ್ತಿಃ ।**

ಪುರುಷರೂಪನಿರ್ಮಾಣಪ್ರಕಾರಂ ದರ್ಶಯತಿ—ಆನೀತಾನಾಂ ಪಲಾಶವೃಂತಾನಾಮ-ಧ್ಯರ್ಧಶತಮಧಿಕೇನಾರ್ಧೇನ ಪಂಚಾಶದ್ರೂಪೇಣ ಯುಕ್ತಂ ಶತಂ ಕಾಯೇ ಮಧ್ಯಶರೀರಸ್ಥಾನೇ ದಧ್ಯಾತ್ಪರಿತಃ ಪ್ರಕ್ಷಿಪೇತ್ । ಪಂಚಾಶತ್ಸಂಖ್ಯಾಕಾನಾಂ ವೃಂತಾನಾಂ ಸಮೂಹರೂಪಂ ಪಂಚಾಶಂ ದ್ವಿಸಂಖ್ಯಾಕೇ (ಪಂಚಾಶೇ) ದ್ವಿಪಂಚಾಶೇ ವಿಂಶತಿಸಂಖ್ಯಾಕಾನಾಂ ಸಮೂಹರೂಪಂ ವಿಂಶಂ ದ್ವಿಪಂಚಾಶೇ ಚ ವಿಂಶೇ ಚ ಸಕ್ಥಿನೀ ದಧ್ಯಾತ್। ಚತ್ವಾರಿಂಶದಧಿಕೇನ ಶತೇನ ಸಕ್ಥಿದ್ವಯಂ ನಿಷ್ಪಾದಯೇದಿತ್ಯರ್ಥಃ। ಪಂಚವಿಂಶತಿಸಂಖ್ಯಾಕಾನಾಂ ಸಮೂಹರೂಪಂ ಪಂಚವಿಂಶಂ ದ್ವಿಸಂಖ್ಯಾಕೇ ಪಂಚವಿಂಶೇ ತೇ ಊರೂ ದಧ್ಯಾತ್ಪಂಚಾಶತ್ಸಂಖ್ಯಾಕೈರ್ವೃಂತೈರೂರೂದ್ವಯಂ ನಿಷ್ಪಾದಯೇ-ದಿತ್ಯರ್ಥಃ । ಏವಂ ನವತ್ಯ(ಚತ್ವಾರಿಂಶದ) ಧಿಕಶತದ್ವ (ತ್ರ) ಯೇ ಗತೇ ಸತಿ ಶೇಷಂ ಸಪ್ತ (ವಿಂಶ)

ತಿಸಂಖ್ಯಾಕಂ ಶಿರಸ್ಯುಪರಿ ಪ್ರಕ್ಷಿಪೇತ್ ॥ ಪ್ರವಸತೋ ಮೃತಸ್ಯಾಗ್ನಿಹೋತ್ರವೈಕಲ್ಯಪ್ರಾಯಶ್ಚಿತ್ತಂ ನಿಗಮಯತಿ-ಸಾ ಪ್ರೋಕ್ತಕ್ರಿಯಾ ತತ್ರ ವೈಕಲ್ಯೇ ಪ್ರಾಯಶ್ಚಿತ್ತಿಃ ಸಮಾಧಾನಕರಣಮ್ ॥

ಪಲಾಶವೃಕ್ಷದ ಕಡ್ಡಿಗಳಿಂದ ಮೃತಶರೀರವನ್ನು ರಚಿಸುವ ಕ್ರಮವನ್ನು ವಿವರಿಸಿರುವರು—೩೬೦ ಪಲಾಶವೃಕ್ಷದ ಕಡ್ಡಿಗಳನ್ನು ಕೃತ್ರಿಮಶರೀರ ರಚನೆಯಲ್ಲಿ ಉಪಯೋಗಿಸಬೇಕೆಂದು ಹೇಳಿದೆಯಷ್ಟೆ. ಈ ಸಂಖ್ಯೆಯಲ್ಲಿ ೧೫೦ ಕಡ್ಡಿಗಳನ್ನು ಶರೀರದಲ್ಲಿ ಮಧ್ಯಭಾಗವನ್ನು ಎಂದರೆ ಉದರಭಾಗವನ್ನು ರಚಿಸಲು ಉಪಯೋಗಿಸಬೇಕು. ೧೪೦ ಕಡ್ಡಿಗಳನ್ನು ಎಡಬಲ ಭಾಗಗಳ ಸೊಂಟ, ೫೦ ಕಡ್ಡಿಗಳನ್ನು ತೊಡೆಗಳಿಗೂ ಉಳಿದ ಕಡ್ಡಿಗಳನ್ನು ಇತರ ಭಾಗಗಳಿಗೂ ಉಪಯೋಗಿಸಿ ಮೃತಶರೀರದ ಆಕಾರದಂತೆ ರಚಿಸಬೇಕು. ಈ ರೀತಿ ಮಾಡುವುದು ಪ್ರಾಯಶ್ಚಿತ್ತಿ ವಿಧಾನವು.

---

*English Translation*

**(The penances for mishaps to the performer of the Agnihotram)**

---

**(What penances are required when an Agnihotri dies.)**

They ask, If a man who has already established a sacred fire (an Agnihotri) should die on the day previous to a sacrifice (upavasatha), what is to become of his sacrifice to which all preprations had been made? one should not have it brought; thus say some; for he the owner himself has no share in the sacrifice.

They ask, If an Agnihotri should die after having placed the intended fire offering, be it the Sannayya or other offerings on the fire, how is this to be atoned for? One shall put all these things one after the other round the fire like sticks, paridhas and burn them all together. This is the penance.

They ask, If an Agnihotri should die after having placed the sacrificial offerings (ready made) on the Vedi, what is the atonement? One ought to sacrifice them all in the Ahavaniya fire with the formula Svaha, to all those deities for whom they were intended by the deceased Agnihotri.

They ask, If an Agnihotri should die when abroad, what is to become of his burnt offering (agnihotram)? There are two ways. Either one shall then sacrifice the milk of a cow to which another as its own calf had been brought (to rear it up) for the milk of such a cow is as different as the oblation brought in the name of an Agnihotri deceased. or they may offer the milk of any other cow. But they mention another way besides. The relatives of the deceased Agnihotri should keep burning the three constantly blazing fires (Ahavaniya, &c.) without giving them any offering till the ashes of the deceased shall have been collected. Should they not be forthcoming, then they should take three hundred and sixty footstalks of Palasa leaves and form of them a human figure and perform in it all the funeral ceremonies required (avrt). After having brought the members of this artificial corpse into contact with the three sacred fires, they shall remove (extinguish) them. They shall make this human figure in the following way: one hundred and fifty footstalks are to represent the trunk of the corpse, one hundred and forty both the thighs, and fifty both the loins, and the rest are instead of the head, and are therefore to be placed accordingly. This is the penance.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾತ್ರಿಂಶಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹಣದಲ್ಲಿ ಮೂವತ್ತೆರಡನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು



# ಅಥ ದ್ವಾತ್ರಿಂಶಾಧ್ಯಾಯೇ ದ್ವಿತೀಯಃ ಖಂಡಃ

## ಮೂವತ್ತೆರಡನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

---

[ ಪ್ರಾಯಶ್ಚಿತ್ತವಿಧಾನವು ಮುಂದುವರೆದುದು ]

---

ತದಾಹುರ್ಯಸ್ಯಾಗ್ನಿಹೋತ್ರ್ಯುಪಾವಸೃಷ್ಟಾ ದುಹ್ಯಮಾನೋಪವಿ-
ಶೇತ್ಕಾ ತತ್ರ ಪ್ರಾಯಶ್ಚಿತ್ತಿರಿತಿ ತಾಮಭಿಮಂತ್ರಯೇತ ॥

ಪಂಚಮೇ ಪ್ರಶ್ನೋತ್ತರೇ ದರ್ಶಯತಿ—ಅಗ್ನಿಹೋತ್ರಹವಿರರ್ಥಂ ದೋಗ್ಧವ್ಯಾ ಧೇನು-ರಗ್ನಿಹೋತ್ರೀ ಯಸ್ಯಾಗ್ನಿಹೋತ್ರಿಣಃ ಸಂಬಂಧಿನೀ ಸಾ ಧೇನುರುಪಾವಸೃಷ್ಟಾ ವತ್ಸೇನ ಸಂಯೋಜಿತಾ ದುಹ್ಯಮಾನಾ ಸತೀ ದೋಹನಸ್ಯ ವಿಘ್ನಂ ಕೃತ್ವಾ ಯದ್ಯುಪವಿಶೇತ್ತದಾನೀಂ ವಕ್ಷ್ಯಮಾಣೇನ ಮಂತ್ರೇಣ ತಾಮಭಿಮಂತ್ರಯೇತ। ಯದ್ಯಪ್ಯೇತತ್ಪಂಚವಿಂಶಾಧ್ಯಾಯಸ್ಯ ದ್ವಿತೀಯಖಂಡೇ ವರ್ಣಿತಂ ತಥಾಽಪಿ ತತ್ರ ಬುದ್ಧಿಸ್ಥಸಂಗತಿಃ। ಅತ್ರ ತು ಪ್ರಾಯಶ್ಚಿತ್ತಪ್ರಾಧಾನ್ಯೇನೋಪಕ್ರಮಾತ್ತಸ್ಮಾದೇವ ಸಂಗತಮಿತ್ಯಭಿಪ್ರೇತ್ಯ ಪುನರಪ್ಯಾಮ್ನಾತಮ್ ॥

ಐದನೆಯ ಪ್ರಶ್ನೋತ್ತರವನ್ನು ವಿವರಿಸುವರು. ಅಗ್ನಿಹೋತ್ರದಲ್ಲಿ ಹವಿರ್ದ್ರವ್ಯಕ್ಕಾಗಿ ಹಾಲುಬೇಕಾಗುವುದು. ಆ ಹಾಲಿಗಾಗಿ ಹಸುವಿನ ಬಳಿಗೆ ಹೋಗಿ ಕರುವನ್ನು ಬಿಟ್ಟನಂತರ ಹಾಲನ್ನು ಕರೆಯುತ್ತಿರುವ ಸಮಯದಲ್ಲಿ ಹಸುವು ತನ್ನ ಕಾಲುಗಳನ್ನು ಮಡಿಸಿ ಕುಳಿತುಕೊಂಡರೆ ಹಾಲುಕರೆಯುವುದಕ್ಕಾಗುವುದಿಲ್ಲ. ಇಂತಹ ಸಂದರ್ಭದಲ್ಲಿ ಏನುಮಾಡಬೇಕು ಎಂಬುದು ಪ್ರಶ್ನೆಯು. ಇದಕ್ಕೆ ಉತ್ತರವನ್ನು ಈ ರೀತಿ ಹೇಳುವರು. ಹಾಲನ್ನು ಕರೆಯುತ್ತಿರುವಾಗ ಮಧ್ಯದಲ್ಲಿ ವಿಘ್ನವನ್ನುಂಟುಮಾಡಿ ಕುಳಿತುಕೊಂಡಲ್ಲಿ ಆ ಹಸುವನ್ನು ಮುಂದೆ ಹೇಳುವ ಮಂತ್ರದಿಂದ ಪ್ರೋಕ್ಷಣೆಮಾಡಬೇಕು. (ಈ ವಿಷಯವು ಹಿಂದೆ ಎಂದರೆ ೨೫ನೆಯ ಅಧ್ಯಾಯದ ೨ನೇ ಖಂಡದಲ್ಲಿ ಗೋದೋಹನವಿಷಯವಾಗಿ ಹೇಳಿದ್ದರೂ ಈಗ ಪ್ರಾಯಶ್ಚಿತ್ತವಿಧಿಗಳನ್ನು ವಿವರಿಸುವುದಕ್ಕಾಗಿ ಇಲ್ಲಿಯೂ ಪುನಃ ಹೇಳಲಾಗುವುದು).

ಯಸ್ಮಾದ್ಭೀಷಾ ನಿಷೀದಸಿ ತತೋ ನೋ ಅಭಯಂ ಕೃಧಿ। ಪಶೂನ್ನಃ
ಸರ್ವಾನ್ಗೋಪಾಯ ನಮೋ ರುದ್ರಾಯ ಮೀಳ್ಹುಷ ಇತಿ
ತಾಮುತ್ಥಾಪಯೇದುದಸ್ಥಾದ್ದೇವ್ಯದಿತಿರಾಯುರ್ಯಜ್ಞಪತಾವ-
ಧಾತ್। ಇಂದ್ರಾಯ ಕೃಣ್ವತೀ ಭಾಗಂ ಮಿತ್ರಾಯ ವರುಣಾಯ
ಚೇತ್ಯಥಾಸ್ಯಾ ಉದಪಾತ್ರಮೂಧಸಿ ಚ ಮುಖೇ ಚೋಪಗೃಹ್ಣೀ-
ಯಾದಥೈನಾಂ ಬ್ರಾಹ್ಮಣಾಯ ದದ್ಯಾತ್ಸಾ ತತ್ರ ಪ್ರಾಯಶ್ಚಿತ್ತಿಃ ॥

ತತ್ರ ಮಂತ್ರಂ ದರ್ಶಯತಿ—ಹೇಽಗ್ನಿಹೋತ್ರಿ ತ್ವಂ ಯಸ್ಮಾದ್ವಿರೋಧಿನಃ ಶಂಕಮಾನಾ-ನ್ಮನಸಾ ಸ್ಮರ್ಯಮಾಣಾದ್ವ್ಯಾಘ್ರಾದೇರ್ಭೀಷಾ ಭಯೇನ ನಿಷೀದಸ್ಯುಪವಿಶಸಿ ಸತೋ ಭಯ ಹೇತೋಃ ಸಕಾಶಾನ್ನೋಽಸ್ಮಾಕಮಭಯಂ ಕೃಧಿ ಕುರು । ತಥಾ ನೋಽಸ್ಮಾಕಂ ಸರ್ವಾನ್ಪಶೂನ್ಗೋಪಾಯ ರಕ್ಷ ಮೀಳ್ಹುಷೇ ಸೇಚನಸಮರ್ಥಾಯ ರುದ್ರಾಯ ಪಶುಸ್ವಾಮಿನೇ ನಮೋಽಸ್ತು । ಇತಿಶಬ್ದೋ ಮಂತ್ರಸಮಾಪ್ತ್ಯರ್ಥಃ । ಅಭಿಮಂತ್ರಣಾದೂರ್ಧ್ವಂ ತಸ್ಯಾ ಅಗ್ನಿಹೋತ್ರ್ಯಾ ಮಂತ್ರಾಂತರೇಣೋ-ತ್ಥಾಪನಂ ವಿಧತ್ತೇ । ತಸ್ಮಿನ್ನುತ್ಥಾಪನೇ ಮಂತ್ರಮಾಹ । ಅದಿತಿರದೀನಾ ದೇವೀ ದೇವತಾರೂಪಾಗ್ನಿ-ಹೋತ್ರ್ಯುದಸ್ಥಾದುತ್ಥಿತವಸ್ಯುತ್ಥಾಯ ಚ ಯಜ್ಞಪತೌ ಯಜಮಾನ ಆಯುರಧಾತ್ಸಂಪಾದಿತವತೀ । ಕೀದೃಶ್ಯಾಗ್ನಿಹೋತ್ರೀ । ಇಂದ್ರಮಿತ್ರವರುಣಾನಾಮುಪೇಕ್ಷಿತಂ ಹವಿರ್ಭಾಗಂ ಕೃಣ್ವತೀ ಸಂಪಾದ-ಯಂತೀ । ಇಂದ್ರಮಿತ್ರವರುಣಾನಾಮುಪೇಕ್ಷಿತಂ ಹವಿರ್ಭಾಗಂ ಕೃಣ್ವತೀ ಸಂಪಾದಯಂತೀ । ಇತಿಶಬ್ದೋ ಮಂತ್ರಸಮಾಪ್ತ್ಯರ್ಥಃ । ಉತ್ಥಾಪನಾನಂತರ ಕರ್ತವ್ಯಂ ದರ್ಶಯತಿ । ಅಸ್ಯಾ ಅಗ್ನಿ-ಹೋತ್ರ್ಯಾ ಊಧಸಿ ಉದಕಪಾತ್ರಗ್ರಹಣಂ ನಾಮ ಜಲಸ್ಯೋತ್ಕ್ಷೇಪಣಂ ಮುಖೇ ಗೃಹೀತ್ವಾ ಜಲಂ ಪಾಯಯಿತ್ವಾ ತಾದಶ್ಯಾ ಬ್ರಾಹ್ಮಣಾಯ ದಾನಂ ಯದಸ್ತಿ ಸಾ ತತ್ರ ವೈಕಲ್ಯೇ ಪ್ರಾಯಶ್ಚಿತ್ತಿ-ರವಗಂತವ್ಯಾ ॥

ಹಿಂದೆ ಹೇಳಿದ ವಿಷಯವನ್ನು (ಉತ್ತರವನ್ನು) ಮುಂದುವರಿಸುವರು—

ಗೋವನ್ನು ಮಂತ್ರಪೂರ್ವಕವಾಗಿ ಅಭಿಮಂತ್ರಿಸಿ ಪ್ರೋಕ್ಷಿಸಿದ ಮೇಲೆ ಹೀಗೆ ಹೇಳಬೇಕು—ಅಗ್ನಿಹೋತ್ರಾರ್ಥವಾಗಿ ಹಾಲನ್ನು ಒದಗಿಸುವ ಎಲೈ ಗೋವೇ, ನೀನು ನಿನಗೆ ಶತ್ರುಗಳಾದ ಹುಲಿಯೇ ಮೊದಲಾದ ದುಷ್ಟಪ್ರಾಣಿಗಳನ್ನು ಮನಸ್ಸಿನಲ್ಲಿ ಯೋಚಿಸುತ್ತಾ ಭಯಗ್ರಸ್ಥಳಾಗಿರುವಂತೆ ತೋರುತ್ತದೆ. ಆದ್ದರಿಂದ ನೀನು ಹಾಲು ಕರೆಯುವುದನ್ನು ಬಿಟ್ಟು ಕುಳಿತು ಕೊಳ್ಳುತ್ತೀಯೆ ಎಂದು ಹೇಳಿ ರುದ್ರದೇವತೆಯನ್ನು ಉದ್ದೇಶಿಸಿ, ಎಲೈ ರುದ್ರನೇ, ನಮಗೆ ಮತ್ತು ನಮ್ಮ ಗೋವುಗಳಿಗೆ ದುಷ್ಟ ಮೃಗಗಳಿಂದ ಸಂಭವಿಸಬಹುದಾದ ಭಯವನ್ನು ಪರಿಹರಿಸಿ ಅಭಯವನ್ನುಂಟುಮಾಡು. ಪಶುಗಳಿಗೆ ಸ್ವಾಮಿಯಾದ ಎಲೈ ರುದ್ರದೇವನೇ, ಇಗೋ ನಿನಗೆ ನಮಸ್ಕಾರವು ಎಂಬ ಅರ್ಥವುಳ್ಳ ಈ ಮಂತ್ರವನ್ನು ಹೇಳಿ ಗೋವನ್ನು ಮೇಲಕ್ಕೆ ಎಬ್ಬಿಸಬೇಕು. ಎಬ್ಬಿಸುವಾಗ

ಉದಸ್ಥಾದ್ದೇವ್ಯದಿತಿರಾಯುರ್ಯಜ್ಞಪತಾವದಾತ್ ।
ಇಂದ್ರಾಯ ಕೃಣ್ವತೀ ಭಾಗಂ ಮಿತ್ರಾಯ ವರುಣಾಯ ಚ ॥

ಎಲೈ ಅದಿತಿಸ್ವರೂಪಳಾದ ಗೋವೇ, ನೀನು ಯಜ್ಞಮಾಡುವ ಯಜಮಾನನಲ್ಲಿ ಪೂರ್ಣಾಯುಸ್ಸನ್ನುಂಟುಮಾಡಿದ್ದೀಯೇ. ಮತ್ತು ಯಜ್ಞದಲ್ಲಿ ಇಂದ್ರನಿಗೂ ಮಿತ್ರನಿಗೂ, ವರುಣನಿಗೂ ಅವರವರ ಭಾಗವನ್ನು (ಹಾಲಿನಿಂದ ಕೂಡಿದ) ಒದಗಿಸಿದ್ದೀಯೆ ಎಂಬ ಅರ್ಥವುಳ್ಳ ಮೇಲಿನ ಮಂತ್ರವನ್ನು ಪಠಿಸಬೇಕು. ಹೀಗೆ ಹೇಳಿದನಂತರ ಗೋವು ಎದ್ದಮೇಲೆ ಗೋವಿನ ಕೆಚ್ಚಲಿನ ಹತ್ತಿರ ನೀರನ್ನು ತುಂಬಿದ ಪಾತ್ರೆಯನ್ನು ಹಿಡಿದು ಕುಡಿಸಿ ಆ ಗೋವನ್ನು ಒಬ್ಬ ಬ್ರಾಹ್ಮಣನಿಗೆ ದಾನಮಾಡಬೇಕು. ಈ ವಿಷಯದಲ್ಲಿ ಮಾಡಬೇಕಾದ ಪ್ರಾಯಶ್ಚಿತ್ತಿಯು ಇದೇ ಕ್ರಮವಾಗಿರುವುದು.

ತದಾಹುರ್ಯಸ್ಯಾಗ್ನಿಹೋತ್ರ್ಯುಪಾವಸೃಷ್ಟಾ ದುಹ್ಯಮಾನಾ ವಾಶ್ಯೇತ ಕಾ ತತ್ರ ಪ್ರಾಯಶ್ಚಿತ್ತಿರಿತ್ಯಶನಾಯಾಂ ಹ ವಾ ಏಷ ಯಜ-

ಮಾನಸ್ಯ ಪ್ರತಿಖ್ಯಾಯ ವಾಶ್ಯತೇ ತಾಮನ್ನಮುಪ್ಯಾದಯೇ-
ಚ್ಛಾಂತ್ಯೈ ಶಾಂತಿರ್ವಾ ಅನ್ನಂ ಸೂಯವಸಾದ್ಭಗವತೀ ಹಿ
ಭೂಯಾದಿತಿ ಸಾ ತತ್ರ ಪ್ರಾಯಶ್ಚಿತ್ತಿಃ ||

ಅಥ ದೋಹನಕಾಲೇ ಧ್ವನಿಕರಣೇ ಪ್ರಾಯಶ್ಚಿತ್ತಂ ವಿಧತ್ತೇ । ವಾಶ್ಯೇತ ಹಂಭಾರವಂ ಕುರ್ವೀತ ತದಾನೀಮೇವಾಗ್ನಿಹೋತ್ರೀ ಸ್ವಕೀಯಾಮುಶನಾಯಾಂ ಕ್ಷುಧಾಂ ಯಜಮಾನಸ್ಯ ಪ್ರತಿ-ಖ್ಯಾಯ ಪ್ರಖ್ಯಾಪನಾರ್ಥಂ ವಾಶ್ಯತೇ ಧ್ವನಿಂ ಕರೋತಿ । ತಸ್ಮಾತ್ತಾಮಗ್ನಿಹೋತ್ರೀಂ ವಾಶ್ಯಮಾ-ನಾಮನ್ನಮುಪ್ಯಾದಯೇತ್ । ಅಪಿಶಬ್ದಾತ್ತೃಣಾದಿಕಮಪಿ । ತತ್ರ ಭಕ್ಷಣಂ ಕ್ಷುಧಾಶಾಂತ್ಯೈ ಸಂಪದ್ಯತೇ । ಅನ್ನಂ ಶಾಂತಿಹೇತುರತಿ ಪ್ರಸಿದ್ಧಂ । ಸೂಯವಸಾದಿತ್ಯಾದಿ ಮಂತ್ರಃ । ಹೇಽಗ್ನಿಹೋತ್ರಿ ಭಗವತೀ ಪೂಜ್ಯಾ ತ್ವಂ ಸೂಯವಸಾದ್ಭೂಯಾಃ । ಸುಷ್ಠು ಯವಸಂ ತೃಣಂ ಸೂಯವಸಂ । ತದತ್ತಿ ಭಕ್ಷಯತೀತಿ ಸೂಯವಸಾತ್ । ತಾದೃಶೀ ಭವೇತಿ ಮಂತ್ರಾರ್ಥಃ । ಮಂತ್ರೇಣಾನ್ನಮಾದಾಯೇದಿತಿ ಯದಸ್ತಿ ಸೈವ ತತ್ರ ಧ್ವನೌ ಪ್ರಾಯಶ್ಚಿತ್ತಿರ್ದ್ರಷ್ಟವ್ಯಾ ॥

ಒಂದು ವೇಳೆ ಅಗ್ನಿಹೋತ್ರಮಾಡುವ ಪುರುಷನ ಹಸುವು ಹಾಲು ಕರೆಯುತ್ತಿರುವ ಸಮಯದಲ್ಲಿ **ಹಂಭಾರವ** ಎಂದರೆ ಹಂಭಾ ಎಂದು ಕೂಗಿಕೊಳ್ಳುತ್ತಿದ್ದರೆ, ಆಗ ಯಜಮಾನನು ತಾನು ಉಪಯೋಗಿಸುವ ಅನ್ನ ಮೊದಲಾದ ಆಹಾರ ವನ್ನಾಗಲಿ. ಹುಲ್ಲನ್ನಾಗಲಿ ತಂದು ಆ ಹಸುವಿನ ಮುಂದೆ ಇಟ್ಟು ಅದು ತಿನ್ನುವುದಕ್ಕೆ ಅನುಕೂಲಮಾಡಿಕೊಡಬೇಕು. ಅದು ಹುಲ್ಲು ಮುಂತಾದ್ದನ್ನು ತಿಂದರೆ ಹಸಿವಿನಿಂದ ಕೂಗಿಕೊಳ್ಳುತ್ತಿರುವುದೆಂದು ತಿಳಿಯ ಬೇಕು. ಅನಂತರ **ಸೂಯವಸಾತ್** ಎಂಬ ಮಂತ್ರವನ್ನು ಪಠಿಸಬೇಕು. ಎಲೌ ಪೂಜ್ಯಳಾದ ಗೋವೆ, ನೀನು ಹಸಿವಿನಿಂದ ಬಳಲಿದ್ದೀಯೆ, ಈ ಆಹಾರ ಹುಲ್ಲು ಮೊದಲಾದವನ್ನು ಯಥೇಷ್ಟವಾಗಿ ಭಕ್ಷಿಸಿ ತೃಪ್ತಳಾಗು ಎಂಬರ್ಥವಿರುವ ಈ ಮಂತ್ರವನ್ನು ಪಠಿಸಿ ಗೋವನ್ನು ಸಮಾಧಾನ ಪಡಿಸಬೇಕು. ಈ ಮಂತ್ರಪಠನದಿಂದಲೂ ಆಹಾರ, ಹುಲ್ಲು ಮೊದಲಾದವನ್ನು ಕೊಡುವುದರಿಂದಲೂ ಈ ವಿಷಯದಲ್ಲಿ ಪ್ರಾಯಶ್ಚಿತ್ತವನ್ನು ಮಾಡಿದಂತಾಗುವುದು-

ತದಾಹುರ್ಯಸ್ಯಾಗ್ನಿಹೋತ್ರ್ಯುಪಾವಸೃಷ್ಟಾ ದುಹ್ಯಮಾನಾ ಸ್ಪಂದೇತ
ಕಾ ತತ್ರ ಪ್ರಾಯಶ್ಚಿತ್ತಿರಿತಿ ಸಾ ಯತ್ತತ್ರ ಸ್ಕಂದಯೇತ್ತದಭಿಮೃಶ್ಯ
ಜಪೇದ್ಯದದ್ಯ ದುಗ್ಧಂ ಪೃಥಿವೀಮಸೃಪ್ತ ಯದೋಷಧೀರತ್ಯಸೃಪ-
ದ್ಯದಾಪಃ । ಪಯೋ ಗೃಹೇಷು ಪಯೋ ಅಘ್ನ್ಯಾಯಾಂ ಪಯೋ
ವತ್ಸೇಷು ಪಯೋ ಅಸ್ತು ತನ್ಮಯೀತಿ ತತ್ರ ಯತ್ಪರಿಶಿಷ್ಟಂ
ಸ್ಯಾತ್ತೇನ ಜುಹುಯಾದ್ಯದ್ಯಲಂ ಹೋಮಾಯ ಸ್ಯಾದ್ಯದ್ಯು ವೈ
ಸರ್ವಂ ಸಿಕ್ತಂ ಸ್ಯಾದಥಾನ್ಯಾಮಾಹೂಯ ತಾಂ ದುಗ್ಧ್ವಾ ತೇನ
ಜುಹುಯಾದಾ ತ್ವೇವ ಶ್ರದ್ಧಾಯೈ ಹೋತವ್ಯಂ ಸಾ ತತ್ರ
ಪ್ರಾಯಶ್ಚಿತ್ತಿಃ ||

ದುಹ್ಯಮಾನಸ್ಯ ಕ್ಷೀರಸ್ಯಾಗ್ನಿಹೋತ್ರ್ಯಾ ಸ್ಥಾನಚಲನೇನ ಭೂಮೌ ಪತನೇ ಪ್ರಾಯಶ್ಚಿತ್ತಿಂ ವಿಧತ್ತೇ—ಸ್ಪಂದೇತ ಕಿಂಚಿಚ್ಚಲೇತ್ ಸಾ ಚಲಂತೀ ಯದಿ ತತ್ರ ಭೂಮೌ ಸ್ಕಂದಯೇದೀಷತ್ಕ್ಷೀರಂ ಪಾತಯೇತ್ತತ್ಕ್ಷೀರಂ ಹಸ್ತೇನ ಸ್ಪೃಷ್ಟ್ವಾ ಮಂತ್ರಂ ಜಪೇತ್ । ತಂ ಮಂತ್ರಂ ದರ್ಶಯತಿ । ಅಥೇದಾನೀಂ ಯದ್ದುಗ್ಧಂ ಕ್ಷೀರಂ ಪೃಥಿವೀಮಸೃಪ್ತ ಪ್ರಾಪ್ನೋತ್ । ಯಚ್ಚೌಷಧೀಃ ಪತಿತಂ ತೃಣಜಾತಮತ್ಯಸೃಪದತಿಶಯೇನ ಪ್ರಾಪ್ನೋತ್ । ಯದಪಿ ತತ್ಕ್ಷೀರಂ ಬಿಂದುರೂಪಮಾಪೋ ಭೂಮಿಷ್ಠಂ ಜಲಂ ಪ್ರಾಪ್ನೋತ್ । ಆಪ ಇತಿ ದ್ವಿತೀಯಾರ್ಥೇ ಪ್ರಥಮಾ । ತತ್ಸರ್ವಮಸ್ಮದೀಯೇಷು ಗೃಹೇಷ್ವಘ್ನ್ಯಾಯಾಮಸ್ಮದೀಯಾಯಾಂ ಧೇನ್ವಾಂ ವತ್ಸೇಷ್ವಸ್ಮದೀಯೇಷು ಮಯಿ ಮದುದರೇ ವಾಸ್ತು ತಿಷ್ಠತು । ಪೃಥಗನ್ವಯಾರ್ಥಂ ಪಯಃಶಬ್ದಾವೃತ್ತಿಃ । ಇತಿ ಶಬ್ದೋ ಮಂತ್ರಸಮಾಪ್ತ್ಯರ್ಥಃ । ಉಕ್ತಪ್ರಾಯಶ್ಚಿತ್ತಾದೂರ್ಧ್ವಂ ಹೋಮಂ ವಿಧತ್ತೇ । ತತ್ರ ದೋಹನಪಾತ್ರೇ ಯತ್ಕ್ಷೀರಂ ಭೂಮೌ ಪತಿತ್ವಾ ಪರಿಶಿಷ್ಟಂ ಸ್ಯಾತ್ತದ್ಯದಿ ಹೋಮಯಾಲಂ ಪರ್ಯಾಪ್ತಂ ಭವೇತ್ತದಾನೀಂ ತೇನ ಜುಹುಯಾತ್ । ಅಪರ್ಯಾಪ್ತಾವುಪಾಯಾಂತರಮಾಹ—ಯದ್ಯು ವೈ ಯದಿ ಚ ಸರ್ವಂ ದುಹ್ಯಮಾನಂ ಕ್ಷೀರಂ ಸಿಕ್ತಂ ಭೂಮೌ ಪತಿತಂ ಸ್ಯಾತ್ತದಾನೀಮನ್ಯಾಂ ಕಾಂಚಿದ್ಗಾಮಾಹೂಯಾನೀಯ ತಾಂ ದುಗ್ಧ್ವಾ ತದೀಯೇನ ಕ್ಷೀರೇಣ ಜುಹುಯಾತ್। ಯದ್ಯನ್ಯಾಪಿ ನ ಲಭೇತ ತದಾನೀಮಪ್ಯಾಗ್ನಿಹೋತ್ರಂ ನ ಪರಿತ್ಯಾಜ್ಯಂ । ಕಿಂತ್ವಾ ಶ್ರದ್ಧಾಯೈ ಹೋತವ್ಯಂ । ಆಜೋತ್ರಾಭಿವಿಧ್ಯರ್ಥಃ । ಆ ಶ್ರದ್ಧಾಯಾಃ ಶ್ರದ್ಧಾಸಹಿತಂ ಸರ್ವವಸ್ತುಜಾತಂ ಹೋತವ್ಯಂ ಹೋಮಯೋಗ್ಯಂ । ಅಯಮರ್ಥಃ । ದಧಿಯವಾಗ್ವಾದೀನಾಂ ಮಧ್ಯೇ ಯೇನ ಕೇನಾಪಿ ದ್ರವ್ಯೇಣ ಹೋತವ್ಯಂ। ಸರ್ವಾಲಾಭೇ ತ್ವಂತತಃ ಶ್ರದ್ಧಾಮಪಿ ಜುಹುಯಾತ್ । ಅಹಂ ಶ್ರದ್ಧಾಂ ಜುಹೋಮೀತಿ ಸಂಕಲ್ಪ್ಯ ಶ್ರದ್ಧಾಹೋಮಃ । ಅಗ್ನಿಹೋತ್ರಸ್ಯ ನಿತ್ಯತ್ವಾತ್ಸರ್ವಾತ್ಮನಾ ಪರಿತ್ಯಾಗೋ ನ ಯುಕ್ತ ಇತಿ ।

(ಅರ್ಥವು) ಗೋವಿನಿಂದ ಹಾಲನ್ನು ಕರೆಯುತ್ತಿರುವಾಗ, ಹಸುವು ಆಚೆಗಾಗಲಿ ಈಚೆಗಾಗಲಿ (ಸಿಂತಕಡೆಯಿಂದ) ಚಲಿಸಿ ಅದರಿಂದ ಪಾತ್ರೆಯಲ್ಲಿದ್ದ ಹಾಲು ಚೆಲ್ಲಿಹೋದರೆ ಅದಕ್ಕೆ ಪ್ರಾಯಶ್ಚಿತ್ತವಿಧಾನವನ್ನು ಹೇಳುವರು—ಹಾಲು ಕರೆಯುತ್ತಿರುವಾಗ ಹಸುವು ಅತ್ತಿತ್ತ ಚಲಿಸಿದರೆ ಮತ್ತು ಆ ಚಲನದಿಂದ ಕರೆದಿದ್ದ ಹಾಲು ನೆಲದ ಮೇಲೆ ಬಿದ್ದು ಚೆಲ್ಲಿಹೋದರೆ ಆಗ ಹಾಲುಕರೆಯುತ್ತಿರುವ ಪುರುಷನು ನೆಲದ ಮೇಲೆ ಬಿದ್ದು ಚೆಲ್ಲಿಹೋದ ಹಾಲನ್ನು ಕೈಯಿಂದ ಮುಟ್ಟಿ ಈ ಕೆಳಗಿನ ಮಂತ್ರವನ್ನು ಹೇಳಬೇಕು (ಯದದ್ಯ ದುಗ್ಧಂ ಇತ್ಯಾದಿ) ಈಗ ಕರೆಯುತ್ತಿದ್ದ ಹಾಲೆಲ್ಲಾ ಭೂಮಿಯ ಮೇಲೆ ಬಿದ್ದು ಚೆಲ್ಲಿ ಹೋಗಿದೆ. ಈರೀತಿ ನೆಲದಮೇಲೆ ಬಿದ್ದ ಹಾಲು ಭೂಮಿಯೊಂದಿಗೆ ಸೇರದೆ ಹುಲ್ಲು ಮೊದಲಾದ ಸಸ್ಯಗಳ ಮೇಲೆ ಬಿದ್ದ ಹಾಲು ಅವುಗಳೊಡನೆ ಸೇರಿದೆ. ಕೆಳಗೆ ತೊಟ್ಟಿಕ್ಕುತ್ತಿರುವ ಹಾಲು ಜಲದೊಂದಿಗೆ (ನೀರು) ಸೇರಿಹೋಗಿದೆ. ಈರೀತಿ ಚಲ್ಲಿಹೋದ ಹಾಲೆಲ್ಲಾ ನಮ್ಮ ಮನೆಯಲ್ಲಿಯೂ, ಹಸುವಿನ ಕರುವಿನಲ್ಲಿಯೂ ನನ್ನ ಉದರದಲ್ಲಿಯೂ ಸೇರುವಂತಾಗಲಿ ಎಂದು ಪ್ರಾರ್ಥಿಸಿ ಅನಂತರ ಹೋಮವನ್ನು ಮಾಡಬೇಕು. ಹಾಲನ್ನು ಕರೆಯುತ್ತಿರುವಾಗ ಚಲ್ಲಿಹೋಗಿ ಉಳಿದ ಹಾಲು ಸಾಕಾಗುವಂತಿದ್ದರೆ ಅದರಿಂದ ಹೋಮಮಾಡಬೇಕು ಹಾಗಿಲ್ಲದೆ ಕರೆದ ಹಾಲೆಲ್ಲವೂ ಚೆಲ್ಲಿಹೋಗಿ ಏನೂ ಉಳಿಯದಿದ್ದರೆ ಆಗ ಬೇರೆ ಮತ್ತೊಂದು ಹಸುವನ್ನು ತಂದು ಅದರ ಹಾಲನ್ನು ಕರೆದು ಅದರಿಂದ ಹೋಮಮಾಡಬೇಕು. ಈ ಬೇರೆ ಹಸುವಿನಿಂದಲೂ ಹಾಲು ದೊರೆಯದಿದ್ದರೆ ಹಾಲಿಲ್ಲವೆಂಬ ಕಾರಣದಿಂದ ಅಗ್ನಿಹೋತ್ರವನ್ನು ಮಾಡದೆ ನಿಲ್ಲಿಸಬಾರದು. ಇಂತಹ ಸಂದರ್ಭದಲ್ಲಿ ಶ್ರದ್ಧಾ ಎಂಬ ದೇವತೆಯನ್ನುದ್ದೇಶಿಸಿ ಮೊಸರು, ಯವ ಮೊದಲಾದ ಹೋಮಯೋಗ್ಯವಾದ ಯಾವವಸ್ತುವಿ

ನಿಂದಲಾದರೂ ಹೋಮವನ್ನು ಮಾಡಬೇಕು. ಹೋಮಯೋಗ್ಯವಾದ ಯಾವ ವಸ್ತುವೂ ದೊರೆಯದಿದ್ದರೆ ಸಿಕ್ಕಿದ ಯಾವದ್ರವ್ಯವನ್ನಾದರೂ ಉಪಯೋಗಿಸಿ ಶ್ರದ್ಧಾದೇವತೆಯನ್ನುದ್ದೇಶಿಸಿ ಹೋಮಮಾಡುವೆನು ಎಂದು ಸಂಕಲ್ಪಮಾಡಿ ಹೋಮಮಾಡಬೇಕು. ಅಗ್ನಿಹೋತ್ರವೆಂಬ ಕರ್ಮ ನಿತ್ಯಕರ್ಮವಾದ್ದರಿಂದ ಅದನ್ನು ಯಾವಕಾರಣದಿಂದಲೂ ನಿಲ್ಲಿಸ ಬಾರದು. ಅದ್ದರಿಂದ ಅದನ್ನು ಮಾಡಲೇಬೇಕು.

---

*English Translation*

**(How the priest has to make good certain casualties which may happen when fhe Agnihotram is offered.)**

If the cow of an Agnihotri, which is joined to her calf, sits down during the time of being milked, what is the penance for it ? He shall repeat over it, this mantra, "Why dost thou sit down out of fear ? from this grant us safety ! protect all our cattle ! Praise to Rudra the giver !" (By repeating the following mantra) he should raise her up. "The divine Aditi (cow) rose, and put loug life in the sacrifice, she who provides Indra, Mitra, and Varuna with their (respective) shares (in the sacrifice). Or he may hold on her udder and mouth a vessel filled with water and give her (the cow) then to a Brahman This is another Prayaaschitta (penance).

If the cow of an Agnihotri, which is joined to her calf, moves during the time of being milked, what is the Prayaschitta ? Should she in moving spill (some milk) then he shall stroke her, and whisper (the following words), What of the milk might have "fallen to the ground to-day, what might have gone to the herbs, what to the waters,—may this milk be in my houses, (my) cow, (my) calves, and in me. He shall then bring a burnt offering with what has remined, if it be sufficient for making the burnt offering (Homa).

Should all in the vessel have been spilt (by the moving of the cow) then he shall call another cow, milk her and bring the burnt offering with that milk, and sacrifice it. It is to be offered alone in faith.

This is the Prayas chitta. He who with such a knowledge offers the Agnihotram, has (only) offerings in readiness (which are fit) and has (consequently) all (accepted by the gods).

ಇತಿ ಶ್ರೀಮತ್ಸಾಯಣಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾತ್ರಿಂಶಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂವತ್ತ ಎರಡನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು
ಸಮಾಪ್ತವಾದುದು



## ಅಥ ದ್ವಾತ್ರಿಂಶಾಧ್ಯಾಯೇ ತೃತೀಯಃ ಖಂಡಃ

### ಮೂವತ್ತೆರಡನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

[ಸಾನ್ನಾಯ್ಯವೆಂಬ ಹೋಮದ್ರವ್ಯವು ಕೆಟ್ಟುಹೋದರೆ ಅಥವಾ ನಷ್ಟವಾದರೆ ಮಾಡಬೇಕಾದ ಪ್ರಾಯಶ್ಚಿತ್ತವು]



**ತದಾಹುರ್ಯಸ್ಯ ಸಾಯಂ ದುಗ್ಧಂ ಸಾನ್ನಾಯ್ಯಂ ದುಷ್ಯೇದ್ವಾಽಪ-ಹರೇದ್ವಾ ಕಾ ತತ್ರ ಪ್ರಾಯಶ್ಚಿತ್ತಿರಿತಿ ಪ್ರಾತರ್ದುಗ್ಧಂ ದ್ವೈಧಂ ಕೃತ್ವಾ ತಸ್ಯಾನ್ಯತರಾಂ ಭಕ್ತಿಮಾತಚ್ಯ ತೇನ ಯಜೇತ ಸಾ ತತ್ರ ಪ್ರಾಯಶ್ಚಿತ್ತಿಃ ।**

ಅಷ್ಟಮೇ ಪ್ರಶ್ನೋತ್ತರೇ ದರ್ಶಯತಿ–ದರ್ಶಪೂರ್ಣಮಾಸಯೋರ್ದಧ್ಯರ್ಥಂ ಸಾಯಂಕಾಲೇ ದುಗ್ಧಂ ಪಯಃ ಸಾಂನಾಯ್ಯರೂಪಂ ಕೇಶಕೀಟಾದಿಭಿಃ ದುಷ್ಯೇದ್ಯಃ ಕಶ್ಚಿದಪಹರೇದ್ವಾ ತದಾನೀಂ ಪರೇದ್ಯುಃ ಪ್ರಾತರ್ದುಗ್ಧಂ ಪಯೋ ಭಾಗದ್ವಯಂ ಕೃತ್ವಾ ತತ್ರೈಕಭಾಗಮಾತಚ್ಯ ತೇನ ಸಂಸ್ಕೃತ್ಯ ದಧಿಸ್ಥಾನೀಯೇನ ತೇನ ಯಜೇತ ॥

ಈಗ ಎಂಟನೇ ಪ್ರಾಯಶ್ಚಿತ್ತವಿಧಿಯನ್ನು ವಿವರಿಸುವರು—ದರ್ಶಪೂರ್ಣಮಾಸಗಳೆಂಬ ಇಷ್ಟಿಗಾಗಿ ಸಾಯಂಕಾಲದಲ್ಲಿ (ಪ್ರಾತಃಕಾಲಕ್ಕಾಗಿ) ಸಿದ್ಧಪಡಿಸಿಟ್ಟಿದ್ದ ಸಾನ್ನಾಯ್ಯಾರ್ಥವಾಗಿ ಕರೆದು ಹಾಲಿನಲ್ಲಿ ಕೂದಲು, ಕ್ರಿಮಿಕೀಟಾದಿಗಳು ಬಿದ್ದು ದೋಷ ಯುಕ್ತವಾದದ್ದಾದರೆ ಅಥವಾ ಯಾರಾದರೊಬ್ಬರು ಅದನ್ನು ಅಪಹರಿಸಿದರಾಗಲೀ ಏನುಮಾಡಬೇಕೆಂದರೆ—ಮಾರನೆಯ ದಿನ ಪ್ರಾತಃಕಾಲದಲ್ಲಿ ಹೊಸದಾಗಿ ಹಾಲನ್ನು ಕರೆದು ಅದನ್ನು ಎರಡು ಭಾಗಮಾಡಿ ಅದರಲ್ಲಿ ಒಂದು ಭಾಗಕ್ಕೆ ಹೆಪ್ಪುಹಾಕಿ

ಮೊಸರಂತೆ ಮಾಡಿ ಉಪಯೋಗಿಸಬೇಕು. ಇನ್ನೊಂದು ಭಾಗವಾದ ಹಾಲನ್ನು ಹಾಲಿನಂತೆಯೇ ಉಪಯೋಗಿಸಬೇಕು. ಹೀಗೆ ಮಾಡುವುದರಿಂದ ಮೊಸರು, ಹಾಲು, ಎರಡನ್ನೂ ಸಿದ್ಧಪಡಿಸಿದಂತಾಗುವುದು. ಈ ವಿಷಯದಲ್ಲಿ ಈ ರೀತಿ ಮಾಡುವುದೇ ಪ್ರಾಯಶ್ಚಿತ್ತವೆನಿಸುವುದು. ಈಗ ಒಂಭತ್ತನೆಯ ಪ್ರಶ್ನೋತ್ತರವನ್ನು ವಿವರಿಸುವರು—

ತದಾಹುರ್ಯಸ್ಯ ಪ್ರಾತರ್ದುಗ್ಧಂ ಸಾನ್ನಾಯ್ಯಂ ದುಷ್ಯೇದ್ವಾಽಪಹರೇದ್ವಾ ಕಾ ತತ್ರ ಪ್ರಾಯಶ್ಚಿತ್ತಿರಿತ್ಯೈಂದ್ರಂ ವಾ ಮಾಹೇಂದ್ರಂ ವಾ ಪುರೋಳಾಶಂ ತಸ್ಯ ಸ್ಥಾನೇ ನಿರುಪ್ಯ ತೇನ ಯಜೇತ ಸಾ ತತ್ರ ಪ್ರಾಯಶ್ಚಿತ್ತಿಃ ||

ನವಮೇ ಪ್ರಶ್ನೋತ್ತರೇ ದರ್ಶಯತಿ–ಪ್ರಾತರ್ದುಗ್ಧರೂಪಸ್ಯ ಸಾಂನಾಯ್ಯಸ್ಯ ದೋಷಾಪಹಾರಾಭ್ಯಾಂ ವೈಕಲ್ಯೇ ಸತಿ ತಸ್ಯ ದುಗ್ಧಸ್ಯ ಸ್ಥಾನ ಇಂದ್ರದೇವತಾಕಂ ಮಹೇಂದ್ರದೇವತಾಕಂ ವಾ ಪುರೋಳಾಶಂ ಕೃತ್ವಾ ತೇನ ಯಜೇತ । ಇಂದ್ರಯಾಜಿಮಹೇಂದ್ರಯಾಜಿಭೇದಾದ್ದೇವತಾವ್ಯವಸ್ಥಾ ||

ಹಿಂದಿನ ದಿನ ಸಿದ್ಧಪಡಿಸಲಾಗಿದ್ದ ಸಾನ್ನಾಯ್ಯವು ಕೆಟ್ಟುಹೋದದ್ದರಿಂದ ಮಾರನೆಯ ದಿನ ಪ್ರಾತಃಕಾಲದ ಹಾಲಿನಿಂದ ಸಾನ್ನಾಯ್ಯವನ್ನು ಸಿದ್ಧಪಡಿಸಬೇಕೆಂದು ಮೇಲೆ ಹೇಳಲಾಗಿದೆಯಷ್ಟೆ. ಆ ರೀತಿ ಪ್ರಾತಃಕಾಲದ ಹಾಲಿನಿಂದಲೂ ಸಿದ್ಧಪಡಿಸಲಾದ ಸಾನ್ನಾಯ್ಯವು ಕೆಟ್ಟುಹೋದರೆ ಅಥವಾ ಬೇರೆಯವರಿಂದ ಅಪಹೃತವಾದರೆ ಆಗ ಸಾನ್ನಾಯ್ಯಕ್ಕೆ ಬದಲಾಗಿ ಪುರೋಡಾಶವನ್ನು ಸಿದ್ಧಪಡಿಸಿ ಇಂದ್ರ ಅಥವಾ ಮಹೇಂದ್ರ ಎಂಬ ದೇವತೆಯನ್ನುದ್ದೇಶಿಸಿ ಹೋಮಮಾಡಬೇಕು. ಈ ವಿಧಾನವೇ ಇಲ್ಲಿ ಪ್ರಾಯಶ್ಚಿತ್ತಿಯು.

ತದಾಹುರ್ಯಸ್ಯ ಸರ್ವಮೇವ ಸಾನ್ನಾಯ್ಯಂ ದುಷ್ಯೇದ್ವಾಽಪಹರೇದ್ವಾ ಕಾ ತತ್ರ ಪ್ರಾಯಶ್ಚಿತ್ತಿರಿತ್ಯೈಂದ್ರಂ ವಾ ಮಾಹೇಂದ್ರಂ ವೇತಿ ಸಮಾನಂ ಸಾ ತತ್ರ ಪ್ರಾಯಶ್ಚಿತ್ತಿಃ ||

ದಶಮೇ ಪ್ರಶ್ನೋತ್ತರೇ ದರ್ಶಯತಿ- ಸಾಯಂ ದುಗ್ಧಂ ಪ್ರಾತರ್ದುಗ್ಧಂ ಚೇತ್ಯುಭಯಂ ಸರ್ವಮ್ ||

ಹತ್ತನೆಯ ಪ್ರಶ್ನೋತ್ತರವನ್ನು ವಿವರಿಸುವರು—ಒಂದುವೇಳೆ ಹಿಂದಿನದಿನ ಸಾಯಂಕಾಲದಲ್ಲಿಯೂ ಮಾರನೆಯ ದಿನ ಪ್ರಾತಃಕಾಲದಲ್ಲಿಯೂ ಸಿದ್ಧಪಡಿಸಲಾದ ಎರಡು ಸಾನ್ನಾಯ್ಯಗಳೂ ದೋಷಪೂರಿತವಾಗಿ ಕೆಟ್ಟುಹೋದರೆ ಅಥವಾ ಯಾರಿಂದಲಾದರೂ ಅಪಹರಿಸಲ್ಪಟ್ಟರೆ, ಆಗ ಏನು ಮಾಡಬೇಕು, ಎಂದರೆ ಆಗ ಹಿಂದಿನಂತೆ ಪುರೋಡಾಶವನ್ನು ಸಿದ್ಧಪಡಿಸಿ ಇಂದ್ರನನ್ನಾಗಲಿ, ಮಹೇಂದ್ರನನ್ನಾಗಲಿ ಉದ್ದೇಶಿಸಿ ಹೋಮಮಾಡಬೇಕು. ಇದೇ ಪ್ರಾಯಶ್ಚಿತ್ತಿಯು.

ತದಾಹುರ್ಯಸ್ಯ ಸರ್ವಾಣ್ಯೇವ ಹವೀಂಷಿ ದುಷ್ಯೇಯುರ್ವಾಪಹರೇಯುರ್ವಾ ಕಾ ತತ್ರ ಪ್ರಾಯಶ್ಚಿತ್ತಿರಿತ್ಯಾಜ್ಯಸ್ಯೈನಾನಿ ಯಥಾದೇವತಂ

ಪರಿಕಲ್ಪ್ಯ ತಯಾಜ್ಯಹವಿಷೇಷ್ಟ್ವಾ ಯಜೇತಾತೋಽನ್ಯಾಮಿಷ್ಟಿಮ-
ನುಲ್ಬಣಾಂ ತನ್ವೀತ ಯಜ್ಞೋ ಯಜ್ಞಸ್ಯ ಪ್ರಾಯಶ್ಚಿತ್ತಿಃ ||

ಏಕಾದಶೇ ಪ್ರಶ್ನೋತ್ತರೇ ದರ್ಶಯತಿ—ಪುರೋಡಾಶದಧಿಪಯೋರೂಪಾಣಿ ಹವೀಂಷಿ ಸರ್ವಾಣೀತ್ಯುಚ್ಯಂತೇ । ಆಜ್ಯಸ್ಯ ಸಂಬಂಧೀನ್ಯೇತಾನಿ ತ್ರೀಣಿ ಹವೀಂಷಿ ತತ್ತದ್ದೇವತಾಮನತಿಕ್ರಮ್ಯ ಶದನುಸಾರೇಣ ಪರಿಕಲ್ಪ್ಯಾಽಽಜ್ಯಹವಿರ್ಯುಕ್ತತಯಾ ತಯೇಷ್ಟ್ವಾ ಯಜೇತ । ಇಷ್ಟ್ವಾ ಚ ತತ್ತದೂರ್ಧ್ವಮನ್ಯಾಮಿಷ್ಟಿಮನುಲ್ಬಣಾಮನ್ಯೂನಾನಧಿಕಾಂ ಯಥಾಶಾಸ್ತ್ರಂ ತನ್ವೀತ ವಿಸ್ತಾರಯೇತ್। ಯಥಾಶಾಸ್ತ್ರಮನುಷ್ಠಿತೋ ಯಜ್ಞಃ ಪೂರ್ವಸ್ಯ ವಿಕಲಸ್ಯ ಯಜ್ಞಸ್ಯ ಪ್ರಾಯಶ್ಚಿತ್ತಿಃ ||

ಹನ್ನೊಂದನೆಯ ಪ್ರಶ್ನೋತ್ತರವನ್ನು ವಿವರಿಸುವರು—ಹಿಂದೆ ಇದುವರೆಗೂ ಹೇಳಿದ ಹವಿರ್ದ್ರವ್ಯಗಳು ಎಂದರೆ ಹಾಲು, ಸಾನ್ನಾಯ (ಮೊಸರು) ಪುರೋಡಾಶ ಇವುಗಳೆಲ್ಲವೂ ಕೆಟ್ಟುಹೋದರೆ ಅಥವಾ ಅಪಹರಿಸಲ್ಪಟ್ಟರೆ ಆಗ ಏನುಮಾಡ ಬೇಕು ಎಂದರೆ ಯಾವ ಯಾವ ದೇವತೆಗಳನ್ನುದ್ದೇಶಿಸಿ ಹೋಮುಮಾಡಬೇಕೆಂದು ನಿಶ್ಚಯಿಸಲಾಗಿದ್ದಿತೋ ಆ ದೇವತೆಗಳನ್ನೆ, ಉದ್ದೇಶಿಸಿ ಆಜ್ಯ (ಕರಗಿಸಿದ ತುಪ್ಪ) ವೆಂಬ ಹವಿಸ್ಸಿನಿಂದ ಇಷ್ಟಿಯಂತೆ ಹೋಮುಮಾಡಬೇಕು. ಹೀಗೆ ಹೋಮ ಮಾಡಿದಮೇಲೆ ಮತ್ತೆ ಶಾಸ್ತ್ರವಿಧಿಯಂತೆ ಇಷ್ಟಿಯಲ್ಲಿ ಅನುಸರಿಸಬೇಕಾದ ಕ್ರಮುಗಳನ್ನನುಸರಿಸಿ ಲೋಪದೋಷಗಳಿಲ್ಲದಂತೆ ಕ್ರಮವಾಗಿ ಯಜ್ಞವನ್ನುಮಾಡಬೇಕು. ಶಾಸ್ತ್ರೋಕ್ತವಾಗಿ ಮಾಡಿದ ಈ ಯಜ್ಞವು ಮೊದಲು ದೋಷಪೂರಿತವಾಗಿ (ಸರಿಯಾದ ಹವಿರ್ದ್ರ ವ್ಯಗಳಿಲ್ಲದೆ) ಮಾಡಿದ ಇಷ್ಟಿಗೆ (ಯಜ್ಞಕ್ಕೆ) ಪ್ರಾಯಶ್ಚಿತ್ತರೂಪವಾಗಿರುವುದು.

———

*English Translation*

**(On the penances in the case of Sannayya being spoiled.)**

They ask, It the sannayya which was milked on the evening becomes spoiled or is lost during the night, what is the penance for it? The answer is The Agnihotri shall divide the milk of the morning into two parts, and after having curdled one part of it, he may offer it. This is the penance.

They ask, If all the milk of the morning and evening of the Sannayya becomes spoiled or is lost, what is the penance for it ? The penance is made in the same way by offering the Indra or Mahendra Purodasa, as in the preceding case.

They ask, If all the offerings (Purodasa, Curds, milk) become spoiled or are lest, what is the penance for it ? He ought to prepare all these

offerings with melted butter and having apportioned to the several gods their respective parts, should sacrifice this Ajyahavis (offerings with melted butter) as an Ishti. Then he ought to prepare another Ishti all smooth and even. This sacrifice performed in the regular way is the penance for the first which had been spoiled.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾತ್ರಿಂಶಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂವತ್ತೆರಡನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು
ಸಮಾಪ್ತವಾದುದು



# ಅಥ ದ್ವಾತ್ರಿಂಶಾಧ್ಯಾಯೇ ಚತುರ್ಥಃ ಖಂಡಃ

### ಮೂವತ್ತೆರಡನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ಅಗ್ನಿಹೋತ್ರದಲ್ಲಿ ಸಂಭವಿಸಬಹುದಾದ ಇತರ ಲೋಪದೋಷಗಳು ಹವಿಸ್ಸು ಮುಂತಾದ್ದು ಚೆಲ್ಲಿಹೋಗುವುದು, ಚಮಸವು (ಹೋಮಮಾಡುವ ಮರದ ಸೌಟು) ಮುರಿದುಹೋಗುವುದು ಅಥವಾ ಗಾರ್ಹಪತ್ಯಾಗ್ನಿಯು ಆರಿಹೋಗುವುದು ಮುಂತಾದ ಲೋಪಗಳಿಗೆ ಪ್ರಾಯಶ್ಚಿತ್ತವು]



ತದಾಹುರ್ಯಸ್ಯಾಗ್ನಿಹೋತ್ರಮಧಿಶ್ರಿತಮಮೇಧ್ಯಮಾಪದ್ಯೇತ ಕಾ ತತ್ರ ಪ್ರಾಯಶ್ಚಿತ್ತಿರಿತಿ ಸರ್ವಮೇವೈನತ್ಸ್ರುಚ್ಯಭಿಪರ್ಯಾಸಿಚ್ಯ ಪ್ರಾಙು-ದೇತ್ಯಾಽಽಹವನೀಯೇ ಹ್ಯೇತಾಂ ಸಮಿಧಮಭ್ಯಾದಧಾತ್ಯಥೋತ್ತರತ ಆಹವನೀಯಸ್ಯೋಷ್ಣಂ ಭಸ್ಮ ನಿರುಹ್ಯ ಜುಹುಯಾನ್ಮನಸಾ ವಾ ಪ್ರಾಜಾಪತ್ಯಯಾ ವರ್ಚಾ ತದ್ಧುತಂ ಚಾಹುತಂ ಚ ಸ ಯದ್ಯೇಕ-ಸ್ಮಿನ್ನುನ್ನೀತೇ ಯದಿ ದ್ವಯೋರೇಷ ಏವ ಕಲ್ಪಸ್ತಚ್ಚೇದ್ವ್ಯಪನಯಿತುಂ ಶಕ್ನುಯಾನ್ನಿಃಷಿಚ್ಯೈತದ್ದುಷ್ಟಮದುಷ್ಟಮಭಿಪರ್ಯಾಸಿಚ್ಯ ತಸ್ಯ ಯ-ಥೋನ್ನೀತೀ ಸ್ಯಾತ್ತಥಾ ಜುಹುಯಾತ್ಸಾ ತತ್ರ ಪ್ರಾಯಶ್ಚಿತ್ತಿಃ ||

**ದ್ವಾದಶೇ ಪ್ರಶ್ನೋತ್ತರೇ ದರ್ಶಯತಿ— ಅಗ್ನಿಹೋತ್ರಾರ್ಥಂ ಪಯೋ ಗಾರ್ಹಗತ್ಯೇ ಪಾಕಾರ್ಥಂ ಯದಧಿಶ್ರಿತಂ ತದ್ಯದಿ ಕಿಂಚಿದಮೇಧ್ಯಂ ಯಜ್ಞಾನರ್ಹಂ ಕೇಶಕೇಟಾದಿಕಮಾಪದ್ಯೇತ ಪ್ರಾಪ್ನುಯಾತ್ತದಾನೀಮೇತದ್ಧವಿಃ ಸರ್ವಮಪ್ಯಗ್ನಿಹೋತ್ರಹವಣ್ಯಾಂ ಸ್ರುಚಿ ಸಾಕಲ್ಯೇನ ಸಿಕ್ತ್ವಾ ಪ್ರಾಙ್ಮುಖ ಉದೇತ್ಯೋತ್ಥಾಯಾಹವನೀಯಂ ಪ್ರತಿ ಗತ್ವಾ ತಸ್ಮಿನ್ನೇತಾಂ ನಿತ್ಯಾಂ ಸಮಿಧಮಾ- ದಧ್ಯಾತ್ । ಅಥಾನಂತರಮಾಹವನೀಯಸ್ಯೋತ್ತರಭಾಗೇ ಕಿಂಚಿದುಷ್ಣಂ ಭಸ್ಮ ತತೋ ನಿಃಸಾರ್ಯ ತಸ್ಮಿನ್ಮನಸಾ ನಿತ್ಯಾಗ್ನಿಹೋತ್ರಮಂತ್ರಮನುಸ್ಮೃತ್ಯ ವಾಚಾ ವಾ ಪ್ರಜಾಪತೇ ನ ತ್ವದೇತಾನೀತಿ ಮಂತ್ರ- ಮನುಸ್ಮೃತ್ಯವಾಚಾ ವಾ ಪ್ರಜಾಪತೇ ನ ತ್ವದೇತಾನೀತಿ ಮಂತ್ರಮುಚ್ಚಾರ್ಯ ಜುಹುಯಾತ್ । ತದೇತತ್ಭಸ್ಮನ ಉಷ್ಣತ್ವಾದ್ಧುತಮಪಿ ಭವತಿ। ಅಗ್ನಿರಾಹಿತ್ಯಾದಹುತಮಪಿ ಭವತಿ । ನ ಕೇವಲ- ಮಧಿಶ್ರಿತ ಏವಾಮೇಧ್ಯಪಾತ ಏತತ್ಪ್ರಾಯಶ್ಚಿತ್ತಂ ಕಿಂ ತರ್ಹಿ ಚತುರುನ್ನಯನಾವಸ್ಥಾಯಾಂ ಯದ್ಯೇಕಸ್ಮಿನ್ನುನ್ನೀತೇ ಯದಿ ವಾ ದ್ವಯೋರುನ್ನೀತಯೋರಮೇಧ್ಯಪಾತಸ್ತದಾನೀಮೇಷ ಏವ ಕಲ್ಪಃ ಪ್ರಕಾರಃ । ಉನ್ನಯನಂ ನಾಮಾಗ್ನಿಹೋತ್ರಹವಣ್ಯಾಂ ಸೇಚನಮ್। ತತ್ಕೇಶಕೀಟಾದಿದೂಷಿ- ತಮಗ್ನಿಹೋತ್ರಹವಣ್ಯಾಮುನ್ನೀತಂ ಯದ್ಯಪನೇತುಂ ಶಕ್ನುಯಾತ್ತದಾನೀಮೇತದ್ದುಷ್ಟಂ ನಿಃ ಷಿಚ್ಯ ನಿಃಸಾರ್ಯ ಸ್ಥಾಲ್ಯಾಮವಸ್ಥಿತಮದುಷ್ಟಂ ಕ್ಷೀರಮಗ್ನಿಹೋತ್ರಹವಣ್ಯಾಮಭಿಪರ್ಯಾಸಿಚ್ಯ ಯಥೋನ್ನೀತೀ ಸ್ಯಾತ್, ಉನ್ನೀತೀ ಯೇನ ಪ್ರಕಾರೇಣ ಭವತಿ ತೇನ ಪ್ರಕಾರೇಣ ಜುಹುಯಾತ್। ಅದುಷ್ಟಂ ದ್ರವ್ಯಾಂತರಮಧಿಶ್ರಯಣಾದಿನಾ ಸಂಸ್ಕೃತ್ಯ ಜುಹುಯಾದಿತ್ಯರ್ಥಃ ॥**

ಹನ್ನೆರಡನೇ ಪ್ರಶ್ನೋತ್ತರವನ್ನು ವಿವರಿಸಿರುವರು—ಅಗ್ನಿಹೋತ್ರಕ್ಕಾಗಿ ಗಾರ್ಹಪತ್ಯಾಗ್ನಿಯಲ್ಲಿ ಕಾಯಿಸುವುದಕ್ಕಾಗಿ ಇಟ್ಟ ಹಾಲಿನಲ್ಲಿ ಕೂದಲು, ಕ್ರಿಮಿಕೀಟ ಮೊದಲಾದ ಯಜ್ಞಯೋಗ್ಯವಲ್ಲದ ಕೆಟ್ಟ ಪದಾರ್ಥಗಳು ಬಿದ್ದಲ್ಲಿ ಆಗ ಅಗ್ನಿಹೋತ್ರ ಕ್ಕಾಗಿ ಉಪಯೋಗಿಸುವ ಸ್ರುಕ್ ಅಥವಾ ಮರದ ಸೌಟಿನಲ್ಲಿ ಎಲ್ಲವನ್ನೂ ಹಾಕಿ ಪೂರ್ವಾಭಿಮುಖನಾಗಿ ಎದ್ದು ನಿಂತುಕೊಂಡು ಆಹವನೀಯಾಗ್ನಿ ಸಮೀಪಕ್ಕೆ ಹೋಗಿ ಅದರಲ್ಲಿ ಸಮಿತ್ತುಗಳನ್ನು (ಕಾಷ್ಠಗಳನ್ನು) ಹಾಕಬೇಕು. ಅನಂತರ ಆಹವನೀ ಯಾಗ್ನಿಯ ಉತ್ತರ ಭಾಗದಲ್ಲಿ ಸ್ವಲ್ಪ ಬಿಸಿಯಾದ ಭಸ್ಮವನ್ನು (ಬೂದಿಯನ್ನು) ತೆಗೆದುಕೊಂಡು ಮನಸ್ಸಿನಲ್ಲಿ ಅಥವಾ ಘಟ್ಟಿಯಾಗಿ ನಿತ್ಯವೂ ಮಾಡುವ ಅಗ್ನಿಹೋತ್ರದಂತೆ ಪ್ರಜಾಪತೇ ನ ತ್ವದೇತಾನಿ (ಋ. ಸಂ. ೧೦-೧೨೧-೧೦) ಎಂಬ ಮಂತ್ರವನ್ನು ಉಚ್ಚರಿಸಿ ಹೋಮಮಾಡಬೇಕು. ಆ ಭಸ್ಮವು ಬಿಸಿಯಾಗಿರುವುದರಿಂದ ಹೋಮಮಾಡಲ್ಪಟ್ಟಂತೆಯೇ ಆಯಿತು. ಆ ಭಸ್ಮದಲ್ಲಿ ಬೆಂಕಿ ಇಲ್ಲದ್ದರಿಂದ ಹೋಮಮಾಡಿದಂತೆಯೂ ಆಗಲಿಲ್ಲ. ಹಾಲು ಮೊದಲಾದ ಹವಿಸ್ಸನ್ನು ಅಗ್ನಿಯ ಸಮೀಪದಲ್ಲಿ ಇಟ್ಟಿದ್ದಾಗ ಕೆಟ್ಟ ಪದಾರ್ಥವು ಅದರಲ್ಲಿ ಬಿದ್ದು ಅದು ದೂಷಿತವಾದುದಕ್ಕೆ ಇದೇ ಪ್ರಾಯಶ್ಚಿತ್ತಿಯು. ಇಲ್ಲಿ ಉನ್ನಯನವೆಂದರೆ ಸ್ರುಕ್ ಎಂಬ ಮರದ ಸೌಟಿನಲ್ಲಿ ಹಾಕುವುದು ಎಂದರ್ಥವು. ಕೂದಲು ಕ್ರಿಮಿಕೀಟ ಇತ್ಯಾದಿ ನಿಷಿದ್ಧ ವಸ್ತುಗಳಿಂದ ಕಲುಷಿತವಾದ, ಹಾಲನ್ನು ನಾಲ್ಕಾವರ್ತಿ ಅಥವಾ ಒಂದು, ಎರಡು ಆವರ್ತಿಗಳಲ್ಲಿಯೂ ಉನ್ನಯನ ಕಾಲದಲ್ಲಿ ಮೇಲೆ ಹೇಳಿದಂತೆ ಉಷ್ಣಭಸ್ಮವನ್ನು ಉಪಯೋಗಿಸಿ ಹೋಮಮಾಡಬೇಕು. ಕೆಟ್ಟುಹೋದ ಹಾಲಲ್ಲದೆ ಹೋಮ ಯೋಗ್ಯವಾದ ಒಳ್ಳೆಯ ಹಾಲು ಪಾತ್ರೆಯಲ್ಲಿ ಉಳಿದಿದ್ದರೆ ಅದನ್ನು ಯಥಾವಿಧಿಯಾಗಿ ಸ್ರುಕ್ಕಿನಲ್ಲಿ ಹಾಕಿ ಯಾವಾಗಲೂ ಹೋಮಮಾಡುವಂತೆ ಬೆಂಕಿಯ ಸಮೀಪದಲ್ಲಿಟ್ಟು ಕಾಯಿಸಿ ಸಂಸ್ಕಾರ ಮಾಡಿ ಹೋಮಮಾಡಬೇಕು. ಆಶ್ವಲಾಯನ ಶ್ರೌತಸೂತ್ರದಲ್ಲಿಯೂ ವ್ಯಾಪಕಾನಿ ಹವೀಂಷಿ ಕೇಶನಖಕೀಟಪತಂಗೈರನ್ಯೈರ್ವಾಬಿಭತ್ಸೈಃ ಪ್ರಜಾಪತೆ ನ ತ್ವದೇತಾನ್ಯನಾನಿ ಇತಿ ಜುಹುಯಾತ್ (ಆಶ್ವ. ಶ್ರೌ. ಸೂ ೩-೧೦-೨೦ರಿಂದ ೨೩) ಎಂದು ಹೇಳಿವೆ. ಎಂದರೆ ಉದ್ದೇಶಿಸಿರುವ ಹವಿರ್ದ್ರವ್ಯದಲ್ಲಿ,

ಕೇಶ, ಉಗುರು, ಹುಳು ಮುಂತಾದ ದುಷ್ಟಪದಾರ್ಥವು ಬಿದ್ದಿದಲ್ಲಿ ಆಗ ಮೇಲೆ ಹೇಳಿದಂತೆ **ಪ್ರಜಾಪತೇ ನ ತ್ವದೇತಾನಿ** ಎಂಬ ಮಂತ್ರಪೂರ್ವಕವಾಗಿ ಹೋಮಮಾಡಬೇಕು. ಇದೇ ಪ್ರಾಯಶ್ಚಿತ್ತವಿಧಾನವು ಎಂದು ಹೇಳಲಾಗಿದೆ.

**ತದಾಹುರ್ಯಸ್ಯಾಗ್ನಿಹೋತ್ರಮಧಿಶ್ರಿತಂ ಸ್ಕಂದತಿ ವಾ ವಿಷ್ಯಂದತೇ ವಾ ಕಾ ತತ್ರ ಪ್ರಾಯಶ್ಚಿತ್ತಿರಿತಿ ತದದ್ಭಿರುಪನಿನಯೇಚ್ಛಾಂತ್ಯೈ ಶಾಂತಿರ್ವಾ ಆಪೋಽಥೈತದ್ದಕ್ಷಿಣೇನ ಪಾಣಿನಾಭಿಮೃಶ್ಯ ಜಪತಿ.**

ತ್ರಯೋದಶೇ ಪ್ರಶ್ನೋತ್ತರೇ ದರ್ಶಯತಿ—ಅಗ್ನಿಹೋತ್ರದ್ರವ್ಯಂ ಗಾರ್ಹಪತ್ಯೇ ಪಾಕಾರ್ಥಮಧಿಶ್ರಿತಂ ಸತ್ಕದಾಚಿತ್ ಸ್ಕಂದತಿ ಸ್ಖಲತಿ ಕ್ಷೀರಬಿಂದುರಧಃ ಪತತೀತ್ಯರ್ಥಃ । ವಿಷ್ಯಂದತೇ ವಿಶೇಷೇಣ ಸ್ಯಂದನಂ ದಾಹಾಧಿಕ್ಯೇನ ಸ್ಥಾಲೀಮುಖಸ್ಯೋಪರ್ಯುದ್ವಮನಮ್ । ತತ್ಸ್ಕನ್ನಂ ವಿಷ್ಯಂದಿತಂ ವಾ ದ್ರವ್ಯಂ ದಕ್ಷಿಣೇನ ಪಾಣಿನಾ ಸ್ಪೃಷ್ಟ್ವಾ ವಕ್ಷ್ಯಮಾಣಂ ಮಂತ್ರಂ ಜಪೇತ್ ॥

ಹದಿಮೂರನೇ ಪ್ರಶ್ನೋತ್ತರವನ್ನು ವಿವರಿಸುವರು—ಅಗ್ನಿಹೋತ್ರದ್ರವ್ಯವಾದ ಹಾಲನ್ನು ಕಾಯಿಸುವುದಕ್ಕಾಗಿ ಗಾರ್ಹಪತ್ಯಾಗ್ನಿಯಲ್ಲಿ ಇಟ್ಟದ್ದಾಗ ಆ ಹಾಲು ಚೆಲ್ಲಿಹೋಗಿ ಕೆಳಗೆ ಬಿದ್ದರಾಗಲಿ, ಹೆಚ್ಚಾಗಿ ಕಾದು ಸುರಿದು ಹೋದರಾಗಲಿ, ಅದನ್ನು ಎಂದರೆ ಚೆಲ್ಲಿಹೋದ ಅಥವಾ ಉಕ್ಕಿ ಸುರಿದ ಹಾಲನ್ನು ಬಲಗೈಯಿಂದ ಉದಕ (ನೀರು) ಸಹಿತವಾಗಿ ಸ್ಪರ್ಶಮಾಡಿ ಮುಂದೆ ಹೇಳುವ ಮಂತ್ರವನ್ನು ಉಚ್ಚರಿಸಬೇಕು. ಏಕೆಂದರೆ ಉದಕವು ಶಾಂತಿಯ ದ್ಯೋತಕವಾಗಿರುವುದು.

**ದಿವಂ ತೃತೀಯಂ ದೇವಾನ್ಯಜ್ಞೋಽಗಾತ್ತತೋ ಮಾ ದ್ರವಿಣಮಾಷ್ಟಾಂತರಿಕ್ಷಂ ತೃತೀಯಂ ಪಿತೄನ್ಯಜ್ಞೋಽಗಾತ್ತತೋ ಮಾ ದ್ರವಿಣಮಾಷ್ಟ ಪೃಥಿವೀಂ ತೃತೀಯಂ ಮನುಷ್ಯಾನ್ಯಜ್ಞೋಽಗಾತ್ತತೋ ಮಾ ದ್ರವಿಣಮಾಷ್ಟ ॥**

ತಂ ದರ್ಶಯತಿ—ಅಸ್ಯ ಸ್ಕನ್ನಸ್ಯ ವಿಷ್ಯಂದಿತಸ್ಯ ವಾ ಪಯಸಸ್ತೃತೀಯಮಂಶಃ ಸ್ವರೂಪಂ ದಿವಂ ಸ್ವರ್ಗಲೋಕಮಗಾತ್ ಪ್ರಾಪ್ನೋತು । ತೇನ ಯಜ್ಞೋಽಪಿ ದೇವಾನ್ ಪ್ರಾಪ್ನೋತು । ಪ್ರಾಪಣಾದ್ವೈಕಲ್ಯಪರಿಹಾರೇ ಸತಿ ಮಾಮಗ್ನಿಹೋತ್ರಿಣಂ ದ್ರವಿಣಮಾಷ್ಟ ಧನಂ ಪ್ರಾಪ್ನೋತು । ತಥೈವಾಪರಂ ತೃತೀಯಂ ದ್ರವ್ಯಾಂಶಸ್ವರೂಪ ಧನಮಂತರಿಕ್ಷಮಗಾತ್ । ತೇನ ಯಜ್ಞೋಽಪಿ ಪಿತೄನ್ಪ್ರಾಪ್ನೋತು ತತಃ ಪ್ರಾಪಣಾನ್ಮಾಂ ಧನಂ ಪ್ರಾಪ್ನೋತು । ಪುನರಪ್ಯಪರಂ ತೃತೀಯಂ । ದ್ರವ್ಯಾಂಶಸ್ವರೂಪಂ ಪೃಥಿವೀಮಗಾತ್, ತೇನ ಯಜ್ಞೋಽಪಿ ಮನುಷ್ಯಾನಗಾತ್ । ತತಸ್ತದುಭಯಪ್ರಾಪಣಾನ್ಮಾಂ ದ್ರವಿಣಂ ಧನಮಾಷ್ಟ ಪ್ರಾಪ್ನೋತು ॥

ಮೇಲೆ ಹೇಳಿದಂತೆ ಗಾರ್ಹಪತ್ಯಾಗ್ನಿಯಲ್ಲಿ ಕಾಯಿಸಲು ಇಟ್ಟ ಹವಿಸ್ಸು ಎಂದರೆ ಹಾಲು ಚೆಲ್ಲಿಹೋಗಿ ಅಥವಾ ಉಕ್ಕಿ ಸುರಿದು ಹೋಗಿರುವ ಭಾಗದಲ್ಲಿ ಮೂರನೆಯ ಒಂದು ಭಾಗವು ಸ್ವರ್ಗಲೋಕಕ್ಕೆ ಹೋಗಿ ಅಲ್ಲಿರುವ ದೇವತೆಗಳಿಗೆ ಸೇರಲಿ. ಅದರಿಂದ ನನಗೆ ಐಶ್ವರ್ಯವು ಪ್ರಾಪ್ತವಾಗಲಿ. ಎರಡನೆಯ ಭಾಗವು ಅಂತರಿಕ್ಷದಲ್ಲಿರುವ ಪಿತೃದೇವತೆಗಳಿಗೆ ಸೇರಲಿ.



ಆದರಿಂದ ನನಗೆ ಧನಲಾಭವುಂಟಾಗಲಿ. ಮೂರನೆಯ ಭಾಗವು (ಭೂಮಿಯ ಮೇಲೆ ಬಿದ್ದ ಭಾಗವು) ಪೃಥಿವಿಯ ಮೇಲಿರುವ ಮನುಷ್ಯಾದಿಗಳಿಗೆ ಸೇರಿ ಅದರಿಂದ ನನ್ನ ಐಶ್ವರ್ಯಾಭಿವೃದ್ಧಿಯಾಗಲಿ.

ಯಯೋರೋಜಸಾ ಸ್ಕಭಿತಾ ರಜಾಂಸೀತಿ ವೈಷ್ಣವಾರುಣೀ ಮೃಚಂ ಜಪತಿ ವಿಷ್ಣುರ್ವೈ ಯಜ್ಞಸ್ಯ ದುರಿಷ್ಟಂ ಪಾತಿ ವರುಣಃ ಸ್ವಿಷ್ಟಂ ತಯೋರುಭಯೋರೇವ ಶಾಂತ್ಯೈ ಸಾ ತತ್ರ ಪ್ರಾಯಶ್ಚಿತ್ತಿಃ ||

ಮಂತ್ರಾಂತರಜಪಂ ವಿಧತ್ತೇ—ಯಯೋರೋಜಸೇತ್ಯಾದ್ಯೃಕ್ಸೂತ್ರೇ ಪಠಿತಾ ।ತಸ್ಯಾಶ್ಚತುರ್ಥಪಾದೇ ವಿಷ್ಣೂ ಅಗನ್ವರುಣಾ ಪೂರ್ವಹೂತಾವಿತಿ ಶ್ರುತತ್ವಾದಿಯಂ ವಿಷ್ಣುವರುಣದೇವತಾಕಾ ಯಜ್ಞಸ್ಯ ಯದ್ದುರಿಷ್ಟಮಂಗವೈಕಲ್ಯಂ ತಚ್ಛಮಯಿತ್ವಾ ವಿಷ್ಣುಃಪಾತಿ । ಯಜ್ಞಸ್ಯ ಯತ್ಸ್ವಿಷ್ಟಂ ಯಥಾಶಾಸ್ತ್ರ ಮನುಷ್ಠಿತಮಂಗಂ ತದ್ವರುಣಃ ಪಾತಿ । ಫಲಪ್ರತಿಷೇಧನಿವಾರಣಂ ತತ್ಪ್ರತಿಪಾಲನಂ ತಸ್ಮಾದಯಂ ಜಪಸ್ತಯೋರುಭಯೋರ್ದುರಿಷ್ಟಸ್ವಿಷ್ಟಯೋರ್ಯಥೋಕ್ತಪ್ರಕಾರೇಣ ಶಾಂತ್ಯರ್ಥಂ ಸಂಪದ್ಯತೇ ॥ ಉತ್ತರವಾಕ್ಯಮುಪಸಂಹರತಿ

ಮಂತ್ರ ಜಪವನ್ನು ವಿವರಿಸುವರು—**ಯಯೋರೋಜಸಾ** ಎಂಬ ಮಂತ್ರವು ಋಗ್ವೇದದಲ್ಲಿಲ್ಲ. ಆಶ್ವಲಾಯನರು ತಮ್ಮ ಸೂತ್ರದಲ್ಲಿ ಹೀಗೆ ಹೇಳಿರುವರು—

**ಯಯೋರೋಜಸಾ ಸ್ಕಭಿತಾ ರಜಾಂಸಿ ವೀರ್ಯೇಭಿರ್ವಿರತಮಾ ಶವಿಷ್ಠಾ ।**
**ಯಾ ಪತ್ಯೇತೇಽಪ್ರತೀತಾ ಸಹೋಭಿರ್ವಿಷ್ಣೂ ಅಗನ್ ವರುಣಾ ಪೂರ್ವಹೂತೌ ॥**

ಈ ಋಕ್ಕಿನ ನಾಲ್ಕನೆಯ ಪಾದದಲ್ಲಿ ವಿಷ್ಣು ಮತ್ತು ವರುಣ ಎಂಬ ಶಬ್ದಗಳ ಪ್ರಯೋಗವಿರುವುದರಿಂದ ಈ ಮಂತ್ರವು ವೈಷ್ಣವಾರುಣೀ ಮಂತ್ರವೆನಿಸುವುದು. ಯಜ್ಞದಲ್ಲಿ ಸಂಭವಿಸುವ ದುರಿಷ್ಟ ಎಂದರೆ ಲೋಪದೋಷಗಳನ್ನು ವಿಷ್ಣುವು ಪರಿಹಾರ ಮಾಡಿ ಸರಿಪಡಿಸುವನು. ವರುಣನು ಸಾಂಗವಾಗಿ ಮಾಡಲ್ಪಟ್ಟ ಯಜ್ಞಕ್ಕೆ ಫಲವು ಲಭಿಸುವಂತೆ ಮಾಡುವನು. ಆದ್ದರಿಂದ ಶಾಂತ್ಯರ್ಥವಾಗಿ ಈ ದೇವತೆಗಳನ್ನು ಸ್ತುತಿಸುವುದು ಯುಕ್ತವು. ಈ ವಿಷಯದಲ್ಲಿ ಇದೇ ಪ್ರಾಯಶ್ಚಿತ್ತಿಯು.

ತದಾಹುರ್ಯಸ್ಯಾಗ್ನಿಹೋತ್ರಮಧಿಶ್ರಿತಂ ಪ್ರಾಙುದಾಯನ್ ಸ್ಖಲತೇ ವಾಪಿ ವಾ ಭ್ರಂಶತೇ ಕಾ ತತ್ರ ಪ್ರಾಯಶ್ಚಿತ್ತಿರಿತಿ ಸ ಯದ್ಯುಪನಿವರ್ತಯೇತ್ಸ್ವರ್ಗಾಲ್ಲೋಕಾದ್ಯಜಮಾನಮಾವರ್ತಯೇದಶ್ರೈವಾಸ್ಮಾ ಉಪವಿಷ್ಟಾಯೈತಮಗ್ನಿಹೋತ್ರಪರೀಶೇಷಮಾಹರೇಯುಸ್ತಸ್ಯ ಯಥೋನ್ನೀತೀ ಸ್ಯಾತ್ತಥಾ ಜುಹುಯಾತ್ಸಾ ತತ್ರ ಪ್ರಾಯಶ್ಚಿತ್ತಿಃ ||

ಚತುರ್ದಶೇ ಪ್ರಶ್ನೋತ್ತರೇ ದರ್ಶಯತಿ—ಅಗ್ನಿಹೋತ್ರದ್ರವ್ಯಂ ಗಾರ್ಹಪತ್ಯೇಽಧಿಶ್ರಿತಂ ಪಾಕಾದೂರ್ಧ್ವಮಾದಾಯ ಪ್ರಾಙ್ಮುಖ ಆಹವನೀಯಂಪ್ರತ್ಯುದಾಯನ್ನುದ್ಗಚ್ಛನ್ನಧ್ವರ್ಯುರ್ಯದಾ ಭವತಿ ತದಾನೀಂ ತದ್ದ್ರವ್ಯಂ ಸ್ಖಲತೇ ಯದ್ವಾ ಭ್ರಂಶತೇ । ಬಿಂದುಪತನಂ ಸ್ಖಲನಂ ಸಾಕಲ್ಯೇನ

ದ್ರವ್ಯಪತನಂ ಭ್ರಂಶಃ । ಪುನರಪ್ಯಗ್ನಿಹೋತ್ರಸ್ಥಾಲ್ಯಾ ದ್ರವ್ಯಂ ಗ್ರಹೀತುಂ ಸೋಽಧ್ವರ್ಯುರ್ಯದಿ ಪಶ್ಚಿಮಾಮುಖೋ ನಿವೃತ್ತೋ ಭವೇತ್ತದಾನೀಂ ಸ್ವರ್ಗಪ್ರಾಪ್ತಂ ಯಜಮಾನಂ ತಸ್ಮಾಲ್ಲೋಕಾದಾ-ವರ್ತಯೇತ್ । ಅತೋ ನಿವೃತ್ತಿಮಕೃತ್ವಾ ಸ್ಕಲನಭ್ರಂಶದೇಶ ಏವೋಪವಿಷ್ಟಾಯಾಸ್ಮಾ ಅಧ್ವ-ರ್ಯವೇ ಸ್ಥಾಲಿಗತಮಗ್ನಿಹೋತ್ರದ್ರವ್ಯಶೇಷಮನ್ಯೇ ಪುರುಷ ಆಹರೇಯುಃ । ತಸ್ಯ ದ್ರವ್ಯಸ್ಯ ಸ್ವೀಕಾರೇಣಾಧ್ವರ್ಯುರ್ಯಥೋನ್ನೀತೀ ಸ್ಯಾತ್ತಥಾ ಜುಹುಯಾತ್ । ಉನ್ನೀತಮುನ್ನಯನಂ ಸ್ಥಾಲೀಗತಸ್ಯ ದ್ರವ್ಯಸ್ಯಾಗ್ನಿಹೋತ್ರಹವಣ್ಯಾಂ ಚತುರ್ವಾರಂ ಪ್ರಕ್ಷೇಪಶ್ಚತುರುನ್ನಯತೀತಿ ಶ್ರುತತ್ವಾತ್ । ಉನ್ನಯನಾದಿಸಂಸ್ಕಾರಪೂರ್ವಕಂ ಜುಹುಯಾದಿತ್ಯರ್ಥಃ ॥

ಹದಿನಾಲ್ಕನೇ ಪ್ರಶ್ನೋತ್ತರವನ್ನು ವಿವರಿಸುವರು—ಅಗ್ನಿಹೋತ್ರಾರ್ಥವಾಗಿ ಗಾರ್ಹಪತ್ಯಾಗ್ನಿಯಲ್ಲಿಟ್ಟು ಕಾಯಿಸಿದ ಹವಿರ್ದ್ರವ್ಯವನ್ನು (ಹಾಲು ಇತ್ಯಾದಿ) ಪೂರ್ವದಿಕ್ಕಿನಲ್ಲಿರುವ ಆಹವನೀಯಾಗ್ನಿಯ ಬಳಿಗೆ ಅಧ್ವರ್ಯುವು (ಋತ್ವಿಜನು) ತರುತ್ತಿರುವಾಗ ಮಧ್ಯದಲ್ಲಿ ತೊಟ್ಟಿಕ್ಕುವುದು ಅಥವಾ ತುಳುಕಿ ಚೆಲ್ಲಿಹೋಗುವುದು ಮುಂತಾದವು ಸಂಭವಿಸಿದರೆ ಆಗ ಅಧ್ವರ್ಯುವು ಪಾತ್ರೆಯಲ್ಲಿ ಉಳಿದಿರುವ ಮಿಕ್ಕ ಹಾಲನ್ನು ತರುವುದಕ್ಕಾಗಿ ಪಶ್ಚಿಮಾಭಿಮುಖವಾಗಿ ಹಿಂತಿರುಗಿ ಹೋಗಕೂಡದು ಹಾಗೆ ಹಿಂತಿರುಗಿ ಹೋದರೆ ಯಜ್ಞಮಾಡುವ ಯಜಮಾನನು ಸ್ವರ್ಗಕ್ಕೆ ಹೋಗುವಾಗ ಹಿಂತಿರುಗಿದಂತೆ ಆಗುವುದು. ಆದ್ದರಿಂದ ಹಾಲು ಚೆಲ್ಲಿಹೋದ ಸ್ಥಳದಲ್ಲಿಯೇ ಅಧ್ವರ್ಯುವು ಹಿಂತಿರುಗಿ ನೋಡದೇ ಅಲ್ಲಿಯೇ ನಿಂತಿರಬೇಕು. ಬೇರೊಬ್ಬ ಪುರುಷನು ಪಾತ್ರೆಯಲ್ಲಿ ಮಿಕ್ಕಿರುವ ಹಾಲನ್ನು ಹೋಗಿ ತಂದು ಅಧ್ವರ್ಯುವು ಅದನ್ನು ತೆಗೆದುಕೊಂಡು ಮುಂಚಿನಂತೆ ಆಹವನೀಯಾಗ್ನಿಯ ಬಳಿಗೆ ಹೋಗಿ ಉನ್ನಯನ ಕ್ರಮದಿಂದ ನಾಲ್ಕಾವರ್ತಿ ತೆಗೆದುಕೊಂಡು ಹೋಮ ಮಾಡಬೇಕು. ಇದೇ ಇಲ್ಲಿ ಮಾಡಬೇಕಾದ ಪ್ರಾಯಶ್ಚಿತ್ತಿಯು.

ತದಾಹುರಥ ಯದಿ ಸ್ರುಗ್ಭಿದ್ಯೇತ ಕಾ ತತ್ರ ಪ್ರಾಯಶ್ಚಿತ್ತಿರಿತ್ಯನ್ಯಾಂ ಸ್ರುಚಮಾಹೃತ್ಯ ಜುಹುಯಾದಥೈನಾಂ ಸ್ರುಚಂ ಭಿನ್ನಾಮಾಹವ-ನೀಯೇಽಭ್ಯಾದಧ್ಯಾತ್ಪ್ರಾಗ್ದಂಡಾಂ ಪ್ರತ್ಯಕ್ಪುಷ್ಕರಾಂ ಸಾ ತತ್ರ ಪ್ರಾಯಶ್ಚಿತ್ತಿಃ ॥

ಪಂಚದಶೇ ಪ್ರಶ್ನೋತ್ತರೇ ದರ್ಶಯತಿ–ಸ್ರುಗಗ್ನಿಹೋತ್ರಹವಣೀ । ತದ್ಭೇದೇ ಸ್ರುಗಂತರೇಣ ಹುತ್ವಾ ಭಿನ್ನಾಂ ಸ್ರುಚಮಾಹವನೀಯೇ ಪ್ರಕ್ಷಿಪೇತ್ । ತದಾನೀಂ ತದೀಯೋ ದಂಡಃ ಪ್ರಾಚ್ಯಾ-ಮವಸ್ಥಿತಸ್ತದೀಯಂ ಪುಷ್ಕರಂ ಬಿಲಂ ಪ್ರತೀಚ್ಯಾಮವಸ್ಥಿತಂ ಯಥಾ ಭವತಿ ತಥಾ ಪ್ರಕ್ಷಿಪೇತ್ ।

ಹದಿನೈದನೇ ಪ್ರಶ್ನೋತ್ತರವನ್ನು ವಿವರಿಸುವರು—ಅಗ್ನಿಹೋತ್ರದ ಸ್ರುಕ್ ಎಂದರೆ ಹೋಮಮಾಡುವುದಕ್ಕಾಗಿ ಉಪಯೋಗಿಸುವ ಮರದ ಸೌಟು ಮುರಿದು ಹೋದಲ್ಲಿ ಏನು ಮಾಡಬೇಕು ? ಎಂದರೆ ಬೇರೊಂದು ಸೌಟಿನಿಂದ ಹೋಮ ಮಾಡಬೇಕು. ಮುರಿದು ಹೋದ ಸೌಟನ್ನು (ಸ್ರುಕ್ಕನ್ನು) ಆಹವನೀಯಾಗ್ನಿಯಲ್ಲಿ ಹಾಕಬೇಕು. ಅಗ್ನಿಯಲ್ಲಿ ಹಾಕುವಾಗ ಸೌಟಿನ ಕಾವು (ದಂಡವು) ಎಂದರೆ ಕೋಲಿನಂತಿರುವ ಭಾಗವು ಪೂರ್ವದಿಕ್ಕಿನಲ್ಲಿರುವಂತೆಯೂ ಹಳ್ಳವಾಗಿ ಬಟ್ಟಲಿನಂತಿರುವ ಸ್ರುಕ್ಕಿನ ಭಾಗವು ಪಶ್ಚಿಮದಿಕ್ಕಿಗಿರುವಂತೆಯೂ ಆಹವನೀಯಾಗ್ನಿಯಲ್ಲಿ ಹಾಕಬೇಕು. ಇದೇ ಪ್ರಾಯಶ್ಚಿತ್ತವು.

ತದಾಹುರ್ಯಸ್ಯಾಽಽಹವನೀಯೇ ಹಾಗ್ನಿರ್ವಿದ್ಯೇತಾಥ ಗಾರ್ಹಪತ್ಯ
ಉಪಶಾಮ್ಯೇತ್ಕಾ ತತ್ರ ಪ್ರಾಯಶ್ಚಿತ್ತಿರಿತಿ ಸ ಯದಿ ಪ್ರಾಂಚಮುದ್ಧ-
ರೇತ್ಪ್ರಾಽಽಯತನಾಚ್ಚ್ಯವೇತ ಯತ್ಪ್ರತ್ಯಂಚಮಸುರವದ್ಯಜ್ಞಂ
ತನ್ವೀತ ಯನ್ಮಂಥೇದ್ಭ್ರಾತೃವ್ಯಂ ಯಜಮಾನಸ್ಯ ಜನಯೇದ್ಯದನು-
ಗಮಯೇತ್ಪ್ರಾಣೋ ಯಜಮಾನಂ ಜಹ್ಯಾತ್ಸರ್ವಮೇವೈನಂ ಸಹ
ಭಸ್ಮಾನಂ ಸಮೋಪ್ಯ ಗಾರ್ಹಪತ್ಯಾಯತನೇ ನಿಧಾಯಾಥ ಪ್ರಾಂಚ-
ಮಾಹವನೀಯಮುದ್ಧರೇತ್ಸಾ ತತ್ರ ಪ್ರಾಯಶ್ಚಿತ್ತಿಃ ||

ಷೋಡಶೇ ಪ್ರಶ್ನೋತ್ತರೇ ದರ್ಶಯತಿ—ಪ್ರತಿದಿನಮಾಹವನೀಯಾಗ್ನಿರ್ಹೋಮೋರ್ಧ್ವ-ಮುಪಶಾಮ್ಯತಿ । ಗಾರ್ಹಪತ್ಯಾಗ್ನಿಸ್ತು ಸರ್ವದಾ ಧಾರ್ಯತೇ । ತಸ್ಮಾತ್ ಗಾರ್ಹಪತ್ಯಾತ್ತತ್ತ-ದ್ಧೋಮಕಾಲ ಆಹವನೀಯಾರ್ಥಮಗ್ನಿಂ ವಿಹರೇದಿತ್ಯೇಷೋಽನುಷ್ಠಾನಕ್ರಮಃ । ಏವಂ ಸತಿ ಯದಿ ಕದಾಚಿದಾಹವನೀಯಸ್ಯ ಸ್ಥಾನೇಽಗ್ನಿರನುಪಶಾಂತೋ ವಿದ್ಯೇತ ತದಾನೀಂ ಗಾರ್ಹಪತ್ಯಶ್ಚೋಪ-ಶಾಮ್ಯೇತ್ । ತತ್ರ ತಸ್ಯ ವೈಕಲ್ಯಸ್ಯ ಪರಿಹಾರಾಯ ಪಕ್ಷಾಃ ಪಂಚವಿಧಾಃ ಸಂಭವಂತಿ । ವಿದ್ಯ-ಮಾನಮಾಹವನೀಯಂ ಗಾರ್ಹಪತ್ಯತಯಾ ಸಂಭಾವ್ಯ ತತೋಽಪಿ ಪೂರ್ವದೇಶ ಆಹವನೀಯಂ ಕರ್ತುಂ ತಸ್ಮಾತ್ ಪೂರ್ವಸಿದ್ಧಾಹವನೀಯಾತ್ ಪ್ರಾಂಚಮಗ್ನಿಮುದ್ಧರೇದಿತಿ ಪ್ರಥಮಃ ಪಕ್ಷಃ । ತಸ್ಮಿನ್ ಪಕ್ಷೇ ಯಜಮಾನ ಆಯತನಾತ್ ಸ್ವಕೀಯಸ್ಥಾನಾತ್ ಪ್ರಚ್ಯವೇತಾಽಽಹವನೀಯಸ್ಥಾನಾತ್ ಪ್ರಚ್ಯುತತ್ವಾತ್ । ಅಥ ಗಾರ್ಹಪತ್ಯಾರ್ಥಂ ಪೂರ್ವಸಿದ್ಧಾದಾಹವನೀಯಾತ್ ಪ್ರತ್ಯಂಚಮಗ್ನಿಮುದ್ಧ-ರೇದಿತಿ ದ್ವಿತೀಯಃ ಪಕ್ಷಃ । ತಸ್ಮಿನ್ದ್ವಿತೀಯಪಕ್ಷೇ ಯಜ್ಞ ಏಷೋಽಸುರಯಜ್ಞಸಮಾನಃ ಸ್ಯಾತ್ । ಅಸುರಯಜ್ಞಶ್ಚ ಶಾಖಾಂತರೇ ತಾನಸುರಾನ್ಪ್ರಕೃತ್ಯೈವಮಾಮ್ನಾಯತೇ— 'ತ ಆಹವನೀಯ ಮಗ್ರ ಆದಧತ। ಅಥ ಗಾರ್ಹಪತ್ಯಮ್। ಅಥಾನ್ವಾಹಾರ್ಯಪಚನಮ್' ಇತಿ। ತದೀಯದೋಷೋಽಪಿ ತತ್ರೈವಾಽಽಮ್ನಾತಃ—'ಭದ್ರಾ ಭೂತ್ವಾ ಪರಾಭವಿಷ್ಯಂತಿ' ಇತಿ । ಗಾರ್ಹಪತ್ಯಾರ್ಥಮಗ್ನಿಮಥನಂ ಕರ್ತವ್ಯಮಿತಿ ತೃತೀಯಃ ಪಕ್ಷಃ । ತದಾನೀಂ ವಿದ್ಯಮಾನ ಆಹವನೀಯೇ ತದ್ವಿರೋಧಿನೋಽಗ್ನ್ಯಂತ-ರಸ್ಯ ಮಥನಾದ್ಯಜಮಾನಸ್ಯ ಶತ್ರುಮುತ್ಪಾದಯೇತ್ । ಪುನರಾಧಾನಂ ಕರ್ತುಂ ವಿದ್ಯಮಾನಮಾಹ-ವನೀಯಮನುಗಮಯೇದುಪಶಮಯೇದಿತಿ ಚತುರ್ಥಃ ಪಕ್ಷಃ । ತಸ್ಮಿನ್ಪಕ್ಷೇ ವಿದ್ಯಮಾನಸ್ಯ ವಿನಾಶನಾತ್ ಪ್ರಾಣೋ ಯಜಮಾನಂ ಪರಿತ್ಯಜೇತ್ । ಆಹವನೀಯಗತಂ ಭಸ್ಮಸಹಿತಂ ಸರ್ವ-ಮಪ್ಯಗ್ನಿಂ ಕಸ್ಮಿಂಶ್ಚಿತ್ಪಾತ್ರೇ ಪ್ರಕ್ಷಿಪ್ಯ ನೀತ್ವಾ ಗಾರ್ಹಪತ್ಯಸ್ಥಾನೇ ಪ್ರಕ್ಷಿಪ್ಯಾನಂತರಂ ತತೋ ಗಾರ್ಹಪತ್ಯಾತ್ ಪ್ರಾಂಚಮಾಹವನೀಯಮುದ್ಧರೇದಿತಿ ಪಂಚಮಃ ಪಕ್ಷಃ । ಅಸ್ಮಿನ್ಪಕ್ಷೇ ದೋಷಾ-ಭಾವಾತ್ ಸೈವ ಪ್ರಾಯಶ್ಚಿತ್ತಿರ್ಭವತಿ ||

ಹದಿನಾರನೇ ಪ್ರಶ್ನೋತ್ತರವನ್ನು ವಿವರಿಸುವರು—ಅಧ್ವರ್ಯುವು ಪ್ರತಿ ದಿನವೂ ಆಹವನೀಯಾಗ್ನಿಯನ್ನು ಆರಿಸಿ ಮರುದಿನ ಹೊತ್ತಿಸುವನು. ಆದರೆ ಗಾರ್ಹಪತ್ಯಾಗ್ನಿಯು ಸದಾ ಕಾಲವೂ ಉರಿಯುತ್ತಲೇ ಇರಬೇಕು. ಅದನ್ನು ಆರಿಸಲೇ

ಕೂಡದು. ಮತ್ತು ಈ ರೀತಿ ಉರಿಯುತ್ತಿರುವ ಗಾರ್ಹಪತ್ಯಾಗ್ನಿಯಿಂದಲೇ ಹೋಮ ಕಾಲದಲ್ಲಿ ಆಹವನೀಯಾಗ್ನಿಯನ್ನು ಹೊತ್ತಿಸಬೇಕು. ಇದೇ ಅನುಷ್ಠಾನ ಕ್ರಮವು. ಹೀಗಿರುವಾಗ ಆಹವನೀಯಾಗ್ನಿಯು ಉರಿಯುತ್ತಿದ್ದು ಗಾರ್ಹಪತ್ಯಾಗ್ನಿಯೇ ಆರಿಹೋದಲ್ಲಿ ಅದಕ್ಕೆ ಪರಿಹಾರವೇನು? ಎಂದರೆ ಇದಕ್ಕೆ ಐದು ವಿಧ ಉಪಾಯಗಳಿರುವವು. ಉರಿಯುತ್ತಿರುವ ಆಹವನೀಯಾಗ್ನಿಯನ್ನು ಗಾರ್ಹಪತ್ಯವೆಂದೇ ಭಾವಿಸಿ ಅದಕ್ಕೆ ಪೂರ್ವದಲ್ಲಿ ಬೇರೊಂದು ಆಹವನೀಯಾಗ್ನಿಯನ್ನು ಹೊತ್ತಿಸಲು ಮೊದಲಿನ ಆಹವನೀಯಾಗ್ನಿಯಿಂದಲೇ ಹೊತ್ತಿಸಬೇಕೆಂಬುದು ಪ್ರಥಮ ಪಕ್ಷವು; ಹೀಗೆ ಮಾಡಿದರೆ ಆಹವನೀಯಾಗ್ನಿಯನ್ನು ಸ್ವಸ್ಥಾನದಿಂದ ಬೇರ್ಪಡಿಸುವುದರಿಂದ ಯಜ್ಞಮಾಡುವ ಯಜಮಾನನ ನಿವಾಸಸ್ಥಾನಕ್ಕೆ ಚ್ಯುತಿಯುಂಟಾಗಿ ಅವನು ಸ್ವಸ್ಥಾನವನ್ನು ಕಳೆದುಕೊಳ್ಳುವನು. ಎರಡನೆಯ ಪಕ್ಷವು—ಗಾರ್ಹಪತ್ಯಾಗ್ನಿಗಾಗಿ ಪೂರ್ವ (ಮೊದಲಿನಿಂದಿದ್ದ) ದಿಂದಿದ್ದ ಆಹವನೀಯಾಗ್ನಿಯಿಂದಲೇ ಬೇರೆ ಅಗ್ನಿಯನ್ನು ಹೊತ್ತಿಸಬೇಕೆಂಬುದು. ಈ ವಿಧವಾದ ಎರಡನೆಯ ಪಕ್ಷದಲ್ಲಿ ಈ ಯಜ್ಞವು ಅಸುರರು ಮಾಡುವ ಯಜ್ಞದಂತಾಗುವುದು. ಅಸುರ ಯಜ್ಞದ ವಿಷಯದಲ್ಲಿ—**ಆಹವನೀಯಮಗ್ನ ಆ ದಧೀತ । ಅಥ ಗಾರ್ಹಪತ್ಯಂ । ಅಥಾನ್ವಾಹಾರ್ಯಪಚನಂ** (ತೈ. ಬ್ರಾ. ೧-೧-೪-೪) ಎಂದು ಹೇಳಿದೆ. ಈ ವಿಧವಾದ ಅಸುರ ಯಜ್ಞದ ದೋಷವನ್ನು ಸಹ ಇಲ್ಲಿಯೇ ಹೇಳಿದೆ. **ಭದ್ರಾ ಭೂತ್ವಾ ಪರಾಭವಿಷ್ಯಂತಿ** ಎಂದು ಮೂರನೆಯ ಪಕ್ಷವು ಹೀಗೆ ಇದೆ—ಗಾರ್ಹಪತ್ಯಾಗ್ನಿಗಾಗಿ ಪುನಃ ಅಗ್ನಿಮಥನವನ್ನು ಮಾಡುವುದು. ಹೀಗೆ ಮಾಡಿದಲ್ಲಿ ಆಹವನೀಯಾಗ್ನಿಯು ಇದ್ದರೂ ಬೇರೊಂದು ಅಗ್ನಿಯನ್ನು ಮಥಿಸಿ ಸಿದ್ಧಪಡಿಸುವುದರಿಂದ ಯಜಮಾನನಿಗೆ ಹೊಸದಾಗಿ ಒಬ್ಬ ಶತ್ರುವನ್ನು ಉತ್ಪನ್ನಮಾಡಿದಂತಾಗುವುದು. ನಾಲ್ಕನೆಯ ಪಕ್ಷವು—ಪುನಃ ಅಗ್ನಿಯನ್ನು ಕಲ್ಪಿಸುವುದಕ್ಕಾಗಿ ಈಗ ಇರುವ ಆಹವನೀಯಾಗ್ನಿಯನ್ನು ಆರಿಸುವುದು. ಹೀಗೆ ಮಾಡಿದರೆ ಅಗ್ನಿಯನ್ನು ಆರಿಸಿದಂತೆ (ನಾಶ ಮಾಡಿದಂತೆ) ಆಗಿ ಯಜಮಾನನ ಪ್ರಾಣಕ್ಕೆ ಹಾನಿಯು ತಟ್ಟುವುದು. ಎಂದರೆ ಯಜಮಾನನಿಗೆ ಮರಣವು ಸಂಭವಿಸುವುದು. ಈಗ ಐದನೆಯ ಪಕ್ಷವನ್ನು ವಿವರಿಸುವರು—ಉರಿಯುತ್ತಿರುವ ಆಹವನೀಯಾಗ್ನಿಯನ್ನು ಭಸ್ಮ (ಬೂದಿ) ಸಹಿತವಾಗಿ ಅಲ್ಲಿರುವುದೆಲ್ಲವನ್ನೂ ಒಂದು ಪಾತ್ರೆಯಲ್ಲಿ ಹಾಕಿ ತಂದು ಆರಿಹೋಗಿದ್ದ ಗಾರ್ಹಪತ್ಯಾಗ್ನಿಯ ಸ್ಥಾನದಲ್ಲಿಟ್ಟು ಅದನ್ನೇ ಗಾರ್ಹಪತ್ಯಾಗ್ನಿಯೆಂದು ಭಾವಿಸಿ ಅದರಿಂದ ಆಹವನೀಯಾಗ್ನಿಯನ್ನು ಹೊತ್ತಿಸುವುದು ಐದನೆಯ ಪಕ್ಷವು. ಹೀಗೆ ಮಾಡುವುದರಿಂದ ಯಾವ ದೋಷವೂ ಸಂಭವಿಸುವುದಿಲ್ಲ. ಹೀಗೆ ಮಾಡುವುದೇ ಇಲ್ಲಿ ಮಾಡಬೇಕಾದ ಪ್ರಾಯಶ್ಚಿತ್ತಿಯು.

———

*English Translation*

**(The penances required when anything of the Agnihotram the spilt, or the spoon is broken, or the Garhapatya fire extinguished.)**

They ask, If anything improper for being offered should fall into the fire offering when placed (over the fire to make it ready) what is the penance for it ? The Agnihotri then ought to pour all this into a sruch (sacrificial spoon), go eastwards and place the usual fuel (samidh) into the Ahavaniya fire. After having taken some hot ashes from the

northern part of the Ahavaniya fire, he shall sacrifice it by repeating either in his mind (the usual Agnihotra mantra) or the Prajapati vèrse. In this way by means of the hot ashes the offering becomes sacrificed and not sacrificed. (It is of no consequence) whether only one or two turns of the oblation become spoiled; the penance (for it is always performed in the way described. Should the Agnihotri be able to remove thus the unclean things fallen into the offering) by pouriug out all that is spoiled, and pour in what is unspoiled, then he ought to sacrifice it just as its turn is. This is the penance.

They ask, If the fire offering when placed over the fire (for being made ready) is spilt or runs over (by boiling,) what is the penance for it? He shall touch what fell down with water for appeasing (arresting the evil consequences) for water serves for this purpose. Then moving with his right hand over what fell out, he mutters the mantra, "May a third go to heaven to the gods as a sacrifice; might I obtain thence wealth! May a third go to the air, to the pitaras, as a sacrifice: Might I obtain thence wealth! May a thired go to the earth, to men; might I obtain thence wealth!" Then he mutters the Vishnu Varuna verse, yayor ojasa skabhita rajamsi (A. V. 7. 25. 1). For Vishnu watches over what is performed badly in the sacrifies, and Varuna over what is performed well. To appease both of them this penance (is appropriate.)

They ask, When the fire offering, after having been made ready at the time when the Adhvaryu takes it eastward to the Ahavaniya fire (to sacrifice it) runs over or is spilt altogether, what is the penance for it? (The Adhvaryu is not allowed to turn back his face. If he would turn his face backward, then he would turn the sacrificer from heaven. Therefore (some other men) must gather up for him when he is seated having turned the face eastward the remainder of ihe offering, which he then sacrifices just in its turn. This is the penance for it.

They ask, if the sacrifical spoon (sruch) should be broken, what is the penance for it? He ought to take another Sruch and sacrifice with it. Then he shall

throw the broken Sruch into the Ahavaniya fire, the stick being in the ront and its cavity behind. This is the penance for it.

They ask, If the fire in the Ahavaniya only is burning, but that in the Garhapatya is extinguished, what is the penance for it ? When he takes off the eastren portion of the Ahavaniya for the Garhapatya, then he might lose his place ; if he takes off the western portion, then he would spread the sacrifice in the way the Asuras do ; if he kindles a new fire by friction, then he might produce an enemy to tho sacrificer ; if he extinguishes it, then the vital breath would leave the sacrificer. Thence he must take the whole Ahavaniya fire and mixing it with its ashes, place it in the Garhapatya, and then take off the eastern part as Ahavaniya. This is the penance for it.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ದ್ವಾತ್ರಿಂಶಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯ ಬ್ರಾಹ್ಮಣದ ಮೂವತ್ತೆರಡನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವಾದುದು



# ಅಥ ದ್ವಾತ್ರಿಂಶಾಧ್ಯಾಯೇ ಪಂಚಮಃ ಖಂಡಃ

### ಮೂವತ್ತೆರಡನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ಯಜ್ಞಾಗ್ನಿಗಳಿಂದ ಬೇರೊಂದು ಅಗ್ನಿಯನ್ನು ಹೊತ್ತಿಸುವುದಕ್ಕಾಗಿ ಅಗ್ನಿಯನ್ನು ತಂದು ಮಿಶ್ರಮಾಡುವುದು ಮುಂತಾದ ಕರ್ಮಗಳಿಗೆ ಆಚರಿಸುವ ಪ್ರಾಯಶ್ಚಿತ್ತಿ ವಿಧಾನವು ಇತ್ಯಾದಿ]



ತದಾಹುರ್ಯಸ್ಯಾಗ್ನಾವಗ್ನಿಮುದ್ಧರೇಯುಃ ಕಾ ತತ್ರ ಪ್ರಾಯಶ್ಚಿತ್ತಿರಿತಿ ಸ ಯದ್ಯನುಪಶ್ಯೇದುದೂಹ್ಯ ಪೂರ್ವಮಪರಂ ನಿದಧ್ಯಾದ್ಯದ್ಯ (ದ್ವ ಲಿ) ನಾನುಪಶ್ಯೇತ್ಸೋಽಗ್ನಯೇಽಗ್ನಿವತೇಽಷ್ಟಾಕಪಾಲಂ ಪುರೋಳಾಶಂ ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ಅಗ್ನಿನಾಗ್ನಿಃ ಸಮಿಧ್ಯತೇ ತ್ವಂ

**ಹ್ಯಗ್ನೇ ಅಗ್ನಿನೇತ್ಯಾಹುತಿಂ ವಾಽಽಹವನೀಯೇ ಜುಹುಯಾದಗ್ನಯೇಽ ಗ್ನಿವತೇ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ ||**

ಸಪ್ತದಶೇ ಪ್ರಶ್ನೋತ್ತರೇ ದರ್ಶಯತಿ—ಸಾಯಂಪ್ರಾತರಾಹವನೀಯೇಽಗ್ನೌ ಸ್ಥಿತ ಏವ ಸತಿ ಪುನರಪಿ ಗಾರ್ಹಪತ್ಯಾಗ್ನಿಂ ಯ ಉದ್ಧರೇಯುಸ್ತದಾನೀಮುದ್ಧೃತಸ್ಯಾಗ್ನೇಃ ಪ್ರಕ್ಷೇಪಾತ್ಪೂರ್ವಮೇವ ವಿದ್ಯಮಾನಸ್ಯಾಗ್ನೇರ್ದರ್ಶನೇ ತಂ ಪೂರ್ವಂ ವಿದ್ಯಮಾನಮಗ್ನಿಮುದೂಹ್ಯ ತಸ್ಮಾದಾಹವನೀಯಸ್ಥಾನಾದುದ್ಧೃತ್ಯ ತಸ್ಮಿನ್ ಸ್ಥಾನೇ ಪುನರಪರಮಿದಾನೀಮಾನೀತಮಗ್ನಿಂ ನಿದಧ್ಯಾತ್ | ಯದ್ಯದಿ ತು ವಿದ್ಯಮಾನಂ ನಾನುಪಶ್ಯೇತ್ತದಾನೀಮಾನೀತಮಗ್ನಿಂ ತತ್ರ ಪ್ರಕ್ಷಿಪ್ಯ ಪಶ್ಚಾದಗ್ನಿದ್ವಯಮವಗತ್ಯಾಗ್ನಿವತೇಽಗ್ನಯೇ ದೇವತಾಯೈ ಪುರೋಳಾಶಂ ನಿರುಪ್ಯ ತಸ್ಯೈತೇ ಯಾಜ್ಯಾನುವಾಕ್ಯೇ ಕುರ್ಯಾತ್ | ಅಗ್ನಿನಾಗ್ನಿರಿತಿ ಪುರೋನುವಾಕ್ಯಾ | ತ್ವಂ ಹ್ಯಗ್ನೇ ಅಗ್ನಿನೇತಿ ಯಜ್ಯಾ | ಸೋಽಯಮೇಕಃ ಪಕ್ಷಃ | ದರ್ವಿಹೋಮವದ್ಯಾಜ್ಯಾನುವಾಕ್ಯೇ ಪರಿತ್ಯಜ್ಯಾಗ್ನಯೇಽಗ್ನಿವತೇ ಸ್ವಾಹೇತಿ ಮಂತ್ರೇಣಾಽಽಹವನೀಯ ಆಜ್ಯಂ ಜುಹುಯಾದಿತಿ ದ್ವಿತೀಯಃ ಪಕ್ಷಃ ||

ಈಗ ಹದಿನೇಳನೇ ಪ್ರಶ್ನೋತ್ತರವನ್ನು ವಿವರಿಸುವರು—ಆಹವನೀಯಾಗ್ನಿಯಿಂದ ಸ್ವಲ್ಪ ಭಾಗ ಅಗ್ನಿಯನ್ನು ತೆಗೆದು ಕೊಂಡು ಬೇರೆ ಕಾರ್ಯಕ್ಕಾಗಿ ಅಗ್ನಿಯನ್ನು ಉಪಯೋಗಿಸಿದಲ್ಲಿ ಅದಕ್ಕೆ ಪ್ರಾಯಶ್ಚಿತ್ತಿಯೇನು ? ಎಂದರೆ ಅಷ್ಟಾಕಪಾಲಸಹಿತ ವಾದ ಪುರೋಡಾಶವನ್ನು ಅಗ್ನಯೇ ಮತ್ತು ಅಗ್ನಿವತೇ ಎಂಬ ದೇವತೆಯನ್ನುದ್ದೇಶಿಸಿ ಪುರೋನುವಾಕ್ಯಾ ಮತ್ತು ಯಾಜ್ಯಾ ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ಹೋಮಮಾಡಬೇಕು. ಇಲ್ಲಿ ಉಪಯೋಗಿಸಬೇಕಾದ ಮಂತ್ರಗಳು ಯಾವವೆಂದರೆ— **ಅಗ್ನಿನಾಗ್ನಿಃ ಸಮಿಧ್ಯತೇ** (ಋ. ಸಂ. ೧-೧೨-೬) ಎಂಬುದು ಪುರೋನುವಾಕ್ಯಾ ಮಂತ್ರವು ; **ತ್ವಂ ಹ್ಯಗ್ನೇ ಅಗ್ನಿನಾ** (ಋ. ಸಂ. ೮-೪೩-೧೪) ಎಂಬುದು ಯಾಜ್ಯಾ ಮಂತ್ರವು ಈರೀತಿ ಮಾಡುವುದು ಒಂದು ವಿಧಾನವು. ಅಥವಾ ಪುರೋನು ವಾಕ್ಯಾ ಮತ್ತು ಯಾಜ್ಯಾಮಂತ್ರಗಳನ್ನು ಪಠಿಸದೆ ಕೇವಲ **ಅಗ್ನಯೇಽಗ್ನಿವತೇ ಸ್ವಾಹಾ** ಎಂದು ಮಾತ್ರ ಉಚ್ಚರಿಸಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಹೀಗೆ ಮಾಡುವುದು ಬೇರೊಂದು ವಿಧಾನವು. ಈ ಎರಡು ವಿಧಾನಗಳಲ್ಲಿ ಯಾವುದನ್ನಾದರೂ ಅನುಸರಿಸಬಹುದು.

**ತದಾಹುರ್ಯಸ್ಯ ಗಾರ್ಹಪತ್ಯಾಹವನೀಯೌ ಮಿಥಃ ಸಂಸೃಜ್ಯೇಯಾತಾಂ ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇ ವೀತಯೇಽಷ್ಟಾಕಪಾಲಂ ಪುರೋಳಾಶಂ ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ಅಗ್ನ ಆಯಾಹಿ ವೀತಯೇ ಯೋ ಅಗ್ನಿಂ ದೇವವೀತಯ ಇತ್ಯಾಹುತಿಂ ವಾಽಹವನೀಯೇ ಜುಹುಯಾದಗ್ನಯೇ ವೀತಯೇ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ ||**

ಅಷ್ಟಾದಶೇ ಪ್ರಶ್ನೋತ್ತರೇ ದರ್ಶಯತಿ—ಅಗ್ನ್ಯುದ್ಧರಣಾದೂರ್ಧ್ವಂ ವ್ಯವಸ್ಥಿತಯೋರಾಹವನೀಯಗಾರ್ಹಪತ್ಯಯೋಃ ಸತೋರ್ಯದಿ ಗಾರ್ಹಪತ್ಯಗತೋಂಗಾರ ಆಹವನೀಯೇ ಪ್ರಮಾ-

ದಾತ್ಪತೇದಾಹವನೀಯಗತೋ ವಾ ಗಾರ್ಹಪತ್ಯೇ ಪತೇತ್ಸೋಽಯಂ ಮಿಥಃ ಸಂಸರ್ಗಃ । ತತ್ರ ಪ್ರಾಯಶ್ಚಿತ್ತಾರ್ಥಸ್ಯ ಪುರೋಡಾಶಸ್ಯ ವೀತಿಗುಣಯುಕ್ತೋಽಗ್ನಿರ್ದೇವತಾ । ಅನ್ಯತ್ ಪೂರ್ವವದ್ವ್ಯಾಖ್ಯೇಯಮ್ ॥

ಹದಿನೆಂಟನೆಯ ಪ್ರಶ್ನೋತ್ತರವನ್ನು ವಿವರಿಸುವರು—ಆಹವನೀಯ ಮತ್ತು ಗಾರ್ಹಪತ್ಯ ಎಂಬ ಅಗ್ನಿಗಳು (ಅಥವಾ ಅವುಗಳಲ್ಲಿರುವ ಕೆಂಡಗಳು) ಕಾರಣಾಂತರಗಳಿಂದ ಪರಸ್ಪರ ಮಿಶ್ರಿತವಾದರೆ ಎಂದರೆ ಒಂದರಲ್ಲೊಂದು ಸೇರಿಹೋದರೆ ಆಗ ಏನು ಮಾಡಬೇಕು ಎಂದರೆ, ಹಿಂದೆ ಹೇಳಿದಂತೆ ಅಷ್ಟಾಕಪಾಲಸಹಿತವಾದ ಪುರೋಡಾಶವನ್ನು ಆಹವನೀಯಾಗ್ನಿಯಲ್ಲಿ ಪುರೋನುವಾಕ್ಯಾಯಾಜ್ಯಾ ಮಂತ್ರಪುರಸ್ಸರವಾಗಿ ಹೋಮಮಾಡಬೇಕು. ಇದರಲ್ಲಿ ಅಗ್ನ ಆಯಾಹಿ ವೀತಯೇ (ಋ. ಸಂ. ೬-೧೬-೧೦) ಮತ್ತು ಯೋ ಅಗ್ನಿಂ ದೇವವೀತಯೇ (ಋ. ಸಂ. ೧-೧೨-೧೦) ಎಂಬ ಈ ಎರಡು ಋಕ್ಕುಗಳು ಯಾಜ್ಯಾಪುರೋನುವಾಕ್ಯಾ ಮಂತ್ರಗಳು. ಅಥವಾ ಹಿಂದೆ ಹೇಳಿದಂತೆ ಕೇವಲ ಅಗ್ನಯೇ ವೀತಯೇ ಸ್ವಾಹಾ ಎಂಬ ಮಂತ್ರದಿಂದ ಪುರೋಡಾಶವನ್ನು ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಇದು ಪ್ರಾಯಶ್ಚಿತ್ತ ವಿಧಾನವು.

**ತದಾಹುರ್ಯಸ್ಯ ಸರ್ವ ಏವಾಗ್ನಯೋ ಮಿಥಃ ಸಂಸೃಜ್ಯೇರನ್ ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇ ವಿವಿಚಯೇಽಷ್ಟಾಕಪಾಲಂ ಪುರೋಳಾಶಂ ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ಸ್ವರ್ಣವಸ್ತೋರುಷಸಾಮರೋಚಿ ತ್ವಾಮಗ್ನೇ ಮಾನುಷೀರೀಳತೇ ವಿಶ ಇತ್ಯಾಹುತಿಂ ವಾಽಹವನೀಯೇ ಜುಹುಯಾದಗ್ನಯೇ ವಿವಿಚಯೇ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ ॥**

ಏಕೋನವಿಂಶೇ ಪ್ರಶ್ನೋತ್ತರೇ ದರ್ಶಯತಿ—ಆಹವನೀಯಗಾರ್ಹಪತ್ಯದಕ್ಷಿಣಾಗ್ನೀನಾಂ ಸರ್ವೇಷಾಂ ಪರಸ್ಪರಸಂಸರ್ಗೇ ಸತಿ ವಿವಿಚಿಗುಣಯುಕ್ತೋಽಗ್ನಿಃ ಪುರೋಡಾಶದೇವತಾ । ಅನ್ಯತ್ ಪೂರ್ವವದ್ವ್ಯಾಖ್ಯೇಯಮ್ ॥

ಹತ್ತೊಂಭತ್ತನೆಯ ಪ್ರಶ್ನೋತ್ತರವನ್ನು ವಿವರಿಸುವರು—ಆಹವನೀಯ ಮತ್ತು ಗಾರ್ಹಪತ್ಯ ಎಂಬ ಎರಡು ಅಗ್ನಿಗಳ ಸಂಸರ್ಗ ಪ್ರಾಯಶ್ಚಿತ್ತಿಯನ್ನು ಹೇಳಲಾಯಿತು. ಆದರೆ ಆಹವನೀಯ, ಗಾರ್ಹಪತ್ಯ ಮತ್ತು ದಕ್ಷಿಣಾಗ್ನಿ ಎಂಬ ಮೂರು ಅಗ್ನಿಗಳೂ ಪರಸ್ಪರ ಮಿಶ್ರಿತವಾದರೆ ಮುಂದೆ ಹೇಳುವಂತೆ ಮಾಡಬೇಕು. ಅಷ್ಟಾಕಪಾಲಸಹಿತವಾದ ಪುರೋಡಾಶವನ್ನು ಯಾಜ್ಯಾಪುರೋನುವಾಕ್ಯಾ ಮಂತ್ರಪುರಸ್ಸರವಾಗಿ ಆಹವನೀಯಾಗ್ನಿಯಲ್ಲಿ ಹಿಂದೆ ಹೇಳಿದಂತೆ ಹೋಮಮಾಡಬೇಕು. ಸ್ವರ್ಣವಸ್ತೋರುಷಸಾಮರೋಚಿ (ಋ. ಸಂ. ೭-೧೦-೨) ಮತ್ತು ತ್ವಾಮಗ್ನೇಮಾನುಷೀರೀಳತೇ ವಿಶಃ (ಋ. ಸಂ. ೫-೮-೩) ಎಂಬ ಋಕ್ಕುಗಳೇ ಇಲ್ಲಿ ಯಾಜ್ಯಾನುವಾಕ್ಯಾ ಮಂತ್ರಗಳು. ಅಥವಾ ಕೇವಲ ಪುರೋಡಾಶವನ್ನು ಅಗ್ನಯೇ ವಿವಿಚಯೇ ಸ್ವಾಹಾ ಎಂದು ಆಹವನೀಯಾಗ್ನಿಯಲ್ಲಿ ಹೋಮ ಮಾಡಬೇಕು. ಇದೇ ಪ್ರಾಯಶ್ಚಿತ್ತಿಯು.

**ದಾಹುರ್ಯಸ್ಯಾಗ್ನಯೋಽನ್ಯೈರಗ್ನಿಭಿಃ ಸಂಸೃಜ್ಯೇರನ್ ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇ ಕ್ಷಾಮವತೇಽಷ್ಟಾಕಪಾಲಂ ಪುರೋ-**

ಳಾಶಂ ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ಅಕ್ರಂದದಗ್ನಿಸ್ತನಯನ್ನಿವ ದ್ಯೌರಥಾ ಯಥಾ ನಃ ಪಿತರಃ ಪರಾಸ ಇತ್ಯಾಹುತಿಂ ವಾಽಹವನೀಯೇ ಜುಹುಯಾದಗ್ನಯೇ ಕ್ಷಾಮವತೇ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ

ನಿಂಶೇ ಪ್ರಶ್ನೋತ್ತರೇ ದರ್ಶಯತಿ—ಯಸ್ಯಾಗ್ನಿಹೋತ್ರಿಣಃ ಸಂಬಂಧಿನಃ ಆಹವನೀಯಾದ್ಯಗ್ನಯೋಽನ್ಯದೀಯೈರಾಹವನೀಯಾದಿಭಿರ್ಲೌಕಿಕಾಗ್ನಿಭಿರ್ವಾ ಸಂಸೃಜ್ಯೇರಂಸ್ತಸ್ಯ ಪ್ರಾಯಶ್ಚಿತ್ತೀಯೇ ಪುರೋಡಾಶೇ ಕ್ಷಾಮವದ್ಗುಣಯುಕ್ತೋಽಗ್ನಿರ್ದೇವತಾ । ಅನ್ಯತ್ ಪೂರ್ವವದ್ವ್ಯಾಖ್ಯೇಯಮ್ ॥

ಇಪ್ಪತ್ತನೇ ಪ್ರಶ್ನೋತ್ತರವನ್ನು ವಿವರಿಸುವರು—ಯಜ್ಞದಲ್ಲಿ ಉಪಯೋಗಿಸುವ ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿಗಳು ಇತರ ಸಾಧಾರಣ ಅಗ್ನಿಗಳೊಡನೆ ಸಂಸರ್ಗವಾದಲ್ಲಿ ಆಗ ಹಿಂದಿನಂತೆಯೇ ಅಷ್ಟಾಕಪಾಲಸಹಿತವಾದ ಪುರೋಳಾಶವನ್ನು ಯಾಜ್ಯಾನುವಾಕ್ಯಾಮಂತ್ರಪುರಸ್ಸರವಾಗಿ ಅಗ್ನಯೇ ಕ್ಷಾಮವತೆ ಎಂದು ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು ಇಲ್ಲಿ **ಅಕ್ರಂದದಗ್ನಿಃ ಸ್ತನಯನ್ನಿವ ದ್ಯೌಃ** (ಋ. ಸಂ. ೧೦-೪೫-೪) ಮತ್ತು **ಅಥಾ ಯಥಾ ನಃ ಪಿತರಃ ಪರಾಸಃ** (ಋ. ಸಂ. ೪-೨-೧೬) ಎಂಬ ಋಕ್ಕುಗಳು ಯಾಜ್ಯಾಪುರೋನು ವಾಕ್ಯಾ ಮಂತ್ರಗಳು. ಇವುಗಳನ್ನುಪಯೋಗಿಸಿ ಹೋಮ ಮಾಡಬೇಕು. ಅಥವಾ ಯಾಜ್ಯಾಪುರೋನುವಾಕ್ಯಾಮಂತ್ರಗಳನ್ನು ಪಠಿಸದೆ ಕೇವಲ **ಅಗ್ನಯೇ ಕ್ಷಾಮವತೇ ಸ್ವಾಹಾ** ಎಂದು ಹೇಳಿ ಪುರೋಡಾಶವನ್ನು ಆಹವನೀಯಾಗ್ನಿಯಲ್ಲಿ ಹೋಮ ಮಾಡಬೇಕು. ಇದೇ ಪ್ರಾಯಶ್ಚಿತ್ತಿವಿಧಾನವು.

---

*English Translation*

**(The penances for a firebrand taken from a sacred fire, for mingling the sacred fires with one another, or with profane fires.)**

They ask, Ifthey take fire from that belonging to an Agnihotri, what is the penance for it? Should another Agni be at hand, then he should put him in the place of the former which has been taken. Were this not the case, then he ought to portion out to Agni Agnivat a Purodasa consisting of eight places kapalas. The Anuvakya and Yajya required for this purpose are, agnina agnih samidhyate (fire is kindled by fire, 1, 12, 6); tvam hy agne agnina (8, 43, 14). Or he may omit the Anuvakya and Yajya verses and simply throw melted butter into the Ahavaniya, under the recital of the words, to Agni Agivat Svaha. This is the penance for it.

They ask, Wnen some one's Ahavaniya and Garhapatya fires should become mutually mingled together, what is the penance for it? One must portion out to Agni viti a Purodasa consisting of eight pieces, under the recital of the following Anuvakva and Yajya verses; agna ayahi vitaye (6, 16, 10) Yo aginam devatitaye (1, 12, 9). Or he may simply sacrifice melted butter under the recital of, to Agni viti Svaha, in the Ahavaniya fire. This is the penance for it.

They ask, When all the three fires of an Agnihotri should become mutually mingled together, what is the penance for it? One must portion out to Agni vivichi—Agni the separator—a Purodasa consisting of eight pieces, and repeat the following Anuvakya and Yajya verses, svarna vastor ushasam arothi (7, 10, 2); tvam agne manushir ilate visnh (5, 8, 3). Or he may simply offer melted butter under the recital of, to Agni vivichi Svaha! in the Ahavaniya fire. This is the penance for it.

They ask, When some one's fires are mingled together with other fires, what is the penance for it? One must portion out to Agni kshmavat a Purodasa consisting of eight pieces under the recital of the following Anuvakya and Yajya; akrandad agnis tanayan (10, 45, 4); adha yatha nah pitarah parasah (4, 2, 16). Or he may simply sacrifice melted butter under the recital of, to Agni kshmavat Svaha! in the Ahavaniya fire. This is the penance for it.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ದ್ವಾತ್ರಿಂಶಾಧ್ಯಾಯೇ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೆರಡನೆಯ ಅಧ್ಯಾಯದಲ್ಲಿ ಐದನೆಯ ಖಂಡವು
ಸಮಾಪ್ತವಾದುದು.



# ಅಥ ದ್ವಾತ್ರಿಂಶಾಧ್ಯಾಯೇ ಷಷ್ಠಃ ಖಂಡಃ

## ಮೂವತ್ತೆರಡನೆಯ ಅಧ್ಯಾಯದಲ್ಲಿ ಆರನೆಯ ಖಂಡವು

---

[ಯಜ್ಞಾಗ್ನಿಯು ಎಂದರೆ, ಆಹವನೀಯ ಗಾರ್ಹಪತ್ಯ, ದಕ್ಷಿಣಾಗ್ನಿ ಎಂಬ ಅಗ್ನಿಗಳಲ್ಲಿ ಯಾವುದಾದರೂ ಇತರ ಎಂದರೆ ಗ್ರಾಮದ ಮನೆಗಳಲ್ಲಿ ಇರುವ ಅಗ್ನಿ. ಅರಣ್ಯದಲ್ಲಿರುವ ದಾವಾಗ್ನಿ ಅಥವಾ ಅಂತರಿಕ್ಷದಲ್ಲಿರುವ ವೈದ್ಯುತಾಗ್ನಿ (ಸಿಡಿಲು) ಮುಂತಾದವುಗಳೊಡನೆ ಸಂಸರ್ಗ (ಮಿಶ್ರ) ವಾದಲ್ಲಿ ಅವುಗಳಿಗಾಗಿ ಅನುಸರಿಸಬೇಕಾದ ಪ್ರಾಯಶ್ಚಿತ್ತವು]

ತದಾಹುರ್ಯಸ್ಯಾಗ್ನಯೋ ಗ್ರಾಮ್ಯೇಣಾಗ್ನಿನಾ ಸಂದಹ್ಯೇರನ್ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇ ಸಂವರ್ಗಾಯಾಷ್ಟಾಕಪಾಲಂ ಪುರೋಳಾಶಂ ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ಕುವಿತ್ಸು ನೋ ಗವಿಷ್ಟಯೇ ಮಾ ನೋ ಅಸ್ಮಿನ್ಮಹಾಧನ ಇತ್ಯಾಹುತಿಂ ವಾಹವನೀಯೇ ಜುಹುಯಾದಗ್ನಯೇ ಸಂವರ್ಗಾಯ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ ||

**ಏಕವಿಂಶೇ ಪ್ರಶ್ನೋತ್ತರೇ ದರ್ಶಯತಿ—ಗ್ರಾಮ್ಯೋಽಗ್ನಿರ್ಮಹಾನಸಾದಿಗತಃ | ಸ ಕದಾಚಿತ್ಪ್ರಮಾದೇನ ಪ್ರವೃದ್ಧೋ ಗ್ರಾಮಗತಾನಿ ಗೃಹಾಣಿ ದಹನ್ನಗ್ನಿಹೋತ್ರಶಾಲಾಗತಾನಾಹವನೀಯಾದೀನಗ್ನೀನ್ ಸಮ್ಯಗ್ದಹತಿ ತದಾನೀಂ ಪ್ರಾಯಶ್ಚಿತ್ತಸ್ಯ ಪುರೋಡಾಶಸ್ಯ ಸಂವರ್ಗಗುಣಯುಕ್ತೋಽಗ್ನಿರ್ದೇವತಾ | ಅನ್ಯತ್ ಪೂರ್ವವತ್ ||**

ಇಪ್ಪತ್ತೊಂದನೇ ಪ್ರಾಯಶ್ಚಿತ್ತವಿಧಾನವನ್ನು ವಿವರಿಸುವರು—ಗ್ರಾಮದಲ್ಲಿರುವ ಅಗ್ನಿಯು ಎಂದರೆ ಅಡಿಗೇಮನೆ ಮುಂತಾದ ಸ್ಥಳಗಳಲ್ಲಿ ಇರುವ ಅಗ್ನಿಯು. ಈ ಅಗ್ನಿಯು ಕಾರಣಾಂತರದಿಂದ (ಎಂದರೆ ಪ್ರಮಾದದಿಂದ) ಅಕಸ್ಮಾತ್ತಾಗಿ ದೊಡ್ಡದಾಗಿ ಹತ್ತಿಕೊಂಡು ಮನೆಯನ್ನು ಅನೇಕ ವೇಳೆ ಗ್ರಾಮವನ್ನು ಸಹ ದಹಿಸಿ ಭಸ್ಮಮಾಡುವುದು. ಆಗ ಯಜ್ಞಶಾಲೆಗೂ ವ್ಯಾಪಿಸಿ ಅದನ್ನೂ ದಹಿಸಿ ಅಲ್ಲಿರುವ ಯಜ್ಞಾಗ್ನಿಗಳೊಡನೆ ಸಂಸರ್ಗವಾಗುವ ಸಂಭವವುಂಟು. ಹೀಗೇನಾದರೂ ಸಂಭವಿಸಿದರೆ ಆಗ ಯಾಜ್ಯಾನುವಾಕ್ಯಾಮಂತ್ರಪುರಸ್ಸರವಾಗಿ ಅಷ್ಟಾಕಪಾಲಸಹಿತವಾದ ಪುರೋಡಾಶವನ್ನು ಅಗ್ನಯೇ ಸಂವರ್ಗಾಯ ಎಂದು ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಇಲ್ಲಿ **ಕುವಿತ್ಸು ನೋ ಗವಿಷ್ಟಯೇ** (ಋ. ಸಂ. ೮-೭೫-೧೧) ಮತ್ತು **ಮಾ ನೋ ಅಸ್ಮಿನ್ಮಾಹಾಧನೇ** (ಋ. ಸಂ. ೮-೭೫-೧೨) ಎಂಬ ಋಕ್ಕುಗಳು ಯಾಜ್ಯಾಪುರೋನುವಾಕ್ಯಾಮಂತ್ರಗಳು. ಅಥವಾ ಯಾಜ್ಯಾಪುರೋನುವಾಕ್ಯಾಮಂತ್ರರಹಿತವಾಗಿ ಕೇವಲ **ಅಗ್ನಯೇ ಸಂವರ್ಗಾಯ ಸ್ವಾಹಾ** ಎಂದು ಉಚ್ಚರಿಸಿ ಪುರೋಡಾಶವನ್ನು ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಈ ವಿಷಯದಲ್ಲಿ ಇದೇ ಪ್ರಾಯಶ್ಚಿತ್ತಿಕ್ರಮವು.

ತದಾಹುರ್ಯಸ್ಯಾಗ್ನಯೋ ದಿವ್ಯೇನಾಗ್ನಿನಾ ಸಂಸೃಜ್ಯೇರನ್ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇಽಪ್ಸುಮತೇಽಷ್ಟಾಕಪಾಲಂ ಪುರೋ-

**ಳಾಶಂ ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ಅಪ್ಸ್ವಗ್ನೇ ಸಧಿಷ್ಟವ ಮಯೋ ದಧೇ ಸೋಧಿರಃ ಪೂತದಕ್ಷ ಇತ್ಯಾಹುತಿಂ ವಾಹವನೀಯೇ ಜುಹುಯಾದಗ್ನಯೇಽಪ್ಸುಮತೇ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ॥**

ದ್ವಾವಿಂಶೇ ಪ್ರಶ್ನೋತ್ತರೇ ದರ್ಶಯತಿ—ದಿವ್ಯಾಗ್ನಿರ್ವೈದ್ಯುತಃ । ಅಶನಿಪಾತೇ ಸತಿ ತದೀಯೇನಾಗ್ನಿನಾಽಽಹವನೀಯಾದೀನಾಂ ಸಂಸರ್ಗೇ ಪ್ರಾಯಶ್ಚಿತ್ತಪುರೋಡಾಶಸ್ಯಾಪ್ಸುಮಾನಗ್ನಿರ್ದೇವತಾ ॥ ಅನ್ಯತ್ ಪೂರ್ವವತ್ ॥

ಇಪ್ಪತ್ತೆರಡನೆಯ ಪ್ರಶ್ನೋತ್ತರವನ್ನು ವಿವರಿಸುವರು—ಅಂತರಿಕ್ಷದಲ್ಲಿ ಮೇಘಗಳು ಆವರಿಸಿರುವಾಗ ಗುಡುಗು ಸಿಡಿಲು ಮುಂತಾದವುಗಳೊಡನೆ ಉಂಟಾಗುವ ಮಿಂಚು ಅಥವಾ ಅಗ್ನಿಗೆ ವೈದ್ಯುತಾಗ್ನಿಯೆಂದು ಹೆಸರು. ಈ ವೈದ್ಯುತಾಗ್ನಿಯು ಸಂಭವಿಸುವ ಕಾಲದಲ್ಲಿ ಯಜ್ಞಾಗ್ನಿಯೊಡನೆ ಸಂಸರ್ಗವಾದರೆ ಅದಕ್ಕೆ ಪ್ರಾಯಶ್ಚಿತ್ತಿ ಕ್ರಮವೇನು ಎಂದರೆ, ಹಿಂದೆ ಹೇಳಿದಂತೆ ಅಷ್ಟಾಕಪಾಲಸಹಿತವಾದ ಪುರೋಡಾಶವನ್ನು ಯಾಜ್ಯಾಪುರೋನುವಾಕ್ಯಾ ಪುರಸ್ಸರವಾಗಿ ಅಗ್ನಯೇಽಪ್ಸುಮತೇ ಎಂಬ ಅಗ್ನಿಯನ್ನುದ್ದೇಶಿಸಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಇಲ್ಲಿ **ಅಪ್ಸ್ವಗ್ನೇ ಸಧಿಷ್ಟವ** (ಋ. ಸಂ. ೮–೪೩–೯) ಮತ್ತು **ಮಯೋ ದಧೇ ಮೇಧಿರಃ ಪೂತದಕ್ಷಃ** (ಋ. ಸಂ. ೩–೧–೩) ಎಂಬ ಋಕ್ಕುಗಳು ಯಾಜ್ಯಾಪುರೋನುವಾಕ್ಯಾಮಂತ್ರಗಳು. ಅಥವಾ ಯಾಜ್ಯಾಪುರೋನುವಾಕ್ಯಾ ಮಂತ್ರಗಳನ್ನು ಉಚ್ಚರಿಸದೆ ಕೇವಲ **ಅಗ್ನಯೇಽಪ್ಸುಮತೇ ಸ್ವಾಹಾ** ಎಂಬ ಮಂತ್ರವನ್ನು ಹೇಳಿ ಪುರೋಡಾಶವನ್ನು ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು.

**ತದಾಹುರ್ಯಸ್ಯಾಗ್ನಯಃ ಶವಾಗ್ನಿನಾ ಸಂಸೃಜ್ಯೇರನ್ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇ ಶುಚಯೇಽಷ್ಟಾಕಪಾಲಂ ಪುರೋಡಾಶಂ ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ಅಗ್ನಿಃ ಶುಚಿವ್ರತತಮ ಉದಗ್ನೇ ಶುಚಯಸ್ತವೇತ್ಯಾಹುತಿಂ ವಾಽಹವನೀಯೇ ಜುಹುಯಾದಗ್ನಯೇ ಶುಚಯೇ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ ॥**

ತ್ರಯೋವಿಂಶೇ ಪ್ರಶ್ನೋತ್ತರೇ ದರ್ಶಯತಿ—ಪ್ರೇತದಹನಾಯ ಪ್ರವೃತ್ತೋಽಗ್ನಿಃ ಶವಾಗ್ನಿಸ್ತತ್ಸಂಸರ್ಗೇ ಪುರೋಡಾಶಸ್ಯ ಶುಚಿಗುಣಯುಕ್ತೋಽಗ್ನಿರ್ದೇವತಾ । ಅನ್ಯತ್ ಪೂರ್ವವದ್ವ್ಯಾಖ್ಯೇಯಮ್ ॥

ಇಪ್ಪತ್ತಮೂರನೆಯ ಪ್ರಶ್ನೋತ್ತರವನ್ನು ವಿವರಿಸುವರು—ಪ್ರೇತಸಂಸ್ಕಾರಕ್ಕಾಗಿ ಶವವನ್ನು ಸುಡಲು ಜ್ವಲಿಸುತ್ತಿರುವ ಅಗ್ನಿಗೆ ಶವಾಗ್ನಿಯೆಂದು ಹೆಸರು. ಈ ಶವಾಗ್ನಿಯು (ಸ್ಮಶಾನದಲ್ಲಿರುವ) ಕಾರಣಾಂತರದಿಂದ ಯಜ್ಞಾಗ್ನಿಯೊಡನೆ ಸಂಸರ್ಗವಾದಲ್ಲಿ ಏನು ಮಾಡಬೇಕು ಎಂದರೆ, ಅಷ್ಟಾಕಪಾಲಸಹಿತವಾದ ಪುರೋಳಾಶವನ್ನು **ಅಗ್ನಯೇ ಶುಚಯೇ** ಎಂಬ ಅಗ್ನಿಯನ್ನುದ್ದೇಶಿಸಿ ಯಾಜ್ಯಾನುವಾಕ್ಯಾಪುರಸ್ಸರವಾಗಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಇಲ್ಲಿ **ಅಗ್ನಿಃ ಶುಚಿವ್ರತತಮ** (ಋ.ಸಂ. ೮–೪೪–೨೧) ಮತ್ತು **ಉದಗ್ನೇ ಶುಚಯಸ್ತವ** (ಋ. ಸಂ. ೮-೪೪.೧೭) ಎಂಬ ಋಕ್ಕುಗಳು ಯಾಜ್ಯಾಪುರೋನುವಾಕ್ಯಾಮಂತ್ರಗಳಾಗಿರುವವು. ಅಥವಾ ಈ ಯಾಜ್ಯಾಪುರೋನುವಾಕ್ಯಾಮಂತ್ರಗಳನ್ನು ಹೇಳದೆ ಹಾಗೆಯೇ **ಅಗ್ನಯೇ**

**ಶುಚಯೇ ಸ್ವಾಹಾ** ಎಂಬ ಮಂತ್ರದಿಂದ ಪುರೋಡಾಶವನ್ನು ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಇದೇ ಇಲ್ಲಿ ಅನುಸರಿಸಬೇಕಾದ ಪ್ರಾಯಶ್ಚಿತ್ತವಿಧಾನವು.

ತದಾಹುರ್ಯಸ್ಯಾಗ್ನಯ ಆರಣ್ಯೇನಾಗ್ನಿನಾ ಸಂದಹ್ಯೇರನ್ಕಾ ತತ್ರ ಪ್ರಾಯಶ್ಚಿತ್ತಿರಿತಿ ಸಮೇವಾಽಽರೋಪಯೇದರಣೀ ವೋಲ್ಮುಕಂ ವಾ ನೋಕ್ಷಯೇದ್ಯದ್ಯಾಹವನೀಯಾದ್ಯದಿ ಗಾರ್ಹಪತ್ಯಾದ್ಯದಿ ನ ಶಕ್ನುಯಾತ್ಸೋಽಗ್ನಯೇ ಸಂವರ್ಗಾಯಾಷ್ಟಾಕಪಾಲಂ ಪುರೋಳಾಶಂ ನಿರ್ವಪೇತ್ತಸ್ಯೋಕ್ತೇ ಯಾಜ್ಯಾನುವಾಕ್ಯೇ ಆಹುತಿಂ ವಾಽಽಹವನೀಯೇ ಜುಹುಯಾದಗ್ನಯೇ ಸಂವರ್ಗಾಯ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ ॥

ಚತುರ್ವಿಂಶೇ ಪ್ರಶ್ನೋತ್ತರೇ ದರ್ಶಯತಿ—ದಾವಾಗ್ನಿರರಣ್ಯಾದಾಗತ್ಯಾಗ್ನಿಹೋತ್ರಶಾಲಾಂ ದಹನ್ನಾಹವನೀಯಾದೀನ್ಯದಾ ಸಮ್ಯಗ್ದಹತಿ ತದಾನೀಂ ತದ್ದಹನಾತ್ಪೂರ್ವಮೇವಾಗ್ನೀನರಣೀ ದ್ವಯೋರರಣ್ಯೋಃ ಸಹ ಸಮಾರೋಪಯೇದೇವ । ತದಶಕ್ತೌ ಗಾರ್ಹಪತ್ಯಾಹವನೀಯಾದುಲ್ಮುಕಂ ನೋಕ್ಷಯೇತ್ । ಸಹಸೋಲ್ಮುಕಮಾದಾಯ ಪರಿತೋ ಗಚ್ಛೇತ್ । ಸಮಾರೋಪಣಂ ವೋಲ್ಮುಕಮೋಚನಂ ವೇತಿ ಪಕ್ಷದ್ವಯಸ್ಯಾಗ್ನಿದಾಹತ್ವರಯಾ ಯದಾ ನ ಶಕ್ತಿಸ್ತದಾ ಸಂವರ್ಗಗುಣಯುಕ್ತೋಽಗ್ನಿಃ ಪುರೋಡಾಶದೇವತಾ । ತದೀಯಯಾಜ್ಯಾನುವಾಕ್ಯೇ ಚ ಪೂರ್ವಮೇವಾಭಿಹಿತೇ ॥

ಇಪ್ಪತ್ತನಾಲ್ಕನೆಯ ಪ್ರಶ್ನೋತ್ತರವನ್ನು ವಿವರಿಸುವರು—ಅರಣ್ಯದಲ್ಲಿ ಉದ್ಭವಿಸಿ ಕಾಡಿನಲ್ಲಿರುವ ವೃಕ್ಷಗಳನ್ನೆಲ್ಲಾ ದಹಿಸುವ ಅಗ್ನಿಗೆ ದಾವಾಗ್ನಿಯೆಂದು ಹೆಸರು. ಇಂತಹ ದಾವಾಗ್ನಿಯು (ಕಾಡುಕಿಚ್ಚು) ಸುತ್ತಮುತ್ತಲಿನ ಅರಣ್ಯಾದಿಗಳನ್ನು ದಹಿಸುತ್ತಾ ಗ್ರಾಮದ ಸಮೀಪದಲ್ಲಿರುವ ಯಜ್ಞ ಶಾಲೆಗೂ ವ್ಯಾಪಿಸಿ ಅದನ್ನು ಭಸ್ಮಮಾಡುವಾಗ ಯಜ್ಞಶಾಲೆಯಲ್ಲಿರುವ ಯಜ್ಞಾಗ್ನಿಗಳೊಡನೆ ಸಂಸರ್ಗವುಂಟಾಗುವುದು ಸಹಜವೇ ಆಗಿದೆ. ಇಂತಹ ಸಂದರ್ಭದಲ್ಲಿ ಈ ದಾವಾಗ್ನಿಯು ಯಜ್ಞಶಾಲೆಯನ್ನು ವ್ಯಾಪಿಸುವುದಕ್ಕೆ ಮುಂಚೆಯೇ ಅಗ್ನಿಮಥನಮಾಡುವ ಎರಡು ಅರಣಿಗಳಲ್ಲಿ ಹಾಕಿ ಹೊರಕ್ಕೆ ತರಬೇಕು. ಇಲ್ಲದಿದ್ದರೆ ಆ ಉರಿಯುತ್ತಿರುವ ಯಜ್ಞಾಗ್ನಿಗಳಿಂದ ಒಂದು ಕೊಳ್ಳಿಯನ್ನಾದರೂ ತಂದು ಬೇರೆ ಕಡೆ ಇಟ್ಟು ಯಜ್ಞಾಗ್ನಿಯನ್ನು ಸಮಾರೋಪಣೆ ಮಾಡಬೇಕು. ಅಗ್ನಿಯು ದಹಿಸುತ್ತಿರುವಾಗ ಆತುರದಲ್ಲಿ ಅದನ್ನು ಮಾಡುವುದಕ್ಕೆ ಅವಕಾಶವಿಲ್ಲದಿದ್ದರೆ ಹಿಂದೆ ಹೇಳಿದ ಕ್ರಮದಂತೆ ಸಂವರ್ಗಗುಣಯುಕ್ತನಾದ ಅಗ್ನಿಯಲ್ಲಿ ಮಾಡುವ ಪ್ರಾಯಶ್ಚಿತ್ತ ಕ್ರಮದಂತೆ ಅಷ್ಟಾಕಪಾಲಸಹಿತವಾದ ಪುರೋಡಾಶವನ್ನು ಯಾಜ್ಯಾನುವಾಕ್ಯಾ ಪುರಸ್ಸರವಾಗಿ ಆಹವನೀಯಾಗ್ನಿಯಲ್ಲಿ ಹೋಮ ಮಾಡಬೇಕು. ಹಿಂದೆ ಹೇಳಿದಂತೆ ಇಲ್ಲಿಯೂ **ಕುವಿತ್ಸು ನೋ ಗವಿಷ್ಟಯೇ** (ಋ. ಸಂ. ೮-೭೫-೧೧) ಮತ್ತು **ಮಾ ನೋ ಅಸ್ಮಿನ್ಮಹಾಧನೇ** (ಋ. ಸಂ. ೮-೭೫-೧೨) ಎಂಬ ಯಾಜ್ಯಾಪುರೋನುವಾಕ್ಯಾ ಮಂತ್ರಗಳನ್ನುಚ್ಚರಿಸಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಅಥವಾ ಕೇವಲ **ಅಗ್ನಯೇ ಸಂವರ್ಗಾಯ ಸ್ವಾಹಾ** ಎಂಬ ಮಂತ್ರ ಪೂರ್ವಕವಾಗಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಈ ವಿಧಾನವನ್ನು ಹಿಂದೆಯೇ ಹೇಳಲಾಗಿದೆ. ಇದೇ ಪ್ರಾಯಶ್ಚಿತ್ತಿಯು.

*English Translation*

**(The penance for a sacred fire becoming mixed with those of a conflagration in a village, or in a wood, or with lightning, or with those burning a corpse.)**

They ask, when the fires of an Agnihotri should burn together with the fire of a general conflagration in the village, what is the penance for it ? He ought to portion out a Purodasa consisting of eight pieces to Agni Samvarga (Agni the mingler) under the recital of the following Anuvakya and Yajya : kuvit su no gavishtaye (8, 64, 11), ma no asmin mahadhane (8, 64, 12). Or he may (simply) sacrifice (melted butter) under the recital of, to Agni Samvarga Svaha ! in the Ahavaniya fire. This the penance for it.

They ask, when the fires of an Agnihotri (have been struck) by lightning and become mingled with it, what is the penance for it ? He must offer to Agni apsumat (water Agni) a Purodasa consisting of eight pieces under the recital of the following Anuvakya and Yajya : Apsv agne (8, 43, 9) ; mayo dadhe (3, 1, 3). Or he may (simply) sacrifice (melted butter) under the recital of, to Agni apsumat Svaha ! in the Ahavaniya fire. This is the penance for it.

They ask, When the fires of an Agnihotri should become mingled with the fire which burns a corpse, what is the penance for it ? He must offer to Agni suchi a Purodasa consisting of eight pieces under the recital of the following Anuvakya and Yajya : Agnih suchivratatamah (8, 44, 21) ; ud agne suchayas tava (8, 44, 17). Or he may (simply) sacrifice (melted butter) under the recital of, to Agni suchi Svaha ! in the Ahavaniya fire. This is the penance for it.

They ask, When the fires of an Agnihotri should burn together with those of a forest conflagration, what is the penance for it ? He shall catch the fires with the Aranis (the two wooden sticks used for producing fire), or (if this be impossible) he should save a firebrand from either the Ahavaniya or Garhapatya. Were this impossible, then he must offer to Agni Samvarga (Agni

the mixer) a Purodasa consisting of eight pieces under the recital of the abovementioned Anuvakya and Yajya (which belong to the Agni Samvarga). Or he may (simply) sacrifice (melted butter) under the recital of, to Agni Samvarga Svaha! in the Ahavaniya fire. This is the penance for it.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ದ್ವಾತ್ರಿಂಶಾಧ್ಯಾಯೇ ಷಷ್ಠಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೆರಡನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವಾದುದು.



## ಅಥ ದ್ವಾತ್ರಿಂಶಾಧ್ಯಾಯೇ ಸಪ್ತಮಃ ಖಂಡಃ

### ಮೂವತ್ತೆರಡನೆಯ ಅಧ್ಯಾಯದಲ್ಲಿ ಏಳನೆಯ ಖಂಡವು

[ಅಗ್ನಿಹೋತ್ರ ಮಾಡುವ ಪುರುಷನು ಕಾರಣಾಂತರದಿಂದ ದುಃಖಾಶ್ರುವನ್ನು (ಕಣ್ಣೀರನ್ನು) ಸುರಿಸಿದಲ್ಲಿ ಅಥವಾ ತನ್ನ ಪ್ರತಿಜ್ಞೆಯು ಭಂಗವಾದಲ್ಲಿ, ಅಥವಾ ದರ್ಶಪೂರ್ಣಮಾಸೇಷ್ಟಿಯನ್ನು ಆಚರಿಸದೆ ತಪ್ಪಿದಲ್ಲಿ ಅಥವಾ (ಗಾರ್ಹಪತ್ಯ) ಅಗ್ನಿಯು ಆರಿಹೋದಲ್ಲಿ ಅನುಸರಿಸಬೇಕಾದ ಪ್ರಾಯಶ್ಚಿತ್ತವು.]



ತದಾಹುರ್ಯ ಆಹಿತಾಗ್ನಿರುಪವಸಥೇಽಶ್ರು ಕುರ್ವೀತ ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇ ವ್ರತಭೃತೇಽಷ್ಟಾಕಪಾಲಂ ಪುರೋ-ಳಾಶಂ ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ತ್ವಮಗ್ನೇ ವ್ರತಭೃಚ್ಛು-ಚಿರ್ವ್ರತಾನಿ ಬಿಭ್ರದ್ವ್ರತಪಾ ಅದಬ್ಧ ಇತ್ಯಾಹುತಿಂ ವಾಽಽ-ಹವನೀಯೇ ಜುಹುಯಾದಗ್ನಯೇ ವ್ರತಭೃತೇ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ ||

ಪಂಚವಿಂಶೇ ಪ್ರಶ್ನೋತ್ತರೇ ದರ್ಶಯತಿ—ಉಪವಸಥೇ ಯಜನೀಯದಿನಾತ್ ಪೂರ್ವ-ದಿನೇ ಶಿರೋವ್ಯಥಾದಿನಾ ಮೃತಬಂಧುಸ್ಮರಣಾದಿನಾ ವಾ ನೇತ್ರಯೋರಶ್ರುಮೋಚನೇ ಪುರೋಡಾಶಸ್ಯ ವ್ರತಭೃದ್ಗುಣಕೋಽಗ್ನಿರ್ದೇವತಾ । ತ್ವಮಗ್ನೇ ವ್ರತಭೃದಿತ್ಯಾದಿಕೇ ಸೂತ್ರಕಾರೇಣ ಪಠಿತೇ ||

ಇಪ್ಪತ್ತೈದನೆಯ ಪ್ರಶ್ನೋತ್ತರವನ್ನು ವಿವರಿಸುವರು. ಇಲ್ಲಿ ಆಹಿತಾಗ್ನಿಯೆಂದರೆ—ದರ್ಶಪೂರ್ಣಮಾಸಾದಿ ಇಷ್ಟಿಗಳನ್ನು ಮಾಡಿ ಅನಂತರ ಆಜನ್ಮಪರ್ಯಂತರವೂ ಅಗ್ನಿಹೋತ್ರವನ್ನು ಮಾಡಲು ಸಂಕಲ್ಪಿಸಿ ಅದಕ್ಕಾಗಿ ತನ್ನ ನಿವಾಸಸ್ಥಾನವಾದ ಸ್ವಗೃಹದಲ್ಲಿ ಗಾರ್ಹಪತ್ಯ ಎಂಬ ಅಗ್ನಿಯನ್ನಿಟ್ಟುಕೊಂಡು ಅದು ಯಾವಾಗಲೂ ಆರಿಹೋಗದಂತೆ ನೋಡಿಕೊಳ್ಳುತ್ತಾ ಆ ಅಗ್ನಿಯಲ್ಲಿ ಪ್ರತಿದಿನವೂ ಸಾಯಂಪ್ರಾತಃಕಾಲಗಳಲ್ಲಿ ಅಗ್ನಿಹೋತ್ರವನ್ನು ಮಾಡುತ್ತಾ ಅನೃತವನ್ನಾಡದೆ ಸತ್ಕರ್ಮಾನುಷ್ಠಾನವನ್ನು ಮಾಡುತ್ತಾ ಇರುವ ಪುರುಷನು. ಈ ಪುರುಷನನ್ನು ಆಹಿತಾಗ್ನಿಯೆಂದು ಕರೆಯುವರು. ಇಂತಹ ಪುರುಷನು ಯಜ್ಞ ಮಾಡಬೇಕಾದ ಹಿಂದಿನ ದಿನ ಕಾರಣಾಂತರದಿಂದ ದುಃಖಸಂತಪ್ತನಾಗಿ ಕಣ್ಣೀರನ್ನು ಸುರಿಸಿದರೆ ಅದಕ್ಕೆ ಪ್ರಾಯಶ್ಚಿತ್ತವೇನು ? ಇಂತಹ ಸಂದರ್ಭದಲ್ಲಿ ಆ ಪುರುಷನು ಅಷ್ಟಾಕಪಾಲ ಸಹಿತವಾದ ಪುರೋಳಾಶವನ್ನು ಯಾಜ್ಯಾನುವಾಕ್ಯಾಪುರಸ್ಸರವಾಗಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಇಲ್ಲಿ ತ್ವಮಗ್ನೇವ್ರತಭೃಚ್ಛುಚಿಃ (ಅಶ್ವ. ಶ್ರೌ. ಸೂ. ೩-೧೧) ಮತ್ತು ವ್ರತಾನಿ ಬಿಭ್ರದ್ವ್ರತಪಾ (ಅಶ್ವ. ಶ್ರೌ. ಸೂ. ೩-೧೧) ಎಂಬ ಮಂತ್ರಗಳೇ ಯಾಜ್ಯಾನುವಾಕ್ಯಾಮಂತ್ರಗಳು. ಅಥವಾ ಕೇವಲ ಆಜ್ಯದಿಂದಲೇ ಅಗ್ನಯೇ ವ್ರತಭೃತೇ ಸ್ವಾಹಾ ಎಂದು ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಇದೇ ಪ್ರಾಯಶ್ಚಿತ್ತಿಯು.

ತದಾಹುರ್ಯ ಆಹಿತಾಗ್ನಿರುಪವಸಥೇಽವ್ರತ್ಯಮಾಪದ್ಯೇತ ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇ ವ್ರತಪತಯೇಽಷ್ಟಾಕಪಾಲಂ ಪುರೋಳಾಶಂ ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ತ್ವಮಗ್ನೇ ವ್ರತಪಾ ಅಸಿ ಯದ್ವೋ ವಯಂ ಪ್ರಮಿನಾಮ ವ್ರತಾನೀತ್ಯಾಹುತಿಂ ವಾಽಹವನೀಯೇ ಜುಹುಯಾದಗ್ನಯೇ ವ್ರತಪತಯೇ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ ||

ಷಡ್ವಿಂಶೇ ಪ್ರಶ್ನೋತ್ತರೇ ದರ್ಶಯತಿ—ವ್ರತವಿರುದ್ಧಂ ನಿಷಿದ್ಧಾಚರಣಮವ್ರತ್ಯಂ ದಿವಾಸ್ವಾಪಾದಿಕಮಾಪದ್ಯೇತ ಪ್ರಾಪ್ನುಯಾತ್ । ತತ್ರ ವ್ರತಪತಿಗುಣಯುಕ್ತೋಽಗ್ನಿಃ ಪುರೋಡಾಶದೇವತಾ ॥

ಇಪ್ಪತ್ತಾರನೆಯ ಪ್ರಶ್ನೋತ್ತರವನ್ನು ವಿವರಿಸುವರು—ಆಹಿತಾಗ್ನಿಯು ಕಾರಣಾಂತರಗಳಿಂದ ಹಗಲು ನಿದ್ರೆ ಮಾಡುವುದು, ಅಭಕ್ಷ್ಯಭೋಜನ ಮುಂತಾದ ವ್ರತನಿಷಿದ್ಧ ಕರ್ಮಗಳನ್ನು ಮಾಡಿದರೆ ಅದಕ್ಕೆ ಪ್ರಾಯಶ್ಚಿತ್ತವೇನು ? ಎಂದರೆ ಆ ಪುರುಷನು ಅಷ್ಟಾಕಪಾಲ ಸಹಿತವಾದ ಪುರೋಳಾಶವನ್ನು ತ್ವಮಗ್ನೇ ವ್ರತಪಾ ಅಸಿ (ಋ. ಸಂ. ೮-೧೧-೧) ಮತ್ತು ಯದ್ವೋ ವಯಂ ಪ್ರಮಿ (ಋ. ಸಂ. ೧೦-೩-೪) ಎಂಬ ಯಾಜ್ಯಾನುವಾಕ್ಯಾಮಂತ್ರ ಪುರಸ್ಸರವಾಗಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಅಥವಾ ಕೇವಲ ಆಜ್ಯದಿಂದಲೇ ಅಗ್ನಯೇ ವ್ರತಪತಯೇ ಸ್ವಾಹಾ ಎಂದು ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಇದೇ ಪ್ರಾಯಶ್ಚಿತ್ತಿಯು.

ತದಾಹುರ್ಯ ಆಹಿತಾಗ್ನಿರಮಾವಾಸ್ಯಾಂ ಪೌರ್ಣಮಾಸೀಂ ವಾಽತೀಯಾತ್ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇ ಪಥಿಕೃತೇಽಷ್ಟಾಕಪಾಲಂ ಪುರೋಳಾಶಂ ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ವೇತ್ಥಾ

ಹಿ ವೇಥೋ ಅಧ್ವನ ಆ ದೇವಾನಾಮಪಿ ಪಂಥಾಮಗನ್ಮೇತ್ಯಾಹುತಿಂ ವಾಽಹವನೀಯೇ ಜುಹುಯಾದಗ್ನಯೇ ಪಥಿಕೃತೇ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ ||

ಸಪ್ತವಿಂಶೇ ಪ್ರಶ್ನೋತ್ತರೇ ದರ್ಶಯತಿ—ಆಹಿತಾಗ್ನಿರಮಾವಾಸ್ಯೇಷ್ಟಿಂ ಪೌರ್ಣಮಾಸೇಷ್ಟಿಂ ವಾ ಯದಿ ಕದಾಚಿದತಿಕ್ರಾಮೇತ್ತದಾ ಪಥಿಕೃದ್ಗುಣಯುಕ್ತೋಽಗ್ನಿಃ ಪುರೋಡಾಶದೇವತಾ ||

ಇಪ್ಪತ್ತೇಳನೇ ಪ್ರಶ್ನೋತ್ತರವನ್ನು ವಿವರಿಸುವರು—ಆಹಿತಾಗ್ನಿಯಾದವನು ಪ್ರತಿ ಅಮಾವಾಸ್ಯೆಯಲ್ಲಿಯೂ ಅಥವಾ ಪೌರ್ಣಮಾಸಿಯಲ್ಲಿಯೂ ಮಾಡಬೇಕಾದ ದರ್ಶಪೂರ್ಣಮಾಸೇಷ್ಟಿಯನ್ನೂ ಮಾಡದೆ ತಪ್ಪಿದರೂ ಅಥವಾ ಸಕಾಲದಲ್ಲಿಮಾಡದೆ ಕಾಲಾತಿಕ್ರಮಣವಾದ ಮೇಲೆ ಮಾಡಿದರೂ ಅಂತಹ ಸಂದರ್ಭದಲ್ಲಿ ಅದಕ್ಕೆ ಪ್ರಾಯಶ್ಚಿತ್ತಿಯೇನು ಎಂದರೆ, ಆ ಪುರುಷನು ಅಷ್ಟಾಕಪಾಲಸಹಿತವಾದ ಪುರೋಳಾಶವನ್ನು **ವೇತ್ಥಾ ಹಿ ವೇಥೋ ಅಧ್ವನಃ** (ಋ. ಸಂ. ೬-೧೬-೩) ಮತ್ತು **ಆ ದೇವಾನಾಮಪಿ ಪಂಥಾಂ** (ಋ. ಸಂ. ೧೦-೨-೩) ಎಂಬ ಯಾಜ್ಯಾನುವಾಕ್ಯಾಮಂತ್ರಪುರಸ್ಸರವಾಗಿ **ಅಗ್ನಯೇ ಪಥಿಕೃತೇ** ಎಂದು ಅಗ್ನಿಯನ್ನುದ್ದೇಶಿಸಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಅಥವಾ ಕೇವಲ ಆಜ್ಯದಿಂದಲೇ **ಅಗ್ನಯೇ ಪಥಿಕೃತೇ ಸ್ವಾಹಾ** ಎಂದು ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಇದೇ ಪ್ರಾಯಶ್ಚಿತ್ತವಿಧಾನವು.

ತದಾಹುರ್ಯಸ್ಯ ಸರ್ವ ಏವಾಗ್ನಯ ಉಪಶಾಮ್ಯೇರನ್ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇ ತಪಸ್ವತೇ ಜನದ್ವತೇ ಪಾವಕವತೇಽಷ್ಟಾಕಪಾಲಂ ಪುರೋಳಾಶಂ ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ಆಯಾಹಿ ತಪಸಾ ಜನೇಷ್ವಾನೋ ಯಾಹಿ ತಪಸಾ ಜನೇಷ್ವಿತ್ಯಾಹುತಿಂ ವಾಽಹವನೀಯೇ ಜುಹುಯಾದಗ್ನಯೇ ತಪಸ್ವತೇ ಜನದ್ವತೇ ಪಾವಕವತೇ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ ||

ಅಷ್ಟಾವಿಂಶೇ ಪ್ರಶ್ನೋತ್ತರೇ ದರ್ಶಯತಿ—ಆಹವನೀಯಗಾರ್ಹಪತ್ಯದಕ್ಷಿಣಾಗ್ನೀನಾಂ ಸರ್ವೇಷಾಮುಪಶಾಂತೌ ತಪಸ್ವಜ್ಜನದ್ವತಪಾವಕವದ್ಗುಣತ್ರಯಯುಕ್ತೋಽಗ್ನಿಃ ಪುರೋಡಾಶದೇವತಾ ||

ಇಪ್ಪತ್ತೆಂಟನೇ ಪ್ರಶ್ನೋತ್ತರವನ್ನು ವಿವರಿಸುವರು—ಯಜ್ಞಮಾಡುವ ಯಾವ ಯಜಮಾನನ ಯಜ್ಞಶಾಲೆಯಲ್ಲಿರುವ ಎಲ್ಲಾ ಅಗ್ನಿಗಳೂ ಆರಿಹೋದಲ್ಲಿ ಆಗ ಏನು ಮಾಡಬೇಕು ಎಂದರೆ ಆ ಪುರುಷನು **ಅಗ್ನಯೇ ತಪಸ್ವತೇ ಜನದ್ವತೇ ಪಾವಕವತೇ** ಎಂದು ಅಗ್ನಿಯನ್ನುದ್ದೇಶಿಸಿ ಅಷ್ಟಾಕಪಾಲಸಹಿತವಾದ ಪುರೋಳಾಶವನ್ನು **ಆಯಾಹಿ ತಪಸಾ ಜನೇಷ್ವಾ** (ಆಶ್ವ. ಶ್ರೌ. ಸೂ ೩-೧೧) ಮತ್ತು **ಆ ನೋ ಯಾಹಿ** ತಪಸಾ (ಆಶ್ವ. ಶ್ರೌ. ಸೂ. ೩-೧೧) ಎಂಬ ಯಾಜ್ಯಾನುವಾಕ್ಯಾಮಂತ್ರಪುರಸ್ಸರವಾಗಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಅಥವಾ ಕೇವಲ ಆಜ್ಯದಿಂದಲೇ **ಅಗ್ನಯೇ ತಪಸ್ವತೇ ಜನದ್ವತೇ ಪಾವಕವತೇ ಸ್ವಾಹಾ** ಎಂದು ಹೇಳಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಇದೇ ಇಲ್ಲಿ ಮಾಡಬೇಕಾದ ಪ್ರಾಯಶ್ಚಿತ್ತವಿಧಾನವು.

*English Translation*

**(The penances when the Agnihotri sheds tears, or breaks his vow, or neglects the performance of the Darsapurnamasa isthi, or when he allows his fires to go out.)**

They ask, when an Agnihotri on the day previous to the sacrifice should shed tears, by which the Purodasa might be sullied, what is the penance for it ? He must offer to Agni vratabhrit (Agni the bearer of vows) a Purodasa consisting of eight pieces under the recital of the following Anuvakya and Yajya : tvam agne vratabhritsuchir (Asv. Sr. S. 3, 11) vratani bibhrad vratapa (Asv. Sr. S. 3, 11)[9]. Or he may sacrifice (melted butter) under the recital of, to Agni vratabhrit Svaha ! in the Ahavaniva fire. This is the penance for it.

They ask, When an Agnihotri should do some-thing contrary to his vow (religion) on the day previous to the sacrifice, what is the penance for it ? He must offer a Purodasa consisting of eight pieces to Agni vratapati (Agni the lord of vows) under the recital of the Anuvakya and Yajya : tvam agne vratapa asi (8, 11, 1) ; yad vo vayam praminama (10, 2, 4). Or he may sacrifice (melted butter) under the recital of, to Agni vratapati Svaha ! in the Ahavaniya fire. This is the penance for it.

They ask When an Agnihotri should neglect the New Moon or Full-Moon sacrifices, what is the penance for it ? He must offer to Agni pathikrit (paver of ways) a Purodasa consisting of eight pieces under the recital of the following Anuvakya and Yajya : vettha hi vedho adhvana (6, 16, 3) ; a devanam api (10, 2, 3). Or he may sacrifice (melted butter) under the recital of, to Agni Pathikrit Svaha ! in the Ahavaniya fire. This is the penance for it.

They ask, When all (three) fires of an Agnihotri should go out, what is the penance for it ? He must offer to Agni tapasvat, janadvat, pakavat, a Purodasa, consisting of eight pieces under the recital of the following Anuvakya and Yajya : ayahi tapasa janeshu (Asv. Sr S. 3, 11) ; a no yahi tapa₁

(Asv. Sr. S. 3, 11). Or he may sacrifice (melted butter) in the Ahavaniya fire under the recital of, to Agni tapasvat, janadvat, pakavat Svaha ! This is the penance for it.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾತ್ರಿಂಶಾಧ್ಯಾಯೇ ಸಪ್ತಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂವತ್ತ ಎರಡನೆಯ ಅಧ್ಯಾಯದಲ್ಲಿ ಏಳನೆಯ ಖಂಡವು ಸಮಾಪ್ತವಾದುದು



## ಅಥ ದ್ವಾತ್ರಿಂಶಾಧ್ಯಾಯೇ ಅಷ್ಟಮಃ ಖಂಡಃ

### ಮೂವತ್ತೆರಡನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು

[ಅಗ್ನಿಹೋತ್ರಿಯಾದವನು ಆಗ್ರಯಣೇಷ್ಟಿಯನ್ನು ಮಾಡದೆ ಹೊಸದಾಗಿ ಬೆಳೆದ ಧಾನ್ಯವನ್ನು ಭುಜಿಸುವುದು ಮತ್ತು ಯಜ್ಞಮಾಡುವಾಗ ಇತರ ವಿಘ್ನ ಮುಂತಾದವುಗಳು ಸಂಭವಿಸಿದರೆ ಆಚರಿಸಬೇಕಾದ ಪ್ರಾಯಶ್ಚಿತ್ತಿಯು]



ತದಾಹುರ್ಯ ಆಹಿತಾಗ್ನಿರಾಗ್ರಯಣೇನಾನಿಷ್ಟ್ವಾ ನವಾನ್ನಂ ಪ್ರಾಶ್ನೀಯಾತ್ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇ ವೈಶ್ವಾನರಾಯ ದ್ವಾದಶಕಪಾಲಂ ಪುರೋಳಾಶಂ ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ವೈಶ್ವಾನರೋ ಅಜೀಜನತ್ಪೃಷ್ಟೋ ದಿವಿ ಪೃಷ್ಟೋ ಅಗ್ನಿಃ ಪೃಥಿವ್ಯಾಮಿತ್ಯಾಹುತಿಂ ವಾಽಹವನೀಯೇ ಜುಹುಯಾದಗ್ನಯೇ ವೈಶ್ವಾನರಾಯ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ ॥

ಏಕೋನತ್ರಿಂಶೇ ಪ್ರಶ್ನೋತ್ತರೇ ದರ್ಶಯತಿ—ಗೃಹೇಷು ನವಧಾನ್ಯೇ ಸಮಾಗತೇ ಸತ್ಯಾಗ್ರಯಣೇಷ್ಟಿಂ ಕೃತ್ವಾ ಪಶ್ಚಾನ್ನವಾನ್ನಂ ಭೋಕ್ತವ್ಯಂ ತಸ್ಯಾ ಇಷ್ಟೇರಕರಣೇ ವೈಶ್ವಾನರಗುಣಯುಕ್ತೋಽಗ್ನಿಃ ಪುರೋಡಾಶದೇವತಾ ॥

ಇಪ್ಪತ್ತೊಂಭತ್ತನೆಯ ಪ್ರಶ್ನೋತ್ತರವನ್ನು ವಿವರಿಸುವರು—ಪ್ರತಿ ಸಂವತ್ಸರದಲ್ಲಿಯೂ ತನ್ನ ಕ್ಷೇತ್ರದಿಂದ ಎಂದರೆ ಹೊಲ, ಗದ್ದೆ, ಮುಂತಾದ ಭೂಮಿಯಿಂದ ಬೆಳೆದು ಬಂದ ಹೊಸ ಧಾನ್ಯವನ್ನು ಆಗ್ರಯಣವೆಂಬ ಇಷ್ಟಿಯನ್ನು ಮಾಡದೆ ಹಾಗೆಯೇ ಭಕ್ಷಿಸಿದಲ್ಲಿ ಆಗ ಅದಕ್ಕೇನು ಪ್ರಾಯಶ್ಚಿತ್ತವು? ಕೆಲವರು ಕೇಳುವರು. ಆಗ್ರಯಣೇಷ್ಟಿ ಎಂದರೆ ಹೊಸದಾಗಿ ಬೆಳೆದು ಬಂದ ಧಾನ್ಯವನ್ನು ಸಿದ್ಧಪಡಿಸಿ ದೇವತೆಗಳನ್ನುದ್ದೇಶಿಸಿ ಅಗ್ನಿಯಲ್ಲಿ ಹೋಮಮಾಡಿ ದೇವತೆಗಳನ್ನು ತೃಪ್ತಿಪಡಿಸುವುದಕ್ಕೆ ಆಗ್ರಯಣೇಷ್ಟಿಯೆಂದು ಹೆಸರು. ಈ ಇಷ್ಟಿಯನ್ನು ಮಾಡಿದನಂತರ ಆಹಿತಾಗ್ನಿಯಾದವನು ಹೊಸ ಧಾನ್ಯವನ್ನು ಭಕ್ಷಿಸುವುದಕ್ಕಾಗಿ ಉಪಯೋಗಿಸಬೇಕು. ಹಾಗೆ ಮಾಡದೆ ತಪ್ಪಿದರೆ ಎಂದರೆ ಆಗ್ರಯಣೇಷ್ಟಿಯನ್ನು ಮಾಡದೆ ಹೊಸ ಧಾನ್ಯವನ್ನು ಭಕ್ಷಿಸಿದರೆ ಅವನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಅದರ ವಿಧಾನವೇನೆಂದರೆ ಆ ಆಹಿತಾಗ್ನಿಯು, ಅಗ್ನಯೇ ವೈಶ್ವಾನರಾಯ ಎಂಬ ಅಗ್ನಿಯನ್ನುದ್ದೇಶಿಸಿ ದ್ವಾದಶ ಕಪಾಲಸಹಿತನಾದ ಪುರೋಳಾಶವನ್ನು **ವೈಶ್ವಾನರೋ ಅಜೀಜನತ್** ಮತ್ತು **ಪೃಷ್ಟೋ ದಿವಿ ಪೃಷ್ಟೋ ಅಗ್ನಿಃ ಪೃಥಿವ್ಯಾಂ** (ಋ. ಸಂ. ೧-೯೮-೨) ಎಂಬ ಯಾಜ್ಯಾನುವಾಕ್ಯಾಮಂತ್ರ ಪೂರ್ವಕವಾಗಿ ಆಹವನೀಯಾಗ್ನಿಯಲ್ಲಿ ಹೋಮ ಮಾಡಬೇಕು. ಅಥವಾ ಕೇವಲ ಆಜ್ಯದಿಂದ ಅಗ್ನಯೇ ವೈಶ್ವಾನರಾಯ ಸ್ವಾಹಾ ಎಂದು ಆಹವನೀಯಾಗ್ನಿಯಲ್ಲಿ ಹೋಮ ಮಾಡಬೇಕು. ಇದೇ ಪ್ರಾಯಶ್ಚಿತ್ತವು.

ತದಾಹುರ್ಯದ್ಯಾಹಿತಾಗ್ನಿರ್ಯದಿ ಕಪಾಲಂ ನಶ್ಯೇತ್ಕಾ ತತ್ರ ಪ್ರಾಯ-
ಶ್ಚಿತ್ತಿರಿತಿ ಸೋಽಶ್ವಿಭ್ಯಾಂ ದ್ವಿಕಪಾಲಂ ಪುರೋಳಾಶಂ ನಿರ್ವಪೇತ್ತಸ್ಯ-
ಯಾಜ್ಯಾನುವಾಕ್ಯೇ ಅಶ್ವಿನಾ ವರ್ತಿರಸ್ಮದಾಗೋಮತಾ ನಾಸತ್ಯಾ
ರಥೇನೇತ್ಯಾಹುತಿಂ ವಾಽಽಹವನೀಯೇ ಜುಹುಯಾದಶ್ವಿಭ್ಯಾಂ
ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ ॥

ತ್ರಿಂಶೇ ಪ್ರಶ್ನೋತ್ತರೇ ದರ್ಶಯತಿ— ಯ ಆಹಿತಾಗ್ನಿರ್ಯಸ್ಯಾಽಽಹಿತಾಗ್ನೇಃ ಪುರೋಡಾಶ-
ನಿಷ್ಪಾದಕಂ ಕಪಾಲಂ ಯದಿ ನಶ್ಯೇತ್ತದಾನೀಮಶ್ವಿನೌ ಪುರೋಡಾಶದೇವತಾ ॥

ಮೂವತ್ತನೇ ಪ್ರಶ್ನೋತ್ತರವನ್ನು ವಿವರಿಸುವರು— ಪುರೋಡಾಶವನ್ನು ಬೇಯಿಸುವ ಕಪಾಲಗಳಲ್ಲಿ ಒಂದು (ಅಥವಾ ಎರಡು, ಮೂರು ಕಪಾಲಗಳು, ಕಪಾಲವೆಂದರೆ ಕಾವಲಿಯಂತಿರುವ ಮಣ್ಣಿನ ಹೆಂಚು) ಒಡೆದು ಹೋದಲ್ಲಿ ಆಗ ಆಹಿತಾಗ್ನಿಯಾದವನು ಏನು ಮಾಡಬೇಕು ಎಂದರೆ—ಆಗ ಅಶ್ವಿನೀದೇವತೆಗಳನ್ನುದ್ದೇಶಿಸಿ ಎರಡು ಕಪಾಲಗಳಲ್ಲಿ ಬೇಯಿಸಿದ ಪುರೋಡಾಶವನ್ನು **ಅಶ್ವಿನಾ ವರ್ತಿಃ** (ಋ. ಸಂ. ೧-೯೨-೧೬) ಮತ್ತು **ಆ ಗೋಮತಾ ನಾಸತ್ಯಾ** (ಋ. ಸಂ. ೭-೭೨-೧) ಎಂಬ ಯಾಜ್ಯಾಪುರೋನುವಾಕ್ಯಾ ಮಂತ್ರಪೂರ್ವಕವಾಗಿ ಆಹಿತಾಗ್ನಿಯಲ್ಲಿ ಹೋಮಮಾಡಬೇಕು. ಅಥವಾ ಕೇವಲ ಆಜ್ಯದಿಂದ ಅಶ್ವಿಭ್ಯಾಂ ಸ್ವಾಹಾ ಎಂದು ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಇದೇ ಪ್ರಾಯಶ್ಚಿತ್ತಿ ವಿಧಾನವು.

ತದಾಹುರ್ಯದ್ಯಾಹಿತಾಗ್ನಿರ್ಯದಿ ಪವಿತ್ರಂ ನಶ್ಯೇತ್ಕಾ ತತ್ರ ಪ್ರಾಯ-
ಶ್ಚಿತ್ತಿರಿತಿ ಸೋಽಗ್ನಯೇ ಪವಿತ್ರವತೇಽಷ್ಟಾಕಪಾಲಂ ಪುರೋಳಾಶಂ
ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ಪವಿತ್ರಂ ತೇ ವಿತತಂ ಬ್ರಹ್ಮಣ-
ಸ್ಪತೇ ತಪೋಷ್ಪವಿತ್ರಂ ವಿತತಂ ದಿವಸ್ಪದ ಇತ್ಯಾಹುತಿಂವಾ ಽಽಹ-

ವನೀಯೇ ಜುಹುಯಾದಗ್ನಯೇ ಪವಿತ್ರವತೇ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ ॥

**ಏಕತ್ರಿಂಶೇ ಪ್ರಶ್ನೋತ್ತರೇ ದರ್ಶಯತಿ—ಆಹಿತಾಗ್ನೇಃ ಪವಿತ್ರನಾಶೇ ಪವಿತ್ರವದ್ಗುಣಯುಕ್ತೋಽಗ್ನಿಃ ಪುರೋಡಾಶದೇವತಾ ॥**

ಮೂವತ್ತೊಂದನೆಯ ಪ್ರಶ್ನೋತ್ತರವನ್ನು ವಿವರಿಸುವರು—ಆಹಿತಾಗ್ನಿಯು, ದರ್ಭೆಯಿಂದ (ಕುಶದಿಂದ) ಮಾಡಿದ ಪವಿತ್ರವು ನಾಶವಾದಲ್ಲಿ ಏನುಮಾಡಬೇಕೆಂದರೆ ಅಷ್ಟಾಕಪಾಲ ಸಹಿತವಾದ ಪುರೋಡಾಶವನ್ನು **ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ** (ಋ. ಸಂ. ೯-೮೪-೧) ಮತ್ತು **ತಪೋಷ್ಪವಿತ್ರಂ ವಿತತಂ** (ಋ. ಸಂ. ೯-೮೪-೨) ಎಂಬ ಯಾಜ್ಯಾನುವಾಕ್ಯಾಮಂತ್ರ ಪುರಸ್ಸರವಾಗಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಅಥವಾ ಕೇವಲ ಆಜ್ಯದಿಂದ **ಅಗ್ನಯೇ ಪವಿತ್ರವತೇ ಸ್ವಾಹಾ** ಎಂದು ಆಹವನೀಯಾಗ್ನಿಯಲ್ಲಿ ಹೋಮವನ್ನು ಮಾಡಬೇಕು. ಇದೇ ಪ್ರಾಯಶ್ಚಿತ್ತವು.



ತದಾಹುರ್ಯ ಆಹಿತಾಗ್ನಿರ್ಯದಿ ಹಿರಣ್ಯಂ ನಶ್ಯೇತ್ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇ ಹಿರಣ್ಯವತೇಽಷ್ಟಾಕಪಾಲಂ ಪುರೋಳಾಶಂ ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ಹಿರಣ್ಯಕೇಶೋ ರಜಸೋ ವಿಸಾರ ಆ ತೇ ಸುಪರ್ಣಾ ಅಮಿನಂತಂ॒ ಏವೈರಿತ್ಯಾಹುತಿಂ ವಾಹವನೀಯೇ ಜುಹುಯಾದಗ್ನಯೇ ಹಿರಣ್ಯವತೇ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ॥

**ದ್ವಾತ್ರಿಂಶೇ ಪ್ರಶ್ನೋತ್ತರೇ ದರ್ಶಯತಿ—ಆಹಿತಾಗ್ನೇರ್ಹಿರಣ್ಯನಾಶೇ ಹಿರಣ್ಯವದ್ಗುಣಯುಕ್ತೋಽಗ್ನಿಃ ಪುರೋಡಾಶದೇವತಾ ॥**

ಮೂವತ್ತೆರಡನೆಯ ಪ್ರಶ್ನೋತ್ತರವನ್ನು ವಿವರಿಸುವರು—ಆಹಿತಾಗ್ನಿಯಾದವನ ಸುವರ್ಣವು (ಚಿನ್ನವು) ನಾಶವಾದಲ್ಲಿ ಏನು ಮಾಡಬೇಕು ಎಂದರೆ ಅಷ್ಟಾಕಪಾಲಸಹಿತವಾದ ಪುರೋಳಾಶವನ್ನು **ಹಿರಣ್ಯಕೇಶೋ ರಜಸೋ ವಿಮಾನೇ** (ಋ. ಸಂ. ೧-೭೯-೧) ಮತ್ತು **ಆ ತೇ ಸುಪರ್ಣಾ ಅಮಿನಂತ ಏವೈಃ** (ಋ. ಸಂ. ೧-೭೯-೨) ಎಂಬ ಯಾಜ್ಯಾಪುರೋನುವಾಕ್ಯಾಮಂತ್ರ ಸಹಿತವಾಗಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಅಥವಾ **ಅಗ್ನಯೇ ಹಿರಣ್ಯವತೇ ಸ್ವಾಹಾ** ಎಂದು ಕೇವಲ ಆಜ್ಯದಿಂದ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಇದೇ ಪ್ರಾಯಶ್ಚಿತ್ತಿಯು.

ತದಾಹುರ್ಯ ಆಹಿತಾಗ್ನಿರ್ಯದಿ ಪ್ರಾತರಸ್ನಾತೋಽಗ್ನಿಹೋತ್ರಂ ಜುಹುಯಾತ್ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇ ವರುಣಾಯಾಷ್ಟಾಕಪಾಲಂ ಪುರೋಳಾಶಂ ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ತ್ವಂ ನೋ ವರುಣಸ್ಯ ವಿದ್ವಾನ್ಸ ತ್ವಂ ನೋ ಅಗ್ನೇಽವಮೋ ಭವೋತೀತ್ಯಾಹುತಿಂ

ನಾಹವನೀಯೇ ಜುಹುಯಾದಗ್ನಯೇ ವರುಣಾಯ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ ॥

ತ್ರಯಸ್ತ್ರಿಂಶೇ ಪ್ರಶ್ನೋತ್ತರೇ ದರ್ಶಯತಿ—ಆಹಿತಾಗ್ನೇಃ ಸ್ನಾನಮಂತರೇಣಾಗ್ನಿಹೋಮೇ ವರುಣಗುಣಕೋಽಗ್ನಿಃ ಪುರೋಡಾಶದೇವತಾ ॥

ಮೂವತ್ತಮೂರನೇ ಪ್ರಶೋತ್ತರವನ್ನು ವಿವರಿಸುವರು—ಕಾರಣಾಂತರದಿಂದ ಅಗ್ನಿಹೋತ್ರಿಯಾದವನು ಪ್ರಾತಃ ಕಾಲದಲ್ಲಿ ಸ್ನಾನವನ್ನು ಮಾಡದೆ ಅಗ್ನಿಹೋತ್ರವನ್ನು ಹೋಮಮಾಡಿದಲ್ಲಿ ಅದಕ್ಕೆ ಪ್ರಾಯಶ್ಚಿತ್ತವೇನು ? ಎಂದರೆ ಆಗ ಅವನು ಅಷ್ಟಾಕಪಾಲಸಹಿತವಾದ ಪುರೋಳಾಶವನ್ನು **ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನ್** (ಋ. ಸಂ. ೪-೧-೪) ಮತ್ತು **ಸ ತ್ವಂ ನೋ ಅಗ್ನೇಽವಮೋ ಭವೋತಿ** (ಋ. ಸಂ. ೪-೧-೫) ಎಂಬ ಯಾಜ್ಯಾನುವಾಕ್ಯಾಮಂತ್ರಪುರಸ್ಸರವಾಗಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಅಥವಾ ಕೇವಲ ಆಜ್ಯದಿಂದ **ಅಗ್ನಯೇ ವರುಣಾಯ ಸ್ವಾಹಾ** ಎಂದು ಆಹವನೀಯಾಗ್ನಿಯಲ್ಲಿ ಹೋಮ ಮಾಡಬೇಕು. ಇದೇ ಪ್ರಾಯಶ್ಚಿತ್ತವು.

ತದಾಹುರ್ಯ ಆಹಿತಾಗ್ನಿರ್ಯದಿ ಸೂತಕಾನ್ನಂ ಪ್ರಾಶ್ನೀಯಾತ್ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇ ತಂತುಮತೇಽಷ್ಟಾಕಪಾಲಂ ಪುರೋ-ಳಾಶಂ ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ತಂತುಂ ತನ್ವನ್ರಜಸೋ ಭಾನುಮನ್ವಿಹ್ಯಕ್ಷಾನಹೋ ನಹ್ಯತ ನೋತ ಸೋಮ್ಯಾ ಇತ್ಯಾಹುತಿಂ ವಾಽಹವನೀಯೇ ತಂತುಮತೇ ಸ್ವಾಹೇತಿ ತತ್ರ ಪ್ರಾಯಶ್ಚಿತ್ತಿಃ ॥

ಚತುಸ್ತ್ರಿಂಶೇ ಪ್ರಶ್ನೋತ್ತರೇ ದರ್ಶಯತಿ–ಆಹಿತಾಗ್ನೇಃ ಸೂತಕಾನ್ನಪ್ರಾಶನೇ ತಂತುಮದ್ಗುಣ-ಕೋಽಗ್ನಿರ್ದೇವತಾ ॥

ಮೂವತ್ತನಾಲ್ಕನೆಯ ಪ್ರಶ್ನೋತ್ತರವನ್ನು ವಿವರಿಸುವರು—ಆಹಿತಾಗ್ನಿಯಾದವನು ಸೂತಕಾನ್ನವನ್ನು ಎಂದರೆ ಸೂತಕ (ಮೃತಾಶೌಚ) ದಿಂದಿರುವವರು ಮಾಡಿದ ಅನ್ನವನ್ನು ಭಕ್ಷಿಸಿದಲ್ಲಿ ಆಗ ಏನು ಮಾಡಬೇಕು ಎಂದರೆ **ಅಗ್ನಯೇ ತಂತುಮತೇ** ಎಂದು ಉದ್ದೇಶಿಸಿ ಅಷ್ಟಾಕಪಾಲಸಹಿತವಾದ ಪುರೋಳಾಶವನ್ನು **ತಂತುಂ ತನ್ವನ್ರಜಸೋ ಭಾನುಮನ್ವಿ** (ಋ. ಸಂ. ೧೦-೫೩-೬) ಮತ್ತು **ಅಕ್ಷಾನಹೋ ನಹ್ಯತ ನೋತ ಸೋಮ್ಯಾಃ** (ಋ. ಸಂ. ೧೦-೫೩-೭) ಎಂಬ ಯಾಜ್ಯಾನುವಾಕ್ಯಾಮಂತ್ರಪೂರ್ವಕವಾಗಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಅಥವಾ ಕೇವಲ್ಲ ಆಜ್ಯದಿಂದಲೇ **ಅಗ್ನಯೇ ತಂತುಮತೇ ಸ್ವಾಹಾ** ಎಂದು ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಇದೇ ಪ್ರಾಯಶ್ಚಿತ್ತವಿಧಾನವು.

ತದಾಹುರ್ಯ ಆಹಿತಾಗ್ನಿರ್ಜೀವೇ ಮೃತಶಬ್ದಂ ಶ್ರುತ್ವಾ ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇ ಸುರಭಿಮತೇಽಷ್ಟಾಕಪಾಲಂ ಪುರೋ-ಳಾಶಂ ನಿರ್ವಪೇತ್ತಸ್ಯ ಯಾಜ್ಯಾನುವಾಕ್ಯೇ ಅಗ್ನಿರ್ಹೋತಾ ನ್ಯಸೀದ-ದ್ಯಜೀಯಾನ್ಸಾಧ್ವೀಮಕರ್ದೇವವೀತಿಂ ನೋ ಅದ್ಯೇತ್ಯಾಹುತಿಂ

ವಾಹವನೀಯೇ ಜುಹುಯಾದಗ್ನಯೇ ಸುರಭಿಮತೇ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ ||

ಪಂಚತ್ರಿಂಶೇ ಪ್ರಶ್ನೋತ್ತರೇ ದರ್ಶಯತಿ—ಆಹಿತಾಗ್ನಿಃ ಸ್ವಸ್ಮಿನ್ ಜೀವತ್ಯೇವ ಸ್ವಕೀಯ-ಮರಣಶಬ್ದಂ ಯದಾ ದ್ವೇಷಿಮುಖಾಚ್ಛೃಣುಯಾತ್ತದಾನೀಂ ಸುರಭಿಮದ್ಗುಣಯುಕ್ತೋಽಗ್ನಿ-ರ್ದೇವತಾ ||

ಮೂವತ್ತೈದನೆಯ ಪ್ರಶ್ನೋತ್ತರವನ್ನು ವಿವರಿಸುವರು---ಆಹಿತಾಗ್ನಿಯಾದವನು ಜೀವಂತನಾಗಿದ್ದಾಗ್ಯೂ ತನಗೆ ಆಗದವರ ಎಂದರೆ ಶತ್ರುಗಳು ಪ್ರಚಾರವಮಾಡುವ ತಾನು ಮರಣ ಹೊಂದಿದನೆಂಬ ಸುದ್ದಿಯನ್ನು ಕೇಳಿದರೆ ಆಗ ಅಗ್ನಯೇ ಸುರಭಿಮತೇ ಎಂಬ ಅಗ್ನಿಯನ್ನುದ್ದೇಶಿಸಿ ಅಷ್ಟಾಕಪಾಲಸಹಿತವಾದ ಪುರೋಳಾಶವನ್ನು **ಅಗ್ನಿರ್ಹೋತಾ ನ್ಯಸೀದದ್ಯಜೀ-ಯಾನ್** (ಋ. ಸಂ. ೫-೧-೬) ಮತ್ತು **ಸಾಧ್ವೀಮಕರ್ದೇವವೀತಿಂ ನೋ** ಅದ್ಯ (ಋ. ಸಂ. ೧೦-೫೩-೩) ಎಂಬ ಯಾಜ್ಯಾಪುರೋನುವಾಕ್ಯಾಮಂತ್ರಪುರಸ್ಸರವಾಗಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಅಥವಾ ಕೇವಲ ಆಜ್ಯದಿಂದಲೇ **ಅಗ್ನಯೇ ಸುರಭಿಮತೇ ಸ್ವಾಹಾ** ಎಂದು ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಇದು ಇಲ್ಲಿ ಮಾಡಬೇಕಾದ ಪ್ರಾಯಶ್ಚಿತ್ತ ವಿಧಾನವು.

ತದಾಹುರ್ಯ ಆಹಿತಾಗ್ನಿರ್ಯಸ್ಯ ಭಾರ್ಯಾ ಗೌರ್ವಾ ಯಮೌ ಜನ-ಯೇತ್ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇ ಮರುತ್ವತೇ ತ್ರಯೋದಶಕಪಾಲಂ ಪುರೋಳಾಶಂ ನಿರ್ವಪೇತ್ತಸ್ಯ ಯಾಜ್ಯಾನು-ವಾಕ್ಯೇ ಮರುತೋ ಯಸ್ಯ ಹಿ ಕ್ಷಯೇಽರಾ ಇವೇದಚರಮಾ ಅಹೇ-ವೇತ್ಯಾಹುತಿಂ ವಾಹವನೀಯೇ ಜುಹುಯಾದಗ್ನಯೇ ಮರುತ್ವತೇ ಸ್ವಾಹೇತಿ ಸಾ ತತ್ರ ಪ್ರಾಯಶ್ಚಿತ್ತಿಃ ||

ಷಟ್‌ತ್ರಿಂಶೇ ಪ್ರಶ್ನೋತ್ತರೇ ದರ್ಶಯತಿ—ಆಹಿತಾಗ್ನಯೋರ್ಽಸ್ತಿ ತಸ್ಯೇತ್ಯಸ್ಮಿನರ್ಥೇ ಯಸ್ಯೇತಿ ಶಬ್ದಃ ಪ್ರಯುಕ್ತಃ । ತಸ್ಯಾಹಿತಾಗ್ನೇಃ ಭಾರ್ಯಾ ವಾ ತದ್ಗೃಹಾವಸ್ಥಿತಾ ಗೌರ್ವಾ ಯಮಾವಪತ್ಯದ್ವಯಂ ಸಹ ಜನಯೇತ್ತದಾನೀಂ ಮರುತ್ವದ್ಗುಣಯುಕ್ತೋಽಗ್ನಿರ್ದೇವತಾ ||

ಮೂವತ್ತಾರನೆಯ ಪ್ರಶ್ನೋತ್ತರವನ್ನು ವಿವರಿಸುವರು—ಆಹಿತಾಗ್ನಿಯಾದವನ ಪತ್ನಿಯಾಗಲಿ, ಅವನ ಮನೆಯಲ್ಲಿರುವ ಹಸುವಾಗಲಿ, ಅವಳಿಮಕ್ಕಳನ್ನು, ಮತ್ತು ಅವಳಿ ಕರುಗಳನ್ನು ಹೆತ್ತರೆ, ಅದಕ್ಕೆ ಪ್ರಾಯಶ್ಚಿತ್ತವೇನೆಂದರೆ—**ಅಗ್ನಯೇ ಮರುತ್ವತೇ** ಎಂಬ ಅಗ್ನಿಯನ್ನುದ್ದೇಶಿಸಿ ಅಷ್ಟಾಕಪಾಲಸಹಿತವಾತ ಪುರೋಳಾಶವನ್ನು **ಮರುತೋ ಯಸ್ಯ ಹಿ ಕ್ಷಯೇ** (ಋ. ಸಂ. ೧-೮೬-೧) ಮತ್ತು **ಅರಾ ಇವೇದ ಚರಮಾ ಅಹೇವ** (ಋ. ಸಂ. ೫-೫೮-೫) ಎಂಬ ಯಾಜ್ಯಾನುವಾಕ್ಯಾಮಂತ್ರ ಪೂರ್ವಕವಾಗಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಅಥವಾ ಕೇವಲ ಆಜ್ಯದಿಂದ **ಅಗ್ನಯೇ ಮರುತ್ವತೇ ಸ್ವಾಹಾ** ಎಂದು ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಇದೇ ಪ್ರಾಯಶ್ಚಿತ್ತವು.

**ತದಾಹುರಪತ್ನೀಕೋಽಪ್ಯಗ್ನಿಹೋತ್ರಮಾಹರೇ೩ತ್ । ನಾಹರೇ೩ತ್ ॥**

ಸಪ್ತತ್ರಿಂಶೇ ಪರ್ಯಾಯೇ ಕಿಂಚಿದ್ವಿಚಾರಮುದ್ಭಾವಯತಿ—ಪುರುಷೇ ಜೀವತಿ ಸತಿ ಯದಾ ಭಾರ್ಯಾ ಮ್ರಿಯತೇ ತದಾನೀಮಾಹಿತೈರಗ್ನಿಭಿರ್ಭಾರ್ಯಾಯಾ ದಾಹ ಇತ್ಯೇಕಃ ಪಕ್ಷಃ । ತಥಾ ಚ ಮನುಃ—"ಭಾರ್ಯಾಯೈ ಪೂರ್ವಮಾರಿಣ್ಯೈ ದತ್ತ್ವಾಗ್ನೀನಂತ್ಯಕರ್ಮಣಿ ॥ ಪುನರ್ದಾರಕ್ರಿಯಾಂ ಕುರ್ಯಾತ್ಪುನರಾಧಾನಮೇವ ಚ॥ ಇತಿ। ಆಹಿತೇಭ್ಯೋಽಗ್ನಿಭ್ಯೋಽನ್ಯೇನಾಗ್ನಿನಾ ಭಾರ್ಯಾಂ ದಹೇದಿತಿ ದ್ವಿತೀಯಃ ಪಕ್ಷಃ । ತಥಾ ಚಾಶ್ವಲಾಯನಃ—"ಆಹಾರ್ಯೇಣಾನಾಹಿತಾಗ್ನಿಂ ಪತ್ನೀಂ ಚ" ಇತಿ । ಭಾರದ್ವಾಜೋಽಪ್ಯಾಹ—"ನಿರ್ಮಂಥ್ಯೇನ ಪತ್ನೀಂ" ಇತಿ ಅಸ್ಮಿನ್ ಪಕ್ಷೇ ಪುನರಪಿ ವಿವಾಹೇಚ್ಛಾರಹಿತತ್ವಾದಯಮಪತ್ನೀಕ ಏವ ವರ್ತತೇ ಸೋಽಗ್ನಿಹೋತ್ರಮಾಹರೇದನುತಿಷ್ಠೇನ್ನವೇತಿ ಪ್ಲುತಿಃ ಪ ಯಂ ವಿಚಾರಾರ್ಥಮ್ ॥

ಮೂವತ್ತೇಳನೆಯ ಪ್ರಶ್ನೋತ್ತರವನ್ನು ವಿವರಿಸುವರು. ಅದರಲ್ಲಿ ಒಂದು ವಿಶೇಷ ಸಂಗತಿ ಇರುವುದು—ಆಹಿತಾಗ್ನಿಯಾದವನು ಜೀವಂತನಾಗಿರುವಾಗ ಅವನ ಪತ್ನಿಯು ಮೃತಳಾದರೆ ಆಗ ಆ ಪತ್ನಿಯ ಶವವನ್ನು ದಹಿಸುವಾಗ ಆಹಿತಾಗ್ನಿಯನ್ನು (ಮನೆಯಲ್ಲಿ ಅಗ್ನಿಹೋತ್ರಕ್ಕಾಗಿ ಇಟ್ಟುಕೊಂಡು ಕಾಪಾಡುತ್ತಿರುವ ಅಗ್ನಿಯನ್ನು) ದಹನಕಾರ್ಯಕ್ಕಾಗಿ ಉಪಯೋಗಿಸಬೇಕೇ ಅಥವಾ ಹಾಗೆ ಮಾಡಬಾರದೇ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿರುವುದು. ಈ ವಿಷಯದಲ್ಲಿ ಮನುವು—

**ಭಾರ್ಯಾಯೈ ಪೂರ್ವಮಾರಿಣ್ಯೈ ದತ್ವಾಗ್ನೀನಂತ್ಯಕರ್ಮಣಿ ।**
**ಪುನರ್ದಾರಕ್ರಿಯಾಂ ಕುರ್ಯಾತ್ಪುನರಾಧಾನಮೇವ ಚ ॥**

(ಮನು. ೫-೧೬೮)

ಎಂದು ಹೇಳಿರುವನು. ಎಂದರೆ ಆಹಿತಾಗ್ನಿಯಾದವನ ಪತ್ನಿಯು ಪತಿಗಿಂತ ಮೊದಲು ಮೃತಳಾದಲ್ಲಿ ಅವಳ ಅಂತ್ಯಸಂಸ್ಕಾರಕ್ಕಾಗಿ ಆಹಿತಾಗ್ನಿಯು ತನ್ನ ಗೃಹದಲ್ಲಿರುವ ಗಾರ್ಹಪತ್ಯಾಗ್ನಿಯನ್ನು ಉಪಯೋಗಿಸಿ ಅಂತ್ಯಕ್ರಿಯೆಯನ್ನು ಮಾಡಬೇಕು. ಅನಂತರ ಬೇರೆ ಪತ್ನಿಯನ್ನು ವಿವಾಹಮಾಡಿಕೊಂಡು ಆಧಾನಪೂರ್ವಕವಾಗಿ ಗಾರ್ಹಪತ್ಯಾಗ್ನಿಯನ್ನು ಮನೆಯಲ್ಲಿ ಸ್ಥಾಪಿಸಿ ಅಗ್ನಿಹೋತ್ರಾದಿಗಳನ್ನು ಮಾಡಬೇಕು ಎಂದು ಇದು ಒಂದು ಪಕ್ಷವು. ಮತ್ತೆ ಕೆಲವರು—ಪತ್ನಿಯ ಅಂತ್ಯಸಂಸ್ಕಾರವನ್ನು ಮಾಡುವಾಗ ಆಹಿತಾಗ್ನಿಯು ತನ್ನ ಗೃಹದಲ್ಲಿರುವ ಗಾರ್ಹಪತ್ಯಾಗ್ನಿಯನ್ನು ಉಪಯೋಗಿಸದೆ ಬೇರೆ ಅಗ್ನಿಯಿಂದ ಅಂತ್ಯಕ್ರಿಯೆಯನ್ನು ಮಾಡಬೇಕೆಂದು ಹೇಳುವರು. ಇದು ಎರಡನೆಯ ಪಕ್ಷವು. ಆಶ್ವಲಾಯನರು—**ಆಹಾರ್ಯೇಣಾನಾಹಿತಾಗ್ನಿಂ ಪತ್ನೀಂ ಚ** (ಆಶ್ವ. ಶ್ರೌ. ಸೂ. ೬-೧೦-೯, ೧೦) ಎಂದು ಎರಡನೆಯ ಪಕ್ಷವನ್ನೇ ಸಮರ್ಥಿಸುವರು. ಭರದ್ವಾಜ ಮಹರ್ಷಿಯೂ **ನಿರ್ಮಂಥ್ಯೇನ ಪತ್ನೀಂ** ಎಂದು ಹೇಳಿರುವರು. ಈ ವಿಷಯದಲ್ಲಿ ಆಹಿತಾಗ್ನಿಯಾದವನು ಪುನಃ ಮದುವೆ ಮಾಡಿಕೊಳ್ಳಲು ಇಷ್ಟಪಡದಿದ್ದರೆ ಆಗ ಅವನು ಅಪತ್ನೀಕನೆನಿಸುವನು. ಇಂತಹ ಪುರುಷನು ಪುನಃ ಅಗ್ನಿಹೋತ್ರವನ್ನು ಮಾಡಬೇಕೇ ಬೇಡವೇ ಎಂಬ ಪ್ರಶ್ನೆಯು ಉದ್ಭವಿಸುವುದು. ಇದನ್ನು ತಿಳಿಸುವುದಕ್ಕಾಗಿ ಮೇಲೆ ೩ ಎಂಬ ಪ್ಲುತಿಯನ್ನು ಎರಡಾವರ್ತಿ ಉಪಯೋಗಿಸಲಾಗಿದೆ.

**ಆಹರೇದಿತ್ಯಾಹುಃ । ಯದಿ ನಾಹರೇದನದ್ಧಾ ಪುರುಷಃ ॥**

ತತ್ರ ನಿರ್ಣಯಂ ದರ್ಶಯತಿ—ಅನನುಷ್ಠಾನೇ ಬಾಧಂ ದರ್ಶಯತಿ-ಅದ್ಧೇತಿ ಸತ್ಯನಾಮ । ತದ್ವೈಪರೀತ್ಯಾದನೃತಃ ಪುರುಷೋಽನದ್ಧಾ ಪುರುಷೋಽನನುಷ್ಠಾನೇನಾನೃತೋ ಭವೇದಿತ್ಯರ್ಥಃ॥

ಮೇಲೆ ಹೇಳಿದಂತೆ ಗಾರ್ಹಪತ್ಯಾಗ್ನಿಯನ್ನು ಪತ್ನಿಯ ಅಂತ್ಯಕ್ರಿಯೆಗಾಗಿ ಉಪಯೋಗಿಸದಿದ್ದರೆ ಉಂಟಾಗುವ ತೊಂದರೆಯನ್ನು ವಿವರಿಸುವರು. ಇಲ್ಲಿ ಅದ್ಧ ಎಂದರೆ ಸತ್ಯ ಎಂದು. ಅನದ್ಧಾ ಎಂದರೆ ಸತ್ಯವಲ್ಲದ್ದು ಅನೃತ ಅಥವಾ ಅನೃತವಾದಿಯಾದ ಪುರುಷನು ಎಂದರ್ಥವು. ಆಹಿತಾಗ್ನಿಯಾದವನು ತನ್ನ ಪತ್ನಿಯ ಮೃತಶರೀರದ ಅಂತ್ಯಕ್ರಿಯೆಗಾಗಿ ಗಾರ್ಹಪತ್ಯಾಗ್ನಿಯನ್ನು ಉಪಯೋಗಿಸಲೇಬೇಕು. ಹಾಗೆ ಮಾಡದಿದ್ದರೆ ಅವನು ಅನೃತವಾದಿಯಾಗುವನು.

ಕೋಽನದ್ಧಾ ಪುರುಷ ಇತಿ ನ ದೇವಾನ್ನ ಪಿತೄನ್ನ ಮನುಷ್ಯಾನಿತಿ ತಸ್ಮಾ-ದಪತ್ನೀಕೋಽಪ್ಯಗ್ನಿಹೋತ್ರಮಾಹರೇತ್ ॥

ಪ್ರಶ್ನೋತ್ತರಾಭ್ಯಾಂ ಶಬ್ದಾರ್ಥಂ ನಿಶ್ಚಿನೋತಿ—ಅನದ್ಧಾಶಬ್ದೇನ ಕೋ ವಿವಕ್ಷಿತ ಇತಿ ಪ್ರಶ್ನಃ । ಯಃ ಪುಮಾನ್ ದೇವಾನ್ನ ಪೂಜಯೇದಿತಿ ಶೇಷಃ। ಪಿತೄನಪಿ ನ ಪೂಜಯೇತ್। ಮನುಷ್ಯಾನತಿಥೀನಪಿ ನ ಪೂಜಯೇತ್ । ತಾದೃಶಃ ಪುಮಾನನದ್ಧಾ ಪುರುಷ ಇತ್ಯುತ್ತರಮ್ ।

ಅಗ್ನಿಹೋತ್ರಸ್ಯಾನನುಷ್ಠಾನೇ ಸತ್ಯನದ್ಧಾ ಪುರುಷೋ ಭವೇದಿತಿ ವಿಪಕ್ಷೇ ಬಾಧಮುಕ್ತ್ವಾ ಸ್ವಪಕ್ಷಮುಪಸಂಹರತಿ ॥

ಮೇಲೆ ಹೇಳಿದ ವಿಷಯದಲ್ಲಿ ನಿರ್ಣಯವನ್ನು ಹೇಳುವರು—ಅನದ್ಧಾ ಎಂಬ ಶಬ್ದದಿಂದ ಏನು ಹೇಳಿದಂತಾಯಿತು ಎಂಬ ವಿಷಯವನ್ನು ವಿವರಿಸುವರು. ಅನದ್ಧಾ ಎಂಬ ಶಬ್ದಕ್ಕೆ ಅನೃತವಾದೀ. ಸುಳ್ಳುಗಾರ ಎಂಬ ಅರ್ಥವನ್ನು ಹೇಳಿದರೆ ಆ ಪದದ ಪೂರ್ಣಾರ್ಥವನ್ನು ವಿವರಿಸಿದಂತಾಗಲಿಲ್ಲ. ಯಾವ ಪುರುಷನು ದೇವತೆಗಳನ್ನಾಗಲಿ, ಪಿತೃಗಳನ್ನಾಗಲಿ, ಮನುಷ್ಯರಾದ ಅತಿಥಿಗಳನ್ನಾಗಲಿ ಸತ್ಕರಿಸಿ ಪೂಜಿಸದೇ ಅಲಕ್ಷ್ಯಮಾಡುವನೋ ಅವನನ್ನು ಅನದ್ಧಾ ಎಂದು ಕರೆಯುವುದು ಯುಕ್ತವು.

ತದೇಷಾಭಿ ಯಜ್ಞಗಾಥಾ ಗೀಯತೇ ॥

ಉಕ್ತಾರ್ಥದಾರ್ಢ್ಯಾಯ ಶಾಖಾಂತರಗತಾಂ ಗಾಥಾಮುದಾಹರತಿ ತತ್ತಸ್ಮಿನ್ನವಶ್ಯಾನುಷ್ಠಾನ-ರೂಪೇಽರ್ಥ ಏಷಾ ವಕ್ಷ್ಯಮಾಣಾ ಯಜ್ಞಮಭಿಲಕ್ಷ್ಯ ಸರ್ವೈರ್ಗೀಯಮಾನಾ ಯಜ್ಞಗಾಥಾ ಯಾಜ್ಞಿಕೈರ್ಗೀಯತೇ ಪಠ್ಯತೇ ॥

ಈ ವಿಚಾರದಲ್ಲಿ ಶಾಖಾಂತರಗತವಾದ ಗಾಥೆಯನ್ನು ಉದಾಹರಿಸುವರು. ಮೇಲೆ ಹೇಳಿದ ಕಾರ್ಯವನ್ನು (ದೇವಪೂಜಾದಿಗಳನ್ನು) ಅವಶ್ಯಕವಾಗಿ ಮಾಡಲೇಬೇಕೆಂಬ ವಿಷಯದಲ್ಲಿ ಯಜ್ಞವನ್ನುದ್ದೇಶಿಸಿ ಯಾಜ್ಞಿಕರೂ, ಎಲ್ಲರೂ ಗಾನಮಾಡುವ ಗಾಥೆಯನ್ನು ತಿಳಿಸುತ್ತಾರೆ.

ಯಜೇತ್ಸೌತ್ರಾಮಣ್ಯಾಮಪತ್ನೀಕೋಽಪ್ಯಸೋಮಪಃ। ಮಾತಾಪಿತೃಭ್ಯಾ-ಮನೃಣಾರ್ಥಾದ್ಯಜೇತಿ ವಚನಾಚ್ಛ್ರುತಿರಿತಿ ॥

ತಾಂ ಗಾಥಾಂ ದರ್ಶಯತಿ— ಅಪತ್ನೀಕೋಽಪಿ ಪುಮಾನ್ ಸೌತ್ರಾಮಣ್ಯಾಂ ಯಜೇತ ಸೌತ್ರಾಮಣೀಯಾಗಮಪಿ ಕುರ್ಯಾತ್ಕಿಮುತಾಗ್ನಿಹೋತ್ರಾದಿಕಂ ಹವಿರ್ಯಜ್ಞೇಷ್ವಸ್ಯಾಧಿಕಾರೋಽಸ್ತೀತ್ಯರ್ಥಃ । ತದ್ವತ್ಸೋಮಯಾಗೇಷ್ವಧಿಕಾರಶಂಕಾಯಾಂ ತದ್ವ್ಯಾವೃತ್ತ್ಯರ್ಥಮಸೋಮಪ ಇತ್ಯುಚ್ಯತೇ । ಯಥಾ ಪತ್ನೀರಹಿತೋಽಪಿ ಮಾತ್ರೇ ಪಿತ್ರೇ ಚಾಶನಾಚ್ಛಾದನಾದಿಕಂ ದದಾತಿ ತದ್ವದಗ್ನಿಹೋತ್ರಮಪಿ ಕುರ್ಯಾದಿತಿ ಶೇಷಃ । ಅತ್ರ ಹೇತುರನೃಣಾರ್ಥಾದಿತಿ ಋಣಪರಿಹಾರನಿಮಿತ್ತಮ್ । ತಥಾ ಚ ಶಾಖಾಂತರೇ ಶ್ರೂಯತೇ— ಜಾಯಮಾನೋ ವೈ ಬ್ರಾಹ್ಮಣಸ್ತ್ರಿಭಿರ್ಋಣವಾ ಜಾಯತೇ ಬ್ರಹ್ಮಚರ್ಯೇಣರ್ಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯ ಏಷ ವಾ ಅನೃಣೋ ಯಃ ಪುತ್ರೀ ಯಜ್ವಾ ಬ್ರಹ್ಮಚಾರೀ ವಾಸೀತಿ । ಅನೇನೈವಾಭಿಪ್ರಾಯೇಣ ಶ್ರುತಿಃ । ಶ್ರುತೇರ್ಯಜೇತಿ ವಚನಮಸ್ತಿ ಯಜ ದೇವಾನಧೀಷ್ವ ವೇದಾನ್ ಪ್ರಜಾಮುತ್ಪಾದಯೇತಿ ಶಾಖಾಂತರೇ ವಚನಮಸ್ತಿ । ತಸ್ಮಾದ್ವಚನಾದನುಷ್ಠಾನಪಕ್ಷ ಏವ ಯುಕ್ತ ಇತಿ ಗಾಥಾಯಾ ಅರ್ಥಃ ॥ ತಥಾ ಚ ವಿಷ್ಣುಃ ಸ್ಮರತಿ—

" ಮೃತಾಯಾಮಪಿ ಭಾರ್ಯಾಯಾಂ ವೈದಿಕಂ ನ ತ್ಯಜೇದ್ಬುಧಃ ।
ಉಪಾಧಿನಾಪಿ ಯತ್ಕರ್ಮ ಯಾವಜ್ಜೀವಂ ಸಮಾಪಯೇತ್ " ॥ ಇತಿ ॥

ಉಪಾಧಿಃ ಕುಶಮಯಾದಿಪತ್ನೀಕಲ್ಪನಾ । ತಥಾ ಚ ಸ್ಮೃತ್ಯಂತರಮ್ ॥

" ಅನ್ಯೇ ಕುಶಮಯೀಂ ಪತ್ನೀಂ ಕೃತ್ವಾ ತು ಗೃಹಮೇಧಿನಃ ॥
ಅಗ್ನಿಹೋತ್ರಮುಪಾಸಂತೇ ಯಾವಜ್ಜೀವಮನುವ್ರತಾಃ " ॥ ಇತಿ ॥

ತಥಾ ಚ ಮೈತ್ರಾಯಣೀಯಶ್ರುತಿರಪ್ಯಾಮ್ನಾಯತೇ—

ಯಸ್ತು ಸ್ವೈರಗ್ನಿಭಿರ್ಭಾರ್ಯಾಂ ಸಂಸ್ಕರೋತಿ ಕಥಂಚನ ।
ಅಸೌ ಮೃತಃ ಸ್ತ್ರೀ ಭವತಿ ಸ್ತ್ರೀ ಚೈವಾಸ್ಯ ಪುಮಾನ್ ಭವೇತ್ " ॥ ಇತಿ ॥

ತಸ್ಮಾನ್ಮೃತಭಾರ್ಯೋಽಪಿ ಸ್ವಕೀಯಾನಗ್ನೀನವಸ್ಥಾಪ್ಯಾಗ್ನಿಹೋತ್ರಮಾಹರೇತ್ ॥

ಅಪತ್ನೀಕನಾದ ಎಂದರೆ ಪತ್ನಿಯಿಲ್ಲದ (ವಿಧುರ) ಪುರುಷನೂ ಸಹ ಸೌತ್ರಾಮಣಿ ಎಂಬ ಯಾಗವನ್ನು ಮಾಡಬೇಕು ಎಂದಿರುವಾಗ ಅಗ್ನಿಹೋತ್ರ ಮತ್ತು ಹವಿರ್ಯಜ್ಞ ಮುಂತಾದವನ್ನು ಮಾಡಲು ಅವನಿಗೆ ಅಧಿಕಾರವೇ ಇದ್ದಂತಾಯಿತು. ಅದರಂತೆ ಸೋಮಯಾಗವನ್ನೂ ಮಾಡಲು ಅಧಿಕಾರವಿರುವುದೇ ಇಲ್ಲವೇ ಎಂದು ಸಂಶಯವುಂಟಾದರೆ ಅವನು **ಅಸೋಮಪಃ** ಎಂದರೆ ಸೋಮಪಾನಮಾಡಲು (ಸೋಮಯಾಗದಲ್ಲಿ) ಅನರ್ಹನು ಎಂದು ಹೇಳಬೇಕಾಗುವುದು. ಪತ್ನೀರಹಿತನಾದ ಪುರುಷ ತನ್ನ ತಂದೆ ತಾಯಿಗಳನ್ನು ಅಶನವಸನಾದಿಗಳಿಂದ ಕಾಪಾಡುವನು. ಅದರಂತೆಯೇ ಅಗ್ನಿಹೋತ್ರವನ್ನೂ ಮಾಡಬಹುದು. ಏಕೆಂದರೆ ದೇವತೆಗಳಿಗೂ, ಪಿತೃಗಳಿಗೂ ಋಷಿಗಳಿಗೂ ತನ್ನ ಕರ್ತವ್ಯವಾದ ಋಣವನ್ನು (ಕರ್ತವ್ಯಕರ್ಮವನ್ನು) ತೀರಿಸಲೇಬೇಕು ಎಂದು ತೈತ್ತಿರೀಯ ಶ್ರುತಿವಚನವಿರುವುದು.

ಜಾಯಮಾನೋ ವೈ ಬ್ರಾಹ್ಮಣಸ್ತ್ರಿಭಿರ್ಋಣವಾ ಜಾಯತೇ ಬ್ರಹ್ಮ
ಚರ್ಯೇಣರ್ಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯ

ಏಷ ವಾ ಅನೃಣೋ ಯಃ ಪುತ್ರೀ ಯಜ್ವಾ ಬ್ರಹ್ಮಚಾರಿವಾಸೀ ॥

(ತೈ. ಸಂ. ೬-೩-೧೦)

ಎಂದರೆ ಬ್ರಾಹ್ಮಣ ಜನ್ಮದಲ್ಲಿ ಹುಟ್ಟುವ ಪುರುಷನು ಹುಟ್ಟುವಾಗಲೇ ಮೂರುವಿಧ ಋಣಗಳನ್ನು (ಕರ್ತವ್ಯಕರ್ಮ) ಹೊತ್ತುಕೊಂಡೇ ಹುಟ್ಟುವನು. ಅವು ಯಾವುವೆಂದರೆ ಋಷಿಋಣ, ದೇವಋಣ, ಪಿತೃಋಣ ಎಂದು ಮೂರು ವಿಧವಾದ ಋಣಗಳಿರುವವು. (ಬ್ರಹ್ಮಚಾರಿಯಾಗಿ ಉಪನಯನಾನಂತರ ತನ್ನ ಗುರುವಿನ ಸಮೀಪದಲ್ಲಿ ವಾಸಿಸುತ್ತಾ ತನ್ನ ಸ್ವಶಾಖೋಕ್ತವಾದ ವೇದವನ್ನು ಅಧ್ಯಯನ ಮಾಡುವುದರಿಂದ ಋಷಿಋಣವನ್ನು ತೀರಿಸಿದಂತಾಗುವುದು; ಅನಂತರ ಪತ್ನೀ ಸಹಿತನಾಗಿ ಯಜ್ಞಯಾಗಾದಿಗಳನ್ನು ಮಾಡಿ ಆ ಮೂಲಕ ದೇವತೆಗಳನ್ನು ಪೂಜಿಸಿ ತೃಪ್ತಿಗೊಳಿಸುವುದರಿಂದ ದೇವಋಣವನ್ನೂ ತೀರಿಸಿದಂತಾಗುವುದು. ವಿವಾಹವಾದ ತನ್ನ ಪತ್ನಿಯಲ್ಲಿ ಪ್ರಜೋತ್ಪಾದನೆಮಾಡುವುದರಿಂದ ಪಿತೃಋಣವನ್ನು ತೀರಿಸಿದಂತಾಗುವುದು ಎಂದು ಹೇಳಿದೆ.) ಆದ್ದರಿಂದ ಬ್ರಾಹ್ಮಣನಾದವನು ಈ ಕರ್ತವ್ಯಕರ್ಮವನ್ನು ಮಾಡಲೇಬೇಕು. ಎಂದು ವಿಧಿ ಇರುವುದು.

ಮೃತಾಯಾಮಪಿ ಭಾರ್ಯಾಯಾಂ ವೈದಿಕಂ ನ ತ್ಯಜೇದ್ದ್ವಿಜಃ ।
ಉಪಾಧಿನಾಪಿ ಯತ್ಕರ್ಮ ಯಾವಜ್ಜೀವಂ ಸಮಾಪಯೇತ್ ॥

ಎಂದು ಹೇಳಿರುವುದು. ಎಂದರೆ ದ್ವಿಜನಾದವನು ತನ್ನ ಪತ್ನಿಯು ಮೃತಳಾಗಿ ತಾನು ಅಪತ್ನೀಕನಾಗಿದ್ದರೂ ವೈದಿಕಕರ್ಮಗಳನ್ನು ಆಚರಿಸದೆ ಬಿಡಬಾರದು. ಅಗ್ನಿಹೋತ್ರ ಸೋಮಯಾಗ ಮುಂತಾದ ಅವಶ್ಯಕರ್ಮಗಳಲ್ಲಿಯೂ ದರ್ಭೆಯಿಂದ ಪತ್ನಿಯ ಪ್ರತೀಕವಾಗಿ ಪವಿತ್ರವನ್ನು ಮಾಡಿರಿಸಿ ಅದನ್ನೇ ಪತ್ನಿಯೆಂದು ಭಾವಿಸಿ ಯಜ್ಞ ಮೊದಲಾದ ವೈದಿಕ ಕರ್ಮಗಳನ್ನು ತಪ್ಪದೆ ಮಾಡಬೇಕು. ಈರೀತಿ ಆಜೀವಪರ್ಯಂತರವೂ ಮಾಡಬೇಕು ಎಂದು ಹೇಳಿದೆ. ಬೇರೆ ಸ್ಮೃತಿಯಲ್ಲಿ—

ಅನ್ಯೇ ಕುಶಮಯೀಂ ಪತ್ನೀಂ ಕೃತ್ವಾ ತು ಗೃಹಮೇಧಿನಃ ।
ಅಗ್ನಿಹೋತ್ರಮುಪಾಸಂತೇ ಯಾವಜ್ಜೀವಮನುವ್ರತಾಃ ॥

ಎಂದು ಹೇಳಿದೆ. ಇಲ್ಲಿಯೂ ಹಿಂದೆ ಹೇಳಿದಂತೆಯೇ ವಿವರಿಸಲಾಗಿದೆ. ಮೈತ್ರಾಯಣೀಯಶ್ರುತಿಯಲ್ಲಿಯೂ—

ಯಸ್ತು ಸ್ವೈರಗ್ನಿಭಿರ್ಭಾರ್ಯಾಂ ಸಂಸ್ಕರೋತಿ ಕಥಂಚನ ।
ಅಸೌ ಮೃತಃ ಸ್ತ್ರೀ ಭವತಿ ಸ್ತ್ರೀಚೈವಾಸ್ಯ ಪುಮಾನ್ಭವೇತ್ ॥

ಎಂದು ಹೇಳಿದೆ. ಆದ್ದರಿಂದ ತನ್ನ ಭಾರ್ಯೆಯು ಮೃತಳಾಗಿ ತಾನು ಅಪತ್ನೀಕನಾಗಿದ್ದರೂ ಪುರುಷನು ತನ್ನ ಗೃಹದಲ್ಲಿ ತನ್ನ ಸ್ವಂತವಾದ ಗಾರ್ಹಪತ್ಯಾಗ್ನಿಯನ್ನು ಸ್ಥಾಪಿಸಿ ಅಗ್ನಿಹೋತ್ರಾದಿಗಳನ್ನು ಮಾಡಬೇಕು.

**ತಸ್ಮಾತ್ಸೌಮ್ಯಂ ಯಾಜಯೇತ್ ॥**

ತದೇತದಭಿಪ್ರೇತ್ಯೋಪಸಂಹರತಿ—ಋಣಾಪಕರಣಾರ್ಥೀ ದೋಷರಾಹಿತ್ಯಾತ್ ಸೌಮ್ಯಃ । ತಾದೃಶಮವಶ್ಯಮಗ್ನಿಹೋತ್ರಾದ್ಯನುಷ್ಠಾಪಯೇತ್ ॥

ಹಿಂದೆ ಹೇಳಿದಂತೆ ಬ್ರಾಹ್ಮಣನಾದವನು ಋಣತ್ರಯ ಪರಿಹಾರಕ್ಕಾಗಿ ಸಪತ್ನೀಕನಾಗಲಿ ಅಪತ್ನೀಕನಾಗಲಿ ಸೋಮ ಯಾಗವನ್ನು ಮಾಡಬೇಕು. ಅದರಂತೆಯೇ ಅಗ್ನಿಹೋತ್ರಾದಿ ಕರ್ಮಗಳನ್ನೂ ಅವಶ್ಯವಾಗಿ ಮಾಡಬೇಕು.



*English Translation*

**(Penance for an Agnihorti when he eats new corn without bringing the sacrifice prescribed, and for various mishaps and neglects when sacrificing.)**

They ask, When an Agnihotri eats new corn without having offered the Agrayana Isthi, what is the penance for it ? He must offer to Agni Vaisvanara Purodasa consisting of twelve pieces under the recital of the following Anuvakya and Yajya ; Vaisvanro ajijanat ? prishto divi prishto (1, 98, 2). Or he may offer to Agni Vaisvanara (melted butter) in the Ahavaniya fire under the recital of, to Agni Vaisvanara Svaha ! This is the penance for it.

They ask, When one of the potsherds (Kapalas) containing the Purodasa should be destroyed, what is the penance for it ? He must offer a Purodasa, consisting of two pieces, to the Asvins, under the recital of the following Anuvakya and Yajya : asvina vartir (1, 92, 16) : a gomata nasatya (7, 21, 1). Or he may sacrifice melted butter in the Ahavaniya fire under the recital of, to the Asvins Svaha ! This is the penance for it.

They ask, Whe the stalks of kusa grass (pavitra) on which the offering is placed—should be destroyed, what is the penance for it ? He must offer to Agni pavitravat a Purodasa consisting of eight pieces, under the recital of the following Anuvakya and Yajya ; pavitram te vitatam (9, 83, 1) ; taposh pavitram (9, 83, 2). Or he may offer melted butter in the Ahavaniy fire under the recital of, to Agni pavitravat Svaha ! This is the penance for it

They ask, when the gold of an Agnihotri should be destroyed, what is the penance for it ? He must offer to Agni hiranyavat, a Purodasa consisting of eight pieces under the recital of the following Anuvakya and Yajya : hiranya-

keso rajaso visara (1, 79, 1); a te suparna aminantam. (1, 79, 2). Or he may offer melted butter in the Ahavaniya fire under the recital of, to Agni hiranyavat Svaha! This is the penance for it.

They ask, When an Agnihotri offers the fire oblation without having performed in the morning the usual ablution, what is the penance for it? He must offer to Agni Varuna, a Purodasa consisting of eight pieces under the recital of the following Anuvakya and Yajya; tvam no agne varunasya (4, 1, 4) asatvam no agne avamo (4, 1, 5). Or he may offer melted butter in the Ahavaniya fire under the recital of, to Agni Varuna Svaha! This is the penance for it.

They ask, When an Agnihotri eats food prepared by a woman, who is confined (sutaka,) what is the penance for it? He must offer to Agni tantumat a Purodasa consisting of eight pieces under the recital of the following Anuvakya and Yajya; tantum tanvan rajaso (10, 53, 6); akshanaho nahy tantota (10, 53, 7). Or he may sacrifice melted butter in the Ahavaniya fire, under the recital of, to Agni tantumat Svaha! This is the penance for it.

They ask, When an Agnihotri hears, when living, any one, an enemy, say, that he (the Agnihotri) is dead, what is the penance for it? He must offer to Agni surabhimat a Purodasa consisting of eight pieces under the recital of the following Anuvakya and Yajya; Agnir hota nyasidad (5, 1, 6); sadhvim akar deva vitim (10, 53, 3). Or he may sacrifice melted butter in the Ahavaniya fire under the recital of, to Agnir surabhimat Svaha! This is the penance for it.

They ask, When the wife or the cow of an Agnihotri give birth to twins, what is the penance for it? He must offer to Agni murutvat a Purodasa consisting of thirteen pieces under the recital of the following Anuvakya and Yajya: maruto yasya hi kshaye (1, 86, 1); are ived (5, 58, 5). Or he may sacrifice melted butter in the Ahavaniya fire under the recital of, to Agni marutvar Svaha! This is the penance for it.

They ask, Should an Agnihotri who has lost his wife, bring the fire oblation, or he should not ? He should do so, If he does not do so, then he is called an Anaddha man. Who is an Anaddha ? He offers oblations to neiter the gods nor to ancestors, nor to men. Therefore the Agnihotri who has lost his wife, should nevertheless bring the burnt offering (agnihotram). There is a stanza concerning sacrifical customs, where is said, " He who has lost his wife may bring the Sautramani, sacrifice ; for he is not allowed to drink Soma But he must discharge the dutes towards his parents, But where as the sacred radition (sruti) enjoins sacrifice, let him bring the Soma sacrifice.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾತ್ರಿಂಶಾಧ್ಯಾಯೇ ಅಷ್ಟಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂವತ್ತೆರಡನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು
ಸಮಾಪ್ತವಾದುದು



# ಅಥ ದ್ವಾತ್ರಿಂಶಾಧ್ಯಾಯೇ ನವಮಃ ಖಂಡಃ

## ಮೂವತ್ತೆರಡನೆಯ ಅಧ್ಯಾಯದಲ್ಲಿ ಒಂಭತ್ತನೆಯ ಖಂಡವು

---

[ಪತ್ನಿ ಇಲ್ಲದ ಅಪತ್ನೀಕನೆನಿಸಿದವನು ಮಾಡಬೇಕಾದ ಅಗ್ನಿಹೋತ್ರವೆಂಬ ಕರ್ಮವನ್ನು ಹೇಗೆ ಮಾಡಬೇಕು ಇತ್ಯಾದಿ]

---

ಈ ಅಧ್ಯಾಯದಲ್ಲಿರುವ ಮುಂದಿನ ಎರಡು ಖಂಡಗಳು ೯ ಮತ್ತು ೧೦ ನೇ ಖಂಡಗಳು ಕೆಲವು ಪ್ರತಿಗಳಲ್ಲಿ ಹಿಂದು ಮುಂದಾಗಿ ಪಠಿತವಾಗಿವೆ. ಎಂದರೆ ೧೦ ನೇ ಖಂಡವು ೯ನೇ ಖಂಡವೆಂದೂ, ೯ನೇ ಖಂಡವು ೧೦ನೇ ಖಂಡವೆಂದು ಪರಿಗಣಿಸ ಲಾಗಿದೆ. ಅದರಂತೆ ಆನಂದಾಶ್ರಮದಲ್ಲಿ ಮುದ್ರಣವಾದ ಪ್ರತಿಯಂತೆ ಇಲ್ಲಿ ಇರುವ ೯–೧೦ನೇ ಖಂಡಗಳು ಕಲ್ಕತ್ತಾದಲ್ಲಿ ಮುದ್ರಿತವಾದ ಪ್ರತಿಯಲ್ಲಿ ೧೦–೯ ಖಂಡಗಳೆಂದು ಮುದ್ರಿತವಾಗಿವೆ. ಭಾಷ್ಯಕಾರರಾದ ಸಾಯಣರೂ ಸಹ ಬೇರೆ ಬೇರೆ ದೇಶ ಗಳಲ್ಲಿ ರೂಢಿಯಲ್ಲಿರುವ ಪಾಠಭೇದದ ಈ ವಿಚಾರವನ್ನು ಹೇಳಿದ್ದಾರೆ. ಇಲ್ಲಿ ದಕ್ಷಿಣದೇಶದಲ್ಲಿ ರೂಢಿಯಲ್ಲಿರುವ ಪಾಠಭೇದ ವನ್ನನುಸರಿಸಿ ೯ ಮತ್ತು ೧೦ನೇ ಖಂಡಗಳು ವಿವರಿಸಲ್ಪಟ್ಟವೆ.

ತದಾಹುರ್ಯದ್ದರ್ಶಪೂರ್ಣಮಾಸಯೋರುಪವಸತಿ ನ ಹ ವಾ ಅವ್ರತಸ್ಯ ದೇವಾ ಹವಿರಶ್ನಂತಿ ತಸ್ಮಾದುಪವಸತ್ಯುತ ಮೇ ದೇವಾ ಹವಿರಶ್ನೀಯುರಿತಿ ||

**ಅತ ಊರ್ಧ್ವಂ ಖಂಡದ್ವಯಂ ದೇಶವಿಶೇಷೇಣ ಕೇಚಿದಾಮನಂತಿ ಕೇಚಿನ್ನಾಮನಂತಿ। ಅತ ಏವ ಪೂರ್ವನಿಬಂಧಕಾರಾಃ ಪಾಠರಹಿತದೇಶಾನುಸಾರೇಣ ತದ್ವ್ಯಾಖ್ಯಾನಮುಪೇಕ್ಷಿತವಂತಃ। ಅಸ್ಮಾಭಿಸ್ತು ಪಾಠೋಪೇತದೇಶಾನುಸಾರೇಣ ತದ್ವ್ಯಾಖ್ಯಾಯತೇ। ತದ್ವ್ರತನಿಮಿತ್ತಮುಪವಾಸಂ ವಿಧತ್ತೇ—ತತ್ತಸ್ಮಿನ್ನಿಷ್ಟ್ಯನುಷ್ಠಾನವಿಷಯೇ ಬ್ರಹ್ಮವಾದಿನ ಏವಮಾಹುಃ। ಯಃ ಕೋಽಪ್ಯನುಷ್ಠಾತಾ ದರ್ಶಪೂರ್ಣಮಾಸಯೋರುಪವಾಸಂ ಕುರ್ಯಾತ್। ಯಾಗರೂಪಂ ವ್ರತಂ ನಿಶ್ಚಿತ್ಯ ಗಾರ್ಹಪತ್ಯಾದ್ಯಗ್ನಿ ಸಮೀಪೇ ಯೋ ವಾ (ಸಃ) ಸ ಉಪವಾಸಃ। ಯದಿ (ದ್ವಾ) ದೇವಾ ಅಸ್ಯಾಪಿ ಯಜ್ಞೇ ಸಮೀಪೇ ವಸಂತೀತ್ಯೇತದೀಯೋಽನುಷ್ಠಾನಸಂಕಲ್ಪ ಉಪವಾಸಃ। ಅಗ್ನ್ಯುಪಸ್ತರಣಾದಿನಾ ತದೀಯೋಽನು-ಷ್ಠಾನನಿಶ್ಚಯೋಽವಗಂತವ್ಯಃ। ಅತ ಏವ ಶಾಖಾಂತರೇ ಶ್ರೂಯತೇ—ಉಪಾಸ್ಮಿನ್ ಶ್ವೋ ಯಕ್ಷ್ಯ ಮಾಣೇ ದೇವತಾ ವಸಂತಿ। ಯ ಏವಂ ವಿದ್ವಾನಗ್ನಿಮುಪಸ್ತೃಣಾ (ತೀ) ತಿ ಅವ್ರತಸ್ಯ ನಿಯಮ-ವಿಶೇಷಸ್ವೀಕಾರರೂಪವ್ರತರಹಿತಸ್ಯ ಪುರುಷಸ್ಯ ಹವಿರ್ದೇವಾ ನೈವಾಶ್ನಂತಿ। ತಸ್ಮಾತ್ ಕಾರಣಾದುತ ಮೇ ಮಮಾಪಿ ಹವಿರ್ದೇವಾ ಅಶ್ನೀಯುರಿತ್ಯಭಿಪ್ರೇತ್ಯ ನಿಯಮಂ ಸ್ವೀಕೃತ್ಯಾಗ್ನಿಸಮೀಪ ಉಪ ವಸೇತ್। ಏತದೇವಾಭಿಪ್ರೇತ್ಯಾಪಸ್ತಂಬ ಆಹ—'ಆಹವನೀಯಾಗಾರೇ ಗಾರ್ಹಪತ್ಯಾಗಾರೇ ವಾ ಶೇತೇ' ಇತಿ। ಯದ್ವಾ ಗ್ರಾಮ್ಯಾಶನಪರಿತ್ಯಾಗ ಉಪವಾಸಃ। ತತ್ ಪರಿತ್ಯಜ್ಯಾಽರಣ್ಯಾಶನರೂಪಂ ನಿಯಮಂ ಸ್ವೀಕುರ್ಯಾತ್। ಅತ ಏವ ಶಾಖಾಂತರೀಯಾ ಆಹುಃ—"ಯದ್ಗ್ರಾಮ್ಯಾನುಪವಸತಿ ತೇನ ಗ್ರಾಮ್ಯಾನವರುಂಧತೇ ಯದಾರಣ್ಯಸ್ಯಾಶ್ನಾತಿ ತೇನಾರಣ್ಯಾನ್ಯದನಾಶ್ವಾನುಪವಸೇತ್ ಪಿತೃ ದೇವತ್ಯಃ ಸ್ಯಾದಾರಣ್ಯಸ್ಯಾಶ್ನಾತಿ' ಇತಿ ||**

ವ್ರತಾನುಷ್ಠಾನವಿಷಯಲ್ಲಿ ಉಪವಾಸ ಕ್ರಮವನ್ನು ವಿವರಿಸುವರು—ಹೋಮಾದಿ ಅನುಷ್ಠಾನ ವಿಷಯದಲ್ಲಿ ಬ್ರಹ್ಮವಾದಿಗಳು (ಯಜ್ಞಾನುಷ್ಠಾನ ಕುಶಲರು) ಈ ರೀತಿ ಹೇಳುವರು. ಯಜ್ಞಾನುಷ್ಠಾನಮಾಡುವ ಯಾವ ಪುರುಷನೇ ಆಗಲಿ ಅವನು ಉಪವಾಸವೆಂದರೆ (ಉಪ=ಸಮೀಪದಲ್ಲಿ, ವಾಸ=ಇರುವುದು, ವಾಸಮಾಡುವುದು ಎಂದರ್ಥವು.) ನಾನು ಇಂತಹ ಯಾಗವನ್ನು ಮಾಡುವೆನೆಂದು ನಿಶ್ಚಯಿಸಿ ಗಾರ್ಹಪತ್ಯ ಮೊದಲಾದ ಯಾವುದಾದರೂ ಅಗ್ನಿಯ ಸಮೀಪದಲ್ಲಿ ಇದ್ದು ಯಾಗಾನುಷ್ಠಾನ ಮಾಡುವೆನೆಂದು ಸಂಕಲ್ಪಿಸಿ ಅಲ್ಲಿಯೇ ಆ ದಿನ (ಅಥವಾ ರಾತ್ರಿ) ನೆಲಸಿರುವುದೇ ಉಪವಾಸ ವೆನಿಸುವುದು. ಅಗ್ನಿಗೆ ಉಪಸ್ತರಣಾದಿ (ಉಪಸ್ತರಣವೆಂದರೆ ಅಗ್ನಿಯ ನಾಲ್ಕು ಪಾರ್ಶ್ವಗಳಲ್ಲಿಯೂ ಇಡುವ ದರ್ಭೆಗಳು) ಗಳಿಂದ ಸಂಸ್ಕಾರಮಾಡಿ ಅನುಷ್ಠಾನವನ್ನು ಮಾಡುತ್ತೇನೆಂದು ದೃಢಸಂಕಲ್ಪವೇ ನಿಶ್ಚಯವು—ಶಾಖಾಂತರದಲ್ಲಿ ಈ ರೀತಿ ಹೇಳಿರುವುದು—ಉಪಾಸ್ಮಿಂಚ್ಛ್ವೋ ಯಕ್ಷ್ಯಮಾಣೇ ದೇವತಾ ವಸಂತಿ। ಯ ಏವಂ ವಿದ್ವಾನಗ್ನಿಮುಪಸ್ತೃಣಾತಿ (ತೈ. ಸಂ. ೧-೬-೭-೩) ಎಂದರೆ ಯಾವ ಪುರುಷನು ಅಗ್ನಿಯನ್ನು ಉಪಸ್ತರಣಾದಿಗಳಿಂದ ಸಂಸ್ಕರಿಸುವನೋ ಅವನು ಮಾಡುವ ಮಾರನೆಯ ದಿನದ ಯಜ್ಞದಲ್ಲಿ ದೇವತೆಗಳು ಬಂದು ನೆಲಸುವರು ಎಂದು ಈ ಶ್ರುತಿವಾಕ್ಯದ ಅರ್ಥವು. ಆದರೆ ಅವ್ರತಸ್ಯ

ಎಂದರೆ ವಿಶೇಷ ನಿಯಮಗಳನ್ನು ಪಾಲಿಸದಿರುವ ಪುರುಷನು ಮಾಡುವ ಯಜ್ಞದಲ್ಲಿ ದೇವತೆಗಳು ಹವಿರಾದಿಗಳನ್ನು ಸ್ವೀಕರಿಸಿ ಭಕ್ಷಿಸುವುದಿಲ್ಲ. ಆದ್ದರಿಂದ ನಾನು ಅರ್ಪಿಸುವ ಹವಿಸ್ಸನ್ನು ದೇವತೆಗಳು ಸ್ವೀಕರಿಸಿ ಭಕ್ಷಿಸಬೇಕು ಎಂದು ಬಯಸುವ ಪುರುಷನು ನಿಯಮಗಳನ್ನು ಪಾಲಿಸುತ್ತಾ ಅಗ್ನಿಯ ಸಮೀಪದಲ್ಲಿ ಉಪವಾಸವಿರಬೇಕು ಎಂದರೆ ಅಲ್ಲಿಯೇ ತಂಗಿರಬೇಕು. ಈ ವಿಷಯವನ್ನೇ ಉದ್ದೇಶಿಸಿ ಆಪಸ್ತಂಬಮಹರ್ಷಿಯು—**ಆಹವನೀಯಾಗಾರೇ ಗಾರ್ಹಪತ್ಯಾಗಾರೇ ವಾ ಶೇತೇ** (ಆಪ. ಶ್ರೌ. ಸೂ. ೪-೩-೧೭) ಎಂದರೆ ಆಹವನೀಯಾಗ್ನಿಯ ಸಮೀಪದಲ್ಲಾಗಲಿ, ಗಾರ್ಹಪತ್ಯಾಗ್ನಿಯ ಸಮೀಪದಲ್ಲಾಗಲಿ, ತಂಗಬಹುದು ಎಂದು ಹೇಳಿದ್ದಾರೆ. ಅಥವಾ ಉಪವಾಸವೆಂದರೆ ಇನ್ನೊಂದು ಅರ್ಥವೂ ಇರುವುದು. **ಗ್ರಾಮ್ಯಾಶನಪರಿತ್ಯಾಗಃ ಉಪವಾಸಃ । ತತ್ಪರಿತ್ಯಜ್ಯ ಆರಣ್ಯಾಶನರೂಪಂ ನಿಯಮಂ ಸ್ವೀಕುರ್ಯಾತ್ ।** ಗ್ರಾಮದಲ್ಲಿ ಜನರು ತಮ್ಮ ಮನೆಗಳಲ್ಲಿ ಅಡಿಗೆ ಮಾಡಿ ಭುಜಿಸುವ ಪಕ್ವಾನ್ನವು ಭಕ್ಷ್ಯಭೋಜ್ಯಾದಿಪರಿಕರಗಳು. ಈ ವಿಧವಾದ ಆಹಾರಕ್ಕೆ ಗ್ರಾಮ್ಯಾಶನವೆನ್ನುವರು. ನಿಯಮವನ್ನು ಸ್ವೀಕರಿಸಿದ ಪುರುಷನು ಈ ಗ್ರಾಮ್ಯಾಶನವನ್ನು ತ್ಯಜಿಸಿ (ಬಿಟ್ಟು) ಆರಣ್ಯಾಶನ ಎಂದರೆ ಅರಣ್ಯದಲ್ಲಿ ದೊರೆಯುವ ಕಂದಮೂಲ ಫಲಗಳನ್ನು ಎಂದರೆ ಗೆಡ್ಡೆಗೆಣಸುಗಳನ್ನು ಮಾತ್ರವೇ ತಿನ್ನುವ ನಿಯಮವನ್ನು ಸ್ವೀಕರಿಸಬೇಕು. ಈ ವಿಷಯದಲ್ಲಿ ತೈತ್ತಿರೀಯ ಸಂಹಿತೆಯು ಸಹ ಈ ರೀತಿ ತಿಳಿಸುವುದು—**ಯದ್ಗ್ರಾಮ್ಯಾನುಪವಸತಿ । ತೇನ ಗ್ರಾಮ್ಯಾನವರುಂಧೇ । ಯದಾರಣ್ಯಸ್ಯಾಶ್ನಾತಿ ತೇನಾರಣ್ಯಾನ್ । ಯದನಾಶ್ವಾನುಪವಸೇತ್ । ಪಿತೃದೇವತ್ಯಾಃ ಸ್ಯಾದಾರಣ್ಯಸ್ಯಾಶ್ನಾತಿ ॥** (ತೈ. ಸಂ, ೧-೬-೭-೩) ಎಂದು.

**ಪೂರ್ವಾಂ ಪೌರ್ಣಮಾಸೀಮುಪವಸೇದಿತಿ ಪೈಂಗ್ಯಮುತ್ತರಾಮಿತಿ ಕೌಷೀತಕಂ ಯಾ ಪೂರ್ವಾ ಪೌರ್ಣಮಾಸೀ ಸಾಽನುಮತಿರ್ಯೋತ್ತರಾ ಸಾ ರಾಕಾ ॥**

ಅತ್ರೋಪವಾಸತಿಥಿವಿಷಯೇ ಶಾಖಾಭೇದವಚನಮಾಶ್ರಿತ್ಯ ವಿಕಲ್ಪಂ ದರ್ಶಯತಿ—ಖಂಡ-ತಿಥಿವಶಾದ್ಯದಾ ದಿನದ್ವಯೇ ಪೌರ್ಣಮಾಸೀ ತಿಥಿಃ ಸಂಪದ್ಯತೇ ತದಾನೀಂ ಪೂರ್ವಾಂ ಪೌರ್ಣಮಾಸೀಮುಪವಸೇತ್ಪೂರ್ವದಿನ ಉಪವಾಸಂ ಕೃತ್ವಾ ಪರೇದ್ಯುರ್ಯಜೇತೇತಿ ಸಾಮಶಾಖಾಪ್ರವರ್ತಕಸ್ಯ ಪೈಂಗೇರ್ಮಹರ್ಷೇರ್ಮತಮ್। ಉತ್ತರಾಂ ಪೌರ್ಣಮಾಸೀಮುಪವಸೇದುತ್ತರಸ್ಮಿನ್ದಿನ ಉಪವಾಸಂ ಕೃತ್ವಾ ತತೋಽಪಿ ಪರೇದ್ಯುರ್ಯಜೇತೇತ್ಯೃಕ್ಶಾಖಾಪ್ರವರ್ತಕಸ್ಯ ಕೌಷೀತಕಿಮಹರ್ಷೇರ್ಮತಮ್।

ಏತದೇವ ಮತದ್ವಯಮುಪಜೀವ್ಯ ಸ್ಮಾರ್ತಾ ಏವಂ ವರ್ಣಯಂತಿ—

> "ಪೂರ್ವಪ್ರತಿಪದೋಃ ಸಂಧಿರ್ಮಧ್ಯಾಹ್ನೇ ಪೂರ್ವತೋಽಪಿ ವಾ ।
> ಅನ್ವಾಧಾನಂ ಪೂರ್ವದಿನೇ ತದ್ದಿನೇ ಯಾಗ ಇಷ್ಯತೇ ॥
> ಪರತಶ್ಚೇತ್ಪರೇಽಹ್ನೀಷ್ಟಿಸ್ತದ್ದಿನೇಽನ್ವಾಹಿತಿರ್ಭವೇತ್" ಇತಿ ॥

ನ ಚ ಪೌರ್ಣಮಾಸೀದ್ವಯಸದ್ಭಾವೇ ವೇದಿತವ್ಯಮ್ । ಅನುಮತಿರಾಕಾಶಬ್ದಾಭ್ಯಾಂ ಪೌರ್ಣಮಾಸೀಭೇದಸ್ಯ ಸರ್ವತ್ರ ವ್ಯವಹೃತತ್ವಾತ್ । ತಯೋಃ ಸ್ವರೂಪಮಭಿಧಾನಕಾರ ಆಹ—"ಕಲಾಹೀನೇ ಸಾನುಮತಿಃ ಪೂರ್ಣೇ ರಾಕಾ ನಿಶಾಕರೇ" ಇತಿ । ಚತುರ್ದಶೀಸಂಯೋಗಾಚ್ಚಂದ್ರಮಸಿ ಕಲಾಹೀನೇ ಸತ್ಯನುಮತಿರಿತ್ಯುಚ್ಯತೇ । ತತ್ಸಂಯೋಗಾಭಾವೇನ ಚಂದ್ರಮಂಡಲೇ ಪೂರ್ಣೇ ಸತಿ ರಾಕೇತ್ಯುಚ್ಯತೇ ॥

ಮೇಲೆ ಹೇಳಿದ ಉಪವಾಸದ ದಿನದ (ತಿಥಿಯ) ವಿಷಯದಲ್ಲಿ ಶಾಖಾಭೇದದ ಪ್ರಕಾರ ಬೇರೆ ಬೇರೆ (ವಿಕಲ್ಪ) ವಿಧಗಳನ್ನು ವಿವರಿಸುವರು—ಒಂದು ದಿನದಲ್ಲಿ ತಿಥಿದ್ವಯ ಸಂಭವವಿರುವಾಗ ಎಂದರೆ ಒಂದೇ ತಿಥಿಯಲ್ಲಿ ಚತುರ್ದಶೀ ತಿಥಿ ಮತ್ತು ಪೌರ್ಣಮಾಸೀ ತಿಥಿಗಳ ಸಂಯೋಗವಿದ್ದರೆ ಎಂದರೆ ಪೌರ್ಣಮಾಸೀ ತಿಥಿಯು ಎರಡು ದಿನಗಳಲ್ಲಿಯೂ ಸ್ವಲ್ಪಸ್ವಲ್ಪ ವ್ಯಾಪಿಸಿದ್ದರೆ ಆಗ ಮೊದಲನೇ ದಿನ ಪೌರ್ಣಮಾಸೀ ಇರುವ ಕಾಲದಲ್ಲಿ ಉಪವಾಸಾದಿ ನಿಯಮವನ್ನು ಕೈಗೊಂಡು ಮಾರನೆಯ (ಎರಡನೆಯ) ದಿನ ಯಜ್ಞಾನುಷ್ಠಾನವನ್ನು ಮಾಡಬೇಕು ಎಂಬುದು ಸಾಮವೇದಶಾಖಾ ಪ್ರವರ್ತಕರಾದ ಪೈಂಗಮಹರ್ಷಿಗಳ ಅಭಿಪ್ರಾಯವು; ಎರಡನೇ ದಿನದಲ್ಲಿ ವ್ಯಾಪಿಸಿರುವ ಪೌರ್ಣಮಾಸಿಯಲ್ಲಿ ಉಪವಾಸಾದಿಗಳನ್ನು ಮಾಡಿ ಅದರ ಮಾರನೆಯ ದಿನ (ಪ್ರತಿಪದ್ದಿನ) ಯಜ್ಞಾದಿಗಳನ್ನು ಮಾಡಬೇಕೆಂಬುದು ಋಗ್ವೇದಶಾಖಾ ಪ್ರವರ್ತಕರಾದ ಕೌಷೀತಕೀ ಎಂಬ ಮಹರ್ಷಿಯ ಮತವು (ಅಭಿಪ್ರಾಯವು). ಈ ಎರಡು ವಿಧವಾದ ಮತಗಳನ್ನೂ ಗಮನಿಸಿ ಸ್ಮೃತಿಕಾರರು ಹೀಗೆ ಹೇಳಿರುವರು—

**ಪರ್ವಪ್ರತಿಪದೋಃ ಸಂಧಿರ್ಮಧ್ಯಾಹ್ನೇ ಪೂರ್ವತೋಽಪಿ ವಾ ।**
**ಅನ್ವಾಧಾನಂ ಪೂರ್ವದಿನೇ ತದ್ದಿನೇ ಯಾಗ ಇಷ್ಯತೇ ॥**
**ಪರತಶ್ಚೇತ್ಪರೇಽಹ್ನೀಷ್ಟಿಸ್ತದ್ದಿನೇಽನ್ವಾಹಿತಿರ್ಭವೇತ್ ॥**

ಪೌರ್ಣಮಾಸೀತಿಥಿಯು ಎರಡು ದಿನ ವ್ಯಾಪಿಸದಿದ್ದರೆ ಎಂದರೆ ಪೌರ್ಣಮಾಸಿಯು ಒಂದು ದಿನ ಮಾತ್ರವಿದ್ದು ಮಾರನೆಯ ದಿನ ಪ್ರತಿಪತ್ ಇದ್ದರೆ ಆಗ ಮಾಡುವ ಕ್ರಮವು ಹೀಗಿರುವುದು—ಅನುಮತಿ ಮತ್ತು ರಾಕಾ ಎಂಬ ಎರಡು ಶಬ್ದಗಳೂ ಪೌರ್ಣಮಾಸೀ ಎಂಬ ತಿಥಿಯನ್ನೇ ಸೂಚಿಸುವುವು. ಆದರೆ ಪೌರ್ಣಮಾಸಿಯಲ್ಲಿ ಚತುರ್ದಶೀ ಸಂಯೋಗವಿದ್ದರೆ ಅದು ಅನುಮತಿ ಎಂದು ಹೇಳಲ್ಪಡುವುದು. ಆ ರೀತಿ ಇಲ್ಲದೆ ಎಂದರೆ ಚತುರ್ದಶೀಸಂಯೋಗವಿಲ್ಲದೆ ಚಂದ್ರಮಂಡಲವು ಪೂರ್ಣವಾಗಿ ಬೆಳಗುತ್ತಿದ್ದರೆ ಆ ದಿನಕ್ಕೆ ರಾಕಾ ಎಂಬ ಹೆಸರಿರುವುದು. ಈ ವಿಷಯದಲ್ಲಿ—**ಕಲಾಹೀನೇ ಸಾನುಮತಿಃ ಪೂರ್ಣೇ ರಾಕಾ ನಿಶಾಕರೇ** ಎಂದು ಕೋಶವೂ ಇರುವುದು.

## ಯಾ ಪೂರ್ವಾಮಾವಾಸ್ಯಾ ಸಾ ಸಿನೀವಾಲೀ ಯೋತ್ತರಾ ಸಾ ಕುಹೂಃ ॥

**ಪೌರ್ಣಮಾಸೀನ್ಯಾಯಮಮಾವಾಸ್ಯಾಯಾಮಪಿ ದರ್ಶಯತಿ—ಅತ್ರಾಪಿ ಚತುರ್ದಶೀ ಸಂಯೋಗಾಚ್ಚಂದ್ರದರ್ಶನೇ ಸತ್ಯಮಾವಾಸ್ಯಾ ಸಿನೀವಾಲ್ಯುಚ್ಯತೇ । ತದ್ಯೋಗರಾಹಿತ್ಯೇನ ಚಂದ್ರ-ದರ್ಶನಾಭಾವೇ ಕುಹೂರಿತಿ । ತದಪ್ಯಭಿಧಾನಕಾರೇಣೋಕ್ತಮ್—'ಸಾ ದೃಷ್ಟೇಂದುಃ ಸಿನಿವಾಲೀ ಸಾ ನಷ್ಟೇಂದುಕಲಾ ಕುಹೂಃ' ಇತಿ । ಅತ್ರಾಪ್ಯುಪವಾಸಯಾಗನಿಶ್ಚಯೇ ಮತಭೇದಃ ಪೂರ್ವವತ್ ದ್ರಷ್ಟವ್ಯಃ ॥**

ಪೌರ್ಣಮಾಸೀಗೆ ಹೇಳಿದ ವಿಷಯವು ಅಮಾವಾಸ್ಯೆಗೂ ಅನ್ವಯಿಸುವುದು ಎಂಬ ವಿಷಯವನ್ನು ತಿಳಿಸುವರು—ಚತುರ್ದಶೀ ಸಂಯೋಗವಿರುವ ಅಮಾವಾಸ್ಯೆಯಲ್ಲಿ ಸ್ವಲ್ಪಮಟ್ಟಿಗೆ ಚಂದ್ರನ ಪ್ರಕಾಶವಿರುವುದು. ಇಂತಹ ಚತುರ್ದಶೀ ಮಿಶ್ರವಾದ ಅಮಾವಾಸ್ಯೆಗೆ ಸಿನೀವಾಲೀ ಎಂದು ಹೆಸರು. ಈ ರೀತಿ ಸಂಯೋಗವಿಲ್ಲದೆ ಪೂರ್ಣವಾಗಿ ಅಮಾವಾಸ್ಯೆಯೇ ಇದ್ದರೆ ಆ ತಿಥಿಗೆ ಕುಹೂ ಎಂದು ಹೆಸರು. ಅಭಿಧಾನಕಾರರು—**ಸಾ ದೃಷ್ಟೇಂದುಃ ಸಿನೀವಾಲೀ ಸಾ ನಷ್ಟೇಂದುಕಲಾ ಕುಹೂಃ** ಎಂದು ಹೇಳುವರು. ಇಲ್ಲಿಯೂ ಸಹ ಹಿಂದೆ ಹೇಳಿದ ಮತಭೇದದಂತೆ ಉಪವಾಸಾದಿ ಕ್ರಮಗಳನ್ನು ನಿರ್ಧರಿಸಬಹುದು.

ಯಾಂ ಪರ್ಯಸ್ತಮಿಯಾದಭ್ಯುದಿಯಾದಿತಿ ಸಾ ತಿಥಿಃ ||

ಅತ್ರ ಪೂರ್ವೋತ್ತರವಿಭಾಗನಿರ್ಣಯಾಯ ಕರ್ಮೋಪಯೋಗಿನ್ಯಾಸ್ತಿಥೇಃ ಸ್ವರೂಪಂ ದರ್ಶಯತಿ—ಅಮಾವಾಸ್ಯಾಂ ಪೌರ್ಣಮಾಸೀಂ ವಾ ಯಾಂ ಪರಿಪ್ರಾಪ್ಯ ಸೂರ್ಯೋಽಸ್ತಮಿಯಾತ್ | ತಥಾ ಯಾಮಭಿಲಕ್ಷ್ಯ ಸೂರ್ಯ ಉದಿಯಾತ್ಸೇಯಮುದಯಾಸ್ತಮಯ ವ್ಯಾಪಿನೀ ಕರ್ಮೋಪ. ಯುಕ್ತಾ ತಿಥಿಃ | ತಾದೃಶ್ಯಾಂ ತಿಥಾ ಉದಯಾಸ್ತಮಯಯೋರ್ಮಧ್ಯೇ ಪೂರ್ವೋತ್ತರಾಭ್ಯಾಂ ಪ್ರತಿಪದ್ಭ್ಯಾಂ ಚತುರ್ದಶೀ ಮಿಶ್ರಣೇ ಸತಿ ಪರ್ವಣೋ ದ್ವೈವಿಧ್ಯಂ ಭವತಿ | ತಸ್ಮಿನ್ದ್ವೈವಿಧ್ಯೇ ಪೂರ್ವೋಕ್ತಮತದ್ವಯಂ ದ್ರಷ್ಟವ್ಯಮ್ ||

ಹಿಂದೆ ಹೇಳಿದ ತಿಥಿಗಳಲ್ಲಿ ಪೂರ್ವೋತ್ತರ ಭಾಗಗಳಲ್ಲಿ ಅನುಸರಿಸಬೇಕಾದ ಕರ್ಮೋಪಯೋಗ ಸಂಬಂಧವಾದ ತಿಥಿಯ ಸ್ವರೂಪವನ್ನು ವಿವರಿಸುವರು—ಅಮಾವಾಸ್ಯಾ ಮತ್ತು ಪೌರ್ಣಮಾಸೀ ಎಂಬ ದಿನಗಳಲ್ಲಿ ಸೂರ್ಯನು ಉದಯಿಸುವ ಮತ್ತು ಅಸ್ತಮಯಿಸುವ ಮಧ್ಯಕಾಲವು ಕರ್ಮಾಚರಣೆಗೆ ಉಪಯೋಗವಾದ ಕಾಲವು (ತಿಥಿಯು) ಎಂದು ನಿರ್ಣಯಿಸಲ್ಪಟ್ಟಿರುವುದು. ಉದಯಾಸ್ತಮಯ ಕಾಲಗಳ ಮಧ್ಯವರ್ತೀ ಕಾಲವು ಮಿಶ್ರತಿಥಿ ಅಥವಾ ಪೂರ್ಣ ತಿಥಿಯಾಗಿದ್ದರೆ ಎಂದರೆ ಚತುರ್ದಶೀ ಮತ್ತು ಪ್ರತಿಪದ್ಯುಕ್ತವಾಗಿದ್ದರೆ ಅದಕ್ಕೆ ಅನುಸಾರವಾಗಿಯೂ ಹಾಗಿಲ್ಲದೆ ಪೂರ್ಣತಿಥಿಯಾದ ಪೌರ್ಣಮಾಸೀ ಅಥವಾ ಅಮಾವಾಸ್ಯೆಯಾಗಿದ್ದರೆ ಅದಕ್ಕನುಸಾರವಾಗಿಯೂ, ಹಿಂದೆ ಹೇಳಿದ ಮತಭೇದ ಪ್ರಕಾರ ಎರಡು ವಿಧವಾದ ಕರ್ಮಾಚರಣೆಯನ್ನು ನಿಶ್ಚಯಿಸಿ ಅದರಂತೆ ಅನುಷ್ಠಾನ ಮಾಡಬೇಕು ಎಂದು ಮುಖ್ಯಾಭಿಪ್ರಾಯವು.

ಪೂರ್ವಾಂ ಪೌರ್ಣಮಾಸೀಮುಪವಸೇದನಿಜ್ಞಾಯ ಪುರಸ್ತಾದಮಾವಾಸ್ಯಾಯಾಂ ಚಂದ್ರಮಸಂ ಯದುಪೈತಿ ಯದ್ಯಜತೇ ತೇನ ಸೋಮಂ ಕ್ರೀಣಂತಿ ತೇನೋತ್ತರಾಮುತ್ತರಾಮುಪವಸೇದುತ್ತರಾಣಿ ಹ ವೈ ಸೋಮೋ ಯಜತೇ ಸೋಮಮನು ದೈವತಮೇತದ್ವೈ ದೇವಸೋಮಂ ಯಚ್ಚಂದ್ರಮಾಸ್ತಸ್ಮಾದುತ್ತರಾಮುಪವಸೇತ್ ||

ತದೇತದುಪಸಂಹರತಿ—ಪೂರ್ವಾಮಿತಿ ಪೈಂಗಿಮತಸ್ಯೋಪಸಂಹಾರಃ | ಅಮಾವಾಸ್ಯಾದಿನೇ ಪುರಸ್ತಾತ್ಪೂರ್ವಸ್ಯಾಂ ದಿಶಿ ಚಂದ್ರಮಸಮನಿಜ್ಞಾಯ ಚ ಶಾಸ್ತ್ರಮಾರ್ಗೇಣ ಚಂದ್ರಮದೃಷ್ಟ್ವಾ ಚಂದ್ರೋದಯೋ ನ ಭವಿಷ್ಯತೀತಿ ನಿಶ್ಚಿತ್ಯ ಯದುಪೈತಿ ಉಪವಸತಿ ಪ್ರಾರಭತ ಇತಿ ಯದಸ್ತಿ ಯದ್ಯಜತೇ ಪರೇದ್ಯುರ್ಯಾಗಂ ಕರೋತೀತಿ ಯದಸ್ತಿ ತೇನೋಪವಾಸೇನ ಯಾಗೇನ ಚೋತ್ತರಾಮುತ್ತರಾಮಾಗಾಮಿ ಪಕ್ಷಗತಾಂ ಪೌರ್ಣಮಾಸೀಮಮಾವಾಸ್ಯಾಂ ಚೋಪವಸೇತ್ | ಉತ್ತರಾಣ್ಯುಪವಾಸದಿನಾದುತ್ತರೇಷು ದಿನೇಷು ಯಜತೇ | ಸ ಯಾಗಃ ಸೋಮೋ ಭವತಿ | ಸೋಮಯಾಗಸದೃಶೋ ಭವತಿ | ತಂ ಸೋಮಮನು ಸರ್ವಮಪಿ ದೈವತಂ ತೃಪ್ಯತೀತಿ ಶೇಷಃ | ಯೋಽಯಂ ಚಂದ್ರಮಾ ಅಸ್ತ್ಯೇತದೇವ ಸೋಮಂ ದೇವಾನಾಮಪೇಕ್ಷಿತಂ ಸೋಮದ್ರವ್ಯಸದೃಶಂ ವಸ್ತು | ಯಸ್ಮಾಚ್ಚಂದ್ರಮಂಡಲಂ ದೇವಾನಾಂ ಪ್ರಿಯಂ ತಸ್ಮಾನ್ಮಂಡಲಂ ಸಂಪೂರ್ಣಮಭಿಲಕ್ಷ್ಯೋತ್ತರಾಂ ಪೌರ್ಣಮಾಸೀಮುಪವಸೇದಿತಿ ಕೌಷೀತಕಮತಸ್ಯೋಪಸಂಹಾರಃ ||

ಈಗ ಹಿಂದೆ ಹೇಳಿದ ಪೈಂಗ್ಯ ಮತ್ತು ಕೌಷೀತಕೀ ಮತಗಳ ಉಪಸಂಹಾರವನ್ನು (ಅಂತ್ಯ) ವಿವರಿಸುವರು—ಮೊದಲು ಪೈಂಗ್ಯಮತವನ್ನೂ ಅನಂತರ ಕೌಷೀತಕ ಮತವನ್ನೂ ಉಪಸಂಹಾರಮಾಡುವರು. ಅಮಾವಾಸ್ಯಾ ದಿನದಲ್ಲಿ ಪೂರ್ವ ದಿಕ್ಕಿನಲ್ಲಿ ಚಂದ್ರನು ಕಾಣುವುದಿಲ್ಲವೆಂದು ನೋಡಿ ನಿಶ್ಚಯಿಸಿ ಶಾಸ್ತ್ರ (ಜ್ಯೋತಿಷ) ಪ್ರಕಾರವೂ ಆ ದಿನ ಚಂದ್ರೋದಯವಾಗುವುದಿಲ್ಲವೆಂದು ನಿಶ್ಚಯಿಸಿ ಉಪವಾಸಾದಿ ನಿಯಮಗಳನ್ನು ಕೈಗೊಂಡು ಮಾರನೆಯ ದಿನ ಯಾಗಾದಿಗಳನ್ನು ಮಾಡಬೇಕು. ಹೀಗೆ ಮಾಡುವುದರಿಂದ ಮುಂದಿನ ಪಕ್ಷದಲ್ಲಿ ಪ್ರಾಪ್ತವಾಗುವ ಪೌರ್ಣಮಾಸೀ ಮತ್ತು ಅಮಾವಾಸ್ಯೆಗಳಲ್ಲಿಯೂ ಈ ಕ್ರಮವನ್ನು ಅನುಸರಿಸಿ ಅನುಷ್ಠಾನಗಳನ್ನು ಮಾಡಲು ಸಹಾಯವಾಗುವುದು. ಈ ರೀತಿ ಮಾಡುವ ಯಾಗವು ಸೋಮಯಾಗಕ್ಕೆ ಸಮನಾಗುವುದು. ಈ ಸೋಮಯಾಗದಿಂದ ಸರ್ವದೇವತೆಗಳೂ ತೃಪ್ತರಾಗುವರು. ಅಂತರಿಕ್ಷದಲ್ಲಿ ಬೆಳಗುವ ಯಾವ ಚಂದ್ರನಿರುವನೋ ಅದೇ ಚಂದ್ರನು ದೇವತೆಗಳಿಗೆ ಪ್ರಿಯವಾದ ಸೋಮದ್ರವ್ಯಸದೃಶವಾದ ವಸ್ತುವಾಗಿರುವನು. ಏಕೆಂದರೆ ಚಂದ್ರಮಂಡಲವು ದೇವತೆಗಳಿಗೆ ಪ್ರಿಯ (ಹರ್ಷದಾಯಕ) ವಾಗಿರುವುದು. ಆದ್ದರಿಂದ ಸಂಪೂರ್ಣ ಮಂಡಲದಿಂದ ಯುಕ್ತವಾದ ಪೌರ್ಣಮಾಸಿಯಲ್ಲಿ ಉಪವಾಸಾದಿಗಳನ್ನು ಕೈಗೊಂಡು ಮಾರನೆಯ ದಿನ ಯಜ್ಞಾನುಷ್ಠಾನವನ್ನು ಆಚರಿಸಬೇಕೆಂಬುದು ಕೌಷೀತಕಿ ಎಂಬ ಮಹರ್ಷಿಯ ಅಭಿಪ್ರಾಯವು.

---

*English Translation*

**(How the Agnihotram of him who has no wife becomes performed.)**

They ask, In what way does an Agnihotri who has no wife bring his oblations with speech i. e., by repeating the mantras required with his voice ? In what way does he offer his daily burnt offering, when his wife dies, after he has already entered on the state of an Agnihotri, his wife having by her death, destroyed the pualification for the performance of the daily burnt osfering ?

They say, that one has children, grand children, and relations in this world, and in that world. In this world, there is heaven, i. e. heaven is to be gained in this world by sacrificing. The Agnihotri who has no wife, says to his children & c. I have ascended to heaven by means of what was no heaven (i. e. by the sacrifice performed in this world). He who does not wish for a second wife, for having his sacrificial ceremonies continuously performed, keeps thus by speaking to his children & c. In the way indicated his connection with the other world up. Thence they (his children) establish new fires for him who has lost his wife.

How does he who has no wife bring his oblations with his mind? The answer is Faith is his wife, and Truth the sacrificer. The marriage of Faith and Truth is a most happy one. For by Faith and Truth they conpuer the celestial world.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಣಬ್ರಾಹ್ಮಣಭಾಷ್ಯೇ ದ್ವಾತ್ರಿಂಶೋಧ್ಯಾಯೇ ನವಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೆರಡನೆಯ ಅಧ್ಯಾಯದಲ್ಲಿ ಒಂಭತ್ತನೆಯ ಸಮಾಪ್ತವಾದುದು



# ಅಥ ದ್ವಾತ್ರಿಂಶಾಧ್ಯಾಯೇ ದಶಮಃ ಖಂಡಃ

## ಮೂವತ್ತೆರಡನೆಯ ಅಧ್ಯಾಯದಲ್ಲಿ ಹತ್ತನೆಯ ಖಂಡವು



[ಪತ್ನಿಯುಲ್ಲದ ಅಪತ್ನೀಕನಾದ ಅಗ್ನಿಹೋತ್ರಿಯು ಅಗ್ನಿಹೋತ್ರವನ್ನು ಹೇಗೆ ಮಾಡಬೇಕು ಎಂಬ ವಿಚಾರವು]

---

ತದಾಹುರ್ವಾಚಾಽಪತ್ನೀಕೋಽಗ್ನಿಹೋತ್ರಂ ಕಥಮೇವ ಜುಹೋತಿ ||

**ಪೂರ್ವಮಪತ್ನೀಕಸ್ಯಾಗ್ನಿಹೋತ್ರಾದಿಹವಿರ್ಯಜ್ಞಾನುಷ್ಠಾನಂ ಪ್ರತಿಪಾದಿತಮ್ । ಅಥ ತಸ್ಯೈವಾಪತ್ನೀಕಸ್ಯ ವಾಚಿಕಂ ಮಾನಸಂ ಚ ದ್ವಿವಿಧಮಗ್ನಿಹೋತ್ರಂ ಪ್ರತಿಪಾದನೀಯಮ್ । ತತ್ರ ವಾಚಿಕವಿಷಯಂ ಪ್ರಶ್ನಮುದ್ಭಾವಯತಿ-ಯೋಽಪತ್ನೀಕಃ ಪುರುಷಸ್ತಸ್ಯ ವಾಚಾ ನಿಷ್ಪಾದ್ಯಂ ಯದಗ್ನಿ-ಹೋತ್ರಂ ತತ್ಕೇನ ಪ್ರಕಾರೇಣಾನುಷ್ಠಾತವ್ಯಮಿತಿ ಪ್ರಶ್ನಃ ||**

ಪತ್ನಿ ಇಲ್ಲದಿರುವ (ವಿಧುರ)ವನು ಅಗ್ನಿಹೋತ್ರಾದಿ ಹವಿರ್ಯಜ್ಞಗಳನ್ನು ಮಾಡಬಹುದೆಂದೂ ಅದನ್ನು ಹೇಗೆ ಮಾಡಬೇಕೆಂಬ ವಿಧಾನವನ್ನೂ ಹಿಂದೆಯೇ ವಿವರಿಸಲಾಗಿದೆ. ಆದರೆ ಅಂತಹ ಅಪತ್ನೀಕನಾದ ಪುರುಷನು ಅಗ್ನಿಹೋತ್ರವನ್ನು ವಾಚಿಕ ಮತ್ತು ಮಾನಸಿಕವೆಂಬ ಎರಡು ಕ್ರಮಗಳಿಂದ ಮಾಡಬೇಕೆಂದು ಹೇಳಿದೆ. ಈ ಎರಡು ವಿಧಾನಗಳಲ್ಲಿ ವಾಚಿಕವೆಂಬ ಕ್ರಮವನ್ನು ವಿಶದಪಡಿಸುವರು—ಅಪತ್ನೀಕನಾದ ಪುರುಷನು ತಾನು ಮಾಡಬೇಕಾದ ಅಗ್ನಿಹೋತ್ರವನ್ನು ವಾಚಿಕವಾಗಿ ಮಾಡಬೇಕಾದರೆ ಯಾವ ಪ್ರಕಾರವಾಗಿ ಮಾಡಬೇಕು ಎಂಬುದೇ ಇಲ್ಲಿ ಪ್ರಶ್ನೆಯು.

ನಿವಿಷ್ಟೇ ಮೃತಾ ಪ್ನತೀ ನಷ್ಟಾ ವಾಽಗ್ನಿಹೋತ್ರಂ ಕಥಮಗ್ನಿಹೋತ್ರಂ ಜುಹೋತಿ ||

ತಮೇವ ಪ್ರಶ್ನಂ ಪುನರ್ವಿಸ್ಪಷ್ಟಯತಿ–ನೈಷ್ಠಿಕಬ್ರಹ್ಮಚರ್ಯಾದಾಪಸ್ಯಪತ್ನೀಕತ್ವಮಸ್ತಿ ತತ್ರಾಗ್ನಿಹೋತ್ರಪ್ರಸಂಗ ಏವ ನಾಸ್ತಿ ವಿಧ್ಯಭಾವಾತ್ | ಅತೋಽಪತ್ನೀಕತ್ವಂ ವಿಶೇಷ್ಯತೇ| ವಿವಾಹಾದೂರ್ಧ್ವಮಗ್ನಿಹೋತ್ರೇ ನಿವಿಷ್ಟೇಽನುಷ್ಠಾತುಮುಪಕ್ರಾಂತೇ ಸತಿ ಪಶ್ಚಾತ್ಪತ್ನೀ ಮೃತಾ ಭವತಿ | ತಾದೃಶೋಽತ್ರಾಪತ್ನೀಕಃ | ತಸ್ಯಾಗ್ನಿಹೋತ್ರಂ ನಷ್ಟಾ ವಾ ನಷ್ಟಮೇವ ಭವತಿ ಪೂರ್ವಸಿದ್ಧೈರಗ್ನಿಭಿಃ ಪತ್ನೀದಾಹಪಕ್ಷೇ ಪುನರಗ್ನಿಹೋತ್ರಹೇತೂನಾಮಗ್ನೀನಾಮಭಾವಾತ್ | ಅತೋಽಪತ್ನೀಕಃ ಕಥಮಗ್ನಿಹೋತ್ರಂ ಜುಹೋತೀತಿ ಪ್ರಶ್ನಃ ||

ಮೇಲಿನ ಪ್ರಶ್ನೆಯನ್ನೇ ಇನ್ನೂ ಸ್ಪಷ್ಟವಾಗಿ ವಿವರಿಸುವರು—ಇಲ್ಲಿ ಅಪತ್ನಿಕನೆಂದರೆ ಎರಡು ವಿಧವು. ನೈಷ್ಠಿಕ ಬ್ರಹ್ಮಚರ್ಯದಲ್ಲಿರುವವನೆಂದರೆ ಒಂದಾವರ್ತಿಯೂ ಮದುವೆಯಾಗದೆ ಉಪನಯನಾರಭ್ಯ ಬ್ರಹ್ಮಚರ್ಯಾಶ್ರಮದಲ್ಲಿಯೇ ಇರುವವನು; ಅಪತ್ನೀಕನು ಎಂದರೆ ಉಪನಯನಾನಂತರ ಮದುವೆಯಾಗಿ ಅನಂತರ ಪತ್ನಿಯು ಮೃತಳಾದಲ್ಲಿ ಆ ಪುರುಷನು ಅಪತ್ನೀಕನು (ವಿಧುರನು) ಎಂದು ಎರಡು ವಿಧವು. ಈ ಎರಡು ವಿಧಗಳಲ್ಲಿ ಉಪನಯನಾರಭ್ಯ ಮದುವೆಯಾಗದೇ ಬ್ರಹ್ಮಚಾರಿಯಾಗಿಯೇ ಉಳಿದಿರುವ ನೈಷ್ಠಿಕಬ್ರಹ್ಮಚಾರಿಯ ವಿಷಯದಲ್ಲಿ ಅಗ್ನಿಹೋತ್ರಮಾಡುವ ಅಧಿಕಾರವೇ ಅವನಿಗೆ ಇರುವುದಿಲ್ಲವಾದ್ದರಿಂದ ಈ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಪತ್ನಿಯು ಮೃತಳಾದ ವಿಧುರನೆಂಬ ಅಪತ್ನೀಕನ ವಿಚಾರದಲ್ಲಿ ಅವನ ಪತ್ನಿಯು ವಿವಾಹಾನಂತರ ಕೆಲವು ಕಾಲವಿದ್ದು ಪತಿಯೊಡನೆ ಅಗ್ನಿಹೋತ್ರವನ್ನು ಮಾಡುತ್ತಿದ್ದಾಗ ಮೃತಳಾಗಿ ತನ್ನ ಪತಿಯ ಅಗ್ನಿಹೋತ್ರಾಗ್ನಿ (ಗಾರ್ಹಪತ್ಯಾಗ್ನಿ)ಯಿಂದ, ದಹನಕಾರ್ಯ ನೆರವೇರಿಸಲ್ಪಟ್ಟಿರುವುದು ಆದ್ದರಿಂದ ಪತ್ನಿಯ ದಹನಾನಂತರ ಅಪತ್ನೀಕನಿಗೆ ಅಗ್ನಿಹೋತ್ರಮಾಡಲು ತನ್ನ ಮನೆಯಲ್ಲಿ ಗಾರ್ಹಪತ್ಯಾಗ್ನಿಯು ಇರುವುದಿಲ್ಲ. ಇಂತಹ ಸಂದರ್ಭದಲ್ಲಿ ಅಪತ್ನೀಕನಾದವನು ಅಗ್ನಿಹೋತ್ರವನ್ನು ಹೇಗೆ ಮಾಡಬೇಕೆಂಬುದೇ ಇಲ್ಲಿ ಪ್ರಶ್ನೆಯು.

ಪುತ್ರಾನ್ಪೌತ್ರಾನ್ನಪ್ತೄನಿತ್ಯಾಹುರಸ್ಮಿಂಶ್ಚ ಲೋಕೇಽಮುಷ್ಮಿಂಶ್ಚಾಸ್ಮಿಲ್ಲೋಕೇಽಯಂ ಸ್ವರ್ಗೋಽಸ್ವರ್ಗೇಣ ಸ್ವರ್ಗಂ ಲೋಕಮಾರುರೋಹೇತ್ಯಮುಷ್ಯೈವ ಲೋಕಸ್ಯ ಸಂತತಿಂ ಧಾರಯತಿ ಯಸ್ಯೈಷಾಂ ಪತ್ನೀಂ ನೈಚ್ಛೇತ್ತಸ್ಮಾದಪತ್ನೀಕಸ್ಯಾಽಽಧಾನಂ ಕುರ್ವಂತಿ ||

ತಸ್ಯೋತ್ತರಮಾಹ—ಯೋಽಪತ್ನೀಕೋಽಗ್ನಿರಹಿತಃ ಸ್ಥವಿರತ್ವೇನಾನುಷ್ಠಾತುಮಶಕ್ತಶ್ಚ ತಾದೃಶಃ ಪುಮಾನ್ ಪುತ್ರಾದೀನ್ಪ್ರತ್ಯೇವಂ ಬ್ರೂಯಾತ್ | ಆಹುರಿತಿ ಬಹುವಚನಂ ಛಾಂದಸಮ್ | ಹೇ ಪುತ್ರಪೌತ್ರಪ್ರಪೌತ್ರಾಃ ಶೃಣುಥ| ಅಸ್ಮಿನ್‌ಲೋಕೇಽಮುಷ್ಮಿನ್ ಸ್ವರ್ಗೇ ಚ ಶ್ರೇಯಃ ಸಂಪಾದನೀಯಮ್ | ಅಸ್ಮಿನ್‌ಲೋಕೇತು ಸ್ಥಿತೈಃ ಪುರುಷೈರ್ಯೋಽಯಂ ಸ್ವರ್ಗಃ ಶಾಸ್ತ್ರೇಣ ಶ್ರುತ ಇತಿ ಶೇಷಃ | ತಂ ಸ್ವರ್ಗಲೋಕಮಸ್ವರ್ಗೇಣ ಸ್ವರ್ಗವಿಲಕ್ಷಣೇನ ಕಾಮುಕಕರ್ಮಾನುಷ್ಠಾನೇನಾರುರೋಹಾರೋಹೇದಿತ್ಯೇವಂ ಪುತ್ರಾದೀನ್ ಪ್ರತಿ ವಾಚೋಪದಿಶತಿ| ಏತದೇವ ವಾಜಸನೇ–

ಯಿಭಿರ್ವಿಸ್ಪಷ್ಟಮಾಮ್ನಾಯತೇ—"ತಸ್ಮಾತ್ ಪುತ್ರಮನುಶಿಷ್ಟಂ ಲೋಕ್ಯಮಾಹುಃ। ತಸ್ಮಾದೇನ-ಮನುಶಾಸತಿ' ಇತಿ। ಅನೇನ ಪುತ್ರಾದ್ಯನುಶಾಸನೇನಾಮುಷ್ಯೈವ ಲೋಕಸ್ಯ ಸಂತತಿಮವಿಚ್ಛೇದಂ ಧಾರಯತಿ ಸಂಪಾದಯತಿ। ಕುಲಪರಂಪರಯಾಽಗ್ನಿಹೋತ್ರಾನುಷ್ಠಾನೇನ ಸರ್ವೇಷಾಂ ಸ್ವರ್ಗ-ಪ್ರಾಪ್ತೌ ತದ್ವಿಚ್ಛೇದಾಭಾವಾತ್। ಯಸ್ಯ ಯಃ ಪುಮಾನೇಷಾಂ ಪತ್ನೀಂ ನೈಚ್ಛೇತ್। ಸ್ವಸ್ಯಾನು-ಷ್ಠಾತುಮಶಕ್ತತ್ವೇನ ಪುನರ್ವಿವಾಹಸಾಧ್ಯಾಮೇತಾಂ ಪತ್ನೀಂ ನಾಪೇಕ್ಷೇತ। ತಸ್ಮಾತ್ತಸ್ಯಾಪತ್ನೀಕಸ್ಯ ವಾಚಾ ಪ್ರೇರಿತಾ ಪುತ್ರಪೌತ್ರಾದಯ ಆಧಾನಂ ಕುರ್ವತೇ। ತದಾಧಾನಪೂರ್ವಕಮಗ್ನಿಹೋತ್ರಮ ಪತ್ನೀಕಸ್ಯ ವಾಚಿಕಮಿತ್ಯುಚ್ಯತೇ

ಮೇಲಿನ ಪ್ರಶ್ನೆಗೆ ಉತ್ತರವನ್ನು ಹೇಳುವರು—ಅಪತ್ನೀಕನಾದ ಪುರುಷನು ತಾನು ಅಗ್ನಿರಹಿತನಾದುದರಿಂದ ಅನುಷ್ಠಾನಮಾಡಲು ಅಶಕ್ತನಾಗಿಯೂ ಇರುವುದರಿಂದ ತನ್ನ ಪುತ್ರಾದಿಗಳಿಗೆ ಹೀಗೆ ಹೇಳಬೇಕು. ಎಲೈ ಮಕ್ಕಳುಮೊಮ್ಮಕ್ಕಳಿರಾ ನಾನು ಹೇಳುವುದನ್ನು ಕೇಳಿರಿ. ಈ ಲೋಕದಲ್ಲಿಯೂ ಸ್ವರ್ಗಲೋಕದಲ್ಲಿಯೂ ಶ್ರೇಯಸ್ಸನ್ನು (ಕೀರ್ತಿ) ಸಂಪಾದಿಸಬೇಕು. ಈ ಲೋಕದಲ್ಲಿರುವ ಪುರುಷರು ಶಾಸ್ತ್ರಾಧಾರದಿಂದ ಸ್ವರ್ಗಲೋಕವಿರುವುದೆಂದು ಹೇಳುವರು. ಆದ್ದರಿಂದ ಸ್ವರ್ಗಲೋಕಕ್ಕೆ ಹೋಗಲು ಕಾರಣವಲ್ಲದ ಕಾಮುಕರ್ಮಾನುಷ್ಠಾನದಿಂದಲೂ ಸ್ವರ್ಗಕ್ಕೆ ಹೋಗಲು ಸಾಧ್ಯವಾದ್ದರಿಂದ ಅದರಂತೆ ಸ್ವರ್ಗಕ್ಕೆ ಹೋಗಬೇಕು ಎಂದರೆ ಕಾಮ್ಯಕರ್ಮಾದಿಗಳನ್ನು ಮಾಡಿಯೂ ಸ್ವರ್ಗಕ್ಕೆ ಹೋಗಬಹುದು ಎಂದು ತನ್ನ ಪುತ್ರಪೌತ್ರಾದಿಗಳನ್ನು ತನ್ನ ಮಾತಿನಿಂದ ಉಪದೇಶಮಾಡುವನು. ಈ ವಿಷಯವು ವಾಜಸನೇಯಬ್ರಾಹ್ಮಣದಲ್ಲಿ-**ತಸ್ಮಾತ್ಪುತ್ರಮನುಶಿಷ್ಟಂ ಲೋಕ್ಯಮಾಹುಃ** (ಶತಃ ಬ್ರಾ. ೧೪-೪-೩-೨೬) ಎಂದು ಹೇಳಿರುವುದು. ಈರೀತಿ ಉಪದೇಶಮಾಡುವುದರಿಂದ ಸ್ವರ್ಗಲೋಕಪ್ರಾಪ್ತಿಗೆ ಪ್ರತಿಬಂಧಕವಾದ ಸಂತತಿರಾಹಿತ್ಯವನ್ನು ನಿವಾರಿಸಿದಂತಾಗುವುದು. ಏಕೆಂದರೆ ಒಬ್ಬ ಪುರುಷನ ವಂಶದಲ್ಲಿ ಪುತ್ರಪೌತ್ರಾದಿಗಳು ಪರಂಪರೆಯಿಂದ ಅವಿಚ್ಛಿನ್ನವಾಗಿ ಅಗ್ನಿಹೋತ್ರವನ್ನು ಅನುಷ್ಠಾನಮಾಡುವುದರಿಂದ ವಂಶದವರಿಗೆಲ್ಲಾ ಸ್ವರ್ಗಪ್ರಾಪ್ತಿಯಾಗುವುದು ಇದಲ್ಲದೆ ಅಪತ್ನೀಕನಾದ ವಿಧುರನು ತನ್ನ ಪತ್ನಿಯ ಮರಣಾನಂತರ ಬೇರೆ ವಿವಾಹವನ್ನು ಮಾಡಿಕೊಳ್ಳಲು ಇಚ್ಛಿಸದಿದ್ದಲ್ಲಿ ಅಥವಾ ತಾನೇ ಸ್ವತಃ ಕರ್ಮಾನುಷ್ಠಾನಮಾಡಲು ಅಶಕ್ತನಾದಲ್ಲಿ ಅಂತಹ ಪುರುಷನು ಪುನಃ ವಿವಾಹದಿಂದ ಮಾತ್ರ ಸಾಧ್ಯಳಾಗುವ ಪತ್ನಿಯನ್ನು ಅಪೇಕ್ಷಿಸಬಾರದು ಇಂತಹ ಸಂದರ್ಭದಲ್ಲಿ ಅಪತ್ನೀಕನಾದವನು ತನ್ನ ಪುತ್ರಪೌತ್ರಾದಿಗಳನ್ನು ಆಧಾನಪೂರ್ವಕವಾಗಿ ಅಗ್ನಿಹೋತ್ರಮಾಡುವಂತೆ ಮಾತಿನಿಂದ ಪ್ರೇರಿಸಬೇಕು ಅವನ ಮಾತಿನಂತೆ ಪುತ್ರಪೌತ್ರಾದಿಗಳು ಆಧಾನಪೂರ್ವಕವಾಗಿ ಅಗ್ನಿಹೋತ್ರಾದಿಗಳನ್ನು ಮಾಡುವರು. ಈರೀತಿ ಪುತ್ರಪೌತ್ರಾದಿಗಳಿಂದ ಮಾತಿನ ಮೂಲಕ (ಉಪದೇಶ ಮೂಲಕ) ಮಾಡಿಸುವುದಕ್ಕೆ ವಾಚಿಕ ಎಂದು ಹೆಸರು. ಇದರಿಂದ ಅಪತ್ನೀಕನಾದವನು ತಾನು ಮಾಡಿದಂತೆಯೇ ಆಗುವುದು.

ಅಪತ್ನೀಕೋಽಗ್ನಿಹೋತ್ರಂ ಕಥಮಗ್ನಿಹೋತ್ರಂ ಜುಹೋತಿ ಶ್ರದ್ಧಾ
ಪತ್ನೀ ಸತ್ಯಂ ಯಜಮಾನಃ ಶ್ರದ್ಧಾ ಸತ್ಯಂ ತದಿತ್ಯುತ್ತಮಂ ಮಿಥುನಂ
ಶ್ರದ್ಧಯಾ ಸತ್ಯೇನ ಮಿಥುನೇನ ಸ್ವರ್ಗಾಂಲ್ಲೋಕಾನ್ ಜಯತೀತಿ ॥

ಅಥ ಮಾನಸಮಗ್ನಿಹೋತ್ರಂ ಪ್ರಶ್ನೋತ್ತರಾಭ್ಯಾಂ ದರ್ಶಯತಿ—ಪೂರ್ವೋಕ್ತಸ್ಥವಿರೋಽ-ಪತ್ನೀಕೋಽಗ್ನಿಹೋತ್ರಂ ಸ್ವಯಮೇವ ಮನಸಾ ಜುಹೋಮೀತಿ ಯದೀಚ್ಛೇದಿತಿ ಶೇಷಃ।

ತದಾನೀಂ ಕೇನ ಪ್ರಕಾರೇಣ ತಸ್ಯ ಮನಸೋ ಹೋಮ ಇತಿ ಪ್ರಶ್ನಃ । ಶ್ರದ್ಧೇತ್ಯಾದಿಕಂ ತದುತ್ತರಂ । ಯೇಯಂ ಕರ್ಮಶ್ರದ್ಧಾ ಸೈವ ಪತ್ನೀ। ಯತ್ತು ಸತ್ಯಂ ಸತ್ಯವಾಕ್ಯಂ ವೈದಿಕಮಂತ್ರೋಚ್ಚಾರಣಂ ಸ ಏವ ಯಜಮಾನಃ । ಶ್ರದ್ಧಾ ಸತ್ಯಂ ಚೇತಿ ಯದುಭಯಮಸ್ತಿ ತದುಕ್ತೇನ ಪ್ರಕಾರೇಣ ಭಾವಿತಂ ಸದುತ್ತಮಂ ಮಿಥುನಂ ಭವತಿ । ತಾದೃಶೇನ ಶ್ರದ್ಧಾಸತ್ಯರೂಪೇಣ ಮಿಥುನೇನ ಮಾನಸಮನುಷ್ಠಾನಂ ನಿಷ್ಪಾದ್ಯ ಸ್ವರ್ಗಾನ್ ಲೋಕಾನ್ ಜಯತೀತ್ಯೇವಮುತ್ತರಂ ಸಂಪನ್ನಂ ॥

ಈಗ ಮಾನಸಿಕಾಗ್ನಿಹೋತ್ರವೆಂದರೇನೆಂಬುದನ್ನು ಪ್ರಶ್ನೋತ್ತರ ಮೂಲಕವಾಗಿ ತಿಳಿಸುವರು—ವಿಧುರನಾದ ಅಪತ್ನೀಕನು ತಾನೇ ಅಗ್ನಿಹೋತ್ರವನ್ನು ಮಾಡುವೆನೆಂದು ಮನಸ್ಸಿನಲ್ಲಿ ನಿಶ್ಚೈಸಿದಲ್ಲಿ ಅವನು ಮಾಡುವ ಮಾನಸಿಕವಾದ ಅಗ್ನಿಹೋತ್ರವು ಯಾವ ರೀತಿ ಆಚರಿಸಲ್ಪಡಬೇಕೆಂಬುದು ಒಂದು ಪ್ರಶ್ನೆಯು. ಈ ಮಾನಸಿಕವೆಂಬ ಅಗ್ನಿಹೋತ್ರದಲ್ಲಿ ಶ್ರದ್ಧಾ ಎಂದರೆ ಕರ್ಮಶ್ರದ್ಧೆಯು, (ಕರ್ಮವನ್ನು ಮಾಡಲೇಬೇಕೆಂಬ ಆಸಕ್ತಿಯು) ಪತ್ನೀ ಎನಿಸುವುದು. ಸತ್ಯವು ಎಂದರೆ ಸತ್ಯವಾಕ್ಯವು, ಮಂತ್ರೋಚ್ಚಾರಣೆಯು ಈ ಕರ್ಮದಲ್ಲಿ ಯಜಮಾನನೆಂದು ಹೇಳಲ್ಪಡುವುದು. ಶ್ರದ್ಧಾ ಮತ್ತು ಸತ್ಯವು ಈ ಎರಡು ಸೇರಿದಂತೆ ಮಾನಸಿಕವಾದ ಅಗ್ನಿಹೋತ್ರಕ್ಕೆ ಮಿಥುನ (ಪತಿಪತ್ನಿಯರು) ಎಂದು ಹೇಳಲ್ಪಡುವುದು. ಎಂದರೆ ಕರ್ಮದಲ್ಲಿ ಪತಿಪತ್ನಿಯರ ಪಾತ್ರವಿರುವಂತೆ ಮಾನಸಿಕಾಗ್ನಿಹೋತ್ರದಲ್ಲಿ ಶ್ರದ್ಧಾ ಮತ್ತು ಸತ್ಯದ ಪಾತ್ರವಿರುವುದು. ಆದ್ದರಿಂದ ಶ್ರದ್ಧಾ ಸತ್ಯಯುಕ್ತವಾಗಿದ್ದರೆ ಅದು ಮಿಥುನ (ಪತಿಪತ್ನಿಯರು) ಎಂದು ಪರಿಗಣಿಸಲ್ಪಟ್ಟು ಮಾನಸವಾದ ಅನುಷ್ಠಾನವನ್ನು ಮಾಡಿದಂತಾಗಿ ಅದರಿಂದ ಸ್ವರ್ಗಲೋಕಪ್ರಾಪ್ತಿಯಾಗುವುದೆಂದಭಿಪ್ರಾಯವು. ಇದು ಮಾನಸಿಕಾಗ್ನಿಹೋತ್ರ ಕ್ರಮವು.

---

*English Translation*

**(On the different names of the Full and New Moon.)**

They say, if an Agnihotri, who has not pledged himself by the usual vow, makes preparations for the performance of the Full and New Moon sacrifices, then the gods do not eat his food. If he, therefore, when making his preparations, thinks, might the gods, eat my food, (then they eat it). He ought to make all the preparations on the first part of the New Moon day; this is the opinion of the Paingyas : he shall make them on the latter part; this is the opinion of the Kaushitakis. The first part of the Full Moon day is called Anumati, the later Raka; the first part of the New Moon day is called Sinivali and its latter part Kuhu. The space which the moon requires for setting and rising again is called Tithi (lunar day). Without paying any attention (to the opinion of the Paingyas) to make the preparations on the first part of the Full Moon day, he brings his sacrifice when he meets (sees)

the Moon (rising) on the New Moon day; on this (day) they buy the Soma. Therefore he must always make his preparations on the second part of either the Full or New Moon days (i. e. on the days on which the moon enters into either phase). All days which follow belong to Soma (the Soma sacrifice may be completed). He brings the Soma sacrifice as far as the Soma is a deity; for the divine Soma is the moon. Therefore he must make the preparations on the second part of that lunar day.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ದ್ವಾತ್ರಿಂಶಾಧ್ಯಾಯೇ ದಶಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೆರಡನೆಯ ಅಧ್ಯಾಯದಲ್ಲಿ ಹತ್ತನೆಯ ಖಂಡವು
ಸಮಾಪ್ತವಾದುದು.



## ಅಥ ದ್ವಾತ್ರಿಂಶಾಧ್ಯಾಯೇ ಏಕಾದಶಃ ಖಂಡಃ

ಮೂವತ್ತೆರಡನೆಯ ಅಧ್ಯಾಯದಲ್ಲಿ ಹನ್ನೊಂದನೆಯ ಖಂಡವು

———

[ಅಗ್ನಿಹೋತ್ರಿಯಾದವನಿಗೆ ಸಂಭವಿಸುವ ಇತರ ವಿಘ್ನಗಳು. ಯಜ್ಞಾದಿಗಳ ಮಧ್ಯದಲ್ಲಿ ಅಗ್ನಿಹೋತ್ರಿಯು ಹೇಗೆ ಸಂಚರಿಸಬೇಕು. ದಕ್ಷಿಣಾಗ್ನಿಯು ಇತರ ಅಗ್ನಿಗಳ ಸಮೀಪದಲ್ಲಿರದೆ ದೂರಪ್ರದೇಶದಲ್ಲಿರುವಾಗ ಹೇಗೆ ಆಚರಿಸಬೇಕು ಇತ್ಯಾದಿ]

———

ತದಾಹುರ್ಯಸ್ಯಾಗ್ನಿಮನುದ್ಧೃತಮಾದಿತ್ಯೋಽಭ್ಯುದಿಯಾದ್ವಾಽಭ್ಯಸ್ತಮಿ-
ಯಾದ್ವಾ ಪ್ರಣೀತೋ ವಾ ಪ್ರಾಗ್ಘೋಮಾದುಪಶಾಮ್ಯೇತ್ಕಾ ತತ್ರ
ಪ್ರಾಯಶ್ಚಿತ್ತಿರಿತಿ ||

ಇತ್ಥಮಗ್ನಿಹೋತ್ರಪ್ರಾಯಶ್ಚಿತ್ತಪ್ರಸಂಗಾದಾಗತಮುಪತ್ನಿಕಾಗ್ನಿಹೋತ್ರಾದಿಕಂ ಪರಿಸಮಾಪ್ಯ ಪ್ರಕೃತಮೇವ ಪ್ರಾಯಶ್ಚಿತ್ತಮನುಸರನ್ ಪ್ರಶ್ನಮುತ್ಥಾಪಯತಿ—ಸಾಯಂಕಾಲ ಆದಿತ್ಯಸ್ಯಾಸ್ತ-ಮಯಾತ್ಪುರಾಗ್ನಿಹೋತ್ರಾರ್ಥಂ ಗಾರ್ಹಪತ್ಯಾದಗ್ನಿಮುದ್ಧರೇತ್ । ಪ್ರಾತಃಕಾಲೇ ತು ಸೂರ್ಯೋ-ದಯಾತ್ ಪುರೋದ್ಧರೇದಿತ್ಯಾಮ್ನಾತಮ್ । ಏವಂ ಸತಿ ಯಸ್ಯಾಗ್ನಿಹೋತ್ರಿಣೋಽನುದ್ಧೃತಮಗ್ನಿ-

ಮಭಿಲಕ್ಷ್ಯಾದಿತ್ಯ ಉದಿಯಾದ್ವಾಽಸ್ತಮಿಯಾದ್ವಾಗ್ನ್ಯುದ್ಧರಣಾತ್ ಪ್ರಾಗೇವೋದಯಾಸ್ತಮಯೌ ಭವತ ಇತ್ಯರ್ಥಃ । ಅಥವಾ ಸ್ವಸ್ವಕಾಲೇ ಪ್ರಣೀತೋಽಗ್ನಿರಾಹವನೀಯದೇಶೇ ಸ್ಥಿತ್ವಾ ಹೋಮಾತ್-ಉಪಶಾಮ್ಯೇತ್ । ತೇಷು ತ್ರಿಷು ವಿಷಯೇಷು ಪ್ರಾಯಶ್ಚಿತ್ತಂ ಪೃಚ್ಛತಿ ॥

ಇದುವರೆಗೂ ಅಗ್ನಿಹೋತ್ರ ವಿಷಯದಲ್ಲಿ ಅಶಕ್ತಿಕನಾದವನು ಹೇಗೆ ಆಚರಿಸಬೇಕೆಂಬ ಪ್ರಾಯಶ್ಚಿತ್ತಾದಿ ಕ್ರಮಗಳನ್ನು ಹೇಳಿ ಈಗ ಪ್ರಾಯಶ್ಚಿತ್ತವಿಧಾನದಲ್ಲಿಯೇ ಬೇರೆ ಸಮಸ್ಯೆಯನ್ನು ವಿವರಿಸುವರು. ಸಾಯಂಕಾಲದಲ್ಲಿ ಸೂರ್ಯನು ಅಸ್ತಂಗತನಾಗುವುದಕ್ಕೆ ಮೊದಲೇ ಅಗ್ನಿಹೋತ್ರಕ್ಕಾಗಿ ಗಾರ್ಹಪತ್ಯಾಗ್ನಿಯಿಂದ ಅಗ್ನಿಯನ್ನು ತರಬೇಕು. ಪ್ರಾತಃಕಾಲವಲ್ಲಾದರೆ ಸೂರ್ಯೋದಯಕ್ಕಿಂತ ಮುಂಚಿತವಾಗಿಯೇ ಅಗ್ನಿಯನ್ನು ತರಬೇಕು. ಹೀಗಿರುವಾಗ ಆಯಾ ಕಾಲದಲ್ಲಿ ಅಗ್ನಿಯನ್ನು ತರುವುದಕ್ಕಿಂತ ಮುಂಚಿತವಾಗಿಯೇ ಸೂರ್ಯನು ಅಸ್ತಂಗತನಾದರೂ, ಉದಯಿಸಿದರೂ ಏನು ಮಾಡಬೇಕು. ಅಥವಾ ಸರಿಯಾದ ಕಾಲದಲ್ಲಿ ಗಾರ್ಹಪತ್ಯದಿಂದ ಆಹವನೀಯಕ್ಕೆ ಅಗ್ನಿಯನ್ನು ತಂದರೂ ಆಗ ಅಲ್ಲಿ ಹೋಮ ಮಾಡುವುದಕ್ಕೆ ಮೊದಲೇ ಅಗ್ನಿಯು ಆರಿಹೋದರೆ ಆಗ ಏನು ಮಾಡಬೇಕು. ಈ ಮೂರು ವಿಧದಲ್ಲಿಯೂ ಪ್ರಾಯಶ್ಚಿತ್ತವೇನು ಎಂದು ಪ್ರಶ್ನೆಯು ಉದ್ಭವಿಸುವುದು.

**ಹಿರಣ್ಯಂ ಪುರಸ್ಕೃತ್ಯ ಸಾಯಮುದ್ಧರೇಜ್ಜ್ಯೋತಿರ್ವೈ ಶುಕ್ರಂ ಹಿರಣ್ಯಂ ಜ್ಯೋತಿಃ ಶುಕ್ರಮಸೌ ತದೇವ ತಜ್ಜ್ಯೋತಿಃ ಶುಕ್ರಂ ಪಶ್ಯನ್ನುದ್ಧರತಿ ರಜತಮಂತರ್ಧಾಯ ಪ್ರಾತರುದ್ಧರೇದೇತದ್ರಾತ್ರಿರೂಪಂ ಪುರಾ-ಸಂಭೇದಾಚ್ಛಾಯಾನಾಮಾಹವನೀಯಮುದ್ಧರೇನ್ಮೃತ್ಯುರ್ವೈ ತಮ-ಶ್ಛಾಯಾ ತೇನೈವ ತಜ್ಜ್ಯೋತಿಷಾ ಮೃತ್ಯುಂ ತಮಶ್ಛಾಯಾಂ ತರತಿ ಸಾ ತತ್ರ ಪ್ರಾಯಶ್ಚಿತ್ತಿಃ ॥**

ತಸ್ಯೋತ್ತರಮಾಹ— ಯದಾ ಸೂರ್ಯಾಸ್ತಮಯಾದೂರ್ಧ್ವಮುದ್ಧರಣೀಯಂ ತದಾನೀಂ ಹಿರಣ್ಯಂ ಪುರಸ್ಕೃತ್ಯೋಪರ್ಯವಸ್ಥಾಪ್ಯ ವಹ್ನಿಮುದ್ಧರೇತ್ । ಯದೇತದ್ಧಿರಣ್ಯಮಸ್ತಿ ತದೇತಚ್ಛುಕ್ರಂ ಜ್ಯೋತಿರ್ವಾ ಅತ್ಯಂತಭಾಸ್ವರಃ ಪ್ರಕಾಶಃ । ತಥಾ ಸತಿ ತದೇವ ಹಿರಣ್ಯಮೇವ ತಜ್ಜ್ಯೋತಿರಾದಿತ್ಯ ಪ್ರಕಾಶಃ । ಅತಃ ಶುಕ್ರಂ ದೀಪ್ತಿಮದ್ಧಿರಣ್ಯಂ ಪಶ್ಯನ್ನೇವಾಗ್ನಿಮುದ್ಧರೇತ್। ಏತಚ್ಚ ರಜತಂ ರಾತ್ರೇಃ ಸ್ವರೂಪಮ್ । ರಾತ್ರೌ ಹಿ ಚಂದ್ರತಾರಾದಿಕಂ ರಜತಸಮಾನಂ ದೃಶ್ಯತೇ । ಅತೋ ರಜತೇನ ಸೂರ್ಯೋದಯಾತ್ ಪ್ರಾಚೀನೋ ರಾತ್ರಿಕಾಲ ಏವ ಸಂಪದ್ಯತೇ । ಯದ್ಯಪ್ಯೇತಾವತೈವ ತ್ರಿವಿಧಪ್ರಶ್ನೋತ್ತರಂ ಸಂಪನ್ನಂ ತಥಾಪಿ ತತ್ಪ್ರಸಂಗಾನ್ನಿತ್ಯಮುದ್ಧರಣಂ ಪುರೇತ್ಯಾದಿನಾ ಪ್ರದ್ಯ (ದರ್ಶ್ಯ) ಶ್ಯತೇ । ಛಾಯಾನಾಂ ಸಂಭೇದ ಏಕೀಭಾವಃ । ಸೂರಾಸ್ತಮಯೇ ಸತ್ಯೇಷಾ ಮನುಷ್ಯಚ್ಛಾಯಾ ಏಷಾ ವೃಕ್ಷಚ್ಛಾಯೇತಿ ವಿಭಾಗೋ ನ ಜಾಯತೇ ಸೋಽಯಂ ಸಂಭೇದಃ । ತಸ್ಮಾತ್ ಪುರಾ ಸೂರ್ಯಪ್ರ-ನೀಯಮುದ್ಧರೇತ್ । ತತ್ರೋಪಪತ್ತಿರ್ಮೃತ್ಯುರಿತ್ಯಾದಿಃ । ಯದಿದಂ ತಮೋ ಯಾ ಚ ಛಾಯಾ-ಕಾಶವಶಾಚ್ಛಾಯಾವಿಶೇಷೋ ವಿಜ್ಞಾಯತೇ । ತಸ್ಮಿನ್ನೇವ ಕಾಲೇ ಸಾಯಂಹೋಮಾರ್ಥಮಾಹವ-ತದುಭಯಂ ಮೃತ್ಯುಸ್ವರೂಪಮೇವ । ಅತಃ ಸತ್ಯಾದಿತ್ಯಪ್ರಕಾಶೇ ತೇನೈವ ಜ್ಯೋತಿಷಾ ಮೃತ್ಯು-ರೂಪಂ ತಮಸ್ತದ್ರೂಪಾಂ ಛಾಯಾಂ ಚ ತರತಿ ಉಲ್ಲಂಘಯತಿ । ಸೇಯಮುಕ್ತಾ ತತ್ರ ವೈಕಲ್ಯೇ

ಪ್ರಾಯಶ್ಚಿತ್ತಿಃ । ನಿತ್ಯೋದ್ಧರಣಸ್ಯಾಪಿ ವೈಕಲ್ಯವಿರೋಧಿತ್ವಾದುಪಚರಿತಂ ಪ್ರಾಯಶ್ಚಿತ್ತಮ್ । ಪೂರ್ವತ್ರ ಸಪ್ತತ್ರಿಂಶೇ ಪರ್ಯಾಯೇ ಪತ್ನೀರಹಿತಸ್ಯಾಗ್ನಿಹೋತ್ರಂ ವಿಧಾಯಾಷ್ಟಾತ್ರಿಂಶೇ ಪರ್ಯಾಯೇ ದರ್ಶಪೂರ್ಣಮಾಸಯೋರುಪವಾಸನಿರ್ಣಯ ಏಕೋನಚತ್ವಾರಿಂಶೇ ಪರ್ಯಾಯೇ ವಾಚಿಕಂ ಮಾನಸಂ ವಾಗ್ನಿಹೋತ್ರಮಪತ್ನೀಕಸ್ಯ ವಿಧಾಯಚತ್ವಾರಿಂಶೇ ವಹ್ನ್ಯುದ್ಧರಣಕಾಲಾತಿಕ್ರಮೇ ಪ್ರಾಯಶ್ಚಿತ್ತಮುಕ್ತಮ್ ॥

ಕ್ಲೃಪ್ತನಾದ ಕಾಲವು ಮೀರಿಹೋಗಿದ್ದರೆ ಎಂದರೆ ಸಾಯಂಕಾಲದಲ್ಲಿ ಸೂರ್ಯಾಸ್ತಮಯಕ್ಕಿಂತಲೂ ಮೊದಲೆ ತರಬೇಕಾದ ಅಗ್ನಿಯನ್ನು ತರುವುದರೊಳಗಾಗಿ ಸೂರ್ಯನು ಅಸ್ತಂಗತನಾದರೆ ಆಗ ಗಾರ್ಹಪತ್ಯಾಗ್ನಿಯ ಸಮೀಪದಲ್ಲಿ (ಮುಂದುಗಡೆ) ಚಿನ್ನವನ್ನು ಇಟ್ಟು ಅನಂತರ ಅಗ್ನಿಯನ್ನು ತರಬೇಕು. ಏಕೆಂದರೆ ಚಿನ್ನವೇ ಜ್ಯೋತಿ ಅಥವಾ ಪ್ರಕಾಶ ಮಾನವಾಗಿ ಬೆಳಗುವ ಚಿನ್ನವನ್ನೇ ಸೂರ್ಯನೆಂದು ಭಾವಿಸಬೇಕು. ಆಗ ಚೆನ್ನಾಗಿ ಪ್ರಕಾಶಿಸುತ್ತಿರುವ ಚಿನ್ನವನ್ನು ನೋಡಿಯೇ ಅಗ್ನಿಯನ್ನು ತರಬೇಕು. ಇದು ಸಾಯಂಕಾಲದಲ್ಲಿ ಅನುಸರಿಸುವ ಕ್ರಮವು. ಪ್ರಾತಃಕಾಲವಲ್ಲಾದರೆ ಚಿನ್ನಕ್ಕೆ ಬದಲಾಗಿ ಬೆಳ್ಳಿಯನ್ನು ಅಗ್ನಿಯ ಸಮೀಪದಲ್ಲಿಟ್ಟು ಅಲ್ಲಿಂದ ಅಗ್ನಿಯನ್ನು ತರಬೇಕು. ಈ ಬೆಳ್ಳಿಯು ರಾತ್ರಿಯ ಸ್ವರೂಪವು. ರಾತ್ರಿಕಾಲದಲ್ಲಿ ಚಂದ್ರ ಮತ್ತು ನಕ್ಷತ್ರಗಳ ಪ್ರಕಾಶವು ಬೆಳಗುವುದು ಕಂಡುಬರುತ್ತದೆ ಆದ್ದರಿಂದ ಬೆಳ್ಳಿಯನ್ನು ಇಡುವುದರಿಂದ ಆಗ ಇನ್ನೂ ಸೂರ್ಯನು ಉದಯಿಸದೆ ಇನ್ನೂ ರಾತ್ರಿಯಾಗಿಯೇ ಇರುವುದೆಂದು ಭಾವಿಸಬೇಕು. ಕತ್ತಲೆಯಲ್ಲಿ ನೆರಳುಗಳ ಭೇದವನ್ನು ಕಲ್ಪಿಸುವುಕ್ಕಾಗುವುದಿಲ್ಲ. ಸೂರ್ಯನು ಮುಳುಗಿದ ಮೇಲೆ ಕತ್ತಲೆಯು ಆವರಿಸಿರುವಾಗ ಇದು ಮನುಷ್ಯರ ನೆರಳು, ಇದು ವೃಕ್ಷದ ನೆರಳು ಎಂದು ತಿಳಿಯುವುದಕ್ಕಾಗುವುದಿಲ್ಲ. ಸೂರ್ಯಪ್ರಕಾಶವಿರುವಾಗ ಎಲ್ಲವನ್ನು ಸ್ಪಷ್ಟವಾಗಿ ನೋಡಿ ತಿಳಿಯಬಹುದು. ಆದ್ದರಿಂದ ಸಾಯಂಕಾಲದಲ್ಲಿ ಸೂರ್ಯನಿರುವಾಗಲೇ ಸಾಯಂಕಾಲದ ಹೋಮಕ್ಕಾಗಿ ಆಹವನೀಯಕ್ಕೆ ಅಗ್ನಿಯನ್ನು ತರಬೇಕು. ಹಾಗೆ ಮಾಡದೆ ಕತ್ತಲಲ್ಲಿ ಅಗ್ನಿಯನ್ನು ತರುವುದು ಎಂದರೆ ನೆರಳಿನಲ್ಲಿಯೂ ಅಗ್ನಿಯನ್ನು ತರುವುದು ಮೃತ್ಯುಸ್ವರೂಪವು. ಆದ್ದರಿಂದ ಸೂರ್ಯನ ಪ್ರಕಾಶವಿರುವಾಗಲೇ ಎಂದರೆ ಆ ಬೆಳಕಿನಿಂದಲೇ ನೆರಳು ಮತ್ತು ಕತ್ತಲೆಯನ್ನುದಾಟಿ ಕೆಲಸಕಾರ್ಯಗಳನ್ನು ಮಾಡಬಹುದು. ಹೀಗೆ ಮಾಡುವುದು ಎಂದರೆ ಕಾಲಾತಿಕ್ರಮಣವಾದಾಗ ಹಿರಣ್ಯ, ರಜತ ಇವುಗಳನ್ನು ಅಗ್ನಿಯ ಮುಂದೆ ಸ್ಥಾಪಿಸಿ ಅಗ್ನಿಯನ್ನು ತೆಗೆದುಕೊಂಡು ಹೋಗಬಹುದು. ಮೇಲೆ ಹೇಳಿದ ಮೂರುವಿಧ ಸಮಸ್ಯೆಗಳಿಗೆ ಇದೇ ಪ್ರಾಯಶ್ಚಿತ್ತವು. ಹಿಂದೆ (೩೭ ನೇ ಪರ್ಯಾಯದಲ್ಲಿ) ಪತ್ನಿರಹಿತನಾದವನು ಅಗ್ನಿಹೋತ್ರವನ್ನು ಹೇಗೆ ಮಾಡಬೇಕೆಂಬುದನ್ನೂ (೩೮ನೇ ಸಮಸ್ಯೆಯಲ್ಲಿ) ದರ್ಶಪೂರ್ಣಮಾಸೇಷ್ಟಿಗಳಲ್ಲಿ ಅನುಸರಿಸುವ ಉಪವಾಸ ಕ್ರಮವನ್ನೂ (೩೯ ನೇ ಸಮಸ್ಯೆಯಲ್ಲಿ) ಅಪತ್ನೀಕನಾದವನು ವಾಚಿಕ, ಮಾನಸ ಎಂಬ ಎರಡುವಿಧ ಅಗ್ನಿಹೋತ್ರಗಳನ್ನು ಹೇಳಿ ಈಗ (೪೦ ನೇ ಸಮಸ್ಯೆಯಲ್ಲಿ) ಕಾಲಾತಿಕ್ರಮವಾದಾಗ ಅಗ್ನ್ಯುದ್ಧರಣವನ್ನು ಮಾಡುವ ಕ್ರಮ ಮತ್ತು ಪ್ರಾಯಶ್ಚಿತ್ತಾದಿಗಳನ್ನೂ ವಿವರಿಸಲಾಗಿದೆ.

ತದಾಹುರ್ಯಸ್ಯ ಗಾರ್ಹಪತ್ಯಾಹವನೀಯಾವಂತರೇಣಾನೋ ವಾ ರಥೋ ವಾ ಶ್ವಾ ವಾ ಪ್ರತಿಪದ್ಯೇತ ಕಾ ತತ್ರ ಪ್ರಾಯಶ್ಚಿತ್ತಿರಿತಿ ನೈನನ್ಮನಸಿ ಕುರ್ಯಾದಿತ್ಯಾಹುರಾತ್ಮನ್ಯಸ್ಯ ಹಿ ತಾ ಭವಂತೀತಿ ತಚ್ಚೇನ್ಮನಸಿ ಕುರ್ವೀತ ಗಾರ್ಹಪತ್ಯಾದವಿಚ್ಛಿನ್ನಾಮುದಕಧಾರಾಂ ಹರೇತ್ತಂತುಂ ತನ್ವನ್ರಜಸೋ ಭಾನುಮನ್ವಿಹೀತ್ಯಾಹವನೀಯಾತ್ಸಾ ತತ್ರ ಪ್ರಾಯಶ್ಚಿತ್ತಿಃ ॥

**ಅಥೈಕಚತ್ವಾರಿಂಶೇ ಪ್ರಶ್ನೋತ್ತರೇ ದರ್ಶಯತಿ—ಗಾರ್ಹಪತ್ಯಾಹವನೀಯಯೋರ್ಮಧ್ಯೇ ಶಕಟಂ ವಾ ರಥೋ ವಾ ಶ್ವಾ ವಾ ಯದಾ ಗಚ್ಛೇತ್ತದಾನೀಮೇತಚ್ಛಕಟಾದಿಕಂ ಮನಸಿ ನ ಕುರ್ಯಾತ್। ಅಸ್ಯಾನುಷ್ಠಾತುರಾತ್ಮನಿ ಸ್ವಕೀಯೇ ಪಾರಮಾರ್ಥಿಕಸ್ವರೂಪೇ ವೇದಾಂತಪ್ರತಿಪಾದ್ಯೇ ವಸ್ತುನಿ ಹಿ ತಾ ಭವಂತಿ ತಾನಿ ಶಕಟಾದೀನ್ಯವತಿಷ್ಠಂತೇ। ಅತಃ ಶಕಟಾದಿರೂಪಬುದ್ಧಿಂ ಪರಿತ್ಯಜ್ಯ ಪರಮಾತ್ಮಬುದ್ಧಿಂ ಕುರ್ಯಾತ್। ಯದ್ಯಾತ್ಮವಿವೇಕಾಭಾವೇನ ತಚ್ಛಕಟಾದಿಕಂ ಮನಸಿ ಕುರ್ವೀತ ಶಕಟಾದಿಬುದ್ಧಿಂ ನ ಪರಿತ್ಯಜೇತ್ತದಾನೀಂ ಗಾರ್ಹಪತ್ಯಾದಾರಭ್ಯಾಹವನೀಯಪರ್ಯಂತಮವಿಚ್ಛಿನ್ನಾಮುದಕಧಾರಾಂ ಹರೇತ್। ತತ್ರ ತಂತುಂ ತನ್ವನ್ನಿತಿ ಮಂತ್ರಃ ॥**

ನಲವತ್ತೊಂದನೆಯ ಪ್ರಶ್ನೋತ್ತರವನ್ನು ವಿವರಿಸುವರು—ಗಾರ್ಹಪತ್ಯ ಮತ್ತು ಆಹವನೀಯ ಎಂಬ ಎರಡು ಅಗ್ನಿ ಕುಂಡಗಳ ಮಧ್ಯಪ್ರದೇಶದಲ್ಲಿ ಗಾಡಿಯಾಗಲಿ, ನಾಯಿಯಾಗಲಿ ಹಾದುಹೋದಲ್ಲಿ ಆ ವಿಷಯವನ್ನು ಅಷ್ಟೇನೂ ಮನಸ್ಸಿಗೆ ಹಚ್ಚಿಕೊಳ್ಳಬಾರದು. ಯಜ್ಞಾನುಷ್ಠಾನ ಮಾಡುವ ಪುರುಷನ ಮನಸ್ಸಿನಲ್ಲಿ ಯಾವಾಗಲೂ ಪಾರಮಾರ್ಥಿಕವಾದ ವಸ್ತುಗಳ ವಿಷಯ ಚಿಂತನೆಯೇ ಇರಬೇಕು. ಗಾಡಿ ಮೊದಲಾದ ಸಣ್ಣ ವಿಷಯಗಳ ಕಡೆ ಮನಸ್ಸಿರುವುದಿಲ್ಲ. ಆದ್ದರಿಂದ ಗಾಡಿ ಮೊದಲಾದ ಕ್ಷುದ್ರ ಸಂಗತಿಗಳನ್ನು ಯೋಚಿಸುವುದನ್ನು ಬಿಟ್ಟು ಪರಮಾತ್ಮ ಚಿಂತನೆಯಲ್ಲಿಯೇ ಮನಸ್ಸನ್ನು ಸ್ಥಿರಗೊಳಿಸಬೇಕು. ಒಂದು ವೇಳೆ ಗಾಡಿ ಮೊದಲಾದ ಅಲ್ಪವಿಚಾರಗಳಿಂದ ಮನಸ್ಸನ್ನು ಹಿಂತೆಗೆಯಲಾಗದಿದ್ದರೆ ಎಂದರೆ ಮನಸ್ಸಿನಲ್ಲಿಯೇ ಆ ವಿಷಯವು ಕೊರೆಯುತ್ತಿದ್ದರೆ ಆಗ ಗಾರ್ಹಪತ್ಯದಿಂದ ಆಹವನೀಯಾಗ್ನಿಯವರೆಗೆ ಇರುವ ಪ್ರದೇಶದುದ್ದಕ್ಕೂ ಎಲ್ಲಿಯೂ ಬಿಡದೆ ನೀರನ್ನು ಧಾರಾಕಾರವಾಗಿ ಚುಮುಕಿಸಬೇಕು. ನೀರನ್ನು ಹಾಕುವ ಕಾಲದಲ್ಲಿ **ತಂತುಂ ತನ್ವನ್ರಜಸೋ ಭಾನುಮನ್ವಿಹಿ** (ಋ. ಸಂ. ೧೦–೫೩–೬) ಎಂಬ ಋಕ್ಕನ್ನು ಪಠಿಸುತ್ತಿರಬೇಕು. ಇದೇ ಪ್ರಾಯಶ್ಚಿತ್ತಿಯು.

## ತದಾಹುಃ ಕಥಮಗ್ನೀನನ್ವಾದಧಾನೋಽನ್ವಾಹಾರ್ಯಪಚನಮಾಹ-ರಯೇ೩ತ್ ನಾಹರಯೇ೩ತ್ ಇತಿ ॥

**ಅಥ ದ್ವಿಚತ್ವಾರಿಂಶೇ ಪರ್ಯಾಯೇ ಕಂಚಿದ್ವಿಚಾರಮುದ್ಭಾವಯತಿ ಅನ್ವಾಹಾರ್ಯನಾಮಕ ಓದನಃ ಪಚ್ಯತೇ ಯಸ್ಮಿನ್ ದಕ್ಷಿಣಾಗ್ನೌ ಸೋಽಯಮನ್ವಾಹಾರ್ಯಪಚನಃ। ತಸ್ಯಾಹರಣಮಭಿಜ್ವ-ಲನಮ್। ಇಷ್ಟೇರಾದಾವನ್ವಾಧಾನಕಾಲೇ ದಕ್ಷಿಣಾಗ್ನೇರಭಿಜ್ವಲನಂ ಕುರ್ಯಾನ್ನ ವಾ ಇತಿ ವಿಚಾರಾರ್ಥಂ ಪ್ಲುತಿದ್ವಯಮ್ ॥**

ನಲವತ್ತೆರಡನೆಯ ಸಮಸ್ಯೆಯಲ್ಲಿ ಒಂದು ವಿಶೇಷ ಸಂಗತಿಯನ್ನು ತಿಳಿಸುವರು—

ಅನ್ವಾಹಾರ್ಯ ಎಂಬುದು (ಹವಿಸ್ಸಿಗಾಗಿ ಉಪಯೋಗಿಸಲ್ಪಡುವ) ಅನ್ನದ ಹೆಸರು. ಈ ಅನ್ನವನ್ನು ಬೇಯಿಸುವ ದಕ್ಷಿಣಾಗ್ನಿಗೆ ಅನ್ವಾಹಾರ್ಯಪಚನನೆಂದು ಹೆಸರು. ಇದರ ಆಹರಣವೆಂದರೆ ಅಭಿಜ್ವಲನ, ಚೆನ್ನಾಗಿ ಉರಿಯುವಂತೆ ಮಾಡುವುದು ಎಂದರ್ಥವು. ಈ ದಕ್ಷಿಣಾಗ್ನಿಯ ಅಭಿಜ್ವಲನವನ್ನು (ಚೆನ್ನಾಗಿ ಬೀಸಿ ಉರಿಮಾಡುವುದು) ಇಷ್ಟಿಮಾಡುವಾಗ ಆಧಾನಕಾಲದಲ್ಲಿ ಮಾಡಬೇಕೇ ಬೇಡವೇ ಎಂಬುದು ವಿಚಾರಾರ್ಹವು ಇಲ್ಲಿ ಸಂಶಯವು ವ್ಯಕ್ತಪಡುವುದರಿಂದ ಪ್ರಶ್ನಾರ್ಥಕವಾಗಿ ೩ ಎಂಬ ಪ್ಲುತಿಯನ್ನು ಉಪಯೋಗಿಸಲಾಗಿದೆ.

ಆಹಾರಯೇದಿತ್ಯಾಹುಃ ಪ್ರಾಣಾನ್ವಾ ಏಷೋಽಭ್ಯಾತ್ಮನ್ಧತ್ತೇ ಯೋಽಗ್ನೀ-
ನಾಧತ್ತೇ ತೇಷಾಮೇಷೋಽನ್ನಾದತಮೋ ಭವತಿ ಯದನ್ವಾಹಾ-
ರ್ಯಪಚನಸ್ತಸ್ಮಿನ್ನೇತಾಮಾಹುತಿಂ ಜುಹೋತ್ಯಗ್ನಯೇಽನ್ನಾದಾ-
ಯಾನ್ನಪತಯೇ ಸ್ವಾಹೇತಿ ॥

ತತ್ರ ನಿರ್ಣಯಂ ದರ್ಶಯತಿ—ಆಹಾರಯೇತ್ಪ್ರಜ್ವಲಯೇದಿತ್ಯೇವಮಭಿಜ್ಞಾ ಆಹುಃ । ತತ್ರೇಯಮುಪಪತ್ತಿಃ । ಯಃ ಪುಮಾನಗ್ನೀನಾಧತ್ತ ಏಷ ಏವ ಪುಮಾನಧ್ಯಾ(ಭ್ಯಾ)ತ್ಮಂ ಸ್ವಾತ್ಮ-ಸ್ವರೂಪೇ ಪ್ರಾಣಾನೇವ ಧಾರಯತಿ । ಯೋಽಯಮನ್ವಾಹಾರ್ಯಪಚನೋಽಸ್ತಿ ಏಷ ತೇಷಾಮಾಹಿ-ತಾನಾಂ ಚಾಗ್ನೀನಾಂ ಮಧ್ಯೇಽತಿಶಯೇನಾನ್ನಾದಃ । ತಸ್ಮಾತ್ ಪ್ರಾಣಧಾರಿಣಾಮನ್ನಭಕ್ಷಣಸಿದ್ಧಯೇ ಸೋಽಯಂ ಪ್ರಜ್ವಲನೀಯಃ । ಪ್ರಜ್ವಲಿತೇ ತಸ್ಮಿನ್ದಕ್ಷಿಣಾಗ್ನಾವಗ್ನಯೇಽನ್ನಾದಾಯೇತ್ಯಾದಿತ-ಮಂತ್ರೇಣೈತಾಮಾಹುತಿಂ ಜುಹುಯಾತ್ ॥

ಮೇಲೆ ಹೇಳಿದ ಸಮಸ್ಯೆಗೆ ನಿರ್ಣಯವನ್ನು ಹೇಳುವರು—ಆಧಾನಕಾಲದಲ್ಲಿ ದಕ್ಷಿಣಾಗ್ನಿಯನ್ನು ಜ್ವಲನಗೊಳಿಸಬೇಕೆಂದೇ ಅಭಿಜ್ಞರಾದವರು (ತಿಳಿದವರು) ಹೇಳುವರು. ಅದಕ್ಕೆ ಕಾರಣವು ಈರೀತಿ ಇರುವುದು, ಯಾವ ಪುರುಷನು ಅಗ್ನಿಯನ್ನು ವಿಧ್ಯುಕ್ತವಾಗಿ ಹೊತ್ತಿಸಿ ಆಧಾನಮಾಡುವನೋ ಅವನು ತನ್ನ ಆತ್ಮಸ್ವರೂಪದಲ್ಲಿ ಪ್ರಾಣವನ್ನೇ ಧರಿಸಿದಂತಾಗುವುದು. ಅನ್ವಾಹಾರ್ಯಪಚನನೆಂದು ಹೇಳಲ್ಪಡುವ ದಕ್ಷಿಣಾಗ್ನಿಯು ಯಜ್ಞಾಗ್ನಿಗಳಲ್ಲಿ ಇದೊಂದೇ ಅತಿಶಯವಾಗಿ ಅನ್ನಪ್ರದವಾಗಿರುವುದು. ಆದ್ದರಿಂದ ಪ್ರಾಣರಕ್ಷಣೆಗೆ ಅನ್ನವು ಅವಶ್ಯಕವಾಗಿ ಬೇಕಾಗಿರುವುದರಿಂದಲೂ ಈ ಅಗ್ನಿಯು ಅನ್ನಪ್ರದನಾದುದರಿಂದಲೂ ಆಧಾನಮಾಡುವವನು ಈ ಅಗ್ನಿಯನ್ನು ಚೆನ್ನಾಗಿ ಪ್ರಜ್ವಲನೆ ಮಾಡಬೇಕು. ಈರೀತಿ ದಕ್ಷಿಣಾಗ್ನಿಯು ಪ್ರಜ್ವಲಿತವಾದಮೇಲೆ ಆ ಅಗ್ನಿಯಲ್ಲಿ ಅಗ್ನಯೇಽನ್ನಾದಾಯ ಎಂಬ ಮಂತ್ರದಿಂದ ಆಹುತಿಯನ್ನು ಹೋಮ ಮಾಡಬೇಕು.

ಅನ್ನಾದೋ ಹಾನ್ನಪತಿರ್ಭವತ್ಯಶ್ನುತೇ ಪ್ರಜಯಾಽನ್ನಾದ್ಯಂ ಯ ಏವಂ
ವೇದ ॥

ವೇದನಂ ಪ್ರಶಂಸಯತಿ—ವೇದಿತಾ ಸ್ವಯಮನ್ನಾದೋ ರೋಗರಾಹಿತ್ಯೇನ ಭೋಕ್ತುಂ ಸಮರ್ಥೋಽನ್ನಪತಿರನ್ನಸ್ವಾಮೀ ಚ ಭವತಿ । ತಥಾ ಪ್ರಜಯಾ ಹಿ ಪುತ್ರಾದಿರೂಪಯ ಸಹಾನ್ನಾದ್ಯಂ ಪ್ರಾಪ್ನೋತಿ ॥

ಇದರ ಫಲವನ್ನು ಪ್ರಶಂಸೆ ಮಾಡುವರು—ಈ ವಿಷಯವನ್ನು ಚೆನ್ನಾಗಿ ತಿಳಿದ ಪುರುಷನು ರೋಗರಹಿತನಾಗಿ ಚೆನ್ನಾಗಿ ಭೋಜನಮಾಡಲು ಶಕ್ತನಾಗಿಯೂ, ಯಥೇಚ್ಛವಾದ ಅನ್ನಾದ್ಯಾಹಾರಗಳಿಗೆ ಒಡೆಯನಾಗಿಯೂ ಆಗುವನು. ಅಲ್ಲದೆ ಆ ಪುರುಷನ ಪುತ್ರಾದಿಸಂತತಿಯವರೂ ಅನ್ನಾದ್ಯಾಹರಗಳನ್ನು ಪಡೆದು ಭಜಿಸಲು ಸಮರ್ಥರಾಗುವರು.

ಅಂತರೇಣ ಗಾರ್ಹಪತ್ಯಾಹವನೀಯೌ ಹೋಷ್ಯನ್ಸಂಚರೇತ್ಯೈತೇನ ಹ ವಾ
ಏನಂ ಸಂಚರಮಾಣಮಗ್ನಯೋ ವಿದುರಯಮಸ್ಮಾಸು ಹೋಷ್ಯ-

ತೀತ್ಯೇತೇನ ಹ ವಾ ಅಸ್ಯ ಸಂಚರಮಾಣಸ್ಯ ಗಾರ್ಹಪತ್ಯಾಹವನೀಯೌ ಪಾಪ್ಮಾನಮುಪಹತಃ ಸೋಽಪಹತಪಾಪ್ಮೋರ್ಧ್ವಃ ಸ್ವರ್ಗಂ ಲೋಕ-ಮೇತೀತಿ ವೈ ಬ್ರಾಹ್ಮಣಮುದಾಹರಂತಿ ||

ಪೂರ್ವಂ ಗಾರ್ಹಪತ್ಯಾಹವನೀಯಯೋರ್ಮಧ್ಯೇ ಶಕಟಾದಿಗಮನಂ ನಿಷಿದ್ಧಂ ತದ್ವದ್ಯಾಗ-ಕರ್ತುರಪಿ ಮಧ್ಯೇ ಸಂಚಾರನಿಷೇಧಶಂಕಾಯಾಂ ತದ್ವ್ಯಾವರ್ತಯಿತುಮಾಹ—ಯಃ ಪುಮಾನ್ ಹೋಷ್ಯತಿ ಸ ಪುಮಾನ್ ಗಾರ್ಹಪತ್ಯಾಹವನೀಯಾವಂತರೇಣ ತನ್ಮಧ್ಯಗತೇನ ಮಾರ್ಗೇಣ ಸಂಚ-ರೇತ । ಏತೇನ ಮಾರ್ಗೇಣ ಸಂಚರಮಾಣಮೇನಂ ಹೋಮಕರ್ತಾರಮಗ್ನಯಃ ಸ್ವಮನಸ್ಯೈವಂ ವಿದುಃ । ಅಯಮಸ್ಮಾಸು ಹೋಷ್ಯತೀತಿ । ತಸ್ಮಾದಗ್ನೀನಾಮಭೀಷ್ಟತ್ವಾತ್ತಸ್ಯ ಸಂಚಾರೋ ಯುಕ್ತಃ । ಕಿಂಚ ಹೋಮಾರ್ಥಂ ಸಂಚರಮಾಣಸ್ಯ ಪಾಪ್ಮಾನಮುಭಾವಗ್ನೀ ವಿನಾಶಯತಃ । ಸ ಚ ಪಾಪರಹಿತ ಊರ್ಧ್ವಗಾಮೀ ಸ್ವರ್ಗಂ ಲೋಕಂ ಪ್ರಾಪ್ನೋತಿ । ಅಸ್ಮಿನ್ನರ್ಥೇ ಶಾಖಾಂತರಗತಂ ಬಹುವಿಧಂ ಬ್ರಾಹ್ಮಣಮಭಿಜ್ಞಾ ಉದಾಹರಂತಿ ||

ಹಿಂದೆ ಗಾರ್ಹಪತ್ಯ ಮತ್ತು ಆಹವನೀಯಾಗ್ನಿಗಳ ಮಧ್ಯ ಪ್ರದೇಶದಲ್ಲಿ ಗಾಡಿಗಳು ಸಂಚಾರಮಾಡುವುದು ನಿಷಿದ್ಧ ವೆಂದು ಹೇಳಲಾಗಿದೆ. ಆದರೆ ಯಜ್ಞಕರ್ತನಾದವನೂ ಮಧ್ಯದಲ್ಲಿ ಸಂಚರಿಸಬಾರದೆಂಬ ನಿಧಿಯ ವಿಷಯದಲ್ಲಿ ಸಂಶಯ ವುಂಟಾದರೆ ಅದರ ವಿಷಯವನ್ನು ವಿಶದಪಡಿಸುವರು. ಹೋಮವಾಡುವ ಯಜ್ಞಕರ್ತನು ಗಾರ್ಹಪತ್ಯ ಮತ್ತು ಆಹವನೀ ಯಾಗ್ನಿಗಳ ಮಧ್ಯವಿರುವ ಮಾರ್ಗದಲ್ಲಿ ಪದೇ ಪದೇ ಸಂಚರಿಸುತ್ತಿರಬೇಕು. ಈ ರೀತಿ ತಮ್ಮ ಮಧ್ಯದಲ್ಲಿ ಸಂಚಾರಮಾಡು ತ್ತಿರುವ ಯಜ್ಞಕರ್ತನ (ಯಜಮಾನನ) ವಿಷಯದಲ್ಲಿ ಈ ಅಗ್ನಿಗಳು ತಮ್ಮ ಮನಸ್ಸಿನಲ್ಲಿ ಹೀಗೆ ಹೇಳಿಕೊಳ್ಳುವವು—ಈ ಯಜಮಾನನು ಅಗ್ನಿ ಸ್ವರೂಪರಾದ ನಮ್ಮಲ್ಲಿ ಹೋಮಾದಿಗಳನ್ನು ಮಾಡುವನು. ಆದ್ದರಿಂದ ಈ ಪುರುಷನು ಅಗ್ನಿಗಳ ಮಧ್ಯದಲ್ಲಿ ಸಂಚರಿಸಬೇಕಾದುದು ಯುಕ್ತವು ಎಂದು ಹೇಳುವವು. ಮತ್ತು ಹೋಮಾರ್ಥವಾಗಿ ಸಂಚಾರಮಾಡುವ ಈ ಪುರುಷನ ಪಾಪಗಳನ್ನು ಈ ಎರಡು ಅಗ್ನಿಗಳೂ ನಾಶಮಾಡುವವು. ಪಾಪರಹಿತನಾಗುವುದರಿಂದ ಈ ಪುರುಷನು ಊರ್ಧ್ವಾಭಿಖವಾಗಿ ಹೋಗಿ ಸ್ವರ್ಗಲೋಕವನ್ನು ಪಡೆಯುವನು. ಈ ವಿಷಯದಲ್ಲಿ ಶಾಖಾಂತರಗಳ ನಾನಾ ಬ್ರಾಹ್ಮಣ ವಾಕ್ಯಗಳನ್ನು ಅಭಿಜ್ಞರು ಉದಾಹರಿಸುವರು—

ತದಾಹುಃ ಕಥಮಗ್ನೀನ್ಪ್ರವತ್ಸ್ಯನ್ನುಪತಿಷ್ಠೇತ ಪ್ರೋಷ್ಯ ವಾ ಪ್ರತ್ಯೇ-ತ್ಯಾಹರಹರ್ವೇತಿ ತೂಷ್ಣೀಮಿತ್ಯಾಹುಸ್ತೂಷ್ಣೀಂ ವೈ ಶ್ರೇಯಸ ಆಕಾಂಕ್ಷಂತೇಽಥಾಪ್ಯಾಹುರಹರಹರ್ವಾ ಏತೇ ಯಜಮಾನಸ್ಯಾಶ್ರದ್ಧ-ಯೋದ್ವಾಸನಾತ್ಪ್ರಸ್ಲಾವನಾದ್ಬಿಭ್ಯತಿ ತಾನುಪತಿಷ್ಠೇತೈವಾಭಯಂ ವೋಽಭಯಂ ಮೇಽಸ್ತ್ವಿತ್ಯಭಯಂ ಹೈವಾಸ್ಮೈ ಭವತ್ಯಭಯಂ ಹೈವಾಸ್ಮೈ ಭವತಿ ||

ಅಥ ತ್ರಿಚತ್ವಾರಿಂಶೇ ಪ್ರಶ್ನೋತ್ತರೇ ದರ್ಶಯತಿ—ಯದಾಗ್ನಿಹೋತ್ರೀ ಸ್ವಗೃಹ ಏವಾಗ್ನೀ-ನವಸ್ಥಾಪ್ಯ ಸ್ವಯಂ ಗ್ರಾಮಾಂತರಂ ಪ್ರತಿ ಪ್ರವಸತಿ ತದಾನೀಂ ಪ್ರವತ್ಸ್ಯನ್ನಗ್ನಿಹೋತ್ರೀ ಪ್ರವಾಸ-ಕಾಲೇ ಕಥಮಗ್ನೀನುಪತಿಷ್ಠೇತ । ಅಥವಾ ಪ್ರೋಷ್ಯ ಗ್ರಾಮಾಂತರೇ ಗತ್ವಾ ಪ್ರತ್ಯೇತ್ಯ ಪುನರಾಗತ್ಯ ಕಥಮುಪತಿಷ್ಠೇತ । ಅಥವಾ ಸ್ವಗೃಹೇ ತಿಷ್ಠನ್ನಪ್ಯಹರಹಃ ಪ್ರತಿದಿನಂ ಕಥಮುಪತಿಷ್ಠೇತ । ಇತ್ಯೇ-ತಸ್ಯ ಪ್ರಶ್ನತ್ರಯಸ್ಯ ತೂಷ್ಣೀಮಿತ್ಯಾದಿಕಮುತ್ತರಮ್ । ನಾತ್ರ ಮಂತ್ರಪಾಠಃ ಕಶ್ಚಿದಸ್ತಿ । ಕಿಂತು ತೂಷ್ಣೀಮೇವಾಂಜಲ್ಯಾದಿನಾ ವಿನಯಂ ಪ್ರದರ್ಶಯನ್ನುಪತಿಷ್ಠೇತ । ಲೋಕೇಽಪಿ ಸೇವಕಾಸ್ತೂ-ಷ್ಣೀಂಭೂತಾ ಏವ ಸಂತೋ ವಿನೀತಾಃ ಶ್ರೇಯಸಃ ಶ್ರೇಷ್ಠಾನ್ರಾಜಗುರ್ವಾದೀನ್ ಪುರುಷಾನಾ-ಕಾಂಕ್ಷಂತ ಆಗತ್ಯ ಸ್ವಾಭೀಷ್ಟಂ ಪ್ರಾರ್ಥಯಂತೇ । ತಸ್ಮಾತ್ತೂಷ್ಣೀಮುಪಸ್ಥಾನಮಿತ್ಯೇಕಃ ಪಕ್ಷಃ । ಅಥಾಪ್ಯಾಹುಃ । ಅಪಿ ಚಾಭಿಜ್ಞಾಃ ಕೇಚಿದೇವಂ ಪಕ್ಷಾಂತರಂ ವದಂತಿ । ಅಹರಹರ್ವೈ ಪ್ರತಿದಿನ-ಮೇವೈತೇಽಗ್ನಯೋ ಬಿಭ್ಯತಿ । ಭಯಕಾರಣಂ ಯಜಮಾನಸ್ಯೇತ್ಯಾದಿನೋಚ್ಯತೇ । ಹೋಮೇ ನಿಷ್ಪನ್ನೇ ಸತಿ ಪಶ್ಚಾದುಪಯೋಗಾಭಾವಾದ್ಯಜಮಾನಸ್ಯಾಗ್ನಿಷ್ವಶ್ರದ್ಧಾ ಭವತ್ಯತೋಽಯಮಗ್ನೀನು-ದ್ವಾಸಯೇದಿತ್ಯೇಕೋ ಭಯಹೇತುಃ । ಪ್ರಸ್ಥಾಪಯೇಲ್ಲೌಕಿಕಪಾಕಾರ್ಥಂ ನೀತ್ವಾ ಪ್ರಸ್ಥಾಪನಂ ಕುರ್ಯಾದಿತಿ ದ್ವಿತೀಯೋ ಭಯಹೇತುಃ । ಅತೋ ಭಯಪರಿಹಾರಾಯ ತಾನೇತೇನ ಮಂತ್ರೇಣ ಸರ್ವತ್ರೋಪತಿಷ್ಠೇತ । ಹೇಽಗ್ನಯೋ ಮತ್ತಃ ಸಕಾಶಾದ್ವೋ ಯುಷ್ಮಾಕಮಭಯಮಸ್ತು । ಯುಷ್ಮತ್ಸಕಾಶಾನ್ಮಮಾಪ್ಯಭಯಮಸ್ತ್ವಿತಿ ಮಂತ್ರಾರ್ಥಃ । ಏವಮುಪಸ್ಥಾನಂ ಕುರ್ವತೇಽಸ್ಮೈ ಯಜಮಾನಾಯಾಭಯಮೇವ ಭವತಿ । ಅಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ॥

ನಲವತ್ತಮೂರನೆಯ ಪ್ರಶ್ನೋತ್ತರವನ್ನು ವಿವರಿಸುವರು. ಅಗ್ನಿಹೋತ್ರಿಯಾದವನು ತನ್ನ ಮನೆಯಲ್ಲಿ ಅಗ್ನಿಯನ್ನು ಇಟ್ಟುಕೊಂಡು ಪ್ರತಿದಿನವೂ ಅಗ್ನಿಹೋತ್ರವನ್ನು ಮಾಡುತ್ತಿರುವಾಗ ಒಂದಾನೊಂದು ಸಂದರ್ಭದಲ್ಲಿ ಗ್ರಾಮಾಂತರಕ್ಕೆ ಹೋಗಬೇಕಾಗಿ ಬಂದಲ್ಲಿ ಆಗ ಅವನು ಹೇಗೆ ಅಗ್ನಿಹೋತ್ರವನ್ನು ಮಾಡಬೇಕು ? ಅಥವಾ ಗ್ರಾಮಾಂತರಕ್ಕೆ ಹೋದವನು ಅಲ್ಲಿಯೇ ಕೆಲವು ದಿನಗಳಿರಬೇಕಾದರೆ ಪ್ರತಿದಿನವೂ ತನ್ನ ಅಗ್ನಿಹೋತ್ರಾಗ್ನಿಯ ಸಮೀಪಕ್ಕೆ ಬಂದು ಹೋಗುತ್ತಿರಬೇಕೇ? ಅಥವ ತನ್ನ ಮನೆಯಲ್ಲಿದ್ದು (ಪರಊರಿನಲ್ಲಿ) ಕೊಂಡು ಪ್ರತಿದಿನವೂ ಹೇಗೆ ಅಗ್ನಿಯನ್ನು ಸೇವಿಸುವುದು ? ಈ ಮೂರುವಿಧವಾದ ಪ್ರಶ್ನೆಗಳ ವಿಷಯದಲ್ಲಿಯೂ ಏನೂ ಮಾಡದೆ ಸುಮ್ಮನಿರಬೇಕೆಂಬ ಭಾವವು ಭಾಸವಾಗುವುದು ಮತ್ತು ಈ ವಿಷಯದಲ್ಲಿ ಹೀಗೆಯೇ ಮಾಡಬೇಕು ಎಂದು ಯಾವ ಮಂತ್ರವೂ ವಿಧಿಸುವುದಿಲ್ಲ. ಆದರೆ ಯಾವ ಮಂತ್ರವನ್ನೂ ಪಠಿಸದೆ ಸುಮ್ಮನೆ ಕೈಮುಗಿದು ವಿನಯಪೂರ್ವಕವಾಗಿ ಎದ್ದುನಿಂತುಕೊಂಡು ಪ್ರಾರ್ಥಿಸಬೇಕು. ಲೋಕವ್ಯವಹಾರದಲ್ಲಿಯೂ ಸೇವಕನೆಂದ ಲಾದವರು ತಮ್ಮ ಯಜಮಾನನ ಬಳಿ ಏನನ್ನೂ ಮಾತನಾಡದೆ ಮೌನವಾಗಿದ್ದು ವಿನೀತರಾಗಿ ಶ್ರೇಷ್ಠರಾದವರಲ್ಲಿ ಬಂದು ತಮ್ಮ ಅಭೀಷ್ಟವನ್ನು ನಿವೇದಿಸಿಕೊಳ್ಳುತ್ತಾರೆ. ಆದ್ದರಿಂದ ಯಜಮಾನನು ಇದ್ದಲ್ಲಿಯೇ ಸುಮ್ಮನೆ ನಿಂತುಕೊಂಡು ಮನಸ್ಸಿನಲ್ಲಿಯೇ ಅಗ್ನಿಯನ್ನು ಪ್ರಾರ್ಥಿಸಬೇಕು ಎಂಬುವುದು ಒಂದು ಪಕ್ಷವು (ಒಂದು ವಿಧವು) ಇನ್ನು ಕೆಲವರು ಅಭಿಜ್ಞ ರಾದವರು ಬೇರೆ ವಿಧವನ್ನು ಹೇಳುವರು. ಈ ಅಗ್ನಿಹೋತ್ರಾಗ್ನಿಗಳು ಪ್ರತಿದಿನವೂ ಭಯಪಡುವವು. ಭಯಕ್ಕೆ ಕಾರಣ ವೇನೆಂದರೆ ಹೋಮಮಾಡಿದ ಮೇಲೆ ಅಗ್ನಿಗಳ ಉಪಯೋಗವೇನೂ ಇರುವುದಿಲ್ಲವಾದ್ದರಿಂದ ಯಜಮಾನನಿಗೆ ಅಗ್ನಿಗಳ ವಿಷಯದಲ್ಲಿ ಅಶ್ರದ್ಧೆಯು (ಅನಾಸಕ್ತಿಯು) ಉಂಟಾಗಿ ತಮ್ಮನ್ನು (ಅಗ್ನಿಗಳನ್ನು) ವಿಸರ್ಜಿಸುವನು ಎಂದು ಭಯಪಡುವವು ಅಗ್ನಿಗಳ ಭಯಕ್ಕೆ ಇನ್ನೂ ಒಂದು ಕಾರಣವಿರುವುದು. ಯಜ್ಞಾಗ್ನಿಗಳಾದ ತಮ್ಮನ್ನು ಆ ಸ್ಥಾನದಿಂದ ತೆಗೆದು ಲೌಕಿಕಾ

ಗ್ನಿಯಂತೆ ಅಡಿಗೆ ಮುಂತಾದುವನ್ನು ಮಾಡಲು ಉಪಯೋಗಿಸುವರೆಂಬ ಎರಡನೆಯ ಭಯವೂ ಅಗ್ನಿಗಳಿಗೆ ಇರುವುದು. ಏಕೆಂದರೆ ಯಜ್ಞಾಗ್ನಿಗಳಿಗೆ ಇರುವ ಗೌರವ ಸ್ಥಾನವು ಪಾಕಾದಿಗಳನ್ನು ಮಾಡಲು ಉಪಯೋಗಿಸುವ ಅಗ್ನಿಗಳಿರುವುದಿಲ್ಲ. ಆದ್ದರಿಂದ ಅಗ್ನಿಹೋತ್ರಿಯಾದವನು ತನ್ನ ಈ ಅಗ್ನಿಗಳ ಭಯಪರಿಹಾರಕ್ಕಾಗಿ ಮುಂದೆ ಹೇಳುವ ಮಂತ್ರದಿಂದ ನನ್ನಿಂದ ನಿಮಗೆ ಯಾವವಿಧವಾದ ಭಯಗಳೂ ಉಂಟಾಗದಿರಲಿ, ನಿಮ್ಮಿಂದಲೂ ಸಹ ನನಗೆ ಯಾವವಿಧವಾದ ಭಯವೂ ಉಂಟಾಗದಿರಲಿ ಎಂಬುದೇ ಮಂತ್ರದ ಮುಖ್ಯಾಭಿಪ್ರಾಯವು ಈವಿಧವಾದ ಅರ್ಥವುಳ್ಳ ಮಂತ್ರವನ್ನು ಪಠಿಸುತ್ತಾ ಅಗ್ನಿಗಳನ್ನುದ್ದೇಶಿಸಿ ತನ್ನ ಪ್ರಾರ್ಥಿಸುವ ಪುರುಷನಿಗೆ ಎಂದರೆ ಯಜಮಾನನಿಗೆ ಅಭಯವುಂಟಾಗುವುದು. ವಾಕ್ಯದ ಕೊನೆಯಲ್ಲಿರುವ **ಅಭಯಂ ಹೈವಾಸ್ಮೈ ಭವತಿ** ಎಂಬ ಪದಗಳು ಇಲ್ಲಿ ದ್ವಿರುಕ್ತವಾಗಿರುವುದು ಎಂದರೆ ಎರಡಾವರ್ತಿ ಪಠಿಸಲಾ[illegible]ವುದು. ಇದು ಎಂದರೆ ದ್ವಿರುಕ್ತವಾಗಿರುವುದು ಅಧ್ಯಾಯವು ಸಮಾಪ್ತಿಯಾಯಿ ತೆಂಬುವುದನ್ನು ಸೂಚಿಸುವುದು.

---

*English Translation*

**(On some otner penances for mishaps occurring to an Agnishofri. Where the Agnihotri must walk between his fires. Whether the Dakshina Agni is to be fed with the other fires also. How an Agnihotri should behave when absent from his fires.)**

They ask, If the sun rise or set before an Agni-hotri takes fire out of (the Garhapatya to bring it to the Ahavaniya), or should it when placed (in the Ahavaniya) be extinguished before he brings the burnt offering (Homa), what is the penance for it ? He shall take it out after sunset, after having placed a piece of gold before it; for light is a splendid body (sukrm), and gold is the splendid light, and that body the (the sun) is just this light. Seeing it shining he takes out the fire. At morning time (after sunrise) he may take out the fire when he has put silver below it; for this (silver) is of the same nature with the night (representing the splendour of the moon and the stars). He shall take out (of the Garhapatya) the Ahavaniya before the shadows are cast together (before it has grown completely dark). For lhe shadow of darkness is death. By means of this light (the silver) he overcomes death, which is the shadow of darkness. This is the penance.

They ask, When a cart, or a carriage, or horses go over the Garhapatya and Ahavaniya fires of an Agnihotri, what is the penance for it ? He shall not mind it at all, thus they say, believing that these things (their types) are placed in his soul. But should he mind it, then he shall form a line of water drops from the Garhapatya to the Ahavaniya under recital of tantum tanvan rajaso (10,53,6). This is the penance.

They ask, Shall the Agnihotri when feeding the other fires with wood make the Dakshina Apni (anvaharya pachans) also to blaze up brightly, or shall he not do so? Who feeds the fires, puts into his soul the vital breaths; of these fires the Dakshina Agni provides the feeder best with food. He gives him therefore an offering, saying, "To Agni the enjoyer of food, the master of food, Svaha!" He who thus knows becomes an enjoyer of food, and a master of food, and obtains children and food.

The Agnihotri must walk between the Garhapatya and Ahavaniya when he is about to sacrifice ; for the Agnis (fires) when preceiving him walk thus, know, " he is about to bring us a sacrifice. " By this both these fires destroy all wickedness of him who is thus walking between them. whose wickdness is thus destroyed, goes up to the heavenly world. Thus it is declared in another Brahmanam which they quote.

They ask, How can an Agnihotri who intends going abroad be near his sacred fires, established at his home? can be do it when absent or is he to return to them every day ? He shall approach them silently in his mind without repeating the mantras. For by keeping silence they aspire after fortune. But some say he should go to them every day. For the Agnis of an Agnihotri lose all confidence in him by his absence, fearing lest they be removed or scattered. Therefore he must approach them, and should he not be able to return, he must repeat the words " May you be safe! may I be safe!" In this way the Agnihotri is safe.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾತ್ರಿಂಶಾಧ್ಯಾಯೇ ಏಕಾದಶಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ದ್ವಾತ್ರಿಂಶೋಽಧ್ಯಾಯಃ ಸಮಾಪ್ತಃ

ಇಲ್ಲಿಗೆ ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮದಲ್ಲಿ
ಮೂವತ್ತೆರಡನೆಯ ಅಧ್ಯಾಯದಲ್ಲಿ ಹನ್ನೊಂದನೆಯ ಖಂಡವು ಸಮಾಪ್ತವಾದುದು.

ಮೂವತ್ತೆರಡನೆಯ ಅಧ್ಯಾಯವು ಸಮಾಪ್ತವಾದುದು



# ಅಥೈತರೇಯಬ್ರಾಹ್ಮಣೇ ತ್ರಯಸ್ತ್ರಿಂಶೋಽಧ್ಯಾಯಃ

## ಐತರೇಯ ಬ್ರಾಹ್ಮಣದಲ್ಲಿ ಮೂವತ್ತಮೂರನೆಯ ಅಧ್ಯಾಯವು



## ಶುನಶ್ಶೇಪಾಖ್ಯಾನವು

[ದೊರೆಯಾದ ಹರಿಶ್ಚಂದ್ರನ ಪುತ್ರೇಚ್ಛೆ—ಪುತ್ರಸಂಪತ್ತಿನ ಪ್ರಶಂಸೆ.]

ಇಕ್ಷ್ವಾಕುವಂಶದಲ್ಲಿ ಹುಟ್ಟಿದ ವೇಧಸ್ಸಿನ ಮಗನಾದ ಹರಿಶ್ಚಂದ್ರನಿಗೆ ನೂರುಜನ ಹೆಂಡತಿಯರಿದ್ದರೂ ಸಹ ಪುತ್ರೋತ್ಪತ್ತಿಯಾಗಲಿಲ್ಲ. ಒಂದುಸಲ ಹರಿಶ್ಚಂದ್ರನ ಮನೆಗೆ ಪರ್ವತನಾರದರೆಂಬ ಋಷಿಗಳು ಬಂದಾಗ ಹರಿಶ್ಚಂದ್ರನು ನಾರದನನ್ನು ಕುರಿತು ಎಲೈ ನಾರದನೇ, ವಿವೇಚನಾಶಕ್ತಿಯಿರುವ ಮಾನವನೂ ಅವನಂತಯೇ ಶಕ್ತಿಯಿಲ್ಲದಿರುವ ಇತರ ಪ್ರಾಣಿಗಳೂ ಸಹ ಸಂತಾನಕ್ಕಾಗಿ ಉತ್ಕಟವಾದ ಆಸೆ ಪಡುತ್ತವೆ. ಸಂತಾನೋತ್ಪತ್ತಿಯಿಂದ ಆಗತಕ್ಕ ಲಾಭವೇನು ? ಎಂದು ಕೇಳಿದನು.

ಹೀಗೆ ಒಂದು ಮಾತಿನಲ್ಲಿ ಹರಿಶ್ಚಂದ್ರನು ಕೇಳಿದ ಪ್ರಶ್ನೆಗೆ ನಾರದನು ಮುಂದೆ ವರ್ಣಿತವಾದಂತೆ ಹತ್ತು ವಾಕ್ಯಗಳಲ್ಲಿ ಉತ್ತರವನ್ನು ಹೇಳುವನು—

(೧) ತಂದೆಯಾದವನು ತನಗೆ ಹುಟ್ಟಿದ ಮಗನ ಮುಖದರ್ಶನದಿಂದ ಅನುಭವಿಸುವ ಆನಂದದ ಜೊತೆಯಲ್ಲಿ ಆ ಮಗನ ಮೂಲಕ ತನ್ನ ಪಿತೃಋಣವನ್ನೂ ತೀರಿಸಿ ಅಮೃತತ್ವವನ್ನು ಹೊಂದುತ್ತಾನೆ.

(೨) ಮಗನನ್ನು ಪಡೆಯುವ ತಂದೆಯ ಸಂತೋಷವು ಪೃಥ್ವಿಯಿಂದ ಸಿಕ್ಕುವ ಭೋಗಕ್ಕಿಂತಲೂ ಅಧಿಕವಾದುದು. ಅಗ್ನಿಯಿಂದಾಗತಕ್ಕ ಉಪಕಾರಕ್ಕಿಂತಲೂ ಹೆಚ್ಚಿನದು. ಮತ್ತು ಜಲದಿಂದಾಗತಕ್ಕ ಪ್ರಯೋಜನಕ್ಕಿಂತಲೂ ಮೀರಿದುದು. ಈ ಎಲ್ಲಾ ಭೋಗಗಳಿಗಿಂತಲೂ ಪುತ್ರಪ್ರಾಪ್ತಿಯಿಂದಾಗುವ ಭೋಗವು ಅತ್ಯಧಿಕವಾದುದು.

(೩) ಪುತ್ರನ ಮೂಲಕ ತಂದೆಯಾದವನು ಅನೇಕ ದೊಡ್ಡ ದೊಡ್ಡ ಆಪತ್ತುಗಳನ್ನು ದಾಟಿದ್ದಾನೆ. ತಂದೆಯಾದವನು ತನ್ನಲ್ಲಿ ತಾನೇ ಪುತ್ರರೂಪದಿಂದ ಹುಟ್ಟುವುದರಿಂದ ಆಹಾರಸಾಮಗ್ರಿಗಳನ್ನು ಮುಂಜಾಗ್ರತೆಯಾಗಿಯೇ ಸಿದ್ಧಮಾಡಿಕೊಂಡಿರುವ ದೋಣಿಯು, ಮನುಷ್ಯನನ್ನು ನದಿ ಅಥವಾ ಸಾಗರಗಳ ಮೇಲೆ ದಾಟಿಸುವಂತೆ ತಂದೆಯನ್ನು ಮಗನಾದವನು ಸಂಸಾರಸಾಗರದ ಐಹಿಕ ಮತ್ತು ಆಮುಷ್ಮಿಕವಾದ ದುಃಖಗಳಿಂದ ಪಾರುಮಾಡುತ್ತಾನೆ.

(೪) ಪುತ್ರಸಂತಾನವಿಲ್ಲದಿರುವ ಗಾರ್ಹಸ್ಥ್ಯಜೀವನದಿಂದೇನು ಪ್ರಯೋಜನ ? ಬ್ರಹ್ಮಚರ್ಯವೇತಕ್ಕೆ? ವಾನಪ್ರಸ್ಥಾಶ್ರಮವೇತಕ್ಕೆ ? ಪರಿವ್ರಾಜಕನೇತಕ್ಕಾಗಬೇಕು ? ಇವುಗಳಿಂದೇನು ಪ್ರಯೋಜನ ? ಎಲೈ ಬ್ರಾಹ್ಮಣೋತ್ತಮರೇ ಸಂತಾನವನ್ನಪೇಕ್ಷಿಸಿರಿ ಎಂಬುದಾಗಿ ವೈದಿಕಕರ್ಮಾಚರಣೆಗಾಗಿ ದಾಂಪತ್ಯಜೀವನವನ್ನು ತ್ಯಾಗಮಾಡತಕ್ಕ ಜನರನ್ನು ಕುರಿತು ಲೋಕವು ಹೇಳುತ್ತದೆ.

(೫) ಅನ್ನವು ಜೀವವನ್ನು ರಕ್ಷಿಸುತ್ತದೆ. ಬಟ್ಟೆಗಳು ಚಳಿಯಿಂದ ಕಾಪಾಡುತ್ತವೆ. ಚಿನ್ನವು ಆಭರಣದ ಪ್ರಯೋಜನವನ್ನು ಕೊಡುತ್ತದೆ. ವಿವಾಹಾದಿಗಳು ಗೋರೂಪದ ಐಶ್ವರ್ಯವನ್ನು ತರುತ್ತದೆ. ಭಾರ್ಯೆಯು ಸುಹೃತ್ತಾಗುತ್ತಾಳೆ. ಮಗಳು ಪ್ರೀತಿಪಾತ್ರಳಾಗುತ್ತಾಳೆ. ಆದರೆ ಪುತ್ರನೊಬ್ಬನು ಮಾತ್ರ ಅತ್ಯುತ್ತಮವಾದ ದೇವಲೋಕದಲ್ಲಿ ಆತ್ಮಪ್ರಕಾಶಕನಾದ ದೀಪವಾಗಿ ಬೆಳಗುತ್ತಾನೆ.

(೬) ಪತಿಯು ಹೆಂಡತಿಯಲ್ಲಿ ಬೀಜದ ರೂಪದಲ್ಲಿ ಪ್ರವೇಶಿಸುತ್ತಾನೆ. ಬೀಜವು ಗರ್ಭದ ರೂಪಕ್ಕೆ ಪರಿವರ್ತಿತವಾಗುವಾಗ ಅವಳನ್ನು ತಾಯಿಯಾಗಿ ಮಾಡುತ್ತಾನೆ. ಅನಂತರ ಅವಳಿಂದ ಪುನರುತ್ಪನ್ನನಾಗಿ ಹತ್ತನೆಯ ತಿಂಗಳಲ್ಲಿ ಜನಿಸುತ್ತಾನೆ

(೭) ಹೆಂಡತಿಯ ಗರ್ಭದಲ್ಲಿ ಪತಿಯು ಜನಿಸಿದಾಗ ಮಾತ್ರ ಅವಳು ನಿಜವಾಗಿಯೂ **'ಜಾಯಾ'** ಎಂಬ ಅನ್ವರ್ಥನಾಮವನ್ನು ಪಡೆಯುತ್ತಾಳೆ. ಅವಳಲ್ಲಿ ಉಪ್ತವಾದ ಬೀಜವನ್ನು ಅವಳು ಪುತ್ರರೂಪದಲ್ಲಿ ಬೆಳೆಸಿ ಅವನ್ನು ಪ್ರಕಾಶಿಸುವಂತೆ ಮಾಡಿ ಅಂದಗೊಳಿಸುತ್ತಾಳೆ.

(೮) ದೇವತೆಗಳೂ ಮತ್ತು ಋಷಿಗಳೂ ಸಹ ಜಾಯೆಯಾದವಳಿಗೆ ಅತ್ಯುತ್ತಮವಾದ ಕಾಂತಿಯನ್ನನುಗ್ರಹಿಸಿದ್ದಾರೆ. ಅನಂತರ ದೇವತೆಗಳು ಮಾನವನನ್ನು ಕುರಿತು **'ಇವಳು ನಿಮ್ಮ ಜನನಿಯಾಗುತ್ತಾಳೆ'** ಎಂದು ಪ್ರಕಟಿಸಿದ್ದಾರೆ.

(೯) ಸಂತಾನವಿಲ್ಲದವನಿಗೆ ಶಾಶ್ವತವಾದ ಸ್ಥಿತಿಯಿಲ್ಲ ಎಂಬುದನ್ನು ಪಶ್ವಾದಿಗಳೂ ತಿಳಿದು ಅವುಗಳಲ್ಲಿ ಸ್ವಂತ ಗಂಡುಮರಿಯೂ ಸಹ ತಾಯಿಯನ್ನಾಗಲಿ ಅಥವಾ ಸಹೋದರಿಯನ್ನಾಗಲಿ ಧರ್ಷಿಸುತ್ತದೆ-

(೧೦) ಇದು ಪುತ್ರಸಂತಾನವುಳ್ಳವರು ದುಃಖರಹಿತರಾಗಿ ತಿರುಗಾಡುವ ದಾರಿ. ಪಶುಪಕ್ಷ್ಯಾದಿಗಳಿಗೂ ಸಹ ಇದು ಗೊತ್ತು ಎಂಬುದಾಗಿ ಪುತ್ರಸಂತಾನದ ಪ್ರಶಂಸೆಯನ್ನು ಮಾಡಿದನು.

[ಹರಿಶ್ಚಂದ್ರನಿಗೆ ಪುತ್ರೋತ್ಪತ್ತಿಯಾಗುವುದು. ವರುಣನು ಪುನಃ ಪುನಃ ಬಂದು ಅವನ ಮಗನನ್ನು ತನಗೆ ಯಜ್ಞದಲ್ಲಿ ಆಹುತಿಯನ್ನಾಗಿ ಕೊಡಬೇಕೆಂದು ನಿರ್ಬಂಧಿಸುವುದು. ಆದರೆ ಹರಿಶ್ಚಂದ್ರನು ಬೇರೆ ಬೇರೆ ಕಾರಣಗಳನ್ನು ಮುಂದೆಮಾಡಿ ಯಜ್ಞವನ್ನು ಮುಂದಕ್ಕೆ ಹಾಕಿ ನುಣುಚಿಕೊಳ್ಳುವುದು.]

ಅನಂತರ ನಾರದನು—ವರುಣನಲ್ಲಿಗೆ ಹೋಗಿ ನಿನಗೆ ಒಬ್ಬ ಪುತ್ರನನ್ನನುಗ್ರಹಿಸುವಂತೆ ಪ್ರಾರ್ಥಿಸು. ಮತ್ತು ಮಗನು ಹುಟ್ಟಿದನಂತರ ಅವನಿಗೆ ಪುನಃ ಯಜ್ಞದಲ್ಲಿ ಆಹುತಿಯಾಗಿ ಅರ್ಪಿಸುವಂತೆ ಭರವಸೆ ಕೊಡು ಎಂದು ಹರಿಶ್ಚಂದ್ರನಿಗೆ ಸಲಹೆಯನ್ನು ಕೊಟ್ಟನು. ಹರಿಶ್ಚಂದ್ರನು ಅದೇಪ್ರಕಾರ ವರುಣನಲ್ಲಿಗೆ ಹೋಗಿ ನನಗೆ ಒಬ್ಬ ಪುತ್ರನನ್ನನುಗ್ರಹಿಸು ಅವನನ್ನು ನಿನಗೆ ಆಹುತಿಯನ್ನಾಗಿ ಕೊಡುತ್ತೇನೆ ಎಂದು ಪ್ರಾರ್ಥಿಸಿದನು. ಕೂಡಲೇ ರೋಹಿತನೆಂಬ ಮಗನು ಹುಟ್ಟಿದನು. ವರುಣನು ಬಂದು ನಿನಗೆ ಮಗನು ಹುಟ್ಟಿದ್ದಾನೆ. ಅವನನ್ನು ಆಹುತಿಯಾಗಿ ಕೊಡು ಎಂದನು. ಅದಕ್ಕೆ ಹರಿಶ್ಚಂದ್ರನು ಯಾವ ಪ್ರಾಣಿಗಳಾಗಲಿ, ಆಹುತಿಯಾಗಬೇಕಾದ ಅಧಿಕಾರ ಬರಬೇಕಾದರೆ ಹತ್ತುದಿನಗಳು ಕಳೆಯಬೇಕು. ನನ್ನ ಮಗನಿಗೂ ಹತ್ತುದಿನಗಳು ಕಳೆಯಲಿ. ಅನಂತರ ನಿನಗರ್ಪಿಸುತ್ತೇನೆ ಎಂದನು ರೋಹಿತನಿಗೆ ಹತ್ತು ದಿನಗಳು ಕಳೆದನಂತರ ವರುಣನು ಬಂದು ಅವನನ್ನಪೇಕ್ಷಿಸಿದನು. ಆಗ ಹರಿಶ್ಚಂದ್ರನು ಯಾವ ಪ್ರಾಣಿಯನ್ನಾಗಲಿ, ಆಹುತಿಯಾಗಿ ಕೊಡಬೇಕಾದರೆ ಅದಕ್ಕೆ ದಂತೋತ್ಪತ್ತಿಯಾಗಬೇಕು, ನನ್ನ ಮಗನಿಗೂ ದಂತೋತ್ಪತ್ತಿಯಾದನಂತರ

ಅರ್ಪಿಸುತ್ತೇನೆ ಎಂದನು. ರೋಹಿತನಿಗೆ ಹಲ್ಲು ಹುಟ್ಟಿದ ಮೇಲೆ ವರುಣನು ಬಂದು ಅವನನ್ನು ಅಪೇಕ್ಷಿಸಿದನು. ಆಗ ಹರಿಶ್ಚಂದ್ರನು ದಂತಪಾತವಾಗುವವರೆಗೂ ಯಾವ ಪ್ರಾಣಿಯನ್ನೂ ಆಹುತಿಯಾಗಿ ಕೊಡಕೂಡದು. ಇವನಿಗೂ ದಂತ ಪಾತವಾಗಲಿ ಎಂದನು. ವರುಣನು ಪುನಃ ಬಂದು, ರೋಹಿತನಿಗೆ ದಂತಪಾತವಾಗುತ್ತಿದೆ, ಅವನನ್ನು ಆಹುತಿಯಾಗಿ ಕೊಡೆಂದನು. ಹರಿಶ್ಚಂದ್ರನು ಅವನಿಗೆ ಪುನಃ ದಂತವು ಬೆಳೆಯುವವರೆಗೂ ಅವಕಾಶವನ್ನು ಬೇಡಿದನು. ಅನಂತರ ವರುಣನು ಬಂದಾಗ ಯೋಧವಂಶದಲ್ಲಿ ಹುಟ್ಟಿದವನು ಯೋಧಕವಚವನ್ನು ತೊಡುವವರೆಗೂ ಆಹುತಿಯಾಗುವ ಅರ್ಹತೆ ಬರುವುದಿಲ್ಲ. ಅಲ್ಲಿಯವರೆಗೂ ತಡೆ ಎಂದನು. ಆ ಕಾಲವೂ ಬಂದು ವರುಣನು ರೋಹಿತನನ್ನು ಕಡ್ಡಾಯವಾಗಿ ಅಪೇಕ್ಷಿಸಿದಾಗ ಹರಿಶ್ಚಂದ್ರನು ಮಗನನ್ನು ಕರೆದು "ಮಗುವೇ, ನಿನ್ನನ್ನು ನನಗೆ ಅನುಗ್ರಹಿಸಿದ ವರುಣನಿಗೆ ಪುನಃ ನಿನ್ನನ್ನು ಆಹುತಿಯಾಗಿ ಕೊಡಬೇಕಾಗಿದೆ" ಎನ್ನಲು ರೋಹಿತನು "ಅದೆಲ್ಲಾ ಆಗುವುದಿಲ್ಲ'' ಎಂದು ತನ್ನ ಧನುಸ್ಸನ್ನು ತೆಗೆದುಕೊಂಡು ನಿರ್ಜನವಾದ ಕಾಡೊಂದಕ್ಕೆ ತಲೆತಪ್ಪಿಸಿಕೊಂಡು ಓಡಿಹೋಗಿ ಅಲ್ಲಿ ಒಂದು ವರ್ಷ ಕಾಲ ಅಲೆದಾಡುತ್ತಿದ್ದನು.

**[ರೋಹಿತನು ನಿಷ್ಪ್ರಯೋಜಕನಾಗಿ ಆರು ವರ್ಷಗಳ ಕಾಲ ಕಾಡಿನಲ್ಲಿ ಅಲೆದುದು. ಅನಂತರ ತನಗೆ ಬದಲಾಗಿ ವರುಣನಿಗೆ ಆಹುತಿಕೊಡುವುದಕ್ಕಾಗಿ ಶುನಃಶೇಪನೆಂಬ ಒಬ್ಬ ಬ್ರಾಹ್ಮಣಪುತ್ರನನ್ನು ಅವನ ತಂದೆತಾಯಿಗಳಿಂದ ಬೆಲೆಗೆ ಕೊಂಡುದು.]**

ರೋಹಿತನು ತಲೆತಪ್ಪಿಸಿಕೊಂಡು ಹೊರಟು ಹೋದಮೇಲೆ ವರುಣನು ಹರಿಶ್ಚಂದ್ರನನ್ನು ಬಂಧಿಸಿದನು. ಹರಿಶ್ಚಂದ್ರನಿಗೆ ಮಹೋದರವು ಪ್ರಾಪ್ತವಾಯಿತು. ರೋಹಿತನು ಈ ವಾರ್ತೆಯನ್ನು ಕೇಳಿ ಕಾಡನ್ನು ಬಿಟ್ಟು ಒಂದು ಗ್ರಾಮಕ್ಕೆ ಬಂದಾಗ ಇಂದ್ರನು ಮನುಷ್ಯರೂಪದಿಂದ ಬಂದು ಅವನನ್ನು ಸಂಧಿಸಿ—ಎಲೈ ರೋಹಿತನೆ, ದೇಶಾಟನೆ ಮಾಡದವನಿಗೆ ಸುಖವಿಲ್ಲ. ಒಂದೇ ಜಾತಿಯ ಜನರ ನಡುವೆ ಜೀವಿಪರೆ ಎಂತಹ ಉತ್ತಮನಾದ ಪುರುಷನೂ ಸಹ ದುರ್ಮಾರ್ಗಕ್ಕೆ ಬಿದ್ದು ಕೆಡುತ್ತಾನೆ. ಆದ್ದರಿಂದ ನಿರ್ಜನವಾದ ಪ್ರದೇಶದಲ್ಲಿ ಸಂಚರಿಸು. ಈ ರೀತಿ ಪರ್ಯಟನೆ ಮಾಡುವ ಮನುಷ್ಯನಿಗೆ ಇಂದ್ರನು ಸ್ನೇಹಿತನಾಗುತ್ತಾನೆ. ನೀನೂ ಸಂಚರಿಸು ಎಂದು ಸಲಹೆಯನ್ನು ಕೊಟ್ಟನು.

ರೋಹಿತನು–ಒಬ್ಬ ಬ್ರಾಹ್ಮಣನು ನನಗೆ ಪರ್ಯಟನೆಮಾಡು ಎಂದು ಸಲಹೆಯನ್ನು ಕೊಟ್ಟಿರುವನು ಎಂದು ತಿಳಿದು ಎರಡನೆಯ ವರ್ಷವೂ ಕಾಡಿನಲ್ಲಿ ಅಲೆದು ಅನಂತರ ಒಂದು ಗ್ರಾಮಕ್ಕೆ ಬರುತ್ತಿರುವಾಗ ಇಂದ್ರನು ಪುನಃ ಮನುಷ್ಯರೂಪದಲ್ಲಿ ಬಂದು ಪರ್ಯಟನೆಮಾಡುವವನ ಮನುಷ್ಯನ ಪಾದಗಳು ಪುಷ್ಪಸಕ್ಕೆ ಸಮಾನವಾದವು. ಆ ಪುಷ್ಪದಿಂದ ಆತ್ಮನು ಬೆಳೆದು ಆರೋಗ್ಯರೂಪವಾದ ಫಲವನ್ನು ಪಡೆಯುತ್ತಾನೆ. ಅವನ ಪಾಪವೆಲ್ಲವೂ ಆ ಪರ್ಯಟನದ ಶ್ರಮದಿಂದ ಪರಿಹಾರವಾಗುತ್ತದೆ. ಆದುದರಿಂದ ಸಂಚರಿಸು ಎಂದನು.

ಆ ಮಾತಿನಂತೆಯೇ ರೋಹಿತನು ಮೂರನೆಯ ವರ್ಷವೂ ಸಂಚರಿಸಿ ಪುನಃ ಗ್ರಾಮವನ್ನು ಪ್ರವೇಶಿಸುವ ಸಮಯಕ್ಕೆ ಸರಿಯಾಗಿ ಇಂದ್ರನು ಒಂದೇಕಡೆ ಕುಳಿತಿರುವ ಮನುಷ್ಯನ ಭಾಗ್ಯವು ಅವನಂತೆಯೇ ಒಂದೇಕಡೆ ಕುಳಿತಿರುತ್ತದೆ. ಅವನು ಸಂಚರಿಸಿದರೆ ಅದೂ ಸಂಚರಿಸಿ ಬೆಳೆಯುತ್ತದೆ. ಆದುದರಿಂದ ಸಂಚರಿಸು ಎಂದನು.

ಹಾಗೆಯೇ ನಾಲ್ಕನೆಯ ವರ್ಷವೂ ಆಗಿ ಪುನಃ ಗ್ರಾಮಪ್ರವೇಶ ಕಾಲದಲ್ಲಿ ಇಂದ್ರನು ಬಂದು—ಚತುರ್ಯುಗಗಳ ಸ್ವರೂಪವನ್ನು ವರ್ಣಿಸಿ ರೋಹಿತನನ್ನು ಮತ್ತೆ ಸಂಚರಿಸುವಂತೆ ಹೇಳಿದನು. ರೋಹಿತನು ಐದನೇ ವರ್ಷವನ್ನೂ ಹಾಗೆಯೇ ಮುಗಿಸಿ ಗ್ರಾಮಕ್ಕೆ ಪ್ರವೇಶಿಸುವ ಕಾಲಕ್ಕೆ ಸರಿಯಾಗಿ ಇಂದ್ರನು ಬಂದು ಪರ್ಯಟನೆಮಾಡುವ ಮನುಷ್ಯನಿಗೆ

ಮಧುವೂ, ಮಧುರವಾದ ಉದುಂಬರಫಲವೂ ಪ್ರಾಪ್ತವಾಗುತ್ತವೆ. ತನ್ನ ಸಂತತವಾದ ಸಂಚಾರದಿಂದಲೂ ಶ್ರಾಂತ ನಾಗದಿರುವ ಸೂರ್ಯನ ಕಾಂತಿಯನ್ನು ನೋಡು. ಅವನಂತೆಯೇ ನೀನೂ ಸಂಚರಿಸು ಎಂಬುದಾಗಿ ಹೇಳಿದನು.

ರೋಹಿತನು ಆರನೆಯ ವರ್ಷವೂ ಕಾಡಿನಲ್ಲಿ ಅಲೆದು ಅನಂತರ ಸುಯವಯಸ್ಸಿಂಬುವನ ಮಗನಾದ ಅಜೀಗರ್ತನೆಂಬ ಋಷಿಯನ್ನು ಸಂಧಿಸಿದನು. ಆ ಅಜೀಗರ್ತನು ದಾರಿದ್ರ್ಯದಿಂದ ಕಾಡಿನಲ್ಲಿ ಅನ್ನಾಹಾರವಿಲ್ಲದೇ ಉಪವಾಸ ಮಾಡುತ್ತಿದ್ದನು. ಅವನಿಗೆ ಶುನಃಪುಚ್ಛ, ಶುನಃಶೇಪ ಮತ್ತು ಶುನೋಲಾಂಗೂಲ ಎಂಬ ಮೂವರು ಮಕ್ಕಳಿದ್ದರು. ರೋಹಿತನು ಆ ಋಷಿಯಲ್ಲಿ ಹೋಗಿ—ಎಲೈ ಋಷಿಯೇ, ನಿನಗೆ ನೂರು ಗೋವುಗಳನ್ನು ಕೊಡುತ್ತೇನೆ. ನಿನ್ನ ಮೂವರು ಪುತ್ರರಲ್ಲಿ ಒಬ್ಬನನ್ನು ಕೊಡು. ನನಗೆ ಬದಲು ಅವನನ್ನು ವರುಣನಿಗೆ ಆಹುತಿಯನ್ನಾಗಿ ಕೊಟ್ಟು ನಾನು ತಪ್ಪಿಸಿಕೊಳ್ಳುತ್ತೇನೆ ಎನ್ನಲು ಅದಕ್ಕೆ ಅಜೀಗರ್ತನು ಒಪ್ಪಿಕೊಂಡನು, ದೊಡ್ಡ ಮಗನನ್ನು ಮಾತ್ರ ಕಳುಹಿಸಲಿಷ್ಟಪಡಲಿಲ್ಲ. ಅವನ ಹೆಂಡತಿಯು ಚಿಕ್ಕ ಮಗನನ್ನು ಬಿಡಲೊಪ್ಪಲಿಲ್ಲ. ಅವರಿಬ್ಬರನ್ನೂ ಬಿಟ್ಟು ಮಧ್ಯದವನೊಬ್ಬನು ಮಾತ್ರ ಸಿಕ್ಕಿಕೊಂಡನು. ಒಪ್ಪಂದದಂತೆ ರೋಹಿತನು ಅಜೀಗರ್ತನಿಗೆ ನೂರು ಗೋವುಗಳನ್ನು ಕೊಟ್ಟು ಶುನಃಶೇಪನನ್ನು ತನ್ನ ತಂದೆಯ ಹತ್ತಿರ ಕರೆದುಕೊಂಡು ಬಂದು ತಾನು ಮಾಡಿದ ಏರ್ಪಾಡನ್ನು ತಿಳಿಸಿದನು. ಹರಿಶ್ಚಂದ್ರನು ವರುಣನಲ್ಲಿಗೆ ಹೋಗಿ—ನನ್ನ ಮಗನಿಗೆ ಬದಲಾಗಿ ಇವನನ್ನು ನಿನಗೆ ಕೊಡುತ್ತೇನೆ ಎಂದು ಹೇಳಿದನು. ಅದಕ್ಕೆ ವರುಣನು ಕ್ಷತ್ರಿಯನಿಗಿಂತ ಬ್ರಾಹ್ಮಣನು ಅಧಿಕನಾದುದರಿಂದ ಹಾಗೆಯೇ ಆಗಬಹುದೆಂದೊಪ್ಪಿಕೊಂಡನು. ಅನಂತರ ವರುಣನು ದೊರೆಗೆ ರಾಜಸೂಯಯಾಗದ ವಿಧಿಯನ್ನು ವಿವರಿಸಿ ಯಾಗದ ದಿನ ಪಶುಯಜ್ಞಕ್ಕೆ ಬದಲಾಗಿ ನರಯಜ್ಞಕ್ಕೆ ಅಣಿಮಾಡಿದನು.

[ನಾಲ್ಕು ಮಂದಿ ಮಹಾಋಷಿಗಳು ಋತ್ವಿಕ್ಕುಗಳಾಗುವುದು....ಉದ್ದೇಶಿಸಿದ ನರಯಜ್ಞಕಾಲವು ಸಮೀಪಿಸುವುದು....ಭೀಕರವಾದ ಮರಣದಿಂದ ತಪ್ಪಿಸುವಂತೆ ಶುನಃಶೇಪನು ದೇವತೆಗಳಿಗೆ ಮೊರೆಯಿಡುವುದು....ಅವನು ಮೊರೆಯಿಟ್ಟ ದೇವತೆಗಳು ಮತ್ತು ಉಚ್ಚರಿಸಿದ ಮಂತ್ರಗಳು.]

ಈ ನರಯಜ್ಞಕ್ಕೆ ವಿಶ್ವಾಮಿತ್ರನು ಹೋತೃವಾಗಿಯೂ ಜಮದಗ್ನಿಯು ಅಧ್ವರ್ಯುವಾಗಿಯೂ ವಸಿಷ್ಠನು ಬ್ರಹ್ಮನಾಗಿಯೂ ಅಯಾಸ್ಯನು ಉದ್ಗಾತೃವಾಗಿಯೂ ನಿಯಮಿತರಾದರು. ಯಜ್ಞಕ್ಕೆ ಪೂರ್ವಭಾವಿಯಾದ ವಿಧಿಯು ಜರುಗಿದ ಮೇಲೆ ಶುನಃಶೇಪನನ್ನು ಯೂಪಸ್ತಂಭಕ್ಕೆ ಕಟ್ಟಲು ಯಾರೂ ಒಪ್ಪಲಿಲ್ಲ. "ನನಗೆ ಇನ್ನೂ ನೂರು ಗೋವುಗಳನ್ನು ಕೊಟ್ಟರೆ ನಾನು ಕಟ್ಟುತ್ತೇನೆ" ಎಂದು ಅಜೀಗರ್ತನು ಬಂದನು. ಅವರು ಹಾಗೆಯೇ ಆಗಲೆಂದು ಅವನಿಗೆ ನೂರು ಗೋವುಗಳನ್ನು ಕೊಟ್ಟರು. ಬಳಿಕ ಮಗನನ್ನು ಅಜೀಗರ್ತನು ಸ್ತಂಭಕ್ಕೆ ಕಟ್ಟಿದನು. ಅನಂತರ ಆಪ್ರೀಸೂಕ್ತವನ್ನು ಪಠಿಸಿ ಅಗ್ನಿಯನ್ನು ಅವನ ಸುತ್ತಲೂ ತೆಗೆದುಕೊಂಡುಹೋದಮೇಲೆ ಅವನನ್ನು ಕಡಿಯಲು ಯಾರೂ ಒಪ್ಪಲಿಲ್ಲ—ನನಗೆ ಪುನಃ ನೂರು ಗೋವುಗಳನ್ನು ಕೊಟ್ಟರೆ ನಾನೇ ಕಡಿಯುವೆನು ಎಂದು ಅಜೀಗರ್ತನು ಅದಕ್ಕೂ ಮುಂದೆ ಬಂದನು. ಹಾಗೆಯೇ ನೂರು ಗೋವುಗಳನ್ನು ಸ್ವೀಕರಿಸಿ ತನ್ನ ಚಾಕುವನ್ನು ಹರಿತಮಾಡಿಕೊಂಡು ಪುತ್ರವಧೆಗೆ ಸಿದ್ಧನಾದನು. ಶುನಃಶೇಪನು ಎಚ್ಚತ್ತು ತನ್ನನ್ನು ಪಶುವಿನಂತೆ ಕಡಿಯುತ್ತಾರೆಂದರಿತು—ನಾನು ದೇವತೆಗಳಲ್ಲಿ ಮರೆಹೋಗುತ್ತೇನೆಂದು ಮನಸ್ಸುಮಾಡಿ "**ಕಸ್ಯ ನೂನಂ ಕತಮಸ್ಯ**" (ಋ. ಸಂ. ೧-೨೪-೧) ಎಂಬ ಸೂಕ್ತದಿಂದ ಪ್ರಜಾಪತಿಗೆ ಮೊರೆಯಿಟ್ಟನು. ಪ್ರಜಾಪತಿಯು ಆವಿರ್ಭೂತನಾಗಿ 'ಅಗ್ನಿಯು ನಿಮಗೆಲ್ಲರಿಗೂ ಅತ್ಯಂತ ಸಮೀಪಸ್ಥನಾದ ದೇವತೆಯಾದುದರಿಂದ ಅವನನ್ನು ಮರೆಹೊಗು" ಎಂದು ಹೇಳಿದನು. ಅನಂತರ ಶುನಃಶೇಪನು "**ಅಗ್ನೇರ್ವಯಂ ಪ್ರಥಮಸ್ಯಾಮೃತಾನಾಂ**" ಎಂಬ ಋಕ್ಕಿನಿಂದ ಅಗ್ನಿಪ್ರಾರ್ಥನೆಮಾಡಿದಾಗ

ಅಗ್ನಿಯು ಬಂದು—ಸವಿತೃವು ಸಕಲಭೂತಗಳಿಗೂ ಒಡೆಯನಾದುದರಿಂದ ಅವನನ್ನು ಮರೆಹೊಗು ಎಂದನು ಆಗ ಅವನು—"**ಅಭಿತ್ವಾ ದೇವಸವಿತಃ**" ಎಂಬ ಋಕ್ಕಿನಿಂದ ಪ್ರಾರಂಭವಾಗುವ ಮೂರು ಋಕ್ಕುಗಳಿಂದ ಪ್ರಾರ್ಥಿಸಿದನು ಆಗ ಸವಿತೃವು ಬಂದು—''ನೀನು ಪ್ರಭುವಾದ ವರುಣನಿಂದ ಬಂಧಿತನಾದುದರಿಂದ ಅವನನ್ನು ಮರೆಹೊಗು'' ಎಂದು ಹೇಳಿದನು. ಆಗ ಮೂವತ್ತೊಂದು ಋಕ್ಕುಗಳಿಂದ ವರುಣನನ್ನು ಪ್ರಾರ್ಥಿಸಿದಾಗ ವರುಣನು ಬಂದು—"ಅಗ್ನಿಯು ಸಕಲ ದೇವತೆಗಳಿಗೂ ಮುಖಪ್ರಾಯನು ಮತ್ತು ಅತ್ಯಂತ ದಯಾಶಾಲಿ—ನೀನು ಈಗ ಅವನನ್ನು ಪ್ರಾರ್ಥಿಸಿದರೆ ನಾವೆಲ್ಲ ನಿನ್ನ ಬಂಧನವನ್ನು ಬಿಡಿಸುವೆವು" ಎಂದನು. ಪುನಃ ಇಪ್ಪತ್ತೆರಡು ಋಕ್ಕುಗಳಿಂದ ಅಗ್ನಿಯನ್ನು ಪ್ರಾರ್ಥಿಸಲು ಅಗ್ನಿಯು ಬಂದು—''ವಿಶ್ವೇದೇವರನ್ನು ಪ್ರಾರ್ಥಿಸಿದರೆ ನಿನ್ನ ಬಿಡುಗಡೆಯಾಗುವುದು'' ಎಂದನು. ಆಗ ಶುನಶ್ಶೇಪನು—"**ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯಃ**" (ಋ. ಸಂ. ೧-೨೭-೧೩) ಎಂದು ಅವರನ್ನು ಬೇಡಿದನು. ಅವರು ಬಂದು—'ಇಂದ್ರನು ಎಲ್ಲರಿಗಿಂತಲೂ ಅತ್ಯಂತ ಶಕ್ತನು; ಪ್ರಬಲನು; ಸಹಿಷ್ಣುವು ದೇವತೆಗಳಿಗೆಲ್ಲಾ ಸತ್ಯಪ್ರಾಯನು—ವ್ಯವಹಾರಗಳನ್ನೆಲ್ಲಾ ಕೊನೆಗಾಣಿಸುವ ಉಪಾಯವನ್ನು ತಿಳಿದವನು. ಅವನನ್ನು ಪ್ರಾರ್ಥಿಸಿದರೆ ನಿನ್ನನ್ನು ಬಿಡುಗಡೆ ಮಾಡುವೆವು' ಎಂದರು. ಆಗ ಶುನಃಶೇಪನು '**ಯಚ್ಚಿದ್ಧಿ ಸತ್ಯ ಸೋಮಪಾ**' ಎಂಬ ಸೂಕ್ತದಿಂದಲೂ ಅದರ ಮುಂದಿನ ಸೂಕ್ತದ ಹದಿನೈದು ಋಕ್ಕುಗಳಿಂದಲೂ ಪ್ರಾರ್ಥಿಸಿದಾಗ ಇಂದ್ರನು ಬಂದು ಅವನ ಸ್ತೋತ್ರಕ್ಕೆ ಮೆಚ್ಚಿ ಅವನಿಗೆ ಒಂದು ಸುವರ್ಣನಿರ್ಮಿತವಾದ ರಥವನ್ನು ಅನುಗ್ರಹಿಸಿದನು. ಅದನ್ನು ಶುನಃಶೇಪನು "ಶಶ್ವದಿಂದ್ರ" ಎಂದು ಹೇಳಿ ಸ್ವೀಕರಿಸಿದನು. ಇಂದ್ರನು ಪುನಃ "ಅಶ್ವಿನೀದೇವತೆಗಳನ್ನು ಪ್ರಾರ್ಥಿಸು. ಅನಂತರ ನಾವು ನಿನ್ನನ್ನು ಬಿಡುಗಡೆ ಮಾಡುವೆವು" ಎಂದುಪದೇಶಿಸಿದನು. ಅಶ್ವಿನೀದೇವತೆಗಳು ಪ್ರಾರ್ಥಿತರಾಗಿ ಬಂದು "ಉಷೋದೇವಿಯನ್ನು ಪ್ರಾರ್ಥಿಸು. ನಾವು ನಿನ್ನನ್ನು ಬಿಡಿಸುವೆವು" ಎಂದರು. ಉಷೋದೇವಿಯ ಪ್ರಾರ್ಥನೆಯಾಗುತ್ತಿದ್ದಾಗ ಒಂದೊಂದಾಗಿ ಮೂರು ಋಕ್ಕುಗಳನ್ನು ಹೇಳುತ್ತಿದ್ದಾಗಲೇ ವರುಣನ ಬಂಧನದ ಪಾಶವು ಕ್ರಮಕ್ರಮವಾಗಿ ಸಡಿಲವಾಗಿ ಹರಿಶ್ಚಂದ್ರನ ಮಹೋದರವು ಗುಣವಾಗುತ್ತಾ ಬಂದಿತು. ಕೊನೆಯ ಋಕ್ಕನ್ನು ಉಚ್ಚರಿಸಿದಾಗ ಪಾಶವು ಸಂಪೂರ್ಣವಾಗಿ ತೆಗೆಯಲ್ಪಟ್ಟು ಹರಿಶ್ಚಂದ್ರನು ತನ್ನ ಆರೋಗ್ಯವನ್ನು ಹಿಂದಿನಂತೆ ಪಡೆದನು.

[ಶುನಃಶೇಪನ ವಿಮೋಚನೆ, ಅವನ ಅಂಜಃಸವರೂಪದ ಸೋಮರಸದ ನಿಷ್ಪೀಡನದ ಕ್ರಮ. ವಿಶ್ವಾಮಿತ್ರನು ಅವನನ್ನು ಮಗನನ್ನಾಗಿ ಅಂಗೀಕರಿಸುವುದು.]

ಅನಂತರ ಋತ್ವಿಕ್ಕುಗಳು ಶುನಃಶೇಪನನ್ನು ಕುರಿತು, "ಈಗ ನೀನೂ ನಮ್ಮಂತೆಯೇ ಋತ್ವಿಕ್ಕಾಗಿರುತ್ತೀಯೆ. ಈ ವಿಶೇಷ ವಿಧಿಯಲ್ಲಿ ನೀನೂ ಭಾಗವಹಿಸು" ಎಂದರು. ಅನಂತರ ಅವನು ಅಂಜಃಸವರೂಪದಲ್ಲಿ ಅತಿ ಜಾಗ್ರತೆಯಾಗಿಯೇ ಆಗುವ ಸೋಮರಸನಿಷ್ಪೀಡನಕ್ರಮವನ್ನು ತಿಳಿದನು. ಅದನ್ನು ಹಿಂಡಿದ ಮೇಲೆ "**ಯಚ್ಚಿದ್ಧಿತ್ವಂ ಗೃಹೇ ಗೃಹೇ**" ಎಂಬ ನಾಲ್ಕು ಋಕ್ಕಗಳನ್ನು ಪಠಿಸುತ್ತಾ ತೆಗೆದುಕೊಂಡು ಹೋದನು. "**ಉಚ್ಛಿಷ್ಟಂ ಚಮ್ವೋಃ**" ಎಂಬ ಋಕ್ಕನ್ನು ಉಚ್ಚರಿಸಿ ದ್ರೋಣಕಲಶದೊಳಕ್ಕೆ ತಂದನು. ಹರಿಶ್ಚಂದ್ರನ ಸ್ಪರ್ಶವಾದೊಡನೆ '**ಯತ್ರ ಗ್ರಾವಾ**' ಎಂಬ ಮಂತ್ರವನ್ನುಚ್ಚರಿಸಿ 'ಸ್ವಾಹಾ'ಕಾರದೊಡನೆ ಹವಿಸ್ಸನ್ನರ್ಪಿಸಿದನು. ಅನಂತರ ಅವನು ಅವಭೃಥಕ್ಕೆ ಬೇಕಾದ ಸಲಕರಣೆಗಳೊಡನೆ ಬಂದು '**ತ್ವಂ ನೋ ಅಗ್ನೇ ವರುಣಸ್ಯ**' ಎಂಬ ಋಕ್ಕನ್ನು ಪಠಿಸಿ ಅವಭೃಥವನ್ನು ನೆರವೇರಿಸಿದನು. ಇದಾದ ಮೇಲೆ ಹರಿಶ್ಚಂದ್ರನನ್ನು ಆಹವನೀಯಾಗ್ನಿಯ ಹತ್ತಿರ ಕರೆದು '**ಶುನಶ್ಚಿಚ್ಛೇಪಂ ನಿದಿತಂ**' ಎಂಬ ಮಂತ್ರವನ್ನು ಪಠಿಸಿದನು.

ಕೊನೆಗೆ ಶುನಃಶೇಪನು ವಿಶ್ವಾಮಿತ್ರನ ಸಮೀಪಕ್ಕೆ ಹೋದನು. ಅಜೀಗರ್ತನೂ ಸಹ ಅವನನ್ನು ಸಮೀಪಿಸಿ "ಎಲೈ ಋಷಿಯೇ, ನನ್ನ ಮಗನನ್ನು ಹಿಂದಕ್ಕೆ ಕೊಡು" ಎನ್ನಲು, ವಿಶ್ವಾಮಿತ್ರನು—"ಅದಾಗುವುದಿಲ್ಲ ; ಇವನನ್ನು ದೇವತೆಗಳು ನನಗೆ ದಾನಮಾಡಿದ್ದಾರೆ" ಎಂದನು. ಅಲ್ಲಿಂದ ಮೊದಲು ಅವನು ದೇವರಾತನೆಂಬ (ದೇವತೆಗಳಿಂದ ಕೊಡಲ್ಪಟ್ಟವನು) ವಿಶ್ವಾಮಿತ್ರನ ಮಗನಾದನು. (ಮುಂದೆ ಅವನಿಂದ ಕಾಪಿಲೇಯರೂ, ಬಭ್ರುಗಳೂ ಉತ್ಪನ್ನರಾದರು) ಬಳಿಕ ಅಜೀಗರ್ತನು ಶುನಃಶೇಪನನ್ನು ಕುರಿತು "ಎಲೈ ನೀನು ಅಜೀಗರ್ತನ ಸಂಸಾರಕ್ಕೆ ಸಂಬಂಧಪಟ್ಟ ಋಷಿಯಾಗಿದ್ದೀಯೆ. ಆದುದರಿಂದ ನಿನ್ನ ವಂಶವನ್ನು ಮರೆಯದೆ ಪುನಃ ನಮ್ಮಲ್ಲಿಗೆ ಬಾ ಎಂದು ಕರೆಯಲು ಶುನಃಶೇಪನು ತಂದೆಗೆ ಎತ್ತರವಾಗಿ "ಚಂಡಾಲನೂ ಸಹ ಪುತ್ರವಧಕ್ಕಾಗಿ ಕೈಯಲ್ಲಿ ಕತ್ತಿಯನ್ನು ಹಿಡಿಯುವುದಿಲ್ಲ. ನಿನಗೆ ನನಗಿಂತಲೂ ಮುನ್ನೂರು ಗೋವುಗಳೇ ಹೆಚ್ಚಾದವು. ಅವಕ್ಕಾಗಿ ಆಸೆಪಟ್ಟು ನಿನ್ನ ಪುತ್ರನಾದ ನನ್ನನ್ನು ಕತ್ತರಿಸಲು ಕತ್ತಿಯನ್ನು ಹಿಡಿದೆ" ಎಂದು ಮೂದಲಿಸಿದಾಗ ಅಜೀಗರ್ತನು—"ಮಗುವೇ, ನಾನು ಹಿಂದೆ ಮಾಡಿದುದು ತಪ್ಪಾಯಿತು. ಈ ಪಾಪವನ್ನು ನೀಗಿಸಿಕೊಳ್ಳುತ್ತೇನೆ. ನಿನಗೂ ನೂರು ಗೋವುಗಳನ್ನು ಕೊಡುತ್ತೇನೆ. ಮನೆಗೆ ಬಾ" ಎಂದನು. ಅದಕ್ಕೆ ಬದಲಾಗಿ ಶುನಃಶೇಪನು—"ಒಂದು ಸಲ ಈ ಪಾಪಕೃತ್ಯಕ್ಕೆ ಹೇಸದ ನೀನು ಇಂತಹ ಕೃತ್ಯವನ್ನು ಪುನಃ ಪುನಃ ಮಾಡುವುದಕ್ಕೂ ಹಿಂಜರಿಯುವುದಿಲ್ಲ. ನಿನ್ನ ಈ ಕೃತ್ಯಕ್ಕೆ ಸಮಾಧಾನವೇ ಇಲ್ಲ" ಎನ್ನಲಾಗಿ ವಿಶ್ವಾಮಿತ್ರನೂ ಸಹ—ಹೌದು, ಈ ಕೃತ್ಯಕ್ಕೆ ಪ್ರಾಯಶ್ಚಿತ್ತವೇ ಇಲ್ಲ ಎಂದನು.

ವಿಶ್ವಾಮಿತ್ರನು ಶುನಃಶೇಪನನ್ನು ಕುರಿತು 'ನಿನ್ನ ವಧಕ್ಕಾಗಿ ಕೈಯಲ್ಲಿ ಕತ್ತಿಯನ್ನು ಹಿಡಿದಿದ್ದಾಗ ಅಜೀಗರ್ತನು ಭೀಕರಸ್ವರೂಪನಾಗಿದ್ದನು. ಪುನಃ ಅವನ ಮಗನಾಗಬೇಡ. ನನ್ನ ಮನೆಗೆ ಬಂದು ನನ್ನ ಮಗನಾಗಿರು' ಎಂದನು. ಆಗ ಶುನಃಶೇಪನು—'ಅಂಗಿರಸ್ಸಿನ ವಂಶದಲ್ಲಿ ಹುಟ್ಟಿದವರು ವಿಶ್ವಾಮಿತ್ರನ ಬಂಧುವಾಗುವುದು ಹೇಗೆ?' ಎಂದು ಸಂಶಯವನ್ನು ವ್ಯಕ್ತಪಡಿಸಿದಾಗ ವಿಶ್ವಾಮಿತ್ರನು ತನ್ನ ಮಕ್ಕಳನ್ನೆಲ್ಲಾ ಕರೆದು—ಎಲೈ ಮಧುಚ್ಛಂದಾದಿಗಳೇ, ಇಂದಿನಿಂದ ನಿಮಗೆ ನನ್ನ ಆಸ್ತಿಯಲ್ಲಿ ಜ್ಯೇಷ್ಠತ್ವದ ಅಧಿಕಾರವಿರುವುದಿಲ್ಲ. ಇಂದಿನಿಂದ ಅದೆಲ್ಲವೂ ಶುನಃಶೇಪನದು. ಅವನೇ ಎಲ್ಲರಿಗೂ ಜ್ಯೇಷ್ಠನು ಎಂದು ಪ್ರಕಟಿಸಿದನು.

[ವಿಶ್ವಾಮಿತ್ರನ ಸಂತತಿ. ಶುನಃಶೇಪನ ಕಥೆಯನ್ನು ಪಠಿಸಿದವರಿಗೆ ಪ್ರತಿಫಲ.]

ವಿಶ್ವಾಮಿತ್ರಋಷಿಗೆ ನೂರುಜನ ಮಕ್ಕಳಿದ್ದರು. ಮಧುಚ್ಛಂದನಿಗೆ ಹಿರಿಯವರು ಐವತ್ತು ಜನವೂ ಮತ್ತು ಉಳಿದವರು ಕಿರಿಯವರೂ ಆಗಿದ್ದರು. ವಿಶ್ವಾಮಿತ್ರನ ಆಸ್ತಿಗೆ ಶುನಃಶೇಪನು ಹಕ್ಕುದಾರನಾಗಿರುವುದು ಹಿರಿಯ ಐವತ್ತು ಜನಕ್ಕೆ ಒಪ್ಪಿಗೆಯಾಗಲಿಲ್ಲ ಅವರು ವಿರೋಧಿಸಿದಾಗ ವಿಶ್ವಾಮಿತ್ರನು ಅವರಿಗೆ ನೀಚಸಂತತಿಯುಂಟಾಗಲೆಂದು ಶಪಿಸಿದನು. ಆ ಶಾಪಕ್ಕೆ ಪ್ರತಿಫಲವಾಗಿ ಶಬರ, ಪುಲಿಂದರಾದಿಯಾಗಿ ನಾನಾ ನೀಚ ಕುಲಗಳು ಹುಟ್ಟಿದವು. ಮಧುಚ್ಛಂದಾದಿ ಕಿರಿಯ ಐವತ್ತು ಜನವೂ ವಿಶ್ವಾಮಿತ್ರನ ತೀರ್ಮಾನಕ್ಕೆ ತಲೆಬಾಗಿ 'ಎಲೈ ಶುನಃಶೇಪನೇ, ನಮ್ಮ ತಂದೆಯ ಅಪ್ಪಣೆಗೆ ನಾವು ಯಾವಾಗಲೂ ವಿಧೇಯರಾಗಿ, ಅವನ ಇಷ್ಟದಂತೆ ನಿನಗೆ ಅಗ್ರಮರ್ಯಾದೆಯನ್ನು ಸಲ್ಲಿಸುತ್ತೇವೆ' ಎಂದು ಅವನನ್ನು ಆದರಿಸಿದರು. ವಿಶ್ವಾಮಿತ್ರನು ಅವರ ವಿಧೇಯತೆಗೆ ಸಂತೋಷಪಟ್ಟು, 'ಎಲೈ ಮಕ್ಕಳೇ, ನೀವು ನನ್ನ ಇಷ್ಟಕ್ಕೆ ಸಮ್ಮತಿಸಿ ನನ್ನನ್ನು ಗೌರವಿಸಿ ನನ್ನ ಪಿತೃತ್ವವನ್ನು ಸಾರ್ಥಕಪಡಿಸುದುದಕ್ಕಾಗಿ ನಿಮಗೆ ಪ್ರಭೂತವಾದ ಗೋವುಗಳೂ, ಸಂತತಿಗಳೂ ಪ್ರತಿಫಲಗಳಾಗಲಿ. "ಈ ದೇವರಾತನನ್ನು ನಿಮ್ಮ ನಾಯಕನನ್ನಾಗಿಟ್ಟುಕೊಂಡು ಜಯಶಾಲಿಗಳಾಗಿ ಜಹ್ನುಸಂತತಿಯ ಮೇಲ್ಮೆಯನ್ನೂ. ಗಾಥಿವಂಶದ ದಿವ್ಯಜ್ಞಾನವನ್ನೂ ಹೊಂದಿ. ಈ ದೇವರಾತನು

ಋಷಿಯೆಂದು ಪ್ರಖ್ಯಾತನಾಗಿದ್ದಾನೆ. ಈ ಋಷಿಯ ನಾಯಕತ್ವದಲ್ಲಿ ನಡೆಯುವ ನೀವೂ ನಿಮ್ಮ ಮಕ್ಕಳೂ ಸಕಲ ಸಂಪತ್ತನ್ನೂ ಹೊಂದಿರಿ ' ಎಂಬುದಾಗಿ ಆಶೀರ್ವಾದಮಾಡಿದನು.

ಈ ಶುನಃಶೇಪನ ಕಥೆಯು ನೂರಕ್ಕಿಂತಲೂ ಅಧಿಕವಾದ ಋಕ್ಕುಗಳಿಂದ ವರ್ಣಿತವಾಗಿದೆ. ರಾಜನಿಗೆ ಪವಿತ್ರವಾದ ನೀರನ್ನು ಪ್ರೋಕ್ಷಿಸಿದನಂತರ ಸ್ವರ್ಣಕಸೂತಿಯಿಂದ ಅಲಂಕೃತವಾದ ರತ್ನಗಂಬಳಿಯ ಮೇಲೆ ಕುಳಿತು ಹೋತೃವು ಇದನ್ನು ಪಠಿಸಿ ಹೇಳುತ್ತಾನೆ. "ಓಂ ತಥಾ " ಎಂದು ಪ್ರತ್ಯಂಗೀಕಾರಮಾಡುವ ಅಧ್ವರ್ಯುವೂ ಸಹ ಅದೇ ರೀತಿ ಕುಳಿತು ರಾಜನ ಪ್ರಭಾವವನ್ನು ಹೆಚ್ಚುಮಾಡುತ್ತಾನೆ. ಅಪೌರುಷೇಯಗಳಾದ ಋಕ್ಕುಗಳಿಗೆ ಸಂಬಂಧಿಸಿದಂತೆ 'ಓಂ' ಎಂಬ ದಿವ್ಯವಾಣಿಯಿಂದಲೂ 'ತಥಾ' ಎಂಬ ಮಾನುಷವಾದ ಅಂಗೀಕಾರದಿಂದಲೂ ಸಹ ಅಧ್ವರ್ಯುವು ರಾಜನನ್ನು ಪಾಪರಹಿತನನ್ನಾಗಿ ಮಾಡುತ್ತಾನೆ. ಆದುದರಿಂದ ಜಯಶಾಲಿಯಾಗಬೇಕೆಂದು ಅಪೇಕ್ಷಿಸುವ ಪ್ರತಿಯೊಬ್ಬ ರಾಜನೂ ಸಹ ತನ್ನ ಜಯಕ್ಕೂ ಅದರ ಅನುಷಂಗವಾಗಿ ಉಂಟಾಗತಕ್ಕ ಪಾಪಕೃತ್ಯಗಳ ಶುದ್ಧಿಗೂ ಸಹ ಈ ಶುನಃಶೇಪಾಖ್ಯಾನವನ್ನು ಶ್ರವಣಮಾಡಬೇಕು. ಈ ಕಥೆಯನ್ನು ಪಠಿಸತಕ್ಕವರಿಗೆ ಸಹಸ್ರ ಗೋವುಗಳನ್ನೂ—ಅವಶ್ಯವಾದ ಅಂಗೀಕಾರವಚನವನ್ನು ಕೊಟ್ಟು, ಜೊತೆಗೆ ಪ್ರೋತ್ಸಾಹಿಸತಕ್ಕ ಅಧ್ವರ್ಯುವಿಗೆ ನೂರು ಗೋವುಗಳನ್ನೂ ಕೊಡಬೇಕು. ಹೋತೃವಿಗೆ ಉತ್ತಮವಾದ ಕುದುರೆಗಳನ್ನು ಕಟ್ಟಿದ ಬೆಳ್ಳಿಯ ರಥವನ್ನು ಕೊಡಬೇಕು. ಪುತ್ರ ಸಂತಾನವಿಲ್ಲದವರು ಈ ಉಪಾಖ್ಯಾನವನ್ನು ಪಠಿಸಿದರೂ ಶ್ರವಣಮಾಡಿದರೂ ಅವರು ನಿಶ್ಚಯವಾಗಿಯೂ ಪುತ್ರರನ್ನು ಪಡೆಯುತ್ತಾರೆ.

---

# ಅಥ ತ್ರಯಸ್ತ್ರಿಂಶಾಧ್ಯಾಯೇ ಪ್ರಥಮಃ ಖಂಡಃ

## ಮೂವತ್ತಮೂರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

[ರಾಜನಾದ ಹರಿಶ್ಚಂದ್ರನ ಪುತ್ರೇಷ್ಟಿ—ಪುತ್ರಸಂತಾನ ಪ್ರಶಂಸೆ]

---

ಆಹಿತಾಗ್ನೇರ್ಮೃತಾವಗ್ನಿಹೋತ್ರಾಂಗೇ ವಿಕಲೇ ತಥಾ ।
ಪ್ರಾಯಶ್ಚಿತ್ತಮಪತ್ನೀಕಹೋಮ ಇತ್ಯಾದಿ ವರ್ಣಿತಮ್ ॥ ೧ ॥
ಉಕ್ತಂ ದ್ವಾತ್ರಿಂಶದಧ್ಯಾಯೈಃ ಕರ್ಮವರ್ಣತ್ರಯಾನ್ವಿತಮ್ ।
ಅಥ ತ್ವಷ್ಟಭಿರಧ್ಯಾಯೈರ್ವರ್ಣ್ಯತೇ ರಾಜಕರ್ತೃಕಮ್ ॥ ೨ ॥
ತತ್ರ ಕ್ರತೌ ರಾಜಸೂಯೇ ಬಹ್ವಿಷ್ಟಿಪಶುಸೋಮಕೇ ।
ಮಧ್ಯೇಽಭಿಷೇಚನೀಯೇಹ್ನಿ ಶೌನಃಶೇಪಂ ಶ್ರುತಂ ಶ್ರುತೌ ॥ ೩ ॥
ತ್ರಯಸ್ತ್ರಿಂಶೋಽಯಮಧ್ಯಾಯಃ ಶೌನಃಶೇಪೇತಿನಾಮವಾನ್ ।
ಹರಿಶ್ಚಂದ್ರಕಥಾ ತತ್ರ ಕಥಿತಾ ಬಹುಪುತ್ರದಾ ॥ ೪ ॥

ಆಹಿತಾಗ್ನಿಯಾದವನು ಮಾಡುವ ಅಗ್ನಿಹೋತ್ರಕ್ಕೆ ಸಂಭವಿಸುವ ವಿಘ್ನಗಳು ಎಂದರೆ, ಯಜ್ಞಕರ್ತನು ಮೃತನಾಗುವುದು, ಇತರ ವಿಘ್ನಗಳು ಮುಂತಾದವುಗಳಿಗೂ ಅಪತ್ನೀಕನಾದವನು ಹೇಗೆ ಹೋಮಮಾಡಬೇಕು ಇತ್ಯಾದಿ ವಿಷಯಗಳನ್ನೆಲ್ಲ

ವಿವರಿಸಿ ಆಯಾ ಸಂದರ್ಭಗಳಲ್ಲಿ ಅನುಸರಿಸಬೇಕಾದ ಪ್ರಾಯಶ್ಚಿತ್ತವಿಧಾನಗಳನ್ನೂ ಹಿಂದಿನ ೩೧ ಮತ್ತು ೩೨ನೇ ಅಧ್ಯಾಯಗಳಲ್ಲಿ ವಿವರಿಸಿದ್ದಾಯಿತು. ಮತ್ತು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ತ್ರೈವರ್ಣಿಕರು ಯಜ್ಞಾದಿಗಳನ್ನು ಮಾಡುವಾಗ ಅನುಸರಿಸಬೇಕಾದ ಕ್ರಮವನ್ನೂ ಹೇಳಲಾಯಿತು ಈಗ ಮುಂದಿನ ಎಂಟು ಎಂದರೆ ೩೩-೪೦ ನೇ ಅಧ್ಯಾಯಗಳಲ್ಲಿ ರಾಜರು (ಅಥವಾ ಕ್ಷತ್ರಿಯರು) ಮಾಡಬೇಕಾದ ಯಜ್ಞದ ವಿವರಗಳನ್ನು ತಿಳಿಸಲಾಗುವುದು. ರಾಜರು ಮಾಡಬೇಕಾದ ಯಜ್ಞಗಳಲ್ಲಿ ಅಗ್ನ್ಯಾಧಾನ, ಪಶುಬಂಧ, ಸೋಮಯಾಗ ಎಂಬಿವು ಮುಖ್ಯವಾದುವು. ಈ ಸಂಬಂಧದಲ್ಲಿ ರಾಜರ ಪಟ್ಟಾಭಿಷೇಕದ ಶುನಃಶೇಪನ ಕಥೆಯೂ ಸಹ ವರ್ಣಿಸಲ್ಪಡುವುದು. ಈಗ ೩೩ನೇ ಅಧ್ಯಾಯದಲ್ಲಿ ಶೌನಶ್ಶೇಪೋಪಾಖ್ಯಾನವೆಂಬ ಶುನಶ್ಶೇಪನ ಅಥವಾ ಹರಿಶ್ಚಂದ್ರನೆಂಬ ರಾಜನ ಕಥೆಯು ವಿವರಿಸಲ್ಪಡುವುದು. ಈ ಉಪಾಖ್ಯಾನಶ್ರವಣದಿಂದ ಪುರುಷನು ಅನೇಕ ಪುತ್ರರುಗಳನ್ನು ಪಡೆದು ಸುಖಿಸುವನು.

ಹರಿಶ್ಚಂದ್ರೋ ಹ ವೈಧಸ ಐಕ್ಷ್ವಾಕೋ ರಾಜಾಽಪುತ್ರ ಆಸ ತಸ್ಯ ಹ ಶತಂ ಜಾಯಾ ಬಭೂವುಸ್ತಾಸು ಪುತ್ರಂ ನ ಲೇಭೇ ತಸ್ಯ ಹ ಪರ್ವತ-ನಾರದೌ ಗೃಹ ಊಷತುಃ ಸ ಹ ನಾರದಂ ಪಪ್ರಚ್ಛ॥

**ತದೇತದುಪಾಖ್ಯಾನಂ ದರ್ಶಯತಿ—ಹರಿಶ್ಚಂದ್ರೋ ನಾಮ ರಾಜರ್ಷಿಃ 'ಪ್ರಸ್ಕಣ್ವಹರಿಶ್ಚಂದ್ರಾವೃಷೀ' ಇತಿ ಪಾಣಿನಿನಾ ಸೂತ್ರಿತತ್ವಾತ್ । ಸ ಚ ವೇಧಸೋ ನೃಪತೇಃ ಪುತ್ರ ಇಕ್ಷ್ವಾಕುವಂಶೋದ್ಭವೋ ರಾಜಾ ಪುತ್ರಹೀನ ಆಸ। ಸ ಚ ಶತಸಂಖ್ಯಾನಾಂ ಜಾಯಾನಾಂ ಮಧ್ಯೇ ಕಸ್ಯಾಂಚಿದಪಿ ಜಾಯಾಯಾಂ ಪುತ್ರಂ ನ ಲೇಭೇ। ತಸ್ಯ ರಾಜ್ಞೋ ಗೃಹೇ ಪರ್ವತನಾರದನಾಮಾನೌ ಯಾವೃಷೀ ತೌ ನಿವಾಸಂ ಚಕ್ರತುಃ । ತಯೋರ್ಮಧ್ಯೇ ನಾರದಮೃಷಿಮೇತಯಾ ಗಾಥಯಾ ರಾಜಾ ಪಪ್ರಚ್ಛ ।**

ಪೂರ್ವದಲ್ಲಿ ಇಕ್ಷ್ವಾಕುವಂಶದಲ್ಲಿ ವೇಧಸಃ ಎಂಬ ರಾಜನಿಗೆ ಮಗನಾದ ಹರಿಶ್ಚಂದ್ರನೆಂಬ ರಾಜರ್ಷಿ ಇದ್ದನು. ಅವನಿಗೆ ಮಕ್ಕಳಿರಲಿಲ್ಲ. ಆ ರಾಜನಿಗೆ ನೂರುಮಂದಿ ಪತ್ನಿಯರಿದ್ದರೂ ಅವರಲ್ಲಿ ಯಾವ ಪತ್ನಿಯಿಂದಲೂ ಅವನಿಗೆ ಪುತ್ರನಾಗಲಿಲ್ಲ. ಆ ರಾಜನ ಅರಮನೆಯಲ್ಲಿ ಪರ್ವತ, ನಾರದ ಎಂಬ ಹೆಸರಿನ ಇಬ್ಬರು ಋಷಿಗಳು ಕೆಲವು ಕಾಲದಿಂದಲೂ ವಾಸವಾಗಿದ್ದರು. ಒಂದು ದಿವಸ ಆ ಹರಿಶ್ಚಂದ್ರ ರಾಜನು ತನ್ನ ಗೃಹದಲ್ಲಿದ್ದ ನಾರದನನ್ನು ಕುರಿತು ಇಂತು ಪ್ರಶ್ನೆ ಮಾಡಿದನು.

ಯಂ ನ್ವಿಮಂ ಪುತ್ರಮಿಚ್ಛಂತಿ ಯೇ ವಿಜಾನಂತಿ ಯೇ ಚ ನ। ಕಿಂಸ್ವಿ-ತ್ಪುತ್ರೇ ವಿಂದತೇ ತನ್ಮ ಆಚಕ್ಷ್ವ ನಾರದೇತಿ ॥

**ತಾಂ ಗಾಥಾಂ ದರ್ಶಯತಿ—ಯೇ ದೇವಮನುಷ್ಯಾದಯೋ ವಿಜಾನಂತಿ ವಿವೇಕಜ್ಞಾನ-ಯುಕ್ತಾಃ । ಯೇ ಚ ಪಶ್ವಾದಯೋ ನ ವಿಜಾನಂತಿ ವಿವೇಕಜ್ಞಾನರಹಿತಾಃ । ತೇ ಸರ್ವೇಽಪಿ ನು ಕ್ಷಿಪ್ರಂ ಯಾಮಿಮಂ ಪುತ್ರಮಿಚ್ಛಂತಿ ತೇನ ಪುತ್ರೇಣ ಕಿಂಸ್ವಿದ್ವಿಂದತೇ ಕಿಂನಾಮ ಫಲಂ ಪಿತಾ ಲಭತೇ ಹೇ ನಾರದ ಮೇ ಮಹ್ಯಂ ತತ್‌ಫಲಮಾಚಕ್ಷ್ವೇತಿ ರಾಜ್ಞಃ ಪ್ರಶ್ನಃ ॥**

ದೇವಮನುಷ್ಯಾದಿಗಳಿಗೆ ವಿವೇಕಜ್ಞಾನವಿರುವುದು ಎಂದರೆ ಹೇಗೆ ಮಾಡಬೇಕು, ಮಾಡಬಾರದು ಮಾಡಿದರೆ ಏನಾಗುವುದು ಎಂದು ಯಾವ ಕೆಲಸವನ್ನು ಮಾಡಬೇಕಾದರೂ ಸಾಧಕಬಾಧಕಗಳನ್ನು ಯೋಚಿಸಿ ಎಂದರೆ ಮನಸ್ಸಿನಲ್ಲಿ ವಿಮರ್ಶೆಮಾಡಿ ಕೆಲಸಮಾಡುವ ಸಾಮರ್ಥ್ಯವಿರುವುದು. ಆದರೆ ಪಶು ಮೊದಲಾದ ಪ್ರಾಣಿಗಳಿಗೆ ಈ ವಿಧವಾದ ವಿವೇಕ ಜ್ಞಾನವು ಇರುವುದಿಲ್ಲ. ಆದರೆ ಮನುಷ್ಯರೂ, ಪಶುಪಕ್ಷ್ಯಾದಿಗಳೂ ತಮಗೆ ಸಂತಾನವಾಗಬೇಕೆಂದು ಬಯಸುವರು. ತಮಗೆ ಮಕ್ಕಳುಮರಿಗಳು ಆಗಬೇಕೆಂದು ಬಯಸುವ ಮನುಷ್ಯಾದಿಗಳೂ, ಪಶುಗಳೂ ಏತಕ್ಕಾಗಿ ತಮಗೆ ಸಂತಾನವಾಗ ಬೇಕೆಂದು ಅಪೇಕ್ಷಿಸುತ್ತೇವೆ. ತಂದೆಯಾದವನು ತನಗೆ ಜನಿಸುವ ಪುತ್ರನಿಂದ ಯಾವ ವಿಧವಾದ ಸುಖವನ್ನು ಪಡೆಯುತ್ತಾನೆ ಈ ವಿಷಯವನ್ನೆಲ್ಲಾ, ಎಲೈ ನಾರದನೇ ನನಗೆ ವಿಸ್ತಾರವಾಗಿ ತಿಳಿಸು ಎಂದು ರಾಜನು ಪ್ರಶ್ನೆಮಾಡಿದನು.

**ಸ ಏಕಯಾ ಪೃಷ್ಟೋ ದಶಭಿಃ ಪ್ರತ್ಯುವಾಚ ॥**

**ತಸ್ಯೋತ್ತರಮವತಾರಯತಿ—ಸ ನಾರದ ಏಕಯಾ ಗಾಥಯಾ ಪೃಷ್ಟಃ ಸನ್ ದಶಭಿರ್ಗಾ-ಥಾಭಿಃ ಪ್ರತ್ಯುತ್ತರಮುಕ್ತವಾನ್ ॥**

ರಾಜನ ಈ ಒಂದು ಪ್ರಶ್ನೆಗೆ ನಾರದ ಮಹರ್ಷಿಯು ಹತ್ತು ವಿಧವಾದ ಪ್ರತ್ಯುತ್ತರವನ್ನು ಹೇಳುವನು.

**ಋಣಮಸ್ಮಿನ್ಸಂನಯತ್ಯಮೃತತ್ವಂ ಚ ಗಚ್ಛತಿ । ಪಿತಾ ಪುತ್ರಸ್ಯ ಜಾತಸ್ಯ ಪಶ್ಯೇಜ್ಜೀವತೋ ಮುಖಂ ॥**

**ತತ್ರ ಪ್ರಥಮಾಂ ಗಾಥಾಮಾಹ—ಉತ್ಪನ್ನಸ್ಯ ಸುಖೇನ ಜೀವತಃ ಪುತ್ರಸ್ಯ ಮುಖಂ ಪಿತಾ ಯದಿ ಪಶ್ಯೇತ್ತದಾನೀಮಸ್ಮಿನ್ ಪುತ್ರೇ ಸ್ವಕೀಯಮೃಣಂ ಲೌಕಿಕಂ ವೈದಿಕಂ ಚ ಸಂನಯತಿ ॥ ಸಮ್ಯಗ ವಸ್ಥಾಪಯತಿ । ಲೌಕಿಕಸ್ಯಾವಸ್ಥಾಪನಾತ್ ಪುತ್ರಪೌತ್ರಾದಿಭಿರ್ಋಣಂ ಪ್ರತ್ಯರ್ಪಣೀಯಮಿತಿ ಸ್ಮೃತಿ-ಕಾರಾ ಆಹುಃ । ವೈದಿಕಂ ತು ತ್ರಿಭಿರ್ಋಣವಾ ಜಾಯತ ಇತ್ಯಾದಿಶ್ರುತ್ಯುಕ್ತಂ ಪೂರ್ವಮೇವೋ-ದಾಹೃತಮ್ । ತಸ್ಯ ಚ ಪುತ್ರಾವಸ್ಥಾಪನಂ ಸಂಪತ್ತಿನಾಮಕೇನ ಕರ್ಮಣಾ ಸಂಪದ್ಯತೇ । ತಚ್ಚ ಕರ್ಮ ವಾಜಸನೇಯಿಭಿರಾಮ್ನಾತಮ್—ಅಥಾತಃ ಸಂಪತ್ತಿರ್ಯದಾ ಪ್ರೈಷ್ಯಸ್ಮನ್ಯತೇಽಥ ಪುತ್ರಮಾಹ ತ್ವಂ ಬ್ರಹ್ಮ ತ್ವಂ ಯಜ್ಞಸ್ತ್ವಂ ಲೋಕ ಇತಿ । ಸ ಪುತ್ರಃ ಪ್ರತ್ಯಾಹಾಹಂ ಯಜ್ಞೋಽಹಂ ಲೋಕ ಇತಿ । ಬ್ರಹ್ಮ ಮಯಾ ಕರ್ತವ್ಯಂ ವೇದಾಧ್ಯಯನಂ ಮಯಾಽನುಷ್ಠೇಯಾ ಯಜ್ಞಾಶ್ಚ ಮಯಾ ಸಂಪಾದ್ಯಾ ಉತ್ತಮಾ ಲೋಕಾಶ್ಚೇತ್ಯೇತಸ್ಸರ್ವಂ ಪುತ್ರೇಣ ತ್ವಯೈವ ಸಂಪಾದನೀಯಮಿತಿ ಪಿತೃವಾಕ್ಯಸ್ಯಾರ್ಥಃ। ಸರ್ವಮಹಂ ಸಂಪಾದಯಿಷ್ಯಾಮೀತಿ ಪುತ್ರವಾಕ್ಯಸ್ಯಾರ್ಥಃ। ಅತ್ಯಾಪ್ಯಾರಣ್ಯಕಕಾಂಡೇ ಸಂಕ್ಷಿಪ್ಯ ಸಂದರ್ಶ ಯಿಷ್ಯತೇ—'ಸೋಽಸ್ಯಾಯಮಾತ್ಮಾ ಪುಣ್ಯೇಭ್ಯಃ ಕರ್ಮಭ್ಯಃ ಪ್ರತಿಧೀಯತೇ' ಇತಿ ಏವಮೃಣಂ ಪುತ್ರೇ ಸಮರ್ಪಯತಿ ತಥೈವಾಮೃತತ್ವಂ ಮರಣರಹಿತಂ ಮುಕ್ತಿಪದಂ ಚ ಗಚ್ಛತಿ । ಪುತ್ರಾರ್ಪಿತ-ಲೌಕಿಕವೈದಿಕಭಾರಸ್ಯಾವಿಘ್ನೇನ ತತ್ವಜ್ಞಾನಸಂಪಾದನಾತ್ ॥**

ಆಗ ತಾನೇ ಹುಟ್ಟಿದ ಪುತ್ರನ ಮುಖವನ್ನು ತಂದೆಯು ನೋಡಿದೊಡನೆಯೇ, ಈ ಪುತ್ರನಿಂದ ಲೌಕಿಕ ಮತ್ತು ವೈದಿಕಸಂಬಂಧವಾದ ಋಣವೆಲ್ಲವೂ ಪರಿಹಾರವಾಗುವುದೆಂದು ಸಂತೋಷಪಡುವನು. ಹಿಂದೆ ಹೇಳಿದಂತೆ—

**ಜಾಯಮಾನೋ ವೈ ಬ್ರಾಹ್ಮಣಸ್ತ್ರಿಭಿರ್ಋಣ ವಾ ಜಾಯತೇ ಬ್ರಹ್ಮಚರ್ಯೇಣ-ರ್ಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯ ಏಷ ವಾ ಅನೃಣೋ ಯಃ ಪುತ್ರೀ ಯಜ್ವಾ ಬ್ರಹ್ಮಚಾರಿವಾಸೀ ॥**

ದ್ವಿಜನಾದವನು ಹುಟ್ಟುವಾಗಲೇ ಮೂರು ವಿಧವಾದ ಋಣಗಳಿಂದ (ಕರ್ತವ್ಯ) ಸಹಿತನಾಗಿಯೇ ಹುಟ್ಟುವನು. ಅವು ಯಾವವೆಂದರೆ—ಋಷಿಋಣ, ದೇವಋಣ, ಪಿತೃಋಣ ಎಂದು ಮೂರು ಋಣ ಅಥವಾ ಕರ್ತವ್ಯಕರ್ಮಗಳು. ಇವುಗಳನ್ನು ಪ್ರತಿಯೊಬ್ಬ ಬ್ರಾಹ್ಮಣನೂ ಮಾಡಲೇಬೇಕು. ಉಪನಯನವಾದ ಕೂಡಲೆ ಗುರುವಿನ ಬಳಿ ವಾಸಮಾಡುತ್ತಾ ಅವನ ಶುಶ್ರೂಷೆಯನ್ನು ಮಾಡುತ್ತಾ ವೇದಾಧ್ಯಯನವನ್ನು ಮಾಡಿ ಮುಗಿಸುವುದು. ಇದರಿಂದ ಋಷಿಋಣವು ತೀರಿದಂತಾಗುವುದು ಅನಂತರ ವಿವಾಹಿತನಾದ ಮೇಲೆ ಪತ್ನೀಸಹಿತನಾಗಿ ಯಜ್ಞಾದಿಗಳನ್ನು ಮಾಡುವುದರ ಮೂಲಕ ದೇವತೆಗಳನ್ನು ತೃಪ್ತಿಪಡಿಸಬೇಕು. ಇದರಿಂದ ದೇವ ಋಣವನ್ನು ತೀರಿಸಿದಂತಾಗುವುದು. ವಿಧ್ಯುಕ್ತವಾಗಿ ವಿವಾಹಿತಳಾದ ತನ್ನ ಪತ್ನಿಯಲ್ಲಿ ಪುತ್ರಾದಿ ಸಂತಾನವನ್ನು ಪಡೆಯುವುದರಿಂದ ಎಂದರೆ ಪ್ರಜೋತ್ಪಾದನೆಯನ್ನು ಮಾಡುವುದರಿಂದ ಪಿತೃ ಋಣವನ್ನು ತೀರಿಸಿದಂತಾಗುವುದು. ಈ ಮೂರು ವಿಧವಾದ ಋಣಪರಿಹಾರಕ್ಕಾಗಿ ಪುತ್ರೋತ್ಪಾದನೆಯು ಅತ್ಯವಶ್ಯಕವೆಂದಾಯಿತು. ಮತ್ತು ತಂದೆಯಾದವನು ಮರಣಾನಂತರ ಅಮೃತತ್ವವನ್ನು ಎಂದರೆ ಮೋಕ್ಷಾದಿ ಸದ್ಗತಿಯನ್ನು ಪಡೆಯಲು ಸಾಧನವಾಗಿರುವುದು ಎಂದರ್ಥವು. ಪಿತೃವು ಪುತ್ರನ ಮುಖಾವಲೋಕದಿಂದ ತನ್ನ ಋಣತ್ರಯಗಳನ್ನು ಇನ್ನು ಮುಂದಕ್ಕೆ ಪುತ್ರನಿಗೆ ವಹಿಸಿರುವೆನೆಂದು ಆಶಿಸುತ್ತಾನೆ. ತಂದೆಗೆ ಪುತ್ರನು ಜನಿಸಿದರೆ ಆ ಪುತ್ರನು ಗೃಹಕೃತ್ಯವನ್ನೂ ತಂದೆಯ ಲೌಕಿಕ ವ್ಯವಹಾರವನ್ನೂ ವಹಿಸಿಕೊಂಡು ನಿರ್ವಹಿಸುವನೆಂದು ಪಿತೃವು ಆಶಿಸುವುದು. ಯುಕ್ತವೇ ಆಗಿರುವುದು. ಲೋಕವ್ಯವಹಾರವೂ ಈ ರೀತಿಯಾಗಿಯೇ ಇರುವುದು. ದೇವ ಋಣದ ವಿಷಯವು ಮೇಲೆಯೇ ತಿಳಿಸಲಾಗಿರುವುದು. ವಾಜಸನೇಯಿಗಳು (ಯಜುಃಶಾಖೆಯವರು) ಈರೀತಿ ಹೇಳುವರು **ಅಥಾತಃ ಸಂಪತ್ತಿರ್ಯದಾ ಪ್ರೈಷ್ಯನ್ಮನ್ಯತೇಽಥ ಪುತ್ರಮಾಹ ತ್ವಂ ಬ್ರಹ್ಮ ತ್ವಂ ಯಜ್ಞಸ್ತ್ವಂ ಲೋಕ ಇತಿ ! ಸ ಪುತ್ರಃ ಪ್ರತ್ಯಾಹಾಹಂ ಬ್ರಹ್ಮಾಹಂ ಯಜ್ಞೋಽಹಂ ಲೋಕ ಇತಿ** (ಶತ. ಬ್ರಾ.—೧೪-೪-೩-೨೫) ಇದರ ಅರ್ಥವು. ಎಲೈ ಪುತ್ರನೇ, ಇನ್ನು ಮುಂದೆ ನಾನು ಮಾಡಬೇಕಾದ ವೇದಾಧ್ಯಯನವೂ ಯಜ್ಞಾನುಷ್ಠಾನವೂ ನನ್ನಿಂದ ಸಾಧಿಸಲ್ಪಡಬೇಕಾದ ಉತ್ತಮ ಲೋಕಾದಿಗಳೂ ಸಹ ನಿನ್ನಿಂದಲೇ ನಡೆಸಲ್ಪಡಬೇಕು ಎಂದು ಪಿತೃವು ಹೇಳುವ ವಾಕ್ಯದ ಅರ್ಥವು. ಎಲೈ ತಂದೆಯೇ ನೀನು ಈಗ ಹೇಳಿದಂತೆಯೇ ಮಾಡುವೆನು ಎಂದು ಪುತ್ರನು ಹೇಳುವ ಪ್ರತ್ಯುತ್ತರದ ಅರ್ಥವು. ಆರಣ್ಯಕದಲ್ಲಿಯೂ ಹೀಗೆ ಹೇಳಿರುವುದು **ಸೋಽಸ್ಯಾಯ ಮಾತ್ಮಾ ಪುಣ್ಯೇಭ್ಯಃ ಕರ್ಮಭ್ಯಃ ಪ್ರತಿಧೀಯತೇ**(ಐ.ಆ.೨-೫-೪-೧೦) ಎಂದರೆ ನನ್ನ ಸ್ವರೂಪವಾಗಿರುವ ಈ ಪುತ್ರನು ನಾನು ಮಾಡಬೇಕಾದ ಪುಣ್ಯಕರ್ಮಗಳನ್ನು ನನ್ನ ಪ್ರತಿನಿಧಿಯಾಗಿ ಮಾಡುವನು ಎಂದರ್ಥವು. ಆದ್ದರಿಂದ ಪಿತೃವು ತನ್ನ ಋಣವನ್ನು ತನ್ನ ಪುತ್ರನಿಗೆ ವಹಿಸಿ ಋಣತ್ರಯಗಳ ಆತಂಕವಿಲ್ಲದೆ ನಿಶ್ಚಿಂತೆಯಾಗಿ ಅಧ್ಯಾತ್ಮಜ್ಞಾನ ಸಾಧನೆಯಲ್ಲಿ ಆಸಕ್ತನಾಗಿ ಮುಕ್ತಿಪದವಿಯನ್ನು ಪಡೆಯುವನು.

**ಯಾವಂತಃ ಪೃಥಿವ್ಯಾಂ ಭೋಗಾ ಯಾವಂತೋ ಜಾತವೇದಸಿ ।**
**ಯಾವಂತೋ ಅಪ್ಸು ಪ್ರಾಣಿನಾಂ ಭೂಯಾನ್ಪುತ್ರೇ ಪಿತುಸ್ತತಃ ॥**

ದ್ವಿತೀಯಾಂ ಗಾಥಾಮಾಹ—ಪೃಥಿವ್ಯಾಂ ಭೋಗಾಃ ಸಸ್ಯನಿವಾಸಾದಯಃ । ಜಾತವೇದಸ್ಯಾಗ್ನೌ ಭೋಗಾ ದಹನಪಚನಾದಯಃ । ಅಪ್ಸು ಭೋಗಾಃ ಸ್ನಾನಪಾನಾದಯಃ। ಪ್ರಾಣಿನಾಮೇತೇ

ಸರ್ವೇ ಭೋಗಾ ಯಾವಂತಃ ಸಂತಿ ತತಸ್ತಾವದ್ಭ್ಯಃ ಸರ್ವೇಭ್ಯೋ ಭೋಗೇಭ್ಯೋ ಭೂಯಾನಭ್ಯಧಿಕಃ ಪಿತುಃ ಪುತ್ರೇ ಭೋಗೋ ವಿದ್ಯತೇ। ಅತ್ಯಂತಸುಖಹೇತುತ್ವಾತ್। ತಥಾ ಚಾಹುಃ 'ಪುತ್ರೋಽತ್ಪತ್ತಿವಿಪತ್ತಿಭ್ಯಾಂ ನಾಪರಂ ಸುಖದುಃಖಯೋಃ' ॥ ಇತಿ ॥

ಈ ಭೂಮಿಯಲ್ಲಿ ಸುಖ ಸಂತೋಷಗಳು ಅನೇಕ ವಿಧವಾಗಿರುವುವು. ಭೂಮಿಯಲ್ಲಿ ಬೆಳೆಯುವ ಸಸ್ಯಾದಿಗಳೂ ಫಲಗಳೂ ಇತರ ವಿಧವಾದ ಆಹಾರಗಳೂ, ನಿವಾಸಸ್ಥಾನವಾದ ಗೃಹಾದಿಗಳೂ ಪುರುಷನಿಗೆ ಆವಶ್ಯಕವಾದ ಸುಖಸಂತೋಷಗಳನ್ನುಂಟುಮಾಡ್ತುವು. ಅಗ್ನಿಯಿಂದ ದಹನ ಪಚನಾದಿ ಕ್ರಿಯೆಗಳಿಗೆ ಅನುಕೂಲವಾಗಿ ಪಕ್ವವಾದ ಆಹಾರಾದಿಗಳು ಭುಜಿಸುವುದರಿಂದ ಉಂಟಾಗುವ ಸೌಖ್ಯವನ್ನು ನೀಡುವುವು. ನೀರಿನಿಂದ ಸ್ನಾನಪಾನಾದಿಗಳ ಅನುಕೂಲವುಂಟಾಗಿ ಆ ಸಂಬಂಧವಾದ ಸೌಖ್ಯ ಉಂಟಾಗುವುದು. ಭೂಮಿಯ ಮೇಲೆ ಮನುಷ್ಯರಿಗೂ ಪ್ರಾಣಿಗಳಿಗೂ ದೊರೆಯುವ ಈ ವಿಧವಾದ ಸುಖಸಂತೋಷಗಳಿಗಿಂತ ತಂದೆಯಾದವನಿಗೆ ಪುತ್ರನಿಂದ ಉಂಟಾಗುವ ಸುಖ ಸಂತೋಷಗಳು ಅತ್ಯಧಿಕವಾಗಿರುವುವು. ಈ ವಿಷಯದಲ್ಲಿ ಕೆಲವರು ಹೇಳುವರು ಪುತ್ರೋತ್ಪತ್ತಿವಿಪತ್ತಿಭ್ಯಾಂ ನಾಪರಂ ಸುಖದುಃಖಯೋಃ। ಪುತ್ರೋತ್ಪತ್ತಿಯಿಂದ ಉಂಟಾಗುವ ಸುಖ ದುಃಖಗಳಿಗಿಂತ ಹೆಚ್ಚಿನದು ಯಾವುದೂ ಇಲ್ಲ ಎಂದು.

ಶಶ್ವತ್ಪುತ್ರೇಣ ಪಿತರೋಽತ್ಯಾಯನ್ಬಹುಲಂ ತಮಃ। ಆತ್ಮಾ ಹಿ ಜಜ್ಞ
ಆತ್ಮನಃ ಸ ಇರಾವತ್ಯತೀತಾರಿಣೀ ॥

ತೃತೀಯಾಂ ಗಾಥಾಮಾಹ—ಪಿತರೋ ಜನಕಾ ಉತ್ಪನ್ನೇನ ಪುತ್ರೇಣ ಶಶ್ವತ್ಸರ್ವದಾ ಲೋಕದ್ವಯೇಽಪಿ ಬಹುಲಮಭ್ಯಧಿಕಂ ತಮ ಐಹಿಕಮಾಮುಷ್ಮಿಕಂ ಚ ದುಃಖಮತ್ಯಾಯನ್ನತಿಕ್ರಾಮಂತಿ। ತಥಾ ಚ ಬೌಧಾಯನ ಆಹ –

"ಪುದಿತಿ ನರಕಸ್ಯಾಖ್ಯಾ ದುಃಖಂ ಚ ನರಕಂ ವಿದುಃ।
ಪುತ್ತ್ರಸ್ತ್ರಾಣಾತ್ತತಃ ಪುತ್ರಮಿಹೇಚ್ಛಂತಿ ಪರತ್ರ ಚ" ॥ ಇತಿ ॥

ಕಿಂಚ ಹಿ ಯಸ್ಮಾತ್ ಕಾರಣಾತ್ ಪಿತುಃ ಪುತ್ರ ಉತ್ಪನ್ನ ಇತ್ಯುಕ್ತೇ ಸತಿ ಪಿತಾ ಸ್ವಸ್ಮಾತ್ ಸ್ವಯಮೇವ ಯಜ್ಞ ಉತ್ಪನ್ನ ಇತ್ಯುಕ್ತಂ ಭವತಿ। ತತಃ ಪಿತಾ ಯಥಾ ಸ್ವಯಂ ಸ್ವಕೀಯಂ ದುಃಖಂ ವಿನಾಶಯತಿ ತಥಾ ಪುತ್ರೋಽಪ್ಯೇತದ್ದುಃಖಂ ವಿನಾಶಯತೀತಿ ದ್ರಷ್ಟವ್ಯಂ। ತಸ್ಮಾತ್ ಸ ಪುತ್ರ ಇರಾವತ್ಯನ್ನಯುಕ್ತಾಽತಿತಾರಿಣೀ ನದೀಸಮುದ್ರಾದೇರತಿತರಣಹೇತುರ್ನೌರಿತಿ ಶೇಷಃ। ಯಥಾ ನೌರ್ದುರ್ಘಟಂ ನದ್ಯಾದಿಕಂ ತಾರಯತ್ಯೇವಂ ಪುತ್ರೋಽಪ್ಯೈಹಿಕಮಾಮುಷ್ಮಿಕಂ ಚ ದುಃಖಂ ತಾರಯತೀತ್ಯರ್ಥಃ ॥

ತಂದೆಯಾದವರು ತಮಗೆ ಹುಟ್ಟಿದ ಪುತ್ರರಿಂದ ಯಾವಾಗಲೂ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಉಂಟಾಗುವ ಅಧಿಕವಾದ ದುಃಖವೆಂಬ ತಮಸ್ಸನ್ನು (ಕತ್ತಲೆ) ದಾಟಲು ಸಮರ್ಥರಾಗುತ್ತಾರೆ. ಈ ವಿಷಯದಲ್ಲಿ ಬೋಧಾಯನರು ಹೀಗೆ ಹೇಳುತ್ತಾರೆ.

**ಪುದಿತಿ ನರಕಸ್ಯಾಽಽಖ್ಯಾ ದುಃಖಂ ಚ ನರಕಂ ವಿದುಃ ।**
**ಪುತ್ತ್ರಸ್ತ್ರಾಣಾತ್ತತಃಪುತ್ರಮಿಹೇಚ್ಛಂತಿ ಪರತ್ರ ಚ ।ಇತಿ॥**

ಬಹುದುಃಖಪ್ರದವಾದ ಪುತ್ ಎಂಬ ಹೆಸರಿನ ನರಕವೊಂದಿರುವುದು. ಪುತ್ರನಾದವನು ತನ್ನ ತಂದೆಯನ್ನು ತನ್ನ ಸತ್ಕರ್ಮಾಚರಣೆಯಿಂದ ಈ ನರಕದಿಂದ (ನರಕಕ್ಕೆ ಹೋಗದಂತೆ) ಕಾಪಾಡುವನಾದುದರಿಂದ ಇವನಿಗೆ ಪುತ್ರನೆಂಬ ಹೆಸರು ಬಂದಿರುವುದು. ಆದ್ದರಿಂದ ಪುರುಷಶ್ರೇಷ್ಠರ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ದುಃಖಾದಿಗಳಿಂದ ದಾಟಿಸುವ ಪುತ್ರನನ್ನು ಸಹಜವಾಗಿ ಅಪೇಕ್ಷಿಸುತ್ತಾರೆ ಎಂದು ಶ್ಲೋಕದ ಅರ್ಥವು. ತಂದೆಯಾದವನಿಗೆ ಪುತ್ರನು ಉತ್ಪನ್ನನಾದರೆ ಆಗ ಅವನು ತಾನೇ ಪುತ್ರರೂಪದಲ್ಲಿ ಹುಟ್ಟಿರುವೆನೆಂದು ತಿಳಿಯುತ್ತಾನೆ. ತಂದೆಗೆ ಉಂಟಾಗುವ ದುಃಖವನ್ನು ತಂದೆಯು ತಾನೇ ಪರಿಹರಿಸಿಕೊಳ್ಳುವಂತೆ ಪುತ್ರನು ಸಹ ತನ್ನ ತಂದೆಯ ದುಃಖವನ್ನು ಪರಿಹರಿಸುವನು ಎಂದು ತಿಳಿಯುವನು. ಆದ್ದರಿಂದ ಪುತ್ರನು ಅನ್ನಾದಿಗಳಿಂದ ತಂದೆಯನ್ನು ಕಾಪಾಡಿ ಅವನ ದುಃಖವನ್ನು ಪರಿಹರಿಸುವನು ಹೇಗೆಂದರೆ ದೊಡ್ಡದಾದ ನದೀ, ಸಮುದ್ರ ಮುಂತಾದುವುಗಳನ್ನು ನಾವೆಯ ಸಹಾಯದಿಂದ ದಾಟುವರಷ್ಟೆ. ಅದರಂತೆ ಈ ವಿಷಯದಲ್ಲಿ ಪುತ್ರನು ನಾವೆಯಂತಿರುವನು. ಎಂದರೆ ಐಹಿಕಾಮುಷ್ಮಿಕ (ಈ ಲೋಕ ಮತ್ತು ಪರಲೋಕಗಳಿಗೆ ಸಂಬಂಧಪಟ್ಟ) ದುಃಖಾದಿಗಳಿಂದ ಈ ಪುತ್ರನು ತನ್ನ ತಂದೆಯನ್ನು ಕಾಪಾಡಿ ದಾಟಿಸುವನು. ನದೀ, ಸಮುದ್ರಗಳನ್ನು ದಾಟಲು ನೌಕೆಯು ಅವಶ್ಯಕವಾಗಿರುವಂತೆ ಪಿತೃವಿನ ದುಃಖಾದಿಗಳನ್ನು ದಾಟಿಸಲು ಪುತ್ರನು ಅವಶ್ಯಕವು ಎಂದಭಿಪ್ರಾಯವು.

ಕಿಂ ನು ಮಲಂ ಕಿಮಜಿನಂ ಕಿಮು ಶ್ಮಶ್ರೂಣಿ ಕಿಂ ತಪಃ ಪುತ್ರಂ ।
ಬ್ರಹ್ಮಾಣ ಇಚ್ಛಧ್ವಂ ಸ ವೈ ಲೋಕೋಽವದಾವದಃ ॥

**ಚತುರ್ಥೀಂ ಗಾಥಾಮಾಹ—ಅತ್ರ ಮಲಾಜಿನಶ್ಮಶ್ರುತಪಃಶಬ್ದೈರಾಶ್ರಮಚತುಷ್ಟಯಂ ವಿವಕ್ಷಿತಂ । ಮಲರೂಪಾಭ್ಯಾಂ ಶುಕ್ಲ (ಕ್ರ) ಶೋಣಿತಾಭ್ಯಾಂ ಸಂಯೋಗಾನ್ಮಲಶಬ್ದೇನ ಗಾರ್ಹಸ್ಥ್ಯಂ ವಿವಕ್ಷಿತಂ । ಕೃಷ್ಣಾಜಿನಸಂಯೋಗಾದಜಿನಶಬ್ದೇನ ಬ್ರಹ್ಮಚರ್ಯಂ ವಿವಕ್ಷಿತಂ । ಕ್ಷೌರಕರ್ಮರಾಹಿತ್ಯಾಚ್ಛ್ಮಶ್ರುಶಬ್ದೇನ ವಾನಪ್ರಸ್ಥ್ಯಂ ವಿವಕ್ಷಿತಂ । ಇಂದ್ರಿಯನಿಯಮಸದ್ಭಾವಾತ್ತಪಃಶಬ್ದೇನ ಪಾರಿವ್ರಾಜ್ಯಂ ವಿವಕ್ಷಿತಂ । ಮಲಂ ಗಾರ್ಹಸ್ಥ್ಯಂ ಕಿಂ ನು ಕಿಂ ನಾಮ ಸುಖಂ ಕರಿಷ್ಯತಿ ನ ಕಿಂಚಿದಿತ್ಯರ್ಥಃ । ಏವಮುತ್ತರತ್ರಾಪಿ ಯೋಜ್ಯಮ್ । ಹೇ ಬ್ರಹ್ಮಾಣೋ ವಿಪ್ರಾ ವಿಪ್ರಕ್ಷತ್ರಿಯಾದ್ಯಾಃ ಸರ್ವೇ ಯೂಯಂ ಸುಖಹೇತುತ್ವಾತ್ ಪುತ್ರಮಿಚ್ಛಧ್ವಂ । ಸ ವೈ ಸ ಏವ ಪುತ್ರೋಽವದಾವದೋ ಲೋಕಃ । ವದಿತುಮಯೋಗ್ಯಾನಿ ನಿಂದಾವಾಕ್ಯಾನ್ಯವದಾನ್ಯೈರ್ವಾಕ್ಯೈರ್ನೋಽವ್ಯತೇ ನ ಕಥ್ಯತ ಇತ್ಯವದಾವದಃ । (ಏವಂ ಪ್ರಪದೇನ ತೇನ ಕಥ್ಯತ ಇತಿ) ಅವದಾವದೋ ದೋಷರಾಹಿತ್ಯಾನ್ನಿಂದಾನರ್ಹ ಇತ್ಯರ್ಥಃ । ತಾದೃಶೋ ಲೋಕೋ ಭೋಗಹೇತುಃ ಪುತ್ರಃ । ತಸ್ಮಾದಾಶ್ರಮೇಭ್ಯೋಽಪ್ಯಾಧಿಕ್ಯೇನ ಪುತ್ರೇಚ್ಛಾ ಕರ್ತವ್ಯಾ । ಯದ್ಯಪಿ ಹರಿಶ್ಚಂದ್ರ ಏವಾತ್ರ ಪ್ರಷ್ಟಾ ತಥಾಪಿ ತೇನ ಸಹ ಋಷೀಣಾಂ ಬಹೂನಾಂ ಸಭಾಯಾಮವಸ್ಥಾನಾತ್ ಬ್ರಹ್ಮಾಣ ಇತಿ ಸಂಬೋಧನಂ ॥**

ಇಲ್ಲಿ ಮಲ, ಅಜಿನ, ಶ್ಮಶ್ರು, ತಪಃ ಎಂಬ ಶಬ್ದಗಳು ಏನನ್ನು ಸೂಚಿಸುತ್ತವೆ ಎಂಬುದನ್ನು ವಿವರಿಸುವುದು ಅವಶ್ಯಕವು. ಈ ನಾಲ್ಕು ಶಬ್ದಗಳು ಬ್ರಹ್ಮಚರ್ಯ ಗೃಹಸ್ಥವಾನಪ್ರಸ್ಥಪಾರಿವ್ರಾಜಕ ಎಂಬ ನಾಲ್ಕುವಿಧ ಆಶ್ರಮಗಳನ್ನು

ಸೂಚಿಸುವ. ಹೇಗೆಂದರೆ–ಮಲವೆಂದರೆ ಕೊಳೆ ಶುಕ್ಲಶೋಣಿತಸಂಬಂಧವಾದ ಸ್ತ್ರೀಸಂಭೋಗವು. ಈ ವಿಧವಾದ ಸ್ತ್ರೀಸಂಭೋಗಸಂಬಂಧವಿರುವ ಗೃಹಸ್ಥಾಶ್ರಮವು ಎಂದರ್ಥವು ; ಅಜಿನವೆಂದರೆ ಕೃಷ್ಣಾಜಿನವು. ಇವನ್ನು ಬ್ರಹ್ಮಚಾರಿಗಳು ಧರಿಸುವುದರಿಂದ ಅಜಿನಶಬ್ದವು ಬ್ರಹ್ಮಚರ್ಯಾಶ್ರಮವನ್ನು ಸೂಚಿಸುವುದು ; ಶ್ಮಶ್ರುವೆಂದರೆ ಮೀಸೆಗಡ್ಡಮುಂತಾದವು. ಕ್ಷೌರವನ್ನು ಮಾಡಿಸಿಕೊಳ್ಳದಿರುವುದರಿಂದ ಶ್ಮಶ್ರುಕೇಶವು ಬೆಳೆಯಲು ಅವಕಾಶವಾಗುವುದು. ವಾನಪ್ರಸ್ಥಾಶ್ರಮದಲ್ಲಿ ಎಂದರೆ ವನದಲ್ಲಿ ವಾಸಮಾಡುವವರು ಪವೇಪವೇ ಕ್ಷೌರಮಾಡಿಸಿಕೊಳ್ಳದೆ ಮೀಸೆಯನ್ನೂ ಗಡ್ಡವನ್ನೂ ತೆಗಸದೆ ದೀಕ್ಷಿತರಂತೆ ಇರುವುದನ್ನು ಎಂದರೆ ವಾನಪ್ರಸ್ಥಾಶ್ರಮವನ್ನು ಶ್ಮಶ್ರುಶಬ್ದವು ಸೂಚಿಸುವುದು ; ತಪಃ ಎಂದರೆ ಇಂದ್ರಿಯಗಳನ್ನು ನಿಯಮದಲ್ಲಿಟ್ಟುಕೊಂಡು (ಪರಮಾತ್ಮನ) ಧ್ಯಾನಾಸಕ್ತನಾಗಿರುವುದೇ ತಪಃಶಬ್ದಾರ್ಥವು ಈ ವಿಧಾಚರಣೆಯಲ್ಲಿರುವ ಪಾರಿವ್ರಾಜಕನನ್ನು (ಯತಿಯನ್ನು ಅಥವಾ ಸಂನ್ಯಾಸಿಯನ್ನು) ತಪಃಶಬ್ದವು ಸೂಚಿಸುವುದು. ಆದ್ದರಿಂದ ಇಲ್ಲಿ ಹೇಳಿರುವಂತೆ **ಮಲಂ ಕಿಂನು** ಗೃಹಸ್ಥಾಶ್ರಮವು ಏನು ಸುಖವನ್ನುಂಟುಮಾಡುವುದು ? ಏನೂ ಇಲ್ಲ. ಅದರಂತೆ ಬ್ರಹ್ಮಚರ್ಯವಾನಪ್ರಸ್ಥಯತ್ಯಾಶ್ರಮಗಳೂ ಸಹ ಪುರುಷನಿಗೆ ಯಾವ ಸುಖವನ್ನೂ ಉಂಟುಮಾಡಲಾರವು. ಆದ್ದರಿಂದ ಬ್ರಾಹ್ಮಣಕ್ಷತ್ರಿಯಾದಿಗಳಾದ ಎಲೈ ಪುರುಷರೇ ನೀವೆಲ್ಲರೂ ಸುಖವನ್ನು ಹೊಂದುವುದಕ್ಕಾಗಿ ಪುತ್ರರನ್ನು ಅಪೇಕ್ಷಿಸಿ ಪಡೆಯಿರಿ. ಆ ಪುತ್ರನೇ ಲೋಕವ್ಯವಹಾರಕ್ಕೂ ಸುಖಕ್ಕೂ ಮೂಲವಾಗಿರುವುದು **ಅವದಾವದಃ** ಎಂದರೆ ನಿಂದಾ ಮೊದಲಾದ ವಾಕ್ಯಗಳಿಂದ ದೋಷರಹಿತವಾದುದು. ಓರ್ವ ಪುರುಷನು ದೋಷರಹಿತನಾಗಿ ನಿಂದೆಗೆ ಅರ್ಹನಾಗಿಲ್ಲದಿದ್ದರೆ ಯಾರೂ ಅವನನ್ನು ನಿಂದೆಮಾಡದಿದ್ದರೆ ಅವನಿಗೆ **ಅವದಾವದಃ** ಎಂದು ಹೆಸರು. ಆದ್ದರಿಂದ ಆವಿಧವಾದ, ದೋಷನಿಂದಾರಹಿತವಾದ ಸ್ಥಿತಿಗೆ ಮತ್ತು ಭೋಗಕ್ಕೆ ಪುತ್ರನೇ ಮುಖ್ಯಕಾರಣವು. ಆದ್ದರಿಂದ ಹಿಂದೆ ಹೇಳಿದ ಬ್ರಹ್ಮಚರ್ಯಾದಿ ನಾಲ್ಕು ವಿಧ ಆಶ್ರಮಗಳಿಗಿಂತ ಅಧಿಕಸುಖಪ್ರದವಾದ ಪುತ್ರನನ್ನು ಇಚ್ಛಿಸುವುದೇ ಶ್ರೇಷ್ಠವು (ಅತ್ಯಧಿಕಸುಖಪ್ರದವು) ಇಲ್ಲಿ ಬ್ರಹ್ಮಾಣ ಎಂಬ ಶಬ್ದಪ್ರಯೋಗವಿದೆ. ಪುತ್ರನ ವಿಷಯವಾಗಿ ಪ್ರಶ್ನೆಮಾಡುವವನು ಹರಿಶ್ಚಂದ್ರನೆಂಬ ರಾಜನಾದರೂ ಆ ರಾಜನ ಸಭೆಯಲ್ಲಿ ಅನೇಕ ಋಷಿಗಳೂ ಬ್ರಾಹ್ಮಣರೂ ಸೇರಿದ್ದರಿಂದ ಇಲ್ಲಿ **ಬ್ರಹ್ಮಾಣಃ** ಎಂದು ಬ್ರಾಹ್ಮಣ ಸಂಬೋಧನೆಯು ಬಹುವಚನದಲ್ಲಿ ಉಪಯೋಗಿಸಲ್ಪಟ್ಟಿರುವುದು.

**ಅನ್ನಂ ಹ ಪ್ರಾಣಃ ಶರಣಂ ಹ ವಾಸೋ ರೂಪಂ ಹಿರಣ್ಯಂ ಪಶವೋ ವಿವಾಹಾಃ । ಸಖಾ ಹ ಜಾಯಾ ಕೃಪಣಂ ಹ ದುಹಿತಾ ಜ್ಯೋತಿರ್ಹ ಪುತ್ರಃ ಪರಮೇ ವ್ಯೋಮನ್ ॥**

ಪಂಚಮೀಂ ಗಾಥಾಮಾಹ—ಅನ್ನಾದಯೋ ಲೋಕೇ ಸುಖಹೇತುತ್ವೇನ ಪ್ರಸಿದ್ಧಾಃ । ತಥಾ ಹಿ ಶರೀರೇ ಪ್ರಾಣಾವಸ್ಥಿತಿಹೇತುತ್ವಾದನ್ನಮೇವ ಪ್ರಾಣಃ। ವಾಸಃ ಶೀತೋಪದ್ರವಾದ್ರಕ್ಷಕತ್ವೇನ ಶರಣಂ ಗೃಹಸಮಾನಮ್ । ಹಿರಣ್ಯಂ ಕರ್ಣಾಭರಣಾದಿಕಂ ದೃಷ್ಟಿಪ್ರಿಯತ್ವಾದ್ರೂಪಸಂಪಾದಕಮ್ । ಪಶವೋ ಗವಾಶ್ವಾದಯೋ ವಿವಾಹವಿಶೇಷೇಣ ನಿರ್ವಾಹಕಾಃ । ಜಾಯಾ ಭೋಗೇ ಸಹಕಾರಿತ್ವಾತ್ಸಖಾ ಹ ಸಖಿಸ್ವರೂಪೈವ । ಏವಮೇತೇ ಸುಖಹೇತುತ್ವೇನ ಪ್ರಸಿದ್ಧಾ ಅಪಿ ತಾತ್ಕಾಲಿಕಮಲ್ಪಮೇವ ಸುಖಂ ಪ್ರಯಚ್ಛಂತಿ । ದುಹಿತಾ ಹ ಪುತ್ರೀತಿ ಕೃಪಣಂ ಕೇವಲದುಃಖಕಾರಿತ್ವಾದ್ದೈನ್ಯಹೇತುಃ। ತಥಾ ಚ ಸ್ಮರ್ಯತೇ—

" ಸಂಭವೇ ಸ್ವಜನದುಃಖಕಾರಿಕಾ ಸಂಪ್ರದಾನಸಮಯೇಽರ್ಥಹಾರಿಕಾ ॥
ಯೌವನೇಽಪಿ ಬಹುದೋಷಕಾರಿಕಾ ದಾರಿಕಾ ಹೃದಯದಾರಿಕಾ ಪಿತುಃ " ॥ ಇತಿ ॥

**ಪುತ್ರೋ ಹ ಪುತ್ರಸ್ತು ಜ್ಯೋತಿಃಸ್ವರೂಪಂ ತಮೋನಿವಾರಕತ್ವೇನ ಸ ಹಿ ಪಿತರಂ ಪರಮೇ ವ್ಯೋಮನ್ನುತ್ಕೃಷ್ಟ ಆಕಾಶೇ ಪರಬ್ರಹ್ಮಸ್ವರೂಪೇಽವಸ್ಥಾಪಯತಿ । ಆಕಾಶಸ್ತಲ್ಲಿಂಗಾದಿತ್ಯನೇನ ವ್ಯಾಸಸೂತ್ರೇಣಾಕಾಶವ್ಯೋಮಾದಿಶಬ್ದಾನಾಂ ಬ್ರಹ್ಮಪರತ್ವಂ ನಿರ್ಣೀತಮ್ । ಪುತ್ರಸ್ಯ ಚ ಬ್ರಹ್ಮ-ಜ್ಞಾನಹೇತುತ್ವಂ ಪೂರ್ವಮೇವಾಮೃತತ್ವಂ ಚ ಗಚ್ಛತೀತ್ಯತ್ರ ಪ್ರತಿಪಾದಿತಮ್ ॥**

ಅನ್ನ ಮತ್ತು ಇತರ ವಿಧವಾದ ಆಹಾರಗಳು ಮನುಷ್ಯರಿಗೆ ಬಹಳ ಸುಖವನ್ನುಂಟುಮಾಡುವವು ಎಂಬುದು ಪ್ರಸಿದ್ಧವು. ಅನ್ನವಿಲ್ಲದಿದ್ದರೆ ಪ್ರಾಣವಿಟ್ಟುಕೊಂಡು ಜೀವಿಸುವುದು ಅಸಾಧ್ಯವು. ಆದ್ದರಿಂದ ಅನ್ನವು ಅತ್ಯವಶ್ಯಕವು. ಪುರುಷನಿಗೆ ಆಹಾರಾನಂತರ ಅವಶ್ಯಕವಾದ ಪದಾರ್ಥವೆಂದರೆ ವಸ್ತ್ರವು. ಶೀತೋಪದ್ರವಾದಿಗಳಿಂದ ರಕ್ಷಿಸುವುದಕ್ಕೆ ವಸ್ತ್ರವು (ಬಟ್ಟೆಗಳು) ಅತ್ಯವಶ್ಯಕವು. ಅದಲ್ಲದೆ ವಾಸಮಾಡುವುದಕ್ಕೆ ಮನೆಯೂ ಬೇಕೇಬೇಕು ಮಳೆ, ಗಾಳಿ ಬಿಸಿಲು ಮುಂತಾದುವುಗಳಿಂದ ಶರೀರವನ್ನು ಕಾಪಾಡುವುದಕ್ಕಾಗಿ ಮನೆ ಅಥವಾ ನಿವಾಸಸ್ಥಾನವು ಬೇಕೇಬೇಕು. ಚಿನ್ನ ಮೊದಲಾದ ಸುವರ್ಣಾಭರಣಗಳೂ ದೇಹಕಾಂತಿಯನ್ನು ಹೆಚ್ಚಿಸಿ ಮನಸ್ಸಿಗೆ ಸಂತೋಷವನ್ನೂ ಉತ್ಸಾಹವನ್ನೂ ಉಂಟುಮಾಡುವವು. ಗೋವು ಅಶ್ವ ಮೊದಲಾದ ಪ್ರಾಣಿಗಳು ಗೃಹಸ್ಥನಾದವನಿಗೆ ಅವಶ್ಯಕವಾದವು ; ಇನ್ನು ಪತ್ನಿಯು ಪುರುಷನಿಗೆ ಭೋಗಾದಿಸುಖವನ್ನುಂಟುಮಾಡುವುದಲ್ಲದೆ, ಪುರುಷನ ಜತೆಯಲ್ಲಿ ಯಾವಾಗಲೂ ಇದ್ದು ಅವನು ಮಾಡುವ ಕೆಲಸಗಳಲ್ಲಿ ಸಹಾಯವನ್ನು ಮಾಡುತ್ತಾ ಸಖಿಯಂತೆ ಇರುವಳು. ಮೇಲೆ ಹೇಳಿದ ವಿಷಯಗಳೆಲ್ಲವೂ ಪುರುಷನಿಗೆ ಸುಖಸಂತೋಷವನ್ನುಂಟುಮಾಡುವುದಾದರೂ ಇವು ತಾತ್ಕಾಲಿಕವಾದವು. ಇವುಗಳಿಂದ ಶಾಶ್ವತವಾದ ಸುಖವಿರುವುದಿಲ್ಲ. ಪುರುಷನಿಗೆ ಹುಟ್ಟುವ ಮಗಳು ಅಥವಾ ಪುತ್ರಿಯು ಸ್ವಲ್ಪಮಟ್ಟಿಗೆ ಸುಖವನ್ನುಂಟುಮಾಡಿದರೂ ಉತ್ತರೋತ್ತರ ಸುಖಕ್ಕಿಂತ ದುಃಖವೇ ಹೆಚ್ಚಾಗುವುದು. ಇದು ಪ್ರಸಿದ್ಧವು. ಈ ವಿಷಯದಲ್ಲಿ—

**ಸಂಭವೇ ಸ್ವಜನದುಃಖಕಾರಿಕಾ**
**ಸಂಪ್ರದಾನಸಮಯೇಽರ್ಥಹಾರಿಕಾ ।**
**ಯೌವನೇಽಪಿ ಬಹುದೋಷಕಾರಿಕಾ**
**ದಾರಿಕಾ ಹೃದಯದಾರಿಕಾ ಪಿತುಃ ॥**

ಎಂದು ವಾಕ್ಯವಿರುವುದು. ಇದರ ಅರ್ಥವೇನೆಂದರೆ ಪುರುಷನಿಗೆ ಹುಟ್ಟುವ ಪುತ್ರಿಯು ಸ್ವಲ್ಪಮಟ್ಟಿಗೆ ಸಂತೋಷವನ್ನುಂಟುಮಾಡಿದರೂ ಸಂತೋಷಕ್ಕಿಂತ ದುಃಖವೇ ಹೆಚ್ಚಾಗಿರುವುದು. ಏಕೆಂದರೆ ಕನ್ಯೆಯು ಹುಟ್ಟುವಾಗ ತನ್ನ ಬಂಧು ಬಾಂಧವರಿಗೆ ಹೆಚ್ಚಾಗಿ ಹರ್ಷವಾಗದೆ ಸ್ವಲ್ಪಮಟ್ಟಿಗೆ ದುಃಖಕ್ಕೇ ಕಾರಣವಾಗುವುದು. ಈ ಕನ್ಯೆಯನ್ನು ತಂದೆಯು ಬೇರೊಬ್ಬ ಪುರುಷನಿಗೆ ವಿವಾಹಮಾಡಿಕೊಡುವಾಗ ವಿವಾಹದ ಖರ್ಚು ವೆಚ್ಚ ಮುಂತಾದವುಗಳಿಂದ ತಂದೆಗೆ ಬಹಳವಾಗಿ ಧನವ್ಯಯವಾಗುವುದು. ಈ ಕನ್ಯೆಯು ಯೌವನಾವಸ್ಥೆಗೆ ಬಂದಾಗ ಸರಿಯಾದ ನಡತೆಯಲ್ಲಿಲ್ಲದಿದ್ದರೆ ಅದರಿಂದ ಸ್ವಜನರಿಗೆ ಬಹುದುಃಖವುಂಟಾಗುವುದು. ಈ ವಿಧವಾದ ಪುತ್ರಿಯ ನಡತೆ ಮುಂತಾದವುಗಳಿಂದ ತಂದೆಯಾದವನಿಗೆ ಅತೀವ ವೇದನೆಯುಂಟಾಗುವುದು ಎಂದು ಇದರ ಅರ್ಥವು. ಪುತ್ರನಾದರೆ ತಂದೆಗೆ ಅನುಕೂಲವೇ ಹೊರತು ದುಃಖವಿರುವುದಿಲ್ಲ. ಏಕೆಂದರೆ ಈ ಪುತ್ರನು ಬಾಲ್ಯದಲ್ಲಿ ತಂದೆಗೆ ಸುಖಸಂತೋಷ

ಗಳನ್ನು ಬಿಟುಮಾಡುವನು. ಅನಂತರ ವಿದ್ಯಾವಂತನಾಗಿ ಸತ್ಕರ್ಮಾನುಷ್ಠಾನದಿಂದ ತಂದೆಯು ಸ್ವರ್ಗಾದಿಪದವಿಯನ್ನು ಪಡೆಯಲು ಸಹಾಯಕನಾಗುವನು. ಇಂತಹ ಪುತ್ರನು ಇಹಲೋಕದಲ್ಲಿ ತಂದೆಯ ಸಂಸಾರನಿರ್ವಹಣಾದಿಗಳಲ್ಲಿ ನೆರವಾಗ ವುದಲ್ಲದೆ ತಾನು ಬ್ರಹ್ಮಜ್ಞಾನವನ್ನು ಪಡೆದು ತಂದೆಯ ಮುಕ್ತಿಪದವಿಯನ್ನು ಸಂಪಾದಿಸಲೂ ಕಾರಣನಾಗುವನು.

ಪತಿರ್ಜಾಯಾಂ ಪ್ರವಿಶತಿ ಗರ್ಭೋ ಭೂತ್ವಾ ಸ ಮಾತರಂ । ತಸ್ಯಾಂ ಪುನರ್ನವೋ ಭೂತ್ವಾ ದಶಮೇ ಮಾಸಿ ಜಾಯತೇ ॥

ಷಷ್ಠೀಂ ಗಾಥಾಮಾಹ ಪತ್ಯುರಾಕಾರದ್ವಯಮಸ್ತಿ । ವರ್ತಮಾನಪುರುಷಾಕಾರ ಏಕೋ ರೇತೋರೂಪೇಣ ಗರ್ಭಾಕಾರೋ ದ್ವಿತೀಯಃ । ಜಾಯಾಯಾ ಅಪ್ಯಾಕಾರದ್ವಯಮಸ್ತಿ । ಪತಿರೂಪ. ಮಾಕಾರಂ ಪ್ರತಿ ಜಾಯಾ ಭವತಿ । ಗರ್ಭರೂಪಮಾಕಾರಂ ಪ್ರತಿ ಮಾತಾ ಭವತಿ । ಅತಃ ಸ ತಾದೃಶಃ ಪತಿಃ ಸ್ವಯಂ ರೇತೋರೂಪೇಣ ಗರ್ಭೋ ಭೂತ್ವಾ ಪೂರ್ವಮುವಸ್ಥಿತಾಂ ಜಾಯಾಂ ಭವಿಷ್ಯದಾ- ಕಾರೇಣ ಮಾತರಂ ಸತೀಂ ಪ್ರವಿಶತಿ । ಅಸ್ಯಾಂ ಮಾತರಿ ಪುನರ್ನವೋ ಭೂತ್ವಾ ಪೂರ್ವಮನ್ಯಸ್ಯಾಂ ಮಾತರ್ಯುತ್ಪನ್ನೋ ಜಠರಃ । ಇದಾನೀಂ ಪುನರ್ನೂತನಬಾಲೋ ಭೂತ್ವಾ ತಸ್ಯಾಮಿದಾನೀಂತ- ನ್ಯಾಮಸ್ಯಾಂ ಮಾತರಿ ಗರ್ಭಪಾಕೇ ಸತಿ ದಶಮೇ ಮಾಸ್ಯುತ್ಪದ್ಯತೇ । ತಸ್ಮಾತ್ಪುತ್ರಃ ಸ್ವಸ್ಮಾದನ್ಯೋ ನ ಭವತಿ ॥

ಪುರುಷನಾದವನಿಗೆ ಎರಡುವಿಧ ಆಕಾರಗಳಿರುವುವು. ಈಗ ಇರುವ ಪುರುಷಾಕಾರವು ಒಂದು ; ಪುತ್ರರೂಪದಿಂದ ಪತ್ನಿಯ ಗರ್ಭದಲ್ಲಿ ಬೆಳೆಯುತ್ತಿರುವ ಶಿಶುರೂಪವು ಎರಡನೆಯದು. ಅದರಂತೆಯೇ ಸ್ತ್ರೀಗೂ ಎರಡುವಿಧ ಆಕಾರಗಳಿರುವವು. ಪತಿಯೊಡನಿರುವಾಗ ಸ್ತ್ರೀಯು ಪತಿಯೊಡನೆ ಹೊಂದಿಕೊಂಡು ಅನ್ಯೋನ್ಯವಾಗಿ ಪತಿಗೆ ಅನುಕೂಲವಾಗುವಂತೆ ವರ್ತಿ ಸುತ್ತಿರುವಳು ; ತನ್ನ ಗರ್ಭದಲ್ಲಿ ಪುತ್ರನಿರುವಾಗ ಮತ್ತು ಅನಂತರ ಆ ಪುತ್ರನ ವಿಷಯದಲ್ಲಿ ತಾಯಿಯಂತೆ ಹಿತಚಿಂತಕ ಳಾಗಿದ್ದು ಪುತ್ರನ ಪೋಷಣಾದಿಗಳನ್ನು ಮಾಡುತ್ತಾ ವರ್ತಿಸುವಳು. ಆದ್ದರಿಂದ ಪುರುಷನಾದವನು ತನ್ನ ಪತ್ನಿಯಾದ ಸ್ತ್ರೀಯನ್ನು ಭಾರ್ಯೆಯೆಂದು ಭಾವಿಸಿ ಅವಳೊಡನೆ ಸಂಭೋಗಾದಿಗಳನ್ನು ಮಾಡಿ ತನ್ನ ರೇತಸ್ಸನ್ನು ಆ ಪತ್ನಿಯ ಯೋನಿ ಯಲ್ಲಿಟ್ಟು ಅನಂತರ ಆ ಪತ್ನಿಯು ಗರ್ಭವನ್ನು ಧರಿಸಿದಾಗ ತನ್ನ ರೇತಸ್ಸು ಪುತ್ರರೂಪದಿಂದಿರುವಾಗ ಆಗರ್ಭದಲ್ಲಿಯೇ ಪ್ರವೇಶಿಸಿ ಪುತ್ರರೂಪದಿಂದ ಬೆಳೆಯುತ್ತಾ ತನ್ನ ಪತ್ನಿಯನ್ನು ತಾಯಿಯೆಂದೇ ಭಾವಿಸುವನು. ಎಂದರೆ ಪುರುಷನು ತನ್ನ ರೇತೋರೂಪದಿಂದ ತನ್ನ ಪತ್ನಿಯಲ್ಲಿಯೇ ಪುತ್ರನಾಗಿ ಜನಿಸುವನು. ಪುತ್ರನಲ್ಲಿ ತಂದೆಯ ಅಂಶವೂ ಇರುವುದೆಂದರ್ಥವು. ಈರೀತಿ ಪುರುಷನು (ತನ್ನ ಹಿಂದಿನ ಪತ್ನಿಯ) ತಾಯಿಯ ಜಠರದಲ್ಲಿ ಗರ್ಭರೂಪದಿಂದ ಬೆಳೆಯುತ್ತಿದ್ದು ಹೊಸದಾಗಿ ಹುಟ್ಟುವ ಬಾಲಕನೆಂದು ಪರಿಗಣಿಸಲ್ಪಟ್ಟು ಹತ್ತನೆ ತಿಂಗಳಲ್ಲಿ ಮಾತೃವಿನ (ಇಲ್ಲಿ ಮಾತೃವೆಂದರೆ ಬಾಲಕನು ಮಾತ್ರ. ಆ ಮಾತೃವೇ ಪುರುಷನ ಪತ್ನಿಯು) ಗರ್ಭದಿಂದ ಹುಟ್ಟುವನು. ಆದ್ದರಿಂದ ಪುರುಷನಾದವನಿಗೆ ಹುಟ್ಟುವ ಪುತ್ರನು ತನಗಿಂತ (ಪುರುಷ ನಿಗಿಂತ) ಬೇರೆಯಾಗಿರದೆ ತಾನೇ ಪುತ್ರರೂಪದಿಂದಿರವನೆಂದಭಿಪ್ರಾಯವು.

ತಜ್ಜಾಯಾ ಜಾಯಾ ಭವತಿ ಯದಸ್ಯಾಂ ಜಾಯತೇ ಪುನಃ। ಆಭೋತಿ- ರೇಷಾ ಭೂತಿಬೀಜಮೇತನ್ನಿಧೀಯತೇ ॥

**ಸಪ್ತಮೀಂ ಗಾಥಾಮಾಹ—ಯಾದ್ಯಸ್ಮಾತ್ ಕಾರಣಾದಸ್ಯಾಂಗರ್ಭಧಾರಿಣ್ಯಾಮಯಂ ಪಿತಾ ಪುತ್ರರೂಪೇಣ ಪುನರ್ಜಾಯತೇ ತತ್ತಸ್ಮಾತ್‌ಕಾರಣಾತಲ್ಲೋಕಪ್ರಸಿದ್ಧಾ ಯಾ ಜಾಯಾಽಸ್ತಿ ಸಾ ಜಾಯತೇಽಸ್ಯಾಮಿತಿ ವ್ಯುತ್ಪತ್ತ್ಯಾ ಜಾಯಾಶಬ್ದವಾಚ್ಯಾ ಭವತಿ । ಕಿಂ ಚೈಷಾ ಭೂತ್ಯಾಭೂತಿಶಬ್ದಾಭ್ಯಾಮಭಿಧೀಯತೇ । ಭವತ್ಯಸ್ಯಾಂ ಪುತ್ರರೂಪೇಣ ಭವತೀತ್ಯಾಭೂತಿಶಬ್ಧವಾಚ್ಯಾ । ಏತದೇತಸ್ಯಾಂ ಸ್ತ್ರಿಯಾಂ ಬೀಜಂ ರೇತೋರೂಪಂ ನಿಧೀಯತೇ ಪ್ರಕ್ಷಿಪ್ಯತೇ ತಸ್ಮಾದುಕ್ತಾಃ ಶಬ್ದಾ ಉಪಪದ್ಯಂತೇ ॥**

ಪುರುಷನು ತನ್ನ ಪತ್ನಿಯಲ್ಲಿ ರೇತಸ್ಸನ್ನು ಸೇಚನೆಮಾಡಿ ಅದರಿಂದ ಗರ್ಭವುಂಟಾದಾಗ ಆ ಗರ್ಭದಲ್ಲಿ ತಾನೇ ಪುತ್ರ ರೂಪದಿಂದ ಪುನಃ ಕಾಣುತ್ತಾನೆ. ಈ ಕಾರಣದಿಂದ ತನ್ನ ಪತ್ನಿಗೆ ಜಾಯಾ ಎಂಬ ಹೆಸರು ಲೋಕಪ್ರಸಿದ್ಧವಾಗಿರುವುದು. ಎಂದರೆ ತನ್ನ ಪತಿಯೇ ತನ್ನ ಉದರದಲ್ಲಿ ಪುತ್ರರೂಪದಿಂದ ಜನಿಸಿದ್ದರಿಂದ ಆ ಸ್ತ್ರೀಗೆ ಜಾಯಾ ಎಂಬ ಹೆಸರು ಅನ್ವರ್ಥನಾಮ ವಾಯಿತು. ಮತ್ತು ಈ ಸ್ತ್ರೀಗೆ ಭೂತಿ ಅಭೂತಿ ಎಂಬ ಎರಡು ಹೆಸರುಗಳೂ ಉಂಟಾಗುವವು. ಹೇಗೆಂದರೆ ಪತಿಯು ತನ್ನ ಸ್ತ್ರೀಯಲ್ಲಿ ಜನಿಸುವುದರಿಂದ ಪತ್ನಿಯು ಭೂತಿಶಬ್ದವಾಚ್ಯಳು. ಪತಿಯು ರೇತೋ (ವೀರ್ಯ) ರೂಪದಿಂದ ಸ್ತ್ರೀಯ ಗರ್ಭವನ್ನು ಪ್ರವೇಶಿಸಿ ಮುಂದೆ ಪುತ್ರರೂಪದಿಂದ ಜನಿಸುವುದರಿಂದ ಪತ್ನಿಯು ಆಭೂತಿಶಬ್ದವಾಚ್ಯಳೂ ಆಗಿರುವಳು. ಏಕೆಂದರೆ ಈ ಸ್ತ್ರೀಯಲ್ಲಿ (ಸ್ತ್ರೀಯ ಉದರದಲ್ಲಿ) ಪುರುಷನ ರೇತೋರೂಪವಾದ ಬೀಜವು ಇಡಲ್ಪಡುತ್ತದೆ. ಆದ್ದರಿಂದ ಪತ್ನಿಗೆ ಮೇಲೆ ಹೇಳಿದ ಭೂತಿ, ಆಭೂತಿ ಎಂಬ ಎರಡು ಶಬ್ದಗಳೂ ಅನ್ವಯಿಸುತ್ತದೆ.

**ದೇವಾಶ್ಚೈತಾಮೃಷಯಶ್ಚ ತೇಜಃ ಸಮಭರನ್ಮಹತ್।ದೇವಾ ಮನುಷ್ಯಾ-**
**ನಬ್ರುವನ್ನೇಷಾ ವೋ ಜನನೀ ಪುನಃ ॥**

**ಅಷ್ಟಮೀಂ ಗಾಥಾಮಾಹ—ಏತಾಮೇತಸ್ಯಾಂ ಯೋಷಿತಿ ದೇವಾಶ್ಚ ಮಹರ್ಷಯಶ್ಚ ಸ್ವಕೀಯಂ ಮಹತ್ತೇಜೋ ರೇತೋರೂಪಂ ಸಾರಂ ಸಮಭರನ್ ಪುತ್ರೋತ್ಪಾದನಾಯ ಸಂಪಾದಿತವಂತಃ । ಸ್ವಯಮೇವ ಸಂಪಾದ್ಯ ತತೋ ಮನುಷ್ಯಾನಿತ್ಯಬ್ರುವನ್ । ಹೇ ಮನುಷ್ಯಾ ಯೇಯಮಿದಾನೀಂ ಜಾಯಾರೂಪೇಣ ವರ್ತತೇ ಸೇಯಂ ಪುನರ್ವೋ ಯುಷ್ಮಾಕಂ ಪುತ್ರರೂಪೇ ಜನ್ಮನಿ ಜನನೀ ಭವತಿ ॥**

ದೇವತೆಗಳೂ, ಮತ್ತು ಋಷಿಗಳೂ ತಮ್ಮ ಜಾಯೆಯಾದವಳಿಗೆ ಅತ್ಯುತ್ತಮವಾದ ಕಾಂತಿಯನ್ನೂ ಸೌಂದರ್ಯ ವನ್ನೂ ಅನುಗ್ರಹಿಸುತ್ತಾರೆ. ಅನಂತರ ದೇವತೆಗಳು ಮಾನವರನ್ನು ಕುರಿತು—ಈ ಜಾಯಾರೂಪಳಾದ ಈ ಸ್ತ್ರೀಯು ಪುನಃ ನಿಮಗೆ (ಎಂದರೆ ನೀವು ಪುತ್ರರೂಪದಿಂದ ಹುಟ್ಟುವಾಗ) ಜನನಿ (ತಾಯಿ)ಯಾಗುತ್ತಾಳೆ ಎಂದು ಹೇಳುವರು.

**ನಾಽಪುತ್ರಸ್ಯ ಲೋಕೋಽಸ್ತೀತಿ ತತ್ಸರ್ವೇ ಪಶವೋ ವಿದುಃ । ತಸ್ಮಾತ್ತು**
**ಪುತ್ರೋ ಮಾತರಂ ಸ್ವಸಾರಂ ಚಾಧಿರೋಹತಿ ॥**

**ನವಮೀಂ ಗಾಥಾಮಾಹ—ಲೋಕೋ ಲೋಕಜನ್ಯಂ ಸುಖಮಪುತ್ರಸ್ಯ ನಾಸ್ತಿ । ನ ಹಿ ಪುತ್ರದರ್ಶನೇನ ಯತ್ಸುಖಂ ತದನ್ಯದರ್ಶನೇನ ಕ್ವಚಿದಪಿ ದೃಶ್ಯತ ಇತಿ ಯದಸ್ತಿ ತತ್ಸರ್ವೇ ಗೋಮಹಿಷಾ**

**ದಯೋ ಜಾನಂತಿ ಯಸ್ಮಾತ್ತಸ್ಮಾದೇವ ಕಾರಣಾತ್ ಪಶುಜಾತಾ ಜಾತಃ ಪುತ್ರೋ ವತ್ಸಃ ಸ್ವಕೀಯಾಂ ಮಾತರಂ ಭಗಿನೀಂ ವಾ ಪುತ್ರೋತ್ಪಾದನಾರ್ಥಮಧಿರೋಹತಿ ॥**

ಪುತ್ರನಿಂದ ಉಂಟಾಗುವ ಸುಖವು (ಆನಂದವು) ಅಪುತ್ರನಾದವನಿಗೆ ಈ ಲೋಕದಲ್ಲಿ ಇಲ್ಲವೇಇಲ್ಲ. ಎಂದರೆ ಪುತ್ರ ಸುಖಕ್ಕಿಂತ ಬೇರೆ ಯಾವ ಸುಖವೂ ಹೆಚ್ಚಿನದಲ್ಲ. ಪುತ್ರನಿಂದ ಉಂಟಾಗುವ ಸುಖವೇ ಸುಖವು ಎಂದು ಮನುಷ್ಯರು ಮಾತ್ರವೇ ಅಲ್ಲ ಪಶುಪಕ್ಷ್ಯಾದಿಗಳಿಗೂ ಚೆನ್ನಾಗಿ ತಿಳಿದಿದೆ. ಆದ್ದರಿಂದ ಗೋಮಹಿಷ್ಯಾದಿ ಪ್ರಾಣಿಗಳು ತಮಗೆ ಮರಿಗಳಾಗ ಬೇಕೆಂಬ ಆಸೆಯೊಂದರಿಂದ ಮನುಷ್ಯಾದಿಗಳಂತೆ ತಾಯಿ, ಅಥವಾ ಸಹೋದರಿಯೊಡನೆ ಕೂಡಿದರೆ ನಿಷಿದ್ಧವೆಂದು ಭಾವಿಸುವುದಿಲ್ಲ. ತಮಗೆ ಆ ಕಾಲದಲ್ಲಿ ಸಿಕ್ಕಿದ ಸ್ತ್ರೀಪ್ರಾಣಿಯಲ್ಲಿ (ಅದು ತನ್ನ ತಾಯಿಯಾಗಿರಲಿ, ಸಹೋದರಿಯಾಗಿರಲಿ) ಯಾವ ಭೇದ ವನ್ನೂ ಎಣಿಸದೆ ಅದರೊಡನೆ ಸಂಭೋಗಮಾಡಿ ಮರಿಗಳನ್ನು (ಕರುಗಳನ್ನು) ಪಡೆಯುವವು.

ಏಷ ಪಂಥಾ ಉರುಗಾಯಃ ಸುಶೇವೋ ಯಂ ಪುತ್ರಿಣ ಆಕ್ರಮಂತೇ ವಿಶೋಕಾಃ । ತಂ ಪಶ್ಯಂತಿ ಪಶವೋ ವಯಾಂಸಿ ಚ ತಸ್ಮಾತ್ತೇ ಮಾತ್ರಾಪಿ ಮಿಥುನೀ ಭವಂತಿ ॥

**ದಶಮೀಂ ಗಾಥಾಮಾಹ—ಪುತ್ರಿಣಃ ಪುತ್ರವಂತೋ ದೇವಮನುಷ್ಯಾದಯೋ ವಿಶೋಕಾಃ ಶೋಕರಹಿತಾಃ ಸಂತೋ ಯಂ ಪಂಥಾನಂ ಸುಖಾನುಭವರೂಪಂ ಮಾರ್ಗಮಾಕ್ರಮಂತೇ ಪ್ರಾಪ್ನು-ವಂತ್ಯೇಷ ಪಂಥಾಃ ಪುತ್ರಸುಖಾನುಭವರೂಪೋ ಮಾರ್ಗ ಉರುಗಾಯ ಉರುಭಿರ್ಮಹದ್ಭಿಃ ಶಾಸ್ತ್ರಜ್ಞೈ ರಾಜಾಮಾತ್ಯಾದಿಭಿಶ್ಚ ಗೀಯತೇ। ತಥಾ ಸುಶೇವಃ ಸುಷ್ಠು ಸೇವಿತುಂ ಯೋಗ್ಯಃ ಸುಖಾ-ಧಿಕ್ಯಸ್ಯ ವಿದ್ಯಮಾನತ್ವಾತ್* । ತಂ ಪುತ್ರಸುಖಾನುಭವರೂಪಂ ಪಶವೋ ಗವಾದಯೋ ವಯಾಂಸಿ ಪಕ್ಷಿಣಃ ಸಂಪಶ್ಯಂತಿ ಜಾನಂತಿ। ತಸ್ಮಾತ್ತೇ ಪಶುಪಕ್ಷ್ಯಾದಯಃ ಪುತ್ರಸುಖಾರ್ಥಂ ಮಾತ್ರಾ ಸಹ ಮಿಥುನೀ ಭವಂತಿ ಕಿಂ ಕಿಮುತಾನ್ಯಥಾ ಸ್ತ್ರಿಯಾ ಸಹೇತ್ಯರ್ಥಃ ॥**

ಪುತ್ರಾದಿಗಳನ್ನು ಪಡೆದ ದೇವಮನುಷ್ಯಾದಿಗಳು ಶೋಕರಹಿತರಾಗಿ ಸುಖಾನುಭವಕ್ಕೆ ಬೇಕಾದ ಮಾರ್ಗವನ್ನು ಅನುಸರಿಸಿ ಅತಿಶಯವಾದ ಸುಖವನ್ನು ಪಡೆಯುತ್ತಾರೆ. ಸುಖಪಡುವ ಇಂತಹ ಮಾರ್ಗವನ್ನು ಶಾಸ್ತ್ರಜ್ಞರೂ ಲೌಕಿಕ ವ್ಯವಹಾರಜ್ಞರೂ ಆದ ರಾಜಾಮಾತ್ಯಾದಿ ಪುರುಷರು ಮೆಚ್ಚಿ ಬಹಳವಾಗಿ ಕೊಂಡಾಡುತ್ತಾರೆ ಹಾಗೆಯೇ ಈ ಮಾರ್ಗವು ಸುಖ ಪಡುವುದಕ್ಕೆ ಒಳ್ಳೆಯ ಸಾಧನವಾಗಿರುವುದು. ಪುತ್ರಸುಖಾನುಭವವನ್ನು ಪಶುಗಳೂ ಪಕ್ಷ್ಯಾದಿ ಇತರ ಪ್ರಾಣಿಗಳೂ ಚೆನ್ನಾಗಿ ತಿಳಿದಿರುವವು. ಆದ್ದರಿಂದ ಪಶುಪಕ್ಷ್ಯಾದಿಗಳು ಪುತ್ರೋತ್ಪಾದನೆಗಾಗಿ ಯಾವ ನಿರ್ಬಂಧಕ್ಕೂ ಒಳಗಾಗದೆ ತಮ್ಮ ತಾಯಿ ಯೊಡನೆಯೇ ಸಂಭೋಗವನ್ನು ಮಾಡಿ ಮರಿಗಳನ್ನು ಪಡೆಯುವವು. ಪಶುಪಕ್ಷ್ಯಾದಿಗಳೇ ಪುತ್ರಾಪೇಕ್ಷೆಯಿಂದ ಸಂಭೋಗಾದಿ ಗಳನ್ನು ಮಾಡುವಾಗ ಮನುಷ್ಯರು ಈ ವಿಷಯದಲ್ಲಿ ಆಸಕ್ತರಾಗಿ ತಮ್ಮ ಪತ್ನಿಯರಲ್ಲಿ ಪುತ್ರಾದಿಗಳನ್ನು ಪಡೆಯಬೇಕೆಂದು ಇಚ್ಛಿಸುವುದು ಏನಾಶ್ಚರ್ಯವು ? ಎಂದರೆ ಪುತ್ರಾಪೇಕ್ಷೆಯು ಪಶುಪಕ್ಷ್ಯಾದಿಗಳಿಗೂ ಮನುಷ್ಯರಿಗೂ ಸಮಾನವಾಗಿಯೇ ಇರುವುದು ಎಂದರ್ಥವು.

ಇತಿ ಹಾಸ್ಮಾ ಆಖ್ಯಾಯ ||

ನಾರದೇನೋಕ್ತಾಂ ದಶಮೀಂ ಗಾಥಾಂ ನಿಗಮಯತಿ–ಹಾನೇನೈವ ಪ್ರಕಾರೇಣಾಸ್ಮೈ ತಸ್ಮೈ ಹರಿಶ್ಚಂದ್ರಾಯಾಖ್ಯಾಯೋತ್ತರಮಭಿಧಾಯಾವಸ್ಥಿತ ಇತಿ ಶೇಷಃ ||

ಈ ರೀತಿಯಾಗಿ ನಾರದಮಹರ್ಷಿಯು ಅನೇಕ ಉದಾಹರಣೆಪೂರ್ವಕವಾಗಿ ಹರಿಶ್ಚಂದ್ರರಾಜನು ಕೇಳಿದ ಪ್ರಶ್ನೆಗೆ ಹತ್ತುವಿಧವಾಗಿ ಸಮರ್ಪಕವಾದ ಉತ್ತರವನ್ನು ಹೇಳಿದನು.

---

*English Translation*

**(The story of Sunahsepa)**

---

**(King Harischandra wishes for a son· Stanzas praising the possession of a son.)**

Harischandra, the son of Vedhas, of the Ikshavaku race, was a king who had no son. Though he had hundred wives, they did not give birth to a son. In his house there lived the Rishis Parvata and Narada. Once the king addressed to Narada (the following stanza):

"Since all beings, those endowed with reason (men) as well as those who are without it (beasts) wish for a son, what is the fruit tc be obtained by having a son ? This tell me, O Narada ?"

Narada thus addressed in one stanza, replied in (the following) ten :

1. The father pays a debt in his son, and gains immortality, when he beholds the face of a son living who was born to him

2. The pleasure which a father has in his son, exceeds the enjoyment of all other beings, be they on the earth, or in the f re or in the water.

3. Fathers always overcame great difficulties through a son. (In him) the Self is born out of Self. The son is like a well-provisioned boat, which carries him over.

4. "What is the use of living unwashed,, wearing the goatskin, and beard ? [3] What is the use of performing austerities ? You should wish for a son, O Brahmans !" Thus people talk of them (who forego the married life on account of religious devotion).

5. Food preserves life, clothes protect from cold, gold (golden ornaments) gives beauty, marriages produce wealth in cattle ; the wife is the friend, the daughter object of compassion, but the son shines as his light in the highest heaven :

6. The husband enters the wife (in the shape of seed), and when the seed is changed to an embryo he makes her mother, from whom after having become regenerated, in her, he is born in the tenth month.

7. His wife is only then a real wife (jaya from jan to be born) when he is born in her again. The seed which is placed in her she developes to a being and sets it forth.

8. The Gods and the Rishis endowed her with great beauty. The gods then told to men, this being is destined to produce you again.

9. He who has no child, has no place (no firm footing). This even know the beasts. Thence the son cohabits (among beasts even) with his mother and sister.

10. This is the broad well-trodden path on which those who have sons walk free from sorrows. Beasts and birds know it ; thence they cohabit (even) with their own mothers.

Thus he told.

ಇತಿ ಶ್ರೀ ಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ತ್ರಯಸ್ತ್ರಿಂಶಾಧ್ಯಾಯೇ ಪ್ರಥಮಃ ಖಂಡಃ
ಇಲ್ಲಿಗೆ ಐತರೇಯಬ್ರಾಹ್ಮಣಲ್ಲಿ ಮೂವತ್ತ ಮೂರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು



# ಅಥ ತ್ರಯಸ್ತ್ರಿಂಶೋಧ್ಯಾಯೇ ದ್ವಿತೀಯಃ ಖಂಡಃ

## ಮೂವತ್ತಮೂರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

---

[ಹರಿಶ್ಚಂದ್ರರಾಜನಿಗೆ ಪುತ್ರೋತ್ಪತ್ತಿಯಾಗುವುದು. ವರುಣನು ಪುನಃ ಪುನಃ ಬಂದು ಅವನ ಮಗನನ್ನು ತನಗೆ ಯಜ್ಞದಲ್ಲಿ ಆಹುತಿಯನ್ನಾಗಿ ಕೊಡಬೇಕೆಂದು ನಿರ್ಬಂಧಿಸುವುದು. ಆದರೆ ಹರಿಶ್ಚಂದ್ರನು ಬೇರೆ ಬೇರೆ ಕಾರಣಗಳನ್ನು ಮುಂದೆನೂಡಿ ಯಜ್ಞವನ್ನು ಮುಂದಕ್ಕೆ ಹಾಕಿ ನುಣುಚಿಕೊಳ್ಳುವುದು.]



**ಅಥೈನಮುವಾಚ ವರುಣಂ ರಾಜಾನಮುಪಧಾವ ಪುತ್ರೋ ಮೇ ಜಾಯತಾಂ ತೇನ ತ್ವಾ ಯಜಾ ಇತಿ ॥**

**ಪುತ್ರನಿಮಿತ್ತಲಾಭಪ್ರತಿಪಾದಿಕಾ ನಾರದೋಕ್ತಾ ದಶ ಗಾಥಾ ಉದಾಹೃತ್ಯ ಪುತ್ರಜನ್ಮೋಪಾಯೋಪದೇಶಪರಂ ನಾರದವಾಕ್ಯಮವತಾರಯತಿ—ಅಥ ಪುತ್ರೇಚ್ಛಾನಿಮಿತ್ತಕಥನಾನಂತರಮೇನಂ ಪುತ್ರಾರ್ಥಿನಂ ಹರಿಶ್ಚಂದ್ರಂ ನಾರದ ಉವಾಚ । ಹೇ ಹರಿಶ್ಚಂದ್ರ ವರುಣಂ ರಾಜಾನಮುಪಧಾವ ಪ್ರಾರ್ಥಯಸ್ವ । ಯೇನ ಪ್ರಕಾರೇಣ ನಿಶ್ಚಯಃ ಸೋಽಭಿಧೀಯತೇ । ಹೇ ವರುಣ ತ್ವತ್ಪ್ರಸಾದಾನ್ಮೇ ಪುತ್ರೋ ಜಾಯತಾಂ ತತಸ್ತೇನ ಪುತ್ರೇಣ ತ್ವಾಂ ಯಜೈ ತ್ವಾಮುದ್ದಿಶ್ಯ ಯಜ್ಞಂ ಕರವಾಣೀತಿ ॥**

ರಾಜನಿಗೆ ಪುತ್ರೋತ್ಪತ್ತಿ ನಿಮಿತ್ತವಾಗಿ ನಾರದನು ಹಿಂದೆ ಹೇಳಿದಂತೆ ಪುತ್ರಸಂತಾನದಿಂದ ಲಭಿಸುವ ಸುಖ ಸಂತೋಷಾದಿಗಳನ್ನು ಉದಾಹರಣೆ ಪೂರ್ವಕವಾಗಿ ವಿವರಿಸಿ ಹರಿಶ್ಚಂದ್ರರಾಜನಿಗೆ ಪುತ್ರನು ಹುಟ್ಟಬೇಕಾದರೆ ಏನು ಮಾಡಬೇಕು ಎಂಬ ವಿಷಯವನ್ನು ಉಪದೇಶಿಸುವನು—ಪುತ್ರೇಚ್ಛಾನಿಮಿತ್ತವಾಗಿ ಬಯಸುತ್ತಿರುವ ಹರಿಶ್ಚಂದ್ರರಾಜನನ್ನು ಕುರಿತು ನಾರದನು ಇಂತೆಂದನು—ಎಲೈ ಹರಿಶ್ಚಂದ್ರ ರಾಜನೇ, ನಿನಗೆ ಪುತ್ರನು ಜನಿಸಬೇಕೆಂಬ ಅಪೇಕ್ಷೆ ಇದ್ದಲ್ಲಿ ನಾನು ಹೇಳುವಂತೆ ಮಾಡು. ಏನೆಂದರೆ ನೀನು ವರುಣನೆಂಬ ದೇವತೆಯ ಬಳಿಗೆ ಹೋಗಿ ಅವನ ಮರೆಹೊಕ್ಕು ಈ ಪ್ರಕಾರವಾಗಿ ಪ್ರಾರ್ಥಿಸು. ಎಲೈ ವರುಣನೇ, ನಿನ್ನ ಅನುಗ್ರಹದಿಂದ ನನಗೆ ಪುತ್ರಸಂತಾನವುಂಟಾಗುವಂತೆ ಅನುಗ್ರಹಿಸು. ನನಗೆ ಪುತ್ರನು ಹುಟ್ಟಿದರೆ ಆ ಪುತ್ರನನ್ನೇ ಯಜ್ಞದಲ್ಲಿ ಪಶುವನ್ನಾಗಿ ನಿನಗರ್ಪಿಸಿ ಯಜ್ಞಮಾಡುತ್ತೇನೆ ಎಂದು.

**ತಥೇತಿ ಸ ವರುಣಂ ರಾಜಾನಮುಪಸಸಾರ ಪುತ್ರೋ ಮೇ ಜಾಯತಾಂ ತೇನ ತ್ವಾ ಯಜಾ ಇತಿ ತಥೇತಿ ತಸ್ಯ ಪುತ್ರೋ ಜಜ್ಞೇ ರೋಹಿತೋ-ನಾಮ ॥**

**ಪ್ರಾರ್ಥನಾಪ್ರಕಾರಂ ನಾರದೋಪದೇಶಮುಕ್ತ್ವಾ ಹರಿಶ್ಚಂದ್ರವೃತ್ತಾಂತಂ ದರ್ಶಯತಿ—ನಾರದೋಪದೇಶಮಂಗೀಕೃತ್ಯ ಹರಿಶ್ಚಂದ್ರೋ ವರುಣಮುಪಸಸಾರ ಪ್ರಾರ್ಥಯಾಮಾಸ । ಸ**

**ವರುಣೋಽಪಿತಥಾಸ್ತ್ವಿತಿ ತದೀಯಪುತ್ರೋತ್ಪತ್ತ್ಯೈ ವರಂ ದತ್ತವಾನ್ । ತೇನ ಚ ವರೇಣೋತ್ಪನ್ನಸ್ಯ ರೋಹಿತ ಇತ್ಯೇತನ್ನಾಮಾಭೂತ್॥**

ಈ ರೀತಿ ಮಾಡಿದ ನಾರದನ ಉಪದೇಶವನ್ನು ಸ್ವೀಕರಿಸಿ ಆ ಹರಿಶ್ಚಂದ್ರರಾಜನು ವರುಣದೇವನ ಸಮೀಪಕ್ಕೆ ಹೋಗಿ ಹೀಗೆ ಪ್ರಾರ್ಥಿಸುವನು—ಎಲೈ ವರುಣನೇ ನನಗೆ ಪುತ್ರನಾಗುವಂತೆ ಅನುಗ್ರಹಿಸು. ಆ ಪುತ್ರನನ್ನೇ ಯಜ್ಞದಲ್ಲಿ ಪಶುವನ್ನಾಗಿ ಮಾಡಿ ನಿನಗರ್ಪಿಸುವೆನು ಎಂದನು. ಹಾಗೆಯೇ ಆಗಲೆಂದು ವರುಣನು ಆ ರಾಜನ ಪ್ರಾರ್ಥನೆಯನ್ನಂಗೀಕರಿಸಿ ಅವನಿಗೆ ಪುತ್ರನಾಗುವಂತೆ ವರವನ್ನು ಕೊಟ್ಟನು. ಈ ರೀತಿಯಾಗಿ ವರುಣನ ಪ್ರಸಾದದಿಂದ ಹುಟ್ಟಿದ ಪುತ್ರನಿಗೆ ರೋಹಿತನೆಂದು ಹೆಸರಿಡಲಾಯಿತು.

ತಂ ಹೋವಾಚಾಜನಿ ವೈ ತೇ ಪುತ್ರೋ ಯಜಸ್ವ ಮಾಽನೇನೇತಿ ಸ ಹೋವಾಚ ಯದಾ ವೈ ಪಶುರ್ನಿರ್ದಶೋ ಭವತ್ಯಥ ಸ ಮೇಧ್ಯೋ ಭವತಿ ನಿರ್ದಶೋ ನ್ವಸ್ತ್ವಥ ತ್ವಾ ಯಜಾ ಇತಿ ತಥೇತಿ ॥

**ಅಥ ಬಹುಭಿಃ ಪರ್ಯಾಯೈರ್ವರುಣಸ್ಯೋಕ್ತಿರ್ಹರಿಶ್ಚಂದ್ರಸ್ಯ ಪ್ರತ್ಯುಕ್ತಿಶ್ಚೇತ್ಯುಭಯಂ ಪ್ರತಿಪಾದ್ಯತೇ । ತತ್ರ ಪ್ರಥಮಂ ಪರ್ಯಾಯಂ ದರ್ಶಯತಿ–ತಂ ಹರಿಶ್ಚಂದ್ರಂ ವರುಣ ಉವಾಚ । ಹೇ ಹರಿಶ್ಚಂದ್ರ ತೇ ಪುತ್ರೋಽಜನಿ ವಾ ಉತ್ಪನ್ನ ಏವಾನೇನ ಪುತ್ರೇಣ ಮಾಮುದ್ದಿಶ್ಯ ಯಾಗಂ ಕುರ್ವಿತಿ । ಏವಂ ವರುಣೇನೋಕ್ತೋ ಹರಿಶ್ಚಂದ್ರಃ ಪುನಃ ಪ್ರತ್ಯುವಾಚ । ಯಾಗಾರ್ಹಃ ಪಶುಃ ಯದಾ ನಿರ್ದಶೋ ಭವತಿ ತದಾ ಸ ಪಶುರ್ಮೇಧ್ಯೋ ಯಾಗಯೋಗ್ಯೋ ಭವತಿ । ನಿರ್ಗತಾನ್ಯಶೌಚದಿನಾನಿ ದಶಸಂಖ್ಯಾಕಾನಿ ಯಸ್ಮಾತ್ಪಶೋಃ ಸೋಽಯಂ ನಿರ್ದಶಃ । ತಸ್ಮಾದಯಂ ನು ಕ್ಷಿಪ್ರಂ ನಿರ್ದಶೋಽಸ್ತು । ಅಥಾನಂತರಂ ತ್ವಾ ಪ್ರತ್ಯಹಂ ಯಜಾ ಇತ್ಯೇತದ್ವಾಕ್ಯಂ ವರುಣಸ್ತಥಾಽಸ್ತ್ವಿ-ತ್ಯಂಗೀಚಕಾರ ॥**

ವರುಣನಿಗೂ ಹರಿಶ್ಚಂದ್ರ ರಾಜನಿಗೂ ನಡೆದ ಸಂವಾದಗಳನ್ನು ಇಲ್ಲಿ ಒಂದೊಂದಾಗಿ ತಿಳಿಸುವರು ಮೊದಲನೆಯ ಸಂಭಾಷಣಕ್ರಮವೇನೆಂದರೆ—ಹರಿಶ್ಚಂದ್ರ ರಾಜನಿಗೆ ಪುತ್ರೋತ್ಪತ್ತಿಯಾದನಂತರ ವರುಣನು ಅವನ ಸಮೀಪಕ್ಕೆ ಬಂದು—ಎಲೈ ಹರಿಶ್ಚಂದ್ರನೇ, ನನ್ನ ಅನುಗ್ರಹದಿಂದ ನಿನಗೆ ಪುತ್ರನು ಜನಿಸಿರುವನು. ಆದ್ದರಿಂದ ನೀನು ಹಿಂದೆ ವಾಗ್ದಾನಮಾಡಿದಂತೆ ಆ ಪುತ್ರನನ್ನು ನನಗೆ ಯಜ್ಞದಲ್ಲಿ (ಪಶುರೂಪವಾಗಿ) ಅರ್ಪಿಸು ಎಂದನು. ವರುಣನ ಈ ಮಾತನ್ನು ಕೇಳಿ ಹರಿಶ್ಚಂದ್ರನು ಇಂತು ನುಡಿದನು—ಎಲೈ ವರುಣನೇ, ನೀನು ಹೇಳುವುದು ಯುಕ್ತವು. ಯಜ್ಞದಲ್ಲಿ ಅರ್ಪಿಸುವ ಪಶುವಿಗೆ ಅದು ಹುಟ್ಟಿ ಹತ್ತು ದಿನಗಳು ಕಳೆಯುವವರೆಗೂ ಪುತ್ರನಿಗೂ ಅವನ ತಂದೆತಾಯಿಗಳಿಗೂ ಜಾತಾಶೌಚ (ಪುರುಡು) ಇರುವುದು. ಆ ಕಾಲದಲ್ಲಿ ಈ ಪುತ್ರನು ಯಜ್ಞಾರ್ಹನಾಗುವುದಿಲ್ಲ. ಆದ್ದರಿಂದ ಹತ್ತು ದಿನಗಳು ಕಳೆದು ಜಾತಾಶೌಚವು ಕೊನೆಗೊಳ್ಳಲಿ. ಅನಂತರ ಈ ಪುತ್ರನನ್ನು ನಿನಗೆ ಅರ್ಪಿಸಿ ಯಜ್ಞಮಾಡುವೆನು ಎಂದು ಹೇಳಲು ವರುಣನು ಹಾಗೆಯೇ ಆಗಲೆಂದೊಪ್ಪಿ ಹೊರಟು ಹೋದನು.

ಸ ಹ ನಿರ್ದಶ ಆಸ ತಂ ಹೋವಾಚ ನಿರ್ದಶೋ ನ್ವಭೂದ್ಯಜಸ್ವ ಮಾಽ-ನೇನೇತಿ ಸ ಹೋವಾಚ ಯದಾ ವೈ ಪಶೋರ್ದಂತಾ ಜಾಯಂತೇಽಥ

**ಸ ಮೇಧ್ಯೋ ಭವತಿ ದಂತಾ ನ್ವಸ್ಯ ಜಾಯಂತಾ ಮಥ ತ್ವಾ ಯಜಾ ಇತಿ ||**

ದ್ವಿತೀಯಮುಕ್ತಿಪ್ರತ್ಯುಕ್ತಿಪರ್ಯಾಯಂ ದರ್ಶಯತಿ— ದಶದಿನಾಶೌಚಾಪಗಮೇ ಶುದ್ಧ-ತ್ವಾದ್ಯಥಾ ಯಾಗಯೋಗ್ಯತ್ವಂ ತಥಾ ದಂತೋತ್ಪನ್ನತ್ವಾದವಯವಸಂಪೂರ್ತ್ಯಾ ಯಾಗಯೋಗ್ಯ-ತ್ವಮಿತ್ಯಭಿಪ್ರಾಯಃ | ಸ್ಪಷ್ಟಮನ್ಯತ್ ||

ಹತ್ತು ದಿನಗಳು ಕಳೆದನಂತರ ವರುಣನು ಪುನಃ ರಾಜನಲ್ಲಿಗೆ ಬಂದು—ಎಲೈ ಹರಿಶ್ಚಂದ್ರರಾಜನೇ, ನೀನು ಹಿಂದೆ ಹೇಳಿದ ಹತ್ತು ದಿನಗಳು ಕಳೆದುಹೋದುವು. ಪುತ್ರನು ಜಾತಾಶೌಚದಿಂದ ಮುಕ್ತನಾಗಿ ಯಜ್ಞಾರ್ಹನಾಗಿರುವನು. ಆದ್ದರಿಂದ ನೀನು ಈಗ ನಿನ್ನ ಪುತ್ರನನ್ನರ್ಪಿಸಿ ಯಜ್ಞಮಾಡು ಎಂದು ಹೇಳಲು ರಾಜನು ವರುಣನನ್ನು ಕುರಿತು, ಎಲೈ ವರುಣದೇವನೇ ಹಿಂದೆ ಹೇಳಿದಂತೆ ಈ ಪುತ್ರನು ಹತ್ತುದಿನಗಳ ಜಾತಾಶೌಚ ದೋಷದಿಂದ ಮುಕ್ತನಾಗಿದ್ದಾನೆ. ಆದರೂ ಈ ಶಿಶುವಿಗೆ ಹಲ್ಲುಗಳು ಇನ್ನೂ ಹುಟ್ಟಲ್ಲ. ಆದ್ದರಿಂದ ಶಿಶುವಿನ ಅವಯವಾದಿಗಳೆಲ್ಲವೂ ಪೂರ್ತಿಯಾದಂತಾಗಲಿಲ್ಲ. ಅಪೂರ್ಣವಾಗಿ ಮಾತ್ರ ಬೆಳೆದು ಪಶುವು ಯಜ್ಞಾರ್ಹವಲ್ಲ ಆದ್ದರಿಂದ ಪುತ್ರನಿಗೆ ಹಲ್ಲುಗಳು ಪೂರ್ಣವಾಗಿ ಹುಟ್ಟಲಿ. ಅನಂತರ ಪೂರ್ಣಾವಯವ ಸಹಿತನಾದ ಅವನನ್ನು ನಿನಗರ್ಪಿಸಿ ಯಜ್ಞಮಾಡುವೆನು ಎಂದು ಹೇಳಿದನು. ರಾಜನ ಪ್ರತ್ಯುತ್ತರವನ್ನು ಕೇಳಿ ವರುಣನು ಹಾಗೆಯೇ ಆಗಲೆಂದು ಹೇಳಿ ಹೊರಟುಹೋದನು.

**ತಸ್ಯ ಹ ದಂತಾ ಜಜ್ಞಿರೇ ತಂ ಹೋವಾಚಾಜ್ಞತ ವಾ ಅಸ್ಯ ದಂತಾ ಯಜಸ್ವ ಮಾಽನೇನೇತಿ ಸ ಹೋವಾಚ ಯದಾ ವೈ ಪಶೋರ್ದಂತಾಃ ಪದ್ಯಂತೇಽಥ ಸ ಮೇಧ್ಯೋ ಭವತಿ ದಂತಾನ್ವಸ್ಯ ಪದ್ಯಂತಾಮಥ ತ್ವಾ ಯಜಾ ಇತಿ ತಥೇತಿ ||**

ತೃತೀಯಂ ಪರ್ಯಾಯಂ ದರ್ಶಯತಿ— ಅಜ್ಞತ ವೈ ಜಾತಾ ಏವ ಪದ್ಯಂತೇ ಪತಂತಿ | ಪ್ರಥಮೋತ್ಪನ್ನಾನಾಂ ದಂತಾನಾಮಸ್ಥಾಯಿತ್ವೇನ ಮುಖ್ಯಪಶ್ವವಯವತ್ವಾಭಾವಾತ್ತತ್ಪಾತೇ ಸತಿ ಪಶೋರ್ಮೇಧ್ಯತ್ವಮ್ ||

ಅನಂತರ ಕೆಲವು ಕಾಲದ ಮೇಲೆ ರಾಜನನ್ನು ಕುರಿತು–ಎಲೈ ರಾಜನೇ, ನಿನ್ನ ಪುತ್ರನಾದ ರೋಹಿತನಿಗೆ ಹುಲ್ಲುಗಳು ಹುಟ್ಟಿವೆ. ಈಗ ಅವನು ಸಂಪೂರ್ಣಾವಯವಯುಕ್ತನಾಗಿ ಯಜ್ಞಾರ್ಹನಾಗಿದ್ದಾನೆ. ಆದ್ದರಿಂದ ನನಗೆ ಅವನನ್ನರ್ಪಿಸಿ ಯಜ್ಞಮಾಡು ಎನ್ನಲು, ಆಗ ಹರಿಶ್ಚಂದ್ರನು ವರುಣನನ್ನುದ್ದೇಶಿಸಿ—ಎಲೈ ವರುಣನೇ, ನನ್ನ ಪುತ್ರನಿಗೆ ಹುಟ್ಟಿರುವ ಈ ಹಲ್ಲುಗಳು ಗಟ್ಟಿಯಾಗಿಲ್ಲವಾದ್ದರಿಂದ ಅವು ಸ್ವಲ್ಪ ಕಾಲದಲ್ಲಿಯೇ ಬಿದ್ದು ಹೋಗುವವು. ದಂತಪಾತವಾದನಂತರ ಅವನನ್ನು ಅರ್ಪಿಸಿ ಯಜ್ಞಮಾಡುತ್ತೇನೆ ಎಂದನು. ರಾಜನ ಮಾತನ್ನು ಅಂಗೀಕರಿಸಿ ಹಾಗೆಯೇ ಆಗಲೆಂದು ಹೇಳಿ ಹೊರಟು ಹೋದನು.

**ತಸ್ಯ ಹ ದಂತಾಃ ಪೇದಿರೇ ತಂ ಹೋವಾಚಾಪತ್ಸತ ವಾ ಅಸ್ಯ ದಂತಾ ಯಜಸ್ವ ಮಾಽನೇನೇತಿ ಸ ಹೋವಾಚ ಯದಾ ವೈ ಪಶೋರ್ದಂತಾಃ**

**ಪುನರ್ಜಾಯಂತೇಽಥ ಸ ಮೇಧ್ಯೋ ಭವತಿ ದಂತಾ ನ್ವಸ್ಯ ಪುನರ್ಜಾ-
ಯಂತಾಮಥ ತ್ವಾ ಯಜಾ ಇತಿ ತಥೇತಿ ॥**

ಚತುರ್ಥಂ ಪರ್ಯಾಯಂ ದರ್ಶಯತಿ—ಅಪತ್ಸತ ವೈ ಪತಿತಾಃ । ಪುನರುತ್ಪನ್ನಾನಾಂ ದಂತಾ-
ನಾಂ ಸ್ಥಿರತ್ವೇನ ಸಂಪೂರ್ಣಾವಯವತ್ವಾತ್ ಪಶೋರ್ಮೇಧ್ಯತ್ವಮ್ ॥

ಅನಂತರ ಕೆಲವು ಕಾಲದ ಮೇಲೆ ವರುಣನು ಬಂದು ರಾಜನೊಡನೆ ಇಂತೆಂದನು. ನೀನು ಹಿಂದೆ ಹೇಳಿದಂತೆ ಯಜ್ಞಪಶುವಿನ ಮೊದಲು ಹುಟ್ಟಿದ ಹಲ್ಲುಗಳು ಬೀಳುವವರೆಗೂ ಆ ಪಶುವು ಯಜ್ಞಾರ್ಹನಾಗುವುದಿಲ್ಲ ಹಲ್ಲುಗಳು ಬಿದ್ದನಂತರ ಪುತ್ರನನ್ನರ್ಪಿಸಿ ಯಜ್ಞಮಾಡುತ್ತೇನೆ ಎಂದು ಹೇಳಿದೆಯಷ್ಟೆ. ಆ ನಿನ್ನ ಪುತ್ರನಿಗೆ ಹಲ್ಲುಗಳೆಲ್ಲಾ ಬಿದ್ದುಹೋಗುತ್ತಾ ಇವೆ. ಆದ್ದರಿಂದ ನಿನ್ನ ಮಾತಿನಂತೆ ಪುತ್ರನನ್ನು ನನಗರ್ಪಿಸಿ ಯಜ್ಞಮಾಡು ಎಂದನು. ರಾಜನು ಅದಕ್ಕೆ ಪ್ರತ್ಯುತ್ತರವಾಗಿ–ಎಲೈ ವರುಣನೇ ಪುತ್ರನ ಹಲ್ಲುಗಳೇನೋ ಬೀಳುತ್ತಿವೆ. ಅವು ಸ್ಥಿರವಾದ ಹಲ್ಲುಗಳಲ್ಲ. ಅವು ಪೂರ್ತಿಯಾಗಿ ಬಿದ್ದುಹೋದನಂತರ ಘಟ್ಟಿಯಾದ ಹಲ್ಲುಗಳು ಪುನಃ ಹುಟ್ಟುತ್ತವೆ. ಆರೀತಿ ಹೊಸದಾಗಿ ಸ್ಥಿರವಾದ ಹಲ್ಲುಗಳು ಹುಟ್ಟಿದನಂತರ ಪುತ್ರನನ್ನು ನಿನಗರ್ಪಿಸಿ ಯಜ್ಞಮಾಡುವೆನು ಎಂದು ಹೇಳಲು ರಾಜನ ಮಾತನ್ನಂಗೀಕರಿಸಿ ಹಾಗೆಯೇ ಆಗಲೆಂದೊಪ್ಪಿ ವರುಣನು ಹೊರಟು ಹೋದನು.

**ತಸ್ಯ ಹ ದಂತಾಃ ಪುನರ್ಜಜ್ಞಿರೇ ತಂ ಹೋವಾಚಾಜ್ಞತ ವಾ ಅಸ್ಯ
ಪುನರ್ದಂತಾ ಯಜಸ್ವ ಮಾಽನೇನೇತಿ ಸ ಹೋವಾಚ ಯದಾ ವೈ
ಕ್ಷತ್ರಿಯಃ ಸಾಂನಾಹುಕೋ ಭವತ್ಯಥ ಸ ಮೇಧ್ಯೋ ಭವತಿ ಸಂ-
ನಾಹಂ ತು ಪ್ರಾಪ್ನೋತ್ವಥ ತ್ವಾ ಯಜಾ ಇತಿ ತಥೇತಿ ॥**

ಪಂಚಮಂ ಪರ್ಯಾಯಂ ದರ್ಶಯತಿ— ಅಜ್ಞತ ವೈ ಜಾತಾ ಏವ । ಪಶ್ವಂತರಸ್ಯ ಪುನರ್ದಂ-
ತೋತ್ಪತ್ತಿಮಾತ್ರೇಣ ಮೇಧ್ಯತ್ವೇಽಪ್ಯಸ್ಯ ಪಶೋಃ ಕ್ಷತ್ರಿಯತ್ವಾತ್ ಸ್ವಜಾತ್ಯುಚಿತಧನುರ್ಬಾಣಕವ-
ಚಾದಿಸಂನಾಹಶೀಲಿತ್ವೇ ಸತಿ ಜಾತ್ಯುಚಿತವ್ಯಾಪಾರಸಂಪೂರ್ತ್ಯಾ ಮೇಧ್ಯತ್ವಂ ತಸ್ಮಾನ್ನು ಕ್ಷಿಪ್ರಮೇ-
ವಾಸೌ ಸಂನಾಹಂ ಪ್ರಾಪ್ನೋತ್ವನಂತರಮೇವ ಯಜಾ ಇತ್ಯುಕ್ತಂ ವರುಣೋಂಗೀಚಕಾರ ॥

ಅನಂತರ ಕೆಲವು ಕಾಲದಮೇಲೆ ವರುಣನು ಬಂದು–ಎಲೈ ರಾಜನೇ ನಿನ್ನ ಪುತ್ರನಿಗೆ ಮೊದಲು ಬಿದ್ದುಹೋದ ಹಲ್ಲುಗಳೆಲ್ಲವೂ ಹೊಸದಾಗಿ ಈಗ ಹುಟ್ಟಿರುವವು. ಆದ್ದರಿಂದ ಆ ನಿನ್ನ ಪುತ್ರನನ್ನು ನನಗೆ ಅರ್ಪಿಸಿ ಯಜ್ಞಮಾಡು ಎನ್ನಲು ರಾಜನು—ಎಲೈ ವರುಣನೇ ಪುತ್ರನಿಗೆ ಯಜ್ಞಪಶುವಿಗೆ ಹಿಂದಿದ್ದ ಹಲ್ಲುಗಳು ಬಿದ್ದುಹೋಗಿ ಹೊಸದಾಗಿ ಹುಟ್ಟಿರುವುದೇನೋ ನಿಜವು ಆದರೆ ಕ್ಷತ್ರಿಯನಾದವನಿಗೆ ಸ್ವಜಾತಿಗೆ ಉಚಿತವಾದ ಧನುರ್ಬಾಣಕವಚಾದಿ ಸಂನಾಹರೂಪವಾದ ಸಂಸ್ಕಾರವು ನಡೆಯಬೇಕು. ಆ ವಿಧವಾದ ಸಂಸ್ಕಾರವಾಗುವವರೆಗೂ ಕ್ಷತ್ರಿಯನು ಯಜ್ಞಾರ್ಹನಾಗುವುದಿಲ್ಲ. ಆದ್ದರಿಂದ ಸಂಸ್ಕಾರಾನಂತರ ಪುತ್ರನನ್ನು ನಿನಗರ್ಪಿಸಿ ಯಜ್ಞಮಾಡುವೆನು ಎಂದು ಹೇಳಲು ವರುಣನು ಅವನ ಮಾತಿಗೊಪ್ಪಿ ಹೊರಟುಹೋದನು.

**ಸ ಹ ಸಂನಾಹಂ ಪ್ರಾಪತ್ತಂ ಹೋವಾಚ ಸಂನಾಹಂ ನು ಪ್ರಾಪ್ನೋದ್ಯ-ಜಸ್ವ ಮಾನೇನೇತಿ ಸ ತಥೇತ್ಯುಕ್ತ್ವಾ ಪುತ್ರಮಾಮಂತ್ರಯಾಮಾಸ ತತಾಯಂ ವೈ ಮಹ್ಯಂ ತ್ವಾಮದದಾದ್ಧಂತ ತ್ವಯಾಽಹಮಿಮಂ ಯಜಾ ಇತಿ ||**

ಷಷ್ಠಂ ಪರ್ಯಾಯಂ ದರ್ಶಯತಿ—ಸಂನಾಹಪ್ರಾಪ್ತೇರೂರ್ಧ್ವಂ ಸ ಹರಿಶ್ಚಂದ್ರೋ ವರುಣೋ-ಕ್ತಿಮಂಗೀಕೃತ್ಯ ಪುತ್ರಮಾಮಂತ್ರ್ಯೈವಮುವಾಚ । ಉಪಲಾಲನಾರ್ಥಂ ಪುತ್ರೇ ಪಿತೃವಾಚಿತತ-ಶಬ್ದಪ್ರಯೋಗಃ । ಹೇ ತತ ಹೇ ಪುತ್ರಾಯಮೇವ ವರುಣೋ ಮಹ್ಯಂ ತ್ವಾಂ ಪುತ್ರವರೇಣ ದತ್ತವಾನ್ ಹಂತ ದುಷ್ಟೋಽಹಮಿಮಂ ವರುಣಂ ಯತ್ತ್ವಯಾ ಪುತ್ರೇಣ ಯಜ್ಞೈ ಯಾಗರೂಪಾಂ ಪೂಜಾಂ ಕರವಾಣೀತಿ ಹರಿಶ್ಚಂದ್ರಸ್ಯೋಕ್ತಿಃ ||

ಪುತ್ರನಿಗೆ ಕ್ಷತ್ರಿಯಯೋಗ್ಯವಾದ ಸಂನಾಹಸಂಸ್ಕಾರಾನಂತರ ಆ ಹರಿಶ್ಚಂದ್ರರಾಜನು ವರುಣನ ಮಾತಿನಂತೆ ನಡೆಯಬೇಕೆಂದುದ್ದೇಶಿಸಿ ತನ್ನ ಪುತ್ರನಾದ ರೋಹಿತನನ್ನು ಬರುವಂತೆ ಹೇಳಿ ಕಳುಹಿಸಿ ಆವನು ಬಂದ ನಂತರ—ಎಲೈ ಪುತ್ರನೇ ಹಿಂದೆ ವರುಣನು ನಿನ್ನನ್ನು ನನಗೆ ಪುತ್ರನಾಗುನಂತೆ ವರವನ್ನು ಕೊಟ್ಟಪ್ರಕಾರ ನೀನು ನನಗೆ ಪುತ್ರನಾಗಿ ಜನಿಸಿದೆ. ಆದರೆ ನಾನು ದುಷ್ಟನು. ಏಕೆಂದರೆ ನಾನು ವರುಣನಿಂದ ವರವನ್ನು ಪ್ರಾರ್ಥಿಸಿದಾಗ ನನಗೆ ಹುಟ್ಟುವ ಪುತ್ರನನ್ನು ಯಜ್ಞದಲ್ಲಿ ಪಶುರೂಪದಿಂದ ನಿನಗರ್ಪಿಸುವೆನು ಎಂದು ವಚನ ಕೊಟ್ಟಿರುವೆನು. ಆದ್ದರಿಂದ ಈಗ ನಿನ್ನನ್ನು ಯಜ್ಞಪಶುವನ್ನಾಗಿ ವರುಣದೇವನಿಗೆ ಅರ್ಪಿಸಬೇಕಾಗಿರುವುದು ಎಂದನು.

**ಸ ಹ ನೇತ್ಯುಕ್ತ್ವಾ ಧನುರಾದಾಯಾರಣ್ಯಮುಪಾತಸ್ಥೌ ಸ ಸಂವತ್ಸರ-ಮರಣ್ಯೇ ಚಚಾರ ||**

ಅಥ ರೋಹಿತನಾಮ್ನಃ ಪುತ್ರಸ್ಯ ಕೃತ್ಯಂ ದರ್ಶಯತಿ—ಸಹ ಸ ಖಲು ರೋಹಿತಾಖ್ಯಃ ಪುತ್ರಃ ಪಿತುರ್ವಾಕ್ಯಂ ನಿಷಿಧ್ಯಃ ಸ್ವರಕ್ಷಣಾರ್ಥಂ ಧನುಃ ಸ್ವೀಕೃತ್ಯಾರಣ್ಯಂ ಪ್ರತ್ಯುಪಗತೋಽಭೂತ್ । ಕಸ್ಮಿಂಶ್ಚಿದರಣ್ಯೇ ನೈರಂತರ್ಯೇಣ ಸ ರೋಹಿತಃ ಸಂವತ್ಸರಂ ಚಚಾರೇತಿ ||

ಮೇಲೆ ಹೇಳಿದ ಪಿತೃವಿನ ಮಾತನ್ನು ಕೇಳಿ ರೋಹಿತನೆಂಬ ಆ ಪುತ್ರನು ತನ್ನ ತಂದೆಯ ಮಾತನ್ನು ತಿರಸ್ಕರಿಸಿ ಇಲ್ಲಿ ಇದ್ದರೆ ಅಪಾಯವುಂಟಾಗಬಹುದೆಂದು ಮನಸ್ಸಿನಲ್ಲಿ ಭಾವಿಸಿ ತನ್ನ ಸುರಕ್ಷತೆಗಾಗಿ ತನ್ನ ಬಿಲ್ಲುಬಾಣಗಳನ್ನು ತೆಗೆದುಕೊಂಡು ಅರಣ್ಯಕ್ಕೆ ಹೊರಟುಹೋದನು. ಆ ಅರಣ್ಯದಲ್ಲಿ ಆ ರೋಹಿತನೆಂಬ ರಾಜಪುತ್ರನು ಒಂದು ವರ್ಷ ಪರ್ಯಂತರ ಅಲೆದಾಡುತ್ತಿದ್ದನು.



*English Translation*

**(A son is boan to Harischandra. Varuna repeatedly requests the King to sacrifice his son to him ; but the sacri- fice is under different pretences always put off by the King.)**

Narada then told him, "Go and beg of Varuna the king, that he might favour you with the birth of a son (promising him at the same time) to sacrifice to him this son when born." He went to Varuna the king, praying, "Let a son be born to me ; I will sacrifiee him to thee." Then a son, Rohita by name, was born to him. Varuna said to him. "A son is born to thee, sacrifice him to me." Harischandra said, "An animal is fit for being sacrificed,, when it is more than ten days old. Let him reach this age, then I will sacrifice him to thee. After Rohita had passed the age of ten days, Varuna said to him, "He is now past ten days, sacrifice him to me. Harischandra answered, "An animal is fit for being sacrificed when its teeth come. Let his teeth come, I will sacrifice him to thee." After his teeth had come,[7] Varuna said to Haris- chandra, "His teeth have now come, sacrifice him to me." He answered, An animal is fit for being sacrificed when its teeth fall out. Let his teeth fall out, then I will sacrifice him to thee." His teeth fell out. He then said, "His teeth are falling out, sacrifice him to me." He said, "An animal is fit for being sacrificed when its teeth have come again. Let his teeth come again, than I will sacrifice him to thee." His teeth come again. Varuna said, "His teeth have now come again, sacrifice him to me." He answered "A man of the warrior caste is fit for being sacrificed only after having received his full armour. Let him receive his full armour, then I will sacrifice him to thee. He then was invested with the armour. Varuna then said "He has now received the armour, sacrifice him to me." After haviag thus spoken, he called his son, and told him, "Well, my dear, to him who gave thee unto me, I will sacri-

fice thee now." But the son said, "No, no, took his bow and absconded to the wilderness, where he was roaming about for a year.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ತ್ರಯಸ್ತ್ರಿಂಶಾಧ್ಯಾಯೇ ದ್ವಿತೀಯಃ ಖಂಡಃ
ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂವತ್ತ ಮೂರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು

## ಅಥ ತ್ರಯಸ್ತ್ರಿಂಶಾಧ್ಯಾಯೇ ತೃತೀಯಃ ಖಂಡಃ

### ಮೂವತ್ತಮೂರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

[ರೋಹಿತನು ನಿಷ್ಪ್ರಯೋಜಕನಾಗಿ ಆರು ವರ್ಷಗಳ ಕಾಲ ಕಾಡಿನಲ್ಲಿ ಅಲೆದುದು. ಅನಂತರ ತನಗೆ ಬದಲಾಗಿ ವರುಣನಿಗೆ ಆಹುತಿಕೊಡುವುದಕ್ಕಾಗಿ ಶುನಃಶೇಪನೆಂಬ ಒಬ್ಬ ಬ್ರಾಹ್ಮಣಪುತ್ರನನ್ನು ಅವನ - ತಂದೆತಾಯಿಗಳಿಂದ ಕ್ರಯವಾಗಿ ಪಡೆದುದು.]

---

**ಅಥ ಹೈಕ್ಷ್ವಾಕಂ ವರುಣೋ ಜಗ್ರಾಹ ತಸ್ಯ ಹೋದರಂ ಜಜ್ಞೇ ತದು ಹ ರೋಹಿತಃ ಶುಶ್ರಾವ ಸೋಽರಣ್ಯಾದ್ಗ್ರಾಮಮೇಯಾಯ ತಮಿಂದ್ರಃ ಪುರುಷರೂಪೇಣ ಪರ್ಯೇತ್ಯೋವಾಚ। ನಾನಾಶ್ರಾಂತಾಯ ಶ್ರೀರ-ಸ್ತೀತಿ ರೋಹಿತ ಶುಶ್ರುಮ। ಪಾಪೋ ನೃಷದ್ವರೋ ಜನ ಇಂದ್ರ ಇಚ್ಚರತಃ ಸಖಾ ಚರೈವೇತಿ ॥**

ರೋಹಿತಸ್ಯಾರಣ್ಯೇ ಸಂವತ್ಸರಚರಣಾನಂತರಂ(ರ)ಭಾವಿನಂ ಹರಿಶ್ಚಂದ್ರಾದೀನಾಂ ವೃತ್ತಾಂತಂ ದರ್ಶಯತಿ—ಅಥ ರೋಹಿತಸ್ಯಾರಣ್ಯೇ ಸಂವತ್ಸರವಾಸಾನಂತರಮೈಕ್ಷ್ವಾಕಮಿಕ್ಷ್ವಾಕುವಂಶೋ-ತ್ಪನ್ನಂ ಹರಿಶ್ಚಂದ್ರಂ ದೇವೋ ರೋಗರೂಪೇಣ ಜಗ್ರಾಹ। ವರುಣೇನ ಗೃಹೀತಸ್ಯ ಹರಿಶ್ಚಂದ್ರ-ಸ್ಯೋದರಂ ಜಜ್ಞೇ ಜಲೇನ ಪೂರಿತಮುಚ್ಛೂನಂ ಮಹೋದರನಾಮಕಂ ರೋಗ ಸ್ವರೂಪ-ಮುತ್ಪನ್ನಮ್। ತದು ಹ ತದಪಿ ಸರ್ವಮರಣ್ಯೇ ಸ್ಥಿತೋ ರೋಹಿತಃ ಪುತ್ರೋ ಮನುಷ್ಯಮುಖಾಚ್ಛು-ಶ್ರಾವ। ಶ್ರುತ್ವಾ ಸ ರೋಹಿತಃ ಪಿತರಂ ದ್ರಷ್ಟುಮರಣ್ಯಾದ್ಗ್ರಾಮಂ ಪ್ರತ್ಯಾಜಗಾಮ। ಆಗಚ್ಛಂತಂ ರೋಹಿತಂ ಮಾರ್ಗಮಧ್ಯ ಇಂದ್ರಃ ಕೇನಚಿದ್ಬ್ರಾಹ್ಮಣಪುರುಷರೂಪೇಣ ಪ್ರಾಪ್ಯೇದಮುಕ್ತವಾನ್। ಆ ಸಮಂತಾಚ್ಛ್ರಾಂತ ಆಶ್ರಾಂತಃ ಸರ್ವತ್ರ ಪರ್ಯಟನೇನ ಶ್ರಾಂತಿಂ ಪ್ರಾಪ್ತಸ್ತದ್ವಿಪರೀತೋಽನಾ-

ಶ್ರಾಂತಾ ಏಕತ್ರೈವ ನಿವಾಸಶೀಲಸ್ತಾದೃಶಾಯ ತಥಾವಿಧಸ್ಯ ಪುರುಷಸ್ಯ ಶ್ರೀರ್ಬಹುವಿಧಾ ಸಂಪನ್ನಾಸ್ತಿ ಯದ್ವಾ ನಾನೇತಿ ಪದಚ್ಛೇದಃ । ಶ್ರಾಂತಾಯ ಸರ್ವತ್ರ ಪರ್ಯಟನೇನ ಶ್ರಾಂತಸ್ಯ ನಾನಾ ಶ್ರೀರ್ಬಹುವಿಧಾ ಸಂಪದಸ್ತೀತ್ಯನೇನ ಪ್ರಕಾರೇಣ ರೋಹಿತ ವಯಂ ನೀತಿಕುಶಲಾನಾಂ ಪುರುಷಾಣಾಂ ಮುಖಾಚ್ಛುಶ್ರುಮ । ವರೋಜನೋ ವಿದ್ಯಾದಿಭಿಃ ಶ್ರೇಷ್ಠೋಽಪಿ ಪುರುಷೋ ನೃಷತ್ಪಾಪೋ ನೃಷು ಮನುಷ್ಯೇಷು ಸೀದತೀತಿ ನೃಷತ್ । ಶ್ರೇಷ್ಠೋಽಪಿ ಬಂಧುಗೃಹೇಷು ಸರ್ವದಾಽವಸ್ಥಿತಸ್ತೈರವಜ್ಞಾತಃ ಪಾಪಸ್ತುಚ್ಛೋ ಭವೇತ್ । ಅತಸ್ತವ ಪಿತೃಗೃಹೇ ವಾಸೋ ನ ಯುಕ್ತಃ । ನ ಚಾರಣ್ಯೇ ಚರತೋ ಮಮ ಸಹಾಯೋ ನಾಸ್ತೀತಿ ಶಂಕನೀಯಮ್ । ಇಂದ್ರ ಏವ ಪರಮೇಶ್ವರ ಏವ ಚರತಸ್ತವ ಸಖಾ ಭವಿಷ್ಯತಿ। ತಸ್ಮಾಚ್ಚರೈವ ಸರ್ವಥಾರಣ್ಯೇ ಚರಸ್ವೇತ್ಯುವಾಚ । ಏವಂ ಬಹುಷ್ವಪಿ ಪರ್ಯಾಯೇಷು ದ್ರಷ್ಟವ್ಯಮ್ ॥

ಹಿಂದೆ ಹೇಳಿದಂತೆ ರೋಹಿತನು ಪ್ರಾಣಭಯದಿಂದ ಅರಣ್ಯವನ್ನು ಪ್ರವೇಶಿಸಿ ಅಲ್ಲಿ ಒಂದು ವರ್ಷಪರ್ಯಂತರವೂ ಸಂಚರಿಸುತ್ತಲಿದ್ದನು. ಇತ್ತ ರೋಹಿತನ ತಂದೆಯಾದ ಹರಿಶ್ಚಂದ್ರನು ಏನು ಮಾಡುತ್ತಿದ್ದನೆಂಬುದನ್ನೂ ಅವನ ವೃತ್ತಾಂತವನ್ನೂ ವಿವರಿಸುವರು—ರೋಹಿತನು ಧನುರ್ಬಾಣಗಳನ್ನು ತೆಗೆದುಕೊಂಡು ಅರಣ್ಯಕ್ಕೆ ಹೋಗಿ ಅಲ್ಲಿ ಸಂಚರಿಸುತ್ತಲಿದ್ದನೆಂದು ಹಿಂದೆಯೇ ಹೇಳಲಾಗಿದೆ. ಇವನ ತಂದೆಯಾದ ಹರಿಶ್ಚಂದ್ರ ರಾಜನು ವರುಣದೇವನಿಗೆ ತನ್ನ ವಾಗ್ದಾನವನ್ನು ನೆರವೇರಿಸಲು ಸಾಧ್ಯವಾಗದ್ದರಿಂದ ವರುಣನು ಆ ರಾಜನ ಮೇಲೆ ಆಗ್ರಹಗೊಂಡು ಅವನನ್ನು ರೋಗರೂಪದಿಂದ ಪೀಡಿಸಲಾರಂಭಿಸಿದನು. ಎಂದರೆ ಹರಿಶ್ಚಂದ್ರನಿಗೆ ಉದರದಲ್ಲಿ ನೀರು ತುಂಬಿಕೊಂಡು ವ್ಯಥೆಪಡುವ ಮಹೋದರನೆಂಬ ರೋಗವು ಪ್ರಾಪ್ತವಾಯಿತು. ತಂದೆಯು ಮಹೋದರದಿಂದ ನರಳುತ್ತಿರುವನೆಂಬ ವಿಷಯವು ಅರಣ್ಯದಲ್ಲಿ ಅಲೆದಾಡುತ್ತಿದ್ದ ರೋಹಿತನಿಗೆ ಕೆಲವು ಮನುಷ್ಯರ ಮೂಲಕ ತಿಳಿಯಿತು. ಇವನ್ನು ತಿಳಿದ ಕೂಡಲೇ ರೋಹಿತನು ತನ್ನ ತಂದೆಯಾದ ಹರಿಶ್ಚಂದ್ರ ರಾಜನನ್ನು ನೋಡಿಕೊಂಡು ಬರಲು ಅರಣ್ಯದಿಂದ ನಗರಕ್ಕೆ ಹೊರಟು ಬಂದನು. ನಗರಾಭಿಮುಖವಾಗಿ ಹೊರಟು ಬರುತ್ತಿದ್ದ ರೋಹಿತನನ್ನು, ದಾರಿಯಲ್ಲಿ ಇಂದ್ರನು ಒಬ್ಬಾನೊಬ್ಬ ಬ್ರಾಹ್ಮಣಪುತ್ರನ ರೂಪದಿಂದ ಸಂಧಿಸಿ ಇಂತೆಂದನು—ಎಲೈ ರಾಜಪುತ್ರನೇ ಕೇಳು ಪುರುಷನಾದವನು ಒಂದೇ ಸ್ಥಳದಲ್ಲಿದ್ದು ಎಲ್ಲಿಗೂ ಹೋಗದೆ ಏನನ್ನೂ ಮಾಡದೆ ಸುಮ್ಮನಿದ್ದಲ್ಲಿ ಅವನಿಗೆ ಯಾವ ಸಂಪತ್ತೂ ದೊರೆಯಲಾರದು. ಆದ್ದರಿಂದ ಪುರುಷನು ತನ್ನ ಜಡಭಾವವನ್ನು ಬಿಟ್ಟು ಉದ್ಯೋಗಶೀಲನಾಗಿ ನಾನಾ ದೇಶಗಳನ್ನು ಸಂಚರಿಸುತ್ತಿದ್ದರೆ ಅವನ ಮನಸ್ಸು ವಿಕಾಸವನ್ನು ಹೊಂದಿ ಅವನು ಆರೋಗ್ಯವಂತನೂ ಐಶ್ವರ್ಯವಂತನೂ ಆಗುವನು ಎಂದು ನಾನು ಅನೇಕರಿಂದ ಕೇಳಿರುವೆನು. ಉತ್ತಮನೆನಿಸಿದ ಪುರುಷನು ವಿದ್ಯಾದಿಗಳಿಂದ ಶ್ರೇಷ್ಠನೆಂದು ಪರಿಗಣಿಸಲ್ಪಟ್ಟರೂ ಅವನು ಎಲ್ಲಿಗೂ ಹೋಗದೆ ಪಿತೃಗೃಹ ಮೊದಲಾದ ತನ್ನ ಬಂಧುಗಳ ಮನೆಯಲ್ಲಿಯೇ ಸದಾ ಇರುತ್ತಿದ್ದರೆ ಇವನನ್ನು ನೋಡಿದ ಜನರು—ಇವನು ಎಲ್ಲಿಗೂ ಹೋಗುವುದಿಲ್ಲ, ಏನನ್ನೂ ಮಾಡುವುದಿಲ್ಲ. ವೃಥಾ ಕಾಲ ಕಳೆಯುತ್ತಿದ್ದಾನೆ. ಇವನು ಕೇವಲ ಮೂರ್ಖನು, ಪಾಪಿಷ್ಠನು, ತನ್ನ ಬಂಧುಬಾಂಧವರಿಗೆ ಹೊರೆಯಾಗಿರುವನು ಎಂದು ನಾನಾ ವಿಧವಾಗಿ ಹೀಯಾಳಿಸುತ್ತಾರೆ. ಆದ್ದರಿಂದ ನೀನು ಯಾವಾಗಲೂ ತಂದೆಯ ಮನೆಯಲ್ಲಿ ಏನನ್ನೂ ಮಾಡದೆ ಸುಮ್ಮನೆ ವಾಸಮಾಡಿಕೊಂಡಿರುವುದು ಯುಕ್ತವಲ್ಲ. ಅರಣ್ಯದಲ್ಲಿ ಸಂಚರಿಸುತ್ತಿರುವ ನಾನು ಯಾರಿಗೆ ಏನು ಸಹಾಯವನ್ನು ತಾನೇ ಮಾಡಬಲ್ಲೆನು ಎಂದು ನೀನು ಶಂಕಿಸಬೇಕಾಗಿಲ್ಲ. ಅರಣ್ಯಾದಿಗಳಲ್ಲಿ ಸಂಚರಿಸುವ ನಿನ್ನಂತಹ ಪುರುಷನಿಗೆ ಪರಮೇಶ್ವರನೇ ಸ್ನೇಹಿತನಂತೆ ನಿನ್ನ ಜೊತೆಯಲ್ಲಿರುವನು. ಆದ್ದರಿಂದ ನೀನು ಅರಣ್ಯಾದಿಗಳಲ್ಲಿ ನಿನಗೆ ಇಷ್ಟಬಂದ ರೀತಿಯಲ್ಲಿ ಸಂಚಾರಮಾಡುತ್ತಿರು ಎಂದು ಹಿತಮಿತ್ರನಂತೆ ರೋಹಿತನಿಗೆ ಹೇಳಿದನು.

ಚರೈವೇತಿ ಮಾಂ ಬ್ರಾಹ್ಮಣೋಽವೋಚದಿತಿ ಹ ದ್ವಿತೀಯಂ ಸಂವತ್ಸ-
ರಮರಣ್ಯೇ ಚಚಾರ ಸೋಽರಣ್ಯಾದ್ಗ್ರಾಮಮೇಯಾಯ ತಮಿಂದ್ರಃ
ಪುರುಷರೂಪೇಣ ಪರ್ಯೇತ್ಯೋವಾಚ—

ಪುಷ್ಪಿಣ್ಯೌ ಚರತೋ ಜಂಘೇ ಭೂಷ್ಣುರಾತ್ಮಾ ಫಲಗ್ರಹಿಃ ।
ಶೇರೇಽಸ್ಯ ಸರ್ವೇ ಪಾಪ್ಮಾನಃ ಶ್ರಮೇಣ ಪ್ರಪಥೇಹತಶ್ಚರೈವೇತಿ ।

ತತ್ರೇಂದ್ರರೋಹಿತಯೋಃ ಸಂವಾದೇ ಪ್ರಥಮಂ ಪರ್ಯಾಯಂ ದರ್ಶಯಿತ್ವಾ ದ್ವಿತೀಯಂ ಪರ್ಯಾಯಂ ದರ್ಶಯತಿ—ಬ್ರಾಹ್ಮಣರೂಪಸ್ಯೇಂದ್ರಸ್ಯ ವಾಕ್ಯಂ ಶ್ರುತ್ವಾ ಬ್ರಾಹ್ಮಣೋಽಯಮರಣ್ಯೇ ಚರೈವೇತ್ಯೇವಂ ಮಾಮುಕ್ತವಾನಿತಿ ಮನಸಿ ಬ್ರಾಹ್ಮಣವಾಕ್ಯೇ ಮಹಾಂತಮಾದರಂ ಕೃತ್ವಾ ಪುನರಪ್ಯೇಕಂ ಸಂವತ್ಸರಮರಣ್ಯೇ ಚರಿತ್ವಾ ಪಶ್ಚಾತ್ಪಿತರಂ ದ್ರಷ್ಟುಂ ಗ್ರಾಮಂ ತಮಾಗಚ್ಛಂತಂ ಪುನರಪೀಂದ್ರೋ ಬ್ರಾಹ್ಮಣರೂಪೇಣಾಗತ್ಯೈವಮುವಾಚ । ಚರತಃ ಪರ್ಯಟನಂ ಕುರ್ವತಃ ಪುರುಷಸ್ಯ ಜಂಘೇ ಪುಷ್ಪಿಣ್ಯೌ ಭವತಃ। ಯಥಾ ಪುಷ್ಪಯುಕ್ತೋ ವೃಕ್ಷಃ ಶಾಖಾ ಲತಾ ವಾಽಥವಾ ಸುಗಂಧೋ-ಪೇತಾ ಸೇವ್ಯಾ ಭವತಿ । ಏವಂ ಚರತೋ ಜಂಘೇ ಶ್ರಮಜಯೇನ ಸೇವ್ಯೇ ಭವತಃ । ತಥೈವಾತ್ಮಾ ಮಧ್ಯದೇಹೋ ಭೂಷ್ಣುರ್ವರ್ಧಿಷ್ಣುಃ ಫಲಗ್ರಹಿರಾರೋಗ್ಯರೂಪಫಲಯುಕ್ತೋ ಭವತಿ । ಯಥಾ ವರ್ಧಮಾನೋ ವೃಕ್ಷಃ ಕಾಲೇನ ಫಲಾನಿ ಗೃಹ್ಣಾತಿ ಏವಂ ಚರತಃ ಪುರುಷಸ್ಯ ಬೀಜಾದಿದೀಪನಾದಿ-ಪಾಟವೇನ ಮಧ್ಯದೇಹ ಆರೋಗ್ಯರೂಪಂ ಫಲಂ ಗೃಹ್ಣಾತಿ । ತಥೈವಾಸ್ಯ ಚರತಃ ಪುರುಷಸ್ಯ ಸರ್ವೇ-ಪಾಪ್ಮಾನಃ ಸರ್ವಪಾಪಾನಿ ಪ್ರಪಥೇ ಪ್ರಕೃಷ್ಟೇ ತೀರ್ಥಕ್ಷೇತ್ರಾದಿಮಾರ್ಗೇ ಶ್ರಮೇಣ ತತ್ತದ್ದೇವತಾದಿ-ದರ್ಶನೇ ತೀರ್ಥಯಾತ್ರಾದಿ ಪ್ರಯಾಸೇನ ಹತಾ ವಿನಾಶಿತಾಃ ಸಂತಃ ಶೇರೇ ಶೇರತೇ ಶಯಾನಾ ಇವ ಭವಂತಿ । ಯಥಾ ಶಯಾನಾಃ ಪುರುಷಾಃ ಸ್ವಕಾರ್ಯಂ ಕೃಷಿವಾಣಿಜ್ಯಾದಿಕಃ ಕರ್ತುಮಶಕ್ತಾ ಏವಂ ಪುಣ್ಯೇನ ವಿನಷ್ಟಾಃ ಪಾಪ್ಮಾನೋ ನರಕಂ ದಾತುಮಸಮರ್ಥಾ ಇತ್ಯರ್ಥಃ । ತಸ್ಮಾತ್ಸರ್ವಥಾರಣ್ಯೇ ಚರ ನ ಪಿತುರ್ಗೃಹೇಽವತಿಷ್ಠಸ್ವ ॥

ರೋಹಿತನಿಗೂ ಪುರುಷರೂಪದಿಂದಿದ್ದ ಇಂದ್ರನಿಗೂ ಹಿಂದೆ ಹೇಳಿದಂತೆ ಸಂವಾದವು ನಡೆಯಿತು. ಈಗ ಆ ವಿಷಯವಾಗಿ ದ್ವಿತೀಯಪರ್ಯಾಯವನ್ನು ತಿಳಿಸುವರು—ರೋಹಿತನು ತನಗೆ ಮಾರ್ಗಮಧ್ಯದಲ್ಲಿ ಓರ್ವಬ್ರಾಹ್ಮಣನು ಸಿಕ್ಕಿ ತನಗೆ ಹಿತೋಪದೇಶವನ್ನು ಮಾಡಿದನೆಂದು ತಿಳಿದು ಅವನಂತೆ ಅರಣ್ಯದಲ್ಲಿ ಮತ್ತೊಂದು ಸಂವತ್ಸರದ ವರೆಗೂ ಸಂಚಾರಮಾಡುತ್ತಿದ್ದು ಅನಂತರ ತನ್ನ ತಂದೆಯ ಬಳಿಗೆ ಹೋಗಬೇಕೆಂದು ಬಯಸಿ ನಗರಾಭಿಮುಖನಾಗಿ ಪ್ರಯಾಣಮಾಡುತ್ತಿರುವಾಗ ಪುನಃ ಇಂದ್ರನು ಬ್ರಾಹ್ಮಣ ರೂಪದಿಂದ ರೋಹಿತನಿಗೆ ಕಾಣಿಸಿಕೊಂಡು ಹುತ್ತಿಂತೆಂದನು—ಅರಣ್ಯಾದಿಪ್ರದೇಶಗಳಲ್ಲಿ ಸಂಚಾರಮಾಡುವ ಪುರುಷನ ಪಾದಗಳು ಪುಷ್ಪವನ್ನು ಬಿಟ್ಟಿರುವ ವೃಕ್ಷದಂತೆ ಶೋಭಿಸುವುವು. ಪುಷ್ಪಾದಿಗಳಿಂದ ಯುಕ್ತವಾದ ವೃಕ್ಷವು—ಅದು ಶಾಖೆಯೇ ಆಗಲಿ, ಬಳ್ಳಿಯೇ ಆಗಲಿ—ನೋಡುವವರ ಮನಸ್ಸಿಗೆ ಹಿತವನ್ನುಂಟುಮಾಡುವುದು. ಇಂತಹ ವೃಕ್ಷವು ಎಲ್ಲರಿಗೂ ಸಂತೋಷವನ್ನುಂಟುಮಾಡುವುದು. ಅದರಂತೆಯೇ ಆಯಾಸಾದಿ ಶ್ರಮವನ್ನು ಲೆಕ್ಕಿಸದೆ ಸಂಚಾರಮಾಡುವ ಪುರುಷನನ್ನು ಕಂಡು ಎಲ್ಲರೂ ಮೆಚ್ಚಿ ಪ್ರಶಂಸೆಮಾಡುವರು. ಇದಲ್ಲದೆ ಪುಷ್ಪಸಹಿತವಾದ ವೃಕ್ಷವು ಮುಂದೆ ಜನರಿಗೆ ಆಹಾರ ಆರೋಗ್ಯಾ

ದಿಗಳನ್ನುಂಟುಮಾಡುವ ಫಲಗಳನ್ನು ಬಿಡುವುದು. ಅದರಂತೆ ಸಂಚರಿಸುವ ಪುರುಷನ ಆತ್ಮವು ವಿಕಾಸಗೊಳ್ಳುವುದು. ಶರೀರವು ಆರೋಗ್ಯಾದಿಗಳಿಂದ ಚೆನ್ನಾಗಿ ಬೆಳೆದು ದೃಢವಾಗುವುದು. ಬೆಳೆಯುತ್ತಿರುವ ವೃಕ್ಷವು ಕಾಲಕಾಲಗಳಲ್ಲಿ ಉತ್ತಮವಾದ ಫಲಗಳನ್ನು ನೀಡುವುದೋ ಅದರಂತೆ ಸಂಚಾರಮಾಡುವ ಪುರುಷನೂ ಆರೋಗ್ಯರೂಪವಾದ ಫಲವನ್ನೂ ಪಡೆಯುತ್ತಾನೆ. ಇದಲ್ಲದೆ ದೇಹಾಯಾಸವನ್ನೂ ಗಮನಿಸದೆ ತೀರ್ಥಕ್ಷೇತ್ರಗಳಲ್ಲಿ ಸಂಚರಿಸುತ್ತಾ ಅಲ್ಲಲ್ಲಿರುವ ದೇವತಾದಿಗಳನ್ನು ದರ್ಶನಮಾಡುವುದರಿಂದ ಆ ಪುರುಷನ ಸಮಸ್ತಪಾಪಗಳೂ ನಾಶವಾಗುವುವು. ಸಂಚಾರಮಾಡದೆ ಇದ್ದಲ್ಲಿಯೇ ಇರುವ ಪುರುಷನಿಗೆ ತನ್ನ ಸ್ವಕಾರ್ಯವಾದ ಕೃಷಿವಾಣಿಜ್ಯಾದಿಗಳನ್ನೂ ಮಾಡಲು ಶಕ್ತಿಯಿಲ್ಲದೆ, ಪುಣ್ಯಕಾರ್ಯಗಳನ್ನೂ ಮಾಡಲು ಸಾಧ್ಯವಿಲ್ಲದೆ ಇದುವರೆಗೆ ಅವನು ಅಲ್ಪಸ್ವಲ್ಪವಾಗಿ ಗಳಿಸಿದ ಪುಣ್ಯವೂ ನಷ್ಟವಾಗಿ ಪಾಪವನ್ನು ಮಾತ್ರ ಗಳಿಸಿ ನರಕಕ್ಕೆ ಭಾಗಿಯಾಗುವನು. ಆದ್ದರಿಂದ ಎಲೈ ರೋಹಿತನೇ, ನೀನು ನಿನ್ನ ತಂದೆಯಮನೆಯಲ್ಲಿಯೇ ಸುಮ್ಮನೆ ಕುಳಿತುಕೊಳ್ಳಲು ಇಷ್ಟಪಡದೆ ಅರಣ್ಯಾದಿಗಳಲ್ಲಿ ಸಂಚಾರಮಾಡು ಎಂದು ಬೋಧಿಸಿದನು.

**ಚರೈವೇತಿ ವೈ ಮಾ ಬ್ರಾಹ್ಮಣೋಽವೋಚದಿತಿ ಹ ತೃತೀಯಂ ಸಂವತ್ಸರಮರಣ್ಯೇ ಚಚಾರ ಸೋಽರಣ್ಯಾದ್ಗ್ರಾಮಮೇಯಾಯ ತಮಿಂದ್ರಃ ಪುರುಷರೂಪೇಣ ಪರ್ಯೇತ್ಯೋವಾಚ—**

**ಆಸ್ತೇ ಭಗ ಆಸೀನಸ್ಯೋರ್ಧ್ವಸ್ತಿಷ್ಠತಿ ತಿಷ್ಠತಃ ।**
**ಶೇತೇ ನಿಪದ್ಯಮಾನಸ್ಯ ಚರಾತಿ ಚರತೋ ಭಗಶ್ಚರೈವೇತಿ ॥**

ತೃತೀಯಂ ಪರ್ಯಾಯಂ ದರ್ಶಯತಿ—ಭಗಃ ಸೌಭಾಗ್ಯಮಾಸೀನಸ್ಯೋಪವಿಷ್ಟಸ್ಯಾಽಸ್ತೇ ತಥೈವ ತಿಷ್ಠತಿ ನ ತು ವರ್ಧತೇ । ಅಭಿವೃದ್ಧಿಹೇತೋರುದ್ಯೋಗಸ್ಯಾಭಾವಾತ್ । ತಿಷ್ಠತ ಉಪವೇಶನಂ ಪರಿತ್ಯಜ್ಯೋತ್ಥಾಪನಂ ಕುರ್ವತಃ ಪುರುಷಸ್ಯ ಭಗ ಊರ್ಧ್ವೋಽಭಿವೃದ್ಧೇರುನ್ಮುಖಸ್ತಿಷ್ಠತಿ । ಕೃಷಿವಾಣಿಜ್ಯಾದ್ಯುದ್ಯೋಗಸ್ಯ ಸಂಭಾವಿತತ್ವಾತ್ । ನಿಪದ್ಯಮಾನಸ್ಯ ಭೂಮೌ ಶಯಾನಸ್ಯ ಭಗಃ ಶೇತೇ ನಿದ್ರಾಂ ಕರೋತಿ ವಿದ್ಯಮಾನಧನರಕ್ಷಾದಿಚಿಂತಯಾ ಅಪ್ಯಭಾವಾತ್ಸರ್ವಥೈವ ವಿನಶ್ಯತಿ ಚರತಸ್ತೇಷುತೇಷು ದೇಶೇಷ್ವಾರ್ಜನಾರ್ಥಂ ಪರ್ಯಟನಂ ಕುರ್ವತಃ ಪುರುಷಸ್ಯ ಭಗಃ ಸೌಭಾಗ್ಯಂ ಚರತಿ ದಿನೇ ದಿನೇ ವರ್ಧತೇ । ತಸ್ಮಾತ್ತ್ವಂ ಚರೈವೇತಿ ನ ತ್ವೇಕತ್ರ ತಿಷ್ಠ ॥

ಈಗ ಮೂರನೆಯ ಪರ್ಯಾಯವನ್ನು ತಿಳಿಸುವರು—ದೇಶಸಂಚಾರವನ್ನು ಮಾಡು ಎಂದು ಬ್ರಾಹ್ಮಣನೇ ನನಗೆ ಹಿತೋಪದೇಶಮಾಡುವನು. ಆದ್ದರಿಂದ ಹಾಗೆಯೇ ಮಾಡುವೆನು ಎಂದು ರೋಹಿತನು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿ ಅದರಂತೆ ಮತ್ತೊಂದು ಸಂವತ್ಸರವನ್ನು ಸಂಚಾರದಲ್ಲಿಯೇ ಕಳೆದು ಅನಂತರ ಗ್ರಾಮಾಭಿಮುಖವಾಗಿ ಹೊರಟು ಬರುತ್ತಿರುವಾಗ ಹಿಂದಿನಂತೆ ಮಾರ್ಗ ಮಧ್ಯದಲ್ಲಿ ಇಂದ್ರನು ಬ್ರಾಹ್ಮಣ ವೇಷದಿಂದ ರೋಹಿತನನ್ನು ಕಂಡು ಇಂತೆಂದನು—ಪುರುಷನು ಇದ್ದಲ್ಲಿಯೇ ಇದ್ದು ಎಲ್ಲಿಯೂ ಸಂಚರಿಸದಿದ್ದರೆ ಅವನ ಧನಾದಿ ಐಶ್ವರ್ಯವು ಇದ್ದಂತೆಯೇ ಇರುವುದು. ಅದು ಅಭಿವೃದ್ಧಿಯಾಗುವುದಿಲ್ಲ (ಹೆಚ್ಚುವುದಿಲ್ಲ). ಉದ್ಯೋಗಶೀಲನಾಗಿರದೆ ಎಂದರೆ ಯಾವ ಕೆಲಸವನ್ನೂ ಮಾಡದೆ ಸುಮ್ಮನೆ ಕುಳಿತಿರುವುದರಿಂದ ಅವನ ಐಶ್ವರ್ಯವು ಅಭಿವೃದ್ಧಿಯಾಗುವುದಿಲ್ಲ. ಸುಮ್ಮನೆ ಕೂಡದೆ ಉದ್ಯೋಗಶೀಲನಾದವನಿಗೆ ಅವನ ಐಶ್ವರ್ಯವು

ಹೆಚ್ಚುತ್ತಾ ಹೋಗುವುದು. ಕೃಷಿವಾಣಿಜ್ಯಾದಿಗಳಲ್ಲಿ ತೊಡಗಿ ಉದ್ಯೋಗಶೀಲನಾದವನ ಐಶ್ವರ್ಯವು ಅಭಿವೃದ್ಧಿಯಾಗುವುದು. ಆದರೆ ಏನನ್ನೂ ಮಾಡದೆ ಸುಮ್ಮನೆ ಕುಳಿತು ನಿದ್ರೆಮಾಡುತ್ತಾ ಕಾಲ ಕಳೆಯುವ ಮತ್ತು ತನ್ನಲ್ಲಿರುವ ಅಲ್ಪಸ್ವಲ್ಪ ಧನದ ರಕ್ಷಣೆಯನ್ನೇ ಯಾವಾಗಲೂ ಚಿಂತಿಸುತ್ತಾ ಕಾಲಕಳೆಯುವ ಪುರುಷನ ಐಶ್ವರ್ಯಾದಿ ಸಂಪತ್ತು ಅಭಿವೃದ್ಧಿಯಾಗದೆ ನಿದ್ರೆಮಾಡುತ್ತಿರುವ ಪುರುಷನಂತೆ ಸ್ತಬ್ಧವಾಗಿರುವುದು ಆದರೆ ದೇಶಪರ್ಯಟನಾದಿಗಳಲ್ಲಿಯೂ ಆಸಕ್ತನಾದ ಪುರುಷನ ಸಂಪತ್ಸೌಭಾಗ್ಯಗಳು ದಿನೇದಿನೇ ವೃದ್ಧಿಯನ್ನೈದುವವು. ಆದ್ದರಿಂದ ಎಲೈ ರಾಜಪುತ್ರನೇ ಸುಮ್ಮನೆ ಒಂದೆಡೆ ಕುಳಿತುಕೊಳ್ಳಬೇಡ. ಸಂಚಾರಮಾಡುತ್ತಿರು ಎಂದು ಉಪದೇಶಿಸಿದನು.

**ಚರೈವೇತಿ ವೈ ಮಾ ಬ್ರಾಹ್ಮಣೋಽವೋಚದಿತಿ ಹ ಚತುರ್ಥಂ ಸಂವತ್ಸರಮರಣ್ಯೇ ಚಚಾರ ಸೋಽರಣ್ಯಾದ್ಗ್ರಾಮಮೇಯಾಯ ತಮಿಂದ್ರಃ ಪುರುಷರೂಪೇಣ ಪರ್ಯೇತ್ಯೋವಾಚ—**

**ಕಲಿಃ ಶಯಾನೋ ಭವತಿ ಸಂಜಿಹಾನಸ್ತು ದ್ವಾಪರಃ ।**
**ಉತ್ತಿಷ್ಠಂಸ್ತ್ರೇತಾ ಭವತಿ ಕೃತಂ ಸಂಪದ್ಯತೇ ಚರಂಶ್ಚರೈವೇತಿ ॥**

**ಚತುರ್ಥಂ ಪರ್ಯಾಯಂ ದರ್ಶಯತಿ—ಚತಸ್ರಃ ಪುರುಷಸ್ಯಾವಸ್ಥಾಃ । ನಿದ್ರಾತತ್ಪರಿತ್ಯಾಗ ಉತ್ಥಾನಂ ಸಂಚರಣಂ ಚೇತಿ । ತಾಶ್ಚೋತ್ತರೋತ್ತರಶ್ರೇಷ್ಠತ್ವಾತ್ಕಲಿದ್ವಾಪರ ತ್ರೇತಾಕೃತಯುಗೈಃ ಸಮಾನಾಃ । ತತಶ್ಚರಣಸ್ಯ ಸರ್ವೋತ್ತಮತ್ವಾಚ್ಚರೈವೇತಿ ।**

ಈಗ ನಾಲ್ಕನೆಯ ಪರ್ಯಾಯವನ್ನು ವಿವರಿಸುವರು—ಅರಣ್ಯದಲ್ಲಿ ಸಂಚರಿಸುತ್ತಿದ್ದ ರೋಹಿತನು ಇಂತು ಆಲೋಚಿಸಿದನು. ಸಂಚಾರಮಾಡು ಎಂದು ಬ್ರಾಹ್ಮಣನೇ ನನಗೆ ಹೇಳಿರುವನು. ಬ್ರಾಹ್ಮಣವಾಕ್ಯವು ಉಲ್ಲಂಘಿಸಲ್ಪಡಬಾರದು. ಅದು ಯಾರಿಗೂ ಕೆಡಕನ್ನುಂಟುಮಾಡುವುದಿಲ್ಲ. ಎಂದು ಮನಸ್ಸಿನಲ್ಲಿ ನಿಶ್ಚಯಿಸಿ ಅದರಂತೆ ಇನ್ನೂ ಒಂದು ವರ್ಷ ಎಂದರೆ ನಾಲ್ಕನೆಯ ವರ್ಷವೂ ಅರಣ್ಯದಲ್ಲಿ ಸಂಚರಿಸುತ್ತಿದ್ದು ಬಳಿಕ ಗ್ರಾಮಕ್ಕೆ ಹೋಗುತ್ತಿರುವಾಗ ಹಿಂದಿನಂತೆ ಇಂದ್ರನು ಬ್ರಾಹ್ಮರೂಪದಿಂದ ಕಾಣಿಸಿಕೊಂಡು ಇಂತೆಂದನು—ಎಲೈ ರೋಹಿತನೇ, ಕೇಳು ಲೋಕದಲ್ಲಿ ಪುರುಷನಾದವನು ನಾಲ್ಕು ವಿಧ ಸ್ಥಿತಿಗಳಲ್ಲಿ ಯಾವುದಾದರೂ ಒಂದು ವಿಧದಲ್ಲಿರುವನು. ಎಂದರೆ ಒಂದು ಕಾಲದಲ್ಲಿ ಪುರುಷನು ಮಲಗಿರುವನು. ಇದು ಒಂದು ಸ್ಥಿತಿಯು ಮತ್ತೊಂದು ಕಾಲದಲ್ಲಿ ಎಚ್ಚರವಾಗಿ ಕುಳಿತಿರುವನು. ಇದು ಮತ್ತೊಂದು ಸ್ಥಿತಿಯು. ಮತ್ತೊಂದು ಕಾಲದಲ್ಲಿ ಎದ್ದು ನಿಂತಿರುವನು. ಇದೂ ಒಂದು ಸ್ಥಿತಿಯು. ಪುನಃ ಬೇರೊಂದು ಕಾಲದಲ್ಲಿ ಓಡಾಡುತ್ತಿರುವನು ಎಂದರೆ ಸಂಚಾರಮಾಡುತ್ತಿರುವನು. ಈ ನಾಲ್ಕು ವಿಧವಾದ ಸ್ಥಿತಿಗಳಲ್ಲಿ ಮಲಗಿ ನಿದ್ರಿಸುತ್ತಿರುವ (ಅವಸ್ಥೆಯನ್ನು) ಸ್ಥಿತಿಯನ್ನು ಕಲಿಯುಗಕ್ಕೆ ಹೋಲಿಸಿರುವರು. ಅದರಂತೆ ಎಚ್ಚರವಾಗಿ ಕುಳಿತಿರುವ ಸ್ಥಿತಿಯನ್ನು ದ್ವಾಪರಯುಗಕ್ಕೂ ಎದ್ದು ನಿಂತಿರುವ ಸ್ಥಿತಿಯನ್ನು ತ್ರೇತಾಯುಗಕ್ಕೂ ಸಂಚಾರಮಾಡುತ್ತಿರುವವನ ಸ್ಥಿತಿಯನ್ನು ಕೃತಯುಗಕ್ಕೂ ಹೋಲಿಸಿರುವರು. ಇಲ್ಲಿ ಕಲಿಯುಗಕ್ಕಿಂತ ದ್ವಾಪರಯುಗವು ಶ್ರೇಷ್ಠವೆಂದೂ, ದ್ವಾಪರಕ್ಕಿಂತ ತ್ರೇತಾಯುಗವು ಶ್ರೇಷ್ಠವೆಂತಲೂ ತ್ರೇತಾಯುಗಕ್ಕಿಂತಲೂ ಕೃತಯುಗವು (ಎಲ್ಲಕ್ಕಿಂತಲೂ) ಉತ್ತಮವಾದುದೆಂದು ಹೇಳುವರು. ಇದು ಪ್ರಸಿದ್ಧವಾಗಿಯೇ ಇದೆ. ಇದರಂತೆ ಮಲಗಿ ದ್ರಿಸುವವನಿಗಿಂತಲೂ ಎಚ್ಚರವಾಗಿ ಕುಳಿತಿರುವವನೂ ಅವನಿಗಿಂತಲೂ ಎದ್ದು ನಿಂತಿರುವವನೂ ಅವನಿಗಿಂತಲೂ ಉದ್ಯೋಗಶೀಲನಾಗಿ ಸಂಚರಿಸುತ್ತಿರುವವನೂ ಎಲ್ಲರಿಗಿಂತಲೂ ಶ್ರೇಷ್ಠನೆಂಬ ಭಾವವು ಸಕಲರಲ್ಲಿಯೂ ಇರುವುದು.

ಆದುದರಿಂದ ಎಲೈ ರೋಹಿತನೇ ನೀನು ಪಿತೃಗೃಹದಲ್ಲಿ ಸುಮ್ಮನೆ ಕುಳಿತು ವೃಥಾಕಾಲಹರಣೆಮಾಡದೆ ಯಾವಾಗಲೂ ಸಂಚಾರಶೀಲನಾಗಿರು ಎಂದು ಉಪದೇಶಿಸಿದನು.

ಚರೈವೇತಿ ವೈ ಮಾ ಬ್ರಾಹ್ಮಣೋಽವೋಚದಿತಿ ಹ ಪಂಚಮಂ ಸಂವತ್ಸ-ರಮರಣ್ಯೇ ಚಚಾರ ಸೋಽರಣ್ಯಾದ್ಗ್ರಾಮಮೇಯಾಯ ತಮಿಂದ್ರಃ ಪುರುಷರೂಪೇಣ ಪರ್ಯೇತ್ಯೋವಾಚ—

ಚರನ್ವೈ ಮಧು ವಿಂದತಿ ಚರನ್ಸ್ವಾದುಮುದುಂಬರಂ ।
ಸೂರ್ಯಸ್ಯ ಪಶ್ಯ ಶ್ರೇಮಾಣಂ ಯೋ ನ ತಂದ್ರಯತೇ ಚರಂಶ್ಚರೈವೇತಿ ॥

ಪಂಚಮಂ ಪರ್ಯಾಯಂ ದರ್ಶಯತಿ—ಚರನ್ನೇವ ಪುರುಷಃ ಕ್ವಚಿದ್ವೃಕ್ಷಾಗ್ರೇ ಮಧು ಮಾಕ್ಷಿಕಂ ಲಭತೇ । ಕ್ವಚಿತ್ಸ್ವಾದು ಮಧುರಮುದುಂಬರಾದಿ ಫಲವಿಶೇಷಂ ಲಭತೇ । ಏತದುಭಯ-ಮುಪಲಕ್ಷಣಮ್ । ತತ್ರ ತತ್ರ ವಿದ್ಯಮಾನಂ ಭೋಗವಿಶೇಷಂ ಲಭತೇ । ತತ್ರ ಸೂರ್ಯೋ ದೃಷ್ಟಾಂತೋ ಯಃ ಸೂರ್ಯಃ ಸರ್ವತ್ರ ಚರನ್ನಪಿ ನ ತಂದ್ರಯತೇ ಕದಾಚಿದಪ್ಯಲಸೋ ನ ಭವತಿ । ತಸ್ಯ ಸೂರ್ಯಸ್ಯ ಶ್ರೇಮಾಣಂ ಶ್ರೇಷ್ಠತ್ವಂ ಜಗದ್ವಂದ್ಯತ್ವಂ ಪಶ್ಯ । ತಸ್ಮಾಚ್ಚರೈವ ॥

ಈಗ ಐದನೇ ಪರ್ಯಾಯವನ್ನು ತಿಳಿಸುವರು—ಬ್ರಾಹ್ಮಣನೇ ತನಗೆ ಹೇಳಿದ ಹಿತವಾಕ್ಯವನ್ನು ಮೀರಬಾರದೆಂದು ನಿಶ್ಚಯಿಸಿ ಆ ರೋಹಿತನು ಮತ್ತೊಂದು ವರ್ಷಪರ್ಯಂತರ ಎಂದರೆ ಐದನೆಯ ವರ್ಷವನ್ನು ಅರಣ್ಯದಲ್ಲಿ ಸಂಚಾರ ಮಾಡುತ್ತಲೇ ಕಳೆದನು. ಅನಂತರ ತನ್ನ ತಂದೆಯನ್ನು ನೋಡಬೇಕೆಂಬ ಮನಸ್ಸಿನಿಂದ ತನ್ನ ತಂದೆಯಿರುವ ರಾಜಧಾನಿಗೆ ಹೊರಟು ಬರುತ್ತಿರುವಾಗ ಆ ಇಂದ್ರನೇ ಪುರುಷರೂಪದಿಂದ ಮಾರ್ಗಮಧ್ಯದಲ್ಲಿ ರೋಹಿತನನ್ನು ಕಂಡು ಇಂತು ನುಡಿದನು. ಎಲೈ ರಾಜಪುತ್ರನೇ, ಕೇಳು. ಅರಣ್ಯದಲ್ಲಿ ಸಂಚರಿಸುತ್ತಿರುವ ಪುರುಷನು ನಾನಾವಿಧವಾದ ಸುಖಸಂತೋಷಾದಿಗಳನ್ನು ಪಡೆದು ಸುಖಿಸುತ್ತಿರುವನು. ಕೆಲವು ಸಮಯದಲ್ಲಿ ವೃಕ್ಷದ ಮೇಲಿರುವ ಜೇನುಗೂಡನ್ನು ಕಂಡು ಅದರಲ್ಲಿರುವ ಸಿಹಿಯಾದ ಮತ್ತು ರುಚಿಕರವಾದ ಜೇನುತುಪ್ಪವನ್ನು ಆಸ್ವಾದಿಸಿ ಸಂತೋಷಪಡುವನು. ಕೆಲವು ಕಡೆ ಬಹಳ ಮಧುರವಾದ ಉದುಂಬರಾದಿ ಫಲಗಳನ್ನು ಭಕ್ಷಿಸುತ್ತಾ ತೃಪ್ತಿಪಡುವನು ಸಂಚರಿಸುತ್ತಿರುವಾಗ ಸಿಕ್ಕುವ ಇನ್ನೂ ಇತರ ವಿಧವಾದ ಭೋಗಗಳನ್ನೂ ಅನುಭವಿಸುವನು ಸಂಚರಿಸುವ ವಿಷಯದಲ್ಲಿ ಸೂರ್ಯನೇ ದೃಷ್ಟಾಂತವು. ಸೂರ್ಯನು ಸರ್ವಕಾಲಗಳಲ್ಲಿಯೂ ಸಂಚರಿಸುತ್ತಿದ್ದರೂ ಅವನಿಗೆ ಆಯಾಸ ಅಥವಾ ಆಲಸಿಕೆ ಎಂಬುವುದೇ ಇಲ್ಲ. ಇಂತಹ ಸೂರ್ಯನ ಮಹಿಮೆಯನ್ನು ನೋಡಿ ಜನರು ಅವನನ್ನು ಜಗದ್ವಂದನೆಂದು ಗೌರವಿಸಿ ಪೂಜಿಸುವರು. ಆದ್ದರಿಂದ ಎಲೈ ರೋಹಿತನೇ ನೀನೂ ಸಹ ಸಂಚಾರವನ್ನೇ ಮಾಡುತ್ತಿರು ಎಂದು ಹೇಳಿದನು.

ಚರೈವೇತಿ ವೈ ಮಾ ಬ್ರಾಹ್ಮಣೋಽವೋಚದಿತಿ ಹ ಷಷ್ಠಂ ಸಂವತ್ಸರ-ಮರಣ್ಯೇ ಚಚಾರ ಸೋಽಜೀಗರ್ತಂ ಸೌಯವಸಿಮೃಷಿಮಶನಯಾ ಪರೀತಮರಣ್ಯ ಉಪೇಯಾಯ ॥

ಇತ್ಥಮಿಂದ್ರಕೃತೇನ ಉಪದೇಶೇನ ಚರತೋ ರೋಹಿತಸ್ಯ ಸ್ವಜೀಪನೇ ಪಿತುರಾರೋಗ್ಯೇ ಚ ಕಾರಣಭೂತಂ ಶ್ರೇಯೋಲಾಭಂ ದರ್ಶಯತಿ—ಷಷ್ಠೇ ಸಂವತ್ಸರೇ ಪೂರ್ವವದರಣ್ಯಸಂಚಾರೀ ಸ ಹ ರೋಹಿತಃ ಕಂಚಿದೃಷಿಂ ತಸ್ಮಿನ್ನರಣ್ಯ ಉಪೇಯಾಯ ಪ್ರಾಪ್ತವಾನ್ । ಕೀದೃಶಮೃಷಿಮಜೀಗರ್ತ-ನಾಮಕಂ ಸೂಯವಸಸ್ಯ ಪುತ್ರಮಶನಯಾ ಪರೀತಮನ್ನಾಲಾಭೇನ ಕ್ಷುತ್ಪೀಡಿತಮ್ ॥

ಯಾವಾಗಲೂ ಸಂಚರಿಸುತ್ತಿರು ಎಂದು ಬ್ರಾಹ್ಮಣವಾಕ್ಯವನ್ನು ಗೌರವಿಸಿ ರೋಹಿತನು ಆರನೇ ವರ್ಷವು ಅರಣ್ಯದಲ್ಲಿಯೇ ಸಂಚರಿಸುತ್ತಾ ಕಾಲವನ್ನು ಕಳೆದನು. ಹೀಗೆ ಅರಣ್ಯದಲ್ಲಿ ಸಂಚರಿಸುತ್ತಿರುವಾಗ ರೋಹಿತನಿಗೆ ಓರ್ವ ಋಷಿಯು ಕಾಣಿಸಿದನು. ಆ ಋಷಿಯ ಹೆಸರು ಅಜೀಗರ್ತನೆಂದು. ಈ ಋಷಿಯು, ತಾನೂ ತನ್ನ ಪುತ್ರರೂ ಅನ್ನಾಹಾರಗಳಿಲ್ಲದೆ ಹಸಿವಿನಿಂದ ಬಳಲಿ ಅರಣ್ಯದಲ್ಲಿ ಕ್ಷುತ್ಪರಿಹಾರವಾಗಲು ಏನಾದರೂ ಸಿಕ್ಕಬಹುದೆಂದು ಅರಣ್ಯದಲ್ಲೆಲ್ಲಾ ಸಂಚರಿಸುತ್ತಿದ್ದನು.

ತಸ್ಯ ಹ ತ್ರಯಃ ಪುತ್ರಾ ಆಸುಃ ಶುನಃಪುಚ್ಛಃ ಶುನಃಶೇಪಃ ಶುನೋ-ಲಾಂಗುಲ ಇತಿ ತಂ ಹೋವಾಚ ಋಷೇಽಹಂ ತೇ ಶತಂ ದದಾ-ಮ್ಯಹಮೇಷಾಮೇಕೇನಾಽಽತ್ಮಾನಂ ನಿಷ್ಕ್ರೀಣಾ ಇತಿ ಸ ಜ್ಯೇಷ್ಠಂ ಪುತ್ರಂ ನಿಗೃಹ್ಣಾನ ಉವಾಚ ನನ್ವಿಮಮಿತಿ ನೋ ಏವೇಮಮಿತಿ ಕನಿಷ್ಠಂ ಮಾತಾ ತೌ ಹ ಮಧ್ಯಮೇ ಸಂಪಾದಯಾಂಚಕ್ರತುಃ ಶುನಃ-ಶೇಪೇ ತಸ್ಯ ಹ ಶತಂ ದತ್ವಾ ಸ ತಮಾದಾಯ ಸೋಽರಣ್ಯಾದ್ಗ್ರಾಮ-ಮೇಯಾಯ ॥

ಅಥಾಜೀಗರ್ತರೋಹಿತಯೋಃ ಸಂವಾದಂ ದರ್ಶಯತಿ—ತಸ್ಯಾಜೀಗರ್ತಸ್ಯ ಶುನಃ ಪುಚ್ಛಾದಿನಾಮಕಾಸ್ತ್ರಯಃ ಪುತ್ರಾ ಆಸುಃ । ಪುತ್ರವಂತಮೃಷಿಂ ರೋಹಿತ ಉವಾಚ । ಹೇ ಋಷೇ ತೇ ತುಭ್ಯಮಹಂ ಗವಾಂ ಶತಂ ದದಾಮಿ । (ದತ್ವಾ ಚಾಹಮೇಷಾಂ ಪುತ್ರಾಣಾಂ ಮಧ್ಯ ಏಕೇನ ಕೇನಚಿತ್ಪುತ್ರೇಣಾತ್ಮಾನಂ ಮದ್ದೇಹಂ ವರುಣಾನ್ನಿಷ್ಕ್ರೀಣೈ ಮೂಲ್ಯಂ ದತ್ವಾತ್ಮಾನಂ ಮೋಚಯಾ-ಮೀತಿ । ಏವಮುಕ್ತಃ ಸೋಽಜೀಗರ್ತೋ) ಜ್ಯೇಷ್ಠಪುತ್ರಂ ಶುನಃಪುಚ್ಛನಾಮಕಂ ಹಸ್ತೇನ-ನಿಗೃಹ್ಣಾನಃ ಸ್ವಸಮೀಪೇ ಸಮಾಕರ್ಷನ್ರೋಹಿತಂ ಪ್ರತ್ಯೇವಮುವಾಚ । ತುಭ್ಯಮೇಕಃ ಪುತ್ರೋ ದೀಯತ ಇಮಂ ತು ಶುನಃಪುಚ್ಛಂ ತು ನ ದದಾಮಿ ಮಮ ಪ್ರಿಯತ್ವಾದಿತಿ । ತತೋ ಮಾತಾ ಕನಿಷ್ಠಂ ಹಸ್ತೇನ ಗೃಹೀತ್ವೈವಮುವಾಚ । ಇಮಂ ಶುನೋಲಾಂಗೂಲಂ ತು ಮಮ ಪ್ರಿಯಂ ನೋ ಏವ ಸರ್ವಥಾ ನ ದದಾಮೀತಿ ತತಸ್ತಾವುಭೌ ಮಾತಾಪಿತರೌ ಮಧ್ಯಮೇ ಪುತ್ರೇ ಶುನಃಶೇಪೇ ದಾನಂ ಸಂಪಾದಯಾಂಚಕ್ರತುರಂಗೀಕೃತವಂತೌ । ತತಸ್ತಸ್ಯಾಜೀಗರ್ತಸ್ಯ ಸ ರೋಹಿತೋ ಗವಾಂ ಶತಂ ದತ್ವಾ ತಂ ಶುನಃಶೇಪಮಾದಾಯಾವಸ್ಥಿತಃ । ತತಃ ರೋಹಿತಸ್ತೇನ ಶುನಃಶೇಪೇನ ಸಹಾರಣ್ಯಾ-ತ್ಸ್ವಕೀಯಂ ಗ್ರಾಮಂ ಪ್ರತ್ಯಾಜಗಾಮ ॥

ಅಜೀಗರ್ತನೆಂಬ ಋಷಿಗೂ ರೋಹಿತನಿಗೂ ನಡೆದ ಸಂವಾದವನ್ನು ವಿವರಿಸುವರು–ದಾರಿಯಲ್ಲಿ ಸಿಕ್ಕಿದ ಅಜೀಗರ್ತ ಋಷಿಗೂ ರಾಜಪುತ್ರನಾದ ರೋಹಿತನಿಗೂ ಸಂವಾದವು ನಡೆಯುತ್ತಿದ್ದಾಗ ಅಜೀಗರ್ತನಿಗೆ ಶುನಃಪುಚ್ಛಃ ಶುನಃಶೇಪ ಶುನೋಲಾಂಗೂಲ ಎಂಬ ಮೂರುಮಂದಿ ಪುತ್ರರಿರುವರೆಂಬ ವಿಷಯವು ರೋಹಿತನಿಗೆ ತಿಳಿಯಿತು. ಇದನ್ನು ತಿಳಿದ ರೋಹಿತನು ಪುತ್ರವಂತನಾದ ಅಜೀಗರ್ತ ಋಷಿಯನ್ನು ಕುರಿತು ಇಂತೆಂದನು—ಎಲೈ ಋಷಿಯೇ ನಿನಗೆ ನಾನು ನೂರು ಗೋವುಗಳನ್ನು ಕೊಡುತ್ತೇನೆ. ಏಕೆಂದರೆ ನಾನು ಹುಟ್ಟಿದಾಗ ನನ್ನ ತಂದೆಯು ನನ್ನನ್ನು ಯಜ್ಞದಲ್ಲಿ ಪಶುವನ್ನಾಗಿ ವರುಣನಿಗೆ ಅರ್ಪಿಸುವೆನೆಂದು ವಾಗ್ದಾನಮಾಡಿ ನನ್ನನ್ನು ಪಡೆದನು ಆದ್ದರಿಂದ ನಿನ್ನ ಮೂವರು ಪುತ್ರರಲ್ಲಿ ಒಬ್ಬನನ್ನು ನನಗೆ ಕೊಡು ಅವನ ಮೌಲ್ಯಕ್ಕಾಗಿ (ಬೆಲೆಗಾಗಿ) ನಿನಗೆ ಒಂದು ನೂರು ಗೋವುಗಳನ್ನು ಕೊಡುತ್ತೇನೆ. ಈರೀತಿಯಾಗಿ ಮೌಲ್ಯವನ್ನು ಕೊಟ್ಟು ಪಡೆದ ನಿನ್ನ ಪುತ್ರನನ್ನು ವರುಣನಿಗೆ ಅರ್ಪಿಸಿ ನಾನು ಬಂಧಮುಕ್ತನಾಗುತ್ತೇನೆ ಎಂದು ಹೇಳಿದನು. ಹೀಗೆ ಹೇಳಿದ ರಾಜಪುತ್ರನ ಮಾತನ್ನು ಕೇಳಿ ಅಜೀಗರ್ತನಿಂತೆಂದನು–ಎಲೈ ರಾಜಕುಮಾರನೇ ಕೇಳು. ನನ್ನ ಮೂವರು ಪುತ್ರರಲ್ಲಿ ಒಬ್ಬನನ್ನು ನಿನಗೆ ಕೊಡುವೆನು ಆದರೆ ನನಗೆ ಜ್ಯೇಷ್ಠಪುತ್ರನಾದ ಶುನಃಪುಚ್ಛನೆಂಬ ಮಗನು ನನಗೆ ಬಹಳ ಪ್ರೀತಿಪಾತ್ರನಾಗಿರುವನು ಇವನನ್ನು ಮಾತ್ರ ನಾನು ಕೊಡುವುದಿಲ್ಲ. ಆದ್ದರಿಂದ ಉಳಿದ ಇಬ್ಬರು ಪುತ್ರರಲ್ಲಿ ನಿನಗೆ ಬೇಕಾದವನನ್ನು ತೆಗೆದುಕೋ ಎಂದು ಹೇಳಿದನು. ಅನಂತರ ತಾಯಿಯು ಶುನೋಲಾಂಗೂಲನೆಂಬ ತನ್ನ ಕನಿಷ್ಠ (ಕಿರಿಯ) ಪುತ್ರನನ್ನು ತನ್ನ ಕೈಯಿಂದ ಹಿಡಿದುಕೊಂಡು–ಎಲೈ ರಾಜಪುತ್ರನೇ ಈ ಕನಿಷ್ಠಪುತ್ರನು ನನಗೆ ಬಹಳವಾಗಿ ಪ್ರೀತಿಪಾತ್ರನಾಗಿರುವನು. ಇವನನ್ನು ಮಾತ್ರ ನಾನು ಬಿಟ್ಟುಕೊಡುವುದಿಲ್ಲ ಎಂದು ಹೇಳಿದಳು–ಈರೀತಿ ಅಜೀಗರ್ತನು ಅವನ ಪತ್ನಿಯೂ ತನ್ನ ಮಕ್ಕಳಲ್ಲಿ ಜ್ಯೇಷ್ಠ ಮತ್ತು ಕನಿಷ್ಠಪುತ್ರರನ್ನು ಕೊಡಲೊಪ್ಪದಿರುವಾಗ ಮಧ್ಯಮ ಪುತ್ರನಾದ ಶುನಃಶೇಪನೇ ಉಳಿದನು. ಇವನನ್ನು ತೆಗೆದುಕೊಳ್ಳಲು ಇವನ ಮಾತಾಪಿತೃಗಳು ಅಡ್ಡಿಮಾಡಲಿಲ್ಲ. ಆದ್ದರಿಂದ ರೋಹಿತನು ಹಿಂದೆ ಹೇಳಿದಂತೆ ಅಜೀಗರ್ತನಿಗೆ ನೂರು ಗೋವುಗಳನ್ನು ಕೊಟ್ಟು ಮಧ್ಯಮಪುತ್ರನಾದ ಶುನಃಶೇಪನನ್ನು ತನ್ನ ಜತೆಯಲ್ಲಿ ಕರೆದುಕೊಂಡು ತನ್ನ ತಂದೆಯ ಬಳಿಗೆ ಹೊರಟನು

ಸ ಪಿತರಮೇತ್ಯೋವಾಚ ತತ ಹಂತಾಹಮನೇನಾಽಽತ್ಮಾನಂ ನಿಷ್ಕ್ರೀಣಾ
ಇತಿ ಸ ವರುಣಂ ರಾಜಾನಮುಪಸಸಾರಾನೇನ ತ್ವಾ ಯಜಾ ಇತಿ
ತಥೇತಿ ಭೂಯಾನ್ವೈ ಬ್ರಾಹ್ಮಣಃ ಕ್ಷತ್ರಿಯಾದಿತಿ ವರುಣ ಉವಾಚ
ತಸ್ಮಾ ಏತಂ ರಾಜಸೂಯಂ ಯಜ್ಞಕ್ರತುಂ ಪ್ರೋವಾಚ ತಮೇ-
ತಮಭಿಷೇಚನೀಯೇ ಪುರುಷಂ ಪಶುಮಾಲೇಭೇ

ತದಾಗಮನಾದೂರ್ಧ್ವಕಾಲೀನಂ ವೃತ್ತಾಂತಂ ದರ್ಶಯತಿ—ಸ ರೋಹಿತಃ ಪಿತರಮಾಗ-ತ್ಯೈವಮುವಾಚ । ಹೇ ತತ ಪಿತರ್ಹಂತಾಽವಯೋರ್ಹರ್ಷಃ ಸಂಪನ್ನಃ । ಅಹಮನೇನ ಶುನಃ-ಶೇಪರೂಪೇಣ ಮೂಲ್ಯೇನಾತ್ಮಾನಂ ಮದ್ದೇಹಂ ವರುಣಾನ್ನಿಷ್ಕ್ರೀಣೈ ಮೂಲ್ಯಂ ದತ್ವಾತ್ಮಾನಂ ಮೋಚಯಾಮೀತ್ಯರ್ಥಃ । ತಥೋಕ್ತೇ ಸ ಹರಿಶ್ಚಂದ್ರೋ ವರುಣಮುಪೇತ್ಯಾನೇನ ಶುನಃಶೇಪೇನ ಬ್ರಾಹ್ಮಣೇನ ತ್ವಾ ತ್ವಾಂ ಯಕ್ಷ್ಯಾಮೀತ್ಯುಕ್ತವಾನ್ । ಸ ವರುಣೋಽಪಿ ತಥೇತ್ಯಂಗೀಕೃತ್ಯೈವ-ಮುವಾಚ । ಕ್ಷತ್ರಿಯಾತ್ತವ ಪುತ್ರಾದ್ರೋಹಿತಾದಪ್ಯಯಂ ಬ್ರಾಹ್ಮಣೋ ಭೂಯಾನಭ್ಯಧಿಕ ಏವ ಮಮ ಪ್ರಿಯ ಇತಿ । ಉಕ್ತ್ವಾ ತಸ್ಮೈ ಹರಿಶ್ಚಂದ್ರಾಯ ಕರ್ತವ್ಯತ್ವೇನ ರಾಜಸೂಯಮುಪದಿದೇಶ

**ಚ । ಸ ಹರಿಶ್ಚಂದ್ರೋ ರಾಜಸೂಯಂ ಪ್ರಕೃತ್ಯ ತಸ್ಯ ಮಧ್ಯೇ ಯೋಽಯಮಭಿಷೇಚನೀಯಾಖ್ಯ ಏಕಾಹಃ ಸೋಮಯಾಗಸ್ತಸ್ಮಿಂಸ್ತಮೇತಂ ಶುನಃಶೇಪಂ ಪುರುಷಂ ಪಶುಮಾಲೇಭೇ ಸವನೀಯ-ಪಶುತ್ವೇನಾಲಬ್ಧುಂ ನಿಶ್ಚಿತವಾನ್ ॥**

ರೋಹಿತನು ರಾಜಧಾನಿಗೆ ಬಂದು ತನ್ನ ತಂದೆಯಾದ ಹರಿಶ್ಚಂದ್ರರಾಜನನ್ನು ಸಮಾಪಿದನಂತರ ನಡೆದ ವೃತ್ತಾಂತವನ್ನು ವಿವರಿಸುವನು—ರೋಹಿತನು ತನ್ನ ತಂದೆಯ ಬಳಿಗೆ ಹೋಗಿ ಇಂತೆಂದನು—ಎಲೈ ತಂದೆಯೇ ನನಗೂ ನಿನಗೂ ಹರ್ಷವನ್ನುಂಟುಮಾಡುವ ಸಮಾಚಾರವನ್ನು ತಂದಿರುವೆನು. ನಾನು ಬೆಲೆಯನ್ನು ಕೊಟ್ಟು ಶುನಃಶೇಪನೆಂಬ ಓರ್ವ ಬ್ರಾಹ್ಮಣ ಕುಮಾರನನ್ನು ಕರೆತಂದಿರುವೆನು. ಯಜ್ಞದಲ್ಲಿ ವರುಣನಿಗೆ ನನಗೆ ಬದಲಾಗಿ ಈ ಶುನಃಶೇಪನನ್ನು ಅರ್ಪಿಸಿ ನಾನು ಬಿಡುಗಡೆಯನ್ನು ಹೊಂದುವೆನು ಎಂದು ಹೇಳಿದನು. ಈ ಮಾತನ್ನು ಕೇಳಿ ಹರಿಶ್ಚಂದ್ರ ರಾಜನು ವರುಣನ ಸಮಾಪಕ್ಕೆ ಹೋಗಿ—ಎಲೈ ವರುಣನೇ, ಈ ಶುನಃಶೇಪನೆಂಬ ಬ್ರಾಹ್ಮಣ ಕುಮಾರನನ್ನು ನನ್ನ ಪುತ್ರನಿಗೆ ಬದಲಾಗಿ ನಿನಗೆ ಅರ್ಪಿಸಿ ಯಜ್ಞಮಾಡುವೆನು ಎಂದನು. ವರುಣನು ಹಾಗೆಯೇ ಆಗಲೆಂದು ಒಪ್ಪಿ ಇಂತೆಂದನು—ಎಲೈ ರಾಜನೇ, ಕ್ಷತ್ರಿಯಕುಮಾರನಾದ ರೋಹಿತನಿಗಿಂತಲೂ ಬ್ರಾಹ್ಮಣಕುಮಾರನಾದ ಶುನಃಶೇಪನು ಶ್ರೇಷ್ಠನು ಮತ್ತು ಅಧಿಕನು. ಆದ್ದರಿಂದ ಈ ಬ್ರಾಹ್ಮಣನನ್ನು ಅರ್ಪಿಸಿ ಯಜ್ಞಮಾಡುವುದೇ ನನಗೆ ಬಹಳ ಪ್ರಿಯವಾಗುವುದು ಎಂದನು. ಹೀಗೆ ಹೇಳಿ ಆ ಹರಿಶ್ಚಂದ್ರರಾಜನಿಗೆ ರಾಜಸೂಯಯಾಗವನ್ನು ಹೇಗೆ ಮಾಡಬೇಕೆಂಬ ವಿವರಗಳನ್ನೆಲ್ಲಾ ಉಪದೇಶಮಾಡಿದನು. ಅನಂತರ ಹರಿಶ್ಚಂದ್ರರಾಜನು ರಾಜಸೂಯಯಾಗವನ್ನು ಮಾಡುವುದಕ್ಕೆ ಪ್ರಾರಂಭಮಾಡಿ ಅದರಲ್ಲಿ ಅಭಿಷೇಚನೀಯವೆಂಬ ಒಂದುದಿನದ ಕರ್ಮವಾದ ಸೋಮಯಾಗದಲ್ಲಿ ಈ ಶುನಃಶೇಪನನ್ನು ಪಶುವನ್ನಾಗಿ ಮಾಡಲು ಸಂಕಲ್ಪಿಸಿ ಆ ಯಜ್ಞದಲ್ಲಿ ಪಶುವಿಗೆ ಬದಲಾಗಿ ಆ ಪುರುಷನನ್ನು ಪಶುವನ್ನಾಗಿ ಸ್ವೀಕರಿಸಲು ನಿಶ್ಚಯಿಸಿದನು.

---

*English Translation*

**(Continuation of this story. Rohita, Harischandra's son, purchases after six years of fruitless wanderings in the forest, a Braham boy, Sunahsepa by name, from his parents, to be sacrificed in his stead by Harischandra to Varuna**

Varuna now seized Harischandra, and his belly swelled (i.e. he was attacked by dropsy). When Rohita heard of it, he left the forest, and went to a village where Indra in human disguise met him, and said to him, "There is no happiness for him who does not travel, Rohita ! thus we have heard. Living in the society of men, the best man (often) becomes a sinner (by seduction, which is best avoided by wandering in places void of human dwelling) ; for Indra surely is the friend of the traveller. Therefore, wander !

Rohita thinking, a Brahman told me to wander, wandered for a second year in the forest. When he was entering a village after having left the forest, Indra met him in human disguise, and said to him, The feet of the wanderer are like the flower, his soul is growing and reaping the fruit ; and all his sins are destroyed by his fatigues in wandering. Therefore, wander !"

Rohita thinking, a Brahman told me to wander, wandered then a third year in the forest. When he was entering a village after having left the forest, Indra met him in human disguse and said to him, "The fortune of him whe is sitting, sits ; it rises when he rises ; it sleeps when he sleeps ; it moves. When he moves. Therefore, wander !"

Rohita thinking, a Brahman told me to wander, wandered then a fourth year in the forest. When he was entering a village after having left the forest, Indra said to him, "The Kali is lying on the ground, the Dvapara is hovering there ; the Treta is getting up, but the Krita happens to walk (higher and thither). Therefore, wander, wander !"

Rohita thinking, a Brahman told me to wander, wandered for a fifth year in the forest. When he was entering a village after having left the forest, Indra said to him , "The wandeaer finds honey and the sweet Udumbara fruit ; behold the beauty of the sun, who is not wearied by his wanderings. Therefore, wander, wander !"

Rohita then wanderd for a sixth year in the forest. He met this time the Rishi Ajigarta, the son of Suyavasa, who was starving, in tne foresr. He had thee sons, Sunahpuchha, Sunahsepa, and Sunolangala. He told him, " Rishi ! I give three a hundred cows ; for I will ransom myself (from being sacrificed with one of these (thy sons)." Ajigartha then excepted the oldest, saying "Do not take him." and the mother excepted the youngest, saying "Do not take him." Thus they agreed upon the middle one, Sunahsepa. He then gave for him a hundred cows, left the forest, entered the village, and brought him

before his father, saying, " O my dear (father!) by this boy I will ransom myself from being sacrificed. " He then approached Varuna the king and said, "I will sacrifice him to thee!" He said, "Well, let it be done; for a Brahman is worth more than a Kshattriya! Varuna than explained to the king the rites of the Rajasuya sacrifice, at which on the day appointed for the inauguration (abhishechaniya), he replaced the (sacrificial animal) by a man.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ತ್ರಯಸ್ತ್ರಿಂಶಾಧ್ಯಾಯೇ ತೃತೀಯಃ ಖಂಡಃ

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂವತ್ತ ಮೂರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು**



## ಅಥ ತ್ರಯಸ್ತ್ರಿಂಶಾಧ್ಯಾಯೇ ಚತುರ್ಥಃ ಖಂಡಃ

**ಮೂವತ್ತಮೂರನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು**

---

[ಹರಿಶ್ಚಂದ್ರನು ಮಾಡುವ ರಾಜಸೂಯ ಯಜ್ಞದಲ್ಲಿ ನಾಲ್ಕು ಮಂದಿ ಮಹಾಋಷಿಗಳು ಋತ್ವಿಕ್ಕುಗಳಾಗುವುದು. ಉದ್ದೇಶಿಸಿದ ನರಯಜ್ಞಕಾಲವು ಸಮಿಾಪಿಸುವುದು. ಭೀಕರವಾದ ಮರಣದಿಂದ ತಪ್ಪಿಸುವಂತೆ ಶುನಃಶೇಪನು ದೇವತೆಗಳಿಗೆ ಮೊರೆಯಿಡುವುದು. ಅವನು ಮೊರೆಯಿಟ್ಟ ದೇವತೆಗಳು ಮತ್ತು ಉಚ್ಚರಿಸಿದ ಮಂತ್ರಗಳು.]

---

**ತಸ್ಯ ಹ ವಿಶ್ವಾಮಿತ್ರೋ ಹೋತಾಽಽಸೀಜ್ಜಮದಗ್ನಿರಧ್ವರ್ಯುರ್ವಸಿಷ್ಠೋ ಬ್ರಹ್ಮಾಽಯಾಸ್ಯ ಉದ್ಗಾತಾ ತಸ್ಮಾ ಉಪಾಕೃತಾಯ ನಿಯೋಕ್ತಾರಂ ನ ವಿವಿದುಃ ಸ ಹೋವಾಚಾಜೀಗರ್ತಃ ಸೌಯವಸಿರ್ಮಹ್ಯಮಪರಂ ಶತಂ ದತ್ತಾಹಮೇನಂ ನಿಯೋಕ್ಷ್ಯಾಮೀತಿ ತಸ್ಮಾ ಅಪರಂ ಶತಂ ದದುಸ್ತಂ ಸ ನಿನಿಯೋಜ ||**

ಹರಿಶ್ಚಂದ್ರಸ್ಯ ರಾಜಸೂಯಾನುಷ್ಠಾನಂ ದರ್ಶಯತಿ—ವಿಶ್ವಾಮಿತ್ರಾದಯೋ ಮಹರ್ಷಯಸ್ತಸ್ಯ ಹರಿಶ್ಚಂದ್ರಸ್ಯ ಯಾಗೇ ರಾಜಸೂಯೇ ಹೋತ್ರಾದಯಶ್ಚತ್ವಾರೋ ಮಹರ್ತ್ವಿಜ ಆಸನ್। ತತ್ರ ಜಮದಗ್ನಿರಧ್ವರ್ಯುರಭಿಷೇಚನೀಯೇ ಸೋಮಯಾಗೇ ತಂ ಶುನಃಶೇಪಂ ಸವನೀಯಪಶುತ್ವೇನೋಪಾಕೃತವಾನ್। (ಬರ್ಹಿರ್ಯುಕ್ತಯಾ ಪ್ಲಕ್ಷಶಾಖಯಾ ಮಂತ್ರಪುರಃಸರಂ ಸಮುಪಸ್ಪೃಶ್ಯ ಸ್ವೀಕಾರ ಉಪಾಕರಣಮ್। ತತ ಊರ್ಧ್ವಂ ಯೂಪಬಂಧನಂ ನಿಯೋಜನಂ ತಸ್ಯ ಕ್ರೂರಕರ್ಮತ್ವಾದಧ್ವರ್ಯುರ್ನ ನಿಯೋಜನೇ ಪ್ರವೃತ್ತಃ। ತತ ಉಪಾಕೃತಾಯಾಸ್ಮಾ ಉಪಾಕರಣೇನ ಸಂಸ್ಕೃತಸ್ಮ ಶೌ (ಶು) ನಃ ಶೇಪಸ್ಯ ನಿಯೋಕ್ತಾರಂ ಯೂಪೇ ಬಂಧನಕರ್ತಾರಂ ಕ್ರೂರಂ ಕಂಚಿನಪಿ ಪುರುಷಂ ನ ವಿವಿದುರ್ನ ಲೇಭಿರೇ ತದಾನೀಂ ಸೂಯವಸಸ್ಯ ಪುತ್ರಃ ಶುನಃಶೇಪಸ್ಯ ಪಿತಾ ಸೋಽಜೀಗರ್ತ (ಉವಾಚ) ಮಹ್ಯಂ ಪೂರ್ವಸ್ಮಾಚ್ಛತಾದಪರಂ ಗೋಶತಂ ಹೇ ಯಜಮಾನರ್ತ್ವಿಜೋ ದತ್ತ ತತೋಽಹಮೇನಂ ಶುನಃಶೇಪಂ ಯೂಪೇ ನಿಯೋಕ್ಷ್ಯಾಮಿ ರಶನಯಾ ಕಟ್ಯಾಂ ಶಿರಸಿ ಪಾದಯೋ-ರ್ಬಧ್ವಾ ರಶನಾಗ್ರಸ್ಯ ಯೂಪೇ ಬಂಧನಂ ನಿಯೋಜನಂ ತದಹಂ ಕರಿಷ್ಯಾಮೀತಿ। ತಸ್ಮಾ ಅಜೀಗರ್ತಾಯಾಪರಂ ಗೋಶತಂ ದದುಃ। ತಂ ಚ ಶುನಃಶೇಪಂ ಸೋಽಜೀಗರ್ತೋ ನಿನಿಯೋಜ। ಧಾತೋರ್ದ್ವಿರ್ಭಾವಂ ಪರಿತ್ಯಜ್ಯೋಪಸರ್ಗಸ್ಯ ದ್ವಿರ್ಭಾವಶ್ಛಾಂದಸಃ॥

ಹರಿಶ್ಚಂದ್ರರಾಜನು ಮಾಡಿದ ರಾಜಸೂಯಯಾಗಕ್ರಮವನ್ನು ವಿವರಿಸುವರು—ಈ ಹರಿಶ್ಚಂದ್ರನು ಮಾಡಿದ ಯಾಗದಲ್ಲಿ ವಿಶ್ವಾಮಿತ್ರನೇ ಹೋತೃವೆಂಬ ಋತ್ವಿಜನ ಪಾತ್ರವನ್ನು ವಹಿಸಿದನು. ಜಮದಗ್ನಿ ಋಷಿಯು ಅಧ್ವರ್ಯುವಾದನು. ವಸಿಷ್ಠ ಋಷಿಯು ಬ್ರಹ್ಮನೆಂಬ ಋತ್ವಿಜನೆಂಬ ಪಾತ್ರವನ್ನು ವಹಿಸಿದನು. ಅಯಾಸ್ಯನೆಂಬ ಋಷಿಯು ಸಾಮಗಾನಮಾಡುವ ಉದ್ಗಾತೃವೆಂಬ ಋತ್ವಿಜನ ಪಾತ್ರವನ್ನು ವಹಿಸಿದನು. ಈ ನಾಲ್ಕು ಮಂದಿ ಮಹರ್ಷಿಗಳು ಹೋತ್ರಾದಿ ಋತ್ವಿಕ್ಕುಗಳಾದ ನಂತರ ಅಧ್ವರ್ಯುವಾದ ಜಮದಗ್ನಿಯು ಅಭಿಷೇಚನೀಯವಾದ ಸೋಮಯಾಗದ ದಿವಸ ಆ ಶುನಃಶೇಪನನ್ನು ಸವನೀಯ ಪಶುವೆಂಬುದಾಗಿ ಅಂಗೀಕರಿಸಿ ಅವನನ್ನು (ಪಶುವೆಂದು ಭಾವಿಸಿ) ಬರ್ಹಿ ಎಂಬ ದರ್ಭೆಗಳಿಂದ ಸಹಿತವಾದ ಪ್ಲಕ್ಷಶಾಖೆಯಿಂದ ಪಶುವಾದ ಶುನಃಶೇಪನನ್ನು ಸ್ಪರ್ಶಮಾಡಿದನು. ಅನಂತರ ಯೂಪಸ್ತಂಭಕ್ಕೆ ಪಶುವನ್ನು ಕಟ್ಟಬೇಕೆಂಬ ವಿಧಿಯಿರುವುದು. ಈ ಪಶುಬಂಧನಕರ್ಮವು ಬಹಳ ಕ್ರೂರವಾದುದರಿಂದ ಅಧ್ವರ್ಯುವು ಅದನ್ನು ಮಾಡಲಿಲ್ಲ. ಸ್ಪರ್ಶನಸಂಸ್ಕಾರಾನಂತರ ನಡೆಸಬೇಕಾದ ಪಶುಬಂಧನವನ್ನು (ಶುನಃಶೇಪನನ್ನು ಪಶುವಿನಂತೆ ಕಂಬಕ್ಕೆ ಕಟ್ಟುವ ಕರ್ಮ) ನಿರ್ವಹಿಸಲು ಯಜ್ಞಸಭೆಯಲ್ಲಿ ನೆರೆದಿದ್ದ ಸಭಿಕರಾದಿ ಜನರಲ್ಲಿ ಯಾರೂ ಇಷ್ಟಪಡಲಿಲ್ಲ (ಒಪ್ಪಲಿಲ್ಲ). ಅನಂತರ ಸೂಯವಸ ಎಂಬುವನ ಪುತ್ರನೂ, ಶುನಃಶೇಪನ ತಂದೆಯೂ ಆದ ಅಜೀಗರ್ತನು ಮತ್ತಿಂತೆಂದನು—ನನಗೆ ಹಿಂದೆ ಕೊಟ್ಟಂತೆ ಪುನಃ ಒಂದು ನೂರು ಗೋವುಗಳನ್ನು ಕೊಡಿ. ಎಲೈ ಋತ್ವಿಗ್ಯಜಮಾನಾದಿಗಳೇ ನಾನು ಆಮೇಲೆ ಈ ಶುನಃಶೇಪನನ್ನು ಹಗ್ಗದಿಂದ ಈ ಯೂಪಸ್ತಂಭಕ್ಕೆ ಕಟ್ಟಿ ಇವನ ಶಿರಸ್ಸನ್ನೂ ಕಾಲುಗಳನ್ನೂ ಹಗ್ಗದಿಂದ ಕಟ್ಟಿ ಭದ್ರಪಡಿಸಿ ಅಲುಗಾಡದಂತೆ ಮಾಡುವೆನು ಎಂದನು. ಆಗ ಯಜಮಾನಾದಿಗಳು ಹಾಗೆಯೇ ಆಗಲೆಂದು ನೂರು ಗೋವುಗಳನ್ನು ಕೊಡಲು ಅಜೀಗರ್ತನು ಶುನಃಶೇಪನನ್ನು ಹಗ್ಗದಿಂದ ಯೂಪಸ್ತಂಭಕ್ಕೆ ಕಟ್ಟಿಹಾಕಿದನು.

ತಸ್ಮಾ ಉಪಾಕೃತಾಯ ನಿಯುಕ್ತಾಯಾಽಽಪ್ರೀತಾಯ ಪರ್ಯಗ್ನಿಕೃತಾಯ
ವಿಶಸಿತಾರಂ ನ ವಿವಿದುಃ ಸ ಹೋವಾಚಾಜೀಗರ್ತಃ ಸೌಯವಸಿರ್ಮ-

**ಹ್ಯನುಪರಂ ಶತಂ ದತ್ತಾಹಮೇನಂ ವಿಶಸಿಷ್ಯಾಮೀತಿ ತಸ್ಮಾ ಅಪರಂ ಶತಂ ದದುಃ ಸೋಽಸಿಂ ನಿಃಶಾನ ಏಯಾಯ ||**

**ಅಥ ವಿಶಸನಪ್ರವೃತ್ತಿಂ ದರ್ಶಯತಿ—ಉಪಾಕರಣನಿಯೋಜನೇ ಪೂರ್ವಮುಕ್ತೇ । ಆಪ್ರೀಸಂಜ್ಞಿತಾಭಿರೇಕಾದಶಭಿಃ ಪ್ರಯಾಜಯಾಜ್ಯಾಭಿರ್ಯದ್ಯಜನಂ ತದಾಪ್ರೀಣನಂ । ದರ್ಭರೂಪೇಣೋಲ್ಮುಕೇನ ತ್ರಿಃ ಪ್ರದಕ್ಷಿಣೀಕರಣಂ ತತ್ಪರ್ಯಗ್ನಿಕರಣಂ । ತಥಾವಿಧಸಂಸ್ಕಾರಚತುಷ್ಟಯಯುಕ್ತಾಯ ತಸ್ಮೈ ತಸ್ಯ ಶುನಃಶೇಪಸ್ಯ ವಿಶಸಿತಾರಂ ಹಿಂಸಿತಾರಂ ಪುರುಷಂ ಕ್ರೂರಾತ್ಮಾನಂ ಕಂಚಿದಪಿ ಪುರುಷಂ ನ ಲೇಭಿರೇ । ತತೋಽಜೀಗರ್ತಃ ಪೂರ್ವವದಪರಂ ಗೋಶತಂ ಗೃಹೀತ್ವಾ ಮಾರಯಿತುಮಸಿಂ ಖಡ್ಗಂ ನಿಃಶಾನೋ ನಿಶಿತಂ ತೀಕ್ಷ್ಣಂ ಕುರ್ವನ್ನೇವೇಯಾಯ ಜಗಾಮ ||**

ಈಗ ಯಜ್ಞಪಶುವಾದ ಶುನಃಶೇಪನನ್ನು ಕತ್ತರಿಸುವುದಕ್ಕೆ ಸಿದ್ಧಪಡಿಸುತ್ತಿರುವುದನ್ನು ಯೂಪಸ್ತಂಭಕ್ಕೆ ಕಟ್ಟಿಹಾಕಿದ ಮೇಲೆ ಮುಂದೆ ನಡೆಯಬೇಕಾದ ಸಂಸ್ಕಾರಗಳನ್ನು ಮಾಡಲಾಯಿತು ಎಂದರೆ ಯಜ್ಞದಲ್ಲಿ ಪಶುಹೋಮಕ್ಕಾಗಿ ಮಾಡುವ ಆಪ್ರೀಸೂಕ್ತದ ಹನ್ನೊಂದು ಋಕ್ಕುಗಳನ್ನು ಪಠಿಸಿ ಹೋಮಮಾಡಿ ಅನಂತರ ಯಾಜ್ಯಾಮಂತ್ರದಿಂದ ಹೋಮವನ್ನು ಮಾಡಿ ಮುಗಿಸಿದರು. ಬಳಿಕ ದರ್ಭೆಸಹಿತವಾದ ಉರಿಯುತ್ತಿರುವ ಕೊಳ್ಳಿಯನ್ನು ಕೈಯಲ್ಲಿ ಹಿಡಿದುಕೊಂಡು ಯಜ್ಞಪಶುವಿನ ಸುತ್ತಲೂ ಮೂರಾವರ್ತಿ ಪ್ರದಕ್ಷಿಣೆಮಾಡುವ ಪರ್ಯಗ್ನಿಕರಣವೆಂಬ ಸಂಸ್ಕಾರವನ್ನೂ ಮಾಡಲಾಯಿತು. (ಇಲ್ಲಿ ಹೇಳಿರುವ ಸಂಸ್ಕಾರಗಳು ನಾಲ್ಕು—ಯೂಪಸ್ತಂಭಕ್ಕೆ ಪಶುವನ್ನು ಕಟ್ಟುವುದು, ಆಪ್ರೀಸೂಕ್ತದ ಋಕ್ಕುಗಳಿಂದ ಹೋಮಮಾಡುವುದು ಯಾಜ್ಯಾಹೋಮ, ಪರ್ಯಗ್ನಿಕರಣ ಎಂಬಿವೇ ನಾಲ್ಕು ಸಂಸ್ಕಾರಗಳು) ಈ ವಿಧವಾದ ನಾಲ್ಕು ಸಂಸ್ಕಾರಗಳನ್ನು ಮಾಡಿದ ನಂತರ ಮುಂದೆ ಮಾಡಬೇಕಾದ ಪಶುವಿಕರ್ತನನನ್ನು (ಯಜ್ಞಪಶುವನ್ನು ವಧಿಸಿ ಕತ್ತರಿಸುವುದು) ಮಾಡಲು ಅಲ್ಲಿ ಯಾರೂ ಸಿದ್ಧರಾಗಿರಲಿಲ್ಲ. ಈ ಕ್ರೂರಕರ್ಮವನ್ನು ಮಾಡಲೂ ಯಾರೂ ಒಪ್ಪಲಿಲ್ಲ. ಇದನ್ನೆಲ್ಲಾ ನೋಡಿ ಶುನಃಶೇಪನ ತಂದೆಯಾದ ಅಜೀಗರ್ತನೇ ಮುಂದೆ ಬಂದು—ನನಗೆ ಇನ್ನೂ (ಹಿಂದೆ ಕೊಟ್ಟ ಗೋವುಗಳನ್ನಲ್ಲದೆ) ನೂರು ಗೋವುಗಳನ್ನು ಕೊಡುವುದಾದರೆ ಯಜ್ಞಪಶುವನ್ನು ವಧೆಮಾಡಿ ಕತ್ತರಿಸಲು ಸಿದ್ಧನಾಗಿರುವೆನು ಎಂದು ಹೇಳಲು ಅದರಂತೆ ಅವನಿಗೆ ಪುನಃ ನೂರು ಗೋವುಗಳನ್ನು ಕೊಡಲಾಯಿತು. ಅವುಗಳನ್ನು ತೆಗೆದುಕೊಂಡು ಈ ಅಜೀಗರ್ತನು ತನ್ನ ಕತ್ತಿಯನ್ನು (ಅಥವಾ ಮಚ್ಚನ್ನು) ಹರಿತವನ್ನಾಗಿಮಾಡಿ ಪಶುರೂಪದಿಂದಿರುವ ತನ್ನ ಪುತ್ರನಾದ ಶುನಃಶೇಪನನ್ನು ವಧೆಮಾಡಿ ಕತ್ತರಿಸಲು ಉದ್ಯುಕ್ತನಾದನು.

**ಅಥ ಹ ಶುನಃಶೇಪ ಈಕ್ಷಾಂಚಕ್ರೇಽಮಾನುಷಮಿವ ವೈ ಮಾ ವಿಶಸಿಷ್ಯಂತಿ ಹಂತಾಹಂ ದೇವತಾ ಉಪಧಾವಾಮೀತಿ ಸ ಪ್ರಜಾಪತಿಮೇವ ಪ್ರಥಮಂ ದೇವತಾನಾಮುಪಸಸಾರ ಕಸ್ಯ ನೂನಂ ಕತಮಸ್ಯಾಮೃತಾನಾಮಿತ್ಯೇತಯರ್ಚಾ**

**ಪಿತುರಜೀಗರ್ತಸ್ಯ (ಶುನಃಶೇಪಸ್ಯ) ವೃತ್ತಾಂತಂ ದರ್ಶಯತಿ—ಅಥ ಪಿತುಃ ಪುತ್ರಮಾರಣೋದ್ಯೋಗಾನಂತರಂ ಶುನಃಶೇಪಃ ಪುತ್ರೋ ಮನಸ್ಯೇವಮೀಕ್ಷಾಂಚಕ್ರೇ ವಿಚಾರಿತವಾನ್ । ಅನ್ಯತ್ರ ಪರ್ಯಗ್ನಿಕೃತಂ ಪುರುಷಮಾರಣ್ಯಾಂಶ್ಚೋತ್ಸೃಜಂತ್ಯಹಿಂಸಾಯಾ ಇತಿ ಶ್ರುತೇಃ ಪರ್ಯಗ್ನಿಕರಣಾದೂರ್ಧ್ವಂ**

**ಮನುಷ್ಯಂ ಪರಿತ್ಯಜಂತಿ । ಏತೇ ತು ಮಾಮುಮಾನುಷಮಿವ ಮನುಷ್ಯವ್ಯತಿರಿಕ್ತಮಜಾದಿಪಶುಮಿವ ವಿಶಸಿಷ್ಯಂತಿ ಮಾರಯಿಷ್ಯಂತಿ ಅತ ಹಾ ಕಷ್ಟಮೇತತ್ಸಂಪನ್ನಮ್ । ಅಹಮಿತಃಪರಂ ರಕ್ಷಾರ್ಥಂ ದೇವತಾ ಉಪಧಾವಾಮಿ ಭಜಾಮೀತಿ ವಿಚಾರ್ಯ ದೇವಾನಾಂ ಮಧ್ಯೇ ಪ್ರಥಮಂ ಮುಖ್ಯಂ ಪ್ರಜಾಪತಿಮೇವ ಕಸ್ಯ ನೂನಮಿತ್ಯೃಚೋಪಸಸಾರ ಸೇವಿತವಾನ್ ॥**

ಶುನಃಶೇಪನ ಮತ್ತು ಅಜೀಗರ್ತನ ಮುಂದಿನ ವೃತ್ತಾಂತವನ್ನು ತಿಳಿಸುವರು—ತನ್ನ ತಂದೆಯಾದ ಅಜೀಗರ್ತನೇ, ತನ್ನನ್ನು ಕೊಲ್ಲುವುದಕ್ಕಾಗಿ ಹರಿತವಾದ ಕತ್ತಿಯನ್ನು ಕೈಯಲ್ಲಿ ಹಿಡಿದು ಮುಂದೆ ಬರುತ್ತಿರುವುದನ್ನು ಕಂಡು ಶುನಃಶೇಪನಿಗೆ ಎಚ್ಚರತಪ್ಪಿದಂತಾಯಿತು. ಈಗ ನನ್ನನ್ನು ಯಜ್ಞದಲ್ಲಿ ಪಶುವನ್ನು ಕೊಲ್ಲುವಂತೆಯೇ ಕೊಲ್ಲುವರು. ಕೆಲವುಕಡೆ ಯಜ್ಞದಲ್ಲಿ ಪುರುಷನನ್ನು ಯಜ್ಞಪಶುವನ್ನಾಗಿ ಭಾವಿಸಿ ಯಜ್ಞಮಾಡುವಾಗ ಪಶುವಿಗೆ ಮಾಡುವಂತೆ ಪರ್ಯಗ್ನಿಕರಣ (ಕೊಳ್ಳಿಯನ್ನು ಪಶುವಿನ ಸುತ್ತಲೂ ತೆಗೆದುಕೊಂಡು ಹೋಗುವುದು) ಮೊದಲಾದ ಸಂಸ್ಕಾರಗಳನ್ನು ಮಾತ್ರ ಮಾಡಿ ಹಿಂಸೆಯನ್ನು ಮಾಡಬಾರದೆಂದು ಆ ಪುರುಷನನ್ನು ಅರಣ್ಯದಲ್ಲಿ ಬಿಟ್ಟುಬಿಡುವರು. ಪರ್ಯಗ್ನಿಕರಣಾನಂತರ ಪುರುಷನನ್ನು (ಪಶು) ಬಿಡಬೇಕೆಂದು ಶ್ರುತಿವಾಕ್ಯವಿರುವುದರಿಂದ ಆರೀತಿ ಬಿಟ್ಟುಬಿಡುವರು. ಆದರೆ ಇಲ್ಲಿ ಸೇರಿರುವ ಋತ್ವಿಗ್ಯಜಮಾನರು ಮೊದಲಾದವರು ಹಾಗೆ ಮಾಡದೆ ಪುರುಷನಲ್ಲದ ಆಡು ಮೊದಲಾದ ಪಶುಪ್ರಾಣಿಯಂತೆ ನನ್ನನ್ನು ವಧೆಮಾಡಿ ಕತ್ತರಿಸಿಯೇ ಯಜ್ಞಮಾಡಬೇಕೆಂದಿರುವರು. ಹಾ ಕಷ್ಟವು ಇಂತಹ ದುರ್ದೆಶೆಯು ನನಗೆ ಪ್ರಾಪ್ತವಾಯಿತಲ್ಲಾ. ನನ್ನನ್ನು ಈ ಕಷ್ಟದಿಂದ ಪಾರುಮಾಡುವವರು ಯಾರೂ ಇಲ್ಲವಲ್ಲ ಎಂದು ಮನಸ್ಸಿನಲ್ಲಿ ನಾನಾವಿಧವಾಗಿ ದುಃಖಪಡುತ್ತಾ-ಮನುಷ್ಯರಲ್ಲಿ ನನಗೆ ಕನಿಕರವನ್ನು ತೋರಿಸಿ ಕಾಪಾಡುವವರಾರೂ ಇಲ್ಲ. ಆದ್ದರಿಂದ ಮನುಷ್ಯರಾದವರನ್ನು ನಂಬದೆ ಇನ್ನು ಮುಂದೆ ದೇವತೆಗಳನ್ನೇ ನಂಬಿ, ನನ್ನನ್ನು ಮೃತ್ಯುಭಯದಿಂದ ರಕ್ಷಿಸುವುದಕ್ಕಾಗಿ ಆ ದೇವತೆಗಳನ್ನೇ ಮರೆಹೋಗುವೆನು. ಮೊದಲು ದೇವತೆಗಳಲ್ಲೆಲ್ಲಾ ಮುಖ್ಯನೂ ಶ್ರೇಷ್ಠನೂ ಆದ ಪ್ರಜಾಪತಿಯನ್ನೇ ಮರೆಹೋಗುವೆನು ಎಂದು ಮನಸ್ಸಿನಲ್ಲಿ ಚಿಂತಿಸಿ, ಪ್ರಜಾಪತಿದೇವತಾಕವಾದ **ಕಸ್ಯ ನೂನಂ ಕತಮಸ್ಯಾಮೃತಾನಾಂ** (ಋ. ಸಂ. ೧-೨೪-೧) ಎಂಬ ಋಕ್ಕಿನಿಂದ ಪ್ರಜಾಪತಿಯನ್ನು ಸ್ತೋತ್ರಮಾಡಿದನು.

## ತಂ ಪ್ರಜಾಪತಿರುವಾಚಾಗ್ನಿರ್ವೈ ದೇವಾನಾಂ ನೇದಿಷ್ಠಸ್ತಮೇವೋಪ-ಧಾವೇತಿ ಸೋಽಗ್ನಿಮುಪಸಸಾರಾಗ್ನೇರ್ವಯಂ ಪ್ರಥಮಸ್ಯಾಮೃ-ತಾನಾಮಿತ್ಯೇತಯರ್ಚಾ ॥

**ತಸ್ಯ ಪ್ರಜಾಪತೇಃ ಸಹಕಾರಿತ್ವೇನಾಗ್ನೇಃ ಸೇವಾಂ ದರ್ಶಯತಿ—ತಂ ಸೇವಕಂ ಶುನಃಶೇಪಂ ಪ್ರಜಾಪತಿರೇವಮುಕ್ತವಾನ್ । ಅಗ್ನಿಃ ಸರ್ವೇಷಾಂ ದೇವಾನಾಂ ನೇದಿಷ್ಠೋ ಹವಿರ್ವಹನೇನಾತಿ-ಸಮೀಪವರ್ತೀ । ಅತಸ್ತಮೇವೋಪಾಸ್ಸ್ವೇತ್ಯುಕ್ತಃ ಶುನಃಶೇಪೋಽಗ್ನೇರ್ವಯಮಿತ್ಯೃಚಾಽಗ್ನಿ-ಮುಪಾಸಿತವಾನ್ ॥**

ತನ್ನನ್ನು ಸ್ತುತಿಸುತ್ತಿರುವ ಶುನಃಶೇಪನಿಗೆ ಸಂತುಷ್ಟನಾಗಿ ಪ್ರಜಾಪತಿಯು ಶುನಃಶೇಪನನ್ನು ಕುರಿತು ಇಂತೆಂದನು-ಎಲೈ ಶುನಃಶೇಪನೇ, ಅಗ್ನಿಯು ದೇವತೆಗಳಿಗೆ ಹವಿಸ್ಸನ್ನು ವಹಿಸುವವನಾದ್ದರಿಂದ ಅವನು ದೇವತೆಗಳಿಗೆ ಯಾವಾಗಲೂ ಸಮೀಪವರ್ತಿಯಾಗಿರುವನು, ಅವನನ್ನು ಸೇವಿಸು ಎಂದು ಹೇಳಿದನು. ಅದರಂತೆ ಶುನಃಶೇಪನು ಅಗ್ನಿಯನ್ನು **ಅಗ್ನೇರ್ವಯಂ ಪ್ರಥಮಸ್ಯಾಮೃತಾನಾಂ**. (ಋ. ಸಂ, ೧-೨೪-೨) ಎಂಬ ಋಕ್ಕಿನಿಂದ ಸ್ತೋತ್ರಮಾಡಿದನು.

**ತಮಗ್ನಿರುವಾಚ ಸವಿತಾ ವೈ ಪ್ರಸವಾನಾಮೀಶೇ ತಮೇವೋಪಧಾವೇತಿ ಸ ಸವಿತಾರಮುಪಸಸಾರಾಭಿ ತ್ವಾ ದೇವ ಸವಿತರಿತ್ಯೇತೇನ ತೃಚೇನ॥**

ತಸ್ಯ ಚಾಗ್ನೇಃ ಸಹಕಾರಿತ್ವೇನ ಸವಿತುರುಪಾಸನಂ ದರ್ಶಯತಿ—ಪ್ರಸವಾನಾಂ ಸರ್ವೇಷು ಕಾರ್ಯೇಷು ಪ್ರೇರಣಾರೂಪಾಣಾಮನುಜ್ಞಾನಾತ್ ಸವಿತೇಶಃ ಸ್ವಾಮೀ ಭವತಿ । ತಸ್ಮಾತ್ತಮೇವೋಪ-ಧಾವೇತ್ಯಗ್ನಿನೋಪದಿಷ್ಟೋಽಭಿ ತ್ವೇತಿ ತೃಚೇನ ಸವಿತಾರಮುಪಾಸಿತವಾನ್ ॥

ಬಳಿಕ ಅಗ್ನಿಯು ಸಂತುಷ್ಟನಾಗಿ ಶುನಃಶೇಪನನ್ನು ಕುರಿತು—ಎಲೈ ಶುನಃಶೇಪನೇ ಸವಿತೃದೇವನು ಸಮಸ್ತಪ್ರಾಣಿಗಳನ್ನು ಅವರವರ ವ್ಯವಹಾರಾದಿಗಳಲ್ಲಿ ಪ್ರೇರಿಸತಕ್ಕವನು. ಅವನು ಸರ್ವರಿಗೂ ಸ್ವಾಮಿಯು ಆದ್ದರಿಂದ ಸವಿತೃದೇವನನ್ನು ಸ್ತುತಿಸು ಎಂದು ಹೇಳಲಾಗಿ ಅದರಂತೆ ಶುನಃಶೇಪನು ಸವಿತೃದೇವನನ್ನು ಅಭಿ ತ್ವಾ ದೇವ ಸವಿತಃ (ಋ. ಸಂ. ೧-೨೪-೩,೪, ೫) ಎಂದು ಮೊದಲಾದ ಮೂರು ಋಕ್ಕುಗಳಿಂದ ಸ್ತೋತ್ರಮಾಡಿದನು.

**ತಂ ಸವಿತೋವಾಚ ವರುಣಾಯ ವೈ ರಾಜ್ಞೇ ನಿಯುಕ್ತೋಽಸಿ ತಮೇ-ವೋಪಧಾವೇತಿ ಸ ವರುಣಂ ರಾಜಾನಮುಪಸಸಾರ ಉತ್ತರಾಭಿರೇಕ-ತ್ರಿಂಶತಾ**

ತಸ್ಯ ಚ ಸವಿತುಃ ಸಹಕಾರಿತ್ವೇನ ವರುಣಸ್ಯೋಪಾಸನಂ ದರ್ಶಯತಿ—ಹೇ ಶುನಃಶೇಪ ವರುಣಾರ್ಥಂ ತ್ವಂ ಯೂಪೇ ಬದ್ಧೋಽಸ್ಯತೋ ವರುಣಮುಪಾಸ್ಸ್ವೇತಿ ಸವಿತ್ರೋಕ್ತಃ ಪೂರ್ವಸ್ಮಾತ್-ಸವಿತೃವಿಷಯಾ ತೃಚಾದುತ್ತರಾಭಿರೇಕತ್ರಿಂಶತ್ಸಂಖ್ಯಾಕಾಭಿರ್ಋಗ್ಭಿರ್ವರುಣಮುಪಾಸಿತವಾನ್ । ನ ಹಿ ತೇ ಕ್ಷತ್ರಮ್ (೧-೨೪-೬) ಇತ್ಯಾದ್ಯಾಃ ಸೂಕ್ತಶೇಷಭೂತಾ ದಶರ್ಚೋ ಯಚ್ಚಿದ್ಧಿ ತೇ ವಿಶಃ (೧-೨೫-೧) ಇತ್ಯಾದಿರೇಕವಿಂಶತ್ಯೃಚಂ ಸೂಕ್ತಮಿತ್ಯೇವಮೇಕತ್ರಿಂಶತ್ಸಂಖ್ಯಾ ದ್ರಷ್ಟವ್ಯಾ ॥

ಸವಿತೃದೇವನ ಉಪದೇಶದಂತೆ ಶುನಃಶೇಪನು ವರುಣನನ್ನು ಸ್ತುತಿಸುವದನ್ನು ತಿಳಿಸುತ್ತಾರೆ. ಬಳಿಕ ಶುನಃಶೇಪನಿಗೆ ಸವಿತೃದೇವನು ಪ್ರತ್ಯಕ್ಷನಾಗಿ—ಎಲೈ ಶುನಃಶೇಪನೇ, ನೀನು ವರುಣದೇವನ ಪಾಶಗಳಿಂದ ಬಂಧಿಸಲ್ಪಟ್ಟಿದ್ದೀಯೆ. ಆ ಪಾಶವಿಮೋಚನೆಗಾಗಿ ನೀನು ವರುಣದೇವನನ್ನು ಸೇವಿಸಿ ಸ್ತುತಿಸು ಎಂದು ಹೇಳಿದನು. ಅದರಂತೆ ಶುನಃಶೇಪನು ನ ಹಿ ತೇ ಕ್ಷತ್ರಂ (ಋ. ಸಂ. ೧-೨೪-೬) ಎಂಬ ಋಕ್ಕಿನಿಂದ ಮೊದಲುಮಾಡಿ ಯಚ್ಚಿದ್ಧಿ ತೇ ವಿಶಃ (ಋ. ಸಂ. ೧-೨೫-೧) ಎಂಬ ಋಕ್ಕಿನ ವರೆಗೆ ಇರುವ ವರುಣದೇವತಾಕವಾದ ಇಪ್ಪತ್ತೊಂದು ಋಕ್ಕುಗಳಿಂದ ಸ್ತುತಿಸಿದನು.

**ತಂ ವರುಣ ಉವಾಚಾಗ್ನಿರ್ವೈ ದೇವಾನಾಂ ಮುಖಂ ಸುಹೃದಯತ-ಮಸ್ತಂ ನು ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ ಸೋಽಗ್ನಿಂ ತುಷ್ಟಾವಾ-ತ ಉತ್ತರಾಭಿರ್ದ್ವಾವಿಂಶತ್ಯಾ ॥**

ತಸ್ಯ ಚ ವರುಣಸ್ಯ ಸಹಕಾರಿತ್ವೇನ ಪುನರಪ್ಯಗ್ನೇರುಪಾಸನಂ ದರ್ಶಯತಿ— ಅಯಮಗ್ನಿಃ ಸರ್ವೇಷಾಂ ದೇವಾನಾಂ ಮುಖಂ ಮುಖಸ್ಥಾನೀಯಃ । ಅಗ್ನಿದ್ವಾರೇಣೈವ ಸರ್ವೈರ್ದೇವೈರ್ಹವಿಃ

ಸ್ವೀಕಾರಾತ್ । ಅತ ಏವ ಪ್ರೀತ್ಯಾ ಹವಿರ್ವಹನಾದತಿಶಯೇನ ಸುಹೃದಯಃ । ಸುಹೃದಯತಮಂ ತಮಗ್ನಿಂ ನು ಕ್ಷಿಪ್ರಂ ಸ್ತುಹೀತಿ ವರುಣೇನೋಕ್ತಃ ಪೂರ್ವೋಕ್ತಾಭ್ಯಃ ಋಗ್ಭ್ಯ ಉತ್ತರಾಭಿರ್ದ್ವಾವಿಂಶತಿಸಂಖ್ಯಾಕಾಭಿರ್ಋಗ್ಭಿರಗ್ನಿಂ ತುಷ್ಟಾವ । ವಸಿಷ್ವಾಹೀತ್ಯಾದಿಕಂ (೧.೨೬-೧) ದಶರ್ಚಂ ಸೂಕ್ತಮಶ್ವಂ ನತ್ವಾ (೧-೨೭-೧) ಇತ್ಯಾದಿಕಂ ತ್ರಯೋದಶರ್ಚಂ ಸೂಕ್ತಮ್ । ತತ್ರಾಂತ್ಯಾಂ ಪರಿತ್ಯಜ್ಯ ವಸಿಷ್ವ-ಸೂಕ್ತದ್ವಯಗತಾ ಋಚೋ ದ್ವಾವಿಂಶತಿಸಂಖ್ಯಾಕಾಃ ॥

ವರುಣನ ಆಜ್ಞೆಯಂತೆ ಶುನಃಶೇಪನು ಮತ್ತೆ ಅಗ್ನಿಯನ್ನು ಸ್ತುತಿಸಿರುವುದನ್ನು ವಿವರಿಸುವರು-ಅನಂತರ ವರುಣದೇವನು ಪ್ರತ್ಯಕ್ಷನಾಗಿ-ಎಲೈ ಶುನಃಶೇಪನೇ, ಅಗ್ನಿಯು ಸಮಸ್ತ ದೇವತೆಗಳಿಗೂ ಮುಖವಂತಿರುವನು. ಏಕೆಂದರೆ ಅಗ್ನಿಯ ಮೂಲಕವೇ (ಅಗ್ನಿಯಲ್ಲಿ ಹೋಮಮಾಡಿದ ಹವಿಸ್ಸಿನ ಮೂಲಕವೇ) ದೇವತೆಗಳು ಯಾವಾಗಲೂ ತಮಗೆ ಅರ್ಪಿಸಿದ ಹವಿಸ್ಸನ್ನು ಸ್ವೀಕಾರಮಾಡುವರು. ಆದ್ದರಿಂದಲೇ ಅಗ್ನಿಯು ಸಮಸ್ತ ದೇವತೆಗಳಿಗೂ ಸ್ನೇಹಿತನಂತಿರುವನು. ದೇವತೆಗಳ ವಿಷಯದಲ್ಲಿ ಸುಹೃದ್ಭಾವದಿಂದ ವರ್ತಿಸುತ್ತಿರುವ ಆ ಅಗ್ನಿಯನ್ನು ನೀನು ಸ್ತುತಿಸು ಎಂದು ಹೇಳಲು, ಅದರಂತೆ ಶುನಃಶೇಪನು ಈ ಕೆಳಗೆ ಹೇಳಿರುವ **ವಸಿಷ್ವಾಹಿ** (ಋ. ಸಂ. ೧-೨೬-೧) ಎಂಬ ಹತ್ತು ಋಕ್ಕುಗಳ ಸೂಕ್ತದಿಂದಲೂ **ಅಶ್ವಂ ನತ್ವಾ** (ಋ. ಸಂ. ೧-೨೭-೧) ಎಂಬ ಹದಿಮೂರು ಋಕ್ಕುಗಳುಳ್ಳ ಸೂಕ್ತದಿಂದಲೂ ಒಟ್ಟು ಇಪ್ಪತ್ತೆರಡು ಋಕ್ಕುಗಳಿಂದ ಅಗ್ನಿಯನ್ನು ಸ್ತುತಿಸಿದನು. ಈ ಎರಡು ಸೂಕ್ತಗಳಲ್ಲಿ ಕೊನೆಯ ಋಕ್ಕನ್ನು (ಅಗ್ನಿದೇವತಾಕವಲ್ಲದ) ಬಿಟ್ಟರೆ ಇಪ್ಪತ್ತೆರಡು ಋಕ್ಕುಗಳಾಗುವವು. ಇವುಗಳಿಂದ ಅಗ್ನಿಯನ್ನು ಸ್ತುತಿಸಿದನೆಂದರ್ಥವು.

**ತಮಗ್ನಿರುವಾಚ ವಿಶ್ವಾನ್ನು ದೇವಾನ್ ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ**
**ಇತಿ ಸ ವಿಶ್ವಾನ್ದೇವಾಂಸ್ತುಷ್ಟಾವ ನಮೋ ಮಹದ್ಭ್ಯೋ ನಮೋ**
**ಅರ್ಭಕೇಭ್ಯ ಇತ್ಯೇತಯರ್ಚಾ ॥**

**ಅಗ್ನೇಃ ಸಹಕಾರಿತ್ವೇನ ವಿಶ್ವೇಷಾಂ ದೇವಾನಾಮುಪಾಸನಂ ದರ್ಶಯತಿ—ಯದ್ಯಪಿ ವರುಣಪಾಶೇನ ಬದ್ಧತ್ವಾದ್ವರುಣ ಏವ ಶುನಃಶೇಪಮುತ್ಸ್ರಷ್ಟುಂ ಸಮರ್ಥಸ್ತಥಾಪ್ಯಗ್ನ್ಯಾದೀನಾಂ ಸಹಕಾರಿತ್ವವಚನಂ ದಾರ್ಢ್ಯಾರ್ಥಂ ದ್ರಷ್ಟವ್ಯಮ್ । ವಿಶ್ವೇ ದೇವಾ ಗಣರೂಪಾ ನ ಭವಂತಿ ಕಿಂತು ಸರ್ವೇ ದೇವಾಸ್ತಾನ್ನಮೋ ಮಹದ್ಭ್ಯ ಇತ್ಯೇತಯರ್ಚೋಪಾಸಿತವಾನ್ ॥**

ಅಗ್ನಿಯ ಸಲಹೆಯಂತೆ ಶುನಃಶೇಪನು ವಿಶ್ವೇದೇವತೆಗಳನ್ನು ಸ್ತುತಿಸಿದ ವಿವರವನ್ನು ತಿಳಿಸುವರು-ವರುಣನೇ ತನ್ನ ಪಾಶಗಳಿಂದ ಈ ಶುನಃಶೇಪನನ್ನು ಬಂಧಿಸಿರುವುದರಿಂದ ಅವನನ್ನು ವಿಮುಕ್ತನನ್ನಾಗಿ ಮಾಡಲು ವರುಣನೇ ಸಮರ್ಥನು. ಆದರೂ ಕೂಡ ಅಗ್ನ್ಯಾದಿದೇವತೆಗಳು 'ಬಿಡಿಸುವೆವು' ಎಂದು ಹೇಳಿದಾಗ ಅಗ್ನ್ಯಾದಿದೇವತೆಗಳು ಬಂಧವಿಮೋಚನಕ್ಕೆ ಸಹಾಯಕರಾಗಿರುವರು ಎಂದಭಿಪ್ರಾಯವು. ಅಗ್ನಿಯನ್ನು ಸ್ತುತಿಸಿದ್ದರಿಂದ ಸಂತುಷ್ಟನಾದ ಅಗ್ನಿಯು ವಿಶ್ವೇದೇವತೆಗಳನ್ನು ಸ್ತುತಿಸು, ನಾವೂ ನಿನ್ನ ಬಂಧವಿಮೋಚನಕ್ಕೆ ಸಹಾಯಮಾಡುವೆವು ಎಂದು ಹೇಳಲು ಶುನಃಶೇಪನು ಅಗ್ನಿಯ ಮಾತಿನಂತೆ **ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯಃ** (ಋ. ಸಂ. ೧-೨೭-೧೩) ಎಂಬ ಋಕ್ಕಿನಿಂದ ವಿಶ್ವೇದೇವತೆಗಳನ್ನು ಸ್ತುತಿಸಿದನು. ವಿಶ್ವೇದೇವತೆಗಳೆಂಬುವರು ಎಲ್ಲರೂ ಒಟ್ಟಾಗಿ ಒಂದು ಗುಂಪಾಗಿ ಸೇರಿದವರಲ್ಲ. ಇವರೆಲ್ಲರೂ ಪ್ರತ್ಯೇಕ ದೇವತೆಗಳು. ಆದ್ದರಿಂದ ಈ ವಿಶ್ವೇದೇವತೆಗಳಲ್ಲಿ ಹಿರಿಯವರು, ಕಿರಿಯವರು ಎಂದು ವಿಂಗಡಿಸಿ ಅವರನ್ನೆಲ್ಲಾ ಇಲ್ಲಿ ಸ್ತುತಿಸಲಾಗಿದೆ.

**ತಂ ವಿಶ್ವೇ ದೇವಾ ಊಚುರಿಂದ್ರೋ ವೈ ದೇವಾನಾಮೋಜಿಷ್ಠೋ ಬಲಿಷ್ಠಃ ಸಹಿಷ್ಠಃ ಸತ್ತಮಃ ಪಾರಯಿಷ್ಣುತಮಸ್ತಂ ನು ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ ಸ ಇಂದ್ರಂ ತುಷ್ಟಾವ ಯಚ್ಚಿದ್ಧಿ ಸತ್ಯ ಸೋಮಪಾ ಇತಿ ಚೈತೇನ ಸೂಕ್ತೇನೋತ್ತರಸ್ಯ ಚ ಪಂಚದಶಭಿಃ ||**

ತೇಷಾಂ ಚ ವಿಶ್ವೇಷಾಂ ದೇವಾನಾಂ ಸಹಕಾರಿತ್ವೇನೇಂದ್ರಸ್ಯೋಪಾಸನಂ ದರ್ಶಯತಿ— ಓಜೋಬಲಾದಿಶಬ್ದಾಃ ಪೂರ್ವಾಚಾರ್ಯೈರೇವಂ ವ್ಯಾಖ್ಯಾತಾಃ—

> ಓಜೋ ದೀಪ್ತಿರ್ಬಲಂ ದಾರ್ಢ್ಯಂ ಪ್ರಸಹ್ಯಕರಣಂ ಸಹಃ ||
> ಸುಜನಃ ಸನ್‌ಪಾರಯಿಷ್ಣುರುಪಕ್ರಾಂತಸಮಾಪ್ತಿಕೃತ್" || ಇತಿ ||

ಇಷ್ಠಪ್ರತ್ಯಯ ತಮಪ್‌ಪ್ರತ್ಯಯಾಭ್ಯಾಂ ತತ್ರ ತತ್ರಾತಿಶಯ ಉಚ್ಯತೇ | ತಾದೃಶಮಿಂದ್ರಂ ಯಚ್ಚಿದ್ಧಿ-ಸತ್ಯ ಸೋಮಪಾ ಇತ್ಯನೇನ ಸಪ್ತರ್ಚೇನ ಸೂಕ್ತೇನೋತ್ತರಸ್ಮಿನ್ನಪ್ಯಾವ ಇಂದ್ರಮಿತ್ಯಾದಿಕೇ ದ್ವಾವಿಂಶತ್ಯೃಚೇ ಸೂಕ್ತೇ ಪಂಚದಶಭಿರ್ಋಗ್ಭಿಶ್ಚ ತುಷ್ಟಾವ ||

ವಿಶ್ವೇದೇವತೆಗಳ ಸಹಕಾರದಿಂದ ಇಂದ್ರನು ಬಂಧನದಿಂದ ಮುಕ್ತನನ್ನಾಗಿಮಾಡುವ ವಿಷಯವನ್ನು ಹೇಳುವರು— ಶುನಃಶೇಪನಿಂದ ಸ್ತುತರಾದ ವಿಶ್ವೇದೇವತೆಗಳು ಇಂತೆಂದರು. ಎಲೈ ಶುನಃಶೇಪನೇ, ದೇವತೆಗಳಲ್ಲೆಲ್ಲಾ ಇಂದ್ರನೇ ಸರ್ವಶ್ರೇಷ್ಠನಾಗಿರುವನು. ದೇವತೆಗಳಲ್ಲಿ ಆ ಇಂದ್ರನೇ ಓಜಿಷ್ಠಃ-ಕಾಂತಿಯುಕ್ತನು, ಬಲಿಷ್ಠಃ ಶಕ್ತಿಯುಳ್ಳವನು ಸಹಿಷ್ಠಃ ತಾಳ್ಮೆಯುಳ್ಳವನು. ಸತ್ತಮಃ—ಸಜ್ಜನರಲ್ಲಿ ಶ್ರೇಷ್ಠನಾದವನು. ಪಾರಯಿಷ್ಣುತಮಃ—ಸಂಕಟದಲ್ಲಿರುವವರನ್ನು ಅವರ ಕಷ್ಟದಿಂದ ಪಾರು (ಬಿಡುಗಡೆ)ಮಾಡುವವನು. ಆದ್ದರಿಂದ ಆ ಇಂದ್ರನನ್ನು ಸ್ತುತಿಸು. ಅನಂತರ ನಾವೆಲ್ಲರೂ ಸಹಕರಿಸಿ ನಿನ್ನ ಬಂಧನವನ್ನು ಬಿಡಿಸುವೆವು ಎಂದು ಹೇಳಲು ಅದರಂತೆ ಶುನಃಶೇಪನು ಇಂದ್ರನನ್ನು **ಯಚ್ಚಿದ್ಧಿ ಸತ್ಯ ಸೋಮಪಾ** (ಋ. ಸಂ. ೧-೨೯-೧) ಎಂಬ ಋಕ್ಕಿನ ಸೂಕ್ತದಿಂದಲೂ **ಆವ ಇಂದ್ರಂ** ಎಂಬ ಹದಿನೈದು ಋಕ್ಕುಗಳುಳ್ಳ ಸೂಕ್ತದಿಂದಲೂ (ಒಟ್ಟು ೨೨ ಋಕ್ಕುಗಳಿಂದ) ಇಂದ್ರನನ್ನೂ ಸ್ತೋತ್ರಮಾಡಿದನು. ಮೇಲೆ ಹೇಳಿದ ಓಜೋ ಬಲಾದಿ ಶಬ್ದಗಳನ್ನು ಪೂರ್ವಾಚಾರ್ಯರು ಈ ಪ್ರಕಾರವಾಗಿ ವಿವರಿಸಿರುವರು—

> ಓಜೋ ದೀಪ್ತಿರ್ಬಲಂ ದಾರ್ಢ್ಯಂ ಪ್ರಸಹ್ಯಕರಣಂ ಸಹಃ |
> ಸುಜನಃ ಸನ್ಪಾರಯಿಷ್ಣುರುಪಕ್ರಾಂತಸಮಾಪ್ತಿಕೃತ್ ||

ಈ ಶಬ್ದಗಳ ಅರ್ಥವನ್ನು ಇಲ್ಲಿ ಇಂದ್ರನಿಗೆ ವಿಶೇಷಣಗಳಾಗಿ ಉಪಯೋಗಿಸಲಾಗಿದೆ. ಅದನ್ನು ಮೇಲೆಯೇ ವಿವರಿಸಲಾಗಿದೆ—

**ತಸ್ಮಾ ಇಂದ್ರಃ ಸ್ತೂಯಮಾನಃ ಪ್ರೀತೋ ಮನಸಾ ಹಿರಣ್ಯರಥಂ ದದೌ ತಮೇತಯಾ ಪ್ರತೀಯಾಯ ಶಶ್ವದಿಂದ್ರ ಇತಿ ||**

**ಪೂರ್ವಮಪ್ಯನುಗ್ರಹೇಣ ಚರ್ಯೈವೇತ್ಯೇವಮಿಂದ್ರೋ ರೋಹಿತಂ ಪ್ರತ್ಯುಪದಿದೇಶ । ತಸ್ಯೋಪ. ದೇಶಸ್ಯ ಫಲಪರ್ಯವಸಾಯಿತ್ವಮನುಸ್ಮರತಸ್ತಸ್ಯೇಂದ್ರಸ್ಯ ಶುನಃಶೇಪಸ್ತುತೌ ಪ್ರೀತ್ಯತಿಶಯಂ ದರ್ಶ. ಯತಿ—ಶುನಃಶೇಪೇನೇಂದ್ರಃ ಸ್ತೂಯಮಾನಃ ಪ್ರೀತೋ ಭೂತ್ವಾ ತಸ್ಮೈ ಶುನಃಶೇಪಾಯ ಸುವರ್ಣಮಯಂ ದಿವ್ಯಂ ರಥಮಾರೋಹಣಾರ್ಥಂ ಸ್ವಕೀಯೇನ ಮನಸೈವ ದದೌ। ಶುನಃಶೇಪೋಽಪಿ ತದೀಯಮನುಗ್ರಹಮವಗಮ್ಯ ಪೂರ್ವೋಕ್ತಾಭ್ಯಃ ಪಂಚದಶಭ್ಯ ಉತ್ತರಯಾ ಶಶ್ವದಿಂದ್ರ ಇತ್ಯೇತಯರ್ಚಾ ತಂ ರಥಂ ಪ್ರತೀಯಾಯ ಮನಸೈವ ಪ್ರತಿಜಗಾಮ ॥**

ಪೂರ್ವದಲ್ಲಿ ರೋಹಿತನು ಅರಣ್ಯದಲ್ಲಿ ಸಂಚಾರಮಾಡುತ್ತಿದ್ದಾಗ ಇಂದ್ರನು ಬ್ರಾಹ್ಮಣರೂಪದಿಂದ ಅವನನ್ನು ಸಂಧಿಸಿ ಪುನಃಪುನಃ ಸಂಚಾರಮಾಡು ಎಂದು ಉಪದೇಶಮಾಡಿದನಷ್ಟೆ. ಆ ಇಂದ್ರನ ಉಪದೇಶದಿಂದಲೇ ಶುನಃಶೇಪನು ಯಜ್ಞಪಶುವಾಗಿ ಬಂಧಿತನಾಗಿರುವುದನ್ನು ಕಂಡ ಇಂದ್ರನು ಶುನಃಶೇಪನು ಮಾಡಿದ ಸ್ತುತಿಗಳಿಂದ ಸಂತುಷ್ಟನಾಗಿ ಇಂದ್ರನು ಪ್ರಕಟಿಸಿದ ಪ್ರೀತ್ಯತಿಶಯವನ್ನು ವಿವರಿಸುವರು. ಹಿಂದೆ ಹೇಳಿದಂತೆ ಶುನಃಶೇಪನು ಮಾಡಿದ ಸ್ತುತಿಗಳಿಂದ ಇಂದ್ರನು ಸುಪ್ರೀತನಾಗಿ ಆ ಶುನಃಶೇಪನಿಗೆ ಸುವರ್ಣಮಯವಾದ ಒಂದು ರಥವನ್ನು ಕೊಡಬೇಕೆಂದು ಮನಸ್ಸಿನಲ್ಲಿಯೇ ನಿಶ್ಚಯಿಸಿದನು. ಶುನಃಶೇಪನೂ ಇಂದ್ರನ ಮನಸ್ಸಿನಲ್ಲಿರುವ ಈ ಅನುಗ್ರಹ ಬುದ್ಧಿಯನ್ನು ತಿಳಿದು ಹಿಂದೆ ಹೇಳಿದ ಹದಿನೈದು ಋಕ್ಕುಗಳಿಂದಲೂ ಮುಂದಿನ ಶಶ್ವದಿಂದ್ರಃ ಪೋಪ್ರುಥದ್ಭಿರ್ಜಿಗಾಯ (ಋ. ಸಂ. ೧೦-೩೦-೧೬) ಎಂಬ ಋಕ್ಕಿನಿಂದಲೂ ಇಂದ್ರನನ್ನು ಸ್ತೋತ್ರಮಾಡಿದನು.

ತಮಿಂದ್ರ ಉವಾಚಾಶ್ವಿನೌ ನು ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ
ಸೋಽಶ್ವಿನೌ ತುಷ್ಟಾವಾತ ಉತ್ತರೇಣ ತೃಚೇನ ॥

ಇಂದ್ರಸ್ಯ ಸಹಕಾರಿತ್ವೇನಾಶ್ವಿನೋರುಪಾಸನಂ ದರ್ಶಯತಿ—ಪೂರ್ವೋಕ್ತಾಯಾಃ ಶಶ್ವದಿಂದ್ರ ಇತ್ಯಸ್ಯಾ ಉತ್ತರೇಣಾಶ್ವಿನಾವಶ್ವಾವತ್ಯಾ (೧-೩೦-೧೭) ಇತಿ ತೃಚೇನಾಶ್ವಿನೌ ಸ್ತುತವಾನ್ ॥

ಇಂದ್ರನ ಸಹಕಾರದಿಂದ ಶುನಃಶೇಪನು ಮಾಡಿದ ಅಶ್ವಿನೀದೇವತೆಗಳ ಸ್ತುತಿಯನ್ನು ವಿವರಿಸುವರು. ಹಿಂದೆ ಹೇಳಿದಂತೆ ಶುನಃಶೇಪನು ಮಾಡಿದ ಸ್ತುತಿಯಿಂದ ಇಂದ್ರನು ಸಂತುಷ್ಟನಾಗಿ ಶುನಃಶೇಪನನ್ನು ಕುರಿತು—ಎಲೈ ಶುನಃಶೇಪನೇ ಈಗ ನೀನು ಅಶ್ವಿನೀದೇವತೆಗಳನ್ನು ಸ್ತೋತ್ರಮಾಡು. ಅನಂತರ ನಾವೆಲ್ಲಾ ಸೇರಿ ನಿನ್ನ ಬಂಧವಿಮೋಚನೆಯನ್ನು ಮಾಡುತ್ತೇವೆ ಎಂದು ಹೇಳಲು, ಶುನಃಶೇಪನು ಹಾಗೆಯೇ ಆಗಲೆಂದು ಅಶ್ವಿನೀದೇವತೆಗಳನ್ನು ಆಶ್ವಿನಾವಶ್ವಾವತ್ಯಾ (ಋ. ಸಂ. ೧-೩೦-೧೭) ಎಂಬ ಮುಂದಿನ ಮೂರು ಋಕ್ಕುಗಳಿಂದ ಸ್ತೋತ್ರಮಾಡಿದನು.

ತಮಶ್ವಿನಾ ಊಚತುರುಷಸಂ ನು ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ
ಸ ಉಷಸಂ ತುಷ್ಟಾವಾತ ಉತ್ತರೇಣ ತೃಚೇನ ॥

**ಅಶ್ವಿನೋಃ ಸಹಕಾರಿತ್ವೇನೋಷಸ ಉಪಾಸ್ತಿಂ ದರ್ಶಯತಿ—ಕಸ್ತ ಉಷಃ (೧-೩೦-೨೦) ಇತ್ಯಾದಿಕ ಉತ್ತರಸ್ತೃಚಃ ॥**

ಅಶ್ವಿನೀದೇವತೆಗಳು ಸಂತುಷ್ಟರಾಗಿ ಶುನಃಶೇಪನನ್ನು ಕುರಿತು—ಎಲೈ ಶುನಃಶೇಪನೇ ಈಗ ನೀನು ಉಷೋದೇವತೆಯನ್ನು ಸ್ತೋತ್ರಮಾಡು. ಬಳಿಕ ನಾವೆಲ್ಲರೂ ಸೇರಿ ನಿನ್ನ ಬಂಧವಿಮೋಚನೆಯನ್ನು ಮಾಡುವೆವು ಎಂದು ಹೇಳಲು. ಅವರ ಮಾತನ್ನಂಗೀಕರಿಸಿ ಶುನಶ್ಶೇಪನು **ಕಸ್ತ ಉಷಃ** (ಋ. ಸಂ. ೧-೩೦-೨೦) ಎಂದು ಮೊದಲಾದ ಮೂರು ಋಕ್ಕುಗಳಿಂದ ಉಷೋದೇವತೆಯನ್ನು ಸ್ತೋತ್ರಮಾಡಿದನು.

**ತಸ್ಯ ಹ ಸ್ಮರ್ಚ್ಯರ್ಚ್ಯುಕ್ತಾಯಾಂ ವಿ ಪಾಶೋ ಮುಮುಚೇ ಕನೀಯ ಐಕ್ಷ್ವಾಕಸ್ಯೋದರಂ ಭವತ್ಯುತ್ತಮಸ್ಯಾಮೇವರ್ಚ್ಯುಕ್ತಾಯಾಂ ವಿ ಪಾಶೋ ಮುಮುಚೇಽಗದ ಐಕ್ಷ್ವಾಕ ಆಸ ॥**

**ಅಥೋಕ್ತಾನಾಂ ಸರ್ವಾಸಾಂ ದೇವತಾನಾಮನುಗ್ರಹೇಣ ಶುನಃಶೇಪಸ್ಯ ಬಂಧಮೋಕ್ಷಂ ಹರಿಶ್ಚಂದ್ರಸ್ಯಾರೋಗ್ಯಂ ಚ ದರ್ಶಯತಿ—ತಸ್ಯ ಪೂರ್ವೋಕ್ತಸ್ಯ ತ್ರ್ಯೃಚಸ್ಯ ಸಂಬಂಧಿನ್ಯಾಮೃಚ್ಯೃಚ್ಯೇಕೈಕಸ್ಯಾಮೃಚ್ಯುಕ್ತಾಯಾಂ ಕ್ರಮೇಣ ಶುನಃಶೇಪಸ್ಯ ಪಾಶೋ ವಿಮುಮುಚೇ ವಿಶೇಷೇಣ ಮುಕ್ತೋಽಭೂತ್ । ಐಕ್ಷ್ವಾಕಸ್ಯ ಹರಿಶ್ಚಂದ್ರಸ್ಯ ಯನ್ಮಹೋದರಂ ತದಪಿ ಕ್ರಮೇಣ ಕನೀಯೋಽಲ್ಪಂ ಭವತಿ । ಉತ್ತಮಸ್ಯಾಮೃಚ್ಯುಕ್ತಾಯಾಂ ಪಾಶೋ ವಿಮುಮುಚ ಏವ ಸರ್ವಾತ್ಮನಾ ಮುಕ್ತೋಽಭೂತ್ । ಐಕ್ಷ್ವಾಕೋಽಪ್ಯಗದೋ ನಿಃಶೇಷೇಣ ರೋಗರಹಿತ ಆಸ ॥**

ಹಿಂದೆ ಹೇಳಿದ ಪ್ರಜಾಪತಿಯೇ ಮೊದಲಾದ ಉಷೋದೇವತೆಯವರೆಗಿನ ಸಮಸ್ತದೇವತೆಗಳನ್ನೂ ಶುನಃಶೇಪನು ಸ್ತುತಿಸಿದ್ದರಿಂದ ಅವರೆಲ್ಲರ ಅನುಗ್ರಹದಿಂದ ಶುನಃಶೇಪನು ಬಂಧಮುಕ್ತನಾದುದನ್ನೂ ಹರಿಶ್ಚಂದ್ರರಾಜನು ಮಹೋದರವೆಂಬ ರೋಗದಿಂದ ಬಿಡುಗಡೆಯಾಗಿ ಮುಂಚಿನಂತೆ ಆರೋಗ್ಯವನ್ನು ಪಡೆದನೆಂಬ ವಿಶಯವನ್ನೂ ವಿವರಿಸುವರು. ಹಿಂದೆ (ಇದುವರೆಗೆ) ಹೇಳಿ ಸ್ತುತಿಸಿದ ಮೂರು ಮೂರು ಋಕ್ಕುಗಳಿಂದಲೂ ಒಂದೊಂದು ಋಕ್ಕುಗಳಿಂದಲೂ ಸ್ತುತರಾದ ದೇವತೆಗಳ ಅನುಗ್ರಹದಿಂದ ಶುನಃಶೇಪನ ಪಾಶಗಳೆಲ್ಲವೂ ಬಿಡುಗಡೆಯನ್ನು ಹೊಂದಿ ಅವನು ಬಂಧನದಿಂದ ಮುಕ್ತನಾದನು. ಇಕ್ಷ್ವಾಕು ವಂಶೋತ್ಪನ್ನನಾದ ಹರಿಶ್ಚಂದ್ರರಾಜನ ಮಹೋದರವೆಂಬ ವ್ಯಾಧಿಯೂ ಪರಿಹೃತನಾಗಿ ಕ್ರಮೇಣ ಕಮ್ಮಿಯಾಗುತ್ತಾ ಬಂದು ಉಷೋದೇವತೆಯನ್ನು ಕೊನೆಯ ಋಕ್ಕಿನಿಂದ ಸ್ತುತಿಸುತ್ತಿರುವಾಗ ಶುನಃಶೇಪನ ಬಂಧವಿಮೋಚನೆಯೂ ಹರಿಶ್ಚಂದ್ರರಾಜನ ವ್ಯಾಧಿಶಮನವೂ ಪೂರ್ತಿಯಾಗಿ ಆಯಿತು.

---

*English Translation*

**(The sacrifice with the intended human victim comes off. Four great Rishis were officiating as priests. Sunahsepa prays to the gods to be released from the fearful death. The Rik verses which he used mentioned, and the different deities to whom he applied)**

At this sacrifice Visvamitra was his Hotar, Jamadagni his Adhvaryu, Vasishtha his Brahma, and Ayasya his Udgatar. After the preliminary

ceremonies had been performed, they could not find a person willing to bind him to the sacrificial post. Ajigarta, the son of Suyavasa, then said, "Give me another hundred (cows) and I will bind him. They gave him another hundred, whereupon he bound him. After he had been bound, the Apri verses recited, and the fire carried round him, they could not find a slaughterer. Ajigarta then said, "Give me another hundred and I will kill him" They gave him another hundred. He then whetted his knife and went to kill his son. Sunahsepa then got aware that they were going to butcher him just as if he were no man (but a beast.) "Well" said he , "I will seek shelter with the gods." He applied to Prajapati, who is the first of the gods, with the verse, kasya nunam katamasya (1,24,1). Prajapati answered him, "Agni is the nearest of gods, go to him." "He then applied to Agni, with the verse, agner vayam prathamasya amritanam (1,24,2). Agni answered him, "Savitar rules over the creatures, go to him." He than applied to Savitar with the three verses (1,24, 3-5) beginning by, abhitvadeva Savitar, Savitar answered him, "Thou art bound for Varuna the king, go to him." He applied to Varuna with the following thirty-one verses (124, 6-25, 21). Varuna then answered him, 'Agni is the mouth of the gods, and the most compassionate of them Praise him now! then we shall release you.' He then praised Agni with twenty-two verses (1, 26, 1-27, 12). Agni then answered. 'Praise the Visve Devas, then we shall release you.' He then praised the Visve Devas with the verse (1, 27, 13) namo mahadbhyo namo arbhakebhyo. The Visve Devas answered, 'Indra is the strongest, the most powerful, the most enduring, the most true of the gods, who knows best how to bring to an end anything. Praise him, then we shall release you.' He then praised Indra with the hymn (1, 29), yach chid dhi satya somapa, and with fifteen verses of the following one (1, 30, 1-15). Indra, who had become pleased with his praise, presented him with a golden carriage. This present he accepted with the verse, sasvad Indra (1, 30, 16). Indra then told him, 'Praise the Asvins, then we shall release you.' He then praised the Asvias with the three verses which follow the abovementioned

(1, 30, 17–19). The Asvins then answered: 'Praise Ushas (Dawn), then we shall release you." He then praised Ushas with the three verses which follow the Asvin verses (1, 30, 20–22). As he repeated one verse after the other, the fetters of Varuna were falling off, and the belly of Harischandra become smaller. And after he had done repeating the last verse, all the fetters were taken off, and Harischandra restorted to health again.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ತ್ರಯಸ್ತ್ರಿಂಶಾಧ್ಯಾಯೇ ಚತುರ್ಥಃ ಖಂಡಃ
ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂವತ್ತ ಮೂರನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು
ಸಮಾಪ್ತವಾದುದು



## ಅಥ ತ್ರಯಸ್ತ್ರಿಂಶಾಧ್ಯಾಯೇ ಪಂಚಮಃ ಖಂಡಃ

### ಮೂವತ್ತಮೂರನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ಶುನಃಶೇಪನ ವಿಮೋಚನೆ, ಅವನ ಅಂಜಃಸವರೂಪದ ನಿಷ್ಪೀಡನದ ಕ್ರಮ. ವಿಶ್ವಾಮಿತ್ರನು ಅವನನ್ನು ಮಗನನ್ನಾಗಿ ಅಂಗೀಕರಿಸುವುದು.]



ತಮೃತ್ವಿಜ ಊಚುಸ್ತ್ವಮೇವ ನೋಽಸ್ಯಾಹ್ನಃ ಸಂಸ್ಥಾಮಧಿಗಚ್ಛೇತ್ಯಥ ಹೈತಂ ಶುನಃಶೇಪೋಽಞ್ಜಃಸವಂ ದದರ್ಶ ತಮೇತಾಭಿಶ್ಚತಸೃಭಿರಭಿ-ಸುಷಾವ ಯಚ್ಚಿದ್ಧಿ ತ್ವಂ ಗೃಹೇ ಗೃಹ ಇತ್ಯಥೈನಂ ದ್ರೋಣಕಲಶ-ಮಭ್ಯವನಿನಾಯೋಚ್ಛಿಷ್ಟಂ ಚಮ್ವೋರ್ಭರೇತ್ಯೇತಯರ್ಚಾಽಥ ಹಾಸ್ಮಿ-ನನ್ವಾರಬ್ಧೇ ಪೂರ್ವಾಭಿಶ್ಚತಸೃಭಿಃ ಸ ಸ್ವಾಹಾಕಾರಾಭಿರ್ಜುಹವಾಂ-ಚಕಾರಾಥೈನಮವಭೃಥಮಭ್ಯವನಿನಾಯ ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನಿತ್ಯೇತಾಭ್ಯಾಮಥೈನಮುತ ಊರ್ಧ್ವಮಗ್ನಿಮಾಹವನೀಯಮು-ಪಸ್ಥಾಪಯಾಂಚಕಾರ ಶುನಶ್ಚಿಚ್ಛೇಪಂ ನಿದಿತಂ ಸಹಸ್ರಾದಿತಿ ॥

ಬಂಧನಾನ್ಮುಕ್ತಸ್ಯ ಶುನಃಶೇಪಸ್ಯೋತ್ತರಕಾಲೀನಂ ವೃತ್ತಾಂತಂ ದರ್ಶಯತಿ—ದೇವತಾನುಗ್ರಹಯುಕ್ತಂ ತಂ ಶುನಃಶೇಪಂ ವಿಶ್ವಾಮಿತ್ರಾದಯಃ ಸರ್ವ ಋತ್ವಿಜ ಏವಮೂಚುಃ । ಹೇ ಶುನಃಶೇಪ ತ್ವಮೇವ ನೋಽಸ್ಮಾಕಮಸ್ಯಾಹ್ನೋಽಭಿಷೇಚನೀಯಾಖ್ಯಸ್ಯ ಸಂಸ್ಥಾಂ ಸಮಾಪ್ತಿಮಧಿಗಚ್ಛ ಪ್ರಾಪ್ನುಹಿ ಅನುಷ್ಠಾಪಯೇತ್ಯರ್ಥಃ । ತೈರೇವಮುಕ್ತೇ ಸತ್ಯನಂತರಂ ಶುನಃಶೇಪ ಏತಮಭಿಷೇಚನೀಯಾಖ್ಯಂ ಸೋಮಯಾಗಮಂಜಃ ಸವಂ ದದರ್ಶ । ಅಂಜಸರ್ಜುಮಾರ್ಗೇಣ ಸವಃ ಸೋಮಾಭಿಷವೋ ಯಸ್ಮಿನ್ಯಾಗೇ ಸೋಽಂಜಃಸವಸ್ತಾದೃಶಂ ಪ್ರಯೋಗಪ್ರಕಾರಂ ನಿಶ್ಚಿತವಾನ್ । ನಿಶ್ಚಿತ್ಯ ಚ ತಂ ಸೋಮಂ ಯಚ್ಚಿದ್ಧೀತ್ಯಾದಿಭಿಶ್ಚತಸೃಭಿರ್ಋಗ್ಭಿರಭಿಷುತಂ ಕೃತವಾನ್ । ಅಥೈನಮಭಿಷುತಂ ಸೋಮಮೇತಯೋಚ್ಛಿಷ್ಟಂ ಚಮ್ವೋರಿತ್ಯೃಚಾ ದ್ರೋಣಕಲಶಮಭಿಲಕ್ಷ್ಯಾವನಿನಾಯ ದ್ರೋಣಕಲಶೇ ಪ್ರಕ್ಷಿಪ್ತವಾನ್ । ಅಥಾನಂತರಮಸ್ಮಿನ್ ಹರಿಶ್ಚಂದ್ರೇಽನ್ವಾರಬ್ಧೇ ಶುನಃಶೇಪದೇಹಮುಪಸ್ಪೃಷ್ಟವತಿ ಸತ್ಯುಕ್ತಾಭ್ಯ ಋಗ್ಭ್ಯಃ ಪೂರ್ವಾಭಿರ್ಯತ್ರ ಗ್ರಾವೇತ್ಯಾದಿಭಿಶ್ಚತಸೃಭಿರ್ಋಗ್ಭಿಃ ಸ್ವಾಹಾಕಾರಸಹಿತಾಭಿಃ ಸೋಮಂ ಜುಹವಾಂಚಕಾರ । ಯತ್ರ ಗ್ರಾವೇತ್ಯಾದಿಕಂ ಸೂಕ್ತಂ ನವರ್ಚಂ ತತ್ರ ಯಚ್ಚಿದ್ಧೀತಿ ಪಂಚಮೀ ತಾಮಾರಭ್ಯ ಚತಸೃಭಿರ್ಋಗ್ಭಿರಭಿಷವಃ । ಉಚ್ಛಿಷ್ಟಮಿತ್ಯಾದಿಕಾ ನವಮೀ ತಯಾ ದ್ರೋಣಕಲಶೇ ಪ್ರಕ್ಷೇಪಃ । ಯತ್ರ ಗ್ರಾವೇತ್ಯಾದಿಭಿಶ್ಚತಸೃಭಿರ್ಹೋಮ ಇತ್ಯೇವಂ ಕೃತ್ಸ್ನಸ್ಯ ಸೂಕ್ತಸ್ಯ ವಿನಿಯೋಗಃ । ಅಥ ಹೋಮಾನಂತರಮೇವ ಕರ್ತವ್ಯಮವಭೃಥಮಭಿಲಕ್ಷ್ಯಾವನಿನಾಯ ಸರ್ವಮವಭೃಥಸಾಧನಂ ತದ್ದೇಶೇ ನೀತ್ವಾ ತ್ವಂ ನೋ ಅಗ್ನ ಇತ್ಯಾದಿಕಾಭ್ಯಾಮೃಗ್ಭ್ಯಾಮವಭೃಥಯಾಗಂ ಕೃತವಾನ್ । ಅಥ ತಥಾ ಕೃತ್ವಾ ತತ ಊರ್ಧ್ವಮೇನಮಾಹವನೀಯಮಗ್ನಿಂ ಶುನಶ್ಚಿದಿತ್ಯಾದಿನೋಪಸ್ಥಾಪಯಾಂಚಕಾರ ಹರಿಶ್ಚಂದ್ರಮುಪಸ್ಥಾನೇ ಪ್ರೇರಯಾಮಾಸ । ಸೋಽಯಮಂಜಃಸವ ಇಷ್ಟಿಪಶುಸಾಂಕರ್ಯಮಂತರೇಣಾಂಜಸರ್ಜುಮಾರ್ಗೇಣಾನುಷ್ಠಿತತ್ವಾತ್ ॥

ಬಂಧನದಿಂದ ಮುಕ್ತನಾದ ಶುನಃಶೇಪನ ಮುಂದಿನ ವೃತ್ತಾಂತವನ್ನು ವಿವರಿಸುವರು—ಪ್ರಜಾಪತಿಯೇ ಮೊದಲಾದ ಸಮಸ್ತ ದೇವತೆಗಳ ಅನುಗ್ರಹದಿಂದ ಬಂಧಮುಕ್ತನಾದ ಶುನಃಶೇಪನನ್ನು ಕುರಿತು ವಿಶ್ವಾಮಿತ್ರನೇ ಮೊದಲಾದ ಸಮಸ್ತ ಋತ್ವಿಜರೂ ಈರೀತಿ ಹೇಳಿದರು—ಎಲೈ ಶುನಃಶೇಪನೇ ಈಗ ನೀನು ಋತ್ವಿಜರಾದ ನಮ್ಮಲ್ಲಿ ಒಬ್ಬನಾಗಿರುವೆ. ಆದ್ದರಿಂದ ಈಗ ನಾವು ಈ ದಿವಸ ಮಾಡಬೇಕಾಗಿರುವ ಅಭಿಷೇಚನೀಯವೆಂಬ ಕರ್ಮಸಮಾಪ್ತಿಯನ್ನು ಅನುಷ್ಠಾನಮಾಡಿ ಮುಗಿಸು. ವಿಶ್ವಾಮಿತ್ರಾದಿಗಳು ಈರೀತಿ ಹೇಳಿದನಂತರ ಶುನಃಶೇಪನು ಅಭಿಷೇಚನೀಯವೆಂದು ಹೇಳಲ್ಪಡುವ ಅಂಜಸ್ಸವವೆಂಬ ಕರ್ಮದ ವಿವರಗಳನ್ನು ತಿಳಿದುಕೊಂಡು ಅದನ್ನು ಪ್ರಯೋಗಿಸುವ ಪ್ರಕಾರವನ್ನು ನಿಶ್ಚಯಿಸಿದನು. ಪ್ರಯೋಗ ಕ್ರಮವನ್ನು ಹೀಗೆ ಮಾಡಬೇಕೆಂದು ನಿಶ್ಚಯಿಸಿದ ಮೇಲೆ ಈಗ ತಾನೇ ಹಿಂಡಲ್ಪಟ್ಟ ಸೋಮರಸವನ್ನು **ಯಚ್ಚಿದ್ಧಿ ತ್ವಂ ಗೃಹೇಗೃಹೇ** (ಋ. ಸಂ. ೧–೨೮–೯) ಎಂದು ಮೊದಲಾದ ನಾಲ್ಕು ಋಕ್ಕುಗಳಿಂದ ಸಿದ್ಧಪಡಿಸಿದನು. ಈರೀತಿ ಹಿಂಡಿ ಸಿದ್ಧಪಡಿಸಿದ ಈ ಸೋಮರಸವನ್ನು **ಉಚ್ಛಿಷ್ಟಂ ಚಮ್ವೋರ್ಭರ** (ಋ. ಸಂ. ೧–೨೮–೯) ಎಂದು ಮೊದಲಾದ ಎರಡು ಋಕ್ಕುಗಳಿಂದ ದ್ರೋಣಕಲಶವೆಂದರೆ ಸೋಮರಸವನ್ನು ತುಂಬಿಡುವ ದೊಡ್ಡ ಮರದ ಪಾತ್ರೆಯು. ಅನಂತರ ಹರಿಶ್ಚಂದ್ರರಾಜನು ಶುನಃಶೇಪನನ್ನು ಸ್ಪರ್ಶಮಾಡುತ್ತಿರಲು, ಶುನಃಶೇಪನು ಯತ್ರ ಗ್ರಾವಾ ಎಂಬ (ಹಿಂದೆ ಹೇಳಿದ) ನಾಲ್ಕು ಋಕ್ಕುಗಳಿಂದ ಸ್ವಾಹಾಕಾರಪೂರ್ವಕವಾಗಿ ಸೋಮವನ್ನು ಅಗ್ನಿಯಲ್ಲಿ ಹೋಮಮಾಡಿದನು. **ಯತ್ರ ಗ್ರಾವಾ** ಎಂಬ ಸೂಕ್ತದಲ್ಲಿ ಒಂಭತ್ತು ಋಕ್ಕುಗಳಿರುವವು. ಇದರಲ್ಲಿ **ಯಚ್ಚಿದ್ಧಿ ತ್ವಂ** ಎಂಬುದು ಐದನೆಯ ಋಕ್ಕು. ಈ ಐದನೆಯ ಋಕ್ಕಿನಿಂದ ಮುಂದಿನ ನಾಲ್ಕು ಋಕ್ಕುಗಳವರೆಗೆ



ಅಭಿಷವ (ಸೋಮರಸವನ್ನು ಹಿಂಡಿ ಸಿದ್ಧಪಡಿಸುವುದು) ಕರ್ಮವನ್ನು ಮಾಡುವರು. **ಉಚ್ಛಿಷ್ಟಂ** ಎಂಬ ಒಂಭತ್ತನೆಯ ಋಕ್ಕಿನಿಂದ ಸೋಮರಸವನ್ನು ದ್ರೋಣಕಲಶದಲ್ಲಿ ಸುರಿಯುವರು. ಯತ್ರ ಗ್ರಾವಾ ಎಂದು ಮೊದಲಾದ ನಾಲ್ಕು ಋಕ್ಕುಗಳಿಂದ ಸೋಮವನ್ನು ಅಗ್ನಿಯಲ್ಲಿ ಹೋಮಮಾಡುವರು. ಇದು ಹೋಮಮಾಡುವ ಕ್ರಮವು. ಇವನ್ನೇ ಶುನಃಶೇಪನು ಮಾಡಿದನೆಂದು ಮೇಲೆ ಹೇಳಲಾಗಿದೆ. ಅನಂತರ ಶುನಃಶೇಪನು ಯಜ್ಞ ಸಮಾಪ್ತಿಯಲ್ಲಿ ಮಾಡಬೇಕಾದ ಅವಭೃಥವನ್ನು ನೆರವೇರಿಸುವುದಕ್ಕಾಗಿ ಅದಕ್ಕೆ ಬೇಕಾದ ಸಾಧನಸಾಮಗ್ರಿಗಳನ್ನು ಸಿದ್ಧಪಡಿಸಿ ತಂದು **ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನ್** (ಋ. ಸಂ. ೪-೧-೪) ಎಂದು ಮೊದಲಾದ ಎರಡು ಮಂತ್ರಗಳಿಂದ ಅವಭೃಥಕರ್ಮವನ್ನು ನೆರವೇರಿಸಿದನು. ಇದಾದಮೇಲೆ ಎಂದರೆ ಅವಭೃಥಾನಂತರ ಶುನಃಶೇಪನು **ಶುನಶ್ಚಿಚ್ಛೇಪಂ ನಿದಿತಂ ಸಹಸ್ರಾತ್** (ಋ. ಸಂ. ೫-೨-೭) ಎಂಬ ಋಕ್ಕಿನಿಂದ ಆಹವನಾಗ್ನಿಯ ಸಮೀಪದಲ್ಲಿ ನಿಂತು ಉಪಸ್ಥಾನವನ್ನು (ಪ್ರಾರ್ಥನೆ) ಮಾಡುವಂತೆ ಹರಿಶ್ಚಂದ್ರರಾಜನನ್ನು ಪ್ರೇರಿಸಿ ಅವನಿಂದ ಅದನ್ನು ಮಾಡಿಸಿದನು.

ಅಥ ಹ ಶುನಃಶೇಪೋ ವಿಶ್ವಾಮಿತ್ರಸ್ಯಾಂಕಮಾಸಸಾದ ಸ ಹೋವಾಚಾಜೀಗರ್ತಃ ಸೌಯವಸಿರ್ಋಷೇ ಪುನರ್ಮೇ ಪುತ್ರಂ ದೇಹೀತಿ ನೇತಿ ಹೋವಾಚ ವಿಶ್ವಾಮಿತ್ರೋ ದೇವಾ ವಾ ಇಮಂ ಮಹ್ಯಮರಾಸತೇತಿ ಸ ಹ ದೇವರಾತೋ ವೈಶ್ವಾಮಿತ್ರ ಆಸ ತಸ್ಯೈತೇ ಕಾಪಿಲೇಯಬಾಭ್ರವಾಃ ॥

**ವಿಶ್ವಾಮಿತ್ರಾಜೀಗರ್ತಯೋಃ ಕಂಚಿತ್ಸಂವಾದಂ ದರ್ಶಯತಿ—ಅಥಾಭಿಷೇಚನೀಯಸಮಾಪ್ತೇರನಂತರಂ ಹರಿಶ್ಚಂದ್ರಸಹಿತೇಷು ಋತ್ವಿಕ್ಷು ವಿಸ್ಮಿತೇಷು ಸ ಶುನಃಶೇಪ ಇತ ಊರ್ಧ್ವಂ ಕಸ್ಯ ಪುತ್ರೋಽಸ್ತ್ವಿತಿ ವಿಚಾರೇ ಸತಿ ತದೀಯೇಚ್ಛೈವ ನಿಯಾಮಿಕೇತಿ ಮಹರ್ಷೀಣಾಂ ವಚನಂ ಶ್ರುತ್ವಾ ಶುನಃಶೇಪಃ ಸ್ವೇಚ್ಛಯಾ ವಿಶ್ವಾಮಿತ್ರಪುತ್ರತ್ವಮಂಗೀಕೃತ್ಯ ಸಹಸಾ ತದೀಯಮಂಕಮಾಸಸಾದ । ಪುತ್ರೋ ಹಿ ಸರ್ವತ್ರ ಪಿತುರಂಕೇ ನಿಷೀದತಿ । ತದಾನೀಂ ಸೂಯವಸಪುತ್ರೋಽಜೀಗರ್ತೋ ವಿಶ್ವಾಮಿತ್ರಂ ಪ್ರತ್ಯೇವಮುವಾಚ । ಹೇ ಮಹರ್ಷೇ ಮದೀಯಪುತ್ರಮೇನಂ ಪುನರಪಿ ಮಹ್ಯಂ ದೇಹೀತಿ ಸ ವಿಶ್ವಾಮಿತ್ರೋ ನೇತಿ ನಿರಾಕೃತ್ಯೈವಮುವಾಚ। ಪ್ರಜಾಪತ್ಯಾದಯೋ ದೇವಾ ಏನೇಮಂ ಶುನಃಶೇಪಂ ಮಹ್ಯಮರಾಸತ ದತ್ತವಂತಸ್ತಸ್ಮಾತ್ತುಭ್ಯಂ ನ ದಾಸ್ಯಾಮೀತಿ ಸ ಚ ಶುನಃಶೇಪೋ ದೇವೈರ್ದತ್ತತ್ವಾದ್ದೇವರಾತ ಇತಿ ನಾಮಧಾರೀ ವಿಶ್ವಾಮಿತ್ರಪುತ್ರ ಆಸ। ತಸ್ಯ ಚ ದೇವರಾತಸ್ಯೈತೇ ಕಪಿಲಗೋತ್ರೋತ್ಪನ್ನಾ ಬಭ್ರುಗೋತ್ರೋತ್ಪನ್ನಾಶ್ಚ ಬಂಧವೋಽಭವನ್ ॥**

ಈಗ ವಿಶ್ವಾಮಿತ್ರನಿಗೂ ಅಜೀಗರ್ತನಿಗೂ ನಡೆದ ಸಂವಾದವನ್ನು ವಿವರಿಸುವರು. ಈರೀತಿ ಯಜ್ಞದ ಕಾರ್ಯಕಲಾಪಗಳೆಲ್ಲವೂ ಮುಗಿದನಂತರ ಹರಿಶ್ಚಂದ್ರನೇ ಮೊದಲಾದ ಜನರಲ್ಲಿ ಈ ಶುನಶ್ಶೇಪನು ಇನ್ನುಮೇಲೆ ಯಾರಪುತ್ರನೆಂದು ಪರಿಗಣಿಸಬೇಕೆಂಬ ಜಿಜ್ಞಾಸೆಯುಂಟಾಯಿತು. ಆಗ ಮಹರ್ಷಿಗಳೆಲ್ಲರೂ ಸೇರಿ ಹೀಗೆ ಹೇಳಿದರು. ಶುನಶ್ಶೇಪನು ತನ್ನ ಸ್ವಂತ ಇಚ್ಛೆಯಿಂದ ತನಗೆ ಬೇಕಾದವರ ಪುತ್ರನಾಗಬಹುದು. ಅದಕ್ಕೆ ನಮ್ಮ ಅಡ್ಡಿಯೇನೂ ಇಲ್ಲವೆನಲು ಆಗ ಶುನಶ್ಶೇಪನು ತನ್ನ ಸ್ವಂತ ಇಚ್ಛೆಯಿಂದಲೇ ನಾನು ಇದ್ದುಮೇಲೆ ವಿಶ್ವಾಮಿತ್ರನ ಪುತ್ರನಾಗಿರುವೆನು ಎಂದು ಹೇಳಿ ವಿಶ್ವಾಮಿತ್ರನ ತೊಡೆಯ ಮೇಲೆ ಕುಳಿತುಕೊಂಡನು. ಆಗ ಸೂಯವಸಪುತ್ರನಾದ ಅಜೀಗರ್ತನು ವಿಶ್ವಾಮಿತ್ರನನ್ನು ಕುರಿತು ಇಂತೆಂದನು–ಎಲೈ

ವಿಶ್ವಾಮಿತ್ರ ಮಹರ್ಷಿಯೇ ನನಗೆ ನನ್ನ ಮಗನನ್ನು (ಶುನಶ್ಶೇಪನನ್ನು) ಹಿಂದಕ್ಕೆ ಕೊಡು ಎಂದು ಕೇಳಲು ಅದಾಗುವುದಿಲ್ಲವೆಂದು ವಿಶ್ವಾಮಿತ್ರನು ಹೇಳಿದನು. ಶುನಶ್ಶೇಪನು ದೇವತೆಗಳಿಂದ ಕೊಡಲ್ಪಟ್ಟದ್ದರಿಂದ ದೇವರಾತನೆಂಬ ಹೆಸರಿನಿಂದ ವಿಶ್ವಾಮಿತ್ರನಿಗೆ ಪುತ್ರನಾದನು. ಅವನ ಸಂತಾನಗಳು ಕಾಪಿಲೇಯ ಬಭ್ರಗ ಎಂದು ಪ್ರಸಿದ್ಧವಾದವು.

ಸ ಹೋವಾಚಾಜೀಗರ್ತಃ ಸೌಯವಸಿಃತ್ತ್ವಂ ವೇಹಿ ವಿಹ್ವಯಾವಹಾ ಇತಿ ಸ ಹೋವಾಚಾಜೀಗರ್ತಃ ಸೌಯವಸಿರಾಂಗಿರಸೋ ಜನ್ಮನಾಽಸ್ಯಾಜೀಗರ್ತಿಃ ಶ್ರುತಃ ಕವಿಃ। ಋಷೇ ಪೈತಾಮಹಾತ್ತಂತೋರ್ಮಾಽಪಗಾಃ ಪುನರೇಹಿ ಮಾಮಿತಿ ಸ ಹೋವಾಚ ಶುನಃಶೇಪೋಽದರ್ಶುಸ್ತ್ವಾ ಶಾಸಹಸ್ತಂ ನ ಯಚ್ಛೂದ್ರೇಷ್ವಲಪ್ಸತ । ಗವಾಂ ತ್ರೀಣಿ ಶತಾನಿ ತ್ವಮವೃಣೀಥಾ ಮದಂಗಿರ ಇತಿ ॥

ಅಥ ಶುನಃಶೇಪಾಜೀಗರ್ತಯೋಃ ಸಂವಾದಂ ದರ್ಶಯತಿ—ವಿಶ್ವಾಮಿತ್ರೇಣ ನಿರಾಕೃತಃ ಸೋಽಜೀಗರ್ತಃ ಶುನಃಶೇಪಂ ಪ್ರತ್ಯೇವಮುವಾಚ । ಹೇ ಪುತ್ರ ತ್ವಂ ವಾ ತ್ವಮೇವ ವಿಶ್ವಾಮಿತ್ರಾದಪಗತಃ ಸನ್ನಿಹಿ ಅಸ್ಮದ್ಗೃಹೇ ಗಚ್ಛ । ತ್ವದೀಯಮಾತಾ ಚಾಹಂ ಜೋಭಾವಾವಾಂ ವಿಹ್ವಯಾವಹೈ ವಿಶೇಷಣ ತವಾಽಹ್ವಾನಂ ಕರವಾವಹೈ । ಇತ್ಯುಕ್ತ್ವಾ ತೂಷ್ಣೀಮವಸ್ಥಿತಂ ತಂ ಶುನಃ ಶೇಪಂ ಪ್ರತಿ ಪುನರಪಿ ಕಯಾಚಿದ್ಗಾಥಯೈವಮುವಾಚ ಹೇ ಶುನಃಶೇಪ ತ್ವಂ ಜನ್ಮನಾಽಂಗಿರಸೋಂಗಿರೋಗೋತ್ರೋತ್ಪನ್ನ ಆಜೀಗರ್ತಿರಜೀಗರ್ತಸ್ಯ ಪುತ್ರಃ ಕವಿರ್ವಿದ್ವಾನ್ ಶ್ರುತ ಇತ್ಯೇವಂ ಸರ್ವತ್ರ ಪ್ರಸಿದ್ಧಃ। ಅತೋ ಹೇ ಮಹರ್ಷೇ ಶುನಃಶೇಪ ಪೈತಾಮಹಾತ್ ಪಿತಾಮಹೇನ ಪ್ರಜಾಪತಿನಾ ಸಂಪಾದಿತಾತ್ತಂತೋಃ ಸಂತಾನಾದಂಗಿರೋವಂಶಾನ್ಮಾಽಪಗಾ ಅಪಗತೋ ಮಾ ಭವ। ತಸ್ಮಾತ್ಪುನರಪಿ ಮಾಮೇಹಿ ಮದ್ಗೃಹೇ ಸಮಾಗಚ್ಛೇತ್ಯುಕ್ತಃ ಶುನಃಶೇಪಃ ಸ್ವಯಮಪಿ ಗಾಥಯಾ ಪ್ರತ್ಯುತ್ತರಂ ದದೌ । ಶಾಸೋ ವಿಶಸನಹೇತುಃ ಖಡ್ಗಃ। ಹೇಽಜೀಗರ್ತ ಮದ್ವಧಾಯ ಶಾಸಹಸ್ತಂ ಖಡ್ಗಹಸ್ತಂ ತ್ವಾಂ ಸರ್ವೇಽಪ್ಯದರ್ಶುರ್ದೃಷ್ಟವಂತಃ। ಯತ್ಕ್ರೂರಂ ಕರ್ಮ ಶೂದ್ರೇಷ್ವತ್ಯಂತನೀಚೇಷ್ವಪಿ ನಾಽಲಪ್ಸತ ನ ಲಬ್ಧವಂತೋ ಲೌಕಿಕಾ ಜನಾಸ್ತಾದೃಶಂ ಕ್ರೌರ್ಯಂ ತ್ವಯಾ ಕೃತಂ। ಹೇಽಂಗಿರ ಆಂಗಿರಸಗೋತ್ರೋತ್ಪನ್ನಾಜೀಗರ್ತ ಮನ್ಮಾಂ ನಿಮಿತ್ತೀಕೃತ್ಯ ತ್ವಂ ಗವಾಂ ಶತಾನಿ ತ್ರೀಣ್ಯವೃಣೀಥಾ ವೃತವಾನಸಿ। ತದಿದಮತ್ಯಂತಕಷ್ಟಮಿತ್ಯುಕ್ತವಾನ್ ॥

ಶುನಃಶೇಪನಿಗೂ ಅಜೀಗರ್ತನಿಗೂ ನಡೆದ ಸಂವಾದಕ್ರಮವನ್ನು ತಿಳಿಸುವರು

ಹಿಂದೆ ಹೇಳಿದಂತೆ ವಿಶ್ವಾಮಿತ್ರನು ಅಜೀಗರ್ತನ ಮಾತನ್ನು ತಿರಸ್ಕರಿಸಿದ ಮೇಲೆ ಶುನಃಶೇಪನನ್ನು ಕುರಿತು ಇಂತೆಂದನು–ಎಲೈ ಪುತ್ರನೇ ನೀನು ವಿಶ್ವಾಮಿತ್ರನ ಮಾತನ್ನು ಕೇಳಬೇಡ. ನಿನ್ನ ತಾಯಿಯೂ, ತಂದೆಯಾದ ನಾನು ನಮ್ಮ ಬಳಿಗೆ ಬರಬೇಕೆಂದು ಅಪೇಕ್ಷಿಸುತ್ತೇವೆ. ಎಂದು ಹೇಳಲು ಶುನಃಶೇಪನು ಏನನ್ನೂ ಹೇಳದೆ ಸುಮ್ಮನ್ನಿರುವುದನ್ನು ಕಂಡ ಅಜೀಗರ್ತನು ಪುನಃ ಇಂತೆಂದನು–ಎಲೈ ಶುನಃಶೇಪನೇ ನೀನು ಅಂಗೀರಸರೆಂಬ ಋಷಿಗಳ ವಂಶದಲ್ಲಿ ಉತ್ಪನ್ನನಾಗಿದ್ದೀಯೆ, ಅಜೀಗರ್ತನೆಂಬುವನ ಪುತ್ರನಾಗಿದ್ದೀಯೆ. ನೀನು ಕವಿಯೂ ವಿದ್ವಾಂಸನೂ ಎಂದು ಪ್ರಸಿದ್ಧನಾಗಿದ್ದೀಯೆ.

ಆದ್ದರಿಂದ ಮಹರ್ಷಿಯಾದ ಎಲೈ ಶುನಃಶೇಪನೇ, ಪಿತೃಪಿತಾಮಹಾದಿಯಾಗಿ ಹಿಂದಿನಿಂದಲೂ ಪ್ರಜಾಪತಿಯ ಅನುಗ್ರಹ ದಿಂದ ಅವಿಚ್ಛಿನ್ನವಾಗಿ ನಡೆದುಬಂದಿರುವ ಈ ಅಂಗಿರೋವಂಶವನ್ನು ತ್ಯಜಿಸಬೇಡ. ಆದ್ದರಿಂದ ಪುನಃ ನನ್ನ ಮನೆಗೆಬಾ. ಇದನ್ನು ಕೇಳಿ ಶುನಃಶೇಪನು ಅವನ ಮಾತಿಗೆ ಪ್ರತ್ಯುತ್ತರವನ್ನು ಹೇಳಿದನು—ಎಲೈ ಅಜೀಗರ್ತನೇ ನಿನ್ನ ಸ್ವಂತ ಪುತ್ರನನ್ನೇ ಕಡಿಯಲು ಕೈಯಲ್ಲಿ ಖಡ್ಗಹಿಡಿದು ಸಿದ್ಧನಾಗಿ ನಿಂತಿದ್ದ ನಿನ್ನನ್ನು ಸಮಸ್ತಜನರೂ ಪ್ರತ್ಯಕ್ಷವಾಗಿ ನೋಡಿರುವರು. ನೀಚ ಜಾತಿಯವನಾದ ಶೂದ್ರನೂ ಸಹ ಮಾಡಲು ಹಿಂಜರಿಯುವ ಪುತ್ರವಧಕಾರ್ಯವನ್ನು ಮಾಡಲು ಮುಂದೆ ಬಂದಿದ್ದ ಮತ್ತು ಕ್ರೂರಕರ್ಮವನ್ನು ಮಾಡಲು ಸಿದ್ಧನಾಗಿದ್ದ ನಿನ್ನನ್ನು ಎಲ್ಲರೂ ನೋಡಿರುವರು. ಎಲೈ ಅಂಗಿರಸಗೋತ್ರೋತ್ಪನ್ನನಾದ ಎಲೈ ಅಜೀಗರ್ತನೇ ನನ್ನನ್ನು ವಿಕ್ರಯಿಸಿ ನನ್ನ ವಧೆಗೂ ಸಿದ್ಧನಾಗಿದ್ದ ನಿನಗೆ ನನಗಿಂತಲೂ ಮುನ್ನೂರು ಗೋವುಗಳೇ ಹೆಚ್ಚಾದುವು. ಇದು ಬಹಳ ದುಃಖಕರವಾದ ಸಂಗತಿಯು ಎಂದು ಹೇಳಿದನು.

**ಸ ಹೋವಾಚಾಜೀಗರ್ತಃ ಸೌಯವಸಿಸ್ತದ್ವೈ ಮಾ ತಾತ ತಪತಿ ಪಾಪಂ ಕರ್ಮ ಮಯಾ ಕೃತಂ । ತದಹಂ ನಿಹನುವೇ ತುಭ್ಯಂ ಪ್ರತಿಯಂತು ಶತಾ ಗವಾಮಿತಿ ಸಹೋವಾಚ ಶುನಃಶೇಪೋ ಯಃ ಸಕೃತ್ಪಾಪಕಂ ಕುರ್ಯಾತ್ಕುರ್ಯಾದೇನತ್ತತೋಽಪರಂ । ನಾಪಾಗಾಃ ಶೌದ್ರಾನ್ನ್ಯಾ-ಯಾದಸಂಧೇಯಂ ತ್ವಯಾ ಕೃತಮಿತಿ ।**

ಪುನರಪ್ಯಜೀಗರ್ತಶುನಃಶೇಪಯೋರುಕ್ತಿಪ್ರತ್ಯುಕ್ತೀ ದರ್ಶಯತಿ—ಶುನಃಶೇಪನೋಪಾಲಬ್ಧೋಽಜೀಗರ್ತಃ ಸ್ವಕೀಯಮನುತಾಪಂ ದರ್ಶಯಿತುಂ ಕಾಂಚಿದ್ಗಾಥಾಮೇವಮುವಾಚ । ಹೇ ತಾತ ಪಿತೃವದುಪಲಾಲನೀಯ ಶುನಃಶೇಪ ಮಯಾ ಯತ್ಪಾಪಂ ಕೃತಂ ತದ್ವೈ ಮಾ ತಪತಿ ತದೇವ ಮಾಂ ಮನಸಿ ಸಂತಪ್ತಂ ಕರೋತಿ । ಅಹಂ ತತ್ಪಾಪಂ ನಿಹ್ನುವೇ ಪರಿಹರಾಮಿ । ಗವಾಂ ಶತಾನಿ ಪೂರ್ವಂ ಮಯಾ ಗೃಹೀತಾನಿ ತ್ರೀಣಿ ಯಾನಿ ತಾನಿ ತುಭ್ಯಂ ತ್ವದರ್ಥಂ ಪ್ರತಿಯಂತು ಪ್ರತ್ಯೇಕಮೇವ ಪ್ರಾಪ್ನುವಂತು । ಇತರಯೋಃ ಪುತ್ರಯೋರ್ಗಾವೋ ಮಾ ಭೂವಂಸ್ತ್ವಯ್ಯೈವ ಸರ್ವಾಃ ಸಂತ್ವಿತಿ । ತತಃ ಸ ಶುನಃಶೇಪೋ ಗಾಥಯಾ ಪ್ರತ್ಯುತ್ತರಂ ದದೌ । ಯಃ ಪುಮಾನ್ ಧರ್ಮಶಾಸ್ತ್ರಭೀತಿರಹಿತಃ ಸಕೃತ್ಪಾಪಕಂ ಕುರ್ಯಾತ್ಸ ಪುಮಾಂಸ್ತತಃ ಪಾಪಾದನ್ಯದೇನತ್ಪಾಪಂ ತದಭ್ಯಾಸವಶಾತ್ಕುರ್ಯಾದೇವ ॥ ತ್ವಂ ಚ ಶೌದ್ರಾನ್ನ್ಯಾಯಾನ್ನೀಚಜಾತಿಸಂಬಂಧಿನಃ ಕ್ರೂರಾದಾಚರಣಾನ್ನಾಪಾಗಾ ಅಪಗತೋ ನ ಭವಸಿ । ಅಸಂಧೇಯಂ ಪ್ರತಿಸಂಧಾನರಹಿತಂ ಪಾಪಂ ತ್ವಯಾ ಕೃತಮಿತ್ಯೇಷಾ ಶುನಃಶೇಪಸ್ಯ ಪ್ರತ್ಯುಕ್ತಿಃ ॥

ಅಜೀಗರ್ತನಿಗೂ ಶುನಃಶೇಪನಿಗೂ ನಡೆದ ಸಂವಾದವನ್ನು ಮುಂದುವರೆಸುವರು—ಶುನಃಶೇಪನು ಹೇಳಿದ ಪ್ರತ್ಯುತ್ತರವನ್ನು ಕೇಳಿ ತಂದೆಯಾದ ಅಜೀಗರ್ತನು ತನ್ನ ಅನುತಾಪವನ್ನು ಪ್ರದರ್ಶಿಸುತ್ತಾ ಮತ್ತಿಂತೆಂದನು—ಎಲೈ ಮಗುವೇ, ಮಗನಂತೆ ತಂದೆತಾಯಿಗಳು ನಿನ್ನನ್ನು ಲಾಲನೆಪಾಲನೆಗಳಿಂದ ಆದರಿಸಿ ಕಾಪಾಡುವುದು ಯುಕ್ತವು. ಆದರೆ ದುರ್ಬುದ್ಧಿಗೊಳಗಾಗಿ ನಿನ್ನ ವಿಷಯದಲ್ಲಿ ಪಾಪಕಾರ್ಯವನ್ನು ಮಾಡಿದೆನು. ಈ ಕೃತ್ಯವು ನನ್ನ ಮನಸ್ಸಿನಲ್ಲಿ ಯಾವಾಗಲೂ ಕೊರಗನ್ನುಂಟು ಮಾಡುತ್ತಿದೆ. ನಾನು ಏನಾದರೂ ಮಾಡಿ ಆ ಪಾಪವನ್ನು ಕಳೆದುಕೊಳ್ಳಲು ಪ್ರಯತ್ನಪಡುವೆನು. ನಾನು ಹಿಂದೆ ಪಡೆದಿದ್ದ ಮತ್ತು ಈಗ ಪಡೆದಿರುವ ಈ ಮುನ್ನೂರು ಗೋವುಗಳನ್ನೂ (ಎಲ್ಲವನ್ನೂ) ನಿನಗೇ ಕೊಡುವೆನು. ಇತರ ಪುತ್ರರಿಗೆ ಗೋವು

ಗಳನ್ನೇನೂ ಕೊಡುವುದಿಲ್ಲ. ಅದರಂತೆ ಮಾಡುವೆನು ಎಂದು ಹೇಳಲು, ಶುನಃಶೇಪನಿಂತೆಂದನು—ಯಾವ ಪುರುಷನು ಧರ್ಮಶಾಸ್ತ್ರಾದಿಗಳನ್ನು ಲೆಕ್ಕಿಸದೆ (ಭೀತನಾಗದೆ) ಒಂದಾವರ್ತಿ ಪಾಪಕಾರ್ಯವನ್ನು ಮಾಡುವನೋ ಆ ಪುರುಷನು ಅಭ್ಯಾಸಬಲದಿಂದ ಮತ್ತೊಂದಾವರ್ತಿಯೂ ಅದೇ ವಿಧವಾದ ಪಾಪಕೃತ್ಯವನ್ನು ಮಾಡಲು ಹಿಂಜರಿಯುವುದಿಲ್ಲ ಮಾಡಿಯೇ ಮಾಡುತ್ತಾನೆ. ನೀನಾದರೋ ನೀಚಜಾತಿಯವರಾದ ಶೂದ್ರರೂ ಸಹ ಮಾಡಬಾರದ ಕ್ರೂರವಾದ ಪಾಪಕರ್ಮವನ್ನು ಮಾಡಿರುವೆ. ಇದಕ್ಕೆ ಪ್ರಾಯಶ್ಚಿತ್ತವೇ ಇಲ್ಲ ಎಂದು ಶುನಃಶೇಪನು ಅಜೀಗರ್ತನಿಗೆ ಪ್ರತ್ಯುತ್ತರವನ್ನು ಹೇಳಿದನು.

ಅಸಂಧೇಯಮಿತಿ ಹ ವಿಶ್ವಾಮಿತ್ರ ಉಪಪಪಾದ ಸ ಹೋವಾಚ
ವಿಶ್ವಾಮಿತ್ರೋ ಭೀಮ ಏವ ಸೌಯವಸಿ ಶಾಸೇನ ವಿಶಿಶಾಸಿಷುಃ ।
ಅಸ್ಥಾನ್ಮೈತಸ್ಯ ಪುತ್ರೋ ಭೂರ್ಮಮೈವೋಪೇಹಿ ಪುತ್ರತಾಮಿತಿ ॥

**ಅಥ ವಿಶ್ವಾಮಿತ್ರಕೃತ್ಯಂ ದರ್ಶಯತಿ—ಅಸಂಧೇಯಪ್ರತಿಸಮಾಧೇಯಂ ಪಾಪಮಿತಿ ಶುನಃಶೇಪೇನ ಯದೀರಿತಂ ತದೇತದಪ್ರತಿಸಮಾಧೇಯತ್ವಂ ವಿಶ್ವಾಮಿತ್ರ ಉಪಪಪಾದ ಯುಕ್ತಿಭಿರುಪಪಾದಿತವಾನ್ । ತದುಪಪಾದನಾರ್ಥಮೇವ ವಿಶ್ವಾಮಿತ್ರ ಇಮಾಂ ಗಾಥಾಮುವಾಚ । ಸೂಯವಸಸ್ಯ ಪುತ್ರೋಽಜೀಗರ್ತೋ ಭೀಮ ಏವ ಭಯಹೇತುರೇವ ಸನ್ ಶಾಸೇನ ಹಸ್ತಗತಖಡ್ಗೇನ ಸ ವಿಶಿಶಾಸಿಷುರಸ್ಥಾದ್ವಿಶಸನಕರ್ತುಮಿಚ್ಛುರವಸ್ಥಿತವಾನ್ । ಅತೋ ಹೇ ಶುನಃಶೇಪೈತಸ್ಯ ಪಾಪಿಷ್ಠಸ್ಯ ಪುತ್ರೋ ಮಾ ಭೂಃ ಕಿಂತು ಮಮೈವ ಪುತ್ರತಾಮುಪೇಹಿ ॥**

ಅನಂತರ ವಿಶ್ವಾಮಿತ್ರನು ಮುಂದೇನು ಮಾಡಿದನೆಂಬ ವೃತ್ತಾಂತವನ್ನು ತಿಳಿಸುವರು—ವಿಶ್ವಾಮಿತ್ರನಿಂತೆಂದನು—ಹೌದು, ಈ ಪಾಪಕೃತ್ಯಕ್ಕೆ ಪ್ರಾಯಶ್ಚಿತ್ತವೇ ಇಲ್ಲ ಎಂದು ಅನೇಕ ಯುಕ್ತಿಗಳಿಂದಲೂ ನ್ಯಾಯದಿಂದಲೂ ಶುನಃಶೇಪನ ಮಾತನ್ನೇ ವಿಶ್ವಾಮಿತ್ರನು ಸಮರ್ಥಿಸಿದನು ಮತ್ತು ಈ ವಿಷಯವನ್ನು ಮುಂದುವರೆಸಿ ಹೇಳಿದನು—ಸೂಯವಸುಪುತ್ರನಾದ ಈ ಅಜೀಗರ್ತನು ತನ್ನ ಕೈಯಲ್ಲಿ ಹರಿತವಾದ ಖಡ್ಗವನ್ನು ಹಿಡಿದು (ತನ್ನ ಪುತ್ರನನ್ನೇ) ಕಡಿದುಹಾಕಲು ಸಿದ್ಧನಾಗಿ ಮುಂದೆ ಬರುತ್ತಿರುವಾಗ ಇವನು ಕಟುಕನಂತೆ ಬಹಳ ಭಯಂಕರವಾಗಿ ಕಾಣಿಸುತ್ತಿದ್ದನು. ಆದ್ದರಿಂದ ಎಲೈ ಶುನಃಶೇಪನೇ, ನೀನು ಎಂದಿಗೂ ಈ ಪಾಪಿಷ್ಠನ ಮಗನಾಗಬೇಡ, ನನ್ನ ಬಳಿ ನನ್ನ ಪುತ್ರನಂತೆ ಇರು ಎಂದನು.

ಸ ಹೋವಾಚ ಶುನಃಶೇಪಃ ಸ ವೈ ಯಥಾ ನೋ ಜ್ಞಾಪಯಾಽಽರಾಜಪುತ್ರ ತಥಾ ವದ। ಯಥೈವಾಽಽಙ್ಗಿರಸಃ ಸನ್ನುಪೇಯಾಂ ತವ ಪುತ್ರತಾಮಿತಿ ಸ ಹೋವಾಚ ವಿಶ್ವಾಮಿತ್ರೋ ಜ್ಯೇಷ್ಠೋ ಮೇ ತ್ವಂ ಪುತ್ರಾಣಾಂ ಸ್ಯಾಸ್ತವ ಶ್ರೇಷ್ಠಾ ಪ್ರಜಾ ಸ್ಯಾತ್। ಉಪೇಯಾ ದೈವಂ ಮೇ ದಾಯಂ ತೇನ ವೈ ತ್ವೋಪಮಂತ್ರಯ ಇತಿ ॥

**ಅಥ ಶುನಃಶೇಪವಿಶ್ವಾಮಿತ್ರಯೋರುಕ್ತಿಪ್ರತ್ಯುಕ್ತೀ ದರ್ಶಯತಿ—ವಿಶ್ವಾಮಿತ್ರೇಣೈವಂ ಬೋಧಿತಃ ಶುನಃಶೇಪಃ ಪುನರಪಿ ಗಾಥಯಾ ವಿಶ್ವಾಮಿತ್ರಂ ಪ್ರತ್ಯೇವಮುವಾಚ । ಅಯಂ ವಿಶ್ವಾ-**

**ಮಿತ್ರೋ ಜನ್ಮನಾ ಕ್ಷತ್ರಿಯಃ ಸನ್ಸ್ವಕೀಯೇನ ತಪೋಮಹಿಮ್ನಾ ಬ್ರಾಹ್ಮಣ್ಯಂ ಪ್ರಾಪ್ತವಾನಿತ್ಯೇವಂ ತದ್ವೃತ್ತಾಂತಂ ಸೂಚಯಿತುಂ ಹೇ ರಾಜಪುತ್ರೇತಿ ಸಂಬೋಧಿತವಾನ್ । ಸ ವೈ ತಥಾವಿಧೋ ರಾಜಜಾತೀಯ ಏವ ಸನ್ಯಥಾ ಯೇನ ಪ್ರಕಾರೇಣ ಸೋಽಸ್ಮಾಭಿಃ ಸರ್ವೈರಾಸಮಂತಾಜ್ಜ್ಞಾಪಯ ಬ್ರಾಹ್ಮಣತ್ವೇನ ಜ್ಞಾಯಸೇ ತಥೈವಾಸ್ಮದ್ವಿಷಯೇಽಪಿ ತ್ವಂ ವದ । ಕಥಂ ವದಿತವ್ಯಮಿತಿ ತದುಚ್ಯತೇ । ಅಹಮಿದಾನೀಮಂಗಿರೋಗೋತ್ರಃ ಸಂಸ್ತತ್ಪರಿತ್ಯಾಗೇನ ತವ ಪುತ್ರತ್ವಂ ಯೇನೈವ ಪ್ರಕಾರೇಣೋಪೇಯಾಂ ತಥೈವಾನುಗೃಹಾಣೇತಿ ಶೇಷಃ । ಏತದ್ವಾಕ್ಯಾಭಿಪ್ರಾಯಃ ಪೂರ್ವೈಃ ಸಂಕ್ಷಿಪ್ಯ ದರ್ಶಿತಃ ॥**

**"ಪುರಾತ್ಮಾನಂ ನೃಪಂ ವಿಪ್ರ (ಪ್ರಂ) ತಪಸಾ ಕೃತವಾನಸಿ ।**
**ಏವಮಾಂಗಿರಸಂ ಮಾ ತ್ವಂ ವೈಶ್ವಾಮಿತ್ರಮ್ಮೃಷೇ ಕುರು" ॥ ಇತಿ ॥**

**ಏವಮಾಂಗಿರಸಂ ಮಾತ್ವಂ ವೈಶ್ವಾಮಿತ್ರೋ ಗಾಥಯಾ ಪ್ರತ್ಯುತ್ತರಮುಕ್ತವಾನ್ ಹೇ ಶುನಃಶೇಪ ತ್ವಂ ಮೇ ಪುತ್ರಾಣಾಂ ಮಧ್ಯೇ ಜ್ಯೇಷ್ಠಃ ಸ್ಯಾ ಜ್ಯೇಷ್ಠೋ ಭವ ತವ ಪುತ್ರಾದಿರೂಪಾ ಪ್ರಜಾಽಪೀತರಸ್ಯಾಃ ಶ್ರೇಷ್ಠಾ ಸ್ಯಾತ್ । ಮೇ ಮಹ್ಯಂ ವಿಶ್ವಾಮಿತ್ರಾಯ ದೈವಂ ದೇವೈಃ ಪ್ರಸನ್ನೈರ್ದತ್ತಂ ದಾಯಂ ಪುತ್ರತ್ವರೂಪಂ ಲಾಭಮುಪೇಯಾಃ ಪ್ರಾಪ್ನುಹಿ । ತೇನ ವೈ ತೇನೈವ ಪ್ರಕಾರೇಣ ತ್ವೋಪಮಂತ್ರಯೇ ತ್ವಾಂ ಪುತ್ರತ್ವೇನ ವ್ಯವಹರಾಮಿ ॥**

ಈಗ ಶುನಃಶೇಪನಿಗೂ ವಿಶ್ವಾಮಿತ್ರನಿಗೂ ನಡೆದ ಸಂಭಾಷಣೆಯನ್ನು ವಿವರಿಸುವರು—ವಿಶ್ವಾಮಿತ್ರನು ಹೀಗೆ ಹೇಳಿದ ಮೇಲೆ ಶುನಃಶೇಪನು ವಿಶ್ವಾಮಿತ್ರನನ್ನು ಕುರಿತು ಮತ್ತಿಂತೆಂದನು—(ಇಲ್ಲಿ ಶುನಃಶೇಪನು ವಿಶ್ವಾಮಿತ್ರನನ್ನು ರಾಜಪುತ್ರನೆಂದು ಸಂಬೋಧಿಸಿದ್ದಾನೆ. ಏಕೆಂದರೆ ಹಿಂದೆ ವಿಶ್ವಾಮಿತ್ರನು ಕ್ಷತ್ರಿಯಕುಲದಲ್ಲಿ ಜನಿಸಿ ತನ್ನ ತಪೋಮಹಿಮೆಯಿಂದ ಬ್ರಾಹ್ಮಣ್ಯವನ್ನು ಪಡೆದನು. ಅದನ್ನು ಸೂಚಿಸುವುದಕ್ಕಾಗಿ ಇಲ್ಲಿ ವಿಶ್ವಾಮಿತ್ರನನ್ನು ರಾಜಪುತ್ರನೆಂದು ಸಂಬೋಧಿಸಲಾಗಿದೆ). ಎಲೈ ರಾಜಪುತ್ರನೇ (ವಿಶ್ವಾಮಿತ್ರನೇ) ನಾನು ಅಂಗಿರಸಗೋತ್ರೋತ್ಪನ್ನನು. ಆದ್ದರಿಂದ ಈಗ ನಾನು ಯಾವ ಪ್ರಕಾರವಾಗಿ ನಿನ್ನ (ವಿಶ್ವಾಮಿತ್ರನ) ಪುತ್ರನಾಗುವೆನು ? ನೀನು ಹೇಗೆ ಅನ್ಯಗೋತ್ರದವನಾದ ನನ್ನನ್ನು ನಿನ್ನ ಪುತ್ರನೆಂದು ಸ್ವೀಕರಿಸುತ್ತೀಯೆ ? ಅದನ್ನು ನನಗೆ ತಿಳಿಸಬೇಕು ಎಂದು ಕೇಳಿದನು ಮತ್ತು ವಿಶ್ವಾಮಿತ್ರನನ್ನುದ್ದೇಶಿಸಿ—ಎಲೈ ಋಷಿವರ್ಯನೇ, ಹಿಂದೆ ನೀನು ಕ್ಷತ್ರಿಯವಂಶದಲ್ಲಿ ಹುಟ್ಟಿ ರಾಜಪುತ್ರನಾಗಿದ್ದು ಅನಂತರ ಯಾವ ಪ್ರಕಾರವಾಗಿ ಬ್ರಾಹ್ಮಣನೆಂದು ಸರ್ವರಿಂದಲೂ ಪರಿಗಣಿಸಲ್ಪಟ್ಟಿರುವೆ ? ಹಾಗೆಯೇ ನಮ್ಮ ವಿಷಯದಲ್ಲಿಯೂ ಎಂದರೆ ಅಂಗಿರಸದ ವಂಶದಲ್ಲಿ ಜನಿಸಿದ ನಾನು ಯಾವ ಪ್ರಕಾರವಾಗಿ ನಿನ್ನ ಪುತ್ರನಾಗಿರಲು ಸಾಧ್ಯ ಎಂಬುದನ್ನೂ ನನಗೆ ತಿಳಿಸಬೇಕು ಎಂದು ಹೇಳಿ—

**ಪುರಾಽಽತ್ಮಾನಂ ನೃಪಂ ವಿಪ್ರ (ಪ್ರಂ) ತಪಸಾ ಕೃತವಾನಸಿ ।**
**ಏವಮಾಂಗಿರಸಂ ಮಾ ತ್ವಂ ವೈಶ್ವಾಮಿತ್ರಮ್ಮೃಷೇ ಕುರು ॥**

ಪುನಃ ಎಲೈ ಋಷಿಶ್ರೇಷ್ಠನೇ, ಪೂರ್ವದಲ್ಲಿ ರಾಜನಾಗಿದ್ದ ನೀನು ನಿನ್ನ ತಪೋಬಲದಿಂದ ಬ್ರಾಹ್ಮಣನಾಗಿರುವೆ. ಅದರಂತೆ ಅಂಗಿರಸಋಷಿಯ ಗೋತ್ರದಲ್ಲಿ ಜನಿಸಿದ ನನ್ನನ್ನು ವಿಶ್ವಾಮಿತ್ರಗೋತ್ರದವನನ್ನಾಗಿ ಮಾಡು ಎಂದು ಪ್ರಾರ್ಥಿಸಿದನು. ಅದನ್ನು ಕೇಳಿ ವಿಶ್ವಾಮಿತ್ರನು—ಎಲೈ ಶುನಃಶೇಪನೇ, ನನಗೆ ಅನೇಕ ಪುತ್ರರಿರುವರು. ಅವರಲ್ಲೆಲ್ಲಾ ನೀನೇ ನನಗೆ ಜ್ಯೇಷ್ಠಪುತ್ರನಾಗಿರು. ನನ್ನ ಇತರ ಮಕ್ಕಳೆಲ್ಲರೂ ನಿನಗೆ ಕಿರಿಯ ಸಹೋದರರಂತೆ ಇರಲಿ. ದೇವತೆಗಳೇ ಪ್ರಸನ್ನರಾಗಿ

ನಿನ್ನನ್ನು ನನಗೆ ಪುತ್ರನಾಗಿರುವಂತೆ (ದೇವರಾತನೆಂಬ ಹೆಸರಿನಿಂದ) ಅನುಗ್ರಹಿಸಿ ಕೊಟ್ಟಿರುವರು. ಆದ್ದರಿಂದ ನನ್ನ ಆಸ್ತಿಯಲ್ಲಿ ನಿನಗೂ ದಾಯಭಾಗವು ದೊರೆಯುವುದು. ನಾನೂ ನಿನ್ನನ್ನು ಪುತ್ರನೆಂದು ವ್ಯವಹಾರದಲ್ಲಿಯೂ ಪರಿಗಣಿಸುತ್ತೇನೆ ಎಂದು ಹೇಳಿದನು.

ಸ ಹೋವಾಚ ಶುನಃಶೇಪಃ ಸಂಜ್ಞಾನಾನೇಷು ವೈ ಬ್ರೂಯಾತ್ಸೌ-
ಹಾರ್ದಾಯ ಮೇ ಶ್ರಿಯೈ। ಯಥಾಽಹಂ ಭರತಋಷಭೋಪೇಯಾಂ
ತವ ಪುತ್ರತಾಮಿತ್ಯಥ ಹ ವಿಶ್ವಾಮಿತ್ರಃ ಪುತ್ರಾನಾಮಂತ್ರಯಾಮಾಸ
ಮಧುಚ್ಛಂದಾಃ ಶೃಣೋತಸ ಋಷಭೋ ರೇಣುರಷ್ಟಕಃ। ಯೇ
ಕೇ ಚ ಭ್ರಾತರಃ ಸ್ಥ ನಾಸ್ಮೈ ಜ್ಯೈಷ್ಠ್ಯಾಯ ಕಲ್ಪಧ್ವಮಿತಿ ॥

ಪುನರಪಿ ಶುನಃಶೇಪವಿಶ್ವಾಮಿತ್ರಯೋರ್ವೃತ್ತಾಂತಂ ದರ್ಶಯತಿ—ವಿಶ್ವಾಮಿತ್ರೇಣ ಪ್ರಲೋಭಿತಃ ಶುನಃಶೇಪಃ ಸ್ವಕಾರ್ಯದಾರ್ಢ್ಯಾರ್ಥಂ ಗಾಥಯೈವಮುವಾಚ ।ಸಂಜ್ಞಾನಾನೇಷು ಮದ್ವಿಷಯೈಕಮತ್ಯಂ ಪ್ರಾಪ್ತೇಷು ತ್ವದೀಯಪುತ್ರೇಷು (ಸ)ರ್ವೋಽಪಿ ಮಾಂ ಬ್ರೂಯಾತ್ । ಜ್ಯೇಷ್ಠ-ಭ್ರಾತೃತ್ವೇನ ವ್ಯವಹರತು । ತಚ್ಚ ಮೇ ಮಮ ಸೌಹಾರ್ದಾಯ ಭ್ರಾತೃಭಿರಿತರೈಃ ಸ್ನೇಹಾತಿಶಯಾಯ ಶ್ರಿಯೈ ಧನಲಾಭಾಯ ಚ ಸಂಪದ್ಯತೇ । ಹೇ ಭರತಋಷಭ ಭರತವಂಶಶ್ರೇಷ್ಠ ವಿಶ್ವಾಮಿತ್ರಾಹಂ ತವ ಪುತ್ರತಾಂ ಯಥೋಪೇಯಾಂ ತಥೈವೈತೇಷಾಂ ಪುತ್ರಾಣಾಮಗ್ರೇಽನುಗೃಹಾಣೇತಿ ಶೇಷಃ । ತತೋ ವಿಶ್ವಾಮಿತ್ರ ಇತರಾನ್ಪುತ್ರಾನಾಹೂಯ ಗಾಥಯೈವಮಾಜ್ಞಾಪಿತವಾನ್। ಯೋ ಮಧುಚ್ಛಂದಾ ನಾಮ ಯಶ್ಚರ್ಷಭೋ ಯೋಽಪಿ ರೇಣುರ್ಯೋಽಷ್ಟಕ ಏತೇ ಮುಖ್ಯಾ ಹೇ ಪುತ್ರಕಾಃ ಶೃಣೋತನ ಮದೀಯಾಮಾಜ್ಞಾಂ ಶೃಣುತ ।ಯೇ ಕೇಚಿದ್ಯೂಯಂ ಸರ್ವೇ ಭ್ರಾತರಃ ಸ್ಥ ತೇ ಸರ್ವೇಽಪ್ಯಸ್ಮೈ ಶುನಃಶೇಪಾದಸ್ಮಾದಪಿ ಜ್ಯೈಷ್ಠ್ಯಾಯ ನ ಕಲ್ಪಧ್ವಂ ಜ್ಯೇಷ್ಠತ್ವಾಭಿಮಾನಂ ಮಾ ಕುರುತ । ಕಿಂ ತ್ವ-ಸಾವೇವ ಯುಷ್ಮಾಕಂ ಮಧ್ಯೇ ಜ್ಯೇಷ್ಠೋ ಭೂತ್ವಾಽವತಿಷ್ಠತಾಮಿತಿ ॥

ವಿಶ್ವಾಮಿತ್ರ ಮತ್ತು ಶುನಃಶೇಪರ ವೃತ್ತಾಂತವನ್ನು ಪುನಃ ತಿಳಿಸುವರು—

ವಿಶ್ವಾಮಿತ್ರನು ಪುತ್ರಪ್ರೇಮದಿಂದ ಶುನಃಶೇಪನನ್ನು ಸಂತೈಸಲು ಆ ಶುನಃಶೇಪನು ತನ್ನ ಕಾರ್ಯನಿರ್ಧಾರಕ್ಕಾಗಿ ಇಂತೆಂದನು. ಎಲೈ ವಿಶ್ವಾಮಿತ್ರನೇ, ತಿಳುವಳಿಕೆಯುಳ್ಳವರೂ ಮನೆಯಲ್ಲಿ ಐಕಮತ್ಯದಿಂದ ವರ್ತಿಸುತ್ತಿರುವವರೂ ಆದ ನಿನ್ನ ಪುತ್ರರೆಲ್ಲರೂ ನನಗೆ ಹೀಗೆ ಹೇಳುವರು. ಈ ಶುನಃಶೇಪನು ನಮಗೆಲ್ಲರಿಗೂ ಜ್ಯೇಷ್ಠ ಸಹೋದರನಂತಿರಲಿ. ಹಾಗಿರುವುದು ನಾನು ಆ ಸಹೋದರರೊಂದಿಗೆ ಸೌಹಾರ್ದವಿಂದಲೂ ಸ್ನೇಹದಿಂದಲೂ ಅನುಕೂಲವಾಗುವುದು. ನನಗೆ ಧನವೂ ಲಭಿಸುವುದು. ಎಲೈ ಭರತಶ್ರೇಷ್ಠನಾದ ವಿಶ್ವಾಮಿತ್ರನೇ ನಾನು ನಿನ್ನ ಪುತ್ರರಲ್ಲಿ ಅಗ್ರಜನಂತೆಯೂ ನಿನ್ನ ಪುತ್ರರಲ್ಲಿ ಜ್ಯೇಷ್ಠ ಸಹೋದರನಂತೆಯೂ ನನ್ನನ್ನು ಅನುಗ್ರಹಿಸು ಎಂದನು. ಇದನ್ನು ಕೇಳಿದನಂತರ ವಿಶ್ವಾಮಿತ್ರನು ತನ್ನ ಇತರ ಪುತ್ರರನ್ನೆಲಾ ಕರೆದು ಇಂತು ಆಜ್ಞಾಪಿಸಿದನು. ಎಲೈ ಮಧುಚ್ಛಂದನೇ, ಋಷಭನೇ, ರೇಣನೇ, ಅಷ್ಟಕನೇ ಮತ್ತು ಇತರ ಪುತ್ರರೇ ನಾನು ತಿಳಿಸುವ ಆಜ್ಞೆಯನ್ನು ಕೇಳಿರಿ. ನೀವೆಲ್ಲರೂ ಇವನಿಗೂ ನನಗೆ ಪುತ್ರರಾಗಿಯೂ ಪರಸ್ಪರ ಸಹೋದರರಾಗಿಯೂ

ಇದ್ದಿರಿ. ಇನ್ನು ಮುಂದೆ ನೀವೆಲ್ಲರೂ ಈ ಶುನಃಶೇಪನಿಗಿಂತ ಜ್ಯೇಷ್ಠ ಸಹೋದರರೆಂದು ಭಾವಿಸಬೇಡಿ. ಎಂದರೆ ಈ ಶುನಃಶೇಪನೇ ನಿಮ್ಮಗಳ ಮಧ್ಯದಲ್ಲಿ ಜ್ಯೇಷ್ಠನಾಗಿರುವನು (ಹಿರಿಯ) ಆದ್ದರಿಂದ ನೀವೆಲ್ಲರೂ ಇವನನ್ನು ಜ್ಯೇಷ್ಠ ಸಹೋದರನಂತೆಯೇ ಭಾವಿಸಿ ಅದರಂತೆ ನಡೆದುಕೊಳ್ಳಬೇಕು ಎಂದಾಜ್ಞಾಪಿಸಿದನು.

---

*English Translation*

**(Sunahsepa is released. He invents the anjah sava preparation of the Soma. Visvamitra adopts him as his son. Stanzas.)**

The priests now said to Sunahsepa, "Thou art now only ours (thou art now a priest like us); take part in the performance of the particular ceremonies of this day (the abishechaniya)." He then saw (invented) the method of direct preparation of the Soma juice (aojah sava without intermediate fermentation) after it is squeezed, and carried it out under the recital of the four verses, yach chid dhi tvam grihe grihe (1.28, 5-8). Then by the verse uchchhishtam chamvor (1,28,9), he brought it into the Dronakalasa. Then after having been touched by Harischandra, he sacrified the Soma under the recital of the four first verses (of the hymn yatra grava prithubudhna 1,28, 1-4), which were accompanied by formula Svaha. Then he brought the implements required for making the concluding ceremonies (avabhritha) of this sacrifice to the spot and performed them under the recital of the two verses, tvam no agne Varunasya (4, 1, 4-5). Then, after this ceremony was over, Sunasehpa summoned Harischandra to the Ahavaniya fire, and recited the verse Sunah chichchhepam niditam (5,2,7,).

Sunahsepa then approached the said of Visvamitra (and sat by him) Ajigarta, the son of Suyavasa, then said, "O Rishi! return me my son." He answered, "No, for the gods have presented (deva arasata) him to me." Since that time he was Devarata, Visvamitra's son. From him come the Kapileyas and Bubhravas. Ajigarta further said, "Come, then, we they

(thy mother and I myself) will call thee," and added, "Thou art known as the seer from Ajigarta's family, as a descendant of the Angirasah. Therefore, O Rishi, do not leave your ancestral home; return to me." Sunahsepa answered, "What is not found even in the hands of a Shudra, one has seen in thy hand, the knife (to kill thy son): three hundred cows thou hast preferred to me, O Angiras!" Ajigarta then answered, "O my dear son! I repent of the bad deed I have committed; I bolt out this stain! one hundred of the cows shall be thine!"

Sunahsepa answdred, "who once might commit such a sin, may commit the same another time; thou are still not free from the brutality of a Sudhra, for thou has committed a crime for which no reconciliation exiats." "Yes irreconcileable (is this act) interrupted Visvamitra.

Visvamitra then said, "Fearful was Suyavasa's son to look at when he was standing ready to murder, holding knife in his hand; do not become his son again; but enter my family as my son." Sunahsepa then said, "O prince, let us know, tell (us) how I, as an Angirasah, can enter thy family as thy (adopted) son?" Visvamitra answered, "thou shalt be the first-born of my sons, and thy children the best. Thou shalt now enter on the possession of my divine heritage. I solemnly instal thee to it." Sunahsepa then said, "When thy sons should agree to thy wish that I should enter thy family, O thou best of the Bharatas! then tell them for the sake of my own happiness ro receive me friendly." Visvamitra then addressed his sons as follows: "Hear ye now Madhuchhandah, Rishabha, Renu, Ashtaka, and all ye brothers, do not think yourselves (entitled) to the right of primogeniture, which is his Sunahsepas.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾ
ಐತರೇಯಬ್ರಾಹ್ಮಣಭಾಷ್ಯಸ್ಯ ತ್ರಯಸ್ತ್ರಿಂಶಾಧ್ಯಾಯೇ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣಲ್ಲಿ ಮೂವತ್ತ ಮೂರನೆಯ ಅಧ್ಯಾಯದಲ್ಲಿ ಐದನೆಯ ಖಂಡವು
ಸಮಾಪ್ತವಾದುದು

# ಅಥ ತ್ರಯಸ್ತ್ರಿಂಶೋಧ್ಯಾಯೇ ಷಷ್ಠಃ ಖಂಡಃ

## ಮೂವತ್ತಮೂರನೆಯ ಅಧ್ಯಾಯದಲ್ಲಿ ಆರನೆಯ ಖಂಡವು

---

[ವಿಶ್ವಾಮಿತ್ರನ ಸಂತತಿ. ಶುನಃಶೇಪನ ಕಥೆಯನ್ನು ಪಠಿಸಿದವರಿಗೆ ಲಭಿಸುವ ಪ್ರತಿಫಲ.]

---

**ತಸ್ಯ ಹ ವಿಶ್ವಾಮಿತ್ರಸ್ಯೈಕಶತಂ ಪುತ್ರಾ ಆಸುಃ ಪಂಚಾಶದೇವ ಜ್ಯಾಯಾಂಸೋ ಮಧುಚ್ಛಂದಸಃ ಪಂಚಾಶತ್ಕನೀಯಾಂಸಃ ||**

ಅಥ ವಿಶ್ವಾಮಿತ್ರಪುತ್ರಾಣಾಂ ವೃತ್ತಾಂತಮಾಹ—ಮಧುಚ್ಛಂದೋ ನಾಮಕಃ ಕಶ್ಚಿತ್ಪುತ್ರೋ ಮಧ್ಯಮಸ್ತತೋಽಪಿ ಜ್ಯೇಷ್ಠಾಃ ಕನಿಷ್ಠಾಶ್ಚ ಪ್ರತ್ಯೇಕಂ ಪಂಚಾಶತ್ಸಂಖ್ಯಾಕಾ ಇತ್ಯೇವಮೇಕಶತಂ ತಸ್ಯ ಪುತ್ರಾಃ ||

ಈಗ ವಿಶ್ವಾಮಿತ್ರಮಹರ್ಷಿಯು ಪುತ್ರರುಗಳ ವೃತ್ತಾಂತವನ್ನು ವಿವರಿಸುವರು—ವಿಶ್ವಾಮಿತ್ರಋಷಿಗೆ ನೂರೊಂದು ಜನ ಪುತ್ರರಿದ್ದರು. ಅವರಲ್ಲಿ ಮಧುಚ್ಛಂದಾಃ ಎಂಬ ಹೆಸರಿನ ಪುತ್ರನು ಮಧ್ಯಮಪುತ್ರನು. ಉಳಿದವರಲ್ಲಿ ಐವತ್ತು ಮಂದಿ ಪುತ್ರರು ಮಧುಚ್ಛಂದನಿಗಿಂತಲೂ ಹಿರಿಯರು (ಜ್ಯೇಷ್ಠರು) ಉಳಿದ ಐವತ್ತು ಮಂದಿಯೂ ಕಿರಿಯ ಸಹೋದರರಾಗಿದ್ದರು.

**ತದ್ಯೇ ಜ್ಯಾಯಾಂಸೋ ನ ತೇ ಕುಶಲಂ ಮೇನಿರೇ ತಾನನು ವ್ಯಾಜ-ಹಾರಾನ್ತಾನ್ವಃ ಪ್ರಜಾ ಭಕ್ಷಿಷ್ಟೇತಿ ತ ಏತೇಽನ್ಧ್ರಾಃ ಪುಂಡ್ರಾಃ ಶಬರಾಃ ಪುಲಿಂದಾ ಮೂತಿಬಾ ಇತ್ಯುದಂತ್ಯಾ ಬಹವೋ ವೈಶ್ವಾಮಿತ್ರಾ ದಸ್ಯೂನಾಂ ಭೂಯಿಷ್ಠಾಃ ||**

ತೇಷಾಂ ಮಧ್ಯೇ ಜ್ಯೇಷ್ಠಾನಾಂ ವೃತ್ತಾಂತಮಾಹ-ತತ್ತೇಷ್ವೇಕಶತಸಂಖ್ಯಾಕೇಷು ಪುತ್ರೇಷು ಮಧ್ಯೇ ಯೇ ಮಧುಚ್ಛಂದಸೋ ಜ್ಯೇಷ್ಠಾಃ ಪಂಚಾಶತ್ಸಂಖ್ಯಾಕಾಃ ಸಂತಿ ತೇ ಶುನಃಶೇಪಸ್ಯ ವಿಶ್ವಾ-ಮಿತ್ರಪುತ್ರತ್ವಂ ಕುಶಲಂ ನ ಮೇನಿರ ಇದಂ ಸಮೀಚೀನಮಿತ್ಯೇವಂ ನಾಂಗೀಕೃತವಂತಃ | ತಾನ್ ಜ್ಯೇಷ್ಠಾನ್ ಪಂಚಾಶತ್ಸಂಖ್ಯಾಕಾನನುಲಕ್ಷ್ಯ ವಿಶ್ವಾಮಿತ್ರೋ ವ್ಯಾಜಹಾರ ವ್ಯಾಹರಣಂ ಶಾಪರೂಪಂ ವಾಕ್ಯಮುಕ್ತವಾನ್ | ಹೇ ಜ್ಯೇಷ್ಠಪುತ್ರಾ ಯುಷ್ಮಾಕಂ ಮದೀಯಾಜ್ಞಾತಿಲಂಘಿನಾಂ ಪ್ರಜಾಃ ಪುತ್ರಾದಿಕಾ ಅಂತಾನ್‌ಭಕ್ಷೀಷ್ಟ ಚಾಂಡಾಲಾದಿರೂಪಾನ್ನೀಚಜಾತಿವಿಶೇಷಾನ್ ಭಜತಾಮಿತಿ| ತ ಏತೇ ಶಪ್ತಾಃ ಸಂತೋಽಂಧ್ರತ್ವಾದಿ ಪಂಚವಿಧನೀಚಜಾತಿವಿಶೇಷಾ ಭವಂತಿ | ಇತಿಶಬ್ದಸ್ಯ ತತ್ಪ್ರದರ್ಶ-ನಾರ್ಥತ್ವಾದನ್ಯೇಪಿ ನೀಚಜಾತಿವಿಶೇಷಾಃ ಸರ್ವೇ ವಿವಕ್ಷಿತಾಃ | ಉದ್ಗತೋಽಂತ ಉದಂತೋಽತ್ಯಂತ-

ನೀಚಜಾತಿಷ್ವತ್ರ ಭವಾ ಉಪಂತ್ಯಾಃ । ತೇ ಬಹವೋಽನೇಕವಿಧಾ ವೈಶ್ವಾಮಿತ್ರಾ ವಿಶ್ವಾಮಿತ್ರಸಂತತಿಜಾ ದಸ್ಯೂನಾಂ ತಸ್ಕರಾಣಾಂ ಮಧ್ಯೇ ಭೂಯಿಷ್ಠಾ ಅತ್ಯಧಿಕಾಃ ॥

ವಿಶ್ವಾಮಿತ್ರರ ಪುತ್ರರಲ್ಲಿ ಜ್ಯೇಷ್ಠರಾದವರ ವೃತ್ತಾಂತವನ್ನು ತಿಳಿಸುವರು. ವಿಶ್ವಾಮಿತ್ರರಿಗಿದ್ದ ನೂರೊಂದು ಜನ ಪುತ್ರರಲ್ಲಿ ಮಧುಚ್ಛಂದನೆಂಬುವನು ಮಧ್ಯಮ ಪುತ್ರನೆಂದೂ (೫೧ನೇ) ಅವನಿಗಿಂತ ಜ್ಯೇಷ್ಠರಾದವರು ಐವತ್ತು ಮಂದಿ ಇರುವರೆಂದೂ ಹಿಂದೆ ಹೇಳಿದೆಯಷ್ಟೆ. ಈ ಐವತ್ತು ಮಂದಿ ಜ್ಯೇಷ್ಠ ಪುತ್ರರೂ ಸಹ ತಮ್ಮ ತಂದೆಯಾದ ವಿಶ್ವಾಮಿತ್ರನು ದತ್ತುವಾಗಿ ಅಂಗೀಕರಿಸಿದ್ದ ಶುನಃಶೇಪನನ್ನು ವಿಶ್ವಾಮಿತ್ರನ ಪುತ್ರರೆಂದಾಗಲಿ, ತಮ್ಮ ಸಹೋದರರೆಂದಾಗಲಿ ಸ್ವೀಕರಿಸಲು ಒಪ್ಪಲಿಲ್ಲ. ಆದ್ದರಿಂದ ತನ್ನ ಮಾತನ್ನು ಮೀರಿದ್ದಕ್ಕಾಗಿ ವಿಶ್ವಾಮಿತ್ರನು ಈ ಐವತ್ತು ಮಂದಿ ಪುತ್ರರಿಗೆ ಈರೀತಿ ಶಾಪವನ್ನು ಕೊಟ್ಟನು— ಎಲೈ ಜ್ಯೇಷ್ಠಪುತ್ರರೇ ನಾನು ಹೇಳಿದ ಮಾತನ್ನು ನೀವು ಉಲ್ಲಂಘಿಸಿದ್ದೀರಿ. ಆದ್ದರಿಂದ ನೀವು ಪರಮ ನೀಚರಾಗಿ ನಿಮ್ಮ ಪುತ್ರಾದಿಗಳನ್ನೇ ಭಕ್ಷಿಸುತ್ತಾ ಚಾಂಡಾಲರಾದಿಯಾದ ನೀಚಜನ ಸಂಪರ್ಕದಿಂದಲೇ ಜೀವಿಸಿರಿ ಎಂದು ಶಾಪವನ್ನು ಕೊಡಲು ಆ ಜ್ಯೇಷ್ಠಪುತ್ರರು ಆಂಧ್ರರು, ಪುಂಡ್ರರು, ಶಬರರು, ಪುಳಿಂದರು, ಮೂತಿಬರು ಎಂದು ಮೊದಲಾದ ಅನೇಕ ವಿಧ ನೀಚಜಾತಿಯವರಾಗಿ ವೃದ್ಧಿಯನ್ನು ಹೊಂದಿದರು. ಇವರೇ ಅಲ್ಲದೆ ಇನ್ನೂ ಅತ್ಯಂತ ನೀಚಜಾತಿಯವರೂ ಆದರು. ವಿಶ್ವಾಮಿತ್ರನ ಪುತ್ರರಾದ ಈ ನೀಚಜಾತಿ ಜನರೆಲ್ಲರೂ ದಸ್ಯುಗಳಲ್ಲಿಯೂ ಕಳ್ಳರಲ್ಲಿಯೂ ಸಹ ಅತಿ ನೀಚರಾಗಿ ಅವರಲ್ಲಿಯೇ ಬೆರೆತು ಹೋದರು.

ಸ ಹೋವಾಚ ಮಧುಚ್ಛಂದಾಃ ಪಂಚಾಶತಾ ಸಾರ್ಧಂ ಯನ್ನಃ ಪಿತಾ ಸಂಜಾನೀತೇ ತಸ್ಮಿಂಸ್ತಿಷ್ಠಾಮಹೇ ವಯಂ । ಪುರಸ್ತ್ವಾ ಸರ್ವೇ ಕುರ್ಮಹೇ ತ್ವಾಮನ್ವಂಚೋ ವಯಂ ಸ್ಮಸೀತಿ । ಅಥ ಹ ವಿಶ್ವಾಮಿತ್ರಃ ಪ್ರತೀತಃ ಪುತ್ರಾಂಸ್ತುಷ್ಟಾವ ॥

ಜ್ಯೇಷ್ಠಾನಾಂ ವೃತ್ತಾಂತಮುಕ್ತ್ವಾ ಮಧುಚ್ಛಂದಸಸ್ತತ್ಕನಿಷ್ಠಾನಾಂ ಚ ವೃತ್ತಾಂತಂ ಗಾಥಯಾ ದರ್ಶಯತಿ—ಕನಿಷ್ಠಪುತ್ರಾಣಾಂ ಪಂಚಾಶತಾಸಹ ಮಧುಚ್ಛಂದೋನಾಮಕಃ ಸ ಮಧ್ಯಮ ಪುತ್ರಃ ಶುನಃಶೇಪಂ ಪ್ರತ್ಯೇವಮುವಾಚ । ಹೇ ಶುನಃಶೇಪ ನೋಽಸ್ಮಾಕಂ ಪಿತಾ ವಿಶ್ವಾಮಿತ್ರೋ ಯತ್ಕಾರ್ಯಂ ತ್ವದೀಯಜ್ಯೇಷ್ಠಪುತ್ರತ್ವರೂಪಂ ಸಂಜಾನೀತೇ ಸಮ್ಯಗ್ಜಾನಾತ್ಯಂಗೀಕರೋತಿ ತಸ್ಮಿನ್ಕಾರ್ಯೇ ವಯಂ ತಿಷ್ಠಾಮಹೇ ತತ್ಕಾರ್ಯಮಂಗೀಕುರ್ಮಃ । ಸರ್ವೇ ವಯಂ ತ್ವಾ ಶುನಃ-ಶೇಪನಾಮಾನಂ ತ್ವಾಂ ಪುರಸ್ಕುರ್ಮಹೇ ಪುರಸ್ಕೃತ್ಯ ಜ್ಯೇಷ್ಠಂ ಕೃತ್ವಾ ವರ್ತಾಮಹೇ। ತ್ವಾಮನ್ವಂಚಃ ಶುನಃಶೇಪಮನುಗಚ್ಛಂತಃ ಸ್ಮಸಿ ಭವಾಮ ಇತ್ಯುಕ್ತವಾನ್ ।

ವಿಶ್ವಾಮಿತ್ರವೃತ್ತಾಂತಂ ದರ್ಶಯತಿ—ಅಥ ಮಧುಚ್ಛಂದಸಹಿತಾನಾಂ ಪಂಚಾಶತ್ಕನಿಷ್ಠ ಪುತ್ರಾಣಾಂ ಶುನಃಶೇಪವಿಷಯಜ್ಯೇಷ್ಠಪುತ್ರತ್ವಾಂಗೀಕಾರಾನಂತರಂ ಸ ವಿಶ್ವಾಮಿತ್ರಃ ಪ್ರತೀತಸ್ತೇಷು ಪ್ರತ್ಯಯಸ್ತೇಷು ಪ್ರತ್ಯಯಂ ಮದನುಕೂಲಾ ಇತಿ ವಿಶ್ವಾಸಂ ಪ್ರಾಪ್ತಃ ಪ್ರೀತ್ಯಾ ಪುತ್ರಾನ್ಗಾಥಾ-ಭಿಸ್ತುಷ್ಟಾವ ॥

ವಿಶ್ವಾಮಿತ್ರನು ನಡೆಸಿದ ಐವತ್ತುಮಂದಿ ಜ್ಯೇಷ್ಠಪುತ್ರರ ವಿಷಯವನ್ನು ಹೇಳಿ ಈಗ ಮಧುಚ್ಛಂದನೇ ಮೊದಲಾದ ಐವತ್ತೊಂದು ಮಂದಿ ಕನಿಷ್ಠಪುತ್ರರ ವಿಷಯವನ್ನು ವಿವರಿಸುವರು—ಈ ಐವತ್ತೊಂದು ಮಂದಿ ಕನಿಷ್ಠಪುತ್ರರಲ್ಲಿ ಮಧುಚ್ಛಂದನೆಂಬುವನು ಮೊದಲನೆಯವನು ಮತ್ತು ನೂರೊಂದು ಮಂದಿ ಪುತ್ರರಲ್ಲಿ ಮಧ್ಯದವನು ಅವನು ಶುನಃಶೇಪನನ್ನು ಕುರಿತು-ಎಲೈ ಶುನಃಶೇಪನೇ. ನಮ್ಮ ತಂದೆಯಾದ ವಿಶ್ವಾಮಿತ್ರಋಷಿಯು, ನಿನ್ನನ್ನು ನಮ್ಮ ಜ್ಯೇಷ್ಠಸಹೋದರನಂತೆ ಭಾವಿಸಿ ಅದರಂತೆ ನಡೆದುಕೊಳ್ಳಬೇಕು ಎಂದು ನಮಗೆ ಆಜ್ಞಾಪಿಸಿರುವನು. ತಂದೆಯು ಯಾವ ಕಾರ್ಯವನ್ನು ಹೇಗೆ ಮಾಡಬೇಕೆಂದು ವಿಧಿಸುವನೋ ಅದನ್ನು ಗೌರವಿಸಿ ನಾವು ಹಾಗೆಯೇ ನಡೆದುಕೊಳ್ಳುವೆವು. ನಮ್ಮ ತಂದೆಯು ಹೇಳಿದಂತೆ ನಾವೆಲ್ಲರೂ ಶುನಃಶೇಪನಾದ ನಿನ್ನನ್ನು ನಮ್ಮ ಜ್ಯೇಷ್ಠಸಹೋದರನಂತೆ ಭಾವಿಸಿ ಅದರಂತೆ ನಿನಗೆ ಗೌರವವಿತ್ತು ಎಂದರೆ ಜ್ಯೇಷ್ಠಸಹೋದರನಿಗೆ ಸಲ್ಲಬೇಕಾದ ಗೌರವವನ್ನಿತ್ತು ಅದರಂತೆಯೇ ಮುಂದೆಯೂ ನಡೆಸಿಕೊಂಡು ಬರುತ್ತೇವೆ. ಎಂದರೆ ನೀನು ಹೇಳಿದುದನ್ನೇ ನಿನ್ನ ಆಜ್ಞೆಯೆಂದು ಪಾಲಿಸುತ್ತಾ ನಿನ್ನನ್ನು ಅನುಸರಿಸುತ್ತೇವೆ ಎಂದು ವಿನೀತರಾಗಿ ನುಡಿದರು. ಇದನ್ನೆಲ್ಲಾ ಕೇಳಿ ವಿಶ್ವಾಮಿತ್ರನು, ಮಧುಚ್ಛಂದನೇ ಮೊದಲಾದ ಐವತ್ತೊಂದುಮಂದಿ ಕನಿಷ್ಠಪುತ್ರರು ತನ್ನ ಮಾತನ್ನು ಪರಿಗ್ರಹಿಸಿ ತಾನು ಹೇಳಿದಂತೆ ಶುನಃಶೇಪನ ವಿಷಯದಲ್ಲಿ ಜ್ಯೇಷ್ಠಸಹೋದರನೆಂಬ ಅಭಿಮಾನವನ್ನಿಟ್ಟು ತನ್ನ ಮಾತನ್ನು ನಡೆಸಿದರೆಂಬ ನಂಬಿಕೆಯಿಂದ ಬಹಳಸಂತೋಷಪಟ್ಟು-ಎಲೈ ಪುತ್ರರುಗಳಿರಾ, ನೀವೆಲ್ಲರೂ ನನಗೆ ಅನುಕೂಲರಾಗಿದ್ದೀರಿ. ನಿಮ್ಮನ್ನು ನೋಡಿ ನನಗೆ ಬಹಳ ಸಂತೋಷವಾಯಿತು ಎಂದು ಹೇಳಿ ಪ್ರೀತಿಯಿಂದ ಅವರೆಲ್ಲರನ್ನೂ ಬಹಳವಾಗಿ ಪ್ರಶಂಸೆಮಾಡಿದನು.

**ತೇ ವೈ ಪುತ್ರಾಃ ಪಶುಮಂತೋ ವೀರವಂತೋ ಭವಿಷ್ಯಥ। ಯೇ ಮಾನಂ ಮೇಽನುಗೃಹ್ಣಂತೋ ವೀರವಂತಮಕರ್ತ ಮಾ ॥**

**ತತ್ರ ಪ್ರಥಮಾಂ ಗಾಥಾಮಾಹ—ಹೇ ಮಧುಚ್ಛಂದಃ ಪ್ರಮುಖಾಃ ಕನಿಷ್ಠಪುತ್ರಾ ಯೇ ಯೂಯಂ ಮೇ ಮಾನಂ ಮದೀಯಂ ಮತಮನುಗೃಹ್ಣಂತ ಆನುಕೂಲ್ಯೇನ ಸ್ವೀಕುರ್ವಂತೋ ಮಾ ವಿಶ್ವಾಮಿತ್ರಂ ವೀರವಂತಂ ಸ್ವಧರ್ಮಶೂರಪುತ್ರಯುಕ್ತಮಕರ್ತ ಕೃತವಂತಃ। ತೇ ವೈ ತಾದೃಶಾ ಯೂಯಂ ಬಹುವಿಧ ಪುತ್ರಯುಕ್ತಾ ಬಹುವಿಧಾನುಕೂಲಪುತ್ರಯುಕ್ತಾಶ್ಚ ಭವಿಷ್ಯಥ ॥**

ಅನಂತರ ವಿಶ್ವಾಮಿತ್ರನು ತನ್ನ ಕನಿಷ್ಠಪುತ್ರರನ್ನುದ್ದೇಶಿಸಿ—ಎಲೈ ಮಧುಚ್ಛಂದನೇ ಮೊದಲಾದ ಕನಿಷ್ಠಪುತ್ರರಿರಾ, ನೀವೆಲ್ಲರೂ ನನ್ನ ಆಜ್ಞೆಯನ್ನು ಶಿರಸಾವಹಿಸಿ ನನ್ನ ಮಾತನ್ನೂ ಗೌರವವನ್ನೂ ಉಳಿಸಿದಿರಿ ಮತ್ತು ಪರಾಕ್ರಮಶಾಲಿಗಳೂ ಸ್ವಧರ್ಮನಿರತರೂ ಆದ ಪುತ್ರರು ನನಗಿರುವರೆಂಬ ವಿಷಯವನ್ನು ಎಲ್ಲರಿಗೂ ತೋರಿಸಿಕೊಟ್ಟಿರಿ. ಇಂತಹ ಸುಪುತ್ರಾದಿಗಳನ್ನು ಬಹುವಿಧ ಅನುಕೂಲಗಳನ್ನೂ ಪಡೆದು ಸುಖವಾಗಿ ಬಾಳಿರಿ ಎಂದು ಆ ಪುತ್ರರನ್ನು ಆಶೀರ್ವದಿಸಿದನು.

**ಪುರ ಏತಾ ವೀರವಂತೋ ದೇವರಾತೇನ ಗಾಥಿನಾಃ । ಸರ್ವೇ ರಾಧ್ಯಾಃ ಸ್ಥ ಪುತ್ರಾ ಏಷ ವಃ ಸದ್ವಿವಾಚನಂ ॥**

**ದ್ವಿತೀಯಾಂ ಗಾಥಾಮಾಹ—ಗಾಥಿನಶಬ್ದೋ ವಿಶ್ವಾಮಿತ್ರಸ್ಯ ಪಿತರಮಾಚಷ್ಟೇ। ಹೇ ಗಾಥಿನಾ ಗಾಥಿಪೌತ್ರಾಃ ಪುರಏತಾ ಯುಷ್ಮಾಕಂ ಪುರತೋ ಗಂತಾ ಮುಖ್ಯೇನ ದೇವರಾತೇನ ಸಹ ಯೂಯಂ ಸರ್ವೇ ವೀರವಂತಃ ಜ್ಯೇಷ್ಠಪುತ್ರಾಯುಕ್ತಾರಾಧ್ಯಾ ಸ್ಥ ಸರ್ವೈಃ ಪುರುಷೈರಾಧನೀಯಾಃ**

**ಪೂಜ್ಯಾ ಭವಥ । ಹೇ ಪುತ್ರಾ ಮಧುಚ್ಛಂದಃ ಪ್ರಭೃತಯ ಏಷ ದೇವರಾತೋ ವೋ ಯುಷ್ಮಾಕಂ ಸದ್ವಿವಾಚನಂ ಸನ್ಮಾರ್ಗಸ್ಯ ವಿಶೇಷತೋಽಧ್ಯಾಪನಂ ಕರಿಷ್ಯತೀತಿ ಶೇಷಃ ॥**

ವಿಶ್ವಾಮಿತ್ರನು ಪುನಃ ತನ್ನ ಪುತ್ರರನ್ನುದ್ದೇಶಿಸಿ ಹೀಗೆ ಹೇಳಿದನು—ಗಾಧಿ ಎಂಬುದು ವಿಶ್ವಾಮಿತ್ರನ ಹಿಂದಿನ ತಂದೆಯ ಹೆಸರು. ಅವನು ಆಗ ರಾಜನಾಗಿದ್ದನು (ಕ್ಷತ್ರಿಯ). ಈಗಲೂ ಕೆಲವು ಸಂದರ್ಭದಲ್ಲಿ ವಿಶ್ವಾಮಿತ್ರನನ್ನೂ ಅವನ ಪುತ್ರನನ್ನೂ ಗಾಥಿನಾಃ ಎಂದು ಕರೆಯುವ ರೂಢಿ ಇದೆ. ಅದರಂತೆ ಇಲ್ಲಿ ಗಾಧಿ ಶಬ್ದದಿಂದ ವಿಶ್ವಾಮಿತ್ರ ಪುತ್ರರನ್ನು ಸಂಬೋಧಿಸಲಾಗಿದೆ. ವಿಶ್ವಾಮಿತ್ರನೆಂದನು —ಎಲೈ ಗಾಧಿಪುತ್ರರುಗಳಿರಾ, ನೀವೆಲ್ಲರೂ ಈ ದೇವರಾತನನ್ನು (ಶುನಃಶೇಫನನ್ನು) ನಿಮ್ಮ ಜ್ಯೇಷ್ಠಭ್ರಾತೃವನ್ನಾಗಿಯೂ ನಾಯಕನನ್ನಾಗಿಯೂ ಮುಂದಿಟ್ಟುಕೊಂಡು ಅವನು ಹೇಳಿದಂತೆ ನಡೆಯುತ್ತಾ ಇದ್ದರೆ ನೀವೆಲ್ಲಾರೂ ವೀರವಂತರೂ, ಸಮಸ್ತಜನರಿಂದಲೂ ಪೂಜ್ಯರೂ ಗೌರವಾಸ್ಪದರೂ ಆಗಿ ಬಾಳುತ್ತೀರಿ. ಎಲೈ ಮಧುಚ್ಛಂದನೇ ಮೊದಲಾದ ನನ್ನ ಪುತ್ರರುಗಳಿರಾ, ಈ ದೇವರಾತನು ನಿಮ್ಮೆಲ್ಲರಿಗೂ ಅಗ್ರಜನಾಗಿ ನಿಮ್ಮನ್ನು ಸನ್ಮಾರ್ಗದಲ್ಲಿ ಒಯ್ಯುತ್ತಾ ಅಧ್ಯಾಪನಾದ ಕರ್ಮಗಳನ್ನು ಮಾಡಿಸುವನು ಆದ್ದರಿಂದ ಈ ದೇವರಾತನನ್ನು ನೀವೆಲ್ಲರೂ ವಿಧೇಯರಾಗಿ ಅನುಸರಿಸುತ್ತಿರಬೇಕು ಎಂದು ಹೇಳಿದನು.

ಏಷ ವಃ ಕುಶಿಕಾ ವೀರೋ ದೇವರಾತಸ್ತಮನ್ವಿತ । ಯುಷ್ಮಾಂಶ್ಚ
ದಾಯಂ ಮ ಉಪೇತಾ ವಿದ್ಯಾಂ ಯಾಮು ಚ ವಿದ್ಮಸಿ ॥

**ತೃತೀಯಾಂ ಗಾಥಾಮಾಹ—ಹೇ ಕುಶಿಕಾಃ ಕುಶಿಕನಾಮ್ನೋ ಮತ್ಪಿತಾಮಹಸ್ಯ ಸಂಬಂಧಿನೋ ಮಧುಚ್ಛಂದಃ ಪ್ರಭೃತಯ ಏಷ ದೇವರಾತೋ ವೋ ಯುಷ್ಮಾಕಂ ಜ್ಯೇಷ್ಠಭ್ರಾತೇತಿ ಶೇಷಃ । ತಂ ದೇವರಾತಂ ಯೂಯಮನ್ವಿತಾನುಗತಾ ಭವತ । ಮೇ ಮದೀಯಂ ದಾಯಂ ಧನಂ ಯುಷ್ಮಾಂಶ್ಚೋಪೇತಾ ಪ್ರಾಪ್ಸ್ಯತಿ । ಚಕಾರಾದ್ದೇವರಾತಂ ಚ ಯಾಮು ಚ ಯಾಮಪಿ ಕಾಂಚಿದ್ವೇದಶಾಸ್ತ್ರಾದಿರೂಪಾಂ ವಿದ್ಯಾಂ ವಿದ್ಮಸಿ ವಯಂ ಜಾನೀಮಃ ಸಾಽಪಿ ಯುಷ್ಮಾನುಪೇತಾ ಪ್ರಾಪ್ಸ್ಯತಿ ॥**

ಕುಶಿಕಗೋತ್ರೋತ್ಪನ್ನರಾದ ನನ್ನ ಪುತ್ರರಾದ ಎಲೈ ಮಧುಚ್ಛಂದಾದಿ ಪ್ರಭೃತಿಗಳೇ ಕೇಳಿ ಈ ದೇವರಾತನು ನಿಮ್ಮ ಜ್ಯೇಷ್ಠಭ್ರಾತೃವೆಂದೇ ತಿಳಿಯಿರಿ. ಈ ದೇವರಾತನನ್ನು ನೀವೆಲ್ಲರೂ ನಿಮ್ಮ ಜ್ಯೇಷ್ಠ ಸಹೋದರದಂತೆಯೇ ಅನುಸರಿಸಬೇಕು. ನನ್ನ ಆಸ್ತಿಯೂ ಪುತ್ರರಿಗೆ ಕೊಡಬೇಕಾದ ದಾಯಭಾಗವೂ ಯಾವದಿರುವುದೋ ಅದೆಲ್ಲಾ ದೇವರಾತನಿಗೂ ಸೇರುವುದು. ಮತ್ತು ನೀವೆಲ್ಲರೂ ಪಡೆಯಬೇಕಾದ (ಕಲಿತುಕೊಳ್ಳಬೇಕಾದ) ವೇದಶಾಸ್ತ್ರಾದಿ ವಿದ್ಯೆಗಳಲ್ಲಿ ನಿಮ್ಮೊಂದಿಗೆ ದೇವರಾತನಿಗೂ ಅರ್ಹತೆಯಿರುವುದು. ಎಂದರೆ ನೀವೆಲ್ಲರೂ ಸೇರಿ ವಿದ್ಯಾದಿಗಳನ್ನು ಕಲಿಯಬೇಕು.

ತೇ ಸಮ್ಯಂಚೋ ವೈಶ್ವಾಮಿತ್ರಾಃ ಸರ್ವೇ ಸಾಕಂ ಸರಾತಯಃ ।
ದೇವರಾತಾಯ ತಸ್ಥಿರೇ ಧೃತ್ಯೈ ಶ್ರೈಷ್ಠ್ಯಾಯ ಗಾಥಿನಾಃ ॥

**ಚತುರ್ಥೀಂ ಗಾಥಾಮಾಹ—ಹೇ ವೈಶ್ವಾಮಿತ್ರ ವಿಶ್ವಾಮಿತ್ರಸ್ಯ ಮಮ ಪುತ್ರಾ ಯೇ ಗಾಥಿನಾ ಗಾಥಿಪೌತ್ರಾಸ್ತೇ ಯೂಯಂ ಸರ್ವೇಽಪಿ ಸಮ್ಯಂಚಃ ಸಮೀಚೀನಬುದ್ಧಯೋ ಯೇ ಸಾಕಂ ದೇವ–**

**ರಾತೇನ ಸಾರ್ಧಂ ಸರಾತಯೋ ರಾತಿರ್ಧನಸಂಪತ್ತಿಸ್ತಯಾ ಯುಕ್ತಾಃ ಸಂತೋ ದೇವರಾತಾಯ ಮದೀಯಶ್ರೇಷ್ಠಪುತ್ರಸ್ಯ ದೇವರಾತಸ್ಯ ಧೃತ್ಯೈ ಧಾರಣಂ ಯುಷ್ಮತ್ಪೋಷಣಂ ಶ್ರೈಷ್ಠ್ಯಾಯ ಯುಷ್ಮಾಕಂ ಮಧ್ಯೇ ಶ್ರೇಷ್ಠತ್ವಂ ಚ ತಸ್ಥಿರೇಽಂಗೀಕೃತವಂತಃ ॥**

ಎಲೈ ಪುತ್ರರೇ, ನೀವು ವಿಶ್ವಾಮಿತ್ರನಾದ ನನ್ನ ಪುತ್ರರೂ ಗಾಧಿರಾಜನ ಮೊಮ್ಮಕ್ಕಳೂ ಆಗಿರುವಿರಿ. ನೀವೆಲ್ಲರೂ ಒಳ್ಳೆ ಬುದ್ಧಿಯನ್ನು ಕಲಿತುಕೊಂಡು ಈ ನಿಮ್ಮ ಜ್ಯೇಷ್ಠಭ್ರಾತೃವಾದ ದೇವರಾತನೊಡನೆ ಧನ ಮೊದಲಾದ ಸಕಲ ಸಂಪತ್ತನ್ನೂ ಸಂಪಾದಿಸಿ ನನ್ನ ಜ್ಯೇಷ್ಠಪುತ್ರನಾದ ಈ ದೇವರಾತನ ಪೋಷಣೆ ರಕ್ಷಣೆಗಳಿಗೆ ಒಳಪಟ್ಟು ನಡೆಯಿರಿ. ಈ ದೇವರಾತನು ನಿಮ್ಮನ್ನು ಕಿರಿಯ ಸಹೋದರರಂತೆ ವಿಶ್ವಾಸಾದರಗಳಿಂದ ಪೋಷಿಸಿ ಕಾಪಾಡುತ್ತಾನೆ. ಅಲ್ಲದೆ ನಿಮ್ಮಲ್ಲಿ ಇವನೇ ಹಿರಿಯನೂ ಶ್ರೇಷ್ಠನೂ ಎಂದು ಎಲ್ಲರೂ ಅಂಗೀಕರಿಸಿರುವರು (ಒಪ್ಪಿರುವರು.)

**ಅಧೀಯತ ದೇವರಾತೋ ರಿಕ್ಥಯೋರುಭಯೋರೃಷಿಃ । ಜಹ್ನೂನಾಂ
ಚಾಧಿಪತ್ಯೇ ದೈವೇ ವೇದೇ ಚ ಗಾಥಿನಾಂ ॥**

**ಪಂಚಮೀಂಗಾಥಾಮಾಹ—ಇಕ್ಸ್ಮರಣ ಇತಿ ಧಾತುಃ । ಅಧೀಯತ ಸ್ಮೃತಿಕಾರೈರ್ಮಹರ್ಷಿಭಿ ಸ್ಮರ್ಯತೇ । ಕಥಮಿತಿ ತದುಚ್ಯತೇ । ಅಯಂ ದೇವರಾತೋ ದ್ವ್ಯಾಮುಷ್ಯಾಯಣತ್ವಾದುಭಯೋರಜೀಗರ್ತವಿಶ್ವಾಮಿತ್ರಯೋಃ ಸಂಬಂಧಿನೀ ಯೇ ರಿಕ್ಥೇ ಧನೇ ತಯೋರೃಷಿರ್ದ್ರಷ್ಟಾ ತದುಭಯಮರ್ಹತೀತ್ಯರ್ಥಃ । ಅಜೀಗರ್ತಸ್ಯ ಕೂಟಸ್ಥ ಋಷಿರ್ಜಹ್ನುಸಂಜ್ಞಕಸ್ತಸ್ಯ ವಂಶೇ ಜಾತಾಃ ಸರ್ವೇ ಜಹ್ನವಸ್ತೇಷಾಂ ಚಾಧಿಪತ್ಯೇ ಸ್ವಾಮಿತ್ವೇ ದೇವರಾತೋ ಯೋಗ್ಯಃ । ತಥಾ ದೈವೇ ದೇವಸಂಬಂಧಿನಿ ಯಾಗಾದಿಕರ್ಮಣಿ ವೇದೇ ಚ ಮಂತ್ರರೂಪೇ ಸಮರ್ಥಃ । ಗಾಥಿನಾಸ್ಮತ್ಪಿತೃವಂಶೋತ್ಪನ್ನಾನಾಂ ಚ ಸರ್ವೇಷಾಮಾಧಿಪತ್ಯೇ ಯೋಗ್ಯಃ ॥**

ಅಧೀಯತ ಎಂಬ ಪದಕ್ಕೆ ಈರೀತಿ ಅರ್ಥಮಾಡಿರುವರು. ಇಕ್ ಸ್ಮರಣ ಎಂಬ ಧಾತುವಿನಿಂದ ಈ ಶಬ್ದವು ನಿಷ್ಪನ್ನವಾಗಿದೆ. ಎಂದರೆ ಈ ದೇವರಾತನ ವಿಷಯವು ಸ್ಮೃತಿಕಾರರಿಂದ ಸ್ಮರಿಸಲ್ಪಡುತ್ತದೆ ಎಂದರ್ಥವು. ಈ ದೇವರಾತನು ಅಜೀಗರ್ತನ ವಂಶದಲ್ಲಿ ಹುಟ್ಟಿ ಅನಂತರ ವಿಶ್ವಾಮಿತ್ರನ ವಂಶಕ್ಕೆ ಸ್ವೀಕೃತನಾಗಿ ಸೇರಿಸಲ್ಪಟ್ಟದ್ದರಿಂದ ಈ ಇಬ್ಬರು ಋಷಿಗಳ ಸಂಬಂಧವೂ ಇದ್ದಂತಾಯಿತು. ಎಂದರೆ ಈ ಎರಡು ವಂಶದ ಧನವನ್ನೂ ಪಡೆಯಲು ಅರ್ಹನಾದವನು ಎಂದಭಿಪ್ರಾಯವು. ಅಜೀಗರ್ತನೆಂಬ ಋಷಿಯು ಜಹ್ನು ಎಂಬ ವಂಶದಲ್ಲಿ ಉತ್ಪನ್ನನಾದ್ದರಿಂದ ಈ ವಂಶದವರಿಗೆ ಜಹ್ನವಃ ಎಂಬ ಹೆಸರುಂಟಾಯಿತು, ಈ ವಂಶದವರಲ್ಲಿ ದೇವರಾತನಿಗೆ ಸಂಬಂಧವಿರುವುದರಿಂದ ಅವನೇ ಎಂದರೆ ದೇವರಾತನೇ ಶ್ರೇಷ್ಠನಾಗಿರುವನು. ಮತ್ತು ದೇವಸಂಬಂಧವಾದ ಯಾಗಾದಿ ಕರ್ಮಗಳಲ್ಲಿಯೂ ವೇದಮಂತ್ರಗಳಲ್ಲಿಯೂ ಸಮರ್ಥನಾಗಿರುವನು. ಇದಲ್ಲದೆ ಗಾಧಿ ಎಂಬ ನಮ್ಮ ನಮ್ಮ ಪಿತೃವಂಶದಲ್ಲಿ ಉತ್ಪನ್ನರಾದ ಸಮಸ್ತರಿಗೂ ಈ ದೇವರಾತನೇ ಶ್ರೇಷ್ಠವಾದ ಪ್ರಭುತ್ವವನ್ನು (ಯಜಮಾನಿಕೆಯನ್ನು) ನಡೆಸುವುದಕ್ಕೂ ಮುಖಂಡನಾಗಿರುವುದಕ್ಕೂ ಯೋಗ್ಯನಾಗಿರುವನು ಎಂದು ಹೇಳಿದನು.

**ತದೇತತ್ಪರಋಕ್ಶತಗಾಥಂ ಶೌನಃಶೇಪಮಾಖ್ಯಾನಂ**

ಉಕ್ತಮುಪಾಖ್ಯಾನಮುಪಸಂಹರತಿ—ಕಸ್ಯ ನೂನಂ ನಿಥಾರಯೇಽತ್ಯಂತಾಃ ಸಪ್ತಾಧಿಕನವತಿ-ಸಂಖ್ಯಾಕಾ ಋಚಸ್ತ್ವಂ ನಃ ಸತ್ವಮಿತ್ಯಾದಿಕಾಸ್ತಿಸ್ರ ಋಚ ಏವಮೃಚಾಂ ಶತಮ್ । ಪರಃಶಬ್ದೋಽ-ಧಿಕವಾಚೀ । ಪೂರ್ವೋಕ್ತಾದೃಕ್ಶತಾತ್ಪರೋಽಧಿಕಾ ಏಕತ್ರಿಂಶತ್ಸಂಖ್ಯಾಕಾ ಯಂ ನ್ವಿಮಮಿತ್ಯಾದ್ಯಾ ಗಾಥಾ ಯಸ್ಮಿನ್ನಾಖ್ಯಾನೇ ತದೇತ್ಪರಋಕ್ಶತಗಾಥಮ್ । ಶುನಃಶೇಪೇನ ದೃಷ್ಟಾಃ ಸಪ್ತಾಧಿಕನವತಿ-ಸಂಖ್ಯಾಯುಕ್ತಾ ಋಚೋ ಯಾಃ ಸಂತ್ಯನ್ಯೇನ ದೃಷ್ಟಾಸ್ತಿಸ್ರ ಋಚೋ ಯಾಃ ಸಂತಿ ಬ್ರಾಹ್ಮಣೇ ಪ್ರೋಕ್ತಾ ಏಕತ್ರಿಂಶದ್ಗಾಥಾವಿಶೇಷಾ ಯೇ ಸಂತಿ ತೈಃ ಸರ್ವೈರುಪೇತಂ ಹರಿಶ್ಚಂದ್ರೋ ಹ ವೈಧಸ ಇತ್ಯಾದಿಕಂ ಸರ್ವಂ ಶುನಃಶೇಪವಿಷಯಮಾಖ್ಯಾನಮ್ ॥

ಈ ಶುನಃಶೇಪೋಪಾಖ್ಯಾನವೆಂಬ ಶುನಃಶೇಪನ (ಅಥವಾ ದೇವರಾತನ) ವೃತ್ತಾಂತದಲ್ಲಿ ಕಸ್ಯನೂನಂ ಎಂದು ಮೊದಲುಗೊಂಡು ೯೭ ಋಕ್ಕುಗಳಿಗಿಂತಲೂ ಅಧಿಕವಾಗಿರುವುದು ಮತ್ತು ತ್ವಂ ನೋ ಅಗ್ನೇ, ಸತ್ವಂ ನೋ ಅಗ್ನೇ ಮೊದಲಾದ ಮೂರು ಮಂತ್ರಗಳೂ ಸೇರಿದರೆ ೧೦೦ ಋಕ್ಕುಗಳಾಗುವುವು. ಇದಲ್ಲದೆ ಈ ಆಖ್ಯಾನದಲ್ಲಿ ಇನ್ನೂ ಕೆಲವು ಗಾಥೆಗಳು (ಶ್ಲೋಕರೂಪವಾದುವು) ಇಲ್ಲಿ ಹೇಳಲ್ಪಟ್ಟಿರುವುದನ್ನೂ ಸೇರಿಸಿದರೆ ನೂರಕ್ಕಿಂತಲೂ ಹೆಚ್ಚು ಎಂದರೆ ೧೩೧ ರಷ್ಟಾಗುವವು. ಎಂದರೆ ಶುನಃಶೇಪನಿಂದ ದೃಷ್ಟವಾದ ಬೇರೆ ಮೂರು ಋಕ್ಕುಗಳೂ ಬ್ರಾಹ್ಮಣಗ್ರಂಥದಲ್ಲಿ ಪ್ರೋಕ್ತವಾಗಿರುವ ೩೧ ಗಾಥಾವಿಶೇಷಗಳೂ ಎಲ್ಲವೂ ಸೇರಿದರೆ ಎಂದರೆ ಹರಿಶ್ಚಂದ್ರೋ ಹ ವೈಧಸ ಎಂದು ಪ್ರಾರಂಭವಾಗಿ ಇದುವರೆಗೂ ಹೇಳಲಾಗಿರುವ ಸಮಸ್ತವಿಷಯವೂ ಶುನಃಶೇಪೋಪಾಖ್ಯಾನವೆಂದು ಹೇಳಲ್ಪಡುವುದು.

ತದ್ಧೋತಾ ರಾಜ್ಞೇಽಭಿಷಿಕ್ತಾಯಾಽಽಚಷ್ಟೇ ॥

ತಸ್ಯಾಖ್ಯಾನಸ್ಯ ರಾಜಸೂಯಕ್ರತೌ ವಿನಿಯೋಗಂ ದರ್ಶಯತಿ—ರಾಜಸೂಯಕ್ರತಾವ-ಭಿಷೇಚನೀಯಾಖ್ಯೇ ಕರ್ಮಣಿ ಯದಾ ರಾಜಾಽಭಿಷಿಕ್ತೋ ಭವತಿ ತದಾನೀಂ ತಸ್ಮೈ ರಾಜ್ಞೇ ತದಾಖ್ಯಾನಂ ಹೋತಾ ಕಥಯೇತ್ ॥

ಈ ಶುನಃಶೇಪೋಪಾಖ್ಯಾನದ ವಿನಿಯೋಗವನ್ನು ರಾಜಸೂಯಯಾಗದಲ್ಲಿ ಹೇಗೆ ವಿನಿಯೋಗಿಸಬೇಕೆಂಬುದನ್ನು ತಿಳಿಸುವರು-ರಾಜನು ಮಾಡುವ ರಾಜಸೂಯಯಾಗದಲ್ಲಿ ಆ ರಾಜನಿಗೆ ಅಭಿಷೇಕಮಾಡುವ ಸಮಯದಲ್ಲಿ ಆ ರಾಜನಿಗೆ ಈ ಉಪಖ್ಯಾನವನ್ನು ಹೋತೃವು ತಿಳಿಸಿ ಹೇಳಬೇಕು.

ಹಿರಣ್ಯಕಶಿಪಾವಾಸೀನ ಆಚಷ್ಟೇ ಹಿರಣ್ಯಕಶಿಪಾವಾಸೀನಃ ಪ್ರತಿ ಗೃಣಾತಿ ಯಶೋ ವೈ ಹಿರಣ್ಯಂ ಯಶಸೈವೈನಂ ತತ್ಸಮರ್ಧಯತಿ ॥

ತತ್ರೇತಿಕರ್ತವ್ಯಂ ಕಥಯತಿ—ಹೋತಾ ಯದೋಪಾಖ್ಯಾನಂ ಕಥಯತಿ ತದಾನೀಂ ಹಿರಣ್ಯಕಶಿಪೌ ಸುವರ್ಣನಿರ್ಮಿತಸೂತ್ರೈರ್ನಿಷ್ಪಾದಿತೇ ಕಶಿಪೌ ಸ ಹೋತೋಪವಿಶೇತ್ । ತದಾಖ್ಯಾ-ನಮಧ್ಯೇಽಧ್ವರ್ಯುಶ್ಚ ಹಿರಣ್ಯಕಶಿಪಾವಾಸೀನೋ ವಕ್ಷ್ಯಮಾಣಂ ಪ್ರತಿಗರಂ ಬ್ರೂಯಾತ್। ಹಿರಣ್ಯಸ್ಯ ಯಶೋಹೇತುತ್ವಾದ್ಯಶಸ್ತ್ವಮ್ । ತಥಾ ಸತ್ಯೇನಂ ರಾಜಾನಂ ಯಶಸೈವ ಸಮೃದ್ಧಂ ಕರೋತಿ ।

ಅಲ್ಲಿ ನಡೆಸಬೇಕಾದ ಕರ್ತವ್ಯಕರ್ಮವನ್ನು ವಿವರಿಸುವರು— ಈ ಉಪಖ್ಯಾನವನ್ನು ರಾಜನಿಗೆ ವಿವರಿಸಿ ಹೋತೃವು ಹೇಳುವಾಗ ಸುವರ್ಣನಿರ್ಮಿತವಾದ ದಾರಗಳಿಂದ ನೆಯ್ದಿರುವ ರತ್ನಗಂಬಳಿಯ ಮೇಲೆ ಕುಳಿತುಕೊಂಡು ಪವಿತ್ರವಾದ ಆ ರಾಜನಮೇಲೆ ಪ್ರೋಕ್ಷಿಸಿ ಈ ಉಪಖ್ಯಾನವನ್ನು ಹೇಳಬೇಕು. ಬಳಿಕ ಅಧ್ವರ್ಯುವೂ ಹೋತೃವಿನಂತೆ ಸುವರ್ಣನಿರ್ಮಿತವಾದ ರತ್ನಗಂಬಳಿಯ ಮೇಲೆಯೇ ಕುಳಿತು ಹೋತೃವು ಪಠಿಸುತ್ತಿರುವಾಗ ಮಧ್ಯಮಧ್ಯದಲ್ಲಿ ಓಂ ಎಂದು ಪ್ರತ್ಯುತ್ತರರೂಪವಾದ ಪ್ರತಿಗರಮಂತ್ರವನ್ನು ಪಠಿಸುತ್ತಿರಬೇಕು. ಏಕೆಂದರೆ ಸುವರ್ಣವು ಯಶಸ್ಸನ್ನುಂಟುಮಾಡುವುದು ಎಂದು ಹೇಳಲಾಗಿದೆ. ಆದ್ದರಿಂದ ಹೋತೃವು ಸುವರ್ಣವನ್ನು ಉಪಯೋಗಿಸಿ ರಾಜನು ಕೀರ್ತಿಸಂಪನ್ನನಾಗುವಂತೆಯೂ ಸಮೃದ್ಧನಾಗುವಂತೆಯೂ ಮಾಡುತ್ತಾನೆ.

**ಓಮಿತ್ಯೃಚಃ ಪ್ರತಿಗರ ಏವಂ ತಥೇತಿ ಗಾಥಾಯಾ ಓಮಿತಿ ವೈ ದೈವಂ ತಥೇತಿ ಮಾನುಷಂ ದೈವೇನ ಚೈವೈನಂ ಸನ್ಮಾನುಷೇಣ ಚ ಪಾಪಾ-ದೇನಸಃ ಪ್ರಮುಂಚತಿ ॥**

ಅಧ್ವರ್ಯುಣಾ ಪ್ರಯೋಕ್ತವ್ಯಂ ಪ್ರತಿಗರವಿಶೇಷಂ ದರ್ಶಯತಿ–ಹೋತ್ರಾ ಪ್ರಯುಕ್ತಯಾ ಏಕೈಕಸ್ಯಾ ಋಚೋಂತೇಽಧ್ವರ್ಯೋರೋಮಿತ್ಯೇತಾದೃಶಃ ಪ್ರತಿಗರೋ ಭವತಿ । ಓಮಿತ್ಯೇತಚ್ಛಬ್ದೋರೂಪಂ ದೈವಂ ದೇವೈರಂಗೀಕಾರಾರ್ಥೇ ಪ್ರಯುಜ್ಯತೇ । ತತ್ತಥೇತ್ಯಂತಂ (ತಥೇತಿ) ಮಾನುಷಂ ಮನುಷ್ಯಾ ಅಂಗೀಕಾರೇ ತಥೇತಿ ಶಬ್ದಂ ಪ್ರಯುಂಜತೇ । ತತ್ತೇನ ಪ್ರತಿಗರೇಣ ದೈವೇನ ಮಾನು-ಷೇಣ ಚಾಧ್ವರ್ಯುರೇನಂ ರಾಜಾನಂ ಪಾಪಾದೈಹಿಕಾದಪಕೀರ್ತಿರೂಪಾದೇನಸೋ ನರಕಹೇತೋಶ್ಚ ಪ್ರಮುಂಚತಿ ಪ್ರಯುಕ್ತಂ ಕರೋತಿ ।

ಅಧ್ವರ್ಯುವ ಹೇಳುವ ಪ್ರತಿಗರ (ಪತ್ಯುತ್ತರ) ಮಂತ್ರವನ್ನು ವಿವರಿಸುವರು—ಹೋತೃವು ಶುನಃಶೇಪೋಖ್ಯಾನವನ್ನು ಪಠಿಸುತ್ತಿರುವಾಗ ಪ್ರತಿ ಋಕ್ಕನ್ನು ಪಠಿಸಿದ ಕೂಡಲೇ ಅಧ್ವರ್ಯುವು ಓಂ ಎಂಬ ಪ್ರತಿಗರ (ಪತ್ಯುತ್ತರವನ್ನು)ವನ್ನು ಅಂಗೀಕರಿಸಿರುವರೆಂದು (ಒಪ್ಪಿರುವರೆಂಬುದನ್ನು) ಸೂಚಿಸುವುದು. ಮನುಷ್ಯರ ವಿಷಯದಲ್ಲಿ ತಥಾ ಎಂಬ ಶಬ್ದವನ್ನುಚ್ಚರಿಸಿ ಅಂಗೀಕಾರಾರ್ಥವು ಸೂಚಿಸಲ್ಪಡುವುದು. ಈರೀತಿ ದೇವತೆಗಳ ಪರವಾಗಿ ಓಂ ಎಂತಲೂ ಮನುಷ್ಯರ ಪರವಾಗಿ ತಥಾ ಎಂತಲೂ ಅಧ್ವರ್ಯುವು ಉಚ್ಚರಿಸಿ ರಾಜನನ್ನು ಅಪಕೀರ್ತಿ ಮುಂತಾದವುಗಳು ಈ ಲೋಕದಲ್ಲಿ ಉಂಟಾಗದಂತೆಯೂ ಪರಲೋಕದಲ್ಲಿ ಪಾಪಾದಿಗಳಿಂದ ನರಕವುಂಟಾಗದಂತೆಯೂ ಅಧ್ವರ್ಯುವು ರಾಜನನ್ನು ವಿಮುಕ್ತನನ್ನಾಗಿ ಮಾಡುವನು.

**ತಸ್ಮಾದ್ಯೋ ರಾಜಾ ವಿಜಿತೀ ಸ್ಯಾದಪ್ಯಯಜಮಾನ ಆಖ್ಯಾಪಯೇ-ತೈವೈತಚ್ಛೌನಃಶೇಪಮಾಖ್ಯಾನಂ ನ ಹಾಸ್ಮಿನ್ನಲ್ಪಂ ಚನೈನಃ ಪರಿ-ಶಿಷ್ಯತೇ ॥**

ಕ್ರತ್ವರ್ಥತ್ವೇನೋಪಾಖ್ಯಾನಂ ವಿಧಾಯ ಕ್ರತುನಿರಪೇಕ್ಷಪುರುಷಾರ್ಥತ್ವೇನ ವಿಧತ್ತೇ— ಯಸ್ಮಾದುಪಾಖ್ಯಾನಂ ಪಾಪಪ್ರಶಮನಹೇತುಸ್ತಸ್ಮಾದಯಜಮಾನೋಽಪಿ ರಾಜಸೂಯಕ್ರತುರ-

ಹಿತೋಽಪಿ ರಾಜಾ ವಿಜಿತೀ ಯದಿ ವಿಜಯೋಪೇತಃ ಸ್ಯಾತ್ತದಾನೀಮೇಚೌನ್ಃಶೇಪಮಾಖ್ಯಾನಮಾಖ್ಯಾಪಯೇತ । ತಸ್ಯ ರಾಜ್ಞೋ ಯಃ ಕಶ್ಚಿದ್ಬ್ರಾಹ್ಮಣ ಉಪಾಖ್ಯಾನಂ ಬ್ರೂಯಾತ್ । ತಥಾ ಸತಿ ತಸ್ಮಿನ್ರಾಜನಿ ಅಲ್ಪಂಚನ ಕಿಂಚಿದಪ್ಯೇನಃ ಪಾಪಂ ಸ ಹಪ್ಯೈ ಪರಿಶಿಷ್ಯತೇ ಸರ್ವಂ ಪಾಪಂ ನಶ್ಯತೀತ್ಯರ್ಥಃ ॥

ಯಜ್ಞಯಾಗಾದಿಗಳನ್ನು ಮಾಡುವ ಪುರುಷರಿಗೆ ಲಭಿಸುವ ಫಲವಿಶೇಷಗಳನ್ನು ಹೇಳಿ ಈಗ ಈ ಶುನಃಶೇಪೋಪಾಖ್ಯಾನವನ್ನು ಶ್ರವಣಮಾಡುವ ಪುರುಷರಿಗೆ ಲಭಿಸುವ ಫಲಗಳನ್ನು ವಿವರಿಸುವರು—ಈ ಉಪಾಖ್ಯಾನಶ್ರವಣವು ಪಾಪಕರ್ಮವನ್ನು ನಾಶಮಾಡುವ ಸಾಮರ್ಥ್ಯವುಳ್ಳದ್ದರಿಂದ ಯಜ್ಞಮಾಡದಿರುವ ಎಂದರೆ ರಾಜಸೂಯಯಾಗವನ್ನು ಮಾಡದಿರುವ ರಾಜನೇ ಮೊದಲಾದ ಪುರುಷನೂ (ಇದನ್ನು ಶ್ರವಣಮಾಡಿದರೆ ಅಥವಾ ಯುದ್ಧಾದಿಗಳಲ್ಲಿ ವಿಜಯಶಾಲಿಯಾದರೆ ಆಗ ಈ ಶುನಶ್ಶೇಪೋಪಾಖ್ಯಾನವನ್ನು ಅವಶ್ಯಕವಾಗಿ ಶ್ರವಣಮಾಡಬೇಕು. ಇಂತಹ ಶ್ರವಣಾಭಿಲಾಷೆಯುಳ್ಳ ರಾಜನಿಗೆ ಯಾವ ಬ್ರಾಹ್ಮಣನಾದರೂ (ಹೋತೃವಲ್ಲದಿದ್ದರೂ) ಈ ಉಪಾಖ್ಯಾನವನ್ನು ಹೇಳಬೇಕು. ಹಾಗೆ ಮಾಡಿದ್ದಾದರೆ ಆ ರಾಜನಲ್ಲಿರುವ ಅಲ್ಪಸ್ವಲ್ಪ ಪಾಪವೂ ಕೂಡ ಸ್ವಲ್ಪವೂ ಉಳಿಯದೆ ನಾಶವಾಗುವುದು (ಪರಿಹಾರವಾಗುವುದು).

ಸಹಸ್ರಮಾಖ್ಯಾತ್ರೇ ದದ್ಯಾಚ್ಛತಂ ಪ್ರತಿಗರಿತ್ರ ಏತೇ ಚೈವಾಽಽಸನೇ ಶ್ವೇತಶ್ಚಾಶ್ವತರೀರಥೋ ಹೋತುಃ ॥

ಆಖ್ಯಾನಪ್ರಯುಕ್ತಾಂ ದಕ್ಷಿಣಾಂ ವಿಧತ್ತೇ । ಯೋಽಯಮಾಖ್ಯಾತಾ ಹೋತಾ ತಸ್ಮೈ ಕ್ರತ್ವರ್ಥದಕ್ಷಿಣಾಮಂತರೇಣೋಪಾಖ್ಯಾನಪ್ರಯುಕ್ತಾ ದಕ್ಷಿಣಾಂ ಗೋಸಹಸ್ರರೂಪಾಂ ದದ್ಯಾತ್ । ಪ್ರತಿಗರಿತ್ರೇಽಧ್ವರ್ಯವೇ ಗೋಶತಂ ದದ್ಯಾತ್ । ಯೇ ಹಿರಣ್ಯಕಶಿಪುರೂಪೇ ದ್ವೇ ಆಸನೇ ಸ್ತ ಏತೇ ಅಪಿ ತಾಭ್ಯಾಮೇವ ದದ್ಯಾತ್। ಅಶ್ವತರೀಭ್ಯಾಂ ಸಂಕೀರ್ಣಜಾತಿಯುಕ್ತಾಭ್ಯಾಮಧಿಕಶಕ್ತಿಭ್ಯಾಂ ಯುಕ್ತೋ ರಥೋಽಶ್ವತರೀರಥಃ । ಸ ಚ ರಜತೇನಾಲಂಕೃತತ್ವಾಚ್ಛ್ವೇತಃ । ಸೋಽಪಿ ತಾದೃಶೋ ಹೋತುರ್ದೇಯಃ ॥

ಈ ಆಖ್ಯಾನವನ್ನು ಹೇಳುವ ಪುರುಷನಿಗೆ ಕೊಡಬೇಕಾದ ದಕ್ಷಿಣೆ ಅಥವಾ ಸಂಭಾವನಾದ್ರವ್ಯವನ್ನು ತಿಳಿಸುವರು—ಈ ಉಪಾಖ್ಯಾನವನ್ನು ಹೇಳುವ ಹೋತೃವಿಗೆ ಯಜ್ಞಕ್ಕಾಗಿ ಕೊಡಬೇಕಾದ ದಕ್ಷಿಣೆಯನ್ನು ಕೊಡುವುದಲ್ಲದೆ ಉಪಾಖ್ಯಾನವನ್ನು ಹೇಳಿದ್ದಕ್ಕಾಗಿಯೂ ದಕ್ಷಿಣಾರೂಪವಾಗಿ ಒಂದು ಸಹಸ್ರ ಗೋವುಗಳನ್ನು ಕೊಡಬೇಕು. ಉಪಾಖ್ಯಾನವನ್ನು ಹೋತೃವು ಪಠಿಸುತ್ತಿರುವಾಗ ಮಧ್ಯ ಮಧ್ಯೆ ಪ್ರತಿಗರವನ್ನು (ಪ್ರತ್ಯುತ್ತರವನ್ನು) ಹೇಳುತ್ತಿರುವ ಅಧ್ವರ್ಯುವಿಗೆ ಒಂದು ನೂರು ಗೋವುಗಳನ್ನು ಕೊಡಬೇಕು. ಉಪಾಖ್ಯಾನವನ್ನು ಹೇಳುತ್ತಿರುವಾಗ ಸುವರ್ಣಮಯವಾದ ರತ್ನಕಂಬಳಿಗಳನ್ನೂ ಅವುಗಳ ಮೇಲೆ ಕುಳಿತಿರುವ ಹೋತೃ ಮತ್ತು ಅಧ್ವರ್ಯುಗಳಿಗೇ ಕೊಡಬೇಕು. ಇಲ್ಲಿ ಅಶ್ವತರೀರಥಃ ಎಂದರೆ ಅಧಿಕಶಕ್ತಿಯುಳ್ಳ ಜಾತ್ಯಶ್ವಗಳನ್ನು ಕಟ್ಟಿ ಬೆಳ್ಳಿ ಮುಂತಾದ ಆಭರಣಗಳಿಂದ ಅಲಂಕೃತವಾಗಿರುವ ಬಿಳಿಯ (ಬೆಳ್ಳಿಯ) ರಥವೆಂದರ್ಥವು. ಇಂತಹ ರಥವನ್ನೂ ಹೋತೃವಿಗೆ ಕೊಡಬೇಕು.

ಪುತ್ರಕಾಮಾ ಹಾಪ್ಯಾಖ್ಯಾಪಯೇರಲ್ಲಭಂತೇ ಹ ಪುತ್ರಾँಲ್ಲಭಂತೇ ಹ ಪುತ್ರಾನ್ ॥

ಪೂರ್ವಮಯಜ್ಞಸಂಯುಕ್ತಃ ಕಲ್ಪೋ ವಿಜಯಿನೋ ರಾಜ್ಞೋಽಭಿಹಿತಃ । ಇದಾನೀಂ ಪುತ್ರಕಾಮಾನಾಮಪಿ(ಸರ್ವೇಷಾಮಪಿ) ಪಾಥತ್ತೇ—ಯೇ ಪುತ್ರಕಾಮಾಃ ಸಂತಿ ತೇಹ ಪ್ರಸಿದ್ಧಮೇತದುಪಾಖ್ಯಾನಮಾಖ್ಯಾಪಯೇರನ್ ಬ್ರಾಹ್ಮಣಮಾಖಾಚ್ಛೃಣುಯುರಿತ್ಯರ್ಥಃ। ತೇ ಪುತ್ರಾನ್ ಲಭಂತೇ। ಅಭ್ಯಾಸೋಽಧ್ಯಾಯ ಸಮಾಪ್ತ್ಯರ್ಥಃ ॥

ಈ ಉಪಾಖ್ಯಾನವನ್ನು ಕೇಳಿದವನಲ್ಲಿ ಯಜ್ಞಮಾಡದ, ಯುದ್ಧಾದಿಗಳಲ್ಲಿ ಜಯವನ್ನು ಗಳಿಸಿದ ರಾಜರಿಗೆ ಲಭಿಸುವ ಫಲವನ್ನು ಹೇಳಿದ್ದಾಯಿತು. ಈಗ ಪುತ್ರಾಪೇಕ್ಷೆಯುಳ್ಳ ಸಮಸ್ತ ಮಾನವರಿಗೂ ಈ ಉಪಾಖ್ಯಾನಶ್ರವಣದಿಂದುಂಟಾಗುವ ಫಲವನ್ನು ವಿವರಿಸುವರು. ಯಾವ ಪುರುಷರು ತಮಗೆ ಪುತ್ರರಾಗಬೇಕೆಂದು ಅಪೇಕ್ಷಿಸುವರೋ ಅವರು ಈ ಉಪಾಖ್ಯಾನವನ್ನು ಬ್ರಾಹ್ಮಣರಿಂದ ಶ್ರವಣಮಾಡಬೇಕು. ಹೀಗೆ ಮಾಡಿದರೆ ಅವರಿಗೆ ನಿಶ್ಚಯವಾಗಿಯೂ ಪುತ್ರಲಾಭವುಂಟಾಗುವುದು. ಇಲ್ಲಿ ಲಭಂತೇ ಹ ಪುತ್ರಾನ್ ಎಂಬ ಶಬ್ದಗಳು ಎರಡಾವರ್ತಿ ಪಠಿತವಾಗಿರುವುದು ಅಧ್ಯಾಯದ ಸಮಾಪ್ತಿಯನ್ನು ಸೂಚಿಸುವುದು.

————

*English Translation*

**(On Visvamitra's descendants. How the reciters of the Snuahsepa story are to be rewarded by the king. Stanzas. On the pratigara of the richas and stanzas at this occasion.)**

This Rishi Visvamitra had a hundred sons, fifty of them were older than Madhuchhandas, and fifty were younger than he. The older ones were not pleased with (the installation of Sunahsepa to the primogeniture). Visvamitra then pronnunced against them curse, "you shall have the lowest castes for your descendants." Therefore are many of the most degraded classes of men, the rabble for the most part, such as the Andhras, Pundras, Sabaras, Palindas, and Mutibas, descendants of Visvamitra. But Madhuchhandas with the fifty younger sons, said, "What our father approves of, by that we abide ; we call accord to thee (Sunahsepa) the first rank, and we will come after thee !" Visvamitra, delighted (at this answer) then praised these sons with the following verses :

" Ye my sons will have abundance of cattle and children, for you have made me rich in children by consenting to my wish."

" Ye sons of Gathi, blessed with children, you all be successful when headed by Devarata ; he will (always) lead you on the path of truth."

" This Devaratha, is your master (man) follow him, ye Kusikas ! He will exercises the paternal rights over you as his heritage from me, and take possession of the sacred knowledge that we have."

" All the true sons of Visvamitra, the grandsons of Gathi, who forthwith stood with Devarata, were blessed with wealth for their own welfare and renown."

" Devarata is called the Rishi who entered on two heritages, the royal dignity of Jahnus house, and the divine knowlede of Gathi's stem "

This is the story of Sunahsepa contained in the stanzs which are beyond the number of the hundred Rik verses (recited along with them). The Hotar when siting on a gold embroidered carpet, recites them to the king, after he has been sprinkled with the sared water. The Adhvaryu wo repeats the responses sits likewise on a gold embroidered carpet. For gold is glory. This procures glory for the king. (for whom these Gathas are repeated). Om is the Adhvaru's response to a Rich (repeated by the Hotar) and evam tatha (thus in this way it is) that to a Gatha (recited by the Hotar) For Om is divine (therafore applied to richas, which are a divine (om) and human (tatha) responses, the Adhvaryu makes the king free from sin and fault. Therefore any king who might be a conquerer (and consequently by shedding bold a sinner) although he might not bring a sacrifice, should have told the story of Sunahsepa. (If he do so) then not the slightest trace of sin (and its consepuences) will remain in him. He must give a thousand cows to the teller of this story, and a hundred to him who makes the responses (required) ; and to each of them the (gold embroidered) carpet on which he was sitting ; to the Hotar, besides, a silver decked carriage drawn by mules. Those who wish for chidren, should also have told this story ; then they certainly will be blessed with children.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ತ್ರಯಸ್ತ್ರಿಂಶಾಧ್ಯಾಯೇ ಷಷ್ಠಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ತ್ರಯಸ್ತ್ರಿಂಶೋಧ್ಯಾಯಃ ಸಮಾಪ್ತಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂವತ್ತ ಮೂರನೆಯ ಅಧ್ಯಾಯದಲ್ಲಿ ಆರನೆಯ ಖಂಡವು
ಸಮಾಪ್ತವಾದುದು

ಮೂವತ್ತ ಮೂರನೆಯ ಅಧ್ಯಾಯವು ಸಮಾಪ್ತವಾದುದು



# ಅಥೈತರೇಯಬ್ರಾಹ್ಮಣೇ ಚತುಸ್ತ್ರಿಂಶಾಧ್ಯಾಯೇ ಪ್ರಥಮಃ ಖಂಡಃ

## ಐತರೇಯಬ್ರಾಹ್ಮಣದ ಮೂವತ್ತನಾಲ್ಕನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

[ರಾಜಸೂಯ ಯಾಗದ ಪ್ರಾರಂಭದಲ್ಲಿ ಆಚರಿಸಬೇಕಾದ ಕಾರ್ಯಕಲಾಪಗಳು]

[ಬ್ರಾಹ್ಮಣನಿಗೂ ಕ್ಷತ್ರಿಯನಿಗೂ ಇರುವ ಸಂಬಂಧ]

---

**ಪ್ರಜಾಪತಿರ್ಯಜ್ಞಮಸೃಜತ ಯಜ್ಞಂ ಸೃಷ್ಟಮನು ಬ್ರಹ್ಮಕ್ಷತ್ರೇ ಅಸೃಜ್ಯೇತಾಂ ಬ್ರಹ್ಮಕ್ಷತ್ರೇ ಅನು ದ್ವಯ್ಯಃ ಪ್ರಜಾ ಅಸೃಜ್ಯಂತ ಹುತಾದಶ್ಚಾಹುತಾದಶ್ಚ ಬ್ರಹ್ಮೈವಾನು ಹುತಾದಃ ಕ್ಷತ್ರಮನ್ವ-ಹುತಾದ ಏತಾ ವೈ ಪ್ರಜಾ ಹುತಾದೋ ಯದ್ಬ್ರಾಹ್ಮಣಾ ಅಥೈತಾ ಅಹುತಾದೋ ಯದ್ರಾಜನ್ಯೋ ಶೂದ್ರಃ ॥**

ಶೌನಃಶೇಪಪ್ರಸಂಗೇನ ಯಾಃ ಕ್ರಿಯಾ ರಾಜಕರ್ತೃಕಾಃ ।
ತದ್ವಿಶೇಷವಿಧಾನಾರ್ಥಮಧ್ಯಾಯೋಽತ್ರ ಪ್ರವಕ್ಷ್ಯತೇ ॥೧॥

ತತ್ರಾದೌ ಕಿಂಚಿದುಪಾಖ್ಯಾನಮಾಹ- ಪುರಾ ಪ್ರಜಾಪತಿರ್ಜ್ಯೋತಿಷ್ಟೋಮಾಖ್ಯಂ ಯಜ್ಞಂ ಸೃಷ್ಟ್ವಾ ತದನಂತರಂ ಬ್ರಾಹ್ಮಣಕ್ಷತ್ರಿಯಜಾತಿದ್ವಯಂ ತತ ಊರ್ಧ್ವಂ ಹುತಾದಶ್ಚಾಹುತಾದಶ್ಚೇ-ತ್ಯುಭಯವಿಧಾಃ ಪ್ರಜಾ ಅಸೃಜತ । ತತ್ರ ಬ್ರಾಹ್ಮಣಜಾತಿಮೇವಾನು ತದ್ವ್ಯಕ್ತಿಭೂತಾ ಹುತಾದಃ ಸೃಷ್ಟಾಃ । ಕ್ಷತ್ರಿಯಜಾತಿಮನು ತದ್ವ್ಯಕ್ತಿಸಜಾತೀಯಾ ಅಹುತಾದಃ ಪ್ರಜಾಃ ಸೃಷ್ಟಾಃ । ಯೇ ಬ್ರಾಹ್ಮಣಾಃ ಸಂತ್ಯೇತಾಃ ಪ್ರಜಾ ಆರ್ತ್ವಿಜ್ಯಸದ್ಭಾವಾದ್ಧುತಶೇಷಮದಂತಿ ಭಕ್ಷಯಂ-ತೀತಿ ಹುತಾದಃ । ಯೇ ರಾಜನ್ಯವೈಶ್ಯಶೂದ್ರಾ ಏತಾಃ ಪ್ರಜಾ ಆರ್ತ್ವಿಜ್ಯಾಭಾವಾದ್ಧುತಶೇಷಂ ನ ಭಕ್ಷಯಂತೀತ್ಯಹುತಾದಃ । ಇತ್ಥಂ ಯಜ್ಞಂ ಚತುರೋ ವರ್ಣಾಂಶ್ಚ ಸ ಪ್ರಜಾಪತಿಃ ಸೃಷ್ಟವಾನ ॥

ಶೌನಶ್ಶೇಪಾಖ್ಯಾನವನ್ನು ಹೇಳಿದನಂತರ ಈ ಸಂದರ್ಭದಲ್ಲಿ ರಾಜರು (ಕ್ಷತ್ರಿಯರು) ಯಜ್ಞ ಮಾಡುವಾಗ ಅನುಸರಿಸಬೇಕಾದ ಕ್ರಮಗಳನ್ನು ಈ ಅಧ್ಯಾಯದಲ್ಲಿ ವಿವರಿಸುವರು.—ಈ ವಿಷಯದಲ್ಲಿ ಒಂದು ಪೂರ್ವೇತಿಹಾಸವನ್ನು ಹೇಳುವರು ಪೂರ್ವದಲ್ಲಿ ಪ್ರಜಾಪತಿಯು (ಸರ್ವೇಶ್ವರನು) ಜ್ಯೋತಿಷ್ಟೋಮವೆಂಬ ಯಜ್ಞವನ್ನು ಸೃಷ್ಟಿಮಾಡಿದನು. ಅನಂತರ ಬ್ರಾಹ್ಮಣ ಕ್ಷತ್ರಿಯ ಎಂಬ ಎರಡು ಜಾತಿಗಳನ್ನೂ ಅನಂತರ ಹುತಾದ ಮತ್ತು ಅಹುತಾದ ಎಂದು ಎರಡುವಿಧವಾದ ಪ್ರಜೆಗಳನ್ನೂ (ಪುರುಷರು) ಸೃಷ್ಟಿಮಾಡಿದನು. ಬ್ರಾಹ್ಮಣಜಾತಿಯನ್ನನುಸರಿಸಿ ಹುತಾದರನ್ನೂ, ಕ್ಷತ್ರಿಯಾದಿಜಾತಿಗಳನ್ನನುಸರಿಸಿ ಅಹುತದಾರರನ್ನೂ ಸೃಷ್ಟಿಮಾಡಿದನು. ಯಜ್ಞಾದಿಗಳಲ್ಲಿ ಆರ್ತ್ವಿಜ್ಯವನ್ನು (ಪುರೋಹಿತರ ಕಾರ್ಯಕಲಾಪಗಳನ್ನು ಮಾಡುವ ಬ್ರಾಹ್ಮಣರಿಗೆ ಋತ್ವಿಕ್ಕುಗಳೆಂದೂ, ಅವರು ಮಾಡುವ ಅಥವಾ ಮಾಡಿಸುವ ಪೌರೋಹಿತ್ಯಕ್ಕೆ ಆರ್ತ್ವಿಜ್ಯವೆಂದೂ ಹೆಸರು)

ಮಾಡಿ ಅಥವಾ ಮಾಡಿಸಿ ಹೋಮಾನಂತರ ಉಳಿಯುವ ಹವಿಃಶೇಷನನ್ನು ಭಕ್ಷಿಸುವ ಋತ್ವಿಕ್ಕೇ ಮೊದಲಾದ ಬ್ರಾಹ್ಮಣರಿಗೆ ಹುತಾದರೆಂದು (ಹುತ=ಹೋಮಶೇಷವನ್ನು, ಅದಃ=ಭಕ್ಷಿಸುವವರೆಂದು) ಹೆಸರು. ರಾಜರು (ಕ್ಷತ್ರಿಯರು) ವೈಶ್ಯರು, ಶೂದ್ರರು ಎಂಬ ಮೂರು ಜಾತಿಯ ಜನರು ಯಜ್ಞಯಾಗಾದಿಗಳನ್ನು (ಋತ್ವಿಕ್ಕುಗಳ ಸಹಾಯವಿಲ್ಲದೆ ತಾವೇ) ಮಾಡಲು ಅಥವಾ ಮಾಡಿಸಲು ಅರ್ಹರಲ್ಲವಾದ್ದರಿಂದ ಅವರು ಹೋಮಶೇಷವನ್ನು ಭಕ್ಷಿಸಲು ಅಧಿಕಾರವಿರುವುದಿಲ್ಲ. ಕ್ಷತ್ರಿಯ, ವೈಶ್ಯ, ಶೂದ್ರಜಾತಿಯವರು ಹೋಮಶೇಷವನ್ನು ಭಕ್ಷಿಸಲು ಅವರಿಗೆ ಅಧಿಕಾರವಿಲ್ಲದ್ದರಿಂದ ಅವರಿಗೆ ಅಹುತಾದರೆಂದು ಹೆಸರು. ಈ ರೀತಿಯಾಗಿ ಪ್ರಜಾಪತಿಯು ಯಜ್ಞವನ್ನೂ ಬ್ರಾಹ್ಮಣಾದಿ ನಾಲ್ಕುವರ್ಣಗಳನ್ನು ಸೃಷ್ಟಿಮಾಡಿದನು.

**ತಾಭ್ಯೋ ಯಜ್ಞ ಉದಕ್ರಾಮತ್ತಂ ಬ್ರಹ್ಮಕ್ಷತ್ರೇ ಅನ್ವೈತಾಂ ಯಾನ್ಯೇವ ಬ್ರಹ್ಮಣ ಆಯುಧಾನಿ ತೈರ್ಬ್ರಹ್ಮಾನ್ವೈದ್ಯಾನಿ ಕ್ಷತ್ರಸ್ಯ ತೈಃಕ್ಷತ್ರ-ಮೇತಾನಿ ವೈ ಬ್ರಹ್ಮಣ ಆಯುಧಾನಿ ಯದ್ಯಜ್ಞಾಯುಧಾನ್ಯಥೈತಾನಿ ಕ್ಷತ್ರಸ್ಯಾಽಽಯುಧಾನಿ ಯದಶ್ವರಥಃ ಕವಚ ಇಷುಧನ್ವ ॥**

ಅಥ ಸೃಷ್ಟಸ್ಯ ಯಜ್ಞಸ್ಯ ವೃತ್ತಾಂತಮಾಹ—ಸ ಯಜ್ಞಸ್ತಾಭ್ಯಃ ಪ್ರಜಾಭ್ಯೋಽಪರಕ್ತ ಉತ್ಕ್ರಮ್ಯ ದೂರೇಽಗಚ್ಛತ್ । ತಂ ಗಚ್ಛಂತಂ ಯಜ್ಞಂ ಬ್ರಾಹ್ಮಣಜಾತಿಕ್ಷತ್ರಿಯಜಾತೀ ದ್ವೇ ಅನ್ವೈ-ತಾಂ ಪಶ್ಚಾದಗಚ್ಛತಾಂ । ಬ್ರಾಹ್ಮಣಸ್ಯ ಯೋಗ್ಯಾನಿ ಯಾನ್ಯಾಯುಧಾನಿ ತೈಃ ಸಹ ಕ್ಷತ್ರಿಯ-ಜಾತಿರ್ಯಜ್ಞಮನ್ವಗಚ್ಛತ್ । ಕ್ಷತ್ರಿಯಸ್ಯ ಯೋಗ್ಯಾನಿ ಯಾನ್ಯಾಯುಧಾನಿ ತೈಃ ಸಹ ಕ್ಷತ್ರಿಯ-ಜಾತಿರ್ಯಜ್ಞಮನ್ವಗಚ್ಛತ್ । ಯಾನಿ ಯಜ್ಞಾಯುಧತ್ವೇನ ಶಾಖಾಂತರೇ ಶ್ರೂಯತೇ—'ಸ್ಫ್ಯಶ್ಚ ಕಪಾಲಾನಿ ಚಾಗ್ನಿಹೋತ್ರಹವಣೀ ಚ ಶೂರ್ಪಂ ಚ ಕೃಷ್ಣಾಜಿನಂ ಚ ಶಮ್ಯಾಂ (ಮ್ಯಾ) ಚೋಲೂ-ಖಲಂ ಚ ಮುಸಲಂ ಚ ದೃಷಚ್ಚೋಪಲಾ ಚೈತಾನಿ ವೈ ದಶ ಯಜ್ಞಾಯುಧಾನಿ' ಇತಿ ತಾನ್ಯೇವ ಬ್ರಾಹ್ಮಣಜಾತೇರುಚಿತಾನ್ಯಾಯುಧಾನಿ । ಯೋಽಯಮಶ್ವಯುಕ್ತೋ ರಥೋ ಯಶ್ಚ ಕವಚೋ ಯದಪಿ ಬಾಣಯುಕ್ತಂ ಧನುರೇತಾನ್ಯಪಿ ಕ್ಷತ್ರಿಯಜಾತೇರುಚಿತಾನ್ಯಾಯುಧಾನಿ ॥

ಪ್ರಜಾಪತಿಯು ಸೃಷ್ಟಿಸಿದ ಯಜ್ಞದ ವೃತ್ತಾಂತವನ್ನು ತಿಳಿಸುವರು–ಪ್ರಜಾಪತಿಯು ಸೃಷ್ಟಿಸಿದ ಯಜ್ಞವು (ಯಜ್ಞಾಭಿಮಾನಿದೇವತೆಯು) ಕಾರಣಾಂತರದಿಂದ ಬೇಸರಗೊಂಡು ಹೊರಟುಹೋಯಿತು. ಹೊರಟುಹೋಗುತ್ತಿರುವ ಈ ಯಜ್ಞವನ್ನು ಹಿಂಬಾಲಿಸಿ ಬ್ರಾಹ್ಮಣಕ್ಷತ್ರಿಯಜಾತಿಗಳು ಅದರ ಹಿಂದೆಯೇ ಅದನ್ನು ಅನುಸರಿಸಿ ಹೋದವು. ಬ್ರಾಹ್ಮಣಜಾತಿಗೆ ಯೋಗ್ಯವಾದ ಯಜ್ಞಾಯುಧಗಳಿಂದ (ಯಜ್ಞಾಯುಧವೆಂದರೆ ಯಜ್ಞವನ್ನು ಮಾಡಲು ಬೇಕಾದ ಸಾಧನಸಾಮಗ್ರಿಗಳು). ಬ್ರಾಹ್ಮಣ ಜಾತಿಯು ಯಜ್ಞವನ್ನು ಹಿಂಬಾಲಿಸಿ ಹೋಯಿತು. ಅದರಂತೆ ಕ್ಷತ್ರಿಯಜಾತಿಗೆ ಯೋಗ್ಯವಾದ ಆಯುಧ ವಿಶೇಷಗಳಿಂದ ಸಹಿತವಾಗಿ ಕ್ಷತ್ರಿಯಜಾತಿಯೂ ಯಜ್ಞವನ್ನು ಅನುಸರಿಸಿ ಹೋಯಿತು. ಶಾಖಾಂತರದಲ್ಲಿ (ಎಂದರೆ ಯಜುರ್ವೇದದಲ್ಲಿ) ಯಜ್ಞಾಯುಧಗಳನ್ನು ಈರೀತಿ ವಿವರಿಸಲಾಗಿದೆ—**ಸ್ಫ್ಯಶ್ಚ ಕಪಾಲಾನಿ ಚಾಗ್ನಿಹೋತ್ರಹವಣೀ ಚ ಶೂರ್ಪಂ ಚ ಕೃಷ್ಣಾಜಿನಂ ಚ ಶಮ್ಯಾ ಚೋಲೂಖಲಂ ಚ ಮುಸಲಂ ಚ ದೃಷಚ್ಚೋಪಲಾ ಚೈತಾನಿ ವೈ ದಶ ಯಜ್ಞಾಯುಧಾನಿ** (ತೈ. ಸಂ. ೧-೬-೮-೨, ೩.) ಎಂದರೆ ಸ್ಫ್ಯಃ—ದರ್ಭಾದಿಗಳನ್ನು ಕತ್ತರಿಸುವುದಕ್ಕೆ ಉಪಯೋಗಿಸುವ ಚಾಕು; ಕಪಾಲ—ಪುರೋಡಾಶವೆಂಬ ಹವಿಸ್ಸನ್ನು ಸುಡುವುದಕ್ಕೆ ಉಪಯೋಗಿಸುವ ಕಾವಲಿಯಂತಿರುವ ಮಣ್ಣಿನ ಹೆಂಚು; ಅಗ್ನಿಹೋತ್ರ

ಹವನೀ—ಅಗ್ನಿಯನ್ನು ಆರಿಹೋಗದಂತೆ ಕಾಪಾಡುವ ಮಡಕೆ; ಶೂರ್ಪಂ—ಯವ ಮೊದಲಾದ ಧಾನ್ಯಗಳನ್ನು ಕೇರಲು ಉಪಯೋಗಿಸುವ ಬಿದುರಿನಮರ, ಕೃಷ್ಣಾಜಿನಂ—ದೀಕ್ಷಾವಿಧಿಯಲ್ಲಿಯೂ ಯಜ್ಞದ ಇತರ ಕಾರ್ಯಕಲಾಪಗಳಲ್ಲಿಯೂ ಉಪಯೋಗಿಸುವ ಜಿಂಕೆಯ ಚರ್ಮವು (ಕೃಷ್ಣಾಜಿನವು) ಶಮ್ಯಾ ಯಜ್ಞಪಶುವಿನ ಶರೀರವನ್ನು ಹೋಮಮಾಡುವುದಕ್ಕಾಗಿ ಕತ್ತರಿಸುವ ಕತ್ತಿ ಅಥವಾ ಮಚ್ಚು; ಉಲೂಖಲಂ—ಧಾನ್ಯವನ್ನು ಕುಟ್ಟುವುದಕ್ಕಾಗಿ ಉಪಯೋಗಿಸುವ ಮರದ ಒರಳು; ಮುಸಲಂ—ಧಾನ್ಯವನ್ನು ಕುಟ್ಟುವುದಕ್ಕಾಗಿ ಉಪಯೋಗಿಸುವ ಮರದ ಒನಕೆ; ದೃಷತ್—ಸೋಮಲತೆಗಳನ್ನು ಜಜ್ಜುವುದಕ್ಕಾಗಿ ಅಡಿಯಲ್ಲಿಡುವ ಅಗಲವಾದ ಕಲ್ಲು ಉಪಲಾ—ಸೋಮಲತೆಗಳನ್ನು ಅಗಲವಾದ ಬೇರೆ ಕಲ್ಲಿನ ಮೇಲಿಟ್ಟು ಕುಟ್ಟುವುದಕ್ಕಾಗಿ ಉಪಯೋಗಿಸುವ ಗುಂಡುಕಲ್ಲಿನಂತಿರುವ ಕಲ್ಲು; ಈ ಹತ್ತು ಸಾಮಗ್ರಿಗಳೂ ಯಜ್ಞಾದಿಗಳಲ್ಲಿ ಅವಶ್ಯಕವಾಗಿ ಬೇಕಾಗುವ ವಸ್ತುಗಳು. ಇವುಗಳನ್ನು ಯಜ್ಞಾಯುಧಗಳೆಂದು ಕರೆಯುವರು. ಈ ಸಾಧನಸಾಮಗ್ರಿಗಳೊಡನೆ ಬ್ರಾಹ್ಮಣಜಾತಿಯು ಯಜ್ಞದ ಹಿಂದೆ ಹೋಯಿತು. ಕ್ಷತ್ರಿಯರು ಎಂದರೆ ರಾಜರು ಯುದ್ಧಾದಿಗಳಲ್ಲಿ ಉಪಯೋಗಿಸುವ ಕುದುರೆಗಳನ್ನು ಕಟ್ಟಿರುವ ರಥವು; ಉಕ್ಕಿನ ಕವಚವು; ಧನುಸ್ಸು ಮತ್ತು ಬಾಣವು. ಇವುಗಳಿಂದ ಸಹಿತವಾಗಿ ಕ್ಷತ್ರಿಯ ಜಾತಿಯೂ ಯಜ್ಞವನ್ನು ಅನುಸರಿಸಿ ಹೋಯಿತು.

ತಂ ಕ್ಷತ್ರಮನನ್ವಾಪ್ಯ ನ್ಯವರ್ತತಾಽಽಯುಧೇಭ್ಯೋ ಹ ಸ್ಮಾಸ್ಯ ವಿಜಮಾನಃ ಪರಾಙೇವೈತ್ಯಥೈನಂ ಬ್ರಹ್ಮಾನ್ವೈತ್ತಮಾಪ್ನೋತ್ತಮಾಪ್ತ್ವಾ ಪರಸ್ತಾನ್ನಿರುಧ್ಯಾತಿಷ್ಠತ್ಸ ಆಪ್ತಃ ಪರಸ್ತಾನ್ನಿರುದ್ಧಸ್ತಿಷ್ಠಂಜ್ಞಾತ್ವಾ ಸ್ವಾನ್ಯಾಯುಧಾನಿ ಬ್ರಹ್ಮೋಪಾವರ್ತತ ತಸ್ಮಾದ್ಧಾಪ್ಯೇತರ್ಹಿ ಯಜ್ಞೋ ಬ್ರಹ್ಮಣ್ಯೇವ ಬ್ರಾಹ್ಮಣೇಷು ಪ್ರತಿಷ್ಠಿತಃ ||

ಯಜ್ಞಮನುಗಚ್ಛಂತ್ಯೋರ್ಬ್ರಾಹ್ಮಣಕ್ಷತ್ರಿಯಜಾತ್ಯೋರ್ಮಧ್ಯೇ ಬ್ರಾಹ್ಮಣಜಾತೇರ್ಯಜ್ಞಪ್ರಾಪ್ತಿಂ ದರ್ಶಯತಿ-ಕ್ಷತ್ರಂ ಕ್ಷತ್ರಿಯಜಾತಿಸ್ತಂ ಯಜ್ಞಮನನ್ವಾಪಾನುಗಮನೇನ ಪ್ರಾಪ್ತಿಮಲಬ್ಧ್ವಾ ತಸ್ಮಾದನುಗಮನಾನ್ನ್ಯವರ್ತತ । ಯಜ್ಞೋ ಸ್ಯ ಕ್ಷತ್ರಿಯಸ್ಯಾಯುಧೇಭ್ಯೋ ಧನುರಾದಿಭ್ಯೋ ವಿಜಮಾನೋ ಭೀತಿಂ ಪ್ರಾಪ್ನುವನ್‌ಪರಾಙೇವ ಪುನರಾವೃತ್ತಿರಹಿತ ಏವೈತಿ ಸ್ಮ ಪಲಾಯ್ಯ ದೂರೇ ಗತಃ। ಅಥಾನಂತರಮೇನಂ ಯಜ್ಞಂ ಬ್ರಹ್ಮ ಬ್ರಾಹ್ಮಣಜಾತಿರನ್ವೈದನ್ವಗಚ್ಛತ್। ಅನುಗಮ್ಯ ಚ ತಂ ಯಜ್ಞಮಾಪ್ನೋತಿ ಸ್ಮ । ಆಪ್ತ್ವಾ ಚ ತಂ ಯಜ್ಞಮತಿಕ್ರಮ್ಯ ಪರಸ್ತಾತ್ಪರಭಾಗೇ ನಿರುಧ್ಯ ಯಜ್ಞಗಮನಂ ಪ್ರತಿಬುಧ್ಯಾತಿಷ್ಠತ್ । ಅತ್ರ ಯಜ್ಞ ಆಪ್ತಸ್ತಥಾ ಬ್ರಾಹ್ಮಣಜಾತ್ಯಾ ಪ್ರಾಪ್ತಃ ಪರಸ್ತಾತ್ಪರಭಾಗೇ ನಿರುದ್ಧೋ ಗಮನಾತ್ಪ್ರತಿಬದ್ಧಸ್ತತ್ರೈವ ತಿಷ್ಠನ್ಬ್ರಾಹ್ಮಣಸ್ಯ ಹಸ್ತೇಽಸ್ಥಿತಾನ್ ಸ್ಫ್ಯಕಪಾಲಾದೀನಿ ಸ್ವಕೀಯಾನ್ಯಾಯುಧಾನಿ ಜ್ಞಾತ್ವಾ ಬ್ರಾಹ್ಮಣಜಾತಿಂ ಪ್ರತ್ಯುಪಾವರ್ತತ ಸಮೀಪ ಆಗಚ್ಛತ್ । ಯಸ್ಮಾದೇವಂ ತಸ್ಮಾದಿದಾನೀಮಪಿ ಯಜ್ಞೋ ಬ್ರಹ್ಮಣ್ಯೇವಾರ್ತ್ವಿಜ್ಯಯೋಗ್ಯಾಯಾಂ ಬ್ರಾಹ್ಮಣ ಜಾತಾವೇವ ತತ್ರಾಪಿ ಪ್ರಯೋಗಕುಶಲೇಷು ಬ್ರಾಹ್ಮಣೇಷು ಪ್ರತಿಷ್ಠಿತೋ ವರ್ತತೇ ॥

ಬ್ರಾಹ್ಮಣಕ್ಷತ್ರಿಯಜಾತಿಗಳೆರಡೂ ಯಜ್ಞವನ್ನು ಹಿಂಬಾಲಿಸಿ ಹೋಗುತ್ತಿರುವಾಗ ಬ್ರಾಹ್ಮಣಜಾತಿಗೆ ಮಾತ್ರ ಯಜ್ಞವು ದೊರೆಯಿತೆಂಬ ವಿಷಯವನ್ನು ವಿವರಿಸುವರು—ಬ್ರಾಹ್ಮಣಕ್ಷತ್ರಿಯಜಾತಿಗಳೆರಡೂ ತಮ್ಮ ತಮ್ಮ ಸಾಧನಸಾಮಗ್ರಿಗಳೊಡನೆ ಯಜ್ಞವನ್ನು ಬೆನ್ನಟ್ಟಿ ಹೋಗುತ್ತಿರುವಾಗ ಕ್ಷತ್ರಿಯಜಾತಿಗೆ ಆ ಯಜ್ಞವು ಸಿಕ್ಕದಿರಲು ಅದು (ಕ್ಷತ್ರಿಯಜಾತಿ)

ಯಜ್ಞವನ್ನು ಪಡೆಯದೇ ಹಿಂದಕ್ಕೆ ಬಂದಿತು. ಏಕೆಂದರೆ ಓಡಿಹೋಗುತ್ತಿರುವ ಯಜ್ಞವು ಕ್ಷತ್ರಿಯಜಾತಿಯ ಸೈನ್ಯಾದಿಗಳನ್ನೂ ಆಯುಧಗಳನ್ನು ಕಂಡು ಹೆದರಿ ಹಿಂದಕ್ಕೆ ಬರದೆ ದೂರ ಓಡಿಹೋಯಿತು. ಆದ್ದರಿಂದ ಅದನ್ನು ಹಿಡಿಯಲು ಕ್ಷತ್ರಿಯಜಾತಿಗೆ ಸಾಧ್ಯವಾಗಲಿಲ್ಲ. ಬಳಿಕ ಬ್ರಾಹ್ಮಣಜಾತಿಯು ಯಜ್ಞವನ್ನು ಹಿಂಬಾಲಿಸಿ ಪ್ರಯತ್ನಪಟ್ಟು ಅದರ ಸಮೀಪಕ್ಕೆ ಬಂದಿತು. ಆ ಮೇಲೆ ಯಜ್ಞವು ಮುಂದಕ್ಕೆ ತಪ್ಪಿಸಿಕೊಂಡು ಓಡಿಹೋಗದಂತೆ ದಾರಿಯಲ್ಲಿ ಅಡ್ಡಲಾಗಿ ನಿಂತು ಮುಂದೆ ಹೋಗಲು ಪ್ರತಿ ಬಂಧವನ್ನುಂಟುಮಾಡಿತು. ಯಜ್ಞವು ಮುಂದೆ ಹೋಗಲು ಸಾಧ್ಯವಿಲ್ಲವೆ ಅಲ್ಲಿಯೇ ನಿಂತುಕೊಂಡಿತು. ಹಾಗೆಯೇ ನಿಂತು ನೋಡುತ್ತಿರುವಾಗ ಬ್ರಾಹ್ಮಣಜಾತಿಯ ಕೈಯ್ಯಲ್ಲಿಪ್ಪ ಸ್ಫ್ಯಕಪಾಲಮೊದಲಾದ ಯಜ್ಞಸಾಮಗ್ರಿಗಳನ್ನು ಕಂಡು ಇವೆಲ್ಲವೂ ನನ್ನ (ಯಜ್ಞದ) ಸ್ವಕೀಯ ಸಾಮಗ್ರಿಗಳೆಂದು ತಿಳಿದು ಭಯವೇನೂ ಇಲ್ಲವೆಂದು ತಿಳಿದು ಬ್ರಾಹ್ಮಣಜಾತಿಯ ಸಮೀಪಕ್ಕೆ ಬಂದು ನಿಂತುಕೊಂಡಿತು. ಹೀಗೆ ಯಜ್ಞವು ಸ್ವೇಚ್ಛೆಯಿಂದ ಬ್ರಾಹ್ಮಣಜಾತಿಯ ಸಮೀಪಕ್ಕೆ ಬಂದುದರಿಂದ ಆ ಕಾಲದಿಂದಲೂ ಬ್ರಾಹ್ಮಣಜಾತಿಯೇ ಯಜ್ಞಾದಿಗಳಲ್ಲಿ ಭಾಗವಹಿಸಿ ಋತ್ವಿಕ್ಕುಗಳಾಗಲು ಯೋಗ್ಯರೆಂದು ಯಜ್ಞಾನುಷ್ಠಾನಕುಶಲರು ನಿರ್ಧರಿಸಿದರು. ಅದರಂತೆ ಬ್ರಾಹ್ಮಣರೇ ಯಜ್ಞಾದಿಗಳನ್ನು ಮಾಡಲು ಮತ್ತು ಇತರರಿಗೆ ಮಾಡಿಸಲು ಅರ್ಹರೆಂಬ ನಿರ್ಣಯವು ನಿರ್ಧರಿಸಲ್ಪಟ್ಟಿತು.

ಅಥೈನತ್ಕ್ಷತ್ರಮನ್ವಾಗಚ್ಛತ್ತದಬ್ರವೀದುಪ ಮಾಸ್ಮಿನ್ಯಜ್ಞೇ ಹ್ವಯಸ್ವೇತಿ ತತ್ತಥೇತ್ಯಬ್ರವೀತ್ತದ್ವೈ ನಿಧಾಯ ಸ್ವಾನ್ಯಾಯುಧಾನಿ ಬ್ರಹ್ಮಣ ಏವಾಽಽಯುಧೈರ್ಬ್ರಹ್ಮಣೋ ರೂಪೇಣ ಬ್ರಹ್ಮ ಭೂತ್ವಾ ಯಜ್ಞಮುಪಾವರ್ತಸ್ವೇತಿ ತಥೇತಿ ತತ್ಕ್ಷತ್ರಂ ನಿಧಾಯ ಸ್ವಾನ್ಯಾಯುಧಾನಿ ಬ್ರಹ್ಮಣ ಏವಾಽಽಯುಧೈರ್ಬ್ರಹ್ಮಣೋ ರೂಪೇಣ ಬ್ರಹ್ಮ ಭೂತ್ವಾ ಯಜ್ಞಮುಪಾವರ್ತತ ತಸ್ಮಾದ್ಧಾಪ್ಯೇತರ್ಹಿ ಕ್ಷತ್ರಿಯೋ ಯಜಮಾನೋ ನಿಧಾಯೈವ ಸ್ವಾನ್ಯಾಯುಧಾನಿ ಬ್ರಹ್ಮಣ ಏವಾಽಽಯುಧೈರ್ಬ್ರಹ್ಮಣೋ ರೂಪೇಣ ಬ್ರಹ್ಮ ಭೂತ್ವಾ ಯಜ್ಞಮುಪಾವರ್ತತೇ ॥

ಅಥ ಕ್ಷತ್ರಿಯಸ್ಯ ಯಜ್ಞಪ್ರಾಪ್ತಿಂ ದರ್ಶಯತಿ—ಅಥ ಬ್ರಾಹ್ಮಣಸ್ಯ ಯಜ್ಞಪ್ರಾಪ್ತೇರನಂತರಮೇನದ್ಬ್ರಾಹ್ಮಣಜಾತಿಂ ಕ್ಷತ್ರಂ ಕ್ಷತ್ರಿಯಜಾತಿರನ್ವಾಗಚ್ಛತ್। ಆಗತ್ಯ ಚ ತದ್ಬ್ರಹ್ಮ ಪ್ರತ್ಯೇವಮಬ್ರವೀತ್ । ಹೇ ಬ್ರಾಹ್ಮಣ ಮಾ ಕ್ಷತ್ರಿಯಮಸ್ಮಿನ್ಯಜ್ಞ ಉಪಹ್ವಯಸ್ವಾನುಜಾನೀಹಿ ಮಾಮಾಹೂಯ ಯಜ್ಞೇನ ಸಂಯೋಜಯೇತ್ಯರ್ಥಃ। ತದುಕ್ತಂ ಕಾರ್ಯಂ ತಥೈವಾಸ್ತ್ವಿತಿ ಬ್ರಾಹ್ಮಣೋಽಬ್ರವೀತ್ । ಉಕ್ತ್ವಾ ಚ ಕ್ಷತ್ರಿಯಾಯೈವಂ ಬುದ್ಧಿಪ್ರದಾನಂ ಕೃತವಾನ್। ಹೇ ಕ್ಷತ್ರಿಯ ತದ್ವೈ ತಥಾ ಸತಿ ತವ ಯಜ್ಞಪ್ರಾಪ್ತ್ಯಾನಪೇಕ್ಷಾಯಾಂ ಸತ್ಯಾಂ ಸ್ವಕೀಯಾನಿ ಧನುರಾದೀನ್ಯಾಯುಧಾನಿ ಕ್ವಚಿತ್ಸ್ಥಾಪನೀಯಾನಿ । ತಾನ್ಯವಸ್ಥಾಪ್ಯ ಬ್ರಾಹ್ಮಣಸ್ಯೈವ ಯೋಗ್ಯೈಃ ಸ್ಫ್ಯಕಪಾಲಾದ್ಯಾಯುಧೈ ಬ್ರಾಹ್ಮಣಸ್ಯ ಯೋಗ್ಯೇನ ಶಾಂತಿಶ್ರದ್ಧಾಲುತ್ವಯುಕ್ತೇನ ರೂಪೇಣ ವೇಷೇಣ ಚ ಯುಕ್ತೋ ಬ್ರಹ್ಮ ಭೂತ್ವಾ ಬ್ರಾಹ್ಮಣಸದೃಶೋ ಭೂತ್ವಾ ಯಜ್ಞಂ ಪ್ರತ್ಯುಪಾವರ್ತಸ್ವೇತಿ । ತತ್ಕ್ಷತ್ರಂ ಸ ಚ ಕ್ಷತ್ರಿಯಸ್ತಥೇ—

**ಶ್ಯಂಗೀಕೃತ್ಯ ಸ್ವಕೀಯಾನಿ ಧನುರಾದೀನ್ಯಾಯುಧಾನಿ ಪರಿತ್ಯಜ್ಯ ಶಾಂತವೇಷೇಣ ಯಜ್ಞಂ ಪ್ರಾಪ್ತ-ವಾನ್ । ಯಸ್ಮಾದಾದಿಸೃಷ್ಟಾವೇವಂ ಸಂಪನ್ನಂ ತಸ್ಮಾದಿದಾನೀಮಪಿ ಕ್ಷತ್ರಿಯೋ ಬ್ರಾಹ್ಮಣವೇಷೇಣ ಧನುರಾದಿರಹಿತೇನ ಯಜ್ಞಮನುತಿಷ್ಠತಿ ॥**

ಈಗ ಕ್ಷತ್ರಿಯನಿಗೆ ಯಜ್ಞಮಾಡುವ ಅರ್ಹತೆಯು ಹೇಗುಂಟಾಯಿತೆಂಬುದನ್ನು ವಿವರಿಸುವರು—ಮೇಲೆ ಹೇಳಿದಂತೆ ಬ್ರಾಹ್ಮಣನು ಯಜ್ಞವನ್ನು ವಶಮಾಡಿಕೊಂಡನಂತರ ಕ್ಷತ್ರಿಯನು ಬ್ರಾಹ್ಮಣನನ್ನು ಅನುಸರಿಸಿ ಅವನ ಸಮೀಪಕ್ಕೆ ಬಂದು ಅವನನ್ನು ಕುರಿತು ಹೀಗೆ ಹೇಳಿದನು–ಎಲೈ ಬ್ರಾಹ್ಮಣನೇ ನನ್ನನ್ನೂ ಆಹ್ವಾನಮಾಡಿ ಈ ಯಜ್ಞದಲ್ಲಿ ನಾನೂ ಪಾತ್ರವಹಿಸಿ ಯಜ್ಞವನ್ನು ಮಾಡಲು ಅನುಕೂಲಪಡಿಸು ಎಂದು ಕೇಳಿಕೊಂಡನು. ಬ್ರಾಹ್ಮಣನು ಹಾಗೆಯೇ ಆಗಲೆಂದೊಪ್ಪಿ ಆ ಕ್ಷತ್ರಿಯನಿಗೆ ಯಜ್ಞಮಾಡುವುದರಲ್ಲಿ ಶ್ರದ್ಧೆಯನ್ನೂ ಬುದ್ಧಿಯನ್ನೂ ಅನುಗ್ರಹಿಸಿದನು. ಮತ್ತು ಕ್ಷತ್ರಿಯನಿಗೆ ಈ ರೀತಿ ಹೇಳಿದನು—ಎಲೈ ಕ್ಷತ್ರಿಯನೇ, ನಿನಗೆ ಯಜ್ಞಮಾಡಬೇಕೆಂಬ ಅಪೇಕ್ಷೆಯಿದ್ದಲ್ಲಿ ನಿನ್ನ ಸ್ವಕೀಯವಾದ ಧನುರ್ಬಾಣಾದ್ಯಾಯುಧಗಳನ್ನು ಎಲ್ಲಿಯಾದರೂ ಒಂದುಕಡೆ ಇಟ್ಟು ಬಾ. ಅನಂತರ ಬ್ರಾಹ್ಮಣಯೋಗ್ಯವಾದ ವೇಷಭೂಷಣಾದಿಗಳಿಂದ ಯುಕ್ತನಾಗಿ ಬ್ರಾಹ್ಮಣಯೋಗ್ಯವಾದ ಸ್ಫ್ಯಕಪಾಲಾದಿಯಜ್ಞಾಯುಧಗಳಿಂದಲೂ, ಶಾಂತಿ ಶ್ರದ್ಧಾ ದಯಾ ಮೊದಲಾದ ಗುಣಗಳಿಂದಲೂ ಯುಕ್ತನಾಗಿ ಬ್ರಾಹ್ಮಣನಂತೆ ವೇಷಭೂಷಾದಿಗಳನ್ನು ಧರಿಸಿ ಯಜ್ಞಮಾಡುವುದಕ್ಕಾಗಿ ಯಜ್ಞಭೂಮಿಗೆ ಹಿಂತಿರುಗಿ ಬಾ. ಹಾಗೆಯೇ ಆಗಲೆಂದು ಬ್ರಾಹ್ಮಣನ ವಾಕ್ಯವನ್ನಂಗೀಕರಿಸಿ ತನ್ನ ಧನುರ್ಬಾಣಾದಿಗಳನ್ನು ತ್ಯಜಿಸಿ ಸೌಮ್ಯವೇಷದಿಂದ ಯಜ್ಞಭೂಮಿಗೆ ಬಂದನು. ಆದುದರಿಂದ ಆ ಆದಿಸೃಷ್ಟಿಕಾಲದಿಂದಲೂ ಕ್ಷತ್ರಿಯನು ಧನುರಾದಿ ಆಯುಧಗಳನ್ನು ತ್ಯಜಿಸಿ ಸೌಮ್ಯವೇಷಧಾರಿಯಾಗಿ ಎಂದರೆ ಬ್ರಾಹ್ಮಣನಂತೆ ಯಜ್ಞಸಾಮಗ್ರಿ ಮೊದಲಾದ ಉಪಕರಣಗಳಿಂದ ಸಹಿತನಾಗಿ ಯಜ್ಞಮಾಡಲು ಯಜ್ಞಭೂಮಿಗೆ ಬರುವನು.

---

*English Translation*

**(The preliminary rites of Rajasuya sacrifice.)**
**(The relationship between the Brahma and Kshattra)**

After Prajapati had created the sacrifice, the Brahma (divineknowl-edge) and the Kshattra (soveregnty) were produced. After both two kinds of creatures sprang up, such ones as eat the sacrificial food, and such ones as do not eat it. All eaters of the sacrsificial food followed the Brahma, the non-eaters followed the Kshattra. Therefore the Brahmans only are eaters of the sacrificial food; whilst the Kshattriys, Vaisyas and Shudras do not eat it.

The sacrifice went away from both of them. The Brahma and Kahattra followed it. The Brahma followed with all its implements, of ihe Brahma are those required for performing a sacrifice. The implements

of the Kshattra are a horse, carriage, an armour, and a bow with arrow. The Kahattra not reaching the sacrifice, returned ; for frightened by the weapons of the Kshattra the sacrifice ran aside. The Brahma then followed the sacrifice, and reached it. Hemming thus the sacrifice in its further course, the Brahma stood still ; the sacrifice reached and hemmed in its course, stood still also, and recognising in the hand of the Brahma its own implements, returned to the Brahma. The sacrifice having thus remained only in the Brahma, it is therefore only placed among the Brahmans, i. e. they alone are allowed to perform it.

The Kshattra then ran after this Brahma, and said to it, "Allow me to take possession of this sacrifice which is placed in thee." The Brahma said, "Well, let it be so; lay down thy own weapons, assume by means of the implements of the Brahma, the sacrificial implements which constitute the Brahma, the form of the Brahma, and return to it!" The Kshattra obeyed, laid down its own weapons, assumed by means of the implements of the implements of ;he Brahma, which constitute the Brahma, its form and returned to it. Therefore even a Kshatriya, when he lays down his weapons, and the form of the Brahma by means of the sacrificial implements, returns to the sacrifice he is allowed a share in it.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಚತುಸ್ತ್ರಿಂಶಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂವತ್ತನಾಲ್ಕನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು



# ಅಥ ಚತುಸ್ತ್ರಿಂಶಾಧ್ಯಾಯೇ ದ್ವಿತೀಯಃ ಖಂಡಃ

## ಮೂವತ್ತನಾಲ್ಕನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

[ರಾಜಸೂಯಯಾಗವನ್ನು ಮಾಡುವುದಕ್ಕೆ ಸರಿಯಾದ ಸ್ಥಳವನ್ನು ನಿರ್ದೇಶಿಸಬೇಕೆಂದು ರಾಜರು ದೇವತೆಗಳನ್ನು ಕೇಳುವುದು]

———

ಅಥಾ ತೋ ದೇವಯಜನಸ್ಯೈವ ಯಾಚ್ಞಸ್ತದಾಹುರ್ಯದ್ಬ್ರಾಹ್ಮಣೋ ರಾಜನ್ಯೋ ವೈಶ್ಯೋ ದೀಕ್ಷಿಷ್ಯಮಾಣಃ ಕ್ಷತ್ರಿಯಂ ದೇವಯಜನಂ ಯಾಚತಿ ಕಂ ಕ್ಷತ್ರಿಯೋ ಯಾಚೇದಿತಿ ||

ಕ್ಷತ್ರಿಯಸ್ಯ ಯಜ್ಞಪ್ರಾಪ್ತಿಮುಕ್ತ್ವಾ ದೇವಯಜನಲಾಭಂ ವಕ್ತುಂ ಪ್ರಶ್ನಮುದ್ಭಾವಯತಿ- ಅಥ ಕ್ಷತ್ರಿಯಸ್ಯ ಯಜ್ಞೇಚ್ಛಾನಂತರಂ ಯತೋ ದೇವಯಜನಮುಪೇಕ್ಷಿತಮತಃ ಕಾರಣಾದ್ದೇವಯ- ಜನಸ್ಯೈವ ದೇವಾ ಇಜ್ಯಂತೇ ಯಸ್ಮಿನ್ದೇಶೇ ಸ ದೇವಯಜನಸ್ತಸ್ಯೈವ ಯಾಚ್ಞೋ ಯಾಚನಮಭಿ- ಧೀಯತ ಇತಿ ಶೇಷಃ ತತ್ತತ್ರ ದೇವಯಜನೇ ಬ್ರಹ್ಮವಾದಿನಃ ಪ್ರಶ್ನಮಾಹುಃ । ಯದ್ಯಸ್ಮಾತ್ಕಾರಣಾ- ದ್ಬ್ರಾಹ್ಮಣಾದಯಸ್ತ್ರಯೋ ವರ್ಣಾಃ ಕ್ಷತ್ರಿಯಮಭಿಷಿಕ್ತಂ ರಾಜಾನಂ ಪ್ರತಿ ದೇವಯಜನಂ ಯಾಚಂತಿ ತಸ್ಮಾದ್ರಾಜ್ಞೋಽಪಿ ದೇವಯಜನೋ ಯಾಚಿತವ್ಯಃ । ಕ್ಷತ್ರಿಯೋ ರಾಜಾ ಕಮನ್ಯಂ ಸ್ವಾಮಿನಂ ಯಾಚೇದಿತಿ ಪ್ರಶ್ನಃ ।

ಹಿಂದೆ ಕ್ಷತ್ರಿಯನು ಹೇಗೆ ಯಜ್ಞಮಾಡಬಹುದೆಂಬುದನ್ನು ವಿವರಿಸಿ ಈಗ ಆ ಕ್ಷತ್ರಿಯನು ಎಲ್ಲಿ ಯಜ್ಞಮಾಡ ಬಹುದೆಂಬ ವಿಷಯವನ್ನು ವಿವರಿಸುವರು. ಕ್ಷತ್ರಿಯನು ಯಜ್ಞವನ್ನು ಮಾಡಬೇಕೆಂಬ ಅವನ ಅಪೇಕ್ಷೆಯನ್ನು ತಿಳಿಸಿ ಈಗ ಎಲ್ಲಿ ದೇವತೆಗಳನ್ನು ಉದ್ದೇಶಿಸಿ ಯಜ್ಞಮಾಡಬೇಕು, ಹೇಗೆ ಮಾಡಬೇಕು ಎಂದು ಕ್ಷತ್ರಿಯನು ಯಾರನ್ನು ಪ್ರಾರ್ಥಿ ಸಬೇಕು ಎಂಬ ವಿಷಯವು ತಿಳಿಸಲ್ಪಡುವುದು. ದೇವಯಜನ (ದೇವತೆಗಳನ್ನು ಯಜ್ಞದಿಂದ ಆರಾಧಿಸುವ ಪ್ರದೇಶ) ಪ್ರದೇ ಶದ ವಿಷಯದಲ್ಲಿ ಬ್ರಹ್ಮವಾದಿಗಳು ಒಂದು ಪ್ರಶ್ನೆಯನ್ನು ಕೇಳುವರು-ಈಗ ಲೋಕವ್ಯವಹಾರದಲ್ಲಿ ಕಂಡುಬರುವಂತೆ ಬ್ರಾಹ್ಮ ಣನೇ ಮೊದಲಾದ ಮೂರು ವರ್ಣದವರು ಯಜ್ಞಮಾಡಬೇಕಾದರೆ, ಯಜ್ಞಮಾಡುವುದಕ್ಕೆ ಸರಿಯಾದ ಪ್ರದೇಶವನ್ನು ಕೊಡ ಬೇಕೆಂದು ದೇಶದಲ್ಲಿರುವ ಅಭಿಷಿಕ್ತನಾದ ರಾಜನನ್ನು ಪ್ರಾರ್ಥಿಸಿ ಅವನಿಂದ ಅನುಮತಿಯನ್ನು ಪಡೆಯುವರು. ಅದರಂತೆ ರಾಜನು ಆ ಯಜ್ಞಮಾಡುವ ಜನರಿಗೆ ದೇವಯಜನಪ್ರದೇಶವನ್ನು ನಿರ್ದೇಶಿಸಿ ಕೊಡುವನು. ಈ ಕ್ರಮವನ್ನನುಸರಿಸಿ ರಾಜನಾದವನೂ ಸಹ ಯಜ್ಞಮಾಡಬೇಕೆಂದು ಅಪೇಕ್ಷಿಸಿದಾಗ ದೇವಯಜನಪ್ರದೇಶಕ್ಕಾಗಿ ಯಾರನ್ನು ಯಾಚಿಸಬೇಕು ಎಂಬ ಪ್ರಶ್ನೆಯೂ ಉದ್ಭವಿಸುವುದು.

ದೈವಂ ಕ್ಷತ್ರಂ ಯಾಚೇದಿತ್ಯಾಹುರಾದಿತ್ಯೋ ವೈ ದೈವಂ ಕ್ಷತ್ರಮಾದಿತ್ಯ ಏಷಾಂ ಭೂತಾನಾಮಧಿಪತಿಃ ||

ತಸ್ಯೋತ್ತರಮಾಹ—ರಾಜ್ಞೋ ಮನುಜೇಷು ಮಧ್ಯೇ ಸ್ವಾಮ್ಯಂತರಾಭಾವೇಽಪಿ ದೇವ-ಸಂಬಂಧಿಕ್ಷತ್ರಿಯಜಾತೇಃ ಸ್ವಾಮಿತ್ವಾತ್ತತ್ರೈವ ಯಾಚನಮುಚಿತಮಿತ್ಯುತ್ತರಮಾಹುಃ । ಯೋಽಯಮಾದಿತ್ಯೋಽಸ್ತಿ ಅಸಾವೇವ ದೈವಂ ದೇವಸಂಬಂಧಿ ಕ್ಷತ್ರಂ ಕ್ಷತ್ರಿಯಜಾತಿರಯಮಾದಿತ್ಯ ಏಷಾಂ ಪ್ರಾಣಿನಾಂ ತಮೋನಿವಾರಣೇನಾಧಿಷ್ಠಾತಾ ಪಾಲಯಿತಾ । ತತಃ ಸ್ವಾಮಿತ್ವಾತ್ತತ್ಸಮೀಪೇ ಯಾಚನ-ಮುಚಿತಮ್ ॥

ಮೇಲಿನ ಪ್ರಶ್ನೆಗೆ ಉತ್ತರವನ್ನು ಹೇಳುವರು—ರಾಜನಾದವನು ಇತರ ಜನರಿಗೆಲ್ಲಾ ತಾನೇ ಸ್ವಾಮಿಯಾದುದರಿಂದ್ನ ಮನುಷ್ಯರಲ್ಲಿ ಯಾರನ್ನೂ ಪ್ರಾರ್ಥಿಸುವಂತಿಲ್ಲ. ಆದ್ದರಿಂದ ಮನುಷ್ಯಜಾತಿಯನ್ನು ಬಿಟ್ಟು ದೇವತೆಗಳಲ್ಲಿ ಮುಖ್ಯನಾದವನನು ಯಾಚಿಸಬೇಕು ಹೀಗೆ ಮಾಡುವುದೇ ಯುಕ್ತವು. ಅಂತಹವರು ಯಾರು ಎಂದರೆ—ದೇವತೆಗಳಲ್ಲಿ ಕ್ಷತ್ರಿಯಜಾತಿಗೆ ಸೇರಿ ಸರ್ವರಿಗೂ ಒಡೆಯನೂ, ಸಮಸ್ತ ಜನರಿಗೆ ಕತ್ತಲೆಯನ್ನು ನಿವಾರಣೆಮಾಡಿ ಪ್ರಕಾಶವನ್ನು ನೀಡುವವನೂ ಆದ ಆದಿತ್ಯನಿರುವ ನಷ್ಟೆ. ಈ ಆದಿತ್ಯನು ಎಲ್ಲರನ್ನೂ ಪಾಲಿಸುವನೂ ಆಗಿರುವನು. ಆದ್ದರಿಂದ ಮನುಷ್ಯರಲ್ಲಿ ರಾಜನಾದವನು ಯಜ್ಞಮಾಡು ವಾಗ ದೇವಯಜನ ಪ್ರದೇಶಕ್ಕಾಗಿ ಆದಿತ್ಯನನ್ನು ಪ್ರಾರ್ಥಿಸಬೇಕು.

ಸ ಯದಹರ್ದೀಕ್ಷಿಷ್ಯಮಾಣೋ ಭವತಿ ತದಹಃ ಪೂರ್ವಾಹ್ಣ ಏವೋ-ದ್ಯಂತಮಾದಿತ್ಯಮುಪತಿಷ್ಠೇತೇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿ-ರುತ್ತಮಂ । ದೇವಸವಿತರ್ದೇವಯಜನಂ ಮೇ ದೇಹಿ ದೇವ ಯಜ್ಯಾಯಾ ಇತಿ ದೇವಯಜನಂ ಯಾಚತಿ ॥

ತಸ್ಯ ಪ್ರಕಾರಂ ದರ್ಶಯತಿ—ಸ ರಾಜಾ ಯಸ್ಮಿನ್ನೇವಾಹನಿ ದೀಕ್ಷಿತುಮುದ್ಯುಕ್ತಸ್ತಸ್ಯಾಹ್ನಃ ಪೂರ್ವಾಹ್ಣಕಾಲ ಏವೋದ್ಯಂತಮೂರ್ಧ್ವಂ ಗಚ್ಛಂತಮಾದಿತ್ಯಮೃಗ್ಯಜುರ್ಭ್ಯಾಮುಪತಿಷ್ಠೇತ । ಇದಂ ಶ್ರೇಷ್ಠಮಿತ್ಯೃಚಃ ಪ್ರತೀಕಂ ದೇವ ಸವಿತರಿತ್ಯಾದಿಕಂ ಯಜುಷಃ । ಹೇ ದೇವ ಸವಿತರ್ದೇವಯಜ್ಯಾ-ಯೈ ದೇವಸಂಬಂಧಿಯಾಗಾರ್ಥಂ ಮೇ ಮಹ್ಯಂ ದೇವಯಜನಂ ದೇವೋಚಿತಯಾಗದೇಶಂ ದೇಹೀತ್ಯನೇನ ಪ್ರಕಾರೇಣ ದೇಶಂ ಯಾಚೇತ್ । ಋಚೋಪಸ್ಥಾನಂ ಯಜುಷಾ ಯಾಚನಮಿತಿ ವ್ಯವಸ್ಥಯಾ ದ್ರಷ್ಟವ್ಯಮ್ ॥

ಕ್ಷತ್ರಿಯನು ದೇವಯಜನಪ್ರದೇಶಕ್ಕಾಗಿ ಆದಿತ್ಯನನ್ನು ಪ್ರಾರ್ಥಿಸುವ ವಿಧಾನವನ್ನು ತಿಳಿಸುವರು. ಯಜ್ಞಮಾಡ ಬೇಕೆಂದು ಬಯಸುವ ರಾಜನು ದೀಕ್ಷೆಯನ್ನು ಕೈಗೊಳ್ಳುವುದಕ್ಕೆ ಪೂರ್ವಭಾವಿಯಾಗಿ ಮೊದಲದಿವಸ ಪ್ರಾತಃಕಾಲದಲ್ಲಿ ಉದ ಯಿಸುತ್ತಿರುವ ಸೂರ್ಯನ (ಆದಿತ್ಯ) ಅಭಿಮುಖವಾಗಿ ನಿಂತು ಋಕ್ಕು ಮತ್ತು ಯಜುರ್ವೇದ ಮಂತ್ರಗಳಿಂದ ಆದಿತ್ಯನನ್ನು ಸ್ತುತಿಸಿ ಪ್ರಾರ್ಥಿಸಬೇಕು. ಇಲ್ಲಿ **ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರುತ್ತಮಂ** (ಋ. ಸಂ. ೧೦-೧೭೦-೩) ಎಂಬುವ ಋಕ್ಕು ಇಲ್ಲಿ ಉಪಯೋಗಿಸಬೇಕಾದ ಋಗ್ವೇದಮಂತ್ರವು; **ದೇವಸವಿತಃ** ಎಂಬುದು ಯಜುರ್ವೇದಮಂತ್ರವು ಎಲೈ ಸವಿತೃದೇವನೇ, ದೇವತೆಗಳನ್ನು ಉದ್ದೇಶಿಸಿ ಯಜ್ಞಮಾಡುವುದಕ್ಕಾಗಿ ದೇವಯಜನಪ್ರದೇಶವನ್ನು (ಯಜ್ಞಮಾಡಲು ಶುದ್ಧವಾದ ಮತ್ತು ಯೋಗ್ಯವಾದ ಪ್ರದೇಶವನ್ನು ದಯಪಾಲಿಸು ಎಂದು ಯಾಚಿಸಬೇಕು. ಇಲ್ಲಿ ಮೇಲೆ ಹೇಳಿದ **ಇದಂ**

ಶ್ರೇಷ್ಠಂ ಎಂಬ ಋಗ್ವೇದಮಂತ್ರದಿಂದ ಆದಿತ್ಯನನ್ನು ಸ್ತುತಿಸಬೇಕು. ದೇವ ಸವಿತಃ ಎಂಬ ಯಜುರ್ವೇದಮಂತ್ರದಿಂದ ದೇವಯಜನಪ್ರದೇಶವನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿಕೊಳ್ಳಬೇಕು.

ಸ ಯತ್ತತ್ರ ಯಾಚಿತ ಉತ್ತರಾಂ ಸರ್ಪೇತ್ಯೋಂ ತಥಾ ದದಾಮೀತಿ ಹೈವ ತದಾಹ ॥

ರಾಜ್ಞಾ ಯಾಚಿತಸ್ಯಾಽದಿತ್ಯಸ್ಯ ಪ್ರತ್ಯುತ್ತರಂ ಸಂಪಾದಯತಿ—ಆದಿತ್ಯೋ ಯದ್ಯದಿ ತತ್ರ ತದಾನೀಮನೇನ ರಾಜ್ಞಾ ಯಾಚಿತಃ ಸನ್ನುತ್ತರಾಂ ತತ್ರ ಸ್ವಯಂ ತಿಷ್ಠತಿ ತಸ್ಮಾದನಂತರ ಭಾವಿನೀಂ ದಿಶಂ ಪ್ರತಿ ಸರ್ಪತಿ ಗಚ್ಛೇತ್ತದಾನೀಂ ತತ್ತೇನ ಸರ್ಪಣೇನೋಂ ತಥಾ ದದಾಮೀತ್ಯೇವಮುತ್ತರಮಾಹ ಬ್ರೂತೇ । ಲೋಕೇಽಪಿ ಪೃಷ್ಟಃ ಪುರುಷೋ ವಾಚಾ ವಾ ಹಸ್ತಶಿರಶ್ಚಾಲನಾದ್ವಿ (ದಿ) ನಾ ವೋತ್ತರಂ ಪ್ರಯಚ್ಛತಿ ತದ್ವದತ್ರಾಪಿ ಸರ್ಪಣಮೇವೋತ್ತರಮುಪ್ತು । ಸರ್ಪಣಸ್ಯಾಭಿಪ್ರಾಯ ಓಂ ತಥಾ ದದಾಮಿ-ತ್ಯನೇನ ಕಥಿತಃ ॥ ಓಂ ತ್ವದುಕ್ತಮಂಗೀಕರೋಮಿ ತಥಾ ತೇನೈವ ಪ್ರಕಾರೇಣ ದೇವಯಜನಂ ದದಾಮಿ ।

ದೇವಯಜನ ಪ್ರದೇಶ ವಿಷಯದಲ್ಲಿ ಸವಿತೃದೇವನು ರಾಜನಿಗೆ ಪ್ರತ್ಯುತ್ತರವನ್ನು ಅನುಗ್ರಹಿಸುವುದು—ಯಜ್ಞ ಮಾಡುವ ರಾಜನು ಆದಿತ್ಯನಿಂದ ದೇವಯಜನ ಪ್ರದೇಶವನ್ನು ಪ್ರಾರ್ಥಿಸಿದನಂತರ ಆದಿತ್ಯನು ಅಂತರಿಕ್ಷದಲ್ಲಿ ಉತ್ತರಾಭಿ ಮುಖವಾಗಿ ಮುಂದೆ ಸರಿಯುವುದರ ಮೂಲಕ ತನ್ನ ಸಮ್ಮತಿಯನ್ನು ಸೂಚಿಸುವನು. ಲೋಕದಲ್ಲಿ ಯಾರಾದರೂ ಮತ್ತೊಬ್ಬ ರನ್ನು ಒಂದು ವಿಷಯವಾಗಿ ಪ್ರಾರ್ಥಿಸಿದಾಗ ಅವನು ಸಮ್ಮತಿಯನ್ನು ಸೂಚಿಸಲು ಹಾಗೇ ಆಗಲಿ ಎಂದು ಬಾಯಿಂದ ಹೇಳುವುದಕ್ಕೆ ಬದಲಾಗಿ ಸಮ್ಮತಿ ಸೂಚಕವಾಗಿ ತಲೆಯನ್ನು ಅಲ್ಲಾಡಿಸುವಂತೆ—ಆದರಂತೆ ಆದಿತ್ಯನು ತನ್ನ ಸ್ಥಳದಿಂದ ಕದಲಿ ಮುಂದೆ ಹೋಗುವುದರಿಂದ ಆ ಸರ್ಪಣವೇ (ಓಂ ತಥಾ—ಹಾಗೆಯೇ ಆಗಲಿ) ಸಮ್ಮತಿಸೂಚಕವೆಂದು ಭಾವಿಸಬೇಕು. ಸರ್ಪಣದ ಅಭಿಪ್ರಾಯವು ಓಂ ತಥಾ ದದಾಮಿ ಎಂದಾಗುವುದು. ಎಂದರೆ ನಿನ್ನ ಪ್ರಾರ್ಥನೆಯನ್ನಂಗೀಕರಿಸಿ ಹಾಗೆ ಆಗಲೆಂದೊಪ್ಪಿ ದೇವಯಜನ ಪ್ರದೇಶವನ್ನು ನಿನಗೆ (ರಾಜನಿಗೆ) ಅನುಗ್ರಹಿಸಿರುವೆನು ಎಂದರ್ಥವಾಗುವುದು.

ತಸ್ಯ ಹ ನ ಕಾಚನ ರಿಷ್ಟಿರ್ಭವತಿ ದೇವೇನ ಸವಿತ್ರಾ ಪ್ರಸೂತಸ್ಯೋತ್ತ-ರೋತ್ತರಿಣೀಂ ಹ ಶ್ರಿಯಮಶ್ನುತೇಽಶ್ನುತೇ ಹ ಪ್ರಜಾನಾಮೈಶ್ವ-ರ್ಯಮಾಧಿಪತ್ಯಂ ಯ ಏವಮುಪಸ್ಥಾಯ ಯಾಚಿತ್ವಾ ದೇವಯ-ಜನಮಧ್ಯವಸಾಯ ದೀಕ್ಷತೇ ಕ್ಷತ್ರಿಯಃ ಸನ್ ॥

ತಾಮೇತಾಂ ದೇವಯಜನಯಾಜ್ಞಾಂ ಪ್ರಶಂಸತಿ—ಯಃ ಪುಮಾನ್ ಕ್ಷತ್ರಿಯಃ ಸ್ವಯಂ ರಾಜಾ ಸನ್ನೇವಮ್ಯ ಚಾದಿತ್ಯಮುಪಸ್ಥಾಯ ಯಜುಷಾ ಯಾಚಿತ್ವಾ ತತೋ ದೇವಯಜನಂ ನಿಶ್ಚಿತ್ಯ ದೀಕ್ಷತೇ ದೀಕ್ಷಾಂ ಪ್ರಾಪ್ನೋತಿ ತಸ್ಯ ರಾಜ್ಞಃ ಸವಿತ್ರಾ ದೇವೇನ ಪ್ರಸೂತಸ್ಯಾನುಜ್ಞಾತಸ್ಯ ರಿಷ್ಟಿರ್ಹಿಂಸ ಕಾಚನ ಕಾಚಿದಪಿ ನ ಭವತಿ । ನ ಕೇವಲಂ ಹಿಂಸಾರಾಹಿತ್ಯಂ ಕಿಂತೂತ್ತರೋತ್ತರಿಣೀಂ ದಿನೇ ದಿನೇ ವರ್ಧಮಾನಾಂ ಶ್ರಿಯಮಶ್ನುತೇ ಪ್ರಾಪ್ನೋತಿ । ಕಿಂಚ ಪ್ರಜಾನಾಂ ಸರ್ವಾಸಾಮೈಶ್ವರ್ಯಮೀಶ್ವರತ್ವಂ

ನಿಯಮನಸಾಮರ್ಥ್ಯಮಾಧಿಪತ್ಯಮಧಿಷ್ಠಾಯ ಪಾಲಯಿತೃತ್ವಂ ತತ್ತದ್ಯೋಗಕ್ಷೇಮಸಂಪಾದನ-ಮಶ್ನುತೇ ಪ್ರಾಪ್ನೋತಿ ॥

ದೇವಯಜನಪ್ರದೇಶಕ್ಕಾಗಿ ರಾಜನು ಮಾಡುವ ಪ್ರಾರ್ಥನೆಯನ್ನು ಪ್ರಶಂಸಿಸುವರು—ಮೇಲೆ ಹೇಳಿದಂತೆ ಕ್ಷತ್ರಿಯನಾದ ಯಾವ ರಾಜನು ಋಗ್ವೇದಮಂತ್ರದಿಂದ ಆದಿತ್ಯನನ್ನು ಸ್ತುತಿಸಿ ಯಜುರ್ವೇದ ಮಂತ್ರದಿಂದ ದೇವಯಜನಪ್ರದೇಶಕ್ಕಾಗಿ ಯಾಚಿಸಿ ಅನಂತರ ದೀಕ್ಷಾವಿಧಿಯನ್ನು ಕೈಗೊಂಡು ಮುಂದಿನ ಕಾರ್ಯಕಲಾಪಗಳಲ್ಲಿ ಪ್ರವೃತ್ತನಾಗುವನೋ ಆ ರಾಜನಿಗೆ ಸವಿತೃದೇವನ ಅನುಜ್ಞೆಯಂತೆ ಯಾವ ವಿಧವಾದ ಹಿಂಸೆ ಅಥವಾ ವಿಘ್ನಗಳೂ ಉಂಟಾಗುವುದಿಲ್ಲ. ಇಷ್ಟೇ ಅಲ್ಲ ಆ ರಾಜನಿಗೆ ಮುಂದೆ ದಿನದಿನಕ್ಕೂ ಶ್ರೇಯೋಭಿವೃದ್ಧಿಯುಂಟಾಗುವುದು. ಮತ್ತು ಆ ರಾಜನು ಸಮಸ್ತ ಪ್ರಜೆಗಳಿಗೂ ಸ್ವಾಮಿಯಾಗಿ ರಾಜ್ಯಭಾರವಾಡುವುದರಲ್ಲಿ ತಕ್ಕ ಸಾಮರ್ಥ್ಯವನ್ನು ಪಡೆದು ರಾಜ್ಯಾಧಿಪತ್ಯದಲ್ಲಿ ಪ್ರತಿಷ್ಠಿತನಾಗಿ (ನೆಲಸಿ) ತನ್ನ ಪ್ರಜೆಗಳನ್ನು ಚೆನ್ನಾಗಿ ಪಾಲಿಸುತ್ತಾ ಅವರ ಯೋಗಕ್ಷೇಮವನ್ನು ಗಮನಿಸುತ್ತಾ ಅವರ ಪ್ರೀತ್ಯಭಿಮಾನಗಳಿಗೆ ಪಾತ್ರನಾಗಿ ಸುಖದಿಂದ ಬಾಳುವನು.

---

*English Translation*

**(On the place of worshipping the gods asked for by the King at the Rajasuya).**

Then the king is to be requeste l to worship the gods. They ask, If a Brahmau, Kshattriya, or Vaisya who is to be initiated into the sacrificia rites, requests the king to grant a place for the worship of the gods, who must the king himself request to do so? He must request the divine Khasttra. Thus they say. This divine Kshattre is Aditya the sun; for he is the ruler of all these beings. On the day on which the king is to be consecrated, in the forenoon, he must post himself towards the rising sun, and say, This is among the lights the best light! (R gve la 10, 1. 70, 3.) O god Savitar, grant me a place for the worship of gods" By these words he asks for a place of worship. When Aditya requested in this way, goes northwards, saying, yes, it may be so, I grant it," then nobody will do any harm to such a king, who is permitted (by Savitar to do so).

The fortune of a king who is consecrated in such a way by having secured the place of divine worship previously by the recital of the verse

(mentioned above) and by addressing that request (to Savitar), will increase from day to day; and sovereign power over his subjects will remrin with him.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಚತುಸ್ತ್ರಿಂಶಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತನಾಲ್ಕನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು.



## ಅಥ ಚತುಸ್ತ್ರಿಂಶಾಧ್ಯಾಯೇ ತೃತೀಯಃ ಖಂಡಃ

### ಮೂವತ್ತನಾಲ್ಕನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

[ ಇಷ್ಟಾಪೂರ್ತ ಅಪರಿಜ್ಯಾನಿಃ ಎಂಬ ಆಹುತಿವಿಶೇಷಗಳು ]

---

**ಅಥಾತ ಇಷ್ಟಾಪೂರ್ತಸ್ಯಾಪರಿಜ್ಯಾನಿಃ ಕ್ಷತ್ರಿಯಸ್ಯ ಯಜಮಾನಸ್ಯ ಸ ಪುರಸ್ತಾದ್ದೀಕ್ಷಾಯಾ ಆಹುತಿಂ ಜುಹುಯಾಚ್ಚತುರ್ಗೃಹೀತಮಾಜ್ಯಮಾಹವನೀಯ ಇಷ್ಟಾಪೂರ್ತಸ್ಯಾಪರಿಜ್ಯಾನ್ಯೈ ॥**

ತಸ್ಯೈವ ಕ್ಷತ್ರಿಯಸ್ಯ ಹೋಮಂ ವಿಧತ್ತೇ—ಅಥ ದೇವಯಜನನಿಶ್ಚಯಾನಂತರಂ ಯಸ್ಮಾದನುಷ್ಠೇಯಸ್ಯೇಷ್ಟಾಪೂರ್ತಸ್ಯಾಪರಿಜ್ಯಾನಿರ್ವಿನಾಶಾಭಾವೋಽಪೇಕ್ಷಿತಃ । ಅತಃ ಕಾರಣಾದ್ಯಜಮಾನಸ್ಯ ಕ್ಷತ್ರಿಯಸ್ಯ ರಾಜ್ಞ ಇಷ್ಟಾಪೂರ್ತಾಪರಿಜ್ಯಾನಿಸಂಜ್ಞಕೋ ಹೋಮೋಽಭಿಧೀಯತ ಇತಿ ಶೇಷಃ ಇಷ್ಟಾಪೂರ್ತಶಬ್ದಾರ್ಥಃ ಪೂರ್ವಾಚಾರ್ಯೈರ್ದರ್ಶಿತಃ ॥

> ವರ್ಣಾಶ್ರಮಾನ್ವಯೀ ಧರ್ಮ 'ಇಷ್ಟಂ ಪೂರ್ತಮಥೇತರತ್ ।
> ಪ್ರಪಾತಟಾಕಾದಿರೂಪಂ ತಚ್ಚ ಸರ್ವತ್ರ ದೃಶ್ಯತೇ ॥
> ಸ್ಮಾರ್ತಂ ಪೂರ್ತಂ ಶ್ರೌತಮಿಷ್ಟಮಿತಿ ಕೇಚಿದಿಹೋಚಿರೇ ' ॥ ಇತಿ ॥

ಸ ರಾಜಾ ದೀಕ್ಷಾಯಾಃ ಪೂರ್ವಮಾಹುತಿಂ ಜುಹುಯಾತ್ । ಚತುರ್ಗೃಹೀತಮಾಜ್ಯಂ ದ್ರವ್ಯಮಾಹವನೀಯೋ ಹೋಮಸ್ಥಾನಮನುಷ್ಠೇಯಸ್ಯೇಷ್ಟಾಪೂರ್ತಸ್ಯ ಫಲಪರ್ಯವಸಾಯಿತ್ವಲಕ್ಷಣೋ ವಿನಾಶಾಭಾವಃ ಪ್ರಯೋಜನಮ್ ॥

ಕ್ಷತ್ರಿಯನು ಆಚರಿಸಬೇಕಾದ ಹೋಮವಿಧಾನವನ್ನು ವಿವರಿಸುವರು—ದೇವಯಜನಪ್ರದೇಶವನ್ನು (ಯಜ್ಞಭೂಮಿಯನ್ನು) ನಿರ್ಧರಿಸಿದನಂತರ ಮುಂದೆ ಮಾಡಬೇಕಾದ ಇಷ್ಟಾಪೂರ್ತಾಪರಿಜ್ಯಾನಿ ಎಂಬ ಹೆಸರಿನ ಹೋಮವನ್ನು ಮಾಡಬೇಕಾ

ಗಿರುವುದು. ಅದಕ್ಕೆ ಎಂದರೆ ರಾಜನು ಮಾಡುವ ಯಜ್ಞಕ್ಕೆ ಯಾವ ಹಾನಿಯೂ ತಟ್ಟದಂತೆ ಈ ಇಷ್ಟಾಪೂರ್ತಾಪರಿಜ್ಯಾನಿ ಯೆಂಬ ಹೋಮವನ್ನು ಮಾಡುವುದು ಅವಶ್ಯವು. ಈ ಇಷ್ಟಾಪೂರ್ತವೆಂದರೇನೆಂಬುದನ್ನು ಪೂರ್ವಾಚಾರ್ಯರು ಈರೀತಿ ವಿವರಿಸಿರುವರು—

ವರ್ಣಾಶ್ರಮಾಣಾಂ ಸ್ವಯಿಾ ಧರ್ಮ ಇಷ್ಟಂ ಪೂರ್ವಮಥೇತರತ್
ಪ್ರಪಾತಟಾಕಾದಿರೂಪಂ ತಚ್ಚ ಸರ್ವತ್ರ ದೃಶ್ಯತೇ ॥
ಸ್ಮಾರ್ತಂ ಪೂರ್ತಂ ಶ್ರೌತಮಿಷ್ಟಮಿತಿ ಕೇಚಿದಿಹೋಚಿರೇ ॥

ಇಷ್ಟಾಪೂರ್ತಶಬ್ದಕ್ಕೆ ಕೆಲವರು ಈರೀತಿ ಅರ್ಥವನ್ನು ಹೇಳಿರುವರು—ಇಷ್ಟವೆಂದರೆ ವರ್ಣಾಶ್ರಮಕ್ಕೆ ಯೋಗ್ಯವಾದ ಎಂದರೆ ಆಯಾವರ್ಣಾಶ್ರಮದವರು ಮಾಡಬೇಕಾದ ಕರ್ತವ್ಯಕರ್ಮಕ್ಕೆ ಇಷ್ಟವೆಂದು ಹೆಸರು. ಪೂರ್ತಂ ಎಂದರೆ ಜನೋಪ ಯೋಗವಾದ ಇತರ ಕಾರ್ಯಗಳು ಇಲ್ಲಿ ಗೃಹಸ್ಥನಾದವನೂ ರಾಜನೂ ಮಾಡಬೇಕಾದ ಜನೋಪಯೋಗವಾದ ಕರ್ತವ್ಯ ಕರ್ಮವೆಂದರೆ, ಕೊಳ, ಕಟ್ಟೆ, ಕೆರೆ, ತೋಪು ಮೊದಲಾದ ಪುಣ್ಯ ಕೆಲಸಗಳನ್ನು ಮಾಡುವುದು ಎಂದರ್ಥವಾಗುವುದು. ಮತ್ತೆ ಕೆಲವರು ಇಷ್ಟಾಪೂರ್ತಶಬ್ದಕ್ಕೆ ಪ್ರಕಾರಾಂತವಾಗಿ ಅರ್ಥ ಹೇಳುವರು. ಅದರ ಪ್ರಕಾರ ಇಷ್ಟಂ ಎಂದರೆ ಇಷ್ಟಿ ಮೊದಲಾದ ಶ್ರೌತಕರ್ಮಗಳು, ಪೂರ್ತಂ ಎಂದರೆ ಸ್ಮೃತಿವಿಹಿತ ಕರ್ಮಗಳು ಎಂದರೆ ಶ್ರುತಿಸ್ಮೃತಿಗಳು ವಿಧಿಸಿರುವ ಪುಣ್ಯ ಕರ್ಮಗಳು ಎಂದಭಿಪ್ರಾಯವು. ಯಾವ ರಾಜನು ಯಜ್ಞದೀಕ್ಷೆಯನ್ನು ಕೈಗೊಳ್ಳುವುದಕ್ಕೆ ಪೂರ್ವಭಾವಿಯಾಗಿ ಈ ಇಷ್ಟಾಪೂರ್ತಾಪರಿ ಜ್ಯಾನಿಯೆಂಬ ಹೋಮವನ್ನು ಮಾಡುವನೋ ಅವನ ಯಜ್ಞವು ನಿರ್ವಿಘ್ನವಾಗಿ ನೆರವೇರುವುದು. ಈ ಹೋಮವನ್ನು ಮಾಡುವಾಗ ದ್ರವ್ಯವು ಯಾವುದೆಂದರೆ ಚತುರ್ಗೃಹೀತ (ನಾಲ್ಕಾವರ್ತಿ ಅವದಾನಮಾಡಿ ತೆಗೆದುಕೊಳ್ಳುವ) ಆಜ್ಯವು; ಹೋಮಸ್ಥಾನ—ಆಹವನೀಯಾಗ್ನಿ; ಹೋಮದ ಹೆಸರು—ಇಷ್ಟಾಪೂರ್ತಾಪರಿಜ್ಯಾನಿ; ಪ್ರಯೋಜನ—ನಿರ್ವಿಘ್ನವಾಗಿ ಫಲವನ್ನು ಪಡೆಯುವುದು.

ಪುನರ್ನ ಇಂದ್ರೋ ಮಘವಾ ದದಾತು ಬ್ರಹ್ಮ ಪುನರಿಷ್ಟಂ ಪೂರ್ತಂ ದಾತ್ಸ್ವಾಹೇತಿ ॥

ಹೋಮೇ ಮಂತ್ರಂ ದರ್ಶಯತಿ—ಪುನರ್ನ ಇತ್ಯಾದಿಕಮೃಚಃ ಪ್ರತೀಕಂ ಬ್ರಹ್ಮೇತ್ಯಾದಿಕಂ ಯಜುಃ । ಬ್ರಹ್ಮ ವೇದರೂಪೋ ಮಂತ್ರ ಇಷ್ಟಂ ಪೂರ್ತಂ ಯಥೋಕ್ತಲಕ್ಷಣಂ ಪುನರ್ದಾತ್, ಭೂಯೋ ಭೂಯೋ ದದಾತು । ತದರ್ಥಮಿದಂ ಸ್ವಾಹಾ ಹುತಮಸ್ತು ॥

ಹೋಮಮಂತ್ರವನ್ನು ತಿಳಿಸುವರು—ಪುನರ್ನ ಇಂದ್ರ ಎಂದು ಮೊದಲಾದ ಋಕ್ಕುಗಳು ಋಗ್ವೇದ ಮಂತ್ರಗಳು ಬ್ರಹ್ಮ ಎಂದು ಮೊದಲಾದವು ಯಜುರ್ವೇದ ಮಂತ್ರವು. ವೇದರೂಪವಾದ ಈ ಮಂತ್ರಗಳು ನಮ್ಮ ಇಷ್ಟ (ಅಭೀಷ್ಟ) ವನ್ನು ಮತ್ತೆ ಮತ್ತೆ ಪೂರೈಸಲಿ ಎಂದು ಅರ್ಥವಿರುವ ಈ ಮಂತ್ರವನ್ನು ಸ್ವಾಹಾಕಾರಪೂರ್ವಕವಾಗಿ ಹೋಮ ಮಾಡಬೇಕು.

ಅಥಾನೂಬಂಧ್ಯಾಯೈ ಸಮಿಷ್ಟಯಜುಷಾಮುಪರಿಷ್ಟಾತ್ಪುನರ್ನೋ ಅಗ್ನಿರ್ಜಾತವೇದಾ ದದಾತು । ಕ್ಷತ್ರಂ ಪುನರಿಷ್ಟಂ ಪೂರ್ತಂ ದಾತ್ಸ್ವಾಹೇತಿ ॥

ದೀಕ್ಷಣೀಯೇಷ್ಟೇಃ ಪೂರ್ವಕಾಲೀನಂ ಹೋಮಂ ವಿಧಾಯಾನುಬಂಧ್ಯಾಖ್ಯಪಶೋರುತ್ತರಕಾಲೀನಂ ಹೋಮಂ ವಿಧತ್ತೇ—ಅಥ ಪ್ರಾಚೀನಹೋಮಕಥನಾನಂತರಮುಚ್ಯತ ಇತಿ ಶೇಷಃ । ಅನುಬಂಧ್ಯಾಯಾ ಅನುಬಂಧ್ಯಾಖ್ಯಪಶೋಃ ಸಂಬಂಧೀನಿ ಯಾನಿ ತ್ರೀಣಿ ಸಮಿಷ್ಟಯಜೂಂಷಿ ಸಂತಿ ತೇಷಾಮುಪರಿಷ್ಟಾಜ್ಜುಹುಯಾದಿತಿ ಶೇಷಃ । ಪುನರ್ನ ಇಂದ್ರ ಇತ್ಯೃಚಃ ಪ್ರತೀಕಮ್ । ಇಯಂ ಪೂರ್ವೋಕ್ತಾ ಚೇತ್ಯೃಗ್ದ್ವಯಂ ಶಾಖಾಂತರಗತಮ್ । ಕ್ಷತ್ರಂ ಕ್ಷತ್ರಿಯಜಾತಿರಿಷ್ಟಂ ಪೂರ್ತಂ ಚ ಪುನರ್ದಾತ್ ಭೂಯೋ ದದಾತು ತದರ್ಥಂ ಸ್ವಾಹುತಮಿದಮಸ್ತು ॥

ದೀಕ್ಷಣೀಯೇಷ್ಟಿಗೆ ಪೂರ್ವಭಾವಿಯಾಗಿ ಮಾಡಬೇಕಾದ ಹೋಮವಿಧಾನವನ್ನು ಹೇಳಿ ಈಗ ಅನುಬಂಧ್ಯವೆಂಬ ಉತ್ತರಕಾಲೀನವಿಧಾನವನ್ನು ವಿವರಿಸುವರು—ಅನುಬಂಧ್ಯ ಎಂಬ ಪಶುವಿನ ಸಂಬಂಧನಾವ ಮೂರು ಸಮಿಷ್ಟಯಜುರ್ಮಂತ್ರಗಳನ್ನು ಉತ್ತರಕಾಲೀನಹೋಮವನ್ನಾಗಿ ಮಾಡಬೇಕು. ಇಲ್ಲಿ ಪುನರ್ನ ಇಂದ್ರಃ ಎಂಬುದನ್ನು ಋಗ್ವೇದಮಂತ್ರಪ್ರತೀಕವಾಗಿ ಹೋಮವನಾಡಬೇಕು. ಈ ಮಂತ್ರದ್ವಯವು ಋಗ್ವೇದದಲ್ಲಿಲ್ಲ. ಕ್ಷತ್ರಿಯಜಾತಿಗೆ ಇಷ್ಟವಾದ ಫಲವನ್ನು ಮತ್ತೆ ಅನುಗ್ರಹಿಸಲಿ ಎಂದು ಸ್ವಾಹಾಕಾರಪೂರ್ವಕವಾಗಿ ಹೋಮಮಾಡಬೇಕು.

ಸೈಷೇಷ್ಟಾಪೂರ್ತಸ್ಯಾಪರಿಜ್ಯಾನಿಃ ಕ್ಷತ್ರಿಯಸ್ಯ ಯಜಮಾನಸ್ಯ ಯದೇತೇ ಆಹುತೀ ತಸ್ಮಾದೇತೇ ಹೋತವ್ಯೇ ॥

ಪೂರ್ವೋತ್ತರಕಾಲೀನಮಾಹುತಿದ್ವಯಂ ಪ್ರಶಂಸತಿ—ಯೋಽಯಂ ಕ್ಷತ್ರಿಯೋ ರಾಜಾ ಯಜಮಾನಸ್ತಸ್ಯೈತೇ ಪೂರ್ವೋತ್ತರಕಾಲೀನೇ ಆಹುತೀ ವಿದ್ಯೇತೇ । ಸೈಷಾಽಹುತಿಕ್ರಿಯೇಷ್ಟಸ್ಯ ಪೂರ್ತಸ್ಯ ಚಾಪರಿಜ್ಯಾನಿರವಿನಾಶಹೇತುಸ್ತಸ್ಮಾತ್ ಕಾರಣಾದೇತೇ ಉಭೇ ಆಹುತೀ ಹೋತವ್ಯೇ ॥

ಪೂರ್ವೋತ್ತರಕಾಲೀನ ಎಂದರೆ ಮೊದಲು ಮತ್ತು ಕೊನೆಯಲ್ಲಿ ಮಾಡುವ ಹೋಮದ್ವಯಗಳನ್ನು ಪ್ರಶಂಸೆಮಾಡುವರು—ಯಜ್ಞಮಾಡುವ ಕ್ಷತ್ರಿಯನಾದ ರಾಜನು ಈ ಎರಡು (ಮೊದಲು ಮತ್ತು ಕೊನೆ) ಆಹುತಿಗಳನ್ನು ಅವಶ್ಯಕವಾಗಿ ಹೋಮಮಾಡಬೇಕು. ಈ ಎರಡು ಆಹುತಿಗಳೂ ಇಷ್ಟಾಪೂರ್ತ ಮತ್ತು ವಿಘ್ನವಿನಾಶಕಾರಕಗಳಾದದರಿಂದ ಈ ಎರಡು ಆಹುತಿಗಳನ್ನು ಹೋಮಮಾಡಬೇಕು.

---

*English Translation*

**(The Ishtapurta aparijyani offerings)**

Then the burnt off-ring called the Ishtapurta aparijani is to be performed by the king who brings the sacrifice. The king should perform this cermoney before he receives the sacrificial inauguration (diksha). (When performing it) he throws four spoonfulls of melted butter in the Ahavaniya fire, saying, " to the preservation of the Ishtapurta ! May Indra the mighty

give us again (recompensate us for what we have sacrificed). May the Brahma give us again full compensation for what has been sacrificed ".

Then after having recited the Samishta Yajhs mantras which are required when binding the sacrificial animal to the pillar; he repeats the words, " May Agni Jatavedas, recompensate us ! May the Kshattra give us full compensation for what we have sacrificed, Svaha. " These two Ahutis are the Ishtapurta aparijyani for a princely person when bringing a sacrifice. Therefore both are to be offered.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೆ
ಐತರೇಯಬ್ರಾಹ್ಮಣಭಾಷ್ಯಸ್ಯ ಚತುಸ್ತ್ರಿಂಶಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂವತ್ತ ನಾಲ್ಕನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು
ಸಮಾಪ್ತವಾದುದು

## ಅಥ ಚತುಸ್ತ್ರಿಂಶಾಧ್ಯಾಯೇ ಚತುರ್ಥಃ ಖಂಡಃ

ಮೂವತ್ತನಾಲ್ಕನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು.

[ ಅಜೀತಪುನರ್ವಣ್ಯ ಎಂಬ ಆಹುತಿಗಳ ಸ್ವರೂಪವು ]

---

ತದು ಹ ಸ್ಮಾಹ ಸೌಜಾತ ಆರಾಳ್ಹಿರಜೀತಪುನರ್ವಣ್ಯಂ ವಾ ಏತದ್ಯದೇತೇ
ಆಹುತೀ ಇತಿ ಯಥಾ ಹ ಕಾಮಯೇತ ತಥೈತೇ ಕುರ್ಯಾದ್ಯ
ಇತೋಽನುಶಾಸನಂ ಕುರ್ಯಾದಿತೀಮೇ ತ್ವೇವ ಜುಹುಯಾತ್ ||

ಅಥ ಪ್ರಕಾರಾಂತರೇಣಾಹುತಿದ್ವಯಂ ವಿಧತ್ತೇ—ತದು ಹ ಇತ್ಯಾದಿನಾ ಪೂರ್ವೋಕ್ತಹೋಮಾನು-
ಷ್ಠಾನೇ ಸೌಜಾತನಾಮಕಃ ಕಶ್ಚಿದೃಷಿಃ ಸ ಚಾಽಽರಾಳ್ಹನಾಮಕಸ್ಯ ಪುತ್ರ ಏವಮುವಾಚ | ಕಥಮಿತಿ
ತದುಚ್ಯತೇ | ಏತೇ ವಕ್ಷ್ಯಮಾಣೇ ಆಹುತೀ ಇತಿ ಯದಸ್ತಿ ತದೇತದಜೀತಪುನರ್ವಣ್ಯಂ ವೈ ನಷ್ಟ-
ಮಪ್ರಾಪ್ತಂ ವಾ ಯದ್ವಸ್ತು ತದೇತದಜೀತಂ ತಸ್ಯ ಪುನರಪಿ ವನಸಾಧನಂ ಪ್ರಾಪ್ತಿಕಾರಣಮಜೀತ-
ಪುನರ್ವಣ್ಯಂ ವಕ್ಷ್ಯಮಾಣಮಾಹುತಿದ್ವಯಮೇತನ್ನಾಮಕಮಿತ್ಯರ್ಥಃ | ಇತಿ ಯದೇತತ್ಸೌಜಾತಸ್ಯ
ಮತಂ ತದೇವ ಯಥೇತ್ಯಾದಿನಾ ಪ್ರಶಸ್ಯತೇ | ಯಃ ಪುಮಾನಿತಃ ಸೌಜಾತವಾಕ್ಯಾದನುಶಾಸನ-

**ಮುಪದಿಷ್ಟಮನುಷ್ಠಾನಂ ಕುರ್ಯಾತ್ಸ ಪುಮಾನ್ಯಥಾ ಯೇನೈವ ಪ್ರಕಾರೇಣ ಕಾಮಯೇತ ತಥಾ ತೇನೈವ ಪ್ರಕಾರೇಣ ಸಿದ್ಧಂ ಫಲಮುದ್ದಿಶ್ಯೈತೇ ಕುರ್ಯಾತ್। ಏತದನುಷ್ಠಾನೇನ ಕಾಮ್ಯಮಾನಂ ಫಲಂ ಸಿಧ್ಯತಿ। ತಸ್ಮಾತ್ಕಾರಣಾದಿಮೇ ಏವಾಹುತೀ ಜುಹುಯಾನ್ನತು ಪೂರ್ವೇ ॥**

ಮೇಲೆ ಹೇಳಿದ ಎರಡು ಆಹುತಿಗಳನ್ನು ಬೇರೆ ವಿಧವಾಗಿ ವರ್ಣಿಸುವರು—ಮೇಲೆ ಹೇಳಿದ ಆಹುತಿಗಳ ವಿಷಯವಾಗಿ ಆರಾಳ್ಹ ಎಂಬ ಒಬ್ಬ ಋಷಿಯ ಪುತ್ರನಾದ ಸೌಜಾತ ಎಂಬ ಋಷಿಯು ಹೀಗೆ ಹೇಳಿರುವನು—ಮೇಲೆ **ಇಷ್ಟಾಪೂರ್ತಾ-ಪರಿಜ್ಯಾನಿಃ** ಎಂಬ ಎರಡು ಆಹುತಿಗಳನ್ನು ರಾಜನಾದವನು ದೀಕ್ಷಣೀಯೇಷ್ಟಿಗೆ ಪೂರ್ವಭಾವಿಯಾಗಿ ಹೋಮಮಾಡ ಬೇಕೆಂದು ಹೇಳಿದೆಯಷ್ಟೆ. ಈ ಆಹುತಿಗಳಿಗೆ **ಅಜೀತಪುನರ್ವಣ್ಯಂ** ಎಂದು ಕೆಲವರು ಹೇಳುವರು. ಎಂದರೆ ನಷ್ಟವಾದ (ಕಳೆದು ಹೋದ) ವಸ್ತುವನ್ನು ಮತ್ತೆ ಪಡೆಯುವುದು ಎಂದು ಈ ಶಬ್ದದ ಅರ್ಥವು. ಮುಂದೆ ಹೇಳುವ ಎರಡು ಆಹುತಿಗಳಿಗೆ ಈ ಹೆಸರಿರುವುದು. ಇದನ್ನು ಯಾರ ಸೌಜಾತನು ತನ್ನ ತಂದೆ ತನಗೆ ಉಪದೇಶಿಸಲ್ಪಟ್ಟ ರೀತಿಯಲ್ಲಿ ಹೋಮಾನುಷ್ಠಾನವನ್ನು ಮಾಡುವನೋ ಅವನು ತನಗೆ ಬೇಕಾದ ಇಷ್ಟವು ಸಿದ್ಧಿಸುವಂತೆ ಉದ್ದೇಶಿಸಿ ಅದಕ್ಕೆ ಅನುಸಾರವಾಗಿ ಹೋಮಮಾಡಬೇಕು. ಹೀಗೆ ಮಾಡಿದರೆ ಆ ಪುರುಷನು ಯಾವ ರೀತಿ ಅಪೇಕ್ಷಿಸುವನೋ ಅದೇ ರೀತಿಯಾದ ಫಲವನ್ನು (ಅಭೀಷ್ಟವನ್ನು) ಪಡೆಯುವನು. ಆದ್ದರಿಂದ ಈಗ ಹೇಳುವ ಆಹುತಿಗಳನ್ನು ಹೋಮಮಾಡಬೇಕು. ಹಿಂದೆ ಹೇಳಿದವುಗಳನ್ನಲ್ಲ.

ಬ್ರಹ್ಮ ಪ್ರಪದ್ಯೇ ಬ್ರಹ್ಮ ಮಾ ಕ್ಷತ್ರಾದ್ಗೋಪಾಯತು ಬ್ರಹ್ಮಣೇ ಸ್ವಾಹೇತಿ ತತ್ತದಿತೀ ३ ॥

**ತತ್ರ ದೀಕ್ಷಣೀಯೇಷ್ಟೇಃ ಪ್ರಾಚೀನಹೋಮಮಂತ್ರಂ ದರ್ಶಯತಿ—ಬ್ರಹ್ಮ ಬ್ರಾಹ್ಮಣ ಜಾತಿಂ ಪ್ರಪದ್ಯೇ ರಕ್ಷಕತಯಾ ಪ್ರಾಪ್ನೋಮಿ। ಬ್ರಹ್ಮ ಸಾ ಬ್ರಾಹ್ಮಣಜಾತಿರ್ಮಾಂ ಕ್ಷತ್ರಾತ್ಕ್ಷತ್ರಿಯ ಜಾತೇರ್ಗೋಪಾಯತು ಪಾಲಯತು। ಬ್ರಾಹ್ಮಣೇ ಬ್ರಾಹ್ಮಣಜಾತಯೇ ಸ್ವಾಹುತಮಿದಮಸ್ತು। ಅನೇನ ಮಂತ್ರೇಣಾಹವನೀಯೇ ಚತುರ್ಗೃಹೀತಮಾಜ್ಯಂ ಜುಹುಯಾತ್ ॥**

**ಅಸ್ಯಾಹುತೇಃ ಪೂಜ್ಯತಾಂ ದರ್ಶಯತಿ—ಸರ್ವೇಽಪಿ ಯಾಜ್ಞಿಕಾಃ ಪೂಜ್ಯಹೋಮಪ್ರಸಂಗೇ ತದಾ ತದಾ ತತ್ತದಿತ್ಯೇವಮೇತದೇವಾನುಷ್ಠಾನಮುದಾಹರಂತಿ। ಪೂಜಾರ್ಥಾ ಸಾನುನಾಸಿಕಾ ಪ್ಲುತಿಃ ॥**

ದೀಕ್ಷಣೀಯೇಷ್ಟಿಗೆ ಪೂರ್ವಭಾವಿಯಾಗಿ ಮಾಡಬೇಕಾದ ಹೋಮಮಂತ್ರವನ್ನು ತಿಳಿಸುವರು—ನಾನು (ಹೋಮ ಮಾಡುವ ರಾಜನು) ಬ್ರಾಹ್ಮಣ ಜಾತಿಯನ್ನು ಪಡೆಯುತ್ತೇನೆ. ಬ್ರಾಹ್ಮಣ ಜಾತಿಯೂ ಸಹ ಕ್ಷತ್ರಿಯ ಜಾತಿಯಿಂದ ಕಾಪಾಡಲಿ. ಇಂತಹ ಬ್ರಾಹ್ಮಣ ಜಾತಿಗೆ (ಸ್ವಾಹಾಕಾರಪೂರ್ವಕವಾಗಿ) ಆಹುತಿಯನ್ನರ್ಪಿಸುತ್ತೇನೆ. ಎಂಬರ್ಥವುಳ್ಳ ಈ ಮಂತ್ರದಿಂದ ನಾಲ್ಕಾವರ್ತಿ ಅವದಾನಪೂರ್ವಕವಾಗಿ ತೆಗೆದುಕೊಂಡ (ಚತುರ್ಗೃಹೀತ) ಆಜ್ಯದಿಂದ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಈ ಆಹುತಿಯು ಬಹಳ ಪೂಜ್ಯಾರ್ಹವಾದುದರಿಂದ ಹೋಮಮಾಡುವ ಕಾಲದಲ್ಲಿ ಇದನ್ನು ಎಲ್ಲರೂ ಗೌರವಿಸುವರು. ಈ ಮಂತ್ರದ ಗೌರವಕ್ಕಾಗಿ ३ ಪ್ಲುತಿಯಿಂದ ನಿರ್ದೇಶಿಸಿರುವರು.

ಬ್ರಹ್ಮ ವಾ ಏಷ ಪ್ರಪದ್ಯತೇ ಯೋ ಯಜ್ಞಂ ಪ್ರಪದ್ಯತೇ ಬ್ರಹ್ಮ ವೈ ಯಜ್ಞೋ ಯಜ್ಞಾದು ಹ ವಾ ಏಷ ಪುನರ್ಜಾಯತೇ ಯೋ

**ದೀಕ್ಷತೇ ತಂ ಬ್ರಹ್ಮ ಪ್ರಪನ್ನಂ ಕ್ಷತ್ರಂ ನ ಪರಿಜಿನಾತಿ ಬ್ರಹ್ಮ ಮಾ ಕ್ಷತ್ರಾದ್ಗೋಪಾಯತ್ವಿತ್ಯಾಹ ಯಥೈನಂ ಬ್ರಹ್ಮ ಕ್ಷತ್ರಾದ್ಗೋಪಾಯೇ-ದ್ಬ್ರಹ್ಮಣೇ ಸ್ವಾಹೇತಿ ತದೇನತ್ಪ್ರೀಣಾತಿ ತದೇನತ್ಪ್ರೀತಂ ಕ್ಷತ್ರಾದ್ಗೋಪಾಯತಿ ||**

ಅಥ ಮಂತ್ರತಾತ್ಪರ್ಯಂ ದರ್ಶಯತಿ—ಯಃ ಪುಮಾನ್ಯಜ್ಞಂ ಪ್ರಪದ್ಯತೇ ಪ್ರಾರಭತ ಏಷ ಪುಮಾನ್ ಬ್ರಹ್ಮ ವೈ ಬ್ರಾಹ್ಮಣಜಾತಿಮೇವ ಪ್ರಾರಭತೇ | ಬ್ರಹ್ಮ ವೈ ಬ್ರಾಹ್ಮಣಜಾತಿರೇವ ಯಜ್ಞ-ಸ್ತಯಾ ಜಾತ್ಯಾ ಸಾಧ್ಯತ್ವಾತ್ ಏವಂ ಸತಿ ಯಃ ಪುಮಾನ್ ದೀಕ್ಷತೇ ದೀಕ್ಷಾಂ ಪ್ರಾಪ್ನೋತಿ ಏಷ ಪುಮಾನ್ ಪೂರ್ವಂ ಜಾತೋಽಪಿ ಯಜ್ಞಾದು ಹ ವಾ ಅನುಷ್ಠೀಯಮಾನಾದ್ಯಜ್ಞಾದೇವ ಪುನರಪಿ ಜಾಯತೇ | ಬ್ರಹ್ಮ ಪ್ರಪನ್ನಂ ಯಜ್ಞೋಪಕ್ರಮೇಣ ಯಜ್ಞರೂಪಬ್ರಾಹ್ಮಣಜಾತಿಂ ಪ್ರಪನ್ನಂ ತಂ ಯಜಮಾನಂ ಕ್ಷತ್ರಂ ಕ್ಷತ್ರಿಯಜಾತಿಂ ಪರಿಜಿನಾತಿ ನೈವ ಹಿನಸ್ತಿ | ಏತಾವತಾ ಬ್ರಹ್ಮ ಪ್ರಪದ್ಯ ಇತ್ಯಸ್ಯ ಮಂತ್ರಪಾದಸ್ಯ ತಾತ್ಪರ್ಯಂ ದರ್ಶಯತಿ | ಯಸ್ತು ಮಧ್ಯಮೋ ಮಂತ್ರಭಾಗೋ ಬ್ರಹ್ಮ ಮಾಕ್ಷತ್ರಾ-ದ್ಗೋಪಾಯತ್ವಿತ್ಯೇವಂ ಬ್ರೂತೇ ತಸ್ಮಿನ್ ಭಾಗೇ ಬ್ರಾಹ್ಮಣಜಾತಿರೇನಂ ಯಜಮಾನಂ ಕ್ಷತ್ರಿಯಜಾತೇ-ರ್ಯಥಾ ಗೋಪಾಯೇದ್ರಕ್ಷೇತ್ತಥಾ ಸ ಮಧ್ಯಮಭಾಗೋ ಬ್ರೂತೇ| ಬ್ರಹ್ಮಣೇ ಸ್ವಾಹೇತ್ಯೇತಾದೃಶೋ ಯಸ್ತೃತೀಯಭಾಗಸ್ತತ್ತೇನ ಭಾಗೇನ ಬ್ರಹ್ಮಂ ಬ್ರಾಹ್ಮಣಜಾತಿಂ ಪ್ರೀಣಾತಿ ತರ್ಪಯತಿ | ತದೇತ-ದ್ಬ್ರಹ ಪ್ರೀತಂ ಸದ್ಯಜಮಾನಂ ಕ್ಷತ್ರಿಯಜಾತೇರ್ಗೋಪಾಯತಿ ರಕ್ಷತಿ ||

ಈ ಮಂತ್ರದ ಅಭಿಪ್ರಾಯವನ್ನು ತಿಳಿಸುವರು—ಯಾವ ಪುರುಷನು ಯಜ್ಞವನ್ನು ಮಾಡಲು ಪ್ರಾರಂಭಿಸುವನೋ ಅವನು ಬ್ರಾಹ್ಮಣಜಾತಿಯಿಂದಲೇ ಯಜ್ಞವನ್ನು ಪ್ರಾರಂಭಿಸುತ್ತಾನೆ. ಏಕೆಂದರೆ ಬ್ರಾಹ್ಮಣಜಾತಿಯಿಂದ ಮಾತ್ರ ಯಜ್ಞ ಮಾಡಲು ಸಾಧ್ಯವು. ಹೀಗಿರುವಾಗ ಯಜ್ಞಕ್ಕಾಗಿ ದೀಕ್ಷೆಯನ್ನು ಕೈಗೊಳ್ಳುವ ಪುರುಷನು ಮೊದಲು ಬೇರೆ ಜಾತಿಯಲ್ಲಿ ಹುಟ್ಟಿದ್ದರೂ ಈಗ ಮಾಡುವ ಯಜ್ಞಾನುಷ್ಠಾನದಿಂದ (ದೀಕ್ಷಾಬದ್ಧನಾದುದರಿಂದ) ಪುನಃ ಬ್ರಾಹ್ಮಣನೆಂದೇ ಪರಿಗಣಿಸಲ್ಪಟ್ಟು ಪುನರ್ಜನ್ಮವನ್ನು ಪಡೆಯುತ್ತಾನೆ. ಯಜ್ಞವನ್ನು ಮಾಡಲು ಪ್ರಾರಂಭಿಸಿ ಯಜ್ಞಾನುಷ್ಠಾನವನ್ನು ಮಾಡುತ್ತಿರುವ ಆ ಕ್ಷತ್ರಿಯ ಯಜಮಾನನನ್ನು ಕ್ಷತ್ರಿಯಜಾತಿಯು ಹಿಂಸಿಸಲು ಅಥವಾ ಅವನಿಗೆ ತೊಂದರೆಯನ್ನುಂಟುಮಾಡಲು ಸಾಧ್ಯವಾಗುವುದಿಲ್ಲ. ಬ್ರಹ್ಮ ಪ್ರಪದ್ಯೇ ಎಂಬ ಮಂತ್ರಭಾಗದ ಅರ್ಥವನ್ನು ವಿಶದಪಡಿಸುವರು. ಕ್ಷತ್ರಿಯನಿಂದ ಬ್ರಾಹ್ಮಣನನ್ನು ರಕ್ಷಿಸಿ ಕಾಪಾಡುವೆನು ಎಂದು ಹೇಳುವಂತೆ ಈ ಮಂತ್ರದ ಭಾಗವಾದ ಬ್ರಹ್ಮಮಾ ಕ್ಷತ್ರಾದ್ಗೋಪಾಯತು ಎಂಬ ಮಧ್ಯ ಭಾಗದ ವಾಕ್ಯವು ಈರೀತಿ ಹೇಳುವುದು. ಬ್ರಾಹ್ಮಣನಾದ ನನ್ನನ್ನು ಕ್ಷತ್ರಿಯನಿಂದ ಕಾಪಾಡು ಎಂದು ಬ್ರಾಹ್ಮಣನು ಪ್ರಾರ್ಥಿಸುವನು. ಮಂತ್ರವೂ ಅದರಂತೆ ಕ್ಷತ್ರಿಯನಿಂದ ನಿನ್ನನ್ನು (ಬ್ರಾಹ್ಮಣನನ್ನು) ಕಾಪಾಡುವೆನು ಎಂದು ಮಂತ್ರವು ಹೇಳುವುದು. ಮೂರನೆಯ ಮತ್ತು ಕೊನೆಯಭಾಗವಾದ ಮಂತ್ರವಾಕ್ಯವು ಬ್ರಹ್ಮಣೇ ಸ್ವಾಹಾ ಎಂದಿರುವುದು. ಎಂದರೆ ಈ ಮಂತ್ರ ಭಾಗವು ಬ್ರಹ್ಮನನ್ನು (ಬ್ರಾಹ್ಮಣಜಾತಿಯನ್ನು) ತೃಪ್ತಿಪಡಿಸುವುದು. ಪ್ರೀತವಾದ (ಸಂತುಷ್ಟವಾದ) ಬ್ರಹ್ಮವು ಅಥವಾ ಬ್ರಾಹ್ಮಣಜಾತಿಯು ಯಜ್ಞಮಾಡುವ (ಕ್ಷತ್ರಿಯ) ಯಜಮಾನನನ್ನು ಕ್ಷತ್ರಿಯಜಾತಿಯಿಂದ ರಕ್ಷಿಸುವುದು.

## ಅಥಾನೂಬಂಧ್ಯಾಯೈ ಸಮಿಷ್ಟಯಜುಷಾಮುಪರಿಷ್ಟಾತ್

**ಪೂರ್ವಕಾಲೀನಂ ಹೋಮಂ ವಿಧಾಯೋತ್ತರಕಾಲೀನಂ ಹೋಮಂ ವಿಧತ್ತೇ— ಪೂರ್ವವದ್ವ್ಯಾಖ್ಯೇಯಮ್ ॥**

ದೀಕ್ಷಣೀಯೇಷ್ಟಿಗೆ ಪೂರ್ವಭಾವಿಯಾದ ಮೊದಲನೇ ಆಹುತಿಯನ್ನು ವಿವರಿಸಿ ಈಗ ಉತ್ತರಕಾಲೀನವಾದ ಎಂದರೆ ಕೊನೆಯ ಹೋಮವನ್ನು ವಿವರಿಸುವರು—ಈ ಎರಡನೇ ಹೋಮಕ್ಕಾಗಿ ಅನುಬಂಧ್ಯ ಎಂಬ ಪಶುವಿನ ಸಂಬಂಧವಾದ ಮೂರು ಸಮಿಷ್ಟಯಜುರ್ಮಂತ್ರಗಳನ್ನು ಉತ್ತರಕಾಲೀನಹೋಮವನ್ನಾಗಿ ಆಚರಿಸಬೇಕು. ಇತರ ವಿಷಯಗಳೆಲ್ಲವೂ ಹಿಂದಿನಂತೆ (ಹಿಂದಿನ ಖಂಡದಲ್ಲಿ ಹೇಳಿರುವಂತೆ)

**ಕ್ಷತ್ರಂ ಪ್ರಪದ್ಯೇ ಕ್ಷತ್ರಂ ಮಾ ಬ್ರಹ್ಮಣೋ ಗೋಪಾಯತು ಕ್ಷತ್ರಾಯ ಸ್ವಾಹೇತಿ ತತ್ತದಿತೀಶ್ಂ ಕ್ಷತ್ರಂ ವಾ ಏಷ ಪ್ರತಿಪದ್ಯತೇ ಯೋ ರಾಷ್ಟ್ರಂ ಪ್ರಪದ್ಯತೇ ಕ್ಷತ್ರಂ ಹಿ ರಾಷ್ಟ್ರಂ ತಂ ಕ್ಷತ್ರಂ ಪ್ರಪನ್ನಂ ಬ್ರಹ್ಮ ನ ಪರಿಜಿನಾತಿ ಕ್ಷತ್ರಂ ಮಾ ಬ್ರಹ್ಮಣೋ ಗೋಪಾಯತ್ವಿತ್ಯಾಹ ಯಥೈನಂ ಕ್ಷತ್ರಂ ಬ್ರಹ್ಮಣೋ ಗೋಪಾಯೇತ್ಕ್ಷತ್ರಾಯ ಸ್ವಾಹೇತಿ ತದೇತತ್ಪ್ರೀಣಾತಿ ತದೇನತ್ಪ್ರೀತಂ ಬ್ರಹ್ಮಣೋ ಗೋಪಾಯತಿ॥**

**ತಸ್ಮಿನ್ಹೋಮೇ ಮಂತ್ರಂ ತದೀಯತಾತ್ಪರ್ಯಂ ಚ ದರ್ಶಯತಿ— ಪಾಲನೀಯೋ ದೇಶೋ ರಾಷ್ಟ್ರಂ ತಚ್ಚ ಕ್ಷತ್ರಿಯೇಣ ಪಾಲನೀಯತ್ವಾತ್ ಕ್ಷತ್ರಸ್ವರೂಪಮ್ । ಅನ್ಯತ್ಸರ್ವಂ ಬ್ರಹ್ಮವಾಕ್ಯವತ್ ವ್ಯಾಖ್ಯೇಯಮ್ ॥**

ಈ ಉತ್ತರಕಾಲೀನಹೋಮದ ಮಂತ್ರವನ್ನೂ ಅದರ ಅರ್ಥವನ್ನೂ ವಿವರಿಸುವರು—

ಈ ಮಂತ್ರದ (ಮೇಲಿನ) ಅರ್ಥವು-ಕ್ಷತ್ರಿಯ ಯಜಮಾನನಾದ ನಾನು ಕ್ಷತ್ರಿಯನಾಗಿದ್ದೇನೆ (ಪುನಃ ಕ್ಷತ್ರಿಯ ಜಾತಿಯವನಾಗಿದ್ದೇನೆ) ಈ ಕ್ಷತ್ರಿಯನಾದ ನನ್ನನ್ನು ಬ್ರಾಹ್ಮಣಜಾತಿಯು ಕಾಪಾಡಲಿ. ಎಂಬರ್ಥವಿರುವ ಮೇಲಿನ ಮಂತ್ರವನ್ನು ಉಚ್ಚರಿಸಿ ಸ್ವಾಹಾಕಾರಪೂರ್ವಕವಾಗಿ ಆಹುತಿಯನ್ನರ್ಪಿಸಬೇಕು. ಹಿಂದಿನಂತೆ ಮಂತ್ರದ ಪೂಜ್ಯತೆಯನ್ನು ತೋರಿಸುವುದಕ್ಕಾಗಿ ೩ ಎಂಬ ಪ್ಲುತವನ್ನು ಇಲ್ಲಿ ಉಪಯೋಗಿಸಲಾಗಿದೆ. ಯಾವ ಪುರುಷನು ರಾಷ್ಟ್ರ ಸ್ವರೂಪವಾದ ಕ್ಷತ್ರಿಯ ಧರ್ಮವನ್ನು ಪಾಲಿಸುವನು. ಅಂತಹ ಕ್ಷತ್ರಿಯ ಧರ್ಮವನ್ನು ನಾನು ಹೊಂದಿರುವೆನು. ಇಂತಹ ಕ್ಷತ್ರಿಯನಾದ ನನ್ನನ್ನು ಬ್ರಾಹ್ಮಣಜಾತಿಯು ಹಿಂಸಿಸದೆ (ತೊಂದರೆಯನ್ನುಂಟುಮಾಡದೆ) ಕಾಪಾಡಲಿ ಎಂದು ಹಿಂದೆ ಹೇಳಿದಂತೆ ಕ್ಷತ್ರಾಯ ಸ್ವಾಹಾ ಎಂದು ಸ್ವಾಹಾಕಾರಪೂರ್ವಕವಾಗಿ ಹೋಮಮಾಡಬೇಕು. ಇದರಿಂದ ಕ್ಷತ್ರಿಯತ್ವವು ಸುಪ್ರೀತವಾಗಿ ಬ್ರಾಹ್ಮಣ ಜಾತಿಯಿಂದ ಕ್ಷತ್ರಿಯನನ್ನು ಸಂರಕ್ಷಿಸುವುದು ಎಂದಭಿಪ್ರಾಯವು.

[ಇಲ್ಲಿ ಸ್ವಲ್ಪ ವಿವರಣೆಯು ಅವಶ್ಯಕವು—ಬ್ರಾಹ್ಮಣನನ್ನು ಕ್ಷತ್ರಿಯನಿಂದಲೂ ಕ್ಷತ್ರಿಯನನ್ನು ಬ್ರಾಹ್ಮಣನಿಂದಲೂ ರಕ್ಷಿಸಬೇಕೆಂದು ಹೇಳಿದೆಯಷ್ಟೆ, ಬ್ರಾಹ್ಮಣನಿಗೆ ಮಂತ್ರಶಕ್ತಿಯ ಸಾಮರ್ಥ್ಯವಿರುವುದು. ಈ ಶಕ್ತಿಯಿಂದ ಇತರರಿಗೆ

ಒಳ್ಳೆಯದನ್ನಾಗಲೀ, ಕೆಡುಕನ್ನಾಗಲೀ ಮಾಡುವ ಸಾಮರ್ಥ್ಯವಿರುವುದು. ಕ್ಷತ್ರಿಯನಾದ ರಾಜನಿಗೆ ರಾಜ್ಯಾಧಿಕಾರವಿರುವುದರಿಂದ ಅವನು ರಾಜ್ಯದಲ್ಲಿರುವ ಯಾವ ಜಾತಿಯ ಪ್ರಜೆಗಾದರೂ ಉಪಕಾರವನ್ನಾಗಲಿ, ಕೆಡುಕನ್ನಾಗಲಿ ಮಾಡಬಹುದು. ಆದ್ದರಿಂದ ಬ್ರಾಹ್ಮಣನಿಗೂ ಕ್ಷತ್ರಿಯನಿಗೂ ಕಾರಣಾಂತರದಿಂದ ವೈಮನಸ್ಯ ಉಂಟಾದರೆ ಬ್ರಾಹ್ಮಣನು ಕ್ಷತ್ರಿಯನಿಗೂ, ಕ್ಷತ್ರಿಯನು ಬ್ರಾಹ್ಮಣನಿಗೂ ಕೆಡುಕನ್ನುಂಟುಮಾಡಬಹುದು ಪರಸ್ಪರ ರಕ್ಷಣೆಯನ್ನೂ ಮಾಡಬಹುದು. ಆದ್ದರಿಂದ ಒಂದು ಜಾತಿಯಿಂದ ಮತ್ತೊಂದು ಜಾತಿಗೆ ಅನಿಷ್ಟವು ಸಂಭವಿಸದಂತೆ ಯಜ್ಞಾರಂಭದಲ್ಲಿ ಪ್ರಾರ್ಥಿಸಿ ಅದು ನೆರವೇರುವುದಕ್ಕಾಗಿ ಆಹುತಿಯನ್ನರ್ಪಿಸಲಾಗಿದೆ ಎಂದು ತಿಳಿಯಬೇಕು.]

**ಸೈಷೇಷ್ಟಾಪೂರ್ತಸ್ಯೈವಾಪರಿಜ್ಯಾನಿಃ ಕ್ಷತ್ರಿಯಸ್ಯ ಯಜಮಾನಸ್ಯ ಯದೇತೇ ಆಹುತೀ ತಸ್ಮಾದೇತೇ ಏವ ಹೋತವ್ಯೇ ॥**

**ತದೇತದಾಹುತಿದ್ವಯಂ ಪ್ರಶಂಸತಿ-ಪೂರ್ವೋಕ್ತಾಹುತಿದ್ವಯವಿಷಯವಾಕ್ಯವತ್ ವ್ಯಾಖ್ಯೇಯಮ್ । ಏವಕಾರಃ ಪೂರ್ವೋಕ್ತಾಹುತಿದ್ವಯವ್ಯಾವೃತ್ತ್ಯರ್ಥಃ । ಏತದೇವ ಸೌಜಾತಾಖ್ಯಸ್ಯ ಮಹರ್ಷೇರ್ಮತಂ ಪ್ರಶಸ್ತಮ್ ॥**

ಈ ಆಹುತಿದ್ವಯಗಳನ್ನು ಪ್ರಶಂಸೆಮಾಡುವರು-ಯಜ್ಞಮಾಡುವ ಕ್ಷತ್ರಿಯನಾದ ಯಜಮಾನನು ದೀಕ್ಷಣೀಯೇಷ್ಟಿಗೆ ಪೂರ್ವಭಾವಿಯಾಗಿ ಮಾಡುವ ಮೇಲೆ ಹೇಳಿದ ಆಹುತಿಗಳನ್ನು ಅವಶ್ಯಕವಾಗಿ ಹೋಮಮಾಡಬೇಕು. ಇಷ್ಟಾಪೂರ್ತಿ ಮತ್ತು ವಿಘ್ನವಿನಾಶಕ್ಕಾಗಿ ಈ ಎರಡು ಆಹುತಿಗಳನ್ನು ಹೋಮಮಾಡುವುದು ಅವಶ್ಯಕವು. ಈಗ ಹೇಳಿದುದೆಲ್ಲವೂ ಸೌಜಾತ ಮಹರ್ಷಿಯ ಮತವು. ಇದು ಪ್ರಶಸ್ತವೆಂದು ಪರಿಗಣಿಸಲ್ಪಟ್ಟಿರುವುದು.

---

*English Translation*

**(The Ajitapunarvanya offerings.)**

Sujata, the son of Arahla said, that is optional for the king to perform (besides the ceremony mentioned in 21) the two invocation offerings called Ajitapunarranya. He may bring them if he like to do so. He who following the advice of Sujata, brings these two invocation offerings, shall say, "I turn towards the Brahma, may it protect me from the Kshattra, Svaha to the Brahma!" "This, this is certainly the case"; thus say the sacrificial ptiests (when this mantra is spoken by the king.) The meaning of this formula is He who turns towards the sacrifice, turns towards the Brahma; for the sacrifice is the Brahma; he who undergoes the inauguration ceremony, is born again from the sacrifice. He who has turned towards the the Brahma, the Kshattra does not forsake. He says, "May the Brahma

protect me from the Kshattra," that is the Brahma should protect him from the Kshattra (which is persecuting him). By the words, Svaha to the Brahma ! he pleases the Brahma ; and if pleased, it protects him from the Kshattra. Then after the recital of the Samishta Yajus mantras, required for binding the sacrificial animal to the pillar, he repeats, "I turn towards the Kshattra, may it protect me from the Brahma, Svaha to the Kshattra." This, is certainly the case ; thus they say. He who turns towards the royal power (to assume it again) turns towards the Kshattra. For the Kshattra is the royal power. When he has reached the Kshattra, the Brahma does not leave him. If he repeats the words, "May the Kshattra protect me from the Brahma," that is, the Kshattra should protect him from the Brahma, "Svaha to the Kshattra !" he pleases this Kshattra. Pleased in this way, the Kshattra protects him from the Brahma. Both these offerings (ajitapunarvanyam) are also calculated to preserve the sacrificing king from the loss of the Ishtapurta. Thence these two are (also) to be sacrificed.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಚತುಸ್ತ್ರಿಂಶಾಧ್ಯಾಯಸ್ಯ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತ ನಾಲ್ಕನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು
ಸಮಾಪ್ತವಾದುದು.



## ಚತುಸ್ತ್ರಿಂಶಾಧ್ಯಾಯೇ ಪಂಚಮಃ ಖಂಡಃ

### ಮೂವತ್ತನಾಲ್ಕನೆಯ ಅಧ್ಯಾಯದಲ್ಲಿ ಐದನೆಯ ಖಂಡವು

[ರಾಜನು ಯಜ್ಞದೀಕ್ಷೆಯನ್ನು ವಹಿಸಿ ಯಜ್ಞ ಮಾಡುವಾಗ ಬ್ರಾಹ್ಮಣನಂತೆ ಪರಿಗಣಿಸಲ್ಪಡುವನು. ಆದರೆ ರಾಜನಿಗೆ ಇರಬೇಕಾದ ಸ್ಥಾನಮಾನಗಳನ್ನೂ ಮರ್ಯಾದೆಯನ್ನೂ ಆ ಕಾಲದಲ್ಲಿ ಕಳೆದುಕೊಳ್ಳುವನು ಎಂದರೆ ರಾಜನಂತೆ ಗೌರವಿಸಲ್ಪಡುವುದಿಲ್ಲ. ಬ್ರಾಹ್ಮಣನಂತೆಯೇ ಪರಿಗಣಿಸಲ್ಪಡುವನು.]

---

**ಅಥೇಂದ್ರೋ ವೈ ದೇವತಾಯಾ ಕ್ಷತ್ರಿಯೋ ಭವತಿ ತ್ರೈಷ್ಟುಭಶ್ಛಂದಸಾ
ಪಂಚದಶಸ್ತೋಮೇನ ಸೋಮೋ ರಾಜ್ಯೇನ ರಾಜನ್ಯೋ ಬಂಧುನಾ**

ಸ ಹ ದೀಕ್ಷಮಾಣ ಏವ ಬ್ರಾಹ್ಮಣತಾಮಭ್ಯುಪೈತಿ ಯತ್ಕೃಷ್ಣಾ-
ಜಿನಮಧ್ಯೂಹತಿ ಯದ್ದೀಕ್ಷಿತವ್ರತಂ ಚರತಿ ಯದೇನಂ ಬ್ರಾಹ್ಮಣಾ
ಅಭಿಸಂಗಚ್ಛಂತೇ ತಸ್ಯ ಹ ದೀಕ್ಷಮಾಣಸ್ಯೇಂದ್ರ ಏವೇಂದ್ರಿಯಮಾ-
ದತ್ತೇ ತ್ರಿಷ್ಟುಬ್ವೀರ್ಯಂ ಪಂಚದಶಸ್ತೋಮ ಆಯುಃ ಸೋಮೋ
ರಾಜ್ಯಂ ಪಿತರೋ ಯಶಸ್ಕೀರ್ತಿಮನ್ಯೋ ವಾ ಅಯಮಸ್ಮದ್ಭವತಿ
ಬ್ರಹ್ಮ ವಾ ಅಯಂ ಭವತಿ ಬ್ರಹ್ಮ ವಾ ಅಯಮುಪಾವರ್ತತ ಇತಿ
ವದಂತಃ ॥

ಕ್ಷತ್ರಿಯಸ್ಯಾಹವನೀಯೋಪಸ್ಥಾನಂ ವಿಧಾತುಂ ಪ್ರಸ್ತೌತಿ—ಅಥ ಹೋಮಕಥಾನಾನಂತರ-ಮುಪಸ್ಥಾನಮುಚ್ಯತ ಇತಿ ಶೇಷಃ । ಯೋಽಯಂ ಕ್ಷತ್ರಿಯೋಽಸ್ತಿ ಸೋಽಯಂ ದೇವತಯೈಂದ್ರೋ ವಾ ಇಂದ್ರಸಂಬಂಧ ಏವ ಭವತಿ। ದೇವತಾನಾಂ ಮಧ್ಯ ಇಂದ್ರಃ ಕ್ಷತ್ರಿಯಸ್ಯಾಭಿಮಾನೀ (ನಿ) ದೇವತೇತ್ಯರ್ಥಃ । ತಥಾ ಛಂದಸಾ ತ್ರೈಷ್ಟುಭಶ್ಛಂದಸಾಂ ಮಧ್ಯೇ ತ್ರಿಷ್ಟುಬೇತದಭಿಮಾನಿನೀ । ಸ್ತೋಮಾನಾಂ ಮಧ್ಯೇ ಪಂಚದಶ ಏತದಭಿಮಾನೀ । ರಾಜ್ಯೇನ ನಿಮಿತ್ತೇನಾಯಂ ಸೋಮರೂಪಃ ಸೋಮ ಏವ ತದೀಯರಾಜ್ಯಾಭಿಮಾನೀ। ಬಂಧುನಾ ಪಿತೃಪಿತಾಮಹಾದಿ ಬಂಧುವರ್ಗೇಣ ರಾಜನ್ಯೋ ರಾಜಜಾತೀಯಃ ಏವಂ ಸತಿ ಸ ಹ ಸ ಖಲು ಕ್ಷತ್ರಿಯೋ ದೀಕ್ಷಮಾಣ ಏವ ದೀಕ್ಷಾಂ ಸ್ವೀಕುರ್ವನ್ನೇವ ಬ್ರಾಹ್ಮಣತ್ವಜಾತಿಂ ಪ್ರಾಪ್ನೋತಿ । ಕಥಮಿತಿ ತದುಚ್ಯತೇ । ಬ್ರಾಹ್ಮಣಯಜಮಾನವತ್ ಕೃಷ್ಣಾಜಿನ-ಮಧ್ಯೂಹತ್ಯಾಚ್ಛಾದಯತೀತಿ ಯದಸ್ತಿ ತಥಾ ದೀಕ್ಷಿತವ್ರತಂ ಮುಷ್ಟಿಬಂಧನವಾಙ್ನಿಯಮಾದಿಕಂ ಚರತೀತಿ ಯದಸ್ತಿ ತಥಾ ಬ್ರಾಹ್ಮಣಾ ಋತ್ವಿಜೋ ಭೂತ್ವೈನಂ ಕ್ಷತ್ರಿಯಮಭಿತಃ ಸಂಗಚ್ಛಂತೇ ಸಂಗತಾ ಭವಂತೀತಿ ಯದಸ್ತಿ ತೇನ ಸರ್ವೇಣ ಸಂಸ್ಕಾರೇಣ ಕ್ಷತ್ರಿಯೋ ಬ್ರಾಹ್ಮಣ್ಯಂ ಪ್ರಾಪ್ನೋತಿ । ತಸ್ಯ ಹ ತಾದೃಶಸ್ಯೈವ ಕ್ಷತ್ರಿಯಸ್ಯ ದೀಕ್ಷಮಾಣಸ್ಯ ದೀಕ್ಷಾಂ ಪ್ರಾಪ್ನುವತ ಇಂದ್ರಿಯಂ ಚಕ್ಷುರಾದಿ-ಪಾಟವಮಿಂದ್ರ ಏವಾದತ್ತೇಽಪಹರತಿ । ತಥಾ ವೀರ್ಯಂ ಯುದ್ಧಾದಿಸಾಮರ್ಥ್ಯಂ ತ್ರಿಷ್ಟುಬಪಹರತಿ। ಪಂಚದಶಸ್ತೋಮ ಆಯುರಪಹರತಿ । ಸೋಮೋ ರಾಜ್ಯಮಪಹರತಿ । ಪಿತರೋ ಯಶಸ್ಕೀರ್ತಿಮಪ-ಹರಂತಿ । ಐಹಿಕಂ ಯುದ್ಧಾದಿವಿಷಯಕಂ ಯಶಃ । ಆಮುಷ್ಮಿಕೀ ಯಜ್ಞದಾನವಿಷಯಾ ಕೀರ್ತಿಃ । ಏವಮಪಹರತಾಮಿಂದ್ರತ್ರಿಷ್ಟುಬಾದೀನಾಂ ಕೋಽಭಿಪ್ರಾಯ ಇತಿ ಸೋಽಭಿಧೀಯತೇ । ಅಯಂ ಕ್ಷತ್ರಿಯೋಽಸ್ಮದಿಂದ್ರಾದಿಭ್ಯೋಽನ್ಯ ಏವ ಸ್ವತಂತ್ರ ಏವ ಭವತಿ । ಪೂರ್ವಮಸ್ಮದಧೀನಃ ಸನ್ನಿದಾನೀಂ ಯಾಗಂ ಕುರ್ವನ್‌ಬ್ರಹ್ಮ ವೈ ಬ್ರಾಹ್ಮಣ ಏವಾಯಂ ಭವತಿ । ಕಥಮಿತಿ ತದುಚ್ಯತೇ । ಅಯಂ ಕ್ಷತ್ರಿಯೋ ಬ್ರಹ್ಮ ವೈ ಬ್ರಾಹ್ಮಣಜಾತಿಮೇವ ಕೃಷ್ಣಾಜಿನಾಚ್ಛಾದನಾದಿಭಿರುಪೇತ್ಯ ವರ್ತತೇ । ತಥಾ ಸತ್ಯಸ್ಮದಪೇಕ್ಷಾಮಂತರೇಣೈವ ಸರ್ವಪುರುಷಾರ್ಥಸಾಧನಸಮರ್ಥತ್ವಾದಸ್ಮದಧೀನತಾಂ ಪರಿತ್ಯಜ್ಯಾಸ್ಯ ಏವ ಸ್ವತಂತ್ರೋ ಭವತೀತಿ ಸ್ವಾಭಿಪ್ರಾಯಂ ಪರಸ್ಪರಂ ವದಂತಃ ಸರ್ವಮಪ್ಯೇತದೀಯಮಪಹರಂತಿ ॥

ಕ್ಷತ್ರಿಯನಾದವನು (ರಾಜನು) ಆಹವನೀಯಾಗ್ನಿಯ ಮುಂದೆ ಮಾಡುವ ಉಪಸ್ಥಾನಕ್ರಮವನ್ನು (ಪ್ರಾರ್ಥನೆ) ವಿವರಿಸುವರು—ದೀಕ್ಷಣೀಯೇಷ್ಟಿಗೆ ಪೂರ್ವಭಾವಿಯಾಗಿ ರಾಜನು ಮಾಡಬೇಕಾದ ಹೋಮವನ್ನು ಹೇಳಿ ಈಗ ಉಪಸ್ಥಾನ

ಪ್ರಕಾರವನ್ನು ಹೇಳುವರು. ಕ್ಷತ್ರಿಯನಾದ ರಾಜನಿಗೆ ಇಂದ್ರನೇ ಮುಖ್ಯಾಭಿಮಾನಿಯಾದ ದೇವತೆಯು. ದೇವತೆಗಳ ಮಧ್ಯದಲ್ಲಿ ಇಂದ್ರನೇ ಕ್ಷತ್ರಿಯನಿಗೆ ಅಭಿಮಾನಿದೇವತೆಯು ಹಾಗೆಯೇ ರಾಜನಾದವನಿಗೆ ಛಂದಸ್ಸುಗಳ ವಿಷಯದಲ್ಲಿ ತ್ರಿಷ್ಟುಪ್ ಛಂದಸ್ಸೇ ಅಭಿಮಾನಿಯು ; ಅದರಂತೆಯೇ ಸ್ತೋಮಗಳ ಮಧ್ಯದಲ್ಲಿ ಪಂಚದಶಸ್ತೋಮವು ಅಭಿಮಾನಿಯು ; ರಾಜ್ಯ ವಿಷಯದಲ್ಲಿ ಸೋಮರೂಪನಾದ ಸೋಮರಾಜನು ರಾಜ್ಯಾಭಿಮಾನಿಯು ; ಬಂಧುಗಳು ಯಾರು ಎಂದರೆ ಪಿತೃಪಿತಾಮಹಾದಿಬಂಧುವರ್ಗವೇ ರಾಜನಿಗೆ ಸ್ವಜಾತೀಯರಾದ ಬಂಧುಗಳು ; ವಸ್ತುಸ್ಥಿತಿಯು ಹೀಗಿರುವಾಗ ಕ್ಷತ್ರಿಯನು ಯಜ್ಞ ಮಾಡುವುದಕ್ಕಾಗಿ ದೀಕ್ಷೆಯನ್ನು ಕೈಗೊಂಡರೆ ಆಗ ಅವನು ಬ್ರಾಹ್ಮಣಜಾತಿಯನ್ನು ಹೊಂದಿ ಯಜ್ಞಮಾಡಲು ಅರ್ಹನಾಗುವನೆಂದು ಪರಿಗಣಿಸಲ್ಪಡುವನು. ಹೇಗೆಂದರೆ ದೀಕ್ಷೆಯನ್ನು ಕೈಗೊಳ್ಳುವ ರಾಜನು ಬ್ರಾಹ್ಮಣಯಜಮಾನನಂತೆ ಕೃಷ್ಣಾಜಿನವನ್ನು ಧರಿಸುವನು. ಆಹಾರಾದಿಗಳಲ್ಲಿ ವ್ರತನಿಯಮವನ್ನು ಪಾಲಿಸುವನು. ಮುಷ್ಟಿಬಂಧನ (ಮುಷ್ಟೀಕರೋತಿ) ಮುಂತಾದ ದೀಕ್ಷಾವಿಧಿಗಳನ್ನನುಸರಿಸುವನು. ಬ್ರಾಹ್ಮಣರಾದ ಋತ್ವಿಜರು ಈ ಕ್ಷತ್ರಿಯ ಯಜಮಾನನ ಸುತ್ತಲೂ ನೆರೆದಿದ್ದು ನಾನಾವಿಧಸಂಸ್ಕಾರಗಳಿಂದ ಕ್ಷತ್ರಿಯನು ಬ್ರಾಹ್ಮಣ್ಯವನ್ನು ಹೊಂದುವಂತೆ ಮಾಡುವರು. ಈ ಪ್ರಕಾರವಾಗಿ ದೀಕ್ಷೆಯನ್ನು ಹೊಂದಿ ಯಜ್ಞಾರ್ಹನಾಗುವ ರಾಜನ (ಕ್ಷತ್ರಿಯನ) ಚಕ್ಷುರಾದಿ ಇಂದ್ರಿಯಪಾಟವನ್ನು ಇಂದ್ರನು ಅಪಹರಿಸುವನು. ಯುದ್ಧಮಾಡುವ ಶಕ್ತಿಸಾಮರ್ಥ್ಯಾದಿಗಳನ್ನು ತ್ರಿಷ್ಟುಪ್‌ಛಂದಸ್ಸು (ತ್ರಿಷ್ಟುಛಂದಸ್ಸಿನ ಅಭಿಮಾನಿದೇವತೆಯು) ಅಪಹರಿಸುವದು. ಪಂಚದಶಸ್ತೋಮವು ಆಯುಸ್ಸನ್ನು ಅಪಹರಿಸುವುದು ಸೋಮದೇವನು ರಾಜ್ಯವನ್ನು ಅಪಹರಿಸುವನು. ಇಲ್ಲಿ ಯಶಸ್ಸೆಂದರೆ ಈ ಲೋಕದಲ್ಲಿ ಯುದ್ಧಾದಿಜಯಗಳಿಂದಗಳಿಸುವ ಕೀರ್ತಿಯು; ಯಜ್ಞದಾನಾದಿಗಳಿಂದ ಪರಲೋಕದಲ್ಲಿ ಗಳಿಸುವುದು ಕೀರ್ತಿಯೆನಿಸುವುದು ಮೇಲೆ ಹೇಳಿದಂತೆ ಇಂದ್ರ ತ್ರಿಷ್ಟುಪ್ ಸ್ತೋಮ ಮೊದಲಾದವರು ರಾಜನ ಶಕ್ತಿಸಾಮರ್ಥ್ಯಾದಿಗಳನ್ನು ಅಪಹರಿಸುವ ಕಾರಣವೇನೆಂದರೆ ಇಂದ್ರಿಯಾದಿ ಸಾಮರ್ಥ್ಯಗಳು ಇಂದ್ರನೇ ಮೊದಲಾದ ಅಭಿಮಾನಿದೇವತೆಗಳಿಗೆ ಸೇರಿರುವುದರಿಂದ ರಾಜನು ಅವರ ದಾಕ್ಷಿಣ್ಯಕ್ಕೆ ಅಧೀನನಾಗಿರುವನು. ಇವುಗಳನ್ನೆಲ್ಲಾ ರಾಜನು ತ್ಯಜಿಸಿದ ಮೇಲೆ ರಾಜನಿಗೆ ಯಾರ ದಾಕ್ಷಿಣ್ಯವೂ ಇರುವುದಿಲ್ಲ ಎಂದರೆ ಸ್ವತಂತ್ರನಾಗಿರುವನು. ದೀಕ್ಷೆಯನ್ನು ಕೈಗೊಳ್ಳುವುದಕ್ಕೆ ಮುಂಚೆ ರಾಜನು ಇಂದ್ರಾದಿ ಅಭಿಮಾನಿ ದೇವತೆಗಳಿಗೆ ಅಧೀನನಾಗಿರಬೇಕಾಗುವುದು. ಈಗ ಎಂದರೆ ದೀಕ್ಷಿತನಾದ ಮೇಲೆ ಯಾರ ಅಧೀನವೂ ಇಲ್ಲದೆ ಸ್ವತಂತ್ರನಾಗಿ ಬ್ರಾಹ್ಮಣತ್ವವನ್ನು ಹೊಂದಿ ಬ್ರಾಹ್ಮಣನೇ ಆಗುವನು ಎಂದರೆ ಬ್ರಾಹ್ಮಣನಂತೆ ವರ್ತಿಸಲು ಅಧಿಕಾರವನ್ನು ಪಡೆಯುವನು. ಹೇಗೆಂದರೆ ಈ ಕ್ಷತ್ರಿಯನು ಬ್ರಾಹ್ಮಣನಂತೆ ಕೃಷ್ಣಾಜಿನವನ್ನು ಧರಿಸಿ ಬ್ರಾಹ್ಮಣೋಚಿತವಾದ ಕರ್ಮಗಳಲ್ಲಿ ಪ್ರವೃತ್ತನಾಗಿರುವನು. ರಾಜತ್ವದ ಚಿಹ್ನೆಗಳಾದ ಶಕ್ತಿಸಾಮರ್ಥ್ಯಾದಿಗಳನ್ನು ಪರಿತ್ಯಜಿಸಿ ಸ್ವತಂತ್ರನಾಗಿ ಬ್ರಾಹ್ಮಣೋಕ್ತವಾದ ಕರ್ಮಗಳನ್ನು ಮಾಡುತ್ತಾ ಪುರುಷಾರ್ಥಸಾಧನೆಯನ್ನು ಮಾಡಲು ಯಾರ ಸಹಾಯವನ್ನೂ ಅಪೇಕ್ಷಿಸದೆ ಬ್ರಾಹ್ಮಣನಂತೆ ಸ್ವತಂತ್ರನಾಗಿ ವರ್ತಿಸಲು ಶಕ್ತನಾಗಿರುತ್ತಾನೆ ಎಂದಭಿಪ್ರಾಯವು.

ಸ ಪುರಸ್ತಾದ್ದೀಕ್ಷಾಯಾ ಆಹುತಿಂ ಹುತ್ವಾऽಽಹವನೀಯಮುಪತಿ-
ಷ್ಠೇತ ॥

ತಸ್ಯೋಪದ್ರವಸ್ಯ ಶಾಂತ್ಯರ್ಥಮುಪಸ್ಥಾನಂ ವಿಧತ್ತೇ-ದೀಕ್ಷಣೀಯೇಷ್ಟೇಃ ಪೂರ್ವೋಕ್ತಾ-
ಮಾಹುತಿಂ ಹುತ್ವಾ ತತ್ರಾऽಽಹವನೀಯಂ ವಕ್ಷ್ಯಮಾಣೇನ ಮಂತ್ರೇಣೋಪತಿಷ್ಠೇತ ॥

ದೀಕ್ಷೆಯನ್ನು ಕೈಗೊಳ್ಳುವ ರಾಜನ ವಿಘ್ನಪರಿಹಾರಕ್ಕಾಗಿ ಉಪಸ್ಥಾನಕ್ರಮವನ್ನು ವಿವರಿಸುವರು—ದೀಕ್ಷಣೀಯೇಷ್ಟಿಯಲ್ಲಿ ಹಿಂದೆ ಹೇಳಿದಂತೆ ಆಹುತಿಯನ್ನು ಹೋಮಮಾಡಿ ಬಳಿಕ ಆಹವನೀಯಾಗ್ನಿಯ ಮುಂದೆ ಮುಂದೆ ಹೇಳುವ ಮಂತ್ರದಿಂದ ಉಪಸ್ಥಾನವನ್ನು (ನಿಂತು ಕೊಡು ಪ್ರಾರ್ಥನೆಯನ್ನು) ಮಾಡಬೇಕು.

ನೇಂದ್ರಾದ್ದೇವತಾಯಾ ಏಮಿ ನ ತ್ರಿಷ್ಟುಭಶ್ಛಂದಸೋ ನ ಪಂಚದಶ-
ಸ್ತೋಮಾನ್ನ ಸೋಮಾದ್ರಾಜ್ಞೋ ನ ಪಿತ್ರಾದ್ಬಂಧೋರ್ಮಾ ಮ
ಇಂದ್ರ ಇಂದ್ರಿಯಮಾದಿತ ಮಾ ತ್ರಿಷ್ಟುಬ್ವೀರ್ಯಂ ಮಾ ಪಂಚದಶ-
ಸ್ತೋಮ ಆಯುರ್ಮಾ ಸೋಮೋ ರಾಜ್ಯಂ ಮಾ ಪಿತರೋ ಯಶ-
ಸ್ಕೀರ್ತಿಂ ಸಹೇಂದ್ರಿಯೇಣ ವೀರ್ಯೇಣಾಯುಷಾ ರಾಜ್ಯೇನ
ಯಶಸಾ ಬಂಧುನಾಗ್ನಿಂ ದೇವತಾಮುಪೈಮಿ ಗಾಯತ್ರೀಂ ಛಂದಸ್ತ್ರಿ-
ವೃತಂ ಸ್ತೋಮಂ ಸೋಮಂ ರಾಜಾನಂ ಬ್ರಹ್ಮ ಪ್ರಪದ್ಯೇ
ಬ್ರಾಹ್ಮಣೋ ಭವಾಮೀತಿ ||

ತಂ ಮಂತ್ರಂ ದರ್ಶಯತಿ—ಕ್ಷತ್ರಿಯೋಽಹಮಿಂದ್ರರೂಪಾಯಾ ಮದೀಯದೇವತಾಯಾ ನೈಮಿ ಪೃಥಗ್ಭೂತೋ ನ ಗಚ್ಛಾಮಿ । ತಥಾ ಮಯ್ಯಭಿಮಾನಿಭ್ಯಶ್ಛಂದಸ್ತೋಮರಾಜ ಬಂಧುಭ್ಯೋ ನಾಪಗಚ್ಛಾಮಿ । ಅಯಮಿಂದ್ರೋ ಮದೀಯಮಿಂದ್ರಿಯಂ ಮಾದಿತ ಮಾಪಹರತು । ತಥಾ ತ್ರಿಷ್ಟು-ಬಾದಯೋ ವೀರ್ಯಾದೀನ್ಮಾಪಹರಂತು । ತೇಷಾಮಿಂದ್ರಾದೀನಾಮನುಗ್ರಹಮಿಂದ್ರಿಯಾದಿಭಿಃ ಸಹಾವಸ್ಥಿತೋ ಭೂತ್ವಾ ತತ್ಪಾಲನಸಮರ್ಥಮಗ್ನಿಂ ದೇವತಾಮುಪೈಮಿ । ತಥಾ ಗಾಯತ್ರೀತ್ರಿವತ್-ಸ್ತೋಮಬ್ರಾಹ್ಮಣಜಾತೀಃ ಪ್ರಪದ್ಯೇ ಪ್ರಾಪ್ನೋಮಿ। ತೇಷಾಮಗ್ನ್ಯಾದೀನಾಮನುಗ್ರಹಾದ್ಬ್ರಾಹ್ಮಣೋ ಭವಾಮಿ ||

ಮೇಲೆ ಹೇಳಿದಂತೆ ಉಪಸ್ಥಾನಮಂತ್ರವನ್ನು ವಿವರಿಸುವರು—ಇಂದ್ರರೂಪನಾದ ನನ್ನ ಕುಲದೇವತೆಯನ್ನು ಬಿಟ್ಟು ನಾನು ಪ್ರತ್ಯೇಕವಾಗಿ ತ್ಯಜಿಸಿಹೋಗುವುದಿಲ್ಲ ಹಾಗೆಯೇ ನನ್ನಲ್ಲಿ ಅಭಿಮಾನವನ್ನಿಟ್ಟಿರುವ, ಬಂಧರೂಪವಾದ ಎಂದರೆ ರಾಜ ಬಂಧುವಾದ ಸ್ತೋಮರೂಪವಾದ ಛಂದಸ್ಸನ್ನು ತ್ಯಜಿಸಿ ನಾನು ಹೋಗುವುದಿಲ್ಲ. ಈ ಇಂದ್ರನು ನನ್ನ ಇಂದ್ರಿಯವನ್ನು ತ್ಯಜಿಸಿ ಹೋಗದಿರಲಿ. ಹಾಗೆಯೇ ತ್ರಿಷ್ಟುಬಾದಿ ಛಂದಸ್ಸುಗಳೂ ಸಹ ನನ್ನ ಶಕ್ತಿಸಾಮರ್ಥ್ಯಗಳನ್ನು ಬಿಟ್ಟು ಹೋಗದಿರಲಿ. ಮತ್ತು ಇಂದ್ರಾದಿದೇವತೆಗಳ ಶಕ್ತಿಸಾಮರ್ಥ್ಯಾದಿಗಳು ನನ್ನಲ್ಲಿಯೇ ಇರುವುದಲ್ಲದೆ ನಾನು ನನ್ನ ಶಕ್ತಿಸಾಮರ್ಥ್ಯಗಳನ್ನು ರಕ್ಷಿಸುವ ಅಗ್ನಿಯನ್ನು ಸೇರುವಂತಾಗಲಿ. ಮತ್ತು ಬ್ರಾಹ್ಮಣಜಾತಿಯಾದ ಗಾಯತ್ರಿಯನ್ನೂ ತ್ರಿವೃತ್ಸ್ತೋಮವನ್ನೂ ನಾನು ಹೊಂದುವಂತಾಗಲಿ. ಅಗ್ನಿಯೇ ಮೊದಲಾದ ದೇವತೆಗಳ ಅನುಗ್ರಹದಿಂದ ನಾನು ಬ್ರಾಹ್ಮಣಸ್ವರೂಪವನ್ನು ಪಡೆಯುವಂತಾಗಲಿ.

ತಸ್ಯ ಹ ನೇಂದ್ರ ಇಂದ್ರಿಯಮಾದತ್ತೇ ನ ತ್ರಿಷ್ಟುಬ್ವೀರ್ಯಂ ನ ಪಂಚ-
ದಶಸ್ತೋಮ ಆಯುರ್ನ ಸೋಮೋ ರಾಜ್ಯಂ ನ ಪಿತರೋ ಯಶ-
ಸ್ಕೀರ್ತಿಂ ಯ ಏವಮೇತಾಮಾಹುತಿಂ ಹುತ್ವಾಽಽಹವನೀಯಮುಪ-
ಸ್ಥಾಯ ದೀಕ್ಷತೇ ಕ್ಷತ್ರಿಯಃ ಸನ್ ||

ಅನೇನ ಮಂತ್ರೇಣ ಯದುಪಸ್ಥಾನಂ ತತ್ಪ್ರಶಂಸತಿ—ಯಃ ಪುಮಾನ್ ಕ್ಷತ್ರಿಯಜಾತಿಯುಕ್ತಃ ಸನ್ನುಕ್ತಕ್ರಮೇಣ ದೀಕ್ಷಾಯಾಃ ಪ್ರಾಚೀನಾಮಾಹುತಿಂ ಹುತ್ವಾ ನೇಂದ್ರಾದಿತ್ಯಾದಿಮಂತ್ರೇಣಾಹವನೀಯಮುಪಸ್ಥಾಯ ಪಶ್ಚಾದ್ದೀಕ್ಷಾಂ ಪ್ರಾಪ್ನೋತಿ ತಸ್ಯ ಕ್ಷತ್ರಿಯಸ್ಯೇಂದ್ರಿಯಾದೀನಿಂದ್ರಾದಯೋ ನಾಪಹರಂತಿ ||

ಕ್ಷತ್ರಿಯನಾದ ಯಾವ ಪುರುಷನು ಹಿಂದೆ ಹೇಳಿದಂತೆ ದೀಕ್ಷಾವಿಧಿಯನ್ನು ಪಡೆದ ಆಹುತಿಯನ್ನು ಅರ್ಪಿಸುವನೋ ಆ ಪುರುಷನು ನೇಂದ್ರಾದ್ದೇವತಾಯಾ ಎಂಬ ಮಂತ್ರದಿಂದ ಆಹವನೀಯಾಗ್ನಿಯಲ್ಲಿ ಉಪಸ್ಥಾನವನ್ನು ಮಾಡಿ ಬಳಿಕ ದೀಕ್ಷೆಯನ್ನು ಕೈಗೊಳ್ಳುವುದಲ್ಲದೆ ಕ್ಷತ್ರಿಯನಾದ ಆ ಪುರುಷನ ಶಕ್ತಿಸಾಮರ್ಥ್ಯಗಳನ್ನು ಇಂದ್ರನು ಅಪಹರಿಸುವುದಿಲ್ಲ.

---

*English Translation*

**(The King is, before sacrificing, made a Brahman, but he must lose his royal qualifications.)**

As regards the deity, the royal prince (Kshattriya) belongs to Indra; regarding the metre he belongs to the Trishtubh; regarding the Stoma, he belongs to that one which is fifteen-fold. As to his sovereignty, he is Soma (king of the gods); as to his relationship, he belongs to the royal order, And if inaugurated into the sacrificial rites, he enters even the Brahmanship at the time when he covers himself with the black goatskin, and enters on the observances enjoined to an inaugurated one, and Brahmans surround him.

When he is initiated in such a manner, then Indra takes away from him sharpness of senses, Trishtubh strength, the fifteen-fold Stoma the life, Soma takes away the royal power, the Pitaras (manes) glory and fame. (For they say) "he has estranged himself from us; for he is the Brahma, he has turned to the Brahma." The royal prince then after having brought an invocation offering before the inauguration, shall stand near the Ahavaniya fire, and say, "I do not leave Indra as my deity, nor the Trishtubh as (my) metre, nor the fifteen-fold Stoma, nor the king Soma, nor the kinship of the Pitaras. May therefore Indra not take from me the skill, nor the Trishtubh the strength, nor the fifteen-fold Stoma the life, nor Soma the royal power, nor the Pitaras glory and renown. I approach here Agni as (my) deity with sharpness of

senses, strength, life (vigour), renown and kinship. I go to the Gayatri metre, to the three-fold Stoma to Soma the king, to the Brahma, I become a Brahmana." When he standing before the Ahavaniya fire brings this invocation offering, then although he be Kshattriya (by birth, no Brahman), Indra does not take from him sharpness of senses, nor Trishtubh strength, &c.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಚತುಸ್ತ್ರಿಂಶಾಧ್ಯಾಯಸ್ಯ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತ ನಾಲ್ಕನೆಯ ಅಧ್ಯಾಯದಲ್ಲಿ ಐದನೆಯ ಖಂಡವು
ಸಮಾಪ್ತವಾದುದು.



## ಅಥ ಚತುಸ್ತ್ರಿಂಶೋಽಧ್ಯಾಯೇ ಷಷ್ಠಃ ಖಂಡಃ

### ಮೂವತ್ತನಾಲ್ಕನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ ಬ್ರಾಹ್ಮಣಸ್ವರೂಪವನ್ನು ದೀಕ್ಷಾದಿಗಳ ಮೂಲಕ ಪಡದು ಯಜ್ಞಮಾಡಿದ ನಂತರ ಮತ್ತೆ
ಆ ಕ್ಷತ್ರಿಯನಾದ ಪುರುಷನು ಹಿಂದೆ ಕ್ಷತ್ರಿಯತ್ವವನ್ನು ಹೇಗೆ ಪಡೆಯುವನು ಇತ್ಯಾದಿ ]

---

ಅಥಾಽಽಗ್ನೇಯೋ ವೈ ದೇವತಯಾ ಕ್ಷತ್ರಿಯೋ ದೀಕ್ಷಿತೋ ಭವತಿ
ಗಾಯತ್ರಶ್ಛಂದಸಾ ತ್ರಿವೃತ್ಸ್ತೋಮೇನ ಬ್ರಾಹ್ಮಣೋ ಬಂಧುನಾ
ಸಹೋದವಸ್ಯನ್ನೇವ ಕ್ಷತ್ರಿಯತಾಮುಭ್ಯುಪೈತಿ ತಸ್ಯ ಹೋದವಸ್ಯ-
ತೋಽಗ್ನಿರೇವ ತೇಜ ಆದತ್ತೇ ಗಾಯತ್ರೀ ವೀರ್ಯಂ ತ್ರಿವೃತ್ಸ್ತೋಮ
ಆಯುರ್ಬ್ರಾಹ್ಮಣಾ ಬ್ರಹ್ಮ ಯಶಸ್ಕೀರ್ತಿಮನ್ಯೋ ವಾ ಅಯಮ-
ಸ್ಮದ್ಭವತಿ ಕ್ಷತ್ರಂ ವಾ ಅಯಂ ಭವತಿ ಕ್ಷತ್ರಂ ವಾ ಅಯಮುಪಾ-
ವರ್ತತ ಇತಿ ವದಂತಃ

ಪೂರ್ವಹೋಮಾನಂತರಮುಪಸ್ಥಾನಂ ವಿಧಾಯೋತ್ತರಹೋಮಾದೂರ್ಧ್ವಮುಪಸ್ಥಾನಂ
ವಿಧಾತುಂ ಪ್ರಸ್ತೌತಿ—ಅಥ ಪೂರ್ವೋಪಸ್ಥಾನಾನಂತರಮುತ್ತರೋಪಸ್ಥಾನಂ ವಕ್ಷ್ಯತ ಇತಿ ಶೇಷಃ ।

ಅಯಂ ಯಜಮಾನಃ ಪುರಾ ಕ್ಷತ್ರಿಯೋಽಪೀದಾನೀಂ ದೀಕ್ಷಿತಃ ಸನ್ಬ್ರಾಹ್ಮಣ್ಯಂ ಪ್ರಾಪ್ಯ ದೇವತ-ಯಾಗ್ನಿಸಂಬದ್ಧೋ ಭವತಿ। ಅಗ್ನಿರಸ್ಯ ಬ್ರಾಹ್ಮಣಸ್ಯ ಸ್ವಾಮೀ। ಏವಂ ಗಾಯತ್ರೀತ್ರಿವೃತ್‌ಬ್ರಾಹ್ಮಣ-ಜಾತಿಸಂಬಂಧೋ ದ್ರಷ್ಟವ್ಯಃ। ತಾದೃಶ ಇದಾನೀಂ ಬ್ರಾಹ್ಮಣಃ ಸನ್ನುದವಸ್ಯನ್ನೇವೋದವಸಾನೀ-ಯೇಷ್ಟ್ಯಾ ಸೋಮಯಾಗಂ ಸಮಾಪಯನ್ನೇವ ಬ್ರಾಹ್ಮಣ್ಯಂ ಪರಿತ್ಯಜ್ಯ ಕ್ಷತ್ರಿಯತ್ವಂ ಪ್ರಾಪ್ನೋತಿ। ತಸ್ಮಾದು (ತಸ್ಯೋ) ದವಸಾನೀಯೇಷ್ಟಿಂ ಕುರ್ವತೋ ಯಜಮಾನಸ್ಯ ತೇಜಃ ಪ್ರಭೃತೀನಗ್ನ್ಯಾ-ದಯೋಽಪಹರಂತಿ। ಬ್ರಹ್ಮ ವೇದಸ್ತದಧ್ಯಯನಮೈಹಿಕಂ ಯಶಸ್ತದನುಷ್ಠಾನನಿಮಿತ್ತಾಮುಷ್ಮಿಕೀ ಕೀರ್ತಿಃ। ಅಪಹರತಾಮಗ್ನ್ಯಾದೀನಾಂ ಕೋಽಭಿಪ್ರಾಯಃ ಸೋಽಭಿಧೀಯತೇ। ಅಯಮಿದಾನೀಂ ಬ್ರಾಹ್ಮಣಃ ಸನ್ನಸ್ಮದನ್ಯಃ ಸ್ವತಂತ್ರೋ ಭವತಿ। ಅಯಂ ಕ್ಷತ್ರಂ ವೈ ಕ್ಷತ್ರಿಯ ಏವ ಭವತಿ। ತದಪಿ ಕಥಮಪಿ ತದುಚ್ಯತೇ। ಅಯಂ ಯಾಗಕಾಲೇ ಬ್ರಾಹ್ಮಣಃ ಸನ್‌ಯಾಗಾದೂರ್ಧ್ವಂ ಬ್ರಾಹ್ಮಣ್ಯಂ ಪರಿತ್ಯಜ್ಯ ಸ್ವಕೀಯಾಂ ಕ್ಷತ್ರಿಯಜಾತಿಮೇವೋಪೇತ್ಯವರ್ತತೇ। ತಸ್ಮಾದಸ್ಮಾತ್ತೋಽನ್ಯತ್ವಮಿತಿ ಪರಸ್ಪರಂ ವದಂತೋಽಗ್ನ್ಯಾದಯಸ್ತೇಜ ಆದೀನಪಹರಂತಿ ॥

ಪೂರ್ವಹೋಮಾನಂತರ ಉಪಸ್ಥಾನವನ್ನು (ಪ್ರಾರ್ಥನೆಯನ್ನು) ಮಾಡಿದ ಬಳಿಕ ಅನಂತರ ಮತ್ತೆ ಉಪಸ್ಥಾನವನ್ನು ಪ್ರಶಂಸೆಮಾಡುವರು. ಕ್ಷತ್ರಿಯನಾದವನು (ರಾಜನು) ಯಜ್ಞಮಾಡುವುದಕ್ಕೆ ಪೂರ್ವಭಾವಿಯಾಗಿ ದೀಕ್ಷೆಯನ್ನು ಪಡೆಯುತ್ತಾನೆ. ಆ ಕಾಲದಲ್ಲಿ ದೀಕ್ಷೆಯನ್ನು ಪಡೆದು ಬ್ರಾಹ್ಮಣನಂತೆ ವರ್ತಿಸುತ್ತಾನೆ. ಆಗ ಆ ಕ್ಷತ್ರಿಯನಿಗೆ ಬ್ರಾಹ್ಮಣನಾಗಿರುವಂತೆ ಅಗ್ನಿಯೇ ಅವನ ಕುಲದೇವತೆಯು. ಬ್ರಾಹ್ಮಣನಂತೆ ಗಾಯತ್ರಿಯೇ ಛಂದಸ್ಸು. ಅವನು ಬ್ರಾಹ್ಮಣನಂತೆ ತ್ರಿವೃತ್ ಸ್ತೋಮವನ್ನೇ ಪಠಿಸುವನು. ಇವನಿಗೆ ಬ್ರಾಹ್ಮಣನೇ ಬಂಧುವು. ಅನಂತರ ಕ್ಷತ್ರಿಯನು ತಾನು ಮಾಡುವ ಯಜ್ಞಾದಿಗಳನ್ನು ಮಾಡಿ ಮುಗಿಸಿದ ಮೇಲೆ ಮತ್ತೆ ಕ್ಷತ್ರಿಯನಾಗುವನು ಮತ್ತೆ ಕ್ಷತ್ರಿಯತ್ವವನ್ನು ಪಡೆಯುವನು. ಅಗ್ನಿಯು ಬ್ರಾಹ್ಮಣನಲ್ಲಿದ್ದ ತೇಜಸ್ಸನ್ನು ಹಿಂದಕ್ಕೆ ತೆಗೆದುಕೊಳ್ಳುವನು. ಗಾಯತ್ರಿಯು ಶಕ್ತಿಸಾಮರ್ಥ್ಯಗಳನ್ನೂ ತ್ರಿವೃತ್‌ಸ್ತೋಮವು ಆಯುಸ್ಸನ್ನೂ ಬ್ರಾಹ್ಮಣನು ಬ್ರಹ್ಮವರ್ಚಸ್ಸನ್ನೂ ಯಶಸ್ಸನ್ನೂ ಕೀರ್ತಿಯನ್ನೂ ಹಿಂದಕ್ಕೆ ಪಡೆಯುವುವು. ಮುಂಚಿನಂತೆ ಕ್ಷತ್ರಿಯನೇ ಆಗುವನು. ಆಯುಸ್ಸು, ಶಕ್ತಿಸಾಮರ್ಥ್ಯಗಳನ್ನು ಪಡೆಯುವನು ಎಂದರೆ ಯಜ್ಞಕ್ಕೆ ಸಂಬಂಧಪಟ್ಟ ಉದವಸಾನೇಷ್ಟಿಯನ್ನು (ಪರಿಸಮಾಪ್ತಿಯನ್ನು) ಮಾಡಿ ಮುಗಿಸಿದಮೇಲೆ ಅಗ್ನಿಯೇ ಮುಂತಾದವರು ಈ ಕ್ಷತ್ರಿಯನ ಬ್ರಾಹ್ಮಣಸ್ವರೂಪವನ್ನು ಹಿಂದಕ್ಕೆ ಪಡೆದು ಮೊದಲಿನಂತೆ ಕ್ಷತ್ರಿಯನು ಕ್ಷತ್ರಿಯನೇ ಆಗುವನು. ಮುಖ್ಯಾಭಿಪ್ರಾಯವೇನೆಂದರೆ ಕ್ಷತ್ರಿಯನಾದವನು ಯಾಗ ಮಾಡುವ ಕಾಲದಲ್ಲಿ ಬ್ರಾಹ್ಮಣತ್ವವನ್ನು ಹೊಂದಿ ಬ್ರಾಹ್ಮಣನಂತೆ ವರ್ತಿಸುತ್ತಿದ್ದು ಯಜ್ಞಮಾಡಿದ ಮೇಲೆ ಬ್ರಾಹ್ಮಣಸ್ವರೂಪವನ್ನು ತ್ಯಜಿಸಿ ಮುಂಚಿನಂತೆ ಕ್ಷತ್ರಿಯನೇ ಆಗುವನು.

ಸೋಽನುಬಂಧ್ಯಾಯೈ ಸಮಿಷ್ಟಯಜೂಷಾಮುಪರಿಷ್ಟಾದ್ಧುತ್ವಾಽಽಹುತಿ
ಮಾಹವನೀಯಮುಪತಿಷ್ಠೇತ ॥

ತಚ್ಛಾಂತ್ಯರ್ಥಮುಪಸ್ಥಾನಂ ವಿಧತ್ತೇ—ಪೂರ್ವವದ್ವ್ಯಾಖ್ಯೇಯಮ್ ॥

ಅನಂತರ ಸಮಿಷ್ಟಯಜೂಂಷಿ ಎಂದು ಮಂತ್ರಪೂರ್ವಕವಾಗಿ ಹೋಮಮಾಡಿದನಂತರ ಯಜ್ಞಪಶುವನ್ನು ಯೂಪಸ್ತಂಭಕ್ಕೆ ಕಟ್ಟಿ, ಆಹವನೀಯಾಗ್ನಿಯ ಬಳಿಗೆ ಉಪಸ್ಥಾನ ಮಾಡುವುದಕ್ಕಾಗಿ ಹೋಗುವನು.

ನಾಗ್ನೇರ್ದೇವತಾಯಾ ಏಮಿ ನ ಗಾಯತ್ರ್ಯಾಶ್ಛಂದಸೋ ನ ತ್ರಿವೃತಃ ಸ್ತೋಮ ಬ್ರಹ್ಮಣೋ ಬಂಧೋರ್ಮಾ ಮೇಽಗ್ನಿಸ್ತೇಜ ಆದಿತ ಮಾಗಾಯತ್ರೀ ವೀರ್ಯಂ ಮಾ ತ್ರಿವೃತ್ಸ್ತೋಮ ಆಯುರ್ಮಾ ಬ್ರಾಹ್ಮಣ ಬ್ರಹ್ಮಯಶಸ್ಕೀರ್ತಿಂ ಸಹ ತೇಜಸಾ ವೀರ್ಯೇಣಾಽಽ-ಯುಷಾ ಬ್ರಹ್ಮಣಾ ಯಶಸಾ ಕೀರ್ತ್ಯೇದ್ರಂ ದೇವತಾಮುಪೈಮಿ ತ್ರಿಷ್ಟುಭಂ ಛಂದಃ ಪಂಚದಶಂ ಸ್ತೋಮಂ ಸೋಮಂ ರಾಜಾನಂ ಕ್ಷತ್ರಂ ಪ್ರಪದ್ಯೇ ಕ್ಷತ್ರಿಯೋ ಭವಾಮಿ । ದೇವಾಃ ಪಿತರಃ ಪಿತರೋ ದೇವಾ ಯೋಽಸ್ಮಿಸ ಸನ್ಯಜೇ । ಸ್ವಂ ಮ ಇದಮಿಷ್ಟಂ ಸ್ವಂ ಪೂರ್ತಂ ಸ್ವಂ ಶ್ರಾಂತಂ ಸ್ವಂ ಹುತಂ । ತಸ್ಯ ಮೇಽಯಮಗ್ನಿರುಪದ್ರಷ್ಟಾಽಯಂ ವಾಯುರುಪಶ್ರೋತಾಽಸಾವಾದಿತ್ಯೋಽನುಖ್ಯಾತೇದಮಹಂ ಯ ಏವಾಸ್ಮಿ ಸೋಽಸ್ಮೀತಿ ॥

ತತ್ರೋಪಸ್ಥಾನೇ ಮಂತ್ರಮಾಹ—ಅತ್ರ ನಾಗ್ನೇರ್ದೇವತಾಯಾ ಇತ್ಯಾದಿ ಕ್ಷತ್ರಿಯೋ ಭವಾಮೀತ್ಯಂತಂ ಪೂರ್ವಮಂತ್ರವದ್ವ್ಯಾಖ್ಯೇಯಮ್ । ಹೇ ದೇವಾ ಅಗ್ನ್ಯಾದಯಃ ಪಿತರಃ ಪಾಲಕಾ ಯೂಯಂ ಶೃಣುತೇತಿ ಶೇಷಃ । ಪಿತರೋ ದೇವಾ ಇತಿ ಪುನರ್ವಚನಮಾದರಾರ್ಥಮ್ । ಭವದನುಗ್ರಹಾತ್ ಕೃಷ್ಣಾಜಿನಾಚ್ಛಾದನಾದಿಸಂಸ್ಕಾರೇಣ ಯೋ ಬ್ರಾಹ್ಮಣೋಽಸ್ಮಿ ಯಜ್ಞಸಮಾಪ್ತಿ-ಪರ್ಯಂತಂ ಸ ಏವ ಬ್ರಾಹ್ಮಣಃ ಸನ್ಯಜೇ ಯಾಗಂ ಕುರ್ವೇ । ಮೇ ಮಮೇದಮಿಷ್ಟಂ ಶ್ರೌತಂ ಕರ್ಮ ಸ್ವಂ ಸ್ವಾಧೀನಂ ಜಾತಮ್ । ತಥಾ ಪೂರ್ತಂ ಸ್ಮಾರ್ತಮಪಿ ಕರ್ಮ ಸ್ವಂ ಸ್ವಾಧೀನಂ ಜಾತಮ್। ತಥಾ ಶ್ರಾಂತಂ ಶ್ರಮರೂಪಂ ತಪೋಽಪಿ ಸ್ವಂ ಸ್ವಾಧೀನಂ ಜಾತಮ್ । ಹುತಮನ್ಯದಪಿ ಕಾಮ್ಯಾ-ಹೋಮಾದಿಕಂ ಸ್ವಂ ಸ್ವಾಧೀನಂ ಜಾತಮ್ । ತಸ್ಯ ತಾದೃಶಸ್ಯೇಷ್ಟಾಪೂರ್ತಾದಿಯುಕ್ತಸ್ಯ ಮೇ ಮಮಾಯಂ ಭೂಲೋಕಾವಸ್ಥಿತೋಽಗ್ನಿರುಪದ್ರಷ್ಟಾ ಸಮೀಪೇ ಸ್ಥಿತ್ವಾ ಸಾಕ್ಷಿತ್ವೇನಾವಲೋಕಯಿತಾ । ಅಯಮಂತರಿಕ್ಷಾವಸ್ಥಿತೋ ವಾಯುರುಪಶ್ರೋತಾ ತಸ್ಯಾಗ್ನೇರ್ಮುಖಾದಸ್ಮದ್ವೃತ್ತಾಂತಂ ಶ್ರೋಷ್ಯತಿ ಅಸೌ ದ್ಯುಲೋಕಾವಸ್ಥಿತ ಆದಿತ್ಯಸ್ತಂ ವಾಯುಮನು ಪಶ್ಚಾತ್ ಖ್ಯಾತಾ ಸ್ವರ್ಗಲೋಕೇ ಕಥಯಿಷ್ಯ-ತೀದಂ ಕರ್ಮಾಹಂ ಕೃತವಾನಿತಿ । ಏವಂ ಫಲಪರ್ಯಂತಂ ಕರ್ಮಣಿ ಸಮಾಪ್ತೇ ಸತಿ ಕರ್ಮೋಪಕ್ರ-ಮಾತ್ ಪೂರ್ವಂ ಯ ಏವ ಕ್ಷತ್ರಿಯೋಽಸ್ಮಿ ಸ ಏವೋರ್ಧ್ವಂ ಕ್ಷತ್ರಿಯೋ ಭೂತ್ವಾ ತಿಷ್ಠಾಮೀತಿ ॥

ಇದರ ಉಪಸ್ಥಾನಮಂತ್ರವನ್ನು ಹೇಳುವರು—ಇಲ್ಲಿ ಹಿಂದೆ ಹೇಳಿವಂತೆ ನಾಗ್ನಿರ್ದೇವತಾಯ ಎಂದು ಮೊದಲು ಮಾಡಿ ಕ್ಷತ್ರಿಯೋ ಭವಾಮಿ ಎನ್ನುವವರೆಗೆ ಹಿಂದಿನ ಮಂತ್ರವನ್ನೇ ಹೇಳಬೇಕು. ಇದರ ಅರ್ಥವು—ಕ್ಷತ್ರಿಯನು ಯಜ್ಞ ಮಾಡುವಾಗ ಬ್ರಾಹ್ಮಣನಂತೆ ಪರಿವರ್ತಿತನಾಗುವನು. ಇಂದ್ರನು ಈ ರಾಜನ ಬುದ್ಧಿಯೇ ಮೊದಲಾದ ಇಂದ್ರಿಯಗಳ ಸಾಮರ್ಥ್ಯಾದಿಗಳನ್ನು ಹಿಂತೆಗೆದುಕೊಳ್ಳುವನು. ತ್ರಿಷ್ಟುಪ್ ಛಂದಸ್ಸು ಇವನ ಪ್ರಾಣರೂಪವಾದ ಪಂಚದಶಸ್ತೋಮವನ್ನೂ

ಸೋಮದೇವತೆಯು ರಾಜನ ಸ್ಥಾನಮಾನಗಳನ್ನೂ ತ್ರಿಷ್ಟುಪ್‌ಛಂದಸ್ಸು (ಛಂದೋಽಭಿಮಾನಿದೇವತೆಯ ಪ್ರಾಣರೂಪವಾದ ಪಂಚದಶಸ್ತೋಮವನ್ನೂ ಪಿತೃದೇವತೆಗಳು ಯಶಸ್ಸು ಮತ್ತು ಕೀರ್ತಿಯನ್ನೂ ಹಿಂತೆಗೆದುಕೊಳ್ಳುವರು. ಏಕೆಂದರೆ ಈ ಕ್ಷತ್ರಿಯನು ನಮ್ಮಿಂದ ಕ್ಷತ್ರಿಯ ಚಿಹ್ನೆಗಳನ್ನು ತ್ಯಜಿಸಿ ಬ್ರಾಹ್ಮಣನ ಚಿಹ್ನೆಗಳನ್ನು ಪಡೆದಿರುವನು ಎಂದು ಇಂದ್ರಾದಿಗಳು ಹೇಳುವರು. ಈ ರೀತಿ ಕ್ಷತ್ರಿಯನು ಕ್ಷತ್ರಿಯ ಚಿಹ್ನೆಗಳನ್ನು ತ್ಯಜಿಸಿ ಬ್ರಾಹ್ಮಣತ್ವವನ್ನು ಪಡೆದ ಮೇಲೆ ಆಹವನೀಯಾಗ್ನಿಯ ಬಳಿಗೆ ಹೋಗಿ ಹೀಗೆ ಹೇಳುವನು—ನಾನು ಯಜ್ಞಕಾಲದಲ್ಲಿ ಬ್ರಾಹ್ಮಣತ್ವವನ್ನು ಪಡೆದಿದ್ದರೂ ಕ್ಷತ್ರಿಯತ್ವವನ್ನು ಪೂರ್ತ ತ್ಯಜಿಸಿರುವುದಿಲ್ಲ. ಹಿಂದಿನಂತೆ ಇಂದ್ರನೂ ತ್ರಿಷ್ಟುಪ್ ಛಂದಸ್ಸೂ, ಪಂಚದಶ ಸ್ತೋಮವೂ, ಸೋಮ ರಾಜನನ್ನೂ ಪಿತೃ ದೇವತೆಗಳ ಸಂಬಂಧವೂ ನನ್ನನ್ನು ತ್ಯಜಿಸಿರುವುದಿಲ್ಲ. ಆದ್ದರಿಂದ ಇಂದ್ರನು ನನ್ನ ಇಂದ್ರಿಯ ಕುಶಲತೆಯನ್ನೂ ತ್ರಿಷ್ಟುಪ್ ಛಂದೋದೇವತೆಯು ನನ್ನ ಶಕ್ತಿಸಾಮರ್ಥ್ಯವನ್ನೂ ಪಂಚದಶ ಸ್ತೋಮವು ಪ್ರಾಣವನ್ನೂ ಸೋಮರಾಜನು ರಾಜನಾದ ನನ್ನ ಸ್ಥಾನಮಾನ ಮೊದಲಾದ ಪದವಿಯನ್ನೂ ಪಿತೃದೇವತೆಗಳು ನನ್ನ ಯಶಃಕೀರ್ತಿಗಳನ್ನೂ ಅಪಹರಿಸದಂತಾಗಲಿ. ಎಲೈ ಅಗ್ನ್ಯಾದಿ ದೇವತೆಗಳೇ ನನ್ನನ್ನು ರಕ್ಷಿಸತಕ್ಕ ಎಲೈ ಪಿತೃದೇವತೆಗಳೇ ನಾನು ಹೇಳುವುದನ್ನು ದಯವಿಟ್ಟು ಕೇಳಿರಿ. ನಿಮ್ಮ ಅನುಗ್ರಹದಿಂದ ನಾನು ಬ್ರಾಹ್ಮಣ ಚಿಹ್ನೆಯಾದ ಕೃಷ್ಣಾಜಿನಧಾರಣೆ ಮೊದಲಾದ ಸಂಸ್ಕಾರದಿಂದ ಯಾಗ ಕಾಲದಲ್ಲಿ ಯಜ್ಞ ಮುಗಿಯುವವರೆಗೂ ಬ್ರಾಹ್ಮಣನಂತೆ ಪರಿಗಣಿಸಲ್ಪಟ್ಟು ಯಾಗವನ್ನು ನಿರ್ವಿಘ್ನವಾಗಿ ಮಾಡುವಂತಾಗಲಿ. ನನಗೆ ಈ ಶ್ರೌತಕರ್ಮಗಳೆಲ್ಲವೂ ಸ್ವಾಧೀನವಾಗಿರಲಿ. ಹಾಗೆಯೇ ಸ್ಮಾರ್ತ (ಗೃಹ್ಯ) ಕರ್ಮಗಳೂ ನನಗೆ ಸ್ವಾಧೀನವಾಗಿರಲಿ. ಶ್ರಮ (ಕಷ್ಟ) ಸಾಧ್ಯವಾದ ತಪಸ್ಸು ಮೊದಲಾದ ಕರ್ಮಗಳೂ ಸ್ವಾಧೀನವಾಗಿರಲಿ. ಕಾಮ್ಯ ಕರ್ಮಗಳಾದ ಹೋಮಾದಿಗಳೂ, ಮಂತ್ರಾದಿಗಳೂ ಸ್ವಾಧೀನವಾಗಿರಲಿ. ಈರೀತಿ ನನ್ನ ಅಭೀಷ್ಟಗಳೆಲ್ಲವೂ ಪೂರ್ತಿಯಾಗಿ ಸಿದ್ಧಿಸಿದ ಮೇಲೆ ಭೂಲೋಕದಲ್ಲಿರುವ ಎಲ್ಲರಿಗೂ ಕಾಣಿಸುವ ಈ ಅಗ್ನಿಯು ಯಾವಾಗಲೂ ನನ್ನ ಸಮೀಪದಲ್ಲಿಯೇ ಇದ್ದು ನಾನು ಮಾಡುವ ಕಾರ್ಯಕಲಾಪಗಳನ್ನು ಸಾಕ್ಷಿ ಭೂತನಾಗಿ ನೋಡುತ್ತಿರಲಿ. ಅಂತರಿಕ್ಷದಲ್ಲಿರುವ ವಾಯುದೇವತೆಯು ಅಗ್ನಿಯಿಂದ ನನ್ನ ಕರ್ಮಗಳೆಲ್ಲವನ್ನೂ ಕೇಳಿ ತಿಳಿದು ಕೊಂಡು ನನ್ನ ವೃತ್ತಾಂತವನ್ನು ಕೇಳಿ ತಿಳಿದುಕೊಳ್ಳಲಿ. ಸ್ವರ್ಗಲೋಕದಲ್ಲಿರುವ ಆದಿತ್ಯನೂ ಸಹ ವಾಯುವಿನ ಅನಂತರ ನಾನು ಮಾಡುವ ಕರ್ಮಾದಿಗಳನ್ನು ಸ್ವರ್ಗಲೋಕದಲ್ಲಿರುವ ದೇವತೆಗಳಿಗೆ ತಿಳಿಸಲಿ. ಈರೀತಿ ಯಜ್ಞಕರ್ಮಾದಿಗಳನ್ನು ಫಲ ಪ್ರಾಪ್ತಿಯಾಗುವವರೆಗೂ ಮಾಡಿ ಮುಗಿಸಿದನಂತರ ಪೂರ್ವದಲ್ಲಿ ನಾನು ಯಾವರೀತಿ ಕ್ಷತ್ರಿಯನಾಗಿದ್ದೆನೋ ಅದೇ ರೀತಿಯಲ್ಲಿ ಈಗಲೂ ಕ್ಷತ್ರಿಯನಾಗಿ ಇರುವಂತಾಗಲಿ ಎಂದು ಪ್ರಾರ್ಥನೆಮಾಡಬೇಕು.

**ತಸ್ಯ ಹ ನಾಗ್ನಿಸ್ತೇಜ ಆದತ್ತೇ ನ ಗಾಯತ್ರೀ ವೀರ್ಯಂ ನ ತ್ರಿವೃ-ತ್ಸ್ತೋಮ ಆಯುರ್ನ ಬ್ರಾಹ್ಮಣಾ ಬ್ರಹ್ಮ ಯಶಸ್ಕೀರ್ತಿಂ ಯ ಏವಮೇತಾಮಾಹುತಿಂ ಹುತ್ವಾಽಹವನೀಯಮುಪಸ್ಥಾಯೋದವಸ್ಯತಿ ಕ್ಷತ್ರಿಯಃ ಸನ್ ॥**

ಅನೇನ ಮಂತ್ರೇಣ ಯದುಪಸ್ಥಾನಂ ತತ್ಪ್ರಶಂಸತಿ—ಪೂರ್ವಂ ತಸ್ಯ ಹನೇಂದ್ರ ಇಂದ್ರಿಯ-ಮಿತ್ಯಾದಿ ಯದ್ವಾಕ್ಯಮುಕ್ತಂ ತದ್ವದ್ವ್ಯಾಖ್ಯೇಯಮ್ ॥

ಮೇಲೆ ಹೇಳಿದಂತೆ ಕ್ಷತ್ರಿಯನು ಆಹವನೀಯಾಗ್ನಿಯ ಸಮೀಪದಲ್ಲಿ ನಿಂತುಕೊಂಡು ಉಪಸ್ಥಾನವನ್ನೂ (ಪ್ರಾರ್ಥನೆಯನ್ನು) ಮಾಡಿದ ಮೇಲೆ ಆಹುತಿಯನ್ನು ಹೋಮಮಾಡಿದನಂತರ ಕ್ಷತ್ರಿಯತ್ವವನ್ನು ಪುನಃ ಹೊಂದಿದರೂ ಕೂಡ ಅಗ್ನಿಯು

ಈ ಪುರುಷನ ತೇಜಸ್ಸನ್ನು ಹಿಂತೆಗೆದುಕೊಳ್ಳುವುದಿಲ್ಲ. ಹಾಗೆಯೇ ಗಾಯತ್ರೀಛಂದಸ್ಸು ವೀರ್ಯವನ್ನೂ ತ್ರಿವೃತ್ಸ್ತೋಮವು ಆಯುಸ್ಸನ್ನೂ ಬ್ರಾಹ್ಮಣನು ಬ್ರಹ್ಮವರ್ಚಸ್ಸನ್ನೂ ಯಶಃಕೀರ್ತಿಗಳನ್ನೂ ಕಳೆದುಕೊಳ್ಳದೆ ಪಡೆದಿರುವನು

———

*English Transalation*

**(How the King becomes a Kshattriya again after the sacrifice is over.)**

The royal prince belong, as regards the deity, to Agni ; his metre is the Gayatri his Stoma the Trivirt (nine-fold), his kinsman the Brahmana. But when performing the concluding ceremony of the sacrifice; the royal prince (who was during the sacrifice a Brahmana) assumes (by means of another offering) his royal dignity (which was lost) again. Then Agni takes away from him the (Brahmanical) lustre, Gayatri the strength, the Trivrit Soma the life, the Brahmanas the Brahma, and glory and renown ; for they say this man has forsaken us by assuming the Kshattra again, to which he has returned.

Then after having performed the Samishta offerings which are required for the ceremoney of binding the sacrificial animal to the pillar, he presents himself to the Ahavaniya fire (again), "I do not leave Agni as (my) deity, nor the Gayatri as my metre, nor the Trivrit Stoma, nor the Kindred of the Brahma. May Agni not take from me the lustre, nor the Gayatri the strength, nor the trivrit Soma the life, nor the Brahmrns glory and renown. With lustre, strength, life, the Brahmana, glory, and renown, I turn to Indra as my deity, Trishtubh metre, to the fifteen-fold Stoma, to Soma the king, I enter the Ksthattra, I become a Kshattriya ! O ye Pitaras of divine lustre ! O ye Pitaras of divine lustre ! I sacrifice in my own natural character (as a Shkatriya not as a Brahmana); what has been sacrificed by me, is my own, what austerities have been undergone are my own, what burnt offerings have been brought are my own. That this is mine, this Agni will see, this Vayu will hear, that Aditya will reveal it. I am only what I am (i.e, a Kshattriya, no

Brahmana)." When he speaks thus and gives an invocation offering to the Ahavaniya fire, Agni does not take away from him the lustre, nor the Gayatri strength, nor the Trivrit Stoma the life, nor the Brahmans the Brahma, glory and renown, though he concludes the sacred rites as a Kshattriya.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಚತುಸ್ತ್ರಿಂಶಾಧ್ಯಾಯಸ್ಯ ಷಷ್ಠಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತ ನಾಲ್ಕನೆಯ ಅಧ್ಯಾಯದಲ್ಲಿ ಆರನೆಯ ಖಂಡವು
ಸಮಾಪ್ತವಾದುದು.

## ಅಥ ಚತುಸ್ತ್ರಿಂಶೋಽಧ್ಯಾಯೇ ಸಪ್ತಮಃ ಖಂಡಃ

### ಮೂವತ್ತನಾಲ್ಕನೆಯ ಅಧ್ಯಾಯದಲ್ಲಿ ಏಳನೆಯ ಖಂಡವು

—

[ಕ್ಷತ್ರಿಯನಾದವನಿಗೆ ಯಜ್ಞಾದಿಗಳನ್ನು ಮಾಡಿಸುವ ಪುರೋಹಿತನ ಗೋತ್ರ
ಪ್ರವರಾದಿಗಳು ಆ ಕ್ಷತ್ರಿಯನಿಗೆ ಸಂಬಂಧಪಡುವವು]

—

ಅಥಾತೋ ದೀಕ್ಷಾಯಾ ಆವೇದನಸ್ಯೈವ ತದಾಹುರ್ಯದ್ಬ್ರಾಹ್ಮಣಸ್ಯ ದೀಕ್ಷಿತಸ್ಯ ಬ್ರಾಹ್ಮಣೋಽದೀಕ್ಷಿಷ್ಟೇತಿ ದೀಕ್ಷಾಮಾವೇದಯಂತಿ ಕಥಂ ಕ್ಷತ್ರಿಯಸ್ಯಾಽಽವೇದಯೇದಿತಿ ॥

ಕ್ಷತ್ರಿಯಸ್ಯ ದೀಕ್ಷಿತತ್ವಾವೇದನಮಂತ್ರೇ ಸಂದೇಹಾತ್ ಪ್ರಶ್ನಮುದ್ಭಾವಯತಿ ಅಥ ದೀಕ್ಷಾನಂತರಂ ದೇವಾನಾಂ ಮನುಷ್ಯಾಣಾಂ ಚಾಗ್ರೇ ಯತ ಏತದೀಯದೀಕ್ಷಾ ಕಥನೀಯಾಽತಃ ಕಾರಣಾದ್ದೀಕ್ಷಾಯಾ ಆವೇದನಸ್ಯ ಪ್ರಕಟೀಕರಣಸ್ಯೈವ ಕಶ್ಚಿನ್ನಿರ್ಣಯ ಉಚ್ಯತೇ । ತತ್ರ ತಸ್ಮಿನ್ನಾವೇದನೇ ಸಂದಿಹಾನಾ ಬ್ರಹ್ಮವಾದಿನಃ ಪ್ರಶ್ನಮಾಹುಃ । ಬ್ರಾಹ್ಮಣಸ್ಯ ದೀಕ್ಷಾಯಾ ಊರ್ಧ್ವಮದೀಕ್ಷಿಷ್ಟಾಯಂ ಬ್ರಾಹ್ಮಣ ಇತಿ ಮಂತ್ರೇಣಾ ದೀಕ್ಷಾ ಪ್ರಖ್ಯಾಪನೀಯಾ । ತಥಾ ಚ ತೈತ್ತರೀಯಾ ಆಮನಂತಿ 'ಅದೀಕ್ಷಿಷ್ಟಾಯಂ ಬ್ರಾಹ್ಮಣ ಇತಿ ತ್ರಿರೂಪಾಂಶ್ವಾಹ ದೇವೇಭ್ಯ ಏವೈನಂ ಪ್ರಾಹ ತ್ರಿರುಚ್ಚೈರುಭಯೇಭ್ಯ ಏವೈನಂ ದೇವಮನುಷ್ಯೇಭ್ಯಃ ಪ್ರಾಹೇತಿ । ಏವಂ ಸತಿ ಕ್ಷತ್ರಿಯಸ್ಯ ದೀಕ್ಷಾವೇದನೇ ಕಿಮಸ್ಮಿನ್ಮಂತ್ರೇ ಬ್ರಾಹ್ಮಣಶಬ್ದಃ ಕ್ಷತ್ರಿಯಪರತ್ವೇನೋಹನೀಯ ಆಹೋಸ್ವಿದವಿಕೃತ ಏವ ಪಠನೀಯ ಇತಿ ಪ್ರಶ್ನಾಭಿಪ್ರಾಯಃ ॥

ಕ್ಷತ್ರಿಯನು ದೀಕ್ಷಿತನಾದಮೇಲೆ ಅವನು ಯಜ್ಞಕ್ಕಾಗಿ ದೀಕ್ಷೆಯನ್ನು ವಹಿಸಿದನೆಂದು ದೇವತೆಗಳಿಗೂ ಪ್ರಕಟಿಸುವುದು ಹೇಗೆ ಎಂಬ ಪ್ರಶ್ನೆಯು ಉದ್ಭವಿಸುವದು–ಕ್ಷತ್ರಿಯ ಯಜಮಾನನು ದೀಕ್ಷಾಬದ್ಧನಾದನಂತರ ಈ ದೀಕ್ಷಾವಿಧಾನವನ್ನು ದೇವತೆಗಳ ಮತ್ತು ಮನುಷ್ಯರ ಮಧ್ಯೆ ಹೇಳಬೇಕಾದುದು ಪದ್ಧತಿಯು. ಹೀಗೆ ಹೇಳುವಾಗ ಯಜ್ಞಾನುಷ್ಠಾನಕುಶಲರು ಹೀಗೆ ಪ್ರಶ್ನೆಮಾಡುವರು. ಬ್ರಾಹ್ಮಣನಾದವನು ದೀಕ್ಷೆಯನ್ನು ವಹಿಸಿದ ಮೇಲೆ ಹೀಗೆ ಹೇಳುವುದು ಪದ್ಧತಿಯು–ಅದೀಕ್ಷಿಷ್ಟಾಯಂ ಬ್ರಾಹ್ಮಣ ಇತಿ ತ್ರಿರುಪಾಗಶ್ವಾಹ ದೇವೇಭ್ಯ ಏವೈನಂ ಪ್ರಾಹ ತ್ರಿರುಚ್ಚೈರುಭಯೇಭ್ಯ ಏವೈನಂ ದೇವಮನುಷ್ಯೇಭ್ಯಃ ಪ್ರಾಹೇತಿ (ತೈ. ಸಂ. – – ) ಎಂದರೆ ಎಲೈ ದೇವತೆಗಳೇ ಮತ್ತು ಮನುಷ್ಯರೇ ಈ ಬ್ರಾಹ್ಮಣನು ಎಂದರೆ ಇಂತಹ ಋಷಿಯ ಪೌತ್ರನೂ ಇಂತಹ ಋಷಿಯ ಪುತ್ರನೂ ಇಂತಹ ಹೆಸರಿನವನೂ ಆದ ಈ ಬ್ರಾಹ್ಮಣನು ದೀಕ್ಷಾಬದ್ಧನಾಗಿದ್ದಾನೆ ಎಂದು ಎಲ್ಲರಿಗೂ ಕೇಳಿಸುವಂತೆ ಘಟ್ಟಿಯಾದ ಧ್ವನಿಯಲ್ಲಿ ಉಚ್ಚರಿಸುವರು. ವಿವಾಹಕಾಲದಲ್ಲಿಯೂ ವಧೂವರರ ಪಿತೃಪಿತಾಮಹಾದಿಗಳ ಗೋತ್ರಪ್ರವರಾದಿಗಳನ್ನು ಪಠಿಸುವುದು ಈಗಲೂ ರೂಢಿಯುಲ್ಲಿದೆ. ಇದೇ ಕ್ರಮವನ್ನನುಸರಿಸಿ ಕ್ಷತ್ರಿಯಸಲ್ಲಿಯೇ ದೀಕ್ಷಿತನ ಪೂರ್ವಜರ ಹೆಸರನ್ನು ಉಚ್ಚರಿಸಬೇಕಾಗಿರುವುದು. ಆದರೆ ಬ್ರಾಹ್ಮಣರಲ್ಲಿರುವಂತೆ ಕ್ಷತ್ರಿಯಾದಿವರ್ಣದವರಲ್ಲಿ ದೀಕ್ಷಿತನಾಗುವ ಪುರುಷನ ಪೂರ್ವಜರ ಹೆಸರುಗಳು ಪ್ರಸಿದ್ಧವಾಗಿ ಬಳಕೆಯಲ್ಲಿರುವುದಿಲ್ಲ. ಇಂತಹ ಸಂದರ್ಭದಲ್ಲಿ ಏನು ಮಾಡಬೇಕು ಎಂಬ ಪ್ರಶ್ನೆಯು ಉದ್ಭವಿಸುವುದು.

**ಯಥೈವೈತದ್ಬ್ರಾಹ್ಮಣಸ್ಯ ದೀಕ್ಷಿತಸ್ಯ ಬ್ರಾಹ್ಮಣೋಽದೀಕ್ಷಿಷ್ಟೇತಿ ದೀಕ್ಷಾ-ಮಾವೇದಯಂತ್ಯೇವಮೇವೈತತ್ಕ್ಷತ್ರಿಯಸ್ಯಾಽಽವೇದಯೇತ್ಪುರೋ-ಹಿತೋಹಿತಸ್ಯಾಽಽರ್ಷೇಯೇಣೇತಿ ತತ್ತದಿತೀ ॥**

ತತ್ರೋತ್ತರಮಾಹ ಅತ್ರ ಶಬ್ದೋ ನೋಹಿತವ್ಯಃ । ಅವಿಕೃತ ಏವ ಬ್ರಾಹ್ಮಣಶಬ್ದಃ ಕ್ಷತ್ರಿಯ-ದೀಕ್ಷಾವೇದನೇಽಪಿ ಪ್ರಯೋಕ್ತವ್ಯಃ। ಯದಿ ಬ್ರಾಹ್ಮಣಪ್ರವರೋಽಪೇಕ್ಷಿತಸ್ತದಾನೀಂ ಪುರೋಹಿತಸ್ಯ ಬ್ರಾಹ್ಮಣಸ್ಯ ಸಂಬಂಧಿನಾಽಽರ್ಷೇಯೇಣ ಪ್ರಯೋಗಃ ಕರ್ತವ್ಯಃ। ತಥಾ ಚಾಪಸ್ತಂಬಃ ಕ್ಷತ್ರಿಯ-ವೈಶ್ಯಯೋರಪಿ ಬ್ರಾಹ್ಮಣಶಬ್ದೇನೈವಾವೇದನಂ ದರ್ಶಯತಿ—ಅದೀಕ್ಷಿಷ್ಟಾಯಂ ಬ್ರಾಹ್ಮಣೋಽ-ಸಾವಮುಷ್ಯ ಪುತ್ರೋಽಮುಷ್ಯ ಪೌತ್ರೋಽಮುಷ್ಯ ನಪ್ತಾಽಮುಷ್ಯಾಃ ಪುತ್ರೋಽಮುಷ್ಯಾಃ ಪೌತ್ರೋಽ-ಮುಷ್ಯಾ ನಪ್ತೇತಿ ಬ್ರಾಹ್ಮಣೋ ವಾ ಏಷ ಜಾಯತೇ ಯೋ ದೀಕ್ಷತೇ ತಸ್ಮಾದ್ರಾಜನ್ಯವೈಶ್ಯಾ ಅಪಿ ಬ್ರಾಹ್ಮಣ ಇತ್ಯೇವಾಽಽವೇದತಿ ' ಇತಿ ॥

ಈದೃಶಸ್ಯಾವೇದನಸ್ಯ ಪೂಜ್ಯತಾಂ ದರ್ಶಯತಿ—ಪೂರ್ವವದ್ವ್ಯಾಖ್ಯೇಯಮ್ ॥

ಮೇಲಿನ ಪ್ರಶ್ನೆಗೆ ಉತ್ತರವನ್ನು ಹೇಳುವರು—ಈರೀತಿ ಕ್ಷತ್ರಿಯದೀಕ್ಷಿತನ ಗೋತ್ರ ಪ್ರವರಗಳು ತಿಳಿದು ಬರದಿರುವುದರಿಂದ ಈ ಸಂದರ್ಭಗಳಲ್ಲಿ ಆ ಕ್ಷತ್ರಿಯ ಅಥವಾ ರಾಜನ ಪುರೋಹಿತ (ಪುರೋಹಿತನು ಯಾವಾಗಲೂ ಬ್ರಾಹ್ಮಣನೇ ಆಗಿರಬೇಕು) ವರ್ಗಕ್ಕೆ ಸೇರಿದ ಬ್ರಾಹ್ಮಣನ ಗೋತ್ರ ಪ್ರವರಾದಿಗಳನ್ನು ಉಚ್ಚರಿಸಿ ಆವೇದನ (ಪ್ರಕಟಣೆ) ಮಾಡಬೇಕು. ಇದರಂತೆ ಕ್ಷತ್ರಿಯ ವೈಶ್ಯರಿಗೂ ಈ ಕ್ರಮವೇ ಅನ್ವಯಿಸುವುದು. ಈ ವಿಷಯದಲ್ಲಿ ಆಪಸ್ತಂಬರು ಹೀಗೆ ಹೇಳಿರುವರು—**ಅದೀಕ್ಷಿಷ್ಟಾಯಂ ಬ್ರಾಹ್ಮಣೋಽಸಾವಮುಷ ಪುತ್ರೋಽಮುಷ್ಯ ಪೌತ್ರೋಽಮುಷ್ಯ ನಪ್ತಾಽಮುಷ್ಯಾಃ ಪುತ್ರೋಽ-ಮುಷ್ಯಾಃಪೌತ್ರೋಽಮುಷ್ಯಾ ನಪ್ತೇತಿ ಬ್ರಾಹ್ಮಣೋ ವಾ ಏಷ ಜಾಯತೇ ಯೋ ದೀಕ್ಷತೇ ತಸ್ಮಾದ್ರಾಜನ್ಯ-**

**ವೈಶ್ಯಾ ಅಪಿ ಬ್ರಾಹ್ಮಣ ಇತ್ಯೇವಾಽಽವೇದಯತಿ ॥** ಇದರ ಅರ್ಥವೇನೆಂದರೆ ಈ ಯಜ್ಞದಲ್ಲಿ ದೀಕ್ಷೆಯನ್ನು ಕೈಗೊಂಡ ಈ ಬ್ರಾಹ್ಮಣನು ಇಂತಹ ಬ್ರಾಹ್ಮಣನ ಪುತ್ರನೂ ಇಂತಹ ಪುರುಷನ ಮೊಮ್ಮಗನೂ ಇಂತಹ ಸ್ತ್ರೀಯ ಪುತ್ರನೂ ಇಂತಹ ಸ್ತ್ರೀಯ ಮೊಮ್ಮಗನೂ ಆಗಿರುವನು. ರಾಜರು ಮತ್ತು ವೈಶ್ಯರಿಗೂ ಇದೇ ಕ್ರಮವು ಅನ್ವಯಿಸುವರು. ಆದರೆ ರಾಜನ ವೈಶ್ಯರಿಗೆ ಅವರ ಪೂರ್ವಜರ ಗೋತ್ರಪ್ರವರಾದಿಗಳಿಗೆ ಬದಲಾಗಿ ಅವರ ಪುರೋಹಿತರಾದವರ ಗೋತ್ರ ಪ್ರವರಾದಿಗಳನ್ನು ಉಚ್ಚರಿಸಿ ಆವೇದನ ಮಾಡಬೇಕು. ಈ ವಿಧವಾದ ಆವೇದನದ ಪೂಜ್ಯತೆಯನ್ನು ತೋರಿಸುವುದಕ್ಕಾಗಿ ಇಲ್ಲಿ ೩ ಎಂಬ ಪ್ಲುತವನ್ನು ಉಪಯೋಗಿಸಲಾಗಿದೆ.

ನಿಧಾಯ ವಾ ಏಷ ಸ್ವಾನ್ಯಾಯುಧಾನಿ ಬ್ರಹ್ಮಣ ಏವಾಽಽಯುಧೈರ್ಬ್ರ-
ಹ್ಮಣೋ ರೂಪೇಣ ಬ್ರಹ್ಮ ಭೂತ್ವಾ ಯಜ್ಞಮುಪಾವರ್ತತ ತಸ್ಮಾ-
ತ್ತಸ್ಯ ಪುರೋಹಿತಸ್ಯಾರ್ಷೇಯೇಣ ದೀಕ್ಷಾಮಾವೇದಯೇಯುಃ
ಪುರೋಹಿತಸ್ಯಾಽಽರ್ಷೇಯೇಣ ಪ್ರವರಂ ಪ್ರವೃಣೀರನ್ ॥

ಬ್ರಾಹ್ಮಣತ್ವೇನಾಽಽವೇದನ ಮುಪಪಾದಯತಿ—ಸ್ವಾನ್ಯಾಯುಧಾನಿ ಧನುರಾದೀನಿ ಬ್ರಾಹ್ಮಣ ಆಯುಧಾನಿ ಸ್ಫ್ಯಕ್ಕಪಾಲಾದೀನಿ । ಯಸ್ಮಾತ್ಸ್ವಾಯುಧಪರಿತ್ಯಾಗಪೂರ್ವಕಂ ಬ್ರಹ್ಮಾಯುಧಸ್ವೀಕಾರೇಣ ಬ್ರಾಹ್ಮಣೋ ಭೂತ್ವಾಯಜ್ಞಂ ಪ್ರಾಪ್ತವಾಂಸ್ತಸ್ಮಾತ್ತಸ್ಯ ಯಜಮಾನಸ್ಯ ಪುರೋಹಿತಸಂಬಂಧಿನಾ ಗೋತ್ರೇಣ ದೀಕ್ಷಾವೇದನಂ ತಥಾ ಪ್ರವರೋಽಪಿ ವಿಜ್ಞೇಯಃ ॥

ಕ್ಷತ್ರಿಯನ ಆವೇದನವನ್ನು ಬ್ರಾಹ್ಮಣನಂತೆ ಮಾಡಬೇಕೆಂಬ ವಿಷಯವನ್ನು ತಿಳಿಸುವರು—ಧನಸ್ಸು ಬಾಣಗಳು ಮೊದಲಾದ ಆಯುಧಗಳು ಕ್ಷತ್ರಿಯನಿಗೆ (ರಾಜನಿಗೆ) ಉಚಿತವಾದವುಗಳು. ಬ್ರಾಹ್ಮಣನಿಗೆ ಸ್ಫ್ಯಕ್ಕಪಾಲಾದಿಗಳು ಯೋಗ್ಯವಾದ ಯಜ್ಞಾಯುಧಗಳು, ಆದ್ದರಿಂದ ಕ್ಷತ್ರಿಯನಾದ ರಾಜನು ಯಜ್ಞಮಾಡುವುದಕ್ಕೆ ಪೂರ್ವಭಾವಿಯಾಗಿ ಸ್ವೋಚಿತವಾದ ಧನುರ್ಬಾಣಾದಿಗಳನ್ನು ತ್ಯಜಿಸಿ ಬ್ರಾಹ್ಮಣಯೋಗ್ಯವಾದ ಸ್ಫ್ಯಕ್ಕಪಾಲಾದಿಗಳನ್ನು ಧರಿಸಿ ಎಂದರೆ ಬ್ರಾಹ್ಮಣನಂತೆಯೇ ವೇಷಧಾರಿಯಾಗಿ ಯಜ್ಞವನ್ನು ಮಾಡಬೇಕು. ಮತ್ತು ಗೋತ್ರಪ್ರವರಾದಿ ಆವೇದನ ಕಾಲದಲ್ಲಿಯೂ ತನ್ನ ಪೂರ್ವಿಕರಾದ ಪುರೋಹಿತರ ಗೋತ್ರಪ್ರವರಾದಿಗಳನ್ನೇ ಉಪಯೋಗಿಸಿ ದೀಕ್ಷಾವಿಧಿಯನ್ನು ಆವೇದನಮಾಡಬೇಕು.

---

*English Transation*

**(The Pravaras of a Kshattriya's house-priest are invoked at the time of his sacrifice.)**

Thence (if the sacrificer be Kshattriya) they ( the Brahma speakers) ask as to how the inauguration(diksha), which is in the case of a Brahman being initiated, announced by the formula, " the Brahmana is initiated, " should be promulgated in the case of the sacrificer being a Kshattriya ? The answer is,

The formula, " the Brahmana is initiated, " is to be kept when a Kshattriya is being initiated; the ancestral fire of the Kshattriya's house-priest is to be mentioned. This, this is certainly so.

Having laid aside his own implements (weapons), and taken up those of the Brahma, and haveing thus become Brahma, by means of the Brahma form he returned to the sacrifice, Therefore they should proclaim him as a Dikshita, with the name of his house-priest's ancestral fires, and invoke them also in the Pravara prayer.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಚತುಸ್ತ್ರಿಂಶಾಧ್ಯಾಯೇ ಸಪ್ತಮಃ ಖಂಡಃ

**ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತ ನಾಲ್ಕನೆಯ ಅಧ್ಯಾಯದಲ್ಲಿ ಏಳನೆಯ ಖಂಡವು ಸಮಾಪ್ತವಾದುದು.**



## ಅಥ ಚತುಸ್ತ್ರಿಂಶಾಧ್ಯಾಯೇ ಅಷ್ಟಮಃ ಖಂಡಃ

**ಮೂವತ್ತನಾಲ್ಕನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು**

---

[ ಯಜ್ಞಾಹುತಿಯಾಗಿ ಉಳಿಯುವ ಹವಿಃಶೇಷವನ್ನು ಕ್ಷತ್ರಿಯನಾದವನು ಭಕ್ಷಿಸಬಾರದು.
ಆಕ್ಷತ್ರಿಯನ ಭಾಗವಾದ ಹವಿಶ್ಶೇಷವನ್ನು ಬ್ರಹ್ಮನೆಂಬ ಋತ್ವಿಜನೇ ಭಕ್ಷಿಸಬೇಕು ]

---

ಅಥಾತೋ ಯಜಮಾನಭಾಗಸ್ಯೈವ ತದಾಹುಃ ಪ್ರಾಶ್ನೀಯಾತ್ಕ್ಷತ್ರಿಯೋ
ಯಜಮಾನಭಾಗಾ ೩ ನ್ ನ ಪ್ರಾಶ್ನೀಯಾ ೩ ತ್ ||

**ದರ್ಶಪೂರ್ಣಮಾಸಯೋರ್ಯಜಮಾನಭಾಗಪ್ರಾಶನಂ ವಿಹಿತಂ ತದತ್ರ ದೀಕ್ಷಣೀಯಾದೀಷ್ಟಿಷು ಚೋದಕಪ್ರಾಪ್ತಂ ಕ್ಷತ್ರಿಯಸ್ಯ ತತ್ಪ್ರಾಶನೇ ನಿರ್ಣಯಂ ವಕ್ತುಂ ವಿಚಾರಮವತಾರಯತಿ-ದೀಕ್ಷಾವೇದನನಿರ್ಣಯಾನಂತರಂ ದೀಕ್ಷಣೀಯಾದೀಷ್ಟಯೋ ಯತೋ ಬುದ್ಧಿಸ್ಥಾ ಅತಃಕಾರಣಾತ್ತತ್ರ ಯಜಮಾನಭಾಗಸ್ಯೈವ ಪ್ರಕಾರ ವಿಶೇಷ ಉಚ್ಯತ ಇತಿ ಶೇಷಃ ತತ್ತಸ್ಮಿನ್ ಭಾಗೇ ಬ್ರಹ್ಮವಾದಿನೋ ವಿಚಾರ.**

ಮಾಹುಃ । ಕ್ಷತ್ರಿಯೋ ಬ್ರಾಹ್ಮಣವತ್ಕಿಂ ಯಜಮಾನಭಾಗಂ ಪ್ರಾಶ್ನೀಯಾದುತ ನೇತಿ ವಿಚಾರಾರ್ಥಂ ಪ್ಲುತಿದ್ವಯಮ್ ॥

ದರ್ಶಪೂರ್ಣಮಾಸಾದಿ ಇಷ್ಟಿಗಳಲ್ಲಿ ಯಜಮಾನನು ಹವಿಃಶೇಷವನ್ನು ಭಕ್ಷಿಸಬೇಕೆಂದು ಹೇಳಿರುವುದು ಸರಿಯಷ್ಟೆ. ಆದರೆ ಕ್ಷತ್ರಿಯನು ಯಜ್ಞಮಾಡುವಾಗ ದೀಕ್ಷೆಯನ್ನು ಕೈಗೊಳ್ಳುವನು. ಆಗ ದೀಕ್ಷಣೀಯೇಷ್ಟಿಸಂಬಂಧವಾದ ಹವಿಶ್ಶೇಷವನ್ನು ಕ್ಷತ್ರಿಯದೀಕ್ಷಿತನು ಭಕ್ಷಿಸಬಹುದೇ ಕೂಡದೇ ಎಂಬ ವಿಷಯದಲ್ಲಿ ವಿಚಾರವನ್ನು ವಿಮರ್ಶೆಮಾಡುವರು-

ಯತ್ಪ್ರಾಶ್ನೀಯಾದಹುತಾದ್ಭುತಂ ಪ್ರಾಶ್ಯ ಪಾಪೀಯಾನ್ತ್ಸ್ಯಾದ್ಯನ್ನ ಪ್ರಾಶ್ನೀಯಾದ್ಯಜ್ಞಾದಾತ್ಮಾನಮಂತರಿಯಾದ್ಯಜ್ಞೋ ವೈ ಯಜಮಾನಭಾಗಃ

ಪಕ್ಷದ್ವಯೇ ದೋಷಮುದ್ಭಾವಯತಿ—ಹುತಮತ್ತೀತಿ ಹುತಾತ್ತಾದೃಶೋ ನ ಭವತೀತ್ಯಹುತಾತ್ । ಅಥೈತಾ ಅಹುತಾದೋ ಯದ್ರಾಜನ್ಯೋ ವೈಶ್ಯಃ ಶೂದ್ರ ಇತಿ ಪೂರ್ವಮುಕ್ತಮ್ । ಅತೋಽಯಂ ಕ್ಷತ್ರಿಯೋಽಹುತಾದ್ಯೋಗ್ಯತಾರಹಿತೋ ಯದಿ ಹುತಶೇಷಂ ಪ್ರಾಶ್ನೀಯಾತ್ತದಾನೀಂ ಪಾಪೀಯಾನತ್ಯಂತಪಾಪಯುಕ್ತೋ ಭವೇತ್। ಅಪ್ರಾಶನಪಕ್ಷೇ ತು ಯಜ್ಞಾದಾತ್ಮಾನಮಂತರಿಯಾದ್ವಿಚ್ಛಿಂದ್ಯಾದ್ಯಜಮಾನಭಾಗಸ್ಯ ಯಜ್ಞಹೇತುತ್ವೇನ ಯಜ್ಞಸ್ವರೂಪತ್ವಾತ್ತದ್ಭಾಗರಾಹಿತ್ಯೇ ಯಜ್ಞಾತ್ಸ್ವಯಂ ವಿಚ್ಛಿನ್ನೋ ಭವತಿ ॥

ಕ್ಷತ್ರಿಯ ಯಜಮಾನನು ಹೋಮಶೇಷವನ್ನು ಭಕ್ಷಿಸಬಹುದೇ ಕೂಡದೇ ಎಂಬ ಎರಡು ವಿಧಗಳಲ್ಲಿಯೂ ದೋಷವಿರುವುದೆಂಬುದನ್ನು ತೋರಿಸುತ್ತಾರೆ-ಹುತಮತ್ತೀತಿ ಹುತಾತ್ತಾದೃಶೋ ನ ಭವತೀತ್ಯಹುತಾತ್—ಹವಿಶ್ಶೇಷವನ್ನು ಭಕ್ಷಿಸುವುದರಿಂದ ಹವಿಶ್ಶೇಷವು ಅದರಂತೆ ಆಗುವುದಿಲ್ಲವಾದ್ದರಿಂದ ಅಹುತವೆಂದು ಹೆಸರು (ಅ+ಹುತ) ಕ್ಷತ್ರಿಯ ವೈಶ್ಯಶೂದ್ರರು ಹೋಮಮಾಡಲ್ಪಡದಿರುವುದನ್ನು ಮಾತ್ರ ಭಕ್ಷಿಸುವರು ಎಂದು ಹಿಂದೆಯೇ ಹೇಳಿದೆ. ಈ ರೀತಿ ಇರುವುದರಿಂದ ಹವಿಶ್ಶೇಷವನ್ನು ರಾಜನಾದವನು ಭಕ್ಷಿಸುವುದರಿಂದ ಪಾಪಿಷ್ಟನಾಗುತ್ತಾನೆ. ಏಕೆಂದರೆ ಹವಿಶ್ಶೇಷವನ್ನು ಭಕ್ಷಿಸಲು ಇವನಿಗೆ ಅಧಿಕಾರವಿಲ್ಲ. ಹವಿಶ್ಶೇಷವನ್ನು ಭಕ್ಷಿಸದೇ ಇದ್ದಲ್ಲಿ ಆಗ ರಾಜನು ಮಾಡುತ್ತಿರುವ ಯಜ್ಞಕ್ಕೆ ವಿಚ್ಛಿತ್ತಿಯುಂಟಾಗುವುದು. ಏಕೆಂದರೆ ಹವಿಶ್ಶೇಷವನ್ನು ಯಜಮಾನನಾದವನು ಭಕ್ಷಿಸುವುದೂ ಕೂಡ ಯಜ್ಞದ ಕರ್ಮಾಂಗವೆಂದೇ ಭಾವಿಸಲ್ಪಡುವುದು. ಆದ್ದರಿಂದ ಭಕ್ಷಿಸದಿದ್ದರೆ ಕರ್ಮಕ್ಕೆ ನ್ಯೂನತೆಯುಂಟಾಗಿ ಕರ್ಮವಿಚ್ಛಿತ್ತಿಯಾಗುವುದು. ಯಜ್ಞವಿಚ್ಛಿತ್ತಿಯಾದರೆ ಯಜಮಾನನಿಗೂ ಯಜ್ಞಕ್ಕೂ ಯಾವ ಸಂಬಂಧವೂ ಇಲ್ಲದಂತಾಗುವುದು.

ಸ ಬ್ರಹ್ಮಣೇ ಪರಿಹೃತ್ಯಃ

ಉಕ್ತದೋಷದ್ವಯಂ ಪರಿಹರ್ತುಂ ಪಕ್ಷಾಂತರಮಾಹ—ಸ ಯಜಮಾನಭಾಗ ಋತ್ವಿಗ್ವಿಶೇಷಾಯ ಬ್ರಹ್ಮಣೇ ಪರಿಹೃತ್ಯಃ ಪರಿತಃ ಸರ್ವಾತ್ಮನಾ ಸಮರ್ಪಣೀಯಃ ॥

ಮೇಲೆ ಹೇಳಿದ ಎರಡುವಿಧವಾದ ದೋಷಗಳ ಪರಿಹಾರಕ್ಕಾಗಿ ಬೇರೆ ಒಂದು ಪಕ್ಷವನ್ನು ಹೇಳುವರು-ಯಜಮಾನನು ಭಕ್ಷಿಸಬೇಕಾದ ಯಜಮಾನಭಾಗವಾದ ಹವಿಶ್ಶೇಷವನ್ನು ಯಜ್ಞದಲ್ಲಿ ಪಾತ್ರವಹಿಸುತ್ತಿರುವ ಬ್ರಹ್ಮನೆಂಬ ಋತ್ವಿಜನಿಗೆ ಯಜಮಾನನು ಸಮರ್ಪಿಸಬೇಕು.

ಪುರೋಹಿತಾಯತನಂ ವಾ ಏತತ್ಕ್ಷತ್ರಿಯಸ್ಯ ಯದ್ಬ್ರಹ್ಮಾರ್ಧಾತ್ಮೋ
ಹ ವಾ ಏಷ ಕ್ಷತ್ರಿಯಸ್ಯ ಯತ್ಪುರೋಹಿತ ಉಪಾಹ ಪರೋಕ್ಷೇಣೈವ
ಪ್ರಾಶಿತರೂಪಮಾಪ್ನೋತಿ ನಾಸ್ಯ ಪ್ರತ್ಯಕ್ಷಂ ಭಕ್ಷಿತೋ ಭವತಿ ||

ತತ್ಸಮರ್ಪಣೇ ದೋಷದ್ವಯರಾಹಿತ್ಯಂ ದರ್ಶಯತಿ—ಋತ್ವಿಗ್ರೂಪೋ ಬ್ರಹ್ಮೇತಿ ಯದ-ಸ್ತ್ಯೇತತ್ ಕ್ಷತ್ರಿಯಸ್ಯ ಪುರೋಹಿತಾಯತನಂ ಪುರೋಹಿತಸ್ಥಾನಮ್। ಪುರೋಹಿತೋ ಯೋಽಸ್ತ್ಯೇಷ ಕ್ಷತ್ರಿಯಸ್ಯಾರ್ಧಾತ್ಮೋ ಹ ವಾ ಅರ್ಧದೇಹ ಏವ। ಉ ಹ ವಾ ಇತಿ ನಿಪಾತಸಮೂಹೋಽವಧಾರಣಾ-ರ್ಥಃ ಪ್ರಾಶಿತರೂಪಂ ಅರ್ಧಶರೀರಸ್ಥಾನೀಯ ಪುರೋಹಿತರೂಪೇಣ ಬ್ರಹ್ಮಣಾ ತಸ್ಮಿನ್ಭಾಗೇ ಭಕ್ಷಿತೇ ಸತಿ ಪರೋಕ್ಷೇಣೈವ ವ್ಯವಧಾನೇನೈವ ಪ್ರಾಶಿತಸಾದೃಶ್ಯಂ ಪ್ರಾಪ್ನೋತ್ಯೇವ। ಅಹಶಬ್ದ ಉಪಶಬ್ದಶ್ಚ ಮಿಲಿತ್ವಾವಧಾರಣಾರ್ಥೌ। ಅಸ್ಯ ಕ್ಷತ್ರಿಯಸ್ಯ ಪ್ರತ್ಯಕ್ಷಮವ್ಯವಧಾನೇನ ಸ್ವಮುಖೇ(ನ) ಸ ಭಾಗೋ ಭಕ್ಷಿತೋ ನ ಭವತಿ । ಏವಂ ಸತಿ ವ್ಯವಧಾನೇನ ಭಕ್ಷಿತತ್ವಾದ್ಯಜ್ಞಾಂತರಾಯೋ ನ ಭವಿಷ್ಯತಿ ಸ್ವಮು-ಖೇನ ಭಕ್ಷಣಾಭಾವಾದಯಂ ಪಾಪೀಯಾನಪಿ ನ ಭವಿಷ್ಯತಿ ।

ಈ ರೀತಿಯಾಗಿ ಕ್ಷತ್ರಿಯ ಯಜಮಾನನು ತಾನು ಭಕ್ಷಿಸಬೇಕಾದ ಹವಿಶ್ಶೇಷವನ್ನು ಬ್ರಹ್ಮನೆಂಬ ಋತ್ವಿಜನಿಗೆ ಸಮ ರ್ಪಿಸುವುದರಿಂದ ಯಜಮಾನನಿಗೆ ಯಾವ ದೋಷವೂ ಸಂಭವಿಸುವುದಿಲ್ಲವೆಂಬುದನ್ನು ತೋರಿಸುತ್ತಾರೆ. ಋತ್ವಿಗ್ರೂಪನಾಗಿ ರುವ ಬ್ರಹ್ಮನ ಸ್ಥಾನವು ಯಜ್ಞಮಾಡುವ ಕ್ಷತ್ರಿಯನ ಪುರೋಹಿತನ ಸ್ಥಾನವು. ಮತ್ತು ಯಜ್ಞಮಾಡುತ್ತಿರುವ ಈ ಕ್ಷತ್ರಿಯ ಯಜಮಾನನಿಗೆ ಪುರೋಹಿತನು ಅರ್ಧದೇಹವೆಂದೇ ಭಾವಿಸಲ್ಪಟ್ಟಿರುವನು. ಯಜಮಾನನ ಅರ್ಧಶರೀರದಂತಿರುವ ಬ್ರಹ್ಮನು ಎಂದರೆ ಪುರೋಹಿತನು ಹವಿಃಪ್ರಾಶನವನ್ನು ಮಾಡುವುದರಿಂದ ಯಜಮಾನನೇ ಪರೋಕ್ಷವಾಗಿ ಹವಿಸ್ಸನ್ನು ಭಕ್ಷಿಸಿದಂತಾಗು ವುದು. ಇಲ್ಲಿರುವ ಅಹ ಉಪ ಎಂಬ ಶಬ್ದಗಳು ಅವಧಾರಣಾರ್ಥವನ್ನೂ ಸೂಚಿಸುತ್ತವೆ. ಹೀಗೆ ಮಾಡುವುದರಿಂದ ಎಂದರೆ ಯಜಮಾನನು ತನ್ನ ಮುಖದಿಂದ ಯಾವುದನ್ನೂ ಭಕ್ಷಿಸದೆ ಇರುವುದರಿಂದ ಯಾವ ದೋಷವೂ ಸಂಭವಿಸುವುದಿಲ್ಲ. ಪುರೋಹಿತನ ಮೂಲಕ ಭಕ್ಷಣವು ಉಂಟಾಗುವುದರಿಂದ ಹವಿಸ್ಸನ್ನು ಭಕ್ಷಿಸಿದಂತಾಗಿ ಯಜ್ಞಕ್ಕೆ ಯಾವ ವಿಚ್ಛಿತ್ತಿಯೂ ಉಂಟಾ ಗುವುದಿಲ್ಲ. ಯಜಮಾನನು ಈ ವಿಧದಿಂದ ಹವಿಶ್ಶೇಷವನ್ನು ಭಕ್ಷಿಸಿದಂತೆಯೂ ಭಕ್ಷಿಸದೆ ಇದ್ದಂತೆಯೂ ಆಗುವುದರಿಂದ ಯಜಮಾನನಿಗೆ ಯಾವ ದೋಷವೂ ಸಂಭವಿಸುವುದಿಲ್ಲ.

ಯಜ್ಞ ಉ ಹ ವಾ ಏಷ ಪ್ರತ್ಯಕ್ಷಂ ಯದ್ಬ್ರಹ್ಮಾ ಬ್ರಹ್ಮಣಿ ಹಿ ಸರ್ವೋ
ಯಜ್ಞಃ ಪ್ರತಿಷ್ಠಿತೋ ಯಜ್ಞೇ ಯಜಮಾನೋ ಯಜ್ಞ ಏವ ತದ್ಯ-
ಜ್ಞಮಪ್ಯತ್ಯರ್ಜಂತಿ ಯಥಾಪ್ಸ್ವಾಪೋ ಯಥಾಗ್ನಾವಗ್ನಿಂ ತದ್ವೈ
ನಾತಿರಿಚ್ಯತೇ ತದೇನಂ ನ ಹಿನಸ್ತಿ ತಸ್ಮಾತ್ಸ ಬ್ರಹ್ಮಣೇ ಪರಿಹೃತ್ಯಃ||

ಬ್ರಹ್ಮಣಸ್ತದ್ಭಾಗಪ್ರಾಶನಂ ಪ್ರಶಂಸತಿ—ಯೋ ಬ್ರಹ್ಮಾಸ್ತ್ಯೇಷ ಪ್ರತ್ಯಕ್ಷಮವ್ಯವಧಾನಂ ಯಥಾ ಭವತಿ ತಥಾ ಯಜ್ಞ ಉ ಹ ವೈ ಯಜ್ಞಸ್ವರೂಪ ಏವ ತತ್ಸಾಧಕತ್ವಾತ್। ಕಿಂಚ ಬ್ರಹ್ಮಣ್ಯೇವ ಸರ್ವೋ ಯಜ್ಞಂ ಪ್ರತಿಷ್ಠಿತೋ ವೇದತ್ರಯವೈಕಲ್ಯಪರಿಹರ್ತೃತ್ವೇನ ಬ್ರಹ್ಮಣೋ ಭಿಷಗ್ರೂಪಸ್ಯೋ-

ಕ್ತೃತ್ವಾತ್ । ತಸ್ಮಿಂಶ್ಚ ಪ್ರತಿಷ್ಠಿತೇ ಯಜ್ಞೇ ಯಜಮಾನೋಽಪಿ ಪ್ರತಿಷ್ಠಿತಃ । ತತ್ಫಲಭಾಗಿತ್ವಾತ್ । ಏವಂ ಸತಿ ತತ್ತೇನ ಭಾಗಪ್ರಾಶನೇನ ಯಜ್ಞ ಏವ ಬ್ರಹ್ಮರೂಪೇ ಭಾಗರೂಪಂ ಯಜ್ಞಮುಪ್ಯತ್ಯರ್ಜಂತಿ ಸಮ್ಯಕ್ಪ್ರಕ್ಷಿಪಂತಿ । ತತ್ರ ದೃಷ್ಟಾಂತಃ । ಯಥಾ ಲೋಕೇಽಪ್ಸು ಪ್ರಕ್ಷಿಪ್ತಾ ಆಪ ಏಕತ್ವೇನ ಸಂಸೃಜ್ಯತೇ ಯಥಾ ವಾಽಗ್ನೌ ಪ್ರಕ್ಷಿಪ್ತಮಗ್ನಿಮೇಕೀಭೂತಂ ಪಶ್ಯಾಮಸ್ತಥಾ ತದ್ವೈ ಬ್ರಹ್ಮಣಾ ಪ್ರಾಶಿತಂ ಹವಿರ್ನಾತಿರಿಚ್ಯತೇಽತಿರಿಕ್ತಂ ನ ಭವತಿ। ಕಿಂತು ಯಜ್ಞರೂಪೇಣ ಬ್ರಹ್ಮಣಾ ಸಹೈಕೀ ಭವತಿ । ತದೇಕೀಭೂತಂ ಹವಿರೇನಂ ಕ್ಷತ್ರಿಯಂ ನ ಹಿನಸ್ತಿನ ಭಾಧತೇ । ತಸ್ಮಾತ್ಸ ಯಜಮಾನಭಾಗೋ ಬ್ರಹ್ಮಣೇ ಸಮರ್ಪಣೀಯಃ ॥

ಬ್ರಹ್ಮನೆಂಬ ಋತ್ವಿಜನು ಯಜಮಾನನ ಪರವಾಗಿ ಹವಿಶ್ಶೇಷ ಭಕ್ಷಣಮಾಡುವುದನ್ನು ಪ್ರಶಂಸಿಸುವರು—ಯಜ್ಞದಲ್ಲಿ ಮುಖ್ಯಪಾತ್ರವನ್ನು ವಹಿಸುವ ಬ್ರಹ್ಮನೆಂಬ ಯಾವ ಋತ್ವಿಕ್ ಇರುವನೋ ಅವನು ಯಜ್ಞವು ನೆರವೇರುವುದಕ್ಕೆ ಸಾಧಕನಾಗಿರುವನು. ಈ ಬ್ರಹ್ಮನು ಮೂರು ವೇದಗಳನ್ನೂ ತಿಳಿದವನಾದ್ದರಿಂದ ಇವನಲ್ಲಿ ಸಮಸ್ತ ಯಜ್ಞಗಳೂ ನೆಲೆಸಿರುವವು. ಆದ್ದರಿಂದ ಬ್ರಹ್ಮನು ಯಜಮಾನಭಾಗವಾದ ಹವಿಶ್ಶೇಷವನ್ನು ಭಕ್ಷಿಸುವುದರಿಂದ ಯಜ್ಞಫಲವೆಲ್ಲವೂ ಯಜಮಾನನಿಗೆ ಲಭಿಸುವುದು. ಹೇಗೆಂದರೆ ನೀರಿನಲ್ಲಿ ಮತ್ತಷ್ಟು ನೀರನ್ನು ಹಾಕಿದರೆ ಅವೆರಡೂ ಪರಸ್ಪರ ಮಿಶ್ರವಾಗುವವು. ಹಾಗೆಯೇ ಅಗ್ನಿಯಲ್ಲಿ ಹಾಕಿದ ವಸ್ತುವೂ ಎಲ್ಲ ಒಂದಾಗಿ ಒಟ್ಟಾಗಿ ಸೇರುವವು. ಅದರಂತೆ ಯಜ್ಞದಲ್ಲಿ ಬ್ರಾಹ್ಮಣಾದಿ ಋತ್ವಿಗ್ಜನರಿಂದ ನೆರವೇರಿಸಲ್ಪಡುವ ಕರ್ಮಗಳೂ ಅವರ ಫಲಗಳೆಲ್ಲವೂ ಋತ್ವಿಕ್ಕುಗಳಿಗೂ ಯಜಮಾನನಿಗೆ ಸಮನಾಗಿ ಸೇರಿಹೋಗುವವು. ಕ್ಷತ್ರಿಯ ಯಜಮಾನನು ಹವಿಶ್ಶೇಷವನ್ನು ಭಕ್ಷಿಸದಿದ್ದರೂ ಅವನು ಭಕ್ಷಿಸದಂತೆಯೇ ಆಗಿ ಅವರ ಫಲವನ್ನು ಪಡೆಯುವನು. ಆದ್ದರಿಂದ ಯಜಮಾನಭಾಗವಾದ ಹವಿಶ್ಶೇಷವನ್ನು ಬ್ರಹ್ಮನೆಂಬ ಋತ್ವಿಜನಿಗೆ ಸಮರ್ಪಿಸಬೇಕು.

ಅಗ್ನೌ ಹೈಕೇ ಜುಹ್ವತಿ ಪ್ರಜಾಪತೇರ್ವಿಭಾನ್ನಾಮ ಲೋಕಸ್ತಸ್ಮಿಂಸ್ತ್ವಾ ದಧಾಮಿ ಸಹ ಯಜಮಾನೇನ ಸ್ವಾಹೇತಿ ತತ್ತಥಾ ನ ಕುರ್ಯಾದ್ಯ-
ಜಮಾನೋ ವೈ ಯಜಮಾನಭಾಗೋ ಯಜಮಾನಂ ಹ ಸೋಽಗ್ನೌ ಪ್ರವೃಣಕ್ತಿ ಯ ಏನಂ ತತ್ರ ಬ್ರೂಯಾದ್ಯಜಮಾನಮಗ್ನೌ ಪ್ರಾಪಾ-
ಕ್ಷೀಃ ಪ್ರಾಸ್ಯಾಗ್ನಿಃಪ್ರಾಣಾನ್ಧಕ್ಷ್ಯತಿ ಮರಿಷ್ಯತಿ ಯಜಮಾನ ಇತಿ ಶಶ್ವತ್ತಥಾ ಸ್ಯಾತಸ್ಮಾತ್ತಸ್ಯಾಽಽಶಾಂ ನೇಯಾದಾಶಾಂ ನೇಯಾತ್ ॥

ಪಕ್ಷಾಂತರಮುಪನ್ಯಸ್ಯ ದೂಷಯತಿ—ಏಕೇ ಯಾಜ್ಞಿಕಾಸ್ತಂ ಯಜಮಾನಭಾಗಮಗ್ನೌ ಜುಹ್ವತಿ । ತತ್ರ ಪ್ರಜಾಪತೇರಿತ್ಯಾದಿಕೋ ಮಂತ್ರಃ । ಪ್ರಜಾಪತೇಃ ಸಂಬಂಧೀ ಯೋ ಲೋಕಸ್ತಸ್ಯ ವಿಭಾನಿತ್ಯೇತನ್ನಾಮಧೇಯಂ ವಿಶೇಷೇಣ ಭಾತೀತಿ ತದ್ವ್ಯುತ್ಪತ್ತೇಃ । ಯಜಮಾನಭಾಗ ಯಜಮಾನೇನ ಸಹ ತ್ವಾಂ ತಸ್ಮಿನ್ಲೋಕೇ ದಧಾಮಿ ಪ್ರಕ್ಷಿಪಾಮಿ । ತದರ್ಥಮಿದಂ ಸ್ವಾಹುತಮಸ್ತು । ಅನೇನ ಮಂತ್ರೇಣ ಯದ್ಧೋಮಾನುಷ್ಠಾನಮಸ್ತಿ ತತ್ತಥಾ ನ ಕುರ್ಯಾತ್ । ಯಜಮಾನಭಾಗಸ್ಯ ಯಜಮಾನಸ್ವರೂಪತ್ವೇನ ತಸ್ಯ ಭಾಗಸ್ಯ ಹೋಮೇ ಸ ಹೋಮಕರ್ತಾ ಯಜಮಾನಮೇವಾಗ್ನೌ

**ಪ್ರವೃಣಕ್ತಿ ಪ್ರವೃಕ್ತಂ ದಗ್ಧಂ ಕರೋತಿ। ತತ್ರ ತದಾನೀಂ ಯಃ ಶತ್ರುರಾಗತ್ಯೈನಂ ಕರ್ತಾರಂ ಬ್ರೂಯಾಚ್ಛಪೇತ। ಕಥಮಿತಿ ತದುಚ್ಯತೇ। ಹೇ ಹೋಮಕರ್ತಸ್ತ್ವಂ ಯಜಮಾನಮಗ್ನೌ ಪ್ರಾವಾರ್ಕ್ಷೀಃ ಪ್ರವೃಕ್ತವಾನ್‌ದಗ್ಧವಾನಸಿ। ಅಸ್ಯ ಯಜಮಾನಸ್ಯ ಪ್ರಾಣಾನಗ್ನಿಃ ಪ್ರಕರ್ಷೇಣ ಧಕ್ಷ್ಯತಿ ಸ ಯಜಮಾನೋ ಮರಿಷ್ಯತೀತಿ ಸ ಶಾಪೋಽವಶ್ಯಂ ತಥೈವ ಸ್ಯಾತ್। ತಸ್ಮಾತ್ ತಸ್ಯ ಹೋಮಸ್ಯಾಶಾಮಿಚ್ಛಾಮಪಿ ನೇಯಾನ್ನ ಪ್ರಾಪ್ನುಯಾತ್ ಅಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ॥**

ಯಜಮಾನನು ಭಕ್ಷಿಸಬೇಕಾದ ಹವಿಶ್ಶೇಷವನ್ನು ಬೇರೆ ವಿಧವಾಗಿ ವಿನಿಯೋಗಿಸಬೇಕೆಂಬ ವಿಷಯವನ್ನು ಹೇಳಿ ಅದನ್ನು ಖಂಡಿಸುವರು—ಕೆಲವರು ಕ್ಷತ್ರಿಯ ಯಜಮಾನ ಭಾಗವನ್ನು ಅಗ್ನಿಯಲ್ಲಿ ಹೋಮಮಾಡುತ್ತಾರೆ. ಆಗ ಪ್ರಜಾಪತೇ ಎಂಬ ಮಂತ್ರವನ್ನು ಹೇಳುವರು. ಈ ಲೋಕವು ಪ್ರಜಾಪತಿ ಸೃಷ್ಟವಾದುದರಿಂದ ಪ್ರಜಾಪತಿ ಸಂಬಂಧವು. ಆದ್ದರಿಂದ ಇದು ವಿಶೇಷವಾಗಿ ಪ್ರಕಾಶಿಸುತ್ತಿರುವುದು ಎಂಬ ಅರ್ಥವು ಈ ಮಂತ್ರಕ್ಕೆ ಭಾಸವಾಗುವುದು. ಎಲೈ ಯಜಮಾನ ಭಾಗವೇ ಯಜಮಾನನ ಸಹಿತವಾಗಿ ನಿನ್ನನ್ನು ಈ ಲೋಕದಲ್ಲಿ ಹಾಕುತ್ತೇನೆ. ಆದಕ್ಕಾಗಿ ಆಹುತಿಯನ್ನರ್ಪಿಸುತ್ತೇನೆ ಎಂದು ಇದರ ಅರ್ಥವು. ಇಂತಹ ಅರ್ಥವಿರುವ ಈ ಮಂತ್ರದಿಂದ ಹೋಮಾನುಷ್ಠಾನವನ್ನು ಮಾಡಬಾರದು. ಏಕೆಂದರೆ ಯಜಮಾನ ಭಾಗವನ್ನು ಎಂದರೆ ಯಜಮಾನ ಸ್ವರೂಪವೇ ಆದ ಭಾಗವನ್ನು ಅಗ್ನಿಯಲ್ಲಿ ಹೋಮಮಾಡುವುದರಿಂದ ಯಜಮಾನನನ್ನೇ ಅಗ್ನಿಯಲ್ಲಿ ಹೋಮಮಾಡಿ ಭಸ್ಮಮಾಡಿದಂತೆ ಆಗುವುದು. ಆ ಕಾಲದಲ್ಲಿ ಯಜಮಾನನಿಗೆ ಆಗವೇ ಇರುವ ಶತ್ರುಗಳು ಒಂದು ಯಜ್ಞ ಕರ್ತೃವಾದ ಋತ್ವಿಕ್ಕನ್ನು ಕುರಿತು ಹೀಗೆ ಹೇಳಬಹುದು—ಯಜ್ಞಮಾಡಿಸುವ ಯಜ್ಞಕರ್ತನೇ, (ಹೋಮಕರ್ತನೇ) ನೀನು ಪಠಿಸುತ್ತಿರುವ ಹೋಮಮಂತ್ರದಿಂದ ಯಜಮಾನನನ್ನು ಅಗ್ನಿಯಲ್ಲಿ ಕೆಡವಿ ಹೋಮಮಾಡಿದಂತಾಯಿತು. ಅಗ್ನಿಯಲ್ಲಿ ಬಿದ್ದ ಯಜಮಾನನ ಪ್ರಾಣಗಳನ್ನು ಅಗ್ನಿಯು ದಹಿಸುವನು. ಆದರಿಂದ ಯಜಮಾನನು ಮೃತನಾಗುವನು ಎಂದು ಹೇಳಿದರೆ ಅದರಂತೆಯೇ ಆಗುವ ಸಂಭವವುಂಟು. ಎಂದರೆ ಈ ವಾಕ್ಯವು ಯಜಮಾನನ ವಿಷಯದಲ್ಲಿ ಶಾಪವಾಗಿ ಪರಿಣಮಿಸುವುದು. ಆದ್ದರಿಂದ ಈ ವಿಧವಾದ ಹೋಮವನ್ನು ಎಂದಿಗೂ ಮಾಡಕೂಡದು.

———

*English Translation*

**(The Kshattriya is not allowed to eat sacrificial food. The Brahma priest eats his portion for him.)**

As regards the portion of sacrificial food which is to be eaten by the saccrifier, they ask, whether the Kshattriya should eat or whether he should not eat it. They say, if he eats, then he commits a great sin, as having eaten sacrificial food although he is an ahutad ( one not permitted to eat ). If he do not eat, then he cuts himself off rrom the sacrifice with which he was connected. For the portion to be eaten by the sacrificer, is the sacrifice. This is to be made over to the Brahma priest. For the Brahma priest of the Kshattriya

is in the place of his purohita. The purohita is the one-half of the Kshattriya; only through the intervention of another ( the Brahma priest ), the portion appears to be eaten by him, though he does not eat it with his own month. For the sacrifice is there where the Brahma (priest) is. The entire sacrifice is placed in the Brahma, and the sacrificer is there where the Brahma ( priest ) and the sacrificer is in the sacrifice. They throw the sacrifice in the shepe of the portion which is to be eaten by the sacrificer lnto the sacrifice which has the form of the Brahma just as they throw water into water, fire into fire, without making it overflow, nor causing aey injury to the sacrificer. therefore is this portion to be eaten by the sacrificer, if he be a Kshattriya, to be given up to the Brahma.

Some sacrificial priests, however, sacrifice this portion to the fire, saying, "I place thee in Prajapati's world, which is called vibhan ( shining everywhere ), be joined to the sacrificer, Svaha. " But thus the sacrificial priest ought not to be proceed. For the portion to be eaten by the sacrificer is the sacrifier himself. What priest, therefore, asserts this, burns the sacrificer in the fire. If any one should observe a priest doing so, he ought to tell him, " Thou hast singed the sacrificer in the fire. Agni will burn his breaths, and he will consequently die." Thus it always happens. Therefore he should not think of doing so.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ<br>ಐತರೇಯಬ್ರಾಹ್ಮಣಭಾಷ್ಯಸ್ಯ ಚತುಸ್ತ್ರಿಂಶಾಧ್ಯಾಯೇ ಅಷ್ಟಮಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ<br>ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಚತುಸ್ತ್ರಿಂಶೋಽಧ್ಯಾಯಃ ಸಮಾಪ್ತಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂವತ್ತ ನಾಲ್ಕನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು<br>ಸಮಾಪ್ತವಾದುದು

ಮೂವತ್ತ ನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು



# ಅಥೈತರೇಯಬ್ರಾಹ್ಮಣೇ ಪಂಚವಿಂಶಾಧ್ಯಾಯೇ ಪ್ರಥಮಃ ಖಂಡಃ

## ಐತರೇಯಬ್ರಾಹ್ಮಣದ ಮೂವತ್ತೈದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

[ವಿಶ್ವಂತರ ಎಂಬ ರಾಜನಿಗೆ, ಯಜ್ಞದಲ್ಲಿ ಸೋಮಪಾನ ಮಾಡುವುದಕ್ಕೆ ಬದಲಾಗಿ ಬೇರೆ ವಿಧವನ್ನು ಅನುಸರಿಸಬೇಕೆಂದು ರಾಮ ಮಾರ್ಗವೇಯ ಎಂಬುವನು ಉಪದೇಶಿಸುವುದು.]

---

[ಶ್ಯಾಪರ್ಣನೆಂಬುವನ ಉಪಾಖ್ಯಾನವು. ರಾಮ ಎಂಬುವನು ತಮ್ಮ ಹಕ್ಕನ್ನು ಸ್ಥಾಪಿಸಿಕೊಳ್ಳುವುದು.]

---

ವಿಶ್ವಂತರೋ ಹ ಸೌಷದ್ಮನಃ ಶ್ಯಾಪರ್ಣಾನ್ಪರಿಚಕ್ಷಾಣೋ ವಿಶ್ಯಾಪರ್ಣಂ ಯಜ್ಞಮಾಜಹ್ರೇ ತದ್ಧಾನುಬುಧ್ಯ ಶ್ಯಾಪರ್ಣಾಸ್ತಂ ಯಜ್ಞಮಾಜಗ್ಮು-ಸ್ತೇ ಹ ತದಂತರ್ವೇದ್ಯಾಸಾಂಚಕ್ರಿರೇ ತಾನ್ಹ ದೃಷ್ಟ್ವೋವಾಚ ಪಾಪಸ್ಯ ವಾ ಇಮೇ ಕರ್ಮಣಃ ಕರ್ತಾರ ಆಸತೇಽಪೂತಾಯೈ ವಾಚೋ ವದಿತಾರೋ ಯಚ್ಛ್ಯಾಪರ್ಣಾ ಇಮಾನುತ್ಥಾಪಯತೇಮೇ ಮೇಽನ್ತರ್ವೇದಿ ಮಾಽಽಸಿಷತೇತಿ ತಥೇತಿ ತಾನುತ್ಥಾಪಯಾಂಚಕ್ರುಃ ||

ಕ್ಷತ್ರಿಯೋ ಯಜಮಾನೋ ಯಸ್ತಸ್ಯ ಹೋಮಾದಿ ವರ್ಣಿತಮ್ ||
ಫಲನಾಮಾತು ಚಮಸಸ್ತಸ್ಯೈವಾತ್ರೋಪವರ್ಣ್ಯತೇ || ೧ ||

ತತ್ರಾದೌ ಕ್ಷತ್ರಿಯಸ್ಯ ಸೋಮಭಕ್ಷರಾಹಿತ್ಯಪ್ರದರ್ಶನಾರ್ಥಮುಪಾಖ್ಯಾನಮಾಹ-ಶೋಭನಂ ಸದ್ಮ ರಾಜಗೃಹಂ ಯಸ್ಯ ರಾಜ್ಞಂ ಸೋಽಯಂ ಸುಷದ್ಮಾ ತಸ್ಯ ಪುತ್ರಃ ಸೌಷದ್ಮನಃ | ಸ ಚ ವಿಶ್ವಂತರ-ನಾಮಕಃ | ಸ ಕದಾಚಿದ್ಯಾಗಂ ಚಿಕೀರ್ಷುಃ ಶ್ಯಾಪರ್ಣನಾಮಕಾನ್ ಬ್ರಾಹ್ಮಣವಿಶೇಷಾನ್ ಪರಿ-ಚಕ್ಷಾಣ ಆರ್ತ್ವಿಜ್ಯೇ ನಿರಾಕುರ್ವನ್ವಿಶ್ಯಾಪರ್ಣಂ ಯಜ್ಞಮಾಜಹ್ರೇ ಶ್ಯಾಪರ್ಣನಾಮಕಬ್ರಾಹ್ಮಣ-ವಿರಹಿತಮೇವ ಯಜ್ಞಮನುಷ್ಠಿತವಾನ್| ತದ್ಧ ತತ್ಸರ್ವಂ ಶ್ಯಾಪರ್ಣನಾಮಕಾ ಬ್ರಾಹ್ಮಣಾ ಅನುಬುಧ್ಯ ಮನುಷ್ಯಮುಖಾದವಗತ್ಯ ವಿಶ್ವಂತರೇಣ ರಾಜ್ಞಾ ತದಾನೀಮನಾಹೂತಾ ಏವ ತಂ ಯಜ್ಞಮಾಜಗ್ಮುಃ ಆಗತ್ಯ ತೇ ಹ ತ ಏವ ಶ್ಯಾಪರ್ಣಾಸ್ತದಂತರ್ವೇದಿ ತಸ್ಯ ಯಜ್ಞಸ್ಯ ವೇದಿಮಧ್ಯ ಆಸಾಂಚಕ್ರಿರೇ ರಾಜಾನುಜ್ಞಾಮಂತರೇಣ ಸ್ವಯಮೇವೋಪವಿಷ್ಟವಂತಃ | ರಾಜಾ ತಾನುದ್ದಂಡಾಞ್ಶ್ಯಾಪರ್ಣಾನ್ ದೃಷ್ಟ್ವಾ ಸ್ವಕೀಯಾನ್ ವೇತ್ರಪಾಣೀನ್ ಪುರುಷಾನುವಾಚ | ಯುದ್ಯೇ ಶ್ಯಾಪರ್ಣಾಃ ಸಂತೀಮೇಽ-

ಪೂತಾಯೈ ವಾಚೋ ವದಿತಾರೋಽಪೂತಾಂ ವಾಚಂ ಮದೀಯಾಜ್ಞಾರೂಪಾಂ ವದಂತಃ ಪಾಪಸ್ಯ ಕರ್ಮಣಃ ಕರ್ತಾರೋ ಧೌರ್ತ್ಯರೂಪಂ ವ್ಯಾಪಾರಂ ಕರ್ತುಮುದ್ಯತಾ ಇಹಾಽಸತೇ। ಇಮೇ ಶ್ಯಾಪರ್ಣಾ ಮೇಂತರ್ವೇದಿ ಮದೀಯಾಯಾ ವೇದೇರ್ಮಧ್ಯೇ ಮಾಸಿಷತ ಸ್ವಯಮೇವೋಪವಿಷ್ಟಾ ಇಮಾನ್ ಧೂರ್ತಾನ್ ಹೇ ವೇತ್ರಪಾಣಯ ಉತ್ಥಾಪಯತ। ಇತ್ಯೇವಂ ರಾಜ್ಞೋಕ್ತಾ ವೇತ್ರ-ಪಾಣಯಸ್ತಥೇತ್ಯಂಗೀಕೃತ್ಯ ತಾನ್ ಶ್ಯಾಪರ್ಣಾನುತ್ಥಾಪಯಾಂಚಕ್ರುಃ ॥

ಈಗ ಕ್ಷತ್ರಿಯನಾದವನು ಯಜ್ಞದಲ್ಲಿ ಸೋಮಪಾನವನ್ನು ಮಾಡಬಾರದೆಂಬುವುದನ್ನು ತಿಳಿಸುವುದಕ್ಕಾಗಿ ಒಂದು ಪೂರ್ವೇತಿಹಾಸವನ್ನು ಹೇಳುವರು-ಉತ್ತಮವಾದ ಅರಮನೆಯುಳ್ಳ ರಾಜನಿಗೆ ಸುಷದ್ಮಾ ಎಂದು ಹೆಸರು. ಅವನ ಪುತ್ರನಿಗೆ ಸೌಷದ್ಮನಃ ಎಂದು ಹೆಸರು. ಅವನ ನಿಜವಾದ ಹೆಸರು ವಿಶ್ವಂತರ ಎಂದು. ಈ ರಾಜನು ಒಂದಾನೊಂದು ಕಾಲದಲ್ಲಿ ಯಜ್ಞಮಾಡಬೇಕೆಂದು ಅಪೇಕ್ಷಿಸಿ ತನ್ನ ಕುಲಪುರೋಹಿತರಾದ ಶ್ಯಾಪರ್ಣ ಎಂಬ ಹೆಸರಿನ ಬ್ರಾಹ್ಮಣರನ್ನು ತಿರಸ್ಕರಿಸಿ ಯಜ್ಞಮಾಡಿಸುವುದಕ್ಕಾಗಿ ಅವರನ್ನು ಕರೆಯದೆ ವಿಶ್ವಾಪರ್ಣ ಎಂಬ ಹೆಸರಿನ ಬೇರೆ ಕೆಲವು ಬ್ರಾಹ್ಮಣರನ್ನು ಕರೆಸಿ ಅವರ ಮೂಲಕ ಯಜ್ಞಮಾಡಲು ಪ್ರಾರಂಭಿಸಿದನು. ರಾಜನ ಹಿಂದಿನ ಕುಲಪುರೋಹಿತರಾದ ಶ್ಯಾಪರ್ಣರೆಂಬ ಬ್ರಾಹ್ಮಣರು ಕೆಲವು ಪುರುಷರ ಮೂಲಕ ತಮ್ಮ ರಾಜನಾದ ವಿಶ್ವಂತರ ಎಂಬುವನು ತಮ್ಮನ್ನು ಕರೆಯದೆ ಯಜ್ಞಮಾಡಲು ಪ್ರಾರಂಭಿಸಿ ಅನಾಹುತವನ್ನೇ ಮಾಡಿರುವನೆಂದು ಭಾವಿಸಿ ಕರೆಯದಿದ್ದರೂ ಅವನ ಯಜ್ಞಕ್ಕೆ ಬಂದರು. ಹೀಗೆ ಬಂದ ಶ್ಯಾಪರ್ಣರೆಂಬ (ಹಿಂದಿನ ಪುರೋಹಿತರು) ರಾಜನ ಅನುಜ್ಞೆ ಇಲ್ಲದೆ ತಾವೇ ಬಂದು ಯಜ್ಞಶಾಲೆಯ ಮಧ್ಯದಲ್ಲಿದ್ದ ಅಂತರ್ವೇದಿಯಲ್ಲಿ ತಾವೇ ಕುಳಿತುಕೊಂಡರು. ರಾಜನಾದರೋ ಉದ್ಧಟತನದಿಂದ ವರ್ತಿಸುತ್ತಿರುವ (ತನ್ನರಿಜ್ಞೆಯಿಲ್ಲದೆ ಯಜ್ಞವೇದಿಯಲ್ಲಿ ಬಂದು ಕುಳಿತಿರುವ) ಶ್ಯಾಪರ್ಣರನ್ನು ನೋಡಿ ಕೋಪೋದ್ದೀಪಿತನಾಗಿ ತನ್ನ ಬಳಿಯಲ್ಲಿ ಬೆತ್ತಗಳನ್ನು ಹಿಡಿದು ರಾಜಾಜ್ಞೆಯನ್ನು ಪಾಲಿಸಲು ನಿಂತಿರುವ ಕೆಲವು ಪುರುಷರನ್ನು ಕುರಿತು ಇಂತೆಂದನು-ನನ್ನ ಆಜ್ಞೆಯನ್ನು ಪಾಲಿಸುವ ಎಲೈ ಪುರುಷರೇ, ಈ ಶ್ಯಾಪರ್ಣರೆಂಬ ಇಲ್ಲಿ ಕುಳಿತಿರುವ ಬ್ರಾಹ್ಮಣಾಧಮರು ಕೆಟ್ಟ ಮಾತುಗಳನ್ನು ಆಡುತ್ತಿರುವರು. ಆಜ್ಞಾರೂಪವಾದ ನನ್ನ ಮಾತನ್ನು ಉಲ್ಲಂಘಿಸಿ ದುರ್ಭಾಷೆಗಳನ್ನಾಡುತ್ತಾ ಕೆಟ್ಟಕೆಲಸಗಳನ್ನು ಮಾಡುತ್ತಾ ಧೂರ್ತತನದಿಂದ ನೀಚಕಾರ್ಯಗಳಲ್ಲಿ ಪ್ರವೃತ್ತರಾಗಿ ಇಲ್ಲಿ ಕುಳಿತಿರುವರು. ಈ ಧೂರ್ತರನ್ನು ನಾನು ಹೇಳಿಕಳಿಸಿ ಕರೆಸಲಿಲ್ಲ. ತಾವಾಗಿಯೇ ಬಂದು ಇಲ್ಲಿ ಕುಳಿತಿರುವರು. ಬೆತ್ತವನ್ನು ಹಿಡಿದಿರುವ ನೀವು ಇವರನ್ನು ಚೆನ್ನಾಗಿ ಪ್ರಹರಿಸಿ ಇಲ್ಲಿಂದ ಇವರನ್ನು ಎದ್ದು ಹೋಗುವಂತೆ ಮಾಡಿರಿ ಎಂದು ಆಜ್ಞಾಪಿಸಲು ಆ ಭೃತ್ಯರು ಹಾಗೆಯೇ ಆಗಲೆಂದು ಆ ಶ್ಯಾಪರ್ಣರನ್ನು ಅವರು ಕುಳಿತಿದ್ದ ಸ್ಥಳದಿಂದ ಅವರನ್ನು ಎಬ್ಬಿಸಿ ಹೊರಕ್ಕೆ ಕಳುಹಿಸಿದರು.

ತೇ ಹೋತ್ಥಾಪ್ಯಮಾನಾ ರುರುವಿರೇ ಯೇ ತೇಭ್ಯೋ ಭೂತವೀರೇ-ಭ್ಯೋಽಸಿತಮೃಗಾಃ ಕಶ್ಯಪಾನಾಂ ಸೋಮಪೀಥಮಭಿಜಿಗ್ಯುಃ ಪಾರಿ-ಕ್ಷಿತಸ್ಯ ಜನಮೇಜಯಸ್ಯ ವಿಕಶ್ಯಪೇ ಯಜ್ಞೇ ತೈಸ್ತೇ ತತ್ರ ವೀರವಂತ ಆಸುಃ ಕಃ ಸ್ವಿತ್ಸೋಽಸ್ಮಾಕ ಮಸ್ತಿ ವೀರೋ ಯ ಇಮಂ ಸೋಮ-ಪೀಥಮಭಿಜೇಷ್ಯತೀತಿ ॥

ತೇಷಾಂ ಶ್ಯಾಪರ್ಣಾನಾಂ ವೃತ್ತಾಂತಮಾಹ-ವೇತ್ರಪಾಣಿಭಿರುತ್ಥಾಪ್ಯಮಾನಾಸ್ತೇ ಶ್ಯಾಪರ್ಣಾ ಬ್ರಾಹ್ಮಣಾ ರುರುವಿರೇ ರವಂ ಶಬ್ದಂ ಪರಸ್ಪರಮುಚ್ಚೈರ್ಧ್ವನಿಂ ಕೃತವಂತಃ । ತತ್ರ ಧೃಷ್ಟಾಃ ಕೇಚಿದನ್ಯಾನ್ಪ್ರತಿ ಕಾಚಿತ್ಪುರಾತನೀಂ ಕಥಾಮೂಚುಃ । ಪರಿಕ್ಷಿತಃ ಪುತ್ರೋ ಜನಮೇಜಯಾಖ್ಯೋ ಯೋ ರಾಜಾ ಸ ಕದಾಚಿತ್ಕಶ್ಯಪವಂಶೋತ್ಪನ್ನಾನ್ ಬ್ರಾಹ್ಮಣಾನ್ ವಿಹಾಯ ವಿಕಶ್ಯಪಂ ಯಜ್ಞಂ ಭೂತವೀರಸಂಜ್ಞಕೈರ್ಬ್ರಾಹ್ಮಣೈರೃತ್ವಿಗ್ಭಿಃ ಕಾರಯಾಮಾಸ । ತದಾನೀಂ ಕಶ್ಯಪಾನಾಂ ಮಧ್ಯೇ ಯೇ ಕೇಚಿದಸಿತಮೃಗನಾಮಕಾಃ ಪುರುಷಾಃ ಸೋಮಪೀಥಂ ಜನಮೇಜಯಸಂಬಂಧಿನಂ ಸೋಮಯಾಗಂ ತೇಭ್ಯೋ ಭೂತವೀರಸಂಜ್ಞಕೇಭ್ಯೋ ಬ್ರಾಹ್ಮಣೇಭ್ಯೋ ಬಲಾದಾಕೃಷ್ಯ ಸ್ವಯಮಭಿಜಿಗ್ಯುರಭಿತೋ ಜಯಂ ಪ್ರಾಪ್ತಾಃ । ಬಹುಷು ಯಜ್ಞಪ್ರಯೋಗೇಷು ವಿಜಗೀಷುಕಥಾಂ ಕೃತ್ವಾ ತಾನ್ ಭೂತವೀರಾನ್ ಬ್ರಾಹ್ಮಣಾನ್ ಪರಾಜಯಂ ಪ್ರಾಪಯ್ಯ ಸ್ವಯಮಸಿತಮೃಗನಾಮಾನೋ ಯೈ ಜಿತವಂತಸ್ತೈರಸಿತಮೃಗೈಸ್ತೇ ಕಶ್ಯಪಾಸ್ತತ್ರ ಜನಮೇಜಯಸ್ಯ ಯಜ್ಞೇ ವೀರವಂತಃ ಶೂರಪುರುಷೋಪೇತಾ ಆಸುಃ । ಏತಾಂ ಕಥಾಮುದಾಹೃತ್ಯ ಶ್ಯಾಪರ್ಣಾಃ ಸ್ವಕೀಯಾನೇವಂ ಪೃಚ್ಛಂತಿ । ಅಸ್ಮಾಕಂ ರಾಜ್ಞಾ ತಿರಸ್ಕೃತಾನಾಮಸ್ಮಾಕಂ ಮಧ್ಯೇ ಯಃ ಪುಮಾನಿಮಂ ಸೋಮಪೀಥಂ ವಿಶ್ವಂತರಸ್ಯ ರಾಜ್ಞಃ ಸೋಮಯಾಗಮಭಿಜೇಷ್ಯತಿ ಸ ತಾದೃಶೋ ವೀರಃ ಕಶ್ಚಿದಸ್ತಿ ಯಃ ಕೋಽಪಿ ಕಿಮಸ್ತೀತ್ಯೇವಮುಚ್ಚೈಃ ಶಬ್ದಂ ಚಕ್ರುಃ ॥

ಶ್ಯಾಪರ್ಣರೆಂಬ ಆ ಬ್ರಾಹ್ಮಣರ ಮುಂದಿನ ವೃತ್ತಾಂತವನ್ನು ತಿಳಿಸುವರು—ಬೆತ್ತವನ್ನು ಹಿಡಿದ ರಾಜಸೇವಕರಿಂದ ಯಜ್ಞವೇದಿಯನ್ನು ಬಿಟ್ಟು ಹೊರದೂಡಲ್ಪಟ್ಟ ಶ್ಯಾಪರ್ಣರೆಂಬ ಆ ಬ್ರಾಹ್ಮಣರು ಘಟ್ಟಿಯಾಗಿ ಕೂಗಿಕೊಳ್ಳುತ್ತಾ ಧೂರ್ತರಾದ ಇತರ ಕೆಲವರೊಡನೆ ಈ ರಾಜನ ನಡತೆಯ ವಿಚಾರವಾಗಿ ಹಿಂದೆ ನಡೆದ ಕಥೆಯನ್ನು ಪರಸ್ಪರ ಹೇಳುತ್ತಿದ್ದರು. ಎಲೈ ಪುರುಷರೇ ಇಲ್ಲಿ ಕೇಳಿ. ಪೂರ್ವದಲ್ಲಿ ಪರೀಕ್ಷಿತ್ ಎಂಬ ರಾಜನ ಪುತ್ರನಾದ ಜನಮೇಜಯನೆಂಬುವನು ಇದ್ದನು. ಅವನು ಯಜ್ಞಮಾಡುವಾಗ ತನ್ನ ಕುಲಪುರೋಹಿತರಾದ ಕಶ್ಯಪರನ್ನು ಬಿಟ್ಟುಬಿಟ್ಟು ಆ ಕಶ್ಯಪವಂಶದವರನ್ನೂ ಅಲಕ್ಷಿಸಿ ಭೂತವೀರ ಎಂಬ ಹೆಸರಿನ ಬ್ರಾಹ್ಮಣರನ್ನು ಕರೆಸಿ ಅದರ ಮೂಲಕ ಯಜ್ಞಮಾಡುತ್ತಿದ್ದನು. ಆಗ ಕಶ್ಯಪವಂಶದಲ್ಲಿ ಇದ್ದ ಕೆಲವರು ಎಂದರೆ ಅಸಿತಮೃಗ ಎಂಬ ಹೆಸರಿನಿಂದ ಪ್ರಸಿದ್ಧರಾದ ಕೆಲವು ಪುರುಷರು (ಬ್ರಾಹ್ಮಣರು) ಸೋಮಪೀಥದ (ಸೋಮಪಾನ ಮಾಡುವದಿನ) ದಿನದಲ್ಲಿ ಜನಮೇಜಯರಾಜನ ಸೋಮಯಾಗವನ್ನು ಪ್ರವೇಶಿಸಿ ಅಲ್ಲಿ ಯಜ್ಞವನ್ನು ಮಾಡಿಸುತ್ತಿದ್ದ ಋತ್ವಿಜರಾದ ಭೂತವೀರ ಎಂಬ ಬ್ರಾಹ್ಮಣರಿಂದ ಬಲವಂತನಾಗಿ ಎಲ್ಲವನ್ನೂ ಕಿತ್ತುಕೊಂಡು ಅವರನ್ನು ಓಡಿಸಿ ಎಲ್ಲೆಲ್ಲಿಯೂ ಜಯಶಾಲಿಗಳಾದರು. ಈ ರೀತಿ ಜನಮೇಜಯರಾಜನ ಯಜ್ಞದಲ್ಲಿ ಭೂತವೀರರೆಂಬ ಬ್ರಾಹ್ಮಣರನ್ನು ಸೋಲಿಸಿ ತಾವೇ ಎಂದರೆ ಅಸಿತಮೃಗ ಎಂಬ ಕಶ್ಯಪವಂಶದ ಬ್ರಾಹ್ಮಣರೇ ಗೆದ್ದು ಬಹಳ ಶೂರಪುರುಷರೆಂದು ಖ್ಯಾತಿಯನ್ನು ಪಡೆದರು. ಈ ಕಥೆಯನ್ನು ಪರಸ್ಪರ ಹೇಳಿಕೊಳ್ಳುತ್ತಾ ಆ ಶ್ಯಾಪರ್ಣರೆಂಬುವರು ತಮ್ಮ ತಮ್ಮಲ್ಲಿಯೇ ಹೀಗೆ ಕೇಳುತ್ತಾ ಇದ್ದರು—ಈಗ ಹೇಳಿದಂತೆ ಮಾಡಲು ಈ ವಿಶ್ವಂತರರಾಜನ ಯಜ್ಞದಲ್ಲಿ ಸೋಮಯಾಗವನ್ನು ಪರಾಭವಗೊಳಿಸಿ ಗೆಲ್ಲುವ ಶೂರನಾದ ಪುರುಷನೊಬ್ಬನೂ ನಮ್ಮಲ್ಲಿಲ್ಲವೇ ಎಂದು ಘಟ್ಟಿಯಾಗಿ ಶಬ್ದಮಾಡುತ್ತಾ ಪರಸ್ಪರ ಕಿರಿಚಿಕೊಳ್ಳುತ್ತಿದ್ದರು.

ಅಯಮಹಮಸ್ಮಿ ವೋ ವೀರ ಇತಿ ಹೋವಾಚ ರಾಮೋ ಮಾರ್ಗವೇಯಃ ॥

ತಸ್ಯ ಶ್ಯಾಪರ್ಣಾನಾಂ ಪ್ರಶ್ನಸ್ಯ ತನ್ಮಧ್ಯೇ ಕೇನಚಿದುಕ್ತಮುತ್ತರಂ ದರ್ಶಯತಿ—ಮೃಗ-ವುರ್ನಾಮ ಕಾಚಿದ್ಯೋಷಿತ್ತಸ್ಯಾಃ ಪುತ್ರೋ ರಾಮನಾಮಾ ಕಶ್ಚಿದ್ಬ್ರಾಹ್ಮಣ ಏವಮುವಾಚ । ಹೇ ಶ್ಯಾಪರ್ಣಾ ವೋ ಯುಷ್ಮಾಕಂ ಮಧ್ಯೇ ವೀರಃ ಪರಕೀಯಾನ್ ವಿಜೇತುಂ ಶೂರೋಽಹಮಯ-ಮಸ್ಮಿ ಭವತಾಂ ಪುರೋ ವರ್ತಮಾನೋಽಸ್ಮೀತಿ ॥

ಆ ಶ್ಯಾಪರ್ಣರ ಮಧ್ಯದಲ್ಲಿದ್ದ ಓರ್ವ ಪುರುಷನು ಮೇಲಿನ ಶ್ಯಾಪರ್ಣರ ಪ್ರಶ್ನೆಗೆ ಉತ್ತರವಿತ್ತನು—ಎಲೈ ಶ್ಯಾಪರ್ಣರೇ ಕೇಳಿ. ಮೃಗವು ಎಂಬ ಹೆಸರಿನ ಓರ್ವ ಸ್ತ್ರೀ ಇದ್ದಳು. ಆವಳ ಪುತ್ರನಾದ ರಾಮ ಎಂಬ ಬ್ರಾಹ್ಮಣನೊಬ್ಬನು ಹೀಗೆ ಹೇಳಿದನು. ಎಲೈ ಶ್ಯಾಪರ್ಣರೇ, ಚಿಂತಿಸಬೇಡಿ. ನಿಮ್ಮ ಮಧ್ಯದಲ್ಲಿ ಶೂರನಾದ ನಾನಿರುವೆನು. ಪರಕೀಯರಾದ ಶತ್ರುಗಳನ್ನು ನಾನು ಜಯಿಸಲು ಶಕ್ತನಾಗಿರುವೆನು. ನಾನು ನಿಮ್ಮ ಮಧ್ಯದಲ್ಲಿ ನಿಮಗೆ ಸಹಾಯಕನಾಗಿರುವಾಗ ನೀವು ಏತಕ್ಕಾಗಿ ಚಿಂತಿಸಬೇಕು ಎಂದನು.

ರಾಮೋ ಹಾಽಽಸ ಮಾರ್ಗವೇಯೋಽನೂಚಾನಃ ಶ್ಯಾಪರ್ಣೇಯಸ್ತೇಷಾಂ ಹೋತ್ತಿಷ್ಠತಾಮುವಾಚಾಪಿ ನು ರಾಜನ್ನಿತ್ಥಂವಿದಂ ವೇದೇರುತ್ಥಾ-ಪಯಂತೀತಿ ಯಸ್ತ್ವಂ ಕಥಂ ವೇತ್ಥ ಬ್ರಹ್ಮಬಂಧವಿತಿ ॥

ತಸ್ಯ ರಾಮಸ್ಯ ವೃತ್ತಾಂತಮಾಹ—ಶ್ಯಾಪರ್ಣೇಯಃ ಶ್ಯಾಪರ್ಣಾನಾಂ ಬ್ರಾಹ್ಮಣಾನಾಂ ಸಂಬಂಧೀ ಮೃಗವುಪುತ್ರೋ ರಾಮೋಽನೂಚಾನಃ ಸಾಂಗವೇದಶಾಸ್ತ್ರಪಾರಂಗತ ಆಸ ತತ್ರಾವಸ್ಥಿತ-ವಾನ್ । ತೇಷಾಂ ಶ್ಯಾಪರ್ಣಾನಾಂ ವೇದೇರುತ್ತಿಷ್ಠತಾಂ ಮಧ್ಯೇಽವಸ್ಥಿತೋ ರಾಮೋ ವಿಶ್ವಂತರಂ ಪ್ರತ್ಯೇವಮುವಾಚ । ರಾಜನ್ನಿತ್ಥಂವಿದಂ ಯಾಗಸಂಬಂಧಿಪ್ರಯೋಗಪ್ರಕಾರಾಭಿಜ್ಞಂ ಮಾಮಪಿ ತ್ವದೀಯಾ ವೇತ್ರಪಾಣಯೋ ನು ಕ್ಷಿಪ್ರಂ ವೇದೇರುತ್ಥಾಪಯಂತಿ ತದೇತದಯುಕ್ತಮಿತಿ। ತಚ್ಛ್ರುತ್ವಾ ವಿಶ್ವಂತರೋ ರಾಜೈವಮುವಾಚ । ಹೇ ಬ್ರಹ್ಮಬಂಧೋ ಬ್ರಾಹ್ಮಣಾಧಮ ರಾಮ ಯಸ್ತ್ವಂ ಧಾರ್ಷ್ಟ್ಯಾತ್ಪ್ರವೀಷಿ ಸ ತ್ವಂ ಕಥಂ ವೇತ್ಥೇತಿ । ಅತ್ರ ರಾಜೋವಾಚೇತ್ಯಧ್ಯಾಹರ್ತವ್ಯಂ ॥

ಮೇಲೆ ಹೇಳಿದ ರಾಮನೆಂಬುವನ ವೃತ್ತಾಂತವನ್ನು ತಿಳಿಸುವರು. ಆ ಜನರ ಮಧ್ಯದಲ್ಲಿ ಶ್ಯಾಪರ್ಣರೆಂಬ ಬ್ರಾಹ್ಮಣರ ಸಂಬಂಧಿಯೂ, ಮೃಗವು ಎಂಬ ಸ್ತ್ರೀಯ ಪುತ್ರನೂ ಆದ ರಾಮ ಎಂಬ ಹೆಸರಿನ ವೇದಶಾಸ್ತ್ರಪಾರಂಗತನಾದ ಓರ್ವ ಪುರುಷನು ಆ ಬ್ರಾಹ್ಮಣರ ಮಧ್ಯದಲ್ಲಿಯೇ ಇದ್ದನು. ಈ ಶ್ಯಾಪರ್ಣರನ್ನು ವೇದಿಯಿಂದ ಓಡಿಸಿದಾಗ ರಾಮನೆಂಬ ಈ ಪುರುಷನೂ ಅಲ್ಲಿಯೇ ಇದ್ದನು. ಆಗ ಇವನು ರಾಜನಾದ ವಿಶ್ವಂತರನನ್ನು ಕುರಿತು ಇಂತೆಂದನು—ಎಲೈ ರಾಜನೇ, ಯಜ್ಞಸಂಬಂಧವಾದ ಪ್ರಯೋಗಗಳಲ್ಲಿ ಕುಶಲನಾಗಿರುವ. ನನ್ನನ್ನೂ ಶ್ಯಾಪರ್ಣರ ಮಧ್ಯದಲ್ಲಿ ಕುಳಿತಿರುವೆನೆಂಬ ಕಾರಣದಿಂದ ನಿನ್ನ ವೇತ್ರಪಾಣಿಗಳಾದ ಭೃತ್ಯರು ವೇದಿಯಿಂದ ಎಬ್ಬಿಸಿ ಹೊರಕ್ಕೆ ಕಳುಹಿಸಿರುವರು. ಇದು ಅಯುಕ್ತವು ಎಂದನು. ಆ ಬ್ರಾಹ್ಮಣನ ಈ ಮಾತನ್ನು ಕೇಳಿ ವಿಶ್ವಂತರ ರಾಜನು ಇಂತು ನುಡಿದನು—ಎಲೈ ಬ್ರಾಹ್ಮಣಾಧಮನೇ, ನೀನು ಈ ರೀತಿ ಹೇಳುತ್ತಿರುವುದನ್ನು ನೋಡಿದರೆ ನಿನಗೆ ಏನೂ ತಿಳಿಯದ ಧೂರ್ತನಂತೆ ಮಾತನಾಡುತ್ತಿರುವಿ. ಇಂತಹ ನಿನಗೆ (ರಾಮನಿಗೆ) ಎಲ್ಲವೂ ತಿಳಿಯುವುದೆಂದು ಹೇಗೆ ಹೇಳುವುದು ಎಂದನು.

---

*English Translation*

**(On the sacrificial drink which the King has the to taste instead of Soma according to the instruction given by Rama Margaveya to the King Visvantara.)**

---

**(Story of the Syaparnas. Rama defends their rights.)**

Visvantara, the son of Sushadman, deprived the Syaparnas of their right of serving as his sacrifical priests, and interdicted any one of this family to take part in his sacrifice. Having learnt (that) they went to the place of his sacrifice and seated themselves within the precincts of the Vedi. On observtng them Visvantara said (to his attendants), "There sit those Syaparnas, the scoundrels, who endeavour to sully another's fame. Turn them out; let them not sit in the Vedi." The attendants obeyed aud turned the Syaparnas out. They then cried aloud, "When Janamejaya, the son of Parikshit, was performing a sacrifice without the Kasyapas (who were his hereditary priests), then the Asitamrigas from among the Kasyapas, turned the Bhutaviras (who were officiating instead of Kasyapas) out, not allowing them to administer the Soma rites. They succeeded because they had brave mee with them. Well, what hero is now among us, who might by force take away this Soma beverage (that we might administer it ourselves)?" "This your man am I," said Rama Margaveya. This Rama belonged to the Syaparnas, and had completed the sacred study. When the Syaparnas rose to leave then he said to the king, "Will (thy servants), O king, turn out of the Vedi even a man (like me) who knows the sacred science? (The king answered), "O thou member of the vile Brahman brood, whoever thou art, how hast thou any knowledge (of such matters)?"

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಪಂಚವಿಂಶಾಧ್ಯಾಯೇ ಪ್ರಥಮಃ ಖಂಡಃ
ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂವತ್ತೈದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು



# ಅಥ ಪಂಚವಿಂಶಾಧ್ಯಾಯೇ ದ್ವಿತೀಯಃ ಖಂಡಃ

## ಮೂವತ್ತೈದನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

[ ಸೋಮಯಾಗದಲ್ಲಿ (ಸೋಮಪಾನದಲ್ಲಿ) ಇಂದ್ರನನ್ನು ಏಕೆ ಬಿಡಲಾಯಿತು ?
ಇದರಿಂದ ಕ್ಷತ್ರಿಯನೂ ಯಜ್ಞದಲ್ಲಿ ಸೋಮಪಾನಕ್ಕೆ ಅನರ್ಹ
ನಾದನು ಎಂಬ ವಿಚಾರ ]

ಯತ್ರೇಂದ್ರಂ ದೇವತಾಃ ಪರ್ಯವೃಂಜನ್ವಿಶ್ವರೂಪಂ ತ್ವಾಷ್ಟ್ರಮಭ್ಯ-
ಮಂಸ್ತ ವೃತ್ರಮಸ್ತೃತ ಯತೀನ್ಸಾಲಾವೃಕೇಭ್ಯಃ ಪ್ರಾದಾದರುರ್ಮ-
ಘಾನವಧೀದ್ಬೃಹಸ್ಪತೇಃ ಪ್ರತ್ಯವಧೀದಿತಿ ತತ್ರೇಂದ್ರಃ ಸೋಮ-
ಪೀಥೇನ ವ್ಯಾರ್ಧ್ಯತೇಂದ್ರಸ್ಯಾನು ವ್ಯೃದ್ಧಿಂ ಕ್ಷತ್ರಂ ಸೋಮಪೀ-
ಥೇನ ವ್ಯಾರ್ಧ್ಯತಾಪೀಂದ್ರಃ ಸೋಮಪೀಥೇಽಭವತ್ತ್ವಷ್ಟುರಾಽಮು-
ಷ್ಯಸೋಮಂ ತದ್ವ್ಯೃದ್ಧಮೇವಾದ್ಯಾಪಿ ಕ್ಷತ್ರಂ ಸೋಮಪೀಥೇನ ಸ
ಯಸ್ತಂ ಭಕ್ಷಂ ವಿದ್ಯಾದ್ಯಃ ಕ್ಷತ್ರಸ್ಯ ಸೋಮಪೀಥೇನ ವ್ಯೃದ್ಧಸ್ಯ
ಯೇನ ಕ್ಷತ್ರಂ ಸಮೃಧ್ಯತೇ ಕಥಂ ತಂ ವೇದೇರುತ್ಥಾಪಯಂತೀತಿ॥

ಅಥ ರಾಮಃ ಸ್ವಕೀಯಂ ವೇದನಂ ರಾಜ್ಞೋಽಗ್ರೇ ಪ್ರಕಟಯತಿ—ಹೇ ವಿಶ್ವಂತರ ಮದೀಯಂ ವೇದನಂ ಶೃಣು। ಪುರಾ ಕದಾಚಿದ್ದೇವತಾ ಇಂದ್ರಸ್ಯೋಪರಿ ಪಂಚಾಪರಾಧಾನ್ ಸಂಪಾದ್ಯೇಂದ್ರಂ ಪರ್ಯವೃಂಜನ್ ಯಜ್ಞೇಷು ಪರಿತೋ ವರ್ಜಿತವಂತಃ। ಯತ್ರ ಯದಾ ವರ್ಜನಂ ಕೃತಂ ತತ್ರ ತದೇಂದ್ರಃ ಸೋಮಪೀಥೇನ ವ್ಯಾರ್ಧ್ಯತ ಸೋಮಪಾನೇನ ವಿಯುಕ್ತೋಽಭೂತ್। ಇಂದ್ರಸ್ಯ ಯೇಽಪರಾಧಾಸ್ತೇಽಭಿಧೀಯಂತೇ। ತ್ವಷ್ಟುಃ ಪುತ್ರಂ ವಿಶ್ವರೂಪನಾಮಾನಂ ಬ್ರಾಹ್ಮಣಮಭ್ಯಮಂಸ್ತೇಂದ್ರೋ ಹಿಂಸಿತವಾನ್। ತಥಾ ತೇನ ತ್ವಷ್ಟ್ರೋತ್ಪಾದಿತಂ ವೃತ್ರನಾಮಾನಂ ಬ್ರಾಹ್ಮಣಮಸ್ತೃತ ಹಿಂಸಿತವಾನ್। ಏತದುಭಯಂ ತೈತ್ತಿರೀಯೈರ್ವಿಶ್ವರೂಪೋ ವೈ ತ್ವಾಷ್ಟ್ರಸ್ತ್ವಷ್ಟಾ ಹತಪುತ್ರ ಇತ್ಯನುವಾಕದ್ವಯೇ ವಿಸ್ಪಷ್ಟಮಾಮ್ನಾತಮ್। ತಥಾ ಯತಿವೇಷಧರಾನಸುರಾನ್ ಶಸ್ತ್ರೇಣ ಛಿತ್ವಾ ಸಾಲಾವೃಕೇಭ್ಯೋಽರಣ್ಯಶ್ವಭ್ಯಃ ಪ್ರಾದಾತ್। ತಥಾಽನ್ಯಾನಪ್ಯರುರ್ಮಘನಾಮಕಾನ್ ಬ್ರಾಹ್ಮಣವೇಷಾನಸುರಾನವಧೀತ್। ತಥಾ ಸ್ವಗುರೋರ್ಬೃಹಸ್ಪತೇರ್ವಾಕ್ಯಂ ಸ್ವಕೀಯೇನ ವಾಕ್ಯೇನ ಪ್ರ(ತ್ಯ)ವಧೀತ್। ಸೋಽಯಂ ಪ್ರತಿಘಾತೋ ನ ಯುಕ್ತಃ। ತಥಾ ಚಾಪಸ್ತಂಬಃ ಸ್ಮರತಿ—'ವಾಕ್ಯೇನ ವಾಕ್ಯಸ್ಯ ಪ್ರತಿಘಾತಮಾಚಾರ್ಯಸ್ಯ ವರ್ಜಯೇಚ್ಛ್ರೇಯಸಾಂ ಚ' ಇತಿ। ಏತೇ ಪಂಚಾಪರಾಧಾಸ್ತೈರ್ನಿಮಿತ್ತ-

**ಭೂತೈರಿಂದ್ರಸ್ಯ ಸೋಮಪಾನೇ ನಿವಾರಿತೇ ಸತಿ ವ್ಯೃದ್ಧಿಂ ತನ್ನಿವಾರಣಮನು ಕ್ಷತ್ರಂ ಕ್ಷತ್ರಿಯಜಾತಿಃ ಸೋಪಪೀಥೇನ ವ್ಯಾರ್ಧ್ಯತ ಸೋಮಪಾನೇನ ವಿಯುಕ್ತಾಽಭೂತ್ । ತದೂರ್ಧ್ವಂ ಸೋಮಪೀಥೇ ಸೋಮಪಾನೇಽಪಿ ಸಪ್ರವೃತ್ತೋಽಭೂತ್ । ಕಥಮಿತಿ ತದುಚ್ಯತೇ । ಅಮುಷ್ಯ ತ್ವಷ್ಟುಃ ಸೋಮ-ಮಾಬಲಾದಪಿಬದಿತಿ ಶೇಷಃ । ತಥಾ ಚ ತೈತ್ತರೀಯಾ ಆಮನಂತಿ—' ಸ ಯಜ್ಞವೇಶಸಂ ಕೃತ್ವಾ ಪ್ರಾಸಹಾ ಸೋಮಮಪಿಬತ್ ' ಇತಿ । ತತ್ತಥಾ ಸತೀಂದ್ರೇಣ ಬಲಾತ್ಸೋಮೇ ಪೀತೇ ಸತಿ ಕ್ಷತ್ರಿಯಾಂತರಸ್ಯ ತತ್ಸಾಮರ್ಥ್ಯಾಭಾವಾದಿದಾನೀಮಪಿ ಕ್ಷತ್ರಂ ಸೋಮಪೀಥೇನ ವ್ಯೃದ್ಧಮೇವ ಸೋಮಪಾನರಹಿತಮೇವಾವತಿಷ್ಠತೇ । ಯೇನ ಭಕ್ಷವಿಶೇಷೇಣ ಕ್ಷತ್ರಂ ಸಮೃದ್ಧಂ ಭವತಿ ತಾದೃಶೋ ಯೋಽನ್ಯೋ ಭಕ್ಷಃ ಸೋಮಪಾನೇನ ವಿಯುಕ್ತಸ್ಯ ಕ್ಷತ್ರಸ್ಯ ಸಂಭವತಿ ತಂ ಭಕ್ಷಂ ಯಃ ಪುಮಾ-ನ್ವಿದ್ಯಾತ್ತಂ ತಾದೃಶಂ ಕ್ಷತ್ರಿಯಭಕ್ಷವಿದಮಸ್ಮದಾದಿಪುರುಷಂ ಕಥಮೇತೇ ನೇತ್ರಪಾಣಯೋ ವೇದೇ-ರುತ್ಥಾಪಯಂತೀತಿ ರಾಮಸ್ಯೋಪಾಲಂಭಃ ॥**

ಅನಂತರ ರಾಮನು ತನ್ನ ಸ್ವಾನುಭವವನ್ನು ರಾಜನ ಮುಂದೆ ತಿಳಿಸುವನು—ಎಲೈ ವಿಶ್ವಂತರ ರಾಜನೇ, ನನ್ನ ಅನುಭವವನ್ನುಕೇಳು. ಪೂರ್ವದಲ್ಲಿ ಒಂದು ಸಮಯದಲ್ಲಿ ದೇವತೆಗಳೆಲ್ಲರೂ ಸೇರಿ ಇಂದ್ರನ ಮೇಲೆ ಐದು ಅಪರಾಧಗಳನ್ನು (ತಪ್ಪುಗಳನ್ನು) ಹೊರಸಿ ಅವನನ್ನು ಯಜ್ಞದಿಂದ ಸರ್ವವಿಧದಲ್ಲಿಯೂ ವರ್ಜಿಸಿದರು (ಬಿಟ್ಟುಬಿಟ್ಟರು). ದೇವತೆಗಳು ಹೀಗೆ ಇಂದ್ರನನ್ನು ವರ್ಜಿಸಿದ ಮೇಲೆ ಇಂದ್ರನಿಗೆ ಸೋಮಪಾನವಿಲ್ಲದೇ ಹೋಯಿತು. ಇಂದ್ರನ ಅಪರಾಧವೇನು ? ಅವನಿಗೆ ಸೋಮಪಾನವು ಇಲ್ಲದೆ ಹೋಗುವುದಕ್ಕೆ ಕಾರಣವೇನು ? ಎಂದರೆ, ಹಿಂದೆ ತ್ವಷ್ಟೃ ಎಂಬುವನ ಪುತ್ರನಾದ ವಿಶ್ವರೂಪನೆಂಬ ಬ್ರಾಹ್ಮಣನನ್ನು ಕೊಂದನು. ಈ ಎರಡು ವಿಷಯಗಳನ್ನೂ ತೈತ್ತಿರೀಯಸಂಹಿತೆಯಲ್ಲಿ **ತ್ವಷ್ಟಾ ಹತಪುತ್ರಃ** ಎಂದು ಮೊದಲಾದ ಎರಡು ಅನುವಾಕ್ಯಗಳಲ್ಲಿ ವಿಸ್ತಾರವಾಗಿ ಹೇಳಲಾಗಿದೆ. ಇಂದ್ರನು ಮಾಡಿದ ಇನ್ನೊಂದು ಅಪರಾಧವೇನೆಂದರೆ–ಇಂದ್ರನು ಯತಿವೇಷದಲ್ಲಿದ್ದ ಕೆಲವು ಅಸುರರನ್ನು ಕತ್ತಿಯಿಂದ ಕತ್ತರಿಸಿ ಸಾಲಾವೃಕ ಎಂಬ ಅರಣ್ಯಾಶ್ವಗಳಿಗೆ ಆಹಾರವಾಗಿ ಕೊಟ್ಟನು. ಮತ್ತು ಬ್ರಾಹ್ಮಣವೇಷದಲ್ಲಿದ್ದ ಅರುರ್ಮಘ ಎಂಬ ಅಸುರರನ್ನೂ ಸಂಹಾರಮಾಡಿದನು. ಈರೀತಿ ತಪ್ಪನ್ನು ಮಾಡುವುದು ಯುಕ್ತವಲ್ಲ. ಈ ವಿಷಯದಲ್ಲಿ ಆಪಸ್ತಂಬರು ಹೀಗೆ ಹೇಳಿರುವರು–**ವಾಕ್ಯೇನ ವಾಕ್ಯಸ್ಯ ಪ್ರತಿಘಾತಮಾಚಾ-ರ್ಯಸ್ಯ ವರ್ಜಯೇಚ್ಛ್ರೇಯಸಾಂ ಚ** ಎಂದರೆ ಶ್ರೇಯಸ್ಸನ್ನಪೇಕ್ಷಿಸುವ ಪುರುಷನು ತನ್ನ ಗುರುವಿನ ಮಾತಿಗೆ ಎದುರು ಮಾತನಾಡಿ ಅವಮಾನಮಾಡಬಾರದು ಎಂದು. ಮೇಲೆ ಹೇಳಿದ ಈ ಐದು ಇಂದ್ರನು ಮಾಡಿದ ಅಪರಾಧಗಳು. ಈ ಅಪರಾಧಗಳನ್ನು ಮಾಡಿದ ಕಾರಣಕ್ಕಾಗಿ ಇಂದ್ರನಿಗೆ ಸೋಮಪಾನವು ಇಲ್ಲದಂತಾಯಿತು. ಈ ಕ್ರಮವನ್ನೇ ಅನುಸರಿಸಿ ಎಂದರೆ ಕ್ಷತ್ರಿಯಜಾತಿಯು ಇಂದ್ರನ ಅಪರಾಧವನ್ನೇ ಪರಿಗಣಿಸಿ ಈಗಲೂ ಕ್ಷತ್ರಿಯನಿಗೆ ಯಜ್ಞದಲ್ಲಿ ಸೋಮಪಾನವಿಲ್ಲವೆಂಬ ಕ್ರಮವು ರೂಢಿಗೆ ಬಂದಿರುವುದು. ಇದಾದಮೇಲೆಯೂ ಇಂದ್ರನು ಸೋಮಪಾನವನ್ನು ಬಿಡದೆ ಅದರಲ್ಲೆ ಆಸಕ್ತನಾಗಿದ್ದನು. ಹೇಗೆಂದರೆ ತ್ವಷ್ಟುವು ಮಾಡಿದ ಸೋಮಯಾಗದಲ್ಲಿ ಇಂದ್ರನನ್ನು ಆಹ್ವಾನಮಾಡದಿದ್ದರೂ ಇಂದ್ರನು ಬಲವಂತದಿಂದ ತ್ವಷ್ಟೃವಿನ ಯಜ್ಞಕ್ಕೆ ಹೋಗಿ ಅಲ್ಲಿ ಯಜ್ಞಕ್ಕೆ ವಿಘ್ನವನ್ನುಂಟುಮಾಡಿ ಅಲ್ಲವೆ ಸೋಮರಸವನ್ನು ಬಲಾತ್ಕಾರದಿಂದ ಪಾನ ಮಾಡಿದನು. ಈ ವಿಷಯದಲ್ಲಿ ತೈತ್ತಿರೀಯಸಂಹಿತೆಯು ಈರೀತಿ ಹೇಳುವುದು–ಸ **ಯಜ್ಞವೇಶಸಂ ಕೃತ್ವಾ ಪ್ರಾಸಹಾ ಸೋಮಮಪಿಬತ್** ಎಂದರೆ ಇಂದ್ರನು ಬಲವಂತದಿಂದ ತ್ವಷ್ಟುವಿನ ಯಜ್ಞಶಾಲೆಗೆ ನುಗ್ಗಿ ಯಜ್ಞಕ್ಕೆ ವಿಘ್ನವನುಂಟುಮಾಡಿ ಅಲ್ಲಿ ಯಜ್ಞಕ್ಕಾಗಿ ಸಿದ್ಧಪಡಿಸಿಟ್ಟಿದ್ದ ಸೋಮವನ್ನು ಪಾನಮಾಡಿದನು ಎಂದು ಹೇಳಿದೆ. ಸಂಗತಿಯು ಹೀಗಿರುವಾಗ ಎಂದರೆ

ಇಂದ್ರನಿಗೆ ಸೋಮಪಾನವು ಇಲ್ಲದಿರುವಾಗ ಕ್ಷತ್ರಿಯನಾದ ಇತರ ರಾಜನಿಗೆ ಆರೀತಿ ಬಲವಂತದಿಂದ ಸೋಮಪಾನಮಾಡುವ ಸಾಮರ್ಥ್ಯವೆಲ್ಲಿಬಂತು ? ಆದ್ದರಿಂದ ಆ ಪದ್ಧತಿಯನ್ನೆ ಅನುಸರಿಸಿ ಈಗಲೂ ಕೂಡ ಕ್ಷತ್ರಿಯನಾದವನಿಗೆ ಸೋಮಪಾನಮಾಡುವ ಅರ್ಹತೆಯು ಇಲ್ಲವೆಂದು ನಿಷ್ಕರಿಸಲ್ಪಟ್ಟಿರುವುದು. ಸೋಮಪಾನಕ್ಕೆ ಬದಲಾಗಿ ಕ್ಷತ್ರಿಯಶಕ್ತಿಯನ್ನು ವೃದ್ಧಿಮಾಡುವ ಬೇರೊಂದು ಭಕ್ಷವನ್ನು ಸೋಮಪಾನರಹಿತನಾದ ಕ್ಷತ್ರಿಯನಾದವನು ಸೇವಿಸಬೇಕೆಂದು ವೇದಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವುದು. ಈ ವಿಷಯಗಳನ್ನೆಲ್ಲಾ ಸಮಗ್ರವಾಗಿ ತಿಳಿದಿರುವ ನಮ್ಮಂಥ ಬ್ರಾಹ್ಮಣರನ್ನು ಬೆತ್ತವನ್ನು ಹಿಡಿದಿರುವ ಸೇವಕರ ಮೂಲಕ ವೇದಿಯಿಂದ ಹೊರಕ್ಕೆ ತಳ್ಳುವುದು ಹೇಗೆ ಯುಕ್ತವು ಎಂದು ರಾಮನ ಉಪಾಲಂಭವು.

ವೇತ್ಥ ಬ್ರಾಹ್ಮಣ ತ್ವಂ ತಂ ಭಕ್ಷಾಂ೩ ವೇದ ಹೀತಿ ತಂ ವೈ ನೋ
ಬ್ರಾಹ್ಮಣ ಬ್ರೂಹೀತಿ ತಸ್ಮೈ ವೈ ತೇ ರಾಜನ್ನಿತಿ ಹೋವಾಚ ॥

ಅಥ ರಾಮವಿಶ್ವಂತರಯೋರುಕ್ತಿಪ್ರತ್ಯುಕ್ತೀ ದರ್ಶಯತಿ—ಹೇ ಬ್ರಾಹ್ಮಣ ರಾಮ ತ್ವಂ ತಾದೃಶಂ ಭಕ್ಷಂ ಕಿಂ ವೇತ್ಥೇತಿ ವಿಶ್ವಂತರಸ್ಯ ಪ್ರಶ್ನಃ । ತದರ್ಥಾ ಪ್ಲುತಿಃ । ವೇದ ಹಿ ಜಾನಾಮ್ಯೇವೇತಿ ರಾಮೋಽಬ್ರವೀತ್ । ಹೇ ಬ್ರಾಹ್ಮಣ ತ್ವಂ ವೈ ತಮೇವ ಕ್ಷತ್ರಿಯಭಕ್ಷಂ ನೋಽಸ್ಮಾಕಂ ಬ್ರೂಹೀತಿ ವಿಶ್ವಂತರಃ ಪಪ್ರಚ್ಛ । ಹೇ ರಾಜಂಸ್ತಸ್ಮೈ ತೇ ವೈ ತಾದೃಶಾಯ ಪೃಚ್ಛತೇ ತುಭ್ಯಮೇವ ಕಥಯಾಮೀತಿ ರಾಮ ಉವಾಚ ॥

ಈಗ ರಾಮನೆಂಬ ಬ್ರಾಹ್ಮಣನಿಗೂ ವಿಶ್ವಂತರನೆಂಬ ರಾಜನಿಗೂ ನಡೆದ ಸಂವಾದವನ್ನು ತಿಳಿಸುವರು—ಅನಂತರ ವಿಶ್ವಂತರ ರಾಜನು ರಾಮನನ್ನು ಕುರಿತು—ಎಲೈ ಬ್ರಾಹ್ಮಣನೇ, ಹಾಗಾದರೆ ನೀನು ರಾಜನು ಯಜ್ಞದಲ್ಲಿ ಸೋಮಪಾನಕ್ಕೆ ಬದಲಾಗಿ ಏನನ್ನು ಭಕ್ಷಿಸಬೇಕು ಎಂಬುವುದನ್ನು ತಿಳಿದಿರುವೆಯಾ ಎಂದು ಪ್ರಶ್ನೆಮಾಡುವನು. ಇಲ್ಲಿ ಪ್ರಶ್ನಾರ್ಥಕವಾಗಿ ೩ ಎಂಬ ಪ್ಲುತಿಯಿರುವುದು. ಉತ್ತರವನ್ನು ತಿಳಿದೇ ಇರುತ್ತೇನೆ ಎನ್ನಲು ಪುನಃ ರಾಜನು—ಎಲೈ ಬ್ರಾಹ್ಮಣನೇ, ಹಾಗಾದರೆ ಕ್ಷತ್ರಿಯನು ಭಕ್ಷಿಸಬೇಕಾದ ಭಕ್ಷವನ್ನು ತಿಳಿದಿದ್ದರೆ ಹೇಳು ಎಂದನು. ಅದನ್ನು ಕೇಳಿ ರಾಮನೆಂಬ ಆ ಬ್ರಾಹ್ಮಣನು ಎಲೈ ರಾಜನೇ, ಈ ಪ್ರಶ್ನೆಯನ್ನು ಅದಕ್ಕೆ ಉತ್ತರವನ್ನೂ ಕೇಳಿ ತಿಳಿದುಕೊಳ್ಳಬೇಕೆಂಬ ಇಚ್ಛೆಯಿರುವ ನಿನ್ನಂತಹ ರಾಜನಿಗೆ, ನನಗೆ ತಿಳಿದಿರುವ ವಿಷಯವನ್ನು ಅವಶ್ಯಕವಾಗಿ ಹೇಳುವೆನು ಎಂದನು.

---

**(Why Indra was excluded from his share in the Soma. The Kshattriya race became also excluded.)**

(Rama said) "I know it from the fact, that Indra had been excluded by the gods (from having any share in the sacrifices). For he had scorned Visvarupa, the son of Tvashtar, cast down Vritra (and killed him), thrown pious men (yatis) before the jackals (or wolves) and killed the Arurmaghas, and rebuked (his teacher) Brihaspati. On account of these faults Indra was forth-

with excludee from participation in the Soma beverage. And after Indra had been excluded in this way from the Soma, all the Kshatsriyas (at whose head he is) were likewise excluded from it. But he was allowed a share in it afterwards, having stolen the Soma from Tvashtar. But the Kshattriya race remains excluded from the Soma beverage to this day. There is one hero who knows the way in which the Kshattriya who is properly excluded from the Soma beverage, may relish in this juice. Why do thy men expel such a men from the Vedi ?" The king asked then, "Dost thou, O Brahmana, know this way ?" Rama answered, "I will let thee know here, O king."

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಪಂಚವಿಂಶಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೈದನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು.



## ಅಥ ಪಂಚವಿಂಶಾಧ್ಯಾಯೇ ತೃತೀಯಃ ಖಂಡಃ

### ಮೂವತ್ತೈದನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

[ಯಜ್ಞ ಮಾಡುವ ಕ್ಷತ್ರಿಯ ಯಜಮಾನನು ಯಜ್ಞದಲ್ಲಿ ಸೋಮಪಾನಕ್ಕೆ ಬದಲಾಗಿ ಇತರ ಭಕ್ಷ್ಯಗಳನ್ನು ಭಕ್ಷಿಸುವಾಗ ಯಾವ ವಿಧವಾದ ಅನರ್ಹಭಕ್ಷ್ಯಗಳನ್ನು ವರ್ಜಿಸಬೇಕೆಂಬ ವಿಚಾರ ಇತ್ಯಾದಿ]



**ತ್ರಯಾಣಾಂ ಭಕ್ಷಣಾಮೇಕಮಾಹರಿಷ್ಯಂತಿ ಸೋಮಂ ವಾ ದಧಿ ವಾಽಪೋ ವಾ ||**

**ಕ್ಷತ್ರಿಯಸ್ಯ ಹೇಯಾ ಭಕ್ಷಾಸ್ತ್ರಿವಿಧಾ ಉಪಾದೇಯೋ ಭಕ್ಷ ಏಕಸ್ತತ್ರ ಹೇಯಾನ್ ಭಕ್ಷಾನ್ ದರ್ಶಯತಿ—ಹೇಯಾನಾಂ ತ್ರಯಾಣಾಂ ಮಧ್ಯೇ ಭಕ್ಷಮೇಕಂ ಕ್ಷತ್ರಿಯಸ್ಯ ತವಾನಭಿಜ್ಞಾ ಋತ್ವಿಜ ಆಹರಿಷ್ಯಂತಿ । ಕಂ ಭಕ್ಷಮಿತ್ಯಾಶಂಕ್ಯ ಸೋಮಂ ವಾ ದಧಿ ವಾ ಜಲಂ ವೇತ್ಯುಕ್ತಮ್ ||**

ಕ್ಷತ್ರಿಯನಾದವನು ಯಜ್ಞದಲ್ಲಿ ಸೋಮಪಾನಕ್ಕೆ ಬದಲಾಗಿ ಬೇರೆ ವಿಧವಾದ ಭಕ್ಷ್ಯವನ್ನು ಭಕ್ಷಿಸಬೇಕೆಂದು ಹೇಳಿವೆಯಷ್ಟೆ. ಕ್ಷತ್ರಿಯನು ವರ್ಜಿಸಬೇಕಾದ ಭಕ್ಷ್ಯಗಳು ಮೂರು ವಿಧವಾಗಿರುವುವು ಅವುಗಳನ್ನು ಬಿಟ್ಟು ಸ್ವೀಕಾರಾರ್ಹವಾದ

ಬೇರೊಂದು ಭಕ್ಷ್ಯವನ್ನು ಭಕ್ಷಿಸಬೇಕು ಈ ರಾಜನಿಗೆ ವರ್ಜ್ಯವಾದ ಭಕ್ಷಗಳು ಯಾವವು ಎಂಬುದನ್ನು ತಿಳಿಸುವರು. ಅವು ಯಾವವೆಂದರೆ ವರ್ಜ್ಯವಾದ ಎಂದರೆ ಭಕ್ಷಿಸುವುದಕ್ಕೆ ಯೋಗ್ಯವಲ್ಲದ ಭಕ್ಷಗಳು ಮೂರು ಇರುವವು. ಅವು ಯಾವವೆಂದರೆ– ಸೋಮ, ಮೊಸರು, ನೀರು ಈ ಮೂರು ವರ್ಜ್ಯಗಳು ಎಂದರೆ ಕ್ಷತ್ರಿಯನಾದವನು ಭಕ್ಷಿಸಬಾರದು. ಇದಕ್ಕೆ ಕಾರಣವನು ಹೇಳುವರು.

ಸ ಯದಿ ಸೋಮಂ ಬ್ರಾಹ್ಮಣಾನಾಂ ಸ ಭಕ್ಷೋ ಬ್ರಾಹ್ಮಣಾಂಸ್ತೇನ ಭಕ್ಷೇಣ ಜಿನ್ವಿಷ್ಯಸಿ ಬ್ರಾಹ್ಮಣಕಲ್ಪಸ್ತೇ ಪ್ರಜಾಯಾಮಾಜನಿಷ್ಯತ ಆದಾಯ್ಯಾಪಾಯ್ಯಾವಸಾಯೀ ಯಥಾಕಾಮಪ್ರಯಾಪ್ಯೋ ಯದಾ ವೈ ಕ್ಷತ್ರಿಯಾಯ ಪಾಪಂ ಭವತಿ ಬ್ರಾಹ್ಮಣಕಲ್ಪೋಽಸ್ಯ ಪ್ರಜಾಯಾಮಾಜಾಯತ ಈಶ್ವರೋ ಹಾಸ್ಮಾದ್ದ್ವಿತೀಯೋ ವಾ ತೃತೀಯೋ ವಾ ಬ್ರಾಹ್ಮಣತಾಮಭ್ಯುಪೈತೋಃ ಸ ಬ್ರಹ್ಮಬಂಧವೇನ ಜಿಜ್ಯೂಷಿತಃ ||

ತತ್ರ ಸೋಮಪಕ್ಷೇ ದೋಷಂ ದರ್ಶಯತಿ—ಸೋಽನಭಿಜ್ಞ ಋತ್ವಿಗ್ಯದಿ ತೇ ವಿಶ್ವಂತರಸ್ಯ ಕ್ಷತ್ರಿಯಸ್ಯ ಸೋಮಂ ಭಕ್ಷಮಾಹರೇದಿತಿ ಶೇಷಃ। ಸ ಸೋಮೋ ಬ್ರಾಹ್ಮಣಾನಾಂ ಯೋಗ್ಯೋ ಭಕ್ಷಸ್ತೇನ ಭಕ್ಷೇಣ ಬ್ರಾಹ್ಮಣಾನ್ ಜಿನ್ವಿಷ್ಯಸಿ ಪ್ರೀಣಯಿಷ್ಯಸಿ। ನ ತು ಕ್ಷತ್ರಿಯಸ್ಯ ತವ ಪ್ರೀತಿಃ। ತಥಾ ಸತಿ ತೇ ತವ ರಾಜ್ಞಃ ಪ್ರಜಾಯಾಂ ಸಂತತೌ ಬ್ರಾಹ್ಮಣಕಲ್ಪ ಈಷದಸಮಾಪ್ತೋ ಬ್ರಾಹ್ಮಣ ಆಜನಿಷ್ಯತೇ। ಕ್ಷತ್ರಿಯಧರ್ಮೇಣ ಶೌರ್ಯೇಣ ರಹಿತತ್ವಾತ್ತಸ್ಯ ಬ್ರಾಹ್ಮಣಸದೃಶತ್ವಮ್। ಸ ಚ ಪುತ್ರೋ ಬ್ರಾಹ್ಮಣವದ್ವಕ್ಷ್ಯಮಾಣಗುಣಚತುಷ್ಟಯೋಪೇತೋ ಭವತಿ। ಆದಾನಂ ಪ್ರತಿಗ್ರಹಸ್ತಚ್ಛೀಲ ಆದಾಯೀ। ಪ್ರತಿಗ್ರಹಶ್ಚ ಬ್ರಾಹ್ಮಣಗುಣಃ। ಋತ್ವಿಗ್ಭೂತ್ವಾ ಸೋಮಪಾ ಸಮಂತಾತ್ಪಾಯಯತೀತ್ಯಾಪಾಯೀ। ತದೇತದ್ಯಾಜನಮಪಿ ಬ್ರಾಹ್ಮಣಗುಣಃ। ಅವಸಮನ್ನಂ ತಸ್ಯ ಸಂಬಂಧಿ ಯಾಚನಮಾನಸ್ತಮಾವಸಮೇತಿ ಪ್ರಾಪ್ನೋತೀತ್ಯಾವಸಾಯೀ। ಪರಗೃಹೇ ಸದಾ ಭೋಜನಯಾಚನಮಪಿ ಬ್ರಾಹ್ಮಣಗುಣಃ। ಕಾಮಮಿಚ್ಛಾಮನತಿಕ್ರಮ್ಯ ಯಥಾಕಾಮಂ ತದನುಸಾರೇಣ ಪ್ರಯಾಪ್ಯೋ ನಿರ್ವಾಸಯಿತುಂ ಶಕ್ಯಃ ಕ್ಷತ್ರಿಯಸ್ಯೈಶ್ಚಾದಿಪಚ್ಛೌರ್ಯಧನಾದ್ಯಭಾವಾತ್ಸ ಕೋಽಪ್ಯಾಗತ್ಯ ದುರ್ಬಲಂ ಬ್ರಾಹ್ಮಣಂ ತದ್ಗೃಹಾತ್ತದೀಯಗ್ರಾಮಾದ್ವಾ ನಿಷ್ಕಾಸಯಿತುಮಿಚ್ಛತಿ ತದಾನೀಮಯಂ ಬ್ರಾಹ್ಮಣೋ ದುರ್ಬಲತ್ವಾತ್ತೇನ ನಿಃಸಾರಯಿತುಂ ಶಕ್ಯತೇ। ಏವಮೇತೇ ಚತ್ವಾರೋ ಧರ್ಮಾ ಬ್ರಾಹ್ಮಣಗುಣಾಃ। ಸೋಮಂ ಭಕ್ಷಯತೋ ರಾಜ್ಞ ಏತದ್ಗುಣಕಃ ಪುತ್ರೋ ಜಾಯತೇ। ಕಿಂಚ ಯದಾ ಪ್ರಮಾದಾತ್ ಕ್ಷತ್ರಿಯಾಯ ಪಾಪಂ ಕ್ಷತ್ರಿಯಸ್ಯ ಕಿಂಚಿನ್ನಿಂದ್ಯಾಚರಣಂ ಭವತಿ ತದಾನೀಂ ತೇನ ಪಾಪೇನ ತಸ್ಯ ಕ್ಷತ್ರಿಯಸ್ಯ ಪ್ರಜಾಯಾಂ ಸಂತತೌ ಬ್ರಾಹ್ಮಣಕಲ್ಪಃ ಶೌರ್ಯರಾಹಿತ್ಯಾದಿನಾ ಬ್ರಾಹ್ಮಣಸದೃಶಃ ಪುತ್ರ ಆಜಾಯತೇ ಅಸ್ಮಾತ್ಪಾಪಿನಃ ಕ್ಷತ್ರಿಯಾದ್ದ್ವಿತೀಯೋ ವಾ ತೃತೀಯೋ ವಾ ಪುತ್ರೋ ವಾ ಪೌತ್ರೋ ವಾ ಬ್ರಾಹ್ಮಣತಾಮಭ್ಯುಪೈತೋಃ ಶೌರ್ಯಾದಿಗುಣರಹಿತಂ ಬ್ರಾಹ್ಮಣ್ಯಂ

**ಪ್ರಾಪ್ತುಮೀಶ್ವರಃ ಸಮರ್ಥೋ ಭವತಿ । ಸ ಬ್ರಾಹ್ಮಣಸದೃಶಃ ಕ್ಷತ್ರಿಯಪುತ್ರೋ ಬ್ರಾಹ್ಮಣಬಂಧನೇನ ಬ್ರಾಹ್ಮಣಾನಾಂ ಕ್ರಮಬಂಧುತ್ವೇನ ಬ್ರಾಹ್ಮಣೋಚಿತಯಾಜ್ಞಾದಿನಾ ಜಿಜ್ಯೂಷಿತೋ ಜೀವಿತು- ಮಿಷ್ಟೋ ನೀಚರೂಪದೈನ್ಯವೃತ್ತ್ಯಾ ಜೀವಿತುಂ ಪ್ರವೃತ್ತೋ ಭವತೀತ್ಯರ್ಥಃ॥**

ಮೇಲೆ ಹೇಳಿದ ವಿಧಾನಗಳಲ್ಲಿ ದೋಷವನ್ನು ತೋರಿಸುವರು–ಕ್ಷತ್ರಿಯನೂ, ರಾಜನೂ ಆದ ವಿಶ್ವಂತರ ಎಂಬ ಹೆಸರಿನವನಾದ ನಿನಗೆ ಯಜ್ಞದಲ್ಲಿ ಸೋಮ (ಪಾನ) ವನ್ನು ಭಕ್ಷಿಸಬೇಕೆಂದು ಹೇಳುತ್ತಿರುವ ನಿನಗೆ ಋತ್ವಿಜನಾದವನು ಅನಭಿಜ್ಞನೇ (ತಿಳುವಳಿಕೆ ಇಲ್ಲದವನೇ) ಸರಿ. ಏಕೆಂದರೆ ಸೋಮಪಾನವು ಬ್ರಾಹ್ಮಣನಿಗೆ ಮಾತ್ರ ಹೇಳಿರುವ ಭಕ್ಷವು. ಅದನ್ನು ರಾಜನು ಭಕ್ಷಿಸುವುದರಿಂದ (ಪಾನಮಾಡುವುದರಿಂದ ರಾಜನಿಗೆ ಬ್ರಾಹ್ಮಣರಲ್ಲಿ ಮಾತ್ರ ಪ್ರೀತಿಯು ಉಂಟಾಗುವುದು ಕ್ಷತ್ರಿಯಾದಿಸ್ವಜನರಲ್ಲಿ ನಿನಗೆ ಪ್ರೀತಿಯು ಜನಿಸುವುದಿಲ್ಲ. ಹೀಗಿರುವುದರಿಂದ ರಾಜನಾದ ನಿನಗೆ ಹುಟ್ಟುವ ಪುತ್ರಾದಿಸಂತತಿ ಗಳು ಬ್ರಾಹ್ಮಣರಂತೆಯೇ ಎಂದರೆ ಗುಣನಡತೆ ಮೊದಲಾದವುಗಳಲ್ಲಿ ಸ್ವಲ್ಪಮಟ್ಟಿಗೆ ಬ್ರಾಹ್ಮಣರಂತೆಯೇ ಇರುವವು. ಎಂದರೆ ಕ್ಷತ್ರಿಯರಿಗೆ ಇರಬೇಕಾದ ಧೈರ್ಯಪರಾಕ್ರಮಗಳೊಂದೂ ಇರುವುದಿಲ್ಲ ಆ ಪುತ್ರನು ಮುಂದೆ ಹೇಳುವ ನಾಲ್ಕು ವಿಧವಾದ ಬ್ರಾಹ್ಮಣಗುಣಗಳಿಂದಲೇ ಕೂಡಿರುವನು. ಅವು ಯಾವುವೆಂದರೆ–ಆದಾನವೆಂದರೆ ಪ್ರತಿಗ್ರಹವು (ದಾನಸ್ವೀಕಾರವು) ದಾನ ವನ್ನು ಸ್ವೀಕರಿಸುವವನಿಗೆ ಆದಾಯಿ ಎಂದು ಹೆಸರು. ಈ ಪ್ರತಿಗ್ರಹ (ದಾನ) ವನ್ನು ಸ್ವೀಕರಿಸುವುದು ಬ್ರಾಹ್ಮಣನ ಗುಣವು. ಇತರರು ಇದನ್ನು ಅವಲಂಬಿಸುವುದಿಲ್ಲ. ಯಜ್ಞಾದಿಗಳಲ್ಲಿ ಋತ್ವಿಜನ ಪಾತ್ರವನ್ನು ವಹಿಸಿ ಸೋಮಪಾನಮಾಡುವವನಿಗೆ ಆಪಾಯಿ ಎಂದು ಹೆಸರು. ಈ ಗುಣವೂಸಹ ಬ್ರಾಹ್ಮಣನಿಗೇ ಸೇರಿದುದು. ಅವಸಂ ಎಂದರೆ ಅನ್ನವು. ಇದರ ಸಂಬಂಧ ವಾದ ಕಾರ್ಯದಲ್ಲಿ ಆಸಕ್ತನಾದವನಿಗೆ ಆವಸಾಯಿ ಎಂದು ಹೆಸರು. ಎಂದರೆ ಯಾವಾಗಲೂ ಪರಗೃಹದಲ್ಲಿ ಭೋಜನವನ್ನೇ ಅಪೇಕ್ಷಿಸುತ್ತಾ ಅನ್ನವನ್ನು ಇತರರಿಂದ ಯಾಚಿಸುತ್ತಿರುವುದೂ ಬ್ರಾಹ್ಮಣನ ಗುಣಗಳಲ್ಲೊಂದು. ತನ್ನ ಇಚ್ಛೆಯಿದ್ದಷ್ಟು ವಿಷಯಾದಿ ಸುಖವನ್ನು ಅನುಭವಿಸುವುದೂ ಕ್ಷತ್ರಿಯಾದಿವೀರರಾದವರಿಂದ ಸ್ಥಳದಿಂದ ಓಡಿಸಲ್ಪಡುವಷ್ಟು ಶಕ್ತಿಹೀನನೂ ಆಗಿರುವುದಲ್ಲದೆ ಬಲಿಷ್ಠರಾಗಿರುವವರಿಂದ ಗ್ರಾಮದಿಂದಲೂ ಓಡಿಸಲ್ಪಡುವಷ್ಟು ಶಕ್ತಿಹೀನನೂ ಆಗಿರುವನು. ಇದೂ ಬ್ರಾಹ್ಮಣನ ಗುಣವು. ಈರೀತಿ ಹೇಳಿದ ನಾಲ್ಕು ವಿಧಗುಣಗಳೂ ಬ್ರಾಹ್ಮಣನಾದವನಿಗೆ ಮಾತ್ರ ಸರಿಹೋಗುವವು. ಇತರರು (ಬಲಿಷ್ಠರು) ಇದನ್ನು ಸಹಿಸಿಕೊಂಡಿರುವುದಿಲ್ಲ. ಆದ್ದರಿಂದ ಯಜ್ಞದಲ್ಲಿ ಹವಿಶ್ಶೇಷರೂಪವಾದ ಸೋಮವನ್ನು ಭಕ್ಷಿಸುವ ರಾಜನಿಗೆ ಕ್ಷತ್ರಿಯ ಯೋಗ್ಯರಾದ ಧೈರ್ಯಶೌರ್ಯಯುಕ್ತರಾದ ಪುತ್ರರು ಜನಿಸುವುದಿಲ್ಲ. ಹಿಂದೆ ಹೇಳಿದಂತೆ ದುರ್ಬಲರೂ ಬ್ರಾಹ್ಮಣರಂತೆ ಶಕ್ತಿ ಹೀನರೂ ಆದ ಪುತ್ರರು ಮಾತ್ರ ಜನಿಸುವರು. ಮತ್ತು ಕ್ಷತ್ರಿಯನಾದವನು ಪ್ರಮಾದದಿಂದ ನಿಷಿದ್ಧಾಚರಣೆಯನ್ನು ಮಾಡಿದರೆ ಆಗ ಆ ಪಾಪದಿಂದ ರಾಜನಿಗೆ ಹುಟ್ಟುವ ಪುತ್ರಾದಿಗಳು ಶೌರ್ಯಹೀನರಾಗಿಯೂ ಬ್ರಾಹ್ಮಣರಂತೆ ಶಕ್ತಿಹೀನರಾಗಿಯೂ ಹುಟ್ಟು ವರು. ಈ ವಿಧವಾದ ಪಾಪಾಚರಣೆಯಿಂದ ಈ ಕ್ಷತ್ರಿಯನಿಗೆ ಹುಟ್ಟುವ ಮಕ್ಕಳು ಮೂರನೇ ಪೀಳಿಗೆಯಲ್ಲಿ ಅತಿದುರ್ಬಲರಾಗಿ ಬ್ರಾಹ್ಮಣರಂತೆ ಶಕ್ತಿಸಾಮರ್ಥ್ಯರಹಿತರಾಗಿ ಉತ್ಪನ್ನರಾಗಿ ದರಿದ್ರರಾದ ಬ್ರಾಹ್ಮಣರಂತೆಯೇ ಜೀವನವನ್ನು ನಡೆಸುತ್ತಾ ಎಂದರೆ ಯಾಚನಾವೃತ್ತಿಗಳಲ್ಲಿ ಅಲ್ಪಸ್ವಲ್ಪವನ್ನು ಸಂಪಾದಿಸಿ ಮಾನಮರ್ಯಾದೆಯಿಲ್ಲದೆ ಹೀನವೃತ್ತಿಯನ್ನವಲಂಬಿಸಿ ಜೀವನ ಮಾಡುವರು

**ಅಥ ಯದಿ ದಧಿ ವೈಶ್ಯಾನಾಂ ಸ ಭಕ್ಷೋ ವೈಶ್ಯಾಂಸ್ತೇನ ಭಕ್ಷೇಣ ಜಿನ್ವಿಷ್ಯಸಿ ವೈಶ್ಯಕಲ್ಪಸ್ತೇ ಪ್ರಜಾಯಾಮಾಜನಿಷ್ಯತೇಽನ್ಯಸ್ಯ ಬಲಿಕೃದ- ನ್ಯಸ್ಯಾಽಽದ್ಯೋ ಯಥಾಕಾಮಜ್ಯೇಯೋ ಯದಾ ವೈ ಕ್ಷತ್ರಿಯಾಯ-**

**ಪಾಪಂ ಭವತಿ ವೈಶ್ಯಕಲ್ಪೋಽಸ್ಯ ಪ್ರಜಾಯಾಮಾಜಾಯತ ಈಶ್ವರೋ ಹಾಸ್ಮಾತ್ ದ್ವಿತೀಯೋ ವಾ ತೃತೀಯೋ ವಾ ವೈಶ್ಯತಾಮಭ್ಯುಪೈತೋಃ ಸ ವೈಶ್ಯತಯಾ ಜಿಜ್ಯೂಷಿತಃ ॥**

ಸೋಮಸ್ಯ ಭಕ್ಷತ್ವೇ ದೋಷಮುಕ್ತ್ವಾ ದಧ್ನೋ ಭಕ್ಷತ್ವೇ ದೋಷಮಾಹ–ಯದಿ ತೇ ದಧಿರೂಪಂ ಭಕ್ಷಮಾಹರೇತ್ತದಾ ದಧ್ನೋ ವೈಶ್ಯಭಕ್ಷತ್ವಾತ್ತೇನ ವೈಶ್ಯಾನ್ಪ್ರೀಣಯಿಷ್ಯಸಿ । ತವ ಸಂತತೌ ವೈಶ್ಯಸಮಾನಃ ಪುತ್ರ ಆಜನಿಷ್ಯತೇ । ವೈಶ್ಯಸ್ತು ವಾಣಿಜ್ಯಂ ಕುರ್ವನ್ನನ್ಯಸ್ಯ ರಾಜ್ಞೋ ಬಲಿಕೃದ್ಬಲಿಂ ಪೂಜಾಂ ಕರೋತಿ ಕರಂ ಪ್ರಯಚ್ಛತೀತ್ಯರ್ಥಃ । ತಸ್ಯ ರಾಜ್ಞಃ ಕಾಮಮಿಚ್ಛಾಮನತಿಕ್ರಮ್ಯ ಜ್ಯೇಯೋಽಭಿಭವನೀಯೋ ಭವತಿ । ಜ್ಯಾ ಅಭಿಭವ ಇತಿ ಧಾತುಃ । ತ ಏತೇ ಕರಪ್ರದಾನಪರಾಧೀನತ್ವತದಸ್ವಾರ್ಯರ್ತಾಖ್ಯಾ ವೈಶ್ಯಗುಣಾಃ । ಯದಾ ಕ್ಷತ್ರಿಯಸ್ಯ ಕಿಂಚಿತ್ಪಾಪಂ ಸಂಭವತಿ ತದಾ ತಸ್ಯ ಸಂತತೌ ವೈಶ್ಯಸದೃಶೋ ಜಾಯತೇ । ಅಸ್ಮಾತ್ ಕ್ಷತ್ರಿಯಾತ್ಪಾಪಿನೋಽನ್ಯಃ ಪುತ್ರಃ ಪೌತ್ರೋ ವಾ ವೈಶ್ಯತಾಂ ಪ್ರಾಪ್ತುಂ ಸಮರ್ಥೋ ಭವತಿ । ಸ ಚ ವೈಶ್ಯತಯಾ ವೈಶ್ಯವೃತ್ತ್ಯಾ ಕರಪ್ರದಾನಾದಿನಾ ಜೀವಿತುಂ ಪ್ರವೃತ್ತೋ ಭವತಿ ॥

ಕ್ಷತ್ರಿಯನಾದವನು ಹವಿಶ್ಶೇಷವನ್ನು ಭಕ್ಷಿಸುವಾಗ ಸೋಮವನ್ನು ಭಕ್ಷಿಸಿದರೆ ಅದರಿಂದ ಉಂಟಾಗುವ ಹಾನಿಯನ್ನು ವಿವರಿಸಿ ಈಗ ದಧಿ (ಮೊಸರು) ಭಕ್ಷಣದಿಂದ ಸಂಭವಿಸುವ ದೋಷವನ್ನು ವಿವರಿಸುವರು—ಎಲೈ ರಾಜನೇ, ಕೇಳು. ದಧಿ (ಮೊಸರು) ದ್ರವ್ಯವು ವೈಶ್ಯನು ಭಕ್ಷಿಸುವುದಕ್ಕಾಗಿ ನಿರ್ದಿಷ್ಟವಾದ ಪದಾರ್ಥವು. ಅದನ್ನು ನೀನು ಭಕ್ಷಿಸಿದರೆ ನಿನಗೆ ವೈಶ್ಯರಲ್ಲಿ ಪ್ರೀತಿಯು ಹುಟ್ಟುವುದು. ನಿನಗೆ ಹುಟ್ಟುವ ಪುತ್ರಾದಿ ಸಂತತಿಯು ವೈಶ್ಯಸಮಾನವಾಗಿರುವುದು. ವೈಶ್ಯನ ಧರ್ಮಗಳನ್ನು ಕೊಡುತ್ತಾ ಜೀವಿಸುವುದು. ಅದ್ದರಿಂದ ನಿನಗೆ ಹುಟ್ಟುವ ಪುತ್ರನು ರಾಜನಂತೆ ಸ್ವತಂತ್ರನಾಗಿರದೆ ಇನ್ನೊಬ್ಬರ ಅಧೀನಕ್ಕೆ ಒಳಗಾಗಿ ಜೀವನವನ್ನು ನಡೆಸುವನು. ಇನ್ನೊಬ್ಬನ ಇಚ್ಛೆಯಂತೆ ಎಂದರೆ ಹೇಳಿದಂತೆ ಕೇಳಿಕೊಂಡು ಬಿದ್ದಿರಬೇಕು. ರಾಜಪುತ್ರನಿಗೆ ಇರಬೇಕಾದ ಸ್ವತಂತ್ರವಿರುವುದಿಲ್ಲ. ರಾಜ ಮುಂತಾದವರಿಗೆ ತೆರಿಗೆ ಮುಂತಾದ್ದನ್ನು ಕೊಟ್ಟು ಪರಾಧೀನನಾಗಿ ಜೀವಿಸುವುದೇ ವೈಶ್ಯಧರ್ಮವು. ಆದ್ದರಿಂದ ರಾಜನಾದವನು ಪ್ರಮಾದದಿಂದ ಏನಾದರೂ ದುಷ್ಕೃತ್ಯವನ್ನು ಆಚರಿಸಿದರೆ ಅವನಿಗೆ ವೈಶ್ಯಸದೃಶ ಪುತ್ರನು ಜನಿಸುವನು. ಇಂತಹ ವೈಶ್ಯಸದೃಶಪುತ್ರನಿಂದ ಹುಟ್ಟುವ ಮಕ್ಕಳು ಮೊಮ್ಮಕ್ಕಳು ಕೂಡ ವೈಶ್ಯಸದೃಶರಾಗಿಯೇ ಹುಟ್ಟುವರು. ಇಂತಹ ಸಂತತಿಯವರು ಸ್ವತಂತ್ರ ಜೀವನವನ್ನು ನಡೆಸಲು ಅಸಮರ್ಥರಾಗಿ ಅನ್ಯರಿಗೆ ತೆರಿಗೆ ಮುಂತಾದವುಗಳನ್ನು ಕೊಡುತ್ತಾ ವಾಣಿಜ್ಯಾದಿ ವ್ಯಾಪಾರ ಮೂಲಕ ಪರಾಧೀನರಾಗಿಯೇ ಜೀವನವನ್ನು ನಡೆಸುವರು.

**ಅಥ ಯದ್ಯಪಃ ಶೂದ್ರಾಣಾಂ ಸ ಭಕ್ಷಃ ಶೂದ್ರಾಂಸ್ತೇನ ಭಕ್ಷೇಣ ಜಿನ್ವಿಷ್ಯಸಿ ಶೂದ್ರಕಲ್ಪಸ್ತೇ ಪ್ರಜಾಯಾಮಾಜನಿಷ್ಯತೇಽನ್ಯಸ್ಯ ಪ್ರೇಷ್ಯಃ ಕಾಮೋತ್ಥಾಪ್ಯೋ ಯಥಾಕಾಮವಧ್ಯೋ ಯದಾ ವೈ ಕ್ಷತ್ರಿಯಾಯ ಪಾಪಂ ಭವತಿ ಶೂದ್ರಕಲ್ಪೋಽಸ್ಯ ಪ್ರಜಾಯಾಮಾಜಾಯತ ಈಶ್ವರೋ**

**ಹಾಸ್ಮಾದ್ದ್ವಿತೀಯೋ ವಾ ತೃತೀಯೋ ವಾ ಶೂದ್ರತಾಮಭ್ಯುಪೈತೋಃ ಸ ಶೂದ್ರತಯಾ ಜಿಜ್ಯೂಷಿತಃ ॥**

**ದಧಿಭಕ್ಷೇ ದೋಷಮುಕ್ತ್ವಾ ಜಲಭಕ್ಷೇ ದೋಷಮಾಹ— ಯದಿ ತೇ ಕ್ಷತ್ರಿಯಸ್ಯ ಕಶ್ಚಿದೃತ್ವಿಗಪೋ ಜಲ ಭಕ್ಷಮಾಹರೇತ್ತದಾನೀಂ ಸ ಜಲಾತ್ಮಕಃ ಶೂದ್ರಾಣಾಂ ಭಕ್ಷಸ್ತೇನ ಭಕ್ಷೇಣ ಶೂದ್ರಾನ್ಪ್ರೀಣಯಿಷ್ಯಸಿ । ತತಸ್ತವ ಸಂತತೌ ಶೂದ್ರಸದೃಶಃ ಪುತ್ರ ಉತ್ಪದ್ಯತೇ । ಶೂದ್ರಶ್ಚಾನ್ಯಸ್ಯೋತ್ತಮವರ್ಣತ್ರಯಸ್ಯ ಪ್ರೇಷ್ಯಃ ಪ್ರೇಷಣೀಯೋ ಭೃತ್ಯೋ ಭವತಿ । ತಥಾ ಕಾಮೋತ್ಥಾಪ್ಯೋ ಮಧ್ಯರಾತ್ರಾದೌ ಯದಾಕದಾಚಿದ್ದಿನ ಇಚ್ಛಾ ಭವತಿ ತದಾನೀಮಯಮುತ್ಥಾಪ್ಯತೇ । ತಥಾ ತದೀಯಂ ಕಾಮಮಿಚ್ಛಾಮನತಿಕ್ರಮ್ಯ ವಧ್ಯಃ ಕುಪಿತೇನ ಸ್ವಾಮಿನಾ ತಾಡ್ಯೋ ಭವತಿ । ಏತೇ ಶೂದ್ರಗುಣಾಃ । ಕ್ಷತ್ರಿಯಸ್ಯ ಕದಾಚಿತ್ಪಾಪೇ ಸತಿ ಶೂದ್ರಸಮಾನಃ ಪುತ್ರೋ ಜಾಯತೇ । ತಸ್ಮಾತ್ ಕ್ಷತ್ರಿಯಾದನ್ಯಃ ಪುತ್ರಃ ಪೌತ್ರೋ ವಾ ಶೂದ್ರತ್ವಂ ಪ್ರಾಪ್ತುಂ ಸಮರ್ಥೋ ಭವತಿ । ಸ ಪುತ್ರಃ ಶೂದ್ರತಯಾ ಶೂದ್ರವರ್ಣತಯಾ ದಾಸತ್ವವೃತ್ತ್ಯಾ ಜೀವಿತುಂ ಪ್ರವೃತ್ತೋ ಭವತಿ ॥**

ಇದುವರೆಗೂ ವೈಶ್ಯನು ಭಕ್ಷಿಸಬೇಕಾದ ಹವಿಃಶೇಷದ ವಿಷಯವನ್ನು ಹೇಳಿದ್ದಾಯಿತು. ಈಗ ಶೂದ್ರನು ಭಕ್ಷಿಸಬೇಕಾದ ದ್ರವ್ಯವನ್ನು ರಾಜನು ಭಕ್ಷಿಸಿದರೆ ಅದರಿಂದ ಸಂಭವಿಸುವ ಹಾನಿಯನ್ನು ವಿವರಿಸುವರು. ಒಂದುವೇಳೆ ರಾಜನಾದವನು ಸೋಮಪಾನಕ್ಕೆ ಬದಲಾಗಿ ಜಲವನ್ನು ಪಾನಮಾಡಿದಲ್ಲಿ ಅವನು ಶೂದ್ರನನ್ನು ತೃಪ್ತಿಪಡಿಸಿದಂತಾಗುವುದು. ಎಲೈ ರಾಜನೇ ನಿನ್ನ ವಂಶದಲ್ಲಿ ಶೂದ್ರಸದೃಶನಾದ ಪುತ್ರನು ಹುಟ್ಟುವನು. ಶೂದ್ರನ ಗುಣಧರ್ಮಗಳೇನೆಂದರೆ ಇನ್ನೊಬ್ಬ ಪುರುಷನು ಹೇಳಿದಂತೆ ಕೇಳುತ್ತಾ ಅವನ ಅಧೀನನಾಗಿ ಭೃತ್ಯ (ಸೇವಕ)ನಂತೆ ವರ್ತಿಸುವುದು. ಇವನ ಯಜಮಾನನಾದ ಪುರುಷನು ಯಾವಾಗ ಹೇಗೆ ಹೇಳಿದರೆ ಅದರಂತೆ ಕೇಳಿಕೊಂಡಿರಬೇಕು. ಯಾವಾಗ ಎಂದರೆ ಮಧ್ಯರಾತ್ರಿಯಲ್ಲಿಯೂ ಸಹ ನಿದ್ರೆ ಮಾಡುವುದನ್ನು ಬಿಟ್ಟದ್ದು ಯಜಮಾನನ ಆಜ್ಞಾನುವರ್ತಿಯಾಗಿ ಅವನು ಹೇಳಿದ ಸ್ಥಳಕ್ಕೂ ಗ್ರಾಮಾಂತರಗಳಿಗೂ ಹೋಗಿ ಬರಬೇಕು. ತನ್ನ ಯಜಮಾನನ ಇಷ್ಟವನ್ನೇ ಅನುಸರಿಸಿ ನಡೆಯಬೇಕು. ಕೆಲವು ಸಮಯದಲ್ಲಿ ಯಜಮಾನನಿಗೆ ಕೋಪ ಬಂದರೆ ತನ್ನ ಭೃತ್ಯನಾದ ಇವನನ್ನು ಹೊಡೆಯಲೂ ಬಹುದು. ಅವೆಲ್ಲಾ ಶೂದ್ರನಾದವನು ಅನುಭವಿಸುತ್ತಾ ಸಹಿಸಿಕೊಂಡಿರಬೇಕಾದ ಕಷ್ಟಗಳು. ಆದ್ದರಿಂದ ಕ್ಷತ್ರಿಯನಾದವನು ಪ್ರಮಾದದಿಂದ ತಪ್ಪು ಮಾಡಿದರೆ ಅವನಿಗೆ ಶೂದ್ರನಂತೆ ಗುಣವುಳ್ಳ ಪುತ್ರನು ಹುಟ್ಟುವನು. ಇದಲ್ಲದೆ ಇವನ ಸಂತತಿಯಲ್ಲಿ ಮುಂದೆ ಹುಟ್ಟುವ ಮಕ್ಕಳು, ಮೊಮ್ಮಕ್ಕಳು ಮುಂತಾದವರು ಸಹ ಶೂದ್ರರಂತೆಯೇ ಗುಣವುಳ್ಳವರಾಗಿ ಹುಟ್ಟುವರು. ಮತ್ತು ಈ ವಿಧವಾದ ಪುತ್ರಾದಿ ಸಂತತಿಯವರು ಶೂದ್ರರಂತೆಯೇ ಇತರರಿಗೆ ಸೇವಕರಾಗಿ ದಾಸವೃತ್ತಿಯಲ್ಲಿಯೇ ಜೀವಿಸುವರು.



*English Translation*

**(Which portion of sacrifical drink the King has to avoid.)**

The priests may take any one of the three portions (which are to be left) either Soma, or curds, or water. When they take the Soma, which is the portion allotted to Brahmans, then thou wilt favour the Brahmans by it. Thy progeny will be distinguished by the characteristics of the Brahmana ; for they will be ready to take gifts, thirsty after drinking (Soma), and hungry of eating food, and ready to roam about everywhere according to their pleasure. When there is any fault on the Kshattriya (who when sacrificing eats the Brahmana portion), then his progeny has the characteristics of a Brahman ; but in the second or third generation he is then capable of entering completely the Brahmanship, and he will have the desire of living with the Brahmanic fraternity.

When they take the curds, which is the share of the Vaisyas, then thou wilt favour the Vaisyas by it (and consequently be brought near them). Thy offspring will be born with the characteristics of the Vaisyas, paying taxes to another king, to be enjoyed by another ; they will be oppressed according to the pleasure of the king. When there is any fault on the Kshattriya (who when sacrificing eats the Vaisya portion), then his progeny is born with the characteristics of a Vaisya, and in the second or third degree they are capable of entering the caste of the Vaisyas, and are desirous of living in the condition of a Vaisya (i. e. they will have the nature of a Vaisya).

When thou takest the water, which is the share of the Shudras, then thou wilt please the Shudtas by it. Thy progeny will have the characteristics of the Shudras, they are to serve another (the three higher castes), to be expelled and beaten according to the pleasure (of their masters). When there is any fault on the Kshattriya (who when sacrificing eats the Shudra portion), then his offspring will be born with thc charocteristics of the Shu-

dras, and in the sec›nd or third degree he is capable of entering the conditio n of the Shudras, and wil! be des;rous of passing his life in that condotion.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಪಂಚತ್ರಿಂಶಾಧ್ಯಾಯಸ್ಯ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೈದನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು
ಸಮಾಪ್ತವಾದುದು.



## ಪಂಚವಿಂಶಾಧ್ಯಾಯೇ ಚತುರ್ಥಃ ಖಂಡಃ

### ಮೂವತ್ತೈದನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು

[ ರಾಜನಾದವನು ಹವಿಃಶೇಷ ಭಕ್ಷಣಾರ್ಥವಾಗಿ ಯಾವವಿಧವಾದ ದ್ರವ್ಯವನ್ನು
ಆರಿಸಿಕೊಳ್ಳಬೇಕು ? ನ್ಯಗ್ರೋಧಶಬ್ದದ ಮೂಲವು ಮತ್ತು ಅರ್ಥವು. ]



**ಏತೇ ವೈ ತೇ ತ್ರಯೋ ಭಕ್ಷಾ ರಾಜನ್ನಿತಿ ಹೋವಾಚ ಯೇಷಾಮಾಶಾಂ ನೇಯಾತ್ಕ್ಷತ್ರಿಯೋ ಯಜಮಾನಃ ॥**

ಅಥ ಕ್ಷತ್ರಿಯೋಚಿತಂ ಭಕ್ಷಂ ದರ್ಶಯಿತುಮುಕ್ತಾನಾಂ ಭಕ್ಷಾಣಾಂ ಕ್ಷತ್ರಿಯೇಣ ಹೇಯತಾಂ ಸಂಗೃಹ್ಯಾಹ—ಕ್ಷತ್ರಿಯೋ ಯಾಗಂ ಕುರ್ವನ್ನೇಷಾಂ ಭಕ್ಷಾಣಾಮಾಶಾಮಿಚ್ಛಾಮಪಿ ನೇಯಾನ್ನ ಪ್ರಾಪ್ನುಯಾತ್ । ಹೇ ರಾಜನ್ ವಿಶ್ವಂತರ ತೇ ತ್ರಯೋಽಪ್ಯೇತೇ ಪೂರ್ವಮುಕ್ತಾಃ ॥

ಹಿಂದಿನ ಖಂಡದಲ್ಲಿ ಹೇಳಿದ ಮೂರುವಿಧ ದ್ರವ್ಯಗಳನ್ನೂ ಎಂದರೆ ಸೋಮರಸ, ಮೊಸರು, ನೀರು ಇವುಗಳನ್ನು ಕ್ಷತ್ರಿಯನಾದವನು (ರಾಜನು) ಯಜ್ಞಮಾಡುವಾಗ ಹವಿಶ್ಶೇಷವನ್ನಾಗಿ ಭಕ್ಷಿಸಕೂಡದು. ಇವುಗಳನ್ನು ವರ್ಜ್ಯಮಾಡಿ ಬೇರೆ ವಿಧ ದ್ರವ್ಯಗಳನ್ನು ಆರಿಸಿಕೊಳ್ಳಬೇಕು

**ಅಥಾಸ್ಯೈಷ ಸ್ವೋ ಭಕ್ಷೋ ನ್ಯಗ್ರೋಧಸ್ಯಾವರೋಧಾಶ್ಚ ಫಲಾನಿ ಚೌದುಂಬರಾಣ್ಯಾಶ್ವತ್ಥಾನಿ ಪ್ಲಾಕ್ಷಾಣ್ಯಭಿಷುಣುಯಾತ್ತಾನಿ ಭಕ್ಷಯೇತ್ಸೋಽಸ್ಯ ಸ್ವೋ ಭಕ್ಷಃ॥**

**ಉಪಾದೇಯಂ ಭಕ್ಷಂ ದರ್ಶಯತಿ—ಅಥ ಹೇಯಭಕ್ಷಕಥನಾನಂತರಮುಪಾದೇಯೋ ಭಕ್ಷಃ ಕಥ್ಯತ ಇತಿ ಶೇಷಃ । ಅಸ್ಯ ರಾಜ್ಞಃ ಏವ ವಕ್ಷ್ಯಮಾಣಃ ಸ್ವೋ ಭಕ್ಷಃ । ಕೋಽಸಾವಿತಿ ಸೋಽಭಿಧೀಯತೇ। ನ್ಯಗ್ರೋಧಸ್ಯಾವರೋಧಾಃ ಶಾಖಾಭ್ಯೋಽವಾಙ್ಮುಖತ್ವೇನ ಪ್ರರೋಹಂತೋ ಮೂಲವಿಶೇಷಾಃ । ತಥೈವೋದುಂಬರಾಶ್ವತ್ಥಪ್ಲಕ್ಷಾಖ್ಯಾನಾಂ ವೃಕ್ಷಾಣಾಂ ಫಲಾನಿ ಚ ತಾನಿ ಸರ್ವಾಣ್ಯಭಿಷುಣುಯಾತ್। ಅಭಿಷುತ್ಯ ಚ ತಾನಿ ರಸಂ ಭಕ್ಷಯೇತ್। ಸೋಽಯಮಸ್ಯ ಕ್ಷತ್ರಿಯಸ್ಯ ಸ್ವೋಚಿತೋ ಭಕ್ಷಃ ॥**

ವರ್ಜ್ಯಮಾಡಬೇಕಾದ ದ್ರವ್ಯಗಳನ್ನು ಹೇಳಿ ಈಗ ಕ್ಷತ್ರಿಯನಿಗೆ ಸ್ವೀಕಾರಾರ್ಹವಾದ ದ್ರವ್ಯ (ಹವಿಃಶೇಷಭಕ್ಷಣ) ವನ್ನು ವಿವರಿಸುವರು- ಮುಂದೆ ಹೇಳುವ ದ್ರವ್ಯಗಳು ಕ್ಷತ್ರಿಯನಿಗೆ ಭಕ್ಷಿಸಲು ಯೋಗ್ಯವಾದ ಹವಿರ್ದ್ರವ್ಯಗಳು. ಅವುಗಳನ್ನು ಇಲ್ಲಿ ತಿಳಿಸಲಾಗಿದೆ. ನ್ಯಗ್ರೋಧ (ಆಲವಮರ) ಎಂಬ ವೃಕ್ಷವಿರುವುದು. ಈ ವೃಕ್ಷವು ದೊಡ್ಡದಾಗಿ ಬೆಳೆದಮೇಲೆ ಮತ್ತೆ ಸುತ್ತಲೂ ಬೇರು ಬಿಡುವುದಕ್ಕೋಸ್ಕರ ಮೇಲಿನಿಂದ ಕೆಳಕ್ಕೆ ವೃಕ್ಷದ ಸಾರವು ಹರಿದುಹೋಗುವುದು. ಇವು ಮುಂದೆ ಈ ವೃಕ್ಷದ ಬೇರುಗಳಾಗಿ ಪರಿಣಮಿಸುವವು. ಹಾಗೆಯೇ ಈ ನ್ಯಗ್ರೋಧವೃಕ್ಷದ ಬೀಳಿನೊಡನೆ ಉದುಂಬರ, ಅಶ್ವತ್ಥ, ಪ್ಲಕ್ಷ ಎಂಬ ವೃಕ್ಷಗಳ ಫಲಗಳನ್ನೂ (ಹಣ್ಣುಗಳನ್ನೂ) ಸೇರಿಸಿ ಚೆನ್ನಾಗಿ ಕುಟ್ಟಿ ರಸವನ್ನು ತೆಗೆಯಬೇಕು. ಕ್ಷತ್ರಿಯನಾದವನು ಹವಿಶ್ಶೇಷಭಕ್ಷಣಾರ್ಥವಾಗಿ ಈ ರಸವನ್ನು ಕುಡಿಯಬೇಕು. ಇದೇ ಕ್ಷತ್ರಿಯನಿಗೆ ಯಜ್ಞದಲ್ಲಿ ಪಾನಮಾಡಲು ಯೋಗ್ಯವಾದ ಹವಿಶ್ಶೇಷಭಕ್ಷಣವು.

ಯತೋ ವಾ ಅಧಿ ದೇವಾ ಯಜ್ಞೇನೇಷ್ಟ್ವಾ ಸ್ವರ್ಗಂ ಲೋಕಮಾ-
ಯಂಸ್ತತ್ರೈತಾಂಶ್ಚಮಸಾನ್ನ್ಯುಬ್ಜಂಸ್ತೇ ನ್ಯಗ್ರೋಧಾ ಅಭವನ್ನ್ಯುಬ್ಜಾ
ಇತಿ ಹಾಪ್ಯೇನಾನೇತರ್ಹ್ಯಾಚಕ್ಷತೇ ಕುರುಕ್ಷೇತ್ರೇ ತೇ ಹ ಪ್ರಥಮಜಾ
ನ್ಯಗ್ರೋಧಾನಾಂ ತೇಭ್ಯೋ ಹಾನ್ಯೇಽಧಿಜಾತಾಃ ॥

ಅಥ ನ್ಯಗ್ರೋಧಪ್ರಶಂಸಾರ್ಥಂ ತದುತ್ಪತ್ತಿಂ ದರ್ಶಯತಿ—ದೇವಾಃ ಪುರಾ ಯತೋ ವಾ ಅಧಿ ಯಸ್ಯ ಕುರುಕ್ಷೇತ್ರಸ್ಯೋಪರಿ ಯಜ್ಞೇನೇಷ್ಟ್ವಾ ಸ್ವರ್ಗಂ ಲೋಕಮಾಯನ್ ಪ್ರಾಪ್ನುವಂಸ್ತತ್ರ ತಸ್ಮಿನ್ಯಜ್ಞದೇಶ ಏತಾನ್ಸೋಮ ಚಮಸಾನ್ನ್ಯುಬ್ಜನ್ನಧೋಮುಖಾನಸ್ಥಾಪಯನ್ । ಅಧೋಮುಖಾಸ್ತೇ ಚಮಸಾನ್ಯಗ್ರೋಧವೃಕ್ಷಾ ಅಭವನ್। ಏತರ್ಹೀದಾನೀಮಪಿ ತಸ್ಮಿನ್ ಕುರುಕ್ಷೇತ್ರೇ ಏನಾನ್ನ್ಯಗ್ರೋಧವೃಕ್ಷಾನ್ನ್ಯುಬ್ಜಾ ಇತ್ಯನೇನ ನಾಮ್ನಾ ಚಕ್ಷತೇ । ತೇ ಕುರುಕ್ಷೇತ್ರದೇಶಸ್ಥಾ ವೃಕ್ಷಾ ಭೂಲೋಕವರ್ತಿನಾಂ ಸರ್ವೇಷಾಂ ನ್ಯಗ್ರೋಧವೃಕ್ಷಾಣಾಂ ಮಧ್ಯೇ ಪ್ರಥಮಜಾಃ ಪ್ರಥಮತ ಉತ್ಪನ್ನಾಃ ತೇಭ್ಯಸ್ತದ್ದೇಶವರ್ತಿನ್ಯಗ್ರೋಧವೃಕ್ಷೇಭ್ಯೋಽನ್ಯೇ ದೇಶಾಂತರವರ್ತಿನೋ ನ್ಯಗ್ರೋಧಾ ಅಧಿಜಾತಾ ಆಧಿಕ್ಯೇನೋತ್ಪನ್ನಾಃ ॥

ಈ ನ್ಯಗ್ರೋಧವೃಕ್ಷದ ಮೂಲಸ್ವರೂಪವನ್ನು ವಿವರಿಸುವರು-ಪೂರ್ವದಲ್ಲಿ ದೇವತೆಗಳು ಒಂದಾನೊಂದು ಕಾಲದಲ್ಲಿ ಕುರುಕ್ಷೇತ್ರವೆಂಬ ಪ್ರದೇಶದ ಮೇಲೆ ಯಜ್ಞಮಾಡಿದರು. ಆಗ ಸೋಮರಸವನ್ನು ತುಂಬುವುದಕ್ಕಾಗಿ ಸಿದ್ಧಪಡಿಸಿದ್ದ ಚಮಸ ಪಾತ್ರೆಗಳನ್ನು (ಸೋಮಪಾನಮಾಡುವುದಕ್ಕೆ ಉಪಯೋಗಿಸುವ ಮರದ ಬಟ್ಟಲುಗಳು) ಪಾತ್ರಾಸಾದನಕ್ಕಾಗಿ ಬೋರಲಾಗಿ (ತಲೆಕೆಳಗಾಗಿ) ಇರಿಸಿದರು. ಹೀಗೆ ಬೋರಲಾಗಿ ಇರಿಸಿದ್ದ ಚಮಸಗಳು ನ್ಯಗ್ರೋಧವೆಂಬ ವೃಕ್ಷಗಳಾದುವು. ಈಗಲೂ

ಕೂಡ ಕುರುಕ್ಷೇತ್ರಪ್ರಾಂತ್ಯದಲ್ಲಿ ಈ ನ್ಯಗ್ರೋಧವೃಕ್ಷಗಳನ್ನು ನ್ಯುಬ್ಜವೃಕ್ಷಗಳೆಂದು ಕರೆಯುತ್ತಾರೆ. ಈ ನ್ಯಗ್ರೋಧವೃಕ್ಷಗಳು ಮೊದಲು ಕುರುಕ್ಷೇತ್ರಪ್ರಾಂತ್ಯಗಳಲ್ಲಿ ಹುಟ್ಟಿ ಬೆಳೆದುಕ್ರಮವಾಗಿ ಇತರಕಡೆಗಳಿಗೂ ಹರಡಿದವು.

**ತೇ ಯನ್ನ್ಯಂಚೋಽರೋಹಂಸ್ತಸ್ಮಾನ್ನ್ಯಙ್ರೋಹತಿ ನ್ಯಗ್ರೋಹೋ ನ್ಯಗ್ರೋಹೋ ವೈ ನಾಮ ತನ್ನ್ಯಗ್ರೋಹಂ ಸಂತಂ ನ್ಯಗ್ರೋಧ ಇತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಃ ॥**

ನ್ಯಗ್ರೋಧಶಬ್ದಂ ನಿರ್ವಕ್ತಿ—ತೇ ಚಮಸಾ ಯದ್ಯಸ್ಮಾತ್ಕಾರಣಾನ್ನ್ಯಂಚೋಽಧೋಮುಖಾ ಅರೋಹನ್ಪ್ರಾದುರ್ಭೂತಾಸ್ತಸ್ಮಾತ್ಕಾರಣಾನ್ನ್ಯಙ್ಙಧೋಮುಖೋ ರೋಹತಿ ಪ್ರಾದುರ್ಭವತೀತಿ ವ್ಯುತ್ಪತ್ತ್ಯಾ ನ್ಯಗ್ರೋಹಃ ಸಂಪನ್ನಃ। ಸ ಚ ವಸ್ತುತೋ ನ್ಯಗ್ರೋಹ ಇತ್ಯೇವ ನಾಮಾರ್ಹತಿ ತಸ್ಯ ನಾಮ್ನೋ ವ್ಯುತ್ಪತ್ತ್ಯನುಸಾರಿತ್ವಾತ್। ತಥಾಽಪಿ ನ್ಯಗ್ರೋಹಂ ಸಂತಂ ವೃಕ್ಷಂ ಲೌಕಿಕಾ ಹಕಾರಸ್ಯ ಧಕಾರಾದೇಶಂ ಕೃತ್ವಾ ನ್ಯಗ್ರೋಧ ಇತಿ ಪರೋಕ್ಷನಾಮ್ನಾ ವ್ಯವಹರಂತಿ ದೇವಾನಾಂ ಪೂಜ್ಯಾನಾಮಾಚಾರ್ಯೋಪಾಧ್ಯಾಯಾದೀನಾಂ ಪರೋಕ್ಷನಾಮಪ್ರಿಯತ್ವಾತ್ ॥

ನ್ಯಗ್ರೋಧಶಬ್ದದ ನಿರ್ವಚನವನ್ನು (ವ್ಯುತ್ಪತ್ತಿಯನ್ನು ವಿವರಿಸುತ್ತಾರೆ—ದೇವತೆಗಳು ಯಜ್ಞಮಾಡಿದ ಕಾಲದಲ್ಲಿ ಚಮಸಪಾತ್ರೆಗಳನ್ನು ಅಗ್ನಿಯ ಸಮೀಪದಲ್ಲಿ ಪಾತ್ರಸಾದನಾರ್ಥವಾಗಿ ನ್ಯಙ್ ಎಂದರೆ ಬೋರಲಾಗಿ ತಲೆಕೆಳಗಾಗಿ (ಹೀಗೆ ಇಡುವುದು ರೂಢಿಯು) ಇಟ್ಟಿದ್ದರಿಂದ ಆ ಮರದ ಚಮಸಗಳು ಭೂಮಿಯಲ್ಲಿ ಬಿದ್ದು ಒಂದು ವಿಧವಾದ ವೃಕ್ಷಗಳಾಗಿ ಪರಿಣಮಿಸಿದುವು. ತಲೆಕೆಳಗಾಗಿ ಇರಿಸಿದ್ದ ಚಮಸಪಾತ್ರೆಗಳಿಂದ ಇವು ಮೊಳಕೆಯಾಗಿ ಹುಟ್ಟಿ ಬೆಳೆದದ್ದರಿಂದ ಈ ವೃಕ್ಷಗಳಿಗೆ ನ್ಯಗ್ರೋಧ ವೃಕ್ಷ (ತಲೆಕೆಳಗಾಗಿ ಬೆಳೆಯುವ ವೃಕ್ಷ) ಗಳೆಂದು ಹೆಸರಾಯಿತು. ಈ ಹೆಸರು ವ್ಯುತ್ಪತ್ತಿಗೆ ಅನುಸಾರವಾಗಿರುವುದರಿಂದ ಈಗಲೂ ಆ ಹೆಸರು ರೂಢಿಯಲ್ಲಿದೆ. ನ್ಯಗ್ರೋಹ ಎಂಬ ಹೆಸರು ಕ್ರಮ ಕ್ರಮವಾಗಿ ಜನರಿಂದ ನ್ಯಗ್ರೋಧವೆಂದು (ಹಕಾರಕ್ಕೆ ಬದಲಾಗಿ ಧಕಾರ) ಪರಿವರ್ತನೆಯನ್ನು ಹೊಂದಿ ಬಳಕೆಯಲ್ಲಿರುವುದು. ದೇವತೆಗಳಿಗೂ ಪೂರ್ವೀಕರಾದ ಆಚಾರ್ಯರುಗಳಿಗೂ ಜನರಿಗೆ ಸುಲಭವಾಗಿ ಅರ್ಥವಾಗದ ಹೆಸರುಗಳು ಪರೋಕ್ಷವಾಗಿ ಪ್ರಿಯವಾದುದರಿಂದ ನ್ಯಗ್ರೋಹಕ್ಕೆ ಬದಲಾಗಿ ನ್ಯಗ್ರೋಧವೆಂಬ ಹೆಸರೇ ರೂಢಿಗೆ ಬಂದು ಈಗಲೂ ಬಳಕೆಯಲ್ಲಿರುವುದು.

———

*English Translation*

**(Which portion the king should choose at the sacrifice. The origin and meaning of Nyagrodha.**

These are the three portions (bhakshas), O king, of which the Kashttriya, when performing a sacrifice, must choose none. But the following is his own portion, which he is to enjoy. He must squeeze the airy descending roots of tke Nyagrodha tree, together with the fruits of the Udumbara

Asvattha, and Plaksha trees, and drink the juice of them. This is his own portion.

(For the origin of Nyagrodha tree is as follows) : When the gods after the (successful) performance of their sacrifice, went up to heaven, they tilted over (ny-ubjan) the Soma cups, whence the Nyagrodha trees grew up And by the name of Nyubja, i. e. tilted over, they are now called in Kurukshetra, where they grew first ; from them all the others originated. They grew descending the roots (nyancho rohanti). Therefore what grows downward growth (ngagroha) ; and for this name, signifying "downward growth," they called the tree "Nyagrodha." It is called by the name Nyagrodha, whose meaning is hidden to men, and not by the more intelligble name Nyagroha, for the gods like to conceal the very names of objects from men, and call them by names unintelligible to them.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಪಂಚತ್ರಿಂಶಾಧ್ಯಾಯೇ ಚತುರ್ಥಃ ಖರಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೈದನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು
ಸಮಾಪ್ತವಾದುದು.



## ಪಂಚವಿಂಶಾಧ್ಯಾಯೇ ಪಂಚಮಃ ಖಂಡಃ

**ಮೂವತ್ತೈದನೆಯ ಅಧ್ಯಾಯದಲ್ಲಿ ಐದನೆಯ ಖಂಡವು**

---

[ಯಜ್ಞದಲ್ಲಿ ಕ್ಷತ್ರಿಯನಾದ ರಾಜನು ಸವಿತ್ರೇಃಭಕ್ಷಣಾರ್ಥವಾಗಿ ನ್ಯಗ್ರೋಧ ವೃಕ್ಷದ ರಸವನ್ನು ಏತಕ್ಕಾಗಿ
ಪಾನಮಾಡಬೇಕೆಂಬ ವಿಷಯದಲ್ಲಿ ಸಂಕೇತವು]

---

**ತೇಷಾಂ ಯಶ್ಚಮಸಾನಾಂ ರಸೋಽವಾಙೈತೇಽವರೋಧಾ ಅಭವನ್ನಥ
ಯ ಊರ್ಧ್ವಸ್ತಾನಿ ಫಲಾನಿ**

**ನ್ಯಗ್ರೋಧವೃಕ್ಷಸ್ಯೋತ್ಪತ್ತಿಮುಕ್ತ್ವಾ ತದೀಯಾನಾಮವರೋಧಾನಾಂ ಫಲಾನಾಂ ಚೋ-ತ್ಪತ್ತಿಂ ದರ್ಶಯತಿ—ತೇಷಾಮಧೋ ಮುಖತ್ವೇನಾವಸ್ಥಿತಾನಾಂ ಚಮಸಾನಾಂ ವಟವೃಕ್ಷತ್ವೇ ಸತಿ ಚಮಸಗತೋ ಯೋ ರಸಃ ಸೋಽವಾಙ್ಸೈದಧೋಮುಖೋಽಗಚ್ಛತ್ ತೇ ರಸವಿಶೇಷಾ ಅವರೋಧಾ ಅಧೋಮುಖತ್ವೇನೋತ್ಪನ್ನಾ ವಟಶಾಖಾಭ್ಯೋ ನಿರ್ಗತಾ ಮೂಲವಿಶೇಷಾ ಅಭವನ್ । ಅಥ ತದ್ವೈಲಕ್ಷಣ್ಯೇನ ಯೋ ರಸ ಊರ್ಧ್ವೋ ನಿರಗಚ್ಛತ್ತಾನಿ ರಸರೂಪಾಣಿ ವಟಫಲಾನ್ಯಭವನ್ ॥**

ನ್ಯಗ್ರೋಧವೃಕ್ಷದ ಉತ್ಪತ್ತಿಸ್ವರೂಪವನ್ನು ವಿವರಿಸಿ ಅಧೋಮುಖವಾಗಿ ಹರಿಯುವ ಅದರ ರಸದಿಂದ ಉಂಟಾಗುವ ಫಲಗಳ ಉತ್ಪತ್ತಿಯನ್ನು ಹೇಳುವರು—ಹಿಂದೆ ಚಮಸ ಪಾತ್ರೆಗಳನ್ನು ಅಧೋಮುಖವಾಗಿ (ತಲೆಕೆಳಕಾಗಿ, ಬೋರಲಾಗಿ) ಇಟ್ಟಿದ್ದಾಗ ಆ ಪಾತ್ರೆಗಳಲ್ಲಿದ್ದ ಸೋಮರಸಗಳು ಚಮಸಗಳಿಂದ ಕೆಳಕ್ಕೆ ಸುರಿದುಹೋದವು. ಈ ರೀತಿ ನೆಲದ ಮೇಲೆ ಬಿದ್ದು ಹರಿದುಹೋದ ಸೋಮರಸಗಳು ಈ ನ್ಯಗ್ರೋಧವೃಕ್ಷದ ಬೇರುಗಳಾಗಿ ಪರಿಣಮಿಸಿದವು. ಆದ್ದರಿಂದ ನ್ಯಗ್ರೋಧವೃಕ್ಷದ ರಸಗಳು ಎರಡುಮುಖವಾಗಿ ಹರಿಯುವಂತಾದವು. ಚಮಸಗಳಿಂದ ಬಿದ್ದು ಹರಿದು ಹೋದ ರಸಗಳು ಭೂಮಿಯೊಳಕ್ಕೆ ಇಳಿದು ವೃಕ್ಷದ ಬೇರುಗಳಾಗಿ ಮಾರ್ಪಟ್ಟವು. ಊರ್ಧ್ವಮುಖವಾಗಿ ಭೂಮಿಯಿಂದ ಕೊಂಬೆಗಳ ಮೂಲಕ ಹರಿಯುತ್ತಿರುವ ರಸಗಳು ಆ ವೃಕ್ಷದ ಫಲಗಳಾಗಿ ಪರಿಣಮಿಸಿದವು.

ಏಷ ಹ ವಾವ ಕ್ಷತ್ರಿಯಃ ಸ್ವಾದ್ಭಕ್ಷ್ಯಾನ್ನೈತಿ ಯೋ ನ್ಯಗ್ರೋಧಸ್ಯಾವ-
ರೋಧಾಂಶ್ಚ ಫಲಾನಿ ಚ ಭಕ್ಷಯತ್ಯುಪಾಹ ಪರೋಕ್ಷೇಣೈವ
ಸೋಮಪೀಥಮಾಪ್ನೋತಿ ನಾಸ್ಯ ಪ್ರತ್ಯಕ್ಷಂ ಭಕ್ಷಿತೋ ಭವತಿ
ಪರೋಕ್ಷಮಿವ ಹ ವಾ ಏಷ ಸೋಮೋ ರಾಜಾ ಯನ್ನ್ಯಗ್ರೋಧಃ
ಪರೋಕ್ಷಮಿವೈಷ ಬ್ರಹ್ಮಣೋ ರೂಪಮುಪನಿಗಚ್ಛತಿ ಯತ್ಕ್ಷತ್ರಿಯಃ
ಪುರೋಧಯೈವ ದೀಕ್ಷಯೈವ ಪ್ರವರೇಣೈವ ॥

**ತೇಷಾಮವರೋಧಾನಾಂ ಫಲಾನಾಂ ಚ ಕ್ಷತ್ರಿಯಭಕ್ಷತ್ವಂ ಪ್ರಶಂಸತಿ—ಯಃ ಪುಮಾನ್ನ್ಯ-ಗ್ರೋಧವೃಕ್ಷಸ್ಯಾವರೋಧಾಂಸ್ತ್ವಾಧೋಮುಖಾನಿ ಮೂಲಾನಿ ಚ ತತ್ಫಲಾನಿ ಚ ಭಕ್ಷಯತಿ ಏಷ ಏವ ಕ್ಷತ್ರಿಯಃ ಸ್ವೋಚಿತಾದ್ಭಕ್ಷಾನ್ನಾಪೈತಿ । ಕಿಂಚಾಯಂ ಕ್ಷತ್ರಿಯಃ ಪರೋಕ್ಷೇಣೈವ ಸೋಮಪೀಥಂ ಸೋಮಪಾನಮುಪಾಹ ಪ್ರಾಪ್ನೋತಿ ಸರ್ವಥಾ ಪ್ರಾಪ್ನೋತಿ । ಅಸ್ಯ ಕ್ಷತ್ರಿಯಸ್ಯ ಪ್ರತ್ಯಕ್ಷಮವ್ಯವ-ಧಾನಂ ಯಥಾ ಭವತಿ ತಥಾ ಸೋಮೋ ಭಕ್ಷಿತೋ ನ ಭವತಿ ನ್ಯಗ್ರೋಧೇನ ವ್ಯವಹಿತತ್ವಾತ್ । ಯೋಽಯಂ ನ್ಯಗ್ರೋಧ ಏಷ ಪರೋಕ್ಷಮೇವ ಯಥಾ ಭವತಿ ತಥಾ ವರ್ತಮಾನಃ ಸೋಮೋ ರಾಜಾ । ಯೋಽಯಂ ಕ್ಷತ್ರಿಯೋಽಸ್ತಿ ಏಷೋಽಪಿ ಪರೋಕ್ಷಮಿವ ವ್ಯವಧಾನೇನೈವ ಬ್ರಾಹ್ಮಣೋ ರೂಪಂ ತದೀಯವೇಷಮುಪನಿಗಚ್ಛತಿ । ಪುರೋಧಯೈವ ಪುರೋಹಿತದ್ವಾರೇಣ ದೀಕ್ಷಯೈವ ದೀಕ್ಷಾರೂಪಸಂಸ್ಕಾರೇಣ ಚ ಪ್ರವರೇಣೈವ ಪುರೋಹಿತಗೋತ್ರೇಣ ಚ ಬ್ರಾಹ್ಮಣಸ್ಯ ಸಂಪಾದಿತ-ತ್ವಾದಿತಿ ಶೇಷಃ ॥**

ವೃಕ್ಷದಿಂದ ಊರ್ಧ್ವಾಭಿಮುಖವಾಗಿ ಹರಿಯುವ ರಸಗಳಿಂದ ಉತ್ಪನ್ನವಾದ ಫಲಗಳನ್ನು ಭಕ್ಷಿಸುವುದನ್ನು ಪ್ರಶಂಸೆ ಮಾಡುವರು–ಯಾವ ಪುರುಷನು ಯಜ್ಞದಲ್ಲಿ ಹವಿಃಶೇಷಭಕ್ಷಣೆಗೆ ಬದಲಾಗಿ ನ್ಯಗ್ರೋಧವೃಕ್ಷದ (ಆಲದ ಮರದ) ಬೀಳುಗಳ ರಸವನ್ನೂ ಆ ಮರದ ಫಲಗಳ ರಸವನ್ನೂ ವಿಧಿವತ್ತಾಗಿ ಪಾನಮಾಡುವನೋ ಆ ಪುರುಷನು ಕ್ಷತ್ರಿಯನಿಗೆ ಯೋಗ್ಯವಾದ ಹವಿಃಶೇಷವನ್ನು ಭಕ್ಷಿಸಿದಂತೆ ಆಗುವುದು. ಮತ್ತು ಆ ಪುರುಷನು ಸೋಮಪಾನವನ್ನು ಪರೋಕ್ಷವಾಗಿ ಮಾಡಿದಂತೆಯೇ ಆಗುವುದು. ಕ್ಷತ್ರಿಯನು ಪ್ರತ್ಯಕ್ಷವಾಗಿ ಸೋಮಪಾನಮಾಡಲು ಸಾಧ್ಯವಿಲ್ಲವಾದರೂ ಈ ನ್ಯಗ್ರೋಧವೃಕ್ಷದ ರಸಪಾನದಿಂದ ಸೋಮಪಾನಮಾಡಿದಂತೆಯೇ ಆಗುವುದು. ಏಕೆಂದರೆ ನ್ಯಗ್ರೋಧದಂತೆ ಕ್ಷತ್ರಿಯನು ಸಹ ಪರೋಕ್ಷವಾಗಿ (ಬ್ರಾಹ್ಮಣವೇಷ ದಲ್ಲಿಲ್ಲ) ಬ್ರಾಹ್ಮಣನೇ ಆಗಿರುವನು. ಏಕೆಂದರೆ ಕ್ಷತ್ರಿಯನು ತನ್ನ ಪುರೋಹಿತನ ಮೂಲಕ ದೀಕ್ಷಾಬದ್ಧನಾಗಿ ಎಂದರೆ ದೀಕ್ಷಾ ಸಂಸ್ಕಾರಾದಿಗಳಿಂದ ಶುದ್ಧನಾಗಿಯೂ ಪುರೋಹಿತನ ಗೋತ್ರಪ್ರವರಾದಿಗಳಿಂದ ಬ್ರಾಹ್ಮಣನಂತೆಯೂ ಪರಿಗಣಿಸಲ್ಪಡುವುದರಿಂದ ಬ್ರಾಹ್ಮಣನು ಪಾನಮಾಡಬೇಕಾದ ಸೋಮಕ್ಕೆ ಬದಲಾಗಿ ಎಂದರೆ ಪರೋಕ್ಷವಾಗಿ ಸೋಮನೆಂದೇ ಪರಿಗಣಿಸಲ್ಪಟ್ಟಿರುವ ನ್ಯಗ್ರೋಧವೃಕ್ಷದ ಮತ್ತು ಫಲಗಳ ರಸವನ್ನು ಪಾನಮಾಡುವುದೂ ಸಹಜವಾಗಿಯೇ ಇದೆ.

ಕ್ಷತ್ರಂ ವಾ ಏತದ್ವನಸ್ಪತೀನಾಂ ಯನ್ನ್ಯಗ್ರೋಧಃ ಕ್ಷತ್ರಂ ರಾಜನ್ಯೋ
ನಿತತ ಇವ ಹೀಹ ಕ್ಷತ್ರಿಯೋ ರಾಷ್ಟ್ರೇ ವಸನ್ಭವತಿ ಪ್ರತಿಷ್ಠಿತ ಇವ
ನಿತತ ಇವ ನ್ಯಗ್ರೋಧೋಽವರೋಹೈರ್ಭೂಮ್ಯಾಂ ಪ್ರತಿಷ್ಠಿತ ಇವ

ಪ್ರಕಾರಾಂತರೇಣ ನ್ಯಗ್ರೋಧಕ್ಷತ್ರಿಯಯೋಃ ಸಾಮ್ಯಮಾಪಾದ್ಯ ಪ್ರಶಂಸತಿ—ಯೋ ನ್ಯಗ್ರೋಧೋಽಸ್ತ್ಯೇಷ ನ್ಯಗ್ರೋಧಸ್ವರೂಪಂ ವನಸ್ಪತೀನಾಂ ಮಧ್ಯೇ ಕ್ಷತ್ರಂ ವೈ ಕ್ಷತ್ರಿಯಜಾತಿರೇವ ರಾಜನ್ಯೋ ದೇಶಾಧಿಪತಿರಪಿ ಕ್ಷತ್ರಂ ಮನುಷ್ಯಾಣಾಂ ಮಧ್ಯೇ ಕ್ಷತ್ರಿಯಜಾತಿಃ। ಕಿಂಚಾಯಂ ಕ್ಷತ್ರಿಯ ಇಹ ರಾಷ್ಟ್ರೇ ಸ್ವದೇಶೇ ವಸನ್ನಿತತ ಇವ ಹಿ ಸರ್ವತ್ರ ಗ್ರಾಮೇಷು ಸಂಚರಣೇನ ನಿತರಾಂ ಸಂತತ ಏವ ಭವತಿ। ತಥಾ ಪ್ರತಿಷ್ಠಿತ ಇವ ರಾಜ್ಯಸ್ಥೈರ್ಯೇಣ ಚಲನರಹಿತ ಏವ ಭವತಿ। ನ್ಯಗ್ರೋಧ-ವೃಕ್ಷೋಽಪ್ಯಧೋಮುಖೈರವರೋಹೈರ್ನಿತತ ಇವ ನಿತರಾಂ ವ್ಯಾಪ್ತ ಏವ ಭವತಿ। ತಥಾ ಭೂಮ್ಯಾಂ ಪ್ರತಿಷ್ಠಿತ ಇವ ಸ್ಥಿರ ಏವ ಭವತಿ। ತಸ್ಮಾದನಯೋರುಭಯೋಃ ಸಾಮ್ಯಮ್ ॥

ನ್ಯಗ್ರೋಧವೃಕ್ಷಕ್ಕೂ ಕ್ಷತ್ರಿಯನಿಗೂ ಪ್ರಕಾರಾಂತರವಾಗಿ ಸಾಮ್ಯವನ್ನು ತೋರಿಸುವರು–ನ್ಯಗ್ರೋಧವೃಕ್ಷವು ಇತರ ವನಸ್ಪತಿ ವೃಕ್ಷಗಳ ಮಧ್ಯದಲ್ಲಿ ಕ್ಷತ್ರಿಯನಂತೆ ಪ್ರಾಮುಖ್ಯತೆಯನ್ನು ಹೊಂದಿರುವುದು. ರಾಜನಾದವನು ದೇಶಕ್ಕೆ ಅಧಿಪತಿ ಯಾಗಿರುವನು. ಕ್ಷತ್ರಿಯನು ಮನುಷ್ಯರಲ್ಲಿ ಗಣ್ಯತೆಯನ್ನು ಪಡೆದಿರುವನು. ಮತ್ತು ಕ್ಷತ್ರಿಯನಾದ ರಾಜನು ತನ್ನ ಸ್ವದೇಶದಲ್ಲಿ ವಾಸಮಾಡುತ್ತಾ ಅನೇಕಗ್ರಾಮಗಳಲ್ಲಿ ಸಂಚಾರಮಾಡಿ ಅವುಗಳ ಪರಿಚಯವನ್ನು ಮಾಡಿಕೊಂಡು ತನ್ನ ರಾಜ್ಯದಲ್ಲಿ ಸ್ಥಿರವಾಗಿ ನೆಲೆಸಿರುವನು. ಹಾಗೆಯೇ ನ್ಯಗ್ರೋಧವೃಕ್ಷವೂ ಸಹ ಮೇಲಿನಿಂದ ಕೆಳಕ್ಕೆ ಬೀಳುವ ಬೀಳುಗಳಿಂದ ಸುತ್ತಲೂ ಇರುವ ಪ್ರದೇಶಗಳಲ್ಲಿ ಬೇರುಗಳನ್ನು ಬಿಟ್ಟು ವ್ಯಾಪಿಸುತ್ತಾ ಸ್ಥಿರವಾಗಿರುವುದು. ಎಂದರೆ ರಾಜನು ತನ್ನ ರಾಜ್ಯದಲ್ಲಿ ಯಾವ ರೀತಿ ಸ್ಥಿರವಾಗಿ ನೆಲಸಿರುವನೋ ಅದೇರೀತಿ ನ್ಯಗ್ರೋಧವೃಕ್ಷವೂ ಸಹ ಭೂಮಿಯಲ್ಲಿ ಅನೇಕ ಬೇರುಗಳನ್ನು ಬಿಟ್ಟು ಸ್ಥಿರವಾಗಿ ನೆಲೆಸಿರುವುದು.

ತದ್ಯತ್ಕ್ಷತ್ರಿಯೋ ಯಜಮಾನೋ ನ್ಯಗ್ರೋಧಸ್ಯಾವರೋಧಾಂಶ್ಚ ಫಲಾನಿ ಚ ಭಕ್ಷಯತ್ಯಾತ್ಮನ್ಯೇವ ತತ್ಕ್ಷತ್ರಂ ವನಸ್ಪತೀನಾಂ ಪ್ರತಿಷ್ಠಾಪಯತಿ ಕ್ಷತ್ರ ಆತ್ಮಾನಂ ॥

ನ್ಯಗ್ರೋಧವೃಕ್ಷಮುಪಸಂಹರತಿ—ತತ್ತಸ್ಮಾನ್ನ್ಯಗ್ರೋಧಕ್ಷತ್ರಿಯಯೋಃ ಸಾದೃಶ್ಯಸದ್ಭಾವಾದ್ಯಃ ಕ್ಷತ್ರಿಯಃ ಪುರುಷೋ ಯಾಗಂ ಕುರ್ವನ್ನ್ಯಗ್ರೋಧವೃಕ್ಷಸ್ಯಾವರೋಧಾನ್ ಫಲಾನಿ ಚ ಭಕ್ಷಯೇತ್ । ತದಾನೀಂ ವನಸ್ಪತೀನಾಂ ಸಂಬದ್ಧಂ ಕ್ಷತ್ರಂ ಕ್ಷತ್ರಿಯಜಾತಿಮಾತ್ಮನ್ಯೇವ ಸ್ವೋದರಮಧ್ಯ ಏವ ಪ್ರತಿಷ್ಠಾಪಯತಿ । ತಥೈವಾತ್ಮಾನಂ ಸ್ವಸ್ವರೂಪಂ ವನಸ್ಪತಿಸಂಬಂಧಿನಿ ಕ್ಷತ್ರೇ ನ್ಯಗ್ರೋಧೇ ಪ್ರತಿಷ್ಠಾಪಯತಿ ॥

ಇದುವರೆಗೂ ಕ್ಷತ್ರಿಯನಿಗೂ ನ್ಯಗ್ರೋಧವೃಕ್ಷಕ್ಕೂ ಸಾದೃಶ್ಯವನ್ನು ಹೇಳಿದ್ದಾಯಿತು. ಕ್ಷತ್ರಿಯನಾದ ಪುರುಷರು ಯಾಗಮಾಡುವಾಗ ಸೋಮರಸಕ್ಕೆ ಬದಲಾಗಿ ನ್ಯಗ್ರೋಧವೃಕ್ಷದ ಬೀಳುಗಳ ಮತ್ತು ಫಲಗಳ ರಸವನ್ನು ಪಾನಮಾಡಬೇಕು. ಹೀಗೆ ಮಾಡುವುದರಿಂದ ಕ್ಷತ್ರಿಯನು ತನ್ನಂತೆಯೇ ತನ್ನ ಜಾತೀಯವಾದ ವನಸ್ಪತಿಯಲ್ಲಿ ಸ್ಥಿರವಾಗಿ ನೆಲೆಸಿ ತನ್ನ ಸ್ವಜಾತಿಯವರಲ್ಲಿಯೇ ಸಂಬಂಧವನ್ನು ಬೆಳೆಸಿದಂತಾಯಿತು. ಮತ್ತು ತನ್ನ ಕ್ಷತ್ರಸ್ವರೂಪವನ್ನು ನ್ಯಗ್ರೋಧವೃಕ್ಷವೆಂಬ ವನಸ್ಪತಿಯಲ್ಲಿ ಸ್ಥಾಪಿಸಿದಂತಾಯಿತು.

ಕ್ಷತ್ರೇ ಹ ವೈ ಸ ಆತ್ಮನಿ ಕ್ಷತ್ರಂ ವನಸ್ಪತೀನಾಂ ಪ್ರತಿಷ್ಠಾಪಯತಿ ನ್ಯಗ್ರೋಧ ಇವಾವರೋಧೈರ್ಭೂಮ್ಯಾಂ ಪ್ರತಿ ರಾಷ್ಟ್ರೇ ತಿಷ್ಠತ್ಯುಗ್ರಂ ಹಾಸ್ಯ ರಾಷ್ಟ್ರಮವ್ಯಥ್ಯಂ ಭವತಿ ಯ ಏವಮೇತಂ ಭಕ್ಷಂ ಭಕ್ಷಯತಿ ಕ್ಷತ್ರಿಯೋ ಯಜಮಾನಃ ॥

ಉಪಸಂಹೃತಂ ತಂ ಭಕ್ಷಂ ಪುನರಪಿ ಪ್ರಶಂಸತಿ—ಯಃ ಕ್ಷತ್ರಿಯೋ ಯಾಗಂ ಕುರ್ವನ್ನೇತಂ ನ್ಯಗ್ರೋಧಸಂಬಂಧಿನಂ ಭಕ್ಷಂ ಭಕ್ಷಯತಿ ಸ ಕ್ಷತ್ರಿಯಃ ಸ್ವಯಂ ವನಸ್ಪತೀನಾಂ ಸಂಬಂಧಿನಿ ಕ್ಷತ್ರೇ ನ್ಯಗ್ರೋಧೇ ಪ್ರತಿಷ್ಠಿತಃ ಸನ್ನಾತ್ಮನಿ ಸ್ವಸ್ಮಿನ್ವನಸ್ಪತೀನಾಂ ಸಂಬಂಧಿ ಕ್ಷತ್ರಂ ನ್ಯಗ್ರೋಧಂ ಪ್ರತಿಷ್ಠಾಪಯತಿ । ಯಥಾ ನ್ಯಗ್ರೋಧೋಽವರೋಧೈರ್ಭೂಮ್ಯಾಂ ಪ್ರತಿಷ್ಠಿತ ಏವಮಯಂ ರಾಜಾ ರಾಷ್ಟ್ರೇ ಪ್ರತಿತಿಷ್ಠತಿ । ಅಸ್ಯ ರಾಷ್ಟ್ರಮುಗ್ರಂ ತೇಜಸ್ವಿ ಸದವ್ಯಥ್ಯಂ ಕೇನಾಪಿ ವ್ಯಥಿತುಮಶಕ್ಯಂ ಭವತಿ ॥

ಮೇಲೆ ಹೇಳಿದ ವಿಷಯವನ್ನು ಉಪಸಂಹಾರಮಾಡಿ (ಮುಗಿಸಿ) ಅದನ್ನು ಮತ್ತೊಂದಾವೃತ್ತಿ ಪ್ರಶಂಸೆಮಾಡುವರು. ಕ್ಷತ್ರಿಯನಾದ ಯಾವ ಪುರುಷನು ಯಾಗಮಾಡುವಾಗ ಸೋಮಕ್ಕೆ ಬದಲಾಗಿ ನ್ಯಗ್ರೋಧವೃಕ್ಷದ ಮತ್ತು ಅದರ ಫಲಗಳ ರಸವನ್ನು ವಿಧಿವತ್ತಾಗಿ ಪಾನಮಾಡುವನೋ ಆ ಪುರುಷನು ತನ್ನನ್ನು ವನಸ್ಪತಿಯಾದ ನ್ಯಗ್ರೋಧವೃಕ್ಷದಲ್ಲಿಯೂ, ನ್ಯಗ್ರೋಧವನ್ನು ತನ್ನಲ್ಲಿಯೂ ಸ್ಥಾಪಿಸಿದಂತಾಗುವುದು. ನ್ಯಗ್ರೋಧವೃಕ್ಷವು ಯಾವ ರೀತಿ ತನ್ನ ಬೀಳುಗಳಿಂದ ಸುತ್ತಲೂ ಬೇರು ಬಿಟ್ಟು ಭೂಮಿಯಲ್ಲಿ ಸ್ಥಿರವಾಗಿ ನೆಲೆಸುವುದೋ ಅದರಂತೆ ಕ್ಷತ್ರಿಯನಾದ ರಾಜನೂ ಸಹ ತನ್ನ ದೇಶದಲ್ಲಿ ಸ್ಥಿರವಾಗಿ (ಅಬಾಧಿತನಾಗಿ) ನೆಲೆಸುವುದಲ್ಲದೆ ತನ್ನ ಪ್ರಜೆಗಳಿಂದ ಗೌರವಿಸಲ್ಪಡುವನು. ಇವನ ರಾಷ್ಟ್ರವು ಪ್ರಬಲವಾಗಿ ಇತರರಿಂದ ಬಾಧೆಗೊಳಗಾಗದೆ ಸುರಕ್ಷಿತವಾಗಿ ಇರುವುದೆಂದಭಿಪ್ರಾಯವು.

*English Translation*

**(On the meaning of the King's drinking the juice of the Nyagrodha tree instead of Sons.)**

---

That portion of the juice in these Soma cups which went downwards became the descending roots, and of the other which went up, the fruits were produced. That Kshattriya, therefore, who enjoys (the juice of) the descending roots of the Nyagrodha tree, and that of its fruits, is not debarred from his own share (bhaksha). Further, he thus obtains the Soma beverage by means of a substitute, though he does not enjoy the real Soma, but only in the from of a substitute ; for the Nyagrodha is just this substitute of the Soma. The kshattriya (when drinking this juice of the Nyagrodha) enters the form of the Brahma by the medium of another (not direct), viz. through the relationship of his Purohita (with the Brahmans), his own Diksha (at which the king himself was made a Brahmana for a little while), and the pravara of his Purohita. The Kshattra (ruling power) occupies (among men the same place as) Nyagrodha among the trees ; for the Kshattra are the royal princes, whose power alone is spread here (on this earth), as being alone invested with sovereign power. The Nyagrodha is, as it were, firmly, established in the earth (and thus a sign of the duration of the royal power) ; and by means of its descending roots expanded (in all directions, and therefore a sign of the great extent of the power of the Kshattriyas over the whole earth). When the Kshattriya who performs a sacrifice enjoys (the juice squeezed out of the) descending roots of the Nyagrodha tree and its fruits, then he places in himself the royal power (exercised by the Nyagrodha) over the trees, and into the Kshattra, his own Self. He then is in the Kshattra, and the royal powhr represented by the Nyagrodha over the trees, is then placed in him. Just as the Nyagrodha tree has by means of its descending roots a firm footing on the earth (for it is multiplied in this way), the royal power of a Kshattriya

who enjoys, when sacrificing, this portaion (as food) has a firm footing, and his rule cannot be overthrown.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಪಂಚತ್ರಿಂಶಾಧ್ಯಾಯೇ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂವತ್ತೈದನೆಯ ಅಧ್ಯಾಯದಲ್ಲಿ ಐದನೆಯ ಖಂಡವು
ಸಮಾಪ್ತವಾದುದು



## ಅಥ ಪಂಚವಿಂಶಾಧ್ಯಾಯೇ ಷಷ್ಠಃ ಖಂಡಃ

### ಮೂವತ್ತೈದನೆಯ ಅಧ್ಯಾಯದಲ್ಲಿ ಆರನೆಯ ಖಂಡವು

[ರಾಜನಾದವನು ಯಾಗದಲ್ಲಿ ಸೋಮರಸಕ್ಕೆ ಬದಲಾಗಿ ಪಾನಮಾಡಬೇಕಾದ ನ್ಯಗ್ರೋಧವೃಕ್ಷದ ರಸದ ಜತೆಗೆ ಸೇರಿಸುವ ಉದುಂಬರ, ಅಶ್ವತ್ಥ, ಪ್ಲಕ್ಷ ಎಂಬ ವೃಕ್ಷಗಳ ಫಲಗಳ ಸಂಕೇತವು. ಇತ್ಯಾದಿ]

ಅಥ ಯದೌದುಂಬರಾಣ್ಯೂರ್ಜೋ ವಾ ಏಷೋಽನ್ನಾದ್ಯಾದ್ವನಸ್ಪತಿ-
ರಜಾಯತ ಯದುದುಂಬರೋ ಭೌಜ್ಯಂ ವಾ ಏತದ್ವನಸ್ಪತೀನಾ-
ಮೂರ್ಜಮೇವಾಸ್ಮಿಂಸ್ತದನ್ನಾದ್ಯಂ ಭೌಜ್ಯಂ ಚ ವನಸ್ಪತೀನಾಂ
ಕ್ಷತ್ರೇ ದಧಾತಿ ||

ನ್ಯಗ್ರೋಧಸ್ಯಾವರೋಧಾನ್ ಫಲಾನಿ ಚ ಪ್ರಶಸ್ಯೌದುಂಬರಾದಿಪ್ರಶಂಸಾಂ ಕ್ರಮೇಣ ದರ್ಶಯತಿ—ಅಥ ನ್ಯಗ್ರೋಧಪ್ರಶಂಸಾನಂತರಮುದುಂಬರಪ್ರಶಂಸಾ ಕಥ್ಯತೇ । ಯದ್ಯಾನ್ಯೌ-ದುಂಬರಾಣಿ ಫಲಾನಿ ಭಕ್ಷತ್ವೇನೋಕ್ತಾನಿ ತೇಷಾಮುತ್ಪಾದಕೋ ಯದುದುಂಬರೋಽಸ್ತಿ ಏಷ ಊರ್ಜೋ ರಸಾದನ್ನಾದ್ಯಾಚ್ಚ ವನಸ್ಪತಿರೂಪೋಽಜಾಯತ । ಏತದುದುಂಬರಫಲಂ ವನಸ್ಪತೀನಾಂ ಮಧ್ಯೇ ಭೌಜ್ಯಂ ವೈ ಭೋಜನಾರ್ಹಮೇವ । ತತ್ರೇನೌದುಂಬರಭಕ್ಷೇಣಾಸ್ಮಿನ್ ಕ್ಷತ್ರ ಊರ್ಜಮೇವ ರಸಮೇವ ತಥಾನ್ನಾದ್ಯಂ ವನಸ್ಪತೀನಾಂ ಮಧ್ಯೇ ಭೋಜನಯೋಗ್ಯಂ ದ್ರವ್ಯಮುಪಸ್ಥಾಪಯತಿ॥

ಇದುವರೆಗೂ ನ್ಯಗ್ರೋಧವೃಕ್ಷದ ಬೀಳುಗಳ ಮತ್ತು ಆ ವೃಕ್ಷದ ಫಲಗಳ ರಸವನ್ನೂ ವಿವರಿಸಿದ್ದಾಯಿತು. ಈಗ ಔದುಂಬರಾದಿ ಫಲಗಳ ಪ್ರಶಂಸೆಯನ್ನು ಮಾಡುವರು—ನ್ಯಗ್ರೋಧವೃಕ್ಷದ ಪ್ರಶಂಸೆಮಾಡಿದ ನಂತರ ಉದುಂಬರಫಲದ

ಪ್ರಶಂಸೆಯನ್ನು ಮಾಡಲಾಗುವುದು. ಈಗ ರಾಜನು ಭಕ್ಷಿಸಬೇಕಾಗಿರುವ ನ್ಯಗ್ರೋಧವೃಕ್ಷದ ರಸದ ಜತೆಗೆ ಬೆರೆಸಬೇಕಾದ ಉದುಂಬರಫಲ ಯಾವದುಂಟೋ ಆ ವೃಕ್ಷವು ಆಹಾರ ರೂಪವಾಗಿ ಪುಷ್ಟಿಯನ್ನು ಕೊಡುವ ಅನ್ನ ಮತ್ತು ರಸಗಳಿಂದ ವೃಕ್ಷ ರೂಪವಾಗಿ ಹುಟ್ಟಿತು. ಈ ಉದುಂಬರವೃಕ್ಷದ ಫಲವು ತಿನ್ನುವುದಕ್ಕೆ ಯೋಗ್ಯವಾದ ಫಲಗಳಲ್ಲೊಂದಾಗಿರುವುದು. ಆದ್ದರಿಂದ ಈ ಉದುಂಬರಫಲ ಭಕ್ಷಣವು ಕ್ಷತ್ರಿಯನಾದ ರಾಜನಲ್ಲಿ ಅನ್ನ (ಆಹಾರ) ಮತ್ತು ರಸಗಳ ಸಾರವನ್ನೂ ಅದನ್ನು ಭಕ್ಷಿಸುವ ಅರ್ಹತೆಯನ್ನೂ ಸ್ಥಾಪಿಸುವುದು.

**ಅಥ ಯದಾಶ್ವತ್ಥಾನಿ ತೇಜಸೋ ವಾ ಏಷ ವನಸ್ಪತಿರಜಾಯತ ಯದ-ಶ್ವತ್ಥಃ ಸಾಮ್ರಾಜ್ಯಂ ವಾ ಏತದ್ವನಸ್ಪತೀನಾಂ ತೇಜ ಏವಾಸ್ಮಿಂಸ್ತತ್ಸಾ-ಮ್ರಾಜ್ಯಂ ಚ ವನಸ್ಪತೀನಾಂ ಕ್ಷತ್ರೇ ದಧಾತಿ ||**

ಅಶ್ವತ್ಥಫಲಾನಿ ಪ್ರಶಂಸತಿ—ಅಥೌದುಂಬರಪ್ರಶಂಸಾನಂತರಮಶ್ವತ್ಥಫಲಾನಿ ಪ್ರಶಸ್ಯಂತೇ । ಯಾನ್ಯಶ್ವತ್ಥಫಲಾನಿ ಸಂತಿ ತೇಷಾಂ ಜನಕೋ ಯೋಽಶ್ವತ್ಥ ಏಷ ವನಸ್ಪತಿಸ್ತೇಜಸ ಏವೋದಪದ್ಯತ । ಏತದಶ್ವತ್ಥಫಲಂ ವನಸ್ಪತೀನಾಂ ಸಂಬಂಧಿ ಸಾಮ್ರಾಜ್ಯಸ್ವರೂಪಮೇವ । ತತ್ತೇನಾಶ್ವತ್ಥಫಲಭಕ್ಷೇಣ ತೇಜ ಏವ ವನಸ್ಪತೀನಾಂ ಸಾಮ್ರಾಜ್ಯಂ ಚಾಸ್ಮಿನ್ ಕ್ಷತ್ರೇ ಸ್ಥಾಪಯತಿ ||

ಈಗ ಅಶ್ವತ್ಥವೃಕ್ಷದ ಫಲಗಳನ್ನು ಪ್ರಶಂಸೆಮಾಡುವರು-ಔದುಂಬರಫಲಗಳನ್ನು ವರ್ಣಿಸಿದ ನಂತರ ಅಶ್ವತ್ಥಫಲಗಳನ್ನು ವರ್ಣಿಸುವರು. ತೇಜಸ್ಸಿನ ರೂಪವು ಫಲಗಳನ್ನು ಬಿಡುವ ಅಶ್ವತ್ಥವೃಕ್ಷವಾಗಿ ಹುಟ್ಟಿತು. ಈ ಅಶ್ವತ್ಥವೃಕ್ಷದ ಫಲವು ಸಾಮ್ರಾಜ್ಯಸ್ವರೂಪವಾಗಿರುವುದು. ಇಂತಹ ಅಶ್ವತ್ಥಫಲಭಕ್ಷಣದಿಂದ ಕ್ಷತ್ರಿಯನಾದ ರಾಜನು ಕ್ಷತ್ರಿಯರಲ್ಲಿ ತೇಜಸ್ಸನ್ನೂ (ಸಾಮರ್ಥ್ಯಾದಿಗಳನ್ನು) ಸ್ಥಾಪಿಸಿದಂತಾಗುವುದು.

**ಅಥ ಯತ್ಪ್ಲಾಕ್ಷಾಣಿ ಯಶಸೋ ವಾ ಏಷ ವನಸ್ಪತಿರಜಾಯತ ಯತ್ಪ್ಲಕ್ಷಃ ಸ್ವಾರಾಜ್ಯಂ ಚ ಹ ವಾ ಏತದ್ವೈರಾಜ್ಯಂ ಚ ವನಸ್ಪತೀನಾಂ ಯಶ ಏವಾಸ್ಮಿಂಸ್ತತ್ಸ್ವಾರಾಜ್ಯವೈರಾಜ್ಯೇ ಚ ವನಸ್ಪತೀನಾಂ ಕ್ಷತ್ರೇ ದಧಾತಿ ||**

ಪ್ಲಕ್ಷಫಲಾನಿ ಶಂಸತಿ—ಅಥಾಶ್ವತ್ಥಪ್ರಶಂಸಾನಂತರಂ ಯಾನಿ ಪ್ಲಕ್ಷಫಲಾನಿ ವಿದ್ಯಂತೇ ತಾನಿ ಪ್ರಶಸ್ಯಂತೇ । ಯೋಽಯಂ ಪ್ಲಕ್ಷೋಽಸ್ತ್ಯೇಷ ವನಸ್ಪತಿರ್ಯಶಸ ಏವೋತ್ಪನ್ನಃ । ಏತತ್ಪ್ಲಕ್ಷಫಲಂ ವನಸ್ಪತೀನಾಂ ಸಂಬಂಧಿ ಸ್ವಾರಾಜ್ಯವೈರಾಜ್ಯರೂಪಮ್ । ಸ್ವಾತಂತ್ರ್ಯೇಣ ರಾಜತ್ವಂ ಸ್ವಾರಾಜ್ಯಂ ವಿಶೇಷೇಣ ರಾಜತ್ವಂ ವೈರಾಜ್ಯಮ್ । ತತ್ತೇನ ಪ್ಲಕ್ಷಫಲೇನಾಸ್ಮಿನ್ ಕ್ಷತ್ರೇ ಯಶಶ್ಚ ಸ್ವಾರಾಜ್ಯ-ವೈರಾಜ್ಯೇ ಚ ಸಂಪಾದಯತಿ ||

ಈಗ ಪ್ಲಕ್ಷಫಲಗಳನ್ನು ಪ್ರಶಂಶೆಮಾಡುವರು-ಅಶ್ವತ್ಥಫಲಗಳ ಪ್ರಶಂಸೆಮಾಡಿದನಂತರ ಈಗ ಪ್ಲಕ್ಷಫಲಗಳನ್ನು ಪ್ರಶಂಸೆ ಮಾಡುವರು. ಪ್ಲಕ್ಷ ಎಂಬ ವೃಕ್ಷವು ಯಶಸ್ಸಿನ ರೂಪದಿಂದಿದ್ದು ವೃಕ್ಷವಾಗಿ ಪರಿಣಮಿಸಿತು. ಈ ಪ್ಲಕ್ಷವೃಕ್ಷದ ಫಲವು ವನ

ಸ್ಪತಿರೂಪದ ವೃಕ್ಷದ ಫಲವಾಗಿದ್ದು ಸ್ವಾರಾಜ್ಯವೈರಾಜ್ಯಗಳ ಸ್ವರೂಪವಾಗಿರುವುದು. ಸ್ವಾರಾಜ್ಯವೆಂದರೆ ಸ್ವತಂತ್ರವಾದ (ಶತ್ರು ಮೊದಲಾದವರ ಬಾಧೆಯಿಲ್ಲದ) ರಾಜ್ಯವು ; ವೈರಾಜ್ಯವೆಂದರೆ ವಿಶೇಷವಾಗಿ ರಾಜತ್ವದಿಂದ ಅಭಿವೃದ್ಧಿಹೊಂದುತ್ತಿರುವ ದೇಶವು ಅಥವಾ ರಾಷ್ಟ್ರವು. ಕ್ಷತ್ರಿಯನಾದ ರಾಜನು ಈ ಪ್ಲಕ್ಷದ ಫಲಭಕ್ಷಣದಿಂದ ಕೀರ್ತಿಯನ್ನೂ ಸ್ವಾರಾಜ್ಯವೈರಾಜ್ಯಗಳೆಂಬ ಉತ್ತಮಸ್ಥಿತಿಯಲ್ಲಿರುವ ರಾಜ್ಯಕ್ಕೆ ಆಧಿಪತ್ಯವನ್ನೂ ಪಡೆದು ಸುಖಿಸುವನು.

ಏತಾನ್ಯಸ್ಯ ಪುರಸ್ತಾದುಪಕ್ಲೃಪ್ತಾನಿ ಭವಂತ್ಯಥ ಸೋಮಂ ರಾಜಾನಂ ಕ್ರೀಣಂತಿ ತೇ ರಾಜ್ಞ ಏವಾಽಽವೃತೌಪವಸಥಾತ್ಪ್ರತಿವೇಶೈಶ್ಚರಂತ್ಯ-ಥೌಪವಸಥ್ಯಮಹರೇತಾನ್ಯಧ್ವರ್ಯುಃ ಪುರಸ್ತಾದುಪಕಲ್ಪಯೇತಾಧಿ-ಷವಣಂ ಚರ್ಮಾಧಿಷವಣೇ ಫಲಕೇ ದ್ರೋಣಕಲಶಂ ದಶಾಪವಿತ್ರ-ಮದ್ರೀನ್ಪೂತಭೃತಂ ಚಾಽಽಧವನೀಯಂ ಚ ಸ್ಥಾಲೀಮುದಂಚನಂ ಚಮಸಂ ಚ ತದ್ಯದೇತದ್ರಾಜಾನಂ ಪ್ರಾತರಭಿಷುಣ್ವಂತಿ ತದೇನಾನಿ ದ್ವೇಧಾ ವಿಗೃಹ್ಣೀಯಾದಭ್ಯನ್ಯಾನಿ ಸುನುಯಾನ್ಮಾಧ್ಯಂದಿನಾಯಾ-ನ್ಯಾನಿ ಪರಿಶಿಂಷ್ಯಾತ್ ||

ಭಕ್ಷದ್ರವ್ಯಂ ಪ್ರಶಸ್ಯ ತಸ್ಯ ಪ್ರಯೋಗಮಾಹ—ಏತಾನಿ ನ್ಯಗ್ರೋಧಾವರೋಧಾದೀನ್ಯಸ್ಯ ರಾಜ್ಞೋಽರ್ಥೇ ಸೋಮಕ್ರಯಾತ್ಪೂರ್ವಮುಪಕ್ಲೃಪ್ತಾನಿ ಸಂಪಾದಿತಾನಿ ಭವಂತಿ । ತತ ಊರ್ಧ್ವಂ ಸೋಮಕ್ರಯಃ । ತತಸ್ತೇಽಧ್ವರ್ಯುಪ್ರಭೃತಯೋ ರಾಜ್ಞ ಏವಾಽಽವೃತಾ ಸೋಮಸ್ಯೈವ ಪ್ರಕಾರೇಣೌಪವಸಥಾದ್ದಿನಾತ್ಪೂರ್ವಂ ಪ್ರತಿವೇಶೈಃ ಪ್ರಸಿದ್ಧೈಃ ಕ್ರಿಯಾವಿಶೇಷೈಶ್ಚರಂತ್ಯನು-ಷ್ಠೇಯುಃ । ಅಥಾನಂತರಮೌಪವಸಥ್ಯಮಹಃ । ಔಪವಸಥ್ಯೇಽಹನ್ಯಧ್ವರ್ಯುಃ ಪುರಸ್ತಾತ್ಪ್ರಥಮ-ಮೇತಾನಿ ವಕ್ಷ್ಯಮಾಣಾನಿ ಚರ್ಮಾದೀನ್ಯುಪಕಲ್ಪಯೇತ್ಸಂಪಾದಯೇತ್ । ಯಸ್ಮಿಂಶ್ಚರ್ಮಣಿ ಸೋಮೋಽಭಿಷೂಯತೇ ತಚ್ಚರ್ಮಾಧಿಷವಣಾಖ್ಯಂ । ಯಯೋಃ ಫಲಕಯೋರಭಿಷೂಯತೇ ತೇ ಫಲಕೇ ಅಧಿಷವಣಸಂಜ್ಞಕೇ । ದ್ರೋಣಕಲಶಂ ಪ್ರೌಢದಾರುಪಾತ್ರಮ್ । ದಶಾಪವಿತ್ರಂ ವಸ್ತ್ರಮ್ । ಅದ್ರಯೋಽಭಿಷವಣಾರ್ಥಾ ಗ್ರಾವಾಣಃ । ಪೂತಭೃದಾಧವನೀಯೌ ಪಾತ್ರವಿಶೇಷೌ । ಸ್ಥಾಲೀ ಕುಂಭಃ । ಉದಂಚನಮುನ್ನಯನಪಾತ್ರಮ್ । ಚಮಸೋ ಭಕ್ಷಾರ್ಥಂ ದಾರುಪಾತ್ರಮ್ । ಏತಾ-ನ್ಯಧ್ವರ್ಯುಃ ಸಂಪಾದ್ಯ ತತ ಊರ್ಧ್ವಂ ಯದ್ಯದೈತದೇತಂ ರಾಜಾನಂ ಪ್ರಾತಃಕಾಲೇಽಭಿಷುಣ್ವಂತಿ ತತ್ತದಾನೀಮೇತಾನಿ ನ್ಯಗ್ರೋಧಾವರೋಧಾದೀನಿ ದ್ವೇಧಾ ವಿಭಜೇತ್ । ತತ್ರಾನ್ಯಾನ್ಯೇಕಭಾಗಗತಾನಿ ತಸ್ಮಿನ್ಪ್ರಾತಃ ಸವನೇಽಭಿಷುಣುಯಾತ್ । ಇತರಭಾಗಗತಾನಿ ತು ಮಾಧ್ಯಂದಿನ ಸವನಾಯ ಸ್ಥಾಪಯೇತ್ ||

ಇದುವರೆಗೂ ಕ್ಷತ್ರಿಯರಾಜನು ಭಕ್ಷಿಸಬೇಕಾದ ದ್ರವ್ಯವನ್ನು ಪ್ರಶಂಶಿಸಿ ಈಗ ಅದರ ಪ್ರಯೋಗ ಎಂದರೆ ವಿಧಾನವನ್ನು ವಿವರಿಸುವರು. ಮೇಲೆ ಹೇಳಿದ ನ್ಯಗ್ರೋಧವೃಕ್ಷದ ಬೀಳುಗಳು, ಆ ವೃಕ್ಷದ ಫಲಗಳು, ಉದುಂಬರ, ಅಶ್ವತ್ಥ, ಪ್ಲಕ್ಷ ಎಂಬ ವೃಕ್ಷದ ಫಲಗಳು ಇವೆಲ್ಲವನ್ನೂ ಸಂಗ್ರಹಿಸಿ ಮುಂದೆ ಮಾಡಬೇಕಾದ ಕಾರ್ಯಕಲಾಪಗಳನ್ನು ವಿವರಿಸುವರು. ಈಗ

ನಡೆಯಬೇಕಾದುದು ಸೋಮಕ್ರಯಣ ಎಂಬ ಕರ್ಮಾಂಗವು ಅಧ್ವರ್ಯುವೇ ಮೊದಲಾದ ಋತ್ವಿಜರು ಬ್ರಾಹ್ಮಣಾದಿ ಯಜಮಾನರ ಯಜ್ಞಗಳಲ್ಲಿ ಮಾಡುವಂತೆಯೇ ಸೋಮರಸವನ್ನು ಹಿಂಡುವ ದಿನಕ್ಕೆ ಹಿಂದಿನ ದಿನ (ಸೋಮಾಭಿಷವಣ) ಮಾಡಿ ಮುಗಿಸಬೇಕಾದ ಕಾರ್ಯಕಲಾಪಗಳನ್ನು ಮಾಡಿ ಮುಗಿಸುವರು. ಅನಂತರ ಔಪವಸಥ ಎಂಬ ದಿನದ ಕಾರ್ಯಗಳು ಪ್ರಾರಂಭವಾಗುವವು. ಈ ಔಪವಸಥವೆಂಬ ದಿನದಲ್ಲಿ ಅಧ್ವರ್ಯು ಮೊದಲಾದ ಋತ್ವಿಜರು ಮುಂದೆ ಹೇಳುವ ಸೋಮಾಭಿಷವಣಕ್ಕೆ (ಸೋಮರಸವನ್ನು ಲತೆಗಳಿಂದ ಜಜ್ಜಿ ರಸವನ್ನು ಹಿಂಡುವುದಕ್ಕೆ ಸೋಮಾಭಿಷವಣವೆಂದು ಹೆಸರು). ಬೇಕಾದ ಚರ್ಮವೇ ಮೊದಲಾದ ಸಾಧನಸಾಮಗ್ರಿಗಳನ್ನು ಸಿದ್ಧಪಡಿಸಿಕೊಳ್ಳುವರು. ಯಾವ ಚರ್ಮದ ಮೇಲೆ ಸೋಮಲತೆಗಳನ್ನು ಇಟ್ಟು ಕಲ್ಲಿನಿಂದ ಜಜ್ಜಿ ರಸವನ್ನು ಹಿಂಡಿ ತೆಗೆಯುವರೋ ಆ ಚರ್ಮಕ್ಕೆ ಅಧಿಷವಣ ಚರ್ಮವೆಂದು ಹೆಸರು. ಈ ಅಧಿಷವಣ ಕಾರ್ಯಕ್ಕಾಗಿ ಯಾವ ಎರಡು ಹಲಗೆಗಳ ಮಧ್ಯದಲ್ಲಿ ಸೋಮಲತೆಗಳನ್ನು ಇಟ್ಟು ಹಿಂಡುವರೋ ಆ ಹಲಗೆಗಳಿಗೆ ಅಧಿಷವಣ ಫಲಕಗಳೆಂದು ಹೆಸರು. ದ್ರೋಣಕಲಶವೆಂದರೆ ಹಿಂಡಿದ ಸೋಮರಸವನ್ನು ಸುರಿದು ಇಡುವ ದೊಡ್ಡ ಮರದ ಪಾತ್ರೆಯು. ಜಜ್ಜಿದ ಲತೆಗಳಿಂದ ಬರುವ ಸೋಮರಸವನ್ನು ಸೋಸುವ ವಸ್ತ್ರಕ್ಕೆ (ಬಟ್ಟೆಗೆ) ದಶಾಪವಿತ್ರವೆಂದು ಹೆಸರು ಸೋಮಲತೆಗಳನ್ನು ಕುಟ್ಟಿ ಜಜ್ಜುವ ಕಲ್ಲುಗಳಿಗೆ ಅದ್ರಿ ಅಥವಾ ಗ್ರಾವಾಣ ಎಂದು ಹೆಸರು. ಪೂತಭೃತ್ ಮತ್ತು ಆಧವನೀಯ ಎಂಬಿವು ಕೆಲವು ಪಾತ್ರೆಗಳು. ಸ್ಥಾಲೀ ಎಂದರೆ ಕುಂಬವು. ಉದಂಚನವೆಂದರೆ ಸೋಮವನ್ನು ಎತ್ತುವ ಉನ್ನಯನ ಪಾತ್ರೆಯು. ಚಮಸವೆಂದರೆ ಸೋಮರಸವನ್ನು ಹಾಕಿಕೊಂಡು ಪಾನಮಾಡುವ ಸಣ್ಣ ಮರದ ಬಟ್ಟಲು. ಈ ವಿಧವಾದ ಸಲಕರಣೆಗಳನ್ನೆಲ್ಲಾ ಅಧ್ವರ್ಯುವು ಸಿದ್ಧಪಡಿಸಿಟ್ಟುಕೊಂಡು ಪ್ರಾತಃಕಾಲದಲ್ಲಿ ರಾಜನ ಸಹಿತವಾಗಿ ನ್ಯಗ್ರೋಧವೃಕ್ಷದ ಬೀಳು ಮೊದಲಾದುವುಗಳನ್ನು ಜಜ್ಜಿ ರಸವನ್ನು ಹಿಂಡಿ ತೆಗೆದುಕೊಳ್ಳುವುದಕ್ಕಾಗಿ ಎರಡು ಭಾಗವನ್ನಾಗಿ ಮಾಡುವನು. ಒಂದು ಭಾಗವನ್ನು ಪ್ರಾತಃಸವನಕ್ಕಾಗಿಯೂ ಇನ್ನೊಂದು ಭಾಗವನ್ನು ಮಧ್ಯಂದಿನಸವನಕ್ಕಾಗಿಯೂ ಉಪಯೋಗಿಸಬೇಕು.

---

*English Transalation*

**(The symbolical meaning of the fruits of the Udumbara, Asvatha, and Plaksha trees. What implements are required for this quasi Soma feast of this King.)**

As to the fruits of the Udumbara tree, which originated from the vigour of the trees, which is in food in which there is all the vigour of the trees furnishing nourishments, the Kshattriya when drinking the juice prepared from its fruits places in the Kshattra food, and what yields nourishment from the trees.

As to the fruits of the Asvattha tree which sprang out of lustre, and which has the sovereignty over the trees, the Kshattriya when drinking juice prepared from its fruits places in the Kshattra Iustre and the sovereignty over the trees.

As to the fruits of the Plaksha tree, which sprang out of glory, and in which there is the independehce and brilliancy of the trees represented, the Kshattriya places in this way the independence and brilliancy which is in the trees in the Kshattra.

When all these things (the roots of the Nyagdrodha tree &c.) are in readiness for him, then the priests buy the Soma, and perform for the king the several ceremonies preceding the eve of the festival just in the same way as the real Soma is treated. Then the day before the celebration (of the feast) the Adhvaryu should have all these things ready which are required for the preparation of the Soma juice, sueh as the goat skin (placed below), the two boards required for squeezing, the Drona-kalasa, the cloth for purifying, the stones, the Putabhrit, the Adha-vaniya, the Sthali, the Udanchanam, and the Chamasa. Then they should make two parts of what is squeezed for the king (the roots of the Nya-grodha & c.); one is to be made ready for the morning libation, the other to be left for the middy libation.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಪಂಚತ್ರಿಂಶಾಧ್ಯಾಯೇ ಷಷ್ಠಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೈದನೆಯ ಅಧ್ಯಾಯದಲ್ಲಿ ಆರನೆಯ ಖಂಡವು
ಸಮಾಪ್ತವಾಗುದು.

---

## ಅಥ ಪಂಚತ್ರಿಂಶಾಧ್ಯಾಯೇ ಸಪ್ತಮಃ ಖಂಡಃ

### ಮೂವತ್ತೈದನೆಯ ಅಧ್ಯಾಯದಲ್ಲಿ ಏಳನೆಯ ಖಂಡವು

[ತ್ರೈತ ಎಂಬ ಸೋಮಪಾನಪಾತ್ರೆಯಿಂದ ಪಾನಮಾಡುವುದು]

---

ತದ್ಯತ್ರೈತಾಂಶ್ಚಮಸಾನುನ್ನಯೇಯುಸ್ತದೇತಂ ಯಜಮಾನಚಮಸ-
ಮುನ್ನಯೇತ್ತಸ್ಮಿನ್ದ್ವೇ ದರ್ಭತರುಣಕೇ ಪ್ರಾಸ್ತೇ ಸ್ಯಾತಾಂ ತಯೋ-

ರ್ವಷಟ್ಕೃತೇಽನ್ತಃಪರಿಧಿಪೂರ್ವಂ ಪ್ರಾಸ್ಯೇದ್ದಧಿಕ್ರಾವ್ಣೋ ಅಕಾರಿಷ-ಮಿತ್ಯೇತಯರ್ಚಾ ಸಸ್ವಾಹಾಕಾರಯಾಽನುವಷಟ್ಕೃತೇಽಪರಮಾ ದಧಿಕ್ರಾಃ ಶವಸಾ ಪಂಚ ಕೃಷ್ಟೀರಿತಿ ॥

ಅಥಾಸ್ಯ ಫಲಚಮಸೋನ್ನಯನಾದಿಪ್ರಯೋಗಂ ದರ್ಶಯತಿ—ತತ ಊರ್ಧ್ವಂ ಯತ್ರ ಯದೈತಾನ್ ಬ್ರಹ್ಮಹೋತ್ರಾದಿಚಮಸಾನ್ ದಶಸಂಖ್ಯಾಕಾನುನ್ನಯೇಯುಃ । ತತ್ರದಾನೀಂ ಯಜಮಾನಸ್ಯ ರಾಜ್ಞಶ್ಚಮಸಮುನ್ನಯೇತ್ । ಅಭಿಷುತೇನ ನ್ಯಗ್ರೋಧಾವರೋಧಾದಿನಾ ಪೂರಯೇತ್ । ತಸ್ಮಿನ್ಪೂರಿತೇ ಚಮಸೇಽಲ್ಪಂ ದರ್ಭದ್ವಯಂ, ಪ್ರಕ್ಷಿಪ್ಯ ತಯೋರ್ಮಧ್ಯೇ, ಪ್ರಥಮ ಪ್ರಕ್ಷಿಪ್ತಂ ದರ್ಭಂ ವಷಟ್‌ಕೃತೇ ವಷಟ್ಕಾರೇ ಕೃತೇ ಸತಿ 'ದಧಿಕ್ರಾವ್ಣ' ಇತ್ಯೇತಯರ್ಚಾ ಸ್ವಾಹಾ-ಕಾರಸಹಿತಯಾ ಪರಿಧೀನಾಮಂತಃ ಪ್ರಕ್ಷಿಪೇತ್ । ಅನುವಷಟ್‌ಕೃತೇಽನುವಷಟ್ಕಾರೇ ಕೃತೇ ಸತ್ಯಪರಂ 'ದರ್ಭಮಾದಧಿಕ್ರಾ' ಇತ್ಯನಯರ್ಚಾ ಪೂರ್ವವತ್ ಸ್ವಾಹಾಕಾರಸಹಿತಯಾ ಪರಿ-ಧೀನಾಮಂತಃ ಪ್ರಕ್ಷಿಪೇತ್ ॥

ಈಗ ಚಮಸೋನ್ನಯನಾದಿ ಪ್ರಯೋಗವನ್ನು ವಿವರಿಸುವರು. – ಮೇಲೆ ಹೇಳಿದಂತೆ ಪ್ರಾತಸ್ಸವನಕ್ಕಾಗಿ ಸಾಮುಗ್ರಿಗಳನ್ನು ಸಿದ್ಧಪಡಿಸಿಕೊಂಡಮೇಲೆ ಬ್ರಹ್ಮ, ಹೋತೃ ಮುಂತಾದ ಹತ್ತುಮಂದಿ ಋತ್ವಿಜರು ತಮ್ಮ ತಮ್ಮ (ಚಮಸ) ಗಳನ್ನು ಕೈಯಲ್ಲಿ ಎತ್ತಿಹಿಡಿದುಕೊಳ್ಳುವರು. ಅನಂತರ ರಾಜನಾದ ಯಜಮಾನನೂ ಅದರಂತೆಯೇ ತನ್ನ ಚಮಸಪಾತ್ರೆಯನ್ನು ಎತ್ತಿಹಿಡಿದುಕೊಳ್ಳುವನು. ಆ ಚಮಸ ಪಾತ್ರೆಗೆ ನ್ಯಗ್ರೋಧರಸವನ್ನು ಅನಂತರ ತುಂಬಬೇಕು. ಅನಂತರ ಎಂದರೆ ಚಮಸ ಪಾತ್ರೆಗೆ ನ್ಯಗ್ರೋಧರಸವನ್ನು ಹಾಕಿ ತುಂಬಿದನಂತರ ಅದರ ಮೇಲೆ ಎರಡು ದರ್ಭೆಗಳನ್ನಿಟ್ಟು ಅವುಗಳಲ್ಲಿ ಒಂದು ದರ್ಭೆಯನ್ನು ವಷಟ್ಕಾರಪೂರ್ವಕವಾಗಿ ದಧಿಕ್ರಾವ್ಣ (ಋ. ಸು. ೪–೪೦–೬) ಎಂಬ ಮಂತ್ರದಿಂದ ಸ್ವಾಹಾಕಾರಪೂರ್ವಕವಾಗಿ ಪರಿಧಾನದ ಒಳ ಪ್ರಾಕಾರದಲ್ಲಿ ಅದನ್ನು ಇಡಬೇಕು. ಅನಂತರ ಅನುವಷಟ್ಕಾರವಾದಮೇಲೆ ಇನ್ನೊಂದು ದರ್ಭೆಯನ್ನು ಆ ದಧಿಕ್ರಾ ಶವಸಾ ಪಂಚ ಕೃಷ್ಟೀ (ಋ. ಸಂ. ೪–೩೮–೧೦) ಎಂಬ ಮಂತ್ರಪೂರ್ವಕವಾಗಿಯೂ ಸ್ವಾಹಾಕಾರಸಹಿತವಾಗಿಯೂ ಪರಿಧಾನದ ಒಳಗಡೆ ಇಡಬೇಕು.

ತದ್ಯತ್ರೈತಾಂಶ್ಚಮಸಾನಾಹರೇಯುಸ್ತದೇನಂ ಯಜಮಾನಚಮಸಮಾಹರೇತ್ತಾನ್ಯತ್ರೋದ್ಗೃಹ್ಣೀಯುಸ್ತದೇನಮುಪೋದ್ಗೃಹ್ಣೀಯಾತ್ತದ್ಯ-ದೇಳಾಂ ಹೋತೋಪಹ್ವಯೇತ ಯದಾ ಚಮಸಂ ಭಕ್ಷಯೇದಥೈನ-ಮೇತಯಾ ಭಕ್ಷಯೇತ್

ಅಥಾಸ್ಯ ಫಲಚಮಸಸ್ಯ ಭಕ್ಷಣಂ ವಿಧತ್ತೇ—ತತೋ ಹೋಮಾದೂರ್ಧ್ವಂ ಯತ್ರ ಯದೈತಾನ್ಹೋತ್ರಾದೀನಾಂ ಚಮಸಾನೃತ್ವಿಜ ಆಹರೇಯುಃ । ತತ್ರದಾನೀಮೇತಂ ಯಜಮಾನಸ್ಯ ರಾಜ್ಞಶ್ಚಮಸಮಾಹರೇತ್ । ತಾನಾಹೃತಾನ್ ಹೋತ್ರಾದಿಚಮಸಾನ್‌ಯತ್ರ ಯದೋದ್ಗೃಹ್ಣೀ-ಯುರ್ಭಕ್ಷಣಾರ್ಥಮೂರ್ಧ್ವಂ ಧಾರಯೇಯುಃ । ತತ್ರದಾನೀಮೇತಂ ಯಜಮಾನಸ್ಯ ರಾಜ್ಞ-

**ಶ್ಚಮಸಮುಪೋದ್ಗೃಹ್ಣೀಯಾದೂರ್ಧ್ವಂ ಧಾರಯೇತ್ । ತತ ಊರ್ಧ್ವಂ ಯದಾ ಹೋತೇಳಾ-ಮುಪಹ್ವಯೇತೋಪಹೂಯ ಚ ಸ್ವಕೀಯಂ ಚಮಸಂ ಯದಾ ಭಕ್ಷಯೇತ್ । ಅಥ ತದಾ-ನೀಮೇನಂ ಯಜಮಾನಚಮಸಮೇತಯಾ ವಕ್ಷ್ಯಮಾಣಯರ್ಚಾ ರಾಜಾ ಭಕ್ಷಯೇತ್ ॥**

ಚಮಸ ಭಕ್ಷಣ ಪ್ರಕಾರವನ್ನು ವಿವರಿಸುವದು-- ಹೋಮಾನಂತರ ಹೋತ್ರಾದಿ ಋತ್ವಿಜರು ತಮ್ಮ ತಮ್ಮ ಚಮಸಗಳನ್ನು ತೆಗೆದುಕೊಳ್ಳುವರು. ಯಜಮಾನನೂ ಹಾಗೆಯೇ ತನ್ನ ಚಮಸವನ್ನು ತೆಗೆದುಕೊಳ್ಳುವನು. ಅನಂತರ ಹೋತೃ ಮೊದಲಾದವರು ತಮ್ಮ ತಮ್ಮ ಚಮಸಗಳನ್ನು ಮೇಲೆತ್ತಿ ಹಿಡಿದುಕೊಳ್ಳುವರು. ಯಜಮಾನನೂ ಹಾಗೆಯೇ ತನ್ನ ಚಮಸವನ್ನು ಮೇಲೆತ್ತಿ ಹಿಡಿದುಕೊಳ್ಳುವನು. ಅನಂತರ ಹೋತೃವು ಇಳೋಪಹ್ವಾನವನ್ನು ಮಾಡಿ (ಇಳೋಪಹ್ವಾನವನ್ನು ಹಿಂದೆಯೇ ವಿವರಿಸಲಾಗಿದೆ.) ತನ್ನ ಚಮಸದಲ್ಲಿರುವ ರಸವನ್ನು ಭಕ್ಷಿಸುವನು (ಪಾನಮಾಡುವನು.) ಅನಂತರ ರಾಜನಾದ ಯಜಮಾನನೂ ಮುಂದೆ ಹೇಳುವ ಮಂತ್ರವನ್ನು ಪಠಿಸಿ ಸೋಮರಸವನ್ನು (ನ್ಯಗ್ರೋಧ) ಪಾನಮಾಡುವನು.

## ಯದತ್ರ ಶಿಷ್ಟಂ ರಸಿನಃ ಸುತಸ್ಯ ಯದಿಂದ್ರೋ ಅಪಿಬಚ್ಛಚೀಭಿಃ । ಇದಂ ತದಸ್ಯ ಮನಸಾ ಶಿವೇನ ಸೋಮಂ ರಾಜಾನಮಿಹ ಭಕ್ಷಯಾಮಿ

**ತಾಮೃಚಂ ಪಠತಿ—ರಸಿನೋ ರಸಯುಕ್ತಸ್ಯ ಸುತಸ್ಯಾಭಿಷುತಸ್ಯಾವರೋಧಾದಿದ್ರವ್ಯಸ್ಯಾ-ತ್ರ ಪಾತ್ರೇ ಯಚ್ಛಿಷ್ಟಂ ಯೋಽವಶಿಷ್ಟೋ ಭಾಗೋ ಯಚ್ಚ ಪಾತ್ರಸ್ಥಂ ದ್ರವ್ಯಮಿಂದ್ರಃ ಶಚೀಭಿಃ ಕರ್ಮವಿಶೇಷೈಃ ಸಂಸ್ಕೃತಮಪಿಬತ್ ಶಚೀಶಬ್ದಃ ಕರ್ಮನಾಮಸು ಪಠಿತಃ । ಅಸ್ಯ ದ್ರವ್ಯಸ್ಯ ಸಂಬಂಧಿ ಯದಿದಂ ಶಿಷ್ಟಂ ಶಿವೇನ ಭಕ್ತಿಯುಕ್ತತಯಾ ಮಂಗಲೇನ ಮನಸೇನ ಕರ್ಮಣಿ ಸೋಮಂ ರಾಜಾನಂ ಸೋಮರಾಜರೂಪಂ ಭಾವಯಿತ್ವಾ ಭಕ್ಷಯಾಮಿ ॥**

ಈ ಮಂತ್ರವನ್ನು ವಿವರಿಸುವರು-ರಸಯುಕ್ತವಾದುದೂ ಅವರೋಧಾದಿ (ವೃಕ್ಷವಬೀಳು) ಫಲ ಮೊದಲಾದ ದ್ರವ್ಯಗಳಿಂದ ಕೂಡಿದುದೂ ಪಾತ್ರೆಯಲ್ಲಿ ಉಳಿದಿರುವುದೂ, ಸಂಸ್ಕಾರ ಸಹಿತನಾದುದೂ ಆದ ಯಾವ ರಸವನ್ನು ಇಂದ್ರನು ಪಾನಮಾಡಿದನೋ ಅಂತಹ ರಸವೂ ಪಾತ್ರೆಯಲ್ಲಿ ಉಳಿದಿರುವುದೂ ಸೋಮರಾಜರೂಪವೂ ಆದ ಸೋಮರಸವನ್ನು ಭಕ್ತಿಭಾವದಿಂದಲೂ ಮಂಗಲಕರವಾದ ಮನಸ್ಸಿನಿಂದಲೂ ನಾನು ಪಾನಮಾಡುತ್ತೇನೆ. ಇದು ಮೇಲಿನ ಮಂತ್ರದ ಅರ್ಥವು. ಈ ಮಂತ್ರವನ್ನು ಪಠಿಸಿ ರಾಜನಾದ ಯಜಮಾನನು ತನ್ನ ಚಮಸ ಪಾತ್ರೆಯಲ್ಲಿರುವ (ನ್ಯಗ್ರೋಧ) ರಸವನ್ನು ಪಾನಮಾಡಬೇಕು.

## ಶಿವೋ ಹ ವಾ ಅಸ್ಮಾ ಏಷ ವಾನಸ್ಪತ್ಯಃ ಶಿವೇನ ಮನಸಾ ಭಕ್ಷಿತೋ ಭವತ್ಯುಗ್ರಂ ಹಾಸ್ಯ ರಾಷ್ಟ್ರಮವ್ಯಥ್ಯಂ ಭವತಿ ಯ ಏನಮೇತಂ ಭಕ್ಷಂ ಭಕ್ಷಯತಿ ಕ್ಷತ್ರಿಯೋ ಯಜಮಾನಃ ॥

**ತದಿದಂ ಸಮಂತ್ರಕಭಕ್ಷಣಂ ಪ್ರಶಂಸತಿ—ಯಃ ಕ್ಷತ್ರಿಯೋ ಯಜಮಾನ ಏವಮುಕ್ತೇನ ಪ್ರಕಾರೇಣೈತಂ ಫಲಚಮಸರೂಪಂ ಭಕ್ಷಂ ಭಕ್ಷಯತಿ ಅಸ್ಮೈ ಯಜಮಾನಾಯೈಷ ವಾನಸ್ಪತ್ಯೋ**

**ವಾನಸ್ಪತ್ಯೋ ಭಕ್ಷ ಃ ಶಿವೋ ಹ ವೈ ಮಂಗಲೋ ಹಿತಕಾರೀ ಭೂತ್ವಾ ಶಿವೇನ ಮನಸಾ ಭಕ್ತಿ-ಯುಕ್ತೇನ ಮಂಗಲೇನ ಮನಸಾ ಭಕ್ಷಿತೋ ಭವತಿ । ಅಸ್ಯ ರಾಜ್ಞೋ ರಾಷ್ಟ್ರಮುಗ್ರಂ ಶತ್ರೂ-ಣಾಮಭಿಭವನಾಯೋಗ್ರರೂಪಂ ಭೂತ್ವಾ ಕೇನಾಪ್ಯವ್ಯಥ್ಯಂ ವ್ಯಥಯಿತುಮಶಕ್ಯಂ ಭವತಿ । ಭಯಂ ಚಲನಂ ವಾ ಕದಾಚಿದಪಿ ನಾಸ್ಯ ರಾಷ್ಟ್ರಸ್ಯ ಭವತೀತ್ಯರ್ಥಃ ॥**

ಮಂತ್ರಪೂರ್ವಕವಾದ ಚಮಸಭಕ್ಷಣವನ್ನು ಪ್ರಶಂಸೆ ಮಾಡುವರು—ಯಾವ ಕ್ಷತ್ರಿಯ ಯಜಮಾನನು ಮೇಲೆ ಹೇಳಿದ ಪ್ರಕಾರವಾಗಿ ಫಲಚಮಸರೂಪವಾದ ಭಕ್ಷವನ್ನು (ನ್ಯಗ್ರೋಧಾದಿ ರಸವನ್ನು) ಭಕ್ಷಿಸುವನೋ ಎಂದರೆ ಪಾನಮಾಡುವನೋ ಅವನು ವನಸ್ಪತಿರೂಪವಾದುದೂ ಮಂಗಳಕರವಾದುದೂ ಭಕ್ತಿಯುಕ್ತವೂ ಶಾಂತವೂ ಆದ ಮನಸ್ಸಿನಿಂದ ಪಾನ ಮಾಡಲ್ಪಟ್ಟುದೂ ಆದ ಈ ಪಾನವನ್ನು ಒಳ್ಳೆಯ ಮನಸ್ಸಿನಿಂದ ಭಕ್ಷಿಸಿದಂತೆ ಆಗುವುದು. ಇದರಿಂದ ಈ ರಾಜನ ರಾಜ್ಯಕ್ಕೆ ಯಾವ ಶತ್ರುಭಯವೂ ಅಥವಾ ಬಾಧೆಯೂ ಉಂಟಾಗುವುದಿಲ್ಲ. ಇವನಿಗೆ ಯಾರಿಂದಲೂ ಯಾವ ವಿಧವಾದ ದುಃಖವೂ ಉಂಟಾಗುವುದಿಲ್ಲ. ಇವನ ರಾಜ್ಯಕ್ಕೆ ಯಾವಾಗಲೂ ಯಾವ ವಿಧವಾದ ಭಯವೂ ಶತ್ರುವಿನಿಂದ ರಾಜ್ಯಾಪಹರಣಭಯವೂ ಉಂಟಾಗುವುದಿಲ್ಲ.

ಶಂ ನ ಏಧಿ ಹೃದೇ ಪೀತಃ ಪ್ರ ಣ ಆಯುರ್ಜೀವಸೇ ಸೋಮ ತಾರೀ-
ರಿತ್ಯಾತ್ಮನಃ ಪ್ರತ್ಯಭಿಮರ್ಶಃ ॥

**ಭಕ್ಷಣಾದೂರ್ಧ್ವಂ ಮಂತ್ರೇಣಾತ್ಮಸ್ಪರ್ಶಂ ವಿಧತ್ತೇ— ಹೇ ಸೋಮ ಸೋಮಸ್ಥಾನೀ-ಯಾವರೋಧಾದಿಭಕ್ಷ್ಯಾಸ್ಮಾಭಿಃ ಪೀತಃ ಸನ್ನೋಽಸ್ಮಾಕಂ ಹೃದಯೇ ಶಮೇಧಿ ಸುಖಹೇತುರ್ಭವ ಜೀವಸೇ ಚಿರಜೀವನಾಯ ನೋಽಸ್ಮಾಕಮಾಯುಃ ಪ್ರತಾರೀಃ ಪ್ರಕರ್ಷೇಣ ಸಂಪಾದಯೇ-ತ್ಯನೇನ ಮಂತ್ರೇಣಾತ್ಮನಃ ಸ್ವಕೀಯಹೃದಯಸ್ಯ ಪ್ರತ್ಯಭಿಮರ್ಶೋ ಹಸ್ತೇನ ಸಂಪೂರ್ಣಃ ಸ್ಪರ್ಶಃ ಕರ್ತವ್ಯಃ ।**

ಚಮಸಭಕ್ಷಣಾನಂತರ ಮಂತ್ರಪೂರ್ವಕವಾಗಿ ಆತ್ಮ (ತನ್ನನ್ನು) ಸ್ಪರ್ಶಮಾಡಿಕೊಳ್ಳಬೇಕು. ಎಲೈ ಸೋಮ ದೇವನೇ, (ಸೋಮಸ್ಥಾನೀಯನಾದ ನ್ಯಗ್ರೋಧಾದಿ ಫಲರಸರೂಪವಾದ ಸೋಮರಾಜನೇ) ನಮ್ಮಿಂದ ನೀನು ಈ ರೀತಿ ಭಕ್ಷಿಸಲ್ಪಟ್ಟ ನಮ್ಮ ಹೃದಯ ಪ್ರದೇಶದಲ್ಲಿ ಸುಖವಾಗಿ ನೆಲೆಸು. ನೀನು ನಮಗೆ ಬಹುಕಾಲ ಜೀವಿಸಿರಲು ಸಂಪೂರ್ಣ ಆಯುಸ್ಸನ್ನೂ ಅನುಗ್ರಹಿಸು, ಎಂಬ ಅರ್ಥವಿರುವ ಮೇಲಿನ ಮಂತ್ರವನ್ನು ಪಠಿಸುತ್ತಾ ಯಜಮಾನನು ತನ್ನ ಹಸ್ತವನ್ನು ಹೃದಯದ ಮೇಲಿಟ್ಟು ಸ್ಪರ್ಶಮಾಡಬೇಕು.

ಈಶ್ವರೋ ಹ ವಾ ಏಷೋಽಪ್ರತ್ಯಭಿಮೃಷ್ಟೋ ಮನುಷ್ಯಸ್ಯಾಽಽಯುಃ
ಪ್ರತ್ಯವಹರ್ತೋರನರ್ಹನ್ಮಾ ಭಕ್ಷಯತೀತಿ ತದ್ಯದೇತೇನಾಽಽತ್ಮಾ-
ನಮಭಿಮೃಶತ್ಯಾಯುರೇವ ತತ್ಪ್ರತಿರತೇ ॥

**ಅಥಾನ್ವಯವ್ಯತಿರೇಕಾಭ್ಯಾಮಭಿಮರ್ಶಂ ಪ್ರಶಂಸತಿ— ಏಷೋಽವರೋಧಾದಿಭಕ್ಷೋಽಪ್ರತ್ಯಭಿಮೃಷ್ಟೋ ಮಂತ್ರಪೂರ್ವಕಾತ್ಮಸ್ಪರ್ಶರಹಿತಃ ಸನ್ಮನುಷ್ಯಸ್ಯ ರಾಜ್ಞ ಆಯುಃ ಪ್ರತ್ಯವಹರ್ತೋರ್ವಿನಾಶಯಿತುಮೀಶ್ವರಃ ಸಮರ್ಥೋ ಭವತಿ । ಕೇನಾಭಿಪ್ರಾಯೇಣೇತಿ ಸೋಽಭಿಧೀಯತೇ । ಅನರ್ಹಸ್ಸನ್ಭಕ್ಷಯಿತುಮಯೋಗ್ಯಃ ಸನ್ಮಾ ಭಕ್ಷಯತೀತಿ ತಸ್ಯ ಭಕ್ಷಸ್ಯಾಭಿಪ್ರಾಯಃ । ಸೋಽಯಂ ವ್ಯತಿರೇಕಸ್ತದ್ಯದಿತ್ಯಾದಿರನ್ವಯಃ। ತತ್ತದಾ ಭಕ್ಷಣಾದೂರ್ಧ್ವಂ ಯಚ್ಚೈತೇನ ಶಂ ನ ಇತ್ಯಾದಿಮಂತ್ರೇಣಾಭಿಮೃಶತಿ ತತ್ತೇನಾಭಿಮರ್ಶನೇನಾಽಽಯುರೇವ ಪ್ರತಿರತೇ ಪ್ರಕರ್ಷೇಣ ವರ್ಧಯತಿ ॥**

ಅಭಿಮರ್ಶನವನ್ನು ಪ್ರಕಾರಾಂತರವಾಗಿ ಪ್ರಶಂಸೆ ಮಾಡುವರು. ಮೇಲೆ ಹೇಳಿದ ನ್ಯಗ್ರೋಧ ರಸಾದಿಗಳನ್ನು ಭಕ್ಷಿಸಿದನಂತರ ಮಂತ್ರಪೂರ್ವಕವಾದ ಅಭಿಮರ್ಶನವನ್ನು ಮಾಡದೇ ಇದ್ದಲ್ಲಿ ಆ (ಮನುಷ್ಯನಾದ) ರಾಜನ ಆಯುಸ್ಸನ್ನು ಕ್ಷೀಣಮಾಡಲು ಈಶ್ವರನು (ದೇವನು) ಸಮರ್ಥನಾಗಿರುವನು. ಎಂದರೆ ದೇವನಿಗೆ ಆ ಶಕ್ತಿಯಿರುವುದು. ಹೇಗೆಂದರೆ ದೇವನು ಇಂತು ಯೋಚಿಸುವನು. ಸೋಮರಾಜನಾದ ನನ್ನನ್ನು ಭಕ್ಷಿಸಲು ಅನರ್ಹನಾದ ಈ ರಾಜನು ನನ್ನನ್ನು ಭಕ್ಷಿಸಿರುವನು. ಆದ್ದರಿಂದ ಇವನ ಆಯುಸ್ಸನ್ನು ಕ್ಷೀಣಮಾಡುವೆನು ಎಂದು ಯೋಚಿಸುವನು. ಆದ್ದರಿಂದ ಹಾಗಾಗದಿರುವುದಕ್ಕಾಗಿ ಭಕ್ಷಣಾನಂತರ ಮೇಲೆ ಹೇಳಿದ ಶಂ ನ ಎಂಬ ಮಂತ್ರಪಠನಪೂರ್ವಕವಾಗಿ ತನ್ನ ಹೃದಯವನ್ನು ಅಭಿಮರ್ಶನ ಮಾಡಿಕೊಳ್ಳಬೇಕು. ಅದರಿಂದ ಆ ಪುರುಷನ ಆಯುಸ್ಸು ವೃದ್ಧಿಯಾಗುವುದು.

**ಆಪ್ಯಾಯಸ್ವ ಸಮೇತು ತೇ ಸಂ ತೇ ಪಯಾಂಸಿ ಸಮು ಯಂತು ವಾಜಾ ಇತಿ ಚಮಸಮಾಪ್ಯಾಯಯತ್ಯಭಿರೂಪಾಭ್ಯಾಂ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ।**

**ದ್ವಾಭ್ಯಾಮೃಗ್ಭ್ಯಾಂ ತಸ್ಯ ಚಮಸಸ್ಯ ಪೂರಣಂ ವಿಧತ್ತೇ —ಪ್ರಥಮಾಯಾಮೃಚ್ಯಾಪ್ಯಾಯಸ್ವೇತಿ ಶ್ರವಣಾದ್ದ್ವಿತೀಯಪಾದೇ ಚಾಽಽಪ್ಯಾಯಮಾನ ಇತಿ ಶ್ರವಣಾದಿದಂ ಮಂತ್ರದ್ವಯಮಾಪ್ಯಾಯನಸ್ಯಾಭಿರೂಪಮನುಕೂಲಮ್ । ಯಜ್ಞೇ ಯದಂಗಮಭಿರೂಪಮನುಕೂಲಂ ಕ್ರಿಯತೇ ತದಂಗಂ ಸಮೃದ್ಧಂ ಸಂಪೂರ್ಣಂ ಭವತಿ ॥**

ಚಮಸಪಾತ್ರೆಯನ್ನು ಸೋಮರಸದಿಂದ ತುಂಬುವಾಗ ಪಠಿಸುವ ಎರಡು ಮಂತ್ರಗಳನ್ನು ತಿಳಿಸುವರು. ಈ ಮಂತ್ರಗಳಲ್ಲಿ **ಆಪ್ಯಾಯಸ್ವ ಸಮೇತು ತೇ** (ಋ. ಸಂ. ೧-೯೧-೧೬) ಎಂಬುದು ಮೊದಲನೆಯದು. **ಸಂ ತೇ ಪಯಾಂಸಿ ಸಮು ಯಂತು ವಾಜಾಃ** (ಋ. ಸಂ. ೧೯-೧-೧೮) ಎಂಬುದು ಎರಡನೆಯ ಮಂತ್ರವು. ಈ ಮಂತ್ರಗಳನ್ನು ಪಠಿಸಿ ಚಮಸವನ್ನು ರಸದಿಂದ ತುಂಬಬೇಕು. ಈ ಎರಡು ಮಂತ್ರಗಳಲ್ಲಿ ಮೊದಲನೆಯಮಂತ್ರದ ಮೊದಲನೆಯ ಪಾದದಲ್ಲಿಯೂ ಎರಡನೆಯ ಮಂತ್ರದ ಮೂರನೆಯ ಪಾದದಲ್ಲಿಯೂ ಆಪ್ಯಾಯಮಾನವೆಂಬ ಅರ್ಥವಿರುವ ಶಬ್ದಪ್ರಯೋಗವಿರುವುದರಿಂದ ಈ ಎರಡು ಮಂತ್ರಗಳೂ ಆಪ್ಯಾಯಮಾನಕ್ಕೆ (ಮನಸ್ಸಿಗೆ ಹಿತವನ್ನುಂಟುಮಾಡುವುದಕ್ಕೆ) ಅನುಕೂಲವಾಗಿರುವವು. ಯಜ್ಞದಲ್ಲಿ ಪಠಿಸುವ ಮಂತ್ರಗಳು ಸಮಯೋಚಿತವಾದ ಶಬ್ದಗಳನ್ನೂ ಅರ್ಥವನ್ನೂ ಹೊಂದಿದ್ದರೆ ಅದರಿಂದ ಯಜ್ಞವು ಸಂಪೂರ್ಣವೂ ಸಮೃದ್ಧಿಯೂ ಆಗುವುದು.



*English Transalation*

---

**(The drinking from the Traita cups)**

---

When the priests lift up the Traita cups for sacrifcing, then they shall lift up the cup of the sacrificer also, having thrown upon it two young sprouts of Dharba grass, both are then – (one after the other) to be thrown on the wooden sticks surrounding the fire by the formula Vaushat! After having thrown, the first, the priest repeats the verse, dadhikravno akarisham (4, 39, 6) concluding with Svaha and Vaushat. After having thrown the second Dharba stalk, he repeats the verse, a dadhikrah savasa (4, 38, 10). When the priests then take the Soma cups to drink themselves, the sacrificer should take his cup also. When they lift them up (to drink), the sacrificer should do the same. When the Hoter then calls the Ila (just before drinking) to the place, and drinks from his cup, then the sacrificer should drink his cup whilst repeatiug the following verse. "what has remained of the juicy Soma beverage whilst Indra drank with his hosts., this his remainder I enjoy with my happy mind. I drink the king Soma." This beverage prepared from the trees above mentioned promislng fortune to him, become drunk with a happy mind. The royal power of a Kshattriya who, when sacrificing, drinks only this portion described, becomes strong, and is not to be shaken.

By the words, "Be a blessing to our heart thou who art drunk! prolong our life, O Soma, that we may live long!" he then cleans his mouth; for if the juice remaining on his lips is not wiped off, then Soma, thinking, "an unworthy drinks me" is able to destroy the life of a man. But if the juice is wiped off in this way, then he prolongs the life. With the following two verses, which are appropriate for the sacrifice, apyayasva sametu (1, 91, 16) and sam to payamsi samaygantu (1 ,91 18) he blesses the Ghamasa

(i. e. what he has drunk from it) to bear fruit. What is appropriate in the sacrifice, that is successful.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ಪಂಚತ್ರಿಂಶಾಧ್ಯಾಯಸ್ಯ ಸಪ್ತಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೈದನೆಯ ಅಧ್ಯಾಯದಲ್ಲಿ ಏಳನೆಯ ಖಂಡವು ಸಮಾಪ್ತವಾದುದು.



## ಅಥ ಪಂಚತ್ರಿಂಶಾಧ್ಯಾಯೇ ಅಷ್ಟಮಃ ಖಂಡಃ

### ಮೂವತ್ತೈದನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು

[ನರಾಶಂಸ ಚಮಸದಿಂದ ಪಾನಮಾಡುವ ವಿಷಯ ; ಸೋಮರಸಕ್ಕೆ ಬದಲಾಗಿ ಬೇರೆ ದ್ರವ್ಯವನ್ನು ಭಕ್ಷಿಸುವ ವಿಷಯದಲ್ಲಿ ನಿರ್ದೇಶಕರಾದವರ ಹೆಸರುಗಳು ಮತ್ತು ಆ ಸಂಬಂಧವಾದ ಕಾರ್ಯಕಲಾಪಗಳ ವಿವರಣೆ]

**ತದ್ಯತ್ರೈತಾಂಶ್ಚಮಸಾನಾಪ್ಯಾಯಯೇಯುಸ್ತದೇತಂ ಯಜಮಾನಚಮಸಂ ಸಾದಯೇತಾನ್ಯತ್ರ ಪ್ರಕಂಪಯೇಯುಸ್ತದೇನಮನು ಪ್ರಕಂಪಯೇ-ದಥೈನಮಾಹೃತಂ ಭಕ್ಷಯೇನ್ನರಾಶಂಸಪೀತಸ್ಯ ದೇವ ಸೋಮ ತೇ ಮತಿವಿದ ಊಮೈಃ ಪಿತೃಭಿರ್ಭಕ್ಷಿತಸ್ಯ ಭಕ್ಷಯಾಮೀತಿ ಪ್ರಾತಃಸವನೇ ನಾರಾಶಂಸೋ ಭಕ್ಷ ಊರ್ವೈರಿತಿ ಮಾಧ್ಯಂದಿನೇ ಕಾವ್ಯೈರಿತಿ ತೃತೀಯಸವನೇ ॥**

ಭಕ್ಷಿತಾಪ್ಯಾಯಿತಸ್ಯ ನಾರಾಶಂಸಸಂಜ್ಞಸ್ಯ ಚಮಸಸ್ಯ ಪ್ರಯೋಗಂ ವಿಧತ್ತೇ—ತತ್ತಸ್ಮಾ-ದಾಪ್ಯಾಯನಾದೂರ್ಧ್ವಂ ಯತ್ರ ಯದೈತಾನ್ ಹೋತ್ರಾದೀನಾಂ ಚಮಸಾನಾಪ್ಯಾಯತಾನ್ಸಾದ-ಯೇಯುಸ್ತದಾನೀಮೇತಂ ಯಜಮಾನಸ್ಯ ರಾಜ್ಞಶ್ಚಮಸಂ ಸಾದಯೇತ್ । ತಾನ್‌ಹೋತ್ರಾದೀನಾಂ ಚಮಸಾನ್ಯದಾ ಪ್ರಕಂಪಯೇಯುಸ್ತದೈವೈನಂ ರಾಜಚಮಸಮನು ಪ್ರಕಂಪಯೇತ್ । ಅಥಾನಂತರ ಮೇನಂ ಚಮಸಂ ಭಕ್ಷಣಾರ್ಥಮಾಹೃತಂ ನರಾಶಂಸೇತ್ಯಾದಿಮಂತ್ರೇಣ ಭಕ್ಷಯೇತ್ । ಹೇ (ಸೋಮ) ಸೋಮಸದೃಶ ಫಲಚಮಸ ದೇವ ನರಾಶಂಸಪೀತಸ್ಯ ನರಾ ಮನುಷ್ಯಾ ಋಭುಪ್ರಮುಖಾಃ

**ಶಸ್ಯಂತೇ ಯಸ್ಮಿನ್ ಸವನವಿಶೇಷೇ ಸೋಽಯಂ ನರಾಶಂಸಸ್ತತ್ರ ದೇವೈಃ ಪೀತಸ್ಯೋಮನಾಮುಭಿಃ ಪಿತೃಭಿಶ್ಚ ಭಕ್ಷಿತಸ್ಯ ಮತಿವಿದೋಽಸ್ಮದಭಿಪ್ರಾಯಾಭಿಜ್ಞಸ್ಯ ತೇ ಭಕ್ಷಯಾಮೀತ್ಯನೇನ ಮಂತ್ರೇಣ ಪ್ರಾತಃಸವನೇ ನರಾಶಂಸಚಮಸಸಂಬಂಧೀ ಭಕ್ಷಃ ಕರ್ತವ್ಯಃ । ಇತರಯೋಸ್ತು ಸವನಯೋಸ್ತಸ್ಮಿನ್ಮಂತ್ರ ಊಮ್ಮೈರಿತ್ಯಸ್ಯ ಪದಸ್ಯ ಸ್ಥಾನ ಊರ್ವೈಃ ಕಾವ್ಯೈರಿತಿಪದದ್ವಯಂ ಕ್ರಮೇಣ ಪಠನೀಯಮ್॥**

ಭಕ್ಷಿಸಲ್ಪಟ್ಟು ಆಪ್ಯಾಯನಗೊಳಿಸಲ್ಪಡುವ ನಾರಾಶಂಸ ಎಂಬ ಚಮಸದ ಪ್ರಯೋಗವಿಧಾನವನ್ನು ತಿಳಿಸುವರು– ಆಪ್ಯಾಯನಾನಂತರ ಹೋತೃಮೊದಲಾದ ಋತ್ವಿಜರು ತಮ್ಮ ಚಮಸಪಾತ್ರೆಗಳನ್ನು ಕೆಳಗಿಡುವರು. ಕ್ಷತ್ರಿಯಯಜಮಾನನೂ ಕೂಡ ತನ್ನ ಚಮಸವನ್ನು ಕೆಳಗಿಡುವನು. ಅನಂತರ ಹೋತೃಮೊದಲಾದವರು ತಮ್ಮ ಚಮಸಗಳನ್ನು ಎತ್ತಿಹಿಡಿದಾಗ ರಾಜನೂ (ಯಜಮಾನನೂ) ತನ್ನ ಚಮಸವನ್ನು ಎತ್ತಿ ಹಿಡಿದುಕೊಳ್ಳುವನು. ಇದಾದಮೇಲೆ ಮತ್ತೆ ಚಮಸವನ್ನು ರಸದಿಂದ ತುಂಬಿ ನರಾಶಂಸಮಂತ್ರವನ್ನು ಪಠಿಸಿ ಭಕ್ಷಿಸಬೇಕು. ಮಂತ್ರಾರ್ಥವು—ಎಲೈ ಸೋಮನೇ **ನರಾಶಂಸ ಪೀತಸ್ಯ, ನರಾಃ** –ಋಭುಗಳೇ ಮೊದಲಾದ ಮನುಷ್ಯರು **ಶಂಸಃ** –ಯಾವ ಸೋಮವನ್ನು ಪ್ರಶಂಸೆಮಾಡುವರೋ ಅಂತಹ ಮತ್ತು **ಪೀತಸ್ಯ**–ಪಿತೃದೇವತೆಗಳಿಂದ ಪಾನಮಾಡಲ್ಪಟ್ಟ, **ಮತಿವಿದಃ** –ನಮ್ಮ ಮನಸ್ಸಿನಲ್ಲಿರುವ ಅಭಿಪ್ರಾಯವನ್ನು ತಿಳಿದಿರುವ ಸೋಮರಸರೂಪದಿಂದಿರುವ **ಪಿತೃಭಿರ್ಭಕ್ಷಿತಸ್ಯ**– ಪಿತೃದೇವತೆಗಳಿಂದ ಭಕ್ಷಿಸಲ್ಪಟ್ಟ **ತೇ**- ನಿನ್ನನ್ನು (ಈ ಸೋಮರಸವನ್ನು) **ಭಕ್ಷಯಾಮಿ**- ನಾನು ಭಕ್ಷಿಸುತ್ತೇನೆ ಎಂದು ಮಂತ್ರದ ಅರ್ಥವು. ಈ ಮಂತ್ರವನ್ನು ಹೇಳುವಾಗ ಪ್ರಾತಸ್ಸವನದಲ್ಲಿ **ಊಮ್ಮೈಃ ಪಿತೃಭಿಃ ಭಕ್ಷಿತಸ್ಯ** ಎಂದೂ ಮಾಧ್ಯಂದಿನ ಮತ್ತು ತೃತೀಯಸವನಗಳಲ್ಲಿ ಕ್ರಮವಾಗಿ **ಊರ್ವೈಃ** ಮತ್ತು ಕಾವ್ಯೈಃ ಎಂಬ ಶಬ್ದಗಳ ಪ್ರಯೋಗದಿಂದಲೂ ಪಠಿಸಬೇಕು.

## ಊಮಾ ವೈ ಪಿತರಃ ಪ್ರಾತಃಸವನ ಊರ್ವಾ ಮಾಧ್ಯಂದಿನೇ ಕಾವ್ಯಾಸ್ತೃತೀಯಸವನೇ ತದೇತತ್ಪಿತೄನೇವಾಮೃತಾನ್ಸವನಭಾಜಃ ಕರೋತಿ

**ತ್ರಿವಿಧಮಂತ್ರತಾತ್ಪರ್ಯಂ ದರ್ಶಯತಿ—ಊಮಾ ಊರ್ವಾಃ ಕಾವ್ಯಾ ಇತ್ಯೇತೇ ಸವನತ್ರಯಗತಾಃ ಪಿತೃವಿಶೇಷಾ ಅತಸ್ತಚ್ಛಬ್ದಪ್ರಯೋಗೇಣ ತಾನ್ ಪಿತೄನ್ಸವನಭಾಜಃ ಕರೋತಿ । ಪಿತರಶ್ಚ ದ್ವಿವಿಧಾ ಮೃತಾ ಅಮೃತಾಶ್ಚ । ಇದಾನೀಂ ಮನುಷ್ಯಾಃ ಸಂತೋ ಮರಣಾದೂರ್ಧ್ವಂ ಪಿತೃಲೋಕಂ ಪ್ರಾಪ್ತಾ ಮೃತಾಃ । ಸೃಷ್ಟಿಮಾರಭ್ಯ ಪಿತೃಲೋಕೇಽವಸ್ಥಿತಾ ಅಮೃತಾ ಊಮಾದಯಃ। ತಥಾವಿಧತ್ವಾದಮೃತಶಬ್ದೇನ ವಿಶೇಷ್ಯಂತೇ ॥**

ಮೇಲಿನ ಮಂತ್ರದ ತಾತ್ಪರ್ಯವನ್ನು ತಿಳಿಸುವರು—ಊಮಾಃ ಊರ್ವಾಃ ಕಾವ್ಯಾ ಎಂದು ಪಿತೃಗಳು ಬೇರೆ ಬೇರೆ ಇರುವರು. ಈ ಪಿತೃಗಳು ಪ್ರಾತಸ್ಸವನಾದಿ ಮೂರು ಸವನಗಳಲ್ಲಿಯೂ ಭಾಗಿಗಳಾಗುವರು. ಪಿತೃಗಳು ಎರಡು ವಿಧವಾಗಿರುವರು ಮೃತರು ಅಮೃತರು ಎಂದು. ಈಗ ಎಂದರೆ ಈ ಭೂಮಿಯಲ್ಲಿ ಮನುಷ್ಯರಾಗಿದ್ದು ಮೃತರಾದನಂತರ ಪಿತೃಲೋಕಕ್ಕೆ ಹೋಗಿ ಅಲ್ಲಿ ವಾಸಿಸುವರು ಮೃತರು ಎಂದೂ ಸೃಷ್ಟಿಕಾಲದಲ್ಲಿಯೇ ಪಿತೃಲೋಕದಲ್ಲಿ ಇದ್ದು ಈಗಲೂ ಅಲ್ಲಿರುವವರ ಅಮೃತರೆಂದೂ ಊಮಾದಿಪಿತೃಗಳಲ್ಲಿ ಮುಖ್ಯವಾದ ಎರಡು ಭಾಗಗಳಿರುವರು. ಆದ್ದರಿಂದ ಇವರನ್ನು ಮೃತರು, ಅಮೃತರು ಎಂದು ವಿಂಗಡಿಸಲಾಗಿದೆ.

**ಸರ್ವೋ ಹೈವ ಸೋಽಮೃತ ಇತಿ ಹ ಸ್ಮಾಹ ಪ್ರಿಯವ್ರತಃ ಸೋಮಾ-
ಪೋ ಯಃ ಕಶ್ಚ ಸವನಭಾಗಿತಿ ।**

**ಅಥ ಮಂತ್ರತಾತ್ಪರ್ಯೇ ಮತಾಂತರಂ ದರ್ಶಯತಿ—ನ ಕೇವಲಮೂಮಾದಯ ಏವ ಪಿತರಃ ಪ್ರಸಿದ್ಧಾ ಅಮೃತಾಃ । ಕಿಂತು ಯಃ ಕೋಽಪಿ ಪಿತಾ ಸವನಭಾಗ್ಭವತಿ ಸ ಸರ್ವೋಽಪ್ಯೂಮಾದಿಶಬ್ದೈರುಪಲಕ್ಷಿತತ್ವಾದಮೃತ ಏವ ಭವತೀತಿ ಸೋಮಪಃ ಪ್ರಿಯವ್ರತಾಖ್ಯೋ ಮಹರ್ಷಿರಾಹ ಸ್ಮ ॥**

ಮೇಲಿನ ಮಂತ್ರತಾತ್ಪರ್ಯದಲ್ಲಿ ಭಿನ್ನಾಭಿಪ್ರಾಯವಿರುವುದನ್ನು ತಿಳಿಸುವರು—ಮೇಲೆ ಹೇಳಿದಂತೆ ಊಮಾದಿಪಿತೃಗಳು ಮಾತ್ರವೇ ಅಮೃತರೆಂದು ಪ್ರಸಿದ್ಧರಾದ ಪಿತೃಗಳಾಗಿಲ್ಲ. ಆದರೆ ಸವನದಲ್ಲಿ (ಯಜ್ಞ) ಭಾಗವಹಿಸುವ ಯಾವ ಪಿತೃವಿಗಾದರೂ ಊಮಾದಿಗಳಿಂದ ವ್ಯವಹರಿಸುವುದು ರೂಢಿಯು. ಇಂತಹ ಪಿತೃವು ಅಮೃತನೆಂದೂ ಸೋಮಪ (ಸೋಮಪಾನಾರ್ಹ) ನೆಂದೂ ಹೇಳಲ್ಪಡುವನು. ಇದು ಪ್ರಿಯವ್ರತ ಎಂಬ ಮಹರ್ಷಿಯ ಅಭಿಪ್ರಾಯವು.

ಅಮೃತಾ ಹ ವಾ ಅಸ್ಯ ಪಿತರಃ ಸವನಭಾಜೋ ಭವಂತ್ಯುಗ್ರಂ ಹಾಸ್ಯ ರಾಷ್ಟ್ರಮವ್ಯಥ್ಯಂ ಭವತಿ ಯ ಏವಮೇತಂ ಭಕ್ಷಂ ಭಕ್ಷಯತಿ ಕ್ಷತ್ರಿಯೋ ಯಜಮಾನಃ ॥

**ಇದಾನೀಂ ನರಾಶಂಸಚಮಸಭಕ್ಷಂ ಪ್ರಶಂಸತಿ—ಅಸ್ಯ ರಾಜ್ಞೋ ಭಕ್ಷಯಿತುಃ ಪಿತರಃ ಪಿತೃಪಿತಾಮಹಾದಯಃ ಸರ್ವೇಽಪಿ ಸವನಭಾಜಃ ಸಂತೋಽಮೃತಾ ಮರಣರಹಿತಾ ದೇವಾ ಭವಂತಿ । ಉಗ್ರಮಿತ್ಯಾದಿ ಪೂರ್ವವತ್ ।**

ಈಗ ನರಾಶಂಸಚಮಸಭಕ್ಷಣವನ್ನು ಪ್ರಶಂಸೆಮಾಡುವರು—ಯಜ್ಞಮಾಡುವ ಈ ಕ್ಷತ್ರಿಯ (ರಾಜನ) ಯಜಮಾನನ ಪಿತೃಪಿತಾಮಹಾದಿ ಸಮಸ್ತಪಿತೃಗಳೂ ಪ್ರಾತಃಸವನಾದಿ ಮೂರು ಸವನಗಳಲ್ಲಿಯೂ ಭಾಗಿಗಳಾಗುವುದರಿಂದ ಇವರೆಲ್ಲರೂ ಮರಣರಹಿತರಾದ ದೇವತೆಗಳೆಂದು ಭಾವಿಸಲ್ಪಡುವರು. ಈ ರಾಜನ ರಾಜ್ಯವೂ ಸಹ ಶತ್ರುಗಳಿಂದ ಭಯರಹಿತವಾಗಿಯೂ ಪ್ರಜೆಗಳು ದುಃಖಾದಿಗಳಿಂದ ರಹಿತವಾಗಿಯೂ ಇರುವರು.

ಸಮಾನ ಆತ್ಮನಃ ಪ್ರತ್ಯಭಿಮರ್ಶಃ ಸಮಾನಮಾಪ್ಯಾಯನಂ ಚಮಸಸ್ಯ ॥

**ಶಂ ನ ಇತ್ಯಾದಿಮಂತ್ರೇಣ ಸ್ವದೇಹಸ್ಪರ್ಶನಾಮಾಪ್ಯಾಯಸ್ವೇತಿ ಮಂತ್ರದ್ವಯೇನ ಚಮಸಪೂರಣಂ ಚ ಪ್ರಾತಃಸವನೇ ಯದುಕ್ತಂ ತದುತ್ತರಯೋಃ ಸವನಯೋರತಿದಿಶತಿ—**

ಹಿಂದೆ ಹೇಳಿದ **ಶಂ ನಃ** ಎಂದು ಮೊದಲಾದ ಮಂತ್ರಗಳಿಂದ ಯಜಮಾನನು ತನ್ನ ಶರೀರವನ್ನು ಅಭಿಮರ್ಶನಮಾಡಿಕೊಂಡು ಆಪ್ಯಾಯನಗೊಳಿಸುವುದೂ, **ಆಪ್ಯಾಯಸ್ವ** ಮತ್ತು **ಸಂ ತೇ ಪಯಾಂಸಿ** ಎಂಬ ಎರಡು ಮಂತ್ರಗಳಿಂದ ಚಮಸವನ್ನು ಸೋಮರಸದಿಂದ ತುಂಬುವುದೂ ಎಂಬ ವಿಷಯಗಳನ್ನೂ ಹಿಂದೆ ಹೇಳಲಾಗಿದೆಯಷ್ಟೇ. ಈ ರೀತಿ ಮಾಡುವುದು ಪ್ರಾತಸ್ಸವನದಲ್ಲಿ ಮಾತ್ರವೇ ಅಲ್ಲ. ಮಾಧ್ಯಂದಿನ ಸವನ ತೃತೀಯ ಸವನಗಳಲ್ಲಿಯೂ ಇದರಂತೆಯೇ ಮಾಡಬೇಕು.

ಪ್ರಾತಃಸವನಸ್ಯೈವಾಽಽವೃತಾ ಪ್ರಾತಃಸವನೇ ಚರೇಯುರ್ಮಾಧ್ಯಂ ದಿನಸ್ಯ ಮಾಧ್ಯಂದಿನೇ ತೃತೀಯಸವನಸ್ಯ ತೃತೀಯಸವನೇ ॥

ಫಲಚಮಸೇ ವಿದ್ಯಮಾನಂ ಪ್ರಯೋಗವಿಶೇಷಮಭಿಧಾಯಾವಶಿಷ್ಟಂ ಸೋಮಚಮಸಗತಂ ಪ್ರಯೋಗಂ ಸವನತ್ರಯೇಽಪ್ಯತಿದಿಶತಿ—ಸೋಮವಿಷಯಸ್ಯ ಪ್ರಾತಃಸವನಸ್ಯೈವಾವೃತಾ ಪ್ರಕಾರೇಣ ಫಲಚಮಸವಿಷಯಪ್ರಾತಃಸವನೇ ಚರೇಯುರನು (ತಿ) ಷ್ಠೇಯುಃ ಏವಮಿತರತ್ರಾಪಿ ಯೋಜ್ಯಮ್॥

ಹಿಂದೆ ಹೇಳಿದ ಪ್ರಯೋಗವಿಧಾನವಲ್ಲದೆ ಚಮಸಪಾತ್ರೆಯಲ್ಲಿರುವ ಸೋಮರಸಕ್ಕೆ ಮಾಡಬೇಕಾದ (ಮೂರು ಸವನಗಳಲ್ಲಿಯೂ) ಪ್ರಯೋಗ ವಿಧಾನವನ್ನು ತಿಳಿಸುವರು–ಸೋಮ ವಿಷಯದಲ್ಲಿ (ನ್ಯಗ್ರೋಧರಸ) ಪ್ರಾತಃಸವನಕರ್ಮದಲ್ಲಿ ಯಾವ ವಿಧಾನಗಳನ್ನೂ ಸಂಸ್ಕಾರಗಳನ್ನೂ ಅನುಸರಿಸಲಾಗಿದ್ದಿತೋ ಅದೇ ವಿಧವಾದ ವಿಧಾನಗಳನ್ನೂ ಸಂಸ್ಕಾರಗಳನ್ನೂ ಮಾಧ್ಯಂದಿನ ಸವನದಲ್ಲಿಯೂ, ತೃತೀಯಸವನದಲ್ಲಿಯೂ ಅನುಸರಿಸಬೇಕು.

ತಮೇತಮೇತಂ ಭಕ್ಷಂ ಪ್ರೋವಾಚ ರಾಮೋ ಮಾರ್ಗವೇಯೋ ವಿಶ್ವಂತರಾಯ ಸೌಷದ್ಮನಾಯ ॥

ಉಕ್ತಂ ಫಲಚಮಸಭಕ್ಷಮುಪಸಂಹರತಿ—

ಮೇಲೆ ಹೇಳಿದ ಫಲಚಮಸ ಭಕ್ಷಣ ಮೊದಲಾದ ವಿಷಯವನ್ನು ಹೇಳಿ ಮುಗಿಸುವರು—ಮಾರ್ಗವೇಯ ಪುತ್ರನಾದ ರಾಮ ಎಂಬ ಬ್ರಾಹ್ಮಣನು ಇದುವರೆಗೂ ಹೇಳಿದಂತೆ ಯಜ್ಞದಲ್ಲಿ ಸೋಮಪಾನ ವಿಷಯದಲ್ಲಿ ರಾಜನು (ಕ್ಷತ್ರಿಯನಾದವನು) ಅನುಸರಿಸಬೇಕಾದ ನಿಯಮಗಳನ್ನು ಆಚರಿಸಬೇಕಾದ ಕಾರ್ಯಕಲಾಪಗಳನ್ನೂ ಸುಷದ್ಮನ ಪುತ್ರನಾದ ವಿಶ್ವಂತರ ಎಂಬ ರಾಜನಿಗೆ ವಿಸ್ತಾರವಾಗಿ ಹೇಳಿ ಮುಗಿಸಿದನು.

ತಸ್ಮಿನ್ ಹೋವಾಚ ಪ್ರೋಕ್ತೇ ಸಹಸ್ರಮು ಹ ಬ್ರಾಹ್ಮಣ ತುಭ್ಯಂ ದದ್ಮಃ ಸಶ್ಯಾಪರ್ಣ ಉ ಮೇ ಯಜ್ಞ ಇತಿ ॥

ಅಥ ವಿಶ್ವಂತರಸ್ಯ ವಾಕ್ಯಂ ದರ್ಶಯತಿ—ತಸ್ಮಿನ್ರಾಜಭಕ್ಷೇ ರಾಮೇಣ ಪ್ರೋಕ್ತೇ ಸತಿ ಸ ರಾಜಾ ರಾಮಂ ಪ್ರತ್ಯೇವಮುವಾಚ । ಹೇ ಬ್ರಾಹ್ಮಣ ರಾಮ ತುಭ್ಯಂ ವಯಂ ಸಹಸ್ರಮು ಹ ಗವಾಂ ಸಹಸ್ರಂ ಸಂಪೂರ್ಣಂ ದದ್ಮಃ । ಪುರಾ ಮೇ ಯಜ್ಞೋ ವಿಶ್ಯಾಪರ್ಣ ಆಸೀತ್ । ಇದಾನೀಂತು ಸಶ್ಯಾ-ಪರ್ಣ ಏವಾಸ್ತು । ಭವದೀಯಾಃ ಶ್ಯಾಪರ್ಣನಾಮಕಾಃ ಸರ್ವೇ ಬ್ರಾಹ್ಮಣಾ ಅಸ್ಮಿನ್ಯಜ್ಞೇ ವಸಂತ್ವಿತಿ ॥

ಅನಂತರ ವಿಶ್ವಂತರರಾಜನು ರಾಮನೆಂಬ ಬ್ರಾಹ್ಮಣನನ್ನುದ್ದೇಶಿಸಿ ಈರೀತಿ ಹೇಳಿದನು—ಎಲೈ ಬ್ರಾಹ್ಮಣನೇ, ಕ್ಷತ್ರಿಯನಾದವನು ಯಜ್ಞದಲ್ಲಿ ಸೋಮಭಕ್ಷಣಮಾಡುವ ವಿಧಾನವನ್ನು ನೀನು ನನಗೆ ವಿಸ್ತಾರವಾಗಿ ತಿಳಿಸಿರುವೆ. ಇದರಿಂದ ನನಗೆ ಬಹಳವಾಗಿ ಸಂತೋಷವಾಗಿದೆ. ಆದ್ದರಿಂದ ಈಗ ನಾನು ನಿನಗೆ ಒಂದು ಸಹಸ್ರ ಗೋವುಗಳನ್ನು ನಿನಗೆ ಮರ್ಯಾದೆಯಾಗಿ ಕೊಡುತ್ತೇನೆ. ಇದುವರೆಗೂ ನನ್ನ ಯಜ್ಞದಲ್ಲಿ ಶ್ಯಾಪರ್ಣರು (ಕುಲ ಪುರೋಹಿತರು) ಇಲ್ಲದೆ ಯಜ್ಞವು ಹಾಗೆಯೇ ನಡೆಯುತ್ತಿತ್ತು. ಇನ್ನು ಮೇಲೆ ನೀನೂ ನಿನ್ನ ಸಂಬಂಧಿಗಳಾದ ಶ್ಯಾಪರ್ಣರೆಂಬ ನಮ್ಮ ಕುಲಪುರೋಹಿತರಾದ ಬ್ರಾಹ್ಮಣರೂ

ಸೇರಿ ನನ್ನ ಯಜ್ಞದಲ್ಲಿ ಭಾಗವಹಿಸಿ ಅದನ್ನು ಸಾಂಗವಾಗಿ ನೆರವೇರಿಸಿರಿ. ಮತ್ತು ನೀವುಗಳು ಈ ಯಜ್ಞವೇದಿಯಲ್ಲಿ ಬಂದು ಕುಳಿತುಕೊಳ್ಳಲು ನನ್ನ ಅಭ್ಯಂತರವೇನೂ ಇರುವುದಿಲ್ಲ ಎಂದು ಹೇಳಿದನು.

ಏತಮು ಹೈವ ಪ್ರೋವಾಚ ತುರಃ ಕಾವಷೇಯೋ ಜನಮೇಜಯಾಯ ಪಾರಿಕ್ಷಿತಾಯೈತಮು ಹೈವ ಪ್ರೋಚತುಃ ಪರ್ವತನಾರದೌ ಸೋಮ-ಕಾಯ ಸಾಹದೇವ್ಯಾಯ ಸಹದೇವಾಯ ಸಾಂರ್ಜಯಾಯ ಬಭ್ರವೇ ದೈವಾವೃಧಾಯ ಭೀಮಾಯ ವೈದರ್ಭಾಯ ನಗ್ನಜಿತೇ ಗಾಂಧಾರಾಯೈತಮು ಹೈವ ಪ್ರೋವಾಚಾಗ್ನಿಃ ಸನಶ್ರುತಾಯಾ-ರಿಂದಮಾಯ ಕ್ರತುವಿದೇ ಜಾನಕಯ ಏತಮು ಹೈವ ಪ್ರೋವಾಚ ವಸಿಷ್ಠಃ ಸುದಾಸೇ ಪೈಜವನಾಯ ತೇ ಹ ತೇ ಸರ್ವ ಏವ ಮಹ-ಜ್ಜಗ್ಮುರೇತಂ ಭಕ್ಷಂ ಭಕ್ಷಯಿತ್ವಾ ಸರ್ವೇ ಹೈವ ಮಹಾರಾಜಾ ಆಸುರಾದಿತ್ಯ ಇವ ಹ ಸ್ಮ ಶ್ರಿಯಾಂ ಪ್ರತಿಷ್ಠಿತಾಸ್ತಪಂತಿ ಸರ್ವಾಭ್ಯೋ ದಿಗ್ಭ್ಯೋ ಬಲಿಮಾವಹಂತಃ ||

ಇದಾನೀಂ ಸಂಪ್ರದಾಯಕಥನೇನ ಭಕ್ಷಂ ಪ್ರಶಂಸತಿ—ಏತಂ ಪೂರ್ವೋಕ್ತಮೇವ ಭಕ್ಷಂ ಕವಷಸ್ಯ ಪುತ್ರಸ್ತುರನಾಮಕೋ ಮಹರ್ಷಿಃ ಪರಿಕ್ಷಿತ್ಪುತ್ರಾಯ ಜನಮೇಜಯಸಂಜ್ಞಕಾಯ ಪ್ರೋವಾಚ । ಅಯಮೇಕಃ ಸಂಪ್ರದಾಯಃ । ತಥೈತಮೇವ ಭಕ್ಷಂ ಪರ್ವತನಾರದಾಖ್ಯಾವೃಷೀ ಸಹದೇವಸ್ಯ ಪುತ್ರಾಯ ಸೋಮಕಾಯ ಪ್ರೋಚತುಃ । ಸೋಮಕಶ್ಚಾಸ್ಯಸ್ಮೈ ಸಹದೇವಾಯ ಪ್ರೋವಾಚ । ಸಹದೇವಶ್ಚ ಸಾಂರ್ಜಯಾಯ ಪ್ರೋವಾಚ ಸಾಂಜಯರ್ಶ್ಚ ಬಭ್ರವೇ ಪ್ರೋವಾಚ । ಬಭ್ರುಶ್ಚ ದೈವಾವೃಧಾಯ ಪ್ರೋವಾಚ । ದೈವಾವೃಧಶ್ಚ ಭೀಮಾಯ ಪ್ರೋವಾಚ । ಭೀಮಶ್ಚ ವೈದರ್ಭಾಯ ಪ್ರೋವಾಚ । ವೈದರ್ಭಶ್ಚ ನಗ್ನಜಿತೇ ಪ್ರೋವಾಚ । ನಗ್ನಜಿಚ್ಚ ಗಾಂಧಾರಾಯ ಪ್ರೋವಾಚ। ಅಯಂ ದ್ವಿತೀಯಃ ಸಂಪ್ರದಾಯಃ । ತಥೈಥಮೇವ ಭಕ್ಷಮಗ್ನಿನಾಮಕೋ ಮಹರ್ಷಿಃ ಸನಶುತ್ರಾಯ ಪ್ರೋವಾಚ । ಸನಶ್ರುತಶ್ಚಾರಿಂದಮಾಯ ಪ್ರೋವಾಚ । ಅರಿಂದಮಶ್ಚ ಕ್ರತುವಿದೇ ಪ್ರೋವಾಚ ಕ್ರುತುವಿಚ್ಚ ಜಾನಕಯೇ ಪ್ರೋವಾಚ । ಅಯಂ ತೃತೀಯಃ ಸಂಪ್ರದಾಯಃ । ತಥೈತಮೇವ ಭಕ್ಷಂ ವಸಿಷ್ಠೋ ಮಹರ್ಷಿಃ ಸುದಾಸೇ ಮಹರ್ಷಯೇ ಪ್ರೋವಾಚ । ಸುಷ್ಠು ಧನಂ ದಾಸತೀತಿ ಸುದಾಃ । ಅಥವಾ ಸುಷ್ಠು ಶತ್ರೂನ್ ದಸ್ಯತ್ಯುಪಕ್ಷಯತೀತಿ ಸುದಾಃ । ಸಚ ಪೈಜವನಾಯ ಪ್ರೋವಾಚ । ಯದ್ವಾ ಸಹದೇವಾಯ ಸಾಂರ್ಜ (ಯಾ) ಯೇತ್ಯಾದಿಷು ವಾಕ್ಯೇಷು ಸಹದೇವಾದಿನಾಮ್ನಾಂ ಸಾಂರ್ಜಯಾದಿಪದಾನಿ ವಿಶೇಷಣತಯಾ ಯೋಜ್ಯಾನಿ । ದ್ವಿತೀಯ-ಸ್ತುಚ್ಛಬ್ದ ಏತಚ್ಛಬ್ದಾರ್ಥಃ । ತೇ ಹೈತೇ ತುರಾದಯಃ ಪೈಜವನಾಂತಾಃ ಸರ್ವ ಏವ ಪುರುಷಾ ಏತಂ ಫಲಚಮಸಭಕ್ಷಂ ಭಕ್ಷಯಿತ್ವಾ ಮಹಜ್ಜಗ್ಮುರ್ಮಹತ್ವಂ ಪ್ರಾಪ್ತಾಃ । ಮಹತ್ತ್ವಸ್ಯೈವ ಸರ್ವೇ

**ಜೇತ್ಯಾದಿಕಂ ವಿವರಣಮ್ । ಸರ್ವೇಽಪ್ಯೇತೇ ಮಹಾರಾಜಾಃ ಸಾರ್ವಭೌಮಾ ಆಸುಃ । ಯಥಾಽ-ದಿತ್ಯೋ ದ್ಯುಲೋಕೇ ಪ್ರತಿಷ್ಠಿತಸ್ತಪತಿ ಏವಮೇತೇ ಶ್ರಿಯಾಂ ಗಜಾಶ್ವಾದಿಕಾಯಾಂ ಸಂಪದಿ ಪ್ರತಿಷ್ಠಿತಾಃ ಸಂತಸ್ತಪಂತಿ ಶತ್ರೂಣಾಂ ತಾಪಂ ಕುರ್ವಂತಿ । ತಥಾ ಸರ್ವಾಭ್ಯೋ ದಿಗ್ಭ್ಯಃ ಸರ್ವದಿಗವಸ್ಥಿತೇಭ್ಯೋ ರಾಜಭ್ಯಃ ಸಕಾಶಾದ್ಬಲಿಮಾವಹಂತಃ ಕರಮಾದದಾನಾಃ ಸ್ವಾಮಿನೋ ಭವಂತಿ ॥**

ಇದುವರೆಗೂ ಈ ವಿಷಯದಲ್ಲಿ ಪೂರ್ವಸಂಪ್ರದಾಯವನ್ನೆಲ್ಲಾ ಹೇಳಿ ಸೋಮಭಕ್ಷವನ್ನು ಪ್ರಶಂಸೆಮಾಡುವರು. ಈ ಭಕ್ಷದ ವಿಷಯವನ್ನು ಕವಷ ಎಂಬುವನ ಪುತ್ರನಾದ ತುರ ಎಂಬ ಮಹರ್ಷಿಯು ಪರೀಕ್ಷಿದ್ರಾಜನ ಪುತ್ರನಾದ ಜನಮೇಜಯ ರಾಜನಿಗೆ ಹೇಳಿದನು. ಇದು ಒಂದು ಸಂಪ್ರದಾಯವು. ಮತ್ತು ಈ ಭಕ್ಷದ ವಿಷಯವನ್ನು ಪರ್ವತ ಮತ್ತು ನಾರದ ಎಂಬ ಇಬ್ಬರು ಋಷಿಗಳು ಸಹದೇವ ಎಂಬುವನ ಪುತ್ರನಾದ ಸೋಮಕ ಎಂಬುವನಿಗೆ ಹೇಳಿದರು. ಸೋಮಕ ಎಂಬುವನು ಅದನ್ನು ಸಹದೇವ ಎಂಬ ಇನ್ನೊಬ್ಬನಿಗೆ ಹೇಳಿದನು. ಸಹದೇವನು ಸಾಂಜರ್ಯನೆಂಬುವನಿಗೂ, ಸಾಂಜರ್ಯನು ಬಭ್ರು ಎಂಬುವನಿಗೂ ಹೇಳಿದನು. ಬಭ್ರುವು ದೈವಾವೃಧನೆಂಬುವನಿಗೂ, ದೈವಾವೃಧನು ಭೀಮ ಎಂಬುವನಿಗೂ, ಭೀಮನು ವೈದರ್ಭನಿಗೂ, ವೈದರ್ಭನು ನಗ್ನಜಿದ್ ಎಂಬುವನಿಗೂ, ನಗ್ನಜಿತುವು ಗಾಂಧಾರನಿಗೂ ಹೇಳಿದನು. ಇದು ಎರಡನೆಯ ಸಂಪ್ರದಾಯವು. ಹಾಗೆಯೇ ಈ ಭಕ್ಷದ ವಿಷಯವನ್ನು ಅಗ್ನಿ ಎಂಬ ಮಹರ್ಷಿಯು ಸನಶ್ರುತನಿಗೂ, ಸನಶ್ರುತನು ಅರಿಂದಮನಿಗೂ, ಅರಿಂದ ಮನು ಕ್ರತುವಿದನಿಗೂ ಕ್ರತುವಿದನು ಜಾನಕ ಎಂಬುವನಿಗೂ ಹೇಳಿದನು. ಇದು ಮೂರನೆಯ ಸಂಪ್ರದಾಯವು. ಹಾಗೆಯೇ ಇದನ್ನು ವಸಿಷ್ಠ ಮಹರ್ಷಿಯು ಸುದಾಸನಿಗೆ ಹೇಳಿದನು. ಸುದಾಸನೆಂದರೆ—**ಸುಷ್ಠು ಧನಂ ದದಾತೀತಿ ಸುದಾಃ** ಅಥವಾ **ಸುಷ್ಠು ಶತ್ರೂನ್ ದಸ್ಯತ್ಯುಪಕ್ಷಯತೀತಿ ಸುದಾಃ** । ಬಹಳವಾಗಿ ಧನವನ್ನು ಕೊಡುವವನಾದ್ದರಿಂದ ಇವನಿಗೆ ಸುದಾಸ ನೆಂಬ ಹೆಸರು. ಅಥವಾ ತನ್ನ ಶತ್ರುಗಳನ್ನು ಚೆನ್ನಾಗಿ ಸೋಲಿಸಿ ನಾಶಮಾಡುವವನಾದ್ದರಿಂದ ಇವನಿಗೆ ಸುದಾಸನೆಂಬ ಹೆಸರು. ಈ ಸುದಾಸನು ಪೈಜವನ (ಪಿಜವನ ಪುತ್ರ) ಎಂಬುವನಿಗೆ ಹೇಳಿದನು. ಹಿಂದೆ ಹೇಳಿದ **ಸಹದೇವಾಯ ಸಾಂಜರ್ಯಾಯ** ಮೊದಲಾದ ವಾಕ್ಯಗಳಲ್ಲಿ ಸಹದೇವ ಎಂಬ ಪದಕ್ಕೆ ಸಾಂಜರ್ಯಾದಿ ಪದಗಳು ವಿಶೇಷಣಗಳಾಗಿರುವವು ಎಂದೂ ಭಾವಿಸಬಹುದು. ಇದುವರೆಗೂ ಹೇಳಿದ ತುರ ಮೊದಲಾದ ಪೈಜವನ ಎಂಬುವನವರೆಗೆ ಇರುವ ಪುರುಷರೆಲ್ಲರೂ ಈ ಭಕ್ಷವನ್ನು ಭಕ್ಷಿಸಿ ಮಹತ್ವವನ್ನು (ಗಣ್ಯತೆಯನ್ನು) ಪಡೆದರು. ಇಲ್ಲಿ ಮಹತ್ವವೆಂದರೆ ಏನು ಎಂದರೆ, ಮಹಾರಾಜರಾಗಿದ್ದ ಈ ಪುರುಷ ರೆಲ್ಲರೂ ಭಕ್ಷವನ್ನು ಭಕ್ಷಿಸಿ ಅದರ ಪ್ರಭಾವದಿಂದ ಸಾರ್ವಭೌಮಪದವಿಯನ್ನು ಪಡೆದರು. ಅಂತರಿಕ್ಷದಲ್ಲಿ ಸೂರ್ಯನು ಯಾವ ರೀತಿ ಪ್ರಕಾಶದಿಂದ ಬೆಳಗುತ್ತಾನೆಯೋ ಅದರಂತೆ ಈ ಪುರುಷರು ಗಜ, ಅಶ್ವ, ಸೈನ್ಯ, ಐಶ್ವರ್ಯ ಮೊದಲಾದ ಸಂಪತ್ತು ಗಳಿಂದ ಕೂಡಿ ತಮ್ಮ ಶತ್ರುಗಳನ್ನು ಸೋಲಿಸಿ ಜನರಲ್ಲಿ ಪ್ರಾಧಾನ್ಯತೆಯನ್ನು ಪಡೆದು ಸುಖಿಸುತ್ತಾರೆ. ಮತ್ತು ಈ ಭಕ್ಷವನ್ನು ಭಕ್ಷಿಸುವ ರಾಜರು ಸಮಸ್ತ ದಿಕ್ಕುಗಳಲ್ಲಿರುವ ಸಾಮಂತರಾಜರನ್ನು ಜಯಿಸಿ ಅವರಿಂದ ಕಪ್ಪಕಾಣಿಕೆಗಳನ್ನು ಸ್ವೀಕರಿಸುತ್ತಾ ಎಲ್ಲರಿಗೂ ಒಡೆಯರಾಗಿಯೂ ಪ್ರಸಿದ್ಧರಾಗಿಯೂ ಬಾಳುತ್ತಾರೆ.

ಆದಿತ್ಯ ಇವ ಹ ವೈ ಶ್ರಿಯಾಂ ಪ್ರತಿಷ್ಠಿತಸ್ತಪತಿ ಸರ್ವಾಭ್ಯೋ ದಿಗ್ಭ್ಯೋ
ಬಲಿಮಾವಹತ್ಯುಗ್ರಂ ಹಾಸ್ಯ ರಾಷ್ಟ್ರಮವ್ಯಥ್ಯಂ ಭವತಿ ಯ ಏವಮೇತಂ
ಭಕ್ಷಂ ಭಕ್ಷಯತಿ ಕ್ಷತ್ರಿಯೋ ಯಜಮಾನಃ ॥



ನರಾಶಂಸಭಕ್ಷಂ ಪುನರಪಿ ಫಲಕಥನೇನ ಪ್ರಶಂಸತಿ—ಪೂರ್ವವದ್ವ್ಯಾಖ್ಯೇಯಮ್ ।
ಅಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ॥

ಯಜ್ಞದಲ್ಲಿ ಕ್ಷತ್ರಿಯಯಜಮಾನನಿಗೆ ಹವಿಶ್ಶೇಷಾರ್ಥವಾಗಿ ಉಕ್ತವಾಗಿರುವ ಮೇಲೆ ಹೇಳಿದ ಭಕ್ಷವನ್ನು ಯಾವ ಕ್ಷತ್ರಿಯ ರಾಜನು ಭಕ್ಷಿಸುವನೋ ಅವನು ಆದಿತ್ಯನಂತೆ ಬೆಳಗುತ್ತಾ ಸಮಸ್ತ ಸಂಪತ್ತನ್ನೂ ಪಡೆದು ಸುಖಿಸುವನು ಮತ್ತು ತನ್ನ ಶತ್ರುರಾಜರನ್ನೂ ತನ್ನ ಸುತ್ತಲೂ ಇರುವ ಇತರ ರಾಜರನ್ನೂ ಸೋಲಿಸಿ ಅವರಿಂದ ಕಪ್ಪಕಾಣಿಕೆ ಮೊದಲಾದುವನ್ನು ತೆಗೆದು ಕೊಳ್ಳುವನು. ಇವನ ರಾಜ್ಯದಲ್ಲಿ ಪ್ರಜೆಗಳು ನಿರ್ಭೀತಿಯಿಂದಲೂ ದುಃಖ ರೋಗ ಬಡತನ ಮುಂತಾದುವುಗಳಿಲ್ಲದೆಯೂ ಸುಖವಾಗಿ ಜೀವನ ಮಾಡುವರು.

---

## *English Transation*

**(The drinking from the Narasamsa cups. The list of teachers of the substitute for the Soma juice, and the rites connected with it.)**

When the prieats put the Traita cups down, then the King should put down the sacrificer's cups also; when they incline their cups after having put them down, then the king should do the same with his cup. Then he should take up the Narasamsa cup, and by the recital of the verse, "O thou divine Soma, who knowest my mind who art drunk by Narasamsa, and enjoyed by the Uma-Pitaras, I enjoy thee!" In this way the king enjoys the Narasamsa portion at the morning libation. At the midday libation he repeats the same mantra, but says, "enjoyed by the Urva (Pitaras)", and at the evening libution he says. "enjoyed by the Kavya (Pitaras)." For the pitaras present at the morning libation, are the Umas, those present at the midday libation, are the Urvas, and those at the evening libation, are the Kavyas. In this way he makes the immortal pitaras enjoy the libations.

Priyavrata, the Soma drinker, said "Whoever enjoys the Soma beverage, he certainly will be immortal." The ancestors of a king who enjoys, when sacrificing, this Narasamsa portion, therefore, become immor-

tal i.e. they never will perish, when they enjoy in such a way the Soma libation, and his royal power will be strong and is not to be shaken. The ceremony of wiping off from the mouth what of the juice remained, and the sprinkling of the cup with water (apyayanam) is the same as above when the Traita Chamasa are emptied. All the three libations of the juice prepared for the king should be performed in the same way as the real Soma libation.

This way of enjoying the Soma juice by means of a substitue, was told by Rama Margaveya to Visvantara, the son of Sushadman. The king then, after having been told it, said, "We give thee a thousand cows, O Brahmana. My sacrifice is to be attended by the Syaparnas."

This portion (bhaksha) was told by Tura, the son of Kavasha, to Janamejaya, the son of Parikshit; then by Parvata and Narada to Somaka, the son of Sahadeva; thence this traditional knowledge passed to Sahadeva Sarjaya; thence to Babhru Daivaaridha; thence to Bhima Vaidarbha, and Nagnajit Gangdhara.

This portion further was told by Agni to Samasruta Arindama; thence it passed to Kratuvid Janaki. This portion was further told by Vasistha to Sudas, the son of Pijavana.

All these became great, in consequence of their having drunk the Soma in this way (by means of a substitute, and were great kings. just as the son placed on the sky) sends forth warmth, thus the king who when sacrificing drinks the Soma in this way, is placed amidst fortune and shines everywhere, from all directions he extracts tribute, his kingdom becomes strong, and is not to be shaken.

---

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಪಂಚತ್ರಿಂಶಾಧ್ಯಾಯೇಽಷ್ಟಮಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಚಾರ್ಯಕೃತಾವೈತರೇಯಬ್ರಾಹ್ಮಣಭ್ಯಾಷ್ಯೇ ಪಂಚತ್ರಿಂಶಾಧ್ಯಾಯೇಽಷ್ಟಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂವತ್ತೈದನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು
ಸಮಾಪ್ತವಾದುದು

ಮೂವತ್ತೈದನೆಯ ಅಧ್ಯಾಯವು ಸಮಾಪ್ತವಾದುದು

ಇತ್ಯೈತರೇಯಬ್ರಾಹ್ಮಣೇ ಸಪ್ತಮಪಂಚಿಕಾ ಸಮಾಪ್ತಾ



# ಅಥೈತರೇಯಬ್ರಾಹ್ಮಣೇ ಷಟ್ತ್ರಿಂಶೋಽಧ್ಯಾಯೇ ಪ್ರಥಮಃ ಖಂಡಃ

## ಐತರೇಯಬ್ರಾಹ್ಮಣದ ಮೂವತ್ತಾರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

[ರಾಜಸೂಯಯಾಗದಲ್ಲಿ ಸುತ್ಯಾದಿನದಲ್ಲಿ ಪಠಿಸಬೇಕಾದ ಸ್ತೋತ್ರ ಮತ್ತು ಶಸ್ತ್ರಮಂತ್ರಗಳ ವಿಷಯ]



[ಮಾಧ್ಯಂದಿನಸವನದಲ್ಲಿ ರಥಂತರ ಮತ್ತು ಬೃಹತ್ಸಾಮಗಳನ್ನು ಹೇಗೆ ಪಠಿಸಬೇಕೆಂಬ ವಿಚಾರ]



ಫಲಾಖ್ಯಚಮಸೋ ಭಕ್ಷೋ ರಾಜ್ಞೋ ಯಜ್ಞೇ ಪ್ರಕೀರ್ತಿತಃ
ಉಚ್ಯತೇ ರಾಜಯಜ್ಞೇಽಸ್ಮಿನ್ವಿಶೇಷಃ ಸ್ತೋತ್ರಶಸ್ತ್ರಯೋಃ ॥

ಹಿಂದಿನ ಅಧ್ಯಾಯಗಳಲ್ಲಿ ಕ್ಷತ್ರಿಯರಾಜರು ಮಾಡುವ ಯಜ್ಞದಲ್ಲಿ ಹವಿಶ್ಶೇಷಭಕ್ಷಣದ ವಿವರಗಳನ್ನು ತಿಳಿಸಿದ್ದಾಯಿತು. ಈಗ ರಾಜರು ಮಾಡುವ ಯಜ್ಞಗಳಲ್ಲಿ ಸ್ತೋತ್ರಶಸ್ತ್ರಗಳ ಎಂದರೆ ಸಾಮಗಾನ ಮತ್ತು ಋಗ್ವೇದಮಂತ್ರಗಳ ವಿಷಯದಲ್ಲಿ ಕೆಲವು ವಿಶೇಷಸಂಗತಿಗಳನ್ನು ವಿವರಿಸಲಾಗುವುದು.

**ಅಥಾತಃ ಸ್ತುತಶಸ್ತ್ರಯೋರೇವ ॥**

ತದೇತತ್ಪ್ರತಿಜಾನೀತೇ—ಅಥ ರಾಜ್ಞೋ ಭಕ್ಷೇ ವಿಶೇಷಕಥನಾನಂತರಂ ಯತಃ ಸ್ತುತ-ಶಸ್ತ್ರಯೋರ್ವಿಶೇಷೋ ಜಿಜ್ಞಾಸಿತಃ । ಅತಃ ಕಾರಣಾತ್ತಯೋರೇವ ವಿಶೇಷ ಉಚ್ಯತ ಇತಿ ಶೇಷಃ ॥

ರಾಜರಾದವರು ಯಜ್ಞದಲ್ಲಿ ಹವಿಶ್ಶೇಷವನ್ನು ಭಕ್ಷಿಸುವ ವಿಧಾನವನ್ನು ವಿವರಿಸಿದನಂತರ ಈಗ ಸಾಮಗಾನ ಮಂತ್ರಗಳನ್ನೂ ಋಗ್ವೇದಮಂತ್ರಗಳನ್ನೂ ಪಠಿಸುವ ವಿಷಯದಲ್ಲಿ ಕೆಲವು ವಿಶೇಷವಿಧಾನಗಳಿರುವುದನ್ನು ತಿಳಿಸುವರು.

**ಐಕಾಹಿಕಂ ಪ್ರಾತಃಸವನಮೈಕಾಹಿಕಂ ತೃತೀಯಸವನಮೇತೇ ವೈ ಶಾಂತೇ ಕ್ಲೃಪ್ತೇ ಪ್ರತಿಷ್ಠಿತೇ ಸವನೇ ಯದೈಕಾಹಿಕೇ ಶಾಂತ್ಯೈ ಕ್ಲೃಪ್ತ್ಯೈ ಪ್ರತಿಷ್ಠಿತ್ಯಾ ಅಪ್ರಚ್ಯುತ್ಯೈ ॥**

ತಂ ವಿಶೇಷಂ ವಕ್ತುಮಾದಾ ವಿಶೇಷರಹಿತಮಂಶಂ ದರ್ಶಯತಿ— ಏಕಾಹೇ ಪ್ರಕೃತಿ-ಭೂತೇ ಯತ್ಪ್ರಾತಃಸವನಂ ಯಚ್ಚ ತೃತೀಯಸವನಮುಕ್ತಂ ತದುಭಯಂ ರಾಜ್ಞೋ ವಿಕೃತಾವಪಿ ತಥೈವ ಪ್ರಯೋಕ್ತವ್ಯಮ್ । ನ ತು ತಯೋಃ ಕಶ್ಚಿದ್ವಿಶೇಷೋಽಸ್ತಿ । ಐಕಾಹಿಕೇ ಯೇ ಉಭೇ ಪ್ರಾತಃಸವನತೃತೀಯಸವನೇ ಸ್ತ ಏತೇ ಏವ ಶಾಂತೇ ಸುಖಕರೇ ಕ್ಲೃಪ್ತೇ ಸ್ವಭ್ಯಸ್ತೇ ಪ್ರತಿಷ್ಠಿತೇ

**ಸಂಪನ್ನೇ । ಅತಸ್ತಯೋಃ ಪ್ರಕೃತಿವದನುಷ್ಠಾನಾಂ ತಾಂತ್ಯೈ ಸುಖಾರ್ಥಂ ಕ್ಲೃಪ್ತ್ಯೈ ಸ್ವಭ್ಯಾ-ಸಾರ್ಥಂ ಪ್ರತಿಷ್ಠಿತ್ಯೈ ಚ ಸಂಪತ್ಯರ್ಥಮಪ್ರಚ್ಯುತ್ಯೈ ವಿನಾಶರಾಹಿತ್ಯಾರ್ಥಂ ಭವತಿ ।**

ಮೇಲೆ ಹೇಳಿದಂತೆ ವಿಶೇಷವಿಷಯಗಳನ್ನು ಹೇಳುವುದಕ್ಕೆ ಪ್ರಾರಂಭಿಸಿ ಮೊದಲು ವಿಶೇಷಸಂಗತಿಗಳಿಲ್ಲದ ಸಾಧಾರಣವಿಷಯಗಳನ್ನು ತಿಳಿಸುವರು—ಐಕಾಹಿಕವೆಂದರೆ ಒಂದೇ ದಿನದಲ್ಲಿ ಮಾಡಿ ಮುಗಿಸಬೇಕಾದ ಕರ್ಮ. ಪ್ರಾತಃಸವನ ಮತ್ತು ತೃತೀಯಸವನಗಳು ರಾಜನು ಮಾಡಬೇಕಾದಾಗ ಐಕಾಹಿಕವು ಮತ್ತು ಪ್ರಕೃತಿಭೂತವಾದವು (ಪ್ರಕೃತಿಭೂತವೆಂದರೆ ವ್ಯತ್ಯಾಸವನ್ನೇನೂ ಮಾಡದೆ ಇದ್ದಂತೆಯೇ ನೆರವೇರಿಸುವ ಕರ್ಮ). ಆದರೆ ಈ ಎರಡು ಕರ್ಮಗಳು ರಾಜನಿಗೆ ವಿಕೃತಿ ಭೂತಗಳಾದರೂ ಸಾಧಾರಣವಾಗಿ ಪ್ರಕೃತಿಯಂತೆಯೇ ಆಚರಿಸಲ್ಪಡುವುವು. ಈ ಎರಡು ಕರ್ಮಗಳಲ್ಲಿಯೂ ಒಂದು ವಿಶೇಷವಿಷಯವಿರುವುದು. ಒಂದೇ ದಿನದಲ್ಲಿ ಮಾಡಿಮುಗಿಸಬೇಕಾದ ಸಂದರ್ಭಗಳಲ್ಲಿ ಈ ಪ್ರಾತಃಸವನ ತೃತೀಯಸವನಗಳೆಂಬ ಎರಡು ಸವನಗಳೂ ರಾಜನಿಗೆ ಸುಖಕರಗಳಾಗಿಯೂ ಪ್ರಾಧಾನ್ಯತೆಯನ್ನು ಉಂಟುಮಾಡುವುದಾಗಿಯೂ ಆಗುವುವು ಮತ್ತು ಸಂಪತ್ತನ್ನು ವೃದ್ಧಿಮಾಡಿ ವಿನಾಶಕ್ಕೆ ಎಡೆಕೊಡದಂತೆ ಆಗುವವು.

ಉಕ್ಥ್ಯೋ ಮಾಧ್ಯಂದಿನಃ ಪವಮಾನೋ ಯ ಉಭಯಸಾಮ್ನೋ ಬೃಹ-ತ್ಪೃಷ್ಠಸ್ಯೋಭೇ ಹಿ ಸಾಮನೀ ಕ್ರಿಯೇತೇ ॥

**ಯಥಾ ಪ್ರಾತಃಸವನತೃತೀಯಸವನಯೋಃ ಪ್ರಾಕೃತಾದ್ವಿಶೇಷೋ ನಾಸ್ತಿ ತಥಾ ಮಾಧ್ಯಂ-ದಿನಸವನೇಽಪಿ ಮರುತ್ವತೀಯಮೈಕಾಹಿಕಂ ಹೋತ್ರಕಶಸ್ತ್ರಾಣಿ ಚೈಕಾಹಿಕಾನಿ ಸ್ತೋತ್ರೇ ತು ವಿಶೇಷೋಽಸ್ತಿ ತಮಿಮಂ ದರ್ಶಯತಿ—ಬೃಹದ್ರಥಂತರಂ ಚೇತ್ಯುಭಯವಿಧಂ ಸಾಮ ಯಸ್ಮಿನ್ನ-ಭಿಜಿದಾದೌ ಸೋಽಯಮುಭಯಸಾಮಾ ಬೃಹತ್ಸಾಮ ಪೃಷ್ಠಂ ಸ್ತೋತ್ರಂ ಯಸ್ಮಿನ್ನಭಿಜಿದಾದೌ ಸೋಽಯಂ ಬೃಹತ್ಪೃಷ್ಠಸ್ತಾದೃಶಸ್ಯೋಭಯಸಾಮ್ನೋ ಬೃಹತ್ಪೃಷ್ಠಸ್ಯಾಭಿಜಿದಾದೇರ್ಯೋ ಮಾಧ್ಯಂದಿನಃ ಪವಮಾನೋ ದ್ರಷ್ಟವ್ಯಃ । ನ ಚೋಭಯಸಾಮತ್ವಂ ಬೃಹತ್ಪೃಷ್ಠತ್ವಂ ಚೋಭಯಂ ವ್ಯಾಹತಮಿತಿ ಶಂಕನೀಯಮ್ । ಮಾಧ್ಯಂದಿನಪವಮಾನಸ್ತೋತ್ರೇ ರಥಂತರಂ ಸಾಮ ಪೃಷ್ಠಸ್ತೋತ್ರೇ ಬೃಹತ್ಸಾಮೇತ್ಯೇವಮುಭಯಸಾಮತ್ವಸ್ಯ ವ್ಯವಸ್ಥಿತತ್ವಾತ್ । ಉಭೇ ಹೀತ್ಯನೇನೇಯಮೇವ ವ್ಯವಸ್ಥಾ ಸ್ಪಷ್ಟೀಕ್ರಿಯತೇ । ಯದ್ಯಪಿ ಮರುತ್ವತೀಯಶಸ್ತ್ರಾವಯವಾಃ ಪ್ರತಿಪದಾದಯಃ ಪ್ರಾಕೃತಾ ಏವ ತಥಾಪಿ ತದನುವಾದೇನಾತ್ರ ಪ್ರಶಂಸಾ ಕ್ರಿಯತೇ ॥**

ಹಿಂದೆ ಹೇಳಿದ ಪ್ರಕಾರ ಪ್ರಾತಃಸವನ ತೃತೀಯಸವನಗಳಲ್ಲಿ (ಐಕಾಹಿಕದಲ್ಲಿ) ಯಾವ ವಿಶೇಷಗಳೂ ಇರುವುದಿಲ್ಲ. ಇದರಂತೆಯೇ ಮಾಧ್ಯಂದಿನಸವನ ಕಾಲದಲ್ಲಿ ಮರುತ್ವತೀಯ ಶಸ್ತ್ರವನ್ನು ಹೋತೃಕ (ಹೋತೃವರ್ಗದವರು)ರು ಐಕಾಹಿಕವಾಗಿ ಪಠಿಸುವರು. ಆದರೆ ಸಾಮಗರು ಗಾನಮಾಡುವ ಸ್ತೋತ್ರಗಳ ವಿಷಯದಲ್ಲಿ ಮಾಧ್ಯಂದಿನಸವನದಲ್ಲಿ ಕೆಲವು ವಿಶೇಷಸಂಗತಿ ಗಳಿರುವವು. ಅವನ್ನು ವಿವರಿಸುತ್ತಾರೆ.—ಅಭಿಜಿತ್ ಮೊದಲಾದ ಯಾಗಗಳಲ್ಲಿ ಬೃಹತ್, ರಥಂತರಂ ಎಂಬ ಎಂಡು ವಿಧ ಸಾಮವನ್ನು ಗಾನಮಾಡುವರು. ಇದಕ್ಕೆ ಉಭಯಸಾಮವೆಂದು ಹೆಸರು. ಮತ್ತು ಬೃಹತ್ ಪೃಷ್ಠ ಎಂಬ ಎರಡು ವಿಧ ಸಾಮವನ್ನೂ ಗಾನಮಾಡುವಾಗ ಅದಕ್ಕೂ ಬೃಹತ್ ಪೃಷ್ಠ ಎಂದು ಉಭಯವಿಧ ಸಾಮವೆಂದು ಹೆಸರು. ಅಭಿಜಿದಾದಿಗಳಲ್ಲಿ ಮಾಧ್ಯಂದಿನಸವನದಲ್ಲಿ ಪವಮಾನ ಸ್ತೋತ್ರವನ್ನು ಗಾನಮಾಡುವಾಗ ಯಾವರೀತಿ ಗಾನಮಾಡುವರೋ ಅದರಂತೆಯೇ

ರಾಜನು ಮಾಡುವ ಯಜ್ಞದಲ್ಲಿ ಮಾಧ್ಯಂದಿನಸವನದಲ್ಲಿ,ಪವಮಾನಸ್ತೋತ್ರವನ್ನೂ ಗಾನಮಾಡಬೇಕು ಆದರೆ ಉಭಯಸಾಮ ವೆಂದರೆ ಇಲ್ಲಿ ಬೃಹತ್ಪೃಷ್ಠಗಳೆಂದು ಶಂಕಿಸಬಾರದು. ಮಾಧ್ಯದಿನ ಪವಮಾನಸ್ತೋತ್ರದಲ್ಲಿ ರಥಂತರಸಾಮವನ್ನೂ ಪೃಷ್ಠ ಸ್ತೋತ್ರದಲ್ಲಿ ಬೃಹತ್ಸಾಮವನ್ನೂ (ಈ ರೀತಿ ಉಭಯ ವಿಧ ಸಾಮವನ್ನು) ಗಾನಮಾಡಬೇಕೆಂದು ವ್ಯವಸ್ಥೆ ಇರುವುದು. ಉಭೇ (ಎರಡು) ಎಂದು ಹೇಳಿರುವುದಕ್ಕೆ ಇದೇ ಅರ್ಥವೆಂದು ತಿಳಿಯಬೇಕು. ಆದರೆ ಮರುತ್ವತೀಯ ಶಸ್ತ್ರಮಂತ್ರಗಳಾದ ಪ್ರತಿಪದಾದಿಗಳು (ಮೊದಲು ಹೇಳುವ ಮಂತ್ರಗಳ) ಪ್ರಕೃತಿಭೂತವಾದುದರಿಂದ ಅವುಗಳಲ್ಲೇನೂ ವ್ಯತ್ಯಾಸವಿರುವುದಿಲ್ಲ. ಆದ್ದರಿಂದ ಅವುಗಳ ವಿಷಯವನ್ನು ಇಲ್ಲಿ ಪ್ರಸ್ತಾಪಿಸಲಾಗಿಲ್ಲ.

**ಆ ತ್ವಾ ರಥಂ ಯಥೋತಯ ಇದಂ ವಸೋ ಸುತಮಂಧ ಇತಿ ರಾಥಂತರೀ ಪತಿಪದ್ರಾಥಂತರೋಽನುಚರಃ ಪವಮಾನೋಕ್ಥಂ ವಾ ಏತದ್ಯನ್ಮರುತ್ವತೀಯಂ ಪವಮಾನೇ ವಾ ಅತ್ರ ಅಥಂತರಂ ಕುರ್ವಂತಿ ಬೃಹತ್ಪೃಷ್ಠಂ ಸವೀವಧತಾಯೈ ತದಿದಂ ರಥಂತರಂ ಸ್ತುತಮಾಭ್ಯಾಂ ಪ್ರತಿಪದನುಚರಾಭ್ಯಾಮನುಶಂಸತಿ ।**

ತತ್ರ ಪ್ರತಿಪದನುಚರೌ ದರ್ಶಯತಿ—ಆ ತ್ವಾ ರಥಮಿತಿ ಯಸ್ತೃಚಃ ಸೋಽಯಂ ಮರುತ್ವತೀಯಶಸ್ತ್ರಸ್ಯ ಪ್ರತಿಪತ್ತಸ್ಮಿಂಸ್ತೃಚೇ ರಥಂತರಂ ಸಾಮೋದ್ಗಾತೃಭಿರ್ಗೀಯತೇ । ತಸ್ಮಾದಿಯಂ ಪ್ರತಿಪದ್ರಾಥಂತರೀ । ಇದಂ ವಸೋ ಸುತಮಂಧ ಇತ್ಯಯಂ ತ್ರ್ಯೃಚೋಽನುಚರಶ್ಛಂದೋದೇವತಾದಿನಾ ಪೂರ್ವೇಣ ಸಮಾನತ್ವಾತ್ । ರಥಂತರಸಾಮಾಧಾರಸ್ಯ ಪೂರ್ವಸ್ಯ ತ್ರ್ಯೃಚಸ್ಯಾನುಸಾರಿತ್ವಾದಸ್ಯಾಪಿ ರಾಥಂತರತ್ವಮ್ ।ಯನ್ಮರುತ್ವತೀಯಂ ಶಸ್ತ್ರಮಸ್ತಿ ಏತತ್ಪವಮಾನೋಕ್ಥಂ ವೈ ಪವಮಾನಸ್ತೋತ್ರಾನುಸಾರೇಣ ಶಸ್ಯಮಾನತ್ವಾತ್ । ಉಕ್ಥಂ ಶಸ್ತ್ರಮ್ । ತಚ್ಚ ದ್ವಿವಿಧಮ್ । ಪವಮಾನೋಕ್ಥಂ ಗ್ರಹೋಕ್ಥಂ ಚ । ಅತೋಽತ್ರ ಪವಮಾನೋಕ್ಥಮಿತಿ ವಿಶೇಷ್ಯತೇ । ಅಸ್ಮಿಂಶ್ಚ ಮಾಧ್ಯಂದಿನಪವಮಾನಸ್ತೋತ್ರೇ ಸಾಮಗಾ ರಥಂತರಂ ಸಾಮ ಕುರ್ವಂತಿ । ಪೃಷ್ಠಸ್ತೋತ್ರಂ ತು ಬೃಹತ್ಸಾಮೋಪೇತಂ ಕುರ್ವಂತಿ ತದೇತದುಭಯಂ ಸವೀವಧತಾಯೈ ಸಂಪದ್ಯತೇ । ಉಭಯತಃ ಶಿಕ್ಯದ್ವಯೇನ ಜಲಕುಂಭದ್ವಯಂ ವೋಢುಂ ಯಃ ಕಾಷ್ಠವಿಶೇಷಃ ಪುರುಷಾಣಾಮಂಸೇ ಸ್ಥಾಪ್ಯತೇ ಸ ವೀವಧ ಇತ್ಯುಚ್ಯತೇ । ಸಾಮದ್ವಯೇಽಪಿ ತಸ್ಯ ಮಾಧ್ಯಂದಿನಸವನಪ್ರಯೋಗಸ್ಯ ವೀವಧಸದೃಶತ್ವಾದ್ವೀವಧೇನ ಸಹ ವರ್ತತ ಇತಿ ಸವೀವಧತ್ವಮ್ । ಯದಿದಂ ರಥಂತರಂ ಸಾಮ ಮಾಧ್ಯಂದಿನೇ ಪವಮಾನೇ ಸ್ತುತಂ ತದಿದಮಾಭ್ಯಾಮಾ ತ್ವಾ ರಥಮಿದಂ ವಸೋ ಸುತಮಿತ್ಯೇತಾಭ್ಯಾಂ ಪ್ರತಿಪದನುಚರಾಭ್ಯಾಮನುಶಂಸೇತ್ ॥

ಈ ವಿಷಯದಲ್ಲಿ ಪ್ರತಿಪತ್ ಮತ್ತು ಅನುಚರ ಎಂಬ ಮಂತ್ರಗಳನ್ನು ವಿವರಿಸುವರು. ಮಂತ್ರಗಳನ್ನು ಪಠಿಸುವಾಗ ಪ್ರತಿಪತ್ (ಮಂತ್ರ) ಎಂದರೆ ಮೊದಲು ಪಠಿಸುವ ಮಂತ್ರ ಅನುಚರನೆಂದರೆ ಮೊದಲು ಮಂತ್ರದ ಅನಂತರ ಅದನ್ನನುಸರಿಸಿ ಪಠಿಸುವ ಮಂತ್ರ ಆ ತ್ವಾ ರಥಂ ಯಥೋತಯೇ (ಋ. ಸಂ. ೮–೬೮–೧) ಎಂಬ ತೃಚವು ಅಥವಾ ಮೂರು ಋಕ್ಕುಗಳು ಮರುತ್ವತೀಯಶಸ್ತ್ರಮಂತ್ರಗಳಲ್ಲಿ ಮೊದಲು ಪಠಿಸುವ ಋಕ್ಕುಗಳು ಅಥವಾ ಪ್ರತಿಪತ್ತೃಚವು. ಈ ತೃಚವನ್ನು

ಸಾಮಗಾನಕರ್ತರಾದ ಉದ್ಗಾತೃಗಳೆಂಬ ಋತ್ವಿಜರು ಗಾನಮಾಡುತ್ತಾರೆ. ಆದ್ದರಿಂದ ಇದಕ್ಕೆ ಪ್ರತಿಪದ್ರಾಥಂತರೀ ಎಂದು ಹೆಸರು. **ಇದಂ ವಸೋ ಸುತಮಂಧಃ** ಎಂಬ ತ್ಯೃಚವು ಅನುಚರವೆಂಬ (ಅನುಚರವೆಂದರೆ ಪ್ರತಿಪದವನ್ನು ಪಠಿಸಿದನಂತರ ಪಠಿಸುವ ಋಕ್ಕುಗಳ. ಇವುಗಳು ಛಂದಸ್ಸು ಮತ್ತು ದೇವತೆ ಪ್ರತಿಪತ್ ಅಂತೆಯೇ)ಪ್ರತಿಪತ್ತ್ಯೃಚವಾದ ಮೇಲೆ ಪಠಿಸುವ ತ್ಯೃಚವು. ಈ ತ್ಯೃಚವನ್ನೂ ಪ್ರತಿಪದ್ಯೃಚವನ್ನೇ ಅನುಸರಿಸಿ ಗಾನಮಾಡುವುದರಿಂದ ಈ ತೃಚಕ್ಕೂ ರಾಥಂತರೀ ಎಂತಲೆ ಹೆಸರು. ಮರುತ್ವತೀಯಶಸ್ತ್ರಮಂತ್ರವು ಪವಮಾನಶಸ್ತ್ರವೆಂದು ಹೇಳಲ್ಪಡುವುದು. ಏಕೆಂದರೆ ಈ ಪವಮಾನೋಕ್ಥ್ಯವು ಅಥವಾ ಶಸ್ತ್ರವು ಪವಮಾನಸ್ತೋತ್ರಾನುಸಾರವಾಗಿಯೇ ಪಠಿಸಲ್ಪಡುವುದು. ಉಕ್ಥ್ಯಂ ಎಂದರೆ ಶಸ್ತ್ರಂ ಅಥವಾ ಶಸ್ತ್ರಮಂತ್ರವು. ಇದು ಎರಡು ವಿಧವಾಗಿರುವುದು. ಪವಮಾನೋಕ್ಥ್ಯವೆಂದು ಗ್ರಹೋಕ್ಥ್ಯವೆಂದು ಎರಡು ವಿಧವು. ಆದ್ದರಿಂದ ಇಲ್ಲಿ ಇದನ್ನು ಪವಮಾನೋಕ್ಥ್ಯವೆಂದು ಸ್ಪಷ್ಟವಾಗಿ ನಿರ್ದೇಶಿಸಲಾಗಿದೆ. ಮತ್ತು ಈ ಮಾಧ್ಯಂದಿನ ಪವಮಾನಸ್ತೋತ್ರದಲ್ಲಿ ಸಾಮಗರು ರಥಂತರವೆಂಬ ಸಾಮವನ್ನು ಗಾನಮಾಡುತ್ತಾರೆ. ಪೃಷ್ಠಸ್ತೋತ್ರವನ್ನು ಬೃಹತ್ಸಾಮ ಸಹಿತವಾಗಿ ಗಾನಮಾಡುತ್ತಾರೆ. ಈ ಎರಡು ಸಾಮಗಳೂ (ಪೃಷ್ಠ ಮತ್ತು ಬೃಹತ್) ಸೇರಿ ಸವೀವಧತಾ ಎಂದು ಹೇಳಲ್ಪಡುವುದು. ಜಲಕುಂಭವನ್ನು ಇಡುವುದಕ್ಕೆ ಉಪಯೋಗಿಸುವ ಪುರುಷನ ಕಂಕಳಲ್ಲಿ ಇರುವ ಕಾಷ್ಠ ವಿಶೇಷಕ್ಕೆ ವೀವಧ ಎಂದು ಹೆಸರು. ಮಾಧ್ಯಂದಿನಸವನಪ್ರಯೋಗದ ಎರಡು ಸಾಮಗಾನಗಳು ವೀವಧದಂತೆ ಇರುವುದರಿಂದ ಇದನ್ನು ಸವೀವಧತ್ವವೆಂದು ಕರೆಯುವರು. ಮಾಧ್ಯಂದಿನ ಪಠಿಸುವ ಪವಮಾನಸ್ತೋತ್ರದಲ್ಲಿ **ಆ ತ್ವಾ ರಥಂ** ಎಂಬ ಪ್ರತಿಪತ್ತ್ಯೃಚವನ್ನೂ ಅನಂರ **ಇದ ವಸೋ ಸುತ** ಎಂಬ ಅನುಚರತೃಚವನ್ನೂ ಪಠಿಸಬೇಕು.

**ಅಥೋ ಬ್ರಹ್ಮ ವೈ ರಥಂತರಂ ಕ್ಷತ್ರಂಬೃಹದ್ಬ್ರಹ್ಮ ಖಲು ವೈ ಕ್ಷತ್ರಾತ್ಪೂರ್ವಂ ಬ್ರಹ್ಮ ಪುರಸ್ಮಾನ್ಮ ಉಗ್ರಂ ರಾಷ್ಟ್ರಮವ್ಯಥ್ಯಮಸದಿತ್ಯಾನ್ನಂ ವೈ ರಥಂತರಮನ್ನಮೇವಾಸ್ಮೈ ತತ್ಪುರಸ್ತಾತ್ಕಲ್ಪಯತ್ಯಥೇಯಂ ವೈ ಪೃಥಿವೀ ರಥಂತರಮಿಯಂ ಖಲು ವೈ ಪ್ರತಿಷ್ಠಾ ಪ್ರತಿಷ್ಠಾಮೇವಾಸ್ಮೈ ತತ್ಪುರಸ್ತಾತ್ಕಲ್ಪಯತಿ.**

ಬ್ರಹ್ಮಾನ್ನಪೃಥಿವೀರೂಪತ್ವೇನ ರಥಂತರಂ ಪ್ರಶಂಸತಿ—ಯದ್ರಥಂತರಂ ಸಾಮ ತದ್ಬ್ರಾಹ್ಮಣ ಜಾತಿಸ್ವರೂಪಮುಭಯೋಃ ಪ್ರಜಾಪತಿಮುಖಜತ್ವಾತ್ । ತಥಾ ಬೃಹತ್ಸಾಮಕ್ಷತ್ರಿಯಜಾತ್ಯೋಃ ಪ್ರಜಾಪತೇರ್ಬಾಹುಜತ್ವಸಾಮ್ಯಾದೇಕತ್ವಮ್ । ಬ್ರಾಹ್ಮಣಜಾತಿಃ ಕ್ಷತ್ರಿಯಜಾತೇಃ ಪೂರ್ವಭಾವಿನೀ ಅತೋ ಬೃಹತ್ಸಾಮಸಾಧ್ಯಾತ್ ಪೃಷ್ಠಸ್ತೋತ್ರಾತ್ಪೂರ್ವಂ ರಥಂತರಸಾಮಸಾಧ್ಯಸ್ಯ ಪವಮಾನ-ಸ್ತೋತ್ರಸ್ಯಾನುಷ್ಠಾನೇಽಯಮಭಿಪ್ರಾಯಃ । ಬ್ರಹ್ಮ ಬ್ರಾಹ್ಮಣಜಾತಿಃ ಪುರಸ್ತಾತ್ಪೂರ್ವಕಾಲೇ ಯಸ್ಯ ರಾಷ್ಟ್ರಸ್ಯ ತದಿದಂ ಬ್ರಹ್ಮ ಪುರಸ್ತಾದ್ಯದಿದಂ ಮೇ ರಾಜ್ಞೋ ರಾಷ್ಟ್ರಮುಗ್ರಮವ್ಯಥ್ಯಮಸದ್ಭವೇದಿತ್ಯ-ಭಿಪ್ರಾಯಃ । ಕಿಂಚಾನ್ನಹೇತುತ್ವಾದ್ರಥಂತರಂ ಸಾಮಾನ್ನಾತ್ಮಕಂ ತತ್ತೇನ ರಥಂತರಪ್ರಯೋಗೇ-ಣಾಸ್ಮೈ ರಾಜ್ಞೇಽನ್ನಮೇವ ಪುರಸ್ತಾತ್ಕಲ್ಪಯತಿ ಪ್ರಥಮತಃ ಸಂಪಾದಯತಿ । ಕಿಂಚ ಯದ್ರಥಂತರಂ ಸಾಮೇಯಂ ಪೃಥಿವೀ ಭೂಮಿಸ್ಸ್ವರೂಪಮೇವ । ಇಯಂ ಚ ಭೂಮಿಃ ಪ್ರಾಣಿನಾಂ ಪ್ರತಿಷ್ಠಾಧಾರಾ (ರಃ) । ತತ್ತೇನ ರಥಂತರಪ್ರಯೋಗೇಣಾಸ್ಮೈ ಯಜಮಾನಾಯ ರಾಜ್ಞೇ ಪ್ರತಿಷ್ಠಾಮೇವ ಕಲ್ಪಯತಿ ॥

ರಥಂತರಸಾಮವನ್ನು ಬ್ರಹ್ಮ, ಅನ್ನ ಮತ್ತು ಪೃಥಿವೀರೂಪಗಳಿಂದ ಪ್ರಶಂಸೆ ಮಾಡುವರು. ರಥಂತರವೆಂಬ ಸಾಮವು ಬ್ರಾಹ್ಮಣಜಾತಿಸ್ವರೂಪವು. ಏಕೆಂದರೆ ರಥಂತರವೂ ಬ್ರಾಹ್ಮಣಜಾತಿಯೂ ಪ್ರಜಾಪತಿಯ ಮುಖದಿಂದ ಉತ್ಪನ್ನವಾದವು. ಅದರಂತೆಯೇ ಬೃಹತ್ ಎಂಬ ಸಾಮವು ಕ್ಷತ್ರಿಯಜಾತಿಸ್ವರೂಪವು. ಏಕೆಂದರೆ ಅವೆರಡೂ ಪ್ರಜಾಪತಿಯ (ಪರಬ್ರಹ್ಮನ) ಬಾಹುವಿನಿಂದ ಉತ್ಪನ್ನನಾದವು. ಬ್ರಾಹ್ಮಣಜಾತಿಯು ಕ್ಷತ್ರಿಯಜಾತಿಗಿಂತ ಮೊದಲು ಉತ್ಪನ್ನವಾದದ್ದು. ಆದ್ದರಿಂದ ಕ್ಷತ್ರಿಯ ಜಾತಿಯಾದ ಬೃಹತ್ಸಾಮದಿಂದ ಕೂಡಿದ ಪೃಷ್ಠಸ್ತೋತ್ರಕ್ಕಿಂತ ಮೊದಲು ಬ್ರಾಹ್ಮಣಜಾತಿಸ್ವರೂಪವಾದ ರಥಂತರಸಾಮದಿಂದ ಕೂಡಿದ ಪವಮಾನಸ್ತೋತ್ರವನ್ನು ಗಾನಮಾಡಬೇಕೆಂದಭಿಪ್ರಾಯವು. ಬ್ರಾಹ್ಮಣಜಾತಿಯು ಪೂರ್ವಕಾಲದಲ್ಲಿ ಇದ್ದುದರಿಂದ ನನ್ನ ಈ ರಾಷ್ಟ್ರಕ್ಕೆ ವ್ಯಥೆಯನ್ನೂ ದುಃಖವನ್ನೂ ಉಂಟುಮಾಡದಿರಲಿ ಮತ್ತು ಈ ರಥಂತರಸಾಮವು ಅನ್ನ ಸ್ವರೂಪವೂ ಆದುದರಿಂದ ಈ ರಥಂತರ ಪ್ರಯೋಗದಿಂದ ಈ ರಾಜನಿಗೆ ಅನ್ನಸಮೃದ್ಧಿಯನ್ನೂ ಉಂಟುಮಾಡುವದು. ಮತ್ತು ಈ ರಥಂತರವು ಪೃಥಿವೀಸ್ವರೂಪವಾದುದರಿಂದ ಸಮಸ್ತ ಪ್ರಾಣಿಗಳಿಗೂ ಆಧಾರ (ಆಶ್ರಯ) ಭೂತವಾಗಿರುವುದು. ಆದ್ದರಿಂದ ಈ ರಥಂತರಸಾಮಪ್ರಯೋಗದಿಂದ ಈ ರಾಜನಿಗೆ ಪ್ರಾಧಾನ್ಯತೆಯನ್ನೂ ಪ್ರತಿಷ್ಠೆಯನ್ನೂ ಉಂಟುಮಾಡುವುದು.

ಸಮಾನ ಇಂದ್ರನಿಹವೋಽವಿಭಕ್ತಃ ಸೋಽಹ್ನಾಮುದ್ವಾನ್ಬ್ರಾಹ್ಮಣಸ್ಪತ್ಯ
ಉಭಯಸಾಮ್ನೋ ರೂಪಮುಭೇ ಹಿ ಸಾಮನೀ ಕ್ರಿಯೇತೇ ॥

ಇಂದ್ರ ನೇದೀಯ ಏದೀಹೀತ್ಯುತ್ತಿಷ್ಠ ಬ್ರಹ್ಮಣಸ್ಪತ ಇತ್ಯೇತತ್ಪ್ರಗಾಥದ್ವಯಂ ಪ್ರಶಂಸತಿ—ಇಂದ್ರೋ ನಿತರಾಮಾಹೂಯತೇ ಯಸ್ಮಿನ್ಪ್ರಗಾಥೇ ಸೋಽತ್ರ ಚ ಪ್ರಕೃತೌ ಚ ಸಮಾನ ಏಕ ಏವ । ತಸ್ಯೈವೇದಂ ವ್ಯಾಖ್ಯಾನಮವಿಭಕ್ತ ಇತಿ । ಅವಿಕೃತ ಇತ್ಯರ್ಥಃ । ಸ ಚ ಪ್ರಗಾಥೋಽಹ್ನಾಂ ರೂಪಮಿತಿ ಶೇಷಃ । ಅಹಃ ಪ್ರಯೋಗಸ್ಯ ನಿಷ್ಪಾದಕತ್ವಾತ್ತದ್ರೂಪತ್ವಮ್ । ಯಃ ಪ್ರಗಾಥ ಉದ್ವಾನುಚ್ಛಬ್ದಯುಕ್ತೋ ಬ್ರಾಹ್ಮಣಸ್ಪತ್ಯೋ ಬ್ರಹ್ಮಣಸ್ಪತಿದೇವತಾಕಶ್ಚೋತ್ತಿಷ್ಠ ಬ್ರಹ್ಮಣಸ್ಪತ ಇತ್ಯೇವಂ ಶ್ರುತತ್ವಾತ್ । ಸೋಽಪಿ ಶಂಸನೀಯಃ ॥ ಕಿಂಚಾಸೌ ಪ್ರಗಾಥ ಉಭಯಸಾಮ್ನೋ ರೂಪಂ ಹಿ ಯಸ್ಮಾದುಭೇ ಯೇ ಬೃಹದ್ರಥಂತರೇ ಸಾಮನೀ ತಸ್ಮಿನ್ಪ್ರಗಾಥೇ ಸಾಮಗೈರಭಿಧೀಯೇತೇ ॥

ಈಗ ಇಂದ್ರ ನೇದೀಯ ಏದಿಹಿ ಮತ್ತು ಉತ್ತಿಷ್ಠ ಬ್ರಾಹ್ಮಣಸ್ಪತ ಎಂಬ ಎರಡು ಪ್ರಗಾಥಮಂತ್ರಗಳನ್ನು ಪ್ರಶಂಸೆ ಮಾಡುವರು. ಈ ಎರಡು ಪ್ರಗಾಥಮಂತ್ರಗಳಲ್ಲಿಯೂ ಇಂದ್ರನು ವಿಶೇಷವಾಗಿ ಆಹ್ವಾನಿಸಲ್ಪಟ್ಟಿರುವನು. ಉತ್ತಿಷ್ಠ ಬ್ರಹ್ಮಣಸ್ಪತ ಎಂಬ ಪ್ರಗಾಥದಲ್ಲಿ ಉತ್ ಎಂಬ ಶಬ್ದಸಹಿತವಾದ ಬ್ರಹ್ಮಣಸ್ಪತಿಶಬ್ದವು ಉಕ್ತವಾಗಿರುವುದು. ಆದ್ದರಿಂದ ಕ್ಷತ್ರಿಯ ಮತ್ತು ಬ್ರಹ್ಮಜಾತಿಸ್ವರೂಪಿಗಳಾದ ಈ ಎರಡು ಪ್ರಗಾಥೆಗಳನ್ನೂ ಸಾಮಗರು ಗಾನಮಾಡುತ್ತಾರೆ.

ಸಮಾನ್ಯೋ ಧಾಯ್ಯಾ ಅವಿಭಕ್ತಾಸ್ತಾ ಅಹ್ನಾಂ ।

ಧಾಯ್ಯಾನಾಮೃಚಾಂ ಪ್ರಕೃತೌ ವಿಕೃತೌ ಚೈಕತ್ವಮಾಹ—ಸಮಾನ್ಯ ಇತ್ಯಸ್ಯ ವ್ಯಾಖ್ಯಾನಮವಿಭಕ್ತಾ ಇತಿ । ತಾಶ್ಚಾಹರ್ವಿಶೇಷನಿಷ್ಪಾದಕತ್ವಾತ್ತತ್ಸ್ವರೂಪಾಃ ॥

ಪ್ರಕೃತಿಯಲ್ಲಾಗಲಿ, ವಿಕೃತಿಯಲ್ಲಾಗಲಿ ಧಾಯ್ಯಾ ಮಂತ್ರಗಳನ್ನು ಸೇರಿಸುವ ವಿಷಯದಲ್ಲಿ ಎಲ್ಲವೂ ಮುಂಚಿನಂತೆಯೇ ಸಮಾನವಾಗಿರುವುದು. ಏನೂ ವ್ಯತ್ಯಾಸ ಮಾಡಬೇಕಾಗಿಲ್ಲ.

## ಐಕಾಹಿಕೋ ಮರುತ್ವತೀಯಃ ಪ್ರಗಾಥಃ ||

ಪ್ರವ ಇಂದ್ರಾಯ ಬೃಹತ ಇತ್ಯಸ್ಯ ಮರುತ್ವತೀಯಪ್ರಗಾಥಸ್ಯ ಪ್ರಕೃತಿವಿಕೃತ್ಯೋರೇಕತ್ವಂ ದರ್ಶಯತಿ—

ಪ್ರವ ಇಂದ್ರಾಯ ಬೃಹತೇ ಎಂಬ ಮರುತ್ವತೀಯ ಪ್ರಗಾಥದಲ್ಲಿಯೂ ಪ್ರಕೃತಿವಿಕೃತಿಗಳಲ್ಲಿ ಏನೂ ವ್ಯತ್ಯಾಸವಿಲ್ಲದೆ ಸಮನಾಗಿಯೇ ಇರುವುದು.

---

*English Translation*

**(The Shastras and Stotras, required at the Soma day of the Rajasuya.)**



**(The use of both the Rathautaram and Brihat at the midday libation.)**

Now as regards the Stotras and Shastras (required at the king's libation,) both the morning and the evening libations do not differ in this point from the rule of the Aikahikas – Soma sacrifices of one pay's duration ; for both these libatious at the Aikahika sacrifices are indtsturbable, well arranged, and firmly standing, and they produce quiet, good order, firm footing, and security.

But there is a difference in the ccremonies of the midday libation. The midday Pavamana performance of a sacrifice which requires both Samans with the Brihat for the prishta Stotra has been told ; for the chanting of both Samans (the Rathantara and Brihat) is performed. The verse, a tva ratham yathotaya (8,57, 1–3) is the beginning required for the Shastra belonging to the Rathantara, Saman ; the verse idam vaso sutam andha (8, 53, 5–7), the sequel required for the same shastras. This Pavamana Uktham the just-mentioned Shastra is just the Marutvatiya Shastra, to which the Rathantara Saman at the Agnishtoma, for instance belongs. They perform

the Rathantara chant at the Pavamana Stotra of the midday libation praised at this sacrifice ; the Brihat is the Prishtha (Stosra) in order to give a prop to the whole. For the Rathantara is Brahma ; the Brihat is the Kshattra. The Brahma certainly preceds the Kahatrra. For the king should think "When the Brahma is at the head, then my royal power would become strong and not to be shaken." Further, the Rathantara is food ; if placed first, it procures food to the king. The Rathantara further is the earth, which is a firm footing, if placed first it therefrre procures a firm footing to the king.

The Pragatha for calling Indra near remains the same without any modification as in the Brahmanical sacrifices, this Pragatha belonging to all Soma days. The Pragatha addressed to Brahmanaspati, which has the characteristic of ut (uttishtha, rise) is appropriate to both the Samans which are chanted. The Dayyas are same without any modification ; they are those appropriate for the Ahina sacrifices, whilst that Marutvatiya Pragatha which is peculiar to the Aikahikas, is chosen.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಷಟ್ತ್ರಿಂಶಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತಾರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು.

---

# ಅಥ ಷಟ್ತ್ರಿಂಶಾಧ್ಯಾಯೇ ದ್ವಿತೀಯಃ ಖಂಡಃ

## ಮೂವತ್ತಾರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

———

[ಮರುತ್ವತೀಯ ಮತ್ತು ನಿಷ್ಕೇವಲ್ಯಶಸ್ತ್ರಗಳ ವಿಷಯದಲ್ಲಿ ಹೇಳಬೇಕಾದ ಉಳಿದ ವಿಶೇಷಸಂಗತಿಗಳು.]

———

ಜನಿಷ್ಠಾ ಉಗ್ರಃ ಸಹಸೇ ತುರಾಯೇತಿ ಸೂಕ್ತಮುಗ್ರವತ್ಸಹಸ್ವತ್ತತ್ಕ್ಷತ್ರಸ್ಯ ರೂಪಂ ಮಂದ್ರ ಓಜಿಷ್ಠ ಇತ್ಯೋಜಸ್ವತ್ತತ್ಕ್ಷತ್ರಸ್ಯ ರೂಪಂ ಬಹುಲಾಭಿಮಾನ ಇತ್ಯಭಿವದಭಿಭೂತ್ಯೈ ರೂಪಂ ತದೇಕಾದಶರ್ಚಂ ಭವತ್ಯೇಕಾದಶಾಕ್ಷರಾ ವೈ ತ್ರಿಷ್ಟುಪ್ತ್ರೈಷ್ಟುಭೋ ವೈ ರಾಜನ್ಯ ಓಜೋ ವಾ ಇಂದ್ರಿಯಂ ವೀರ್ಯಂ ತ್ರಿಷ್ಟುಬೋಜಃ ಕ್ಷತ್ರಂ ವೀರ್ಯಂ ರಾಜನ್ಯಸ್ತದೇನಮೋಜಸಾ ಕ್ಷತ್ರೇಣ ವೀರ್ಯೇಣ ಸಮರ್ಧಯತಿ ತದ್ಗೌರಿವೀತಂ ಭವತ್ಯೇತದ್ವೈ ಮರುತ್ವತೀಯಂ ಸಮೃದ್ಧಂ ಯದ್ಗೌರಿವೀತಂ ತಸ್ಯೋಕ್ತಂ ಬ್ರಾಹ್ಮಣಂ ||

ಮರುತ್ವತೀಯೇ ಶಸ್ತ್ರೇ ನಿವಿದ್ಧಾನೀಯಂ ಸೂಕ್ತಂ ಪ್ರಶಂಸತಿ—ಜನಿಷ್ಠಾ ಇತ್ಯಸ್ಮಿನ್ಪಾದ ಉಗ್ರಶಬ್ದಸಹಃ ಶಬ್ದಯೋರ್ವಿದ್ಯಮಾನತ್ವಾತ್ತದೇತತ್ಸೂಕ್ತಮುಗ್ರವತ್ಸಹಸ್ವತ್ತಚ್ಚೋಭಯಂ ಕ್ಷತ್ರಿಯ ಜಾತೇಃ ಸ್ವರೂಪಮ್ । ಕ್ಷತ್ರಿಯೋಽಪಿ ಕ್ರೂರೋ ಬಲವಾಂಶ್ಚ । ದ್ವಿತೀಯಪಾದಸ್ಯ ಪೂರ್ವಭಾಗೇ ಮಂದ್ರ ಓಜಿಷ್ಠ ಇತಿ ಶ್ರುತತ್ವಾತ್ಸೂಕ್ತಮೋಜಸ್ವದೋಜಃಶಬ್ದೋಪೇತಮ್ । ಓಜೋ ನಾಮ ಬಲಹೇತುರಷ್ಟಮೋ ಧಾತುಃ । ತಸ್ಯ ಚ ಧಾತೋಃ ಕ್ಷತ್ರಿಯೇ ಸಂಪೂರ್ಣತ್ವಾದೋಜಃ ಶಬ್ದೋಪೇತಂ ಸೂಕ್ತಂ ಕ್ಷತ್ರಿಯಸ್ಯ ಸ್ವರೂಪಮ್ । ತದುತ್ತರಭಾಗೇ ಬಹುಲಾಭಿಮಾನ ಇತಿ ಶ್ರುತತ್ವಾದಭಿವದಭಿಶಬ್ದೋಪೇತಮ್ । ತಚ್ಚಾಭಿಭೂತ್ಯೈ ಶತ್ರೂಣಾಮಭಿಭವಸ್ಯ ಸ್ವರೂಪಮ್। ಕಿಂಚ ತತ್ಸೂಕ್ತಮೇಕಾದಶರ್ಚಂ ಭವತಿ । ತ್ರಿಷ್ಟುಪ್ಚೈಕಾದಶಾಕ್ಷರಾ । ರಾಜನ್ಯಶ್ಚ ತ್ರಿಷ್ಟುಪ್ಸಂಬಂಧೀ ತಯೋಃ ಪ್ರಜಾಪತಿಬಾಹುಜತ್ವಾತ್ । ಕಿಂಚ ಯತ್ತ್ರಿಷ್ಟುಬೋಜಃ ಪ್ರಭೃತೀನಾಂ ಹೇತುತ್ವಾತ್ತತ್ಸ್ವರೂಪಮ್ । ಓಜೋ ಬಲಹೇತುರಷ್ಟಮೋ ಧಾತುಃ । ವೀರ್ಯಂ ಶರೀರಬಲಮ್ । ಇಂದ್ರಿಯಂ ಚಕ್ಷುರಾದಿಪಾಟವಮ್ । ರಾಜನ್ಯಶ್ಚೌಜಃ ಪ್ರಭೃತೀನಾಂ ಸ್ವರೂಪಭೂತಸ್ತತ್ರೌಜಃ ಪೂರ್ವಮೇವೋಕ್ತಮ್ । ಕ್ಷತ್ರಂ ಕ್ಷತ್ರಿಯ ಜಾತಿಯುಕ್ತತ್ವಮ್ । ವೀರ್ಯಂ ಶರೀರಾದಿಬಲಮ್ । ಏವಂ ಚ ರಾಜಯಜ್ಞೇ ತತ್ತೇನ ತ್ರಿಷ್ಟುಪ್ಛಂದಸ್ಕಸೂಕ್ತಪಾಠೇನೈನಂ ರಾಜಾನಮೋಜಃ ಕ್ಷತ್ರವೀರ್ಯೈಃ ಸಮೃದ್ಧಂ ಕರೋತಿ । ಕಿಂಚೈತತ್ಸೂಕ್ತಂ ಗೌರಿವೀತಾಖ್ಯೇನ ಮಹರ್ಷಿಣಾ ದೃಷ್ಟತ್ವಾದ್ಗೌರಿವೀತಾಖ್ಯಂ ಭವತಿ । ಯಸ್ಮಾದೇತದ್ಗೌರಿ-

**ವೀತಂ ತಸ್ಮಾದೇತನ್ಮರುತ್ವತೀಯಶಸ್ತ್ರಂ ಸಮೃದ್ಧಂ ಸಂಪೂರ್ಣಂ ಭವತಿ । ತಸ್ಯ ಚ ಗೌರಿವೀತನಾಮ್ನಃ ಸೂಕ್ತಸ್ಯ ಬ್ರಾಹ್ಮಣಂ ತದ್ವಾ ಏತದ್ಯಜಮಾನಜನನಮಿತ್ಯಾದಿನಾ ಪೂರ್ವಮೇವೋಕ್ತಮ್ ॥**

ಮರುತ್ವತೀಯ ಶಸ್ತ್ರದಲ್ಲಿರುವ ನಿವಿದ್ಧಾನೀಯ ಸೂಕ್ತವನ್ನು ಪ್ರಶಂಸೆಮಾಡುವದು. **ಜನಿಷ್ಠಾ ಉಗ್ರಃ ಸಹಸೇ ತುರಾಯ** (ಋ. ಸಂ. ೧೦-೭೩-೧) ಎಂಬುದು ಮರುತ್ವತೀಯ ಶಸ್ತ್ರವು. ಈ ಮಂತ್ರದ ಮೊದಲನೆಯ ಪಾದದಲ್ಲಿ ಉಗ್ರಶಬ್ದವೂ ಸಹಃ ಎಂಬ ಶಬ್ದವೂ ಇರುವವು ಈ ಎರಡು ಶಬ್ದಗಳೂ ಕ್ಷತ್ರಿಯಜಾತಿಯನ್ನು ಪ್ರಶಂಸೆಮಾಡುವ ಗುಣ ವಾಚಕಗಳು. ಈ ಶಬ್ದಗಳ ಅರ್ಥದಂತೆ ಕ್ಷತ್ರಿಯನು ಕ್ರೂರನಾದವನೂ, ಬಲವುಳ್ಳವನಾಗಿಯೂ ಇರುವನು. ಮತ್ತು ಈ ಮಂತ್ರದ ಎರಡನೆಯ ಪಾದದಲ್ಲಿ ಓಜಿಷ್ಠಃ ಎಂಬ ಶಬ್ದವಿರುವುದು. ಓಜಃ ಶಬ್ದಕ್ಕೆ ಬಲವುಳ್ಳ ಎಂಬರ್ಥವಿರುವುದು. ಈ ಅರ್ಥವೂ ಕ್ಷತ್ರಿಯನಿಗೇ ವಿಶೇಷಣವಾದುದರಿಂದ ಇದೂ ಕ್ಷತ್ರಿಯನ ಸ್ವರೂಪವನ್ನೇ ಸೂಚಿಸುವುದು. ಇದರ ಮುಂದೆ ಬಹುಲಾಭಿಮಾನಃ ಎಂದಿರುವುದು. ಇಲ್ಲಿ ಅಭಿ ಶಬ್ದವು ಅಭಿ ಭವನ (ಸೋಲಿಸುವುದು) ಎಂಬರ್ಥವನ್ನು ಸೂಚಿಸುವುದು ಕ್ಷತ್ರಿಯನು ತನ್ನ ಶತ್ರುವನ್ನು ಸೋಲಿಸುವ ಸ್ವಭಾವವುಳ್ಳವನಾದ್ದರಿಂದ ಈ ಅಭಿ ಎಂಬ ಶಬ್ದವೂ ಕ್ಷತ್ರಿಯನನ್ನೇ ಪ್ರಶಂಸೆ ಮಾಡುವುದು. ಮತ್ತು ಈ ಸೂಕ್ತದಲ್ಲಿ ಹನ್ನೊಂದು ಋಕ್ಕುಗಳಿರುವವು. ತ್ರಿಷ್ಟುಪ್ ಛಂದಸ್ಸಿನ ಪಾದದಲ್ಲಿಯೂ ಹನ್ನೊಂದು ಅಕ್ಷರಗಳಿರುವವು. ಈ ತ್ರಿಷ್ಟುಪ್ ಛಂದಸ್ಸು ಯಾವಾಗಲೂ ಕ್ಷತ್ರಿಯನ ಪರವಾಗಿಯೇ ಇರುವುದು. ಏಕೆಂದರೆ ಈ ಛಂದಸ್ಸೂ ಪ್ರಜಾಪತಿಯ ಬಾಹುವಿನಿಂದಲೇ ಉತ್ಪನ್ನವಾಗಿರುವುದು. ಓಜಃ ಶಬ್ದವೂ ಬಲವನ್ನು ಸೂಚಿಸುವುದು ವೀರ್ಯವೆಂದರೆ ಶರೀರಬಲವು. ಇಂದ್ರಿಯವೆಂದರೆ-ಚಕ್ಷುರಾದಿ ಇಂದ್ರಿಯಗಳ ಪಾಟವವು. ಇವೆಲ್ಲವೂ ರಾಜನಲ್ಲಿರಬೇಕಾದ ಗುಣಗಳು. ಆದ್ದರಿಂದ ರಾಜನ ಯಜ್ಞವು ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳಿಂದ ನೆರವೇರಿಸಲ್ಪಟ್ಟರೆ ರಾಜನಿಗೆ ಇರಬೇಕಾದ ಮೇಲೆ ಹೇಳಿದ ಗುಣಗಳೆಲ್ಲವೂ ಸಮೃದ್ಧಿಯಾಗಿ ಉಂಟಾಗುವವು. ಈ ಸೂಕ್ತವು ಗೌರಿವೀತಿ ಎಂಬ ಮಹರ್ಷಿಯಿಂದ ದೃಷ್ಟವಾಗಿರುವುದು. ಆದ್ದರಿಂದ ಇದಕ್ಕೆ ಗೌರಿವೀತಿ ಸೂಕ್ತವೆಂದು ಹೆಸರು ಪ್ರಸಿದ್ಧವಾಗಿರುವುದು. ಈ ಗೌರಿವೀತಿ ಸೂಕ್ತದಿಂದ ಮರುತ್ವತೀಯ ಶಸ್ತ್ರವು ಸಂಪೂರ್ಣವೂ ಸಮೃದ್ಧವೂ ಆಗಿರುವುದು.

ತ್ವಾಮಿದ್ಧಿ ಹವಾಮಹ ಇತಿ ಬೃಹತ್ಪೃಷ್ಠಂ ಭವತಿ ಕ್ಷತ್ರಂ ವೈ ಬೃಹತ್ಕ್ಷತ್ರೇಣೈವ ತತ್ಕ್ಷತ್ರಂ ಸಮರ್ಧಯತ್ಯಥೋ ಕ್ಷತ್ರಂ ವೈ ಬೃಹದಾತ್ಮಾ ಯಜಮಾನಸ್ಯ ನಿಷ್ಕೇವಲ್ಯಂ ತದ್ಯದ್ಬೃಹತ್ಪೃಷ್ಠಂ ಭವತಿ ಕ್ಷತ್ರಂ ವೈ ಬೃಹತ್ಕ್ಷತ್ರೇಣೈವೈನಂ ತತ್ಸಮರ್ಧಯತ್ಯಥೋ ಜ್ಯೈಷ್ಠ್ಯಂ ವೈ ಬೃಹಜ್ಜ್ಯೈಷ್ಠ್ಯೇನೈವೈನಂ ತತ್ಸಮರ್ಧಯತ್ಯಥೋ ಶ್ರೈಷ್ಠ್ಯಂ ವೈ ಬೃಹಚ್ಛ್ರೈಷ್ಠ್ಯೇನೈವೈನಂ ತತ್ಸಮರ್ಧಯತ್ಯಥೋ ಶ್ರೈಷ್ಠ್ಯಂ ವೈ ಬೃಹಚ್ಛ್ರೈಷ್ಠ್ಯೇನೈವೈನಂ ತತ್ಸಮರ್ಧಯತಿ ॥

**ಅಥ ನಿಷ್ಕೇವಲ್ಯಶಸ್ತ್ರಮಾಹ—ತ್ವಾಮಿದ್ಧೀತ್ಯಾದಿಕಸ್ಯರ್ಚೋ ನಿಷ್ಕೇವಲ್ಯಶಸ್ತ್ರಸ್ಯ ಸ್ತೋತ್ರಿಯಪ್ರತಿಪದ್ರೂಪಾದ್ಬೃಹತ್ಸಾಮ್ನ ಆಧಾರತ್ವಾದ್ಬೃಹದ್ರೂಪಃ । ತೇನ ಚ ಸಾಮ್ನಾ ಪೃಷ್ಠಸ್ತೋತ್ರಸ್ಯ ನಿಷ್ಪಾದ್ಯತ್ವಾತ್ಪೃಷ್ಠಸ್ವರೂಪಶ್ಚ ಭವತಿ । ತ್ವಾಮಿದ್ಧೀತ್ಯಸ್ಯಾಮೃಚ್ಯುತ್ಪನ್ನಂ ಬೃಹತ್ಸಾಮ ಕ್ಷತ್ರಂ ವೈ ಕ್ಷತ್ರಿಯಜಾತಿರೂಪಮೇವ । ಅತಃ ಕ್ಷತ್ರೇಣೈವ ತ್ವಾಮಿದ್ಧೀತಿ ತ್ರ್ಯೃಚರೂಪೇಣ । ತತ್ಕ್ಷತ್ರಂ**

**ಯಜಮಾನರೂಪಂ ಸಮೃದ್ಧಂ ಕರೋತಿ ಅಥೋ ಅಪಿ ಚೋಕ್ತರೀತ್ಯಾ ಕ್ಷತ್ರಮೇವ ಬೃಹದ್ರೂಪಂ ನಿಷ್ಕೇವಲ್ಯಶಸ್ತ್ರಂ ಯಜಮಾನಸ್ಯಾತ್ಮಾ ದೇಹಭೂತಃ। ತತ್ತಥಾ ಸತಿ ಯದ್ಯದಿ ಬೃಹತ್ಪೃಷ್ಠಶಬ್ದ-ದ್ವಯವಾಚ್ಯಂ ತ್ವಾಮಿದ್ಧೀತ್ಯಾದಿಕಂ ನಿಷ್ಕೇವಲ್ಯಂ ಭವೇತ್ । ತತ್ತೇನ ನಿಷ್ಕೇವಲ್ಯೇನ ಕ್ಷತ್ರಂ ವೈ ಬೃಹದಿತಿ ಪೂರ್ವಮುಕ್ತತ್ವಾತ್ ಕ್ಷತ್ರೇಣೈವ ತ್ವಾಮಿದ್ಧೀತ್ಯಾದಿನಾ ಬೃಹದ್ರೂಪೇಣ ನಿಷ್ಕೇವಲ್ಯೇ-ನೈನಂ ಯಜಮಾನಂ ಸಮೃದ್ಧಂ ಕರೋತಿ। ಅಥೋ ಅಪಿ ಚ ತ್ವಾಮಿದ್ಧೀತ್ಯಾದಿಕಂ ಬೃಹದ್ರೂಪಂ ಜ್ಯೈಷ್ಠ್ಯಂ ವೈ ವಯೋವೃದ್ಧೇಃ ಸ್ವರೂಪಮ್। ಅತೋ ಜ್ಯೈಷ್ಠ್ಯೇನೈವ ವಯೋವೃದ್ಧ್ಯೈವೈನಂ ರಾಜಾನಂ ಸಮೃದ್ಧಂ ಕರೋತಿ । ಅಥೋ ಅಪಿ ಚ ತ್ವಾಮಿದ್ಧೀತ್ಯಾದಿಕಂ ಬೃಹದ್ರೂಪಮ್ ಶ್ರೈಷ್ಠ್ಯಂ ವೈ ಗುಣೋತ್ಕರ್ಷ ಏವ। ತಥಾ ಸತಿ ಶ್ರೈಷ್ಠ್ಯೇನೈವ ಗುಣೋತ್ಕರ್ಷೇಣೈವ ಯಜ-ಮಾನಂ ಸಮೃದ್ಧಂ ಕರೋತಿ ॥**

ಈಗ ನಿಷ್ಕೇವಲ್ಯಶಸ್ತ್ರದ ವಿಷಯವನ್ನು ವಿವರಿಸುವರು—**ತ್ವಾಮಿದ್ಧಿ ಹವಾಮಹೇ** (ಋ. ಸಂ. ೬-೬೪-೧) ಎಂಬುದು ನಿಷ್ಕೇವಲ್ಯಶಾಸ್ತ್ರದ ಪ್ರತಿಪತ್ ಅಥವಾ ಮೊದಲಿನ ಮೂರು ಋಕ್ಕುಗಳು (ತೃಚವು). ಇವು ಬೃಹತ್ ಎಂಬ ಸಾಮಮಂತ್ರಕ್ಕೆ ಆಧಾರಭೂತವಾದವು. ಈ ಸಾಮದಿಂದ ಪೃಷ್ಠಸ್ತೋತ್ರವು ಉಂಟಾಗುವುದರಿಂದ ಪೃಷ್ಠ ಸ್ತೋತ್ರಕ್ಕೆ ಈ ಸಾಮವೇ ಕಾರಣವಾಗಿರುವುದು. ತ್ವಾಮಿದ್ಧಿ ಎಂಬ ಋಕ್ಕಿನ ಮೂಲಕ ಉತ್ಪನ್ನವಾದ ಬೃಹತ್ಸಾಮವು ಕ್ಷತ್ರಿಯಜಾತಿ ಸ್ವರೂಪವಾಗಿರುವುದು. ಆದ್ದರಿಂದ ತ್ವಾಮಿದ್ಧಿ ಎಂಬ ತ್ರ್ಯೃಚರೂಪವಾದ ಮಂತ್ರದಿಂದ ಕ್ಷತ್ರಿಯ ಯಜಮಾನನಿಗೆ ಹೋತೃವು ಸಮೃದ್ಧಿಯುಂಟಾಗುವಂತೆ ಮಾಡುವನು ಮತ್ತು ಹೇಳಿದ ಪ್ರಕಾರ ಬೃಹತ್ಸಾಮರೂಪವಾದ ನಿಷ್ಕೇವಲಶಸ್ತ್ರವು ಕ್ಷತ್ರಿಯ ಯಜಮಾನನಿಗೆ ದೇಹಭೂತವಾಗಿರುವುದು. ಹೀಗಿರುವುದರಿಂದ ಬೃಹತ್, ಪೃಷ್ಠ ಮೊದಲಾದ ಶಬ್ದಗಳಿಂದ ಕೂಡಿರುವ ತ್ವಾಮಿದ್ಧಿ ಎಂದು ಮೊದಲಾದ ಮಂತ್ರವು ನಿಷ್ಕೇವಲ್ಯಶಸ್ತ್ರವೆನಿಸುವುದು. ಇಂತಹ ನಿಷ್ಕೇವಲ್ಯಶಸ್ತ್ರದಲ್ಲಿ **ಕ್ಷತ್ರಂ ವೈ ಬೃಹತ್** ಮೊದಲಾದ ಕ್ಷತ್ರಿಯವಾಚಕಶಬ್ದಗಳಿರುವುದರಿಂದ ತ್ವಾಮಿದ್ಧಿ ಎಂದು ಪ್ರಾರಂಭವಾಗುವ ಮತ್ತು ಬೃಹತ್ಸಾಮರೂಪವಾದ ನಿಷ್ಕೇವಲ್ಯಶಸ್ತ್ರ ಮಂತ್ರದಿಂದ ಹೋತೃವು ಯಜಮಾನನಿಗೆ ಸಮೃದ್ಧಿಯನ್ನುಂಟು ಮಾಡುವನು. ಇದಲ್ಲದೆ ತ್ವಾಮಿದ್ಧಿ ಎಂಬ ಮಂತ್ರದಲ್ಲಿ ಬೃಹದ್ರೂಪವಾದ ಜ್ಯೇಷ್ಠಂ ವೈ ಎಂದು ವಯೋವೃದ್ಧತ್ವದ ಸ್ವರೂಪವಿರುವುದರಿಂದ ಜ್ಯೇಷ್ಠನೂ ವಯೋವೃದ್ಧನೂ ಆದ ರಾಜನಿಗೆ ಸಮೃದ್ಧಿಯುಂಟಾಗುವುದು. ಮತ್ತು ತ್ವಾಮಿದ್ಧಿ ಮೊದಲಾದ ಮಂತ್ರಗಳಲ್ಲಿ ಬೃಹದ್ರೂಪವಾದ ಶ್ರೈಷ್ಠ್ಯಂ ವೈ ಎಂಬ ಶಬ್ದವಿರುವುದರಿಂದ ರಾಜನ ಗುಣೋತ್ಕರ್ಷವನ್ನೂ ಈ ಮಂತ್ರವು ಪ್ರಶಂಸಿಸುವುದು ಮತ್ತು ಯಜಮಾನನ ಗುಣೋತ್ಕರ್ಷವನ್ನೂ ಹೆಚ್ಚಿಸುವುದು.

ಅಭಿ ತ್ವಾ ಶೂರ ನೋನುಮ ಇತಿ ರಥಂತರಮನುರೂಪಂ ಕುರ್ವಂ-ತ್ಯಯಂ ವೈ ಲೋಕೋ ರಥಂತರಮಸೌ ಲೋಕೋ ಬೃಹದಸ್ಯ ವೈ ಲೋಕಸ್ಯಾಸೌ ಲೋಕೋಽನುರೂಪೋಽಮುಷ್ಯ ಲೋಕಸ್ಯಾಯಂ ಲೋಕೋಽನುರೂಪಸ್ತದ್ಯದ್ರಥಂತರಮನುರೂಪಂ ಕುರ್ವಂತ್ಯು-ಭಾವೇವ ತಲ್ಲೋಕೌ ಯಜಮಾನಾಯ ಸಂಭೋಗಿನೌ ಕುರ್ವಂತ್ಯ-ಥೋ ಬ್ರಹ್ಮ ವೈ ರಥಂತರಂ ಕ್ಷತ್ರಂ ಬೃಹದ್ಬ್ರಹ್ಮಣಿ ಖಲು ವೈ

ಕ್ಷತ್ರಂ ಪ್ರತಿಷ್ಠಿತಂ ಕ್ಷತ್ರೇ ಬ್ರಹ್ಮಾಥೋ ಸಾಮ್ನ ಏವ ಸ ಸಯೋನಿತಾಯೈ ॥

ನಿಷ್ಕೇವಲ್ಯಶಸ್ತ್ರಸ್ಯ ಪ್ರತಿಪದಮುಕ್ತ್ವಾನುರೂಪಮಾಹ—ಅಭಿ ತ್ವಾ ಶೂರೇತ್ಯೇಷ ತೃಚೋ ನಿಷ್ಕೇವಲ್ಯಶಸ್ತ್ರಸ್ಯಾನುರೂಪಃ ಕಾರ್ಯಃ । ಯದ್ಯಪಿ ತ್ವಾಮಿದ್ಧ್ಯಭಿ ತ್ವೇತ್ಯೇತೌ ಪ್ರಗಾಥಾವೃಗ್ದ್ವ-ಯಾತ್ಮಕೌ ತಥಾಪಿ ಪ್ರಗ್ರಥನೇನ ತ್ರ್ಯೃಚತ್ವಂ ಸಂಪಾದ್ಯ ಪ್ರತಿಪದನುಚರತ್ವಂ ದ್ರಷ್ಟವ್ಯಮ್ । ಅಭಿ ತ್ವೇತ್ಯಯಂ ತ್ರ್ಯೃಚೋ ರಥಂತರಸಾಮ್ನ ಆಧಾರತ್ವಾದ್ರಥಂತರಮಿತ್ಯುಚ್ಯತೇ ।ಬೃಹದ್ರಥಂತರ-ಮಿತ್ಯುಚ್ಯತೇ । ಬೃಹದ್ರಥಂತರಶಬ್ದಾಭ್ಯಾಂ ವಿವಕ್ಷಿತಂ ತ್ವಾಮಿದ್ಧ್ಯಭಿ ತ್ವೇತಿ ತ್ರ್ಯೃಚದ್ವಯಂ ಮಿಲಿತ್ವಾ ಪ್ರಶಸ್ಯತೇ। ಭೂಲೋಕೋ ರಥಂತರಸ್ವರೂಪಃ ಸ್ವರ್ಗಲೋಕೋ ಬೃಹತ್ಸ್ವರೂಪಸ್ತಾವೇತೌ ಲೋಕೌ ಪರಸ್ಪರಾನುರೂಪೌ । ಅಸ್ಮಿಂಲ್ಲೋಕೇ ದತ್ತೇನ ಹವಿಷಾ ದೇವಾಃ ಸ್ವರ್ಗೇ ಜೀವಂತಿ । ಸ್ವರ್ಗಾದಾಗತಯಾ ವೃಷ್ಟ್ಯಾ ಮನುಷ್ಯಾ ಜೀವಂತಿ । ತದೇತತ್ಪರಸ್ಪರಮನುರೂಪತ್ವಮ್ । ಏವಂ ಸತಿ ಬೃಹದ್ರಥಂತರರೂಪಾಭ್ಯಾಂ ಪ್ರತಿಪದನುಚರಾಭ್ಯಾಮುಭಾವೇವ ಲೋಕೌ ಯಜಮಾನಾರ್ಥಂ ಸಮೀಚೀನಭೋಗಯುಕ್ತೌ ಕುರ್ವಂತಿ । ಅಥೋ ಅಪಿ ಚ ಪ್ರಜಾಪತಿಮುಖಜತ್ವಸಾಮ್ಯೇನ ರಥಂ-ತರಸ್ಯ ಬ್ರಾಹ್ಮಣರೂಪತ್ವಾತ್ತದೀಯ ಬಾಹುಜತ್ವಸಾಮ್ಯೇನ ಬೃಹತಃ ಕ್ಷತ್ರಿಯರೂಪತ್ವಾಚ್ಚ ಬೃಹ-ದ್ರಥಂತರಾಧಾನಯೋಸ್ತ್ರ್ಯೃಚಯೋರನುಷ್ಠಾನೇನ ಬ್ರಹ್ಮಕ್ಷತ್ರಯೋಃ ಪರಸ್ಪರಾ (ರಾಂ) ಪ್ರತಿಷ್ಠಾ ಭವತಿ । ಅಥೋ ಅಪಿಚ ತ್ರ್ಯೃಚದ್ವಯಾನುಷ್ಠಾನಂ ನಿಷ್ಕೇವಲ್ಯಶಸ್ತ್ರಸ್ಯ ತ್ರ್ಯೃಚದ್ವಯಾಶ್ರಿತಸಾಮ್ನಶ್ಚ ಸಯೋನಿತ್ವಾಯ ಸಮಾನಸ್ಥಾನತ್ವಾಯ ಸಂಪದ್ಯತೇ ॥

ನಿಷ್ಕೇವಲ್ಯ ಶಸ್ತ್ರದ ಪ್ರತಿಪದಮಂತ್ರಗಳನ್ನು ಹೇಳಿ ಈಗ ಅನುರೂಪ ಮಂತ್ರಗಳನ್ನು ಹೇಳುವರು. **ಅಭಿ ತ್ವಾ ಶೂರ ನೋನುಮಃ** ಎಂಬ ತೃಚವು ನಿಷ್ಕೇವಲ್ಯ ಶಸ್ತ್ರ ಮಂತ್ರಗಳಿಗೆ ಅನುರೂಪ ಮಂತ್ರವು. ತ್ವಾಮಿದ್ಧಿ ಎಂದು ಮೊದಲಾಗುವ ಪ್ರಗಾಥದಲ್ಲಿರುವ ಎರಡು ಋಕ್ಕುಗಳನ್ನು ಪ್ರಗ್ರಥನ ವಿಧಾನದಿಂದ ಮೂರು ಋಕ್ಕುಗಳಾಗುವಂತೆ ಮಾಡಬೇಕು ಅಭಿತ್ವಾ ಎಂಬ ತ್ರ್ಯೃಚವು ರಥಂತರಸಾಮದ ಆಧಾರದಿಂದ ರಥಂತರವೆಂದೇ ಹೇಳಲ್ಪಡುವುದು. ಬೃಹತ್ ರಥಂತರ ಎಂಬ ಎರಡು ಶಬ್ದಗಳಿಂದ ಹೇಳಲಾಗಿರುವುದರಿಂದ ತ್ವಾಮಿದ್ಧಿ ಅಭಿತ್ವಾ ಎಂದು ಎರಡು ತ್ರ್ಯೃಚಗಳನ್ನು ಒಟ್ಟಿಗೆ ಸೇರಿಸಿ ಪ್ರಶಂಸಿಸಲ್ಪಡುವುದು. ಇಲ್ಲಿ ಭೂಲೋಕವು ರಥಂತರಸ್ವರೂಪವು. ಸ್ವರ್ಗಲೋಕವು ಬೃಹತ್ಸರೂಪವು. ಇವೆರಡುಲೋಕಗಳೂ ಪರಸ್ಪರ ಅನುಕೂಲ ಗಳಾಗಿರುವವು. ಹೇಗೆಂದರೆ ಈ ಲೋಕದಲ್ಲಿ ಅಗ್ನಿಯಲ್ಲಿ ಅರ್ಪಿಸಿದ ಹವಿಸ್ಸಿನಿಂದ ಸ್ವರ್ಗದಲ್ಲಿರುವ ದೇವತೆಗಳು ಜೀವಿಸುತ್ತಾರೆ. ಸ್ವರ್ಗಲೋಕಕ್ಕೆ ಹೋಗಬೇಕೆಂಬ ಆಶೆಯಿಂದ ಮನುಷ್ಯರು ಜೀವಿಸುತ್ತಾರೆ. ಇದನ್ನೇ ಪರಸ್ಪರ ಅನುಕೂಲವೆಂದು ಹೇಳಲ್ಪಡುವುದು. ಹೀಗಿರುವುದರಿಂದ ಬೃಹದ್ರಥಂತರ ರೂಪಗಳಾದ ಪ್ರತಿಪದಅನುಚರ ಎಂಬ ಋಕ್ಕುಗಳು ಲೋಕದಲ್ಲಿ ಯಜಮಾನನಿಗೆ ಉತ್ತಮವಾದ ಭೋಗವನ್ನು ಕಲ್ಪಿಸುವವು. ಹಿಂದೆ ಹೇಳಿದ ಪ್ರಕಾರ ಪ್ರಜಾಪತಿ ಮುಖದಿಂದ ಜನಿಸಿದ ಕಾರಣಕ್ಕಾಗಿ ರಥಂತರ ಸಾಮಕ್ಕೂ ಬ್ರಾಹ್ಮಣಜಾತಿಗೂ ಸಂಬಂಧವಿರುವುದು. ಅದರಂತೆಯೇ ಬೃಹತ್ಸಾಮವೂ ಕ್ಷತ್ರಿಯ ಜಾತಿಯೂ ಪ್ರಜಾಪತಿಯ ಬಾಹುವಿನಿಂದ ಜನಿಸಿದ್ದ ಕಾರಣದಿಂದ ಪರಸ್ಪರ ಸಂಬಂಧವಿರುವುದು. ಹೀಗಿರುವುದರಿಂದ ಬೃಹದ್ರಂತರಗಳಿಗೂ ಬ್ರಹ್ಮಕ್ಷತ್ರಿಯಜಾತಿಗಳಿಗೂ ತ್ರ್ಯೃಚದ್ವಯಗಳ (ಪ್ರತಿಪದ ಮತ್ತು ಅನುಚರ ಎಂಬ ಎರಡು ತೃಚಗಳ) ಅನುಷ್ಠಾನದಿಂದ ಬ್ರಹ್ಮಕ್ಷತ್ರಿಯಜಾತಿಗಳಿಗೆ ಪರಸ್ಪರ ಅನುಕೂಲವೂ ಪ್ರತಿಷ್ಠೆಯೂ ಉಂಟಾಗುವುದು. ಇದಲ್ಲದೆ ಈ ಎರಡು

ತೃಚಗಳ ಅನುಷ್ಠಾನವು ನಿಷ್ಕೇವಲ್ಯಶಸ್ತ್ರಕ್ಕೂ ಮತ್ತು ಈ ಎರಡು ತೃಚಗಳನ್ನು ಆಶ್ರಯಿಸಿದ ಸಾಮಗಳಿಗೂ ಸಮಾನವಾದ ಸ್ಥಾನಮಾನಗಳನ್ನು (ಗಣ್ಯತೆಯನ್ನೂ) ಉಂಟುಮಾಡುವುದು.

**ಯದ್ವಾವಾನೇತಿ ಧಾಯ್ಯಾ ತಸ್ಯಾ ಉಕ್ತಂ ಬ್ರಾಹ್ಮಣಂ.**

**ಧಾಯ್ಯಾಂ ದರ್ಶಯತಿ—ತಸ್ಯಾ ಧಾಯ್ಯಾಯಾಃ ಪ್ರಶಂಸಾರೂಪಂ ಬ್ರಾಹ್ಮಣಂ ತೇ ದೇವಾ ಅಬ್ರುವನ್ಸರ್ವಂ ವಾ ಅವೋಚಥಾ ಇತ್ಯಾದಿನಾ ಪೂರ್ವಮೇವೋಕ್ತಮ್ ॥**

ಧಾಯ್ಯಾ ಮಂತ್ರವನ್ನು ವಿವರಿಸುವರು—ಈಗ ಹೇಳಿದ ಮಂತ್ರಗಳ ಧಾಯ್ಯಾ ಎಂಬ ಋಕ್ಕುಗಳನ್ನು ಎಂದರೆ ಯದ್ವಾವಾನ ಪುರುತಮಂ (ಋ. ಸಂ. ೧೦-೭೪-೬) ಎಂಬ ಧಾಯ್ಯಾ ಮಂತ್ರವನ್ನು ವಿವರಿಸುವ ಮತ್ತು ಪ್ರಶಂಸೆಮಾಡುವ ಬ್ರಾಹ್ಮಣ ವಾಕ್ಯವು—**ತೇ ದೇವಾ ಅಬ್ರುವನ್ಸರ್ವಂ ವಾ ಅವೋಚಥಾ** ಇತ್ಯಾದಿ ವಾಕ್ಯಗಳಿಂದ ಹಿಂದೆಯೇ ಹೇಳಲ್ಪಟ್ಟಿರುವುದು.

**ಉಭಯಂ ಶೃಣವಚ್ಚನ ಇತಿ ಸಾಮಪ್ರಗಾಥ ಉಭಯಸಾಮ್ನೋ ರೂಪಮುಭೇ ಹಿ ಸಾಮನೀ ಕ್ರಿಯೇತೇ ॥**

**ಸಾಮಾಧಾರಭೂತಂ ಪ್ರಗಾಥಂ ದರ್ಶಯತಿ—ಉಭಯಮಿತ್ಯಾದಿಪ್ರಗಾಥೋ ಬೃಹದ್ರಥಂತರಸಾಮದ್ವಯಸ್ಯ ಸ್ವರೂಪಮ್ । ಯಸ್ಮಾದೇತೇ ಉಭಯಸಾಮನೀ ಅಸ್ಮಿನ್ ಪ್ರಗಾಥೇ ಸಾಮಗೈರ್ಗೀಯೇತೇ ತಸ್ಮಾತ್ತದ್ರೂಪತ್ವಂ ಯುಕ್ತಮ್ ।**

ಸಾಮಮಂತ್ರಕ್ಕೆ ಆಧಾರಭೂತವಾದ ಪ್ರಗಾಥಮಂತ್ರವನ್ನು **ಉಭಯಂ ಶೃಣವಚ್ಚ** (ಋ. ಸಂ. ೮-೬೧-೧) ವಿವರಿಸುವರು—ಬೃಹತ್ ಮತ್ತು ರಥಂತರ ಎಂಬ ಎರಡು ಸಾಮಮಂತ್ರಗಳೂ ಈ ಪ್ರಗಾಥನದಲ್ಲಿ ಇರುವವು. ಇವುಗಳನ್ನು ಸಾಮಗರು ಗಾನಮಾಡುತ್ತಾರೆ.



*English Translation*

**(The remainder of the Marutvtiya Shastara, and the Nish. kevalva Shastra)**

The Nivid hymn of the Pavamana uktham is janishtha ugrah(10, 73). It contains the terms, ugra strong and sahas power, which are characteristic of the Kshattra. The words ojishtha "the strongest" is also a characteristid of the Kshattra. The words "bahulabhimanah, in the first

verse, contain the term abhi, which means to overpower, defeat," which is a characteristic of the Kshattram also. The hymn consists of eleven verses, for the Trishtubh comprises eleven syllables, and the Kshattriyas share in the nature of the Trishtubh. Ojas(in ojistha) is Indra's power, viryam (strength) is Trishtubh; the Kshattra is power (ojas), and the Kshattriya race is the strength as to progeny. Thus he (the priest) makes him (the Kshattriya) successful in strength, royal power, and progeny. By this Gauriviti hymn the Marutvatiya Shastra becomes successful, on which a Brahmanam has been told.

**(Now follows the Nishkevalya Shastram.)**

The verse tvam iddhi havamahe (6,46- 1-2) froms the Brihat Prishtha. For the Brihat Sama is the Kshattram; by means of the Kshattra the king makes complete his royal power, If the Brihat is the Kshattra, then the soul of the sacrificer is the Nishkevalya Shastra to which the Brihat Sama belongs. That is what the Brihat Prishtha becomes for the sacrificer. The Brihat is the Kshattra; by means of the Kshattra the Brihat makes him successful. The Brihat is further precedence, and in this respect it makes him successful also. The Brihat is further excellence, and in this respect it makes him successful also.

They make the Rathantara Sama, abhi tva sura nonumah, the Anurupa to the Brihat. For the Rathantara is this world, and the Brihat is that world. That world corresponds to this one, and this world to that one. Therefore they make the Rathantara the Anurupa to the Brihat, for thus they make the sacrificer enjoy both worlds.

Further, the Rathantara is the Brahma, and the Kshattra the Brihat; thus the Kshattra is then placed in the Brahma, and the Brahma in the Kshattra. There is then prepared for both the Samans the same place. The Dhayya is yad vavana (10, 74, 6), of which a Brahmanam has been already told. The Sama Pragatha is, ubhayam s'rinavachcha (8,50,

1-2) ; for it is a characteristic of both Samans which are sung on account of its containing the world ubhayam both.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಭಾಷ್ಯೇ ಷಟ್‌ತ್ರಿಂಶಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತಾರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು
ಸಮಾಪ್ತವಾದುದು

---

## ಅಥ ಷಟ್ತ್ರಿಂಶಾಧ್ಯಾಯೇ ತೃತೀಯಃ ಖಂಡಃ

ಮೂವತ್ತಾರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

---

[ನಿಷ್ಕೇವಲ್ಯಶಸ್ತ್ರದ ನಿವಿತ್ಸೂಕ್ತವು]

---

ತಮು ಷ್ಟುಹಿ ಯೋ ಅಭಿಭೂತ್ಯೋಜಾ ಇತಿ ಸೂಕ್ತಮಭಿವದಭಿ-
ಭೂತ್ಯೈ ರೂಪಂ ||

ನಿಷ್ಕೇವಲ್ಯಶಸ್ತ್ರೇ ನಿವಿದ್ಧಾನೀಯಂ ಸೂಕ್ತಂ ದರ್ಶಯತಿ—ಅಭಿವದಭಿಶಬ್ದೋಪೇತಂ ಸೂಕ್ತಂ ತಸ್ಮಾದಭಿಭೂತ್ಯೈ ಶತ್ರೂಣಾಮಭಿಭವಸ್ಯ ಸ್ವರೂಪಮ್ ।

ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿ ಸೇರಿಸಬೇಕಾದ ನಿವಿದ್ಧಾನೀಯಸೂಕ್ತವನ್ನು ವಿವರಿಸುವರು. ಇಲ್ಲಿ ಉಪಯೋಗಿಸುವ ಅಭಿವತ್ ಎಂಬ ಶಬ್ದವು ಶತ್ರುವನ್ನು ಪರಾಭವ (ಸೋಲಿಸುವುದು) ಗೊಳಿಸುವ ಎಂಬರ್ಥದಲ್ಲಿ ಉಪಯೋಗಿಸಲಾಗಿದೆ.

ಅಷಾಳ್ಹಮುಗ್ರಂ ಸಹಮಾನಮಾಭಿರಿತ್ಯುಗ್ರವತ್ಸಹಮಾನವತ್ತತ್ಕ್ಷತ್ರಸ್ಯ
ರೂಪಂ ||

ತಸ್ಯಾ ಋಚಸ್ತೃತೀಯಪಾದಮನೂದ್ಯ ಪ್ರಶಂಸತಿ—ಉಗ್ರಶಬ್ದಸಹಮಾನಶಬ್ದಯುಕ್ತ-ಮಿದಂ ಸೂಕ್ತಮ್। ತಚ್ಚ ಶಬ್ದದ್ವಯವಾಚ್ಯಂ ಕ್ಷತ್ರಿಯಜಾತೇಃ ಸ್ವರೂಪಮ್ । ಕ್ಷತ್ರಿಯೋ ಹ್ಯುಗ್ರೋ ಭೂತ್ವಾ ಶತ್ರೂನಭಿಭವತಿ ||

ಈ ಋಕ್ಕಿನ ಮೂರನೇ ಪಾದವನ್ನು ಪ್ರಶಂಸೆಮಾಡುತ್ತಾರೆ. ಈ ಸೂಕ್ತದ ಋಕ್ಕುಗಳಲ್ಲಿ ಉಗ್ರ ಮತ್ತು ಸಹಮಾನ ಎಂಬ ಎರಡು ಶಬ್ದಗಳ ಪ್ರಯೋಗವಿದೆ. ಈ ಎರಡು ಶಬ್ದಗಳೂ ಕ್ಷತ್ರಿಯನ ಗುಣವನ್ನು ನಿರ್ದೇಶಿಸುವವು. ಕ್ಷತ್ರಿಯನು ಬಹಳ ಉಗ್ರ (ಕ್ರೂರ) ಸ್ವರೂಪದಿಂದ ಯುದ್ಧಮಾಡಿ ತನ್ನ ಶತ್ರುಗಳನ್ನು ಸೋಲಿಸುವನು.

**ತತ್ಪಂಚದಶರ್ಚಂ ಭವತ್ಯೋಜೋ ವಾ ಇಂದ್ರಿಯಂ ವೀರ್ಯಂ ಪಂಚದಶ ಓಜಃ ಕ್ಷತ್ರಂ ವೀರ್ಯಂ ರಾಜನ್ಯಸ್ತದೇನಮೋಜಸಾ ಕ್ಷತ್ರೇಣ ವೀರ್ಯೇಣ ಸಮರ್ಧಯತಿ ॥**

ತತ್ಸೂಕ್ತಗತಾಮೃಕ್ಸಂಖ್ಯಾಂ ಪ್ರಶಂಸತಿ—ಪೂರ್ವೋಕ್ತತ್ರಿಷ್ಟುಪ್ಪ್ರಶಂಸಾ ವಾಕ್ಯವದಿದಂ ಪಂಚದಶಸ್ತೋಮಪ್ರಶಂಸಾವಾಕ್ಯಂ ವ್ಯಾಖ್ಯೇಯಮ್ ॥

ಈ ಸೂಕ್ತದಲ್ಲಿ ಹದಿನೈದು ಋಕ್ಕುಗಳಿರುವವು. ಆದ್ದರಿಂದ ಇದನ್ನು ಪಂಚದಶ ಸ್ತೋಮಕ್ಕೆ ಸಮವೆಂದು ಭಾವಿಸಬೇಕು. ಪಂಚದಶಸ್ತೋಮವು ಕ್ಷತ್ರಿಯನಾದ ರಾಜನನ್ನು ಅವನ ಗುಣಗಳಾದ ಓಜಸ್ಸು, ಇಂದ್ರಿಯ, ವೀರ್ಯ, ಮೊದಲಾದ ಗುಣಗಳನ್ನು ಪ್ರಶಂಸೆಮಾಡುವುದು. ಆದ್ದರಿಂದ ಈ ಪಂಚದಶ(ಹದಿನೈದು) ಋಕ್ಕುಗಳನ್ನು ಪಠಿಸುವುದರಿಂದ ರಾಜನಲ್ಲಿರಬೇಕಾದ ಓಜಸ್ಸು, ಪರಾಕ್ರಮ, ಶೌರ್ಯ ಮೊದಲಾದ ಗುಣಗಳನ್ನು ಅಭಿವೃದ್ಧಿಮಾಡುವುದು.

**ತದ್ಭಾರದ್ವಾಜಂ ಭವತಿ ಭಾರದ್ವಾಜಂ ವೈ ಬೃಹದಾರ್ಷೇಯೇಣ ಸಲೋಮಾ ।**

ಋಷಿದ್ವಾರಾ ಸೂಕ್ತಂ ಪ್ರಶಂಸತಿ—ಭರದ್ವಾಜೇನ ದೃಷ್ಟತ್ವಾದಿದಂ ಸೂಕ್ತಂ ಭಾರದ್ವಾಜಂ ಬೃಹತ್ಸಾಮಾಪಿ ತಥಾ ಭಾರದ್ವಾಜಮ್ । ತಾದೃಶಬೃಹದ್ಯೋಗಾದಯಂ ಕ್ರತುರಾರ್ಷೇಯೇಣ ಸಲೋಮಾ । ಆರ್ಷೇಯೋ ಭರದ್ವಾಜಮುನಿಸಂಬಂಧೋ ಲೋಮಶಬ್ದೇನ ಕೇಶಯುಕ್ತೋ ಮೂರ್ಧೋಪಲಕ್ಷ್ಯತೇ । ಸಲೋಮಾ ಸಶಿರಸ್ಕಃ ಸಂಪೂರ್ಣ ಇತ್ಯರ್ಥಃ । ಭರದ್ವಾಜಮುನಿದೃಷ್ಟಸ್ಯ ಬೃಹತಃ ಸಂಪೂರ್ಣತ್ವಾದ್ಬೃಹದ್ದ್ವಾರಾ ಭರದ್ವಾಜಮುನಿಸಂಬಂಧೇ ಸತಿ ಕ್ರತೋರಪಿ ಸಂಪೂರ್ಣತ್ವಂ ದ್ರಷ್ಟವ್ಯಮ್ ॥

ಈ ಸೂಕ್ತವು ಭರದ್ವಾಜಋಷಿದೃಷ್ಟವಾದುದು. ಬೃಹತ್ಸಾಮವೂ ಸಹ ಭರದ್ವಾಜಋಷಿದೃಷ್ಟವಾದುದು. ಭರದ್ವಾಜರೆಂಬ ಋಷಿಯು ಬಹಳ ಪೂರ್ವಿಕರೂ ಪ್ರಸಿದ್ಧರೂ ಆದ ಋಷಿಗಳು. ಇವರ ಸಂಬಂಧವಾದ ಮಂತ್ರಗಳೂ ಯಜ್ಞವೂ ಬಹಳ ಶ್ರೇಷ್ಠವೂ ಪ್ರಾಚೀನವೂ ಆದವೆಂದು ಭಾವಿಸಲ್ಪಟ್ಟಿರುವುದು ಮತ್ತು ಇದನ್ನು **ಸಲೋಮಾ** ಎಂದೂ ಹೇಳುವರು. **ಸಲೋಮ** ಎಂದರೆ ರೋಮ (ಕೂದಲು) ಸಹಿತವಾದ ಶಿರಸ್ಸು ಎಂದರ್ಥವು. ಅವಯವಗಳಲ್ಲಿ ಶಿರಸ್ಸು ಹೇಗೆ ಶ್ರೇಷ್ಠವೂ ಪ್ರಧಾನವೂ ಆಗಿರುವುದೋ ಅದರಂತೆ ಭರದ್ವಾಜಋಷಿದೃಷ್ಟವಾದ ಮಂತ್ರವೂ ಕ್ರತುವೂ ಬಹಳ ಶ್ರೇಷ್ಠವೆಂದೂ ಪ್ರಾಚೀನವಾದುದೆಂದೂ ಪರಿಗಣಿಸಲ್ಪಟ್ಟಿರುವುದು.

**ಏಷ ಹ ವಾವ ಕ್ಷತ್ರಿಯಯಜ್ಞಃ ಸಮೃದ್ಧೋ ಯೋ ಬೃಹತ್ಪೃಷ್ಠಸ್ತಸ್ಮಾದ್ಯತ್ರ ಕ್ವ ಚ ಕ್ಷತ್ರಿಯೋ ಯಜೇತ ಬೃಹದೇವ ತತ್ರ ಪೃಷ್ಠಂ ಸ್ಯಾತ್ತತ್ಸಮೃದ್ಧಂ ॥**

ಇದಾನೀಂ ಬೃಹದ್ರಥಂತರಸಾಮೋಪೇತಪ್ರಕೃತಕ್ರತುಸಂಬಂಧಮುಪಜೀವ್ಯೈಕಸಾಮಕೇಽಪಿ ಕ್ಷತ್ರಿಯಯಜ್ಞೇ ಪೃಷ್ಠಸ್ತೋತ್ರಸ್ಯ ಬೃಹತ್ಸಾಮಸಾಧ್ಯತ್ವಂ ವಿಧತ್ತೇ—ಯಃ ಕ್ರತುರ್ದ್ವಿಸಾಮಕೋ ಬೃಹತ್ಪೃಷ್ಠೋಪೇತ ಏಷ ಏವ ಕ್ಷತ್ರಿಯಯಜ್ಞಃ ಸಮೃದ್ಧಃ ಸಂಪೂರ್ಣಃ । ಯಸ್ಮಾದೇವಂ ತಸ್ಮಾದ್ಯತ್ರ ಕ್ವ ಚೈಕಸಾಮಕೇನಾಪಿ ಕ್ರತುನಾ ಕ್ಷತ್ರಿಯೋ ಯಜೇತ ತತ್ರ ಪೃಷ್ಠಸ್ತೋತ್ರಂ ಬೃಹತ್ಸಾಮಯುಕ್ತಮೇವ ಕುರ್ಯಾತ್ । ತದೇತದನುಷ್ಠಾನಂ ಸಮೃದ್ಧಂ ಸಂಪೂರ್ಣಂ ಭವತಿ ॥

ಯಾವ ಯಜ್ಞವು ಬೃಹತ್, ಪೃಷ್ಠ ಎಂಬ ಎರಡು ಸಾಮಗಳಿಂದ ಕೂಡಿರುವುದೋ ಅದು ಕ್ಷತ್ರಿಯಯಜ್ಞವೆನಿಸುವುದು ಮತ್ತು ಅದು ಸಮೃದ್ಧವೂ ಸಂಪೂರ್ಣವೂ ಆಗಿರುವುದು. ಆದ್ದರಿಂದ ಕ್ಷತ್ರಿಯನಾದ ರಾಜನು ಯಾವುದಾದರೂ ಒಂದು ಯಾಗವನ್ನು ಮಾತ್ರವೇ ಮಾಡಿದರೂ ಆಗ ಬೃಹತ್‌ಸಾಮಯುಕ್ತವಾದ ಪೃಷ್ಠಸ್ತೋತ್ರದಿಂದಲೇ ಯಾಗ ಮಾಡಬೇಕು. ಹಾಗೆ ಮಾಡುವುದರಿಂದ ರಾಜನ ಯಜ್ಞವು ಸಂಪೂರ್ಣವೂ, ಸಮೃದ್ಧವೂ ಆಗುವುದು.

——

*English Transalation*

**(The Nivid Sukta of the Nishkevalya Shastra)**

The hymn tamu sntuhi yo abhibhutyoja (6,18) contains the characteristics abhi in the word abhibhuti. Its words ashalham (unconquerable ugram (strong, sahamanam (being strong,) contains characteristics of the Kshattra also. It consists of fifteen verses; for the number fifteen is strength, sharpness of senses, and power, the Kshattra is strength, the royal prince, is might (viryam). The hymn thus makes the king successfut in strength, royal power and might. It is a hymn of Bharadvaja. The Brihat Saman was seen by Bharadvaja also and is in direct relationship with the ancestral fire. The sacrifice of the Kshattriya which has the Brthat for its Prishtha (Stotra) becomes successful. Thence wherever a Kshattriya brings a sacrifice, there the Brihat Prishtha is to be employed, for this makes it (the sacrifice) complete.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ಷಟ್‌ತ್ರಿಂಶಾಧ್ಯಾಯಸ್ಯ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತಾರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.

# ಅಥ ಷಟ್ತ್ರಿಂಶಾಧ್ಯಾಯೇ ಚತುರ್ಥಃ ಖಂಡಃ

## ಮೂವತ್ತಾರನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು

———

[ಹೋತೃವರ್ಗದವರು ಎಂದರೆ ಹೋತೃವಿಗೆ ಸಹಾಯಕರಾದವರು ಪಠಿಸಬೇಕಾದ ಶಸ್ತ್ರಮಂತ್ರಗಳು ಇತ್ಯಾದಿ]

———

ಐಕಾಹಿಕಾ ಹೋತ್ರಾ ಏತಾ ವೈ ಶಾಂತಾಃ ಕ್ಲೃಪ್ತಾಃ ಪ್ರತಿಷ್ಠಿತಾ ಹೋತ್ರಾ ಯದೈಕಾಹಿಕಾಃ ಶಾಂತ್ಯೈ ಕ್ಲೃಪ್ತ್ಯೈ ಪ್ರತಿಷ್ಠಿತ್ಯಾ ಅಪ್ರಚ್ಯುತ್ಯೈ ತಾಃ ಸರ್ವರೂಪಾ ಭವಂತಿ ಸರ್ವಸಮೃದ್ಧಾಃ ಸರ್ವರೂಪತಾಯೈ ಸರ್ವಸಮೃದ್ಧ್ಯೈ ಸರ್ವರೂಪಾಭಿರ್ಹೋತ್ರಾಭಿಃ-ಸರ್ವಸಮೃದ್ಧಾಭಿಃ ಸರ್ವಾನ್ಕಾಮಾನವಾಪ್ನವಾಮೇತಿ ತಸ್ಮಾದ್ಯತ್ರ ಕ್ವ ಚೈಕಾಹಾ ಅಸರ್ವಸ್ತೋಮಾ ಅಸರ್ವಪೃಷ್ಠಾ ಐಕಾಹಿಕಾ ಏವ ತತ್ರ ಹೋತ್ರಾಃ ಸ್ಯುಸ್ತತ್ಸಮೃದ್ಧಂ ||

ಮಾಧ್ಯಂದಿನೇ ಸವನೇ ಹೋತುಃ ಶಸ್ತ್ರವಿಶೇಷಮಭಿಧಾಯ ಹೋತ್ರಕಾಣಾಂ ವಿಶೇಷಾಭಾವಂ ದರ್ಶಯತಿ—ಮೈತ್ರಾವರುಣಬ್ರಾಹ್ಮಣಾಚ್ಛಂಸ್ಯಚಾವಾಕಾನಾಂ ಯಾಃ ಕ್ರಿಯಾಸ್ತಾಃ ಹೋತ್ರಾಃ। ತಾಶ್ಚೈಕಾಹಿಕಾ ಏಕಾಹೇ ಪ್ರಕೃತಿರೂಪೇ ವಿಹಿತಾ ಏವಾತ್ರ ವಿಕೃತಿರೂಪೇಣ ಕ್ಷತ್ರಿಯಯಜ್ಞೇ ಕರ್ತವ್ಯಾಃ । ಏತಾಶ್ಚ ಹೋತ್ರಾಃ ಶಾಂತತ್ವಾದಿಗುಣ (ಣಿ) ಕಾಃ । ಶಾಂತಾದಿಶಬ್ದಾರ್ಥಾಃ ಪೂರ್ವವದ್ವ್ಯಾಖ್ಯೇಯಾಃ । ಏತಾಶ್ಚೈಕಾಹಿಕಾ ಹೋತ್ರಾಃ ಸರ್ವರೂಪಾಃ ಸರ್ವಸಮೃದ್ಧಾಶ್ಚ ಭವಂತಿ । ತತ್ತದ್ವಿಕೃತಿಷು ಹೋತ್ರಕಾಣಾಂ ಯೇ ವಿಶೇಷಾ ಉಕ್ತಾಸ್ತದ್ರೂಪತ್ವಂ ಸರ್ವರೂಪತ್ವಂ ತತ್ಫಲಸಮೃದ್ಧಿಃ ಸರ್ವಸಮೃದ್ಧಿಃ । ಏತಚ್ಚೋಭಯಮಿಂದ್ರಾಭಿಷ್ಟವನೇನ ಕ್ಷತ್ರಿಯಪ್ರತಿಪಾದನಸಾಮರ್ಥ್ಯಾತ್ಸಂಪದ್ಯತೇ । ಅತಃ ಸರ್ವರೂಪತಾಯೈ ಸರ್ವಲೋಕಪ್ರಾಪ್ತ್ಯರ್ಥಂ ತತ್ರ ಚ ಸರ್ವಭೋಗಸಮೃದ್ಧ್ಯರ್ಥಮುಕ್ತಾ ಹೋತ್ರಕಾಃ ಸಂಪದ್ಯಂತೇ । ತತಃ ಕ್ಷತ್ರಿಯಾಃ ಪುರುಷಾಃ ಸರ್ವರೂಪಾಭಿಃ ಸರ್ವಸಮೃದ್ಧಾಭಿರೈಕಾಹಿಕಾಭಿರ್ಹೋತ್ರಾಭಿಃ ಸರ್ವಾನ್ಕಾಮಾನವಾಪ್ನವಾಮೇತ್ಯಭಿಪ್ರಾಯೇಣೈಕಾಹಿಕಹೋತ್ರಾನುಷ್ಠಾನಂ ಕುರ್ಯುಃ । ಏಕಾಹಾಶ್ಚ ದ್ವಿವಿಧಾಃ ಸರ್ವಸ್ತೋಮಸರ್ವಪೃಷ್ಠಾಸ್ತದ್ವಿಪರೀತಾಶ್ಚ ಪೃಷ್ಠ್ಯೇ ಷಡಹೇ ಪ್ರತಿಪಾದಿತಾಃ । ತ್ರಿವೃತ್ಪಂಚದಶಸಪ್ತದಶೈಕವಿಂಶತ್ರಿಣ (ನ) ವತ್ರಯಸ್ತ್ರಿಂಶರೂಪಾಃ ಷಟ್‌ಸಂಖ್ಯಾಕಾಃ ಸರ್ವೇ ಸ್ತೋಮಾಃ । ತಸ್ಮಿನ್ನೇವ ಪೃಷ್ಠ್ಯಷಡಹೇ ರಥಂತರಬೃಹದ್ವೈರೂಪವೈರಾಜಶಾಕ್ವರರೈವತಾನಿ ಷಟ್ಸಂಖ್ಯಾಕಾನಿ ಸರ್ವಪೃಷ್ಠಾನಿ ।

**ತೈಃ ಸರ್ವೈಃ ಸ್ತೋಮೈಃ ಪೃಷ್ಠೈಶ್ಚ ಯುಕ್ತೇಭ್ಯ ಏಕಾಹೇಭ್ಯೋ ವ್ಯತಿರಿಕ್ತಾಃ ಕತಿಪಯಸ್ತೋಮ-ಪೃಷ್ಠಯುಕ್ತಾ ಏಕಾಹಾ ಅಸರ್ವಸ್ತೋಮಾ ಅಸರ್ವಪೃಷ್ಠಾಶ್ಚ । ಯಸ್ಮಾದೈಕಾಹಿಕಾ ಹೋತ್ರಾಃ ಪೂರ್ವೋಕ್ತರೀತ್ಯಾ ಪ್ರಶಸ್ತಾಸ್ತಸ್ಮಾದ್ಯತ್ರ ಕ್ವ ವಾಽಸರ್ವಸ್ತೋಮಾ ಅಸರ್ವಪೃಷ್ಠಾಶ್ಚೈಕಾಹಾ ಅನುಷ್ಠೀಯಂತೇ ತತ್ರ ಸರ್ವತ್ರೈಕಾಹಿಕಾ ಏವ ಹೋತ್ರಾಃ ಸ್ಯುಃ । ನ ತು ನೂತನೋ ವಿಶೇಷಃ ಕಶ್ಚಿದಸ್ತಿ । ತತ್ತಾದೃಶಂ ಕರ್ಮ ಸಮೃದ್ಧಫಲೇನ ಸಂಪೂರ್ಣಮ್ ॥**

ಮಾಧ್ಯಂದಿನಸವನದಲ್ಲಿ ಹೋತೃವು ಪಠಿಸುವ ಶಸ್ತ್ರಮಂತ್ರಗಳಲ್ಲಿ ವಿಶೇಷವಿಷಯಗಳನ್ನು ವಿವರಿಸಿ ಈಗ ಹೋತ್ರಕರು (ಹೋತೃವಿನ ಸಹಾಯಕರು) ಪಠಿಸುವ ಮಂತ್ರಗಳ ವಿಷಯದಲ್ಲಿ ವಿಶೇಷಸಂಗತಿಗಳನ್ನು ತಿಳಿರುವರು—ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ ಅಚ್ಛಾವಾಕ ಎಂಬ ಋತ್ವಿಕ್ಕುಗಳು ಹೋತೃವಿನ ಸಹಾಯಕರಾಗಿ ಹೋತೃವಿನ ಕರ್ತವ್ಯವಾದ ಕೆಲವು ಮಂತ್ರಗಳನ್ನೇ ಪಠಿಸುವರು. ರಾಜನು ಮಾಡುವ ಯಜ್ಞದಲ್ಲಿ ಏಕಾಹವೆಂದು (ಒಂದು ದಿನದಲ್ಲಿ ಮಾಡಿಮುಗಿಸಬೇಕಾದ) ಕರ್ಮದಲ್ಲಿ ಪ್ರಕೃತಿರೂಪವಾಗಿ ಇರುವ ಕರ್ಮಗಳನ್ನು ಕ್ಷತ್ರಿಯನು ಮಾಡುವ ಯಜ್ಞದಲ್ಲಿ ವಿಕೃತಿರೂಪವಾಗಿ (ಕೆಲವು ವ್ಯತ್ಯಾಸಗಳೊಡನೆ) ಮಾಡಬೇಕಾಗಿರುವುದು. ಮೈತ್ರಾವರುಣಾದಿಗಳು ಪಠಿಸುವ ಮಂತ್ರಗಳು ಶಾಂತತ್ವಾದಿಗುಣಗಳಿಂದ ಕೂಡಿರುವವು. ಐಕಾಹಿಕಕರ್ಮಗಳಲ್ಲಿ ಪಠಿಸಲ್ಪಡಬೇಕಾದ ಮಂತ್ರಗಳು ಸರ್ವರೂಪವೂ ಸರ್ವಸಮೃದ್ಧಿಯೂ ಆಗಿರುವವು. ಈ ವಿಧವಾದ ಪ್ರಕೃತಿರೂಪವೂ ಐಕಾಹಿಕವೂ ಆದ ಕ್ರಿಯಾಕಲಾಪಗಳು ಹೋತೃವರ್ಗದವರಿಂದ ವಿಕೃತಿರೂಪದಲ್ಲಿ ನೆರವೇರಿಸಲ್ಪಟ್ಟರೂ ಅವು ಪ್ರಕೃತಿಯಂತೆಯೇ ಸರ್ವರೂಪವುಳ್ಳದ್ದೂ ಸರ್ವಸಮೃದ್ಧಿಯನ್ನುಂಟುಮಾಡುವವೂ ಆಗುವವು. ಈ ಗುಣಗಳೆಲ್ಲವೂ ಇಂದ್ರನನ್ನು ಸ್ತುತಿಸುವುದರಿಂದಲೂ ಈ ಸ್ತೋತ್ರಕ್ಕೆ ಕ್ಷತ್ರಿಯಪ್ರತಿಪಾದನಾಸಾಮರ್ಥ್ಯವಿರುವುದರಿಂದಲೂ ಲಭಿಸುವವು. ಆದ್ದರಿಂದ ಸಂಪೂರ್ಣತ್ವ ಮತ್ತು ಸರ್ವಲೋಕಪ್ರಾಪ್ತಿ ಮತ್ತು ಸರ್ವಭೋಗವೃದ್ಧಿ ಮುಂತಾದುವುಗಳಿಗಾಗಿಯೂ ಸಮಸ್ತ ಇಷ್ಟಾರ್ಥಸಿದ್ಧಿಗಾಗಿಯೂ ಹೋತೃವರ್ಗದವರು ರಾಜನಯಜ್ಞದಲ್ಲಿ ಐಕಾಹಿಕಾನುಷ್ಠಾನುವನ್ನು (ಒಂದು ದಿನದಲ್ಲಿ ಮಾಡಿಮುಗಿಸುವ ಕ್ರಮವನ್ನು) ಮಾಡಿಮುಗಿಸಬೇಕು. ಈ ಏಕಾಹಗಳು ಎರಡು ವಿಧವು. ಸರ್ವಸ್ತೋಮಸರ್ವಪೃಷ್ಠಗಳೆಂದೂ, ಅವುಗಳಿಂದ ಭಿನ್ನವಾದವೆಂದೂ ಏರಡು ವಿಧವು. ಇವುಗಳನ್ನು ಷಡಹೇ (ಆರು ದಿನದಲ್ಲಿ ಮಾಡಿಮುಗಿಸುವ ಯಜ್ಞ) ಎಂಬ ಮತ್ತು ಪೃಷ್ಠ್ಯ ಎಂಬ ಯಜ್ಞವಿಶೇಷಗಳಲ್ಲಿ ಪ್ರಸ್ತಾಪಿಸಲಾಗಿದೆ. ತ್ರಿವೃತ್, ಪಂಚದಶ, ಸಪ್ತದಶ, ಏಕವಿಂಶ, ತ್ರಿಣವ, ತ್ರಯಸ್ತ್ರಿಂಶ ಎಂದು ಆರು ವಿಧ ಸ್ತೋಮಗಳು. ಪೃಷ್ಠ್ಯಷಡಹದಲ್ಲಿ ರಥಂತರ, ಬೃಹತ್ ವೈರೂಪ, ವೈರಾಜ, ಶಾಕ್ವರ, ರೈವತ ಎಂದು ಆರು ಸರ್ವಪೃಷ್ಠಸ್ತೋಮಗಳಿರುವವು. ಈ ಸ್ತೋಮಗಳಿಂದಲೂ ಪೃಷ್ಠ (ಶಸ್ತ್ರ) ಗಳಿಂದಲೂ ಕೂಡಿರುವ ಏಕಾಹಕರ್ಮಗಳಿಂದ ಬೇರೆಯಾದ ಕೆಲವು ಸ್ತೋಮಗಳೂ, ಪೃಷ್ಠಗಳೂ ಇರುವವು. ಅವುಗಳಿಗೆ ಅಸರ್ವಸ್ತೋಮ ಮತ್ತು ಅಸರ್ವಪೃಷ್ಠಗಳೆಂದು ಹೆಸರು. ಆದರೂ ಇವಗಳನ್ನು ಐಕಾಹಿಕಕರ್ಮಗಳಂತೆ ಪ್ರಶಸ್ತವಾದವುಗಳಾದ್ದರಿಂದ ಇವುಗಳನ್ನು ಮಾಡಿದರೂ ಎಂದರೆ ಅಸರ್ವಸ್ತೋಮಗಳನ್ನು ಅಸರ್ವಪೃಷ್ಠಗಳನ್ನೂ ಮಾಡಿದರೂ ಐಕಾಹಿಕ ಕರ್ಮಗಳಂತೆ ಫಲಪ್ರದಗಳೇ ಆಗುವವು. ಆ ಕರ್ಮವು ಫಲಪ್ರದವೇ ಆಗುವುದು.

**ಉಕ್ಥ್ಯ ಏವಾಯಂ ಪಂಚದಶಃ ಸ್ಯಾದಿತ್ಯಾಹುರೋಜೋ ವಾ ಇಂದ್ರಿಯಂ ವೀರ್ಯಂ ಪಂಚದಶ ಓಜಃ ಕ್ಷತ್ರಂ ವೀರ್ಯಂ ರಾಜನ್ಯ-ಸ್ತದೇನಮೋಜಸಾ ಕ್ಷತ್ರೇಣ ವೀರ್ಯೇಣ ಸಮರ್ಧಯತಿ ॥**

ಅಥ ಕ್ಷತ್ರಿಯಯಜ್ಞಸ್ಯ ಸಂಸ್ಥಾವಿಶೇಷೋ ನಿರ್ಣೇತವ್ಯಃ । ತದರ್ಥಮಾದೌ ಕೇಷಾಂಚಿತ್ಪಕ್ಷಮುಪನ್ಯಸ್ಯತಿ — ಅಯಂ ಕ್ಷತ್ರಿಯಯಜ್ಞ ಉಕ್ಥ್ಯಸಂಸ್ಥ ಏವ ಸರ್ವೇಷ್ವಪಿ ಸ್ತೋತ್ರೇಷು ಪಂಚದಶಸ್ತೋಮ ಏವ ಸ್ಯಾದಿತ್ಯೇವಮೇಕೇ ಬ್ರಹ್ಮವಾದಿನ ಆಹುಃ ಓಜೋ ವಾ ಇತ್ಯಾದಿಕಂ ಪೂರ್ವವದ್ವ್ಯಾಖ್ಯೇಯಮ್ ।

ಕ್ಷತ್ರಿಯನು ಮಾಡುವ ಯಜ್ಞವು ಯಾವ ಸಂಸ್ಥೆಗೆ (ಯಾವ ವಿಧವಾದ ಯಜ್ಞಕ್ಕೆ) ಸೇರಿದ್ದೆಂಬ ವಿಷಯದಲ್ಲಿ ನಿರ್ಣಯಿಸುವಾಗ ಕೆಲವರು ಪಡುವ ಅಭಿಪ್ರಾಯವನ್ನು ತಿಳಿಸುವರು. ಕ್ಷತ್ರಿಯನು ಮಾಡುವ ಯಜ್ಞವು ಉಕ್ಥ್ಯ ಎಂಬ ಸಂಸ್ಥೆಗೆ (ವಿಧಕ್ಕೆ) ಸೇರಿದುದು. ಏಕೆಂದರೆ ಕ್ಷತ್ರಿಯನ ಯಜ್ಞಗಳೆಲ್ಲ ಸಲಿಸುವ ಸ್ತೋತ್ರಗಳಲ್ಲಿ ಪಂಚದಶಸ್ತೋಮವೆ ಇರುವುದು. ಏಕೆಂದರೆ ಪಂಚದಶಸ್ತೋಮವು, ಕ್ಷತ್ರಿಯಗುಣಗಳಾದ ಓಜಸ್ಸು, ವೀರ್ಯ ಕ್ಷತ್ರ ಇಂದ್ರಿಯ ಮೊದಲಾದ ಗುಣಗಳ ಸಂಕೇತವಾಗಿರುವುದು ಮತ್ತು ಆ ಗುಣಗಳನ್ನು ಯಜ್ಞವಮಾಡುವ ಕ್ಷತ್ರಿಯ ಯಜಮಾನನಲ್ಲಿ ಸಂಪೃದ್ಧಿಯನ್ನುಂಟು ಮಾಡುವುದು.

ತಸ್ಯ ತ್ರಿಂಶತ್ಸ್ತುತಶಸ್ತ್ರಾಣಿ ಭವಂತಿ ತ್ರಿಂಶದಕ್ಷರಾ ವೈ ವಿರಾಡ್ವಿರಾಳನ್ನಾದ್ಯಂ ವಿರಾಜ್ಯೇವೈನಂ ತದನ್ನಾದ್ಯೇ ಪ್ರತಿಷ್ಠಾಪಯತಿ ತಸ್ಮಾತ್ತದುಕ್ಥ್ಯಃ ಪಂಚದಶಃ ಸ್ಯಾದಿತ್ಯಾಹುಃ

ಉಕ್ಥ್ಯೇ ಸ್ತೋತ್ರಶಸ್ತ್ರಸಂಖ್ಯಾಂ ಪ್ರಶಂಸತಿ — ತಸ್ಯೋಕ್ಥ್ಯಸ್ಯ ಪಂಚದಶ ಸ್ತೋತ್ರಾಣಿ ಪಂಚದಶ ಶಸ್ತ್ರಾಣೀತ್ಯೇವಂ ತ್ರಿಂಶತ್ಸಂಖ್ಯಾ । ತಥಾ ಸತ್ಯಕ್ಷರದ್ವಾರಾ ವಿರಾಡ್ರೂಪತ್ವಾದ್ವಿರಾಜಶ್ಚಾನ್ನಸಾಧನತ್ವಾದೇನಂ ಯಜಮಾನಂ ವಿರಾಟ್ಸಾಮ್ಯೇನಾನ್ನಾದ್ಯೇ ಪ್ರತಿಷ್ಠಾಪಯತಿ । ತಸ್ಮಾದೇವಂ ಪಂಚದಶಸ್ತೋತ್ರಶಸ್ತ್ರತ್ವಾತ್ತದುಕ್ಥ್ಯಃ ಸ ಕ್ಷತ್ರಿಯಯಜ್ಞ ಉಕ್ಥ್ಯಸಂಸ್ಥಃ ಪಂಚದಶಸ್ತೋಮಯುಕ್ತಃ ಸ್ಯಾದಿತ್ಯೇವಂ ಕೇಚಿದಾಹುಃ ॥

ಉಕ್ಥ್ಯ ಎಂಬ ಯಜ್ಞದಲ್ಲಿ ಪಠಿಸಲ್ಪಡಬೇಕಾದ ಸ್ತೋತ್ರ ಮತ್ತು ಶಸ್ತ್ರಗಳ ಸಂಖ್ಯೆಯನ್ನು ತಿಳಿಸುವರು. ಈ ಉಕ್ಥ್ಯವೆಂಬ ಯಜ ದಲ್ಲಿ ಹದಿನೈದು ಸ್ತೋತ್ರಗಳೂ, ಹದಿನೈದು ಶಸ್ತ್ರಗಳೂ ಒಟ್ಟು ಮೂವತ್ತು ಇರುವವು. ವಿರಾಟ್ ಛಂದಸ್ಸಿನ ಮಂತ್ರದಲ್ಲಿ ಮೂವತ್ತಕ್ಷರಗಳಿರುವವು. ಆದುದರಿಂದ ಈ ಸ್ತುತಶಸ್ತ್ರಗಳು ವಿರಾಟ್‌ಛಂದಸ್ಸಿನ ಸಂಕೇತವಾಗಿರುವವು. ವಿರಾಟ್ ಛಂದಸ್ಸು ಅನ್ನಾದ್ಯಾಹಾರವನ್ನು ಒದಗಿಸಿಕೊಡುವ ಸ್ವಭಾವವುಳ್ಳದ್ದಾಗಿರುವುದು. ಇಂತಹ ಸ್ತುತಶಸ್ತ್ರಗಳಿಂದ ಕೂಡಿದ ಉಕ್ಥ್ಯಯಾಗವನ್ನು ಮಾಡುವುದರಿಂದ ಕ್ಷತ್ರಿಯ ಯಜಮಾನನಿಗೆ ಅನ್ನಾದ್ಯಾಹಾರಗಳ ಸಮೃದ್ಧಿಯುಂಟಾಗುವುದು. ಆದ್ದರಿಂದ ಪಂಚದಶಸ್ತೋತ್ರವೂ ಶಸ್ತ್ರವೂ ಸಹಿತವಾದ ಈ ಉಕ್ಥ್ಯಯಾಗವು ಕ್ಷತ್ರಿಯಸಂಬಂಧವಾದುದೆಂದು ಕೆಲವರು ಹೇಳುವರು.

ಜ್ಯೋತಿಷ್ಟೋಮ ಏವಾಗ್ನಿಷ್ಟೋಮಃ ಸ್ಯಾತ್ ॥

ಅಥ ಸ್ವಪಕ್ಷಮಾಹ — ಯೋಽಯಂ ಕ್ಷತ್ರಿಯಾಣಾಂ ಜ್ಯೋತಿಷ್ಟೋಮಃ ಸೋಽಗ್ನಿಷ್ಟೋಮಸಂಸ್ಥ ಏವ ಸ್ಯಾತ್ ॥

ಮೇಲೆ ಕೆಲವರ ಅಭಿಪ್ರಾಯವನ್ನು ತಿಳಿಸಿ ಈ ಗ್ರಂಥಕರ್ತರು ತಮ್ಮ ಸ್ವಂತ ಅಭಿಪ್ರಾಯವನ್ನು ತಿಳಿಸುವರು— ಜ್ಯೋತಿಷ್ಟೋಮವೆಂಬ ಹೆಸರಿನಿಂದ ಕ್ಷತ್ರಿಯರು ಮಾಡುವ ಯಜ್ಞವೇ ಅಗ್ನಿಷ್ಟೋಮವೇ ಆಗಿರುವುದು. ಬೇರೆಯಲ್ಲ ಎಂದರೆ ಅಗ್ನಿಷ್ಟೋಮಕ್ಕೆ ಜ್ಯೋತಿಷ್ಟೋಮವೆಂಬ ಹೆಸರೂ ಇರುವುದು. ಅಗ್ನಿಷ್ಟೋಮ ಜ್ಯೋತಿಷ್ಟೋಮ ಎಂಬ ಎರಡು ಹೆಸರುಗಳೂ ಅಗ್ನಿಷ್ಟೋಮವೆಂಬ ಒಂದೇ ಯಾಗವನ್ನು ಸೂಚಿಸುವವು.

ಬ್ರಹ್ಮ ವೈ ಸ್ತೋಮಾನಾಂ ತ್ರಿವೃತ್ಕ್ಷತ್ರಂ ಪಂಚದಶೋ ಬ್ರಹ್ಮ ಖಲು ವೈ ಕ್ಷತ್ರಾತ್ಪೂರ್ವಂ ಬ್ರಹ್ಮ ಪುರಸ್ತಾನ್ಮ ಉಗ್ರಂ ರಾಷ್ಟ್ರಮವ್ಯಥ್ಯಮ ಸದಿತಿ ವಿಶಃ ಸಪ್ತದಶಃ ಶೌದ್ರೋ ವರ್ಣ ಏಕವಿಂಶೋ ವಿಶಂ ಚೈವಾಸ್ಮೈ ತಚ್ಛೌದ್ರಂ ಚ ವರ್ಣಮನುವರ್ತ್ಮಾನೌ ಕುರ್ವಂತ್ಯಥೋ ತೇಜೋ ವೈ ಸ್ತೋಮಾನಾಂ ತ್ರಿವೃದ್ವೀರ್ಯಂ ಪಂಚದಶಃ ಪ್ರಜಾತಿಃ ಸಪ್ತದಶಃ ಪ್ರತಿಷ್ಠೈಕವಿಂಶಸ್ತದೇನಂ ತೇಜಸಾ ವೀರ್ಯೇಣ ಪ್ರಜಾತ್ಯಾ ಪ್ರತಿಷ್ಠ ಯಾಽನ್ತತಃ ಸಮರ್ಧಯತಿ ತಸ್ಮಾಜ್ಜ್ಯೋತಿಷ್ಟೋಮಃ ಸ್ಯಾತ್ ॥

ತಸ್ಮಿನ್ನಗ್ನಿಷ್ಟೋಮೇ ಯೇ ತ್ರಿವೃದಾದಯಶ್ಚತ್ವಾರಃ ಸ್ತೋಮಾಸ್ತಾನ್ಬ್ರಾಹ್ಮಣಾದಿವರ್ಣ-ಚತುಷ್ಟಯರೂಪೇಣ ತೇಜಆದಿಗುಣಚತುಷ್ಟಯರೂಪೇಣ ಚ ಪ್ರಶಂಸತಿ ಪ್ರಜಾಪತೇರ್ಮುಖಬಾಹು-ಮಧ್ಯದೇಹಪಾದೇಭ್ಯ ಉತ್ಪತ್ತಿಸಾಮ್ಯಾತ್ತ್ರಿವೃದಾದಿಸ್ತೋಮಾನಾಂ ಬ್ರಾಹ್ಮಣಾದಿವರ್ಣಚತುಷ್ಟಯ-ರೂಪತ್ವಮ್। ತತ್ರ ಬ್ರಾಹ್ಮಣಪೂರ್ವಕಂ ರಾಷ್ಟ್ರಂ ಮದೀಯಮುಗ್ರಮವ್ಯಥನೀಯಂ ವಾಽಸ್ತ್ವಿತ್ಯಭಿ-ಪ್ರಾಯೇಣ ಕ್ಷತ್ರಿಯಸ್ಯ ತ್ರಿವೃತ್ಪಂಚದಶೌ ಕ್ರಮೇಣಾನುಷ್ಠೇಯೌ ಸಪ್ತದಶೈಕವಿಂಶಯೋರನು-ಷ್ಠಾನಂ ವೈಶ್ಯಶೂದ್ರೌ ವರ್ಣೌ ಕ್ಷತ್ರಿಯಸ್ಯಾನುಗಾಮಿನೌ ಕುರ್ವಂತಿ। ತ್ರಿವೃದಾದಿಸ್ತೋಮಾನಾಂ ತೇಜೋವೀರ್ಯಪ್ರಜನನಪ್ರತಿಷ್ಠಾಸಾಧನತ್ವಾತ್ತತ್ತದ್ರೂಪತ್ವಮ್ । ತೇಷಾಮನುಷ್ಠಾನೇನೈನಂ ಕ್ಷತ್ರಿಯಮಂತತೋ ಯಜ್ಞಸ್ಯಾಂತೇ ತೇಜಆದಿಭಿಃ ಸಮೃದ್ಧಂ ಕರೋತಿ। ತಸ್ಮಾತ್ಕ್ಷತ್ರಿಯಸ್ಯ ತ್ರಿವೃದಾದಿಸ್ತೋಮಚತುಷ್ಟಯವಿಶಿಷ್ಟೋ ಜ್ಯೋತಿಷ್ಟೋಮಃ ಸ್ಯಾತ್ ॥

ಅಗ್ನಿಷ್ಟೋಮಯಾಗದಲ್ಲಿ ತ್ರಿವೃತ್ ಮೊದಲಾದ ನಾಲ್ಕು ಸ್ತೋಮಗಳಿರುವವು. ಈ ನಾಲ್ಕು ಸ್ತೋಮಗಳೂ ಬ್ರಾಹ್ಮಣಾದಿ ನಾಲ್ಕು ವರ್ಣಗಳ ಸಂಕೇತವಾಗಿರುವವು. ಮತ್ತು ವರ್ಣಚತುಷ್ಟಯದ ತೇಜಸ್ಸು ಮೊದಲಾದ ನಾಲ್ಕು ವಿಧ ಗುಣಗಳೂ ಇರುವವು ಎಂಬ ಕಾರಣದಿಂದ ಅಗ್ನಿಷ್ಟೋಮವನ್ನು ಪ್ರಶಂಸೆಮಾಡುವರು. ತ್ರಿವೃದಾದಿ ನಾಲ್ಕು ವರ್ಣಗಳೂ ಪ್ರಜಾಪತಿಯ ಮುಖ, ಬಾಹು ಮಧ್ಯಪ್ರದೇಶ, ಪಾದ ಎಂಬ ಅಂಗಗಳಿಂದ ಉತ್ಪನ್ನವಾದದ್ದರಿಂದ ತ್ರಿವೃದಾದಿಸ್ತೋಮಗಳಿಗೆ ಬ್ರಾಹ್ಮಣಾದಿವರ್ಣಚತುಷ್ಟಯ ಸ್ವರೂಪವುಂಟಾಯಿತು. ಇವುಗಳಲ್ಲಿ ಬ್ರಾಹ್ಮಣಪೂರ್ವಕವಾದ ರಾಷ್ಟ್ರವು ದುಃಖರಹಿತವೂ ಸಮೃದ್ಧಿಯೂ ಆಗುವುದಕ್ಕಾಗಿ ಬ್ರಾಹ್ಮಣಋತ್ವಿಜರಿಂದ ಕ್ಷತ್ರಿಯ ಯಜಮಾನನಿಗೆ ತ್ರಿವೃತ್ ಪಂಚದಶಸ್ತೋಮಗಳ ಮೂಲಕ ಅನುಷ್ಠಾನಮಾಡಲ್ಪಡುವುದು. ಎಂದರೆ ಬ್ರಾಹ್ಮಣರಾದ ಋತ್ವಿಜರು ಬ್ರಾಹ್ಮಣಕ್ಷತ್ರಿಯರಿಗೆ ಯೋಗ್ಯವಾದ ತ್ರಿವೃತ್‌ಪಂಚ ದಶಸ್ತೋಮಗಳನ್ನು ಪಠಿಸಿ ಕ್ಷತ್ರಿಯಯಜಮಾನನಿಗೆ ಯಜ್ಞಾದಿಗಳನ್ನು ಮಾಡಿಸುವರು. ಆದರಿಂದ ಬ್ರಾಹ್ಮಣ ಜಾತಿ

ಸಹಿತವಾದ ರಾಷ್ಟ್ರಕ್ಕೆ ದುಃಖರಾಹಿತ್ಯವೂ, ನಿರ್ಭೀತಿಯೂ, ಸಮೃದ್ಧಿಯೂ ಉಂಟಾಗುವುದು. ಅದರಂತೆ ವೈಶ್ಯ ಶೂದ್ರರಿಗೂ ಸಪ್ತದಶ ಏಕವಿಂಶ ಎಂಬ ಸ್ತೋಮಗಳ ಮೂಲಕ ಬ್ರಾಹ್ಮಣರ ಮೂಲಕ ಅನುಷ್ಠಾನಮಾಡಲ್ಪಟ್ಟ ಕರ್ಮಗಳು ವೈಶ್ಯ ಶೂದ್ರರಿಗೂ ಸಮೃದ್ಧಿಯನ್ನುಂಟುಮಾಡುವವು. ಎಂದರೆ ತ್ರಿವೃತ್‌ಸ್ತೋಮವು ಬ್ರಾಹ್ಮಣರಿಗೆ ತೇಜಸ್ಸನ್ನೂ ಪಂಚದಶ ಸ್ತೋಮವು ಕ್ಷತ್ರಿಯರಿಗೆ ವೀರ್ಯಾದಿಗಳನ್ನೂ. ಸಪ್ತದಶಸ್ತೋಮವು ವೈಶ್ಯರಿಗೆ ಪ್ರಜನನ ಮೊದಲಾದ ಸಂತತಿಯನ್ನೂ ಏಕವಿಂಶಸ್ತೋಮವು ಶೂದ್ರಾದಿಗಳಿಗೆ ಪ್ರತಿಷ್ಠೆ ಅಥವಾ ಗಣ್ಯತೆಯನ್ನು ಉಂಟುಮಾಡುವವು. ಆದ್ದರಿಂದ ಕ್ಷತ್ರಿಯ ನಾದವನು ತ್ರಿವೃತ್ ಮೊದಲಾದ ನಾಲ್ಕು ಸ್ತೋಮಗಳುಳ್ಳ ಜ್ಯೋತಿಷ್ಟೋಮ ಯಾಗವನ್ನು ಅನುಷ್ಠಾನಮಾಡಬೇಕು.

ತಸ್ಯ ಚತುರ್ವಿಂಶತಿಃ ಸ್ತುತಶಸ್ತ್ರಾಣಿ ಭವಂತಿ ಚತುರ್ವಿಂಶತ್ಯರ್ಧ ಮಾಸೋ ವೈ ಸಂವತ್ಸರಃ ಸಂವತ್ಸರೇ ಕೃತ್ಸ್ನಮನ್ನಾದ್ಯಂ ಕೃತ್ಸ್ನ ಏವೈನಂ ತದನ್ನಾದ್ಯೇ ಪ್ರತಿಷ್ಠಾಪಯತಿ ತಸ್ಮಾಜ್ಜ್ಯೋತಿಷ್ಟೋಮ ಏವಾಗ್ನಿಷ್ಟೋಮಃ ಸ್ಯಾದಗ್ನಿಷ್ಟೋಮಃ ಸ್ಯಾತ್॥

ಅಗ್ನಿಷ್ಟೋಮಸಂಸ್ಥೇ ತಸ್ಮಿನ್‌ಸ್ತೋತ್ರಶಸ್ತ್ರಸಂಖ್ಯಾಂ ಪ್ರಶಂಸತಿ — ತಸ್ಯಾಗ್ನಿಷ್ಟೋಮ-ಸಂಸ್ಥಸ್ಯ ಜ್ಯೋತಿಷ್ಟೋಮಸ್ಯ ದ್ವಾದಶ ಸ್ತೋತ್ರಾಣಿ ದ್ವಾದಶ ಶಸ್ತ್ರಾಣ್ಯೇವಂ ಚತುರ್ವಿಂಶತಿಸಂಖ್ಯಾ । ತತೋಽರ್ಧಮಾಸದ್ವಾರಾ ಸಂವತ್ಸರತ್ವಮ್ । ಸಂವತ್ಸರೇ ಚ ವ್ರೀಹ್ಯಾದಿಃ ಸಂಸ್ಥಾನಾಂ ಪಚ್ಯಮಾನತ್ವಾದ್ಯಂ ಕೃತ್ಸ್ನಂ ಸಂಪೂರ್ಣಂ ಭವತಿ । ತೇನೈನಂ ಯಜಮಾನಂ ಸಂಪೂರ್ಣಂ ಏವಾನ್ನಾದ್ಯೇ ಪ್ರತಿಷ್ಠಾ-ಪಯತಿ । ತಸ್ಮಾತ್ ಕ್ಷತ್ರಿಯಸ್ಯ ಜ್ಯೋತಿಷ್ಟೋಮೋಽಗ್ನಿಷ್ಟೋಮಸಂಸ್ಥ ಏವ ಸ್ಯಾತ್ । ನ ತೂಕ್ಥ-ಸಂಸ್ಥ ಇತಿ । ಅಭ್ಯಾಸೋಽಧ್ಯಾಯ ಸಮಾಪ್ತ್ಯರ್ಥಃ ॥

ಅಗ್ನಿಷ್ಟೋಮದಲ್ಲಿ (ಜ್ಯೋತಿಷ್ಟೋಮದಲ್ಲಿ) ಪಠಿಸಲ್ಪಡುವ ಸ್ತೋತ್ರ ಮತ್ತು ಶಸ್ತ್ರಗಳ ಸಂಖ್ಯೆಯನ್ನು ತಿಳಿಸುವರು. ಅಗ್ನಿಷ್ಟೋಮ ಸಂಸ್ಥೆಯೆಂದು ಹೇಳಲ್ಪಡುವ ಜ್ಯೋತಿಷ್ಟೋಮ ಯಾಗದಲ್ಲಿ ಹನ್ನೆರಡು ಸ್ತೋತ್ರಗಳೂ (ಸಾಮಗಾನಗಳೂ) ಹನ್ನೆರಡು ಶಸ್ತ್ರಗಳೂ (ಋಗ್ವೇದಸೂಕ್ತಗಳೂ) ಒಟ್ಟು ಇಪ್ಪತ್ತನಾಲ್ಕು ಸ್ತುತಶಸ್ತ್ರಗಳಿರುವವು. ಒಂದು ಸಂವತ್ಸರವಲ್ಲಿಯೂ ಇಪ್ಪತ್ತನಾಲ್ಕು ಅರ್ಧಮಾಸಗಳಿರುವವು. ಒಂದು ಸಂವತ್ಸರದಲ್ಲಿ ಈ ಎರಡು (ಅಗ್ನಿಷ್ಟೋಮ ಮತ್ತು ಜ್ಯೋತಿಷ್ಟೋಮ) ಯಜ್ಞಗಳಲ್ಲಿ ಇಪ್ಪತ್ತನಾಲ್ಕು ಸ್ತುತಶಸ್ತ್ರಗಳು ಪಠಿಸಲ್ಪಡುವುದರಿಂದ ಈ ಯಾಗಾದಿಗಳು ಅನ್ನಾದ್ಯ (ಆಹಾರ) ಪ್ರದವೂ ಸಂಪೂರ್ಣಫಲಪ್ರದವೂ ಎಂದರೆ ಸಮೃದ್ಧಿಯನ್ನುಂಟುಮಾಡುವುದೂ ಆಗುವವು. ಆದ್ದರಿಂದ ಈ ಜ್ಯೋತಿಷ್ಟೋಮವು ಕ್ಷತ್ರಿಯ ಯಜಮಾನನಿಗೆ ಅನ್ನಾದ್ಯಾಹಾರವನ್ನೂ ಸಮೃದ್ಧಿಯನ್ನೂ ಒದಗಿಸಿಕೊಟ್ಟು ಅವನು ತನ್ನ ರಾಜ್ಯದಲ್ಲಿ ಸ್ಥಿರವಾಗಿಯೂ ಗಣ್ಯನಾಗಿಯೂ ಇರುವಂತೆ ಮಾಡುವುದು. ಆದ್ದರಿಂದ ಕ್ಷತ್ರಿಯನಾದವನು ಅಗ್ನಿಷ್ಟೋಮರೂಪವಾದ ಜ್ಯೋತಿಷ್ಟೋಮವನ್ನೇ ಮಾಡಬೇಕು. ಉಕ್ಥ್ಯ ಮೊದಲಾದ ಯಾಗಗಳನ್ನು ಕ್ಷತ್ರಿಯನು ಮಾಡಬೇಕಾಗಿಲ್ಲ. ಏಕೆಂದರೆ (ಕ್ಷತ್ರಿಯನ ವಿಷಯ ದಲ್ಲಿಯೂ) ಜ್ಯೋತಿಷ್ಟೋಮವೇ ಅಗ್ನಿಷ್ಟೋಮವೆಂದು ಹೇಳಲ್ಪಟ್ಟಿರುವುದು.



*English Transalation*

**(The Shastras of minor Hotri-priests**

The performances of the minor Hotri-priests (Maitravaruna), Brahmanachamsi, and Achhavaka required at the sacrifice of a Kshattriya are those allotted to the Aikahika sacrifices. For these Aikahika perform mances are propitiatory, ready made, and placed on a footing in order to make the sacrifice successful to accomplish it, and place it on a firm footing whence it cannot fall down. These performances contain all the forms required, and are quite complete. They are repeated in order to accomplish the integrity and eompleteness of the sacrifice. The Kshattriya who perform a sacrifice should think, " Let us obtain all desires by means of the all-perfect and complete performances of the minor Hotri-priests." Therefore, wherever the Ekahas are not complete as to the number of Stomas and Prishthas there are the Aikahika performances of the minor Hotri-priests required, then it (the sacrifice) becomes completed.

This sacrifice performed by a Kshattriya should be the Ukthya which has fifteen Stotras and Shastras. Such is the opinion of some. For the sharp. ness of senses is a power (ojas) and the number fifteen is strength ; further the Kshattra is power, and the kshattriya is strength. Thus the priest makes him (the Kshattriya) successful by means of power, Kshatra, and strength. This sacrifice requires thirty Stotras and shastras, viz. fifteen each. For the Viraj consists of thirty syllables. The Viraj is food. When he places him (the sacrificer) in the Viraj then he places him in food. Therefore the Ukthya, which is fifteen-fold, should be employed for the king at this occassion. But the Agnishtoma, which forms part of the Jyotishtoma, would more properly answer this purpose. For among the Stomas, the Trivrit (nine-fold) is the Brahma, and the fiften-fold Stoma is the Kshattra. But the Brahma preceds the Kshattra: for the king should think—" If the Brahma is placed first, my kingdom will be strong and not to be shaken." The number seventeen represents the Vcisyas, and

twenty-one the Shudras. If these two stomas (the seveenteen and twenty-one-fold) are employed, then they make the vaisyas aud Shudras follow him (the king. Among the Stomas the Trivrit is splendour, the fifteen-fold is strength the seventeen-fold is offspring, the twenty-one-fold is the footing. Thus the priest makes the king who thus sacrifices, successful in gaining splendour. strengh, offspring, and a firm footing. Therefore the Jyotishtoma (Agnisntoma) is required. This requires twenty-four Stomas and Shastrs (twelve each ) For the year consists of twenty-four half months ; in the year there are all kinds of nourishment. Thus he places him (the sacrificer) in all kinds of nourishment. Thence the Jyotishtoma-Agnishtoma alone is required and not the Ukthya.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಷಟ್‌ತ್ರಿಂಶಾಧ್ಯಾಯೇ ಚತುರ್ಥಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಚಾರ್ಯಕೃತಾವೈತರೇಯಬ್ರಾಹ್ಮಣಭ್ಯಾಷ್ಯೇ ಷಟ್‌ತ್ರಿಂಶಾಧ್ಯಾಯಃ ಸಮಾಪ್ತಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂವತ್ತಾರನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು
ಸಮಾಪ್ತವಾದುದು

ಮೂವತ್ತಾರನೆಯ ಅಧ್ಯಾಯವು ಸಮಾಪ್ತವಾದುದು



# ಅಥೈತರೇಯಬ್ರಾಹ್ಮಣೇ ಸಪ್ತತ್ರಿಂಶಾಧ್ಯಾಯೇ ಪ್ರಥಮಃ ಖಂಡಃ

## ಐತರೇಯಬ್ರಾಹ್ಮಣದ ಮೂವತ್ತೇಳನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

[ರಾಜನಿಗೆ ಉಕ್ತವಾಗಿರುವ ಪುನರಭಿಷೇಕ ಇತ್ಯಾದಿ]

---

[ಪುನರಭಿಷೇಕಕ್ಕೆ ಆವಶ್ಯಕವಾದ ಸಾಧನಸಾಮಗ್ರಿಗಳು]

---

**ಸ್ತುತಶಸ್ತ್ರವಿಶೇಷೋಽಸ್ಯ ಕ್ಷತ್ರಿಯಸ್ಯೋಪವರ್ಣಿತಃ ||**
**ಕ್ರತೌ ಸಮಾಪ್ತೇಽಥ ಪುನರಭಿಷೇಕೋಽತ್ರ ವರ್ಣ್ಯತೇ ||**

ಹಿಂದಿನ ಅಧ್ಯಾಯದಲ್ಲಿ ಕ್ಷತ್ರಿಯನು ಮಾಡುವ ಯಜ್ಞದಲ್ಲಿ ಸ್ತುತಶಸ್ತ್ರಮಂತ್ರಗಳ ವಿಷಯದಲ್ಲಿ ಕೆಲವು ವಿಶೇಷಸಂಗತಿಗಳನ್ನು ಹೇಳಿದ್ದಾಯಿತು. ಈಗ ಕ್ಷತ್ರಿಯನಾದ ರಾಜನು ತಾನು ಮಾಡುವ ಯಜ್ಞವನ್ನು ಆಚರಿಸಿ ಮುಗಿಸಿದನಂತರ ಪುನರಭಿಷೇಕವೆಂಬ ಕರ್ಮವನ್ನು ಆಚರಿಸಬೇಕು. ಅದರ ವಿಧಾನಗಳನ್ನು ಈಗ ಹೇಳಲಾಗುವುದು.

**ಅಥಾತಃ ಪುನರಭಿಷೇಕಸ್ಯೈವ ||**

**ಅಥೈನಮಭಿಷೇಕಂ ಪ್ರತಿಜಾನೀತೇ — ಅಥ ಕ್ರತುಸಮಾಪ್ತ್ಯನಂತರಂ ಯತಃ ಕ್ಷತ್ರಿಯೋಽಭಿಷೇಕಮರ್ಹತಿ | ಅತಃ ಕಾರಣಾತ್ಪುನರಪಿಭಿಷೇಕಸ್ಯೈವ ವಿಧಿರುಚ್ಯತ ಇತಿ ಶೇಷಃ | ರಾಜ್ಞಃ ಪೂರ್ವಮಭಿಷಿಕ್ತತ್ವಾದಯಂ ಪುನರಭಿಷೇಕೋ ಭವತಿ | ಇತರಸ್ಯಾಪಿ ಕ್ಷತ್ರಿಯಸ್ಯ ಮಾಹೇಂದ್ರಗ್ರಹಾಯ ಪ್ರಸ್ತುತೇ ಸಾಮ್ನ್ಯಭಿಷೇಕಸ್ಯಾಧ್ವರ್ಯವಸ್ಯ ವಿದ್ಯಮಾನತ್ವಾದಯಂ ಪುನರಭಿಷೇಕೋ ಭವತಿ ||**

ಪುನರಭಿಷೇಕವಿಧಾನವನ್ನು ತಿಳಿಸುತ್ತಾರೆ—ಕ್ಷತ್ರಿಯನಾದ ರಾಜನು ಯಜ್ಞವನ್ನು ಮಾಡಿ ಮುಗಿಸಿದ ಮೇಲೆ ಪುನರಭಿಷೇಕವೆಂಬ ಕರ್ಮವನ್ನು ಆಚರಿಸಬೇಕು. ಈಗ ಅದರ ಕರ್ಮವನ್ನು ತಿಳಿಸಲಾಗುವುದು. ರಾಜನಾದವನಿಗೆ ಮೊದಲು ಸಿಂಹಾಸನವನ್ನೇರಿದಾಗ ಪಟ್ಟಾಭಿಷೇಕವೆಂಬ ಸಂಸ್ಕಾರವಿಶೇಷವು ಆಚರಿಸಲ್ಪಟ್ಟಿದ್ದರೂ ಈಗ ಯಜ್ಞವನ್ನು ಪೂರ್ತಿ ಮಾಡಿ ಮುಗಿಸಿರುವುದರಿಂದ ಪುನರಭಿಷೇಕವೆಂಬ ಸಂಸ್ಕಾರವನ್ನು ಅನುಷ್ಠಾನಮಾಡಬೇಕು. ಇದು ಪೂರ್ವದಿಂದಲೂ ನಡೆದು ಬಂದ ಪದ್ಧತಿಯು.

**ಸ್ತೂಯತೇ ಹ ವಾ ಅಸ್ಯ ಕ್ಷತ್ರಂ ಯೋ ದೀಕ್ಷತೇ ಕ್ಷತ್ರಿಯಃ ಸನ್ಸ ಯದಾವಭೃಥಾದುದೇತ್ಯಾನೂಬಂಧ್ಯಯೇಷ್ಟ್ವೋದವಸ್ಯತ್ಯಥೈನಮುದವಸಾನೀಯಾಯಾಂ ಸಂಸ್ಥಿತಾಯಾಂ ಪುನರಭಿಷಿಂಚಂತಿ ||**

**ತಂ ವಿಧತ್ತೇ — ಯಃ ಪುಮಾನ್ ಕ್ಷತ್ರಿಯಃ ಸಂದೀಕ್ಷತೇ ದೀಕ್ಷಾಂ ಪ್ರಾಪ್ನೋತಿ । ಅಸ್ಯ ಕ್ಷತ್ರಸ್ಯ ಪುರುಷಸ್ಯ ಕ್ಷತ್ರಂ ಸರ್ವೇಷಾಂ ಪ್ರಾಣಿನಾಂ ಕ್ಷತಾತ್ತ್ರಾಣನಂ ಸೂಯತೇ ಪ್ರವರ್ತತೇಽಸ್ಮಾತ್ಸ ಕ್ಷತ್ರಿಯೋ ಯದಾಽವಭೃಥಾದುದೇತ್ಯಾವಭೃಥಾಖ್ಯಂ ಕರ್ಮ ಸಮಾಪ್ತಂ ಕೃತ್ವಾ ತತೋಽನೂಬಂಧ್ಯಾಖ್ಯಯಾ ಕಯಾಚಿತ್ಪಶುಸ್ಥಾನೀಯಯೇಷ್ಟ್ವಾ ಯಾಗಂ ಕೃತ್ವಾ ಪಶ್ಚಾದುದವಸ್ಯತ್ಯುದವಸಾನೀಯಾಖ್ಯಯೇಷ್ಟ್ಯಾ ಕರ್ಮಾವಸಾನಂ ಕರೋತಿ । ಅಥ ತದಾನೀಮೇನಂ ಕ್ಷತ್ರಿಯಮುದವಸಾನೀಯೇಷ್ಟೌ ಸಮಾಪ್ತಾಯಾಂ ಪುನರಪಿ ಕರ್ಮಾಂಗತ್ವೇನರ್ತ್ವಿಜೋಽಭಿಷಿಂಚೇಯುಃ ॥**

ಕ್ಷತ್ರಿಯನಾದವನು (ರಾಜನು) ಯಜ್ಞಮಾಡುವಾಗ ಮೊದಲು ಯಜ್ಞಮಾಡುವುದಕ್ಕಾಗಿ ದೀಕ್ಷೆಯನ್ನು ಕೈಗೊಳ್ಳುವನು. ಎಂದರೆ ದೀಕ್ಷಣೀಯೇಷ್ಟಿ ಮೊದಲಾದ ಕೆಲವು ಸಂಸ್ಕಾರಗಳಿಂದ ದೀಕ್ಷಾಬದ್ಧನಾಗುವನು. ಅನಂತರ ಅವನು ತಾನು ಕೈಗೊಂಡ ಯಾಗವನ್ನು ಮಾಡಿ ಮುಗಿಸಿ ಅವಭೃಥಸ್ನಾನವನ್ನು ಮಾಡುವನು. ಅನಂತರ ಅನೂಬಂಧ್ಯಾ ಎಂಬ ಪಶು ಸಂಬಂಧವಾದ ಇಷ್ಟಿಯೆಂಬ ಯಾಗವನ್ನು ಮಾಡುವನು. ಅನಂತರ ಉದವಸಾನೀಯ ಎಂಬ ಯಜ್ಞದ ಕೊನೆಯಲ್ಲಿ ಮಾಡಬೇಕಾದ ಇಷ್ಟಿಯನ್ನೂ ಮಾಡಿ ಯಜ್ಞಸಮಾಪ್ತಿಯನ್ನೂ ಮಾಡುವನು. ಅನಂತರ ಎಂದರೆ ಕ್ಷತ್ರಿಯನು ಯಜ್ಞಸಮಾಪ್ತಿಯಾದ ಉದವಸಾನೇಷ್ಟಿಯನ್ನೂ ಮಾಡಿ ಮುಗಿಸಿದ ಮೇಲೆ ಋತ್ವಿಜರು ಈ ಯಜ್ಞಕ್ಕೆ ಕರ್ಮಾಂಗರೂಪವಾಗಿರುವ ಅಭಿಷೇಕವನ್ನು ರಾಜನಿಗೆ ಮಾಡಿಸುವರು. ಇದಕ್ಕೆ ಪುನರಭಿಷೇಕವೆಂದು ಹೆಸರು. ಇದು ರಾಜನು ಯಜ್ಞದ ಅಂತ್ಯದಲ್ಲಿ ಮಾಡಬೇಕಾದ ಕರ್ಮಾಂಗವು.

ತಸ್ಯೈತೇ ಪುರಸ್ತಾದೇವ ಸಂಭಾರಾ ಉಪಕ್ಲೃಪ್ತಾ ಭವಂತ್ಯೌದುಂಬರ್ಯಾ-
ಸಂದೀ ತಸ್ಯೈ ಪ್ರಾದೇಶಮಾತ್ರಾಃ ಪಾದಾಃ ಸ್ಯುರರತ್ನಿಮಾತ್ರಾಣಿ
ಶೀರ್ಷಣ್ಯಾನೂಚ್ಯಾನಿ ಮೌಂಜಂ ವಿವಯನಂ ವ್ಯಾಘ್ರಚರ್ಮಾಽಽ-
ಸ್ತರಣಮೌದುಂಬರಶ್ಚಮಸ ಉದುಂಬರಶಾಖಾ ತಸ್ಮಿನ್ನೇತಸ್ಮಿಂಶ್ಚಮ-
ಸೇಽಷ್ಟಾತಯಾನಿ ನಿಷುತಾನಿ ಭವಂತಿ ದಧಿ ಮಧು ಸರ್ಪಿರಾತಪ-
ವರ್ಷ್ಯಾ ಆಪಃ ಶಷ್ಪಾಣಿ ಚ ತೋಕ್ಮಾನಿ ಚ ಸುರಾ ದೂರ್ವಾ ॥

ತಸ್ಯಾಭಿಷೇಕಸಾಧನಾನಿ ವಿಧತ್ತೇ — ತಸ್ಯ ಪುನರಭಿಷೇಕಸ್ಯೈತೇ ವಕ್ಷ್ಯಮಾಣಾಃ ಸಂಭಾರಾಃ ಸಂಪಾದನೀಯಾ ದ್ರವ್ಯವಿಶೇಷಾಃ ಪುರಸ್ತಾದೇವೋಪಕ್ಲೃಪ್ತಾ ಅಭಿಷೇಕಕಾಲಾತ್ಪ್ರಾಗೇವ ಸಂಪಾದಿತಾ ಭವೇಯುಃ । ಕೇ ವಸ್ತುವಿಶೇಷಾಃ ಸಂಪಾದನೀಯಾಸ್ತೇಽಭಿಧೀಯಂತೇ । ಉದುಂಬರಕಾಷ್ಠೈರ್ನಿರ್ಮಿತಾ ಕಾಚಿದಾಸಂದೀ । ತಸ್ಯೈ ತಸ್ಯಾ ಆಸಂದ್ಯಾಶ್ಚತ್ವಾರಃ ಪಾದಾಃ ಪ್ರಾದೇಶಪರಿಮಿತಾಃ । ತೇಷಾಂ ಪಾದಾನಾಂ ಶಿರಸ್ಯುಪರಿಭಾಗೇಽವಸ್ಥಿತಾನಿ ಶೀರ್ಷಣ್ಯಾನ್ಯನ್ವಕ್ತಿರ್ಯಗವಸ್ಥಿತಾನಿ ಕಾಷ್ಠಾನ್ಯನೂಚ್ಯಾನಿ ತಾನಿ ಶೀರ್ಷಣ್ಯಾನೂಚ್ಯಾನ್ಯರತ್ನಿಪರಿಮಿತಾನಿ । ಪ್ರಾದೇಶದ್ವಯಮರತ್ನಿಃ । ವಿವಿಧಂ ವಯನಂ ರಜ್ಜೂನಾಮೋತಪ್ರೋತರೂಪೇಣ ಸಂಯೋಜನಮ್ । ತಚ್ಚ ಮೌಂಜಂ ಮುಂಜತೃಣೇನ ನಿರ್ಮಿತಮ್ । ಈದೃಶ್ಯಾ ಆಸಂದ್ಯಾ ಉಪರ್ಯಾಸ್ತರಣಂ ವ್ಯಾಘ್ರಚರ್ಮ । ದಧ್ಯಾದಿಪ್ರಕ್ಷೇಪಾರ್ಥಃ ಪ್ರೌಢ ಉದುಂಬರಕಾಷ್ಠನಿರ್ಮಿತಶ್ಚಮಸಃ । ತಥಾ ಕಾಚಿತ್ಸೂಕ್ಷ್ಮೋದುಂಬರಶಾಖಾ । ತಸ್ಮಿನ್ನೇ-

**ತಸ್ಮಿನ್ನೌದುಬಂರೇ ಪ್ರಾಢೇ ಚಮಸೇ ವಕ್ಷ್ಯಮಾಣದಧ್ಯಾದಿದ್ರವ್ಯಾಣ್ಯತಷ್ಟಾತಯಾನಿ । ಅಥ ದ್ವಿತ-ಯತ್ರಿತಯಾದಿವತ್ಸಂಖ್ಯಾಯಾ ಅವಯವೇ ತಯಬಿತಿ ಸೂತ್ರೇಣ ತಯಪ್ ಪ್ರತ್ಯಯಃ । ಅಷ್ಟ-ಸಂಖ್ಯಾಕಾ ಅವಯವಾ ಯೇಷಾಂ ದಧ್ಯಾದೀನಾಂ ತಾನ್ಯಷ್ಟಾತಯಾನಿ । ದೀರ್ಘಶ್ಛಾಂದಸಃ । ತಾನಿ ಚ ನಿಷುತಾನಿ ನಿತರಾಂ ಸುತಾನಿ ಪ್ರಕ್ಷಿಪ್ತಾನಿ ಭವಂತಿ । ಚಮಸೇ ಪ್ರಕ್ಷೇಪಾಣ್ಯಾಷ್ಟ ದ್ರವ್ಯಾಣಿ ಕಾನೀತಿ ತಾನ್ಯುಚ್ಯಂತೇ । ದಧಿ ಮಧು ಸರ್ಪಿರಿತ್ಯೇತಾನಿ ತ್ರೀಣಿ ಪ್ರಸಿದ್ಧಾನಿ। ಆತಪಯುಕ್ತ ವರ್ಷಭವಾ ಆತಪವರ್ಷ್ಯಾಸ್ತಾದೃಶ್ಯ ಆಪಶ್ಚತುರ್ಥಂ ದ್ರವ್ಯಮ್ । ಶಷ್ಪಾಣಿ ಶ್ಯಾಮತೃಣಾನಿ ಪಂಚಮಂ ದ್ರವ್ಯಮ್ । ತೋಕ್ಮಾನ್ಯಂಕುರಾಣಿ ಷಷ್ಠಂ ದ್ರವ್ಯಮ್ । ಸುರಾ ದೂರ್ವೇತಿ ದ್ರವ್ಯದ್ವಯಂ ಪ್ರಸಿದ್ಧಮ್ ॥**

ಅಭಿಷೇಕಕ್ಕೆ ಬೇಕಾದ ಸಾಧನಸಾಮುಗ್ರಿಗಳನ್ನು ವಿವರಿಸುವರು—ಈ ಪುನರಭಿಷೇಕವೆಂಬ ಕರ್ಮಾಂಗಕ್ಕೆ ಬೇಕಾದ ದ್ರವ್ಯಗಳನ್ನೂ ಸಾಧನಸಾಮುಗ್ರಿಗಳನ್ನೂ ಮೊದಲೇ ಸಿದ್ಧಪಡಿಸಿಟ್ಟುಕೊಳ್ಳಬೇಕು. ಅವುಗಳು ಯಾವುವೆಂದರೆ—ಉದುಂಬರವೆಂಬ ಮರದಿಂದ ನಿರ್ಮಿಸಲ್ಪಟ್ಟ ಆಸಂದೀ ಎಂದರೆ ನಾಲ್ಕು ಕಾಲುಗಳುಳ್ಳ ಕಾಲುಮಣೆ ಅಥವಾ ಪೀಠವು (Stool). ಇದಕ್ಕೆ ನಾಲ್ಕು ಕಾಲುಗಳಿರಬೇಕು. ಈ ಕಾಲುಗಳು ಪ್ರಾದೇಶಮಾತ್ರ ಎಂದರೆ ಒಂದು ಗೇಣು ಉದ್ದವಿರಬೇಕು. (ಪ್ರಾದೇಶವೆಂದರೆ ಅಂಗೈಯನ್ನು ಅಗಲಿಸಿದಾಗ ಹೆಬ್ಬೆಟ್ಟಿಗೂ ಕಿರುಬೆರಳಿಗೂ ಇರುವಷ್ಟು ದೂರ). ಮೇಲುಭಾಗವು ಒಂದು ಮೊಳವಿಷ್ಟಿರಬೇಕು. ಅರತ್ನಿಯೆಂದರೆ ಪ್ರಾದೇಶದ ಎರಡರಷ್ಟು. ಈ ಕಾಲುಗಳಿಗೆ ಮೌಂಜ ಎಂಬ ದರ್ಭೆಯ ಹುಲ್ಲಿನಿಂದ ಮಾಡಿದ ಹಗವಿರಬೇಕು. ಈ ಪೀಠದ ಮೇಲೆ ಹಾಸುವುದಕ್ಕಾಗಿ ಹುಲಿಯ ಚರ್ಮವಿರಬೇಕು. ಮೊಸರು ಮೊದಲಾದ ದ್ರವ್ಯಗಳನ್ನು ಹಾಕುವುದಕ್ಕಾಗಿ ಉದುಂಬರವೃಕ್ಷನಿರ್ಮಿತವಾದ ಚಮಸಪಾತ್ರೆಯಿರಬೇಕು. ಹಾಗೆಯೇ ಒಂದು ಸಣ್ಣದಾದ ಉದುಂಬರ ಶಾಖೆ (ಕಡ್ಡಿ) ಯೂ ಇರಬೇಕು. ಮೇಲೆ ಹೇಳಿದ ಉದುಂಬರಚಮಸಪಾತ್ರೆಯಲ್ಲಿ ಮೊಸರು ಮೊದಲಾದ ಎಂಟು ವಿಧ ದ್ರವ್ಯಗಳನ್ನು ಹಾಕಬೇಕು. ಈ ಎಂಟುದ್ರವ್ಯಗಳು ಯಾವುವು ಎಂದರೆ–ಮೊಸರು, ಜೇನುತುಪ್ಪ, ತುಪ್ಪ. ಈ ಮೂರು ಪ್ರಸಿದ್ಧವಾದ ಎಂದರೆ ಎಲ್ಲರಿಗೂ ತಿಳಿದಿರುವ ದ್ರವ್ಯಗಳು. ಬಿಸಿಲುಕಾಯುತ್ತಿರುವಾಗ ಹುಯ್ಯುವ ಮಳೆಯ ನೀರು. ಇದು ನಾಲ್ಕನೆಯ ದ್ರವ್ಯವು. ಹಸುರಾಗಿಯೂ ಕಪ್ಪಗೂ ಇರುವ ಹುಲ್ಲು, (ಚಿಗರಾಗಿರುವುದು) ಯವಧಾನ್ಯದ ಹುಲ್ಲುತೆನೆ, ಮದ್ಯ ಮತ್ತು ಗರಿಕೆ (ದೂರ್ವಾ) ಹುಲ್ಲು ಇವು ಎಂಟು ದ್ರವ್ಯಗಳು.

ತದ್ಯೈಷಾ ದಕ್ಷಿಣಾ ಸ್ಫ್ಯವರ್ತನಿರ್ವೇದೇರ್ಭವತಿ ತತ್ರೈತಾಂ ಪ್ರಾಚೀ-
ಮಾಸಂದೀಂ ಪ್ರತಿಷ್ಠಾಪಯತಿ ತಸ್ಯಾ ಅಂತರ್ವೇದಿ ದ್ವೌ ಪಾದೌ
ಭವತೋ ಬಹಿರ್ವೇದಿ ದ್ವಾವಿಯಂ ವೈ ಶ್ರೀಸ್ತಸ್ಯಾ ಏತತ್ಪರಿಮಿತಂ
ರೂಪಂ ಯದಂತರ್ವೇದ್ಯಥೈಷ ಭೂಮಾಽಪರಿಮಿತೋ ಯೋ ಬಹಿ-
ರ್ವೇದಿ ತದ್ಯದಸ್ಯಾ ಅಂತರ್ವೇದಿ ದ್ವೌ ಪಾದೌ ಭವತೋ ಬಹಿರ್ವೇದಿ
ದ್ವಾ ಉಭಯೋಃ ಕಾಮಯೋರುಪಾಪ್ತ್ಯೈ ಯಶ್ಚಾಂತರ್ವೇದಿ
ಯಶ್ಚ ಬಹಿರ್ವೇದಿ ॥

ಸಂಪಾದಿತಾಯಾ ಆಸಂದ್ಯಾಃ ಪ್ರತಿಷ್ಠಾಪನಂ ವಿಧತ್ತೇ—ಪುರಾ ವೇದಿಪರಿಗ್ರಹಾರ್ಥಂ ಸ್ಫ್ಯೇನ ರೇಖಾತ್ರಯಂ ಕೃತಂ ದಕ್ಷಿಣಾ ಪ್ರತೀಚ್ಯುದೀಚೀ ಚ। ತತ್ರ ದೇವಯಜನದೇಶೇ ಯೈಷಾ ವೇದೇಃ ಸಂಬಂಧಿನೀ ದಕ್ಷಿಣಾ ಸ್ಫ್ಯವರ್ತಿನಿಃ ಸ್ಫ್ಯಸ್ಯ ರೇಖಾ ಭವತಿ ತತ್ರ ತಸ್ಯಾ ರೇಖಾಯಾಮೇತಾಮಾಸಂದೀಂ ಪ್ರಾಚೀಂ ಪ್ರಾಗಗ್ರಾಮವಸ್ಥಾಪಯೇತ್। ತಸ್ಯಾಶ್ಚಾಽಽಸಂದ್ಯಾ ಉತ್ತರದಿಗ್ಗತೌ ದ್ವೌ ಪಾದಾವಂತರ್ವೇದಿ ಯದ್ರೂಪಮಸ್ತಿ ಏತತ್ಪರಿಮಿತಮಲ್ಪಮ್। ಅಥ ಬಹಿರ್ವೇದಿ ಯಃ ಪ್ರದೇಶೋಽಸ್ತಿ ಏಷ ಭೂಮಾ ಬಹುಲಃ। ಅತ ಏವಾಪರಿಮಿತ ಇಯಾನಿತಿ ಪರಿಚ್ಛೇದರಹಿತಃ ಏವಂ ಸತಿ ವೇದೇರ್ಮಧ್ಯೇ ಬಹಿಶ್ಚಾಸಂದ್ಯಾ ದ್ವೌ ದ್ವೌ ಪಾದಾವಿತಿ ಯದಸ್ತಿ ತದುಭಯೋಃ ಕಾಮಯೋಃ ಪ್ರಾಪ್ತ್ಯೈ ಭವತಿ। ಯಶ್ಚ ಕಾಮೋ ವೇದಿಮಧ್ಯೇ ಲಭ್ಯತೇ। ದ್ವೌ ಶ್ಚಾನ್ಯಃ। ಯಶ್ಚಾನ್ಯಃ ಕಾಮೋ ವೇದೇರ್ಬಹಿರ್ಲಭ್ಯತೇ ತದುಭಯಸಿದ್ಧ್ಯರ್ಥಮೇವಂ ಸ್ಥಾಪನಮ್॥

ಅಭಿಷೇಕಕ್ಕಾಗಿ ಸಿದ್ಧಪಡಿಸಿರುವ ಪೀಠವನ್ನು ಸ್ಥಾಪಿಸುವ ಕ್ರಮವನ್ನು ವಿವರಿಸುವರು — ಹಿಂದೆ ವೇದಿಯನ್ನು ಗುರುತಿಸುವುದಕ್ಕಾಗಿ ದಕ್ಷಿಣ, ಪೂರ್ವ ಮತ್ತು ಉತ್ತರ ದಿಕ್ಕುಗಳಲ್ಲಿ ಮರದ ಚಾಕುವಿನಿಂದ ಮೂರು ಗೆರೆಗಳನ್ನು ಎಳೆದು ಗುರುತಿಸಲಾಗಿವುದು. ಅವುಗಳಲ್ಲಿ ದೇವಯಜನಪ್ರದೇಶದಲ್ಲಿ ವೇದಿಗೆ ಸಂಬಂಧಿಸಿದಂತೆ ದಕ್ಷಿಣದಿಕ್ಕಿನಲ್ಲಿ ಸ್ಫ್ಯ (ಮರದ ಚಾಕು) ದಿಂದ ಎಳೆದ ಗೆರೆಯಲ್ಲಿ (ಮೇಲೆ) ಪೂರ್ವಾಭಿಮುಖವಾಗಿ ಉದುಂಬರ (ಮರದ) ಪೀಠವನ್ನು ಸ್ಥಾಪಿಸಬೇಕು ಆ ಪೀಠದ ಉತ್ತರಭಾಗದ ಎರಡು ಕಾಲುಗಳೂ ವೇದಿಯ ಒಳಗಡೆಗೆ ಇರಬೇಕು. ದಕ್ಕಿಣದಿಗ್ಭಾಗದಲ್ಲಿರುವ ಪೀಠದ ಇನ್ನೆರಡು ಕಾಲು ಗಳು ವೇದಿಯ ಹೊರಗಡೆ ಇರಬೇಕು. ಈ ಪೀಠವನ್ನು ಸ್ಥಾಪಿಸಿರುವ ಭೂಮಿಯು ಸಂಪತ್ತ್ರದವಾಗಿರುವುದು. ಅಂತರ್ವೇದಿ ಯಲ್ಲಿರುವ ಭೂಪ್ರದೇಶವು ಸಣ್ಣದಾಗಿರುವುದು. ಬಹಿಃಪ್ರದೇಶವು ಬಹಳವಿಸ್ತಾರವಾಗಿರುವುದು. ಈ ರೀತಿ ಅಂತರ್ವೇದಿ ಮತ್ತು ಬಹಿರ್ವೇದಿಗಳಿಗೆ ಸಂಬಂಧಿಸಿದಂತೆ ಪೀಠವನ್ನು ಸ್ಥಾಪಿಸಿರುವುದರಿಂದ ಎಂದರೆ ಅಂತರ್ವೇದಿಯಲ್ಲಿ ಎರಡುಪಾದಗಳಿರು ವಂತೆಯೂ ಬಹಿರ್ವೇದಿಯಲ್ಲಿ ಉಳಿದೆರಡು ಪಾದಗಳಿರುವಂತೆಯೂ ಸ್ಥಾಪಿಸಲ್ಪಟ್ಟಿರುವುದರಿಂದ ಸಣ್ಣದಾದ (ಅಲ್ಪವಾದ) ಮತ್ತು ದೊಡ್ಡದಾದ ಅಭಿಲಾಷೆ (ಇಷ್ಟಾರ್ಥಗಳು) ಗಳೆಲ್ಲವೂ ನೆರವೇರುವವು ಎಂದರೆ ಅಂತರ್ವೇದಿಯಲ್ಲಿ ಲಭಿಸಬಹುದಾದ ಯಜ್ಞದ ಫಲಾದಿಗಳೂ ಬಹಿರ್ವೇದಿಯಲ್ಲಿ ಲಭಿಸಬಹುದಾದ ರಾಜ್ಯಾಭಿಲಾಷೆ ಮೊದಲಾದ ಇಷ್ಟಾರ್ಥಗಳೆಲ್ಲವೂ ಸಿದ್ಧಿಸುವವು ಎಂದಭಿಪ್ರಾಯವು.



*English Translation*

**(Punarbhisekha, or repetition of the inauguration ceremony)**



**(The implementi and preparafions for Punarbhisheka).**

Now follows the rule oî Punarbhisheka of the Kshattriya who is inaugurated as a sacrificer, and whose Kshattram is in such a way new] born.

After having undergone the ceremonies of ablution and performed the animal sacrifice (anubandhya), he performs the concluding Ishti.

After this Ishti is finished and thus the Soma day of the Rajasuya concluded they sprinkle him again with the holy water — they make punarabhisheka. Before it commences, all implements must be in readiness viz. a throne, made from Udumbara wood, and successive helmets of length of half an arm, (besides there must be provided for) cords for binding made of Munja grass, a tiger skin for covering the throne, a large ladle of Udumbara wood and a small branch of the Udumbara tree. In this ladle the following eight substances are thrown; curds, honey, clarsfied butter, rain water fallen during sunshine, young sprouts of grass and of green barley, liquor and Dub grass (Durva). The Throne is to be placed in the Southern line, drawn by wooden sword (sphya) in the Vedi, the front part turned eastwards. Two of its feet are to be within the Vedi, and two outside. For this earth is the goddess of fortune; the little space within the Vedi is thus allotted to her, as well as the large (infinite) region outside. If thus two feet of the throne are inside and two outside the Vedi, both kinds of desires, those obtaineble from the place within as well as from outside the Vedi, are to be gained.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಸಪ್ತತ್ರಿಂಶಾಧ್ಯಾಯಸ್ಯ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೇಳನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು.





# ಅಥ ಸಪ್ತತ್ರಿಂಶಾಧ್ಯಾಯೇ ದ್ವಿತೀಯಃ ಖಂಡಃ

## ಮೂವತ್ತೇಳನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

[ಪುನರಭಿಷೇಕಕಾಲದಲ್ಲಿ ರಾಜನು ಹೇಗೆ ಸಿಂಹಾಸನವನ್ನು ಹತ್ತಬೇಕು ಮತ್ತು ಯಾವ ಮಂತ್ರಗಳನ್ನು ಪಠಿಸಬೇಕು ಇತ್ಯಾದಿ]

**ವ್ಯಾಘ್ರಚರ್ಮಣಾಽಽಸ್ತೃಣಾತ್ಯುತ್ತರಲೋಮ್ನಾ ಪ್ರಾಚೀನಗ್ರೀವೇಣ ಕ್ಷತ್ರಂ ವಾ ಏತದಾರಣ್ಯಾನಾಂ ಪಶೂನಾಂ ಯದ್ವ್ಯಾಘ್ರಃ ಕ್ಷತ್ರಂ ರಾಜನ್ಯಃ ಕ್ಷತ್ರೇಣೈವ ತತ್ಕ್ಷತ್ರಂ ಸಮರ್ಧಯತಿ ॥**

ಪ್ರತಿಷ್ಠಾಪಿತಾಯಾ ಆಸಂದ್ಯಾ ಉಪರಿ ಚರ್ಮಾಸ್ತರಣಂ ವಿಧತ್ತೇ—ಉತ್ತರಾಣ್ಯೂರ್ಧ್ವಭಾಗೇ ಲೋಮಾನಿ ಯಸ್ಯ ಚರ್ಮಣಸ್ತದುತ್ತರಲೋಮ । ಪ್ರಾಚ್ಯಾಂ ದಿಶಿ ಗ್ರೀವಾ ಯಸ್ಯ ಚರ್ಮಣಸ್ತತ್ಪ್ರಾಚೀನಗ್ರೀವಂ ತಾದೃಶೇನ ವ್ಯಾಘ್ರಚರ್ಮಣಾ ತಾಮಾಸಂದೀಮಾಸ್ತೃಣೀಯಾತ್ । ಅರಣ್ಯ ಏವಾವಸ್ಥಿತಾ ಆರಣ್ಯಾಃ ಪಶವೋ ಹರಿಣಾದಯೋ ಯೋ ವ್ಯಾಘ್ರೋಽಸ್ತ್ಯೇತದಾರಣ್ಯಾನಾಂ ಪಶೂನಾಂ ಮಧ್ಯೇ ಕ್ಷತ್ರಂ ಕ್ಷತ್ರಿಯವಚ್ಛೂರಃ । ಯೋಽಯಂ ರಾಜನ್ಯೋ ಯಜಮಾನಃ ಸೋಽಪಿ ಕ್ಷತ್ರಂ ಕ್ಷತ್ರಿಯಜಾತಿತ್ವಾಚ್ಛೂರಃ । ಅತಶ್ಚರ್ಮಾಸ್ತರಣಾದ್ವ್ಯಾಘ್ರಚರ್ಮರೂಪೇಣ ಕ್ಷತ್ರೇಣೈವ ಯಜಮಾನರೂಪಂ ಕ್ಷತ್ರಂ ಸಮೃದ್ಧಂ ಕರೋತಿ ॥

ಪೀಠವನ್ನು ಸ್ಥಾಪಿಸಿದ ಮೇಲೆ ವ್ಯಾಘ್ರಚರ್ಮವನ್ನು ಹಾಸುವ ವಿಧಾನವನ್ನು ವಿವರಿಸುವರು—ಹಿಂದೆ ಹೇಳಿದ ಉದುಂಬರಮರದ ಪೀಠದ ಮೇಲೆ ಸಿದ್ಧಪಡಿಸಿಟ್ಟುಕೊಂಡಿದ್ದ ವ್ಯಾಘ್ರ (ಹುಲಿಯ) ಚರ್ಮವನ್ನು ಹಾಸಬೇಕು. ಹಾಸುವಾಗ ತಲೆಯು ಪೂರ್ವಕ್ಕೆ ಬರುವಂತೆಯೂ ಚರ್ಮದ ಕೂದಲುಗಳು ಮೇಲುಭಾಗದಲ್ಲಿ ಇದ್ದು ಕಾಣುವಂತೆಯೂ ಇರಬೇಕು. ಅರಣ್ಯದಲ್ಲಿ ನಾನಾ ವಿಧವಾದ ಮೃಗಗಳಿರುವವು. ಅವುಗಳಿಗೆಲ್ಲಾ ವ್ಯಾಘ್ರವೇ ರಾಜನಂತಿರುವುದು (ಎಂದರೆ ಬಲಿಷ್ಠವಾಗಿರುವುದು). ಈ ವ್ಯಾಘ್ರವನ್ನು ಕಂಡು ಇತರ ಮೃಗಗಳು ಭಯಪಡುವವು. ಅದರಂತೆ ಕ್ಷತ್ರಿಯರಾಜನು ಭೂಮಿಯ ಮೇಲೆ ಇರುವ ಜನಗಳಿಗೆಲ್ಲಾ ಪ್ರಭುವಾಗಿಯೂ ರಾಜನಾಗಿಯೂ ಇರುವನು. ಆದ್ದರಿಂದ ವ್ಯಾಘ್ರಚರ್ಮವನ್ನು ಪೀಠದ ಮೇಲೆ ಹಾಸಿ ಅದರ ಮೇಲೆ ಕುಳಿತುಕೊಳ್ಳುವುದರಿಂದ ಕ್ಷತ್ರಿಯ ಯಜಮಾನನಾದ ರಾಜನಿಗೆ ಶೌರ್ಯಾದಿ ಪರಾಕ್ರಮವೂ ರಾಜ್ಯದಲ್ಲಿ ಸಮೃದ್ಧಿಯೂ ಉಂಟಾಗುವವು.

**ತಾಂ ಪಶ್ಚಾತ್ಪ್ರಾಙುಪವಿಶ್ಯಾಽಽಚ್ಯ ಜಾನು ದಕ್ಷಿಣಮಭಿಮಂತ್ರಯತ ಉಭಾಭ್ಯಾಂ ಪಾಣಿಭ್ಯಾಮಾಲಭ್ಯ ।**

**ಆಸಂದ್ಯಾ ಅಭಿಮಂತ್ರಣಂ ವಿಧತ್ತೇ—ಪ್ರತಿಷ್ಠಾಪಿತಾಯಾ ಆಸಂದ್ಯಾಃ ಪಶ್ಚಾದ್ಭಾಗೇ ಯಜಮಾನಃ ಪ್ರಾಙ್ಮುಖ ಉಪವಿಶ್ಯ ದಕ್ಷಿಣಂ ಯಜ್ಞಾಸ್ಯಸ್ತಿ ತದಾಜ್ಯ ತದ್ಭೂಮಿಸ್ಪೃಷ್ಟಂ ಯಥಾ ಭವತಿ ತಥಾ ನ್ಯಗ್ಭೂತಂ ಕೃತ್ವಾ ಸವ್ಯಜಾನೂರ್ಧ್ವಮುಖಮೇವಾವಸ್ಥಾಪ್ಯೋಭಾಭ್ಯಾಂ ಪಾಣಿಭ್ಯಾ-ಮಾಸಂದೀಮಾಲಭ್ಯ ಸ್ಪೃಷ್ಟ್ವಾ ವಕ್ಷ್ಯಮಾಣಮಂತ್ರೇಣಾಭಿಮಂತ್ರಯೇತ್ ॥**

ಪೀಠಕ್ಕೆ ಅಭಿಮಂತ್ರಣ (ಪ್ರೋಕ್ಷಣ) ಮಾಡುವುದನ್ನು ತಿಳಿಸುವರು.—ಮೇಲೆ ಹೇಳಿದ ಪ್ರಕಾರವಾಗಿ ಆಸಂದಿ ಎಂಬ ಉದುಂಬರಮರದ ಪೀಠವನ್ನು ಸ್ಥಾಪಿಸಿ ಅದರ ಪಶ್ಚಿಮಭಾಗದಲ್ಲಿ ಪೂರ್ವಾಭಿಮುಖವಾಗಿರುವಂತೆ ತನ್ನ ಬಲಮಂಡಿಯು ಭೂಮಿಯನ್ನು ಸ್ಪರ್ಶಿಸುವಂತೆಯೂ ಎಡಗಾಲನ್ನು ಬಗ್ಗಿಸದೆ ಎತ್ತರವಾಗಿರುವಂತೆಯೂ ಕುಳಿತುಕೊಳ್ಳಬೇಕು. ಅನಂತರ ತನ್ನ ಎರಡು ಕೈಗಳಿಂದಲೂ ಪೀಠವನ್ನು ಪ್ರೋಕ್ಷಿಸಬೇಕು

ಅಗ್ನಿಷ್ಟ್ವಾ ಗಾಯತ್ರ್ಯಾ ಸಯುಕ್ಛಂದಸಾಽಽರೋಹತು ಸವಿತೋಷ್ಣಿಹಾ ಸೋಮೋಽನುಷ್ಟುಭಾ ಬೃಹಸ್ಪತಿರ್ಬೃಹತ್ಯಾ ಮಿತ್ರಾವರುಣೌ ಪಂ-ಕ್ತ್ಯೇಂದ್ರಸ್ತ್ರಿಷ್ಟುಭಾ ವಿಶ್ವೇ ದೇವಾ ಜಗತ್ಯಾ ತಾನಹಮನು ರಾಜ್ಯಾಯ ಸಾಮ್ರಾಜ್ಯಾಯ ಭೌಜ್ಯಾಯ ಸ್ವಾರಾಜ್ಯಾಯ ವೈರಾಜ್ಯಾಯ ಪಾರ-ಮೇಷ್ಠ್ಯಾಯ ರಾಜ್ಯಾಯ ಮಹಾರಾಜ್ಯಾಯಾಽಧಿಪತ್ಯಾಯ ಸ್ವಾವ-ಶ್ಯಾಯಾಽತಿಷ್ಠಾಯಾಽಽರೋಹಾಮಿ ॥

**ತಂ ಮಂತ್ರಂ ದರ್ಶಯತಿ— ಹೇ ಆಸಂದಿ, ತ್ವಾ ತ್ವಾಂ ಗಾಯತ್ರ್ಯಾ ಛಂದಸಾ ಸಯುಕ್ಸ-ಹಿತೋಽಗ್ನಿರಾರೋಹತು । ಉಷ್ಣಿಹಾ ಛಂದಸಾ ಸಹಿತಃ ಸವಿತಾಽಽರೋಹತು । ಏವಂ ಸೋಮ-ಬೃಹಸ್ಪತಿಮಿತ್ರಾವರುಣೇಂದ್ರವಿಶ್ವೇ(ಶ್ವ) ದೇವಾ ಅನುಷ್ಟುಬಾದಿಚ್ಛಂದೋಭಿಃ ಸಹಿತಾಸ್ತ್ವಾಮಾ-ರೋಹಂತು । ತಾನಗ್ನ್ಯಾದೀನ್ ದೇವಾನನು ಪಶ್ಚಾದಹಮಾರೋಹಾಮಿ । ಕಿಮರ್ಥಂ ರಾಜ್ಯಾದಿ-ಸಿದ್ಧ್ಯರ್ಥಮ್ । ರಾಜ್ಯಂ ದೇಶಾಧಿಪತ್ಯಮ್ । ಸಾಮ್ರಾಜ್ಯಂ ಧರ್ಮೇಣ ಪಾಲನಮ್ । ಭೌಜ್ಯಂ ಭೋಗಸಮೃದ್ಧಿಃ । ಸ್ವಾರಾಜ್ಯಮಪರಾಧೀನತ್ವಮ್ । ವೈರಾಜ್ಯಮಿತರೇಭ್ಯೋ ಭೂಪತಿಭ್ಯೋ ವೈಶಿ-ಷ್ಟ್ಯಂ । ಏತದುಕ್ತಮೈಹಿಕಮ್ । ಅಥಾಮುಷ್ಮಿಕಮುಚ್ಯತೇ । ಪಾರಮೇಷ್ಟ್ಯಂ ಪ್ರಜಾಪತಿಲೋಕ-ಪ್ರಾಪ್ತಿಃ ತತ್ರ ರಾಜ್ಯಮೈಶ್ವರ್ಯಂ । ಮಾಹಾರಾಜ್ಯಂ ತತ್ರಸ್ಥೇಭ್ಯ ಇತರೇಭ್ಯ ಆಧಿಕ್ಯಮ್ । ಆಧಿ-ಪತ್ಯಮ್ ತಾನಿತರಾನ್ಪ್ರತಿ ಸ್ವಾಮಿತ್ವಮ್ । ಸ್ವಾವಶ್ಯಮಪಾರತಂತ್ರ್ಯಮ್ । ಆತಿಷ್ಠತ್ವಂ ಚಿರಕಾಲ-ವಾಸಿತ್ವಮ್ ॥**

ಅನಂತರ ರಾಜನು ಈ ಮಂತ್ರವನ್ನು ಹೇಳಬೇಕು—ಎಲೈ ಪೀಠವೇ (ಸಿಂಹಾಸನವೇ) ಅಗ್ನಿಯು ಗಾಯತ್ರೀಮಂತ್ರದಿಂದ ನಿನ್ನನ್ನು ಹತ್ತಲಿ ; ಉಷ್ಣಿಕ್‌ಛಂದಸ್ಸಹಿತನಾಗಿ ಸವಿತೃದೇವನು (ಸೂರ್ಯನು) ನಿನ್ನನ್ನು ಹತ್ತಿ ಕುಳಿತುಕೊಳ್ಳಲಿ ; ಸೋಮದೇವನು ಅನುಷ್ಟುಪ್‌ಛಂದಸ್ಸಹಿತವಾಗಿಯೂ, ಬೃಹಸ್ಪತಿಯು ಬೃಹತೀಛಂದಸ್ಸಿನಿಂದಲೂ, ಮಿತ್ರಾವರುಣರು ಪಂಕ್ತಿಛಂದಸ್ಸಿನಿಂದಲೂ, ಇಂದ್ರನು ತ್ರಿಷ್ಟುಪ್‌ಛಂದಸ್ಸಿನಿಂದಲೂ, ವಿಶ್ವೇದೇವತೆಗಳು ಜಗತೀಛಂದಸ್ಸಿನಿಂದಲೂ ಕೂಡಿದ

ಮಂತ್ರಗಳನ್ನು ಪಠಿಸುತ್ತಾ ನಿನ್ನನ್ನು ಹತ್ತಿಕುಳಿತುಕೊಳ್ಳಲಿ, ಈ ಅಗ್ನಿ ಮೊದಲಾದ ದೇವತೆಗಳು ಕುಳಿತನಂತರ ನಾನ ನಿನ್ನನ್ನು ಹತ್ತಿ ಕುಳಿತುಕೊಳ್ಳುತ್ತೇನೆ. ಏತಕ್ಕಾಗಿ ಎಂದರೆ ರಾಜ್ಯಾಧಿಪತ್ಯಕ್ಕಾಗಿ ರಾಜ್ಯನೆಂದರೆ ದೇಶಾಧಿಪತ್ಯವು ಸಾಂಮ್ರಾಜ್ಯ. ವೆಂದರೆ ಧರ್ಮದಿಂದ ರಾಜ್ಯವನ್ನು ಪಾಲಿಸುವುದು. ಭೌಜ್ಯ ಎಂದರೆ ಭೋಗ ಸಮೃದ್ಧಿಯು. ಸ್ವಾರಾಜ್ಯವೆಂದರೆ ಇನ್ನೊಬ್ಬರ ಅಧೀನವಲ್ಲದ ಸ್ವತಂತ್ರವಾದ ದೇಶವು. ವೈರಾಜ್ಯವೆಂದರೆ ಇತರ ಸಣ್ಣದೇಶಗಳಿಗಿಂತ ವಿಶೇಷವಾಗಿ ಅಭಿವೃದ್ಧಿಯಿಂದ ಕೂಡಿರುವುದು. ಈ ವಿಧರಾಜ್ಯಗಳೆಲ್ಲವೂ ಭೂಲೋಕದಲ್ಲಿರುವ ಶ್ರೇಷ್ಠವಾದ ರಾಜ್ಯಗಳು. ಇನ್ನು ಪರಲೋಕದ ರಾಜ್ಯ ಗಳೆಂದರೆ—ಪಾರಮೇಷ್ಠ್ಯಂ—ಪ್ರಜಾಪತಿಲೋಕ ಪ್ರಾಪ್ತಿಯು. ಇಲ್ಲಿ ರಾಜ್ಯವೆಂದರೆ ಐಶ್ವರ್ಯವು. ಮಾಹಾರಾಜ್ಯಂ ಎಂದರೆ ಅಲ್ಲಿ ಪರಲೋಕದಲ್ಲಿರುವ ಇತರರಿಗಿಂತ ಅಧಿಕವಾದ ಐಶ್ವರ್ಯವು. ಆಧಿಪತ್ಯಂ ಎಂದರೆ ಇತರರ ಮೇಲೆ ತನ್ನ ಪ್ರಭುತ್ವ ಅಥವಾ ಸ್ವಾಮಿತ್ವ, ಸ್ವಾವಶ್ಯ ಎಂದರೆ ಇತರರ ಅಧೀನವಿಲ್ಲದೆ ಸ್ವತಂತ್ರನಾಗಿರುವುದು. ಆತಿಷ್ಠತ್ವಂ ಎಂದರೆ ಬಹುಕಾಲದವರೆಗೆ ಜೀವಿಸಿರುವುದು. ಈ ವಿಧವಾದ ಐಶ್ವರ್ಯ ಮತ್ತು ಪದವಿಯ ಪ್ರಾಪ್ತಿಗಾಗಿ ಎಲೈ ಪೀಠವೇ, ನಿನ್ನನ್ನು ಹತ್ತಿ ಕುಳಿತುಕೊಳ್ಳು ತ್ತೇನೆ ಎಂಬರ್ಥವಿರುವ ಈ ಮಂತ್ರವನ್ನು ಪಠಿಸಿ ರಾಜನು ಪೀಠದ ಮೇಲೆ ಕುಳಿತುಕೊಳ್ಳಬೇಕು.

ಇತ್ಯೇತಾಮಾಸಂದೀಮಾರೋಹೇದ್ದಕ್ಷಿಣೇನಾಗ್ರೇ ಜಾನುನಾಥ ಸವ್ಯೇನ ।

**ಅನೇನ ಮಂತ್ರೇಣಾಭಿಮಂತ್ರಣಾದೂರ್ಧ್ವಮಾರೋಹಣಂ ವಿಧತ್ತೇ- ಇತಿಶಬ್ದಃ ಪೂರ್ವೋ- ಕ್ತಮಭಿಮಂತ್ರಣಮಂತ್ರಂ ಪರಾಮೃಶತಿ । ತೇನೈವ ಮಂತ್ರೇಣ ತಾಮಾಸಂದೀಮಾರೋಹೇತ್ । ತತ್ರಾಯಂ ಪ್ರಕಾರಃ । ದಕ್ಷಿಣೇನ ಜಾನುನಾ ಪ್ರಥಮಂ ಸಮಾರೋಹೇತ್ । ತತಃ ಸವ್ಯೇನಾರೋ- ಹೇತ್ ॥**

ಮೇಲೆ ಹೇಳಿದ ಮಂತ್ರದಿಂದ ಪೀಠವನ್ನು ಪ್ರೋಕ್ಷಿಸಿ ಅದೇ ಮಂತ್ರವನ್ನುಚ್ಚರಿಸುತ್ತಾ ಪೀಠವನ್ನು ಹತ್ತಿಕುಳಿತು ಕೊಳ್ಳಬೇಕು ಪೀಠವನ್ನು ಹತ್ತುವಾಗ ಮೊದಲು ಬಲಗಾಲನ್ನು ಪೀಠದ ಮೇಲಿರಿಸಿ ಹತ್ತಬೇಕು ಅನಂತರ ಎಡಗಾಲನ್ನಿರಿಸಬೇಕು

ತತ್ತದಿತೀ೩ ೩

**ಆರೋಹಣಂ ಪ್ರಶಂಸತಿ—ತದಾರೋಹಣಮಿತ್ಯೇವಂ ಸರ್ವೇ ಜನಾಃ ಪೂಜಯಂತಿ । ಪೂಜಾರ್ಥೇಯಂ ಪ್ಲುತಿಃ ॥**

ರಾಜನು ಈ ರೀತಿ ಪೀಠದಲ್ಲಿ ಕುಳಿತಿದುದನ್ನು ನೋಡಿ ಸಮಸ್ತಜನರೂ ಜಯಘೋಷವನ್ನೂ ಹರ್ಷಧ್ವನಿಯನ್ನೂ ಮಾಡುತ್ತಾ ತಮ್ಮ ಗೌರವವನ್ನು ಸೂಚಿಸುವರು.

ಚತುರುತ್ತರೈರ್ವೈ ದೇವಾಶ್ಛಂದೋಭಿಃ ಸಯುಗ್ಭೂತ್ವೈತಾಂ ಶ್ರಿಯ- ಮಾರೋಹನ್ಯಸ್ಯಾಮೇತ ಏತರ್ಹಿ ಪ್ರತಿಷ್ಠಿತಾ ಅಗ್ನಿರ್ಗಾಯತ್ರ್ಯಾ ಸವಿತೋಷ್ಣಿಹಾ ಸೋಮೋಽನುಷ್ಟುಭಾ ಬೃಹಸ್ಪತಿರ್ಬೃಹತ್ಯಾ ಮಿತ್ರಾ- ವರುಣೌ ಪಂಕ್ತ್ಯೇಂದ್ರಸ್ತ್ರಿಷ್ಟುಭಾ ವಿಶ್ವೇ ದೇವಾ ಜಗತ್ಯಾ

ಮಂತ್ರತಾತ್ಪರ್ಯಂ ದರ್ಶಯತಿ—ಚತ್ವಾರ್ಯಕ್ಷರಾಣ್ಯೇಕೈಕಸ್ಮಾಚ್ಛಂದಸ ಉತ್ತರಾಣ್ಯ- ಧಿಕಾನಿ ಯೇಷು ಗಾಯತ್ರ್ಯಾದಿಷು ಜಗತ್ಯಂತೇಷು ಚ್ಛಂದಃಸು ತಾನಿ ಚತುರುತ್ತರಾಣಿ । ತಾದೃಶೈ- ಶ್ಛಂದೋಭಿಃ ಸಯುಗ್ಭೂತ್ವಾ ಸಾಹಿತ್ಯಂ ಪ್ರಾಪ್ಯ ದೇವಾ ಅಗ್ನ್ಯಾದಯ ಏತಾಮಾಸಂದೀಂ ಶ್ರಿಯಮೈ- ಶ್ವರ್ಯರೂಪಾಮಾರೋಹೇತ್ । ಯಸ್ಯಾಮಾಸಂದ್ಯಾಮೇತೇಗ್ನ್ಯಾದಯ ಇದಾನೀಮಪಿ ಪ್ರತಿಷ್ಠಿತಾ ವರ್ತಂತೇ। ದೇವಾಶ್ಛಂದೋಭಿಃ ಸಯುಗ್ಭೂತ್ವೇತ್ಯಯಮ (ಸ್ಯಾ) ರ್ಥೋಽಗ್ನಿರ್ಗಾಯತ್ರ್ಯೇತ್ಯಾದಿನಾ ಸ್ಪಷ್ಟೀಕೃತಃ ।

ಮೇಲೆ ಹೇಳಿದ ಎಂದರೆ ಅಗ್ನಿಮೊದಲಾದ ದೇವತೆಗಳು ಸಿಂಹಾಸನವನ್ನು ಹತ್ತಿಕುಳಿತುಕೊಳ್ಳುವ ಕಾಲದಲ್ಲಿ ಅವರವರು ಪಠಿಸಿದ ಮಂತ್ರಗಳ ತಾತ್ಪರ್ಯವನ್ನು ಇಲ್ಲಿ ವಿವರಿಸುವರು. ಅಗ್ನಿ ಮೊದಲಾದ ದೇವತೆಗಳು ಪಠಿಸಿದ ಮಂತ್ರ- ಗಳಲ್ಲಿ ಒಂದಕ್ಕಿಂತ ಮತ್ತೊಂದರಲ್ಲಿ ನಾಲ್ಕು ಅಕ್ಷರಗಳು ಹೆಚ್ಚಾಗಿರುವುವು. ಇವು ಐಶ್ವರ್ಯಾಭಿವೃದ್ಧಿಯಾಗುವುದನ್ನು ಸೂಚಿಸುವುವು ಹಿಂದೆ ಹೇಳಿದಂತೆ ಅಗ್ನಿಯು ಗಾಯತ್ರೀಛಂದಸ್ಸಿನ ಮಂತ್ರವನ್ನೂ, ಸವಿತೃದೇವನು ಉಷ್ಣಿಕ್ ಛಂದಸ್ಸನ್ನೂ, ಸೋಮದೇವನು ಅನುಷ್ಟುಪ್‌ಛಂದಸ್ಸನ್ನೂ ಬೃಹಸ್ಪತಿಯು ಬೃಹತೀಛಂದಸ್ಸನ್ನೂ, ಮಿತ್ರಾವರುಣರು ಪಂಕ್ತಿಶ್ಛಂದಸ್ಸನ್ನೂ, ಇಂದ್ರನು ತ್ರಿಷ್ಟುಪ್‌ಛಂದಸ್ಸನ್ನೂ, ವಿಶ್ವೇದೇವತೆಗಳು ಜಗತೀಛಂದಸ್ಸನ್ನೂ, ಪಠಿಸಿ ಈ ಸಿಂಹಾಸನಾರೋಹಣವನ್ನು ಮಾಡಿ ದರು. ಅದರಿಂದ ಅವರೆಲ್ಲರೂ ಈಗಲೂ ತಮ್ಮ ತಮ್ಮ ಪದವಿಗಳಲ್ಲಿ ಪ್ರತಿಷ್ಠಿತರಾಗಿಯೇ ಇರುವರು.

ತೇ ಏತೇ ಅಭ್ಯನೂಚ್ಯೇತೇ ಅಗ್ನೇರ್ಗಾಯತ್ರ್ಯಭವತ್ಸಯುಗ್ವೇತಿ .

ಉಕ್ತಮರ್ಥಂ ಮಂತ್ರಸಂವಾದೇನ ದ್ರಢಯತಿ—ತೇ ಏತೇ ದೇವಶ್ಛಂದಸೀ ಪರಸ್ಪರಸಹಿತೇ ಕಯಾಚಿದೃಚಾಽಭ್ಯನೂಚ್ಯೇತೇ । ಸೇಯಮಗ್ನೇರಿತ್ಯಾದಿಕಾ ಯೇಯಂ ಗಾಯತ್ರೀ ಸೇಯಮಗ್ನೇಃ ಸಯುಗ್ವಾ ಸಹವಾಸಿನ್ಯಭವದಿತಿ ತಸ್ಯಾ ಋಚೋಽರ್ಥಃ ।

ಮೇಲೆ ಹೇಳಿದ ದೇವತೆಗಳೂ ಅವರು ಪಠಿಸಿದ ಛಂದಸ್ಸಿನ ಋಕ್ಕುಗಳೂ ಪರಸ್ಪರ ಹೊಂದಿಕೊಂಡು ಯಾವಾ ಗಲೂ ಜತೆಯಲ್ಲಿ ಪಠಿಸಲ್ಪಡುತ್ತಿರುವುವು. ಎಂದರೆ ಅಗ್ನಿಯು ಯಾವಾಗಲೂ ಗಾಯತ್ರೀಛಂದಸ್ಸಿನ ಸಹವಾಸದಲ್ಲಿಯೇ ಇರುವನು ಗಾಯತ್ರಿಯು ಅವನಿಗೆ ಪ್ರೀತಿಪಾತ್ರವಾಗಿರುವುದು. ಅಗ್ನಿಯನ್ನು ಸ್ತುತಿಸುವಾಗ ಅವನನ್ನು ಗಾಯತ್ರೀ ಛಂದಸ್ಸಿನ ಮಂತ್ರಗಳಿಂದ ಸ್ತುತಿಸಿದರೆ ಅವನು ಸುಪ್ರೀತನಾಗುವನು ಇತರ ದೇವತೆಗಳ ವಿಷಯದಲ್ಲಿಯೂ ಅವರವರ ಛಂದಸ್ಸು ಗಳೂ ಅವರವರಿಗೆ ಪ್ರಿಯವಾಗಿರುವುವು.

ಕಲ್ಪತೇ ಹ ವಾ ಅಸ್ಮೈ ಯೋಗಕ್ಷೇಮ ಉತ್ತರೋತ್ತರಿಣೀಂ ಹ ಶ್ರಿಯ ಮಶ್ನುತೇಽಶ್ನುತೇ ಹ ಪ್ರಜಾನಾಮೈಶ್ವರ್ಯಮಾಧಿಪತ್ಯಂ ಯ ಏವ- ಮೇತಾ ಅನು ದೇವತಾ ಏತಾಮಾಸಂದೀಮಾರೋಹತಿ ಕ್ಷತ್ರಿಯಃ ಸನ್ ॥

**ಕ್ಷತ್ರಿಯಸ್ಯಾರೋಹಣಂ ಪ್ರಶಂಸತಿ—ಯಃ ಪುಮಾನ್ಸ್ವಯಂ ಕ್ಷತ್ರಿಯಃ ಸನ್ನಾರೋಹತಿ ಏತಾ ದೇವತಾ ಅನು ಸ್ವಯಮುಪ್ಯುಕ್ತೇನ ಪ್ರಕಾರೇಣೈತಾಮಾಸಂದೀಮಾರೋಹತಿ। ಅಸ್ಮೈ ಕ್ಷತ್ರಿಯಾಯ ಯೋಗಕ್ಷೇಮಃ ಕಲ್ಪತೇ ಸಿಧ್ಯತಿ। ಅಪ್ರಾಪ್ತಸ್ಯ ಲಾಭಸ್ಯ ಪ್ರಾಪ್ತಿರ್ಯೋಗಃ ಪ್ರಾಪ್ತಸ್ಯ ವಸ್ತುನೋ ರಕ್ಷಣಂ ಕ್ಷೇಮಃ। ಯೋಗಸಹಿತಃ ಕ್ಷೇಮೋ ಯೋಗಕ್ಷೇಮಃ। ಕಿಂಚಾಯಂ ಕ್ಷತ್ರಿಯ ಉತ್ತರೋತ್ತರಿಣೀಂ ದಿನೇ ದಿನೇ ವರ್ಧಮಾನಾಂ ಶ್ರಿಯಂ ಪ್ರಾಪ್ನೋತಿ। ತಥಾ ಸರ್ವಾಸಾಂ ಪ್ರಜಾನಾಮೈಶ್ವರ್ಯಂ ನಿಯಾಮಕತ್ವಮಾಧಿಪತ್ಯಮಧಿಕತ್ವೇನ ಪಾಲನಂ ಚ ಪ್ರಾಪ್ನೋತಿ।**

ಈ ಸಿಂಹಾಸನಾರೋಹಣದಿಂದ ರಾಜನಿಗೆ ಲಭಿಸುವ ಇಷ್ಟಾರ್ಥಗಳನ್ನು ಪ್ರಶಂಸೆಮಾಡುವರು. ಕ್ಷತ್ರಿಯನಾದ ಯಾವ ಪುರುಷನು (ರಾಜನು) ಮೇಲೆ ಹೇಳಿದಂತೆ ಸಿಂಹಾಸನವನ್ನು ಹತ್ತಿ ಕುಳಿತುಕೊಳ್ಳುವನೋ ಅವನನ್ನನುಸರಿಸಿ ಮೇಲೆ ಹೇಳಿದ ಅಗ್ನಿಯೇ ಮೊದಲಾದ ದೇವತೆಗಳೆಲ್ಲರೂ ಆ ಸಿಂಹಾಸನವನ್ನು ಹತ್ತಿ ಕುಳಿತುಕೊಂಡು ಅವನ ಜತೆಯಲ್ಲಿಯೇ ಇದ್ದು ಅವನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾ ಇರುವರು. ಇಲ್ಲಿ ಯೋಗಕ್ಷೇಮವೆಂದರೆ—ಇದುವರೆಗೂ ದೊರಕದಿದ್ದ ವಸ್ತುಗಳ ಲಾಭವು ಯೋಗವೆನಿಸುವುದು. ತನ್ನ ವಶದಲ್ಲಿಯೇ ಇರುವ ವಸ್ತುವು ಹಾಳಾಗದಂತೆ ಸುರಕ್ಷತೆಯಿಂದಿರುವುದು ಕ್ಷೇಮವೆನಿಸುವುದು. ಈ ಎರಡು ವಿಧವಾದ ಯೋಗಕ್ಷೇಮವೂ ಕ್ಷತ್ರಿಯನಿಗೆ ಉಂಟಾಗುವುದು (ಸಿದ್ಧಿಸುವುದು). ಇದಲ್ಲದೆ ಈ ರಾಜನು ಮುಂದೆ ಉತ್ತರೋತ್ತರ ಸಂಪದಾದಿ ಐಶ್ವರ್ಯಗಳನ್ನು ಪಡೆದು ಅಭಿವೃದ್ಧಿ ಹೊಂದುತ್ತಾ ತನ್ನ ಸಮಸ್ತ ಪ್ರಜೆಗಳ ಶ್ರೇಯೋಽಭಿವೃದ್ಧಿಯಲ್ಲಿ ಆಸಕ್ತನಾಗಿ ಅವರುಗಳ ಪ್ರೀತ್ಯಾದರಗಳನ್ನು ಪಡೆದು ಅವರನ್ನು ಸುಖದಿಂದ ಪಾಲನಮಾಡುತ್ತಾ ಚಿರಕಾಲ ಜೀವಿಸುವನು.

## ಅಥೈನಮಭಿಷೇಕ್ಷ್ಯನ್ನಪಾಂ ಶಾಂತಿಂ ವಾಚಯತಿ ॥

**ಅಭಿಷೇಕಕರ್ತುಃ ಶಾಂತಿಮಂತ್ರವಾಚನಂ ವಿಧತ್ತೇ—ಅಥಾಸಂದ್ಯಾರೋಹಣಾನಂತರಮೇವಮಾರೂಢಂ ಕ್ಷತ್ರಿಯಂ ಯೋಽನ್ಯೋಽಭಿಷೇಕ್ಷ್ಯತಿ ಸ ಪುಮಾನಪಾಂ ಶಾಂತಿಂ ಜಲದೇವತಾನಾಂ ಶಾಂತಿಕರಂ ಮಂತ್ರಂ ವಾಚಯೇತ್। ಕ್ಷತ್ರಿಯಸ್ಯಾಗ್ರೇ ಸ್ವಯಂ ಸಕೃದುಕ್ತ್ವಾ ತಂ ಕ್ಷತ್ರಿಯಂ ಪಾಠಯೇತ್।**

ಅಭಿಷೇಕಕಾಲದಲ್ಲಿ ಪಠಿಸುವ ಶಾಂತಿಮಂತ್ರವನ್ನು ವಿವರಿಸುವರು. ಹಿಂದೆ ಹೇಳಿದ ಪ್ರಕಾರವಾಗಿ ಕ್ಷತ್ರಿಯನಾದ ರಾಜನು ಪೀಠದಲ್ಲಿ ಕುಳಿತನಂತರ ಅಭಿಷೇಕಮಂತ್ರವನ್ನು ಪಠಿಸುವ ಪುರುಷನು (ಪುರೋಹಿತನು) ಜಲದೇವತಾಭಿಮಾನಿಯನ್ನು ಸ್ತುತಿಸುವ ಮಂತ್ರವನ್ನು ತಾನೂ ಹೇಳಿ ರಾಜನಿಂದಲೂ ಹೇಳಿಸಬೇಕು.

## ಶಿವೇನ ಮಾ ಚಕ್ಷುಷಾ ಪಶ್ಯತಾಽಽಪಃ ಶಿವಯಾ ತನ್ವೋಪಸ್ಪೃಶತ ತ್ವಚಂ ಮೇ। ಸರ್ವಾ ಅಗ್ನೀರಪ್ಸುಷದೋ ಹುವೇ ವೋ ಮಯಿ ವರ್ಚೋ ಬಲಮೋಜೋ ನಿಧತ್ತೇತಿ ॥

**ಏತಂ ಶಾಂತಿಮಂತ್ರಂ ದರ್ಶಯತಿ—ಹೇ ಆಪೋ ದೇವತಾಃ ಶಿವೇನ ಶಾಂತೇನಾನುಗ್ರಹ-ಯುಕ್ತೇನ ಚಕ್ಷುಷಾ ಮಾಮುವಲೋಕಯತ । ತಥಾ ಶಿವಯಾ ಶಾಂತಯಾ ತನ್ವಾ ಮದೀಯಾಂ ತ್ವಚಮುಪಸ್ಪೃಶತ । ಅಪ್ಸು ಜಲೇಷು ಸೀದಂತೀತ್ಯಪ್ಸುಷದ ಔರ್ವಾದಯೋಽಗ್ನಯಸ್ತಾನಗ್ನೀ-ನ್ಸರ್ವಾನ್ಯೋ ಯುಷ್ಮದರ್ಥಂ ಹುವ ಆಹ್ವಯಾಮಿ । ಯೂಯಮಪಿ ವರ್ಚಃ ಕಾಂತಿಂ ಬಲಂ ಶರೀರಬಲಂ ತತ್ಕಾರಣಮೋಜಶ್ಚ ಮಯಿ ನಿಧತ್ತ ಸಂಪಾದಯತ ।**

ಶಾಂತಿಮಂತ್ರವು ಈ ಕೆಳಗಿನಂತಿರುವುದು—ಮೇಲೆ ಹೇಳಿರುವದು ಮಂತ್ರದ ಅರ್ಥವು—ಎಲೈ ದೇವತೆಗಳೇ, ನನ್ನನ್ನು ಳಿಸಿ ಅನುಗ್ರಹದೃಷ್ಟಿಯಿಂದ ನೋಡಿರಿ. ಹಾಗೆಯೇ ಮಂಗಳಕರವಾದುದೂ, ಶಾಂತಿಯುತವಾದುದೂ ಆದ ನಿಮ್ಮ ಶರೀರದಿಂದ (ಬಲದಿಂದ) ನನ್ನ ಶರೀರವನ್ನು ಸ್ಪರ್ಶಮಾಡಿರಿ. ಜಲದಲ್ಲಿ ವಾಸಿಸುವ ಔರ್ವ ಮೊದಲಾದವರನ್ನು ನಿಮ್ಮ ಪ್ರೀತ್ಯರ್ಥವಾಗಿ ಆಹ್ವಾನಮಾಡುತ್ತೇನೆ (ಪ್ರಾರ್ಥಿಸಿ ಕರೆಯುತ್ತೇನೆ). ನೀವೂ ಸಹ ನನ್ನಲ್ಲಿ ಪ್ರಸನ್ನರಾಗಿ ವರ್ಚಸ್ಸು ಎಂದರೆ ಶರೀರಕಾಂತಿಯನ್ನೂ ಶರೀರಬಲವನ್ನೂ ಇವುಗಳಿಗೆ ಕಾರಣವಾದ ಓಜಸ್ಸನ್ನೂ ನನ್ನಲ್ಲಿ ಸ್ಥಾಪಿಸಿರಿ ಎಂದರೆ ಉಂಟುಮಾಡಿರಿ. ಇದು ಮಂತ್ರದ ಅರ್ಥವು.

## ನೈತಸ್ಯಾಭಿಷಿಷಿಚಾನಸ್ಯಾಶಾಂತಾ ಆಪೋ ವೀರ್ಯಂ ನಿರ್ಹಣನ್ನಿತಿ ॥

**ತದೇತಚ್ಛಾಂತಿಮಂತ್ರವಾಚನಂ ಪ್ರಶಂಸತಿ—ಅಶಾಂತಾ ಉಗ್ರಾ ಆಪಃ । ತಥಾ ಚಾನ್ಯತ್ರ ಶ್ರೂಯತೇ—'ದಿವ್ಯಾ ಆಪೋಽಶಾಂತಾಃ' ಇತಿ ॥ ತಾಶ್ಚಾಽಪಃ ಶಾಂತಿವಾಚನಾಭಾವೇಽಭಿಷಿಷಿ-ಚಾನಸ್ಯಾಭಿಷೇಕಂ ಪ್ರಾಪ್ತಸ್ಯೈತಸ್ಯ ಕ್ಷತ್ರಿಯಸ್ಯ ವೀರ್ಯಂ ನಿರ್ಹರೇಯುರ್ವಿನಾಶಯೇಯುಃ । ಸತಿ ತು ಶಾಂತಿಪಾಠೇ ನ ನಿರ್ಹಣನ್ನೈವ ವಿನಾಶಯಂತೀತ್ಯನೇನಾಭಿಪ್ರಾಯೇಣ ಶಾಂತಿಂ ವಾಚಯೇತ್ ।**

ಮೇಲೆ ಹೇಳಿದ ಶಾಂತಿಮಂತ್ರವನ್ನು ಪ್ರಶಂಸೆಮಾಡುವರು—ಉದಕಗಳು ಬಹಳ ಉಗ್ರ ಅಥವಾ ಕ್ರೂರ್ವಭಾವವುಳ್ಳವುಗಳೆಂದು ಹೇಳಲ್ಪಟ್ಟಿವೆ. ದಿವ್ಯಾ **ಆಪೋಽಶಾಂತಾಃ** ಎಂದು ಹೇಳಲಾಗಿದೆ. ಆದ್ದರಿಂದ ಜಲಾಭಿಮಾನಿದೇವತೆಯು ಶಾಂತಿವಾಚಕಮಂತ್ರಗಳಿಂದ ಸ್ತುತಿಸಿ ಶಾಂತಗೊಳಿಸದಿದ್ದರೆ ಆ ಉದಕಗಳು ಅಭಿಷೇಕವನ್ನು ಪಡೆಯುವವನ ಎಂದರೆ ಕ್ಷತ್ರಿಯನಾದ ರಾಜನ ಬಲಪರಾಕ್ರಮಗಳನ್ನು ನಾಶಮಾಡುವವು. ಆದ್ದರಿಂದ ರಾಜನ ಪರಾಕ್ರಮಾದಿಗುಣಗಳು ನಾಶವಾಗದಿರಲೆಂದು ಜಲಾಭಿಮಾನಿದೇವತೆಯನ್ನು ಶಾಂತಿಪಠನದಿಂದ ಸ್ತುತಿಸಬೇಕು.

---

*English Translation*

**(How the king has to ascend his throne at the inauguration ceremony ; what mantras he has to repeat at this occassion).**

He spreads the tiger skin on the throne in such a manner that the hairs come outside, and that part which covered the neck is turned eastward. For

the tiger is the Kshattra (royal power) of the beasts in the forest. The Kshattra is the royal prince; by means of this Kshattra the king makes his Kshattra (royal power) prosper. The king when taking his seat on the throne approaches it from behind, turning his face eastwards, kneels down with crossed legs, so that his right knee touches the earth, and holding throne with the hands prays over it the following mantra:—

" May Agni ascend thee, O throne, with the Gayatri metre ! May Savitar ascend thee with the Ushnih, Soma with the Anushtubh, Brihaspati with the Brihat, Mitra and Varuna with the Pankti, Indra with the Trishtubh and the Visve-devah with the Jagati metres. After them I ascend this throue, to be ruler, to be a great ruler, to be an universal ruler, to obtain all desires fulfilled, to be an independant and most distinguished ruler on this earth, and to reach the world of Prajapati, to be there a ruler, a great ruler, a supreme ruler, to be independent, and to live there for a long time! "

After having repeated this Mantra the king should ascend the throne, with his right knee first, and then with his left. This, this is done; so they say.

The gods joined with the metres, which were placed in such an order that the following exceeded the preceding one always by four syllables, ascended this throne which is fortune, and posted themselves on it, Agni with the Gayatri, Savitar with the Ushnih, Soma with the Anushtubh' Brihaspati, with the Brihati, Mitra, and Varuna with the Pankti, Indra with the Trishtubh, the Visvedevah with the Jagati. The two verses (where the joining of the gods to their metres is mentioned commencing, Agner Gayatri abhavat ( 10, 130. 4-5 ) are then recited.

The Kshattriya who, after these deities (after having previously invoked them in this manner,) ascends his throne, obtains for himself the power not only of acquiring anything, but of keeping what he has acquired; his prosperity increases from day to day, and he will rule supreme over all his subjects.

When the priest is about to sprinkle him with water then he makes the king invoke the waters for their blessing by these words: " Look upon me waters with a favourable eye! touch my skin with your happy body! I invoke all the fires which reside in the waters to bestow on me splendour, strength vigour. " For the water,, if not invoked for a blessing by a mantra, take away the strength faom a Kshattriya who is already consecrated ; but not if they have been duly invoked.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಸಪ್ತತ್ರಿಂಶಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೇಳನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು
ಸಮಾಪ್ತವಾದುದು.



## ಅಥ ಸಪ್ತತ್ರಿಂಶಾಧ್ಯಾಯೇ ತೃತೀಯಃ ಖಂಡಃ

### ಮೂವತ್ತೇಳನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

[ಶಾಂತಿವಾಚನ ಮಂತ್ರಗಳಿಂದ ರಾಜನನ್ನು ಪ್ರೋಕ್ಷಿಸುವುದು. ಆ ಕಾಲದಲ್ಲಿ ಭೂಃ ಮೊದಲಾದ ಶಬ್ದಗಳನ್ನು ಹಣಿಸಬೇಕೇ ಬೇಡವೇ ಎಂಬ ವಿಚಾರದಲ್ಲಿ ಭಿನ್ನಾಭಿಪ್ರಾಯಗಳು.]

**ಅಥೈನಮುದುಂಬರಶಾಖಾಮಂತರ್ಧಾಯಾಭಿಷಿಂಚತಿ ||**

ಅಭಿಷೇಕಪ್ರಕಾರಂ ವಿಧತ್ತೇ—ಅಥ ಶಾಂತಿವಚನಾನಂತರಮೇನಂ ಕ್ಷತ್ರಿಯಮುದುಂಬರ-ಶಾಖಾಮಂತರ್ಧಾಯ ಶಿರಸ್ಯುದುಂಬರಶಾಖಯಾ ವ್ಯವಧಾನಂ ಕೃತ್ವಾ ಚಮಸಸ್ಥೈರ್ದಧ್ಯಾದಿಭಿ-ರಭಿಷಿಂಚೇತ್ ||

ಅಭಿಷೇಕವಿಧಾನವನ್ನು (ಸ್ನಾನಮಾಡಿಸುವುದನ್ನು) ವಿವರಿಸುವರು—ಹಿಂದೆ ಹೇಳಿದ ಪ್ರಕಾರ ಶಾಂತಿ ಮಂತ್ರಗಳನ್ನು ಪಠಿಸಿದನಂತರ ಕ್ಷತ್ರಿಯರಾಜನನ್ನು ಉದುಂಬರ ಪೀಠದಲ್ಲಿ ಕುಳ್ಳಿರಿಸಿ ಅವನ ಶಿರಸ್ಸಿನ ಮೇಲೆ ಒಂದು ಉದುಂಬರ ಕೊಸೆಯನ್ನು ಇಟ್ಟು ಒಬ್ಬ ಋತ್ವಿಜನು ತನ್ನ ಹಸ್ತದಲ್ಲಿರುವ ಚಮಸ ಪಾತ್ರೆಯಲ್ಲಿರುವ ದಧಿ (ಮೊಸರು) ಮೊದಲಾದ ದ್ರವ್ಯಸಹಿತವಾದ ಜಲದಿಂದ ಅಭಿಷೇಕಮಾಡಬೇಕು. ಅಭಿಷೇಕಮಾಡುವ ಕಾಲದಲ್ಲಿ ಕೆಲವು ಮಂತ್ರಗಳನ್ನು ಹೇಳಬೇಕು.

ಇಮಾ ಆಪಃ ಶಿವತಮಾ ಇಮಾಃ ಸರ್ವಸ್ಯ ಭೇಷಜೀಃ । ಇಮಾ
ರಾಷ್ಟ್ರಸ್ಯ ವರ್ಧನೀರಿಮಾ ರಾಷ್ಟ್ರಭೃತೋಽಮೃತಾಃ ॥

**ತಿಸ್ರ ಋಚ ಏಕಂ ಯಜುರ್ವ್ಯಾಹೃತಯಶ್ಚೇತ್ಯೇತೇಽಭಿಷೇಕಮಂತ್ರಾಃ । ತತ್ರ ಪ್ರಥಮಾ-ಮೃಚಮಾಹ—ಆಪ ಇತ್ಯನೇನ ದಧ್ಯಾದಿಸರ್ವದ್ರವ್ಯಾಣ್ಯುಪಲಕ್ಷ್ಯಂತೇ । ಇಮಾ ದಧ್ಯಾದಿಸಹಿತಾ ಆಪಃ ಸರ್ವಸ್ಯ ದಾರಿದ್ರ್ಯಾದಿರೋಗಸ್ಯ ಭೇಷಜೀರೌಷಧರೂಪಾಃ । ತಥೇಮಾ ಆಪೋ ರಾಷ್ಟ್ರಸ್ಯ ವರ್ಧನೀರಭಿವೃದ್ಧಿಹೇತವೋಽತ ಏವೇಮಾ ಆಪೋ ರಾಷ್ಟ್ರಭೃತೋ ರಾಷ್ಟ್ರಧಾರಿಣ್ಯಃ ಸ್ವಯಂ ಚಾಮೃತಾ ವಿನಾಶರಹಿತಾಃ ॥**

ಆ ಮಂತ್ರಗಳು ಮೂರು. ಅವುಗಳಲ್ಲಿ ಮೊದಲನೆಯದು ಋಙ್ಮಂತ್ರವು; ಎರಡನೆಯದು ಯಜುರ್ಮಂತ್ರವು; ಮೂರನೆಯದು ವ್ಯಾಹೃತಿಗಳು. ಮೇಲಿನ ಮಂತ್ರದಲ್ಲಿ ಆಪಃ ಎಂದು ಮಾತ್ರ ಹೇಳಲಾಗಿದೆ. ಈ ಶಬ್ದವು ಜಲವನ್ನು ಮಾತ್ರ ಸೂಚಿಸುವುದಿಲ್ಲ. ಉದಕವನ್ನು ಮತ್ತು ದಧಿ ಮೊದಲಾದ ದ್ರವ್ಯವನ್ನೂ ಸೂಚಿಸುವುದು. ಈ ಋಕ್ಕಿನ ಅರ್ಥವು. ಈ ಉದಕಗಳು ದಧಿ ಮೊದಲಾದ ದ್ರವ್ಯಗಳಿಂದ ಕೂಡಿ ಶಾಂತಸ್ವಭಾವವುಳ್ಳವುಗಳಾಗಿರುವವು, ಮತ್ತು ಈ ಉದಕಗಳು ಸಮಸ್ತ ವಿಧವಾದ ರೋಗ, ದರಿದ್ರ ಮೊದಲಾದ ಅನಿಷ್ಟಗಳನ್ನು ಪರಿಹರಿಸುವ ಔಷಧರೂಪವಾಗಿರುವವು ಮತ್ತು ಈ ಉದಕಗಳು ರಾಷ್ಟ್ರದ (ದೇಶದ) ಅಭಿವೃದ್ಧಿಗೆ ಕಾರಣಭೂತವಾಗಿರುವುವು ಎಂದರೆ ರಾಷ್ಟ್ರವನ್ನು ಅಭಿವೃದ್ಧಿಯಾಗುವಂತೆ ಮಾಡುವವು. ಆದಕೆ ಈ ಉದಕಗಳು ತಾವು ಮಾತ್ರ ನಾಶವನ್ನೈದುವುದಿಲ್ಲ.

ಯಾಭಿರಿಂದ್ರಮಭ್ಯಷಿಂಚತ್ಪ್ರಜಾಪತಿಃ ಸೋಮಂ ರಾಜಾನಂ ವರುಣಂ
ಯಮಂ ಮನುಂ । ತಾಭಿರದ್ಭಿರಭಿಷಿಂಚಾಮಿ ತ್ವಾಮಹಂ ರಾಜ್ಞಾಂ
ತ್ವಮಧಿರಾಜೋ ಭವೇಹ ॥

**ದ್ವಿತೀಯಾಮೃಚಮಾಹ—ಪುರಾ ಪ್ರಜಾಪತಿರ್ಯಾಭಿರ್ದಧ್ಯಾದಿ ಸಹಿತಾಭಿರದ್ಭಿರಿಂದ್ರಾದೀನ ಭ್ಯಷಿಂಚತ್ । ಹೇ ಕ್ಷತ್ರಿಯ ತಾಭಿರದ್ಭಿಸ್ತ್ವಾಮಹಮಭಿಷಿಂಚಾಮಿ । ತ್ವಂ ಚೇಹ ಲೋಕೇ ರಾಜ್ಞಾಂ ಸರ್ವೇಷಾಮಧಿಕೋ ರಾಜಾ ಭವ ॥**

ಎರಡನೆಯ ಋಕ್ಕಿನ ಅರ್ಥವನ್ನು ವಿವರಿಸುವನು—ಪೂರ್ವದಲ್ಲಿ ಸ್ವಯಂ ಪ್ರಜಾಪತಿಯೇ ದಧಿ ಮೊದಲಾದ ದ್ರವ್ಯಗಳಿಂದ ಮಿಶ್ರಿತವಾದ ಉದಕಗಳಿಂದ ಇಂದ್ರ, ರಾಜನಾದ ಸೋಮದೇವ, ವರುಣ, ಯಮ, ಮನು ಮುಂತಾದವರಿಗೆ ಅಭಿಷೇಕ ಮಾಡಿದನು. ಎಲೈ ರಾಜನೇ ಅಂತಹ ಶುಭಕರಗಳಾದ ಉದಕಗಳಿಂದಲೇ ನಾನು ನಿನಗೆ ಅಭಿಷೇಕವನ್ನು ಮಾಡ ದೆನು. ಈ ಅಭಿಷೇಕದ ಪ್ರಭಾವದಿಂದ ನೀನು ಈ ಭೂಲೋಕದಲ್ಲಿ ಎಲ್ಲ ರಾಜರುಗಳಿಗೂ ಅಧಿರಾಜನಾಗಿ (ಶ್ರೇಷ್ಠನಾದ ರಾಜನಾಗಿ) ಸುಖದಿಂದಿರು ಎಂದು ಅಭಿಷೇಕಮಾಡುವ ಪುರೋಹಿತನು ಹೇಳುವನು.

ಮಹಾಂತಂ ತ್ವಾ ಮಹೀನಾಂ ಸಮ್ರಾಜಂ ಚರ್ಷಣೀನಾಂ ದೇವೀ
ಜನಿತ್ರ್ಯಜೀಜನದ್ಭದ್ರಾ ಜನಿತ್ರ್ಯಜೀಜನತ್ ॥

ತೃತೀಯಾಮೃಚಮಾಹ—ಜನಿತ್ರೀ ತವೋತ್ಪಾದಿಕಾ ಮಾತೃರೂಪಾ ದೇವೀ ತ್ವಾಂ ಮಹೀನಾಂ ಮಹಾಂತಂ ಮಹತಾಮಪಿ ಪುರುಷಾಣಾಂ ಮಧ್ಯೇಽತಿಶಯಯೇನ ಮಹಾಂತಂ ಚರ್ಷಣೀನಾಂ ಮನುಷ್ಯಾಣಾಂ ಚ ಸರ್ವೇಷಾಂ ಸಮ್ರಾಜಂ ಸಮ್ಯಗ್ಧರ್ಮೇಣ ಪಾಲಯಿತಾರಂ ಕೃತ್ವಾಽಜೀಜನದುತ್ಪಾದಿತವತೀ । ಅತೋ ಭವದೀಯಾ ಜನಿತ್ರೀ ಮಾತಾ ಸ್ವಯಂ ತದಾ ಪುಣ್ಯಾತ್ಮಾ ಭೂತ್ವೋತ್ಪಾದಿತವತೀ ॥

ಮೂರನೆಯ ಮಂತ್ರದ ಅರ್ಥವನ್ನು ವಿವರಿಸುವರು—ಎಲೈ ರಾಜನೇ, ನಿನ್ನನ್ನು ಉತ್ಪಾದಿಸಿದ ಮಾತೃರೂಪಳಾದ ಉದಕಾಭಿಮಾನಿದೇವತೆಯು ಉತ್ತಮರೂ ಗಣ್ಯರೂ ಆದ ಮನುಷ್ಯರಲ್ಲಿ ಶ್ರೇಷ್ಠನಾಗಿರುವವನೂ, ನಿನ್ನ ರಾಜ್ಯದಲ್ಲಿರುವ ಪ್ರಜೆಗಳಿಗೆಲ್ಲಾ ಅಧಿಪತಿಯಾಗಿರುವವನೂ, ಎಂದರೆ ಪ್ರಜೆಗಳನ್ನು ಧರ್ಮದಿಂದ ಪಾಲಿಸುವವನೂ ಆದ ನಿನ್ನನ್ನು ಉತ್ಪನ್ನಮಾಡಿದಳು. ಆದ್ದರಿಂದಲೇ ಆ ನಿನ್ನ ಮಾತೆಯು ಪುಣ್ಯಾತ್ಮಳೂ ಮಂಗಳಕರಳೂ ಆಗಿರುವಳು.

ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮಗ್ನೇಸ್ತೇಜಸಾ ಸೂರ್ಯಸ್ಯ ವರ್ಚಸೇಂದ್ರಸ್ಯೇಂದ್ರಿಯೇಣಾಭಿಷಿಂಚಾಮಿ ಬಲಾಯ ಶ್ರಿಯೈ ಯಶಸೇಽನ್ನಾದ್ಯಾಯ ॥

ತಿಸ್ರ ಋಚೋಽಭಿಧಾಯ ಯಜುರ್ದರ್ಶಯತಿ—ಹೇ ಕ್ಷತ್ರಿಯ ಸವಿತುಃ ಪ್ರೇರಕಸ್ಯ ಪರಮೇಶ್ವರಸ್ಯ ಪ್ರಸವೇಽನುಜ್ಞಾಯಾಂ ಸತ್ಯಾಂ ತ್ವಾಮಭಿಷಿಂಚಾಮಿ । ಕೇನ ಸಾಧನೇನ । ಅಶ್ವಿನೋರ್ದೇವಯೋಃ ಸಂಬಂಧಿಭ್ಯಾಂ ಬಾಹುಭ್ಯಾಂ ನ ತು ಮದೀಯಾಭ್ಯಾಮ್ । ತಥಾ ಪೂಷ್ಣೋ ದೇವಸ್ಯ ಹಸ್ತಾಭ್ಯಾಂ ಮಣಿಬಂಧಪರ್ಯಂತೌ ದಂಡಕಾರೌ ಬಾಹೂ ಅಂಗುಲಿಸಹಿತಾವಗ್ರಭಾಗೌ ಹಸ್ತೌ । ತಥಾಽಗ್ನಿಸಂಬಂಧಿನಾ ತೇಜಸಾ ಶರೀರಕಾಂತ್ಯಾ । ಸೂರ್ಯಸ್ಯ ಸಂಬಂಧಿನಾ ವರ್ಚಸಾ ಬಾಹ್ಯಪ್ರಕಾಶೇನ । ಇಂದ್ರಸಂಬಂಧಿನೇಂದ್ರಿಯೇಣ ಚಕ್ಷುರಾದಿಪಾಟವೇನ । ಕಸ್ಮೈ ಪ್ರಯೋಜನಾಯಾಯಮಭಿಷೇಕಃ । ತವ ಶರೀರಬಲಾಯ, ಶ್ರಿಯೈ ಹಸ್ತ್ಯಶ್ವಾದಿಸಂಪದೇ, ಯಶಸೇ ಕೀರ್ತ್ಯೈ, ಅನ್ನಾದ್ಯಾಯಾನ್ನಸಮೃದ್ಧಯೇ ॥

ಮೂರು ಋಙ್ಮಂತ್ರಗಳನ್ನು ವಿವರಿಸಿದನಂತರ ಈಗ ಯಜುರ್ಮಂತ್ರವನ್ನು ವಿವರಿಸುವರು—ಎಲೈ ಕ್ಷತ್ರಿಯನಾದ ರಾಜನೇ, ಸರ್ವರಿಗೂ ಪ್ರೇರಕನೂ ಪರಮೇಶ್ವರನ ಸ್ವರೂಪವೂ ಆದ ಸವಿತೃದೇವನ ಅನುಜ್ಞೆಯಿಂದ ನಿನಗೆ ಅಭಿಷೇಕ ಮಾಡುವೆನು. ಹೇಗೆ ಎಂದರೆ, ನಾನು ಅಭಿಷೇಕಮಾಡಿದರೂ ಈ ನನ್ನ ಕೈಗಳು ಅಶ್ವಿನೀದೇವತೆಗಳ ಸ್ವರೂಪವೇ ಆಗಿರುವುವು. ಆದ್ದರಿಂದ ಅಶ್ವಿನೀದೇವತೆಗಳ ಬಾಹುಗಳಿಂದಲೂ ಪೂಷದೇವನ ಹಸ್ತಗಳಿಂದಲೂ, ಅಗ್ನಿಯ ತೇಜಸ್ಸಿನಿಂದಲೂ ಇಂದ್ರನ ವೀರ್ಯಾದಿಸಾಮರ್ಥ್ಯಗಳಿಂದಲೂ ಕೂಡಿ (ಎಂದರೆ ಈ ದೇವತೆಗಳ ಶಕ್ತಿಸಾಮರ್ಥ್ಯಗಳು ನನ್ನ ಎಂದರೆ ಪುರೋಹಿತನ ಹಸ್ತಗಳಲ್ಲಿ ನೆಲೆಸಿರುವವು.) ರಾಜನಾದ ನಿನಗೆ ಶರೀರದಲ್ಲಿ ಬಲವನ್ನುಂಟುಮಾಡುವುದಕ್ಕಾಗಿಯೂ, ಹಸ್ತ್ಯಶ್ವಾದಿಸಂಪದಭಿವೃದ್ಧಿಗಾಗಿಯೂ, ಕೀರ್ತಿಯನ್ನು ತಿಳಿಸುವುದಕ್ಕಾಗಿಯೂ, ಅನ್ನಾದ್ಯಾಹಾರಗಳ ಅಭಿವೃದ್ಧಿಯಿಂದ ಸುಖವನ್ನುಂಟುಮಾಡುವುದಕ್ಕಾಗಿಯೂ ಮೇಲೆ ಹೇಳಿದ ಮಂಗಳಕರಗಳಾದ ಉದಕಗಳಿಂದ ಅಭಿಷೇಕಮಾಡುತ್ತೇನೆ. ಇದು ಮಂತ್ರದ ಅರ್ಥವು.

ಭೂರಿತಿ ಯ ಇಚ್ಛೇದಿಮಮೇವ ಪ್ರತ್ಯನ್ನಮದ್ಯಾದಿತ್ಯಥ ಯ ಇಚ್ಛೇ-
ದ್ದ್ವಿಪುರುಷಂ ಭೂರ್ಭುವ ಇತ್ಯಥ ಯ ಇಚ್ಛೇತ್ತ್ರಿಪುರುಷಂ ವಾಽಪ್ರ-
ತಿಮಂ ವಾ ಭೂರ್ಭುವಃ ಸ್ವರಿತಿ ||

**ಅಥ ಕಾಮನಾಭೇದೇನ ವ್ಯಾಹೃತೀರ್ದರ್ಶಯತಿ—ಯೋಽಭಿಷೇಕ್ತಾ ಇಮಮೇವಾಭಿಷಿಚ್ಯ-ಮಾನಂ ಕ್ಷತ್ರಿಯಂ ಪ್ರತ್ಯಸಾವನ್ನಮದ್ಯಾನ್ನೀರೋಗೋ ಭವೇದಿತೀಚ್ಛೇತ್ಕಾಮಯೇತ ತಂ ಭೂರಿತಿ ವ್ಯಾಹೃತ್ಯಾಽಭಿಷಿಂಚೇತ್ । ಅಥ ಯೋಽಭಿಷೇಕ್ತಾ ಪುತ್ರಪೌತ್ರಾಭ್ಯಾಂ ಸಹಿತಮಿಮಂ ಕ್ಷತ್ರಿಯಂ ಪ್ರತ್ಯನ್ನಮದ್ಯಾದಿತಿ ಕಾಮಯೇತ । ತದಾನೀಂ ಭೂರ್ಭುವ ಇತಿ ವ್ಯಾಹೃತಿದ್ವಯೇನಾಭಿಷಿಂಚೇತ್ । ಅಥ ಯೋಽಭಿಷೇಕ್ತಾ ಪುತ್ರಪೌತ್ರಪ್ರಪೌತ್ರೈಸ್ತ್ರಿಭಿಃ ಪುರುಷೈರ್ಯುಕ್ತಮಿಮಂ ಕ್ಷತ್ರಿಯಮಿಚ್ಛೇತ್ಪುರುಷತ್ರಯಪರ್ಯಂತಂ ಜೀವಿತ್ವಾ ಸುಖೇನಾನ್ನಮದ್ಯಾದಿತಿ ಕಾಮಯೇತ । ಅಥ ವಾ ತಮೇತಮ-ಪ್ರತಿಮಂ ಸ್ವತುಲ್ಯಕ್ಷತ್ರಿಯಾಂತರರಹಿತಂ ಕುರ್ಯಾಮಿತಿ ಕಾಮಯೇತ ತದಾನೀಂ ಭೂರ್ಭುವಃ ಸ್ವರಿತಿ ವ್ಯಾಹೃತಿತ್ರಯೇಣಾಭಿಷಿಂಚೇತ್ ।**

ರಾಜನಿಗೆ ಅಭಿಷೇಕಮಾಡಿಸುವ ಪುರೋಹಿತನು, ರಾಜನು ಆರೋಗ್ಯವುಳ್ಳವನಾಗಿ ಆಹಾರವನ್ನು ಸೇವಿಸುತ್ತಾ ಸುಖವಾಗಿ ಜೀವಿಸಿರಬೇಕೆಂದು ಇಚ್ಛಿಸಿದರೆ ಆಗ **ಭೂಃ** ಎಂಬ ಒಂದೇ ವ್ಯಾಹೃತಿಯನ್ನು ಉಚ್ಚರಿಸಿ ಅಭಿಷೇಕಮಾಡಬೇಕು ಅಥವಾ ರಾಜನು ತನ್ನ ಪುತ್ರ ಮತ್ತುಪೌತ್ರ (ಮೊಮ್ಮಗ) ರಿಂದ ಸುಖವಾಗಿ ಜೀವಿಸುತ್ತಿರಬೇಕೆಂದು ಇಚ್ಛಿಸಿದಲ್ಲಿ ಆಗ **ಭೂರ್ಭವಃ** ಎಂಬ ಎರಡು ವ್ಯಾಹೃತಿಪೂರ್ವಕವಾಗಿ ಅಭಿಷೇಕಮಾಡಬೇಕು. ಅಥವಾ ರಾಜನು ತನ್ನ ಪುತ್ರ, ಪೌತ್ರ ಪ್ರಪೌತ್ರರುಗಳಿಂದ (ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಮುಂತಾದವರಿಂದ ಕೂಡಿ) ಕೂಡಿ ಬಹುಕಾಲ ಸುಖವಾಗಿ ಜೀವಿಸುತ್ತಿರಬೇಕೆಂದು ಇಚ್ಛಿಸಿದಲ್ಲಿ ಆಗ **ಭೂರ್ಭುವಃಸ್ವಃ** ಎಂಬ ಮೂರು ವ್ಯಾಹೃತಿಗಳನ್ನು ಪಠಿಸುತ್ತಾ ರಾಜನಿಗೆ ಅಭಿಷೇಕಮಾಡಿಸಬೇಕು ಇದಲ್ಲದೆ ಆ ರಾಜನು ತನಗೆ (ಪುರೋಹಿತನಿಗೆ) ಸಮನಾದ ಉತ್ತಮಗುಣಗಳುಳ್ಳವನಾಗಿ ಬಾಳಬೇಕೆಂದು ಇಚ್ಛಿಸಿದಲ್ಲಿ ಆಗಲೂ ಭೂರ್ಭುವಃಸ್ವಃ ಎಂದು ಮೂರು ವ್ಯಾಹೃತಿಗಳಿಂದಲೂ ಅಭಿಷೇಕಮಾಡಬೇಕು.

ತದ್ಧೈಕ ಆಹುಃ ಸರ್ವಾಪ್ತಿರ್ವಾ ಏಷಾ ಯದೇತಾ ವ್ಯಾಹೃತ-
ಯೋಽತಿ ಸರ್ವೇಣ ಹಾಸ್ಯ ಪರಸ್ಮೈ ಕೃತಂ ಭವತೀತಿ ತಮೇತೇನಾಭಿ-
ಷಿಂಚೇದ್ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ
ಪೂಷ್ಣೋ ಹಸ್ತಾಭ್ಯಾಮಗ್ನೇಸ್ತೇಜಸಾ ಸೂರ್ಯಸ್ಯ ವರ್ಚಸೇಂ-
ದ್ರಸ್ಯೇಂದ್ರಿಯೇಣಾಭಿಷಿಂಚಾಮಿ ಬಲಾಯ ಶ್ರಿಯೈ ಯಶಸೇಽ-
ನ್ನಾದ್ಯಾಯೇತಿ ||

ಅಥ ಕಂಚಿತ್ಪೂರ್ವಪಕ್ಷಮುತ್ಥಾಪಯತಿ—ತದ್ಧ ತಸ್ಮಿನ್ನೇವಾಭಿಷೇಕೇ ಬ್ರಹ್ಮವಾದಿನಃ ಕೇಚಿದೇವಮಾಹುಃ । ಯಾ ಏತಾ ವ್ಯಾಹೃತಯಃ ಸಂತಿ ಏಷಾ ವ್ಯಾಹೃತಿರೂಪಾ ಸರ್ವಾಪ್ತಿರ್ವೈ ಸರ್ವಫಲಪ್ರಾಪ್ತಿಸಾಧನಮ್ । ಅತೋ ವ್ಯಾಹೃತಿಭಿರಭಿಷೇಕೇ ಸತ್ಯಸ್ಯಾಭಿಷಿಚ್ಯಮಾನಸ್ಯ ಪರಸ್ಮೈ .

ಪರಸ್ಯ ಸ್ವಸ್ಮಾದನ್ಯಸ್ಯ ಕ್ಷತ್ರಿಯಸ್ಯಾತಿ ಸರ್ವೇಣ ತದಪೇಕ್ಷಾಮಾತ್ರಮಭಿಕ್ರಮ್ಯ ಕೃತ್ಸ್ನೇನಾಪಿ ಮಂತ್ರ ಜಾತೇನಾಭಿಷೇಚನಂ ಕೃತಂ ಭವತಿ । ತದೇತದಧಿಕಾಭಿಷೇಚನಮಯುಕ್ತಮಿತ್ಯಭಿಪ್ರೇತ್ಯ ತಂ ಕ್ಷತ್ರಿಯಮೇತೇನ ದೇವಸ್ಯ ತ್ವೇತ್ಯಾದಿನಾ ಯಜುಷಾಭಿಷಿಂಚೇನ್ನ ತು ವ್ಯಾಹೃತಿಭಿರಿತಿ ತೇಷಾಂ ಪಕ್ಷಃ ॥

ಇಲ್ಲಿ ಒಂದು ಪೂರ್ವಪಕ್ಷವಿರುವುದು—ಈ ಅಭಿಷೇಕ ವಿಷಯದಲ್ಲಿ ಕೆಲವು ಬ್ರಹ್ಮವಾದಿಗಳು ಈ ರೀತಿ ಹೇಳುವರು— ಮೇಲೆ ಹೇಳಿದ ವ್ಯಾಹೃತಿಗಳು ಸಮಸ್ತ ಫಲ (ಇಷ್ಟಾರ್ಥ)ಗಳನ್ನು ಸಾಧಿಸಿಕೊಡತಕ್ಕ ಸಾಮರ್ಥ್ಯವುಳ್ಳವು. ಅದಲ್ಲದೆ ವ್ಯಾಹೃತಿ ಗಳಿಂದ ರಾಜನಾದವನು ಅಭಿಷಕ್ತನಾದರೆ ಅವನು ತನ್ನ ಸಮಸ್ತ ಇಷ್ಟಾರ್ಥಗಳನ್ನು ಕೊಡುವ ಇಂಥ ವ್ಯಾಹೃತಿಗಳನ್ನು ಪಠಿಸಿದ ಮೇಲೆ ಇತರ ಮಂತ್ರಗಳನ್ನು ಪಠಿಸುವುದು ವ್ಯರ್ಥವಲ್ಲವೇ ? ಆದ್ದರಿಂದ ಕ್ಷತ್ರಿಯನಿಗೆ ಅಭಿಷೇಕಮಾಡುವ ಕಾಲದಲ್ಲಿ ದೇವಸ್ಯತ್ವಾ ಇತ್ಯಾದಿ ಮಂತ್ರಗಳನ್ನೇ ಹೇಳುವುದು ಸಾಕಾಗಿರುವುದು. ವ್ಯಾಹೃತಿಗಳನ್ನು ಪಠಿಸಬೇಕಾದ ಅವಶ್ಯಕತೆ ಏನೂ ಇರುವುದಿಲ್ಲ. ಇದು ಪೂರ್ವಪಕ್ಷ.

ತದು ಪುನಃ ಪರಿಚಕ್ಷತೇ ಯದಸರ್ವೇಣ ವಾಚೋಽಭಿಷಿಕ್ತೋ ಭವತೀ-ಶ್ವರೋ ಹ ತು ಪುರಾಽಽಯುಷಃ ಪ್ರೈತೋರಿತಿ ಹ ಸ್ಮಾಹ ಸತ್ಯ-ಕಾಮೋ ಜಾಬಾಲೋಽಯಮೇತಾಭಿರ್ವ್ಯಾಹೃತಿಭಿರ್ನಾಭಿಷಿಂಚಂ-ತೀತಿ ॥

ತಂ ಪಕ್ಷಂ ದೂಷಯತಿ—ತದು ತದಪಿ ಪೂರ್ವೋಕ್ತಂ ಮತಂ ಪುನರನ್ಯೇಽಭಿಜ್ಞಾಃ ಪರಿಚಕ್ಷತೇ ನಿರಾಕುರ್ವಂತಿ । ಯಂ ಕ್ಷತ್ರಿಯಮೇತಾಭಿರ್ವ್ಯಾಹೃತಿಭಿರ್ನಾಭಿಷಿಂಚಂತಿ ಏಷ ಕ್ಷತ್ರಿಯೋ ಯದ್ಯಸ್ಮಾತ್ಕಾರಣಾದಸರ್ವೇಣ ಸಂಪೂರ್ತಿರಹಿತೇನ ವಾಚೋ ವಾಕ್ಯೇನ ಮಂತ್ರೇ-ಣಾಭಿಷಿಕ್ತೋ ಭವತಿ ತಸ್ಮಾದಯಂ ಸ್ವೋಚಿತಾದಾಯುಷಃ ಪುರಾ ಪ್ರೈತೋ ಮರ್ತುಮೀಶ್ವರಃ ಸಮರ್ಥೋಭವತಿ । ತಸ್ಮಾದಾಯುಃ ಕ್ಷಯಹೇತುತ್ವಾದಯಂ ಪಕ್ಷೋ ನ ಯುಕ್ತ ಇತಿ ಜಾಬಾಲಾಯಾಃ ಪುತ್ರಃ ಸತ್ಯಕಾಮೋ ಮಹರ್ಷಿರಾಹ ॥

ಮೇಲಿನ ಪೂರ್ವಪಕ್ಷವನ್ನು ನಿರಾಕರಿಸುವರು—ಮೇಲೆ ಹೇಳಿದ ಪೂರ್ವಪಕ್ಷವನ್ನು ಅಭಿಜ್ಞರಾದ ಕೆಲವರು ನಿರಾಕರಿಸುವರು. ಕ್ಷತ್ರಿಯನಾದ ರಾಜನಿಗೆ ಅಭಿಷೇಕಮಾಡಿಸುವಾಗ ವ್ಯಾಹೃತಿಗಳನ್ನು ಬಿಟ್ಟು ಇತರ ಮಂತ್ರಗಳಿಂದ ಅಭಿಷೇಕಮಾಡಿಸಿದರೆ ಆಗ ಎಲ್ಲಾ ಮಂತ್ರಗಳನ್ನೂ ಪೂರ್ತಿಯಾಗಿ ಹೇಳಿದಂತಾಗುವುದಿಲ್ಲ. ಆದ್ದರಿಂದ ಈ ಕ್ಷತ್ರಿಯನಿಗೆ ತನ್ನ ಆಯುಸ್ಸು ಪೂರ್ತಿಯಾಗಿರುವರೆಗೂ ಬದುಕಿರುವುದು ಸಾಧ್ಯವಾಗುವುದಿಲ್ಲ ಎಂದರೆ ತನ್ನ ಸಂಪೂರ್ಣ ಆಯುಸ್ಸು ಮುಗಿಯುವುದಕ್ಕೆ ಮೊದಲೇ ಮೃತನಾಗುವ ಸಂಭವವುಂಟು. ಆದ್ದರಿಂದ ಆಯುಸ್ಸು ಕ್ಷಯಕಾರಿಯಾಗುವ ಈ ವಿಧವನ್ನು ಎಂದಿಗೂ ಅನುಸರಿಸಬಾರದು. ಹೀಗೆಂದು ಜಾಬಾಲ ಎಂಬ ಮಹರ್ಷಿಯ ಪುತ್ರನಾದ ಸತ್ಯಕಾಮ ಎಂಬ ಋಷಿಯು ಹೇಳಿದವನು.

ಈಶ್ವರೋ ಹ ಸರ್ವಮಾಯುರೈತೋಃ ಸರ್ವಮಾಪ್ನೋದ್ವಿಜಯೋನೇ-ತ್ಯುಹ ಸ್ಮಾಽಽಹೋದ್ದಾಲಕ ಆರುಣಿರ್ಯಮೇತಾಭಿರ್ವ್ಯಾಹೃತಿಭಿರ-

ಭಿಷಿಂಚತೀತಿ ತಮೇತೇನೈವಾಭಿಷಿಂಚೇದ್ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮಗ್ನೇಸ್ತೇಜಸಾ ಸೂರ್ಯಸ್ಯ ವರ್ಚಸೇಂದ್ರಸ್ಯೇಂದ್ರಿಯೇಣಾಭಿಷಿಂಚಾಮಿ ಬಲಾಯ ಶ್ರಿಯೈ ಯಶಸೇಽನ್ನಾದ್ಯಾಯ ಭೂರ್ಭುವ ಸ್ವರಿತಿ ॥

ಪೂರ್ವಪಕ್ಷಂ ದೂಷಯಿತ್ವಾ ಸಿದ್ಧಾಂತಮಾಹ—ಯಂ ಕ್ಷತ್ರಿಯಮೇತಾಭಿರ್ವ್ಯಾಹೃತಿಭಿರಭಿಷಿಂಚಂತಿ ಸ ಕ್ಷತ್ರಿಯಃ ಸರ್ವಮಾಯುರ್ನೈತೋಃ ಸರ್ವಮಾಯುಃ ಪ್ರಾಪ್ತುಮೀಶ್ವರಃ ಸಮರ್ಥೋ ಭವತಿ । ತತೋ ವಿಜಯೇನ ಶತ್ರೂನಭಿಭೂಯ ಸರ್ವಂ ಭೋಗಮಾಪ್ನೋತ್ ಪ್ರಾಪ್ನೋತೀತ್ಯೇವಮರುಣಪುತ್ರ ಉದ್ದಾಲಕ ಆಹ ಸ್ಮ । ತಸ್ಮಾತ್ತಂ ಕ್ಷತ್ರಿಯಮೇತೇನ ವ್ಯಾಹೃತ್ಯಂತೇನೈವ ಯಜುಷಾಽಭಿಷಿಂಚೇನ್ನ ಕೇವಲೇನ । ಸೋಽಯಂ ವ್ಯಾಹೃತ್ಯಂತೋ ಮಂತ್ರೋ ನಿತ್ಯಪ್ರಯೋಗೇ ದ್ರಷ್ಟವ್ಯಃ । ಕಾಮ್ಯಪ್ರಯೋಗೇ ತು ವ್ಯಾಹೃತಿವಿಕಲ್ಪಃ ಪೂರ್ವಮುಕ್ತಃ ॥

ಪೂರ್ವಪಕ್ಷವನ್ನು ನಿರಾಕರಿಸಿದನಂತರ ಈಗ ಸಿದ್ಧಾಂತವನ್ನು ಹೇಳುವರು. ಯಾವಕ್ಷತ್ರಿಯನಾದವನು ವ್ಯಾಹೃತಿಗಳಿಂದಲೂ ಮಂತ್ರಗಳಿಂದಲೂ ಅಭಿಷೇಕಮಾಡಲ್ಪಡುವನೋ ಅವನು ತನಗೆ ನಿರ್ದಿಷ್ಟವಾಗಿರುವ ಸಮಸ್ತ ಆಯುಸ್ಸನ್ನೂ ಪೂರ್ಣವಾಗಿ ಅನುಭವಿಸುವಂತೆ ಈಶ್ವರನು ಅನುಗ್ರಹಿಸುವನು. ಮತ್ತು ಆ ರಾಜನು ತನ್ನ ಶತ್ರುಗಳನ್ನು ಜಯಿಸಿ ಬಹುಕಾಲ ಭೋಗಭಾಗ್ಯದಿಗಳನ್ನು ಅನುಭವಿಸುವನು ಎಂದು ಅರುಣಪುತ್ರನಾದ ಉದ್ದಾಲಕನೆಂಬ ಋಷಿಯು ಹೇಳಿರುವನು. ಆದ್ದರಿಂದ ಕ್ಷತ್ರಿಯನಾದ ರಾಜನಿಗೆ ಇತರಶಾಂತಿ ಮಂತ್ರಗಳಿಂದಲೂ ಕೊನೆಯಲ್ಲಿ ವ್ಯಾಹೃತಿಗಳಿಂದಲೂ ಅಭಿಷೇಕವನ್ನು ಮಾಡಬೇಕು. ಈಗಲೂ ಸಹ ಲೋಕವ್ಯವಹಾರಗಳಲ್ಲಿ ಅಭಿಮಂತ್ರಣ, ಪ್ರೋಕ್ಷಣ ಅಭಿಷೇಕಾದಿಗಳನ್ನು ಮಾಡುವಾಗ ವ್ಯಾಹೃತ್ಯಂತವಾದ ಶಾಂತಿಮಂತ್ರಗಳನ್ನೇ ಹೇಳುವುದು ರೂಢಿಯಲ್ಲಿರುವುದು. ಕಾಮ್ಯಪ್ರಯೋಗಾದಿಗಳಲ್ಲಿ ಇಷ್ಟಾರ್ಥಸಿದ್ಧಿಗಳನ್ನು ಪಡೆಯುವುದಕ್ಕಾಗಿ ಮಾಡುವ ಕರ್ಮಾದಿಗಳಲ್ಲಿ ವ್ಯಾಹೃತಿಗಳನ್ನು ಪ್ರಯೋಗಿಸಿ ಮಾಡುವುದು ಸಾಮಾನ್ಯವಾಗಿ ಕಂಡುಬರುವುದು.

ಅಥೈತಾನಿ ಹ ವೈ ಕ್ಷತ್ರಿಯಾದೀಜಾನಾದ್ವ್ಯುತ್ಕ್ರಾಂತಾನಿ ಭವಂತಿ ಬ್ರಹ್ಮಕ್ಷತ್ರೇ ಊರ್ಗನ್ನಾದ್ಯಮಪಾಮೋಷಧೀನಾಂ ರಸೋ ಬ್ರಹ್ಮವರ್ಚಸಮಿರಾಪುಷ್ಟಿಃ ಪ್ರಜಾತಿಃ ಕ್ಷತ್ರರೂಪಂ ತದಥೋ ಅನ್ನಸ್ಯ ರಸ ಓಷಧೀನಾಂ ಕ್ಷತ್ರಂ ಪ್ರತಿಷ್ಠಾ ತದ್ಯದೇವಾಮೂ ಪುರಸ್ತಾದಾಹುತೀ ಜುಹೋತಿ ತದಸ್ಮಿನ್ ಬ್ರಹ್ಮಕ್ಷತ್ರೇ ದಧಾತಿ ॥

ಅಭಿಷೇಕಾಂಗಂ ಹೋಮಂ ವಿಧತ್ತೇ—ಅಥಾಭಿಷೇಕಾನಂತರಂ ಹೋಮ ಉಚ್ಯತ ಇತಿ ಶೇಷಃ । ಈಜಾನಾದ್ಯಾಗಂ ಕೃತವತಃ ಕ್ಷತ್ರಿಯಾದೇತಾನಿ ವಕ್ಷ್ಯಮಾಣಾನಿ ವ್ಯುತ್ಕ್ರಾಂತಾನ್ಯಪಗತಾನಿ ಭವಂತಿ । ತಾನಿ ನಿರ್ದಿಶ್ಯಂತೇ । ಬ್ರಹ್ಮಕ್ಷತ್ರೇ ಏತಸ್ಯ ಸಮೀಪೇ ವರ್ತಮಾನಂ ಜಾತಿದ್ವಯಮ್ । ಊರ್ಕ್ಕ್ಷೀರಾದಿರಸಃ । ಅನ್ನಾದ್ಯಮೋದನಾದಿಕಮ್ । ತದೇತದುಭಯಮಪಾಮೋಷಧೀನಾಂ ರಸಃ

ಸಾರಃ । ಅಪಾಂ ರಸಃ ಕ್ಷೀರಾದಿಃ । ಓಷಧೀನಾಂ ರಸೋಽನ್ನಾದ್ಯಮ್ । ಬ್ರಹ್ಮವರ್ಚಸಂ ಶ್ರುತಾಧ್ಯಯನಸಂಪತ್ತಿಃ । ಇರಾಪುಷ್ಟಿರನ್ನಸಮೃದ್ಧಿಃ । ಪ್ರಜಾತಿಃ ಪುತ್ರೋತ್ಪಾದನಮ್ । ತಚ್ಚ ಸರ್ವಂ ಕ್ಷತ್ರಸ್ಯ ಸ್ವರೂಪಮತ್ಯಂತಮಪೇಕ್ಷಿತತ್ವಾತ್ । ಏತೇಷಾಂ ವ್ಯುತ್ಕ್ರಾಂತೌ ಕ್ಷತ್ರಿಯಸ್ಯ ಸ್ವರೂಪಹಾನಿರೇವ ಭವತಿ । ಅಥೋ ಅಪಿ ಚಾನ್ನಸ್ಯೌದನಸ್ಯ ರಸೋ ರಸಸ್ಯ ಕ್ಷೀರಾದೇರೋಷಧೀನಾಮನ್ನಕಾರಣಾನಾಂ ವ್ರೀಹಿಯವಾದೀನಾಂ ಕ್ಷತ್ರಂ ಪ್ರತಿಷ್ಠಾ ಕ್ಷತ್ರಿಯ ಆಶ್ರಯಃ । ತಸ್ಮಾದುಕ್ತೋ ವ್ಯತಿಕ್ರಮಃ ಕ್ಷತ್ರಿಯಸ್ಯ ನ ಯುಕ್ತಃ । ತತ್ತಥಾ ಸತಿ ಯದ್ಯಮೂ ಬುದ್ಧಿಸ್ಥೇ ಆಹುತೀ ಅಭಿಷಿಕ್ತಸ್ಯ ಕ್ಷತ್ರಿಯಸ್ಯ ಪುರಸ್ತಾಜ್ಜುಹುಯಾತ್ । ತತ್ತದಾನೀಮಸ್ಮಿನ್ನಭಿಷಿಕ್ತೇ ಬ್ರಾಹ್ಮಣಜಾತಿಂ ಕ್ಷತ್ರಿಯಜಾತಿಂ ತದುಪಲಕ್ಷಿತಮನ್ನಾದಿಕಂ ಚ ಸರ್ವಮವಸ್ಥಾಪಯತಿ । ಬ್ರಹ್ಮ ಪ್ರಪದ್ಯೇ ಸ್ವಾಹಾ ಕ್ಷತ್ರಂ ಪ್ರಪದ್ಯೇ ಸ್ವಾಹೇತ್ಯಾಹುತಿದ್ವಯಂ ಜುಹುಯಾದಿತಿ ತಾತ್ಪರ್ಯಾರ್ಥಃ ॥

ಅಭಿಷೇಕಾಂಗಕರ್ಮವಾದ ಹೋಮವಿಧಾನವನ್ನು ವಿವರಿಸುವರು. ಅಭಿಷೇಕವಿಧಾನವನ್ನು ವಿವರಿಸಿದನಂತರ ಈಗ ಹೋಮವಿಧಾನವನ್ನು ತಿಳಿಸುವರು. ಯಾಗವನ್ನು ಮಾಡಿದ ರಾಜನು ಮುಂದೆ ಹೇಳುವ ತನ್ನಲ್ಲಿರುವ ಸಾರಭೂತವಾದವುಗಳನ್ನು ಕಳೆದುಕೊಳ್ಳುವನು. ಅವುಗಳು ಯಾವವು ಎಂದರೆ– ಬ್ರಹ್ಮಕ್ಷತ್ರಗಳೆಂದರೆ ಬ್ರಾಹ್ಮಣ ಮತ್ತು ಕ್ಷತ್ರಿಯ ಜಾತಿಗಳಲ್ಲಿ ಮುಖ್ಯವಾಗಿ ಇರಬೇಕಾದ ಗುಣವು ಅಥವಾ ಸಾರವು; ಕ್ಷೀರಾದಿರಸದ್ರವ್ಯವು; ಅನ್ನಾದ್ಯಾಹಾರವು; ಬ್ರಹ್ಮವರ್ಚಸ್ಸು ಎಂದರೆ ವೇದಶಾಸ್ತ್ರಗಳ ಅಭ್ಯಾಸದಿಂದ ಲಭಿಸುವ ಕಳೆಯು (ಮುಖಕಾಂತಿ); ಅನ್ನಸಮೃದ್ಧಿಯು; ಪುತ್ರಾದಿ ಸಂತಾನವನ್ನು ಉತ್ಪನ್ನಮಾಡುವ ಶಕ್ತಿಯು; ಇವೆಲ್ಲವೂ ಕ್ಷತ್ರಿಯನಾದ ರಾಜನಲ್ಲಿ ಅವಶ್ಯಕವಾಗಿ ಇರಲೇಬೇಕಾದ ವಸ್ತುಗಳು ಎಂದರೆ ಅವಶ್ಯಕತೆಗಳು ಇವುಗಳೆಲ್ಲವೂ ಕ್ಷತ್ರಿಯನನ್ನು ಬಿಟ್ಟುಹೋದಮೇಲೆ ಎರದರೆ ಕ್ಷತ್ರಿಯನಲ್ಲಿ ಇಲ್ಲದೇ ಹೋದರೆ ಕ್ಷತ್ರಿಯನಿಗೆ ಸ್ವರೂಪಹಾನಿಯುಂಟಾಗುವುದು. ಮತ್ತು ಅನ್ನ ಅಥವಾ ಆಹಾರ, ಆಹಾರಾದಿಗಳಿಗೆ ಕಾರಣವಾದ ಕ್ಷೀರಾದಿರಸದ್ರವ್ಯಗಳು, ಭತ್ತ ಅಕ್ಕಿ ಮೊದಲಾದ ಧಾನ್ಯಗಳು ಇವುಗಳೆಲ್ಲಕ್ಕೂ ಕ್ಷತ್ರಿಯನೇ ಆಶ್ರಯವು. ಆದುದರಿಂದ ಮೇಲೆ ಹೇಳಿದ ಅವಶ್ಯಕತೆಗಳು ಕ್ಷತ್ರಿಯನನ್ನು ಬಿಟ್ಟುಹೋಗುವುದು ಎಂದಿಗೂ ಯುಕ್ತವಲ್ಲ. ಆದ್ದರಿಂದ ಇವುಗಳೆಲ್ಲಾ ಕ್ಷತ್ರಿಯನಾದ ರಾಜನಲ್ಲಿ ಸ್ಥಿರವಾಗಿ ಇರಬೇಕಾದರೆ ಕ್ಷತ್ರಿಯನು ಅಭಿಷೇಕಾನಂತರ ಮೊದಲು ಕೆಲವು ಆಹುತಿಗಳನ್ನು ಹೋಮ ಮಾಡಬೇಕು. ಹಾಗೆ ಮಾಡಿದರೆ ಬ್ರಾಹ್ಮಣಜಾತಿ ಮತ್ತು ಕ್ಷತ್ರಿಯಜಾತಿಗಳೆರಡರಲ್ಲಿಯೂ ಅವಶ್ಯಕವಾಗಿ ಇರಬೇಕಾದ ಗುಣಗಳು ಮತ್ತು ಸಾರಭೂತವಸ್ತುಗಳು ಸ್ಥಿರವಾಗಿ ರಾಜನಲ್ಲಿ ನೆಲೆಸುವವು. ಎಂದರೆ ಆಹುತಿಕಾಲದಲ್ಲಿ ಬ್ರಹ್ಮ ಪ್ರಪದ್ಯೇ ಸ್ವಾಹಾ । ಕ್ಷತ್ರಂ ಪ್ರಪದ್ಯೇ ಸ್ವಾಹಾ । ಎಂಬ ಎರಡು ಆಹುತಿಗಳನ್ನು ಅಗ್ನಿಯಲ್ಲಿ ಹೋಮಮಾಡಬೇಕೆಂದಭಿಪ್ರಾಯವು.

---

*English Translation*

**(The inauguration mantra when the King is sprinkled with the holy water. Whether the sacred words, "Bhur & c. are to be pronounced along with this mantra or not. Different opinions on this point.)**

They now put the branch of the Udumbara tree on the head of the Kshattriya, and pour the liquids which are in the large ladle on it. When

doing so, the priest repeats the following mantras : " With these waters, which are most happy, which cure everything, increase the royal power, and hold up the royal power, the immortal Prajapati sprinkled Indra, Soma the king, Varuna, Yama, Manu ; with the same, sprinkle I thee ! Be the ruler over kings in this world. The illustrious mother bore thee as the great universal ruler over great men ; the blessed mother has borne thee ! By command of the divine Savitar I sprinkle thee with the arms of the Asvins, with the hands of Pushan, with the lustre of Agni, the splendour of Surya, the power of Indra, that thou mayest obtain strength, happiness, fame, and food, "

If the priest who sprinkles the king wishes him alone to enjoy good health, then he shall pronounce when sprinkling the sacred word, bhur. If he wishes that two men (son and grandson) should enjoy this benefit tgether with him, then he shall pronounce the two sacred words bhur, bhuvah. If he wishes to benefit in this way three men (son. grandson, and great grandson), or to make the king unrivalled, then he ought to pronounce the three sacred words bhur, bhuvah, svar.

Some say, These sacred words having the power of bringing everything within grasp, the Kshattriya who has the mantra recited with the addition of these sacred words provides for another not for himself ; therefore one should sprinkle him only under she recital of the mantra, "By command of the divine Savitar " &c. They again are of opinion that Kshattriya, when sprinkled, not under the recital of the whole mantra, i. e. with omission of the sacred words, has power only over his former life.

Satyakama, the son of Jabala said, " If they do not sprinkle him under the recital of these sacred words in addition to the mantra, then he is able to go through his whole life as much as is apportioned to him. " But Uddalaka Arunih said, "He who is sqrinkled under the recital of these sacred words obtains everything by conquest."

He (the priest) should sprinkle him under the recital of the whole mantra. " By the command of the divine Savitar " &c. and conclude by bhur, bhuvah svar !

The Kshattriya who has thus performed a sacrifice loses in consequences of his sacrifice all these things which were in him, viz., the Brahma which was placed in the Kshattra, the sap, nourishment, the essence of water and herbs, the charactor of holiness (brahmavarchasam), the thriving consequent on food, the begetting of children, and the peculiar form the Kshattra all that it comprises. And as further regards the sap for producing nourishing substances; the Kshattra is protection of the herbs the fields of grain &c. being protected by the Kshattriyas, these things must be kept. If he therefore brings those two invocation offerings before the inauguration cermony, then he places the Brahma in this Kshattra and all those things will be consequently kept.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಸಪ್ತತ್ರಿಂಶಾಧ್ಯಾಯಸ್ಯ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೇಳನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು
ಸಮಾಪ್ತವಾದುದು



# ಅಥ ಸಪ್ತತ್ರಿಂಶಾಧ್ಯಾಯೇ ಚತುರ್ಥಃ ಖಂಡಃ

## ಮೂವತ್ತೇಳನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು

[ ಪುನರಭಿಷೇಕವೆಂಬ ಕರ್ಮದಲ್ಲಿ ಬಳಸುವ (ಉಪಯೋಗಿಸುವ) ನಾನಾ ಸಾಧನಸಾಮಗ್ರಿಗಳ ಮತ್ತು ಪಾನ ಮಾಡುವ ದ್ರವರೂಪವಾದ ವಸ್ತುಗಳ ಸಂಕೇತವು; ರಾಜನು ಪಾನಮಾಡುವ ಸುರಾ ಎಂಬ ಮಾದಕದ್ರವ್ಯವು ಇತ್ಯಾದಿ ]

ಅಥ ಯದೌದುಂಬರ್ಯಾಸಂದೀ ಭವತ್ಯೌದುಂಡರಶ್ಚಮಸ ಉದುಂಬರ-ಶಾಖೋಗ್ರ್ವಾ ಅನ್ಯಾದ್ಯಮುದುಂಬರ ಊರ್ಜುಮೇವಾಸ್ಮಿಂಸ್ತ-ದನ್ನಾದ್ಯಂ ದಧಾತಿ ||

ಅಭಿಷೇಕಸಾಧನಾನಿ ಕ್ರಮೇಣ ಪ್ರಶಂಸಿತುಮಾದಾವಾಸಂದ್ಯಾದಿತ್ರಯಂ ಪ್ರಶಂಸತಿ—ಆಸಂದೀಚಮುಸಶಾಖಾನಾಂ ಕಾರಣಭೂತೋ ಯ ಉದುಂಬರಃ ಸೋಽಯಂ ರಸಸ್ಯಾನ್ನಸ್ಯ ಸ್ವರೂಪ ಭೂತಃ । ತೇನಾಸ್ಮಿನ್ಯಜಮಾನೇ ರಸಮನ್ನಂ ಚ ಸಂಪಾದಯತಿ ||

ಅಭಿಷೇಕಸಾಮಗ್ರಿಗಳನ್ನು ಪ್ರಶಂಸೆ ಮಾಡುತ್ತಾರೆ ಮೊದಲು ಆಸಂದಿ (ಪೀಠ) ಮೊದಲಾದವುಗಳನ್ನು ವಿವರಿಸುತ್ತಾರೆ. ಆಸಂದೀ ಎಂಬ ಉದುಂಬರ ಪೀಠವು (ಅಥವಾ ಸಿಂಹಾಸನವು), ಚಮಸವು ಮರದ ಬಟ್ಟಲು, ಉದುಂಬರವೃಕ್ಷದ ಕೊನೆಯು (ಶಾಖಾ) ಈ ಮೂರೂ ಉದುಂಬರ ವೃಕ್ಷದ ಮರದಿಂದಲೇ ನಿರ್ಮಿತವಾದವು. ಉದುಂಬವೃಕ್ಷವು ಅನ್ನ ಅಥವಾ ಆಹಾರದ ಸ್ವರೂಪವು ಅಥವಾ ಸಂಕೇತವು. ಇವುಗಳನ್ನು ಅಭಿಷೇಕಕರ್ಮದಲ್ಲಿ ಉಪಯೋಗಿಸುವವರಿಂದ ರಾಜನಲ್ಲಿ ಅನ್ನಾದ್ಯಾಹಾರ ಗಳನ್ನೂ, ಕ್ಷೀರಾದಿರಸದ್ರವ್ಯಗಳನ್ನೂ ಎಂದರೆ ರಾಜನಿಗೆ ಅವುಗಳ ಸಂಮೃದ್ಧಿಯುಂಟಾಗುವುದು.

ಅಥ ಯುದ್ದಧಿ ಮಧು ಘೃತಂ ಭವತ್ಯಪಾಂ ಸ ಓಷಧೀನಾಂ ರಸೋಽಪಾಮೇವಾಸ್ಮಿಂಸ್ತದೋಷಧೀನಾಂ ರಸಂ ದಧಾತಿ ||

ದಧ್ಯಾದಿತ್ರಯಂ ಪ್ರಶಂಸತಿ—ದಧಿಘೃತಯೋಃ ಪಶುಭಕ್ಷಿತತೃಣೋದಕಜನ್ಯತ್ವಾದೋಷ-ಧಿರಸತ್ವಮ್ । ಮಧುನೋ ಮಧುಕರಾನೀತ ಪುಷ್ಪರಸಜನ್ಯತ್ವಾದೋಷಧಿಸಾರತ್ವಮ್ ||

ದಧಿ (ಮೊಸರು), ಘೃತ (ತುಪ್ಪ) ಇವೆರಡು ಪದಾರ್ಥಗಳೂ ಗೋವಿನಿಂದ ಲಭಿಸುವವು. ಗೋವಿಗೆ ತೃಣವೇ (ಹುಲ್ಲೇ) ಆಧಾರವು ಮತ್ತು ಜೇನುತುಪ್ಪ (ಮಧು) ವನ್ನು ದುಂಬಿಗಳು ಪುಷ್ಪಗಳಿಂದಲೇ ಸಂಗ್ರಹಿಸುವುವು. ಆದ್ದರಿಂದ ಈ ಮೂರು ಪದಾರ್ಥಗಳಿಗೂ ಓಷಧಿಯೇ ಮೂಲವು. ಇವುಗಳನ್ನು ಉಪಯೋಗಿಸುವುದರಿಂದ ಓಷಧಿಗಳ ಸಾರವಾದ ರಸವನ್ನು ರಾಜನಲ್ಲಿ ಸ್ಥಾಪಿಸಿದಂತಾಯಿತು.

ಅಥ ಯದಾತಪವರ್ಷ್ಯಾ ಆಪೋ ಭವಂತಿ ತೇಜಶ್ಚ ಹ ವೈ ಬ್ರಹ್ಮ-
ವರ್ಚಸಂ ಚಾಽಽತಪವರ್ಷ್ಯಾ ಆಪಸ್ತೇಜ ಏವಾಸ್ಮಿಂಸ್ತದ್ಬ್ರಹ್ಮವರ್ಚಸಂ
ಚ ದಧಾತಿ

ಆತಪಸಹಿತಾ ವೃಷ್ಟಿಜನ್ಯಾ ಅಪಃ ಪ್ರಶಂಸತಿ—ಆತಪಸಂಬಂಧಾತ್ತೇಜಸ್ತ್ವಮಾಹುತಿಫಲ-
ರೂಪವೃಷ್ಟಿಸಂಬಂಧಾದ್ಬ್ರಹ್ಮವರ್ಚಸತ್ವಮ್ ॥

ಬಿಸಲು ಕಾಯುತ್ತಿರುವಾಗ ಬೀಳುವ ಮಳೆಯ ನೀರು ಆಹುತಿಫಲರೂಪವಾದ ವೃಷ್ಟಿಯಾಗಿರುವುದರಿಂದ ಇದರಲ್ಲಿ ತೇಜಸ್ಸು ಮತ್ತು ವರ್ಚಸ್ಸು ಅಡಗಿರುವುದು. ಇದನ್ನು ಅಭಿಷೇಕಕಾಲದಲ್ಲಿ ಉಪಯೋಗಿಸುವುದರಿಂದ ರಾಜನಲ್ಲಿ ಬ್ರಹ್ಮ ವರ್ಚಸ್ಸನ್ನೂ (ಬ್ರಾಹ್ಮಣಕಳೆಯನ್ನೂ) ತೇಜಸ್ಸನ್ನೂ (ಮುಖಕಾಂತಿಯನ್ನೂ) ಸ್ಥಾಪಿಸಿದಂತಾಗುವುದು.

ಅಥ ಯಚ್ಛಷ್ಪಾಣಿ ಚ ತೋಕ್ಮಾನಿ ಚ ಭವಂತೀರಾಯೈ ತತ್ಪುಷ್ಟ್ಯೈ ೩೮
ರೂಪಮಥೋ ಪ್ರಜಾತ್ಯಾ ಇರಾಮೇವಾಸ್ಮಿಂಸ್ತತ್ಪುಷ್ಟಿಂ ದಧಾತ್ಯಥೋ
ಪ್ರಜಾತಿಂ ॥

ಶ್ಯಾಮತೃಣಾನ್ಯಂಕುರಾಣಿ ಚ ಪ್ರಶಂಸತಿ—ತೃಣಾನಾಮಂಕುರಾಣಾಂ ಚ ಪಶ್ವನ್ನತ್ವಾತ್ತದ್ಭಕ್ಷ-
ಣೇನ ಪಶುಷು ಪುಷ್ಟಿಪ್ರಜೋತ್ಪಾದನಯೋರ್ದೃಷ್ಟತ್ವಾದಿರಾಪುಷ್ಟಿಪ್ರಜಾದಿರೂಪತ್ವಮ್ ॥

ಹುಲ್ಲನ್ನೂ ಹುಲ್ಲಿನ ಗರಿಕೆಗಳನ್ನು ಉಪಯೋಗಿಸುವುದರಿಂದ ಪುಷ್ಟಿಯೂ ಪ್ರಜೋತ್ಪಾದನಸಾಮರ್ಥ್ಯವೂ ಉಂಟಾಗುವವು. ಏಕೆಂದರೆ ಹುಲ್ಲು ಮತ್ತು ಗರಿಗಗಳು ಪಶುಗಳಿಗೆ ಆಹಾರವೂ, ಪಶುಗಳಿಂದ ಕ್ಷೀರವೂ ಕ್ಷೀರದಿಂದ ಘೃತಾದಿ ಆಹಾರಸಾಧನಗಳೂ ಎಂದರೆ ಪುಷ್ಟಿಯೂ ಆದರಿಂದ ಪ್ರಜೋತ್ಪಾದನ ಸಾಮರ್ಥ್ಯವೂ ಉಂಟಾಗುವವು. ಅಭಿಷೇಕಕರ್ಮಕ್ಕಾಗಿ ತೃಣಾದಿ ದ್ರವ್ಯಗಳನ್ನು ಉಪಯೋಗಿಸುವುದರಿಂದ ರಾಜನಲ್ಲಿ ಪುಷ್ಟಿಯನ್ನೂ ಪ್ರಜೋತ್ಪಾದನಸಾಮರ್ಥ್ಯವನ್ನೂ ಸ್ಥಾಪಿಸಿದಂತಾಗುವುದು

ಅಥ ಯತ್ಸುರಾ ಭವತಿ ಕ್ಷತ್ರರೂಪಂ ತದಥೋ ಅನ್ನಸ್ಯ ರಸಃ
ಕ್ಷತ್ರರೂಪಮೇವಾಸ್ಮಿಂಸ್ತದ್ದಧಾತ್ಯಥೋ ಅನ್ನಸ್ಯ ರಸಂ ॥

ಸುರಾಂ ಪ್ರಶಂಸತಿ—ಸುರಯಾ ಕ್ಷತ್ರಿಯಸ್ಯೈವ ಮದಯೋಗಾತ್ ಕ್ಷತ್ರರೂಪತ್ವಂ ವ್ರೀ-
ಹ್ಯಾದ್ಯಂಕುರ ಜನ್ಯತ್ವಾದನ್ನರಸತ್ವಮ್ ॥

ಮದ್ಯವು ಕ್ಷತ್ರಿಯನಿಗೆ ಮದವನ್ನೂ ಹರ್ಷವನ್ನೂ (ಉತ್ಸಾಹವನ್ನೂ) ಉಂಟುಮಾಡುವುದು. ವ್ರೀಹಿ (ಭತ್ತ) ಮೊದಲಾದ ಧಾನ್ಯವು ಅನ್ನವನ್ನೂ ರಸವನ್ನೂ ಉತ್ಪನ್ನಮಾಡುವುದು. ಅದ್ದರಿಂದ ಮದ್ಯವು, ವ್ರೀಹಿಮೊದಲಾದ ಧಾನ್ಯವು ಕ್ಷತ್ರಿಯನಲ್ಲಿ ಮದವನ್ನೂ ಹರ್ಷವನ್ನೂ ಅನ್ನಾದಿರಸವನ್ನೂ ಸ್ಥಾಪಿಸುವುದು.

ಅಥ ಯದ್ದೂರ್ವಾ ಭವತಿ ಕ್ಷತ್ರಂ ವಾ ಏತದೋಷಧೀನಾಂ ಯದ್ದೂರ್ವಾ ಕ್ಷತ್ರಂ ರಾಜನ್ಯೋ ನಿತತ ಇವ ಹೀಹ ಕ್ಷತ್ರಿಯೋ ರಾಷ್ಟ್ರೇ ವಸನ್ಭವತಿ ಪ್ರತಿಷ್ಠಿತ ಇವ ನಿತತೇವ ದೂರ್ವಾಽವರೋಧೈರ್ಭೂಮ್ಯಾಂ ಪ್ರತಿಷ್ಠಿ-ತೇವ ತದ್ಯದ್ದೂರ್ವಾ ಭವತ್ಯೋಷಧೀನಾಮೇವಾಸ್ಮಿಂಸ್ತತ್ಕ್ಷತ್ರಂ ದದಾತ್ಯಥೋ ಪ್ರತಿಷ್ಠಾಂ ||

ದೂರ್ವಾಂ ಪ್ರಶಂಸತಿ—ಓಷಧಿಜಾತೌ ದೂರ್ವಾಯಾಃ ಕ್ಷತ್ರಿಯಜಾತಿತ್ವಂ ರಾಜಸಂಬಂಧಿ-ಕ್ಷತ್ರಿಯಜಾತಿಸಾಮ್ಯಾದವಗಂತವ್ಯಮ್ । ತದೇವ ಸಾಮ್ಯಂ ನಿತತ ಇತ್ಯಾದಿನಾ ಪ್ರಪಂಚ್ಯತೇ । ಇಹ ರಾಷ್ಟ್ರೇ ಕ್ಷತ್ರಿಯೋ ವಸಂಸ್ತೇಷು ಗ್ರಾಮೇಷು ಸಂಚರನ್ ಸ್ವಪುರುಷಸ್ಥಾಪನಾಚ್ಚ ಸ್ವಯಂ ನಿತರಾಂ ತತೋ ವಿಸ್ತೃತ ಏವ ರಾಜ್ಯೈಶ್ವರ್ಯೇಣ ಪ್ರತಿಷ್ಠಿತ ಏವ ಭವತಿ । ದೂರ್ವಾ ಚಾವರೋಧೈರಧೋ-ಮುಖೈಃಸ್ವಕೀಯ ಮೂಲೈರ್ನಿತರಾಂ ತತೇವ ವ್ಯಾಪ್ತಾ ಸ್ಥೈರ್ಯಾದೇಕತ್ರ ಪ್ರತಿಷ್ಠಿತಾ ಭವತಿ । ತತ್ತಥಾ ಸತಿ ಯದ್ಯತ್ರ ದೂರ್ವಾ ಭವತಿ ತದಾನೀಮೋಷಧಿಸಂಬಂಧಿಕ್ಷತ್ರಿಯಜಾತಿಮಸ್ಮಿನ್ಯಜಮಾನೇ ಸಂಪಾದಯತಿ । ಅಪಿ ಚ ಪ್ರತಿಷ್ಠಾಂ ಸ್ಥೈರ್ಯಮಪಿ ಚ ಸಂಪಾದಯತಿ ||

ದೂರ್ವಾ ಎಂಬ ಹುಲ್ಲನ್ನು ಪ್ರಶಂಸೆಮಾಡುವರು. ಓಷಧಿ (ಸಸ್ಯ) ಗಳಲ್ಲಿ ದೂರ್ವಾ ಎಂಬ ತೃಣಜಾತಿಗೆ ಸೇರಿದ ಹುಲ್ಲು ಕ್ಷತ್ರಿಯಜಾತಿಗೆ ಸೇರಿದ್ದಾದುವರಿಂದ ರಾಜನಿಗೆ ಪರೋಕ್ಷವಾಗಿ ಸಂಬಂಧಿಸಿರುವುದೆಂದು ತಿಳಿಯಬೇಕು. ಕ್ಷತ್ರಿಯ ರಾಜನು ತನ್ನ ರಾಜ್ಯದಲ್ಲಿರುವ ಅನೇಕ ಗ್ರಾಮಗಳಲ್ಲಿ ತನ್ನ ನೌಕರರಾದ ಪುರುಷರನ್ನು ಇಟ್ಟು ತನ್ನ ಐಶ್ವರ್ಯಾದಿಗಳಿಂದಲೂ ಪ್ರಜೆಗಳನ್ನು ಪಾಲಿಸುವುದರಿಂದಲೂ ರಾಜ್ಯದಲ್ಲಿ ಸ್ಥಿರವಾಗಿ ನೆಲೆಸಿರುವನು. ದೂರ್ವಾ ಎಂಬ ತೃಣವೂ ಸಹ ಭೂಮಿಯ ಮೇಲೆ ಎಲ್ಲಾ ಕಡೆಯಲ್ಲಿಯೂ ಹರಡಿ ಬೆಳೆಯುತ್ತಾ ಸಮಸ್ತ ಪ್ರದೇಶವನ್ನೂ ಆಕ್ರಮಿಸಿ ಸ್ಥಿರವಾಗಿ ಇರುವುದು. ಆದ್ದರಿಂದ ಈ ದೂರ್ವಾ ಎಂಬ ಹುಲ್ಲಿಗೂ ಕ್ಷತ್ರಿಯಜಾತಿಸ್ವರೂಪವುಳ್ಳ ಈ ದೂರ್ವಾ ಎಂಬ ತೃಣವನ್ನು ಕ್ಷತ್ರಿಯನ ಅಭಿಷೇಕಕರ್ಮದಲ್ಲಿ ಉಪಯೋಗಿಸುವುದರಿಂದ ಕ್ಷತ್ರಿಯನಲ್ಲಿ ಕ್ಷತ್ರಿಯಜಾತಿಯೋಗ್ಯವಾದ ಗುಣಗಳನ್ನು ಗಣ್ಯತೆಯನ್ನೂ ಸ್ಥೈರ್ಯವನ್ನೂ ಸ್ಥಾಪಿಸಿದಂತಾಯಿತು.

ಏತಾನಿ ಹ ವೈ ಯಾನ್ಯಸ್ಮಿದೀಜಾನಾದ್ವ್ಯುತ್ಕ್ರಾಂತಾನಿ ಭವಂತಿ ತಾನ್ಯೇ-ವಾಸ್ಮಿಂಸ್ತದ್ದಧಾತಿ ತೈರೇವೈನಂ ತತ್ಸಮರ್ಧಯತಿ ||

ಪ್ರತ್ಯೇಕಂ ಪ್ರಶಸ್ಯ ಸಮುದಾಯರೂಪೇಣ ಪ್ರಶಂಸತಿ— ಈಜಾನಾದ್ಯಾಗಂ ಕೃತವತೋಽ-ಸ್ಮಾತ್ ಕ್ಷತ್ರಿಯಾದ್ಯಾನ್ಯೇವೈತಾನಿ ದಧ್ಯುದುಂಬರಾದೀನಿ ವ್ಯುತ್ಕ್ರಾಂತಾನಿ ಭವಂತಿ ತಾನ್ಯೇವಾಸ್ಮಿನ್-ಕ್ಷತ್ರಿಯೇ ಸಂಪಾದ್ಯ ತೈರೇವೈನಂ ಸಮೃದ್ಧಂ ಕರೋತಿ ||

ಅಭಿಷೇಕ ಸಾಮಗ್ರಿಗಳನ್ನು ಪ್ರತ್ಯೇಕವಾಗಿ ವರ್ಣಿಸಿದನಂತರ ಅವುಗಳನ್ನು ಸಾಮೂಹಿಕವಾಗಿ (ಒಟ್ಟಿಗೆ) ಪ್ರಶಂಸೆ ಮಾಡುವರು. ಕ್ಷತ್ರಿಯನಾದ ರಾಜನು ಅಭಿಷೇಕಾನಂತರ ಹೋಮವನ್ನು ಮಾಡಿ ಆಹುತಿಗಳನ್ನರ್ಪಿಸದೇ ಇದ್ದಲ್ಲಿ ಅವನಲ್ಲಿರುವ ಬ್ರಹ್ಮಕ್ಷತ್ರಿಯಗುಣಗಳು ಹೊರಟು ಹೋಗುವುವು ಎಂದು ಹಿಂದೆಯೇ ಹೇಳಲಾಗಿದೆಯಷ್ಟೆ. ಆರೀತಿ ಆಗದಿರುವುದಕ್ಕಾಗಿಯೂ

ದಧಿಉದುಂಬರ ಮೊದಲಾದ ಸಾಮಗ್ರಿಗಳು ಇವನನ್ನು ತ್ಯಜಿಸದಿರುವುದಕ್ಕಾಗಿಯೂ ಅಭಿಷೇಕಕಾಲದಲ್ಲಿ ದಧಿ ಮೊದಲಾದ ಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ಉಪಯೋಗಿಸಿದಲ್ಲಿ ಆದರಿಂದ ರಾಜನಿಗೆ ಸಮಸ್ತಸಮೃದ್ಧಿಯೂ ಉಂಟಾಗುವುದು.

ಅಥಾಸ್ಮೈ ಸುರಾಕಂಸಂ ಹಸ್ತ ಆದಧಾತಿ ||

**ಅಭಿಷಿಕ್ತಸ್ಯ ಕ್ಷತ್ರಿಯಸ್ಯ ಪಾನಪಾತ್ರಂ ವಿಧತ್ತೇ—ಅಥಾಭಿಷೇಕಾನಂತರಮಸ್ಮಾ ಅಸ್ಯ ಕ್ಷತ್ರಿಯಸ್ಯ ಹಸ್ತೇ ಸುರಯುಕ್ತಕಾಂಸ್ಯಪಾತ್ರಮಾದಧ್ಯಾತ್ ||**

ಅಭಿಷಿಕ್ತನಾದ ರಾಜನು ಪಾನಮಾಡುವ ಪಾನಪಾತ್ರೆಯನ್ನು ವಿವರಿಸುವದು—ಅಭಿಷೇಕಾನಂತರ ಈ ರಾಜನ ಹಸ್ತದಲ್ಲಿ ಸುರಾ (ಮದ್ಯ) ಸಹಿತವಾದ ತಾಮ್ರದ ಪಾತ್ರೆಯನ್ನು (ಪಾನಮಾಡಲು) ಕೊಡಬೇಕು.

ಸ್ವಾದಿಷ್ಠಯಾ ಮದಿಷ್ಠಯಾ ಪವಸ್ವ ಸೋಮ ಧಾರಯಾ |
ಇಂದ್ರಾಯ ಪಾತವೇ ಸುತಃ

**ತತ್ರ ಮಂತ್ರಮಾಹ——ಹೇ ಸೋಮ ತತ್ಸಮಾನಸುರಾದ್ರವ್ಯ ಸ್ವಾದಿಷ್ಠಯಾಽತಿಶಯೇನ ಸ್ವಾದುಭೂತಯಾ ಮದಿಷ್ಠಯಾಽತಿಶಯೇನಮದಹೇತುಭೂತಯಾ ತ್ವದೀಯಯಾ ಧಾರಯಾ ಪವಸ್ವ ಯಜಮಾನಂ ಶೋಧಯ | ಹೇ ದ್ರವ್ಯವಿಶೇಷೇಂದ್ರಾಯ ಪಾತವ ಇಂದ್ರಸ್ಯ ಪಾನಾರ್ಥಂ ಸುತೋಽಭಿಷುತಃ ಸಂಪಾದಿತೋಽಸಿ ||**

ಸುರಾ (ಮದ್ಯ) ಪಾನಮಾಡುವ ಮಂತ್ರವನ್ನು ವಿವರಿಸುವುದು ಸ್ವಾದಿಷ್ಠಯಾ ಮದಿಷ್ಠಯಾ (ಋ. ಸಂ ೯-೧-೧) ಎಂಬುದೇ ಆ ಮಂತ್ರವು. ಇದರ ಅರ್ಥವು ಸೋಮಸದೃಶವಾದ ಎಲೈ ಸುರಾದ್ರವ್ಯವೇ, ಅತ್ಯಂತ ರುಚಿಕರ ಮತ್ತು ಹರ್ಷವನ್ನುಂಟುಮಾಡುವ ನಿನ್ನ ಧಾರೆಗಳಿಂದ (ಪ್ರವಾಹ) ಯಜಮಾನನನ್ನು ಪವಿತ್ರಗೊಳಿಸು. ಎಲೈ ಸೋಮಸದೃಶವಾದ ದ್ರವ್ಯವೇ ನಿನ್ನನ್ನು ಇಂದ್ರನ ಪಾನಾರ್ಥವಾಗಿ ಸಿದ್ಧಪಡಿಸಲಾಗಿದೆ. ಎಂದು ಈ ಮಂತ್ರದ ಅರ್ಥವು.

ಇತ್ಯಾಧಾಯ ಶಾಂತಿಂ ವಾಚಯತಿ |

**ಮಂತ್ರಾಂತರೇಣ ಶಾಂತಿಯಾಚನಂ ವಿಧತ್ತೇ—ಇತ್ಯನೇನ ಪೂರ್ವೋಕ್ತಮಂತ್ರೇಣ ಹಸ್ತೇ ಸುರಾಯುಕ್ತಂ ಕಾಂಸ್ಯಪಾತ್ರಮಾಧಾಯ ವಕ್ಷ್ಯಮಾಣಮಂತ್ರೇಣ ಶಾಂತಿಂ ವಾಚಯೇತ್ ||**

ಹಿಂದೆ ಹೇಳಿದ ಮಂತ್ರವನ್ನು ಪಠಿಸಿ ಸುರಾಪಾನಕ್ಕಾಗಿ ತಾಮ್ರದ ಪಾತ್ರೆಯನ್ನು ಕ್ಷತ್ರಿಯ ಯಜಮಾನನ ಕೈಯಲ್ಲಿ ಕೊಟ್ಟು ಶಾಂತ್ಯರ್ಥವಾಗಿ ಮುಂದೆ ಹೇಳುವ ಮಂತ್ರವನ್ನು ಪಠಿಸಬೇಕು.

ನಾನಾ ಹಿ ವಾಂ ದೇವಹಿತಂ ಸದಸ್ಕೃತಂ ಮಾ ಸಂಸೃಕ್ಷಾಥಾಂ ಪರಮೇ ವ್ಯೋಮನಿ | ಸುರಾ ತ್ವಮಸಿ ಶುಷ್ಮಿಣೀ ಸೋಮ ಏಷ ರಾಜಾ ಮೈನಂ ಹಿಂಸಿಷ್ಟಂ ಸ್ವಾಂ ಯೋನಿಮಾವಿಶಂತಾವಿತಿ ||

ತಂ ಮಂತ್ರಂ ವಾಚಯತಿ — ಹೇ ಸುರಾಸೋಮೌ ವಾಂ ಯುವಯೋರ್ದೇವಹಿತಂ ದೇವೈಃ ಸಂಪಾದಿತಂ ಸದಃ ಸ್ಥಾನಂ ನಾನಾ ಕೃತಂ ಪೃತಗೇವ ನಿಷ್ಪಾದಿತಮ್ । ಅತಃ ಪರಮೇ ವ್ಯೋಮನಿ ಉತ್ಕೃಷ್ಟ ಉದರಾಕಾಶೇ ಮಾ ಸಂಸೃಕ್ಷಾಥಾಂ ಸಂಸರ್ಗಂ ಮಾ ಕುರು- ತಂ। ಸಂಸರ್ಗೇ ಹಿ ಸೋಮಸ್ಯ ಬಾಧಾ ಸ್ಯಾತ್ । ಹೇ ಮದ್ಯ ತ್ವಂ ಶುಷ್ಮಿಣೀ ಬಲವತೀ ಸುರಾಽಸಿ । ಏಷು ತು ಸೋಮೋ ರಾಜಾ ! ತೌ ಬಲವಂತೌ ಯುವಾಮುಭೌ ಸ್ವಾಂ ಯೋನಿ ಮಾವಿಶಂತಾವುದರಮಧ್ಯೇ ವಿಭಾಗೇನ ಸ್ವಂಸ್ವಂ ಸ್ಥಾನಂ ಪ್ರವಿಶಂತಾವೇನಂ ಪಾತಾರಂ ಮಾ ಹಿಂಸಿಷ್ಟಂ ಹಿಂಸಿತಮುಪದ್ರುತಂ ಮಾ ಕುರುತಮ್ । ಇತ್ಯೇತಂ ಮಂತ್ರಂ ಕ್ಷತ್ರಿಯಸ್ಯಾಗ್ರೇ ಕಥಯಿತ್ವಾ ತಂ ವಾಚಯೇತ್ ॥

ಆ ಮಂತ್ರವನ್ನು ತಿಳಿಸುವವರು ಎಲೈ ಸುರಾ ಮತ್ತು ಸೋಮದೇವತೆಗಳೇ, ನಿಮಗೆ ಪ್ರತ್ಯೇಕವಾಗಿ ಸ್ಥಾನಮಾಸಾದಿ ಗಳನ್ನು ದೇವತೆಗಳು ಕಲ್ಪಿಸಿದ್ದಾರೆ. ಆದ್ದರಿಂದ ನೀವು ಉತ್ಕೃಷ್ಟವಾದ ಉದರಾಕಾಶದಲ್ಲಿ (ಉದರದಲ್ಲಿ) ಪರಸ್ಪರ ಬೆರೆಯಬೇಡಿರಿ. ಸಂಪರ್ಕವಿಲ್ಲದೆ ಪ್ರತ್ಯೇಕವಾಗಿ (ಬೇರೆ ಬೇರೆಯಾಗಿ) ಇರಿ ಎಂದರೆ ಒಬ್ಬರೊಡನೆ ಮತ್ತೊಬ್ಬರು ಸೇರದಂತೆ ಪ್ರತ್ಯೇಕವಾಗಿ ಇರಿ. ಏಕೆಂದರೆ ಪರಸ್ಪರ ಸಂಪರ್ಕವಾದಲ್ಲಿ ಸೋಮರಾಜನಿಗೆ ತೊಂದರೆಯಾಗುವುದು. ಎಲೈ ಮದ್ಯವೇ ನೀನು ಬಲಶಾಲಿ ಯಾಗಿರುವೆ. ಈ ಸೋಮನಾದರೋ ರಾಜನಾಗಿರುವನು. ಆದ್ದರಿಂದ ನೀವಿಬ್ಬರೂ ಬಲಶಾಲಿಗಳು. ನೀವುಗಳು ಉದರ ಮಧ್ಯದಲ್ಲಿ ಪ್ರವೇಶಿಸಿದ ನಂತರ ಅಲ್ಲಿ ನಿಮ್ಮ ನಿಮ್ಮ ಸ್ವಸ್ಥಾನಗಳಲ್ಲಿ ನೆಲೆಸಿರಿ. ನಿಮ್ಮನ್ನು ಪಾನಮಾಡಿದ ಈ ಕ್ಷತ್ರಿಯರಾಜನಿಗೆ ಹಿಂಸೆಯನ್ನುಂಟುಮಾಡಬೇಡಿ. ಈ ವಿಧವಾದ ಅರ್ಥವಿರುವ ಮಂತ್ರವನ್ನು ಪುರೋಹಿತನು ಕ್ಷತ್ರಿಯನ ಮುಂದೆ ಹೇಳಿ ಅವನಿಂದಲೂ ಹೇಳಿಸಬೇಕು.

**ಸೋಮಪೀಥಸ್ಯ ಚೈಷಾ ಸುರಾಪೀಥಸ್ಯ ಚ ವ್ಯಾವೃತಿಃ ॥**

ತಸ್ಯ ಮಂತ್ರಸ್ಯ ತಾತ್ಪರ್ಯಾರ್ಥಂ ದರ್ಶಯತಿ — ಏಷಾ ಮಂತ್ರಪ್ರತಿಪಾದ್ಯಾ ಸೋಮಪಾನಸುರಾಪಾನಯೋಃ ಪರಸ್ಪರವ್ಯಾವೃತ್ತಿಃ । ಮಾ ಸಂಸೃಕ್ಷಾಥಾಮಿತಿ ಸಂಸರ್ಗಸ್ಯ ನಿಷಿದ್ಧ ತ್ವಾತ್ ॥

ಮೇಲಿನ ಮಂತ್ರದಲ್ಲಿ ಪ್ರತಿಪಾದ್ಯರಾದ ಸೋಮ ಮತ್ತು ಸುರಾ ದೇವತೆಗಳು ಪ್ರತ್ಯೇಕವಾಗಿರಬೇಕು. ಪರಸ್ಪರ ಸಂಸರ್ಗವು ನಿಷಿದ್ಧವು ಎಂದಭಿಪ್ರಾಯವು.

**ಪೀತ್ವಾ ಯಂ ರಾತಿಂ ಮನ್ಯೇತ ತಸ್ಮಾ ಏನಾಂ ಪ್ರಯಚ್ಛೇತ್ತದ್ಧಿ ಮಿತ್ರಸ್ಯ ರೂಪಂ ಮಿತ್ರ ಏವೈನಾಂ ತದಂತತಃ ಪ್ರತಿಷ್ಠಾಪಯತಿ ತಥಾ ಹಿ ಮಿತ್ರೇ ಪ್ರತಿತಿಷ್ಠತಿ ॥**

ಪೀತಶೇಷಸ್ಯ ದಾನಂ ವಿಧತ್ತೇ — ಕಾಂಸ್ಯಪಾತ್ರಗತಾಂ ಸುರಾಂ ಕ್ಷತ್ರಿಯಃ ಸ್ವಯಂ ಪೀತ್ವಾ ಯಂ ಪುರುಷಂ ರಾತಿಂ ಸ್ವಸ್ಯ ಧನದಾತಾರಂ ಮಿತ್ರಂ ಮನ್ಯೇತ ತಸ್ಮೈ ಪುರು- ಷಾಯೈನಾಮುವ ಶಿಷ್ಟಾಂ ಸುರಾಂ ಪ್ರಯಚ್ಛೇತ್ । ತದೇಕಪಾತ್ರಗತದ್ರವ್ಯಪಾನಂ ಮಿತ್ರಸ್ಯ ರೂ-

**ವಮ್ । ಪರಸ್ಪರಂಚ ಮಿತ್ರಯೋಃ ಸಹಭೋಜನದರ್ಶನಾತ್ ।ತತ್ತ್ರೇನ ದಾನೇನಾಂತತಃ ಪಾನಾಂತೇ ಮಿತ್ರ ಏವೈನಾಂ ಸುರಾಂ ಪ್ರತಿಷ್ಠಾಪಯತಿ । ತಥಾ ಹಿ ತಥೈವ ಕುರ್ವನ್ ಸ್ವಯಮಪಿ ಮಿತ್ರೇ ಪ್ರತಿಷ್ಠಿತೋ ಭವತಿ ॥**

ಪಾನಮಾಡಿದನಂತವ ಉಳಿಯುವ ಶೇಷವನ್ನು ಏನುಮಾಡಬೇಕೆಂಬ ವಿಷಯವನ್ನು ತಿಳಿಸುವರು. ರಾಜನಾದವನು ಮೇಲೆ ಹೇಳಿದಂತೆ ತಾಮ್ರದಪಾತ್ರೆಯಲ್ಲಿರುವ ಮದ್ಯವನ್ನು ತಾನು ಪಾನಮಾಡಿದನಂತರ ಉಳಿಯುವ (ಮಿಕ್ಕಿರುವ) ಶೇಷವನ್ನು ಧನದಾನಾದಿಗಳಿಂದ ತನ್ನನ್ನು ತೃಪ್ತಿಪಡಿಸುವ ಮಿತ್ರನಿದ್ದಲ್ಲಿ ಅವನಿಗೆ ಉಳಿದಿರುವ ಮದ್ಯವನ್ನು ಕೊಡಬೇಕು. ಒಂದೇ ಪಾತ್ರೆ (ತಾಮ್ರದ ಪಾತ್ರೆ) ಯಲ್ಲಿ ಮಿಕ್ಕಿರುವ ಶೇಷವನ್ನು ಕೊಡಬೇಕಾದರೆ ಅವನು ರಾಜನಿಗೆ ಪರಮಮಿತ್ರನಾಗಿರಬೇಕು. ಏಕೆಂದರೆ ಭೋಜನವಿಷಯದಲ್ಲಿ ಪರಸ್ಪರ ಮಿತ್ರರಾದವರಲ್ಲಿ ಭೇದವೇನೂ ಇರುವುದಿಲ್ಲ. ಈ ರೀತಿ ರಾಜನು ಕೊಟ್ಟ ಮದ್ಯವನ್ನು ಮಿತ್ರನು ಪಾನಮಾಡುವುದರಿಂದ ಆ ಮಿತ್ರನು ರಾಜನಲ್ಲಿ ಮದ್ಯವನ್ನು ಸ್ಥಾಪಿಸಿದಂತಾಗುವುದು. ಮತ್ತು ರಾಜನು ಸಹ ಮಿತ್ರನಲ್ಲಿ ಸ್ನೇಹವನ್ನು ಬೆಳಸಿ ಪರಸ್ಪರ (ಒಬ್ಬರಿಗೊಬ್ಬರು) ಮಿತ್ರರಾಗಿಯೇ ಇರುವರು.

ಪ್ರತಿತಿಷ್ಠತಿ ಯ ಏವಂ ವೇದ ॥

ಈ ವಿಷಯವೆಲ್ಲವನ್ನೂ ತಿಳಿದಿರುವ ಪುರುಷನು ಸಹ ಸುಖದಿಂದಿರುವನು.

## *English Translation*

**(The symbolical meaning of the different implements and liquids required for the inauguration ceremony.)**
**The drinking of spirituous liquor(sura)by the king.)**

The reason that the throne-seat, the ladle,. and the branch is of the Udumbara tree is because theUdumbara is vigour and a nourishing substance . The priests thus places vigour in him (the King) as his nourishing substance.

As to curds, honey, and melted butter, they represent the liquid essence in the waters and herbs. The priests, therefore, places the essence of the waters and the herbs in him.

The rain water fallen during sunshine represents the splendour and lustre of sanctity, which are in this way placed in him.

The young grass and young barley represents provisions and the thriving by their means, which are thus placed in him for producing offspring and consequently provide him with offspring.

The spirituous liquor represents the Kshattra, and further, the juice in the food, thus both the Kshattra are the juice in the food, and placed in him.

Tne Durva grass is Kshattra; for this is the ruler of the herbs. The Kshattra, viz., the princely race, is represented by it, as it were spread every-where; the Kshattriya becomes residing here on this earth, in his Kingdom, he becomes established as it were, his rule extended, as it were. This is represented by the sprouts of the Durva, which have, as it were, a firm footing on the earth. In this way the Kshattra of the herbs is placed in him (the king) and a firm footing thus given him.

All those things, (The Brahma, sap, &c.) which had gone from the king after having performed a sacrifice, are in this way placed in him again. By their means of curds, honey &c. he makes him thus successful.

Now he gives into his hand a goblet of sprituous liquor, under the recia of the verse, sradishtaya madishthaya & c. (9, 1, 1) i. e., " Purify, O soma " with thy sweetest most exhilirating drops the sacrificer, thou who art squeezd for Indra, to be drunk by him." After having put the spirituous liquor into his hand, the priest. repeats a propitiatory mantra which runs thus; " To either of you (spirituous liquor and soma) a separate residence has been pre-pared, and allotted by the gods. Do not mix with one another in the highest heaven; liquor thou art powerful; Soma thou art a king. Do not harm him (the king) may either go to his own place ." (Here is said,) that the drinking of the soma and that of liquor, exclude one another they are not to be mixed After having drunk, he should think. " the giver (the priest) of the goblet (to his friend) and give him the remainder of this liquor. Thus he finally places the liquor in his friend gives him a share in it. And thus has he who possesses such knowledge, a place in his friend, (they are mutually connected.)

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಸಪ್ತತ್ರಿಂಶಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೇಳನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು
ಸಮಾಪ್ತವಾದುದು.

# ಅಥ ಸಪ್ತತ್ರಿಂಶಾಧ್ಯಾಯೇ ಪಂಚಮಃ ಖಂಡಃ

**ಮೂವತ್ತೇಳನೆಯ ಅಧ್ಯಾಯದಲ್ಲಿ ಐದನೆಯ ಖಂಡವು.**

---

[ ಪುನರಭಿಷೇಕಾನಂತರ ರಾಜನು ಸಿಂಹಾಸನವನ್ನು ಬಿಟ್ಟು ಇಳಿಯುವುದು. ಮತ್ತು ಆ ಕಾಲದಲ್ಲಿ ಅವನು ಪಠಿಸಬೇಕಾದ ಮಂತ್ರಗಳು. ]

---

## ಅಥೋದುಂಬರಶಾಖಾಮಭಿ ಪ್ರತ್ಯವರೋಹತ್ಯೂರ್ಗ್ವಾ ಅನ್ನಾದ್ಯಮು-ದುಂಬರ ಊರ್ಜಮೇವ ತದನ್ನಾದ್ಯಮಭಿ ಪ್ರತ್ಯವರೋಹತಿ ||

**ಆಸಂದ್ಯಾ ಅವರೋಹಂ ವಿಧತ್ತೇ — ಅಥಾಭಿಷೇಕಪಾನಾನಂತರಂ ಭೂಮಾವುದುಂಬರಶಾಖಾಮವಸ್ಥಾಪ್ಯ ತಾಮಭಿಲಕ್ಷ್ಯ ಪ್ರತ್ಯವರೋಹೇತ್ | ಯೋಽಯಮುದುಂಬರಃ ಸ ಊರ್ಗ್ವೈ ರಸರೂಪ ಏವ ತತ್ಫಲೇ ಮಾಧುರ್ಯಸದ್ಭಾವಾತ್ | ತಥಾಽನ್ನಾದ್ಯಸ್ವರೂಪಶ್ಚ ತದ್ಭಕ್ಷಣೇನೋ-ದರಪೂರಣಾತ್ | ತಸ್ಮಾದುದಂಬರಶಾಖಾಯಾಂ ಪ್ರತ್ಯವರೋಹೇನೋ (ಣೋ) ರ್ಜಮನ್ನಾದ್ಯಂ ಚಾಭಿಲಕ್ಷ್ಯಾವರೋಹತಿ ||**

ಪುನರಭಿಷೇಕವೆಂಬ ಸಂಸ್ಕಾರಾನಂತರ ರಾಜನು ತಾನು ಇದುವರೆಗೂ ಕುಳಿತಿದ್ದ ಆಸಂದೀ ಎಂಬ ಪೀಠ (ಸಿಂಹಾಸನ) ದಿಂದ ಇಳಿಯುವಾಗ ತನ್ನ ಮುಂದುಗಡೆ ಉದುಂಬರವೃಕ್ಷದ ಒಂದು ಕೊನೆಯನ್ನು ನೆಟ್ಟು ಆದರ ಮುಂದುಗಡೆ ಅದನ್ನು ನೋಡುತ್ತಾ ಸಿಂಹಾಸನದಿಂದ ಇಳಿಯಬೇಕು. ಈ ಉದುಂಬರವೃಕ್ಷವು ರಸರೂಪವಾದುದು. ಏಕೆಂದರೆ ಇದರ ಹಣ್ಣುಗಳಲ್ಲಿ ಮಾಧುರ್ಯ (ಸಿಹಿ) ಇರುವುದು. ಮತ್ತು ಇದು ಆಹಾರರೂಪವಾಗಿಯೂ ಇರುವುದು. ಏಕೆಂದರೆ ಇದನ್ನು ತಿನ್ನುವುದರಿಂದ ಹಸಿವು ಇಂಗಿ ಹೊಟ್ಟೆಯು ತುಂಬುವುದು. ಆದ್ದರಿಂದ ಸಿಂಹಾಸನದಿಂದ ಇಳಿಯುವಾಗ ಅನ್ನಾದ್ಯಾಹಾರರಸಗಳ ಸಂಕೇತವಾದ ಉದುಂಬರ ವೃಕ್ಷವನ್ನು ನೋಡುತ್ತಾ ಇಳಿಯಬೇಕು.

## ಉಪರ್ಯೇವಾಽಽಸೀನೋ ಭೂಮೌ ಪಾದೌ ಪ್ರತಿಷ್ಠಾಪ್ಯ ಪ್ರತ್ಯವರೋ-ಹಮಾಹ |

**ತತ್ರ ಪ್ರಕಾರಂ ವಿಧತ್ತೇ — ಅಸಂದ್ಯಾ ಉಪರ್ಯೇವ ಸ್ವಯಮುಪವಿಷ್ಟಃ ಪ್ರಥಮತಃ ಪಾದೌ ಭೂಮಾವವಸ್ಥಾಪ್ಯ ಪ್ರತ್ಯವರೋಹಸಾಧನಭೂತಂ ಮಂತ್ರಂ ಪಠೇತ್ ||**

ಇಳಿಯುವುದಕ್ಕೆ ಮುಂಚೆ ಪೀಠದಲ್ಲಿ ಕುಳಿತಿರುವಾಗಲೇ ತನ್ನ ಕಾಲುಗಳನ್ನು ನೆಲದ ಮೇಲೆ ಇಟ್ಟು ಕೆಳಗೆ ಹೇಳುವ ಮಂತ್ರವನ್ನು ಪಠಿಸುತ್ತಾ ಇಳಿಯಬೇಕು.

ಪ್ರತಿತಿಷ್ಠಾಮಿ ದ್ಯಾವಾಪೃಥಿವ್ಯೋಃ ಪ್ರತಿತಿಷ್ಠಾಮಿ ಪ್ರಾಣಾಪಾನಯೋಃ ಪ್ರತಿತಿಷ್ಠಾಮ್ಯಹೋರಾತ್ರಯೋಃ ಪ್ರತಿತಿಷ್ಠಾಮ್ಯನ್ನಪಾನಯೋಃ ಪ್ರತಿ ಬ್ರಹ್ಮನ್ಪ್ರತಿ ಕ್ಷತ್ರೇ ಪ್ರತ್ಯೇಷು ತ್ರಿಷು ಲೋಕೇಷು ತಿಷ್ಠಾಮಿ ||

**ತಂ ಮಂತ್ರಂ ದರ್ಶಯತಿ — ಭೂಮೌ ಯದವರೋಹಣಂ ತದ್ದ್ಯಾವಾಪೃಥಿವ್ಯಾದಿಷು ಸರ್ವೇಷ್ವವಸ್ಥಾನಮಿತಿ ಮಂತ್ರಾರ್ಥಃ ।**

ಮೇಲಿನ ಮಂತ್ರವನ್ನು ಪಠಿಸಿ ಸಿಂಹಾಸನದಿಂದ ಇಳಿಯಬೇಕು. ಈ ಮಂತ್ರದ ಅರ್ಥವು- ಈಗ ನಾನು ಕುಳಿತಿರುವ ಸಿಂಹಾಸನದಿಂದ ಇಳಿದು ದ್ಯಾವಾ ಪೃಥ್ವಿಗಳಲ್ಲಿ ಎಂದರೆ ಭೂಲೋಕ ಸ್ವರ್ಗಲೋಕಗಳಲ್ಲಿ ಸ್ಥಿರವಾಗಿ ನೆಲೆಸುವೆನು. ಪ್ರಾಣಾಪಾನ ರೂಪವಾದ ಜೀವನ (ಬದುಕು) ದಲ್ಲಿ ಸ್ಥಿರವಾಗಿ ಇರುವೆನು ಎಂದರೆ ಬಹುಕಾಲ ಜೀವಿಸಿರುವೆನು. ಅಹೋರಾತ್ರಿಗಳಲ್ಲಿ ಎಂದರೆ ಅನೇಕ ಕಾಲದವರೆಗೆ ಜೀವಿಸಿರುವೆನು ಮತ್ತು ಅನ್ನಪಾನಾದಿಗಳನ್ನು ಸೇವಿಸುತ್ತಾ ಬಹುಕಾಲ ಜೀವಿಸಿರುವೆನು. ಈ ಪೃಥಿವ್ಯಂತರಿಕ್ಷಸ್ವರ್ಗಗಳೆಂಬ ಮೂರು ಲೋಕಗಳಲ್ಲಿ ಬ್ರಹ್ಮಕ್ಷತ್ರಿಯಸ್ವರೂಪದಿಂದ ಸ್ಥಿರವಾಗಿ ನೆಲೆಸಿರುವೆನು. ಎಂಬ ಅರ್ಥವಿರುವ ಮಂತ್ರದಿಂದನ್ನು ಪಠಿಸಿ ಪೀಠದಿಂದ ಇಳಿಯಬೇಕು.

ಅಂತತಃ ಸರ್ವೇಣಾಽಽತ್ಮನಾ ಪ್ರತಿತಿಷ್ಠತಿ ಸರ್ವಸ್ಮಿನ್ ಹ ವಾ ಏತಸ್ಮಿನ್ಪ್ರತಿತಿಷ್ಠತ್ಯುತ್ತರೋತ್ತರಿಣೀಂ ಹ ಶ್ರಿಯಮಶ್ನುತೇ ಹ ಪ್ರಜಾನಾಮೈಶ್ವರ್ಯಮಾಧಿಪತ್ಯಂ ಯ ಏವಮೇತೇನ ಪುನರಭಿಷೇಕೇಣಾಭಿಷಿಕ್ತಃ ಕ್ಷತ್ರಿಯಃ ಪ್ರತ್ಯವರೋಹತಿ ||

**ಅನೇನ ಮಂತ್ರೇಣ ಕ್ರಿಯಮಾಣಂ ಪ್ರತ್ಯವರೋಹಂ ಪ್ರಶಂಸತಿ — ಯಃ ಕ್ಷತ್ರಿಯಃ ಉಕ್ತಾಭಿಷೇಕಾದೂರ್ಧ್ವಮನೇನ ಮಂತ್ರೇಣ ಪ್ರತ್ಯವರೋಹತಿ ಸ ಪುರುಷೋಽಭಿಷೇಕಸ್ಯಾಂತೇ ಧನಿಕತ್ವಾದಿನಾ ಸರ್ವೇಣ ರೂಪೇಣ ಪ್ರತಿಷ್ಠಿತೋ ಭವತಿ । ಏತಸ್ಮಿನ್ಸರ್ವಸ್ಮಿನ್ ದ್ಯಾವಾಪೃಥಿವ್ಯಾದಿಕೇ ಪ್ರತಿಷ್ಠಿತೋ ಭವತಿ । ಉತ್ತರೇತ್ಯಾದಿ ಪೂರ್ವವದ್ಯೋಜನೀಯಮ್ ||**

ಸಿಂಹಾಸನದಿಂದ (ಪೀಠದಿಂದ) ಇಳಿಯುವ ಕ್ರಮವನ್ನು ವಿವರಿಸುವುದು- ಯಾವ ಕ್ಷತ್ರಿಯ ಯಜಮಾನನು ಅಭಿಷೇಕಾನಂತರ ಮೇಲೆ ಹೇಳಿದ ಮಂತ್ರವನ್ನು ಪಠಿಸಿ ಇಳಿಯುತ್ತಾನೆಯೋ ಆ ಯಜಮಾನನು ಅಭಿಷೇಕಾನಂತರ ಸಮಸ್ತ ಐಶ್ವರ್ಯದಿಂದಲೂ ಇತರ ಉತ್ತಮ ವಸ್ತುಗಳಿಂದಲೂ ಕೂಡಿ ಸುಖನಾಗಿ ಬಾಳುತ್ತಾನೆ. ಅವನಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ತನಗಿಷ್ಟವಾದ ವಸ್ತುಗಳೆಲ್ಲವನ್ನೂ ಪಡೆದು ಸುಖದಿಂದಿರುವನು. ಈ ಲೋಕದಲ್ಲಿ ಅಧಿಕವಾದ ಸಂಪತ್ತನ್ನೂ ಉತ್ತಮ ಪ್ರಜೆಗಳಿಂದ ಕೂಡಿದ ದೇಶಾಧಿಪತ್ಯವನ್ನೂ ಪಡೆದು ಸುಖಿಸುವನು.

ಏತೇನ ಪ್ರತ್ಯವರೋಹೇಣ ಪ್ರತ್ಯವರುಹ್ಯೋಪಸ್ಥಂ ಕೃತ್ವಾ ಪ್ರಾಙಾಸೀನೋ ನಮೋ ಬ್ರಹ್ಮಣೇ ನಮೋ ಬ್ರಹ್ಮಣೇ ನಮೋ ಬ್ರಹ್ಮಣ ಇತಿ

**ತ್ರಿಷ್ಕೃತ್ವೋ ಬ್ರಹ್ಮಣೇ ನಮಸ್ಕೃತ್ಯ ವರಂ ದದಾಮಿ ಜಿತ್ಯಾ ಅಭಿಜಿತ್ಯೈ ವಿಜಿತ್ಯೈ ಸಂಜಿತ್ಯಾ ಇತಿ ವಾಚಂ ವಿಸೃಜತೇ ॥**

**ಪ್ರತ್ಯವರೋಹಾದೂರ್ಧ್ವಂ ಕರ್ತವ್ಯಂ ವಿಧತ್ತೇ— ಪ್ರತ್ಯವರೂಹ್ಯೇತಿ ದೀರ್ಘಶ್ಛಾಂದಸಃ । ಪೂರ್ವೋಕ್ತೇನ ಪ್ರತ್ಯವರೋಹಮಂತ್ರೇಣ ಪ್ರತ್ಯವರೂಹ್ಯ ಭೂಮಾವುಪಸ್ಥಮಾಸನವಿಶೇಷಂ ಕೃತ್ವಾ ಪ್ರಾಙ್ಮುಖ ಆಸೀನೋ ನಮಸ್ಕಾರಮಂತ್ರಂ ತ್ರಿಃ ಪಠಿತ್ವಾ ವರಮಿತ್ಯಾದಿಮಂತ್ರೇಣ ವಾಚಂ ವಿಸೃಜೇತ್ ॥ ವಾಗ್ವಿಸರ್ಗೋ ಲೌಕಿಕವ್ಯವಹಾರಃ । ಜಿತಿರ್ಜಯಮಾತ್ರಮ್ । ಅಭಿತಃ ಸರ್ವೇಷು ದೇಶೇಷು ಜಿತಿರಭಿಜಿತಿಃ । ಪ್ರಬಲದುರ್ಬಲಶತ್ರೂಣಾಂ ತಾರತಮ್ಯೇನ ವಿವಿಧೋ ಜಯೋ ವಿಜಿತಿಃ ಪುನಃಶತ್ರುತ್ವರಾಹಿತ್ಯಾಯ ಸಮ್ಯಗ್ಜಯಃ ಸಂಜಿತಿಃ । ಏತತ್ಸಿದ್ಧ್ಯರ್ಥಂ ಬ್ರಾಹ್ಮಣಾಯ ವರಂ ಗಾಂ ದದಾಮಿ ॥**

ಪೀಠದಿಂದ ಇಳಿದ ಮೇಲೆ ಮಾಡಬೇಕಾದ ಕರ್ತವ್ಯವನ್ನು ತಿಳಿಸುವರು– ಸಿಂಹಾಸನದಿಂದ ಇಳಿದನಂತರ ಭೂಮಿಯ ಮೇಲೆ ಪೂರ್ವಾಭಿಮುಖನಾಗಿ ಕುಳಿತುಕೊಂಡು **ನಮೋ ಬ್ರಹ್ಮಣೇ** (ಪರಬ್ರಹ್ಮನಿಗೆ ನಮಸ್ಕಾರವು) ಎಂಬ ಮಂತ್ರವನ್ನು ಮೂರಾವರ್ತಿ ಉಚ್ಚರಿಸಬೇಕು. ಅನಂತರ ಮುಂದೆ ಹೇಳುವಂತೆ, ಸರ್ವವಿಘ್ನಗಳ ಪರಿಹಾರಕ್ಕಾಗಿಯೂ (ಅಭಿಜಿತ್ಯೈ) ಸಮಸ್ತ ಶತ್ರುಗಳನ್ನೂ ಜಯಿಸುವುದಕ್ಕಾಗಿಯೂ (ವಿಜಿತ್ಯೈ) ಪ್ರಬಲ ದುರ್ಬಲ ಮೊದಲಾದ ತಾರತಮ್ಯ ಭೇದದಿಂದ ಇರುವ ಅನೇಕ ವಿಧ ಶತ್ರುಗಳನ್ನು ಜಯಿಸುವುದಕ್ಕಾಗಿಯೂ (ಸಂಜಿತ್ಯೈ) ಪುನಃ ಶತ್ರುಗಳು ತಲೆಯೆತ್ತದಂತೆ ಅವರನ್ನು ನಿರ್ನಾಮವಾಗಿ ಜಯಿಸುವುದಕ್ಕಾಗಿಯೂ ಬ್ರಾಹ್ಮಣನಿಗೆ ವರವನ್ನು (ಎಂದರೆ ಅವನಿಗೆ ಬೇಕಾದುದನ್ನು) ಎಂದರೆ ಗೋವನ್ನು ಕೊಡುತ್ತೇನೆ ಎಂದು ಹೇಳಿ ಮುಂದೆ ಮಾತನಾಡದೆ ಸುಮ್ಮನೆ ಕುಳಿತುಕೊಳ್ಳಬೇಕು.

ಸ ಯನ್ನಮೋ ಬ್ರಹ್ಮಣೇ ನಮೋ ಬ್ರಹ್ಮಣೇ ನಮೋ ಬ್ರಹ್ಮಣ ಇತಿ ತ್ರಿಷ್ಕೃತ್ವೋ ಬ್ರಹ್ಮಣೇ ನಮಸ್ಕರೋತಿ ಬ್ರಹ್ಮಣ ಏವ ತತ್ಕ್ಷತ್ರಂ ವಶಮೇತಿ ತದ್ಯತ್ರ ವೈ ಬ್ರಹ್ಮಣಃ ಕ್ಷತ್ರಂ ವಶಮೇತಿ ತದ್ರಾಷ್ಟ್ರಂ ಸಮೃದ್ಧಂ ತದ್ವೀರವದಾಹಾಸ್ಮಿನ್ವೀರೋ ಜಾಯತೇ ॥

**ನಮಸ್ಕಾರಮಂತ್ರಂ ಪ್ರಶಂಸತಿ — ಸಕ್ಷತ್ರಿಯೋ ಮಂತ್ರೇಣ ನಮಸ್ಕರೋತೀತಿ ಯದಸ್ತಿ ತೇನ ಬ್ರಹ್ಮಣೋ ಬ್ರಾಹ್ಮಣಸ್ಯೈವ ಕ್ಷತ್ರಿಯಜಾತಿರ್ವಶಮೇತಿ । ತೇನ ಬ್ರಾಹ್ಮಣಾಧೀನತ್ವೇನ ತದ್ರಾಷ್ಟ್ರಂ ಸರ್ವವಸುಸಮೃದ್ಧಂ ವೀರಪುರುಷೋಪೇತಂ ಚ ಭವತಿ। ಅಸ್ಮಿನ್‌ಕ್ಷತ್ರಿಯೇ ವೀರಃ ಪುರುಷ ಆಜಾಯತೇ**

ನಮಸ್ಕಾರಮಂತ್ರವನ್ನು ವಿವರಿಸುವರು–ಕ್ಷತ್ರಿಯಯಜಮಾನನು ಮೇಲೆ ಹೇಳಿದಂತೆ ಮೂರಾವರ್ತಿ ಪರಬ್ರಹ್ಮನಿಗೆ ನಮಸ್ಕಾರ ಮಾಡುವನು. ಆದರಿಂದ ತನ್ನ ಕ್ಷತ್ರಿಯ ತೇಜಸ್ಸನ್ನು ಬ್ರಹ್ಮನಿಗೆ ಅಧೀನಮಾಡಿ ಒಪ್ಪಿಸುವನು. ಹೀಗೆ ತನ್ನ ಸರ್ವಸ್ವವನ್ನೂ ಬ್ರಹ್ಮನ ಅಧೀನಮಾಡುವುದರಿಂದ ಇವರ ರಾಷ್ಟ್ರವೆಲ್ಲವೂ ಸುಖಸಮೃದ್ಧಿಗಳಿಂದ ಅಭಿವೃದ್ಧಿಯನ್ನೈವುದು. ರಾಜ್ಯವೆಲ್ಲವೂ ವೀರಪುರುಷರಿಂದ ಸಮೃದ್ಧವಾಗುವುದು ಮತ್ತು ತನಗೂ (ರಾಜನಿಗ) ವೀರನಾದ ಪುತ್ರನೇ ಜನಿಸುವನು.

ಅಥ ಯದ್ವರಂ ದದಾಮಿ ಜಿತ್ಯಾ ಅಭಿಜಿತ್ಯೈ ವಿಜಿತ್ಯೈ ಸಂಜಿತ್ಯಾ
ಇತಿ ವಾಚಂ ವಿಸೃಜತ ಏತದ್ವೈ ವಾಚೋ ಜಿತಂ ಯದ್ದದಾಮೀತ್ಯಾಹ
ಯದೇವ ವಾಚೋ ಜಿತಾಂ ೩ ತನ್ಮ ಇದಮನು ಕರ್ಮ ಸಂತಿಷ್ಠಾತಾ
ಇತಿ ॥

ವರದಾನಮಂತ್ರಂ ಪ್ರಶಂಸತಿ — ವರಮಿತ್ಯಾದಿಮಂತ್ರೇಣ ವಾಚಂ ವಿಸೃಜತ ಇತಿ ಯದಸ್ತಿ ತಸ್ಮಿನ್ಮಂತ್ರಸ್ವರೂಪೇ ದದಾಮೀತಿ ಯದಾಹ । ಏತದೇವ ವಾಕ್ಸಂಬಂಧಿ ಜಿತಂ ಜಯಃ । ಯದೇವ ವಾಚೋ ಜಿತಮಸ್ತಿ । ಪೂಜಾರ್ಥೋ ಜಿತಾಮಿತಿ ದೀರ್ಘಃ । ತದ್ವಾಗ್ಜಯರೂಪಂ ಮೇ ಮದೀಯಮಿದಂ ಕರ್ಮಾನುಸೃತ್ಯ ಸಂತಿಷ್ಠಾತೈ ಸಮಾಪ್ತಂ ಭವತಿ ಸಮ್ಯಗವತಿಷ್ಠತಾಮಿತಿ ತಸ್ಯ ಮಂತ್ರಸ್ಯಾಭಿಪ್ರಾಯಃ ॥

ವರದಾನಮಂತ್ರವನ್ನು ಪ್ರಶಂಸೆಮಾಡುವರು. ವರದಾನಮಂತ್ರವೆಂದರೆ ವಾಚಂ ವಿಸೃಜತಿ ಎಂದು ಹೇಳುವಾಗ ಮಂತ್ರಸ್ವರೂಪವಾದ ವಾಕ್ಯವನ್ನು ಹೇಳುವಾಗ ಅದನ್ನು ಅಲ್ಲಿಗೇ ನಿಲ್ಲಿಸುವುದು. ಇದನ್ನೇ ವಾಕ್ಯಬಂದವಾದ ಜಯವೆಂದು ಹೇಳುವರು. ಇಲ್ಲಿ ಗೌರವಾರ್ಥವಾಗಿ ಜಿತಂ ಎಂಬ ಶಬ್ದವನ್ನು ಜಿತಾ ಎಂದು ದೀರ್ಘವಾಗಿ ಉಚ್ಚರಿಸಲಾಗಿದೆ. ಇಲ್ಲಿಗೆ ವಾಗ್ಜಯವು ಸಮಾಪ್ತಿಯಾಯಿತು ಎಂದರೆ ಮಂತ್ರಹೇಳುವುದನ್ನು ನಿಲ್ಲಿಸಿದ್ದು ಕೊನೆಗೊಂಡಿತು ಎಂದಭಿಪ್ರಾಯವು.

ವಿಸೃಜ್ಯ ವಾಚಮುಪೋತ್ಥಾಯಾಽಽಹವನೀಯೇ ಸಮಿಧಮಭ್ಯಾದಧಾತಿ।

ಸಮಿದಾಧಾನಂ ವಿಧತ್ತೇ—ಉಕ್ತೇನ ಪ್ರಕಾರೇಣ ವಾಙ್ನಿಯಮಂ ಪರಿತ್ಯಜ್ಯ ತಸ್ಮಾದಾಸನಾದುತ್ಥಿತೋ ವಕ್ಷ್ಯಮಾಣಮಂತ್ರೇಣಾಽಽಹವನೀಯೇ ಸಮಿಧಂ ಪ್ರಕ್ಷಿಪೇತ್ ॥

ಮೇಲೆ ಹೇಳಿದಂತೆ ವಾಙ್ನಿಯಮವನ್ನು ಮುಗಿಸಿದ ಮೇಲೆ ತಾನು ಕುಳಿತಿದ್ದ ಪೀಠದಿಂದ ಮೇಲಕ್ಕೆದ್ದು ಇಳಿದು ಬಂದು ಮುಂದೆ ಹೇಳುವ ಮಂತ್ರವನ್ನು ಪಠಿಸಿ ಆಹವನೀಯಾಗ್ನಿಯಲ್ಲಿ ಒಂದು ಸಮಿತ್ತನ್ನು ಹಾಕಬೇಕು.

ಸಮಿದಸಿ ಸಂವೇಂಕ್ಷ್ವೇಂದ್ರಿಯೇಣ ವೀರ್ಯೇಣ ಸ್ವಾಹೇತಿ ।

ತಂ ಮಂತ್ರ ದರ್ಶಯತಿ—ಹೇ ಕಾಷ್ಠ ತ್ವಂ ಸಮಿದಸಿ ಸಮಿಂಧನಸಾಧನಮಸಿ । ಇಜ್ಞತಿಧಾತೋರ್ಲೋಣ್ಮಧ್ಯಮಪುರುಷೈಕವಚನಮೇಜ್ಞೇಂಕ್ಷ್ವೇತಿ। ಸ ಚ ಗತ್ಯರ್ಥಃ। ಉಪಸರ್ಗೋಽನರ್ಥಕಃ। ಇಂದ್ರಿಯಪಾಟವೇನ ಶರೀರಸಾಮರ್ಥ್ಯೇನಚ ಸಮ್ವೇಂಕ್ಷ್ವ ಸಂಯೋಜಯ ತ್ವದರ್ಥಂ ಸ್ವಾಹುತಮಿದಮಸ್ತು ॥

ಸಮಿದಸಿ ಸಂವೇಂಕ್ಷ್ವೇಂದ್ರಿಯೇಣ ವೀರ್ಯೇಣ ಸ್ವಾಹಾ ಎಂಬುದೇ ಆ ಮಂತ್ರವು. ಎಲೈ ಕಾಷ್ಠವೇ ನೀನು ಅಗ್ನಿಯನ್ನು ಉದ್ದೀಪನಗೊಳಿಸುವ ಸಾಧನವಾಗಿರುತ್ತೀಯೇ ಸ್ವಾಹಾಕಾರಪೂರ್ವಕವಾಗಿ ನಿನ್ನನ್ನು ಅಗ್ನಿಯಲ್ಲಿ ಸಮರ್ಪಿಸುವ ಯಜಮಾನನ ಇಂದ್ರಿಯಪಾಟವವನ್ನು ಎಂದರೆ ಶರೀರಸಾಮರ್ಥ್ಯವನ್ನು ಅಭಿವೃದ್ಧಿಮಾಡು ಎಂದು ಅರ್ಥವು.

ಇಂದ್ರಿಯೇಣೈವ ತದ್ವೀರ್ಯೇಣಾಽಽತ್ಮಾನಮಂತತಃ ಸಮರ್ಧಯತಿ ||

ಮಂತ್ರಸ್ಯ ತಾತ್ಪರ್ಯಾರ್ಥಂ ದರ್ಶಯತಿ—ತತ್ತೇನ ಸಮಿದಾಧಾನಮಂತ್ರೇಣಾತ್ಮಾನಮಭಿಷೇಕಕರ್ಮಾಂತೇ ವೀರ್ಯೇಂದ್ರಿಯಾಭ್ಯಾಂ ಸಮೃದ್ಧಂ ಕರೋತಿ ।

ಈ ಮಂತ್ರವನ್ನು ಅಭಿಷೇಕಾನಂತರ ಪಠಿಸುವುದರಿಂದ ಯಜಮಾನನ ವೀರ್ಯ ಮತ್ತು ಶಕ್ತಿಸಾಮರ್ಥ್ಯಗಳು ಅಭಿವೃದ್ಧಿಯನ್ನೈದುವವು.

ಆಧಾಯ ಸಮಿಧಂ ತ್ರೀಣಿ ಪದಾನಿ ಪ್ರಾಙುದಙ್ಙಭ್ಯುತ್ಕ್ರಾಮತಿ ||

ಸಮಿದಾಧಾನಾದೂರ್ಧ್ವಂ ಕರ್ತವ್ಯಂ ವಿಧತ್ತೇ—ಸಮಿಧಂ ಪ್ರಕ್ಷಿಪ್ಯ ಪ್ರಾಙ್ಮುಖ ಉದಙ್ಮುಖೋ ವಾ ಪದತ್ರಯಮಭಿತ ಉತ್ಕ್ರಾಮೇತ್ । ಯದ್ವಾ ಪ್ರಾಙುದಜಿತ್ಯತ್ಯಂತರಾಲವರ್ತಿನೀಮೈಶಾನೀಂ ದಿಶಮಭಿಲಕ್ಷ್ಯೋತ್ಕ್ರಾಮೇತ್ ||

ಹಿಂದೆ ಹೇಳಿದಂತೆ ಪೀಠದಿಂದ ಇಳಿದು ಆಹವನೀಯಾಗ್ನಿಯಲ್ಲಿ ಸಮಿತ್ತನ್ನು ಹಾಕಿದ ಮೇಲೆ ತನ್ನ ಕಾಲನ್ನು ಪೂರ್ವಾಭಿಮುಖವಾಗಿ ಅಥವಾ ಉತ್ತರಾಭಿಮುಖವಾಗಿ ಅಥವಾ ಈ ಎರಡು ದಿಕ್ಕುಗಳ ಮಧ್ಯೆ ಇರುವ ಈಶಾನ್ಯಾಭಿಮುಖವಾಗಿ ಹೆಜ್ಜೆಹಾಕುತ್ತಾ ಮುಂದೆ ನಡೆಯಬೇಕು.

ಕ್ಲೃಪ್ತಿರಸಿ ದಿಶಾಂ ಮಯಿ ದೇವೇಭ್ಯಃ ಕಲ್ಪತ । ಕಲ್ಪತಾಂ ಮೇ ಯೋಗಕ್ಷೇಮೋಽಭಯಂ ಮೇಽಸ್ತು ||

ತತ್ರ ಮಂತ್ರಂ ದರ್ಶಯತಿ—ದ್ವಿಗ್ವಿಶೇಷಮಭಿಲಕ್ಷ್ಯ ಕ್ರಿಯಮಾಣ ಹೇ ಪದೋತ್ಕ್ರಮಣ ತ್ವಂ ದಿಶಾಂ ಕ್ಲೃಪ್ತಿಃ ಕಲ್ಪನಂ ಸ್ವಾಧೀನತ್ವಸಂಪಾದಕಮಸಿ । ಅತೋ ಮಯಿ ಸೇವಾರ್ಥಂ ಕಲ್ಪತ ಕಲ್ಪನಂ ಸಾಮರ್ಥ್ಯಂ ಕುರು । ಬಹುವಚನಂ ಛಾಂದಸಮ್ । ಮೇ ಮಮ ಯೋಗಸಹಿತಃ ಕ್ಷೇಮಃ ಕಲ್ಪತಾಂ ಸಂಪಾದ್ಯತಾಮ್ । ತಥೈವ ಮೇ ಮಮಾಭಯಂ ಭಯರಾಹಿತ್ಯಮಸ್ತು ||

ಇದು ಪಾದಪ್ರಕ್ಷೇಪಮಂತ್ರವು— ಇದರ ಅರ್ಥವು, ಎಲೈ ಪಾದಪ್ರಕ್ಷೇಪವೇ ನಾನು ಅಭಿಮುಖವಾಗಿ ಹೋಗುತ್ತಿರುವ ಪೂರ್ವ ಅಥವಾ ಉತ್ತರದಿಕ್ಕಿನಲ್ಲಿ ನನಗೆ ಪರಾಜಯ (ಸೋಲು) ಉಂಟಾಗದಿರಲಿ. ಮತ್ತು ನಾನು ಇದುವರೆಗೆ ಗೆದ್ದಿರುವ ರಾಜ್ಯಗಳಲ್ಲಿ ನನಗೆ ಪುನಃ ಪರಾಜಯವುಂಟಾಗದಿರಲಿ ಮತ್ತು ನನಗೆ ಯೋಗಕ್ಷೇಮವು ಎಂದರೆ ಭಯರಾಹಿತ್ಯವು ಉಂಟಾಗಲಿ.

ಇತ್ಯಪರಾಜಿತಾಂ ದಿಶಮುಪತಿಷ್ಠತೇ ಜಿತಸ್ಯೈವಾಪುನಃಪರಾಜಯಾಯ ತತ್ತದಿತೀಂ ೩ ||

ದಿಗುಪಸ್ಥಾನಂ ವಿಧತ್ತೇ—ಇತ್ಯನೇನ ಪೂರ್ವೋಕ್ತೇನ ಕ್ಲೃಪ್ತಿರಸೀತ್ಯಾದಿಮಂತ್ರೇಣ ಪರಾಜಯರಹಿತಾಂ ಪ್ರಾಚೀಮುದೀಚೀಂ ವಾ ದಿಶಮುಪತಿಷ್ಠತೇ । ಅಥವಾ ದಿಶಮೈಶಾನೀಮಪರಾಜಿತಾಮುಪತಿಷ್ಠತೇ । ಪೂರ್ವಂ ಜಿತಸ್ಯೈವ ದಿಗ್ವಿಶೇಷಸ್ಯ ಪುನಃ ಪರಾಜಯರಾಹಿತ್ಯಾರ್ಥಮುಪಸ್ಥಾನಮ್ । ಲೋಕಾಶ್ಚ ತದುಪಸ್ಥಾನಮಿತಿ ಸರ್ವೇ ಪೂಜಯಂತಿ । ಪೂಜಾರ್ಥೀಯಂ ಸಾನುನಾಸಿಕಪ್ಲುತಿಃ ||

ಮೇಲೆ ಹೇಳಿದ ಕ್ಷ್ಮಿತ್ರರಸಿ ಎಂಬ ಮಂತ್ರದಿಂದ ಪೂರ್ವ, ಉತ್ತರ, ಅಥವಾ ಈಶಾನ್ಯದಿಕ್ಕನ್ನು ಪ್ರಾರ್ಥಿಸಿ ನಮಸ್ಕರಿಸಬೇಕು. ಹಿಂದೆ ಜಯಿಸಿದ ಅಥವಾ ಈಗ ಜಯಿಸುವ ರಾಜ್ಯಗಳಲ್ಲಿ ಪರಾಜಯವುಂಟಾಗದಿರಲಿ ಎಂದು ಉಪಸ್ಥಾನ ಮಾಡಬೇಕು (ಪ್ರಾರ್ಥನೆ). ಇಲ್ಲಿ ಗೌರವಾರ್ಥವಾಗಿ ಅನುನಾಸಿಕ ಮತ್ತು ಪ್ಲುತಿಯನ್ನು ಉಪಯೋಗಿಸಲಾಗಿದೆ.

---

*English Translation*

**(The descent of the king from the throne after having been inaugurated. The mantras which he has to repeat at this occasion.)**

He now descends from the throne-seat facing the branch of the Udumbara tree which was placed in the ground. The Udumbara being sap, and consequently a nourishing substance, the king goes thus to receive these gifts hidden in the Udumbara tree. Being seated above, and having put both his feet on the ground, he announces his descent facing the Udumbara, by uttering the following words, "I stand in the heavens, and on the earth; I stand in the air exhaled and inhaled; I stand on day and night; I stand on food and drink; I stand on Brahma, Kshattra, and these three worlds." Finally he stands firmly through the universal soul (sarva-atma, which connects all the things, just mentioned.) and thence has a firm footing in the universe. He obtains continuous prosperity. The king who descends after having been inaugurated by the ceremony of Punarabhisheka in this way from the throne seat obsains supremacy over his subjects, and royal power.

After having descended he then stands inclining his body (upasthamkritva) with his face towords the east, and utters thrice the words, "Adoration to the Brahma" Then he says aloud, "I present a gift for the attainment of victory in general, of victory everywhere (abhijiti), of victory over strong and weak enemies (vijiti), and of complete victory (samjiti)." By thus making thrice salutation to the Branma, the Kshattra comes under the sway of the Brahma, and consequently the rule of the king becomes prosperous and he will have issue. As regards the mantra, "I present a gift for the attainment of victory," &c. he emits speech by it. For the words, "I give" implies that Speech is conquered, recovered, after having been silent.

"When speech is recovered, then consequently all this my performance shall be campleted, "having (so thinking) emitted speech, he approches the Ahavaniya fire and puts a stick into it, reciting, " thou art a wooden stick, become joined to the sharpness of senses ond strength of the body, Svaha" " Finally he succeeds thus in making himself sharpness of senses and valiant. After having put the stick into the fire, he walks three steps towards the east and north, and addresses the step he is taking thus; " Thou art the means of subduing the regions; ye steps, make me capable of adoring in the right mannner the gods; may I obtain my desires wished for and preserve what is granted to me, and safety. " He now proceeds to the nerth-east, that is to undo again a defeat. Such is the meaning they say.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಸಪ್ತತ್ರಿಂಶಾಧ್ಯಾಯೇ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೇಳನೆಯ ಅಧ್ಯಾಯದಲ್ಲಿ ಐದನೆಯ ಖಂಡವು
ಸಮಾಪ್ತವಾದುದು.



## ಅಥ ಸಪ್ತತ್ರಿಂಶಾಧ್ಯಾಯೇ ಷಷ್ಠಃ ಖಂಡಃ

### ಮೂವತ್ತೇಳನೆಯ ಅಧ್ಯಾಯದಲ್ಲಿ ಆರನೆಯ ಖಂಡವು

[ ಶತ್ರುಗಳನ್ನು ಸೋಲಿಸಲು ರಾಜನು ಆಚರಿಸಬೇಕಾದ ಕೆಲವು ವಿಧಿನಿಯಮಗಳು ]

ದೇವಾಸುರಾ ವಾ ಏಷು ಲೋಕೇಷು ಸಂಯೇತಿರೇ ತ ಏತಸ್ಯಾಂ ಪ್ರಾಚ್ಯಾಂ ದಿಶಿ ಯೇತಿರೇ ತಾಂಸ್ತತೋಽಸುರಾ ಅಜಯಂಸ್ತೇ ದಕ್ಷಿಣಾಸ್ಯಾಂ ದಿಶಿ ಯೇತಿರೇ ತಾಂಸ್ತತೋಽಸುರಾ ಅಜಯಂಸ್ತೇ ಪ್ರತೀಚ್ಯಾಂ ದಿಶಿ ಯೇತಿರೇ ತಾಂಸ್ತತೋಽಸುರಾ ಅಜಯಂಸ್ತ

ಏತಸ್ಮಿನ್ನವಾಂತರದೇಶೇ ಯೇತಿರೇ ಯ ಏಷ ಪ್ರಾಙುದಙ್ಸ್ತೇ ಹ ತತೋ ಜಿಗ್ಯುಃ ॥

ಅಪರಾಜಿತಾಂ ದಿಶಮುಪತಿಷ್ಠೇತ ಇತಿ ಯದುಕ್ತಂ ತತ್ರೈಶಾನ್ಯಾ ದಿಶೋ ಮುಖ್ಯಾಪರಾಜಿತತ್ವಂ ದರ್ಶಯತಿ—ಪುರಾ ಕದಾಚಿದ್ದೇವಾಶ್ಚಾಸುರಾಶ್ಚೈಷು ಭೂರಾದಿಷು ಲೋಕೇಷು ನಿಮಿತ್ತೇಷು ಸಂಯೇತಿರೇ ಯುದ್ಧಂ ಕೃತವಂತಃ । ತತ್ರ ಪ್ರಾಚ್ಯಾದಿಷು ಚತಸೃಷು ದಿಕ್ಷು ಯತ್ರ ಯತ್ರ ಯುದ್ಧಂ ಕೃತಂ ತತ್ರ ತತ್ರಾಸುರಾಣಾಮೇವ ವಿಜಯೋಽಭೂತ್ । ಯ ಏಷ ಪ್ರಾಙ್‌ದುಙದಿಗ್ದ್ವಯಸ್ಪರ್ಶೀ ಕಶ್ಚಿದವಾಂತರದೇಶೇ ಯದಾ ಯದಾ ಯುದ್ಧಂ ಕೃತಂ ತದಾ ತೇ ದೇವಾಸ್ತತೋ ದೇಶಾನ್ನಿಮಿತ್ತಭೂತಾಜ್ಜಿಗ್ಯುರ್ಜಯಂ ಪ್ರಾಪ್ತಾಸ್ತಸ್ಮಾದಿಯಮೈಶಾನೀ ದಿಗಪರಾಜಿತಾ ಪೂರ್ವೋಕ್ತಮಂತ್ರೇಣೋಪಸ್ಥೇಯಾ ।

ಪೂರ್ವಕಾಲದಲ್ಲಿ, ಒಂದಾನೊಂದು ಸಮಯದಲ್ಲಿ ಈ ಭೂಲೋಕವೇ ಮೊದಲಾದ ಲೋಕಗಳ ಆಧಿಪತ್ಯಕ್ಕಾಗಿ ದೇವತೆಗಳಿಗೂ ಅಸುರರಿಗೂ ಯುದ್ಧವು ಸಂಭವಿಸಿತು. ಅಸುರರು ದೇವತೆಗಳೊಡನೆ ಪೂರ್ವದಿಕ್ಕಿನಲ್ಲಿ ಯುದ್ಧಮಾಡಿದಾಗ ಅಸುರರಿಗೇ ಜಯವುಂಟಾಯಿತು. ಅನಂತರ ದೇವತೆಗಳು ಅಸುರರೊಡನೆ ದಕ್ಷಿಣದಿಕ್ಕಿನಲ್ಲಿ ಯುದ್ಧಮಾಡಿದಾಗ ಆಗಲೂ ಅಸುರರಿಗೇ ಜಯವು ಲಭಿಸಿತು. ಬಳಿಕ ದೇವಾಸುರರಿಗೆ ಪಶ್ಚಿಮ ದಿಕ್ಕಿನಲ್ಲಿ ಯುದ್ಧವು ನಡೆದಾಗ ಆಗಲೂ ಅಸುರರೇ ಜಯಶಾಲಿಗಳಾದರು ಅನಂತರ ಉತ್ತರದಿಕ್ಕಿನಲ್ಲಿ ಯುದ್ಧವು ಸಂಭವಿಸಿದಾಗ ಆಗಲೂ ಅಸುರರೇ ಜಯವನ್ನು ಗಳಿಸಿದರು. ಕೊನೆಗೆ ದೇವತೆಗಳು ಯೋಚಿಸಿ ಪೂರ್ವ ಮತ್ತು ಉತ್ತರ ದಿಕ್ಕುಗಳ ಮಧ್ಯದಲ್ಲಿರುವ ಈಶಾನ್ಯದಿಕ್ಕಿನಲ್ಲಿ ಅಸುರರೊಡನೆ ಯುದ್ಧಮಾಡಿದರು. ಆಗ ದೇವತೆಗಳೇ ಅಸುರರನ್ನು ಸೋಲಿಸಿ ಯುದ್ಧದಲ್ಲಿ ಜಯವನ್ನು ಗಳಿಸಿದರು. ಆದ್ದರಿಂದ ಈಶಾನ್ಯ ದಿಕ್ಕಿಗೆ ಅಪರಾಜಿತಾ ಎಂದು ಹೆಸರಾಯಿತು. ಹಿಂದೆ ಹೇಳಿದ ಮಂತ್ರದಿಂದ ಈ ದಿಕ್ಕನ್ನು ಪ್ರಾರ್ಥಿಸಬೇಕು.

ತಂ ಯದಿ ಕ್ಷತ್ರಿಯ ಉಪಧಾವೇತ್ಸೇನಯೋಃ ಸಮಾಯತ್ಯೋಸ್ತಥಾ ಮೇ ಕುರು ಯಥಾಹಮಿಮಾಂ ಸೇನಾಂ ಜಯಾನೀತಿ ಸ ಯದಿ ತಥೇತಿ ಬ್ರೂಯಾದ್ವನಸ್ಪತೇ ವೀಡ್ವಂಗೋ ಹಿ ಭೂಯಾ ಇತ್ಯಸ್ಯ ರಥೋಪಸ್ಥಮಭಿಮೃಶ್ಯಾಥೈನಂ ಬ್ರೂಯಾತ್ ॥

ತಮೇತಮಭಿಷಿಕ್ತಕ್ಷತ್ರಿಯವೃತ್ತಾಂತಂ ತಾವದವಸ್ಥಾಪ್ಯ ತತ್ಪ್ರಸಂಗಾಗತಂ ಪುರುಷಾಂತರವೃತ್ತಾಂತಂ ದರ್ಶಯತಿ — ಕಸ್ಮಿಂಶ್ಚಿದ್ದೇಶೇ ಯುದ್ಧಾರ್ಥಮುಭೇ ಸೇನೇ ಪರಸ್ಪರಂ ಸಮಾಗಚ್ಛತಃ । ತಯೋಃ ಸಮಾಗಚ್ಛಂತ್ಯೋಃ ಸೇನಯೋರ್ಮಧ್ಯೇ ಯಃ ಕೋಽಪಿ ಕ್ಷತ್ರಿಯೋ ವಿಜಯಾರ್ಥೀ ಸಂಸ್ತಮಭಿಷಿಕ್ತಮೈಶಾನೀದಿಗುಪಸ್ಥಾನಮುಕ್ತಂ ರಾಜಾನಂ ಯದ್ಯುಪಧಾವೇತ್, ಶರಣಂ ಗಚ್ಛೇತ್ । ಕೇನಾಭಿಪ್ರಾಯೇಣೇತಿ ಸೋಽಭಿಧೀಯತೇ । ಹೇಽಭಿಷಿಕ್ತ ಯಥಾಹಮಿಮಾಂ ಶತ್ರುಸೇನಾಂ ಜಯಾನಿ ತಥಾ ಮೇಽನುಗ್ರಹಂ ಕುರ್ವಿತಿ ತದಭಿಪ್ರಾಯಃ । ತದಾನೀಂ ಸೋಽಭಿಷಿಕ್ತಃ ಕ್ಷತ್ರಿಯೋ ಯದಿ ತಥೇತ್ಯಂಗೀಕಾರಂ ಬ್ರೂಯಾತ್ । ತದಾನೀಂ ವನಸ್ಪತ ಇತ್ಯೃಚಾ ಜಯಾರ್ಥಿನಃ

**ಪುರುಷಸ್ಯ ರಥೋರ್ಧ್ವಭಾಗಮಭಿಮೃಶ್ಯಾನಂತರಮೇನಂ ಜಯಾರ್ಥಿನಂ ಪ್ರತಿ ವಕ್ಷ್ಯಮಾಣಂ ಮಂತ್ರಂ ಬ್ರೂಯಾತ್ ॥**

ಯುದ್ಧಮಾಡುವಾಗ ಎರಡು ಸೇನೆಗಳು ಎದರುಬದರಾಗಿ ನಿಂತು ಯುದ್ಧಸನ್ನಾಹಮಾಡುತ್ತಿರುವಾಗ ಆ ಯುದ್ಧದಲ್ಲಿ ಜಯವನ್ನು ಅಪೇಕ್ಷಿಸುವ ರಾಜನು ಆ ಎರಡು ಸೇನೆಗಳ ಮಧ್ಯದಲ್ಲಿ ಹಿಂದೆ ಹೇಳಿದಂತೆ ಈಶಾನ್ಯದಿಕ್ಕಿನಲ್ಲಿ ಅಭಿಷಿಕ್ತನಾದ ರಾಜನ ಬಳಿಗೆ ಹೋಗಿ ಅವನಿಗೆ ಶರಣಾಗತನಾಗಿ ಎಲೈ ರಾಜನೇ, ನಾನು ಈ ಸೇನೆಯನ್ನು ಗೆಲ್ಲುವಂತೆ ನನಗೆ ಅನುಗ್ರಹ ಮಾಡು ಎಂದು ಕೇಳಿಕೊಳ್ಳಬೇಕು. ಆಗ ಅಭಿಷಿಕ್ತನಾದ ರಾಜನು ಹಾಗೇ ಆಗಲೆಂದು ಹೇಳುವನು. ಅನಂತರ (ಪುರೋಹಿತನು) ಜಯಾಭಿಲಾಷಿಯಾದ ಪುರುಷನ ರಥದ ಮೇಲುಭಾಗವನ್ನು—ವನಸ್ಪತೇ ವೀಡ್ವಂಗೋ ಹಿ ಭೂಯಾ (ಋ. ಸಂ. ೬-೪೭-೨೬) ಎಂಬ ಮಂತ್ರದಿಂದ ಅಭಿಮರ್ಶನ (ಸ್ಪರ್ಶನ, ಮುಟ್ಟುವುದು) ಮಾಡಿ ಜಯಾರ್ಥಿಯಾದ ಪುರುಷನಿಗೆ ಈ ಮಂತ್ರವನ್ನು (ಮುಂದೆ ಹೇಳುವ ಮಂತ್ರವನ್ನು) ಹೇಳಬೇಕು.

ಆತಿಷ್ಠಸ್ವೈತಾಂ ತೇ ದಿಶಮಭಿಮುಖಃ ಸಂನದ್ಧೋ ರಥೋಽಭಿಪ್ರವರ್ತತಾಂ ಸ ಉದಙ್ಸ ಪ್ರತ್ಯಙ್ಸ ದಕ್ಷಿಣಾ ಸ ಪ್ರಾಙ್ಸೋಽಭ್ಯಮಿತ್ರಮಿತಿ ॥

**ತಂ ಮಂತ್ರಂ ದರ್ಶಯತಿ—ಹೇ ಜಯಾರ್ಥಿನ್ನೇತಾ ಮೈಶಾನೀಂ ದಿಶಮಾತಿಷ್ಠಸ್ವ ಪ್ರಾಪ್ನುಹಿ। ತೇ ರಥ ಏತಾಮೈಶಾನೀಂ ದಿಶಂ ಪ್ರತ್ಯಭಿಮುಖಃ ಸಂನದ್ಧಃ ಸರ್ವಾಯುಧಾದಿಸಂನಾಹೋಪೇತೋಽಭಿತಃ ಪ್ರವರ್ತತಾಮ್ । ತತಃ ಸರಥ ಉದಙ್ಮುಖಃ ಪ್ರವರ್ತತಾಮ್ । ತತಃ ಸ ರಥಃ ಪ್ರತ್ಯಙ್ಮುಖಃ ಪ್ರವರ್ತತಾಮ್ । ತತಃ ಸ ರಥೋ ದಕ್ಷಿಣಾಮುಖಃ ಪ್ರವರ್ತತಾಮ್ । ತತಃ ಸ ರಥಃ ಪ್ರಾಙ್ಮುಖಃ ಪ್ರವರ್ತತಾಮ್ । ತತ ಊರ್ಧ್ವಮಭ್ಯಮಿತ್ರಂ ತ್ವದೀಯಂ ಶತ್ರುಂ ಪ್ರತಿ ಪ್ರವರ್ತತಾಮ್ ॥**

ಎಲೈ ಜಯಾಭಿಲಾಷಿಯಾದ ಪುರುಷನೇ ನೀನು ಈಗ ಈಶಾನ್ಯದಿಕ್ಕಿಗೆ ಹೋಗು. ನಿನ್ನ ರಥವೂ ಅದರಲ್ಲಿರುವ ಆಯುಧಗಳೊಡನೆ ನೀನೂ ಯುದ್ಧಸನ್ನದ್ಧನಾಗಿ ಈಶಾನ್ಯದಿಕ್ಕಿಗೆ ಅಭಿಮುಖವಾಗಿ (ಎದುರಾಗಿ) ಸಿದ್ಧನಾಗಿರು. ಅನಂತರ ಆ ರಥವು ಉತ್ತರಾಭಿಮುಖವಾಗಿ ಸನ್ನದ್ಧವಾಗಲಿ. ಅನಂತರ ಆ ರಥವು ಪಶ್ಚಿಮಾಭಿಮುಖವಾಗಿಯೂ ಬಳಿಕ ದಕ್ಷಿಣಾಭಿಮುಖವಾಗಿಯೂ ಸಿದ್ಧವಾಗಿರಲಿ. ಅನಂತರ ಆ ರಥವು ಪೂರ್ವಾಭಿಮುಖವಾಗಿ ಸನ್ನದ್ಧವಾಗಿರಲಿ. ಅನಂತರ ಆ ರಥವು ಶತ್ರುವಿಗೆ ಎದುರಾಗಿ ಯುದ್ಧಸನ್ನದ್ಧವಾಗಿ ಹೊರಡಲಿ.

ಅಭೀವರ್ತೇನ ಹವಿಷೇತ್ಯೇವೈನಮಾವರ್ತಯೇದಥೈನಮನ್ವೀಕ್ಷೇತಾಪ್ರತಿರಥೇನ ಶಾಸೇನ ಸೌಪರ್ಣೇನೇತಿ ।

**ಜಯಾರ್ಥಿನಂಪ್ರತ್ಯೇತನ್ಮಂತ್ರ ಕಥನಾದೂರ್ಧ್ವಮಭಿಷಿಕ್ತಸ್ಯ ಕರ್ತವ್ಯಂ ದರ್ಶಯತಿ—ಅಭಿವರ್ತೇನೇತ್ಯಾದಿನಾ ಸೂಕ್ತೇನೈನಂ ಜಯಾರ್ಥಿನಮುಕ್ತಕ್ರಮೇಣ ದಿಕ್ಷ್ವಾವರ್ತಯೇತ್ । ಅಥಾನಂತರಮಾವರ್ತಮಾನಮೇನಂ ಸೂಕ್ತತ್ರಯೇಣಾನ್ವೀಕ್ಷೇತ । ಆಶುಃ ಶಿಶಾನಃ (೧೦-೧೦೩-೧) ಇತ್ಯಪ್ರತಿರಥಂ ಸೂಕ್ತಮ್ । ಶಾಸ ಇತ್ಥಾ (೧೦-೧೫೨-೧) ಇತಿ ಶಾಸಸೂಕ್ತಮ್ । ಪ್ರಧಾರಯಂತು ಮಧುನ ಇತಿ ಸೌಪರ್ಣಸೂಕ್ತಮ್ ॥**

ಅನಂತರ ಪುರೋಹಿತನು ಜಯಾಭಿಲಾಷಿಯಾದ ರಾಜನನ್ನು ಮುಂದೆ ತಿರುಗಿಸಿ ನಿಲ್ಲಿಸಿ **ಅಭಿವರ್ತೇನ ಹವಿಷಾ** (ಋ. ಸಂ. ೧೦-೧೭೪-೧) ಎಂಬ ಮಂತ್ರವನ್ನು ಪಠಿಸಬೇಕು. ಅನಂತರ ಮುಂದೆ ಹೇಳುವ ಮೂರು ಮಂತ್ರಗಳನ್ನು ಪಠಿಸುತ್ತಾ ಆ ಪುರುಷನನ್ನು ನೋಡಬೇಕು. **ಆಶುಃ ಶಿಶಾನಃ** (ಋ. ಸಂ. ೧೦-೧೦-೩-೧) ಎಂಬುವುದು ಅಪ್ರತಿರಥ ಸೂಕ್ತವು. **ಶಾಸ ಇತ್ಥಾ** (ಋ. ಸಂ. ೧೦-೧೫೨-೧) ಎಂಬುವುದು ಶಾಸಸೂಕ್ತವು. **ಪ್ರಧಾರಯಂತು ಮಧುನ** ಎಂಬುವುದು ಸೌಪರ್ಣಸೂಕ್ತವು.

ಜಯತಿ ಹ ತಾಂ ಸೇನಾಂ ।

ಅಭಿಷಿಕ್ತಸ್ಯ ಕೃತ್ಯಮುಕ್ತ್ವಾ ಜಯಾರ್ಥಿನಃ ಕೃತ್ಯಂ ದರ್ಶಯತಿ-

ಮೇಲೆ ಹೇಳಿದಂತೆ ಮಾಡಿದರೆ ಜಯಾರ್ಥಿಯಾದ ಪುರುಷನು ಯುದ್ಧದಲ್ಲಿ ನಿಶ್ಚಯವಾಗಿಯೂ ಗೆಲ್ಲುವನು.

ಯದ್ಯು ವಾ ಏನಮುಪಧಾವೇತ್ಸಂಗ್ರಾಮಂ ಸಂಯತಿಷ್ಯಮಾಣಸ್ತಥಾ ಮೇ ಕುರು ಯಥಾಽಹಮಿಮಂ ಸಂಗ್ರಾಮಂ ಸಂಜಯಾನೀತ್ಯೇತ-ಸ್ಯಾಮೇವೈನಂ ದಿಶಿ ಯಾತಯೇಜ್ಜಯತಿ ಹ ತಂ ಸಂಗ್ರಾಮಂ ।

ಸೇನಾದ್ವಯಯುದ್ಧೇ ಜಯಾರ್ಥಂ ಪ್ರಯೋಗಮುಕ್ತ್ವಾ ಪುರುಷದ್ವಂದ್ವಯುದ್ಧೇಽಪಿ ತಮಾಹ—ಯಃ ಕೋಽಪಿ ಪುಮಾನ್ಸಂಯತಿಷ್ಯಮಾಣೇ ಯುದ್ಧಂ ಕರಿಷ್ಯಂಸ್ತಂ ಸಂಗ್ರಾಮಂ ಜೇತು-ಮೇನಮಭಿಷಿಕ್ತಂ ಯದ್ಯುಪಧಾವೇತ್ । ತಥಾ ಮೇ ಕುರ್ವಿತಿ ಪೂರ್ವವತ್ ॥

ಮೇಲೆ ಹೇಳಿದಂತೆ ಯುದ್ಧಸಂನದ್ಧನಾದ ಪುರುಷನು ತನ್ನ ಪುರೋಹಿತನನ್ನು ಕುರಿತು—ನಾನು ಈ ಯುದ್ಧದಲ್ಲಿ ಗೆಲ್ಲುವಂತೆ ಮಾಡು ಎಂದು ಪ್ರಾರ್ಥಿಸಿ ಯುದ್ಧವನ್ನು ಮಾಡಿದರೆ ನಿಶ್ಚಯವಾಗಿಯೂ ಯುದ್ಧದಲ್ಲಿ ಜಯಶೀಲನಾಗುವನು.

ಯದ್ಯು ವಾ ಏನಮುಪಧಾವೇದ್ರಾಷ್ಟ್ರಾದಪರುಧ್ಯಮಾನಸ್ತಥಾ ಮೇ ಕುರು ಯಥಾಽಹಮಿದಂ ರಾಷ್ಟ್ರಂ ಪುನರವಗಚ್ಛಾನೀತ್ಯೇತಾಕು-ಮೇವೈನಂ ದಿಶಮುಪನಿಷ್ಕ್ರಮಯೇತ್ತಥಾ ಹ ರಾಷ್ಟ್ರಂ ಪುನರವ-ಗಚ್ಛತಿ ॥

ರಾಷ್ಟ್ರಾದ್ಭ್ರಷ್ಟಸ್ಯ ಪುನರಪಿ ರಾಷ್ಟ್ರಪ್ರಾಪ್ತ್ಯರ್ಥಂ ಪ್ರಯೋಗಂ ದರ್ಶಯತಿ ಯಥಾ ನೈ ಸೇನಯೋರ್ಯುದ್ಧೇ ಪುರುಷಯೋರ್ಯುದ್ಧೇ ಚಾಭಿಷಿಕ್ತೇನೋದೀಚೀಂ ದಿಶಂ ಪ್ರತಿ ಪ್ರಸ್ಥಾಪಿ-ತಸ್ಯ ಜಯಸ್ತಥೈವ ರಾಷ್ಟ್ರಭ್ರಷ್ಟೋಽಪ್ಯಭಿಷಿಕ್ತೇನೈಶಾನೀಂ ದಿಶಂ ಪ್ರಸ್ಥಾಪಿತೋ ರಾಷ್ಟ್ರಂ ಪುನಃ ಪ್ರಾಪ್ನೋತಿ ॥

ತನ್ನ ದೇಶವನ್ನು ಕಳೆದುಕೊಂಡ ರಾಜನು ಯುದ್ಧದಲ್ಲಿ ನಡೆಸಬೇಕಾದ ಕ್ರಮವು. ರಾಜನು ತನ್ನ ರಾಜ್ಯವನ್ನು ಕಳೆದುಕೊಂಡು ಪುನಃ ಅದನ್ನು ಹಿಂತಿರುಗಿ ಗೆಲ್ಲಬೇಕೆಂದು ಪ್ರಯತ್ನಪಟ್ಟರೆ ಆಗ ಆ ರಾಜನು ಈಶಾನ್ಯ ದಿಕ್ಕಿನಲ್ಲಿ ಮೇಲೆ



ಹೇಳಿದ ಕ್ರಮದಂತೆ ಆಚರಿಸಿ ಶತ್ರುವಿನೊಡನೆ ಯುದ್ಧಮಾಡಿದರೆ ಯುದ್ಧದಲ್ಲಿ ಜಯವುಂಟಾಗಿ ತನ್ನ ಕಳೆದುಕೊಂಡಿದ್ದ ರಾಜ್ಯವನ್ನು ಪುನಃ ಪಡೆದುಕೊಳ್ಳುವನು.

ಉಪಸ್ಥಾಯಾಮಿತ್ರಾಣಾಂ ವ್ಯಪನುತ್ತಿಂ ಬ್ರುವನ್ಗೃಹಾನಭ್ಯೇತ್ಯಪ-
ಪ್ರಾಚ ಇಂದ್ರ ವಿಶ್ವಾ ಅಮಿತ್ರಾನಿತಿ ಸರ್ವತೋ ಹಾಸ್ಮಾ ಅನ-
ಮಿತ್ರಾಮಭಯಂ ಭವತ್ಯುತ್ತರೋತ್ತರಿಣೀಂ ಹ ಶ್ರಿಯಮಶ್ನುತೇಽ-
ಶ್ನುತೇ ಹ ಪ್ರಜಾನಾಮೈಶ್ವರ್ಯಮಾಧಿಪತ್ಯಂ ಯ ಏವಮೇತಾಮ-
ಮಿತ್ರಾಣಾಂ ವ್ಯಪನುತ್ತಿಂ ಬ್ರುವನ್ಗೃಹಾನಭ್ಯೇತಿ ||

ಇತ್ಥಂ ಪ್ರಾಸಂಗಿಕಂ ಪ್ರಯೋಗತ್ರಯಮುಕ್ತ್ವಾ ಪ್ರಕೃತಮೇವಾಭಿಷಿಕ್ತವಿಷಯಂ ಪ್ರಯೋಗಮಾಹ—ಪೂರ್ವತ್ರ ಕ್ಲೃಪ್ತಿರಸೀತ್ಯಾದಿಮಂತ್ರೇಣಾಭಿಷಿಕ್ತಸ್ಯ ಪದತ್ರಯಾಭ್ಯುತ್ಕ್ರಮಣಮೈಶಾನೀದಿಗುಪಸ್ಥಾನಂ ಚಾಭಿಹಿತಂ । ತಾಂ ದಿಶಮುಪಸ್ಥಾಯಾನಂತರಮಮಿತ್ರಾಣಾಂ ಶತ್ರೂಣಾಂ ವ್ಯಪನುತ್ತಿಂ ವಿಶೇಷೇಣಾಪನೋದನಹೇತುಮೃತ ಏವ ವ್ಯಪನುತ್ಯಭಿಧಾನಾಮಪಪ್ರಾಚ ಇತ್ಯಾದಿಕಾಮೃಚಂ ಬ್ರುವನ್ ಸ್ವಗೃಹಾನಭಿಗಚ್ಛೇತ್ । ತಸ್ಯಾಮೃಚಿ ದ್ವಿತೀಯಪಾದೇ ನುದಸ್ವೇತಿ ಶ್ರವಣಾದಿಯಮೃಗಮಿತ್ರಾಣಾಂ ವ್ಯಪನುತ್ತಿಃ । ಅಸ್ಮಾ ಏವಂ ಗೃಹಮಾಗಚ್ಛತೋಽಸ್ಯ ಯಜಮಾನಸ್ಯ ಸರ್ವತಃ ಸರ್ವಾಸು ದಿಕ್ಷು ಶತ್ರುರಾಹಿತ್ಯಲಕ್ಷಣಮಭಯಂ ಭವತಿ । ನ ಕೇವಲಂ ಭಯರಾಹಿತ್ಯಂ ಕಿಂತೂತ್ತರೋತ್ತರಾಭಿವೃದ್ಧಿಸಂಪತ್ ಪ್ರಾಪ್ನೋತಿ ಸಾಯಾದಿಕಮಪಿ । ಯಥೋಕ್ತಮಂತ್ರೋಚ್ಚಾರಣೇನ ಯೋ ಗೃಹಾನಭ್ಯಾಗತೋ ಭವತಿ ||

ಈ ರೀತಿ ಮೇಲೆ ಹೇಳಿದ ಮೂರುವಿಧ ಪ್ರಯೋಗಗಳನ್ನು ಹೇಳಿ ಈಗ ಅಭಿಷಿಕ್ತನಾದವನು ಮಾಡಬೇಕಾದ ಪ್ರಯೋಗವನ್ನು ತಿಳಿಸುವರು—ಹಿಂದೆ ಕ್ಲೃಪ್ತಿರಸಿ ಎಂಬ ಮಂತ್ರದಿಂದ ಈಶಾನ್ಯದಿಕ್ಕಿನ ಉಪಸ್ಥಾನಕ್ರಮವನ್ನು ಹೇಳಿದ್ದಾಯಿತು. ಆ ದಿಕ್ಕನ್ನು ಉಪಸ್ಥಾನ (ಪ್ರಾರ್ಥನೆ) ಮಾಡಿದನಂತರ ತನ್ನ ಶತ್ರುಗಳನ್ನು ಓಡಿಸುವುದಕ್ಕಾಗಿ ಅಪ ಪ್ರಾಚ ಇಂದ್ರ ವಿಶ್ವಾ ಅಮಿತ್ರಾನ್ (ಋ. ಸಂ. ೧೦–೧೩೧–೧) ಎಂಬ ಮಂತ್ರವನ್ನು ಪಠಿಸಿ ತನ್ನ ಅರಮನೆಯನ್ನು ಪ್ರವೇಶಿಸಬೇಕು. ಈ ಋಕ್ಕಿನ ಎರಡನೇ ಪಾದದಲ್ಲಿ ನುದಸ್ವ ಎಂಬ ಪದಪ್ರಯೋಗವಿರುವುದರಿಂದ ಶತ್ರುಗಳನ್ನು ಓಡಿಸುವ ವಿಷಯವು ಉಕ್ತವಾಗಿದೆ ಆದ್ದರಿಂದ ಈ ಋಕ್ಕನ್ನು ಪಠಿಸಿ ತನ್ನ ಗೃಹವನ್ನು ಪ್ರವೇಶಿಸುವ ರಾಜನಿಗೆ ಅವನ ಸಮಸ್ತಶತ್ರುಗಳ ನಿವಾರಣೆಯಾಗಿ ಸಮಸ್ತಸುಖಸಂಪತ್ತುಗಳು ಉತ್ತರೋತ್ತರ ಅಭಿವೃದ್ಧಿಯನ್ನೈದುವವು. ಆದ್ದರಿಂದ ಜಯಾಭಿಲಾಷಿಯಾದ ರಾಜನು ಮೇಲೆ ಹೇಳಿದ ಮಂತ್ರೋಚ್ಚಾರಣೆಯಿಂದ ತನ್ನ ಗೃಹವನ್ನು ಪ್ರವೇಶಿಸಬೇಕು.

ಏತ್ಯ ಗೃಹಾನ್ಪಶ್ಚಾದ್ಗೃಹ್ಯಸ್ಯಾಗ್ನೇರುಪವಿಷ್ಟಾಯಾನ್ವಾರಬ್ಧಾಯ ಋತ್ವಿ-
ಗಂತತಃ ಕಂಸೇನ ಚತುರ್ಗೃಹೀತಾಸ್ತಿಸ್ರ ಆಜ್ಯಾಹುತೀರೈಂದ್ರೀಃ
ಪ್ರಪದಂ ಜುಹೋತ್ಯನಾರ್ತ್ಯಾ ಅರಿಷ್ಟ್ಯಾ ಅಜ್ಯಾನ್ಯಾ ಅಭಯಾಯ||

ಗೃಹಪ್ರಾಪ್ತೇರೂರ್ಧ್ವಂ ಕರ್ತವ್ಯಂ ವಿಧತ್ತೇ—ಗೃಹಾನ್ಪ್ರತ್ಯಾಗತ್ಯ ಯೋಽಯಂ ಗೃಹ್ಯೋ ಗೃಹೇ ವರ್ತಮಾನ ಔಪಾಸನೋಽಗ್ನಿಸ್ತಸ್ಯ ಪಶ್ಚಾದ್ಭಾಗ ಉಪವಿಷ್ಟಾಯಾಽಽಸೀನಾಯ ಋತ್ವಿಜೇಽ-ನ್ವಾರಬ್ಧಾಯೋಪಸೃಷ್ಟವತೇ ಕ್ಷತ್ರಿಯಾಯ ತಾದೃಶಸ್ಯ ಕ್ಷತ್ರಿಯಸ್ಯಾನಾರ್ತ್ಯಾದಿಸಿದ್ಧ್ಯರ್ಥಮೃತ್ವಿಗಧ್ವರ್ಯುರಂತತಃ ಸರ್ವಪ್ರಯೋಗಾಂತೇ ಕಂಸೇನ ಕಾಂಸ್ಯಪಾತ್ರೇಣ ಚತುರ್ಗೃಹೀತಾಶ್ಚತುರ್ವಾರಂ ಸ್ವೀಕೃತಾ ಐಂದ್ರೀರಿಂದ್ರದೇವತಾಕಾ ವಕ್ಷ್ಯಮಾಣೈಸ್ತ್ರಿಭಿರ್ಮಂತ್ರೈಸ್ತಿಸ್ರ ಆಜ್ಯಾಹುತೀಃ ಪ್ರಪದಂ ಯಥಾ ಭವತಿ ತಥಾ ಜುಹುಯಾತ್ । ಪ್ರಪದಂ ಪ್ರಕೃಷ್ಟಂ ಪದಮ್ । ತಥಾ ಚಾಹುಃ—

"ಪಾದಾ ಯಸ್ಯಾಸ್ತು ಯಾವಂತೋ ಯಾವದಕ್ಷರಸಂಮಿತಾಃ ॥
ಋಚ್ಯಧ್ಯಯನಮೇತೇಷಾಂ ಪ್ರಪದಂ ತದ್ವಿದುರ್ಬುಧಾಃ ॥" ಇತಿ

ಅತಃ ಪ್ರಪದಶಬ್ದೇನಕ್ಷರಪಾದಾದಿವೈಕಲ್ಯರಹಿತಂ ಲಾಕ್ಷಣಿಕಮುಚ್ಚಾರಣಮಭಿಧೀಯತೇ। ಅನಾರ್ತಿ-ರ್ವ್ಯಾಧಿಪೀಡಾರಾಹಿತ್ಯಮ್ । ಅರಿಷ್ಟಿಃ ಶತ್ರುಭಿರಹಿಂಸಾ । ಅಜ್ಯಾನಿರ್ದ್ರವ್ಯಹಾನಿರಾಹಿತ್ಯಮ್। ಅಭ-ಯಂ ಚೋರಾದಿರಾಹಿತ್ಯಮ್ ॥

ರಾಜನು ಗೃಹವನ್ನು (ಅರಮನೆಯನ್ನು) ಪ್ರವೇಶ ಮಾಡಿದಮೇಲೆ ಮಾಡಬೇಕಾದ ಕರ್ತವ್ಯವು—ಗೃಹಪ್ರವೇಶಾನಂತರ ಮನೆಯಲ್ಲಿರುವ ಔಪಸನಾಗ್ನಿಯ ಹಿಂದುಗಡೆ ಕುಳಿತುಕೊಂಡು ಅಗ್ನಿಯಲ್ಲಿ ಮೂರು ಆಹುತಿಗಳನ್ನರ್ಪಿಸಬೇಕು. ಪುರೋಹಿತನು ಆ ರಾಜನ ತಾಮ್ರದ ಪಾತ್ರೆಗೆ ನಾಲ್ಕಾವರ್ತಿ ತೆಗೆದುಕೊಂಡ ಆಜ್ಯ (ಕಾಯಿಸಿದ ತುಪ್ಪ) ವನ್ನು ಹಾಕಿ ಇಂದ್ರನನ್ನುದ್ದೇಶಿಸಿ ಮೂರಾವರ್ತಿ ಹೋಮ ಮಾಡಬೇಕು. ಆಗ ಮಂತ್ರವನ್ನು ಪ್ರಪದ ಎಂದರೆ ಲೋಪವ್ಯತ್ಯಾಸಗಳಿಲ್ಲದಂತೆ ಪಠಿಸಿ ಹೋಮಮಾಡಬೇಕು.

ಪಾದಾ ಯಸ್ಯಾಸ್ತು ಯಾವಂತೋ ಯಾವದಕ್ಷರಸಂಮಿತಾಃ ।
ಋಚ್ಯಧ್ಯಯನಮೇತೇಷಾಂ ಪ್ರಪದಂ ತದ್ವಿದುರ್ಬುಧಾಃ ॥

ಈ ಶ್ಲೋಕವು ಪ್ರಪದ ಎಂಬ ಪದದ ಅರ್ಥವನ್ನು ವಿಶದಪಡಿಸುವುದು. ಯಾವ ಋಕ್ಕಿನಲ್ಲಿ ಪ್ರತಿಪಾದದಲ್ಲಿ ಅಕ್ಷರಗಳು ಹೆಚ್ಚು ಕಡಿಮೆ ಇಲ್ಲದೆ ಕ್ಲೃಪ್ತಸಂಖ್ಯೆಯಲ್ಲಿರುವುವೋ ಆ ಋಕ್ಕಿಗೆ ಪ್ರಪದವೆಂದು ಹೇಳುವರು. ಆದ್ದರಿಂದ ಅಕ್ಷರಪಾದಾದಿಗಳಿಗೆ ವೈಕಲ್ಯವಿಲ್ಲದೆ ಲಕ್ಷಣವಾದ ಉಚ್ಚಾರಣೆಯಿಂದ ಪಠಿಸಲ್ಪಡುವ ಮಂತ್ರಕ್ಕೆ ಪ್ರಪದವೆಂದು ಹೆಸರು. ಮೇಲೆ ಹೇಳಿರುವ ಅನಾರ್ತಿ ಎಂಬ ಶಬ್ದಕ್ಕೆ ರೋಗ ಮೊದಲಾದ ವ್ಯಾಧಿಪರಿಹಾರವೆಂದರ್ಥವು. ಅರಿಷ್ಟಿಃ – ಶತ್ರುಭಯರಾಹಿತ್ಯವು; ಅಜ್ಯಾನಿಃ – ದ್ರವ್ಯಹಾನಿರಾಹಿತ್ಯವು. ಅಭಯಂ – ಚೋರಾದಿ ಭಯರಾಹಿತ್ಯವು. ಮೇಲೆ ಹೇಳಿದ ಪ್ರಪದಪೂರ್ವಕವಾದ ಮಂತ್ರ ಪಠನಪೂರ್ವಕವಾಗಿ ಇಂದ್ರನಿಗೆ ಮೂರು ಆಜ್ಯಾಹುತಿಗಳನ್ನರ್ಪಿಸಿದರೆ ಮೇಲೆ ಹೇಳಿದ ಅನಾರ್ತಿ, ಅರಿಷ್ಟಿ, ಅಜ್ಯಾನಿಃ, ಅಭಯಂ ಎಂಬ ಭಯರಾಹಿತ್ಯವುಂಟಾಗಿ ಸುಖದಿಂದಿರುವನು ಎಂದಭಿಪ್ರಾಯವು.

*English Translation*

**( Magical performance of a King for defeating an enemy ).**

The Devas and Asuras were fighting in these worlds. They fought in the eastern direction, then the Asuras defeated them. They then fought in the southern direction, and the Asuras defeated them again ; and likewise they were defeated by the Asuras when fighting in the western and northern directions. They were then fighting between the eastern and noathren directions, and remainend victors. The Kshattriya therefore, standing amidst both armies arrayed in battle lines, shall proceed to the north-east saying to him to the house-priest. " Do so that I may conquer this army. " After he ( the house-priest ) has consented, he should touch the upper part of the king's chariot, and repeat the mantra, vanaspate vidvango hi (6, 47, 26 ). Then he shall say to the king, " Turn towards this north-east direction ; thy chariot with all its implements should be turned thither ( north-east ); then to the north-west, south and east, and lastly towards the enemy. " with the hymn, abhivartena havisha ( 10, 174 ) shall he turn his chariot, and when reciting the Apratiratha (10, 103 asuh sisano ), Sasa (10, 152 sasa ittha ), and Sauparna (pradhara yantu madhuna ) hymns, he shall look upon it ( the chariot) .

The Kshattriya conquers the hostile army, when he at the time of just being about fighting with tha enemy takes thus his refuge with thh housa-priest saying , " Make me win this battle. " He then shall let him fight in the north-eastern direction, and he ( the Kshattriya ) wins the battle. If he be turned out of his dominions and thus takes his rtfuge with him ( the house-priest), saysng , " Make me return to my dominions, " then the house priest shall let him when going away proceed to this north-erstern direction, and thus he recovers his dominions.

The king, whose inauguration ceremony is performed after haxing been standing in this north-eastern direction, recites then when going to his palace ( the verse ) calculated to drive away all enemies altogether. This verse is, apa pracha, ( 10, 131, 1 ). Then he will be made rid of all his enemies

and live in safety, and enjoy happiness increasing from day to day. He who returns to his palace whilst recting the above mentioned mantra (10, 131, 1 ) obtains sovereignty over his subjects, and supreme power. After having come home he sits behind the household fire. His priest then, after having touched him, fills a goblet four times with melted butter, and makes thus three - each consisting of four spoonfuls offerings addressed to Indra, the mantras being recited in the Prapada form, in order that he might be protected from disease, injury from any loss, and enjoy perfect safety.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ಸಪ್ತತ್ರಿಂಶಾಧ್ಯಾಯೇ ಷಷ್ಠಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೇಳನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವಾದುದು.



## ಅಥ ಸಪ್ತತ್ರಿಂಶಾಧ್ಯಾಯೇ ಸಪ್ತಮಃ ಖಂಡಃ

### ಮೂವತ್ತೇಳನೆಯ ಅಧ್ಯಾಯದಲ್ಲಿ ಏಳನೆಯ ಖಂಡವು

[ ಈ ಮೂರು ಮಂತ್ರಗಳನ್ನು ಕೆಲವು ಪದಗಳನ್ನು ಸೇರಿಸಿ ಪಠಿಸುವುದು ಅದರ ಫಲವು ಈ ವಿಷಯದಲ್ಲಿ ಜನಮೇಜಯ ರಾಜನ ಅಭಿಪ್ರಾಯವು

ಪರ್ಯೂಷು ಪ್ರಧನ್ವ ವಾಜಸಾತಯೇ ಪರಿ ವೃತ್ರಾ ಭೂರ್ಬ್ರಹ್ಮ ಪ್ರಾಣ ಮಮೃತಂ ಪ್ರಪದ್ಯತೇಽಯಮಸೌ ಶರ್ಮ ವರ್ಮಾಭಯಂ ಸ್ವಸ್ತಯೇ ಸಹ ಪ್ರಜಯಾ ಸಹ ಪಶುಭಿರ್ಣಿ ಸಕ್ಷಣಿರ್ದ್ವಿಷಸ್ತರಧ್ಯಾ ಋಣಯಾ ನ ಈಯಸೇ ಸ್ವಾಹಾ ||

ಉಕ್ತಾಹುತ್ಯರ್ಥಂ ಪ್ರಥಮಂ ಮಂತ್ರಮಾಹ —ಅತ್ರ ಪರ್ಯೂಷ್ವಿತ್ಯಾದಿಕಾಯ ಋಚಃ ಪರಿ ವೃತ್ರಾಣಿ ಸಕ್ಷಣಿರಿತಿ ದ್ವಿತೀಯಃ ಪಾದಃ । ತಸ್ಮಿನ್ ಪಾದೇ ವೃತ್ರಾಣೀತಿ ಯತ್ಪದಂ ತಸ್ಯ ಪದಸ್ಯ ಮಧ್ಯೇ ಭೂರಿತ್ಯಾದಿಕಂ ಪಶುಭಿರಿತ್ಯಂತಂ ಪದಜಾತಂ ಪ್ರಕ್ಷೇಪಣೀಯಮ್ । ವೃತ್ತೇಽತ್ರೇತದಕ್ಷರ-

ದ್ವಯಂ ಪುರಸ್ತಾತ್’ ಇತ್ಯೇತತ್ಪುರಸ್ತಾನ್ಮಧ್ಯೇ ಪ್ರಕ್ಷೇಪಃ । ಅತ ಏವಾಸ್ಯೋಚ್ಚಾರಣಸ್ಯ ಪ್ರಪದಮಿತಿ ನಾಮ ಸಂಪನ್ನಮ್ । ಪ್ರಕ್ಷಿಪ್ತಂ ಪದಜಾತಂ ಯಸ್ಮಿನ್ನುಚ್ಚಾರಣೇ ತದುಚ್ಚಾರಣಂ ಪ್ರಪದಮ್ । ತತ್ರ ತಾವತ್ಸಂಹಿತಾಯಾಮಾಮ್ನಾತಾಯಾ ಋಚೋಽಯಮರ್ಥಃ । ಹೇ ಇಂದ್ರ ವಾಜಸಾತಯೇಽನ್ನ-ಲಾಭಾಯ । ಪರ್ಯೂರ್ಷ್ವಿತಿ ನಿಪಾತತ್ರಯಸಮೂಹೇನ ಪರಿತ ಇತ್ಯೇತಾವಾನೇವಾರ್ಥೋಽಭಿ-ಧೀಯತೇ । ಪರಿತಃ ಸರ್ವತಃ । ಪ್ರಧನ್ವ ಪ್ರಕರ್ಷೇಣ ಧಾರಯ । ಧಾರಣಾರ್ಥೋ ಧನ್ವತಿಧಾತುಃ । ಅಸ್ಮಭ್ಯಮನ್ನಂ ಧಾತುಂ ಚಿತ್ತಂ ಧಾರಯೇತ್ಯರ್ಥಃ । ವೃತ್ರಾಣಿ ಶತ್ರೂನ್ಪರಿಸಕ್ಷಣಿಃ ಪರಿತೋ ನಿರಾಕರಿಷ್ಣುರ್ಭವ । ಸಕ್ಷಣಿಧಾತುರೌಚಿತ್ಯಾನ್ನಿರಾಕರಣಂ ಬ್ರೂತೇ । ದ್ವಿಷಃ ಶತ್ರೂಂಸ್ತರಧ್ಯೈ ತರೀತುಮ್ । ಋಣಾಯಾಃ ಪ್ರಯತ್ನಂ ಪ್ರಾಪ್ತಃ । ನೋಽಸ್ಮದರ್ಥಮೀಯಸೇ ಚೇಷ್ಟಸ ಇತಿ । ಅಸ್ಯಾಮೃಚಿ ವೃತ್ರಾಣೀತಿ ಪದಸ್ಯ ಮಧ್ಯೇ ಪ್ರಕ್ಷಿಪ್ತಸ್ಯ ಭೂರಿತ್ಯಾದಿ ಪಶುಭಿರಿತ್ಯಂತಪದಜಾತಸ್ಯಾಯ-ಮರ್ಥಃ । ಅಯಂ ಕ್ಷತ್ರಿಯೋಽಸೌ ವಿಷ್ಣುಗುಪ್ತಾದಿನಾಮಕೋ ಭೂರಾದೀನ್ಪ್ರಪದ್ಯತೇ ಶರಣಂ ಗಚ್ಛತಿ । ಭೂಃ ಪೃಥಿವೀ । ಬ್ರಹ್ಮ ವೇದಃ । ಪ್ರಾಣ ಪ್ರಸಿದ್ಧಃ । ಅಮೃತಂ ಮರಣರಹಿತಮ್ । ದೇವತಾರೂಪಂ ಭೂರಾದಿಕಂ ಶರಣಂ ಪ್ರಪನ್ನಸ್ಯ ಕ್ಷತ್ರಿಯಸ್ಯ ಪ್ರಜಯಾ ಪುತ್ರಾದಿರೂಪಯಾ ಸಹ ಪಶುಭಿರ್ಗವಾದಿ (ಭಿ) ಶ್ಚ ಸಹ ಸ್ವಸ್ತಯೇ ಕ್ಷೇಮಾರ್ಥಂ ತ್ವಂ ಶರ್ಮ ಸುಖಂ ವರ್ಮ ಕವಚಮಭಯಂ ಭಯರಹಿತಂ ದೇವತಾದಿರೂಪಂ ಸ್ಥಾನಂ ಚ ಕುರ್ವಿತಿ ಶೇಷಃ । ಏತತ್ಸಿದ್ಧ್ಯರ್ಥಂ ಸ್ವಾಹಾ ತುಭ್ಯಮಿದಂ ಸುಹುತಮಸ್ತು ॥

ಹಿಂದೆ ಹೇಳಿದ ಮೂರು ಆಹುತಿಗಳಲ್ಲಿ ಮೊದಲನೆಯ ಮಂತ್ರವನ್ನು ವಿವರಿಸುವರು—ಮೇಲೆ ಹೇಳಿರುವ **ಪರ್ಯೂಷು ಪ್ರಧನ್ವ ವಾಜಸಾತಯೇ** (ಋ. ಸಂ. ೯।೧೧೦-೧) ಎಂಬ ಋಕ್ಕಿನಲ್ಲಿ ಪರಿ ವೃತ್ರಾಣಿ ಸಕ್ಷಣಿಃ ಎಂಬುದು ಎರಡನೆಯ ಪಾದವು. ಈ ಪದದಲ್ಲಿ **ವೃತ್ರಾಣಿ** ಎಂಬ ಪದದ ಮಧ್ಯದಲ್ಲಿ **ಭೂಃ** ಎಂಬ ಪದದಿಂದ **ಪಶುಭಿಃ** ಎನ್ನುವವರೆಗೆ ಇರುವ ಪದಗಳನ್ನು ಸೇರಿಸಬೇಕು. ಎಂದರೆ **ವೃತ್ರಾಣಿ** ಎಂಬಲ್ಲಿ **ವೃತ್ರ** ಎನ್ನುವ ಎರಡು ಅಕ್ಷರಗಳಿಗೂ **ಣಿ** ಎಂಬ ಅಕ್ಷರಕ್ಕೂ ಮಧ್ಯದಲ್ಲಿ ಮೇಲೆ ಹೇಳಿದ **ಭೂಃ** ಮೊದಲಾದ ಶಬ್ದಗಳನ್ನು ಸೇರಿಸಬೇಕು ಎಂದಭಿಪ್ರಾಯವು. ಆದ್ದರಿಂದ ಇದರ ಉಚ್ಚಾರಣೆಗೆ ಪ್ರಪದವೆಂದು ಹೆಸರು. ಯಾವ ಮಂತ್ರದ ಉಚ್ಚಾರಣೆಯಲ್ಲಿ ಕೆಲವು ಬೇರೆ ಪದಗಳನ್ನು ಸೇರಿಸಲಾಗಿದೆಯೋ ಅದಕ್ಕೆ ಪ್ರಪದನೆಂದು ಹೆಸರು. ಇಲ್ಲಿ ಸಂಹಿತೆಯಲ್ಲಿ ಹೇಳಿರುವ ಈ ಋಕ್ಕಿನ ಅರ್ಥವು ಈರೀತಿ ಇರುವುದು — **ಹೇ ಇಂದ್ರ**- ಎಲೈ ಇಂದ್ರನೇ, **ವಾಜಸಾತಯೇ**- ಅನ್ನಪ್ರಾಪ್ತಿಗಾಗಿ, **ಪರ್ಯೂಷು**- ಸುತ್ತಲೂ **ಪ್ರಧನ್ವ**- ಪ್ರಕೃಷ್ಟವಾಗಿ (ಚೆನ್ನಾಗಿ) ಧರಿಸು. ನಮಗೆ ಅನ್ನಾದ್ಯಾಹಾರವನ್ನು ಕೊಡುವುದಕ್ಕಾಗಿ ಮನಸ್ಸುಮಾಡು ಎಂದರ್ಥವು. **ವೃತ್ರಾಣಿ**- ಶತ್ರುಗಳನ್ನು **ಪರಿಸಕ್ಷಣಿ**- ಸುತ್ತಲೂ ನಿರಾಕರಿಸು ಎಂದರೆ ನಾಶಮಾಡು (ಇಲ್ಲಿ ಸಕ್ಷಣಧಾತುವಿಗೆ ನಿರಾಕರಿಸು ಎಂದರ್ಥವಿರುವುದು.) **ದ್ವಿಷಃ**- ಶತ್ರುಗಳನ್ನು **ತರಧ್ಯೈ**- ನಾಶಮಾಡಲು **ಋಣಾಯಾಃ** - ಪ್ರಯತ್ನಪೂರ್ವಕವಾಗಿ **ಈಯಸೇ**- ಪ್ರವೃತ್ತನಾಗು ಎಂದರ್ಥವು. ಈ ಋಕ್ಕಿನಲ್ಲಿ ವೃತ್ರಾಣಿ ಎಂಬ ಪದದ ಮಧ್ಯದಲ್ಲಿ ಸೇರಿಸಲ್ಪಡುವ **ಭೂರ್ಬ್ರಹ್ಮ ಪ್ರಾಣಮಮೃತಂ ಪ್ರಪದ್ಯ-ತೇಽಯಮಸೌ ಶರ್ಮ ವರ್ಮಾಭಯಂ ಸ್ವಸ್ತಯೇ । ಸಹ ಪ್ರಜಯಾ ಸಹ ಪಶುಭಿಃ** ಎಂಬ ಪದಗಳಿಗೆ ಈ ಅರ್ಥ ವಿರುವುದು. (ವಿಷ್ಣುಗುಪ್ತ ಎಂದು ಮೊದಲಾದ ಹೆಸರುಳ್ಳ) ಈ ಕ್ಷತ್ರಿಯ ರಾಜನು ಪೃಥಿವೀ ಮೊದಲಾದವುಗಳಿಗೆ ಮರೆ ಹೋಗುತ್ತಾನೆ, ಇಲ್ಲಿ **ಭೂಃ** ಪೃಥಿವೀ, **ಬ್ರಹ್ಮ**- ವೇದವು (ವೇದಮಂತ್ರವು) **ಪ್ರಾಣಃ** - ಪ್ರಾಣವು, **ಅಮೃತಂ** - ಮರಣ ರಾಹಿತ್ಯವು. ದೇವತಾಸ್ವರೂಪಗಳಾದ **ಭೂಃ** ಮೊದಲಾದವುಗಳನ್ನು ಮರೆ (ಶರಣ) ಹೊಗುವ ಈ ಕ್ಷತ್ರಿಯನಿಗೆ (ರಾಜನಿಗೆ)

ಪುತ್ರಸಂತಾನಾದಿ ಪ್ರಜೆಗಳಿಂದಲೂ ಗೋವುಗಳೇ ಮೊದಲಾದ ಪಶುಗಳಿಂದಲೂ ಸಹ ಅವನ ಕ್ಷೇಮಾರ್ಥವಾಗಿ ಸುಖವನ್ನೂ ಭಯರಾಹಿತ್ಯವನ್ನೂ ದೇವತಾದಿರೂಪವಾದ ಸ್ಥಾನವಿಶೇಷವನ್ನೂ ಉಂಟುಮಾಡು ಎಂದಭಿಪ್ರಾಯವು. ಇವುಗಳ ಪ್ರಾಪ್ತಿಗಾಗಿ ನಿನಗೆ ಸ್ವಾಹಾಕಾರಪೂರ್ವಕವಾಗಿ ಆಹುತಿಯನ್ನರ್ಪಿಸುವೆನು.

ಅನು ಹಿ ತ್ವಾ ಸುತಂ ಸೋಮ ಮದಾಮಸಿ ಮಹೇ ಸಮಭುವೋ
ಬ್ರಹ್ಮ ಪ್ರಾಣಮಮೃತಂ ಪ್ರಪದ್ಯತೇಽಯಮಸೌ ಶರ್ಮ ವರ್ಮಾ
ಭಯಂ ಸ್ವಸ್ತಯೇ। ಸಹ ಪ್ರಜಯಾ ಸಹ ಪಶುಭಿ(ಭೀ)ರ್ಯ
ರಾಜ್ಯೇ ವಾಜಾ ಅಭಿ ಪವಮಾನ ಪ್ರಗಾಹಸೇ ಸ್ವಾಹಾ ॥

**ಪ್ರಪದನಾಮಕಂ ಪ್ರಥಮಂ ಮಂತ್ರಮುಕ್ತ್ವಾ ತನ್ನಾಮಕಂ ದ್ವಿತೀಯಂ ಮಂತ್ರಮಾಹ — ಅತ್ರಾಪ್ಯನುಹಿತ್ವೇತ್ಯೇತಸ್ಯಾಮೃಚಿ ಮಹೇ ಸಮರ್ಯ ರಾಜ್ಯ ಇತಿ ದ್ವಿತೀಯಃ ಪಾದಃ। ತತ್ರ ಸಮರ್ಯೇತಿ ಯತ್ಪದಂ ತಸ್ಯ ಸಮೇತ್ಯಕ್ಷರದ್ವಯಮಧಸ್ತಾತ್ಕೃತ್ವಾ ರ್ಯೇತ್ಯೇತತ್ತೃತೀಯಮಕ್ಷರಮುಪರ್ಯವಸ್ಥಾಪ್ಯ ಭುವ ಇತ್ಯಾದಿಕಂ ಪದಜಾತಂ ಪ್ರಕ್ಷೇಪಣೀಯಮ್। ತಸ್ಯಾ ಋಚೋಽಯಮರ್ಥಃ। ಹೇ ಸೋಮ ಸುತಮಭಿಷುತಂ ತ್ವಾಮನುಮದಾಮಸಿ ವಯಂ ಹೃಷ್ಯಾಮಃ। ಸಮರಂ ಯುದ್ಧಂ ತಮರ್ಹತಿ ಸಮರ್ಯಃ ಶೂರಸ್ತಥಾವಿಧ ಹೇ ಇಂದ್ರ ಮಹೇ ಮಹತಿ ರಾಜ್ಯೇ। ಏನಂ ಕ್ಷತ್ರಿಯಂ ಸ್ಥಾಪಯೇತಿ ಶೇಷಃ। ಹೇ ಪವಮಾನ ಶೋಧಕ ವಾಜಾನನ್ನಾನಿ ಅಭಿಪ್ರಗಾಹಸೇ ಸರ್ವತಃ ಪ್ರಕರ್ಷೇಣ ಗಾಹಸೇ ವಿಲೋಡಯಸಿ ಸಂಪಾದಯಸೀತ್ಯರ್ಥಃ। ಪದಮಧ್ಯೇ ಪ್ರಕ್ಷಿಪ್ತಸ್ಯ ಪದಜಾತಸ್ಯಾದೌ ಭುವ ಇತ್ಯಂತರಿಕ್ಷಮುಚ್ಯತೇ। ಬ್ರಹ್ಮೇತ್ಯಾದಿಕಂ ಸ್ವಾಹಾಕಾರಾಂತಂ ಪೂರ್ವವತ್ ॥**

ಪ್ರಪದ ಎಂಬ ಮೊದಲನೆ ಮಂತ್ರವನ್ನು ಹೇಳಿ ಈಗ ಎರಡನೇ ಮಂತ್ರವನ್ನು ವಿವರಿಸುವರು–ಹಿಂದಿನಂತೆ ಇಲ್ಲಿಯೂ ಸಹ **ಅನು ಹಿ ತ್ವಾ ಸುತಂ ಸೋಮ ಮದಾಮಸಿ** (ಋ. ಸಂ. ೯–೧೧೦–೨) ಎಂಬ ಋಕ್ಕಿನಲ್ಲಿ ಮಹೇ ಸಮರ್ಯರಾಜ್ಯ ಎಂಬುವುದು ಎರಡನೆಯ ಪಾದವು. ಇಲ್ಲಿರುವ ಸಮರ್ಯ ಎಂಬ ಪದದಲ್ಲಿ ಸಮ ಎಂಬ ಮೊದಲಿನ ಎರಡು ಅಕ್ಷರಗಳನ್ನು ಪಠಿಸಿ ಅನಂತರ ಭುವ ಎಂದು ಮೊದಲಾದ (ಪಶುಭಿಃವರೆಗೆ) ಇರುವ ಪದಗಳನ್ನು ಸೇರಿಸಿ ಬಳಿಕ (ಸಮರ್ಯ ಎಂಬ ಶಬ್ದದ) ಮೂರನೇ ಅಕ್ಷರವಾದ ರ್ಯ ಎಂಬ ಅಕ್ಷರವನ್ನು ಸೇರಿಸಿ ಪಠಿಸಬೇಕು. ಇದರ ಅರ್ಥವು— **ಹೇ ಸೋಮ**—ಎಲೈ ಸೋಮ ದೇವನೇ, **ಸುತಂ**—ಹಿಂಡಿ ಸಿದ್ಧಪಡಿಸಿರುವ ಸೋಮರಸವನ್ನು, **ತ್ವಾಂ ಅನು**—ನಿನಗರ್ಪಿಸಿ, **ಮದಾಮಸಿ**—ನಾವು ಸಂತೋಷಪಡುತ್ತೇವೆ. **ಸಮರ್ಯಃ**—ಯುದ್ಧವಿಶಾರದನಾದ **ಹೇ ಇಂದ್ರ**—ಎಲೈ ಇಂದ್ರನೇ **ಮಹತಿ ರಾಜ್ಯೇ**—ಈ ದೊಡ್ಡದಾದ ರಾಜ್ಯದಲ್ಲಿ ಈ ರಾಜನನ್ನು ಸ್ಥಾಪಿಸು. **ಹೇ ಪವಮಾನ**—ಶೋಧಕನಾದ ಎಲೈ ಸೋಮನೇ, **ವಾಜಾನ್**—ಅನ್ನಗಳನ್ನು **ಅಭಿಪ್ರಗಾಹಸೇ**—ದೊರಕಿಸಿಕೊಡುತ್ತೀಯೆ. ಇಲ್ಲಿ ಸೇರಿಸಿರುವ ಪದಗಳಲ್ಲಿ **ಭುವಃ**— ಎಂಬ ಶಬ್ದಕ್ಕೆ ಅಂತರಿಕ್ಷವೆಂದರ್ಥವು. ಬ್ರಹ್ಮ ಮೊದಲಾದ ಇತರ ಪದಗಳಿಗೆ ಸ್ವಾಹಾಕಾರದವರೆಗೂ ಹಿಂದಿನಂತೆಯೇ ಅರ್ಥವು.

ಅಜೀಜನೋ ಹಿ ಪವಮಾನ ಸೂರ್ಯಂ ವಿಧಾರೇ ಶ ಸ್ವರ್ಬ್ರಹ್ಮ
ಪ್ರಾಣಮಮೃತಂ ಪ್ರಪದ್ಯತೇಽಯಮಸೌ ಶರ್ಮ ವರ್ಮಾಭಯಂ

ಸ್ವಸ್ತಯೇ । ಸಹ ಪ್ರಜಯಾ ಸಹ ಪಶುಭಿಃ ಕ್ಮನಾ ಪಯೋ
ಗೋಜೀರಯಾ ರಂಭಮಾಣಃ ಪುರಂ ಧ್ಯಾ ಸ್ವಾಹೇತಿ ॥

ಪ್ರಪದನಾಮಕಂ ತೃತೀಯಂ ಮಂತ್ರಮಾಹ—ಅಜೀಜನ ಇತ್ಯಸ್ಯಾಮೃಚಿ ವಿಧಾರೇ ಶಕ್ಮನೇತಿ ದ್ವಿತೀಯಃ ಪಾದಃ । ತತ್ರತ್ಯಸ್ಯ ಶಕ್ಮನೇತಿ ಪದಸ್ಯ ಶೇತ್ಯೇಕಮಕ್ಷರಮಧಸ್ತಾದುಚ್ಚಾರ್ಯ ಕ್ಮನೇತ್ಯಕ್ಷರದ್ವಯಮುಪರಿಷ್ಟಾದವಸ್ಥಾಪ್ಯ ಮಧ್ಯೇ ಸ್ವರಿತ್ಯಾದಿಕಂ ಪಶುಭಿರಿತ್ಯಂತಂ ಪದಜಾತಂ ಪ್ರಕ್ಷೇಪಣೀಯಮ್ । ತಸ್ಯಾ ಋಚೋಽಯಮರ್ಥಃ । ಹೇ ಪವಮಾನ ಶೋಧಕೇಂದ್ರ ತ್ವಂ ಸೂರ್ಯಮಜೀಜನ ಉತ್ಪಾದಿತವಾನಸಿ । ಶಕ್ಮನಾ ಸ್ವಶಕ್ತ್ಯಾ ಪಯೋ ಜಲಂ ವಿಧಾರೇ ವಿಶೇಷೇಣ ಮೇಘಮಧ್ಯೇ ಧಾರಯಸಿ । ಗೋಜೀರಯಾ ಗವಾಂ ಜೀವನೇನ ನಿಮಿತ್ತೇನ ರಂಹಮಾಣೋ ವೃಷ್ಟಿಪ್ರದಾನಾರ್ಥಂ ಸಂಚರನ್ಪುರಂ ಪೂರ್ಣಫಲಂ ಧ್ಯಾ ಚಿಂತಯ । ಗೋಜೀರಯೇತ್ಯುಪಲಕ್ಷಣಮ್ । ಸರ್ವಪ್ರಾಣಿಜೀವನನಿಮಿತ್ತಮಿತ್ಯರ್ಥಃ । ಅತ್ರಾಪಿ ಶಕ್ಮನೇತಿಪದಮಧ್ಯೇ ಪ್ರಕ್ಷಿಪ್ತಸ್ಯ ಪದಜಾತಸ್ಯಾದೌ ಸ್ವರಿತಿ ದ್ಯುಲೋಕೋಽಭಿಧೀಯತೇ । ಬ್ರಹ್ಮೇತ್ಯಾದಿಕಂ ಸ್ವಾಹಾಕಾರಾಂತಂ ಪೂರ್ವವತ್ । ಏತೇಷಾಂ ಪ್ರಪದನಾಮಕಾನಾಂ ಮಂತ್ರಾಣಾಂ ಲಕ್ಷಣಂ ಪೂರ್ವಮೇವ ಪಾದಾ ಯಸ್ಮಾತ್ಸ್ವಿತಿ ಶ್ಲೋಕೇನೋದಾಹೃತಮ್। ಪಯುರ್ಷ್ವಿತ್ಯಾದಿಕಾ(ಯಾ) ಋಚೋ ಮಧ್ಯೇ ಭೂರ್ಬ್ರಹ್ಮ ಪ್ರಾಣೇತ್ಯಾದಿಕಾಯಾ ಅಸ್ಯಾ ಋಚೋ ಯಾವಂತಃ ಪಾದಾ ಯಾವದಕ್ಷರಸಂಮಿತಾಸ್ತೇಷಾಂ ಸರ್ವೇಷಾಂ ಪತನಂ ಪ್ರಪದಮಿತಿ ತಸ್ಯ ಲಕ್ಷಣವಾಕ್ಯಸ್ಯಾರ್ಥಃ ॥

ಈಗ ಪ್ರಪದ ಎಂಬ ಮೂರನೆಯ ಮಂತ್ರವನ್ನು ವಿವರಿಸುವರು—ಅಜೀಜನೋ ಹಿ ಪವಮಾನ ಸೂರ್ಯಂ (ಋ. ಸಂ. ೯-೧೧೦-೩) ಎಂಬುದು ಮೂರನೆಯ ಮಂತ್ರವು. ಇದರಲ್ಲಿ ವಿಧಾರೇ ಶಕ್ಮನಾ ಎಂಬುದು ಎರಡನೆಯ ಪಾದವು. ಇಲ್ಲಿರುವ ಶಕ್ಮನಾ ಎಂಬ ಪದದ ಶ ಎಂಬ ಒಂದು ಅಕ್ಷರವನ್ನು ಉಚ್ಚರಿಸಿ ಅನಂತರ ಸ್ವಃ ಮೊದಲಾದ ಪಶುಭಿಃ ಎನ್ನುವವರೆಗೆ ಇರುವ ಪದಸಮೂಹವನ್ನು ಸೇರಿಸಿ ಅನಂತರ ಕ್ಮನಾ ಎಂಬ ಎರಡು ಅಕ್ಷರಗಳನ್ನು ಸೇರಿಸಿ ಉಚ್ಚರಿಸಬೇಕು. ಈ ಋಕ್ಕಿನ ಅರ್ಥವು—ಹೇ ಪವಮಾನ—ಎಲೈ ಶೋಧಕನಾದ ಇಂದ್ರನೇ ತ್ವಂ- ನೀನು ಸೂರ್ಯಮಜೀಜನ—ಸೂರ್ಯನನ್ನು ಸೃಷ್ಟಿಸಿರುವೆ, ಕ್ಮನಾ—ನಿನ್ನ ಶಕ್ತಿಸಾಮರ್ಥ್ಯದಿಂದ ಪಯಃ—ನೀರನ್ನು ವಿಧಾರೇ—ವಿಶೇಷವಾಗಿ ಮೇಘ ಮಧ್ಯದಲ್ಲಿ ತುಂಬಿರುತ್ತೀಯೆ. ಗೋಜೀರಯಾ—ಗೋವುಗಳು ಸಂಚಾರಾರ್ಥವಾಗಿ ವಿಹರಿಸುತ್ತಿರುವಂತೆ ಪೂರ್ಣವಾದ ಫಲವನ್ನು ಚಿಂತಿಸುತ್ತೀಯೆ. ಇಲ್ಲಿ ಗೋವುಗಳೆಂದರೆ ಸಮಸ್ತ ಪ್ರಾಣಿಗಳು ಎಂದರ್ಥವು. ಇಲ್ಲಿ ಸೇರಿಸಲ್ಪಟ್ಟಿರುವ ಪದಗಳ ಪ್ರಾರಂಭದಲ್ಲಿರುವ ಸ್ವಃ ಎಂಬ ಪದಕ್ಕೆ ಸ್ವರ್ಗಲೋಕವೆಂದರ್ಥವು. ಬ್ರಹ್ಮ ಎಂಬ ಶಬ್ದದಿಂದ ಹಿಡಿದು ಸ್ವಾಹಾಕಾರದವರೆಗೆ ಹಿಂದಿನಂತೆಯೇ ಅರ್ಥವು. ಪ್ರಪದ ಎಂಬ ಈ ಮೂರು ಮಂತ್ರಗಳಿಗೂ ಹಿಂದೆ ಹೇಳಿದ ಪಾದಾಯಸ್ಮಾಃ ಎಂಬ ಶ್ಲೋಕವೇ ಲಕ್ಷಣವನ್ನು ತಿಳಿಸುವುದು. ಪಯುರ್ಷು ಎಂದು ಮೊದಲಾದ ಋಕ್ಕುಗಳ ಮಧ್ಯದಲ್ಲಿ ಭೂರ್ಬ್ರಹ್ಮ ಮೊದಲಾದ ಋಕ್ಕುಗಳ ಪಾದಗಳಲ್ಲಿರುವ ಅಕ್ಷರ ಪರಿಮಿತಿಯು ಲಕ್ಷಣವಾಕ್ಯಾನುಸಾರವಾಗಿರುವುದರಿಂದ ಈ ಋಕ್ಕುಗಳಿಗೆ ಪ್ರಪದವೆಂಬ ಹೆಸರು ಸಲ್ಲುವುದು.

ಅನಾರ್ತೋ ಹ ವಾ ಅರಿಷ್ಟೋಽಜೀತಃ ಸರ್ವತೋ ಗುಪ್ತಸ್ತ್ರಯ್ಯೈ
ವಿದ್ಯಾಯೈ ರೂಪೇಣ ಸರ್ವಾ ದಿಶೋಽನು ಸಂಚರತ್ಯೈಂದ್ರೇ

ಲೋಕೇ ಪ್ರತಿಷ್ಠಿತೋ ಯಸ್ಮಾ ಏತಾ ಋತ್ವಿಗಂತತಃ ಕಂಸೇನ
ಚತುರ್ಗೃಹೀತಾಸ್ತಿಸ್ರ ಆಜ್ಯಾಹುತೀರ್ಯೈಂದ್ರೀಃ ಪ್ರಪದಂ ಜುಹೋತಿ॥

ಉಕ್ತಮಂತ್ರತ್ರಯಸಾಧ್ಯಾ ಆಹುತೀಃ ಪ್ರಶಂಸತಿ—ಯಸ್ಮೈ ಕ್ಷತ್ರಿಯಾಯ ಋತ್ವಿಗಧ್ವರ್ಯುರಂತತೋಽಭಿಷೇಕಪ್ರಯೋಗಾಂತೇ ಯಥೋಕ್ತಕ್ರಮೇಣ ಜುಹೋತಿ। ಅಸೌ ಕ್ಷತ್ರಿಯೋಽನಾರ್ತೋ ರೋಗರಹಿತೋಽರಿಷ್ಟಃ ಶತ್ರುಭಿರಹಿಂಸಿತಃ। ಅಜೀತಸ್ತೈಃ ಶತ್ರುಭಿರ್ಯುದ್ಧೇಽಪ್ಯಜಿತಃ। ಸರ್ವತೋಗುಪ್ತ ಇಂದ್ರೇಣ ರಕ್ಷಿತಃ। ಕೇನ ಸಾಧನೇನ ರಕ್ಷಿತ ಇತಿ ತದುಚ್ಯತೇ। ತ್ರಯ್ಯೈ ವಿದ್ಯಾಯೈ ರೂಪೇಣ ವೇದತ್ರಯೋಕ್ತಮಂತ್ರೇಣೇತ್ಯರ್ಥಃ ತೇನ ರಕ್ಷಿತಃ ಸನ್ ಸರ್ವಾ ದಿಶಃ ಪ್ರಾಚ್ಯಾದ್ಯಾ ಅನುಸಂಚರತಿ ಆನುಕ್ರಮೇಣ ವಿಜಯಾರ್ಥಂ ಪ್ರವರ್ತತೇ। ಮರಣಾದೂರ್ಧ್ವಮೈಂದ್ರೇ ಲೋಕೇ ಪ್ರತಿಷ್ಠಿತೋ ಭವತಿ॥

ಮೇಲೆ ಹೇಳಿದ ಮೂರು ಆಜ್ಯಾಹುತಿಗಳನ್ನು ಪ್ರಶಂಸೆಮಾಡುವರು—ಅಧ್ವರ್ಯು ಮೊದಲಾದ ಋತ್ವಿಕ್ಕುಗಳ ಈ ಪ್ರಯೋಗದ ಕೊನೆಯಲ್ಲಿ ಈ ಮಂತ್ರದಿಂದ ಕ್ಷತ್ರಿಯನಾದ ರಾಜನಿಂದ ಹೋಮಮಾಡಿಸುವರು. ಇದರ ಅರ್ಥವು—ಅಸೌ ಈ ಕ್ಷತ್ರಿಯನಾದ ರಾಜನು ಅನಾರ್ತಃ—ರೋಗ ಅಥವಾ ವ್ಯಾಧಿರಹಿತನಾಗಿರುವನು. ಅರಿಷ್ಟಃ—ಶತ್ರುಬಾಧಾರಹಿತನು. ಅಜೀತಃ—ಯುದ್ಧದಲ್ಲಿ ಶತ್ರುಗಳಿಂದ ಜಯಿಸಲ್ಪಡದಿರುವವನು. ಸರ್ವತೋ ಗುಪ್ತಃ—ಇಂದ್ರನಿಂದ ರಕ್ಷಿಸಲ್ಪಡುವವನು (ಹೇಗೆ ರಕ್ಷಿಸಲ್ಪಡುವವನು ಎಂದರೆ) ತ್ರಯ್ಯೈ ವಿದ್ಯಾಯೈ—ಮೂರು ವೇದಗಳಲ್ಲಿ ಹೇಳಲ್ಪಟ್ಟಿರುವ ಮಂತ್ರಗಳಿಂದ ರಕ್ಷಿಸಲ್ಪಟ್ಟಿರುವವನು. ಈ ರೀತಿ ಇಂದ್ರನಿಂದ ರಕ್ಷಿಸಲ್ಪಟ್ಟಿರುವ ಈ ರಾಜನು ಪೂರ್ವವೇ ಮೊದಲಾದ ಸಮಸ್ತ ದಿಕ್ಕುಗಳಲ್ಲಿಯೂ ವಿಜಯಶಾಲಿಯಾಗಿ ಸಂಚರಿಸುವನು ಮತ್ತು ಮರಣಾನಂತರ ಇಂದ್ರಲೋಕದಲ್ಲಿ ಸ್ಥಿರನಾಗಿ ನೆಲೆಸಿ ಸುಖಿಸುವನು.

ಅಥಾಂತತಃ ಪ್ರಜಾತಿಮಾಶಾಸ್ತೇ ಗವಾಮಶ್ವಾನಾಂ ಪುರುಷಾಣಾಮಿಹ
ಗಾವಃ ಪ್ರಜಾಯಧ್ವಮಿಹಾಶ್ವಾ ಇಹ ಪೂರುಷಾಃ। ಇಹೋ ಸಹಸ್ರ
ದಕ್ಷಿಣೋ ವೀರಸ್ತ್ರಾತಾ ನಿಷೀದತ್ವಿತಿ॥

ಹೋಮಾದೂರ್ಧ್ವಮಾಶೀರ್ಮಂತ್ರಪಾಠಂ ವಿಧತ್ತೇ—ಅಥ ಹೋಮಾನಂತರಮಂತತಃ ಪ್ರಯೋಗಾಂತ ಇಹ ಗಾವ ಇತ್ಯಾದಿಮಂತ್ರೇಣ ಗವಾದೀನಾಂ ಪ್ರಜಾತಿಮುತ್ಪತ್ತಿಮಾಶಾಸ್ತೇ ಪ್ರಾರ್ಥಯತೇ। ಮಂತ್ರಸ್ಯಾಯಮರ್ಥಃ। ಹೇ ಗಾವ ಇಹ ಮದ್ರಾಷ್ಟ್ರೇ ಪ್ರಜಾಯಧ್ವಂ ಪ್ರಕರ್ಷೇಣೋತ್ಪನ್ನಾ ಭವತ। ಏವಮಶ್ವಾಃ ಪುರುಷಾಶ್ಚ। ಇಹೋ, ಅಸ್ಮಿನ್ನೇವ ರಾಷ್ಟ್ರೇ ಸಹಸ್ರದಕ್ಷಿಣೇ ಯಾಗೇಷು ಸಹಸ್ರಸಂಖ್ಯದಕ್ಷಿಣಾದಾನಶೀಲೋ ವೀರಃ ಪುತ್ರಸ್ತ್ರಾತಾ ಪ್ರಜಾನಾಂ ರಕ್ಷಕಃ ಸನ್ನಿಷೀದತು॥

ಹೋಮಾನಂತರ ಆಶೀರ್ವಾದಮಂತ್ರವನ್ನು ವಿವರಿಸುವರು. ಹೋಮಾನಂತರ ಎಂದರೆ ಪ್ರಯೋಗದ ಕೊನೆಯಲ್ಲಿ ಇಹಗಾವ ಎಂದು ಮೊದಲಾದ ಮಂತ್ರದಿಂದ ಗವಾದಿಸಂಪತ್ತಿಯುಂಟಾಗಲೆಂದು ಪ್ರಾರ್ಥಿಸಲಾಗಿದೆ. ಈ ಮಂತ್ರದ ಅರ್ಥವು ಹೇ ಗಾವಃ—ಎಲೈ ಗೋವುಗಳೇ, ಇಹ—ಈ ನನ್ನ ರಾಷ್ಟ್ರದಲ್ಲಿ ಪ್ರಜಾಯಧ್ವಂ—ವಿಶೇಷವಾಗಿ ಅಭಿವೃದ್ಧಿಯನ್ನು

ಹೊಂದಿ, **ಏವಂ**—ಹಾಗೆಯೇ **ಅಶ್ವಾಃ ಪುರುಷಾಶ್ಚ**—ಅಶ್ವಗಳೂ ಪುರುಷರೂ ಸಹ ಅಭಿವೃದ್ಧಿಯನ್ನೈದಲಿ. **ಇಹೋ**—ಈ ನನ್ನ ರಾಷ್ಟ್ರದಲ್ಲಿ **ಸಹಸ್ರದಕ್ಷಿಣಃ**—ಸಹಸ್ರ ಅಥವಾ ಅಪರಿಮಿತವಾದ ದಕ್ಷಿಣೆಯನ್ನು ಕೊಟ್ಟು ಯಾಗಾದಿಗಳನ್ನು ಮಾಡುವ **ವೀರಃ**—ವೀರನಾದವನೂ ಪುತ್ರನು **ತ್ರಾತಾ**—ಪ್ರಜೆಗಳನ್ನು ಪಾಲಿಸುವವನಾಗಿ ನಿಷೀದತು—ಬಹುಕಾಲ ನೆಲಸಿರಲಿ.

ಬಹುರ್ವೈ ಪ್ರಜಯಾ ಪಶುಭಿರ್ಭವತಿ ಯ ಏವಮೇತಾಮಂತತಃ
ಪ್ರಜಾತಿಮಾಶಾಸ್ತೇ ಗವಾಮಶ್ವಾನಾಂ ಪುರುಷಾಣಾಂ ||

**ಅನೇನ ಮಂತ್ರೇಣ ಪ್ರಾರ್ಥನಂ ಪ್ರಶಸತಿ—ಯ ಏವಮಾಶಾಸಾನಃ ಕ್ಷತ್ರಿಯಃ ಸ ಪ್ರಜಾದಿಭಿರ್ಬಹುರ್ಭೂತ ಏವ ಭವತಿ ||**

ಈ ಪ್ರಾರ್ಥನಾಮಂತ್ರವನ್ನು ಪ್ರಶಂಸೆ ಮಾಡುವರು. ಈ ರೀತಿ ಪ್ರಾರ್ಥಿಸುವ ರಾಜನು ಪ್ರಜೆಗಳಿಂದಲೂ **ಗೋವು,** ಅಶ್ವ ಮೊದಲಾದ ಪಶುಸಂಪತ್ತಿನಿಂದಲೂ ಸಮೃದ್ಧಿಯನ್ನು ಪಡೆದು ಸುಖಿಸುತ್ತಾನೆ.

ಏಷ ಹ ವಾವ ಕ್ಷತ್ರಿಯೋಽವಿಕೃಷ್ಟೋ ಯಮೇವಂವಿದೋ ಯಾ
ಜಯಂತಿ ||

**ಪುನರಭಿಷೇಕಪರ್ಯಂತೇಽಸ್ಮಿನ್ ಕ್ಷತ್ರಿಯಯಾಗೇ ಯಾಜಯಿತೄಣಾಮೃತ್ವಿಜಾಂ ವೇದನಂ ಪ್ರಶಂಸತಿ—ಏವಮುಕ್ತಾಭಿಷೇಕಪ್ರಕಾರಂ ಜಾನಂತ ಋತ್ವಿಜೋ ಯಂ ಕ್ಷತ್ರಿಯಂ ಯಾಜಯಂತಿ । ಏಷ ಏವ ಕ್ಷತ್ರಿಯಃ ಸರ್ವೇಷ್ವವಿಕೃಷ್ಟೋ ನಾಪಕಷ್ಟಃ । ನ ಹ್ಯಸ್ಯ ಕದಾಚಿದಪ್ಯಪಕರ್ಷೋ ಭವತಿ ||**

ಈ ರೀತಿ ಅಭಿಷೇಕಾನಂತರ ಆಚರಿಸುವ ರಾಜನಿಗೆ ಯಾಗಾದಿಗಳನ್ನು ಮಾಡಿಸುವ ಋತ್ವಿಗ್ಜನರು ಮತ್ತು ಆ ರಾಜನು ಯಾವಾಗಲೂ ಕಷ್ಟ ಮತ್ತು ಯಾವ ತೊಂದರೆಗಳಿಗೂ ಒಳಗಾಗದೆ ಸುಖದಿಂದಿರುವರು.

ಅಥ ಹ ತಂ ವ್ಯೇವ ಕರ್ಷಂತೇ ಯಥಾ ಹ ವಾ ಇದಂ ನಿಷಾದಾ ವಾ
ಸೇಳಗಾ ವಾ ಪಾಪಕೃತೋ ವಾ ವಿತ್ತವಂತಂ ಪುರುಷಮರಣ್ಯೇ
ಗೃಹೀತ್ವಾ ಕರ್ತಮನ್ವಸ್ಯ ವಿತ್ತಮಾದಾಯ ದ್ರವಂತ್ಯೇವಮೇವ ತ
ಋತ್ವಿಜೋ ಯಜಮಾನಂ ಕರ್ತಮನ್ವಸ್ಯ ವಿತ್ತಮಾದಾಯ ದ್ರವಂತಿ
ಯಮನೇವಂವಿದೋ ಯಾಜಯಂತಿ ||

ಋತ್ವಿಜಾಮಭಿಷೇಕಪರಿಜ್ಞಾನಾಭಾವಂ ನಿಂದತಿ ||—ಅನೇವಂವಿದೋಽಭಿಷೇಕಪ್ರಕಾರಮಜಾನಂತ ಋತ್ವಿಜೋ ಯಂ ಕ್ಷತ್ರಿಯಂ ಯಾಜಯಂತಿ ತಂ ಕ್ಷತ್ರಿಯಂ ವಿಕರ್ಷಂತ ಏವ ವಿಪ್ರಕೃಷ್ಟಮಪಕೃಷ್ಟಂ ಕುರ್ವಂತ್ಯೇವ । ತತ್ರೇದಂ ನಿದರ್ಶನಮುಚ್ಯತೇ । ನಿಷಾದಾ ನೀಚಜಾತಯೋ ಮನುಷ್ಯಾಃ । ಸೇಳಗಾಶ್ಚೋರಾಃ । ಇಳಾನ್ನಂ ತಯಾ ಸಹ ವರ್ತಂತ ಇತಿ ಸೇಳಾ ಧನಿಕಾಸ್ತಾನ್ಧನಾಪಹಾರಾರ್ಥಂ ಗಚ್ಛಂತೀತಿ ಚೌರಾಃ ಸೇಳಗಾಃ । ಪಾಪಕೃತೋ ಹಿಂಸಾಕಾರಿಣಃ । ತ್ರಿವಿಧಾ

ದುಷ್ಟಾಃ ಪುರುಷಾ ವಿತ್ತವಂತಂ ಬಹುಧನೋಪೇತಂ ಪುರುಷಮರಣ್ಯಮಧ್ಯೇ ಗೃಹೀತ್ವಾ ಕರ್ತಮನ್ವಸ್ಯ ಕಸ್ಮಿಂಶ್ಚಿದಂಧಕೂಪಾದಿರೂಪೇ ಗರ್ತೇ ತಂ ಪ್ರಕ್ಷಿಪ್ಯ ತದೀಯಂ ಧನಮುಪಹೃತ್ಯ ದ್ರವಂತಿ ಪಲಾಯಂತೇ। ಏವಮೇವಾನಭಿಜ್ಞಾ ಋತ್ವಿಜೋ ಯಜಮಾನಂ ನರಕರೂಪಂ ಕರ್ತಮನ್ವಸ್ಯ ನರಕಹೇತೌ ದುರನುಷ್ಠಾನೇಽವಸ್ಥಾಪ್ಯ ದಕ್ಷಿಣಾರೂಪೇಣ ತದೀಯಂ ದ್ರವ್ಯಮುಪಹೃತ್ಯ ಸ್ವಗೃಹೇಷು ಗಚ್ಛಂತಿ ॥

ಋತ್ವಿಕ್ಕುಗಳಿಗೆ ಅಭಿಷೇಕಪರಿಜ್ಞಾನವಿಲ್ಲದಿದ್ದರೆ ಅದನ್ನು ನಿಂದಿಸುವರು — ಯಜ್ಞಮಾಡಿಸುವುದರಲ್ಲಿ ಪರಿಣತರಲ್ಲದ ಋತ್ವಿಕ್ಕುಗಳು ಕ್ಷತ್ರಿಯನಾದ ರಾಜನೊಬ್ಬನಿಗೆ ಯಜ್ಞವನ್ನು ಮಾಡಿಸಿದಪಕ್ಷದಲ್ಲಿ ಆ ಕ್ಷತ್ರಿಯನಿಗೆ ಎಂದರೆ ರಾಜನಿಗೆ ಕೇಡನ್ನೇ ಉಂಟುಮಾಡುವದು. ಆ ರಾಜನ ಸರ್ವಸ್ವವೂ ನಾಶವನ್ನೈದುವುದು. ಈ ವಿಷಯದಲ್ಲಿ ಒಂದು ನಿದರ್ಶನವನ್ನು ತಿಳಿಸುತ್ತಾರೆ. ನಿಷಾದರೆಂಬುವರು ನೀಚಜಾತಿಗೆ ಸೇರಿದ ಮನುಷ್ಯರು ಬೇಡರು. ಇತರರ ಧನಾದಿಗಳನ್ನು ಅಪಹರಿಸುವ ಚೋರರು (ಕಳ್ಳರು) ಇವರಿಗೆ ಸೇಳಗರೆಂದೂ ಹೆಸರು ಎಂದರೆ ಧನಿಕರಸ್ವತ್ತನ್ನು ಅಪಹರಿಸಿ ಜೀವಿಸುವ ಕಳ್ಳರು ಎಂದರ್ಥವು. ಹಿಂಸೆಯನ್ನೂ ಪಾಪಕೃತ್ಯವನ್ನೂ ಮಾಡುವವರು. ಇಂತಹ ದುಷ್ಟರಾದ ಜನರು ಅರಣ್ಯಮಧ್ಯದಲ್ಲಿ ಮಾರ್ಗದಲ್ಲಿ ಪ್ರಯಾಣಮಾಡುತ್ತಿರುವ ಧನಿಕರಾದ ಜನರ ಧನವನ್ನು ಅಪಹರಿಸಿ ಅವರನ್ನು ಪ್ರಹರಿಸಿ ಕಾಡಿನಲ್ಲಿರುವ ಒಂದು ಪಾಳುಭಾವಿಗೆ ಅವರನ್ನು ತಳ್ಳಿ ತಾವು ಓಡಿಹೋಗುವರು. ಇದರಂತೆಯೇ ಯಜ್ಞಯಾಗಾದಿಗಳನ್ನು ಮಾಡಿಸಲು ತಿಳಿಯದವರು ಯಜ್ಞಮಾಡುವ ಯಜಮಾನನಿಗೆ ಪುರೋಹಿತರಾದಲ್ಲಿ ಮಂತ್ರಗಳನ್ನು ತಿಳಿಯದೆ ತಪ್ಪುತಪ್ಪಾಗಿ ಕಾರ್ಯಗಳನ್ನು ಮಾಡಿಸಿ ಯಜಮಾನನು ನರಕಕ್ಕೆ ಬೀಳುವಂತೆ ಮಾಡಿ ಅವನಿಂದ ಬಹುದ್ರವ್ಯವನ್ನು ದಕ್ಷಿಣಾರೂಪವಾಗಿ ಕಿತ್ತುಕೊಂಡು ಹೊರಟುಹೋಗುತ್ತಾರೆ.

ಏತದ್ಧ ಸ್ಮ ವೈ ತದ್ವಿದ್ವಾನಾಹ ಜನಮೇಜಯಃ ಪಾರಿಕ್ಷಿತ ಏವಂವಿದಂ ಹಿ ವೈ ಮಾಮೇವಂವಿದೋ ಯಾಜಯಂತಿ ತಸ್ಮಾದಹಂ ಜಯಾಮ್ಯ-ಭೀತ್ವರೀಂ ಸೇನಾಂ ಜಯಾಮ್ಯಭೀತ್ವರ್ಯಾ ಸೇನಯಾ ನ ಮಾ ದಿವ್ಯಾ ನ ಮಾನುಷ್ಯ ಇಷವ ಋಚ್ಛಂತ್ಯೇಷ್ಯಾಮಿ ಸರ್ವಮಾಯುಃ ಸರ್ವಭೂಮಿರ್ಭವಿಷ್ಯಾಮೀತಿ ॥

ಉಕ್ತಾಭಿಷೇಕಪರ್ಯಂತಂ ಕ್ಷತ್ರಿಯಯಾಗಮುದಾಹರಣಮುಖೇನ ಪ್ರಶಂಸತಿ—ಪರಿಕ್ಷಿತೋ ರಾಜ್ಞಃ ಪುತ್ರೋ ಜನಮೇಜಯಸ್ತದೇತತ್ಸರ್ವಂ ಪ್ರಯೋಗಮಾಹಾತ್ಮ್ಯಂ ವಿದ್ವಾನ್ಸಭಾಮಧ್ಯ ಏವ-ಮುವಾಚ। ಅಹಮಸ್ಯೈವಂವಿದೃತ್ವಿಜೋಽಸ್ಯೈವಂ ವಿಧಸ್ತಸ್ಮಾದಭಿಷೇಕಾಂತೇನ ಯಾಗೇನ ದ್ವಂದ್ವಯುದ್ಧೇ ಜಯಾಮಿ। ಕಿಂಚ ಅಭಿತ್ವರೀಮಭಿತೋ ಯುದ್ಧಾರ್ಥಮುದ್ಯುಕ್ತಾಂ ಪರಕೀಯಾಂ ಸೇನಾಂ ತಾದೃಶ್ಯಾ ಸೇನಯಾ ಜಯಾಮಿ। ತಥಾವಿಧಂ ಮಾಂ ದಿವ್ಯಾ ಇಷವೋ ದೇವಪ್ರೇರಿತಾ ಬಾಣಾ ನ ಪ್ರಾಪ್ನುವಂತಿ। ಮಾನುಷ್ಯಶ್ಚೇಷವೋ ನ ಪ್ರಾಪ್ನುವತಿ। ಅಪಮೃತ್ಯುರಹಿತಃ ಸರ್ವಮ-ಪ್ಯಾಯುಃ ಪ್ರಾಪ್ಸ್ಯಾಮಿ। ಸರ್ವಾ ಚತುಃಸಾಗರಪರಿವೇಷ್ಟಿತಾ ಭೂಮಿರ್ಯಸ್ಯಾಧೀನಾ ಸೋಽಯಂ ಸರ್ವಭೂಮಿಸ್ತಾದೃಶೋ ಭವಿಷ್ಯಾಮೀತಿ।

ಕ್ಷತ್ರಿಯನಾದ ರಾಜನು ಅಭಿಷೇಕಪರ್ಯಂತರವಾಗಿ ಮಾಡುವ ಯಾಗವನ್ನು ಪ್ರಶಂಸೆಮಾಡುವುದು – ಪರೀಕ್ಷಿತ್ ರಾಜನ ಪುತ್ರನೂ ವಿದ್ವಾಂಸನೂ ಆದ ಜನಮೇಜಯನೆಂಬುವನು ಯಜ್ಞಮಾಡುವ ಪ್ರಯೋಗಮಹಾತ್ಮೆಯನ್ನು ವಿದ್ವತ್ಸಭಾಮಧ್ಯದಲ್ಲಿ ಹೀಗೆ ಹೇಳಿದನು – ನಾನು ಯಜ್ಞದ ಪ್ರಯೋಗಾದಿಗಳನ್ನು ತಿಳಿದಿರುವೆನು. ನನಗೆ ಯಜ್ಞಮಾಡಿಸುವ ಋತ್ವಿಕ್ಕುಗಳೂ (ಪುರೋಹಿತರು ಯಜ್ಞಪ್ರಯೋಗವನ್ನು ಚೆನ್ನಾಗಿ ತಿಳಿದವರು. ಇಂತಹ ಪುರೋಹಿತರು ಅಭಿಷೇಕದವರೆಗೂ ಮಾಡಿಸಿದ ಯಾಗದಿಂದ ನಾನು ದ್ವಂದ್ವಯುದ್ಧವೇ ಮೊದಲಾದ ಯುದ್ಧಗಳಲ್ಲಿ ಜಯಶಾಲಿಯಾಗಿರುವೆನು. ಮತ್ತು ನನಗೆ ಎದುರಾಗಿ ಬರುವ ಶತ್ರುಸೇನೆಯನ್ನು ಅದೇವಿಧವಾದ ನನ್ನ ಸೇನೆಯಿಂದ ಜಯಿಸುವೆನು. ಇಂತಹ ಶೂರನಾದ ನನ್ನನ್ನು ದೇವತೆಗಳಾಗಲೀ, ಮನುಷ್ಯರಾಗಲೀ ಪ್ರಯೋಗಿಸುವ ಧನುರ್ಬಾಣಗಳು ಏನೂ ಮಾಡಲಾರವು. ನಾನು ಯಾವ ಅಪಮೃತ್ಯುವಿಗೂ ಈಡಾಗದೆ ಸಂಪೂರ್ಣ ಆಯುಸ್ಸನ್ನು ಪಡೆದು ಚತುಸ್ಸಾಗರಪರ್ಯಂತವಾದ ಭೂಮಂಡಲಕ್ಕೆಲ್ಲಾ ಅಧಿಪತಿಯಾಗಿ ರಾಜ್ಯಭಾರ ಮಾಡುವೆನು.

**ನ ಹ ವಾ ಏನಂ ದಿವ್ಯಾ ನ ಮಾನುಷ್ಯ ಇಷವ ಋಚ್ಛಂತ್ಯೇತಿ ಸರ್ವ-**
**ಮಾಯುಃ ಸರ್ವಭೂಮಿರ್ಭವತಿ ಯಮೇವಂವಿದೋ ಯಾಜಯಂತಿ**
**ಯಾಜಯಂತಿ ||**

**ಜನಮೇಜಯವಾಕ್ಯೋದಾಹರಣೇ ದೃಢೀಕೃತಮರ್ಥಂ ನಿಗಮಯತಿ–ಸ್ಪಷ್ಟೋಽರ್ಥಃ ||**

ಯಜ್ಞಕುಶಲರಾದ ಪುರೋಹಿತರು ನನಗೆ ವಿಧ್ಯುಕ್ತವಾಗಿ ಯಜ್ಞಮಾಡಿಸುವುದರಿಂದ ದೇವತೆಗಳಾಗಲಿ, ಮನುಷ್ಯರಾಗಲಿ ನನಗೆ ಯಾವವಿಧವಾದ ಕೆಡಕನ್ನೂ ಅಪಾಯವನ್ನೂ ಉಂಟುಮಾಡುವುದಿಲ್ಲ. ನಾನು ಸಂಪೂರ್ಣ ಆಯುಸ್ಸನ್ನೂ ಪಡೆದು ಸಮಸ್ತ ಭೂಮಂಡಲವನ್ನು ಪಾಲಿಸುತ್ತಾ ಬಹುಕಾಲ ಜೀವಿಸಿರುವೆನು ಇದೆಲ್ಲಾ ಯಜ್ಞಯಾಗಾದಿ ಪ್ರಯೋಗ ಕುಶಲರಾದವರು ನನಗೆ ಯಜ್ಞಮಾಡಿಸಿದ ಫಲವೇ ಆಗಿರುವುದು.

---

*English Translation*

**(The repetition of three mantras with insertion of a certain formula. Its effect. Janamejaya's opinion on the effect of this magical performance.)**

The verses to be recited in the Prapada way follow Paryu shu pradhanva (9, 110, 1) i. e. acquire everywhere riches in order to grant them to thy worshipper. In the midst of the word vritrani of the just mentioned mantra, after a and before ni he inserts the words, "bhur, brahma, pranam (breath), amritam (ambrosia) is such one the name is required who seeks for shelter & sefety for welfare with his children and cattle." Now follows the remaining part of the

verseni sakshanir & c. i. e. being a conqueror of enemies, thou makest efforts of crossing the lines of our adversaries.

Now follows the second verse, Anu hi tva sutam, & c (9, 110, 2). In the midst of the word samarya in the second pada, after the syllable " ma " the word bhuvao, brahma, & c. (the remrinder just as above) are inserted.

Now follows the third verse, Ajijano hi pavamano, & c (9, 110, 3). In the midst of the word sakmana after sa and before ma, he inserts the words svar, brahma & c. just as above. After the last word of the interpolation viz. " pasubhir " he then proceeds to finish the verse recommencing by kmana.

The Kshattriya, for whose benefit the house-priest sacrifices three offerings of melted butter, each consisting of four spoonfuls, whilst reciting these Indra verses in the above mentioned Prapada way, thus becomes free of disease, free of enemies, does not suffer any loss, and screened by the form of of the three-fold science (the three Vedas) walks in all directions and becomes established after his death in Indra's world.

Finally he prays for increase in cows, horses, and progeny, with the words, " cows, may ye be born here ! horses, may ye be born here ! men, may ye be bern here ! may here sit a hero (my son) as protecter of the country who presents the priests gifts, consisting of a thousand cows." He who thus prays, will be blessed with plenty of children and cattle.

The Kshattriya whom those priests who have this knowledge make sacrifice in such a way, will be raised to an exalted position. But those who make the king sacrifice in this way, without possessing this knowledge, they kill him, drag him away, and deprive him of his property, just as the most degraded of men (nishadas) robbers, murderers, seize a wealthy man (when travelling) in a forest, and after having thrown him into a ditch, run awaʎ with his property.

Janamejaya, the son of Parikshit, who possessed this knowledge said, " My priests, who possess this knowledge, made me sacrifice, I who have the

same knowledge in such a manner. Therefore I am victoriovs ; I conquer a hostile army eager of fighting, neither the divine nor the human arrows coming from such an army can reach me. I shall attain the full age alloted to them (100 years), I shall become master of the whole earth. The same falls to the lot of him, who knowing this, is made to sacrifice by priest in this way.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಸಪ್ತತ್ರಿಂಶಾಧ್ಯಾಯಸ್ಯ ಸಪ್ತಮಃ ಖಂಡಃ

ಇತಿ ಶ್ರೀಮದ್ರಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಸಪ್ತಸ್ತ್ರಿಂಶೋಽಧ್ಯಾಯಃ ಸಮಾಪ್ತಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೇಳನೆಯ ಅಧ್ಯಾಯದಲ್ಲಿ ಏಳನೆಯ ಖಂಡವು
ಸಮಾಪ್ತವಾದುದು

ಮೂವತ್ತ ಏಳನೆಯ ಅಧ್ಯಾಯವು ಸಮಾಪ್ತವಾದುದು



# ಅಥೈತರೇಯಬ್ರಾಹ್ಮಣೇ ಅಷ್ಟತ್ರಿಂಶಾಧ್ಯಾಯೇ ಪ್ರಥಮಃ ಖಂಡಃ

## ಐತರೇಯ ಬ್ರಾಹ್ಮಣದ ಮೂವತ್ತೆಂಟನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

[ ದೇವತೆಗಳು ಇಂದ್ರನಿಗೆ ಮಾಡಿದ ಮಹಾಭಿಷೇಕ ಕ್ರಮವು ಪಟ್ಟಾಭಿಷೇಕವು. ]

---

[ ದೇವತೆಗಳು ಇಂದ್ರನನ್ನು ರಾಜನೆಂದು (ಸಮಸ್ತರಾಜ್ಯಾಧಿಪತಿ) ಘೋಷಿಸುವುದು. ಇಂದ್ರನ ಸಿಂಹಾಸನವು ಯಾವ ಮಂತ್ರಗಳನ್ನು ಪಠಿಸಿ ಇಂದ್ರನು ಸಿಂಹಾಸನವನ್ನೇರಿದನು ಎಂಬ ವಿಷಯ. ದೇವತೆಗಳು ಇಂದ್ರನ ಬಿರುದುಗಳೆಲ್ಲವನ್ನೂ ವರ್ಣಿಸಿ ಎಲ್ಲರಿಗೂ ಇಂದ್ರನೇ ರಾಜನಾಗಿರುವನೆಂದು ಘೋಷಿಸುವುದು. [

---

ಅಥಾತ ಐಂದ್ರೋ ಮಹಾಭಿಷೇಕಃ ||

ಪುನಃ ಕಾರ್ಯೋಽಮಭಿಷೇ ಕಾಂತೇ ಕ್ರತ್ವಂಗತ್ವೇನ ವರ್ಣಿತಃ ||
ಅಭಿಷೇಕಃ ಪುಮರ್ಥೋ ಯಸ್ತಸ್ಯೋಪೋದ್ಘಾತ ಉಚ್ಯತೇ ||೧||

ತತ್ರಾದಾವಿಂದ್ರಸ್ಯಾಭಿಷೇಕಂ ಪ್ರತಿಜಾನೀತೇ– ಅಥ ಮಾನುಷಕ್ಷತ್ರಿಯಾಭಿಷೇಕೋಕ್ತ್ಯ-ನಂತರಂ ಯತೋ ದೈವೋಽಭಿಷೇಕೋ ಬುಭುತ್ಸಿತಃ । ಅತಃ ಕಾರಣಾದಿಂದ್ರಸಂಬಂಧೀ ಮಹಾಭಿ-ಷೇಕಃ ಕಥ್ಯತ ಇತಿ ಶೇಷಃ । ಆರೋಹಣೋತ್ಕ್ರೋಶನಾಭಿಮಂತ್ರಣಾದಿಭಿರ್ವಿಶ್ವೈರ್ಮಾಹಾತ್ಮ್ಯೈರಸ್ಯಾಭಿ-ಷೇಕಸ್ಯ ಮಹತ್ತ್ವಂ ದ್ರಷ್ಟವ್ಯಮ್ ||

ಈಗ ಇಂದ್ರನ ಪಟ್ಟಾಭಿಷೇಕವನ್ನು ವಿವರಿಸುವರು – ಹಿಂದೆ ಮನುಷ್ಯರಲ್ಲಿ ಕ್ಷತ್ರಿಯರಾಜರ ಅಭಿಷೇಕ ಕ್ರಮವನ್ನು ಹೇಳಲಾಯಿತು. ಈಗ ದೇವತೆಗಳು ನಡೆಸಿದ ಇಂದ್ರನ ಪಟ್ಟಾಭಿಷೇಕ ಕ್ರಮವನ್ನು ವಿವರಿಸುವುದು. ಈ ಸಂಸ್ಕಾರದಲ್ಲಿ ಆರೋಹಣ, ಉತ್ಕ್ರೋಶನ, ಅಭಿಮಂತ್ರಣ ಮೊದಲಾದ ಸಂಸ್ಕಾರ ವಿಶೇಷಗಳು ಅಭಿಷೇಕದ ಮಹತ್ವವನ್ನು ತಿಳಿಸುವವು.

ತೇ ದೇವಾ ಅಬ್ರುವನ್ಸಪ್ರಜಾಪತಿಕಾ ಅಯಂ ವೈ ದೇವಾನಾ
ಮೋಜಿಷ್ಠೋ ಬಲಿಷ್ಠಃ ಸಹಿಷ್ಠಃ ಸತ್ತಮಃ ಪಾರಯಿಷ್ಣುತಮಃ
ಇಮಮೇವಾಭಿಷಿಂಚಾಮಹಾ ಇತಿ ತಥೇತಿ ತದ್ವೈ ತದಿಂದ್ರಮೇವ||

ತದಾಭಿಷೇಕಾರ್ಥಂ ದೇವವಿವಾದಂ ದರ್ಶಯತಿ—ಪ್ರಜಾಪತಿನಾ ಸಹ ವರ್ತಂತ ಇತಿ ಸಪ್ರಜಾಪತಿಕಾಸ್ತೇಽಗ್ನ್ಯಾದಯೋ ದೇವಾಃ ಪರಸ್ಪರಮಿದಮಬ್ರುವನ್ । ಹಸ್ತೇನೇಂದ್ರಂ ಪ್ರದರ್ಶ್ಯ ಕಥಯಂತಿ । ಅಯಮೇವೇಂದ್ರೋ ದೇವಾನಾಂ ಮಧ್ಯ ಓಜಿಷ್ಠೋಽತಿಶಯೇನಾಷ್ಟಮಧಾತು-ಯುಕ್ತಃ। ಬಲಿಷ್ಠೋಽತಿಶಯೇನ ಶರೀರಬಲಯುಕ್ತಃ । ಸಹಿಷ್ಠೋಽತಿಶಯೇನ ವೈರ್ಯಭಿಭವ-ಶೀಲಃ । ಸತ್ತಮೋಽತಿಶಯೇನ ಸ್ವಕೃತ್ಯೇಷು ಸಾಧುಃ । ಪಾರಯಿಷ್ಣುತಮೋಽತಿಶಯೇನ ಪ್ರಕ್ರಾಂ-

**ತಸ್ಯ ಕಾರ್ಯಸ್ಯ ಸಮಾಪ್ತಿಕೃತ್ । ತಸ್ಮಾದಿಮಮೇವ ಸರ್ವೇ ವಯಮಭಿಷಿಂಚಾಮಹಾ ಇತಿ ಕೈಶ್ಚಿ-ದುಕ್ತೇ ಸತ್ಯನ್ಯೇ ಸರ್ವೇಽಪಿ ತಥೇತ್ಯಂಗೀಕೃತ್ಯ ತದ್ವೈ ತದಾನೀಮೇವ ತದಿಂದ್ರಮೇವ ತಂ ಸರ್ವೈ-ರನುಮತಮಿಂದ್ರಮೇವಾಭ್ಯಷಿಂಚನ್ನಿತಿ ಶೇಷಃ ॥**

ದೇವತೆಗಳು ಇಂದ್ರನ ಪಟ್ಟಾಭಿಷೇಕ ಕ್ರಮವನ್ನು ಚರ್ಚಿಸುವರು – ಅಗ್ನಿಯೇ ಮೊದಲಾದ ದೇವತೆಗಳೂ, ಪ್ರಜಾಪತಿಯೂ ಸೇರಿ ಪರಸ್ಪರ ಈರೀತಿ ಮಾತನಾಡಿದರು. ಎದುರಿಗೆ ಕುಳಿದಿದ್ದ ಇಂದ್ರನನ್ನು ಕೈಬೆರಳಿನಿಂದ ತೋರಿಸುತ್ತಾ ಈ ಇಂದ್ರನು ದೇವತೆಗಳಲ್ಲೆಲ್ಲಾ ಬಹಳವಾಗಿ ವರ್ಚಸ್ವಿಯಾಗಿಯೂ, ಬಲಿಷ್ಠನಾಗಿಯೂ, ಧೈರ್ಯಶಾಲಿಯಾಗಿಯೂ, ತನ್ನ ಆಶ್ರಿತರಲ್ಲಿ ದಯಾಳುವಾಗಿಯೂ, ಸಾಧುಸ್ವಭಾವವುಳ್ಳವನಾಗಿಯೂ, ಹಿಡಿದ ಕೆಲಸವನ್ನು ಬಿಡದೆ ಕೊನೆಮುಟ್ಟಿಸುವವನೂ ಆಗಿರುವನು. ಆದ್ದರಿಂದ ಈ ಇಂದ್ರನಿಗೆ ಪಟ್ಟಾಭಿಷೇಕವನ್ನು ಮಾಡಿ ರಾಜ್ಯಾಧಿಪನನ್ನಾಗಿ ಮಾಡೋಣ ಎಂದು ಕೆಲವರು ಹೇಳಲು ಮತ್ತೆ ಕೆಲವರು ಅದಕ್ಕೆ ಸಮ್ಮತಿಸಿ ಅಗತ್ಯವಾಗಿ ಆಗಲೆಂದರು ಮತ್ತು ಅಭಿಷೇಕ ಕಾರ್ಯದಲ್ಲಿ ಉದ್ಯುಕ್ತರಾದರು.

ತಸ್ಮಾ ಏತಾಮಾಸಂದೀಂ ಸಮಭರನ್ನೃಚಂ ನಾಮ ತಸ್ಯೈ ಬೃಹಚ್ಚ ರಥಂತರಂ ಚ ಪೂರ್ವೌ ಪಾದಾವಕುರ್ವನ್ವೈರೂಪಂ ಚ ವೈರಾಜಂ ಚಾಪರೌ ಶಾಕ್ವರರೈವತೇ ಶೀರ್ಷಣ್ಯೇ ನೌಧಸಂ ಚ ಕಾಲೇಯಂ ಚಾನೂಚ್ಯೇಋಚಃ ಪ್ರಾಚೀನಾತಾನಾನ್ಸಾಮಾನಿ ತಿರಶ್ಚೀನವಾಯಾ-ನ್ಯಜೂಂಷ್ಯೇತೀಕಾಶಾನ್ಯಶ ಆಸ್ತರಣಂ ಶ್ರಿಯಮುಪಬರ್ಹಣಂ ತಸ್ಯೈ ಸವಿತಾ ಚ ಬೃಹಸ್ಪತಿಶ್ಚ ಪೂರ್ವೌಪಾದಾವಧಾರಯತಾಂ ವಾಯುಶ್ಚ ಪೂಷಾ ಚಾಪರೌ ಮಿತ್ರಾವರುಣೌ ಶೀರ್ಷಣ್ಯೇ ಅಶ್ವಿನಾವನೂಚ್ಯೇ ಸ ಏತಾಮಾಸಂದೀಮಾರೋಹತ್ ॥

**ತತ್ರ ಪ್ರಕಾರಂ ದರ್ಶಯತಿ—ತಸ್ಮಾ ಇಂದ್ರಾರ್ಥಮೇತಾಂ ವಕ್ಷ್ಯಮಾಣಾಂ ವೇದಮಯೀ-ಮಾಸಂದೀಂ ಸಮಭರನ್ । ಋಚಂ ನಾಮೇತ್ಯಾಸಂದ್ಯಾ ವಿಶೇಷಣಮ್ । ಋಗ್ರೂಪಾಮೇತ-ನ್ನಾಮಿಕಾಮಿತ್ಯರ್ಥಃ । ತಸ್ಯೈ ತಸ್ಯಾ ಋಗ್ರೂಪಾಯಾ ಆಸಂದ್ಯಾ ಬೃಹದಾದೀನ್ಯಷ್ಟ ಸಾಮಾನಿ ಪೂರ್ವಪದಾದ್ಯಷ್ಟಾವಯವಾನಕುರ್ವನ್ ॥ ಆಸಂದ್ಯಾಂ ಶಯಾನಸ್ಯೇಂದ್ರಸ್ಯ ಶಿರೋದೇಶಸ್ಥಂ ಫಲಕಂ ಶೀರ್ಷಣ್ಯಮ್ । ತಚ್ಚ ಪಾದದೇಶಾವಸ್ಥಿತಸ್ಯ ಫಲಕಸ್ಯಾಪ್ಯುಪಲಕ್ಷಣಮ್ । ಅತ ಏವ ಶೀರ್ಷಣ್ಯೇ ಇತಿ ದ್ವಿವಚನಮುಚ್ಯತೇ । ಅನೂಚ್ಯೇ ಪಾರ್ಶ್ವದ್ವಯವರ್ತಿನೀ ಫಲಕೇ । ಋಗ್ರೂ-ಪಾಯೇ ಮಂತ್ರಾಃ ಸಂತಿ ತಾನ್ಪ್ರಾಚೀನಾತಾನ್ಪ್ರಾಕ್ಪ್ರತ್ಯಗಾಯತತ್ವೇನ ವಿಸ್ತಾರಿತಾನ್ದೀರ್ಘ-ತಂತುವಿಶೇಷಾನಕುರ್ವನ್ । ಗೀಯಮಾನಾನಿ ಸಾಮಾನಿ ತಿರಶ್ಚೀನವಾಯಾಂಸ್ತಿರ್ಯಕ್ತ್ವೇನ ವಯನಹೇತೂನ್ರಜ್ಜುವಿಶೇಷಾನಕುರ್ವನ್ । ಯಜೂಂಷ್ಯೇತೀಕಾಶಾನ್ರಜ್ಜ್ವಂತರಾಲಚ್ಛಿದ್ರವಿಶೇಷಾನ-ಕುರ್ವನ್ । ಯದ್ಯಶಃ ಕೀರ್ತಿರ್ದೇವತಾರೂಪಂ ತದಾಸಂದ್ಯಾ ಉಪರ್ಯಾಸ್ತರಣಮ್ । ಯಾ ತು ಶ್ರೀಃ ಸಂಪದಭಿಮಾನಿನೀ ದೇವತಾ ತಾಮುಪಬರ್ಹಣಂ ಶಿರಸ ಉಪಧಾನಮಕುರ್ವನ್ । ತಸ್ಯೈ ಆಸಂದ್ಯಾಃ ಪಾದಾದೀನಷ್ಟಾವಯವಾನ್ಸವಿತ್ರಾದಯೋಽಷ್ಟೌ ದೇವಾ ಅಧಾರಯನ್ । ಇಂದ್ರ ಏತಾಂ ವೇದಮಯೀಮಾಸಂದಿಂ ವಕ್ಷ್ಯಮಾಣೈಃ ಷಣ್ಮಂತ್ರೈರಾರೋಹತ್ ॥**

ಪಟ್ಟಾಭಿಷೇಕಾರ್ಥವಾಗಿ ಇಂದ್ರನಿಗೆ ಮುಂದೆ ಹೇಳುವ ವೇದಮಯವಾದ ಆಸಂದೀ ಎಂಬ ಪೀಠವನ್ನು (ಮರದ ಪೀಠ ಅಥವಾ ಸಿಂಹಾಸನ) ನಿರ್ಮಿಸಿದರು. ಈ ಆಸಂದಿಯು ಋಗ್ರೂಪವಾದುದು. ಈ ಋಗ್ರೂಪವಾದ ಆಸಂದಿಯೆಂಬ ಪೀಠಕ್ಕೆ ಬೃಹತ್ಸಾಮ ಮೊದಲಾದ ಎಂಟು ಸಾಮಗಳನ್ನು ಮುಂದಿನ ಕಾಲುಗಳೇ (ಪಾದಗಳೇ) ಮೊದಲಾದ ಎಂಟು ಭಾಗಗಳನ್ನಾಗಿ ಮಾಡಿದರು. ಈ ಆಸಂದಿಯೆಂಬ ಪೀಠದಲ್ಲಿ ಕುಳಿತುಕೊಳ್ಳುವ ಇಂದ್ರನ ಶಿರಸ್ಸಿನ ಮೇಲುಭಾಗದಲ್ಲಿ ಆಚ್ಛಾದನೆಯಂತಿರುವ ಹಲಗೆಗೆ ಶೀರ್ಷಣ್ಯವೆಂದು ಹೆಸರು. ಈ ಪೀಠದ ಕೆಳಭಾಗ(ಪಾದಪ್ರದೇಶದಲ್ಲಿಯೂ) ಇಂತಹ ಹಲಗೆಯೊಂದಿರುವುದು. ಆದ್ದರಿಂದ ಇಲ್ಲಿ ಶೀರ್ಷಣ್ಯೇ ಎಂದು ದ್ವಿವಚನಶಬ್ದವನ್ನು ಉಪಯೋಗಿಸಲಾಗಿದೆ. ಇದರಂತೆ ಎರಡು ಪಾರ್ಶ್ವಗಳಲ್ಲಿ ಎಂದರೆ ಎಡಬಲಗಳಲ್ಲಿ ಎರಡು ಹಲಗೆಗಳೂ ಇರುವವು. ಇವುಗಳಿಗೆ ಅನೂಚ್ಯೇ ಎಂದು ಹೆಸರು. ಋಗ್ರೂಪವಾದ ಮಂತ್ರಗಳನ್ನು ಈ ಆಸಂದಿಯಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಕಟ್ಟಿರುವ ಉದ್ದವಾದ ಹಗ್ಗಗಳನ್ನು ಮಾಡಿದರು. ಗಾನಮಾಡಲ್ಪಡುವ ಸಾಮಮಂತ್ರಗಳನ್ನು ಅಡ್ಡಲಾಗಿ ಬಿಗಿದು ಕಟ್ಟಿರುವ ಹಗ್ಗಗಳನ್ನಾಗಿ ಮಾಡಿದರು. ಯಜುರ್ಮಂತ್ರಗಳನ್ನು ಮಧ್ಯ ಮಧ್ಯದಲ್ಲಿರುವ ರಂಧ್ರಗಳನ್ನು ಸೇರಿಸಿ ಬಿಗಿದು ಕಟ್ಟುವ ಹಗ್ಗವನ್ನಾಗಿ ಮಾಡಿದರು. ಯಶಸ್ಸು ಮತ್ತು ಕೀರ್ತಿರೂಪವಾದ ದೇವತೆಯನ್ನೇ ಆಸಂದಿಯ ಮೆತ್ತನೆಯ ಹಾಸುವ ವಸ್ತ್ರವನ್ನಾಗಿ ಮಾಡಿದರು. ಶ್ರೀ ಎಂಬ ಸಂಪದಭಿಮಾನಿ ದೇವತೆಯನ್ನು ಶಿರಸ್ಸಿನ ಮೇಲೆ ಹೊದಿಸುವ ಮೇಲುಹೊದಿಕೆಯನ್ನಾಗಿ ಮಾಡಿದರು. ಈ ಆಸಂದಿಯ (ಪೀಠದ) ಪಾದಾದಿಗಳನ್ನು ಸವಿತೃ, ಬೃಹಸ್ಪತಿ ಎಂಬ ದೇವತೆಗಳು ಮುಂದಿನ ಪಾದಗಳನ್ನೂ, ವಾಯು ಮತ್ತು ಪೂಷಾ ಎಂಬುವರು ಹಿಂದಿನ ಕಾಲುಗಳನ್ನೂ ಮಿತ್ರಾ ವರುಣರು ಶೀರ್ಷಣ್ಯ (ಮೇಲಿನ) ಭಾಗವನ್ನೂ ಅಶ್ವಿನೀದೇವತೆಗಳು ಪಾರ್ಶ್ವಭಾಗಗಳನ್ನೂ ಆಧಾರವಾಗಿ ಧರಿಸಿ ನಿಂತರು. ಇಂತಹ ವೇದಸ್ವರೂಪವಾದ ಆಸಂದೀ ಎಂಬ ಪೀಠವನ್ನು ಇಂದ್ರನು ಮುಂದೆ ಹೇಳುವ ಮಂತ್ರಗಳನ್ನು ಉಚ್ಚರಿಸುತ್ತಾ ಹತ್ತಿ ಕುಳಿತನು.

ವಸವಸ್ತ್ವಾ ಗಾಯತ್ರೇಣ ಛಂದಸಾ ತ್ರಿವೃತಾ ಸ್ತೋಮೇನ ರಥಂತರೇಣ ಸಾಮ್ನಾಽಽರೋಹಂತು ತಾನನ್ವಾರೋಹಾಮಿ ಸಾಮ್ರಾಜ್ಯಾಯ ರುದ್ರಾಸ್ತ್ವಾ ತ್ರೈಷ್ಟುಭೇನ ಛಂದಸಾ ಪಂಚದಶೇನ ಸ್ತೋಮೇನ ಬೃಹತಾ ಸಾಮ್ನಾಽಽರೋಹಂತು ತಾನನ್ವಾರೋಹಾಮಿ ಭೌಜ್ಯಾ-ಯಾಽಽದಿತ್ಯಾಸ್ತ್ವಾ ಜಾಗತೇನ ಛಂದಸಾ ಸಪ್ತದಶೇನ ಸ್ತೋಮೇನ ವೈರೂಪೇಣ ಸಾಮ್ನಾಽಽರೋಹಂತು ತಾನನ್ವಾರೋಹಾಮಿ ಸ್ವಾ-ರಾಜ್ಯಾಯ ವಿಶ್ವೇ ತ್ವಾ ದೇವಾ ಆನುಷ್ಟುಭೇನ ಛಂದಸೈಕವಿಂಶೇನ ಸ್ತೋಮೇನ ವೈರಾಜೇನ ಸಾಮ್ನಾಽಽರೋಹಂತು ತಾನನ್ವಾರೋ-ಹಾಮಿ ವೈರಾಜ್ಯಾಯ ಸಾಧ್ಯಾಶ್ಚ ತ್ವಾಽಽಪ್ತ್ಯಾಶ್ಚ ದೇವಾಃ ಪಾಂಕ್ತೇನ ಛಂದಸಾ ತ್ರಿಣವೇನ ಸ್ತೋಮೇನ ಶಾಕ್ವರೇಣ ಸಾಮ್ನಾಽಽರೋಹಂತು ತಾನನ್ವಾರೋಹಾಮಿ ರಾಜ್ಯಾಯ ಮರುತಶ್ಚ ತ್ವಾಂಗಿರಸಶ್ಚ ದೇವಾ ಅತಿಛಂದಸಾ ಛಂದಸಾ ತ್ರಯಸ್ತ್ರಿಂಶೇನ ಸ್ತೋಮೇನ ರೈವತೇನ ಸಾಮ್ನಾಽಽರೋಹಂತು ತಾನನ್ವಾರೋಹಾಮಿ ಪಾರಮೇಷ್ಠ್ಯಾಯ



ಮಾಹಾರಾಜ್ಯಾಯಾಽಧಿಪತ್ಯಾಯ ಸ್ವಾವಶ್ಯಾಯಾತಿಷ್ಠಾಯಾಽಽ-
ರೋಹಾಮೀತ್ಯೇತಾಮಾಸಂದೀಮಾರೋಹತ್॥

**ತಾನ್ಮಂತ್ರಾನ್ದರ್ಶಯತಿ—ವಸ್ವಾದಯೋ ದೇವಗಣಾ ಗಾಯತ್ರ್ಯಾದಿಚ್ಛಂದೋಭಿಸ್ತ್ರಿ-ವೃದಾದಿಸ್ತೋಮೈ ರಥಂತರಾದಿಸಾಮಭಿಶ್ಚ ಸಹ ಹೇ ಆಸಂದಿ ತ್ವಾಂ ಪ್ರಥಮತ ಆರೋಹಂತು। ತಾನನು ಪಶ್ಚಾದಹಮಾರೋಹಾಮಿ। ಅಸ್ಯಾ ಇತ್ಯನೇನಾಪಿ ವಸ್ವಾದಿಶಬ್ದವಚ್ಛಿದ್ದೇವಗಣವಿಶೇಷ ಉಚ್ಯತೇ ಸಾಮ್ರಾಜ್ಯಾದೀನ್ಯಾರೋಹಣಪ್ರಯೋಜನಾನಿ। ಏತೇ ಚ ಶಬ್ದಾಃ ಪೂರ್ವಾಧ್ಯಾಯೇ ವ್ಯಾಘ್ರಚರ್ಮಣಾಸ್ತೃಣಾತೀತ್ಯಸ್ಮಿನ್ಖಂಡೇ ವ್ಯಾಖ್ಯಾತಾಃ। ಏತೈಃ ಷಡ್ಭಿರ್ಮಂತ್ರೈರಿಂದ್ರ ಉಕ್ತಾ ಮಾಸಂದೀಮಾರೋಹತ್॥**

ಇಂದ್ರನು ಪೀಠವನ್ನು (ಸಿಂಹಾಸನವನ್ನು ಹತ್ತುವಾಗ ಪಠಿಸುವ ಮಂತ್ರಗಳನ್ನು) ವಿವರಿಸುವರು - ಇಂದ್ರನು ಪೀಠವನ್ನು ಹತ್ತುವಾಗ ಮುಂದೆ ಹೇಳುವಂತೆ ಮಂತ್ರಗಳನ್ನು ಉಚ್ಚರಿಸಿದನು – ಆಸಂದಿಯೆಂಬ ಎಲೈ ಪೀಠವೇ, ಅಷ್ಟವಸ್ಸು ಗಳೆಂಬ ದೇವಗಣಗಳು ಗಾಯತ್ರಿಯೇ ಮೊದಲಾದ ಛಂದಸ್ಸುಗಳಿಂದಲೂ, ತ್ರಿವೃದಾದಿ ಸ್ತೋಮಗಳಿಂದಲೂ ರಥಂತರಾದಿ ಸಾಮಮಂತ್ರಗಳಿಂದಲೂ ಸಹ ಮೊದಲು ನಿನ್ನನ್ನು (ಪೀಠವನ್ನು) ಹತ್ತಿ ಕುಳಿತುಕೊಳ್ಳಲಿ. ಅನಂತರ ನಾನು ಸಾಮ್ರಾಜ್ಯ ಲಾಭಾರ್ಥವಾಗಿ ಹತ್ತಿ ಕುಳಿತುಕೊಳ್ಳುತ್ತೇನೆ. ಹಾಗೆಯೇ ಎಲೈ ಪೀಠವೇ, ಏಕಾದಶರುದ್ರರೆಂಬ ದೇವತೆಗಳು ತ್ರಿಷ್ಟುಪ್ ಛಂದಸ್ಸಿನಿಂದಲೂ ಪಂಚದಶಸ್ತೋಮದಿಂದಲೂ, ಬೃಹತ್ಸಾಮದಿಂದಲೂ ನಿನ್ನನ್ನು ಹತ್ತಿ ಕುಳಿತುಕೊಳ್ಳಲು, ನಾನು ಸಹ ಅನಂತರ ಭೋಗಾರ್ಥವಾಗಿ ಆಸಂದಿಯಾದ ನಿನ್ನನ್ನು ಹತ್ತಿ ಕುಳಿತುಕೊಳ್ಳುತ್ತೇನೆ. ಅನಂತರ ದ್ವಾದಶಾದಿತ್ಯರೆಂಬ ದೇವ ಗಣಗಳು ಜಗತೀಛಂದಸ್ಸಿನಿಂದಲೂ, ಸಪ್ತದಶಸ್ತೋಮದಿಂದಲೂ ವೈರೂಪವೆಂಬ ಸಾಮದಿಂದಲೂ ಹತ್ತಿ ಕುಳಿತುಕೊಳ್ಳಲಿ, ಅನಂತರ ನಾನು ಸ್ವರ್ಗಲೋಕದ ಆಧಿಪತ್ಯಕ್ಕಾಗಿ ಹತ್ತಿ ಕುಳಿತುಕೊಳ್ಳುವೆನು. ಅನಂತರ ವಿಶ್ವೇದೇವರೆಂಬ ದೇವತಾಗಣಗಳು ಅನುಷ್ಟುಪ್‌ಛಂದಸ್ಸಿನಿಂದಲೂ ಏಕವಿಂಶಸ್ತೋಮದಿಂದಲೂ ವೈರಾಜವೆಂಬ ಸಾಮಮಂತ್ರದಿಂದಲೂ ಹತ್ತಿ ಕುಳಿತುಕೊಳ್ಳಲಿ. ಅನಂತರ ನಾನು ವಿವಿಧರಾಜ್ಯಗಳ ಆಧಿಪತ್ಯಕ್ಕಾಗಿ ಹತ್ತಿ ಕುಳಿತುಕೊಳ್ಳುವೆನು. ಸಾಧ್ಯರೆಂಬ ಪೂರ್ವ ದೇವತೆಗಳೂ ಪಂಕ್ತಿಛಂದಸ್ಸಿನಿಂದಲೂ ತ್ರಿಣವಸ್ತೋಮದಿಂದಲೂ ಶಕ್ವರವೆಂಬ ಸಾಮದಿಂದಲೂ ಹತ್ತಿ ಕುಳಿತುಕೊಳ್ಳಲಿ. ಅನಂತರ ನಾನು ರಾಜ್ಯಾಧಿಪತ್ಯಕ್ಕಾಗಿ ಹತ್ತಿ ಕುಳಿತುಕೊಳ್ಳುವೆನು. ಅನಂತರ ಮರುದ್ದೇವತೆಗಳೂ, ಆಂಗಿರಸರೂ ಅತಿಛಂದವೆಂಬ ಛಂದಸ್ಸಿನಿಂದಲೂ, ತ್ರಯಸ್ತ್ರಿಂಶಸ್ತೋಮದಿಂದಲೂ, ರೈವತವೆಂಬ ಸಾಮದಿಂದಲೂ ಹತ್ತಿ ಕುಳಿತುಕೊಳ್ಳಲಿ. ಅನಂತರ ನಾನು ಉತ್ತಮ ಪದವಿಪ್ರಾಪ್ತಿಗಾಗಿಯೂ, ಮಹಾರಾಜ ಪದವಿಗಾಗಿಯೂ ಸಕಲವನ್ನೂ ನನ್ನ ಸ್ವಾಧೀನದಲ್ಲಿಟ್ಟುಕೊಂಡು ಅಧಿಪತಿ ಯಾಗಿ ವರ್ತಿಸುವುದಕ್ಕೂ ಸಹ ಕುಳಿತುಕೊಳ್ಳುತ್ತೇನೆ ಎಂಬ ಅರ್ಥವಿರುವ ಮೇಲಿನ ಮಂತ್ರಗಳನ್ನು ಪಠಿಸಿ ಇಂದ್ರನು ಸಿಂಹಾಸನದಲ್ಲಿ ಕುಳಿತುಕೊಂಡನು.

ತಮೇತಸ್ಯಾಮಾಸಂದ್ಯಾಮಾಸೀನಂ ವಿಶ್ವೇ ದೇವಾ ಅಬ್ರುವನ್ನವಾ
ಅನಭ್ಯುತ್ಕ್ರುಷ್ಟ ಇಂದ್ರೋ ವೀರ್ಯಂ ಕರ್ತುಮರ್ಹತ್ಯಭ್ಯೇನಮು-
ತ್ಕ್ರೋಶಮೇತಿ ತಥೇತಿ ತಂ ವಿಶ್ವೇ ದೇವಾ ಅಭ್ಯುದಕ್ರೋಶನ್ನಿಮಂ
ದೇವಾ ಅಭ್ಯುತ್ಕ್ರೋಶತ ಸಮ್ರಾಜಂ ಸಾಮ್ರಾಜ್ಯಂ ವಿರಾಜಂ

ವೈರಾಜ್ಯಂ ರಾಜಾನಂ ರಾಜಪಿತರಂ ಪರಮೇಷ್ಠಿನಂ ಪಾರಮೇಷ್ಠ್ಯಂ
ಕ್ಷತ್ರಮಜನಿ ಕ್ಷತ್ರಿಯೋಽಜನಿ ವಿಶ್ವಸ್ಯ ಭೂತಸ್ಯಾಧಿಪತಿರಜನಿ ವಿಶಾ
ಮತ್ತಾಽಜನಿ ಪುರಾಂ ಭೇತ್ತಾಽಜನ್ಯಸುರಾಣಾಂ ಹಂತಾಽಜನಿ
ಬ್ರಹ್ಮಣೋ ಗೋಪ್ತಾಽಜನಿ ಧರ್ಮಸ್ಯ ಗೋಪ್ತಾಽಜನೀತಿ॥

ಇಂದ್ರಾರೋಹಣಾದೂರ್ಧ್ವಂ ದೇವಾನಾಭ್ಯುತ್ಕ್ರೋಶನಂ ದರ್ಶಯತಿ—ಏತಸ್ಯಾಂ ವೇದ-ಮಯ್ಯಾಮಾಸಂದ್ಯಾಮಾಸೀನಂ ತಮಿಂದ್ರಂ ಪ್ರತಿ ವಿಶ್ವೇ ಸರ್ವೇ ದೇವಾಃ ಪರಸ್ಪರಮಿದಮಬ್ರುವನ್। ಯಥಾ ಲೋಕೇ ಬಂದಿನೋ ಗುಣಕಥನೇನ ರಾಜ್ಞಃ ಕೀರ್ತಿಂ ಕುರ್ವಂತಿ। ಏವಮತ್ರಾಪಿ ಗುಣ-ಕೀರ್ತನಮಭ್ಯುತ್ಕ್ರೋಶನಮ್। ತೇನ ರಹಿತೋಽನಭ್ಯುತ್ಕೃಷ್ಟ ಇಂದ್ರೋ ಯುದ್ಧಾದೌ ವೀರ್ಯಂ ಕರ್ತುಂ ನೈವಾರ್ಹತಿ। ಕೀರ್ತಿಮಂತರೇಣ ಪರೇಷಾಂ ಭೀತ್ಯನುದಯಾತ್। ತಸ್ಮಾದಭಿತ ಏನ-ಮಿಂದ್ರಮಭ್ಯು (ಮು) ತ್ಕ್ರೋಶಾಮೋದ್ಘೋಷಯಾಮೇತಿ ವಿಚಾರ್ಯ ತಥೈವಾಂಗೀಕೃತ್ಯ ತಮಿಂದ್ರಂ ಸರ್ವೇ ದೇವಾ ಅಭ್ಯುದಕ್ರೋಶನ್। ಇಮಮಿತ್ಯಾದಿರಭ್ಯುತ್ಕ್ರೋಶನಪ್ರಕಾರಃ। ಹೇ ದೇವಾ ಇಮಮಿಂದ್ರಮಭಿತ ಉತ್ಕ್ರೋಶತೋದ್ಘೋಷಯತ। ಕಿಂವೃತಮಿಂದ್ರಂ ಸಮ್ರಾಟ್‌ಸ್ವ-ರೂಪಮತ ಏವ ಸಾಮ್ರಾಜ್ಯಂ ಕರ್ತುಮರ್ಹಮ್। ಭೋಜಂ ಭೋಕ್ತಾರಮತ ಏವ ಭೋಜಪಿತರಂ ಭೋಜಪಾಲಕಂ ಸ್ವರಾಡ್ರೂಪತ್ವಾದೇವ ಸ್ವಾರಾಜ್ಯಂ ಕರ್ತುಮರ್ಹಂ ರಾಜರೂಪತ್ವಾದೇವ ರಾಜ-ಪಿತರಂ ಸರ್ವೇಷಾಂ ರಾಜ್ಞಾಂ ಪಾಲಕಮ್। ಪರಮೇಷ್ಠಿರೂಪತ್ವಾತ್ಪಾರಮೇಷ್ಠ್ಯಂ ಪದಮನುಭವಿತುಂ ಯೋಗ್ಯಮ್। ಕ್ಷತ್ರಮಜನಿ। ಈದೃಶೀ ಕ್ಷತ್ರಿಯಜಾತಿರ್ಲೋಕೇ ಸಮುತ್ಪನ್ನಾ ತಜ್ಜಾತಿಮಾನ್ ಕ್ಷತ್ರಿಯಃ ಪುರುಷಃ ಸಮುತ್ಪನ್ನಃ। ಸರ್ವಸ್ಯ ಪ್ರಾಣಿಜಾತಸ್ಯಾಧಿಪತಿಃ ಸಮುತ್ಪನ್ನಃ। ವಿಶಾಂ ಪ್ರಜಾ-ನಾಮತ್ತಾ ಭೋಕ್ತಾ ಸಮುತ್ಪನ್ನಃ। ಪುರಾಂ ಪರಕೀಯಾಣಾಂ ಭೇತ್ತಾ ವಿದಾರಯಿತಾ ಸಮುತ್ಪನ್ನಃ ಅಸುರಾಣಾಂ ಹಂತಾ ಘಾತುಕಃ ಸಮುತ್ಪನ್ನಃ। ಬ್ರಹ್ಮಣೋ ವೇದಸ್ಯ ಗೋಪ್ತಾ ರಕ್ಷಕಃ ಸಮುತ್ಪನ್ನಃ ಧರ್ಮಸ್ಯ ವೇದೋಕ್ತಸ್ಯ ಗೋಪ್ತಾ ರಕ್ಷಕಃ ಸಮುತ್ಪನ್ನಃ। ಇತ್ಯಯಮಭ್ಯುತ್ಕ್ರೋಶಮಂತ್ರಃ॥

ಇಂದ್ರನು ಸಿಂಹಾಸನವನ್ನು ಹತ್ತಿ ಕುಳಿತಮೇಲೆ ದೇವತೆಗಳು ಇಂದ್ರನನ್ನು ನಾನಾವಿಧ ಬಿರುದುಗಳಿಂದ ಉದ್ಘೋಷಿಸುವರು. ಮೇಲೆ ಹೇಳಿದಂತೆ ವೇದಸ್ವರೂಪವಾದ ಸಿಂಹಾಸನದಲ್ಲಿ(ಪೀಠದಲ್ಲಿ)ಕುಳಿತಿರುವ ಇಂದ್ರನನ್ನು ನೋಡಿ ದೇವತೆಗಳೆಲ್ಲರೂ ಪರಸ್ಪರವಾಗಿ ಈ ರೀತಿ ಮಾತನಾಡಿಕೊಂಡರು. ಲೋಕದಲ್ಲಿ(ಪ್ರಪಂಚದಲ್ಲಿ)ವಂದಿಮಾಗಧರು ತಮ್ಮ ರಾಜನ ಗುಣಕಥನವನ್ನೂ ಕೀರ್ತಿಯನ್ನೂ ಉದ್ಘೋಷಿಸುವರು. ರಾಜನಾದವನು ಗುಣಗಳನ್ನೂ ಕೀರ್ತಿಯನ್ನೂ ಹೊಗಳಿ ಘೋಷಿಸ-ದಿದ್ದರೆ ಅಂತಹ ರಾಜನು ಯುದ್ಧಾದಿಗಳಲ್ಲಿ ಜಯಶೀಲನಾಗಿ ಕೀರ್ತಿಯನ್ನು ಗಳಿಸಲು ಸಾಧ್ಯವಿಲ್ಲ. ಆದ್ದರಿಂದ ನಮಗೆ ರಾಜ-ನಾದ ಈ ಇಂದ್ರನ ಗುಣಗಳನ್ನೂ ಕೀರ್ತಿಯನ್ನೂ ಬಿರುದುಗಳನ್ನೂ ಪ್ರಶಂಸೆಮಾಡಿ ಎಲ್ಲರಿಗೂ ತಿಳಿಯುವಂತೆ ಘೋಷಿಸು-ವುದು ಯುಕ್ತವಾಗಿರುವದು ಎಂದು ಪರಸ್ಪರ ಮಾತನಾಡಿಕೊಂಡರು. ಅನಂತರ ಆ ಇಂದ್ರನ ಗುಣಗಳನ್ನು ಘೋಷಿಸಲು ಪ್ರಾರಂಭಮಾಡಿದರು ಆ ಇಂದ್ರನು ಎಂಥವನೆಂದರೆ ಸಾಮ್ರಾಜ್ಯಂ ಸಾಂ ರಾಜ್ಯವನ್ನು, ದೇಶವೆಲ್ಲವನ್ನೂ ರಕ್ಷಿಸಿ ಪಾಲಿಸಲು ಯೋಗ್ಯನಾದವನು ; ಭೋಜಂ ಸುಖಸಂತೋಷಗಳನ್ನು ಅನುಭವಿಸುವವನು ; ಸ್ವರಾಜಂ ಸ್ವತಂತ್ರವಾಗಿ ರಾಜ್ಯಾಧಿಪತ್ಯ ವನ್ನು ಆಳುವವನು ; ವಿರಾಜಂ–ವಿಶೇಷವಾಗಿ ಪ್ರಖ್ಯಾತನಾದ ರಾಜನು ; ರಾಜಪಿತರಂ–ರಾಜರುಗಳನ್ನು ತಂದೆಯಂತೆ

ಪಾಲಿಸುವವನು ; ಪರಮೇಷ್ಠಿನಂ-ಉತ್ತಮಸ್ಥಾನವನ್ನು ಪಡೆದಿರುವನು ; ಇಂತಹ ಕ್ಷತ್ರಿಯನಾದ ರಾಜನು ಈಗ ಉತ್ಪನ್ನನಾಗಿರುವನು. ಈ ರಾಜನು ಸಮಸ್ತ ಪ್ರಾಣಿಗಳಿಗೂ ಅಧಿಪತಿ(ಸ್ವಾಮಿ) ಯಾಗಿರುವನು. ಪ್ರಜೆಗಳನ್ನು ಪಾಲಿಸುವ ರಾಜನು ಈಗ ಉತ್ಪನ್ನನಾಗಿರುವನು. ಶತ್ರುರಾಜರ ಪಟ್ಟಣಗಳನ್ನು ಧ್ವಂಸಮಾಡಿ ನಾಶಗೊಳಿಸುವ ರಾಜನು ಉತ್ಪನ್ನನಾಗಿರುವನು. ಅಸುರರನ್ನು ಸಂಹಾರಮಾಡಿ ನಾಶಗೊಳಿಸುವ ರಾಜನು ಉತ್ಪನ್ನನಾಗಿರುವನು. ವೇದಶಾಸ್ತ್ರಗಳನ್ನೂ ಬ್ರಾಹ್ಮಣರನ್ನೂ ರಕ್ಷಿಸಿ ಕಾಪಾಡುವ ಧೀರನು ಉತ್ಪನ್ನನಾಗಿರುವನು. ವೇದೋಕ್ತವಾದ ಧರ್ಮವನ್ನು ರಕ್ಷಿಸಿ ನ್ಯಾಯಪರಿಪಾಲನೆ ಮಾಡುವ ಇಂದ್ರನೆಂಬ ಈ ರಾಜನು ಉತ್ಪನ್ನನಾಗಿರುವನು. ಇತ್ಯಾದಿ ವರ್ಣನೆಗಳನ್ನೂ ಗುಣಸಂಕೀರ್ತನೆಯನ್ನೂ ದೇವತೆಗಳೆಲ್ಲರೂ ಘಟ್ಟಿಯಾದ ಧ್ವನಿಯಿಂದ ಉದ್ಘೋಷಿಸಿದರು.

ತಮಭ್ಯುತ್ಕ್ರುಶಂ ಪ್ರಜಾಪತಿರಭಿಷೇಕ್ಷ್ಯನ್ನೇತಯರ್ಚಾಽಭ್ಯಮಂತ್ರಯತ ॥

**ಅಭ್ಯುತ್‌ಕ್ರೋಶನಾದೂರ್ಧ್ವಂ ಪ್ರಜಾಪತಿಕರ್ತವ್ಯಂ ದರ್ಶಯತಿ—ಏತಯಾ ನಿಷಷಾದೇತಿ ವಕ್ಷ್ಯಮಾಣಯಾ ॥**

ಇಂದ್ರನ ಗುಣಗಳನ್ನೂ ಕೀರ್ತಿಯನ್ನೂ ಪ್ರಶಂಸಿಸಿ ಉದ್ಘೋಷಿಸಿದ ಮೇಲೆ ಪ್ರಜಾಪತಿಯು ಮಾಡಿದ ಮುಂದಿನ ಕರ್ತವ್ಯವನ್ನು ತಿಳಿಸುವರು. ಮೇಲೆ ಹೇಳಿದಂತೆ ದೇವತೆಗಳೆಲ್ಲರೂ ಇಂದ್ರನನ್ನು ರಾಜಯೋಗ್ಯವಾದ ಬಿರುದುಗಳಿಂದ ಪ್ರಶಂಸಿಸಿ ಉದ್ಘೋಷಿಸಿದಮೇಲೆ ಪ್ರಜಾಪತಿಯು ಮುಂದೆ ಹೇಳುವ ಮಂತ್ರಗಳಿಂದ ಇಂದ್ರನನ್ನು ಪ್ರೋಕ್ಷಣೆಮಾಡಿದನು.

*English Translation*

**(The Mahabhisheka or grand inauguration ceremoney of Indra)**

**(The elevation of Indra to the royalty over the Gods. His throne-seat. By what mantras he ascended it. The Gods proclaim him as King by mentioning all his titles).**

Now follows the great inauguration (mahabhesheka) of Indra. The gods, headed by Prajapathi, said to one another (pointing with their hands up Indra) " this one is among the gods the most vigorous, most strong, most valiant, most perfect, who carries best out any work to be done; Let us instal him to the kingship over us. " They all consented to perform just this ceremoney mahabhisheka on Indra. They brought for him that throne-seat, which is called the Rik-formed. They made the Brihat and Rathantara verses its two forlegs, the Vairupa and Vairaja verses its hind-legs, the Sakvara and Raivta verses its top-hoards, the Naudhasa and Kaleya its said-boards. The Rik verses

were made the threads of the texture which went lengthwise, the Samans were threads whsch went crossways, the Yajus verses the intervals in the texture. They made the goddess of Glory its covering, and the goddess of the Fortune its pillow, Savitar and Brihaspati were holding its two fore-legs, Vayu and Pushan the two hind legs, Mitra and Varuna the two top-boards, the Asvins the two side-boards

Indra then ascended the throne-seat, addressing it thus: "May the Vasus ascend thee with the Gayatri metre, with the Trivrit Soma, with the Rathantara Sama. After them I then ascend for obtaining universal sovereignty. May the Rudras ascend thee with the Trishtubh metre, the fifteen-fold Stoma, and the Brihat Sama. After them then I ascend for obtaining increase of enjoyment. May the Adityas ascend thee with the Jagati metre, the seventeen-fold Stoma. and the Vairupa Sama. AFter them I ascend for obtaining iudependent rule. May the Visve Devah ascend thee with the Anushtubh metre, the twenty-one-fold Stoma, and the Vairaja Sama, and the Vairaja Sama. After them I ascend for obtaining distinguished rule. May the divine Sadhyas and Aptyas ascend thee with the Pankti, metre, the Trinava (twenty-seven-fold) Stoma, and the Sakvara Sama. After them I ascend for obtaining royal power. May the divine Marutas and Angiras ascend thee with the Atichandas metre, the thirty-three-fold Stoma, and the Raivata Sama. After them then I ascend for obtaining the fulfilment of the highest desires for becoming a great king, for supreme, mastership, independence, and a long residence.[a] By these words one should ascend the throne-seat.

After Indra has seated himself on this throne-seat, the Visve Devah said to him, "Indea cannot achieve any feat if he is not everywhere publicly proclaimen as hero ; but if he be thus proclaimed, he can do so." They then consented to do so, and consequently turning towards Indra, cried him by all his titles.

The gods bestowed on him Indra, by proclaiming him as "Universal ruler" universal rule ; by proclaiming him as "enjoyer of pleasures" they

made him father of pleasures ; by proclaiming him as " Independent ruler ", they granted him independence of rule ; by proclaiming him as " distinguished king. They conferred on him royal distinction ; by proclaiming him " king," they made him father of kings ; by calling him "one who has attained, the highest deisres," they granted him fulfilment of the highest desires.

The gods then continued proclaiming his heroic virtues in the following manner: "The Kshattra is born; the supreme master of the whole creation is born; the devourer of the hostile tribes is born; the destroyer of the hostile castles is born; the slayer of the Asuras is born; the protector of the Brahma is born; the protector of the religion is born."

After his royal dignity was thus proclaimed, Prajapati when being just about performing the inauguration ceremoncy, recited over him consecrated him with the following mantra :

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಅಷ್ಟತ್ರಿಂಶಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೆಂಟನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು.

---

## ಅಥ ಅಷ್ಟತ್ರಿಂಶಾಧ್ಯಾಯೇ ದ್ವಿತೀಯಃ ಖಂಡಃ

### ಮೂವತ್ತೆಂಟನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

---

[ಇಂದ್ರನು ಪೀಠದಲ್ಲಿ ಪ್ರತಿಷ್ಠಿತನಾಗುವ ಕಾಲದಲ್ಲಿ ಪ್ರಜಾಪತಿಯು ಪಠಿಸಿದ ಮಂತ್ರಗಳು.]

---

ನಿಷಸಾದ ಧೃತವ್ರತೋ ವರುಣಃ ಪಸ್ತ್ಯಾಸ್ವಾ । ಸಾಮ್ರಾಜ್ಯಾಯ
ಭೌಜ್ಯಾಯ ಸ್ವಾರಾಜ್ಯಾಯ ವೈರಾಜ್ಯಾಯ ಪಾರಮೇಷ್ಠ್ಯಾಯ

ರಾಜ್ಯಾಯ ಮಾಹಾರಾಜ್ಯಾಯಾಽಧಿಪತ್ಯಾಯ ಸ್ವಾವಶ್ಯಾಯಾಽಽ-
ತಿಷ್ಠಾಯ ಸುಕ್ರತುರಿತಿ ॥

ಏತಯರ್ಚಾಭ್ಯಮಂತ್ರಯತೇತ್ಯತ್ರ ಯೋಽಯಂ ಮಂತ್ರ ಋಕ್ಯಬ್ದೇನ ವಿವಕ್ಷಿತಸ್ತಂ ಮಂತ್ರಂ ದರ್ಶಯತಿ—ಧೃತವ್ರತಃ ಸ್ವೀಕೃತನಿಯಮೋ ವರುಣಃ ಸರ್ವಸ್ಯಾನಿಷ್ಟಸ್ಯ ನಿವಾರಯಿತೇಂದ್ರಃ ಪಸ್ತ್ಯಾಸು ಗೃಹೇಷ್ವಾಗತ್ಯ ಸಾಮ್ರಾಜ್ಯಾದಿಫಲಸಿದ್ಧ್ಯರ್ಥಂ ಸಕ್ರತುಃ ಶೋಭನಸಂಕಲ್ಪೋ ಭೂತ್ವಾ ನಿಷಸಾದ್ಯಾಮಾಸಂದ್ಯಾಂ ನಿಷಣ್ಣವಾನ್ ॥

ಪ್ರಜಾಪತಿಯು ಇಂದ್ರನನ್ನು ಅಭಿಮಂತ್ರಿಸಿ ಪಠಿಸುವ ಮಂತ್ರವನ್ನು ತಿಳಿಸುವರು—ಪ್ರಕೃತಿ (ವಿಶ್ವದ) ನಿಯಮಗಳನ್ನು ಸ್ವತಃ ಪಾಲಿಸುವವನೂ, ಇತರರು ಪಾಲಿಸುವಂತೆ ಪ್ರಚೋದನೆಮಾಡುವವನೂ ಸಮಸ್ತ ಅನಿಷ್ಟವನ್ನು ನಿವಾರಣೆ ಮಾಡುವವನೂ ಆದ ಇಂದ್ರನು ಗೃಹಕ್ಕೆ ಬಂದು ಕುಳಿತು ಸಾಮ್ರಾಜ್ಯಾದಿಫಲಸಿದ್ಧಿಗಾಗಿ ಉತ್ತಮವಾದ ಮತ್ತು ದೃಢವಾದ ಸಂಕಲ್ಪ (ಉದ್ದೇಶದಿಂದ) ಆಸಂದಿಯೆಂಬ ಪೀಠದಲ್ಲಿ ಕುಳಿತುಕೊಂಡಿರುವನು.

ತಮೇತಸ್ಯಾಮಾಸಂದ್ಯಾಮಾಸೀನಂ ಪ್ರಜಾಪತಿಃ ಪುರುಸ್ತಾತ್ತಿಷ್ಠನ್ಪ್ರತ್ಯ-
ಙ್ಮುಖ ಔದುಂಬರ್ಯಾಽಽರ್ದ್ರಯಾ ಶಾಖಯಾ ಸಪಲಾಶಯಾ ಜಾತ-
ರೂಪಮಯೇನ ಚ ಪವಿತ್ರೇಣಾಂತರ್ಧಾಯಾಭ್ಯಷಿಂಚದಿಮಾ ಆಪಃ
ಶಿವತಮಾ ಇತ್ಯೇತೇನ ತೃಚೇನ ದೇವಸ್ಯ ತ್ವೇತಿ ಚ ಯಜುಷಾ
ಭೂರ್ಭುವಃ ಸ್ವರಿತ್ಯೇತಾಭಿಶ್ಚ ವ್ಯಾಹೃತಿಭಿಃ ॥

ಅನೇನ ಮಂತ್ರೇಣಾಭಿಮಂತ್ರಿತಸ್ಯೇಂದ್ರಸ್ಯಾಭಿಷೇಕಪ್ರಕಾರಂ ದರ್ಶಯತಿ—ಏತಸ್ಯಾಂ ಪೂರ್ವೋಕ್ತಾಯಾಂ ವೇದಮಯ್ಯಾಮಾಸಂದ್ಯಾಮಾಸೀನಂ ತಮಿಂದ್ರಂ ಪ್ರಜಾಪತಿರಭ್ಯಷಿಂಚತ್ । ಕಿಂ ಕುರ್ವನ್ । ಪುರಸ್ತಾದಾಸಂದ್ಯಾಃ ಪೂರ್ವಸ್ಯಾಂ ದಿಶಿ ಪ್ರತ್ಯಙ್ಮುಖಸ್ತಿಷ್ಠನ್ । ಕಿಂ ಕೃತ್ವಾ । ಅದ್ರಯಾಽರ್ದ್ರಪುತ್ರೋಪೇತಯೋದುಂಬರಶಾಖಾಯಾ ಸುವರ್ಣಮಯೇನ ಚ ಪವಿತ್ರೇಣಾಂತರ್ಧಾಯ ವ್ಯವಧಾನಂ ಕೃತ್ವಾ । ಕೇನ ಮಂತ್ರೇಣ । ಇಮಾ ಆಪಃ ಶಿವತಮಾ ಇತ್ಯಾದಿಕೇನ ಶ್ರೃತ್ವಂಗಾಭಿಷೇಕೇ ಪ್ರೋಕ್ತೇನ ತ್ರಿವಿಧೇನ ಮಂತ್ರಜಾತೇನ ॥

ಮೇಲೆ ಹೇಳಿದ ನಿಷಸಾದ ಧೃತವ್ರತಃ ಎಂಬ ಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ಇಂದ್ರನು ಪೀಠದಲ್ಲಿ ಕುಳಿತುಕೊಂಡಮೇಲೆ ಅವನಿಗೆ ಪ್ರಜಾಪತಿಯು ಮಾಡಿದ ಅಭಿಷೇಕ ಪ್ರಕಾರವನ್ನು ವಿವರಿಸುವರು. ಆಸಂದಿಯೆಂಬ ವೇದಮಯವಾದ ಸಿಂಹಾಸನದಲ್ಲಿ ಕುಳಿತುಕೊಂಡಿರುವ ಇಂದ್ರನಿಗೆ ಪ್ರಜಾಪತಿಯು ಅಭಿಷೇಕವನ್ನು ಮಾಡಿದನು. ಹೇಗೆ ಮಾಡಿದನೆಂದರೆ ಆಸಂದಿಯೆಂಬ ಪೀಠದಲ್ಲಿ ಇಂದ್ರನು ಪೂರ್ವಾಭಿಮುಖವಾಗಿ ಕುಳಿತುಕೊಂಡಮೇಲೆ ಪ್ರಜಾಪತಿಯು ಅವನ ಎದುರಿಗೆ ಅಂದರೆ ಪಶ್ಚಿಮಾಭಿಮುಖವಾಗಿ ಕುಳಿತ ನೀರಿನಲ್ಲಿ ಅದ್ದಿದ ಉದುಂಬರ ವೃಕ್ಷದ ಕೊನೆಯಿಂದ ಅಥವಾ ಸುವರ್ಣಮಯವಾದ ಶಾಖೆಯಿಂದ ಅದರಲ್ಲಿ ಪವಿತ್ರವನ್ನಿಟ್ಟು, ಇಮಾ ಆಪಃ ಶಿವತಮಾಃ ಎಂಬ ಮೂರು ಋಕ್ಕುಗಳಿಂದಲೂ, ದೇವಸ್ಯ ತ್ವಾ ಎಂಬ

ಯಜುರ್ಮಂತ್ರದಿಂದಲೂ **ಭೂರ್ಭುವಃಸ್ವಃ** ಎಂಬ ವ್ಯಾಹೃತಿಗಳಿಂದಲೂ ಇತರ ಅಭಿಷೇಕ ಮಂತ್ರಗಳಿಂದಲೂ ಇಂದ್ರನಿಗೆ ಅಭಿಷೇಕಮಾಡಿದನು.

---

*English Translation*

**(The mantras by which Indra was consecrated. He was installed by Prajapati.)**

" Varuna, the faithful, sat down in his premises—for obtaining universal rule, enjoyement of pleasures, independence, distinction as sovereign, fulfilment of the highest desires, he, the wise, & c. (1, 25, 10). Prajapati standing in front of Indra who was sitting on the throne-seat, turned his face to the west, and after having put on his head a gold leaf, sprinkled him with the most branch of an Udumbara, together with that of a Palasa tree, reciting the three Rik verses, ima apah, sivatama, i. e. these most happy waters & c. (Ait. Br. 8, 7) ; and the Yajus verse, devasya tya (Vajasan Samh. 1, 10, Ait. Br. 8, 1) ; and the great words, bhur, bhuvah, svar.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಅಷ್ಟತ್ರಿಂಶಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೆಂಟನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು
ಸಮಾಪ್ತವಾದುದು.

# ಅಥ ಅಷ್ಟತ್ರಿಂಶಾಧ್ಯಾಯೇ ತೃತೀಯಃ ಖಂಡಃ

## ಮೂವತ್ತೆಂಟನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು.

[ಇಂದ್ರನು ನಾನಾದಿಕ್ಕುಗಳಲ್ಲಿ ಅನೇಕ ದೇವತೆಗಳಿಂದ ಅಭಿಷೇಕಮಾಡಲ್ಪಟ್ಟು ಸಮಸ್ತ ಸಾಮ್ರಾಜ್ಯಕ್ಕೂ ರಾಜನೆಂದು ಘೋಷಿಸಲ್ಪಡುವುದು.]

ಅಥೈನಂ ಪ್ರಾಚ್ಯಾಂ ದಿಶಿ ವಸವೋ ದೇವಾಃ ಷಡ್ಭಿಶ್ಚೈವ ಪಂಚವಿಂಶೈ-ರಹೋಭಿರಭ್ಯಷಿಂಚನ್ನೇತೇನ ಚ ತೃಚೇನೈತೇನ ಚ ಯಜುಷೈತಾ-ಭಿಶ್ಚವ್ಯಾಹೃತಿಭಿಃ ಸಾಮ್ರಾಜ್ಯಾಯ ॥

ಇಂದ್ರಸ್ಯ ಪ್ರಜಾಪತಿಕೃತಾಭಿಷೇಕಾದೂರ್ಧ್ವಂ ದಿಗ್ಭೇದೇನ ದೇವವಿಶೇಷೈರಭಿಷೇಕಃ ಕೃತಃ । ತತ್ರ ಪ್ರಾಚ್ಯಾಂ ದಿಶ್ಯಭಿಷೇಕಂ ದರ್ಶಯತಿ—ಅಥ ಪ್ರಜಾಪತ್ಯಭಿಷೇಕಾನಂತರಮೇನ-ಮಿಂದ್ರಂ ಪ್ರಾಚ್ಯಾಂ ದಿಶ್ಯವಸ್ಥಿತಾ ವಸವೋ ದೇವಾ ಏಕತ್ರಿಂಶತ್ಸ್ವಹಃಸು ಪೂರ್ವೋಕ್ತೈ-ರ್ಮಂತ್ರೈರಭ್ಯಷಿಂಚನ್ ತಚ್ಚ ಸಾಮ್ರಾಜ್ಯಸಿದ್ಧಯೇ ಭವತಿ ॥

ಪ್ರಜಾಪತಿಯು ಇಂದ್ರನಿಗೆ ಅಭಿಷೇಕಮಾಡಿದನಂತರ ಇತರ ದೇವತೆಗಳು ನಾನಾದಿಕ್ಕುಗಳಲ್ಲಿ ಅಭಿಷೇಕವನ್ನು ಮಾಡಿದರು. ಈಗ ಪೂರ್ವದಿಕ್ಕಿನಲ್ಲಿ ಮಾಡಿದ ಅಭಿಷೇಕಕ್ರಮವನ್ನು ವಿವರಿಸುವರು. ಇಂದ್ರನಿಗೆ ಪ್ರಜಾಪತಿಯು ಪಟ್ಟಾಭಿ-ಷೇಕವನ್ನು ಮಾಡಿ ಮುಗಿಸಿದನಂತರ ಅಷ್ಟವಸುಗಳೆಂಬ ಪೂರ್ವದಿಕ್ಕಿನಲ್ಲಿದ್ದ ದೇವತೆಗಳು ಮೂವತ್ತೊಂದು ದಿನಗಳವರೆಗೆ ಹಿಂದೆ ಹೇಳಿದ ಋಗ್ವೇದ, ಯಜುರ್ವೇದ, ವ್ಯಾಹೃತಿ ಮೊದಲಾದ ಮಂತ್ರಗಳಿಂದ ಇಂದ್ರನಿಗೆ ಸಾಮ್ರಾಜ್ಯಾಧಿಪತ್ಯಸಿದ್ಧಿ-ಗಾಗಿ ಅಭಿಷೇಕವನ್ನು ಮಾಡಿದರು.

ತಸ್ಮಾದೇತಸ್ಯಾಂ ಪ್ರಾಚ್ಯಾಂ ದಿಶಿ ಯೇ ಕೇ ಚ ಪ್ರಾಚ್ಯಾನಾಂ ರಾಜಾನಃ ಸಾಮ್ರಾಜ್ಯಾಯೈವ ತೇಽಭಿಷಿಚ್ಯಂತೇ ಸಮ್ರಾಳಿತ್ಯೇನಾನಭಿಷಿಕ್ತಾ-ನಾಚಕ್ಷತ ಏತಾಮೇವ ದೇವಾನಾಂ ವಿಹಿತಮನು ॥

ಇದಾನೀಂತನಲೌಕಿಕಾಚಾರಪ್ರದರ್ಶನೇನೇಂದ್ರಸ್ಯ ಪ್ರಾಚ್ಯಾಂ ದಿಶಿ ತಮಭಿಷೇಕಂ ದ್ರಢ-ಯತಿ—ಯಸ್ಮಾದ್ವಸುಭಿಃ ಪ್ರಾಚ್ಯಾಂ ದಿಶಿ ತಮಭಿಷೇಕಃ ಕೃತಸ್ತಸ್ಮಾದಿದಾನೀಮಪಿ ಪ್ರಾಚ್ಯಾನಾಂ ಪೂರ್ವದಿಗ್ವರ್ತಿನಾಂ ಮನುಷ್ಯಾಣಾಂ ಯೇ ಕೇ ಚ ರಾಜಾನಃ ಸಂತಿ ತೇ ಸರ್ವೇಽಪಿ ದೇವಾನಾಂ ಚ ವಸೂನಾಂ ಚ ಸಂಬಂಧಿನೀಮೇತಾಮೇವ ವಿಹಿತಿಂ ಪೂರ್ವೋಕ್ತಮೇವ ವಿಧಾನಮನು ಸಾಮ್ರಾಜ್ಯಸಿದ್ಧ್ಯರ್ಥಮಭಿಷಿಚ್ಯಂತೇಽತ ಏವಾಭಿಷಿಕ್ತಾನೇನಾನ್ರಾಜ್ಞಃ ಸಮ್ರಾಳಿತ್ಯನೇನ ಶಬ್ದೇನ ವ್ಯವಹರಂತಿ ॥

ಮೇಲೆ ಹೇಳಿದಂತೆ ವಸುಗಳು ಇಂದ್ರನಿಗೆ ಪೂರ್ವದಿಕ್ಕಿನಲ್ಲಿ ಅಭಿಷೇಕ ಮಾಡಿದ ಕ್ರಮವನ್ನು ಅನುಸರಿಸಿ ಈಗಲೂ ಮನುಷ್ಯರು ಈ ಭೂಮಿಯಮೇಲೆ ಪೂರ್ವದಿಕ್ಕಿನಲ್ಲಿರುವ ತಮ್ಮ ರಾಜರುಗಳಿಗೆ ವಸುಗಳು ಇಂದ್ರನಿಗೆ ಅಭಿಷೇಕ ಮಾಡಿದ ವಿಧಿಯನ್ನೇ ಅನುಸರಿಸಿ ಆ ರಾಜನಿಗೆ ಸಾಮ್ರಾಜ್ಯಾಧಿಪತ್ಯವು ಸಿದ್ಧಿಸುವುದಕ್ಕಾಗಿ ಅಭಿಷೇಕ ಮಾಡುವರು. ಈ ರೀತಿ ಅಭಿಷಿಕ್ತನಾದ ರಾಜನನ್ನು ಸಮ್ರಾಟ್ ಎಂದೇ ಕರೆಯುವರು.

ಅಥೈನಂ ದಕ್ಷಿಣಸ್ಯಾಂ ದಿಶಿ ರುದ್ರಾ ದೇವಾಃ ಷಡ್ಭಿಶ್ಚೈವ ಪಂಚವಿಂಶೈರಹೋಭಿರಭ್ಯಷಿಂಚನ್ನೇತೇನ ಚ ತೃಚೇನೈತೇನ ಚ ಯಜುಷೈತಾಭಿಶ್ಚ ವ್ಯಾಹೃತಿಭಿರ್ಭೌಜ್ಯಾಯ ತಸ್ಮಾದೇತಸ್ಯಾಂ ದಕ್ಷಿಣಸ್ಯಾಂ ದಿಶಿ ಯೇ ಕೇ ಚ ಸತ್ವತಾಂ ರಾಜಾನೋ ಭೌಜ್ಯಾಯೈವ ತೇಽಭಿಷಿಚ್ಯಂತೇ ಭೋಜೇತ್ಯೇನಾನಭಿಷಿಕ್ತಾನಾಚಕ್ಷತ ಏತಾಮೇವ ದೇವಾನಾಂ ವಿಹಿತಿಮನ್ವಥೈನಂ ಪ್ರತೀಚ್ಯಾಂ ದಿಶ್ಯಾದಿತ್ಯಾ ದೇವಾಃ ಷಡ್ಭಿಶ್ಚೈವ ಪಂಚವಿಂಶೈರಹೋಭಿರಭ್ಯಷಿಂಚನ್ನೇತೇನ ಚ ತೃಚೇನೈತೇನ ಚ ಯಜುಷೈತಾಭಿಶ್ಚ ವ್ಯಾಹೃತಿಭಿಃ ಸ್ವಾರಾಜ್ಯಾಯ ತಸ್ಮಾದೇತಸ್ಯಾಂ ದಿಶಿ ಯೇ ಕೇ ಚ ನೀಚ್ಯಾನಾಂ ರಾಜಾನೋ ಯೇಽಪಾಚ್ಯಾನಾಂ ಸ್ವಾರಾಜ್ಯಾಯೈವ ತೇಽಭಿಷಿಚ್ಯಂತೇ ಸ್ವರಾಳಿತ್ಯೇನಾನಭಿಷಿಕ್ತಾನಾಚಕ್ಷತ ಏತಾಮೇವ ದೇವಾನಾಂ ವಿಹಿತಿಮನ್ವಥೈನಮುದೀಚ್ಯಾಂ ದಿಶಿ ವಿಶ್ವೇ ದೇವಾಃ ಷಡ್ಭಿಶ್ಚೈವ ಪಂಚವಿಂಶೈರಹೋಭಿರಭ್ಯಷಿಂಚನ್ನೇತೇನ ಚ ತೃಚೇನೈತೇನ ಚ ಯಜುಷೈತಾಭಿಶ್ಚ ವ್ಯಾಹೃತೀಭಿರ್ವೈರಾಜ್ಯಾಯ ತಸ್ಮಾದೇತಸ್ಯಾಮುದೀಚ್ಯಾಂ ದಿಶಿ ಯೇ ಕೇ ಚ ಪರೇಣ ಹಿಮವಂತ ಜನಪದಾ ಉತ್ತರಕುರವ ಉತ್ತರಮದ್ರಾ ಇತಿ ವೈರಾಜ್ಯಾಯೈವ ತೇಽಭಿಷಿಚ್ಯಂತೇ ವಿರಾಳಿತ್ಯೇನಾನಭಿಷಿಕ್ತಾನಾಚಕ್ಷತ ಏತಾಮೇವ ದೇವಾನಾಂ ವಿಹಿತಿಮನ್ವಥೈನಮಸ್ಯಾಂ ಧ್ರುವಾಯಾಂ ಮಧ್ಯಮಾಯಾಂ ಪ್ರತಿಷ್ಠಾಯಾಂ ದಿಶಿ ಸಾಧ್ಯಾಶ್ಚಾಽಽಪ್ತ್ಯಾಶ್ಚ ದೇವಾಃ ಷಡ್ಭಿಶ್ಚೈವ ಪಂಚವಿಂಶೈರಹೋಭಿರಭ್ಯಷಿಂಚನ್ನೇತೇನ ಚ ತೃಚೇನೈತೇನ ಚ ಯಜುಷೈತಾಭಿಶ್ಚ ವ್ಯಾಹೃತೀಭೀ ರಾಜ್ಯಾಯ ತಸ್ಮಾದಸ್ಯಾಂ ಧ್ರುವಾಯಾಂ ಮಧ್ಯಮಾಯಾಂ ಪ್ರತಿಷ್ಠಾಯಾಂ ದಿಶಿ ಯೇ ಕೇ ಚ ಕುರುಪಂಚಾಲಾನಾಂ ರಾಜಾನಃ ಸವಶೋಶೀನರಾಣಾಂ ರಾಜ್ಯಾ-

ಯೈವ ತೇಽಭಿಷಿಚ್ಯಂತೇ ರಾಜೇತ್ಯೇನಾನಭಿಷಿಕ್ತಾನಾಚಕ್ಷತ ಏತಾ-
ಮೇವ ದೇವಾನಾಂ ವಿಹಿತಿಮನ್ವಥೈನಮೂರ್ಧ್ವಾಯಾಂ ದಿಶಿ
ಮರುತಶ್ಚಾಂಗಿರಸಶ್ಚ ದೇವಾಃ ಷಡ್ಭಿಶ್ಚೈವ ಪಂಚವಿಂಶೈರಹೋಭಿ-
ರಭ್ಯಷಿಂಚನ್ನೇತೇನ ಚ ತೃಚೇನೈತೇನ ಚ ಯಜುಷೈತಾಭಿಶ್ಚ
ವ್ಯಾಹೃತಿಭಿಃ ಪಾರಮೇಷ್ಠ್ಯಾಯ ಮಾಹಾರಾಜ್ಯಾಯಾಧಿ-
ಪತ್ಯಾಯ ಸ್ವಾವಶ್ಯಾಯಾಽಽತಿಷ್ಠಾಯೇತಿ ಸ ಪರಮೇಷ್ಠೀ ಪ್ರಾಜಾ-
ಪತ್ಯೋ ಭವತ್ ||

ದಿಗಂತರೇಽಪಿ ದೇವಾಂತರೈರಿಂದ್ರಾಭಿಷೇಕಂ ದರ್ಶಯತಿ—ಪ್ರಥಮಪರ್ಯಾಯಪದ್ವ್ಯಾಖ್ಯೇ-ಯಮ್ | ಸತ್ವತಾಂ ದಕ್ಷಿಣಸ್ಯಾಂ ದಿಶಿ ವರ್ತಮಾನಾಃ ಪ್ರಾಣಿನಃ ಸತ್ವನ್ನಾಮಕಾಃ | ತೇಷಾಂ ಯೇ ರಾಜಾನೋಽಭಿಷಿಕ್ತಾಸ್ತೇ ಭೋಜೇತ್ಯನೇನ ಶಬ್ದೇನ ವ್ಯವಹ್ರಿಯಂತೇ | ಪ್ರತೀಚ್ಯಾಂ ದಿಶಿ ವರ್ತಮಾನಾಃ ಪ್ರಾಣಿನೋ ನೀಚ್ಯಾ ಅಪಾಚ್ಯಾಶ್ಚ | ನಿಕಷಮವಂತೀತಿ ನೀಚ್ಯಾಃ |ಅಪಕರ್ಷ-ಮವಂತೀತ್ಯಪಾಚ್ಯಾಃ | ಜಾತ್ಯಾ ನಿಕಷಃ | ವ್ಯವಹಾರೇಣಾಪಕರ್ಷಃ | ಉಭಯವಿಧಾನಾಂ ಪ್ರಾಣಿನಾಂ ಯೇ ರಾಜಾನಃ ಸಂತಿ ತೇ ಸ್ವರಾಡಿತಿ ಶಬ್ದೇನ ವ್ಯವಹ್ರಿಯಂತೇ | ಉದೀಚ್ಯಾಂ ದಿಶಿ ಹಿಮವಂತಂ ಪರೇಣ ಹಿಮವತ್ಪರ್ವತಪರಭಾಗೇ ಜನಪದಾ ಗ್ರಾಮವಿಶೇಷಾ ಉತ್ತರಕುರು-ನಾಮಕಾ ಉತ್ತರಮದ್ರನಾಮಕಾಃ ಸಂತಿ ತತ್ರತ್ಯಾ ರಾಜಾನೋ ವಿರಾಡಿತಿಶಬ್ದೇನ ವ್ಯವಹ್ರಿ-ಯಂತೇ | ಮಧ್ಯಮಾ ದಿಙ್ಮಧ್ಯದೇಶಃ | ಸ ಪ್ರಾಚ್ಯಾದಿಭಿಃ ಸರ್ವಾಭಿರಪೇಕ್ಷಿತತ್ವೇನ ಧ್ರುವೋ ಭವತಿ | ತದಪೇಕ್ಷಯೈವ ಪೂರ್ವಾ ಪಶ್ಚಿಮೇತ್ಯಾದಿ ವ್ಯವಹಾರಃ | ಸ ಚ ದೇಶಃ ಸರ್ವೇಷಾಂ ವೈದಿಕಾನಾಮಾಶ್ರಯಃ | ತತ್ರ ಯೇ ವಶದೇಶೈರುಶೀನರದೇಶೈಶ್ಚ ಸಹಿತಾಃ ಕುರುಪಂಚಾಲದೇಶಾಃ ಸಂತಿ ತೇಷಾಂ ದೇಶಾನಾಂ ಯೇ ರಾಜಾನಸ್ತೇ ರಾಜೇತ್ಯನೇನ ಶಬ್ದೇನ ವ್ಯವಹ್ರಿಯಂತೇ | ಊರ್ಧ್ವಾಯಾಂ ದಿಶಿ ಸ್ವರ್ಗರೂಪಾಯಾಂ ಮನುಷ್ಯಸ್ಯ ಸಂಚಾರಾಭಾವಾತ್ತತ್ರ ರಾಜಾನೋ ನೋದಾಹೃತಾಃ | ಕಿಂತ್ವಿಂದ್ರಸ್ಯೈವಾಭಿಷೇಕ ಉಕ್ತಃ | ತಸ್ಯಾಂ ದಿಶ್ಯಭಿಷೇಕೇಣ ಸ ಇಂದ್ರಃ ಪರಮೇಷ್ಠೀ ಪರಮಪದೇಽವಸ್ಥಿತಃ ಪ್ರಾಜಾಪತ್ಯಃ ಪ್ರಜಾಪತಿಸಂಬಂಧ್ಯಭವತ್ ||

ಇತರ ದಿಕ್ಕುಗಳಲ್ಲಿ ಬೇರೆ ಬೇರೆ ದೇವತೆಗಳು ಇಂದ್ರನಿಗೆ ಮಾಡಿದ ಅಭಿಷೇಕ ಕ್ರಮವನ್ನು ನಿರೂಪಿಸುವರು. ಮೇಲೆ ಹೇಳಿದಂತೆ ವಸುಗಳು ಇಂದ್ರನಿಗೆ ಅಭಿಷೇಕ ಮಾಡಿದನಂತರ ಏಕಾದಶ ರುದ್ರರೆಂಬ ದೇವತೆಗಳು ದಕ್ಷಿಣ ದಿಕ್ಕಿನಲ್ಲಿ ಇಂದ್ರನಿಗೆ ಮೂವತ್ತೊಂದು ದಿನಗಳವರೆಗೆ ಮೇಲೆ ಹೇಳಿದ ಮೂರು ಋಕ್ಕುಗಳಿಂದಲೂ, ಯಜುರ್ಮಂತ್ರಗಳಿಂದಲೂ, ವ್ಯಾಹೃತಿಗಳಿಂದಲೂ ಇತರ ಮಂತ್ರಗಳಿಂದಲೂ, ಭೌಜ್ಯಾಯ ಎಂದರೆ ರಾಜಭೋಗಗಳನ್ನು ಅನುಭವಿಸುವುದಕ್ಕಾಗಿ ಅಭಿಷೇಕ ಮಾಡಿದರು. ಈ ಕ್ರಮವನ್ನನುಸರಿಸಿ ದಕ್ಷಿಣದೇಶದ ನಿವಾಸಿಗಳು ಈಗಲೂ ಹಾಗೆಯೇ ಮಾಡುವರು.

ಅನಂತರ ದ್ವಾದಶಾದಿತ್ಯರೆಂಬ ದೇವತೆಗಳು ಪಶ್ಚಿಮದಿಕ್ಕಿನಲ್ಲಿ ಮೂವತ್ತೊಂದು ದಿನಗಳವರೆಗೆ ಮೇಲೆ ಹೇಳಿದ ಮೂರು ಋಗ್ವೇದ ಮಂತ್ರಗಳಿಂದಲೂ, ಯಜುರ್ವೇದ ಮಂತ್ರಗಳಿಂದಲೂ, ವ್ಯಾಹೃತಿಗಳಿಂದಲೂ, ಇತರ ಮಂತ್ರಗಳಿಂದಲೂ

ಸ್ವತಂತ್ರವಾದ ರಾಜ್ಯಾಧಿಪತ್ಯಕ್ಕಾಗಿ ಇಂದ್ರನಿಗೆ ಅಭಿಷೇಕವನ್ನು ಮಾಡಿದರು. ಪಶ್ಚಿಮದೇಶವಾಸಿಗಳಾದ ನೀಚರು, ಅಪಾಚ್ಯರು ಎಂಬ ಜನಗಳು ತಮ್ಮ ರಾಜನಿಗೆ ಅಭಿಷೇಕಮಾಡುವಾಗ ಈ ಕ್ರಮವನ್ನೇ ಅನುಸರಿಸುವರು.

ಅನಂತರ ವಿಶ್ವೇದೇವತೆಗಳೆಂಬ ದೇವತೆಗಳು ಉತ್ತರದಿಕ್ಕಿನಲ್ಲಿ ಮೂವತ್ತೊಂದು ದಿನಗಳವರೆಗೂ ಮೇಲೆ ಹೇಳಿದ ಮೂರು ಋಗ್ವೇದಮಂತ್ರಗಳಿಂದಲೂ, ಯಜುರ್ಮಂತ್ರಗಳಿಂದಲೂ, ವ್ಯಾಹೃತಿಗಳಿಂದಲೂ, ಇತರ ಮಂತ್ರಗಳಿಂದಲೂ ಪ್ರಖ್ಯಾತವಾದ ರಾಜಪದವಿಗಾಗಿ ಇಂದ್ರನಿಗೆ ಪಟ್ಟಾಭಿಷೇಕವನ್ನು ಮಾಡಿದರು. ಇದನ್ನನುಸರಿಸಿ ಈಗಲೂ ಹಿಮಾಲಯ ಪರ್ವತದ ಉತ್ತರಭಾಗದಲ್ಲಿರುವ ಉತ್ತರ ಕುರು ಮತ್ತು ಉತ್ತರಮದ್ರ ಎಂಬ ದೇಶಗಳ ನಿವಾಸಿಗಳು ಈ ಕ್ರಮವನ್ನೇ ಅನುಸರಿಸಿ ತಮ್ಮ ದೇಶದ ರಾಜರಿಗೆ ಪಟ್ಟಾಭಿಷೇಕವನ್ನು ಮಾಡುವರು.

ಅನಂತರ ಸಾಧ್ಯರು ಆಪ್ತ್ಯರು ಎಂಬ ದೇವತೆಗಳು ಮಧ್ಯಪ್ರದೇಶದಲ್ಲಿ ಮೂವತ್ತೊಂದು ದಿನಗಳವರೆಗೆ ಮೇಲೆ ಹೇಳಿದ ಋಗ್ಯಜುರ್ಮಂತ್ರಗಳಿಂದ ಇಂದ್ರನು ರಾಜ್ಯದಲ್ಲಿ ಸ್ಥಿರವಾಗಿ ನೆಲೆಸುವುದಕ್ಕಾಗಿ ಇಂದ್ರನಿಗೆ ಪಟ್ಟಾಭಿಷೇಕವನ್ನು ಮಾಡಿದರು. ಇದನ್ನನುಸರಿಸಿ ಈ ದೇಶನಿವಾಸಿಗಳಾದ ಕುರುಪಾಂಚಾಲರೆಂಬ ಜನರೂ ವಶರೆಂಬುವರೂ, ಉಶೀನರೆಂಬ ಜನರೂ ಈಗಲೂ ತಮ್ಮ ರಾಜರಿಗೆ ಹೀಗೆಯೇ ಅಭಿಷೇಕಮಾಡುತ್ತಿರುವರು.

ಅನಂತರ ಮರುದ್ದೇವತೆಗಳೂ ಅಂಗಿರಸರೂ ಊರ್ಧ್ವ (ಮೇಲಿನ) ಪ್ರದೇಶದಲ್ಲಿ ಮೂವತ್ತೊಂದು ದಿನಗಳವರೆಗೂ ರಾಜನ ಅಭೀಷ್ಟಸಿದ್ಧಿಗಾಗಿ ಮತ್ತು ಮಹಾರಾಜಪದವಿಗಾಗಿ ಮೇಲೆ ಹೇಳಿದ ಋಗ್ಯಜುರ್ಮಂತ್ರಗಳಿಂದಲೂ ವ್ಯಾಹೃತಿ ಮೊದಲಾದ ಇತರ ಮಂತ್ರಗಳಿಂದಲೂ ಇಂದ್ರನಿಗೆ ಅಭಿಷೇಕವನ್ನು ಮಾಡಿದರು.

ಸ ಏತೇನ ಮಹಾಭಿಷೇಕೇಣಾಭಿಷಿಕ್ತ ಇಂದ್ರಃ ಸರ್ವಾ ಜಿತೀರಜಯತ್ಸರ್ವಾ-
ಲ್ಲೋಕಾನವಿಂದತ್ಸರ್ವೇಷಾಂ ದೇವಾನಾಂ ಶ್ರೈಷ್ಠ್ಯಮತಿಷ್ಠಾಂ
ಪರಮತಾಮಗಚ್ಛತ್ಸಾಮ್ರಾಜ್ಯಂ ಭೌಜ್ಯಂ ಸ್ವಾರಾಜ್ಯಂ ವೈರಾಜ್ಯಂ
ಪಾರಮೇಷ್ಠ್ಯಂ ರಾಜ್ಯಂ ಮಾಹಾರಾಜ್ಯಮಾಧಿಪತ್ಯಂ ಜಿತ್ವಾ-
ಸ್ಮಿಲ್ಲೋಕೇ ಸ್ವಯಂಭೂಃ ಸ್ವರಾಳಮೃತೋಽಮುಷ್ಮಿನ್ಸ್ವರ್ಗೇ
ಲೋಕೇ ಸರ್ವಾನ್ಕಾಮಾನಾಪ್ತ್ವಾಽಮೃತಃ ಸಮಭವತ್ಸಮಭವತ್ ||

ಕೃತಮಿಂದ್ರಾಭಿಷೇಕಂ ನಿಗಮಯತಿ—ಪೂರ್ವೋಕ್ತಾಭಿಷೇಕೇಣಾಭಿಷಿಕ್ತ ಇಂದ್ರೋ ಜಿತೀರ್ಜೇತವ್ಯಾಃ ಸರ್ವಾ ಯುದ್ಧಭೂಮೀರಜಯತ್ | ತೇನ ಜಯೇನ ಸರ್ವಾನ್ಲೋಕಾನ-ವಿಂದದಲಭತ | ದೇವಾನಾಂ ಮಧ್ಯೇ ಶ್ರೈಷ್ಠ್ಯಮತಿಶಯೇನ ಪ್ರಶಸ್ತತ್ವಮತಿಷ್ಠಾಂ ಸರ್ವಾನತಿ-ಕ್ರಮ್ಯಾವಸ್ಥಾನಂ ಪರಮತಾಮುತ್ಕೃಷ್ಟತ್ವಮಗಚ್ಛತ್ | ಜಾತಿತ ಉತ್ತಮತ್ವಂ ಶ್ರೈಷ್ಠ್ಯಮ್ | ಗುಣೈ-ರುತ್ತಮತ್ವಂ ಪರಮತ್ವಮ್ | ಸಾಮ್ರಾಜ್ಯಾದೀನಿ ಪದಾನ್ಯಸ್ಮಿನ್ಲೋಕೇ ಜಿತ್ವಾ ಪ್ರಾಪ್ಯ ಸ್ವಯಂಭೂಃ ಪ್ರಜಾಪತಿರೂಪಃ ಸ್ವರಾಟ್ಸ್ವತಂತ್ರರಾಜೋಽಮೃತ ಇತರಮನುಷ್ಯವದಲ್ಪಕಾಲೇ ಮರಣರಹಿತಃ ಸನ್ನಮುಷ್ಮಿನ್ಪರೋಕ್ಷೇ ಸ್ವರ್ಗೇ ಲೋಕೇ ಸರ್ವಾನ್ಕಾಮಾನ್ಭೋಗಾನ್ಪ್ರಾಪ್ಯಾಮೃತೋ ಮರಣರಹಿತೋ ಮುಕ್ತಃ ಸಮಭವತ್ | ಅಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ||

ಈ ವಿಧವಾದ ಅಭಿಷೇಕ ಕ್ರಮದಿಂದ ಇಂದ್ರನು ತನ್ನ ಸಮಸ್ತ ಅಭೀಷ್ಟಗಳನ್ನು ಪಡೆದನು. ಸಮಸ್ತ ಲೋಕಗಳನ್ನೂ ಜಯಿಸಿದನು. ಸಮಸ್ತ ದೇವತೆಗಳಿಗೂ ಅಧಿನಾಯಕನಾದನು ಮತ್ತು ಹಿಂದೆ ಹೇಳಿದಂತೆ ಸಾಮ್ರಾಜ್ಯ ಪದವಿಯನ್ನೂ, ರಾಜಭೋಗವನ್ನೂ ಸ್ವತಂತ್ರವಾದ ರಾಜ್ಯಾಡಳಿತವನ್ನೂ, ನಾನಾ ದೇಶಗಳ ಆಧಿಪತ್ಯವನ್ನೂ ಅತ್ಯುತ್ಕೃಷ್ಟವಾದ ಮಹಾಪದವಿಯನ್ನೂ ಪಡೆದು ಮಹಾರಾಜನೆನಿಸಿಕೊಂಡು ಪ್ರಸಿದ್ಧನಾಗಿ ಈ ಲೋಕ ಮತ್ತು ಸ್ವರ್ಗಲೋಕಗಳ ಪ್ರದೇಶಗಳನ್ನೆಲ್ಲಾ ಜಯಿಸಿ ಸಮಸ್ತ ದೇವಮಾನವರಿಗೂ ನಾಯಕನಾಗಿ ಸಮಸ್ತ ಲೋಕಗಳಿಗೂ ಅಧಿಪತಿಯಾದ ಸಮ್ರಾಟ್ ಎನಿಸಿಕೊಂಡು ಸ್ವತಂತ್ರವಾಗಿ ರಾಜ್ಯಾಧಿಪತ್ಯವನ್ನು ಮಾಡುತ್ತಾ ತನ್ನ ಇಷ್ಟಾರ್ಥಗಳನ್ನೆಲ್ಲಾ ಪಡೆದು ಕೊನೆಗೆ ಅಮೃತತ್ವವನ್ನು (ಮರಣರಾಹಿತ್ಯವನ್ನು)ಪಡೆದನು.

————

*English Translation*

**(Indra inaugurated by various deities in the various directions to the Kingship becomes Universal ruler.)**

The Vasavas then inahguarated him (Indra) in the eastern direction during thirty-one days by these three Rik verses, the Yajus verse, and the great words all just mentioned for the sake of obtaining universal sovereignty. Hence all kings of eastern nations in the eastern regions are inaugurated to univerasol sovereignty, and called samraj. i. e. universal sovereign, after this precedent made once by the gods.

Then the Rudras inaugrated Indra in the southern region during thirty-one days, with the three Rik verses, the Yajus and the great words just mentioned, for obtaining enjoyement of pleasures. Hence all kings of living creetures chiefly beasts in the southern region are inaugurated for the enjoyment of pleasures and called bhoja, i. e. enjoyer.

Then the divine Adityas inaugurated him in the western region during thirty-one days, with those three Rik verses, that Yajus verse, and those Sreat words, for obtaining independent rule. Hence all kings of the Nichyas and Apachayas in the western countries, are inaugurated to independent rule, and called "independent rulers."

Then the Visve Devah inaugurated him during thirty-one days in the northern region by those three Rik verses &c. for distinguished rule. Hence

all people living in northern countries beyond the Himalaya, such as the Uttarakurus, Uttaramadras, are inauguratee for living without a king (Vairajyam), and called Viraj, i. e. without king.

Then the divine Sadhyas and Aptyas inaugurated Indra during thirty-one days in the middle region, which is a firmly establised footing the immovable centre) to the kingship (rajya). Hence the kings of the kurupanchalas, with the Vasas andUsinaras, are inaugurated to kingship, and called kings (raja).

Then the divine Marutas and Angiras inaugurated him during thirty-one days in the upper (urdhva) region for attaining fulfilment of the highest wishes, the position of a great king, of a supreme ruler, of an independent king, and long duration of his rule.

Indra thus became by means of this great inauguration ceremony, possessed of the power of obtaining anything wished for, as had been only the prerogative of Prajapati. He conquered in all the various ways of possible conquest and won all people. He obtained the leadership, precedence, and supremaco over all gods. After having conquered the position of a samraj (universal) &c. he became in this world self existing (svayambhuvah) an independent ruler, immortal, and in the heaven-world; after hrving attained all desires wished for, he became immortal also.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಅಷ್ಟತ್ರಿಂಶಾಧ್ಯಾಯಸ್ಯ ತೃತೀಯಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವ್ನೈತರೇಯಬ್ರಾಹ್ಮಣಭಾಷ್ಯೇ ಅಷ್ಟತ್ರಿಂಶೋಧ್ಯಾಯಃ ಸಮಾಪ್ತಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೆಂಟನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು
ಸಮಾಪ್ತವಾದುದು

ಮೂವತ್ತ ಎಂಟನೆಯ ಅಧ್ಯಾಯವು ಸಮಾಪ್ತವಾದುದು



# ಅಥೈತರೇಯಬ್ರಾಹ್ಮಣೇ ಅಥೈಕೋನಚತ್ವಾರಿಂಶಾಧ್ಯಾಯೇ

## ಪ್ರಥಮಃ ಖಂಡಃ

**ಐತರೇಯಬ್ರಾಹ್ಮಣದ ಮೂವತ್ತೊಂಬತ್ತನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು**

———

[ಮಹಾಭಿಷೇಕ(ಪಟ್ಟಾಭಿಷೇಕ)ವನ್ನು ಮಾಡುವ ಕ್ರಮವು, ಪೂರ್ವದಲ್ಲಿ ಯಾವ ಯಾವ ಋಷಿಗಳು ಯಾವ ಯಾವ ರಾಜರಿಗೆ ಪಟ್ಟಾಭಿಷೇಕವನ್ನು ಮಾಡಿದರು]

———

[ಮಹಾಭಿಷೇಕದ ಫಲಗಳು. ಈ ಅಭಿಷೇಕವನ್ನು ನೆರವೇರಿಸುವಾಗ ರಾಜನಾದವನು ಪುರೋಹಿತರ ಮತ್ತು ಜನರ ಎದುರಿಗೆ ಮಾಡಬೇಕಾದ ಪ್ರತಿಜ್ಞೆ ಇತ್ಯಾದಿ]

———

ಸ ಯ ಇಚ್ಛೇದೇವಂವಿತ್ಕ್ಷತ್ರಿಯಮಯಂ ಸರ್ವಾ ಜಿತೀರ್ಜಯೇತಾಯಂ ಸರ್ವಾಂಲ್ಲೋಕಾನ್ವಿಂದೇತಾಯಂ ಸರ್ವೇಷಾಂ ರಾಜ್ಞಾಂ ಶ್ರೈಷ್ಠ್ಯಮತಿಷ್ಠಾಂ ಪರಮತಾಂ ಗಚ್ಛೇತ ಸಾಮ್ರಾಜ್ಯಂ ಭೌಜ್ಯಂ ಸ್ವಾರಾಜ್ಯಂ ವೈರಾಜ್ಯಂ ಪಾರಮೇಷ್ಠ್ಯಂ ರಾಜ್ಯಂ ಮಹಾರಾಜ್ಯಮಾಧಿಪತ್ಯಮಯಂ ಸಮಂತಪರ್ಯಾಯೀ ಸ್ಯಾತ್ಸಾರ್ವಭೌಮಃ ಸಾರ್ವಾಯುಷ ಆಂಽತಾದಾ ಪರಾರ್ಧಾತ್ಪೃಥಿವ್ಯೈ ಸಮುದ್ರಪರ್ಯಂತಾಯಾ ಏಕರಾಳಿತಿ ತಮೇತೇನೈಂದ್ರೇಣ ಮಹಾಭಿಷೇಕೇಣ ಕ್ಷತ್ರಿಯಂ ಶಾಪಯಿತ್ವಾ-ಭಿಷಿಂಚೇತ್ ||

ಪುರುಷಾರ್ಥಾಭಿಷೇಕಾನಾದಾವೈಂದ್ರಾಭಿಷೇಚನಮ್ ||
ಉಕ್ತಮತ್ರ ಪುನರ್ಥೋಽಯಮಭಿಷೇಕ ಉದೀರ್ಯತೇ ||೧||

ತಮಭಿಷೇಕಂ ವಿಧತ್ತೇ—ಏವಂ ವಿದಿಂದ್ರಸಂಬಂಧಿಮಹಾಭಿಷೇಕವಿದ್ಯ ಆಚಾರ್ಯಃ ಕ್ಷತ್ರಿಯಂ ಪ್ರತಿ ಸರ್ವಜಯಾದಿ ಫಲಮಿಚ್ಛೇತ್। ಸ ಆಚಾರ್ಯಃ ಕ್ಷತ್ರಿಯಮೇತಂ ಶಾಪಯಿತ್ವಾ ಶಪಥಂ ಕಾರಯಿತ್ವೈತೇನ ಪೂರ್ವೋಕ್ತೇನೇಂದ್ರಸಂಬಂಧಿನಾ ಮಹಾಭಿಷೇಕವಿಧಾನೇನ ತಂ ಕ್ಷತ್ರಿಯಮಭಿಷಿಂಚೇತ್। ಕೀದೃಶೀ ಫಲೇಚ್ಛೇತಿ ಸಾಽಭಿಧೀಯತೇ। ಅಯಂ ಕ್ಷತ್ರಿಯೋ ಜೇತವ್ಯಾಃ ಸರ್ವಾ ಯುದ್ಧಭೂಮೀರ್ಜಯೇತ್। ತಥಾ ಸರ್ವಾನ್ ಲೋಕಾನ್ದೇಶವಿಶೇಷಾನ್ ಲಭೇತ।

**ಸರ್ವೇಷಾಂ ರಾಜ್ಞಾಂ ಮಧ್ಯೇ ಶ್ರೈಷ್ಠ್ಯಾಧಿಪತ್ಯಾಂತಗುಣಯುಕ್ತೋ ಭವೇತ್। ಸಮಂತಪರ್ಯಾಯೀ ದೇಶತಃ ಕಾಲತಃ ಸರ್ವವ್ಯಾಪೀ ಸ್ಯಾತ್ । ಆಂತಾತ್ಸಮುದ್ರತೀರಪರ್ಯಂತಂ ಸಾರ್ವಭೌಮತ್ವಂ ದೇಶವ್ಯಾಪ್ತಿರಾ ಪರಾರ್ಧಾತ್ಪರಾರ್ಧಶಬ್ದಾಭಿಧೇಯಕಾಲಸಂಖ್ಯಾಪರ್ಯಂತಂ ಸರ್ವಾಯುಷತ್ವಂ ಕಾಲವ್ಯಾಪ್ತಿಃ। ಏವಂವಿಧೋ ಭೂತ್ವಾ ಸಮುದ್ರಪರ್ಯಂತಾಯಾ ಪೃಥಿವ್ಯಾ ಏಕಮೇವ ರಾಜಾಸ್ತ್ವಿ- ತ್ಯನಯೇಚ್ಛಯಾಚಾರ್ಯೋಮಹಾಭಿಷೇಕೇಣ ತಮಭಿಷಿಂಚೇತ್ ॥**

ಅಭಿಷೇಕಕ್ರಮವನ್ನು ತಿಳಿಸುವರು. ಮೇಲೆ ಹೇಳಿದ ಇಂದ್ರಸಂಬಂಧವಾದ ಮಹಾಭಿಷೇಕಕ್ರಮವನ್ನು ಚೆನ್ನಾಗಿ ತಿಳಿದಿರುವ ಆಚಾರ್ಯನು (ಪುರೋಹಿತನು) ತಾನು ಯಾವ ಕ್ಷತ್ರಿಯನಾದ ರಾಜನಿಗೆ ಅಭಿಷೇಕಮಾಡುವನೋ ಆ ರಾಜನಿಗೆ ಯುದ್ಧಾದಿಗಳಲ್ಲಿ ಜಯವು ಲಭಿಸಿ ರಾಜ್ಯಾಧಿಪತ್ಯವು ಲಭಿಸಬೇಕೆಂದು ಅಪೇಕ್ಷಿಸಬೇಕು ಎಂದರೆ ರಾಜನ ಹಿತವನ್ನೇ ಬಯಸ ಬೇಕು. ಮತ್ತು ಆ ಪುರೋಹಿತನು ಈ ರಾಜನಿಗೆ ಒಳ್ಳೆಯ ಹಿತಕಾರ್ಯವನ್ನೇ ಮಾಡುತ್ತೇನೆಂದು ಪ್ರತಿಜ್ಞೆಮಾಡಿ ಹಿಂದೆ ಹೇಳಿದ ಇಂದ್ರಸಂಬಂಧವಾದ ಮಹಾಭಿಷೇಕವಿಧಾನದಿಂದ ಕ್ಷತ್ರಿಯರಾಜನಿಗೆ ಅಭಿಷೇಕವನ್ನು ಮಾಡಬೇಕು. ಈ ಕ್ಷತ್ರಿಯ ನಾದ ರಾಜನು ಸಮಸ್ತಯುದ್ಧಗಳಲ್ಲಿಯೂ ಶತ್ರುಗಳನ್ನು ಸೋಲಿಸಿ ಜಯಶೀಲನಾಗಬೇಕು. ಸಮಸ್ತ ದೇಶಗಳನ್ನೂ ಗೆದ್ದು ಸ್ವಾಧೀನಪಡಿಸಿಕೊಳ್ಳಬೇಕು. ಇತರ ರಾಜರುಗಳಲ್ಲೆಲ್ಲಾ ಶ್ರೇಷ್ಠನೂ ಗುಣಯುಕ್ತನೂ ಆಗಬೇಕು. ಸಮುದ್ರದವರೆಗೆ ಇರುವ ದೇಶಗಳಿಗೆ ಬಹುಕಾಲದವರೆಗೆ ರಾಜನಾಗಿ ಬಾಳಬೇಕು. ಸಮುದ್ರ ತೀರದವರೆಗೂ ಇರುವ ಸಕಲ ದೇಶಗಳಿಗೂ ಸಾರ್ವಭೌಮನೆನಿಸಿರಬೇಕು. ಬಹುಕಾಲದವರೆಗೆ ರಾಜ್ಯವಾಳುತ್ತಾ ಬಾಳಿ ಬದುಕಿರಬೇಕು. ಈ ರೀತಿಯಾಗಿ ನ್ಯಾಯ ಪರಿಪಾಲನೆಯಿಂದಲೂ ಧರ್ಮದಿಂದಲೂ ಸಮುದ್ರದವರೆಗೂ ಇರುವ ದೇಶಗಳಿಗೆಲ್ಲಾ ಒಬ್ಬನೇ ಪ್ರಭುವಾಗಿ ರಾಜ್ಯವಾಳುತ್ತಿರ ಬೇಕು. ಈ ವಿಧವಾದ ಇಚ್ಛೆಯಿಂದ ಪುರೋಹಿತನು ರಾಜನ ಹಿತವನ್ನೇ ಬಯಸಿ ಅವನಿಗೆ ವಿಧ್ಯುಕ್ತಪ್ರಕಾರವಾಗಿ ಮಹಾಭಿಷೇಕವನ್ನು ಮಾಡಬೇಕು.

ಯಾಂ ಚ ರಾತ್ರೀಮಜಾಯೇಥಾ ಯಾಂ ಚ ಪ್ರೇತಾಸಿ ತದುಭಯಮಂತ- ರೇಣೇಷ್ಟಾಪೂರ್ತಂ ತೇ ಲೋಕಂ ಸುಕೃತಮಾಯುಃ ಪ್ರಜಾಂ ವೃಂಜೀಯಂ ಯದಿ ಮೇ ದ್ರುಹ್ಯೇರಿತಿ ॥

**ಶಾಪಯಿತ್ವೇತಿ ಯದುಕ್ತಂ ತಮೇವ ಶಪಥಪ್ರಕಾರಂ ದರ್ಶಯತಿ— ಅಭಿಷಿಚ್ಯಮಾನ ಹೇ ಕ್ಷತ್ರಿಯ ಯದ್ಯಾಚಾರ್ಯಾಯ ಮೇ ದ್ರುಹ್ಯೇದ್ರೋಹಂ ಕುರ್ಯಾಸ್ತದಾನೀಂ ತ್ವಂ ಯಾಂ ರಾತ್ರಿಮಜಾಯೇಥಾ ಯಸ್ಯಾಂ ರಾತ್ರಾವುತ್ಪನ್ನೋಽಸಿ ಯಾಂ ಚ ರಾತ್ರಿಂ ಪ್ರೇತಾಸಿ ಯಸ್ಯಾಂ ರಾತ್ರೌ ಮರಿಷ್ಯಸಿ ತದುಭಯಮಂತರೇಣೋತ್ಪತ್ತಿಮರಣದಿನಯೋರ್ದ್ವಯೋರ್ಮಧ್ಯೇ ತೇ ತವೇಷ್ಟಾ ಪೂರ್ತಂ ಶ್ರೌತಸ್ಮಾರ್ತಕರ್ಮದ್ವಯಂ ತಥಾ ಪುಣ್ಯಲೋಕಂ ತದ್ಧೇತುಭೂತಮನ್ಯದಪಿ ಸುಕೃತಂ ದೀರ್ಘಮಾಯುಃ ಪ್ರಜಾಂ ಪುತ್ರಾದಿಕಾಂ ವೃಂಜೀಯಂ ತ್ವತ್ತೋ ವರ್ಜಯೇಯಮಿತ್ಯೇತದಾ- ವಾಕ್ಯಮ್ । ತದೇತದಂಗೀಕಾರಯಿತ್ವಾ ಪಶ್ಚಾದಭಿಷಿಂಚೇತ್ ॥**

ಪುರೋಹಿತನು ರಾಜನ ಅಭಿಷೇಕಕಾಲದಲ್ಲಿ ರಾಜನಿಂದ ಪ್ರತಿಜ್ಞೆಮಾಡಿಸಬೇಕೆಂದು ಹಿಂದೆ ತಿಳಿಸಿದೆಯಷ್ಟೆ. ಅದರ ಪ್ರಕಾರವನ್ನು ತಿಳಿಸುವರು. ಆಚಾರ್ಯನು (ಪುರೋಹಿತನು) ರಾಜನಿಗೆ ಮಾಡಿಸುವ ಪ್ರತಿಜ್ಞೆಯು ನಾನು ಅಭಿಷೇಕಮಾಡ

ಬೇಕೆಂದಿರುವ ಆಚಾರ್ಯನಾದ ನಿನಗೆ ನಾನು ದ್ರೋಹವನ್ನು (ಕೇಡನ್ನು) ಬಯಸಿದ್ದೇ ಆದರೆ ಆಗ ನಾನು ಹುಟ್ಟಿದದಿನದಿಂದ ಮೃತನಾಗುವವರೆಗೂ ಮಧ್ಯಕಾಲದಲ್ಲಿ ನನ್ನ ಇಷ್ಟಾಪೂರ್ತಿಯನ್ನು ಶ್ರೌತಸ್ಮಾರ್ತಾದಿ ಕರ್ಮಗಳನ್ನೂ ಅವರಿಂದ ಲಭಿಸುವ ಪುಣ್ಯಲೋಕವನ್ನೂ, ಇತರ ಪುಣ್ಯಫಲಗಳನ್ನೂ ಬಹುಕಾಲದವರೆಗೆ ಜೀವಿಸಿರಬೇಕಾದ ನನ್ನ ಆಯುಸ್ಸನ್ನೂ, ಪುತ್ರಾದಿ ಸಂತಾನವನ್ನೂ ನಾನು ಪಡೆಯದಂತೆ ಆಗಲಿ ಎಂಬ ಪ್ರತಿಜ್ಞೆಯನ್ನು ರಾಜನಿಂದ ಹೇಳಿಸಿ ಅನಂತರ ಪುರೋಹಿತನು ಅಭಿಷೇಕ ಕ್ರಮವನ್ನು ನಿರ್ವಹಿಸಬೇಕು.

ಸ ಯ ಇಚ್ಛೇದೇವಂವಿತ್ಕ್ಷತ್ರಿಯೋಽಹಂ ಸರ್ವಾ ಜಿತೀರ್ಜಯೇಯ-
ಮಹಂ ಸರ್ವಾꣳಲ್ಲೋಕಾನ್ವಿಂದೇಯಮಹಂ ಸರ್ವೇಷಾಂ ರಾಜ್ಞಾಂ
ಶ್ರೈಷ್ಠ್ಯಮತಿಷ್ಠಾಂ ಪರಮತಾಂ ಗಚ್ಛೇಯಂ ಸಾಮ್ರಾಜ್ಯಂ ಭೌಜ್ಯಂ
ಸ್ವಾರಾಜ್ಯಂ ಪಾರಮೇಷ್ಠ್ಯಂ ರಾಜ್ಯಂ ಮಾಹಾರಾಜ್ಯಮಾಧಿಪತ್ಯ-
ಮಹಂ ಸಮಂತಪರ್ಯಾಯೀ ಸ್ಯಾಂ ಸಾರ್ವಭೌಮಃ ಸಾರ್ವಾ-
ಯುಷ ಆಂತಾದಾ ಪರಾರ್ಧಾತ್ಪೃಥಿವ್ಯೈ ಸಮುದ್ರಪರ್ಯಂ-
ತಾಯಾ ಏಕರಾಳಿತಿ ಸ ನ ವಿಚಿಕಿತ್ಸೇತ್ಸ ಬ್ರೂಯಾತ್ಸಹ
ಶ್ರದ್ಧಯಾ ಯಾಂ ಚ ರಾತ್ರಿಮಜಾಯೇಽಹಂ ಯಾಂ ಚ ಪ್ರೇತಾಸ್ಮಿ
ತದುಭಯಮಂತರೇಣೇಷ್ಟಾಪೂರ್ತಂ ಮೇ ಲೋಕಂ ಸುಕೃತ-
ಮಾಯುಃ ಪ್ರಜಾಂ ವೃಂಜೀಥಾ ಯದಿ ತೇ ದ್ರುಹ್ಯೇಯಮಿತಿ ||

ಆಚಾರ್ಯಃ ಕ್ಷತ್ರಿಯಾರ್ಥಂ ಯಾದೃಶೀಂ ಫಲಸಂಪದಂ ಕಾಮಯಿತ್ವಾ ಶಪಥಂ ಕಾರಯತಿ ಕ್ಷತ್ರಿಯೋಽಪಿ ತಾದೃಶೀಂ ಫಲಸಂಪದಂ ಕಾಮಯಮಾನಃ ಶಪಥಂ ಕುರ್ಯಾತ್। ತದೇತ್ಕ್ಷತ್ರಿಯ ವಾಕ್ಯಂ ದರ್ಶಯತಿ–ಯಃ ಕ್ಷತ್ರಿಯಃ ಏವಂ ವಿನ್ಮಹಾಭಿಷೇಕಮಾಹಾತ್ಮ್ಯಾಭಿಜ್ಞಃ ಸರ್ವಜಯಾದಿಕಂ ಸಮುದ್ರಪರ್ಯಂತಂ ಪೃಥಿವ್ಯಾಮೇಕರಾಜತ್ವಪರ್ಯಂತಂ ಫಲಜಾತಮಿಚ್ಛೇತ್। ಪೂರ್ವತ್ರಾಚಾರ್ಯ-ವಾಕ್ಯತ್ವಾಜ್ಜಯೇತ ವಿಂದೇತೇತ್ಯಾದಿಪ್ರಥಮಪುರುಷಪ್ರಯೋಗಃ। ಅತ್ರ ತು ಕ್ಷತ್ರಿಯವಾಕ್ಯ-ತ್ವಾಜ್ಜಯೇಯಮಿತ್ಯಾದ್ಯುತ್ತಮಪುರುಷಪ್ರಯೋಗಃ। ಸ ಕ್ಷತ್ರಿಯಃ ಫಲಕಾಮೀ ನ ವಿಚಿಕಿತ್ಸೇತ್। ಆಚಾರ್ಯೋಕ್ತೇಽರ್ಥೇ ಸಂಶಯಂ ನ ಕುರ್ಯಾತ್। ಸ ಕ್ಷತ್ರಿಯ ಆಚಾರ್ಯಸ್ಯಾಭೀಷ್ಟಂ ಶಪಥಮೇವಂ ಕುರ್ಯಾತ್। ಹೇ ಆಚಾರ್ಯಾಹಂ ಯದಿ ತೇ ದ್ರುಹ್ಯೇಯಂ ತದಾನೀಂ ತ್ವಂ ಮಮ ಜನ್ಮಮರಣ-ಮಧ್ಯವರ್ತೀಷ್ಟಾಪೂರ್ತಾದಿಕಂ ಸರ್ವಂ ವೃಂಜೀಥಾ ನಾಶಯೇರಿತಿ ಶ್ರದ್ಧಯಾ ಸಹಿತಂ ಶಪಥಂ ಬ್ರೂಯಾತ್ ||

ರಾಜನೂ ಸಹ ಆಚಾರ್ಯನು ಹೇಳಿಸಿದಂತೆ ಪ್ರತಿಜ್ಞಾವಾಕ್ಯವನ್ನು ತನ್ನ ಸ್ವಂತ ಇಚ್ಛೆಯಿಂದ ಹೇಳುವನು (ರಾಜನವಾಕ್ಯವು)–ರಾಜನಾದ ನಾನು ಸಮಸ್ತ ಲೋಕಗಳನ್ನೂ ಜಯಿಸಿ ಸರ್ವರಿಗೂ ಅಧಿಪತಿಯಾಗಿ ಬಾಳಬೇಕು ಎಲ್ಲರಿಗಿಂತಲೂ ಶ್ರೇಷ್ಠನಾಗಿ ಸಾಮ್ರಾಜ್ಯ, ಭೌಜ್ಯ ಸ್ವಾರಾಜ್ಯ ವೈರಾಜ್ಯ ಪಾರಮೇಷ್ಠ್ಯವೆಂಬ ಪದವಿ ಮಾಹಾ-

ರಾಜ್ಯಮಾಧಿಪತ್ಯ ಮುಂತಾದ ಮಹತ್ಪದವಿಗಳನ್ನು ಪಡೆದು ಸಮುದ್ರಪರ್ಯಂತ ಇರುವ ದೇಶಗಳಿಗೆಲ್ಲಾ ಅಧಿಪತಿಯಾಗಿ ಸಾರ್ವಭೌಮನೆನಿಸಿಕೊಂಡು ಬಹುಕಾಲದವರೆಗೆ ಏಕೈಕಪ್ರಭುವಾಗಿ ರಾಜ್ಯಭಾರಮಾಡಬೇಕು. ಇದೇ ನನ್ನ ಬಯಕೆಯು. ನನ್ನ ಬಯಕೆಯು ಈಡೇರುವುದರಲ್ಲಿ ನನಗೆ ಯಾವ ಸಂಶಯವೂ ಇಲ್ಲ. ಒಂದುವೇಳೆ ನಾನು ಆಚಾರ್ಯನಾದ ನಿನಗೆ ದ್ರೋಹವನ್ನು(ಕೇಡನ್ನು)ಬಯಸಿದ್ದೇ ಆದರೆ ಆಗ ನಾನು ಈ ಭೂಮಿಯಲ್ಲಿ ಜನಿಸಿದ ದಿನದಿಂದ ಮೃತನಾಗುವ ದಿನಪರ್ಯಂತರ ಮಧ್ಯಕಾಲದಲ್ಲಿ ನನಗೆ ಲಭಿಸಿದ ಇಷ್ಟಾರ್ಥಸಿದ್ಧಿಗಳೂ ಉತ್ತಮಲೋಕವು (ರಾಜ್ಯವು) ಪುಣ್ಯಕಾರ್ಯಗಳು, ದೀರ್ಘಾಯುಸ್ಸು, ಪುತ್ರಾದಿಸಂತಾನವು ಇವುಗಳೆಲ್ಲವನ್ನೂ ಆಚಾರ್ಯನಾದ ನೀನು ನನ್ನಿಂದ ಕಸಿದುಕೊಳ್ಳುವಂತಾಗಲಿ ಇವೆಲ್ಲವೂ ನಾಶವಾಗಲಿ ಎಂದು ರಾಜನು ಪುರೋಹಿತನಿಗೆ ಪ್ರತಿಜ್ಞಾಪೂರ್ವಕವಾಗಿ ವಾಗ್ದಾನ ಮಾಡುವನು.

---

*English Translation*

**(The Mahabhisheka ceremony performed on a king. What Rishis performed it, and for what kings they performed it.)**

**(The consequences of the Mahabhisheka. The oath which the King must take before the priest performs the ceremony.)**

The priest, who, with this knowledge about the Mahabhisheka ceremony wishes that a Kshrttriya should conquer in all the various ways of conquest, to subjughte all people, and that he should attain to leader-ship, precedence, and snpremacy over all kings, and attain eyerywhere, and at all times to universal sovereignty, enjoyment of pleasures, indepen-dence, distinguished distinction as king, of a great king, and supreme master-ship, that he might cross with his arms the universe, and become the ruler of the whole earth during all his life, which may last for an infinitely long time that he might be the sole king of the earth up to its shores bordering on the ocean; such a priest should inaugurate the Kshattriya with Indra's great inauguration ceremony. But before doing so, the priest must make the king take the following oath: "Whatever pious works thou mighest have done during the time which may elapse from the day of thy birth to the day of thy death, all these together with thy position, thy good deeds, thy life, thy children, I would wrest from thee, shouldest thou do me any harm."

The Kshattriya then who wishes to attain to all this, should well consider and say in good faith all that is above mentioned thou mayest wrest from me, &c. &c.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ಏಕೋನಚತ್ವಾರಿಂಶಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೊಂಭತ್ತನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವಾದುದು.

## ಅಥೈಕೋನಚತ್ವಾರಿಂಶಾಧ್ಯಾಯೇ ದ್ವಿತೀಯಃ ಖಂಡಃ

### ಮೂವತ್ತೊಂಭತ್ತನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

[ರಾಜನ ಮಹಾಭಿಷೇಕಕ್ಕಾಗಿ (ಪಟ್ಟಾಭಿಷೇಕಕ್ಕಾಗಿ) ಸಿದ್ಧಪಡಿಸಬೇಕಾದ ಸಂಭಾರಾದಿಗಳು. ನಾನಾವಿಧ ವೃಕ್ಷಗಳ ಶಾಖೆಗಳು ಮತ್ತು ಧಾನ್ಯಗಳು]

ಅಥ ತತೋ ಬ್ರೂಯಾಚ್ಚತುಷ್ಟಯಾನಿ ವಾನಸ್ಪತ್ಯಾನಿ ಸಂಭರತ ನೈಯ-
ಗ್ರೋಧಾನ್ಯೌದುಂಬರಾಣ್ಯಾಶ್ವತ್ಥಾನಿ ಪ್ಲಾಕ್ಷಾಣೀತಿ ||

ಸಂಭಾರಾನ್ವಿಧತ್ತೇ—ಅಥ ಕ್ಷತ್ರಿಯಶಪಥಾನಂತರಂ ಯತ್ರ ಆಚಾರ್ಯೇಣಾಭಿಷೇಕಃ ಕರ್ತವ್ಯಸ್ತತಃ ಕಾರಣಾದಾಚಾರ್ಯಃ ಪರಿಚಾರಕಾನ್ ಬ್ರೂಯಾತ್ । ವನಸ್ಪತಿಸಂಬಂಧೀನಿ ಫಲಾನಿ ಚತುರ್ವಿಧಾನಿ ಹೇ ಪರಿಚಾರಕಾಃ ಸಂಪಾದಯತೇತಿ ||

ಅಭಿಷೇಕಕ್ಕಾಗಿ ಸಿದ್ಧಪಡಿಸಬೇಕಾದ ಸಂಭಾರಗಳು—ಮೇಲೆ ಹೇಳಿದಂತೆ ಕ್ಷತ್ರಿಯನು ಪ್ರತಿಜ್ಞೆ (ಶಪಥ) ಮಾಡಿದ ಮೇಲೆ ಆಚಾರ್ಯನು (ಪುರೋಹಿತನು) ರಾಜನ ಅಭಿಷೇಕಕ್ಕಾಗಿ ಬೇಕಾದ ಸಲಕರಣೆಗಳನ್ನು ಸಿದ್ಧಪಡಿಸಿಕೊಳ್ಳಬೇಕು. ಇದಕ್ಕಾಗಿ ಆಚಾರ್ಯನು ತನ್ನ ಬಳಿಯಿರುವ ಪರಿಚಾರಕರನ್ನು ನಿಯಮಿಸಬೇಕು. ಅವರು ಹೊರಟು ವನಸ್ಪತಿ ಸಂಬಂಧವಾದ ನ್ಯಗ್ರೋಧ (ಆಲ) ಮೊದಲಾದ ನಾಲ್ಕುವಿಧ ಫಲಗಳನ್ನು ಸಂಗ್ರಹಿಸಿ ತರುವರು.

ಕ್ಷತ್ರಂ ವಾ ಏತದ್ವನಸ್ಪತೀನಾಂ ಯನ್ನೈಯಗ್ರೋಧಾನಿ ಸಂಭರಂತಿ ಕ್ಷತ್ರ-
ಮೇವಾಸ್ಮಿಂಸ್ತದ್ದಧಾತಿ ಭೌಜ್ಯಂ ವಾ ಏತದ್ವನಸ್ಪತೀನಾಂ ಯದು-

**ದುಂಬರೋ ಯದೌದುಂಬರಾಣಿ ಸಂಭರತಿ ಭೌಜ್ಯಮೇವಾಸ್ಮಿಂಸ್ತ-ದ್ದಧಾತಿ ಸಾಮ್ರಾಜ್ಯಂ ವಾ ಏತದ್ವನಸ್ಪತೀನಾಂ ಯದಶ್ವತ್ಥೋ ಯದಶ್ವತ್ಥಾನಿ ಸಂಭರಂತಿ ಸಾಮ್ರಾಜ್ಯಮೇವಾಸ್ಮಿಂಸ್ತದ್ದಧಾತಿ ಸ್ವಾರಾಜ್ಯಂ ಚ ಹ ವಾ ಏತದ್ವೈರಾಜ್ಯಂ ಚ ವನಸ್ಪತೀನಾಂ ಯತ್ಪ್ಲಕ್ಷೋ ಯತ್ಪ್ಲಾಕ್ಷಾಣಿ ಸಂಭರಂತಿ ಸ್ವಾರಾಜ್ಯವೈರಾಜ್ಯೇ ಏವಾಸ್ಮಿಂಸ್ತದ್ದಧಾತಿ ||**

**ತತ್ರ ವೃಕ್ಷಚತುಷ್ಟಯಂ ಕ್ರಮೇಣ ಪ್ರಶಂಸತಿ—ನ್ಯಗ್ರೋಧಸ್ಯ ವನಸ್ಪತೀನಾಂ ಮಧ್ಯೇ ರಾಜವದ್ವ್ಯಾಪ್ತ್ಯಾಧಿಕ್ಯಾತ್ ಕ್ಷತ್ರತ್ವಮ್ । ಉದುಂಬರಾದೀನಾಂ ಭೌಜ್ಯಾದಿಸಾಧನತ್ವಾತ್ತದ್ರೂಪ-ತ್ವಮ್ । ಅತಶ್ಚತುರ್ವಿಧಫಲಸಂಪಾದನೇನ ಯಜಮಾನೇಕ್ಷಾತ್ರಭೌಜ್ಯಾದಿಫಲಾನಿ ಸಂಪಾದಯತಿ ||**

ಸಂಭಾರಗಳಿಗೆ ಬೇಕಾದ ನಾಲ್ಕುವಿಧ ವೃಕ್ಷಗಳನ್ನು ಪ್ರಶಂಸೆ ಮಾಡುವರು. ವನಸ್ಪತಿ ಅಥವಾ ವೃಕ್ಷಗಳ ಮಧ್ಯದಲ್ಲಿ ನ್ಯಗ್ರೋಧವೃಕ್ಷವು ರಾಜನಂತೆ ಸರ್ವವ್ಯಾಪಿಯಾದುದರಿಂದ ಇದು ಕ್ಷತ್ರಿಯ (ರಾಜನ) ಜಾತಿಗೆ ಸೇರಿದ ವೃಕ್ಷವಾಗಿದೆ. ಈ ನ್ಯಗ್ರೋಧವು ಅಭಿಷೇಕಕ್ಕೆ ಬೇಕಾದ ಸಂಭಾರಗಳನ್ನು ಒದಗಿಸಿ ರಾಜನಲ್ಲಿ ಕ್ಷತ್ರಿಯ ಭಾವವನ್ನು ಉಂಟುಮಾಡುವುದು ಮತ್ತು ಭೋಗಾದಿಗಳನ್ನು ಅನುಭವಿಸುವಂತೆ ಮಾಡುವ ಸಾಮರ್ಥ್ಯವು (ಭೌಜ್ಯವು) ಉದುಂಬರವೃಕ್ಷದಲ್ಲಿರುವುದು. ಈ ವೃಕ್ಷವು ಅಭಿಷೇಕ ಸಾಮಗ್ರಿಗಳನ್ನು ಒದಗಿಸುವುದಲ್ಲದೆ ಕ್ಷತ್ರಿಯನಲ್ಲಿ ಭೋಗಾದಿಗಳನ್ನು ಅನುಭವಿಸುವ ಸಾಮರ್ಥ್ಯವನ್ನುಂಟು ಮಾಡುವುದು. ವನಸ್ಪತಿ ಅಥವಾ ವೃಕ್ಷಗಳ ಮಧ್ಯದಲ್ಲಿ ಅಶ್ವತ್ಥವೃಕ್ಷವು ಅಭಿಷೇಕ ಸಾಧನಗಳನ್ನು ಒದಗಿಸುವುದಲ್ಲದೆ ರಾಜನು ಸಾಮ್ರಾಜ್ಯ ಪದವಿಯನ್ನನುಭವಿಸುವಂತೆ ಮಾಡುವುದು. ಪ್ಲಕ್ಷವೆಂಬ ವೃಕ್ಷವು ಅಭಿಷೇಕಸಂಭಾರಗಳನ್ನು ಒದಗಿಸಿ ಕ್ಷತ್ರಿಯನ ಸ್ವತಂತ್ರವಾಗಿ ಯಾರ ಅಧೀನಕ್ಕೂ ಒಳಗಾಗದೆ ಸಮಸ್ತರಾಜ ಪದವಿಗಳನ್ನೂ ಅನುಭವಿಸುವಂತೆ ಮಾಡುವುದು. ಮೇಲೆ ಹೇಳಿದ ನ್ಯಗ್ರೋಧ, ಉದುಂಬರ, ಅಶ್ವತ್ಥ, ಪ್ಲಾಕ್ಷ ಎಂಬ ನಾಲ್ಕು ವೃಕ್ಷಗಳ ಫಲಗಳನ್ನು ಸಂಗ್ರಹಿಸಿ ಇಟ್ಟುಕೊಳ್ಳಬೇಕು.

**ಅಥ ತತೋ ಬ್ರೂಯಾಚ್ಚತುಷ್ಟಯಾನ್ಯೌಷಧಾನಿ ಸಂಭರತ ತೋಕ್ಮ-ಕೃತಾನಿ ವ್ರೀಹೀಣಾಂ ಮಹಾವ್ರೀಹೀಣಾಂ ಪ್ರಿಯಂಗೂನಾಂ ಯವಾನಾಮಿತಿ ||**

**ಸಂಭಾರಾಂತರಾಣಿ ವಿಧತ್ತೇ—ಅಥ ನ್ಯಗ್ರೋಧಾದಿಫಲಸಂಪಾದನಾನಂತರಂ ಯತೋ ವ್ರೀಹ್ಯಾದ್ಯಂಕುರಸಂಪಾದನಮಪೇಕ್ಷಿತಂ ತತ ಆಚಾರ್ಯ ಏವಂ ಬ್ರೂಯಾತ್ । ಹೇ ಪರಿಚಾರಕಾ-ಸ್ತೋಕ್ಮಕೃತಾನ್ಯಂಕುರನಿಮಿತ್ತಾನ್ಯೋಷಧಿದ್ರವಾಣಿ ಚತುರ್ವಿಧಾನಿ ಸಂಪಾದಯತ । ಸೂಕ್ಷ್ಮ-ಬೀಜರೂಪಾ ವ್ರೀಹಯಃ । ಪ್ರೌಢಬೀಜರೂಪಾ ಮಹಾವ್ರೀಹಯಃ । ಪ್ರಿಯಂಗವೋ ಯವಾಶ್ಚ ಪ್ರಸಿದ್ಧಾಃ ||**

ಇತರವಿಧ ಸಂಭಾರಗಳನ್ನು ತಿಳಿಸುವರು. ನ್ಯಗ್ರೋಧಾದಿ ಫಲಗಳನ್ನು ಸಂಗ್ರಹಿಸಿದನಂತರ ಕೆಲವು ಓಷಧಿ(ಸಸ್ಯ) ಗಳನ್ನು ಸಂಗ್ರಹಿಸಬೇಕು. ಅವು ಯಾವವೆಂದರೆ, ವ್ರೀಹಿಯಚಿಗುರು, ಮಹಾವ್ರೀಹಿ (ವ್ರೀಹಿಯ ಚಿಗುರು ಎಂದರೆ ಭತ್ತದ

ಸಣ್ಣ ಸಸಿಗಳು) ಎಂದರೆ ಭತ್ತದ ಸಸಿಯು, ಪ್ರಿಯಂಗು ಮತ್ತು ಯವಧಾನ್ಯದ ಸಸಿಯು. ಈ ನಾಲ್ಕು ಸಸ್ಯಗಳನ್ನು ಸಂಗ್ರಹಿಸಬೇಕು.

ಕ್ಷತ್ರಂ ವಾ ಏತದೋಷಧೀನಾಂ ಯದ್ವ್ರೀಹಯೋ ಯದ್ವ್ರೀಹೀಣಾಂ ತೋಕ್ಮ ಸಂಭರಂತಿ ಕ್ಷತ್ರಮೇವಾಸ್ಮಿಂಸ್ತದ್ದಧಾತಿ ಸಾಮ್ರಾಜ್ಯಂ ವಾ ಏತದೋಷಧೀನಾಂ ಯನ್ಮಹಾವ್ರೀಹಯೋ ಯನ್ಮಹಾವ್ರೀಹೀಣಾಂ ತೋಕ್ಮ ಸಂಭರಂತಿ ಸಾಮ್ರಾಜ್ಯಮೇವಾಸ್ಮಿಂಸ್ತದ್ದದಾತಿ ಭೌಜ್ಯಂ ವಾ ಏತದೋಷಧೀನಾಂ ಯತ್ಪ್ರಿಯಂಗವೋ ಯತ್ಪ್ರಿಯಂಗೂನಾಂ ತೋಕ್ಮ ಸಂಭರಂತಿ ಭೌಜ್ಯಮೇವಾಸ್ಮಿಂಸದ್ದಧಾತಿ ಸೈನಾನ್ಯಂ ವಾ ಏತದೋಷಧೀನಾಂ ಯದ್ಯವಾ ಯದ್ಯವಾನಾಂ ತೋಕ್ಮ ಸಂಭರಂತಿ ಸೈನಾನ್ಯಮೇವಾಸ್ಮಿಂಸ್ತದ್ದಧಾತಿ ॥

ಚತುರ್ವಿಧಮೋಷಧಿದ್ರವ್ಯಂ ಪ್ರಶಂಸತಿ—ಓಷಧೀನಾಂ ಮಧ್ಯೇ ವ್ರೀಹೀಣಾಂ ಬಲಹೇತುತ್ವಾತ್ ಕ್ಷತ್ರತ್ವಮ್ । ಮಹಾವ್ರೀಹ್ಯಾದೀನಾಮುಪ್ಯನುಷ್ಠಾನದ್ವಾರಾ ಸಾಮ್ರಾಜ್ಯಹೇತುತ್ವಾದ್ರೂಪತ್ವಮ್ । ಅತೋ ವ್ರೀಹ್ಯಾದಿತೋಕ್ಮನಾಮಂಕುರಾಣಾಂ ಸಂಪಾದನೇನ ಯಜಮಾನೇ ಕ್ಷತ್ರ-ಸಾಮ್ರಾಜ್ಯಾದಿಕಂ ಸರ್ವಂ ಸಂಪಾದಯತಿ ॥

ಮೇಲೆ ಹೇಳಿದ ನಾಲ್ಕುವಿಧ ಓಷಧಿದ್ರವ್ಯಗಳನ್ನು ಪ್ರಶಂಸೆಮಾಡುವನು—ಸಸ್ಯಾದಿಗಳಲ್ಲಿ ವ್ರೀಹಿಯು (ಭತ್ತದ ಸಸಿಯು) ಕ್ಷತ್ರಿಯನಲ್ಲಿ ಕ್ಷತ್ರ ಅಥವಾ ರಾಜತ್ವವನ್ನು ಉಂಟುಮಾಡುವುದು. ಮಹಾ ವ್ರೀಹಿಯು (ತೆನೆಯಿಂದ ಸಹಿತವಾದ ಭತ್ತವು) ಕ್ಷತ್ರಿಯನಲ್ಲಿ ಸಾಮ್ರಾಜ್ಯತ್ವವನ್ನು ಸ್ಥಾಪಿಸುವುದು. ಪ್ರಿಯಂಗುವೆಂಬ ಸಸ್ಯವು ಕ್ಷತ್ರಿಯನಲ್ಲಿ (ರಾಜ) ಭೋಗಾದಿಗಳನ್ನು ಅನುಭವಿಸುವ ಸಾಮರ್ಥ್ಯವನ್ನುಂಟುಮಾಡುವುದು. ಯವಧಾನ್ಯದ ಸಸಿಯು ಕ್ಷತ್ರಿಯನಾದ ರಾಜನಲ್ಲಿ ಸೈನ್ಯವನ್ನು ಹತೋಟಿಯಲ್ಲಿಟ್ಟುಕೊಂಡು ನಿರ್ವಹಿಸುವ ಶಕ್ತಿಯನ್ನುಂಟುಮಾಡುವುದು. ಆದ್ದರಿಂದ ಈ ನಾಲ್ಕು ಓಷಧಿದ್ರವ್ಯಗಳನ್ನು ಅವಶ್ಯವಾಗಿ ಸಂಗ್ರಹಿಸಬೇಕು.

---

*English Translation*

**(The words and grains required for performance of Mahabhisheka)**

The priest then shall say to his atteudants, "Bring four kinds of wood Nyagrodha, Udumbara, Asvattha, and Plaksha." Amoung the trees the Nyagrodha is the Kshattra. Thus by bringing Nyagrodha wood he places in the king the Kshattram. The Udumbara representing the enjoyment,

the Asvattha universal sovereignty, the Plaksha independence and freedom of the rule of another king; the priest by having these woods brought to the spot, thus makes the king participate in all these qualities (universal sovereignty &c. &c.) Next he shall order to bring four kinds of grain from vegetables (aushadha tokmakrita), viz., rice with small grains, rice with large grains, Priyangu, and barley. For amongst herbs rice with small grains represents the Kshattra. Thus by bringing sporuts of such grains, he places the Kshattra in him. Rice with large grains represents universal sovereignty Therefore by bringing sprouts of such grains to the spot, he places universal sovereignty in him. The Priyangus among herbs, represent enjoyment of pleasures. By bringing theiy sprouts, he places the enjoyment of pleasures in him. Barley represents the skill as military commander. By bringing their sprouts he places such a skill in him (the king).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯ ಏಕೋನಚತ್ವಾರಿಂಶಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯ ಬ್ರಾಹ್ಮಣದ ಮೂವತ್ತೊಂಬತ್ತನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು
ಸಮಾಪ್ತವಾದುದು



## ಅಥೈಕೋನ ಚತ್ವಾರಿಂಶಾಧ್ಯಾಯೇ ತೃತೀಯಃ ಖಂಡಃ

### ಮೂವತ್ತೊಂಭತ್ತನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ ಮಹಾಭಿಷೇಕ ಮಾಡುವುದಕ್ಕಾಗಿ ಬೇಕಾಗುವ ಇತರ ಸಲಕರಣೆಗಳು ]



ಅಥಾಸ್ಮಾ ಔದುಂಬರೀಮಾಸಂದೀಂ ಸಂಭರಂತಿ ತಸ್ಯಾ ಉಕ್ತಂ ಬ್ರಾಹ್ಮಣಮೌದುಂಬರಶ್ಚಮಸೋ ವಾ ಪಾತ್ರೀ ವೋದುಂಬರಶಾಖಾ ತಾನೇತಾನ್ಸಂಭಾರಾನ್ಸಂಭೃತ್ಯೌದುಂಬರ್ಯಾಂ ಪಾತ್ರ್ಯಾಂ ವಾ

ಚಮಸೇ ವಾ ಸಮಾವಪೇಯುಸ್ತೇಷು ಸಮೋಪ್ತೇಷು ದಧಿ ಮಧು ಸರ್ಪಿರಾತಪವರ್ಷ್ಯಾ ಆಪೋಽಭ್ಯಾನೀಯ ಪ್ರತಿಷ್ಠಾಪ್ಯೈತಾಮಾಸಂದೀಮಭಿಮಂತ್ರಯೇತ ||

ಆಸಂದ್ಯಾದಿಸಂಭಾರಾನ್ವಿಧತ್ತೇ—ಅಥ ವಾನಸ್ಪತ್ಯೌಷಧಿಸಂಭಾರಾನಂತರಮಸ್ಮೈ ಕ್ಷತ್ರಿಯಾಯೌದುಂಬರೀಮಾಸಂದೀಂ ಸಂಪಾದಯೇಯುಃ। ತಸ್ಯಾಶ್ಚಾಸಂದ್ಯಾ ವಿಧಾಯಕಂ ಬ್ರಾಹ್ಮಣಂ ಪ್ರಾದೇಶಮಾತ್ರಾಃ ಪಾದಾ ಇತ್ಯಾದಿನಾ ಪೂರ್ವಮೇವೋಕ್ತಮ್। ಚತುಷ್ಕೋಣೋ ದಂಡಯುಕ್ತಃ ಪಾತ್ರವಿಶೇಷಶ್ಚಮಸಃ। ಆಕಾರನಿಯಮರಹಿತಾ ಪಾತ್ರೀ। ತಯೋರನ್ಯತರದೌದುಂಬರಂ ಸಂಪಾದಯೇತ್। ಯದ್ವಾ। ಪಾತ್ರೀ ಮೃನ್ಮಯೀ ಶಾಖಾ ಚೌದುಂಬರೀ ಸಂಪಾದನೀಯಾ। ತತಃ ಪಾತ್ರೀಚಮಸಯೋರನ್ಯತರಸ್ಮಿನ್ವಾನಸ್ಪತ್ಯೌಷಧಿಸಂಭಾರಾನ್ಸಮಾವಪೇಯುಃ। ಸಮೋಪ್ತೇಷು ತೇಷು ಸಂಭಾರೇ ದಧ್ಯಾದೀನಾಂ ಸೇಚನಂ ಕೃತ್ವಾ ಚಮಸಂ ಭೂಮೌ ಪ್ರತಿಷ್ಠಾಪ್ಯೈತಾಮಾಸಂದೀಂ ವಕ್ಷ್ಯಮಾಣಮಂತ್ರೇಣಾಭಿಮಂತ್ರಯೇತ್ ||

ಆಸಂದಿ(ಪೀಠ)ಮೊದಲಾದ ಸಲಕರಣೆಗಳನ್ನು ವಿವರಿಸುವರು–ಈಗ ವನಸ್ಪತಿ ಸಂಬಂಧವಾದ ಔಷಧಿಸಂಭಾರ ವಿವರಿಸಿದನಂತರ ಕ್ಷತ್ರಿಯನಾದ ರಾಜನಿಗೆ ಉದುಂಬರ ಮರದಿಂದ ಆಸಂದಿಯನ್ನು(ಪೀಠವನ್ನು) ನಿರ್ಮಿಸಿ ಸಿದ್ಧಪಡಿಸಬೇಕು. ಈ ಆಂದಿಯನ್ನು ನಿರ್ಮಿಸುವ ಕ್ರಮವನ್ನು ಹಿಂದೆಯೇ ಹೇಳಲಾಗಿದೆ. ಚೌಕನಾಗಿರುವ ಮತ್ತು ಸೌಟಿನಂತೆ ಹಿಡಿಯಿರುವ ಪಾತ್ರೆಗೆ ಚಮಸವೆಂದು ಹೆಸರು. ಪಾತ್ರೆಗೆ ಆಕಾರನಿಯಮವೇನೂ ಇರಬೇಕಾಗಿಲ್ಲ. ಹೇಗೆ ಬೇಕಾದರೂ ಇರಬಹುದು. ಪಾತ್ರೆಯನ್ನು ಉದುಂಬರ ಮರದಿಂದಲಾಗಲಿ, ಮಣ್ಣಿನಿಂದಾಗಲಿ ಮಾಡಬಹುದು. ಮತ್ತು ಉದುಂಬರ ವೃಕ್ಷದ ಒಂದು ಕೊಂಬೆಯನ್ನು ಕತ್ತರಿಸಿ ಅದರ ಒಂದು ಸಣ್ಣ ಕೊನೆಯನ್ನೂ ತರಬೇಕು. ಅನಂತರ ಬೇರೆ ಪಾತ್ರೆಯಲ್ಲಿ ವನಸ್ಪತಿ, ಔಷಧಿ ಮೊದಲಾದ ಸಂಭಾರಗಳನ್ನು ಹಾಕಿಡಬೇಕು. (ಉದುಂಬರ ಮೊದಲಾದ ನಾಲ್ಕು ವೃಕ್ಷಗಳ ಹಣ್ಣುಗಳನ್ನು ಹಾಕಿಡಬೇಕು) ಇವುಗಳನ್ನೆಲ್ಲಾ ಬೆರಸಿದನಂತರ ಮೊಸರು, ಜೇನುತುಪ್ಪ, ತುಪ್ಪ ಬಿಸಲು ಕಾಯುತ್ತಿರುವಾಗ ಬಿದ್ದ ಮಳೆಯನೀರು ಇವುಗಳನ್ನೆಲ್ಲಾ ಸೇರಿಸಬೇಕು. ಅನಂತರ ಪುರೋಹಿತನು ಆಸಂದಿಯೆಂಬ ಪೀಠವನ್ನು ಮುಂದೆ ಹೇಳುವ ಮಂತ್ರಗಳಿಂದ ಪ್ರೋಕ್ಷಣೆ ಮಾಡಬೇಕು.

ಬೃಹಚ್ಚ ತೇ ರಥಂತರಂ ಚ ಪೂರ್ವೌ ಪಾದೌ ಭವತಾಂ ವೈರೂಪಂ ಚ ವೈರಾಜಂ ಚಾಪರೌ ಶಾಕ್ವರರೈವತೇ ಶೀರ್ಷಣ್ಯೇ ನೌಧಸಂ ಚ ಕಾಲೇಯಂ ಚಾನೂಚ್ಯೇ ಋಚಃ ಪ್ರಾಚೀನಾತಾನಾಃ ಸಾಮಾನಿ ತಿರಶ್ಚೀನವಾಯಾ ಯಜೂಂಷ್ಯತೀಕಾಶಾ ಯಶ ಆಸ್ತರಣಂ ಶ್ರೀರುಪಬರ್ಹಣಂ ಸವಿತಾ ಚ ತೇ ಬೃಹಸ್ಪತಿಶ್ಚ ಪೂರ್ವೌ ಪಾದೌ ಧಾರಯತಾಂ ವಾಯುಶ್ಚ ಪೂಷಾ ಚಾಪರೌ ಮಿತ್ರಾವರುಣೌ ಶೀರ್ಷಣ್ಯೇ ಅಶ್ವಿನಾವನೂಚ್ಯೇ ಇತಿ।

ತಂ ಮಂತ್ರಂ ದರ್ಶಯತಿ— ಇಂದ್ರಾಸಂದೀಪ್ರತಿಪಾದಕವಾಕ್ಯವದಯಂ ಮಂತ್ರೋ ವ್ಯಾಖ್ಯೇಯಃ ||

ಪ್ರೋಕ್ಷಣ ಮಂತ್ರವನ್ನು ವಿವರಿಸುವರು—ಎಲೈ ಆಸಂದಿಯೇ (ಪೀಠವೇ) ಬೃಹತ್ ಮತ್ತು ರಥಂತರ ಎಂಬ ಎರಡು ಸಾಮುಗಳೇ ನಿನ್ನ ಮುಂದಿನ ಎರಡು ಕಾಲುಗಳು. ವೈರೂಪ ಮತ್ತು ವೈರಾಜ್ಯ ಎರಡು ಸಾಮುಗಳೇ ನಿನ್ನ ಹಿಂಭಾಗದ ಎರಡು ಕಾಲುಗಳು. ಶಾಕ್ವರ ಮತ್ತು ರೈವತ ಎಂಬ ಎರಡು ಸಾಮುಗಳು ಪೀಠದ ಮೇಲುಭಾಗದ ಎರಡು ಹಲಗೆಗಳು. (ಆಚ್ಛಾದನ) ನೌಧಸ ಮತ್ತು ಕಾಲೇಯಗಳು ಕೆಳಗಿನ ಹಲಗೆಗಳು ಋಕ್ಕುಗಳು (ಋಗ್ವೇದಮಂತ್ರಗಳು) ಪೀಠದ ಪೂರ್ವಭಾಗದ ಹಲಗೆಗಳು. ಸಾಮಮಂತ್ರಗಳು ಪಶ್ಚಿಮಭಾಗದ ಹಲಗೆಗಳು. ಕೀರ್ತಿಯೇ ಹಾಸಿರುವ ವಸ್ತ್ರವು. ಶ್ರೀ ಎಂಬ ಸಂಪತ್ತೇ ಹೊದಿಕೆಯು. ಸವಿತೃದೇವನೂ ಬೃಹಸ್ಪತಿಯೂ (ನಿನ್ನ) ಪೀಠದ ಮುಂದಿನ ಎರಡು ಕಾಲುಗಳನ್ನು ಧರಿಸಿರುವರು. ಮಿತ್ರಾವರುಣರು ಪೀಠದ ಮೇಲುಭಾಗದ ಆವರಣವನ್ನು ಧರಿಸಿರುವರು. ಅಶ್ವಿನೀದೇವತೆಗಳು ಪೀಠದ ಕೆಳಭಾಗವನ್ನು ಧರಿಸಿರುವರು. ಈ ಅರ್ಥವಿರುವ ಮೇಲಿನ ಮಂತ್ರದಿಂದ ಪುರೋಹಿತನು ಆಸಂದಿಯೆಂಬ ಪೀಠವನ್ನು ಅಭಿಮಂತ್ರಿಸುವನು (ಪ್ರೋಕ್ಷಣೆಮಾಡುವನು).

ಅಥೈನಮೇತಾಮಾಸಂದೀಮಾರೋಹಯೇತ್ ||

ಅಭಿಮಂತ್ರಣಾದೂರ್ಧ್ವಮಾಚಾರ್ಯಕರ್ತವ್ಯಂ ದರ್ಶಯತಿ— ಅಥಾಭಿಷಿಕ್ತಮೇನಂ ಕ್ಷತ್ರಿಯಮೇತಸ್ಯಾಮಾರೂಢಂ ಕುರ್ಯಾತ್ ||

ಮುಂದೆ ಹೇಳುವ ಮಂತ್ರದಿಂದ ರಾಜನು ಅಭಿಷೇಕಾನಂತರ ಪೀಠವನ್ನು ಹತ್ತಿ ಕುಳಿತುಕೊಳ್ಳಬೇಕು.

ವಸವಸ್ತ್ವಾ ಗಾಯತ್ರೇಣ ಛಂದಸಾ ತ್ರಿವೃತಾ ಸ್ತೋಮೇನ ರಥಂತರೇಣ ಸಾಮ್ನಾಽಽರೋಹಂತು ತಾನನ್ವಾರೋಹ ಸಾಮ್ರಾಜ್ಯಾಯ ರುದ್ರಾಸ್ತ್ವಾ ತ್ರೈಷ್ಟುಭೇನ ಛಂದಸಾ ಪಂಚದಶೇನ ಸ್ತೋಮೇನ ಬೃಹತಾ ಸಾಮ್ನಾಽಽರೋಹಂತು ತಾನನ್ವಾರೋಹ ಭೌಜ್ಯಾಯಾಽಽದಿತ್ಯಾಸ್ತ್ವಾ ಜಾಗತೇನ ಛಂದಸಾ ಸಪ್ತದಶೇನ ಸ್ತೋಮೇನ ವೈರೂಪೇಣ ಸಾಮ್ನಾಽಽರೋಹಂತು ತಾನನ್ವಾರೋಹ ಸ್ವಾರಾಜ್ಯಾಯ ವಿಶ್ವೇ ತ್ವಾ ದೇವಾ ಆನುಷ್ಟುಭೇನ ಛಂದಸೈಕವಿಂಶೇನ ಸ್ತೋಮೇನ ವೈರಾಜೇನ ಸಾಮ್ನಾಽಽರೋಹಂತು ತಾನನ್ವಾರೋಹ ವೈರಾಜ್ಯಾಯ ಮರುತಶ್ಚ ತ್ವಾಂಗಿರಸಶ್ಚ ದೇವಾ ಅತಿಛಂದಸಾ ಛಂದಸಾ ತ್ರಯಸ್ತ್ರಿಂಶೇನ ಸ್ತೋಮೇನ ರೈವತೇನ ಸಾಮ್ನಾಽಽರೋಹಂತು ತಾನನ್ವಾರೋಹ ಪಾರಮೇಷ್ಠ್ಯಾಯ ಸಾಧ್ಯಾಶ್ಚ ತ್ವಾಽಽಪ್ತ್ಯಾಶ್ಚ ದೇವಾಃಪಾಂಕ್ತೇನ ಛಂದಸಾ ತ್ರಿಣವೇನ ಸ್ತೋಮೇನ ಶಾಕ್ವರೇಣ ಸಾಮ್ನಾಽಽರೋಹಂತು ತಾನನ್ವಾರೋಹ ರಾಜ್ಯಾಯ

ಮಾಹಾರಾಜ್ಯಾಯಾಽಧಿಪತ್ಯಾಯ ಸ್ವಾವಶ್ಯಾಯಾಽತಿಷ್ಠಾಯಾಽಽ-
ರೋಹೇತ್ಯೇತಾಮಾಸಂದೀಮಾರೋಹಯೇತ್ ।

ತತ್ರ ಮಂತ್ರಂ ದರ್ಶಯತಿ—ಇಂದ್ರಾರೋಹಣಮಂತ್ರವದ್ವ್ಯಾಖ್ಯೇಯಮ್ । ತತ್ರಾರೋ-
ಹಣಕರ್ತುರಪ್ರಯೋಜ್ಯತ್ವಾದಾರೋಹಾಮೀತ್ಯುತ್ತಮಪುರುಷಃ । ಅತ್ರ ತ್ವಾಚಾರ್ಯಪ್ರಯೋಜ್ಯತ್ವಾ-
ದಾರೋಹೇತಿ ಮಧ್ಯಮಪುರುಷಃ । ತತ್ರತ್ಯಯೋಃ ಪಂಚಮಷಷ್ಠಮಂತ್ರಯೋರತ್ರ ಕ್ರಮವಿಪರ್ಯಾ-
ಸೋಽಧ್ಯಯನ ಸಂಪ್ರದಾಯಪ್ರಾಪ್ತಃ । ಅನೇನ ಮಂತ್ರೇಣಾಚಾರ್ಯ ಆಸಂದ್ಯಾಂ ಕ್ಷತ್ರಿಯ-
ಮಾರೋಹಯೇತ್ ॥

ರಾಜನು (ಪೀಠವನ್ನು) ಸಿಂಹಾಸನವನ್ನು ಹತ್ತಿ ಕುಳಿತುಕೊಳ್ಳುವ ಕಾಲದಲ್ಲಿ ಪುರೋಹಿತನು ರಾಜನನ್ನುದ್ದೇಶಿಸಿ ಹೇಳುವ ಮಂತ್ರವು ಈ ರೀತಿ ಇರುವುದು—ಎಲೈ ಪೀಠವೇ, ವಸುಗಳೆಂಬ ದೇವತೆಗಳು ಗಾಯತ್ರೀಛಂದಸ್ಸಿನಿಂದಲೂ, ತ್ರಿವೃತ್ಸ್ತೋಮದಿಂದಲೂ, ರಥಂತರವೆಂಬ ಸಾಮಮಂತ್ರದಿಂದಲೂ ನಿನ್ನನ್ನು (ಪೀಠವನ್ನು) ಹತ್ತಿ ಕುಳಿತುಕೊಳ್ಳಲಿ. ಎಲೈ ರಾಜನೇ ಅದರಂತೆ ನೀನೂ ಸಹ ಸಾಮ್ರಾಜ್ಯಪದವಿಯ ಪ್ರಾಪ್ತಿಗಾಗಿ ಈ ಪೀಠವನ್ನು ಹತ್ತಿ ಕುಳಿತುಕೊ (ಎಂದು ಪುರೋಹಿತ ಹೇಳುವನು. ಮುಂದಿನ ಮಂತ್ರಗಳಿಂದಲೂ ಈ ರೀತಿ ಹೇಳುವನು).

ರುದ್ರರೆಂಬ ದೇವತೆಗಳು ತ್ರಿಷ್ಟುಪ್‌ಛಂದಸ್ಸಿನಿಂದಲೂ ಪಂಚದಶಸ್ತೋಮದಿಂದಲೂ, ಬೃಹತ್ ಎಂಬ ಸಾಮದಿಂದಲೂ ಈ ಪೀಠವನ್ನು ಹತ್ತಿ ಕುಳಿತುಕೊಳ್ಳಲಿ. ಅದರಂತೆ ರಾಜನಾದ ನೀನೂ ಸಹ ರಾಜಭೋಗಗಳನ್ನು ಅನುಭವಿಸುವುದಕ್ಕಾಗಿ ಈ ಪೀಠವನ್ನು ಹತ್ತಿ ಕುಳಿತುಕೋ.

ಆದಿತ್ಯರೆಂಬ ದೇವತೆಗಳು ಜಗತೀಛಂದಸ್ಸಿನಿಂದಲೂ ಸಪ್ತದಶಸ್ತೋಮದಿಂದಲೂ, ವೈರೂಪವೆಂಬ ಸಾಮದಿಂದಲೂ ಈ ಪೀಠವನ್ನು ಹತ್ತಿ ಕುಳಿತುಕೊಳ್ಳಲಿ. ಅದರಂತೆ ರಾಜನಾದ ನೀನೂ ಸಹ ಸ್ವತಂತ್ರವಾದ ರಾಜ್ಯಾಧಿಪತ್ಯ ಪ್ರಾಪ್ತಿಗಾಗಿ ಈ ಪೀಠವನ್ನು ಹತ್ತಿ ಕುಳಿತುಕೋ.

ವಿಶ್ವೇದೇವತೆಗಳು ಅನುಷ್ಟುಪ್‌ಛಂದಸ್ಸಿನಿಂದಲೂ, ಏಕವಿಂಶಸ್ತೋಮದಿಂದಲೂ ವೈರಾಜವೆಂಬ ಸಾಮದಿಂದಲೂ ಈ ಪೀಠವನ್ನು ಹತ್ತಿ ಕುಳಿತುಕೊಳ್ಳಲಿ ಅದರಂತೆ ರಾಜನಾದ ನೀನು ವಿಶೇಷವಾಗಿ ರಾಜಪದವಿಗಾಗಿ ಈ ಪೀಠವನ್ನು ಹತ್ತಿ ಕುಳಿತುಕೋ.

ಮರುದ್ದೇವತೆಗಳೂ ಅಂಗಿರಸರೆಂಬ ದೇವತೆಗಳೂ ಸಹ ಅತಿಛಂದಸ್ಸೆಂಬ ಛಂದಸ್ಸಿನಿಂದಲೂ ತ್ರಯಸ್ತ್ರಿಂಶಸ್ತೋಮದಿಂದಲೂ ಶೈವತವೆಂಬ ಸಾಮದಿಂದಲೂ ಈ ಪೀಠವನ್ನು ಹತ್ತಿ ಕುಳಿತುಕೊಳ್ಳಲಿ. ಅದರಂತೆ ರಾಜನಾದ ನೀನು ಅತ್ಯುನ್ನತ ಪದವಿಯಾದ ಪರಮೇಷ್ಠಿ ಪದವಿಪ್ರಾಪ್ತಿಗಾಗಿ ಈ ಪೀಠವನ್ನು ಹತ್ತಿ ಕುಳಿತುಕೋ.

ಸಾಧ್ಯರೆಂಬ ದೇವತೆಗಳೂ ಆಪ್ತ್ಯರೆಂಬ ದೇವತೆಗಳೂ ಪಂಕ್ತಿಛಂದಸ್ಸಿನಿಂದಲೂ ತ್ರಿಣವಸ್ತೋಮದಿಂದಲೂ ಶಾಕ್ವರವೆಂಬ ಸಾಮದಿಂದಲೂ ಈ ಪೀಠವನ್ನು ಹತ್ತಿ ಕುಳಿತುಕೊಳ್ಳಲಿ. ಅದರಂತೆ ರಾಜನಾದ ನೀನು ಮಹಾರಾಜಪದವಿ ಮತ್ತು ಸಕಲರಿಗೂ ಅಧಿಪತಿಯಾಗಿ ಸಮಸ್ತವನ್ನೂ ವಶ (ನಿನ್ನ ಅಧೀನ) ಮಾಡಿಕೊಳ್ಳುವುದಕ್ಕಾಗಿ ಈ ಪೀಠವನ್ನು ಹತ್ತಿ ಕುಳಿತುಕೋ

ಈ ರೀತಿಯಾಗಿ ಪುರೋಹಿತನು ಮಂತ್ರವನ್ನು ಪಠಿಸಿದಮೇಲೆ ಅಭಿಷಿಕ್ತನಾದ ರಾಜನು ಪೀಠವನ್ನು (ಸಿಂಹಾಸನವನ್ನು) ಹತ್ತಿಕುಳಿತು ಕೊಳ್ಳಬೇಕು

ತಮೇತಸ್ಯಾಮಾಸಂದ್ಯಾಮಾಸೀನಂ ರಾಜಕರ್ತಾರೋ ಬ್ರೂಯುರ್ನ ವಾ
ಅನಭ್ಯುತ್ಕ್ರುಷ್ಟಃ ಕ್ಷತ್ರಿಯೋ ವೀರ್ಯಂ ಕರ್ತುಮರ್ಹತ್ಯಭ್ಯೇನ-
ಮುತ್ಕ್ರೋಶಾಮೇತಿ ತಥೇತಿ ತಂ ರಾಜಕರ್ತಾರೋಽಭ್ಯುತ್ಕ್ರೋ-
ಶಂತೀಮಂ ಜನಾ ಅಭ್ಯುತ್ಕ್ರೋಶತ ಸಮ್ರಾಜಂ ಸಾಮ್ರಾಜ್ಯಂ
ಭೋಜಂ ಭೋಜಪಿತರಂ ಸ್ವರಾಜಂ ಸ್ವಾರಾಜ್ಯಂ ವಿರಾಜಂ ವೈರಾಜಂ
ಪರಮೇಷ್ಠಿನಂ ಪಾರಮೇಷ್ಠ್ಯಂ ರಾಜಾನಂ ರಾಜಪಿತರಂ ಕ್ಷತ್ರಮಜನಿ
ಕ್ಷತ್ರಿಯೋ ಜನಿ ವಿಶ್ವಸ್ಯ ಭೂತಸ್ಯಾದಿಪತಿರಜನಿ ವಿಶಾಮತ್ತಾಜನ್ಯ
ಮಿತ್ರಾಣಾಂ ಹಂತಾಽ ಜನಿ ಬ್ರಾಹ್ಮಣಾನಾಂ ಗೋಪ್ತಾಽ ಜನಿ
ಧರ್ಮಸ್ಯ ಗೋಪ್ತಾಽ ಜನೀತಿ ||

ಆರೋಹಣಾದೂರ್ಧ್ವಮಭ್ಯುತ್ಕ್ರೋಶನಂ ವಿಧತ್ತೇ—ರಾಜ್ಞಃ ಕರ್ತಾರೋ ರಾಜಕರ್ತಾರಃ ಪಿತೃಭ್ರಾತ್ರಾದಯಃ | ಇಂದ್ರವಿಷಯಾಭ್ಯುತ್ಕ್ರೋಶನವಾಕ್ಯವದಿದಂ ವಾಕ್ಯಂ ವ್ಯಾಖ್ಯೇಯಮ್ ||

ರಾಜನು ಸಿಂಹಾಸನವನ್ನು ಹತ್ತಿ ಕುಳಿತುಕೊಂಡಮೇಲೆ ರಾಜನ ಸಂಬಂಧಿಕರೂ ಇತರ ಜನರೂ ರಾಜನನ್ನೂ ಅವನ ಗುಣಗಳನ್ನೂ ಪ್ರಶಂಸಿಸಿ ಅವನ ಬಿರುದುಗಳನ್ನು ಸಕಲರಿಗೂ ತಿಳಿಯುವಂತೆ ಉದ್ಘೋಷ ಮಾಡುವರು. ಹೇಗೆಂದರೆ ಸಿಂಹಾಸನದ ಮೇಲೆ ಕುಳಿತಿರುವ ರಾಜನ ಎದುರಿಗೆ ನಿಂತ ರಾಜನ ಸಂಬಂಧಿಗಳೂ, ವಂದಿಮಾಗಧರೂ ಇತರ ಜನರೂ ನಿಂತುಕೊಂಡು ರಾಜನ ಗುಣಗಳನ್ನೂ ಕೀರ್ತಿಯನ್ನೂ ಬಿರುದುಗಳನ್ನೂ ಉದ್ಘೋಷಿಸುವರು. ಗುಣಗಳನ್ನೂ ಬಿರುದುಗಳನ್ನೂ ಘೋಷಿಸದಿದ್ದರೆ ಅಂತಹ ರಾಜನು ವೀರ್ಯಪರಾಕ್ರಮಗಳಿಂದ ರಾಜ್ಯಪರಿಪಾಲನೆಯನ್ನು ಮಾಡಲು ಅರ್ಹನಾಗುವುದಿಲ್ಲ. ಆದ್ದರಿಂದ ನಾವುಗಳು ಈ ರಾಜನನ್ನು ಪ್ರಶಂಸೆಮಾಡಿ ಇವನ ಗುಣಗಳನ್ನೂ ಬಿರುದುಗಳನ್ನೂ ಉದ್ಘೋಷಿಸೋಣ ಎನ್ನಲು ಅದಕ್ಕೆ ಎಲ್ಲರೂ ಹಾಗೆಯೇ ಆಗಲೆಂದು ಒಪ್ಪಿ ಮುಂದೆ ಹೇಳುವಂತೆ ಉದ್ಘೋಷಿಸಿದರು. ಈ ರಾಜನು ಸಮ್ರಾಟ್ ಎಂದರೆ ಚಕ್ರವರ್ತಿಯು ಸಮಸ್ತ ರಾಜಭೋಗಗಳನ್ನು ಅನುಭವಿಸಲು ಅರ್ಹನು. ಸ್ವತಂತ್ರವಾಗಿ ಇನ್ನೊಬ್ಬರ ಅಧೀನದಲ್ಲಿಲ್ಲದೆ ರಾಜ್ಯಭಾರಮಾಡುವನು. ಸಮಸ್ತ ರಾಜರಿಗೂ ಅಧಿಪತಿಯಾಗಿ ಬಹಳ ಉನ್ನತ ಪದವಿಯನ್ನು ಪಡೆದಿರುವವನು. ಇಂತಹ ಶ್ರೇಷ್ಠನಾದ ರಾಜನು ಈಗ ಉತ್ಪನ್ನನಾಗಿರುವನನು. ಸಮಸ್ತ ದೇಶಗಳಿಗೂ ಅಧಿಪತಿಯಾದ ಈ ರಾಜನು ಇಲ್ಲಿ ಬೆಗಳುತ್ತಿರುವನು. ಪ್ರಜೆಗಳನ್ನು ಪಾಲಿಸುವವನೂ ಶತ್ರುಗಳನ್ನು ಸಂಹಾರ ಮಾಡುವವನೂ ಬ್ರಾಹ್ಮಣರನ್ನು ರಕ್ಷಿಸುವವನೂ, ನ್ಯಾಯಧರ್ಮಗಳನ್ನು ಪಾಲಿಸುವವನೂ ಆದ ಈ ರಾಜನು ಉತ್ಪನ್ನನಾಗಿ ನಮ್ಮ ಮಧ್ಯದಲ್ಲಿ ಬೆಳಗುತ್ತಿರುವನು. ಈ ರೀತಿಯಾಗಿ ರಾಜನನ್ನು ಪ್ರಶಂಸೆಮಾಡಿ ಅವನ ಗುಣಗಳನ್ನೂ ಬಿರುದುಗಳನ್ನೂ ಉದ್ಘೋಷಿಸುವರು.

## ತಮಭ್ಯುತ್ಕ್ರುಷ್ಟಮೇವಂವಿದಭಿಷೇಕ್ಷ್ಯನ್ನೇತಯರ್ಚಾಽಭಿಮಂತ್ರಯೇತ ॥

**ಆಚಾರ್ಯಸ್ಯ ಕ್ಷತ್ರಿಯಾಭಿಮಂತ್ರಣಂ ವಿಧತ್ತೇ— ಪೂರ್ವವದ್ವ್ಯಾಖ್ಯೇಯಮ್ ॥**

ವಂದಿಮಾಗಧರು ಮೊದಲಾದವರು ರಾಜನನ್ನು ಹೊಗಳಿದ ಮೇಲೆ ಆಚಾರ್ಯನಾದ ಪುರೋಹಿತನು ಮುಂದೆ ಹೇಳುವ ಮಂತ್ರಗಳಿಂದ ಸಿಂಹಾಸನದಲ್ಲಿ ಕುಳಿತಿರುವ ರಾಜನನ್ನು ಪ್ರೋಕ್ಷಣೆಮಾಡುವನು.

---

*English Translation*

**(The implements for making Mahabhisheka)**

Now they bring for him a throne-seat made of Udumbara wood, or which the Brahmanam has been alreadr told (see 8, 8). The ladle of Udumbara wood is here optional; instead of it a vessel of the same wood (patri) may be taken. Besides they bring an Udumbara branch. Then they mix those four kinds of fruit and grain in a vessel, and after having poured over them curds, honey, clarified butter, and rain-water fallen during sunshine, put it down. He (the priest) should then consecrate the throne-seat in the following way; thy two forelegs are the Brihat and Rathantaram Samans &c. (just as above, see. 8, 12).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯ ಏಕೋನಚತ್ವಾರಿಂಶಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೊಂಭತ್ತನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು



# ಅಥೈಕೋನಚತ್ವಾರಿಂಶಾಧ್ಯಾಯೇ ಚತುರ್ಥಃ ಖಂಡಃ

## ಮೂವತ್ತೊಂಭತ್ತನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು

[ಪುರೋಹಿತನು ರಾಜನನ್ನು ಅಭಿಮಂತ್ರಿಸುವ ಮಂತ್ರವು]

ನಿಷಸಾದ ಧೃತವ್ರತೋ ವರುಣಃ ಪ್ರಸ್ತ್ಯಾಸ್ವಾ । ಸಾಮ್ರಾಜ್ಯಾಯ ಭೌಜ್ಯಾಯ ಸ್ವಾರಾಜ್ಯಾಯ ವೈರಾಜ್ಯಾಯ ಪಾರಮೇಷ್ಠ್ಯಾಯ ರಾಜ್ಯಾಯ ಮಾಹಾರಾಜ್ಯಾಯಾಽಽಧಿಪತ್ಯಾಯ ಸ್ವಾವಶ್ಯಾಯಾಽಽತಿಷ್ಠಾಯ ಸುಕ್ರತುರಿತಿ ॥

ಏತಯರ್ಚೇತ್ಯುಕ್ತಂ ಮಂತ್ರಂ ದರ್ಶಯತಿ— ಪೂರ್ವವದ್ವ್ಯಾಖ್ಯೇಯಮ್ ॥

ಅಭಿಮಂತ್ರಣವನ್ನು ವಿವರಿಸುವರು. ಈ ರಾಜನು ನ್ಯಾಯಪರಿಪಾಲನೆಯನ್ನು ಕೈಗೊಂಡಿರುವನು. ಸಕಲರನ್ನೂ ನ್ಯಾಯವನ್ನು ಅನುಸರಿಸಿ ನಡೆಯುವಂತೆ ಪ್ರಚೋದಿಸುವನು. ಇಂತಹ ಈ ರಾಜನು ಸಾಮ್ರಾಜ್ಯಪದವಿಗಾಗಿಯೂ ರಾಜಭೋಗಗಳನ್ನು ಅನುಭವಿಸುವುದಕ್ಕಾಗಿಯೂ, ಸ್ವತಂತ್ರವಾಗಿ ರಾಜ್ಯವಾಳವುದಕ್ಕಾಗಿಯೂ ಅತ್ಯುನ್ನತ ಪದವಿಪ್ರಾಪ್ತಿಗಾಗಿಯೂ ರಾಜರಿಗೆಲ್ಲಾ ಅಧಿಪತಿಯಾಗಿ ಸಮಸ್ತರನ್ನೂ ತನ್ನ ಅಧೀನದಲ್ಲಿಟ್ಟುಕೊಂಡು ನ್ಯಾಯಪರಿಪಾಲನೆಯಿಂದ ರಾಜ್ಯಭಾರಮಾಡುವುದಕ್ಕಾಗಿಯೂ ಈ ಪೀಠದಲ್ಲಿ ಕುಳಿತಿರುವನು ಎಂಬ ಈ ಮಂತ್ರದಿಂದ ಪುರೋಹಿತನು ರಾಜನನ್ನು ಅಭಿಮಂತ್ರಿಸುವನು.

ತಮೇತಸ್ಯಾಮಾಸಂದ್ಯಾಮಾಸೀನಮೇವಂವಿತ್ಪುರಸ್ತಾತ್ತಿಷ್ಠನ್ಪ್ರತ್ಯಙ್ಮುಖ ಔದುಂಬರ್ಯಾರ್ದ್ರಯಾ ಶಾಖಯಾ ಸಪಲಾಶಯಾ ಜಾತರೂಪಮಯೇನ ಚ ಪವಿತ್ರೇಣಾಂತರ್ಧಾಯಾಭಿಷಿಂಚತೀಮಾ ಆಪಃ ಶಿವತಮಾ ಇತ್ಯೇತೇನ ತೃಚೇನ ದೇವಸ್ಯ ತ್ವೇತಿ ಚ ಯಜುಷಾ ಭೂರ್ಭುವಃಸ್ವರಿತ್ಯೇತಾಭಿಶ್ಚ ವ್ಯಾಹೃತೀಭಿಃ ॥

ಅಭಿಮಂತ್ರಣಾದೂರ್ಧ್ವಮಭಿಷೇಕಪ್ರಕಾರಂ ದರ್ಶಯತಿ— ಇಂದ್ರಾಭಿಷೇಕವಾಕ್ಯವದ್ವ್ಯಾಖ್ಯೇಯಮ್ ॥

ಅಭಿಮಂತ್ರಣಾನಂತರ(ಪ್ರೋಕ್ಷಿಸಿದನಂತರ) ರಾಜನಿಗೆ ಮಾಡುವ ಅಭಿಷೇಕಮಂತ್ರವನ್ನು ವಿವರಿಸುವರು. ಪ್ರೋಕ್ಷಣಾನಂತರ ಪೀಠದಲ್ಲಿ ಕುಳಿತಿರುವ ರಾಜನು ಪೂರ್ವಾಭಿಮುಖವಾಗಿಯೂ ಅವನ ಎದುರಿಗೆ ಎಂದರೆ ಪಶ್ಚಿಮಾಭಿಮುಖವಾಗಿ ಪುರೋಹಿತನೂ ಕುಳಿತುಕೊಂಡು ಪುರೋಹಿತನು ತನ್ನಕೈಯಲ್ಲಿ ಉದುಂಬರ ವೃಕ್ಷದ ಕೊನೆಯನ್ನೂ ಮುತ್ತುಗದ

ಕೊನೆಯನ್ನೂ ಹಿಡಿದುಕೊಂಡು **ಇಮಾ ಆಪಃ ಶಿವತಮಾ** ಎಂಬ ಮೂರು ಋಕ್ಕುಗಳಿಂದಲೂ (ಇದನ್ನು ಹಿಂದೆಯೇ ವಿವರಿಸಲಾಗಿದೆ) **ದೇವಸ್ಯತ್ವಾ** ಎಂಬ ಯಜುರ್ಮಂತ್ರದಿಂದಲೂ **ಭೂರ್ಭುವಃಸ್ವಃ** ಎಂಬ ವ್ಯಾಹೃತಿಗಳಿಂದಲೂ ಪುರೋಹಿತನು ರಾಜನಿಗೆ ಅಭಿಷೇಕವನ್ನು ಮಾಡಬೇಕು.

---

*English Translation*

**(The mantras by which Indra was consecrated. He was installed by Prajapati.)**

" Varuna, the faithful, sat down in his premises—for obtaining universal rule, enjoyement of pleasures, independence, distinction as sovereign, fulfilment of the highest desires, he, the wise, & c. (1, 25, 10). Prajapati standing in front of Indra who was sitting on the throne-seat, turned his face to the west, and after having put on his head a gold leaf, sprinkled him with the most branch of an Udumbara, together with that of a Palasa tree, reciting the three Rik verses, ima apah, sivatama, i. e. these most happy waters & c. (Ait. Br. 8, 7); and the Yajus verse, devasya tva (Vajasan Samh. 1, 10, Ait. Br. 8, 1); and the great words, bhur, bhuvah, svar.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯ ಏಕೋನಚತ್ವಾರಿಂಶಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೊಂಭತ್ತನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವಾದುದು.

---



# ಅಥೈಕೋನಚತ್ವಾರಿಂಶಾಧ್ಯಾಯೇ ಪಂಚಮಃ ಖಂಡಃ

**ಮೂವತ್ತೊಂಬತ್ತನೆಯ ಅಧ್ಯಾಯದಲ್ಲಿ ಐದನೆಯ ಖಂಡವು**

[ಅಭಿಷೇಕ ಕಾಲದಲ್ಲಿ ಪಠಿಸುವ ಮಂತ್ರಗಳು]

ಪ್ರಾಚ್ಯಾಂ ತ್ವಾ ದಿಶಿ ವಸವೋ ದೇವಾಃ ಷಡ್ಭಿಶ್ಚೈವ ಪಂಚವಿಂಶೈರಹೋಭಿರಭಿಷಿಂಚನ್ತ್ವೇತೇನ ಚ ತೃಚೇನೈತೇನ ಚ ಯಜುಷೈತಾಭಿಶ್ಚ ವ್ಯಾಹೃತೀಭಿಃಸಾಮ್ರಾಜ್ಯಾಯ ದಕ್ಷಿಣಸ್ಯಾಂ ತ್ವಾ ದಿಶಿ ರುದ್ರಾ ದೇವಾಃ ಷಡ್ಭಿಶ್ಚೈವ ಪಂಚವಿಂಶೈರಹೋಭಿರಭಿಷಿಂಚಂತ್ವೇತೇನ ಚ ತೃಚೇನೈತೇನ ಚ ಯಜುಷೈತಾಭಿಶ್ಚ ವ್ಯಾಹೃತಿಭಿರ್ಭೌಜ್ಯಾಯ ಪ್ರತೀಚ್ಯಾಂ ತ್ವಾ ದಿಶ್ಯಾದಿತ್ಯಾ ದೇವಾಃ ಷಡ್ಭಿಶ್ಚೈವ ಪಂಚವಿಂಶೈರ-ಹೋಭಿರಭಿಷಿಂಚಂತ್ವೇತೇನ ಚ ತೃಚೇನೈತೇನ ಚ ಯಜುಷೈತಾಭಿಶ್ಚ ವ್ಯಾಹೃತಿಭಿಃ ಸ್ವಾರಾಜ್ಯಾಯೋದೀಚ್ಯಾಂ ತ್ವಾ ದಿಶಿ ವಿಶ್ವೇ ದೇವಾಃ ಷಡ್ಭಿಶ್ಚೈವ ಪಂಚವಿಂಶೈರಹೋಭಿರಭಿಷಿಂಚಂತ್ವೇತೇನ ಚ ತೃಚೇನೈ-ತೇನ ಚ ಯಜುಷೈತಾಭಿಶ್ಚ ವ್ಯಾಹೃತಿಭಿರ್ವೈರಾಜ್ಯಾಯೋರ್ಧ್ವಾಯಾಂ ತ್ವಾ ದಿಶಿ ಮರುತಶ್ಚಾಂಗಿರಸಶ್ಚ ದೇವಾಃ ಷಡ್ಭಿಶ್ಚೈವ ಪಂಚವಿಂಶೈ-ರಹೋಭಿರಭಿಷಿಂಚಂತ್ವೇತೇನ ಚ ತೃಚೇನೈತೇನ ಚ ಯಜುಷೈತಾಭಿ-ಶ್ಚ ವ್ಯಾಹೃತಿಭಿಃ ಪಾರಮೇಷ್ಠ್ಯಾಯಾಸ್ಯಾಂ ತ್ವಾ ಧ್ರುವಾಯಾಂ ಮಧ್ಯಮಾಯಾಂ ಪ್ರತಿಷ್ಠಾಯಾ ದಿಶಿ ಸಾಧ್ಯಾಶ್ಚಾಽಽಪ್ತ್ಯಾಶ್ಚ ದೇವಾಃ ಷಡ್ಭಿ-ಶ್ಚೈವ ಪಂಚವಿಂಶೈರಹೋಭಿರಭಿಷಿಂಚಂತ್ವೇತೇನ ಚ ತೃಚೇನೈತೇನ ಚ ಯಜುಷೈತಾಭಿಶ್ಚ ವ್ಯಾಹೃತಿಭೀ ರಾಜ್ಯಾಯ ಮಾಹಾರಾಜ್ಯಾ-ಯಾಽಽಧಿಪತ್ಯಾಯ ಸ್ವಾವಶ್ಯಾಯಾಽಽತಿಷ್ಠಾಯೇತಿ ಸ ಪರಮೇಷ್ಠೀ ಪ್ರಾಜಾಪತ್ಯೋ ಭವತಿ ॥

ಅಭಿಷೇಕಾದೂರ್ಧ್ವಮಭಿಮಂತ್ರಣಮಾಹ—ಉಕ್ತೇನ ಮಂತ್ರೇಣಾಭಿಮಂತ್ರಿತಃ ಕ್ಷತ್ರಿಯಃ ಪರಮೇಷ್ಠಿಪದಸ್ಯ ಯೋಗ್ಯೋ ಭೂತ್ವಾ ಪ್ರಜಾಪತೇಃ ಸಂಬಂಧೀ (ಭವತೀ) ತಿ ॥

ಅಭಿಷೇಕಾನಂತರ ರಾಜನನ್ನು ಅಭಿಮಂತ್ರಿಸುವ ಮಂತ್ರವನ್ನು ತಿಳಿಸುವರು—ಇದರ ಅರ್ಥವು- ಪೂರ್ವದಿಕ್ಕಿನಲ್ಲಿ ವಸುಗಳೆಂಬ ದೇವತೆಗಳು ಮೂವತ್ತೊಂದು ದಿನಗಳವರೆಗೆ ಮೇಲೆ ಹೇಳಿದ **ಇಮಾ ಆಪಃ ಶಿವತಮಾಃ** ಎಂಬ ಮೂರು ಋಗ್ವೇದ ಮಂತ್ರಗಳಿಂದಲೂ **ದೇವಸ್ಯತ್ವಾ** ಎಂಬ ಯಜುರ್ವೇದ ಮಂತ್ರಗಳಿಂದಲೂ, **ಭೂರ್ಭುವಃಸ್ವಃ** ಎಂಬ ವ್ಯಾಹೃತಿಗಳಿಂದಲೂ ಸಾಮ್ರಾಜ್ಯಪದವಿಗಾಗಿ ರಾಜನಾದ ನಿನ್ನನ್ನು ಅಭಿಮಂತ್ರಿಸಲಿ.

ದಕ್ಷಿಣದಿಕ್ಕಿನಲ್ಲಿ ರುದ್ರರೆಂಬ ದೇವತೆಗಳು ಮೂವತ್ತೊಂದು ದಿನಗಳವರೆಗೆ ಮೂರು ಋಙ್ಮಂತ್ರಗಳಿಂದಲೂ ಯಜುರ್ಮಂತ್ರಗಳಿಂದಲೂ ವ್ಯಾಹೃತಿಗಳಿಂದಲೂ ರಾಜಭೋಗಗಳನ್ನು ಅನುಭವಿಸುವುದಕ್ಕಾಗಿ ನಿನ್ನನ್ನು ಅಭಿಮಂತ್ರಿಸಲಿ.

ಪಶ್ಚಿಮ ದಿಕ್ಕಿನಲ್ಲಿ ಆದಿತ್ಯರೆಂಬ ದೇವತೆಗಳು ಮೂವತ್ತೊಂದು ದಿನಗಳವರೆಗೆ ಮೂರು ಋಙ್ಮಂತ್ರಗಳಿಂದಲೂ ಯಜುರ್ಮಂತ್ರಗಳಿಂದಲೂ ವ್ಯಾಹೃತಿಗಳಿಂದಲೂ ಸ್ವತಂತ್ರವಾದ ರಾಜ್ಯಪದವಿಗಾಗಿ ನಿನ್ನನ್ನು ಅಭಿಮಂತ್ರಿಸಲಿ.

ಉತ್ತರದಿಕ್ಕಿನಲ್ಲಿ ವಿಶ್ವೇದೇವರೆಂಬ ದೇವತೆಗಳು ಮೂವತ್ತೊಂದು ದಿನಗಳವರೆಗೆ ಮೇಲೆ ಹೇಳಿದ ಮೂರು ಋಙ್ಮಂತ್ರಗಳಿಂದಲೂ ಯಜುರ್ಮಂತ್ರಗಳಿಂದಲೂ ವ್ಯಾಹೃತಿಗಳಿಂದಲೂ ಪ್ರಖ್ಯಾತರಾಜಪದವಿಪ್ರಾಪ್ತಿಗಾಗಿ ನಿನ್ನನ್ನು ಅಭಿಮಂತ್ರಿಸಲಿ.

ಊರ್ಧ್ವ ಎಂದರೆ ಮೇಲಿನ ಪ್ರದೇಶದಲ್ಲಿ ಮರುದ್ದೇವತೆಗಳೂ ಅಂಗಿರಸರೂ ಮೂವತ್ತೊಂದು ದಿನಗಳವರೆಗೂ ಮೂರು ಋಙ್ಮಂತ್ರಗಳಿಂದಲೂ, ಯಜುರ್ಮಂತ್ರಗಳಿಂದಲೂ ವ್ಯಾಹೃತಿಗಳಿಂದಲೂ ಉತ್ಕೃಷ್ಟತವಾದ ಪರಮೇಷ್ಠಿಪದವಿ ಪ್ರಾಪ್ತಿಗಾಗಿ ರಾಜನಾದ ನಿನ್ನನ್ನು ಅಭಿಮಂತ್ರಿಸಲಿ.

ಮಧ್ಯಮಸ್ಥಾನಗಳಲ್ಲಿ ಸಾಧ್ಯರೆಂಬ ದೇವತೆಗಳೂ ಆಪ್ತ್ಯರೆಂಬ ದೇವತೆಗಳೂ ಮೂವತ್ತೊಂದು ದಿನಗಳವರೆಗೆ ಮೇಲೆ ಹೇಳಿದ ಋಙ್ಮಂತ್ರಗಳಿಂದಲೂ, ಯಜುರ್ಮಂತ್ರಗಳಿಂದಲೂ, ವ್ಯಾಹೃತಿಗಳಿಂದಲೂ ರಾಜರಿಗೂ ಅಧಿಪತಿಯೆನಿಸುವ ಮಹಾರಾಜ್ಯಪದವಿಗಾಗಿ ರಾಜನಾದ ನಿನ್ನನ್ನು ಅಭಿಮಂತ್ರಿಸಲಿ. ಈ ಅಭಿಮಂತ್ರಣದಿಂದ ರಾಜನಾದ ನೀನು ಸಕಲರನ್ನೂ ನಿನ್ನ ಅಧೀನದಲ್ಲಿಟ್ಟುಕೊಂಡು ಪ್ರಜಾಪತಿಸಂಬಂಧವಾದುದೂ ಅತ್ಯುನ್ನತವೂ ಶ್ರೇಷ್ಠವೂ ಶಾಶ್ವತವೂ ಆದ ಪರಮೇಷ್ಠಿಪದವಿಯನ್ನು ರಾಜನಾದ ನೀನು ಪಡೆಯುವಂತಾಗಲಿ ಎಂಬರ್ಥವಿರುವ ಈ ಮಂತ್ರವನ್ನು ಪಠಿಸಿ ಅಭಿಮಂತ್ರಿಸಬೇಕು.

ಸ ಏತೇನೈಂದ್ರೇಣ ಮಹಾಭಿಷೇಕೇಣಾಭಿಷಿಕ್ತಃ ಕ್ಷತ್ರಿಯಃ ಸರ್ವಾ ಜಿತೀರ್ಜಯತಿ ಸರ್ವಾಁಲ್ಲೋಕಾನ್ವಿಂದತಿ ಸರ್ವೇಷಾಂ ರಾಜ್ಞಾಂ ಶ್ರೈಷ್ಠ್ಯಮತಿಷ್ಠಾಂ ಪರಮತಾಂ ಗಚ್ಛತಿ ಸಾಮ್ರಾಜ್ಯಂ ಭೌಜ್ಯಂ ಸ್ವಾರಾಜ್ಯಂ ವೈರಾಜ್ಯಂ ಪಾರಮೇಷ್ಠ್ಯಂ ರಾಜ್ಯಂ ಮಾಹಾರಾಜ್ಯ-ಮಾಧಿಪತ್ಯಂ ಜಿತ್ವಾಽಸ್ಮಿಂಲ್ಲೋಕೇ ಸ್ವಯಂಭೂಃ ಸ್ವರಾಳಮೃತೋಽ ಮುಷ್ಮಿನ್ಸ್ವರ್ಗೇ ಲೋಕೇ ಸರ್ವಾನ್ಕಾಮಾನಾಪ್ತ್ವಾಽಮೃತಃ ಸಂಭವತಿ ಯಮೇತೇನೈಂದ್ರೇಣ ಮಹಾಭಿಷೇಕೇಣ ಕ್ಷತ್ರಿಯಂ ಶಾಪ-ಯಿತ್ವಾಽಭಿಷಿಂಚತಿ ||

ಮಹಾಭಿಷೇಕಮುಪಸಂಹರತಿ—ಯಂ ಕ್ಷತ್ರಿಯಮಾಚಾರ್ಯಃ ಸ್ವದ್ರೋಹರಾಹಿತ್ಯಾಯ ಶಪಥಂ ಕಾರಯಿತ್ವೇಂದ್ರಸಂಬಂಧಿನಾ ಮಹಾಭಿಷೇಕೇಣಾಭಿಷಿಂಚತಿ ಸೋಽಭಿಷಿಕ್ತಃ ಕ್ಷತ್ರಿಯಃ ಇಂದ್ರವತ್ಸರ್ವಂ ಜಯಾದಿಫಲಂ ಪ್ರಾಪ್ನೋತಿ ||

ರಾಜನ ಅಭಿಷೇಕದ ಸಮಾಪ್ತಿಯನ್ನು ತಿಳಿಸುವರು— ಪುರೋಹಿತನು ಮತ್ತು ರಾಜನು ಪರಸ್ಪರ ದ್ರೋಹ ಬಗೆಯುವುದಿಲ್ಲವೆಂಬ ಪ್ರತಿಜ್ಞೆಯನ್ನು ಕೈಗೊಂಡಮೇಲೆ ಪುರೋಹಿತನು, ದೇವತೆಗಳು ಹಿಂದೆ ಇಂದ್ರನ ಪಟ್ಟಾಭಿಷೇಕವನ್ನು ನೆರವೇರಿಸಿದ ಕ್ರಮದಂತೆ ರಾಜನಿಗೂ ಪಟ್ಟಾಭಿಷೇಕವನ್ನು ಮಾಡಿದನಂತರ ಆ ರಾಜನು ಪುರೋಹಿತನ ಮತ್ತು ಬ್ರಾಹ್ಮಣರ ಆಶೀರ್ವಾದದಂತೆ ಸಮಸ್ತಯುದ್ಧಭೂಮಿಯಲ್ಲಿಯೂ ಜಯಶೀಲನಾಗಿ ಸಮಸ್ತದೇಶಗಳನ್ನೂ ಗೆದ್ದು ಸಮಸ್ತರಾಜರಲ್ಲೂ ಶ್ರೇಷ್ಠವಾದ ಮಹಾರಾಜಪದವಿಯುನ್ನು ಪಡೆಯುವನು. ಮತ್ತು ಸಮ್ರಾಟ್ ಎಂದು (ಚಕ್ರವರ್ತಿ) ಪ್ರಸಿದ್ಧನಾಗಿಯೂ ಸ್ವತಂತ್ರನಾಗಿಯೂ ರಾಜ್ಯಾಧಿಪತ್ಯವನ್ನು ಅತ್ಯುನ್ನತಪರಮೇಷ್ಠಿಯೆಂಬ ಪದವಿಯನ್ನೂ ಪಡೆಯುವನು. ಈ ಲೋಕದಲ್ಲಿ ನಿರಾತಂಕವಾಗಿ ಬಹುಕಾಲದವರೆಗೆ ರಾಜಪದವಿಯನ್ನನುಭವಿಸಿ ಸ್ವರ್ಗಲೋಕದಲ್ಲಿಯೂ ತಾನು ಇಚ್ಛಿಸುವ ಇಷ್ಟಾರ್ಥಗಳನ್ನು ಪಡೆದು ಸುಖಿಸುವನು. ಇಂದ್ರನ ಪಟ್ಟಾಭಿಷೇಕಕ್ರಮದಂತೆ ಅಭಿಷಿಕ್ತನಾದ ರಾಜನು ಮೇಲೆ ಹೇಳಿದ ಸಮಸ್ತ ವೈಭವವನ್ನೂ ಪದವಿಗಳನ್ನೂ ಪಡೆದು ಕೀರ್ತಿಶಾಲಿಯಾಗಿ ಸುಖಿಸುವನು.

———

*English Translation*

The Vasavas then inaugurated him (Indra) in the eastern direction during thirty-one days by these three Rik verses, the Yajus verse, and the great words all just mentioned for the sake of obtaining universal sovereignty. Hence all kinds of eastern nations in the eastern regions are inaugurated to universal sovereignty, and called samraj, i. e. universal sovereign, after this precedent made once by the gods.

Then the Rudras inaugurated Indra in the southern region during thirty-one days, with the three Rik verses, the Yajus and the great words just mentioned, for obtaining enjoyment of pleasures. Hence all kings of living creatures chiefly beasts in the southern region are inaugurated for the enjoyment of pleasures and called bhoja, i. e. enjoyer.

Then the divine Adityas inaugurated him in the western region during thirty-one days, with those three Rik verses, that Yajus verse, and those great words, for obtaining independent rule. Hence all kings of the

Nichyas and Apachayas in the western coentries, are inaugurated to independent rule, and called "independent rulers."

Then the Visve Devah inaugurated him during thirty-one days in the northern region by those three Rik verses &c. for distinguished rule. Hence all people living in northern countries beyond the Himalaya, such as the Uttarakurus, Uttaramadras, are inaugurated for living without a king (Vairajyam), and called Viraj, i. e. without king.

Then the divine Sadhyas and Aptyas inaugurated Indra during thirty-one days in the middle region, which is a firmly establised footing the immovable centre) to the kingship (rajya). Hence the kings of the kurupanchalas, with the Vasas andUsinaras, are inaugurated to kingship, and called kings (raja).

Then the divine Marutas and Angiras inaugurated him during thirty-one days in the upper (urdhva) region for attaining fulfilment of the highest wishes, the position of a great king, of a supreme ruler, of an independent king, and long duration of his rule.

Indra thus became by means of this great inauguration ceremony possessed of the power of obtaining anything wished for, as had been only the prerogative of Prajapati. He conquered in all the various ways of possible conquest and won all people. He obtained the leadership precedence, and supremacy over all gods. After having conquered the position of a samraj (universal ruler) &c. he became in this world self-existing (svayambhuvah) an independent ruler, immortal, and in the heaven-world, after having attained all desires wished for, he became immortal also.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯ ಏಕೋನಚತ್ವಾರಿಂಶಾಧ್ಯಾಯೇ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೊಂಭತ್ತನೆಯ ಅಧ್ಯಾಯದಲ್ಲಿ ಐದನೆಯ ಖಂಡವು
ಸಮಾಪ್ತವಾದುದು

— ——

# ಅಥೈಕೋನಚತ್ವಾರಿಂಶಾಧ್ಯಾಯೇ ಷಷ್ಠಃ ಖಂಡಃ

## ಮೂವತ್ತೊಂಭತ್ತನೆಯ ಅಧ್ಯಾಯದಲ್ಲಿ ಆರನೆಯ ಖಂಡವು

———

[ರಾಜನನ್ನು ಅಭಿಷೇಕಮಾಡುವ ಕಾಲದಲ್ಲಿ ಉಪಯೋಗಿಸುವ ದಧಿ ಮೊದಲಾದ ದ್ರವ್ಯಗಳ ಪ್ರಶಂಸೆಯು. ಸುರಾ ಮೊದಲಾದ ಮಧ್ಯಪಾನವು. ರಾಜನು ಸೋಮಪಾನ ಮಾಡುವ ವಿಧಾನವು]

———

ಇಂದ್ರಿಯಂ ವಾ ಏತದಸ್ಮಿಂಲ್ಲೋಕೇ ಯದ್ದಧಿ ಯದ್ದಧ್ನಾಽಭಿಷಿಂಚತೀಂದ್ರಿಯಮೇವಾಸ್ಮಿಂಸ್ತದ್ದಧಾತಿ ರಸೋ ವಾ ಏಷ ಓಷಧಿ ವನಸ್ಪತಿಷು ಯನ್ಮಧು ಯನ್ಮಧ್ವಾಽಭಿಷಿಂಚತಿ ರಸಮೇವಾಸ್ಮಿಂಸ್ತದ್ದಧಾತಿ ತೇಜೋ ವಾ ಏತತ್ಪಶೂನಾಂ ಯದ್ಘೃತ್ವಂಯದ್ಘೃತೇನಾಭಿಷಿಂಚತಿ ತೇಜ ಏವಾಸ್ಮಿಂಸ್ತದ್ದಧಾತ್ಯಮೃತಂ ವಾ ಏತದಸ್ಮಿಂಲ್ಲೋಕೇ ಯದಾಪೋ ಯದದ್ಭಿರಭಿಷಿಂಚತ್ಯಮೃತತ್ವಮೇವಾಸ್ಮಿಂಸ್ತದ್ದಧಾತಿ||

**ಅಭಿಷೇಕಸಾಧನಾನಿ ದಧ್ಯಾದಿದ್ರವ್ಯಾಣಿ ಪ್ರಶಂಸತಿ—ದಧ್ನ ಇಂದ್ರಿಯಪಾಟವಹೇತುತ್ವಾದಿಂದ್ರಿಯತ್ವಮ್ । ಮಧುನಃ ಪುಷ್ಪಜನ್ಯತ್ವೇನೌಷಧಿವನಸ್ಪತಿರಸತ್ವಮ್ । ಘೃತಸ್ಯ ಸ್ನಿಗ್ಧಭಾಸ್ವರತ್ವೇನ ಪಶುತೇಜಸ್ತ್ವಮ್ । ಅಪಾಂ ಚಾಪ್ಯಾಯನಹೇತುತ್ವಾದಮೃತತ್ವಮ್ । ಏತೈರ್ದ್ರವ್ಯೈರಭಿಷಿಕ್ತೇ ಸತಿ ಯಜಮಾನ ಇಂದ್ರಿಯಾದಿಕಂ ಸಂಪಾದಯತಿ ॥**

ಅಭಿಷೇಕ ಸಾಧನವಾದ ದಧಿ ಮೊದಲಾದ ದ್ರವ್ಯಗಳನ್ನು ಪ್ರಶಂಸೆಮಾಡುವರು-ಪ್ರಪಂಚದಲ್ಲಿ ದಧಿ(ಮೊಸರು) ಎಂಬ ದ್ರವ್ಯವು ಇಂದ್ರಿಯ ಪಾಟವನ್ನುಂಟುಮಾಡುವುದು ಆದ್ದರಿಂದ ಈ ದಧಿ ದ್ರವ್ಯದಿಂದ ರಾಜನ ಪಟ್ಟಾಭಿಷೇಕವನ್ನು ಪುರೋಹಿತನು ನೆರವೇರಿಸುವನು. ಆದುದರಿಂದ ಯಜಮಾನನಾದ ರಾಜನ ಇಂದ್ರಿಯ ಪಟುತ್ವವು ವೃದ್ಧಿಯಾಗುವುದು. ವನಸ್ಪತಿ ಎಂದು ಸಸ್ಯಾದಿ ವೃಕ್ಷಗಳ ಪುಷ್ಪಾದಿಗಳಿಂದ ಮಧುವು(ಜೇನುತುಪ್ಪವು)ಉತ್ಪನ್ನವಾಗುವುದು. ಇಂತಹ ವನಸ್ಪತಿಗಳಲ್ಲಿ ಸಾರಭೂತವಾದ ಮಧುವಿನಿಂದ ಅಭಿಷೇಕಮಾಡಿದರೆ ರಾಜನು ಔಷಧಿವನಸ್ಪತಿಗಳ ಸಾರದಿಂದ ಪುಷ್ಟನಾಗುವನು. ಘೃತ ಅಥವಾ ತುಪ್ಪವೆಂಬ ದ್ರವ್ಯವು ಪಶುಗಳಿಂದ ಉತ್ಪನ್ನವಾಗಿ ಅವುಗಳ ತೇಜಸ್ಸಿನಂತಿರುವುದು. ಇಂತಹ ಘೃತದಿಂದ ಅಭಿಷೇಕ ಮಾಡಿದರೆ ಯಜಮಾನನಲ್ಲಿ ತೇಜಸ್ಸುಂಟಾಗುವುದು. ಸಕಲರನ್ನೂ ಆಪ್ಯಾಯನ(ತೃಪ್ತಿ) ಗೊಳಿಸುವುದರಿಂದ ಜಲವು ಅಮೃತ ಸ್ವರೂಪವಾಗಿರುವುದು. ಇಂತಹ ಜಲದಿಂದ ಅಭಿಷಿಕ್ತನಾದ ರಾಜನು ಅಮೃತವನ್ನೇ ಪಡೆದಂತಾಗುವುದು.

ಸೋಽಭಿಷಿಕ್ತೋಽಭಿಷೇಕ್ತ್ರೇ ಬ್ರಾಹ್ಮಣಾಯ ಹಿರಣ್ಯಂ ದದ್ಯಾತ್ಸಹಸ್ರಂ ದದ್ಯಾತ್ಕ್ಷೇತ್ರಂ ಚತುಷ್ಪಾದ್ದದ್ಯಾದಥಾಪ್ಯಾಹುರಸಂಖ್ಯಾತಮೇವಾ-

ಪರಿಮಿತಂ ದದ್ಯಾದಪರಿಮಿತೋ ವೈ ಕ್ಷತ್ರಿಯೋಽಪರಿಮಿತಸ್ಯಾ-
ವರುಧ್ಯಾ ಇತಿ ॥

ಆಚಾರ್ಯಾಯ ದಕ್ಷಿಣಾದಾನಂ ವಿಧತ್ತೇ—ಹಿರಣ್ಯಸ್ಯೈವ ಸಂಖ್ಯಾ (ಸಹಸ್ರಮಿತಿ) ಸಹಸ್ರ ನಿಷ್ಕ ಪರಿಮಿತಮಿತ್ಯರ್ಥಃ। ಚತುಷ್ಪಾಚ್ಛಬ್ದೇನ ಗವಾದಿಕಮಭಿಧೀಯತೇ। ಪೂರ್ವೋಕ್ತಸಹಸ್ರ-ಪಕ್ಷಮಪೇಕ್ಷ್ಯಾಧಿಕಾಭಿಪ್ರಾಯೇಣಾಸಂಖ್ಯಾತಮಿತಿ ಪಕ್ಷಾಂತರಮುಕ್ತಮ್। ತಸ್ಯೈವ ವ್ಯಾಖ್ಯಾನ-ಪರಿಮಿತಮಿತಿ। ಇಯದೇವೇತಿ ಸಂಖ್ಯಾನಿಯಮೋ ನಾಸ್ತಿ ಕಿಂತು ಸ್ವಶಕ್ತ್ಯನುಸಾರೇಣ ಪ್ರಭೂತ-ಮೇವ ದದ್ಯಾತ್। ಕ್ಷತ್ರಿಯೋ ಹಿ ದೇಶಾಧಿಪತಿತ್ವೇನಾಪರಿಮಿತೋ ಬಹುಧನಯುಕ್ತೋಽತೋಽಪರಿ-ಮಿತಸ್ಯ ಪ್ರಭೂತಸ್ಯ ಫಲಸ್ಯ ಸಿದ್ಧ್ಯರ್ಥಮಿತ್ಯಭಿಪ್ರಾಯೇಣ ಪಕ್ಷಾಂತರಮ್ ॥

ಅಭಿಷೇಕಮಾಡಿದ ಆಚಾರ್ಯನಾದ ಪುರೋಹಿತನಿಗೆ ರಾಜನು ಕೊಡಬೇಕಾದ ದಕ್ಷಿಣಾದ್ರವ್ಯವನ್ನು ವಿವರಿಸುವುದು—ಅಭಿಷಿಕ್ತನಾದ ರಾಜನು ತನಗೆ ಅಭಿಷೇಕಮಾಡಿದ ಬ್ರಾಹ್ಮಣನಿಗೆ ಸಹಸ್ರ ಸುವರ್ಣನಾಣ್ಯಗಳನ್ನೂ ಅಸಂಖ್ಯಾತವಾದ ಗೋವುಗಳನ್ನೂ ದಕ್ಷಿಣಾದ್ರವ್ಯವಾಗಿ ಕೊಡಬೇಕು, ರಾಜನಾದವನು ಅಪರಿಮಿತ ಐಶ್ವರ್ಯಸಂಪನ್ನನಾದುದರಿಂದ ತನ್ನ ಪುರೋಹಿತನಿಗೆ ಅಪರಿಮಿತವಾದ ಧನವನ್ನೂ ಗೋವುಗಳನ್ನೂ ದಾನಮಾಡಬೇಕು.

ಅಥಾಸ್ಮೈ ಸುರಾಕಂಸಂ ಹಸ್ತ ಆದಧಾತಿ-ಸ್ವಾದಿಷ್ಠಯಾ ಮದಿಷ್ಠಯಾ
ಪವಸ್ವ ಸೋಮ ಧಾರಯಾ। ಇಂದ್ರಾಯ ಪಾತವೇ ಸುತ ಇತಿ ॥

ದಕ್ಷಿಣಾಯಾಂ ದತ್ತಾಯಾಮಾಚಾರ್ಯಕರ್ತವ್ಯಂ ದರ್ಶಯತಿ—ಅಥ ದಕ್ಷಿಣಾಸ್ವೀಕಾರಾದ-ನಂತರಮಸ್ಮಾ ಅಸ್ಯ ಕ್ಷತ್ರಿಯಸ್ಯ ಹಸ್ತೇ ಸುರಯಾ ಪೂರ್ಣಂ ಕಾಂಸ್ಯಪಾತ್ರಂ ಸ್ವಾದಿಷ್ಠಯೇತಿ ಮಂತ್ರೇಣ ಸ್ಥಾಪಯೇತ್। ಸ ಚ ಮಂತ್ರಃ ಕೃತ್ಸ್ನಂಗಾಭಿಷೇಕೇ ವ್ಯಾಖ್ಯಾತಃ ॥

ಪುರೋಹಿತನು ರಾಜನಿಂದ ದಕ್ಷಿಣಾದ್ರವ್ಯವನ್ನು ಸ್ವೀಕಾರಮಾಡಿದಮೇಲೆ ರಾಜನ ಹಸ್ತದಲ್ಲಿ ಮದ್ಯದಿಂದ ತುಂಬಿದ ಕಾಂಸ್ಯ (ತಾಮ್ರದ) ಪಾತ್ರೆಯನ್ನು ಕೊಟ್ಟು ಸ್ವಾದಿಷ್ಠಯಾ ಮದಿಷ್ಠಯಾ ಎಂಬ ಮಂತ್ರವನ್ನು (ಋ. ಸಂ ೯-೧-೧) ಹೇಳಬೇಕು. ಈ ಮಂತ್ರದ ಅರ್ಥವನ್ನು ಮೊದಲೇ ವಿವರಿಸಲಾಗಿದೆ.

ತಾಂ ಪಿಬೇದ್ಯದತ್ರ ಶಿಷ್ಟಂ ರಸಿನಃ ಸುತಸ್ಯ ಯದಿಂದ್ರೋ ಅಪಿಬ-
ಚ್ಛಚೀಭಿಃ। ಇದಂ ತದಸ್ಯ ಮನಸಾ ಶಿವೇನ ಸೋಮಂ ರಾಜಾನ-
ಮಿಹ ಭಕ್ಷಯಾಮಿ। ಅಭಿ ತ್ವಾ ವೃಷಭಾ ಸುತೇ ಸುತಂ ಸೃಜಾಮಿ
ಪೀತಯೇ। ತೃಂಪಾ ವ್ಯಶ್ನುಹೀ ಮದಮಿತಿ ॥

ಕ್ಷತ್ರಿಯಕರ್ತವ್ಯಂ ದರ್ಶಯತಿ—ತಾಂ ಕಾಂಸ್ಯಪಾತ್ರಸ್ಥಾಂ ಸುರಾಂ ಕ್ಷತ್ರಿಯೋ ಯದತ್ರೇತಿ ಮಂತ್ರದ್ವಯೇನ ಪಿಬೇತ್। ಅತ್ರ ಕಾಂಸ್ಯಪಾತ್ರೇ ರಸಿನೋ ರಸಯುಕ್ತಸ್ಯ ಸುತಸ್ಯಾಭಿಷುತಸ್ಯ ವ್ರೀಹ್ಯಾದ್ಯಂಕುರಜನ್ಯಸ್ಯ ಪೇಯದ್ರವಸ್ಯ ಯಚ್ಛಿಷ್ಟಂ ಯೋಽವಶಿಷ್ಟೋ ಭಾಗಃ। ಯಚ್ಚ ದ್ರವ್ಯಂ

**ಶಚೀಭಿಃ ಕರ್ಮವಿಶೇಷೈಃ ಸಂಸ್ಕೃತಮಿಂದ್ರೋಽಪಿಬತ್ । ಶಚೀಶಬ್ದಃ ಕರ್ಮನಾಮ । ಇಹಾಸ್ಮಿನ್ನ-ಭಿಷೇಕಕರ್ಮಣಿ ಸೋಮಂ ರಾಜಾನಂ ಸೋಮಸದೃಶಮಸ್ಯ ಪೇಯದ್ರವ್ಯಸ್ಯ ತದಿದಂ ಸ್ವರೂಪಂ ಶಿವೇನ ಶಾಂತೇನ ಭಕ್ತಿಯುಕ್ತೇನ ಮನಸಾ ಭಕ್ಷಯಾಮಿ । ಸೋಽಯಮೇಕೋ ಮಂತ್ರಃ । ಹೇ ವೃಷಭ ಶ್ರೇಷ್ಠೇಂದ್ರ ತ್ವಾಽಭಿ ತ್ವಾಮಭಿಲಕ್ಷ್ಯ ಸುತೇಽಸ್ಮಿನ್ದ್ರವ್ಯೇಽಭಿಷುತೇ ಸತಿ ಪೀತಯೇ ತವ ಪಾನಾರ್ಥಂ ಸುತಮಭಿಷುತಂ ದ್ರವ್ಯಂ ಸೃಜಾಮಿ ತ್ವದ್ಧಸ್ತೇ ದದಾಮಿ । ತೃಂಪ ತೇನ ದ್ರವ್ಯೇಣ ತೃಪ್ತೋ ಭವ । ಮದಂ ಹರ್ಷಂ ವ್ಯಶ್ನುಹಿ ವಿಶೇಷೇಣ ಪ್ರಾಪ್ನುಹಿ । ಅಯಂ ದ್ವಿತೀಯೋ ಮಂತ್ರಃ॥**

ಅನಂತರ ರಾಜನು ತನ್ನ ಹಸ್ತದಲ್ಲಿರುವ ಕಾಂಸ್ಯಪಾತ್ರೆಯಲ್ಲಿರುವ ಮದ್ಯವನ್ನು (ಸೋಮವನ್ನು) ಮುಂದೆ ಹೇಳುವ ಎರಡು ಮಂತ್ರಗಳನ್ನು ಪಠಿಸಿ ಪಾನಮಾಡಬೇಕು. ಮೊದಲನೆಯ ಮಂತ್ರದ ಅರ್ಥವು- ಎಲೈ ಸೋಮವೇ ಈ ಕಾಂಸ್ಯ ಪಾತ್ರೆಯಲ್ಲಿ ರಸಯುಕ್ತವಾಗಿ ಹಿಂಡಿ ಸಿದ್ಧಪಡಿಸಲ್ಪಟ್ಟಿರುವ ಮತ್ತು ಸಂಸ್ಕಾರವಿಶೇಷಗಳಿಂದ ಶುದ್ಧವಾದ ಈ ಸೋಮವನ್ನು ಯಾವ ಇಂದ್ರನು ಪಾನಮಾಡಿದನೋ ಅಂತಹ ಶ್ರೇಷ್ಠವಾದುದೂ ಪಾತ್ರೆಯಲ್ಲಿ ಉಳಿದಿರುವುದೂ ಅಭಿಷೇಕಕರ್ಮದಲ್ಲಿ ಪಾನಯೋಗ್ಯವಾದುದೂ ಆದ ಈ ಸೋಮರಸವನ್ನು ಶಾಂತವಾದ ಭಕ್ತಿಯುಳ್ಳ ಮನಸ್ಸಿನಿಂದ ಪಾನಮಾಡುತ್ತೇನೆ. ಇದು ಮೊದಲನೆಯ ಮಂತ್ರವು. **ಅಭಿತ್ವಾ ವೃಷಭಾ ಸುತೇ** (ಋ. ಸಂ. ೮-೪೫-೨೨) ಎಂಬುದು ಎರಡನೆಯ ಮಂತ್ರವು. ಇದರ ಅರ್ಥವು- ಅಭೀಷ್ಟಗಳನ್ನು ಯಥೇಚ್ಛವಾಗಿ ಕೊಡುವುದರಲ್ಲಿ ಶ್ರೇಷ್ಠನಾದ (ಇಂದ್ರನೇ) ನಿನಗಾಗಿ ಈ ದ್ರವ್ಯಗಳಿಂದ ಈ ಸೋಮರಸವನ್ನು ಹಿಂಡಿ ಸಿದ್ಧಪಡಿಸಲಾಗಿದೆ. ಈ ಸೋಮವನ್ನು ನಿನ್ನ ಹಸ್ತದಲ್ಲಿ ಕೊಟ್ಟಿರುವೆನು. ಇದನ್ನು ಪಾನ ಮಾಡಿ ತೃಪ್ತಿಯನ್ನು ಹೊಂದು ಮತ್ತು ವಿಶೇಷವಾಗಿ ಹರ್ಷವನ್ನೂ ಹೊಂದು ಎಂದು ಈ ಮಂತ್ರದ ಅರ್ಥವು.

ಯೋ ಹ ವಾವ ಸೋಮಪೀಥಃ ಸುರಾಯಾಂ ಪ್ರವಿಷ್ಟಃ ಸಹೈವೈತೇ ನೈಂದ್ರೇಣ ಮಹಾಭಿಷೇಕೇಣಾಭಿಷಿಕ್ತಸ್ಯ ಕ್ಷತ್ರಿಯಸ್ಯ ಭಕ್ಷಿತೋ ಭವತಿ ನ ಸುರಾ

**ತದಿದಂ ಪಾನಂ ಪ್ರಶಂಸತಿ—ಯೋ ಹ ವಾವ ಯಃ ಖಲು ಸೋಮಪೀಥಃ ಸೋಮಸ್ಯ ಪಾನ ವಿಶೇಷಃ ಸುರಾಯಾಂ ಸುರಾದ್ರವ್ಯೇ ಪ್ರವಿಷ್ಟೋಽಸ್ತಿ । ಏತೇನ ಸೋಮಪಾನವಿಶೇಷೇಣ ಸಹೈವ ಪೂರ್ವೋಕ್ತೇಂದ್ರಾಭಿಷೇಕವಿಧಾನೇನಾಭಿಷಿಕ್ತಸ್ಯ ಕ್ಷತ್ರಿಯಸ್ಯ ದ್ರವ್ಯವಿಶೇಷೋ ಭಕ್ಷಿತೋ ಭವತಿ । ನ ತು ಸುರಾ ಭಕ್ಷಿತಾ ಭವತಿ । ಸೋಽಯಂ ಮಂತ್ರದ್ವಯಸ್ಯ ಮಹಿಮಾ ॥**

ಮೇಲೆ ಹೇಳಿದ ಸೋಮಪಾನವನ್ನು ಪ್ರಶಂಸೆಮಾಡುವರು. ಮೇಲೆ ಹೇಳಿದ ಸೋಮರಸವು ಹಿಂದೆ ಅಭಿಷೇಕಾ ನಂತರ ರಾಜನು ಪಾನಮಾಡಿದ ಸುರಾ ದ್ರವ್ಯದಲ್ಲಿ(ಉದರದಲ್ಲಿ)ಸೇರಿಹೋಗಿ ಮಿಶ್ರಿತವಾದರೂ ರಾಜನು ಸೋಮ ಪಾನವನ್ನು ಮಾಡಿದಂತೆಯೇ ಆಗುವುದು. ಸುರಾ(ಮದ್ಯ)ಪಾನವನ್ನು ಮಾಡಿದಂತೆ ಆಗುವುದಿಲ್ಲ. ಇದು ಸೋಮ ರಸದ ಮಹಿಮೆಯೇ ಆಗಿರುವುದು.

ತಾಂ ಪೀತ್ವಾಽಭಿಮಂತ್ರಯೇತಾಪಾಮ ಸೋಮಂ ಶಂ ನೋ ಭವತಿ ॥

**ಪಾನಾದೂರ್ಧ್ವಮಭಿಮಂತ್ರಣಂ ವಿಧತ್ತೇ—ಅಪಾಮ ಸೋಮಮಿತ್ಯೃಗೇಕಾ । ಶಂ ನೋ ಭವೇತಿ ದ್ವಿತೀಯಾ । ತಾಭ್ಯಾಮಭಿಮಂತ್ರಯೇತ ॥**

ಮೇಲೆ ಹೇಳಿದಂತೆ ರಾಜನು ಸೋಮರಸವನ್ನು ಪಾನಮಾಡಿದಮೇಲೆ ಪುರೋಹಿತನು ರಾಜನನ್ನು ಮುಂದೆ ಹೇಳುವ ಮಂತ್ರಗಳಿಂದ ಅಭಿಮಂತ್ರಿಸಬೇಕು. **ಅಪಾಮ ಸೋಮಂ** (ಋ. ಸಂ. ೮-೪೮-೩)ಎನ್ನುವುದು ಮೊದಲನೆಯ ಮಂತ್ರವು **ಶಂ ನೋ ಭವ ಹೃದೇ ಆಪೀತ ಇಂದೋ** (ಋ. ಸಂ. ೮-೪೮೪)ಎನ್ನುವುದು ಎರಡನೆಯ ಮಂತ್ರವು. ಈ ಎರಡು ಮಂತ್ರಗಳಿಂದ ಪುರೋಹಿತನು ರಾಜನನ್ನು ಅಭಿಮಂತ್ರಿಸಬೇಕು.

ತದ್ಯಥೈವಾದಃ ಪ್ರಿಯಃ ಪುತ್ರಃ ಪಿತರಂ ಪ್ರಿಯಾ ವಾ ಜಾಯಾ ಪತಿಂ ಸುಖಂ ಶಿವಮುಪಸ್ಪೃಶತ್ಯಾವಿಸ್ರಸ ಏವಂ ಹೈವೈತೇನೈಂದ್ರೇಣ ಮಹಾಭಿಷೇಕೇಣಾಭಿಷಿಕ್ತಸ್ಯ ಕ್ಷತ್ರಿಯಸ್ಯ ಸುರಾ ವಾ ಸೋಮೋ ವಾಽನ್ಯದ್ವಾಽನ್ನಾದ್ಯಂ ಸುಖಂ ಶಿವಮುಪಸ್ಪೃಶತ್ಯಾವಿಸ್ರಸಃ ॥

ಇದಾನೀಂ ದೃಷ್ಟಾಂತೇನ ಪಾನಂ ಪ್ರಶಂಸತಿ—ತತ್ತತ್ರ ಪಾನೇಽದೋ ಲೌಕಿಕಂ ನಿದರ್ಶನಮುಚ್ಯತೇ। ಯಥೈವ ಪ್ರಿಯಃ ಪುತ್ರಃ ಶಿವಂ ಸುಖಂ ಯಥಾ ಭವತಿ ತಥಾ ಪಿತರಮುಪಸ್ಪೃಶತಿ। ಪ್ರಿಯಾ ವಾ ಜಾಯಾ ಚ ಪತಿಂ ಯಥಾ ಸ್ಪೃಶತಿ। ಶಿವಂ ಶಾಂತಂ ಶಾಸ್ತ್ರನಿಷಿದ್ಧಮಾರ್ಗೇಣ ಯತ್ಸುಖಂ ತನ್ನರಕಹೇತುತ್ವಾದುಗ್ರಮ್। ವಿಹಿತಮಾರ್ಗೇಣ ತು ತದಭಾವಾಚ್ಛಾಂತಮ್। ಸುಖಸ್ಪರ್ಶಸಾವಧಿರಾವಿಸ್ರಸ ಇತ್ಯನೇನೋಚ್ಯತೇ। ಆವಿಸ್ರಸ ಆವಿಸ್ರಂಸನಾದ್ದೇಹಪಾತಪರ್ಯಂತಮಿತ್ಯರ್ಥಃ। ಯಥಾ ಸ್ಪರ್ಶದ್ವಯಂ ದೃಷ್ಟಸುಖಹೇತುಃ। ಏವಂ ಹೈವಾನೇನೈವ ಪ್ರಕಾರೇಣ ಪೂರ್ವೋಕ್ತೈಂದ್ರಮಹಾಭಿಷೇಕವಿಧಿನಾಽಭಿಷಿಕ್ತಸ್ಯ ಕ್ಷತ್ರಿಯಸ್ಯ ಸುರಾ ವಾ ಸೋಮೋ ವಾಽನ್ಯಾನ್ಯನ್ನದ್ರವ್ಯಾಣಿ ದೇಹಪಾತಪರ್ಯಂತಂ ಶಾಂತಸುಖಸ್ಪರ್ಶಪ್ರದಾನಿ ॥

ಈಗ ದೃಷ್ಟಾಂತಪೂರ್ವಕವಾಗಿ ಪಾನಪ್ರಶಂಸೆಯನ್ನು ಮಾಡುವರು– ಈ ಪಾನವಿಶೇಷದಲ್ಲಿ ಒಂದು ಲೌಕಿಕನಿದರ್ಶನವನ್ನು ತಿಳಿಸುವರು. ಒಬ್ಬ ಪುರುಷನಿಗೆ ಪ್ರಿಯನಾದ ಪುತ್ರನು ತನ್ನ ತಂದೆಯನ್ನು ಸ್ಪರ್ಶಮಾಡಿದರೆ ಆಸ್ಪರ್ಶವು ಹೇಗೆ ಹಿತಕರವಾಗಿರುವುದೋ, ಪತ್ನಿಯು ಪತಿಯನ್ನು ಸ್ಪರ್ಶಮಾಡಿದರೆ ಅದು ಹೇಗೆ ಹಿತಕರವಾಗಿರುವುದೋ ಅದರಂತೆ ಅಭಿಷಿಕ್ತನಾದ ರಾಜನಿಗೆ ಅವನು ಪಾನಮಾಡಿದ ಸುರಾ (ಮದ್ಯವು) ಅಥವಾ ಸೋಮವು ಹಿತಕರವಾಗಿರುವುದು. ಈ ವಿಧವಾದ ಸ್ಪರ್ಶಕ್ಕೆ ಶಿವ, ಶಾಂತ ಎಂದು ಹೇಳುವರು. ಶಾಸ್ತ್ರನಿಷಿದ್ಧವಾದ ಸುಖವು ಉಗ್ರವು. ಅದು ನರಕಕ್ಕೆ ಕಾರಣಭೂತವಾದುದು. ಅಭಿಷೇಕಾನಂತರ ಸುರಾ ಮತ್ತು ಸೋಮದ್ರವ್ಯಗಳಿಂದ ಉಂಟಾಗುವ ಸ್ಪರ್ಶವು ಮರಣ ಪರ್ಯಂತವೂ ಸುಖಹೇತುವಾಗಿರುವುದು.

———

*English Translation*

**(The meaning and effect of the various liquids poured over the head of the King. His drinking of spirituous liquor. He drinks the Soma mystically.**

By sprinkling the king with curds, the priest makes his senses sharp; for curds represent sharpness of senses in this world. By sprinkling him

with honey; the priest makes him vigorous; for honey is the vigour in herbs and trees. By sprinkling him with clarified butter, he bestows upon him splendour; for clarified butter is the brightness of cattle. By sprinkling him with water, he makes him free from death (immortal) ; for waters represent in this world the drink of immortality (amrita)

The king who is this inaugurated, should present to the Brahman who has inaugurated him, gold, a thousand cows, and a field in form of a quadrangle. They say, however, that the amount of the reward is not limited and restricted to this (it may be much higher), for the Kshattriya (i. e. his power) has no limits, and to obtain unlimited power, the reward should as to its greatness be unlimited also.

Then the priest gives into his hands a goblet filled with spiritnous liquor, repeating the mantra, svadlshthaya &c. (see, 8). He then should drink, the remainder (after previous libation to the gods), when repeating the following two mantra, : "Of what juicy well prepared beverage Indra drank with his associates, just the same, viz.; the king Soma, I drink here with my mind being devoted to him (Soma)." The second Mantra (Rigveda 8,45,22). "To thee who growest like a bullock (Indra), by drinking Soma, I send off the Soma juice which was squeezed to drink it; may it satiate thee and make thee well drunk."

The Soma beverage which is in a mystical way cotained in the spirituous liquor, is thus drunk by the king, who is inaugurated by means of Indra's great inauguration ceremony the ceremony just described, and not the spirituous liquor. After having drunk this mystical Soma, he should repeat the following mantras, apama, Somam, (8,48,3) i.e. we have drunk Soma, and sanno bhava (10,37,10) i.e. Be it propitious to us !

The drinking of spirituous liquor, or Soma, or the enjoyment of some other exquisite food, affects the body of the Kshattriya who is inaugurated by means of Indra's great inauguration ceremony, just as

pleasantly and agreeably till it falls down on account of drunkenness, as the son feels such an excess of joy when embracing his father, or the wife when embracing her husband, as to lose all self-command.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯ ಏಕೋನಚತ್ವಾರಿಂಶಾಧ್ಯಾಯೇ ಷಷ್ಠಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೊಂಭತ್ತನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವಾದುದು.

---

## ಏಕೋನ ಚತ್ವಾರಿಂಶಾಧ್ಯಾಯೇ ಸಪ್ತಮಃ ಖಂಡಃ

### ಮೂವತ್ತೊಂಭತ್ತನೆಯ ಅಧ್ಯಾಯವಲ್ಲಿ ಏಳನೆಯ ಖಂಡವು

---

[ ಪೂರ್ವದಲ್ಲಿ ಯಾವ ಯಾವ ರಾಜರು ಮೇಲೆ ಹೇಳಿದ ಕ್ರಮದಲ್ಲಿ ಪಟ್ಟಾಭಿಷಿಕ್ತರಾಗಿ
ಅನೇಕ ದೇಶಗಳನ್ನು ಜಯಿಸಿ ಅಶ್ವಮೇಧಯಾಗವನ್ನು ಮಾಡಿದರು.
ಜನಮೇಜಯ ವಿಶ್ವಕರ್ಮಾ ಮೊದಲಾದ ರಾಜರ ವಿಷಯ ]

---

**ಏತೇನ ಹ ವಾ ಐಂದ್ರೇಣ ಮಹಾಭಿಷೇಕೇಣ ತುರಃ ಕಾವಷೇಯೋ ಪಾರಿಕ್ಷಿತಮಾಭಿಷಿಷೇಚ ತಸ್ಮಾದು ಜನಮೇಜಯಃ ಪಾರಿಕ್ಷಿತಃ ಸಮಂತಂ ಸರ್ವತಃ ಪೃಥಿವೀಂ ಜಯನ್ಪರೀಯಾಯಾಶ್ವೇನ ಚ ಮೇಧ್ಯೇನೇಜೇ ||**

ಉಕ್ತ ಮಹಾಭಿಷೇಕಂ ಚಿರಂತನಶಿಷ್ಟಾಚಾರೋದಾಹರಣೇನ ಪ್ರಶಂಸತಿ–ಕವಷಸ್ಯ ಪುತ್ರಸ್ತುರನಾಮಕೋ ಮಹರ್ಷಿಃ ಪರಿಕ್ಷಿತಪುತ್ರಂ ಜನಮೇಜಯಮುಕ್ತವಿಧಾನೇನಾಭಿಷಿಷೇಚ । ತಸ್ಮಾದೇವ ಕಾರಣಾಜ್ಜನಮೇಜಯಃ ಸರ್ವತಃ ಸರ್ವಾಸು ದಿಕ್ಷು ಪೃಥಿವೀಂ ಸಮಂತಮಂತೇನ ಸಮುದ್ರತೀರೇಣ ಸಂಯುಕ್ತಂ ಯಥಾ ಭವತಿ ತಥಾ ಜಯನ್ವಿಜಯಂ ಪ್ರಾಪ್ನುವನ್ಪರೀಯಾಯ ಪರಿತಶ್ಚಚಾರ। ಅಭಿಷೇಕಮಾಹಾತ್ಮ್ಯೇನೈವ ದಿಗ್ವಿಜಯಂ ಕೃತವಾನಿತ್ಯರ್ಥಃ । ಅಭಿಷೇಕಪ್ರಸಾದಾದೇವ ಮೇಧ್ಯೇನ ಯಾಗಯೋಗ್ಯೇನಾಶ್ವೇನ ಚೇಜ ಇಷ್ಟವಾನ್। ಅಶ್ವಮೇಧಂ ಕೃತವಾನಿತ್ಯರ್ಥಃ ||

ಪೂರ್ವದಲ್ಲಿ ಕವಷಪುತ್ರನಾದ ತುರನೆಂಬ ಮಹರ್ಷಿಯು ಪರೀಕ್ಷಿದ್ರಾಜನ ಪುತ್ರನಾದ ಜನಮೇಜಯನೆಂಬ ರಾಜನಿಗೆ ವಿಧಾನೋಕ್ತಪ್ರಕಾರವಾಗಿ ಪಟ್ಟಾಭಿಷೇಕವನ್ನು ಮಾಡಿದನು. ಈ ಅಭಿಷೇಕಪ್ರಭಾವದಿಂದ ಜನಮೇಜಯ ರಾಜನು ಸಮುದ್ರ ಪರ್ಯಂತವಾಗಿರುವ ಸಕಲದೇಶಗಳನ್ನು ಜಯಿಸಿದನು. ಮತ್ತು ಈ ಅಭಿಷೇಕಪ್ರಭಾವದಿಂದಲೇ ಯಾಗ ಯೋಗ್ಯವಾದ ಅಶ್ವದಿಂದ ಅಶ್ವಮೇಧಯಾಗವನ್ನೂ ಮಾಡಿದನು.

**ತದೇಷಾಽಭಿ ಯಜ್ಞಗಾಥಾ ಗೀಯತೇ ॥**

**ಅಸ್ಮಿನ್ನರ್ಥೇ ಕಾಂಚಿದ್ಗಾಥಾಮುದಾಹರತಿ–ತತ್ತಸ್ಮಿಞ್ಜನಮೇಜಯವೃತ್ತಾಂತ ಏಷಾ ವಕ್ಷ್ಯಮಾಣಾ ಯಜ್ಞವಿಷಯಾ ಗೀತಿರ್ವೈದಿಕೈರಭಿತೋ ಗೀಯತೇ ॥**

ಈ ವಿಷಯದಲ್ಲಿ ಒಂದು ಗಾಥೆಯಿರುವುದು. ಈ ಗಾಥೆಯಲ್ಲಿ ಜನಮೇಜಯರಾಜನು ಆಚರಿಸಿದ ಅಶ್ವಮೇಧಯಜ್ಞ ಮೊದಲಾದ ವಿಷಯಗಳು ಗಾನರೂಪವಾಗಿ ವಿವರಿಸಲ್ಪಟ್ಟಿವೆ.

**ಆಸಂದೀವತಿ ಧಾನ್ಯಾದಂ ರುಕ್ಮಿಣಂ ಹರಿತಸ್ರಜಂ । ಅಶ್ವಂ ಬಬಂಧ ಸಾರಂಗಂ ದೇವೇಭ್ಯೋ ಜನಮೇಜಯ ಇತಿ ॥**

**ತಾಂ ಗಾಥಾಂ ದರ್ಶಯತಿ—ಆಸಂದೀವಾನಿತಿ ದೇಶವಿಶೇಷಸ್ಯ ನಾಮಧೇಯಂ ತಸ್ಮಿನ್ದೇಶೇ ಜನಮೇಜಯೋ ದೇವೇಭ್ಯೋ ದೇವಾರ್ಥಂ ಯಾಗಯೋಗ್ಯಮಶ್ವಂ ಬಬಂಧ । ಕೀದೃಶಮಶ್ವಂ ಧಾನ್ಯಾದಂ ಧಾನ್ಯಮೇವಾತ್ತಿ । ರುಕ್ಮಿಣಮ್ । ರುಕ್ಮಶಬ್ದೇನ ಲಲಾಟಗತಂ ಶ್ವೇತಲಾಂಛನಮುಪಲಕ್ಷ್ಯತೇ । ತದ್ಯುಕ್ತಮ್ । ಹರಿತವರ್ಣಾಸ್ರಗ್ಯಸ್ಯಾಸೌ ಹರಿಸ್ರಕ್ । ಪುಷ್ಪಮಾಲೇವ ವರ್ಣೋ ದೇಹಂ ವ್ಯಾಪ್ಯ ವರ್ತತ ಇತ್ಯರ್ಥಃ । ಸಾರಂ ಕರ್ಮಸು ಶ್ರೇಷ್ಠಂ ಯಾಗಂ ಗಚ್ಛತೀತಿ ಸಾರಂಗಃ । ಇತ್ಯನಯ ಗಾಥಯಾ ಜನಮೇಜಯಸ್ಯಾಭಿಷೇಕಮಹಿಮೋದಾಹೃತಃ ॥**

ಮೇಲೆ ಹೇಳಿರುವ ಗಾಥೆಯನ್ನು ವಿವರಿಸುವರು. ಈ ಜನಮೇಜಯರಾಜನು ಆಸಂದೀವಾನ್ ಎಂಬ ದೇಶದಲ್ಲಿ ದೇವತೆಗಳನ್ನುದ್ದೇಶಿಸಿ ಯಜ್ಞಮಾಡುವುದಕ್ಕಾಗಿ ಯಾಗಯೋಗ್ಯವಾದ ಒಂದು ಅಶ್ವವನ್ನು ಹುಡಿಕಿ ತಂದು ಅದನ್ನು ಕಟ್ಟಿಹಾಕಿದನು. ಈ ಅಶ್ವವು ಧಾನ್ಯವನ್ನೇ ತನ್ನ ಆಹಾರವಾಗಿ ಉಪಯೋಗಿಸುತ್ತಿರುವುದು. ಇದರ ಹಣೆಯಲ್ಲಿ ಶ್ವೇತ (ಬಿಳಿಯ) ವರ್ಣದ ಲಾಂಛನವು ಶೋಭಿಸುತ್ತಿರುವುದು. ಇದನ್ನು ಹಳದೀಬಣ್ಣದ ಹೂವುಗಳನ್ನು ಕಟ್ಟಿ ಮಾಡಿದ ಮಾಲೆ (ಹಾರ) ಗಳಿಂದ ಅಲಂಕರಿಸಿರುವರು. ಇಂತಹ ಅಶ್ವವು ಯಜ್ಞಕರ್ಮದಲ್ಲಿ ಉಪಯೋಗಿಸಲು ಶ್ರೇಷ್ಠನೆಂದು ಹೇಳಲ್ಪಡುವುದು. ಇಂತಹ ಶ್ರೇಷ್ಠವಾದ ಕುದುರೆಯಿಂದ ಜನಮೇಜಯರಾಜನು ಅಶ್ವಮೇಧಯಾಗವನ್ನು ವಿಧ್ಯುಕ್ತಪ್ರಕಾರವಾಗಿ ಮಾಡಿದನು.

**ಏತೇನ ಹ ವಾ ಐಂದ್ರೇಣ ಮಹಾಭಿಷೇಕೇಣ ಚ್ಯವನೋ ಭಾರ್ಗವಃ ಶಾರ್ಯಾತಂ ಮಾನವಮಭಿಷಿಷೇಚ ತಸ್ಮಾದು ಶಾರ್ಯಾತೋ ಮಾನವಃ ಸಮಂತಂ ಸರ್ವತಃ ಪೃಥಿವೀಂ ಜಯನ್ಪರೀಯಾಯಾಶ್ವೇನ ಚ ಮೇಧ್ಯೇನೇಜೇ ದೇವಾನಾಂ ಹಾಪಿ ಸತ್ರೇ ಗೃಹಪತಿರಾಸ ॥**

ಜನಮೇಜಯವಚ್ಛಾರ್ಯಾತನಾಮಕಂ ರಾಜಾನಮುದಾಹರತಿ—ಭೃಗೋಃ ಪುತ್ರಶ್ಚ್ಯವನನಾಮಕೋ ಮಹರ್ಷಿರ್ಮನುವಂಶೋತ್ಪನ್ನಂ ಶಾರ್ಯಾತನಾಮಕಂ ರಾಜಾನಮಭಿಷಿಷೇಚ । ತಸ್ಮಾತ್ಫಲಂ ಪೂರ್ವವತ್ । ಕಿಂ ಚ ದೇವಾನಾಂ ಸಂಬಂಧಿನಿ ಸತ್ರೇಽಪಿ ಶಾರ್ಯಾತೋ ಗೃಹಪತಿರಭೂತ್॥

ಜನಮೇಜಯ ರಾಜನಂತೆ ಶಾರ್ಯಾತ ಎಂಬ ರಾಜನ ವಿಷಯವನ್ನೂ ವಿವರಿಸುವರು ಭೃಗುಋಷಿಯ ಪುತ್ರನಾದ ಚ್ಯವನನೆಂಬ ಋಷಿಯು ಮನುವಂಶೋತ್ಪನ್ನನಾದ ಶಾರ್ಯಾತನಾಮಕರಾಜನಿಗೆ ವಿಧ್ಯುಕ್ತವಾಗಿ ಅಭಿಷೇಕವನ್ನು ಮಾಡಿದನು. ಅಭಿಷೇಕದ ಫಲವು ಹಿಂದೆ ಹೇಳಿದಂತೆಯೇ ಆಗಿರುವುದು.

ಏತೇನ ಹ ವಾ ಐಂದ್ರೇಣ ಮಹಾಭಿಷೇಕೇಣ ಸೋಮಶುಷ್ಮಾ ವಾಜರತ್ನಾಯನಃ ಶತಾನೀಕಂ ಸಾತ್ರಾಜಿತಮಭಿಷಿಷೇಚ ತಸ್ಮಾದು ಶತಾನೀಕಃ ಸಾತ್ರಾಜಿತಂ ಸಮಂತಂ ಸರ್ವತಃ ಪೃಥಿವೀ ಜಯನ್ಪರೀಯಾಯಾಶ್ವೇನ ಚ ಮೇಧ್ಯೇನೇಜೇ ॥

ಶತಾನೀಕನಾಮಕಂ ರಾಜಾನಮುದಾಹರತಿ—ಸೋಮಶುಷ್ಮನಾಮಕಃ ಕಶ್ಚಿನ್ಮಹರ್ಷಿಃ । ಸ ಚ ವಾಜರತ್ನಸ್ಯ ಪೌತ್ರಸ್ತಥಾವಿಧೋ ಮುನಿಃ ಸತ್ರಾಜಿತಃ ಪುತ್ರಂ ಶತಾನೀಕನಾಮಕಂ ಕ್ಷತ್ರಿಯಮಭಿಷಿಷೇಚ । ಶೇಷಂ ಪೂರ್ವವತ್ ॥

ವಾಜರತ್ನನೆಂಬ ಋಷಿಯ ಮೊಮ್ಮಗನಾದ ಸೋಮಶುಷ್ಮಾ ಎಂಬ ಒಬ್ಬ ಋಷಿಯು ಸತ್ರಾಜಿತನೆಂಬ ರಾಜನ ಪುತ್ರನಾದ ಶತಾನೀಕನೆಂಬ ರಾಜನಿಗೆ ವಿಧ್ಯುಕ್ತವಾಗಿ ದೇವತೆಗಳು ಇಂದ್ರನಿಗೆ ಮಾಡಿದಂತೆ ಪಟ್ಟಾಭಿಷೇಕವನ್ನು ಮಾಡಿದನು. ಮತ್ತು ಅನಂತರ ಅಶ್ವಮೇಧಯಾಗವನ್ನು ಮಾಡಿದನು.

ಏತೇನ ಹ ವಾ ಐಂದ್ರೇಣ ಮಹಾಭಿಷೇಕೇಣ ಪರ್ವತನಾರದಾವಾಂಬಾಷ್ಠ್ಯಮಭಿಷಿಷಿಚತುಸ್ತಸ್ಮಾದ್ವಾಂಬಾಷ್ಠ್ಯಃ ಸಮಂತಂ ಸರ್ವತಃ ಪೃಥಿವೀಂ ಜಯನ್ಪರೀಯಾಯಾಶ್ವೇನ ಚ ಮೇಧ್ಯೇನೇಜೇ ॥

ಆಂಬಷ್ಠ್ಯನಾಮಾನಂ ರಾಜಾನಮುದಾಹರತಿ—

ಪರ್ವತನಾರದರೆಂಬ ಋಷಿಗಳು ಆಂಬಾಷ್ಠ್ಯ ಎಂಬ ರಾಜನಿಗೆ ಇಂದ್ರನ ಪಟ್ಟಾಭಿಷೇಕ ಕ್ರಮದಂತೆ ಅಭಿಷೇಕವನ್ನು ಮಾಡಿದರು. ಈ ಅಭಿಷೇಕದ ಪ್ರಭಾವದಿಂದ ಆ ರಾಜನು ಸಮಸ್ತ ದೇಶಗಳನ್ನೂ ಜಯಿಸಿ ಅಶ್ವಮೇಧಯಾಗವನ್ನೂ ಮಾಡಿದನು.

ಏತೇನ ಹ ವಾ ಐಂದ್ರೇಣ ಮಹಾಭಿಷೇಕೇಣ ಪರ್ವತನಾರದೌ ಯುಧಾಂಶ್ರೌಷ್ಟಿಮೌಗ್ರಸೈನ್ಯಮಭಿಷಿಷಿಚತುಸ್ತಸ್ಮಾದು ಯುಧಾಂಶ್ರೌಷ್ಟಿರೌಗ್ರಸೈನ್ಯಃ ಸಮಂತಂ ಸರ್ವತಃ ಪೃಥಿವೀಂ ಜಯನ್ಪರೀಯಾಯಾಶ್ವೇನ ಚ ಮೇಧ್ಯೇನೇಜೇ ॥

ಯುಧಾಂಶ್ರೌಷ್ಟಿನಾಮಕಮುಗ್ರಸೇನಸ್ಯ ಪುತ್ರಂ ರಾಜಾನಮುದಾಹರತಿ—

ಹಿಂದೆ ಹೇಳಿದ ಪರ್ವತನಾರದರೆಂಬ ಋಷಿಗಳೇ ಉಗ್ರಸೇನನೆಂಬ ರಾಜನ ಪುತ್ರನಾದ ಯುಧಾಂಶ್ರೌಷ್ಟಿ ಎಂಬ ರಾಜನಿಗೆ ಇಂದ್ರನ ಪಟ್ಟಾಭಿಷೇಕದಂತೆ ವಿಧ್ಯುಕ್ತವಾಗಿ ಅಭಿಷೇಕವನ್ನು ಮಾಡಿದರು. ಆ ಅಭಿಷೇಕಪ್ರಭಾವದಿಂದ ರಾಜನು ಪೃಥಿವಿಯ ಸಮಸ್ತ ದೇಶಗಳನ್ನೂ ಜಯಿಸಿ ಅಶ್ವಮೇಧಯಾಗವನ್ನೂ ಮಾಡಿದನು.

ಏತೇನ ಹ ವಾ ಐಂದ್ರೇಣ ಮಹಾಭಿಷೇಕೇಣ ಕಶ್ಯಪೋ ವಿಶ್ವ-
ಕರ್ಮಾಣಂ ಭೌವನಮಭಿಷಿಷೇಚ ತಸ್ಮಾದು ವಿಶ್ವಕರ್ಮಾ ಭೌವನಃ
ಸಮಂತಂ ಸರ್ವತಃ ಪೃಥಿವೀಂ ಜಯನ್ಪರೀಯಾಯಾಶ್ವೇನ ಚ
ಮೇಧ್ಯೇನೇಜೇ ||

ಭುವನಾಖ್ಯಸ್ಯ ಪುತ್ರಂ ವಿಶ್ವಕರ್ಮನಾಮಕಂ ರಾಜಾನಮುದಾಹರತಿ—

ಕಶ್ಯಪನೆಂಬ ಮಹರ್ಷಿಯು ಭುವನನೆಂಬ ರಾಜನ ಪುತ್ರನಾದ ವಿಶ್ವಕರ್ಮಾ ಎಂಬ ರಾಜನಿಗೆ ವಿಧ್ಯುಕ್ತವಾಗಿ ಇಂದ್ರನಂತೆ ಪಟ್ಟಾಭಿಷೇಕವನ್ನು ಮಾಡಿದನು. ಅದರ ಪ್ರಭಾವದಿಂದ ವಿಶ್ವಕರ್ಮಾ ಎಂಬ ರಾಜನು ಪೃಥಿವಿಯ ಮೇಲಿರುವ ಸಕಲ ದೇಶಗಳನ್ನು ಜಯಿಸಿ ಅಶ್ವಮೇಧಯಾಗವನ್ನೂ ಮಾಡಿದನು.

ಭೂಮಿರ್ಹ ಜಗಾವಿತ್ಯುದಾಹರಂತಿ ||

ಭೌವನಾಭಿಷೇಕಮಾಹಾತ್ಮ್ಯಂ ಪ್ರಶಂಸಿತುಂ ಪುರಾತನಮಹರ್ಷಿಪ್ರೋಕ್ತಮುದಾಹರಣಂ ದರ್ಶಯತಿ—ಭೂಮಿರ್ದೇವತಾ ಜಗೌ ಭೌವನಂ ಪ್ರತಿ ಕಿಂಚಿದ್ವಾಕ್ಯಂ ಗಾಥಾರೂಪಮುಕ್ತವತೀತ್ಯೇವಂ ಪೂರ್ವೇ ಮಹರ್ಷಯ ಉದಾಹರಂತಿ ||

ಭೂಮಿದೇವತೆಯು ಮೇಲೆ ಹೇಳಿದ ಭೂವನಪುತ್ರನಾದ ವಿಶ್ವಕರ್ಮರಾಜನನ್ನು ಗಾಥಾರೂಪವಾದ ವಾಕ್ಯದಿಂದ ಪ್ರಶಂಸೆಮಾಡಿದಳೆಂದು ಪೂರ್ವದ ಮಹರ್ಷಿಗಳು ಹೇಳುವರು.

ನ ಮಾ ಮರ್ತ್ಯಃ ಕಶ್ಚನ ದಾತುಮರ್ಹತಿ ವಿಶ್ವಕರ್ಮನ್ಭೌವನಃ ಮಾಂ
ದಿದಾಸಿಥ | ನಿಮಂಕ್ಷ್ಯೇಽಹಂ ಸಲಿಲಸ್ಯ ಮಧ್ಯೇ ಮೋಘಸ್ತ ಏಷ
ಕಶ್ಯಪಾಯಾಽಽಸ ಸಗರ ಇತಿ ||

ತಾಂ ಗಾಥಾಂ ದರ್ಶಯತಿ—ಭುವನಾಖ್ಯಸ್ಯ ಪುತ್ರ ಹೇ ವಿಶ್ವಕರ್ಮನ್ ಕಶ್ಚಿದಪಿ ಮನುಷ್ಯೋ ಮಾಂ ಭೂಮಿಂ ದಾತುಂ ನಾರ್ಹತಿ | ಅತ ಏವ ಮೀಮಾಂಸಕಾ ವಿಚಾರ್ಯ ಸರ್ವಸ್ವದಾನೇ ಮಹಾಭೂಮಿದಾನಂ ನಿವಾರಿತವಂತಃ | ಏವಂಸತಿ ತ್ವಂ ಮಾಂ ಭೂಮಿಂ ದಿದಾಸಿಥ ಕಶ್ಯಪಾಯ ತ್ವದೀಯಾಚಾರ್ಯಾಯ ದಾತುಮಿಚ್ಛಸಿ | ಅಹಂ ತು ಸಲಿಲಸ್ಯ ಸಮುದ್ರಸ್ಯ ಮಧ್ಯೇ ನಿಮಙ್ಕ್ಷ್ಯೇ

ನಿಮಜ್ಜನಂ ಕರಿಷ್ಯೇ । ತಥಾ ಸತಿ ತೇ ಕಶ್ಯಪಾಯ ತ್ವದೀಯಾಚಾರ್ಯಸ್ಯ ಕಶ್ಯಪಸ್ಯೈಷ ಸಾಗರೋ ಭೂಮಿಪ್ರತಿಶ್ರವವಿಷಯೋ ಮೋಘ ಆಸ ವ್ಯರ್ಥ ಏವ ಬಭೂವೇತಿ । ಈದೃಶಮಪಿ ಮಹಾಭೂಮಿ-ಮಜ್ಜನಂ ಮಹಾಭಿಷೇಕಮಹಿಮ್ನಾ ನಿವಾರಿತಮಿತಿ ತಾತ್ಪರ್ಯಾರ್ಥಃ ॥

[illegible] ಗಾಥೆಯನ್ನು ವಿವರಿಸುವರು. ಭುವನ ಎಂಬ ರಾಜನ ಪುತ್ರನಾದ ಎಲೈ ವಿಶ್ವಕರ್ಮನೆಂಬ ರಾಜನೇ ಮನುಷ್ಯಮಾತ್ರನಾದ ನೀನು ಭೂಮಿದೇವತೆಯಾದ (ಭೂಮಿಯನ್ನು) ನನ್ನನ್ನು ದಾನಮಾಡಲು ಸಾಧ್ಯವಿಲ್ಲ. ಆದ್ದರಿಂದ ಮೀಮಾಂಸಕರು ಎಂದರೆ ನ್ಯಾಯವಿಚಾರದವರು ಚೆನ್ನಾಗಿ ವಿಚಾರಮಾಡಿ ಸಮಸ್ತವಸ್ತುಗಳನ್ನು ದಾನಮಾಡಬಹುದಾದರೂ ಭೂಮಿಯನ್ನು ಮಾತ್ರ ದಾನಮಾಡಕೂಡದೆಂದು ಹೇಳಿರುವರು. ಹೀಗಿದ್ದರೂ ಸಹ ನೀನು ಕಶ್ಯಪಮಹರ್ಷಿಗೆ ನನ್ನನ್ನು (ಭೂಮಿಯನ್ನು) ದಾನಮಾಡಲು ಇಚ್ಛಿಸುತ್ತೀಯೆ. ಆದ್ದರಿಂದ ನಾನು (ಭೂದೇವತೆಯು) ಅಗಾಧವಾದ ಸಮುದ್ರಜಲದಲ್ಲಿ ಮುಳಿಗಿರುವೆನು. ಆದ್ದರಿಂದ ನೀನು ನಿನ್ನ ಆಚಾರ್ಯನಾದ ಕಶ್ಯಪಮುನಿಗೆ ಮಾಡಿದ ಭೂದಾನವು ವ್ಯರ್ಥವಾಗಿರುವುದು. ಭೂಮಿಯು ಸಮುದ್ರದಲ್ಲಿ ಮುಳಿಗಿಹೋಗಿದ್ದರೂ ಈ ಮಹಾಭಿಷೇಕಪ್ರಭಾವದಿಂದ ಮೊದಲಿನಂತೆ ಭೂಮಿಯು ಸಮುದ್ರದಿಂದ ಮೇಲೆ ಬಂದಿರುವುದು ಎಂದು ತಾತ್ಪರ್ಯವು.

ಏತೇನ ಹ ವಾ ಐಂದ್ರೇಣ ಮಹಾಭಿಷೇಕೇಣ ವಸಿಷ್ಠಃ ಸುದಾಸಂ ಪೈಜವನಮಭಿಷಿಷೇಚ ತಸ್ಮಾದು ಸುದಾಃ ಪೈಜವನಃ ಸಮಂತಂ ಸರ್ವತಃ ಪೃಥಿವೀಂ ಜಯನ್ಪರೀಯಾಯಾಶ್ವೇನ ಚ ಮೇಧ್ಯೇನೇಜೇ ॥

ಸುದಾ ಇತ್ಯೇನ್ನಾಮಕಂ ಪಿಜವನಸ್ಯ ಪುತ್ರಂ ರಾಜಾನಮುದಾಹರತಿ—

ವಸಿಷ್ಠಋಷಿಯು ಪಿಜವನ ಎಂಬ ರಾಜನ ಪುತ್ರನಾದ ಸುದಾಸನೆಂಬ ರಾಜನಿಗೆ ಇಂದ್ರನ ಮಹಾಭಿಷೇಕದಂತೆ ವಿಧ್ಯುಕ್ತವಾದ ಅಭಿಷೇಕಮಾಡಿದನು. ಅದರಿಂದ ಆ ಸುದಾಸನೆಂಬ ರಾಜನ ಭೂಮಿಯ ಮೇಲಿರುವ ಸಕಲದೇಶಗಳನ್ನೂ ಜಯಿಸಿ ಅಶ್ವಮೇಧಯಾಗವನ್ನೂ ಮಾಡಿದನು.

ಏತೇನ ಹ ವಾ ಐಂದ್ರೇಣ ಮಹಾಭಿಷೇಕೇಣ ಸಂವರ್ತ ಆಂಗಿರಸೋ ಮರುತ್ತಮಾವಿಕ್ಷಿತಮಭಿಷಿಷೇಚ ತಸ್ಮಾದು ಮರುತ್ತ ಆವಿಕ್ಷಿತಃ ಸಮಂತಂ ಸರ್ವತಃ ಪೃಥಿವೀಂ ಜಯನ್ಪರೀಯಾಯಾಶ್ವೇನ ಚ ಮೇಧ್ಯೇನೇಜೇ ॥

ಅವಿಕ್ಷಿನ್ನಾಮಕಸ್ಯ ಪುತ್ರಂ ಮರುತ್ತನಾಮಾನಂ ರಾಜಾನಮುದಾಹರತಿ— ಸಂವರ್ತ-ನಾಮಕೋ ಮಹರ್ಷಿರಂಗಿರಸಃ ಪುತ್ರಃ ॥

ಸಂವರ್ತ ಆಂಗಿರಸ (ಅಂಗಿರಸ ಪುತ್ರನಾದ ಸಂವರ್ತನೆಂಬ ಋಷಿಯು) ಎಂಬ ಋಷಿಯು ಅವಿಕ್ಷಿತ ಎಂಬುವನ ಪುತ್ರನಾದ ಮರುತ್ತ ಎಂಬ ರಾಜನಿಗೆ ಇಂದ್ರನ ಮಹಾಭಿಷೇಕದಂತೆ ವಿಧ್ಯುಕ್ತವಾಗಿ ಅಭಿಷೇಕಮಾಡಿದನು. ಈ ಅಭಿಷೇಕದ ಪ್ರಭಾವದಿಂದ ಮರುತ್ತ ಎಂಬ ರಾಜನು ಪೃಥಿವಿಯ ಸಕಲ ದೇಶಗಳನ್ನೂ ಜಯಿಸಿ ಅಶ್ವಮೇಧಯಾಗವನ್ನು ಮಾಡಿದನು.

**ತದಪ್ಯೇಷ ಶ್ಲೋಕೋಽಭಿಗೀತಃ ||**

**ತೇನ ಕೃತಂ ಮರುತ್ತಾಭಿಷೇಕಂ ಪ್ರಶಂಸಿತುಂ ಶ್ಲೋಕಮುದಾಹರತಿ— ತಸ್ಮಿನ್ನಪಿ ಮರುತ್ತಾಭಿಷೇಕಮಾಹಾತ್ಮ್ಯೆ ಏಷ ವಕ್ಷ್ಯಮಾಣಃ ಶ್ಲೋಕಃ ಪಾದಬದ್ಧೋ ಮಂತ್ರೋಽಭಿಗೀತೋಽಭಿತಃ ಸರ್ವೈಃ ಪಠಿತಃ ||**

ಮೇಲೆ ಹೇಳಿದ ಮರುತ್ತಾಭಿಷೇಕವನ್ನು ಪ್ರಶಂಸಿಸದ ಒಂದು ಶ್ಲೋಕವಿರುವುದು ಅದನ್ನು ವಿವರಿಸುವರು. ಈ ಅಭಿಷೇಕ ವರ್ಣನೆಯು ಪಾದಬದ್ಧವಾದ ಒಂದು ಶ್ಲೋಕದಲ್ಲಿ ವರ್ಣಿತವಾಗಿದೆ. ಇದನ್ನು ಎಲ್ಲರೂ ಪಠಿಸುವರು.

**ಮರುತಃ ಪರಿವೇಷ್ಟಾರೋ ಮರುತಸ್ಯಾವಸನ್ಗೃಹೇ |**
**ಆವಿಕ್ಷಿತಸ್ಯ ಕಾಮಪ್ರೇರ್ವಿಶ್ವೇ ದೇವಾಃ ಸಭಾಸದ ಇತಿ ||**

**ತಂ ಶ್ಲೋಕಂ ದರ್ಶಯತಿ— ಮರುತ್ತನಾಮ್ನೋ ರಾಜ್ಞೋ ಗೃಹೇ ಮರುತ್ಸಂಜ್ಞಕಾ ದೇವಾ ಭೋಜನಕಾಲೇ ಪರಿವೇಷಣಕರ್ತಾರೋಭೂತ್ವಾಽಸನ್ | ತಥೈವಾಽವಿಕ್ಷಿಸ್ಯಾವಿಕ್ಷಿತ್ಪುತ್ರಸ್ಯ ಕಾಮಪ್ರೇಃ ಸರ್ವಕಾಮಪೂರಿತಸ್ಯ ಮರುತ್ತಸ್ಯ ಗೃಹೇ ವಿಶ್ವೇ ಸರ್ವೇ ದೇವಾಃ ಸಭಾಸದಃ ಸಭಾಯಾಮುಪವಿಷ್ಟಾಃ ಸೇವಂತ ಇತಿ ಶೇಷಃ | ಇತ್ಯೇಷ ಸರ್ವೋಽಪಿ ಮಹಾಭಿಷೇಕಸ್ಯ ಮಹಿಮೇತ್ಯಭಿಪ್ರಾಯಃ ||**

ಆ ಶ್ಲೋಕವನ್ನು ವಿವರಿಸುವರು. ಮರುತ್ತ ಎಂಬ ರಾಜನ ಗೃಹದಲ್ಲಿ ಮರುದ್ದೇವ[illegible] ಭೋಜನಕಾಲದಲ್ಲಿ ಭೋಜನಮಾಡುವವರಿಗೆ ಹಿತಕರವಾಗಿರುವುದರಿಂದ ತಂಪಾಗಿ ಬೀಸುತ್ತಿರುವರು. ಹಾಗೆಯೇ ಅವಿಕ್ಷಿತನ ಪುತ್ರನೂ ಸರ್ವ ಕಾಮಪ್ರದನೂ ಆದ ಮರುತ್ತರಾಜನ ಗೃಹದಲ್ಲಿ ಸಮಸ್ತ ದೇವತೆಗಳೂ ಸಭೆಯಲ್ಲಿ ಸದಸ್ಯರಂತೆ ಕುಳಿತು ಸೇವಿಸುತ್ತಿರುವರು ಎಂದು ಶ್ಲೋಕಾಭಿಪ್ರಾಯವು. ಇದೆಲ್ಲವೂ ಮಹಾಭಿಷೇಕದ ಮಹಿಮೆಯು.

---

*English Translation*

**(Waht Kings had the Mahabhisheka ceremony performed; their conquest of the whole earth, and the horse sacrifices. Stanzas on Janamejaya, Visvakarma and Marutta.)**

Tura, the son of Kavasha, inaugurated with this great inauguration ceremony of Indra, Janamejaya, the son of Parikshit· Thence Janamejaya went every where conquering the darth up to its ends, and sacrificed the sacrificial horse. To this fact refeos the following Gatha stanza, which is sung: "In the land where the throne-seat was erected, janamejaya

bound a horse which was eating, grain, adorned with a mark on its forehead (rukmin), and with yellow flower garlands, which was walking over the best fields full of fodder, for the gods."

With this ceremoney Saryata, the son of Manu, was inaugurated by Chyavana, the son of Bhrigu. Thence Saryata went conquering all over the earth, and sacrificed the sacrificial horse, and was even at the sacrificial session held by the gods, the house-father.

With this ceremony Somasushma, the son of Vajaratna, inaugurated Satanika, the son of Satrajit. Thence Satanika went conquering everywhere over the whole earth up to its ends, and sacrisiced the sacrificial horse.

With this ceremony Parvata and Narada inaugurated Ambushtya. Thence Ambashtya went conquering everywhere over the whole earth up to its ends, and sacrificial horse.

With this ceremony Parvata and Narada inangurated Yudhamsraushti, the son of Ugrasena. Thence Yudhams raushti went conquering everywhere over the whole earth up to its ends, and sacrificed the sacrificial horse.

With this inauguration ceremony Kasyapa inaugurated Visvukarma, the son of Bhuvana. Thence Visvakarma went conquering everywhere over the whole earth up to its, ends and sacrificed the sacrificial horse.

They say that the earth sang, to Visvakarma the following stanza: "No mortal is allowed to give me away as donation, O Visvakarma, thou hast given me, therefore, I shall plunge into the midst of the sea. In vain was thy promise made to Kasyapa.

With this ceremony Vasistha inaugurated Sudas, the son of Pijavana. Thence Sudas went conquering everywhere over the whole earth up to its ends, and sacrificed the sacrificial horse.

With this inauguration ceremony Samvarta, the son of Angiras, inaugurated Marutta, the son of Avikshit. Thence Marutta went conquering

everywhere over the whole earth up to its ends, and sacrificed the sacrificial horse

Regarding this event there is the following Stotra chanted: "The Maruts resided as distributors of foo l in the house of Marutta, the son of Avikshit, who had fulfilled all his desires; all the gods were present at the gathering."

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯ ಏಕೋನಚತ್ವಾರಿಂಶಾಧ್ಯಾಯೇ ಸಪ್ತಮಃ ಖಂಡಃ

ಇಲ್ಲಿಗೆ ಐತರೇಯ ಬ್ರಾಹ್ಮಣದ ಮೂವತ್ತೊಂಬತ್ತನೆಯ ಅಧ್ಯಾಯದಲ್ಲಿ ಏಳನೆಯ ಖಂಡವು ಸಮಾಪ್ತವಾದುದು

## ಏಕೋನಚತ್ವಾರಿಂಶಾಧ್ಯಾಯೇ ಅಷ್ಟಮಃ ಖಂಡಃ

### ಮೂವತ್ತೊಂಭತ್ತನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು

[ಹಿಂದಿನ ಖಂಡದಲ್ಲಿ ಹೇಳಿದಂತೆ ಅಭಿಷಿಕ್ತರಾಜರ ವಿಷಯವು ಅಂಗನೆಂಬ ರಾಜನ ಔದಾರ್ಯ ಪ್ರಶಂಸೆ ಇತ್ಯಾದಿ]

**ಏತೇನ ಹ ವಾ ಐಂದ್ರೇಣ ಮಹಾಭಿಷೇಕೇಣೋದಮಯ ಆತ್ರೇಯೋಽಙ್ಗಮಭಿಷಿಷೇಚ ತಸ್ಮಾದ್ವಂಗಃ ಸಮಂತಂ ಸರ್ವತಃ ಪೃಥಿವೀಂ ಜಯನ್ಪರೀಯಾಯಾಶ್ವೇನ ಚ ಮೇಧ್ಯೇನೇಜೇ ॥**

ಅಂಗನಾಮಕಂ ರಾಜಾನಮುದಾಹರತಿ— ಉದಮಯನಾಮಕಃ ಕಶ್ಚಿನ್ಮಹರ್ಷಿರತ್ರೇಃ ಪುತ್ರೋಽಂಗಮಭಿಷಿಷೇಚ ॥

ಅಂಗ ಎಂಬ ರಾಜನ ವಿಷಯವನ್ನು ತಿಳಿಸಿರುವರು. ಉದಮಯ ಎಂಬ ಹೆಸರಿನ ಋಷಿಯು ಅತ್ರಿ ಎಂಬುವನ ಪುತ್ರನಾದ ಅಂಗಎಂಬ ರಾಜನಿಗೆ ಪಟ್ಟಾಭಿಷೇಕವನ್ನು ಮಾಡಿದನು. ಆ ಮಹಾಭಿಷೇಕದ ಪ್ರಭಾವದಿಂದ ಅಂಗನೆಂಬ ರಾಜನ ಪೃಥಿವಿಯ ಸಮಸ್ತದೇಶಗಳನ್ನೂ ಜಯಿಸಿ ಅಶ್ವಮೇಧಯಾಗವನ್ನೂ ಮಾಡಿದನು.

**ಸ ಹೋವಾಚಾಲೋಪಾಂಗೋ ದಶ ನಾಗಸಹಸ್ರಾಣಿ ದಶ ದಾಸೀಸಹಸ್ರಾಣಿ ದದಾಮಿ ತೇ ಬ್ರಾಹ್ಮಣೋಪ ಮಾಽಸ್ಮಿನ್ಯಜ್ಞೇ ಹ್ವಯಸ್ವೇತಿ ॥**

ತಸ್ಯಾಂಗಾಭಿಷೇಕಸ್ಯ ಮಾಹಾತ್ಮ್ಯಂ ದರ್ಶಯಿತುಂ ಕಂಚಿದ್ವೃತ್ತಾಂತಮಾಹ— ಯೋಽಯಮಂಗನಾಮಕೋ ರಾಜೋಕ್ತಃ ಸೋಽಯಮಲೋಪಾಂಗಃ ಸಂಪೂರ್ಣಾವಯವ ಇತ್ಯರ್ಥಃ। ಮಹದಸ್ಯಾಂಗಸೌಷ್ಠವಮ್। ಸ ಕದಾಚಿತ್ ಸ್ವಕೀಯಾಭಿಷೇಕಕರ್ತರ್ಯುದಮಯ-ನಾಮಕೇ ಪುರೋಹಿತೇ ಸ್ವಾರ್ಥಂ ಯಾಗಂ ಕುರ್ವಾಣೇ ಸತಿ ತಂ ಪ್ರತ್ಯೇವಮುವಾಚ। ಹೇ ಬ್ರಾಹ್ಮಣಾಸ್ಮಿಂಸ್ತ್ವದೀಯೇ ಯಜ್ಞೇ ಮಾಮುಪಹ್ವಯಸ್ವ ಸಮಾಹ್ವಾನಂ ಕುರು। ಅಹಮಾಗತ್ಯ ತ್ವದೀಯಯಜ್ಞೇ ದಕ್ಷಿಣಾಸಂಪೂರ್ತ್ಯರ್ಥಂ ತುಭ್ಯಂ ಗಜಸಹಸ್ರಾಣಿ ದಾಸೀಸಹಸ್ರಾಣಿ ಚ ದದಾಮೀತಿ। ಸೇಯಂ ಬಹುದಾನಸಂಪತ್ತಿಃ ಸದ್‌ಬುದ್ಧಿಶ್ಚ ಮಹಾಭಿಷೇಕಪ್ರಸಾದಲಬ್ಧಾ ॥

ಮೇಲೆ ಹೇಳಿದ ಅಂಗನೆಂಬ ರಾಜನ ಮಾಹಾತ್ಮೆಯನ್ನು ತಿಳಿಸುವುದಕ್ಕಾಗಿ ಒಂದು ವೃತ್ತಾಂತವನ್ನು ಹೇಳುವರು. ಈ ಅಂಗನೆಂಬ ರಾಜನ ಅವಯವಾದಿಗಳಲ್ಲಿ ಸ್ವಲ್ಪವೂ ಲೋಪದೋಷಗಳಿಲ್ಲದೆ ಎಲ್ಲವೂ ಪರಿಪೂರ್ಣವಾಗಿಯೂ ಪುಷ್ಟವಾಗಿಯೂ ಇದ್ದದ್ದರಿಂದ ಈ ರಾಜನಿಗೆ ಅಂಗನೆಂಬ ಹೆಸರು ಪ್ರಸಿದ್ಧಿಯಾಯಿತು. ಈ ರಾಜನು ಒಂದು ಸಮಯದಲ್ಲಿ ಎಂದರೆ ತನಗೆ ಅಭಿಷೇಕವನ್ನು ಮಾಡುತ್ತಿರುವಾಗ ತನ್ನ ಪುರೋಹಿತನಾದ ಉದಮಯನೆಂಬ ಬ್ರಾಹ್ಮಣನನ್ನು ಕುರಿತು ಈರೀತಿ ಹೇಳಿದನು. ಎಲೈ ಬ್ರಾಹ್ಮಣನೇ ನೀನು ಮಾಡುವ ಯಜ್ಞದಲ್ಲಿ ನನ್ನನ್ನೂ ಕರಿ. ಬಂದು ನಿನ್ನ ಯಜ್ಞದಲ್ಲಿ ದಕ್ಷಿಣಾದ್ರವ್ಯವನ್ನು ಒದಗಿಸಿ ಕೊಡುವುದಕ್ಕಾಗಿ ನಿನಗೆ ಒಂದು ಸಹಸ್ರ ಆನೆಗಳನ್ನು ಒಂದು ಸಹಸ್ರ ದಾಸಿಯರನ್ನೂ (ಸೇವಕಿಯರನ್ನೂ) ಕೊಡುವೆನು. ಹೀಗೆ ರಾಜನು ಹೇಳಿದುದು ಪುರೋಹಿತನು ಅವನಿಗೆ ಮಾಡಿದ ಮಹಾಭಿಷೇಕದ ಫಲವೇ ಆಗಿರುವುದು.

ತದಪ್ಯೇತೇ ಶ್ಲೋಕಾಃ ಅಭಿಗೀತಾಃ ॥

ಏವಮೇವಾರ್ಥಂ ಪ್ರಪಂಚಯಿತುಂ ಶ್ಲೋಕಾನುದಾಹರತಿ— ತಸ್ಮಿನ್ನಪ್ಯಂಗರಾಜಪುರೋ-ಹಿತಸ್ಯ ಯಾಗೇ ದಾನಪ್ರತಿಪಾದಕಾ ಏತೇ ಪಂಚ ಶ್ಲೋಕಾ ಅಭಿತೋ ಗೀತಾಃ ಸರ್ವತೋಽಭಿಜ್ಞೈಃ ಪಠಿತಾಃ ॥

ಈ ಅಭಿಪ್ರಾಯವನ್ನು ತಿಳಿಸುವ ಕೆಲವು ಶ್ಲೋಕಗಳೂ ಇವೆ. ಅವನ್ನು ಇಲ್ಲಿ ಉದಾಹರಿಸಿದ್ದಾರೆ. ಅಂಗರಾಜನ ಪುರೋಹಿತನು ಮಾಡಿದ ಯಾಗದಲ್ಲಿ ಅಂಗರಾಜನು ದಾನವಾಗಿ ಕೊಟ್ಟ ವಸ್ತುಗಳ ವಿಷಯವನ್ನು ವಿವರಿಸುವ ಐದು ಶ್ಲೋಕಗಳಿರುವವು. ಅವನ್ನು ತಿಳಿದವರು ಹೇಳುತ್ತಿರುವರು.

ಯಾಭಿರ್ಗೋಭಿರುದಮಯಂ ಪ್ರೈಯಮೇಧಾ ಅಯಾಜಯನ್। ದ್ವೇ
ದ್ವೇ ಸಹಸ್ರೇ ಬದ್ವಾನಾಮಾತ್ರೇಯೋ ಮಧ್ಯತೋಽದಾತ್ ॥

ತತ್ರ ಪ್ರಥಮಂ ಶ್ಲೋಕಮಾಹ—ಪ್ರಿಯಮೇಧಸ್ಯ ಪುತ್ರಾಃ ಪ್ರೈಯಮೇಧಾ ಮಹರ್ಷಯ ಉದಮಯನಾಮಕಮಂಗರಾಜಪುರೋಹಿತಂ ಯಾಭಿರ್ಗೋಭಿರ್ದಕ್ಷಿಣಾರೂಪಾಭಿ-ರಯಾಜಯನ್। ತಾ ಗಾವೋ ವಕ್ಷ್ಯಂತ ಇತಿ ಶೇಷಃ। ಬದ್ವಮಿತಿ ಶತಕೋಟಿಸಂಖ್ಯಾಯಾ ನಾಮಧೇಯಮ್। ಬದ್ವಾನಾಂ ಶತಕೋಟಿಸಂಖ್ಯಾನಾಂ ಗವಾಂ ಮಧ್ಯೇ ಪ್ರತಿದಿನಂ ದ್ವೇ ದ್ವೇ ಸಹಸ್ರೇ ಮಧ್ಯತೋ ಮಾಧ್ಯಂದಿನಸವನೇಽತ್ರಿಪುತ್ರ ಉದಮಯೋ ದತ್ತವಾನ್ ॥

ಮೇಲೆ ಹೇಳಿದಂತೆ ಮೊದಲನೇ ಶ್ಲೋಕದ ಅರ್ಥವನ್ನು ತಿಳಿಸುವರು. ಪ್ರಿಯಮೇಧ ಎಂಬ ಹೆಸರಿನ ಋಷಿಗೆ ಪ್ರೈಯಮೇಧರೆಂದು ಹೆಸರು. ಇವರಲ್ಲಿ ಒಬ್ಬನಾದ ಉದಮಯ ಎಂಬುವನು ಅಂಗರಾಜನಿಗೆ ಪುರೋಹಿತನಾಗಿದ್ದನು. ಈ ಪುರೋಹಿತನು ಮಾಡಿದ ಯಜ್ಞದಲ್ಲಿ ಅಂಗರಾಜನು ದಕ್ಷಿಣೆಗಾಗಿ ಮಾಡಿದ ಸಹಾಯವನ್ನು ಇಲ್ಲಿ ವಿವರಿಸುವರು. ಇಲ್ಲಿ ಬದ ಎಂಬ ಶಬ್ದಕ್ಕೆ ನೂರುಕೋಟಿ ಸಂಖ್ಯೆಯೆಂದು ಹೆಸರು. ಈ ಸಂಖ್ಯಾಪರಿಮಿತನಾದ ಗೋವುಗಳಲ್ಲಿ ಪ್ರತಿದಿನವೂ ಎರಡೆರಡು ಸಾವಿರದಂತೆ ಗೋವುಗಳನ್ನು ಅತ್ರಿಪುತ್ರನಾದ ಉದಮಯನೆಂಬ ಋಷಿಯು ಮಾಧ್ಯಂದಿನ ಸವನದಲ್ಲಿ (ಮಾಧ್ಯಂದಿನಸವನದಲ್ಲಿ ದಕ್ಷಿಣೆಯನ್ನು ಕೊಡುವ ಪದ್ಧತಿ ಇರುವುದು) ದಕ್ಷಿಣೆಕೊಡುತ್ತಿದ್ದನು.

ಅಷ್ಟಾಶೀತಿಃ ಸಹಸ್ರಾಣಿ ಶ್ವೇತಾನ್ವೈರೋಚನೋ ಹಯಾನ್ ಪ್ರಷ್ಟೀನ್ನಿ-
ಶ್ಚೃತ್ಯ ಪ್ರಾಯಚ್ಛದ್ಯಜಮಾನೇ ಪುರೋಹಿತೇ ||

ದ್ವಿತೀಯಂ ಶ್ಲೋಕಮಾಹ—ವೈರೋಚನೋ ವಿರೋಚನಸ್ಯ ಪುತ್ರೋಽಂಗನಾಮಕೋ ರಾಜಾ ಸ್ವಕೀಯಪುರೋಹಿತ ಉದಯನಾಮಕೇ ಯಜಮಾನೇ ಯಾಗಂ ಕುರ್ವಾಣೇ ಸ್ವಯ-ಮಾಗತ್ಯಾಷ್ಟಾಶೀತಿಸಹಸ್ರಸಂಖ್ಯಾಕಾನಶ್ವಾನ್ ಶ್ವೇತವರ್ಣಾನ್ ಪ್ರಷ್ಟೀ ಪೃಷ್ಠವಾಹನಯೋಗ್ಯ-ವಯಸ್ಕಾನ್ನಿಶ್ಚೃತ್ಯ ಸ್ವಕೀಯಾದ್ವಾಜಬಂಧನಸ್ಥಾನಾನ್ನಿಃಸಾರ್ಯ ಪ್ರಾಯಚ್ಛದ್ದತ್ತವಾನ್ ||

ಎರಡನೆಯ ಶ್ಲೋಕದ ಅರ್ಥವು—ವಿರೋಚನ ಎಂಬ ರಾಜನ ಪುತ್ರನಾದ ಅಂಗರಾಜನು ತನ್ನ ಪುರೋಹಿತನಾದ ಉದಯಋಷಿಯು ಯಜ್ಞವನ್ನಾಡುತ್ತಿರುವಾಗ ತನ್ನ ಸ್ವಕೀಯ ಅಶ್ವಶಾಲೆಯಲ್ಲಿ ಕಟ್ಟಿಹಾಕಿದ ವಾಹನಯೋಗ್ಯವಾದ ಎಂಭತ್ತೆಂಟುಸಾವಿರ ಬೆಳ್ಳಗಿರುವ ಕುದುರೆಗಳನ್ನು ದಾನಮಾಡಿದನು.

ದೇಶಾದ್ದೇಶಾತ್ಸಮೋಳ್ಳಾನಾಂ ಸರ್ವಾಸಾಮಾಢ್ಯದುಹಿತೃಣಾಂ | ದಶಾ-
ದದಾತ ಹಸ್ರಾಣ್ಯಾಮಾತ್ರೇಯೋ ನಿಷ್ಕಕಂಠ್ಯಃ |

ತೃತೀಯಂ ಶ್ಲೋಕಮಾಹ—ದೇಶಾದ್ದೇಶಾದ್ದಿಗ್ವಿಜಯಕಾಲೇ ತತ್ತದ್ದೇಶವಿಶೇಷಾತ್ಸ-ಮೋಳ್ಹಾನಾಂ ಸಮ್ಯಗಾಸಮಂತಾದೂಢಾನಾಮಾನೀತಾನಾಮಾಢ್ಯದುಹಿತೃಣಾಂ ಧನಿಕಪುತ್ರೀಣಾಂ ಸರ್ವಾಸಾಂ ದಶ ಸಹಸ್ರಾಣ್ಯಾತ್ರೇಯೋಽಂಗರಾಜಪುರೋಹಿತೋ ದತ್ತವಾನ್ | ತಾಶ್ಚ ದುಹಿತರೋ ನಿಷ್ಕಂಕಂಠ್ಯ ಆಭರಣೋಪೇತಕಂಠಯುಕ್ತಾಃ ||

ಮೂರನೆಯ ಶ್ಲೋಕದ ಅರ್ಥವು ಈ ಅಂಗರಾಜನು ನಾನಾದೇಶಗಳಲ್ಲಿ ಯುದ್ಧಮಾಡಿ ಜಯಿಸಿ ತಂದ ಅನೇಕ ಧನಿಕರ ಪುತ್ರಿಯರಿದ್ದರು, ಅವರು ತಮ್ಮ ಕತ್ತಿನಲ್ಲಿ ಚಿನ್ನದ ಆಭರಣಗಳನ್ನು ಧರಿಸಿ ಅಲಂಕಾರಾದಿಗಳಿಂದ ಶೋಭಿಸುತ್ತಿದ್ದರು. ಇಂತಹ ಹತ್ತುಸಾವಿರಮಂದಿ ಕನ್ಯೆಯರನ್ನು ಅಂಗರಾಜನು ತನ್ನ ಪುರೋಹಿತನ ಯಜ್ಞದಲ್ಲಿ ಕೊಟ್ಟನು.

ದಶ ನಾಗಸಹಸ್ರಾಣಿ ದತ್ವಾಽಽತ್ರೇಯೋಽವಚತ್ನುಕೇ | ಶ್ರಾಂತಃ ಪಾರಿ-
ಕುಟಾನ್ಪ್ರೈಪ್ಸದ್ದಾನೇನಾಂಗಸ್ಯ ಬ್ರಾಹ್ಮಣಃ ||

ಚತುರ್ಥಂ ಶ್ಲೋಕಮಾಹ—ಅಂಗರಾಜಸ್ಯ ಪುರೋಹಿತೋ ಬ್ರಾಹ್ಮಣ ಆತ್ರೇಯೋಽವ-ಚತ್ನುಕನಾಮದೇಶೇ ಗಜಸಹಸ್ರಾಣಿ ದಶಸಂಖ್ಯಾಕಾನಿ ದತ್ವಾ ದಾನೇನ ಶ್ರಾಂತಃ ಸನ್ಪರಿಕುಟಾನ್ಪರಿ-ಚಾರಕಾನ್ ಪ್ರೈಷಸ್ತ್ಪ್ರೇಷಿತವಾನ್। ಪರಿಚಾರಕಾ ಯೂಯಂ ದತ್ತೇತ್ಯೇವಮುಕ್ತವಾನಿತ್ಯರ್ಥಃ ॥

ನಾಲ್ಕನೇ ಶ್ಲೋಕದ ಅರ್ಥವು. ಅಂಗರಾಜನ ಪುರೋಹಿತನಾದ ಬ್ರಾಹ್ಮಣನು ಆತ್ರೇಯಗೋತ್ರೋದ್ಭವನು ಇವನು ಅವಚತ್ನುಕವೆಂಬ ದೇಶದಲ್ಲಿ ಮಾಡಿದ ಯಜ್ಞದಲ್ಲಿ ಅಂಗರಾಜನು ಕೊಟ್ಟ ಹತ್ತುಸಾವಿರ ಆನೆಗಳನ್ನು ದಾನಮಾಡಿದನು ಆದರಿಂದ ತುಂಬಾ ಬಳಲಿದಾಗ ಆ ಬ್ರಾಹ್ಮಣನು ತನ್ನ ಪರಿಚಾರಕರನ್ನು ಕರೆದು; ಎಲೈ ಪರಿಚಾರಕರೇ, ನಾನು ಈ ಗಜಗಳನ್ನು ದಾನಮಾಡಿ ಬಹಳವಾಗಿ ದಣಿದಿರುವೆನು. ಅದ್ದರಿಂದ ನನಗೋಸ್ಕರ ನೀನು ಈ ಕಾರ್ಯವನ್ನು ಮುಂದುವರಿಸಿ ಎಂದನು.

ಶತಂ ತುಭ್ಯಂ ಶತಂ ತುಭ್ಯಮಿತಿ ಸ್ಮೈವ ಪ್ರತಾಮ್ಯತಿ । ಸಹಸ್ರಂ ತುಭ್ಯ-ಮಿತ್ಯುಕ್ತ್ವಾ ಪ್ರಾಣಾನ್ಸ್ಮ ಪ್ರತಿಪದ್ಯತ ಇತಿ ॥

ಪಂಚಮಂ ಶ್ಲೋಕಮಾಹ—ಪರಿಚಾರಕಾಣಾಮಗ್ರ್ಯ ಏಕೈಕಶೋ ವಕ್ತುಮಶಕ್ತಸ್ತುಭ್ಯಂ ಶತಂ ತುಭ್ಯಂ ಶತಮಿತಿ ಶತಸಂಖ್ಯಾಂ ಪ್ರೋಕ್ತ್ವಾ ತತ್ರಾಪಿ ಪ್ರತಾಮ್ಯತಿ ಸ್ಮೈವ ಗ್ಲಾನಿಮೇವ ಪ್ರಾಪ್ತವಾನ್ । ತತಃ ಶತಸಂಖ್ಯಾಂ ಪರಿತ್ಯಜ್ಯ ಸಹಸ್ರಂ ತುಭ್ಯಮಿತ್ಯುಕ್ತ್ವಾ ತಸ್ಯಾಮಪಿ ಸಂಖ್ಯಾ-ಯಾಂ ಬಹುಶಃ ಪ್ರೋಕ್ತಾಯಾಮಾಶ್ರಾಂತಃ ಸನ್ಪ್ರಾಣಾನ್ ಪ್ರತಿಪದ್ಯತೇ ಸ್ಮ । ಮಧ್ಯೇ ಮಧ್ಯೇ ಶ್ರಮಪರಿಹಾರಾಯ ದೀರ್ಘಶ್ವಾಸಂ ಕೃತವಾನಿತ್ಯರ್ಥಃ । ಅಂಗರಾಜಸ್ಯ ಪುರೋಹಿತಾಯಾಸ್ಯೈತಾ-ದೃಶಸಾಮರ್ಥ್ಯಂ ಮಹಾಭಿಷೇಕಪ್ರಸಾದಲಬ್ಧಮಿತಿ ತಾತ್ಪರ್ಯಾರ್ಥಃ ॥

ಐದನೆಯ ಶ್ಲೋಕದ ಅರ್ಥವು—ಮೇಲೆ ಹೇಳಿದಂತೆ ಪರಿಚಾರಕರು ಆನೆಗಳನ್ನು ಪುರೋಹಿತನ ಆಜ್ಞೆಯಂತೆ ದಾನ ಮಾಡುತ್ತಿರುವಾಗ ನಿನಗೆ ಈ ನೂರು ಮತ್ತು ನಿನಗೆ (ಇನ್ನೊಬ್ಬನಿಗೆ) ನೂರು ಆನೆಗಳು " ಎಂದು ಹೇಳಿ ದಾನಮಾಡುತ್ತಿರುವಾಗ ಆ ಶ್ರಮದಿಂದ ಬಹಳ ಆಯಾಸಪಟ್ಟರು. ಅದ್ದರಿಂದ ನೂರು ಎಂಬ ಶಬ್ದವನ್ನು ಬಿಟ್ಟು ಸಹಸ್ರ ಎಂಬ ಶಬ್ದವನ್ನು ಬಳಸಲು ಪ್ರಾರಂಭಿಸಿದರೂ ಅದರಿಂದಲೂ ಆಯಾಸಪರಿಹಾರವಾಗದೆ ದೀರ್ಘವಾಗಿ ನಿಟ್ಟುಸುರನ್ನು ಬಿಡುತ್ತಿದ್ದರು. ಈ ವಿಧವಾದ ದಾನಮಾಡುವ ಸಾಮರ್ಥ್ಯವು. ಅಂಗರಾಜನಿಗೆ ಅವನ ಪುರೋಹಿತನು ಮಾಡಿದ ಅಭಿಷೇಕದ ಫಲದಿಂದ ಪ್ರಾಪ್ತವಾಯಿತು.

*English Translation*

**(Continuation of the preceding. Stanzas on ihe liberality of Anga, and Virochana.)**

With this ceremony Udamya, the son of Atri, inaugurated Anga. Thence Angra went conquering everywhere over the whole earth up to its ends, and sacrificed the sacrificial horse. This Anga, who was not defective in any respect (thence called alopanga), had once said, "I give

thee, O Brahman, ten thousand elephants, and ten thousand slave girls if you call me to this (thy) sacrifice. Regarding them, the following five stanzas (Slokas) were sung:–

(1) "Whetever cows the sons of Priyamedhas had ordered Udamya to give in the midst of the midday libation the Atri son Udamaya at each time presented two thousand Badvas-

(2) "The son of Virochana loosened eighty-eight thousand white horses form their strings, and presentd those which were fit for drawing a carriage to the sacrificing Purohita."

(3) "The son of Atri presented ten thonsand girls well endowed with ornaments on their necks who hab been gathered from all quarters."

(4) "The son of Atri having given ten thousand elephants in the country Avachatnuka, the Brahman (Atri's son) being tired, desireb his servants to take charge of Anga's gift.

(5) "From saying I give thee a hundred only, I give thee a hundred, he he got tired; thence he said, I give thee a thousand, and stopped often in order to breathe, for there were too many thousands to be given.,,

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಭಾಷ್ಯೇ ಏಕೋನಚತ್ವಾರಿಂಶಾಧ್ಯಾಯೇ ಅಷ್ಟಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂವತ್ತೊಂಭತ್ತನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು
ಸಮಾಪ್ತವಾದುದು

———

## ಏಕೋನಚತ್ವಾರಿಂಶಾಧ್ಯಾಯೇ ನವಮಃ ಖಂಡಃ

### ಮೂವತ್ತೊಂಬತ್ತನೆಯ ಅಧ್ಯಾಯದಲ್ಲಿ ಒಂಭತ್ತನೆಯ ಖಂಡವು

---

[ಹಿಂದಿನ ಕೆಲವು ರಾಜರ ಪಟ್ಟಾಭಿಷೇಕವುಂದುವರೆದುದು. ಭರತಚಕ್ರ ಔದಾರ್ಯವು. ಸತ್ಯಹವ್ಯನ ವೃತ್ತಾಂತವು ಸತ್ಯಹವ್ಯನ ಶಿಷ್ಯನಾದ ಅಶ್ವದಾತಿ ಎಂಬ ರಾಜನು ತನ್ನ ಗುರು ಮತ್ತು ಪುರೋಹಿತನಾದ ಸತ್ಯಹವ್ಯನಿಗೆ ಮಾಡಿದ ಮೋಸದ ವಿಚಾರವು.]

---

**ಏತೇನ ಹ ವಾ ಐಂದ್ರೇಣ ಮಹಾಭಿಷೇಕೇಣ ದೀರ್ಘತಮಾ ಮಾಮತೇಯೋ ಭರತಂ ದೌಷ್ಯಂತಿಮಭಿಷಿಷೇಚ ತಸ್ಮಾದು ಭರತೋ ದೌಷ್ಯಂತಿಃ ಸಮಂತಂ ಸರ್ವತಃ ಪೃಥಿವೀಂ ಜಯನ್ಪರೀಯಾ-ಯಾಶ್ವೈರುಚ ಮೇಧ್ಯೈರೀಜೇ ॥**

ದುಷ್ಯಂತಸ್ಯ ಪುತ್ರಂ ಭರತಾಖ್ಯಂ ರಾಜಾನಮುದಾಹರತಿ—ಮಮತಾಖ್ಯಾಯಾಃ ಸ್ತ್ರೀಯಾ-ಪುತ್ರೋ ದೀರ್ಘತಮಾ ಇತ್ಯೇತನ್ನಾಮಾ ಮುನಿರ್ಭರತಮಭಿಷಿಷೇಚ । ಭರತೋಽಪಿ ದಿಗ್ವಿಜಯೇನ ಪೃಥಿವೀಂ ಪರೀತ್ಯ ಮೇಧ್ಯೈರಶ್ವೈರಪೀಜೇ । ಉ ಚೇತಿ ನಿಪಾತಯೋಃ ಸಮೂಹಃ ಸಮುಚ್ಚಯಾರ್ಥಃ ।

ದುಷ್ಯಂತರಾಜನ ಪುತ್ರನಾದ ಭರತನ ವಿಷಯವನ್ನು ತಿಳಿಸುವರು— ಮಮತ್ ಎಂಬ ಸ್ತ್ರೀಯ ಪುತ್ರನಾದ (ಮಾಮತೇಯ) ದೀರ್ಘತಮಾ ಎಂಬ ಋಷಿಯು ಭರತನೆಂಬ ರಾಜನಿಗೆ ಇಂದ್ರನ ಪಟ್ಟಾಭಿಷೇಕದಂತೆ ವಿಧ್ಯುಕ್ತವಾಗಿ ಅಭಿಷೇಕ ಮಾಡಿದನು. ಆ ಮಹಾಭಿಷೇಕದ ಫಲವಾಗಿ ಭರತರಾಜನು ಈ ಪೃಥಿವಿಯ ಸಕಲದೇಶಗಳನ್ನೂ ಜಯಿಸಿ ಅಶ್ವಮೇಧಯಾಗವನ್ನೂ ಮಾಡಿದನು.

**ತದಪ್ಯೇತೇ ಶ್ಲೋಕಾ ಅಭಿಗೀತಾಃ ॥**

ಭರತಾಭಿಷೇಕಮಾಹಾತ್ಮ್ಯಂ ದರ್ಶಯಿತುಂ ಶ್ಲೋಕಾನುದಾಹರತಿ— ತತ್ತಸ್ಮಿನ್ ಭರತಾ-ಷೇಕಮಾಹಾತ್ಮ್ಯೇಽಪ್ಯೇತೇ ವಕ್ಷ್ಯಮಾಣಾಃ ಪಂಚಶ್ಲೋಕಾ ಅಭಿತಃ ಪರಿ ಗೀಯಂತೇ ॥

ಭರತರಾಜನ ಅಭಿಷೇಕದ ವಿಚಾರವಾಗಿ ಕೆಳಗೆ ಹೇಳಿರುವ ಐದು ಶ್ಲೋಕಗಳಿಂದ ಪ್ರಶಂಸೆಮಾಡುವರು.

**ಹಿರಣ್ಯೇನ ಪರಿವೃತಾನ್ಕೃಷ್ಣಾನ್ ಶುಕ್ಲದತೋ ಮೃಗಾನ್ । ಮಷ್ಣಾರೇ ಭರತೋಽದದಾಚ್ಛತಂ ಬದ್ವಾನಿ ಸಪ್ತ ಚ ॥**

ತತ್ರ ಪ್ರಥಮಂ ಶ್ಲೋಕಮಾಹ—ಮೃಗಶಬ್ದೇನಾತ್ರ ಗಜಾಃ ವಿವಕ್ಷಿತಾಃ । ಮೃಗವದಿತಿ ಬಾಹುಲ್ಯವಿವಕ್ಷಯಾ ಮೃಗಶಬ್ದಃ । ತೇ ಚ ಗಜಾ ಹಿರಣ್ಯೇನ ಪರೀವೃತಾ ಸರ್ವಾಭರಣಯುಕ್ತಾಃ ಶರೀರಪುಷ್ಟ್ಯಾ ವರ್ಣೋತ್ಕರ್ಷೇ ಸತ್ಯತ್ಯಂತಂ ಕೃಷ್ಣಾಃ ಪ್ರತಿಭಾಸಂತೇ । ಶುಕ್ಲಾಭ್ಯಾಂ ದಂತಾಭ್ಯಾಂ ಯುಕ್ತಾಸಾದೃಶಾನ್ಗಜಾನ್ಮಷ್ಣಾರನಾಮಕೇ ದೇಶೇ ಭರತೋ ರಾಜಾ ದತ್ತವಾನ್ । ಶತಮಿತ್ಯಾದಿ ತತ್ಸಂಖ್ಯೋಚ್ಯತೇ । ಬದ್ವಂ ವೃಂದಮಿತ್ಯೇತೌ ಪರ್ಯಾಯೌ । ವೃಂದಶಬ್ದಶ್ಚ ಶತಕೋಟಿವಾಚಿತ್ವೇನ ಗಣಿತೇ ಗ್ರಂಥಕಾರೈರ್ದರ್ಶಿತಃ ॥

"ಏಕಂ ದಶ ಚ ಶತಂ ಚ ಸಹಸ್ರಂ ಚಾಯತನಿಯುತೇ ತಥಾ ।
ಪ್ರಯುತಕೋಟ್ಯೆರ್ಬುದಂ ವೃಂದಂ ಸ್ಥಾನಂ ಸ್ಥಾನಾದ್ದಶಗುಣಂಸ್ಯಾತ್ ॥

ಇತಿ । ತಾನಿ ಚ ಶತಕೋಟಿರೂಪಾಣಿ ಬದ್ವಾನಿ ಸಪ್ತಾಧಿಕಶತಸಂಖ್ಯಾಕಾನಿ ತಾವತೋ ಗಜಾನ್ ದತ್ತವಾನಿತ್ಯರ್ಥಃ ॥

ಮೊದಲನೆಯ ಶ್ಲೋಕದ ಅರ್ಥವು. ಮೇಲಿನ ಶ್ಲೋಕದಲ್ಲಿ ಹೇಳಿರುವ ಮೃಗಶಬ್ದಕ್ಕೆ ಗಜ(ಆನೆ) ಎಂದರ್ಥವು. ಈ ಗಜಗಳು ಧಷ್ಟಪುಷ್ಟವಾಗಿ ಕಪ್ಪಗಿರುವ ಶರೀರಕಾಂತಿಯಿಂದಲೂ ಅಲಂಕರಿಸಿರುವ ಸುವರ್ಣಾಭರಣಗಳಿಂದಲೂ ಶೋಭಿಸುತ್ತಿರುವವು. ಭರತರಾಜನು ಇಂತಹ ಏಳುನೂರು ಕೋಟಿಸಂಖ್ಯೆಯಷ್ಟು ಗಜಗಳನ್ನು ದಾನಮಾಡಿದನು (ಇಲ್ಲಿ. ಬದ್ದಂ, ಬೃಂದ ಎಂಬ ಎರಡುಶಬ್ದಗಳಿಗೂ ಕೋಟಿ ಎಂಬ ಅರ್ಥವಿರುವುದು.)

ಏಕಂ ದಶ ಚ ಶತಂ ಚ ಸಹಸ್ರಂ ಚಾಯುತನಿಯುತೇ ತಥಾ ।
ಪ್ರಯುತಕೋಟ್ಯೆರ್ಬುದಂ ಬೃಂದಂ ಸ್ಥಾನಂ ಸ್ಥಾನಾದ್ದಶಗುಣಂ ಸ್ಯಾತ್ ॥

ಸಂಖ್ಯಾವಾಚಕಶಬ್ದಗಳ ವಿವರಣೆಯು ಹೀಗಿದೆ— **ಏಕಂ**- ಒಂದು; **ದಶ**- ಹತ್ತು; **ಶತಂ**- ನೂರು; **ಸಹಸ್ರಂ**- ಸಾವಿರ; **ಅಯುತಂ**- ಹತ್ತು ಸಾವಿರ; **ನಿಯುತಂ**- ಒಂದು ಲಕ್ಷ; **ಪ್ರಯುತಂ**- ಹತ್ತು ಲಕ್ಷ; **ಕೋಟಿ**- ನೂರು ಲಕ್ಷ ಅಥವಾ ಒಂದು ಕೋಟಿ; **ಅರ್ಬುದ**- ಹತ್ತು ಕೋಟಿ; **ಬೃಂದಂ**- ನೂರು ಕೋಟಿ. ಈ ಸಂಖ್ಯೆಗಳಲ್ಲಿ ಒಂದರಿಂದ ಮುಂದಿನದು ಹತ್ತು ಪಾಲು ಅಧಿಕಸಂಖ್ಯೆಯನ್ನು ಸೂಚಿಸುವುದು.

ಭರತಸ್ಯೈಷ ದೌಷ್ಯಂತೇರಗ್ನಿಃ ಸಾಚೀಗುಣೇ ಚಿತಃ । ಯಸ್ಮಿನ್ಸಹಸ್ರಂ ಬ್ರಾಹ್ಮಣಾ ಬದ್ವಶೋ ಗಾ ವಿಭೇಜಿರೇ ॥

ದ್ವಿತೀಯಂ ಶ್ಲೋಕಮಾಹ—ಸಾಚಿಗುಣನಾಮಕೇ ಕಸ್ಮಿಂಶ್ಚಿದ್ದೇಶೇ ದುಷ್ಯಂತಪುತ್ರಸ್ಯ ಭರತಸ್ಯೈಷೋಽಗ್ನಿಶ್ಚಿತಃ ಅಗ್ನಿಚಯನಂ ಕೃತವಾನಿತ್ಯರ್ಥಃ । ಯಸ್ಮಿನ್ನಗ್ನಿಚಯನೇ ಸಹಸ್ರಸಂಖ್ಯಾಕಾ ಬ್ರಾಹ್ಮಣಾ ಬದ್ವಶಃ ಪ್ರತ್ಯೇಕಂ ಶತಕೋಟಿಸಂಖ್ಯಕಾ ಬ್ರಾಹ್ಮಣಾ ಬದ್ವಶಃ ಪ್ರತ್ಯೇಕಂ ಶತಕೋಟಿಸಂಖ್ಯಯಾ ಗಾ ವಿಭೇಜಿರೇ । ಗವಾಂ ಕೃತವಂತಃ ॥

ಎರಡನೇ ಶ್ಲೋಕದ ಅರ್ಥವು—ಸಾಚಿಗುಣವೆಂಬುದು ಒಂದು ದೇಶವು. ಆ ದೇಶದಲ್ಲಿ ದುಷ್ಯಂತ ಪುತ್ರನಾದ ಭರತ ರಾಜನು ಅಗ್ನಿಚಯನವೆಂಬ ಯಾಗವನ್ನು ಮಾಡಿದನು. ಆ ಯಾಗದಲ್ಲಿ ಭರತರಾಜನು ಒಂದು ನೂರು ಕೋಟಿ ಗೋವುಗಳನ್ನು ಬ್ರಾಹ್ಮಣರಿಗೆ ದಾನಮಾಡಿದನು. ಆ ಗೋವುಗಳನ್ನು ಬ್ರಾಹ್ಮಣರೆಲ್ಲರೂ ಹಂಚಿಕೊಂಡರು.

ಅಷ್ಟಾಸಪ್ತತಿಂ ಭರತೋ ದೌಷ್ಯಂತಿರ್ಯಮುನಾಮನು । ಗಂಗಾಯಾಂ
ವೃತ್ರಘ್ನೇಽಬಧ್ನಾತ್ಪಂಚಪಂಚಾಶತಂ ಹಯಾನ್ ॥

ತೃತೀಯಂ ಶ್ಲೋಕಮಾಹ—ಮೇಧ್ಯೈರಶ್ವೈರೀಜ ಇತ್ಯುಕ್ತಂ ತೇಷಾಮಶ್ವಾನಾಂ ಸಂಖ್ಯಾಽತ್ರೋಚ್ಯತೇ । ಅಷ್ಟಾಧಿಕಾ ಸಪ್ತತಿರಷ್ಟಾಸಪ್ತತಿಃ । ತಾಮಷ್ಟಾಸಪ್ತತಿಂ ದುಷ್ಯಂತಪುತ್ರೋ ಭರತೋ ಯಮುನಾಮನು ಯಮುನಾಯಾಸ್ತೀರೇಽಬಧ್ನಾದ್ಬದ್ಧವಾನ್ । ತಾವತೋಽಶ್ವ-ಮೇಧಾನ್ ಕೃತವಾನಿತ್ಯರ್ಥಃ । ಗಂಗಾಯಾಂ ಗಂಗಾತೀರೇ ವೃತ್ರಘ್ನನಾಮಕೇ ದೇಶೇ ಪಂಚಾಧಿಕ-ಪಂಚಾಶತ್ಸಂಖ್ಯಾಕಾನ್ ಹಯಾನಬಧ್ನಾತ್ ।

ಮೂರನೇ ಶ್ಲೋಕದ ಅರ್ಥವು- ಭರತರಾಜನು (ದುಷ್ಯಂತ ಪುತ್ರನಾದ ಈ ಭರತರಾಜನು) ಅಶ್ವಮೇಧಯಾಗವನ್ನು ಮಾಡಿದಾಗ ಯಮುನಾತೀರದಲ್ಲಿ ಎಪ್ಪತ್ತೆಂಟು ಅಶ್ವಗಳನ್ನೂ ಗಂಗಾತೀರದಲ್ಲಿ ಐವತ್ತೈದು ಯಾಗಯೋಗ್ಯವಾದ ಅಶ್ವಗಳನ್ನೂ ಕಟ್ಟಿಹಾಕಿ ಕಾಪಾಡುತ್ತಿದ್ದನು. ಈ ಅಶ್ವಗಳಿಂದಲೇ ಭರತರಾಜನು ಅಶ್ವಮೇಧಯಾಗವನ್ನು ಮಾಡಿದನು.

ತ್ರಯಸ್ತ್ರಿಂಶಚ್ಛತಂ ರಾಜಾಽಶ್ವಾನ್ಬಧ್ವಾಽಯ(ಯಂ)ಮೇಧ್ಯಾನ್ ।
ದೌಷ್ಯಂತಿರತ್ಯಗಾದ್ರಾಜ್ಞೋ ಮಾಯಾಂ ಮಾಯವತ್ತರಃ ॥

ಚತುರ್ಥಂ ಶ್ಲೋಕಮಾಹ—ಯಮುನಾತೀರೇ ಬಾನುಷ್ಠಿತಾ ಅಶ್ವಾಸ್ತ್ರಯಸ್ತ್ರಿಂಶದಧಿಕಶತ-ಸಂಖ್ಯಾಕಾಃ । ತಾವತೋಽಶ್ವಾನ್ಮೇಧ್ಯಾನ್ಯಜ್ಞಯೋಗ್ಯಾನ್ವಿಧ್ಯುಕ್ತಕ್ರಮೇಣ ಬಂಧನಂ ಕೃತ್ವಾ ಸೋಽಯಂ ರಾಜಾ ದೌಷ್ಯಂತಿರ್ಮಾಯವತ್ತರೋಽತಿಶಯೇನ ಮಾಯಾವೀ ಸನ್ರಾಜ್ಞಃ ಸ್ವಕೀಯ-ಶತ್ರೋರ್ಮಾಯಾಮತ್ಯಗಾದತಿಕ್ರಾಂತವಾನ್ ॥

ನಾಲ್ಕನೇ ಶ್ಲೋಕದ ಅರ್ಥವು-ಹಿಂದೆ ಹೇಳಿದಂತೆ ಯಮುನಾ ನದೀತೀರದಲ್ಲಿಯೂ ಗಂಗಾನದೀತೀರದಲ್ಲಿಯೂ ಯಜ್ಞಕ್ಕಾಗಿ ಶೇಖರಿಸಿ ಕಟ್ಟಿಹಾಕಿದ್ದ ಅಶ್ವಗಳು ಒಟ್ಟು ೧೩೩ ನೂರಮೂವತ್ತಮೂರು. ಬುದ್ಧಿವಂತನಾದ (ದುಷ್ಯಂತ) ಪುತ್ರನಾದ ಈ ಭರತರಾಜನು ತನ್ನ ಶತ್ರುರಾಜರ ಕುಟಿಲೋಪಾಯಗಳನ್ನು ನಾಶಮಾಡಿ ವಿಧ್ಯುಕ್ತಪ್ರಕಾರವಾಗಿ ಅಶ್ವಮೇಧಯಾಗವನ್ನು ಮಾಡಿದನು.

ಮಹಾಕರ್ಮ ಭರತಸ್ಯ ನ ಪೂರ್ವೇ ನಾಪರೇ ಜನಾಃ । ದಿವಂ
ಮರ್ತ್ಯ ಇವ ಹಸ್ತಾಭ್ಯಾಂ ನೋದಾಪುಃ ಪಂಚಮಾನವಾ ಇತಿ ॥

ಪಂಚಮಂ ಶ್ಲೋಕಮಾಹ—ಭರತಸ್ಯ ರಾಜ್ಞೋ ಯದೇತನ್ಮಹಾಕರ್ಮ ತದೇತತ್ಪೂರ್ವೇ ಪಿತ್ರಾದಯೋ ನ ಕರ್ತುಂ ಶಕ್ತಾಃ । ಅಪರೇ ಜನಾಃ ಪುತ್ರಪೌತ್ರಾದಯಶ್ಚ ನ ಕರ್ತುಂ ಶಕ್ತಾಃ ।

**ತತ್ರ ದೃಷ್ಟಾಂತಃ । ಯಥಾ ಮನುಷ್ಯೋ ದಿವಂ ಸ್ವರ್ಗಂ ಹಸ್ತಾಭ್ಯಾಂ ಸ್ಪ್ರಷ್ಟುಮಶಕ್ತ ಏವಂ ಪಂಚ ಮಾನವಾ ನಿಷಾದಪಂಚಮಾಶ್ಚತ್ವಾರೋ ವರ್ಣಾ ನೋದಾಪುಸ್ತದೀಯಂ ಕರ್ಮ ಪ್ರಾಪ್ತುಮಶಕ್ತಾಃ । ಸೋಽಯಂ ಸರ್ವೋಽಪಿ ಮಹಾಭಿಷೇಕಸ್ಯ ಮಹಿಮೇತ್ಯರ್ಥಃ ॥**

ಐದನೇ ಶ್ಲೋಕದ ಅರ್ಥವು-ಭರತರಾಜನು ಮಾಡಿದಅಶ್ವಮೇಧಯಾಗ, ದಾನ ಮಹಿಮೆ ಮೊದಲಾದ ಕರ್ಮಗಳು ಮಹಾಕರ್ಮವೆನಿಸುವುದು. ಇಂತಹ ಕರ್ಮವನ್ನು ಈ ಭರತರಾಜನ ವಂಶದಲ್ಲಿ ಹಿಂದೆ ಯಾವ ರಾಜನೂ ಮಾಡಿರಲಿಲ್ಲ. ಮುಂದೆ ಯಾವ ರಾಜನೂ ಮಾಡುವಂತಿಲ್ಲ. ಈ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಹೇಳುವುದು ಸಮಂಜಸವು. ಪಂಚಮಾನವರೆಂದು ಪ್ರಸಿದ್ಧರಾದ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ನಿಷಾದ ಅಥವಾ ಬೇಡರು) ಐದು ವಿಧ ಜನರು ಸಹ ಸ್ವರ್ಗಲೋಕವನ್ನು ತಮ್ಮ ಕೈಗಳಿಂದ ಮುಟ್ಟಲು, ಹೇಗೆ ಅಸಮರ್ಥರೋ ಅದರಂತೆ ಮಾನವರಲ್ಲಿ ಯಾರಿಂದಲೂ ಸಹ ಈ ಭರತರಾಜನು ಮಾಡಿದ ಯಜ್ಞ, ದಾನ ಮೊದಲಾದ ಮಹಾಕರ್ಮವನ್ನು ಮಾಡಲು ಅಸಮರ್ಥರಾಗಿರುವರು (ಶಕ್ತರಲ್ಲ). ಇವೆಲ್ಲವೂ ಎಂದರೆ ಭರತರಾಜನ ಮಹಾಕರ್ಮವೆಲ್ಲವೂ ಈ ರಾಜನಿಗೆ ಇವನ ಪುರೋಹಿತನು ಮಾಡಿದ ಮಹಾಭಿಷೇಕದ ಮಹಿಮೆಯೇ ಆಗಿರುವುದೆಂದಭಿಪ್ರಾಯವು.

ಏತಂ ಹವಾ ಐಂದ್ರಂ ಮಹಾಭಿಷೇಕಂ ಬೃಹದುಕ್ಥ ಋಷಿರ್ದುರ್ಮುಖಾಯ ಪಾಂಚಾಲಾಯ ಪ್ರೋವಾಚ ತಸ್ಮಾದು ದುರ್ಮುಖಃ ಪಾಂಚಾಲೋ ರಾಜಾ ಸನ್ವಿದ್ಯಯಾ ಸಮಂತಂ ಸರ್ವತಃ ಪೃಥಿವೀಂ ಜಯನ್ಪರೀಯಾಯ ॥

**ಅಥ ಸಂಪ್ರದಾಯಕಥನಮುಖೇನ ಮಹಾಭಿಷೇಕಂ ಪ್ರಶಂಸತಿ— ಬೃಹದುಕ್ಥನಾಮಕಃ ಕಶ್ಚಿದೃಷಿಃ ಪಂಚಾಲದೇಶಸ್ವಾಮಿನೇ ದುರ್ಮುಖನಾಮ್ನೇ ರಾಜ್ಞೇ ತಮೇತಮಿತ್ರಂದ್ರಸಂಬಂಧಿನಂ ಮಹಾಭಿಷೇಕಂ ಪ್ರೋವಾಚ । ತಸ್ಮಾದೇವ ಕಾರಣಾತ್ಸ ರಾಜಾ ಸನ್ವಿದ್ಯಯಾ ಮಹಾಭಿಷೇಕಜ್ಞಾನೇನೈವ ಸರ್ವಾಸು ದಿಕ್ಷು ಸಮಂತಂ ಸಮಗ್ರಾಂ ಪೃಥಿವೀಂ ಜಯನ್ಪರೀಯಾಯ ಪರಿತಃ ಸಂಚಚಾರ॥**

ಸಂಪ್ರದಾಯಪೂರ್ವಕವಾಗಿ ಮಹಾಭಿಷೇಕವನ್ನು ಪ್ರಶಂಸೆಮಾಡುವದು—ಬೃಹದುಕ್ಥ ಎಂಬ ಒಬ್ಬ ಋಷಿಯಿದ್ದನು. ಆ ಋಷಿಯು ಒಂದು ಸಮಯದಲ್ಲಿ ಪಾಂಚಾಲದೇಶಾಧಿಪತಿಯಾದ ದುರ್ಮುಖನೆಂಬ ರಾಜನಿಗೆ ಇಂದ್ರನ ಮಹಾಭಿಷೇಕದ ವರ್ಣನೆಯನ್ನು ವಿವರಿಸಿ ಹೇಳಿದನು. ಈ ಮಹಾಭಿಷೇಕವನ್ನು ಶ್ರವಣಮಾಡಿದ(ಕೇಳಿದ)ಕಾರಣದಿಂದಲೇ ಪಾಂಚಾಲ ದೇಶದ ದುರ್ಮುಖರಾಜನು ಪೃಥಿವಿಯ ಸಮಸ್ತ ದೇಶಗಳನ್ನೆಲ್ಲಾ ಜಯಿಸಿ ಪ್ರಖ್ಯಾತನಾದನು.

ಏತಂ ಹವಾ ಐಂದ್ರಂ ಮಹಾಭಿಷೇಕಂ ವಾಸಿಷ್ಠಃಸಾತ್ಯಹವ್ಯೋಽತ್ಯರಾತಯೇ ಜಾನಂತಪಯೇ ಪ್ರೋವಾಚ ತಸ್ಮಾದ್ವತ್ಯರಾತಿರ್ಜಾನಂತಪಿರಾಜಾ ಸನ್ವಿದ್ಯಯಾ ಸಮಂತಂ ಸರ್ವತಃ ಪೃಥಿವೀಂ ಜಯನ್ಪರೀಯಾಯ ॥

ಅಥ ಬ್ರಾಹ್ಮಣಸ್ಯೋಕ್ತಾಭಿಷೇಕಾಧಿಕಾರಾಭಾವೇಽಪಿ ತದ್ವಿದ್ಯಾಧಿಕಾರಸದ್ಭಾವಾತ್ಫಲಸಿದ್ಧಿಂ ದರ್ಶಯತಿ—ವಸಿಷ್ಠಗೋತ್ರೋತ್ಪನ್ನೋ ವಾಸಿಷ್ಠಃ ಸತ್ಯಹವ್ಯಸ್ಯ ಪುತ್ರಃ ಸಾತ್ಯಹವ್ಯಸ್ತಾದೃಶೋ ಮುನಿರತ್ಯರಾತಿನಾಮಕಾಯ ಜನಂತಪಪುತ್ರಾಯ ಬ್ರಾಹ್ಮಣಾಯ ತಮೇತಂ ಮಹಾಭಿಷೇಕಂ ಪ್ರೋವಾಚ। ತಸ್ಮಾದೇವ ಕಾರಣಾದಯಮತ್ಯರಾತಿರ್ಜಾನಂತಪಿಃ ಸ್ವಯಮರಾಜಾ ಸನ್ನಪ್ಯಭಿಷೇಕ-ವಿದ್ಯಯಾ ಜಯಂ ಪ್ರಾಪ್ತಃ ಪರಿತೋ ಗತವಾನ್ ॥

ಬ್ರಾಹ್ಮಣನಾದವನಿಗೆ ಈ ಮಹಾಭಿಷೇಕದ ಸಂಸ್ಕಾರವು ವಿಧಿಸಲ್ಪಟ್ಟಿಲ್ಲವಾದರೂ ಈ ಮಹಾಭಿಷೇಕಶ್ರವಣ ಜ್ಞಾನಾದಿಗಳಿಂದ ಉತ್ತಮವಾದ ಫಲವನ್ನು ಪಡೆಯುವನೆಂಬ ವಿಷಯವನ್ನು ಇಲ್ಲಿ ತಿಳಿಸುತ್ತಾರೆ. ವಸಿಷ್ಠಗೋತ್ರೋತ್ಪನ್ನನೂ ಸತ್ಯಹವ್ಯ ಎಂಬ ಋಷಿಯ ಪುತ್ರನೂ ಆದ ಋಷಿಯೊಬ್ಬನು ಜನಂತಪ ಪುತ್ರನಾದ ಅತ್ಯರಾತಿ ಎಂಬ ಬ್ರಾಹ್ಮಣನಿಗೆ ಈ ಮಹಾಭಿಷೇಕದ ವಿವರವನ್ನು ತಿಳಿಸಿ ಹೇಳಿದನು. ಈ ಅಭಿಷೇಕಶ್ರವಣ ಜ್ಞಾನದಿಂದಲೇ ಜನಂತಪ ಪುತ್ರನಾದ ಅತ್ಯರಾತಿಯೆಂಬ ಬ್ರಾಹ್ಮಣನು ತಾನು ಸ್ವಯಂ ರಾಜನಾಗಿಲ್ಲದಿದ್ದರೂ ಸಮಸ್ತ ಕಾರ್ಯಗಳಲ್ಲಿಯೂ ಜಯವನ್ನೂ ಅಭಿವೃದ್ಧಿಯನ್ನೂ ಪಡೆದು ಸುಖವಾಗಿದ್ದನು.

ಸ ಹೋವಾಚ ವಾಸಿಷ್ಠಃ ಸಾತ್ಯಹವ್ಯೋಽಜೈಷೀರ್ವೈ ಸಮಂತಂ ಸರ್ವತಃ ಪೃಥಿವೀಂ ಮಹನ್ಮಾ ಗಮಯೇತಿ ಸ ಹೋವಾಚಾತ್ಯ-ರಾತಿರ್ಜಾನಂತಪಿರ್ಯದಾ ಬ್ರಾಹ್ಮಣೋತ್ತರಕುರುಂಜಯೇಯಮಥ ತ್ವಮು ಹೈವ ಪೃಥಿವ್ಯೈ ರಾಜಾ ಸ್ಯಾಃ ಸೇನಾಪತಿರೇವ ತೇಽ-ಹಂ ಸ್ಯಾಮಿತಿ ಸ ಹೋವಾಚ ವಾಸಿಷ್ಠಃ ಸಾತ್ಯಹವ್ಯೋ ದೇವ-ಕ್ಷತ್ರಂ ವೈ ತನ್ನ ವೈ ತನ್ಮರ್ತ್ಯೋ ಜೇತುಮರ್ಹತ್ಯದ್ರುಕ್ಷೋ ವೈ ಮ ಆ ತ ಇದಂ ದದ ಇತಿ ತತೋ ಹಾತ್ಯರಾತಿಂ ಜಾನಂತ-ಪಿಮಾತ್ತವೀರ್ಯಂ ನಿಃಶುಕ್ರಮಮಿತ್ರತಪನಃ ಶುಷ್ಮಿಣಃ ಶೈಬ್ಯೋ ರಾಜಾ ಜಘಾನ ॥

ಯಥಾಭಿಷೇಕೇ ಶಪಥಂ ಕೃತ್ವಾ ಗುರುದ್ರೋಹೋ ನ ಕರ್ತವ್ಯ ಏವಂ ವಿದ್ಯಾಯಾಮಪೀತಿ ದರ್ಶಯತಿ—ಸಾತ್ಯಹವ್ಯೋ ವಾಸಿಷ್ಠೋ ಗುರುರತ್ಯರಾತಿಂ ಶಿಷ್ಯಮೇವಮುವಾಚ॥ ಹೇಽತ್ಯರಾತೇ ವಿದ್ಯಾಸಾಮರ್ಥ್ಯಾತ್ಪೃಥಿವೀಂ ಜಿತವಾನಸಿ। ಅತೋ ಮಾಂ ಗುರುಂ ಮಹದ್ಗಮಯ ಮಹತ್ತ್ವ-ಮೈಶ್ವರ್ಯಂ ಪ್ರಾಪಯ। ತತಃ ಶಿಷ್ಯೋಽತ್ಯರಾತಿರೇವಮುವಾಚ। ಮಾ ಭೂದಿದಾನೀಂ ತವ ಮಹತ್ತ್ವಮ್। ಹೇ ಬ್ರಾಹ್ಮಣಾಚಾರ್ಯ ಯದಾಹಮುತ್ತರಕುರುನಾಮಕಾನ್ ಹಿಮವತ್ಪರ್ವತಸ್ಯೋ-ತ್ತರದೇಶಾಞ್ಜಯೇಯಂ ತದಾನೀಂ ತ್ವಮೇವ ಪೃಥಿವ್ಯಾ ರಾಜಾ ಭವ। ಅಹಂ ತು ತ್ವದೀಯಸೇನಾ-ಪತಿರೇವ ಭವಾಮೀತಿ। ತತಃ ಸಾತ್ಯಹವ್ಯೋ ವಾಸಿಷ್ಠಃ ಸ ಗುರುರೇವಮುವಾಚ। ಹೇಽತ್ಯರಾತೇ ಮೇರೋರುತ್ತರತೋ ಯದಸ್ತಿ ತದ್ದೇವಕ್ಷೇತ್ರಮತಸ್ತತ್ಕ್ಷೇತ್ರಂ ಮನುಷ್ಯೋ ಜೇತುಂ ನೈವಾರ್ಹತಿ।

ತ್ವಂ ತು ಮೇ ಮಹ್ಯಮದ್ರುಹ್ಯೋ ನೈ ದ್ರೋಹಂ ಕೃತವಾನೇವ । ಮದಪೇಕ್ಷಿತಂ ಮಹತ್ತ್ವಂ ದಾತು-ಮನಿಚ್ಛುಃ ಸನ್ವಂಚನಾರ್ಥಂ ಯತ್ಕಿಂಚಿದುಕ್ತವಾನಸಿ । ಅತಃ ಶಪಥೋಲ್ಲಂಘಿನೋ ಗುರುದ್ರೋಹಿ-ಣಸ್ತವೇದಂ ಸಾಮರ್ಥ್ಯಮಾದದೇಽಪಹರಾಮೀತಿ । ತತಃ ಸಾಮರ್ಥ್ಯಾಪಹರಣಾದತ್ಯರಾತಿಂ ಜಾನಂತಪಿಂ ಗುರುಣಾಪಹೃತವೀರ್ಯಮಪಹೃತತೇಜಸ್ಕಂ ಕಶ್ಚಿಚ್ಛತ್ರುತಾಪನಃ ಶಿಬಿಪುತ್ರಃ ಶುಷ್ಮಿಣಾಖ್ಯೋ ರಾಜಾ ಜಘಾನ ಹತವಾನ್ ॥

ಅಭಿಷೇಕ ಕಾಲದಲ್ಲಿ ರಾಜನಿಗೂ ಪುರೋಹಿತನಿಗೂ ಶಪಥ ನಡೆದಾಗ ರಾಜನು ಗುರುದ್ರೋಹವನ್ನು ಮಾಡುವುದಿಲ್ಲ ವೆಂದು ಶಪಥವನ್ನು ಕೈಗೊಳ್ಳುವನಷ್ಟೆ. ಅದರಂತೆ ವಿದ್ಯದ ವಿಷಯದಲ್ಲಿಯೂ ಗುರುದ್ರೋಹವನ್ನು ಮಾಡುವುದಿಲ್ಲವೆಂಬುದನ್ನು ಶಿಷ್ಯನಾದವನು ಶಪಥ ಮಾಡಬೇಕೆಂಬ ವಿಷಯವನ್ನು ತಿಳಿಸುವರು. ವಸಿಷ್ಠಗೋತ್ರೋತ್ಪನ್ನನಾದ ಸತ್ಯಹವ್ಯನೆಂಬ ಋಷಿಯು (ಗುರುವು) ತನ್ನ ಶಿಷ್ಯನಾದ ಅತ್ಯರಾತಿ ಎಂಬುವನಿಗೆ ಈ ರೀತಿ ಹೇಳಿದನು. ಎಲೈ ಅತ್ಯರಾತಿಯೇ (ಶಿಷ್ಯನೇ) ನಾನು ನಿನಗೆ ಹೇಳಿದ ವಿದ್ಯಾಸಾಮರ್ಥ್ಯದಿಂದ ನೀನು ಪೃಥಿವಿಯ ಸಮಸ್ತದೇಶಗಳನ್ನೂ ಜಯಿಸಿರುವೆ. ಆದ್ದರಿಂದ ನೀನು ಗುರುವಾದ ನನಗೆ ಮಹದೈಶ್ವರ್ಯವನ್ನು ತಂದೊಪ್ಪಿಸು ಎಂದು ಹೇಳಲು ಶಿಷ್ಯನಾದ ಅತ್ಯರಾತಿಯು ಅದಕ್ಕೆ ಪ್ರತ್ಯುತ್ತರವಾಗಿ ಇಂತೆಂದನು—ಎಲೈ ಆಚಾರ್ಯನೇ ಇದರಲ್ಲಿ (ನನ್ನ ಜಯ ಸಾಮರ್ಥ್ಯದಲ್ಲಿ) ನಿನ್ನ ಮಹತ್ವನೇನೂ ಇರುವುದಿಲ್ಲ. ನಾನು ಅನೇಕ ದೇಶಗಳನ್ನು ಜಯಿಸಬೇಕೆಂದಿರುವೆನು. ಹಿಮವತ್ಪರ್ವತದ ಉತ್ತರದಿಕ್ಕಿನಲ್ಲಿರುವ ಉತ್ತರ ಕುರು ಎಂಬ ದೇಶವಿರುವುದು. ಅದನ್ನು ನಾನು ಜಯಿಸಿದ ಮೇಲೆ ನೀನು ಆ ದೇಶಕ್ಕೆ ರಾಜನಾಗು. ನಾನು ನಿನಗೆ ಸೇನಾಪತಿಯಾಗಿ ಇರುವೆನು ಎಂದನು. ಶಿಷ್ಯನ ವಾಕ್ಯವನ್ನು ಕೇಳಿ ಸಾತ್ಯಹವ್ಯನು ಮತ್ತಿಂತೆಂದನು—ಎಲೈ ಅತ್ಯರಾತಿಯೇ, ಕೇಳು ಮೇರುಪರ್ವತದ ಉತ್ತರ ಪ್ರದೇಶವು ದೇವತೆಗಳ ಭೂಮಿಯಾಗಿರುವುದು. ಆ ಪ್ರದೇಶವನ್ನು ಜಯಿಸಲು ಮನುಷ್ಯನಿಗೆ ಶಕ್ತಿಯಿಲ್ಲ. ಆದ್ದರಿಂದ ನೀನು ನನಗೆ ಇಲ್ಲದ ಕಾರಣವನ್ನು ಹೇಳಿ ದ್ರೋಹವನ್ನು ಬಗೆದಿರುವೆ. ನನ್ನ ಮಹತ್ವವನ್ನು ಬಳಸಿಕೊಂಡು ನನಗೆ ವಂಚನೆ ಮಾಡುವುದಕ್ಕಾಗಿ ಯಾವುದಾದರೂ ಒಂದು ಕಾರಣ (ನೆಪ) ವನ್ನು ಹೇಳುತ್ತಿರುವೆ. ಆದ್ದರಿಂದ ಶಪಥೋಲ್ಲಂಘನೆಯನ್ನು ಗುರುದ್ರೋಹವನ್ನೂ ಮಾಡುತ್ತಿರುವ ನಿನ್ನ (ಜಯಿಸುವ) ಗೆಲ್ಲುವ ಶಕ್ತಿಸಾಮರ್ಥ್ಯಗಳನ್ನು ನಾನು ಹಿಂದಕ್ಕೆ ತೆಗೆದುಕೊಂಡಿರುವೆನು ಎಂದು ಹೇಳಿ ಶಿಷ್ಯನ ಸಾಮರ್ಥ್ಯಾದಿಗಳನ್ನು ಗುರುವು ಹಿಂದಕ್ಕೆ ತೆಗೆದುಕೊಂಡನು. ಬಳಿಕ ಅತ್ಯರಾತಿ ಎಂಬ ಆ ಶಿಷ್ಯನ ಶಕ್ತಿಸಾಮರ್ಥ್ಯಗಳು ಹೋಗಲಾಗಿ ಅವನನ್ನು ಶಿಬಿಪುತ್ರ ಎಂಬ ಹೆಸರಿನ ರಾಜನ ಮಗನಾದ ಶುಷ್ಮಿಣ ಎಂಬ ರಾಜನು ಅತ್ಯರಾತಿ ಎಂಬ ಆ ಶಿಷ್ಯನನ್ನು ಯುದ್ಧದಲ್ಲಿ ಸಂಹರಿಸಿದನು.

**ತಸ್ಮಾದೇವಂವಿದುಷೇ ಬ್ರಾಹ್ಮಣಾಯೈವಂಚಕ್ರುಷೇ ನ ಕ್ಷತ್ರಿಯೋ ದ್ರುಹ್ಯೇನ್ನೆದ್ರಾಷ್ಟ್ರಾದವಪದ್ಯೇಯಂ ನೇದ್ವಾ ಮಾ ಪ್ರಾಣೋ ಜಹದಿತಿ ಜಹದಿತಿ ॥**

ಏತದ್ವೃತ್ತಾಂತಕಥನಫಲಂ ದರ್ಶಯತಿ—ಯಸ್ಮಾದ್ಗುರುದ್ರೋಹೇ ಮಹತೀ ಹಾನಿರುಕ್ತಾ ತಸ್ಮಾದೇವಂ ವಿದುಷೇ ಮಹಾಭಿಷೇಕಾಭಿಜ್ಞಾಯೈವಂಚಕ್ರುಷೇಽಭಿಷೇಕಕರ್ತ್ರೇ ಬ್ರಾಹ್ಮಣಾಯಾ-ಚಾರ್ಯಾಯ ಕ್ಷತ್ರಿಯೋ ನ ದ್ರುಹ್ಯೇತ್ । ಕೇನಾಭಿಪ್ರಾಯೇಣೇತಿ ಸೋಽಭಿಧೀಯತೇ । ರಾಷ್ಟ್ರಾದಸ್ಮಾದ್ದೇಶಾನ್ನೇದವಪದ್ಯೇಯಂ ನೈವ ಭ್ರಷ್ಟೋ ಭೂಯಾಸಮ್ । ಅಥವಾ ಮಾ ಪ್ರಾಣೋ ನೇಜ್ಜಹನ್ನೈವ ಪರಿತ್ಯಜತ್ವಿತ್ಯಭಿಪ್ರಾಯಃ । ಅಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ॥

ಮೇಲೆ ಹೇಳಿದ ವೃತ್ತಾಂತಕಥನಫಲವನ್ನು ತಿಳಿಸುವರು. ಗುರುದ್ರೋಹಮಾಡಿದರೆ ಮಹಾಹಾನಿಯು ಸಂಭವಿಸುವುದು. ಆದ್ದರಿಂದ ಈ ಮಹಾಭಿಷೇಕದ ವಿಷಯವನ್ನು ತಿಳಿದಿರುವ ಆಚಾರ್ಯನಿಗೆ (ಪುರೋಹಿತನಿಗೆ) ಕ್ಷತ್ರಿಯನಾದ ರಾಜನು ಯಾವಾಗಲೂ ದ್ರೋಹಮಾಡಬಾರದು. ಮನಸ್ಸಿನಲ್ಲಿ ದ್ರೋಹವನ್ನೆಣಿಸಬಾರದು. ರಾಜನು ಹಾಗೇನಾದರೂ ಗುರುವಿಗೆ ದ್ರೋಹಮಾಡಿದರೆ ರಾಜನು ತನ್ನ ದೇಶವನ್ನು (ರಾಜ್ಯವನ್ನು) ಕಳೆದುಕೊಂಡು ದೇಶಭ್ರಷ್ಟನಾಗುವನು ಅಥವಾ ಅವನಿಗೆ ಪ್ರಾಣಾಪಾಯ ಎಂದರೆ ಮರಣವೂ ಸಂಭವಿಸುವುದು ಆದ್ದರಿಂದ ಗುರುದ್ರೋಹವನ್ನೆಂದಿಗೂ ಮಾಡಬಾರದು.

## *English Translation*

### (Continuation Stanzas on the liberaility of Bharata. Story of Sathyahavya, who was cheated out of his reward by the king Atyarati)

With this ceremoncy Dirghtamas, the son of an unmarried woman inaugurated Bharata, the son of Dushyanta. Thence Bharata went conpuering everywhere over the whole earth up to its ends, and sacrificed those horses which were fit for being sacrificed. Regarding this event the following stanzas are sung :

(1) Bharata presented one hundred and seven Badvas (large flocks) of elephantas of a dark comlexion with white teeth, all decked with gold, in the country Mashnara.

(2) At the time when Bharata, the son of Dhushyanta, constructed a sacred hearth in the country of Sachiguna, the Brahmans got distributed flocks of cows by thousands.

(3) Bharata, the son of Dushyanta, bound seventy-eight horses for being sacrificed on the bank of the Yamuna, and fifty-five on the Ganga for Indra.

(4) The son of Dushyanta, after having bound for sacrificing one hundred and thirty-three horses, overcame the stratagems of his royal enemy by means of the suqeriority of his own stratagems.

(5) The great work achieved by Bharata, neither the the forefathers achieved it, nor will future generations achieve it, (for it is as

impossible to do it) as any mortal, belonging to the five divisions of mankind, can touch with his hands the sky.

The Rishi Brihad Uktha communicated this great inauguration ceremoney to Durmukha, the Panchala. Thence Durmukha, who was no king, being possessed of this knowlege, went conquering everywhere over the whole earth up to its end, and sacrificed the sacrificial horse.

The son of Satyahavya of the Vasishtha Gotra, communicated this ceremony to Atyarati , the son of Janantapaya. Thence Atyarati who was no king, being possessed of such a knowledge, went conquering everywhere over the whole earth np to its ends, and sacrificed the sacrificial horse.

The son of Satyahavya, of the Vasishtha Gotra, then told the king, "Thou hast now conquered the whole earth up to the shore of the sea; let me obtain now greatness as reward for my services." Atyarati answered, "When, O Brahmana, I shall have conquered the Uttara Kurus; then thou shalt be king of the earth, and I will be thy general," The son of Satyahavaya said, "This is the land of the gods, no mortal can conquer it. Thou hast cheated me, therefore I take all this from thee." Atyarati ofter having been thus deprived of this powers, and majesty, was slain by the victorious king Sushmina, the son of Sibya. Thence a Kshattriya should not cheat a Brahman who has this knowledge and performed this inauguration ceremony, unless he wishes to be turned out of his dominions, and to lose his life.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಏಕೋನಚತ್ವಾರಿಂಶಾಧ್ಯಾಯಸ್ಯ ನವಮಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಏಕೋನಚತ್ವಾರಿಂಶೋಽಧ್ಯಾಯಃ ಸಮಾಪ್ತಃ

ಇಲ್ಲಿಗೆ ಐತರೇಯಬ್ರಾಹ್ಮಣದ ಮೂವತ್ತೊಂಭತ್ತನೆಯ ಅಧ್ಯಾಯದಲ್ಲಿ ಒಂಭತ್ತನೆಯ ಖಂಡವು
ಸಮಾಪ್ತವಾದುದು

ಮೂವತ್ತೊಂಭತ್ತನೆಯ ಅಧ್ಯಾಯವು ಸಮಾಪ್ತವಾದುದು

# ಅಥೈತರೇಯಬ್ರಾಹ್ಮಣೇ ಚತ್ವಾರಿಂಶಾಧ್ಯಾಯೇ ಪ್ರಥಮಃ ಖಂಡಃ

## ಐತರೇಯಬ್ರಾಹ್ಮಣದ ನಲವತ್ತನೆಯ ಅಧ್ಯಾಯದಲ್ಲಿ ಮೊದಲನೆಯ ಅಧ್ಯಾಯವು

---

[ಪುರೋಹಿತನ ವಿಚಾರ ಇತ್ಯಾದಿ. ರಾಜನು ತನ್ನ ಪುರೋಹಿತನನ್ನು ನೇಮಿಸಿಕೊಳ್ಳುವ ಅವಶ್ಯಕತೆಯು
ರಾಜನು ಗಾರ್ಹಪತ್ಯಾದ್ಯಗ್ನಿಗಳನ್ನು ರಕ್ಷಿಸುವ ಕ್ರಮ. ಅಗ್ನಿಯ ಕ್ರೂರಶಕ್ತಿಗಳನ್ನು ಶಾಂತವನ್ನಾಗಿ
ಮಾಡಿ ಸಮಾಧಾನ ಪಡಿಸುವ ವಿಚಾರ]

---

**ಅಥಾತಃ ಪುರೋಧಾಯಾ ಏವ ।**

**ಮಹಾಭಿಷೇಕ ಐಂದ್ರೋ ಯಃ ಕ್ಷತ್ರಿಯಸ್ಯಾಸೌ ಪುರೋಹಿತಃ ॥**
**ಪೌರೋಹಿತ್ಯಂ ಬ್ರಾಹ್ಮಣಸ್ಯ ವ್ಯಕ್ತವ್ಯಮಧುನೋಚ್ಯತೇ ॥೧॥**

ತದೇತ್ಪ್ರತಿಜಾನೀತೇ—ಅಥ ಕ್ಷತ್ರಿಯಸ್ಯ ಮಹಾಭಿಷೇಕಕಥನಾನಂತರಂ ಯತೋ ಬ್ರಾಹ್ಮಣಸ್ಯ ಪೌರೋಹಿತ್ಯಂ ಬಹುಷು ಶ್ರುತಂ ಭವತಿ । ಅತಃ ಕಾರಣಾತ್ಪುರೋಧಾಯಾ ಏವ ಪೌರೋಹಿತ್ಯಸ್ಯೈವ ವಿಧಿರುಚ್ಯತ ಇತಿ ಶೇಷಃ ।

ಹಿಂದಿನ ಅಧ್ಯಾಯಗಳಲ್ಲಿ ಇಂದ್ರನಿಗೆ ಪುರೋಹಿತನು ಮಾಡಿದ ಪಟ್ಟಾಭಿಷೇಕಕ್ರಮ ಮೊದಲಾದ ವಿಷಯಗಳನ್ನು ವಿವರಿಸಿದ್ದಾಯಿತು. ಈಗ ಈ ಅಧ್ಯಾಯದಲ್ಲಿ ಬ್ರಾಹ್ಮಣನಾದವನು ಕ್ಷತ್ರಿಯನಿಗೆ ಮಾಡಿಸಬೇಕಾದ ಪೌರೋಹಿತ್ಯವಿಧಾನವನ್ನು (ಪುರೋಹಿತನ ಕರ್ತವ್ಯವನ್ನು) ತಿಳಿಸಲಾಗುವುದು.

ಕ್ಷತ್ರಿಯರಾಜನ ಮಹಾಭಿಷೇಕವೂ ಅದನ್ನು ಪುರೋಹಿತನು (ಬ್ರಾಹ್ಮಣನು) ನೆರವೇರಿಸುವ ಕ್ರಮವನ್ನೂ ಅನೇಕರು ಹೇಳುವರು. ಆದ್ದರಿಂದ ಪುರೋಹಿತನು ಹೇಗಿರಬೇಕು ಅವನ ಕರ್ತವ್ಯಕರ್ಮವೇನು ಮುಂತಾದ ವಿವರಗಳನ್ನು ಮುಂದೆ ಹೇಳಬೇಕಾಗಿರುವುದು.

**ನ ಹ ವಾ ಅಪುರೋಹಿತಸ್ಯ ರಾಜ್ಞೋ ದೇವಾ ಅನ್ನಮದಂತಿ ತಸ್ಮಾ-ದ್ರಾಜಾ ಯಕ್ಷ್ಯಮಾಣೋ ಬ್ರಾಹ್ಮಣಂ ಪುರೋ ದಧೀತ ದೇವಾ ಮೇಽನ್ನಮದನ್ನಿತಿ ॥**

ತದ್ವಿಧಿಂ ದರ್ಶಯತಿ—ಯಸ್ಮಾದಪುರೋಹಿತಸ್ಯ ರಾಜ್ಞೋಽನ್ನಂ ದೇವಾ ನಾದಂತಿ ನ ಭಕ್ಷಯಂತಿ ತಸ್ಮಾದ್ರಾಜಾ ಯಕ್ಷ್ಯಮಾಣೋ ಬ್ರಾಹ್ಮಣಂ ಪುರೋಹಿತಂ ಕುರ್ಯಾತ್ । ಕೇನಾಭಿ-ಪ್ರಾಯೇಣೇತಿ ಸೋಽಭಿಧೀಯತೇ । ದೇವಾ ಮದೀಯಮನ್ನಮದನ್ನದನ್ತ್ವಿತಿ ತಸ್ಯಾಭಿಪ್ರಾಯಃ ।

**ಅಯಕ್ಷ್ಯಮಾಣ ಇತಿ ವಾ ಪದಚ್ಛೇದಃ । ಯಾಗಾಭಾವೇಽಪಿ ಪ್ರಜಾಪರಿಪಾಲನೇ ಧರ್ಮಬೋಧ-ನಾಯ ಪುರೋಹಿತಃ ಸಂಪಾದನೀಯಃ ॥**

ಅದರ ವಿಧಿಯನ್ನು ತಿಳಿಸುವರು. ಪುರೋಹಿತನ ಸಹಾಯವಿಲ್ಲದೆ ರಾಜನು ಮಾಡುವ ಯಜ್ಞದಲ್ಲಿ ದೇವತೆಗಳು ಹವಿಸ್ಸನ್ನು (ಅನ್ನವನ್ನು) ಸ್ವೀಕರಿಸುವುದಿಲ್ಲ. ಆದ್ದರಿಂದ ರಾಜನು ಮಾಡುವ ಯಜ್ಞದಲ್ಲಿ ಬ್ರಾಹ್ಮಣನನ್ನು ಪುರೋಹಿತನನ್ನಾಗಿ ನಿಯಮಿಸಿಕೊಳ್ಳಬೇಕು. ದೇವತೆಗಳು, ರಾಜನಾದ ನಾನು ಮಾಡುವ ಯಜ್ಞದಲ್ಲಿ ಹವಿಸ್ಸನ್ನು ಸ್ವೀಕರಿಸಬೇಕು. ಅದಕ್ಕಾಗಿ ನಾನು (ರಾಜನು) ಬ್ರಾಹ್ಮಣನನ್ನು ನನಗೆ ಪುರೋಹಿತನಾಗಿರುವಂತೆ ನಿಯಮಿಸಿಕೊಳ್ಳುತ್ತೇನೆ ಎಂದು ದೇವತೆಗಳನ್ನು ಪ್ರಾರ್ಥಿಸಬೇಕು. ಒಂದುವೇಳೆ ರಾಜನು ಯಜ್ಞಯಾಗಾದಿಗಳನ್ನು ಮಾಡದೆ ಇದ್ದರೂ ರಾಜ್ಯಪಾಲನೆಮಾಡುವಾಗ ಧರ್ಮವನ್ನು ತಿಳಿಯಕೊಳ್ಳುವುದಕ್ಕಾಗಿ ಪುರೋಹಿತನ ಅವಶ್ಯಕತೆಯು ರಾಜನಿಗೆ ಇದ್ದೇ ಇರುವುದು.

ಅಗ್ನೀನ್ವಾ ಏಷ ಸ್ವರ್ಗ್ಯಾನ್ರಾಜೋದ್ಧರತೇ ಯತ್ಪುರೋಹಿತಂ।

**ತದೇವಮೇತತ್ಪ್ರಶಂಸತಿ—ಪುರೋಹಿತಂ ಸಂಪಾದಯತೀತಿ ಯದಸ್ತಿ ತೇನೈಷ ರಾಜಾ ಸ್ವರ್ಗಹೇತೂನಗ್ನೀನೇವೋದ್ಧರತೇ ॥**

ರಾಜನಾದವನು ಯಜ್ಞಾದಿಗಳನ್ನು ಮಾಡುವಾಗ ಬ್ರಾಹ್ಮಣಪುರೋಹಿತನನ್ನು ನಿಯಮಿಸಿಕೊಂಡರೆ ಸ್ವರ್ಗಲೋಕ ಪ್ರಾಪ್ತಿಗೆ ಸಾಧನಭೂತವಾದ ಅಗ್ನಿಯ ಆಶ್ರಯವನ್ನು ಪಡೆದುಕೊಂಡಂತಾಗುವುದು

ತಸ್ಯ ಪುರೋಹಿತ ಏವಾಽಽಹವನೀಯೋ ಭವತಿ ಜಾಯಾ ಗಾರ್ಹಪತ್ಯಃ ಪುತ್ರೋಽನ್ವಾಹಾರ್ಯಪಚನಃ ಸ ಯತ್ಪುರೋಹಿತಾಯ ಕರೋ-ತ್ಯಾಹವನೀಯ ಏವ ತಜ್ಜುಹೋತ್ಯಥ ಯಜ್ಜಾಯಾಯೈ ಕರೋತಿ ಗಾರ್ಹಪತ್ಯ ಏವ ತಜ್ಜುಹೋತ್ಯಥ ಯತ್ಪುತ್ರಾಯ ಕರೋತ್ಯನ್ವಾ-ಹಾರ್ಯಪಚನ ಏವ ತಜ್ಜುಹೋತಿ ತ ಏನಂ ಶಾಂತತನವೋಽಭಿ-ಹುತಾ ಅಭಿಪ್ರೀತಾಃ ಸ್ವರ್ಗಂ ಲೋಕಮಭಿವಹಂತಿ ಕ್ಷತ್ರಂ ಚ ಬಲಂ ಚ ರಾಷ್ಟ್ರಂ ಚ ವಿಶಂ ಚ ॥

**ತಾನಗ್ನೀನ್ದರ್ಶಯತಿ—ತಸ್ಯ ರಾಜ್ಞಃ ಪುರೋಹಿತಾದಯ ಏವಾಹವನೀಯಾದ್ಯಗ್ನಿ-ಸ್ಥಾನೀಯಾಃ । ಅನ್ವಾಹಾರ್ಯಪಚನೋ ದಕ್ಷಿಣಾಗ್ನಿಃ । ಸ ರಾಜಾ ಪುರೋಹಿತಾದಿಭ್ಯೋ ಯದ-ಪೇಕ್ಷಿತಂ ಕರೋತಿ ತದೇತದಾಹವನೀಯಾದಿಷು ಹೋಮಸಮಾನಮ್ । ಅತಃ ಪುರೋಹಿತದ್ವಾರಾ ತೇಽಗ್ನಯಃ ಶಾಂತತನವಃ ಸ್ವಕೀಯಮುಗ್ರರೂಪತ್ವಂ ಪರಿತ್ಯಜ್ಯಾಭೀಷ್ಟಹೋಮೇನ ಪ್ರೀತಾ ಏನಂ ಕ್ಷತ್ರಿಯಂ ಸ್ವರ್ಗಾದಿಕಂ ಪ್ರಾಪಯಂತಿ । ಕ್ಷತ್ರಂ ಮಾನಸೋತ್ಸಾಹರೂಪಂ ಶೌರ್ಯಮ್ । ಬಲಂ ಶಾರೀರಮ್ । ರಾಷ್ಟ್ರಂ ದೇಶಃ। ವಿಟ್ ಪ್ರಜಾ । ಪುರೋಹಿತಾದಿಪ್ರೀತ್ಯಾ ತದೇತತ್ಸರ್ವಂ ಪ್ರಾಪ್ಯತೇ ॥**

ಅಗ್ನಿಯನ್ನು ಪ್ರಶಂಸೆಮಾಡುವರು. ರಾಜನ ಪುರೋಹಿತ ಮೊದಲಾದವರು ರಾಜನು ಆಶ್ರಯಮಾಡಿದ ಆಹವನೀಯ ಮೊದಲಾದ ಅಗ್ನಿಗಳಿಗೆ ಸಮಾನರು. ಹೇಗೆಂದರೆ ಪುರೋಹಿತನು ಆಹವನೀಯಸ್ಥಾನೀಯನು. ರಾಜನ ಪತ್ನಿಯು

ಗಾರ್ಹಪತ್ಯಾಗ್ನಿ ಸ್ವರೂಪಳು' ರಾಜನ ಪುತ್ರನು ಪುರೋಹಿತಮೊದಲಾದವರಿಗೆ ಮಾಡುವ ಉಪಕಾರಾದಿಗಳು ಆಹವನೀಯ ಮೊದಲಾದ ಅಗ್ನಿಗಳಲ್ಲಿ ಹೋಮಮಾಡಿದಂತೆಯೇ ಆಗುವವು. ಅಗ್ನಿಗಳನ್ನು ತೃಪ್ತಿಪಡಿಸಿದರೆ ಆ ಅಗ್ನಿಗಳು ತಮ್ಮ ಉಗ್ರ (ಕ್ರೂರ) ಸ್ವರೂಪವನ್ನು ಬಿಟ್ಟು ಹೋಮದಿಂದ ಪ್ರೀತರಾಗಿ ಹೋಮಮಾಡಿದ ರಾಜನಿಗೆ ಸ್ವರ್ಗಲೋಕಪ್ರಾಪ್ತಿಯನ್ನು ಸಾಧಿಸಿಕೊಡುವರು. ಮೇಲೆ ಹೇಳಿದ ಕ್ಷತ್ರಂ ಎಂಬ ಪದಕ್ಕೆ ಉತ್ಸಾಹರೂಪವಾದ ಶೌರ್ಯ, ಬಲಂ- ಶರೀರಬಲ, ರಾಷ್ಟ್ರಂ- ದೇಶವು, ವಿಶಂ-ಪ್ರಜೆಗಳನ್ನು ಇವುಗಳನ್ನೆಲ್ಲಾ ಅಗ್ನಿಗಳು (ಮತ್ತು) ಪುರೋಹಿತರೇ ಮೊದಲಾದವರು ಹೋಮಮಾಡುವ ರಾಜನಿಗೆ ಅಭಿವೃದ್ಧಿಯಾಗುವಂತೆ ಸಾಧಿಸಿಕೊಡುವರು.

ಯ ಏವೈನಮಶಾಂತತನವೋಽನಭಿಹುತಾ ಅನಭಿಪ್ರೀತಾಃ ಸ್ವರ್ಗಾ- ಲ್ಲೋಕಾನ್ನುದಂತೇ ಕ್ಷತ್ರಾಚ್ಚ ಬಲಾಚ್ಚ ರಾಷ್ಟ್ರಾಚ್ಚ ವಿಶಶ್ಚ ॥

ವಿಪಕ್ಷೇ ಬಾಧಕಮಾಹ—ತ ಏವ ಪುರೋಹಿತಾದಯೋಽಭೀಷ್ಟಹೋಮಾಭಾವೇನ ಪ್ರೀತಿ- ರಹಿತಾ ಅಶಾಂತತನವಃ ಸ್ವರ್ಗಾದೇರೇನಮಪನುದಂತೇ ॥

ಮೇಲೆ ಹೇಳಿದಂತೆ ಮಾಡದೇ ಹೋದರೆ ಸಂಭವಿಸುವ ತೊಂದರೆಯನ್ನು ವಿವರಿಸುವರು. ರಾಜನಾದವನು ತನ್ನ ಪುರೋಹಿತ ಮೊದಲಾದವರ ಅಭೀಷ್ಟವನ್ನು ಸಲ್ಲಿಸದೇ ಇದ್ದಲ್ಲಿ ಅವರು ಪ್ರೀತರಾಗುವುದಿಲ್ಲ. ಅಸಮಾಧಾನವುಳ್ಳವ ರಾಗಿಯೇ ಇರುವರು. ಇದರಿಂದ ಅಗ್ನಿಯಲ್ಲಿ ಹೋಮವನ್ನು ಮಾಡಿದಂತಾಗುವುದಿಲ್ಲ. ತನ್ನ ಕಾರ್ಯಗಳಲ್ಲಿ ಉತ್ಸಾಹ ವಾಗಲಿ, ಶರೀರ ಬಲವಾಗಲಿ ಇರುವುದಿಲ್ಲ. ತನ್ನ ರಾಜ್ಯದಿಂದ ಓಡಿಸಲ್ಪಡುವನು ಮತ್ತು ತನ್ನ ಪ್ರಜೆಗಳ ಪ್ರೀತ್ಯಾ ದರಗಳನ್ನು ಕಳೆದುಕೊಳ್ಳುವನು.

ಅಗ್ನಿರ್ವಾ ಏಷ ವೈಶ್ವಾನರಃ ಪಂಚಮೇನಿರ್ಯತ್ಪುರೋಹಿತಸ್ತಸ್ಯ ವಾಚ್ಯೇವೈಕಾ ಮೇನಿರ್ಭವತಿ ಪಾದಯೋರೇಕಾ ತ್ವಚ್ಯೇಕಾ ಹೃದಯ ಏಕೋಪಸ್ಥ ಏಕಾ ತಾಭಿರ್ಜ್ವಲಂತೀಭಿರ್ದೀಪ್ಯಮಾನಾಭಿ- ರುಪೋದೇತಿ ರಾಜಾನಂ ಸ ಯದಾಹ ಕ್ವ ಭಗವೋಽವಾಃ ತ್ಸೀಸ್ತೃಣಾನ್ಯಸ್ಮಾ ಆಹರತೇತಿ ತೇನಾಸ್ಯ ತಾಂ ಶಮಯತಿ ಯಾಽ- ಸ್ಯ ವಾಚಿ ಮೇತಿರ್ಭವತ್ಯಥ ಯದಸ್ಮಾ ಉದಕಮಾನಯಂತಿ ಪಾದ್ಯಂ ತೇನಾಸ್ಯ ತಾಂ ಶಮಯತಿ ಯಾಸ್ಯ ಪಾದಯೋರ್ಮೇನಿರ್ಭ ವತ್ಯಥ ಯದೇನಮಲಂ ಕುರ್ವಂತಿ ತೇನಾಸ್ಯ ತಾಂ ಶಮಯತಿ ಯಾಽಸ್ಯ ತ್ವಚಿ ಮೇನಿರ್ಭವತ್ಯಥ ಯದ್ಧೇನಂ ತರ್ಪಯಂತಿ ತೇನಾಸ್ಯ ತಾಂ ಶಮಯತಿ ಯಾಽಸ್ಯ ಹೃದಯೇ ಮೇನಿರ್ಭವತ್ಯಥ ಯದಸ್ಯಾನಾರುದ್ಧೋ ವೇಶ್ಮಸು ವಸತಿ ತೇನಾಸ್ಯ ತಾಂ ಶಮಯತಿ ಯಾಽಸ್ಯೋಪಸ್ಥೇ ಮೇನಿರ್ಭವತಿ ॥

ಪುನರಪಿ ಪುರೋಹಿತಂ ಪ್ರಕಾರಾಂತರೇಣ ಪ್ರಶಂಸತಿ—ಪರೋಪದ್ರವಕಾರಿಣೀ ಕ್ರೋಧರೂಪಾ ಶಕ್ತಿರ್ಮೇನಿರಿತ್ಯುಚ್ಯತೇ। ಯಥಾಽಗ್ನೇರ್ಜ್ವಾಲಾ ತದ್ವತ್। ಅತೋ ಯಃ ಪುರೋಹಿತೋಽಸ್ತಿ ಸೋಽಯಂ ಪಂಚವಿಧಮೇನ್ಯುಪೇತೋ ವೈಶ್ವಾನರನಾಮಕಾಗ್ನಿಸಮಾನಃ। ವಾಗಾದೀನಿ ಪಂಚ ಮೇನಿಸ್ಥಾನಾನಿ। ಅತಃ ಪುರೋಹಿತಸ್ತಾಭಿರ್ಮೇನಿಭಿರ್ಜ್ವಲಂತೀಭಿರ್ಜ್ವಾಲಾಸದೃಶೀಭಿರ್ದೀಪ್ಯಮಾನಾಭಿಃ ಪರೇಷು ದೀಪ್ತಿಂ ಸಂತಾಪಂ ಕುರ್ವತೀಭಿಃ ಸಹ ರಾಜಾನಮುಪೋದೇತಿ ಸಮೀಪೇ ಪ್ರಾಪ್ನೋತಿ। ತದಾ ಸ ರಾಜಾ ಹೇ ಭಗವನ್ನೇತಾವಂತಂ ಕಾಲಂ ಕುತ್ರಾವಾತ್ಸೀಃ। ಏತಸ್ಯ ಪುರೋಹಿತಸ್ಯೋಪವೇಶನಾರ್ಥಂ ಹೇ ಪರಿಚಾರಕಾಸ್ತೃಣಾನಿ ತೃಣನಿರ್ಮಿತಕುಶಾದ್ಯಾಸನಾನ್ಯಾಹರತೇತ್ಯನ್ಯೇನ ರಾಜಸಂಬಂಧಿನಾ ಪ್ರಿಯವಾಕ್ಯೇನ (ಣ) ವಾಚ್ಯೇಕಾ ಯಾ ಮೇನಿರ್ಬಾಧಿಕಾ ಶಕ್ತಿಸ್ತಾಂ ಸ ರಾಜಾ ಶಮಯತಿ। ಪಾದ್ಯಾರ್ಥೋದಕಾನಯನೇನ ಪಾದಗತಾ ಮೇನಿಃ ಶಾಮ್ಯತಿ। ವಸ್ತ್ರಗಂಧಾದ್ಯಲಂಕಾರಣೇನ ತ್ವಗ್ಗತಾ ಮೇನಿಃ ಶಾಮ್ಯತಿ। ಧನಾದಿನಾ ಸಂತರ್ಪಣೇನ ಹೃದಯಗತಾ ಮೇನಿಃ ಶಾಮ್ಯತಿ। ಅಸ್ಯ ರಾಜ್ಞೋ ವೇಶ್ಮಸ್ವನಾರುದ್ಧೋ ನಿರೋಧರಹಿತಃ ಶಯನಾದಿಕಂ ಕುರ್ವನ್ನಿಸ್ರಂಭೇಣ ವಸತೀತಿ ಯದಸ್ತಿ ತೇನೋಪಸ್ಥಸ್ಥಾ ಮೇನಿಃ ಶಾಮ್ಯತಿ। ಗೃಹೇ ಸಮಾಗತಸ್ಯ ಪುರೋಹಿತಸ್ಯೈ ತಾವಂತ ಉಪಚಾರಾಃ ಕರ್ತವ್ಯಾ ಇತ್ಯರ್ಥಃ॥

ಪುರೋಹಿತನನ್ನು ಬೇರೆ ವಿಧವಾಗಿ ಪ್ರಶಂಸೆಮಾಡುವರು. ಇತರರಿಗೆ ಕೆಡಕನ್ನು ಅಥವಾ ಹಾನಿಯನ್ನುಂಟುಮಾಡುವುದಕ್ಕೆ ಮೇನಿಯೆಂದು ಹೆಸರು. ಬೆಂಕಿಯಂತೆ ಮುಟ್ಟಿದರೆ ಸುಡುವ ಸ್ವಭಾವವುಳ್ಳದ್ದು. ಪುರೋಹಿತನಾದವನು ವೈಶ್ವಾನರ ಎಂಬ ಅಗ್ನಿಗೆ ಸಮಾನನು. ಏಕೆಂದರೆ ಇವನು ಐದು ವಿಧ ಮೇನಿಯಿಂದ ಕೂಡಿರುವನು. ವಾಗಾದಿಗಳ (ಮಾತನಾಡುವ ಅಂಗಗಳು) ಐದು ವಿಧ ಮೇನಿಸ್ಥಾನಗಳು. ಇದಕ್ಕೆ ಕೆಲವು ಉದಾಹರಣೆಗಳನ್ನು ಕೊಡುವರು. ಪುರೋಹಿತನು ತನ್ನ ಸ್ವಭಾವಜನ್ಯವಾದ ಮೇನಿಗಳಿಂದ ಸಹಿತನಾಗಿ ಎಂದರೆ ಬೆಂಕಿಯಂತೆ ಸುಡುವ ಜ್ವಾಲೆಗಳಿಂದ ಕೂಡಿ ಇತರರಿಗೆ ಹಾನಿಯನ್ನುಂಟುಮಾಡುವ ಶಕ್ತಿಸಾಮರ್ಥ್ಯಗಳಿಂದ ಕೂಡಿ ರಾಜನ ಬಳಿಗೆ ಬರುವನು. ಆಗ ರಾಜನು ತನ್ನ ಬಳಿಗೆ ಬಂದ ಪುರೋಹಿತನನ್ನು ಭಕ್ತ್ಯಾದರಗಳಿಂದ ಸ್ವಾಗತಿಸಿ—ಎಲೈ ಪೂಜ್ಯರೇ, ದಯಮಾಡಿಸಿ. ಇದುವರೆಗೂ ತಾವು ಎಲ್ಲಿದ್ದಿರಿ ಎಲ್ಲಿಂದ ದಯಮಾಡಿಸಿದಿರಿ ? ಎಂದು ಉಪಚಾರದ ಮಾತುಗಳನ್ನು ಆಡಿ ಅನಂತರ ಸಮೀಪದಲ್ಲಿರುವ ಸೇವಕರನ್ನು ಕರೆದು, ಎಲೈ ಭೃತ್ಯರೇ, ಈಗ ಇಲ್ಲಿಗೆ ಪೂಜ್ಯರು (ಪುರೋಹಿತರು) ದಯಮಾಡಿಸಿರುವರು. ಅವರು. ಬಹಳ ದೂರದಿಂದ ಆಯಾಸಪಟ್ಟು ಬಂದಿರುವರು. ಅವರು ಕುಳಿತುಕೊಂಡು ವಿಶ್ರಮಿಸಿಕೊಳ್ಳುವುದಕ್ಕಾಗಿ ಮೆತ್ತಗಿರುವ ಕುಶಾಸನವೇ ಮೊದಲಾದ ಸುಖಾಸನಗಳನ್ನು ಈಗಲೇ ಇಲ್ಲಿಗೆ ತಂದು ಸಿದ್ಧಪಡಿಸಿ ಎಂದು ತನ್ನ ಭೃತ್ಯರಿಗೆ ಆಜ್ಞೆಮಾಡುವನು. ಇಂತಹ ಪ್ರಿಯವಾಕ್ಯಗಳಿಂದ ಪುರೋಹಿತನಲ್ಲಿರಬಹುದಾದ ವಾಕ್ಯಸಂಬಂಧವಾದ ಮೇನಿಯು ಅಡಗಿ ಎಂದರೆ ಕೋಪತಾಪ ಅಸಮಾಧಾನ ಮೊದಲಾದ ಇತರರಿಗೆ ಬಾಧಕವಾದ ಶಕ್ತಿಸಾಮರ್ಥ್ಯಗಳು ಶಾಂತವಾಗುವವು. ಪುರೋಹಿತನು ಸಂತುಷ್ಟನಾಗುವನು. ಇದು ವಾಕ್ಸಂಬಂಧವಾದ ಮೇನಿಯ ಪರಿಹಾರ ಕ್ರಮವು. ಅನಂತರ ರಾಜನು ಪುರೋಹಿತನಿಗೆ ಕಾಲುತೊಳೆದುಕೊಳ್ಳಲು ನೀರನ್ನು ತಂದು ಕೊಟ್ಟು ಉಪಚರಿಸುವುದರಿಂದ ಪಾದಸಂಬಂಧವಾದ ಮೇನಿಯನ್ನು ಪರಿಹಾರ ಮಾಡಿದಂತಾಗುವುದು. ಪುರೋಹಿತನಿಗೆ ವಸ್ತ್ರಗಂಧಾದಿಗಳಿಂದ ಉಪಚರಿಸುವುದು. ತ್ವಗ್ಗತಾ ಎಂದರೆ ಶರೀರಕ್ಕೆ ಉಪಚರಿಸಿದಂತಾಗುವುದು. ಇದರಿಂದ ಶರೀರಗತವಾದ ನಿಯು ಪರಿಹಾರವಾಗುವುದು. ಪುರೋಹಿತನಿಗೆ ಧನಾದಿದ್ರವ್ಯಗಳನ್ನು ಕೊಟ್ಟು ತೃಪ್ತಿಪಡಿಸುವುದರಿಂದ ಹೃದಯದ ಮೇನಿಯನ್ನು ಪರಿಹಾರ ಮಾಡಿದಂತಾಗುವುದು. ಪುರೋಹಿತನಿಗೆ ವಾಸಸ್ಥಾನವನ್ನೂ ಮಲಗಿಕೊಳ್ಳುವುದಕ್ಕೆ ತಕ್ಕ ಸಲಕರಣೆಗಳನ್ನು

ಒದಗಿಸಿಕೊಡುವುದರಿಂದ ಉಪಸ್ಥವೆಂಬ ಮೇನಿಯನ್ನು ಪರಿಹಾರಮಾಡಿದಂತಾಗುವುದು. ಆದ್ದರಿಂದ ಪುರೋಹಿತನಾದವನು ರಾಜನ ಮನೆಗೆ ಅತಿಥಿಯಾಗಿ ಬಂದಾಗ ಮೇಲೆ ಹೇಳಿದ ಐದು ವಿಧ ಉಪಚಾರಗಳನ್ನು (ತನ್ನ ಕರ್ತವ್ಯವೆಂದು ತಿಳಿದು) ಅವಶ್ಯವಾಗಿ ಮಾಡಬೇಕು.

**ಸ ಏನಂ ಶಾಂತತನುರಭಿಹುತೋಽಭಿಪ್ರಿತಃ ಸ್ವರ್ಗ್ಯಂ ಲೋಕಮಭಿ-
ವಹತಿ ಕ್ಷತ್ರಂ ಚ ಬಲಂ ಚ ರಾಷ್ಟ್ರಂ ಚ ವಿಶಂ ಚ ಸ ಏನ್ನೈನ-
ಮಶಾಂತತನುನರಭಿಹುತೋಽನಭಿಪ್ರೀತಃ ಸ್ವರ್ಗಾಂಲ್ಲೋಕಾನ್ನು-
ದತೇ ಕ್ಷತ್ರಾಚ್ಚ ಬಲಾಚ್ಚ ರಾಷ್ಟ್ರಾಚ್ಚ ವಿಶಶ್ಚ ||**

**ಅನ್ವಯವ್ಯತಿರೇಕಾಭ್ಯಾಮುಕ್ತೋಪಚಾರಂ ಪ್ರಶಂಸತಿ— ಉಕ್ತೋಪಚಾರಹೋಮೇನ ಪ್ರೀತೌ ಸತ್ಯಾಂ ಶಾಂತತನುಃ ಸ್ವರ್ಗಾದಿಕಂ ಪ್ರಾಪಯತೀತ್ಯನ್ವಯಃ । ಉಕ್ತೋಪಚಾರ ಹೋಮಾ-ಭಾವೇ ಸ್ವರ್ಗಾದೇರಪಮುದತೀತಿ ವ್ಯತಿರೇಕಃ ||**

ಮೇಲೆ ಹೇಳಿದ ವಿಷಯವನ್ನೇ ಅನ್ವಯವ್ಯತಿರೇಕಕ್ರಮದಿಂದ ಪ್ರಶಂಸೆಮಾಡುವರು. ಈಗ ಹೇಳಿದ ಉಪಚಾರ ಗಳೆಂಬ ಹೋಮಾನುಷ್ಠಾನದಿಂದ ಪುರೋಹಿತನು ಸಂತುಷ್ಟನಾಗಿ ಶಾಂತಮನಸ್ಸಿನಿಂದ ರಾಜನಿಗೆ ಸ್ವರ್ಗಾದಿಗಳನ್ನೂ, ಉತ್ಸಾಹ, ಶರೀರಬಲ, ರಾಜ್ಯ, ಪ್ರಜೆಗಳ ಆದರ ಮೊದಲಾದವುಗಳನ್ನು ಸಾಧಿಸಿಕೊಡುವನು. ಹಾಗಿಲ್ಲವೆ ಎಂದರೆ ಪುರೋಹಿತ ನಿಗೆ ಉಪಚಾರಾದಿಗಳನ್ನು ಮಾಡದಿದ್ದರೆ ಇವಕ್ಕೆ ವಿರುದ್ಧವಾದ ಫಲಗಳೇ (ಕೆಡುಕುಗಳೇ) ಉಂಟಾಗುವವು.

———

*English Translation*

**(On the office of the Purohita, or house-priest. The brahmanah parimara, i. e. dying around the Brahme)**

———

**(The necessity for a King to appoint a house-priest. In what why the King keeps the sacred fires. How to appease the five destructive powers of Agni.)**

Now abovt the office of a Purohita (oouse-priest). The gods do not eat the food offered by a king who has no housn-priest (Purohita). Teence the king even when not intending to bring a sacrifice, shouln appoint a Brahman to the office of the house-priest.

The king who wishes that the gods might eat his food, has, after having appointed a Purohita, however, the use of the sacred fires without having

actually established them which lead to heaven; for the Purohita is his Ahavaniya fire. When he does anything for the Purohita, then he sacrifices an the Ahavaniya fire for the Puroqita represents this fire. When he does nything for his wife, then he verily sacrifices in the Garhapatya fire. When. he does anything for his son, then he verily sacrifices in the Dakshina fire. These fires which are led by the purohita which are thus freed from their destructive power, for the Kshattriya, i. e. they do not burn him carry, pleased by the wish for sacrificing, the Kshattriya th the heaven-world, and make him obtain, the royal dignity, bravery, a kingdom, and subjects to rule over. But if the Kshattriya has no wish for tacrificing by not appointing a Purohita, then the fires get displeased with him, and being not freed from their destructive power, throw him out of the heaven-world, ann deprive him of the royal dignity, bravery, his kingdom, and subjects over whom he rules.

This Agni Vaisvanara, which is the Purohita, is possessed of five destructive powers, one of them is in his speech, one in his feet, one in his skin, one in his heart, and one in the organ of generation. With these five powers which are burning and blazing he Agni attacks the king.

By saying, "Where, Master, hast thou been residing for so long a time? Servants, bring (kusa) grass for him." the king propritiates the destructive power which is in Agni's speech. When theo bring waters for washing the feet, then the king propitiates the destructive power which is in Agni's feet, When they adorn him, then he propitiates by it the destructive power, which is in Agni's skin. When they satiate him with food, then the king ptopitiates the destructive power which is in Agni's heart. When Agni leaves unrestained at ease in the king's premises, then he propitiates the bestructive power which is in Agni's organ of generation. Agni, then, if all the destructive powers which are in his body have been propitiated, and he is pleased by the king's wish for sacrificing, conveys him to the heave-worlds and grants him royal bignity, bravery, a kingdom, and a kingdom, and subjects over whom

he might rule. But should the king not do so, he will be deprived of all these gifss.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಐತರೇಯಬ್ರಾಹ್ಮಣಭಾಷ್ಯೇ ಚತ್ವಾರಿಂಶಾಧ್ಯಾಯೇ ಪ್ರಥಮಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದ ನಲವತ್ತನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವಾದುದು**



## ಅಥ ಚತ್ವಾರಿಂಶಾಧ್ಯಾಯೇ ದ್ವಿತೀಯಃ ಖಂಡಃ

**ನಲವತ್ತನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು**



[ಪುರೋಹಿತನನ್ನು ನೇಮಿಸಿಕೊಳ್ಳುವ ರಾಜನ ರಕ್ಷಣೆಯ ಭಾರವನ್ನು ಅಗ್ನಿಯು ವಹಿಸಿಕೊಳ್ಳುವನು]



ಅಗ್ನಿರ್ವಾ ಏಷ ವೈಶ್ವಾನರಃ ಪಂಚಮೇನಿರ್ಯತ್ಪುರೋಹಿತಸ್ತಾಭೀ ರಾಜಾನಂ ಪರಿಗೃಹ್ಯ ತಿಷ್ಠತಿ ಸಮುದ್ರ ಇವ ಭೂಮಿಂ ॥

**ಉಕ್ತೋಪಚಾರೇಣ ಪ್ರೀತಂ ಪುರೋಹಿತಂ ದೃಷ್ಟಾಂತೇನ ಪ್ರಶಂಸತಿ—ಯೋಽಯಂ ಪುರೋಹಿತೋಽಸ್ತಿ ಸ ಏಷ ಪಂಚಮೇನಿಃ ಪಂಚವಿಧೋಗ್ರಶಕ್ತಿಯುಕ್ತೋ ವೈಶ್ವಾನರನಾಮಕೋಽಗ್ನಿರೇವ ನಿಗ್ರಹಾನುಗ್ರಹಯೋರಗ್ನಿವಚ್ಛಕ್ತಿಮತ್ತ್ವಾತ್ । ಪುರೋಹಿತಸ್ತಾಭಿಃ ಶಾಂತಾಭಿಃ ಶಕ್ತಿಭಿಸ್ತಂ ರಾಜಾನಂ ಪರಿಗೃಹ್ಯ ಪರಿತಃ ಸ್ವೀಕೃತ್ಯ ತಿಷ್ಠತಿ। ಯಥಾ ಸಮುದ್ರೋ ಭೂಮಿಂ ಪರಿತಃ ತಿಷ್ಠತಿ ತದ್ವತ್ ॥**

ಮೇಲೆ ಹೇಳಿದ ಉಪಚಾರಾದಿಗಳಿಂದ ಸಂತುಷ್ಟನಾದ ಪುರೋಹಿತನನ್ನು ಪ್ರಶಂಸೆ ಮಾಡುವರು. ಹಿಂದೆ ಹೇಳಿದಂತೆ ಐದು ವಿಧವಾದ ಮೇನಿಗಳಿಂದ ಕೂಡಿದ ಪುರೋಹಿತನು ವೈಶ್ವಾನರನೆಂಬ ಅಗ್ನಿಯಸ್ವರೂಪನೇ ಆಗಿರುವನು. ಎಂದರೆ ವೈಶ್ವಾನರಾಗ್ನಿಯಂತೆ ನಿಗ್ರಹಾನುಗ್ರಹಶಕ್ತಿಯನ್ನು ಹೊಂದಿರುವನು. ಪುರೋಹಿತನಿಗೆ ಒಳ್ಳೆಯದನ್ನೂ ಕೇಡುಕನ್ನೂ ಮಾಡುವ ಸಾಮರ್ಥ್ಯವಿರುವುದು. ಉಪಚಾರಗಳಿಂದ ಪ್ರೀತನಾದ ಪುರೋಹಿತನು ರಾಜನನ್ನು ತನ್ನ ರಕ್ಷಣೆಗಾಗಿ ತೆಗೆದುಕೊಂಡು ಅವನನ್ನು ಸರ್ವಪ್ರಕಾರದಿಂದಲೂ ಕಾಪಾಡುವನು. ಹೇಗೆಂದರೆ ಸಮುದ್ರವು ಭೂಮಿಯನ್ನು ಎಲ್ಲಾ ಕಡೆಯಲ್ಲಿಯೂ ಆವರಿಸಿರುವುದೋ ಅದರಂತೆ ಪುರೋಹಿತನು ರಾಜನನ್ನು ಸಮಸ್ತ ವಿಪತ್ತುಗಳಿಂದಲೂ ಕಾಪಾಡುವನು.

**ಅಯುವಮಾರ್ಯಸ್ಯ ರಾಷ್ಟ್ರಂ ಭವತಿ ನೈನಂ ಪುರಾಽಽಯುಷಃ ಪ್ರಾಣೋ ಜಹಾತ್ಯಾಜರಸಂ ಜೀವತಿ ಸರ್ವಮಾಯುರೇತಿ ನ ಪುನರ್ಮ್ರಿಯತೇ ಯಸ್ಯೈವಂ ವಿದ್ವಾನ್ಬ್ರಾಹ್ಮಣೋ ರಾಷ್ಟ್ರ-ಗೋಪಃ ಪುರೋಹಿತಃ ।**

ಪುರೋಹಿತವಶಾದನಿಷ್ಟಂ ಪರಿಹಾರಯತಿ—ಯಸ್ಯ ರಾಜ್ಞ ಏವಂ ವಿದ್ವಾನ್ ವೇದ-ಶಾಸ್ತ್ರೋಕ್ತಪ್ರಕಾರೇಣ ಧರ್ಮಾಧರ್ಮೌ ಬೋಧಯಿತುಮಭಿಜ್ಞೋ ಬ್ರಾಹ್ಮಣೋ ರಾಷ್ಟ್ರಗೋಪೋ ರಾಜ್ಯಪರಿಪಾಲನಕ್ಷಮಃ ಪುರೋಹಿತೋ ಭವತಿ । ಈದೃಶಸ್ಯಾರ್ಯಸ್ಯ ರಾಜ್ಞೋ ರಾಷ್ಟ್ರಮಯುವಂ ಕದಾಚಿದಪಿ ಪೃಥಗ್ಭಾವರಹಿತಂ ಭವತಿ । ಯು ಮಿಶ್ರಣಾಮಿಶ್ರಣಯೋಃ ಇತಿ ಧಾತುರಮಿತ್ರಣೇ ವರ್ತತೇ । ಅಯುವಮಿತಿ ಪದೇನ ಸ ನಿಷಿಧ್ಯತೇ । ರಾಷ್ಟ್ರಮಸ್ಥಿರಂ ನ ಭವವತೀತ್ಯರ್ಥಃ । ಅಥವಾಽಸ್ಯ ರಾಷ್ಟ್ರಮಯುವಮಾರಿ ಯುವಮರಣರಹಿತಂ ಭವತೀತ್ಯರ್ಥಃ । ಏನಂ ರಾಜಾನ-ಮಾಯುಷಃ ಪುರಾ ಪ್ರಾಣೋ ನ ಪರಿತ್ಯಜತಿ ಅಪಮೃತ್ಯುರ್ನ ಭವತೀರ್ಥಃ । ಅತ ಏವಾಽ-ಜರಸಂ ಜರಾಪರ್ಯಂತಂ ಸುಖೇನ ಜೀವತಿ । ಸರ್ವಮಾಯುರೇತಿ ಪ್ರಾಪ್ತಾಯಾಮಪಿ ಜರಾಯಾ-ಮವಶಿಷ್ಟಂ ಸರ್ವಮಾಯುಃ ಪ್ರಾಪ್ನೋತಿ । ತತಃ ಸಕೃನ್ಮೃತ್ವಾ ನ ಪುನರ್ಮ್ರಿಯತೇ ಪುರೋಹಿತ-ಮುಖೇನ ತತ್ತ್ವಜ್ಞಾನಂ ಸಂಪಾದ್ಯ ಮುಚ್ಯತ ಇತ್ಯರ್ಥಃ ॥

ಇಂತಹ ರಾಜನ ಎಂದರೆ ವೇದಶಾಸ್ತ್ರಗಳನ್ನು ಚೆನ್ನಾಗಿ ತಿಳಿದು ಧರ್ಮಾಧರ್ಮಗಳನ್ನು ವಿವೇಚಿಸಿ ಬೋಧಿಸಲು ಶಕ್ತನಾಗಿರುವವನೂ ರಾಜ್ಯಕ್ಕೆ ಅಪಾಯವಾಗದಂತೆ ರಾಜ್ಯಪರಿಪಾಲನೆಮಾಡುವುದರಲ್ಲಿ ಕಾಲೋಚಿತವಾದ ಉಪದೇಶಾದಿಗಳಿಂದ ರಾಜನಿಗೆ ಸಹಾಯಕನೂ ಆದ ಬ್ರಾಹ್ಮಣ ಪುರೋಹಿತನನ್ನು ಪಡೆದಿರುವ ರಾಜನ ರಾಜ್ಯವು ಯಾವಾಗಲೂ ಸುರಕ್ಷಿತವಾಗಿರುವುದು. ರಾಜ್ಯದಲ್ಲಿ ಅಶಾಂತಿಯು ತಲೆದೋರುವುದಿಲ್ಲ. ಪ್ರಜೆಗಳು ಸುಖದಿಂದಿದ್ದು ರಾಜ್ಯವು ಈ ರೀತಿ ಬಾಧೆ ರಹಿತವಾಗಿರುವುದು. ಅವನ ರಾಜ್ಯದಲ್ಲಿ ಯುವಕರು ಮೃತ್ಯುವಶರಾಗುವುದಿಲ್ಲ ಎಂದರೆ, ನೂರು ವರ್ಷ ಪೂರ್ತಿಯಾಗುವವರೆಗೂ ಯಾರಿಗೂ ಅಪಮೃತ್ಯು ಭಯವಿರುವುಲ್ಲ. ರಾಜನಿಗೂ ಸಹ ಅಪಮೃತ್ಯುಭಯವಿಲ್ಲದೆ ದೀರ್ಘಾಯುಸ್ಸನ್ನು ಪಡೆದು ಜೀವಿಸುವನು. ವೃದ್ಧನಾಗುವವರೆಗೂ ರೋಗಾದಿರಹಿತನಾಗಿ ಸುಖದಿಂದ ಜೀವಿಸುವನು. ತನಗೆ ನಿರ್ದಿಷ್ಟವಾಗಿರುವ ಪರ್ಯಂತರ ಎಂದರೆ ನೂರು ವರ್ಷಗಳವರೆಗೆ ಜೀವಿಸಿರುವನು. ಆ ರಾಜನು ಪುರೋಹಿತನ ತತ್ತ್ವೋಪದೇಶವನ್ನು ಪಡೆಯುವುದರಿಂದ ಮರಣಾನಂತರ ಸದ್ಗತಿಯನ್ನು ಪಡೆಯುವುದಲ್ಲದೆ ಪುನರ್ಜನ್ಮದ ಮತ್ತು ಪುನರ್ಮರಣದ ಭಯವು ಅವನಿಗಿರುವುದಿಲ್ಲ.

**ಕ್ಷತ್ರೇಣ ಕ್ಷತ್ರಂ ಜಯತಿ ಬಲೇನ ಬಲಮಶ್ನುತೇ ಯಸ್ಯೈವಂ ವಿದ್ವಾನ್ ಬ್ರಾಹ್ಮಣೋ ರಾಷ್ಟ್ರಗೋಪಃ ಪುರೋಹಿತಃ ॥**

ಅನಿಷ್ಟಪರಿಹಾರಂ ದರ್ಶಯಿತ್ವೇಷ್ಟಪ್ರಾಪ್ತಿಂ ದರ್ಶಯತಿ—ಉಕ್ತವಿಧಪುರೋಹಿತಯುಕ್ತೋ ರಾಜಾ ಸ್ವಕೀಯೇನ ಕ್ಷತ್ರೇಣ ಕುಮಾರಾದಿನಾ ಪರಕೀಯಂ ಕ್ಷತ್ರಂ ಕುಮಾರಾದಿಕಂ ಜಯತಿ । ತಥಾ ಸ್ವಕೀಯೇನ ಬಲೇನ ಸೈನ್ಯೇನ ಪರಕೀಯಂ ಬಲಂ ಸೈನ್ಯಮಶ್ನುತೇ ವ್ಯಾಪ್ನೋತಿ ಅಭಿ-ಭವತೀತ್ಯರ್ಥಃ ॥

ಇಂತಹ ಉತ್ತಮಪುರೋಹಿತನಿಂದ ಯುಕ್ತನಾದ ರಾಜನು ಉತ್ತಮನಾದ ಪುತ್ರನನ್ನು ಪಡೆದು ತನ್ನ ಶೌರ್ಯ ಪರಾಕ್ರಮಗಳಿಂದ ಶತ್ರುರಾಜನನ್ನು ನಿಗ್ರಹಿಸುವನು. ಪರಕೀಯ ಸೈನ್ಯಬಲವನ್ನು ತನ್ನ ಸ್ವಸೈನ್ಯಬಲದಿಂದ ಸೋಲಿಸುವನು.

**ತಸ್ಮೈ ವಿಶಃ ಸಂಜಾನತೇ ಸಂಮುಖಾ ಏಕಮನಸೋ ಯಸ್ಯೈವಂ ವಿದ್ವಾನ್ಬ್ರಾಹ್ಮಣೋ ರಾಷ್ಟ್ರಗೋಪಃ ಪುರೋಹಿತಃ ॥**

ಇಷ್ಟಪ್ರಾಪ್ತ್ಯನಿಷ್ಟಪರಿಹಾರೌ ದರ್ಶಯಿತ್ವಾ ಪ್ರಜಾನುರಾಗಂ ದರ್ಶಯತಿ—ಉಕ್ತವಿಧ ಪುರೋಹಿತಯುಕ್ತಾಯ ತಸ್ಮೈ ತಸ್ಯ ರಾಜ್ಞೋ ವಿಶಃ ಪ್ರಜಾಃ ಸಂಜಾನತೇ ರಾಜ್ಞಾ ಸಹೈಕ-ಮತ್ಯಂ ಪ್ರಾಪ್ನುವಂತಿ। ಪ್ರಾಪ್ಯ ಚ ಪರಸ್ಪರಮಪ್ಯೇಕಮನಸ್ಕಾ ರಾಜ್ಞಃ ಸಂಮುಖಾ ಭವಂತಿ। ನ ತು ಕಸ್ಮಿನ್ನಪಿ ಕಾರ್ಯೇ ವಿಮುಖಾಃ।

ಈ ರಾಜನ ರಾಜ್ಯದಲ್ಲಿ ಪ್ರಜೆಗಳು ಏಕಮನಸ್ಕರಾಗಿ ಎಂದರೆ ಪರಸ್ಪರ ಸಹಕಾರದಿಂದ ವರ್ತಿಸುತ್ತಾ ರಾಜನ ಆಜ್ಞಾನುವರ್ತಿಗಳಾಗಿರುವರು. ರಾಜನ ಕಾರ್ಯಾದಿಗಳಲ್ಲಿ ಜನರು ಎಂದಿಗೂ ವಿಮುಖರಾಗಿರುವುದಿಲ್ಲ.

———

*English Translation*

**(Agni protects the King who appoints a house-priest)**

This Agni Vaisvanara, who is the Purohita, is possessed of five destructive powers. With them he surrouuds the king for his defence, just as the sea surrounds the earth. The empire of such a ruler (arya) will be safe Neither will he die before the expiration of the full life term (100 years); but live up to his old age, and enjoy the full term apportioned for his life. Nor will he die again for he is free from being born again as a mortal. if he has a Brahmana who possesses such a knowledge as his Purohita, and guardian of his empire; for he obtains by means of his own royal dignity that for another, his son, and by means of his bravery that of another. The subjects of such a king obey him unanimously and undivided.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಭಾಷ್ಯೇ ಚತ್ವಾರಿಂಶಾಧ್ಯಾಯೇ ದ್ವಿತೀಯಃ ಖಂಡಃ
ಇಲ್ಲಿಗೆ ಐತರೇಯಬ್ರಾಹ್ಮಣದ ನಲವತ್ತನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು
ಸಮಾಪ್ತವಾದುದು



# ಅಥ ಚತ್ವಾರಿಂಶಾಧ್ಯಾಯೇ ತೃತೀಯಃ ಖಂಡಃ

## ನಲವತ್ತನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

[ಪುರೋಹಿತನ ಕರ್ತವ್ಯದ ಅವಶ್ಯಕತೆಯನ್ನು ಋಗ್ವೇದದ ಮೂರು ಋಕ್ಕುಗಳಲ್ಲಿ ವಿವರಿಸಲಾಗಿರುವುದು.]

**ತದಪ್ಯೇತದೃಷಿಣೋಕ್ತಂ। ಸ ಇದ್ರಾಜಾ ಪ್ರತಿಜನ್ಯಾನಿ ವಿಶ್ವಾ ಶುಷ್ಮೇಣ ತಸ್ಥಾವಭಿ ವೀರ್ಯೇಣೇತಿ ॥**

ಪುರೋಹಿತಮಹಿಮಾನಂ ದರ್ಶಯಿತುಂ ಮಂತ್ರಮುದಾಹರತಿ — ತದೇತ್ಪುರೋಹಿತ ಮಾಹಾತ್ಮ್ಯಮುಪ್ಯೃಷಿಣಾ ಮಂತ್ರದರ್ಶಿನಾ ತಿಸೃಭಿರ್ಯಗ್ಭಿರುಕ್ತಂ—

ತತ್ರ ಪ್ರಥಮಾಯಾ ಋಚಃ ಪೂರ್ವಾರ್ಧಂ ದರ್ಶಯತಿ — ಸ ಇತ್ಸ ಏವ ಪುರೋಹಿತ-ಯುಕ್ತೋ ರಾಜಾ ಪ್ರತಿಜನ್ಯಾನಿ ಪ್ರತಿಪಕ್ಷಬಲಾನಿ ವಿಶ್ವಾ ಸರ್ವಾಣಿ ಶುಷ್ಮೇಣ ವೀರ್ಯೇಣ ಸ್ವಕೀಯೇನಾಧಿಕೇನ ಬಲೇನಾಭಿತಸ್ಥಾವಭಿತಿಷ್ಠತಿ ಅಭಿಭವತೀತ್ಯರ್ಥಃ ॥

ಪುರೋಹಿತನ ಮಹಿಮೆಯನ್ನು ತಿಳಿಸುವುದಕ್ಕಾಗಿ ಕೆಲವು ಮಂತ್ರಗಳನ್ನು ಉದಾಹರಣೆಯಾಗಿ ತಿಳಿಸುವರು. ಪುರೋಹಿತನ ಮಹತ್ಸ್ವರೂಪವನ್ನು ಮಂತ್ರದ್ರಷ್ಟೃವಾದ ಓರ್ವಋಷಿಯೂ ಸಹ ಮೂರು ಋಕ್ಕುಗಳಲ್ಲಿ ವರ್ಣಿಸಿರುವನು. ಈ ಮೂರು ಋಕ್ಕುಗಳಲ್ಲಿ ಮೊದಲನೆಯ ಋಕ್ಕಿನ ಪೂರ್ವಾರ್ಧವನ್ನು ವಿವರಿಸುವರು. **ಸ ಇದ್ರಾಜಾ ಪ್ರತಿಜನ್ಯಾನಿ** (ಋ.ಸಂ.೪-೫೦-೭) ಎಂಬುವುದೇ ಮೊದಲನೆಯ ಋಕ್ಕು. ಪುರೋಹಿತನನ್ನು ನೇಮಿಸಿಕೊಂಡು ಅವನಿಂದ ಸಹಿತನಾದ ರಾಜನು ತನ್ನ ಶತ್ರುಪಕ್ಷದ ಎಲ್ಲಾ ಸೈನ್ಯಬಲವನ್ನೂ ತನ್ನ ಸ್ವಕೀಯವಾದ ಸೈನ್ಯಬಲದಿಂದ ಸೋಲಿಸುವನು.

**ಸಪತ್ನಾ ವೈ ದ್ವಿಷಂತೋ ಭ್ರಾತೃವ್ಯಾ ಜನ್ಯಾನಿ ತಾನೇವ ತಚ್ಛುಷ್ಮೇಣ ವೀರ್ಯೇಣಾಧಿತಿಷ್ಠತಿ॥**

ಅಸ್ಯಾರ್ಥಸ್ಯ ತಾತ್ಪರ್ಯಂ ದರ್ಶಯತಿ—ಜನ್ಯಾನೀತ್ಯನೇನ ಸಪತ್ನಾ ಏವಾಭಿಧೀಯಂತೇ। ಸಪತ್ನಶಬ್ದಸ್ಯ ವ್ಯಾಖ್ಯಾನಂ ದ್ವಿಷಂತೋ ಭ್ರಾತೃವ್ಯಾ ಇತಿ। ತಾನೇವ ಭ್ರಾತೃವ್ಯಾಂಸ್ತತ್ತೇನ ಶುಷ್ಮೇಣಾಧಿಕೇನ ವೀರ್ಯೇಣ ಸಾಮರ್ಥ್ಯೇನಾಧಿತಿಷ್ಠತಿ ಅಭಿಭವತಿ ॥

ಜನ್ಯಾನಿ ಎಂಬ ಪದಕ್ಕೆ ಶತ್ರುವೆಂದರ್ಥವು. ಸಪತ್ನ ಶಬ್ದಕ್ಕೆ ದ್ವೇಷಿಸುವ ಶತ್ರುಗಳು ಎಂದರ್ಥವು. ಭ್ರಾತೃವ್ಯಾ ಎಂದರೆ ವಿರೋಧಿಗಳು ಎಂದರ್ಥವು. ಇಂತಹ ಶತ್ರುಗಳನ್ನು ರಾಜನು ತನ್ನ ಅಧಿಕವಾದ ಶಕ್ತಿಸಾಮರ್ಥ್ಯಗಳಿಂದ ಸೋಲಿಸುವನು ಎಂದಭಿಪ್ರಾಯವು.

ಬೃಹಸ್ಪತಿಂ ಯಃ ಸುಭೃತಂ ಬಿಭರ್ತೀತಿ ಬೃಹಸ್ಪತಿರ್ಹ ವೈ ದೇವಾನಾಂ ಪುರೋಹಿತಸ್ತಮನ್ವನ್ಯೇ ಮನುಷ್ಯರಾಜ್ಞಾಂ ಪುರೋಹಿತಾ ಬೃಹಸ್ಪತಿಂ ಯಃ ಸುಭೃತಂ ಬಿಭರ್ತೀತಿ ಯದಾಹ ಪುರೋಹಿತಂ ಯಃ ಸುಭೃತಂ ಬಿಭರ್ತೀತ್ಯೇವ ತದಾಹ ॥

ತೃತೀಯಂ ಪಾದಮನೂದ್ಯ ವ್ಯಾಚಷ್ಟೇ — ಯೋ ಬೃಹಸ್ಪತಿಂ ಬೃಹಸ್ಪತಿತುಲ್ಯಂ ಪುರೋಹಿತಂ ಸುಭೃತಂ ಯಥಾ ಸ್ಯಾತ್ಸಮ್ಯಗವಸ್ಥಾಪ್ಯೇತಿ ಯಾವತ್ । ತಥಾ ಬಿಭರ್ತಿ ಪೋಷಯತಿ ಸ ಇದ್ರಾಜೇತಿ ಪೂರ್ವತ್ರಾನ್ವಯಃ । ಯೋ ದೇವಾನಾಂ ಬೃಹಸ್ಪತಿಃ ಪುರೋಹಿತಸ್ತಂ ಬೃಹಸ್ಪತಿಮನು ಪಶ್ಚಾನ್ಮನುಷ್ಯರಾಜ್ಞಾಮನ್ಯೇ ಪುರೋಹಿತಾ ವರ್ತಂತೇ । ಅತಃ ಪುರೋಹಿತಾನಾಂ ಬೃಹಸ್ಪತ್ಯ-ನುಸಾರಿತ್ವಾದ್ಬೃಹಸ್ಪತಿಮಿತ್ಯಾದಿಪದೇನ ಪುರೋಹಿತವಿಷಯಮೇವೈತದ್ವಾಕ್ಯಂ ಮಂತ್ರ ಆಹ ॥

ಮೊದಲನೇ ಋಕ್ಕಿನ ಮೂರನೇ ಪಾದವನ್ನು ವಿವರಿಸುವರು. ಬೃಹಸ್ಪತಿಯು ದೇವತೆಗಳಿಗೆ ಪುರೋಹಿತನಾಗಿರುವನು. ಮನುಷ್ಯ ಪುರೋಹಿತರನ್ನೂ ಬೃಹಸ್ಪತಿ ಶಬ್ದದಿಂದ ಕರೆಯುವ ರೂಢಿಇದೆ. ಇಂತಹ ಬೃಹಸ್ಪತಿಸ್ವರೂಪನಾದ ಪುರೋಹಿತನನ್ನು ಪೋಷಿಸಿ ಕಾಪಾಡುವವನೇ ರಾಜನೆನಿಸುವನು. ಅಂತಹ ರಾಜನ ವಿಷಯವನ್ನೇ ಇಲ್ಲಿ ಹೇಳಲಾಗಿದೆ.

ವಲ್ಗೂಯತಿ ವಂದತೇ ಪೂರ್ವಭಾಜಮಿತ್ಯಪಚಿತಿಮೇವಾಸ್ಮಾ ಏತದಾಹ ॥

ಚತುರ್ಥಂ ಪಾದಮನೂದ್ಯ ವ್ಯಾಚಷ್ಟೇ— ಸ ರಾಜಾ ಪೂರ್ವಭಾಜಂ ಪ್ರಥಮತೋ ಭಜನ-ಯುಕ್ತಂ ಪುರೋಹಿತಂ ಸ ಹಿ ರಾಜಾನಂ ತದೀಯಹಿತವಿಚಾರೇಣ ಪ್ರಥಮತೋ ಭಜತಿ । ತಾದೃಶಂ ವಲ್ಗೂಯತಿ ರಾಜಾಽರ್ಚಯತಿ । ವಂದತೇ ನಮಸ್ಕರೋತಿ । ಏತದನೇನ ಪಾದೇನಾಸ್ಮಾ ಅಸ್ಮಿನ್ಯಜಮಾನೇಽಪಚಿತಿಮೇವ ಪೂಜಾಮೇವ ಮಂತ್ರ ಆಹ ।

ಮೊದಲನೇ ಋಕ್ಕಿನ ನಾಲ್ಕನೆಯ ಪಾದವನ್ನು ವಿವರಿಸುವರು—ಇಲ್ಲಿ ಪೂರ್ವಭಾಜಂ ಎಂದರೆ ಮೊದಲು ಗೌರವಿಸಲ್ಪಡಲು ಅಥವಾ ಅರ್ಚಿಸಲ್ಪಡಲು ಯೋಗ್ಯನಾದವನೆಂದರ್ಥವು. ರಾಜನಾದವನು ಮೊದಲು ಗೌರವಕ್ಕೆ ಯೋಗ್ಯನಾದ ಪುರೋಹಿತನನ್ನು ಎಲ್ಲರಿಗಿಂತಲೂ ಮೊದಲು ಗೌರವಿಸಿ ಪೂಜೆಮಾಡುವನು ಮತ್ತು ಅವನನ್ನು ಭಕ್ತಿಯಿಂದ ನಮಸ್ಕರಿಸುವನು. ಯಜಮಾನನಾದ ರಾಜನು ತನ್ನ ಪುರೋಹಿತನಲ್ಲಿ ಗೌರವ ಅಭಿಮಾನಗಳನ್ನು ಪ್ರದರ್ಶಿಸಿ ಅವನನ್ನು ರಕ್ಷಿಸುವನೆಂದು ಈ ಮಂತ್ರದ ಅಭಿಪ್ರಾಯವು.

ಸ ಇತ್ಕ್ಷೇತಿ ಸುಧಿತ ಓಕಸಿ ಸ್ವ ಇತಿ ಗೃಹಾ ವಾ ಓಕಃ ಸ್ವೇಷ್ವೇವ ತದ್ಗೃಹೇಷು ಸುಹಿತೋ ವಸತಿ ॥



ದ್ವಿತೀಯಸ್ಯಾ ಋಚಃ ಪ್ರಥಮಂ ಪಾದಮನೂದ್ಯ ವ್ಯಾಚಷ್ಟೇ—ಸ ಇತ್ಸ ಏವರಾಜಾ ಪೂಜಿತಃ ಪುರೋಹಿತಃ ಸುಪ್ರೀತಃ ಸ್ವೇ ಸ್ವಕೀಯ ಏ ವೌಕಸಿ ಗೃಹೇ ಕ್ಷೇತಿ ನಿವಸತಿ । ಓಕಃ ಶಬ್ದೇನಾತ್ರ ಗೃಹಾ ಏವೋಚ್ಯಂತೇ । ತತಃ ಸ್ವೇಷ್ವೇವ ಗೃಹೇಷು ಸುಪ್ರೀತೋ ವಸತೀತ್ಯುಕ್ತಂ ಭವತಿ ॥

ಈಗ ಎರಡನೇ ಋಕ್ಕಿನ ಮೊದಲನೇ ಪಾದವನ್ನು ವಿವರಿಸುವರು. ಸ ಇತ್ಕ್ಷೇತಿ ಸುಧಿತ ಓಕಸಿ ಸ್ವೇ ಎಂಬುದೇ ಎರಡನೇ ಋಕ್ಕಿನ ಪ್ರಥಮ ಪಾದವು. ಮೇಲೆ ಹೇಳಿದಂತೆ ತನ್ನ ಪುರೋಹಿತನನ್ನು ಗೌರವಾದರಗಳಿಂದ ಸತ್ಕರಿಸುವ ರಾಜನು ತನ್ನ ಸ್ವಂತಗೃಹ (ಅರಮನೆಯಲ್ಲಿ) ದಲ್ಲಿ ಸುಖವಾಗಿಯೂ ಸಂತೋಷದಿಂದಲೂ ವಾಸಮಾಡುವನು.

ತಸ್ಮಾ ಇಳಾ ಪಿನ್ವತೇ ವಿಶ್ವದಾನೀಮಿತ್ಯನ್ನಂ ವಾ ಇಳಾನ್ನಮೇವಾಸ್ಮಾ ಏಕದೂರ್ಜಸ್ವಚ್ಛಶ್ವದ್ಭವತಿ ॥

ದ್ವಿತೀಯಂ ಪಾದಮನೂದ್ಯ ವ್ಯಾಚಷ್ಟೇ—ತಸ್ಮೈ ಪುರೋಹಿತಯುಕ್ತಾಯ ರಾಜ್ಞ ಇಳಾನ್ನಮ್ । ವಿಶ್ವದಾನೀಂ ಸರ್ವಸ್ಮಿನ್ನಪಿ ಕಾಲ ಇದಾನೀಂ ತದಾನೀಮಿತ್ಯಾದಿವದವಗಂತವ್ಯಮ್ । ಪಿನ್ವತೇ ವರ್ಧತೇ ।ಅನ್ನಸಮೃದ್ಧಿರ್ಭವತಿ ।ಅಸ್ಮಿನ್ಪಾದ ಇಳಾಶಬ್ದೇನಾನ್ನಮೇವೋಚ್ಯತೇ ।ಏತದನ್ನಮಸ್ಮಾ ಅಸ್ಮಿನ್ರಾಜನಿ ಊರ್ಜಸ್ವತ್ಕ್ಷೀರಾದಿರಸೋಪೇತಂ ಶಶ್ವತ್ಸರ್ವದಾ ತಿಷ್ಠತಿ ॥

ಎರಡನೇ ಋಕ್ಕಿನ ಎರಡನೇ ಪಾದವನ್ನು ವಿವರಿಸುವರು. ಇಲ್ಲಿ ಇಳಾ ಎಂದರೆ ಅನ್ನವು. ಪುರೋಹಿತಯುಕ್ತನಾದ ರಾಜನಿಗೆ ಸರ್ವಕಾಲದಲ್ಲಿಯೂ ಅನ್ನ (ಆಹಾರ) ಸಮೃದ್ಧಿಯಾಗಿರುವುದು. ಮತ್ತು ಕ್ಷೀರಾದಿ ರಸಸಹಿತವಾದ ಅನ್ನಾದ್ಯಾಹಾರವು ಯಾವಾಗಲೂ ಸಮೃದ್ಧಿಯಾಗಿರುವುದು.

ತಸ್ಮೈ ವಿಶಃ ಸ್ವಯಮೇವಾಽಽನಮಂತ ಇತಿ ರಾಷ್ಟ್ರಾಣಿ ವೈ ವಿಶೋ ರಾಷ್ಟ್ರಾಣ್ಯೇವೈನಂ ತತ್ಸ್ವಯಮುಪನಮಂತಿ ॥

ತೃತೀಯಂ ಪಾದಮನೂದ್ಯ ವ್ಯಾಚಷ್ಟೇ—ತಸ್ಮೈ ಪುರೋಹಿತಯುಕ್ತಾಯ ರಾಜ್ಞೇ ವಿಶಃ ಪ್ರಜಾಃ ಸ್ವಯಮೇವ ತದೀಯ ಪ್ರಯತ್ನನಿರಪೇಕ್ಷಾ ಆನಮಂತ ಆನತಿಂಪ್ರಾಪ್ತಾ ಭವಂತಿ । ಅಸ್ಮಿನ್ಪಾದೇ ವಿಟ್ಶಬ್ದೇನ ರಾಷ್ಟ್ರಾಣ್ಯೇವ ಪ್ರಜೋಪೇತಾ ದೇಶಾ ಏವ ವಿವಕ್ಷಿತಾಃ । ತಾದೃಶಾನಿ ರಾಷ್ಟ್ರಾಣ್ಯೇನಂ ಪುರೋಹಿತಯುಕ್ತಂ ಕ್ಷತ್ರಿಯಂ ಸ್ವಯಮೇವ ಪ್ರಾಪ್ನುವಂತಿ ॥

ಎರಡನೇ ಋಕ್ಕಿನ ಮೂರನೆಯ ಪಾದವನ್ನು ವಿವರಿಸುವರು. ಈ ರಾಜನ ದೇಶದಲ್ಲಿರುವ ಸಮಸ್ತಪ್ರಜೆಗಳೂ ಪುರೋಹಿತಯುಕ್ತನಾದ ರಾಜನಿಗೆ ನಮಸ್ಕರಿಸುವರು ಎಂದರೆ ಯಾರ ಪ್ರೇರಣೆಯೂ ಬಲವಂತವೂ ಇಲ್ಲದೆ ಪ್ರಜೆಗಳು ರಾಜನಲ್ಲಿ ಇಟ್ಟಿರುವ ಪ್ರೀತ್ಯಾದರಗಳಿಂದಲೂ ರಾಜನ ಆಜ್ಞಾನುವರ್ತಿಗಳಾಗಿ ರಾಜನನ್ನು ನಮಸ್ಕರಿಸುವರು. ಇಲ್ಲಿ ವಿಟ್ ಎಂಬ ಶಬ್ದಕ್ಕೆ ದೇಶದಲ್ಲಿರುವ ಸಮಸ್ತ ಪ್ರಜೆಗಳೂ ಎಂದರ್ಥವು.

ಯಸ್ಮಿನ್ಬ್ರಹ್ಮಾ ರಾಜನಿ ಪೂರ್ವ ಏತೀತಿ ಪುರೋಹಿತಮೇವೈತದಾ ಹ ॥

**ಚತುರ್ಥಂ ಪಾದಮನೂದ್ಯ ವ್ಯಾಚಷ್ಟೇ—ಯಸ್ಮಿನ್ರಾಜನಿ ಬ್ರಹ್ಮಾ ಬ್ರಾಹ್ಮಣೋ ಹಿತಮುಪ-ದಿಶನ್ಪೂರ್ವ ಏತಿ ಪ್ರಥಮತೋ ಗಚ್ಛತಿ ಸ ಇತ್ ಕ್ಷೇತೀತಿ ಪೂರ್ವತ್ರಾನ್ವಯಃ । ಅನೇನ ಪಾದೇನ ಪೂರ್ವ ಏತೀತ್ಯೇವ ಪುರೋಹಿತಮೇವ ಮಂತ್ರೋಽಬ್ರೂತೇ ।**

ನಾಲ್ಕನೆಯ ಪಾದವನ್ನು ವಿವರಿಸುವರು. ಯಾವ ರಾಜನಿಗೆ ಪುರೋಹಿತನು ಹಿತೋಪದೇಶವನ್ನು ಮಾಡುವನೋ ಮತ್ತು ಆ ಪುರೋಹಿತನು ಎಲ್ಲರಿಗಿಂತಲೂ ಮೊದಲು ಗೌರವಿಸಲ್ಪಡುವನೋ ಆ ರಾಜನು ತನ್ನ ಗೃಹದಲ್ಲಿ ಸುಖವಾಗಿ ವಾಸ ಮಾಡುವನು.

**ಅಪ್ರತೀತೋ ಜಯತಿ ಸಂ ಧನಾನೀತಿ ರಾಷ್ಟ್ರಾಣಿ ವೈ ಧನಾನಿ ತಾನ್ಯಪ್ರ-ತೀತೋ ಜಯತಿ ॥**

**ತೃತೀಯಸ್ಯಾ ಋಚಃ ಪಾದಮನೂದ್ಯ ವ್ಯಾಚಷ್ಟೇ–ಅಯಂ ಪುರೋಹಿತಯುಕ್ತೋ ರಾಜಾಽ-ಪ್ರತೀತಃ ಪ್ರತಿಕೂಲೈಃ ಶತ್ರುಭಿರಿತಃ ಪ್ರಾಪ್ತಃ ಪ್ರತೀತಸ್ತದ್ವಿಪರೀತೋಽಪ್ರತೀತಃ ಶತ್ರುಪ್ರಾಪ್ತಿರಹಿತಃ ಏವ ಭೂತ್ವಾ ಧನೋಪೇತಾನಿ ರಾಷ್ಟ್ರಾಣಿ ಸಮ್ಯಗ್ಜಯತಿ । ಅಸ್ಮಿನ್ಪಾದೇ ಧನಶಬ್ದೇನ ರಾಷ್ಟ್ರಾಣ್ಯೇವ ವಿವಕ್ಷಿತಾನಿ । ತಾನಿ ಸ್ವಯಂ ಪ್ರತಿಪಕ್ಷರಹಿತಏವ ಜಯತಿ ।**

ಈಗ ಮೂರನೆಯ ಋಕ್ಕಿನ ಮೊದಲನೇ ಪಾದವನ್ನು ವಿವರಿಸುವರು. ಪುರೋಹಿತಯುಕ್ತನಾದ ರಾಜನಿಗೆ ಪ್ರತಿಕೂಲರಾದ ಶತ್ರುರಾಜರುಗಳಿರುವುದಿಲ್ಲ. ಇದ್ದರೂ ಅಂತಹ ಶತ್ರುರಾಜರನ್ನು ಸೋಲಿಸಿ ಧನಸಮೃದ್ಧವಾದ ಅವರ (ಶತ್ರುರಾಜರು ದೇಶಗಳನ್ನು ಜಯಿಸಿ ತನ್ನ ವಶಮಾಡಿಕೊಳ್ಳುವನು. ಈ ಪಾದದಲ್ಲಿ ಹೇಳಿರುವ ಧನಶಬ್ದವು ಸಮಸ್ತರಾಷ್ಟ್ರವನೂ (ದೇಶವನ್ನೂ) ಸೂಚಿಸುವುದು. ೩

**ಪ್ರತಿಜನ್ಯಾನ್ಯುತ ಯಾ ಸಜನ್ಯೇತಿ ಸಪತ್ನಾ ವೈ ದ್ವಿಷಂತೋ ಭ್ರಾತೃವ್ಯಾ ಜನ್ಯಾನಿ ತಾನಪ್ರತೀತೋ ಜಯತಿ ॥**

**ದ್ವಿತೀಯಂ ಪಾದಮನೂದ್ಯ ವ್ಯಾಚಷ್ಟೇ—ಜನ್ಯಾನಿ ಶತ್ರೂನಪ್ರತೀತಃ ಸ್ವಯಮಪ್ರತಿಪಕ್ಷೋ ಜಯತೀತ್ಯನುವರ್ತತೇ। ಕಿಂ ಚ ಯಾ ಸೇನಾ ಸಜನ್ಯಾ ಶತ್ರುಸಹಿತಾ ತಾಮಪಿ ಜಯತಿ। ಅಸ್ಮಿನ್ಪಾದೇ ಜನ್ಯಶಬ್ದೇನ ಸಪತ್ನಾ ಅಭಿಧೀಯಂತೇ । ತಸ್ಯ ವ್ಯಾಖ್ಯಾನಂ ದ್ವಿಷಂತೋ ವೈ ಭ್ರಾತೃವ್ಯಾ ಇತಿ । ತಾನ್ ಭ್ರಾತೃವ್ಯಾನ್ ಪ್ರತಿಪಕ್ಷರಹಿತೋ ಜಯತಿ ॥**

ಎರಡನೇ ಪಾದವನ್ನು ವಿವರಿಸುವರು. ಇಲ್ಲಿ **ಅಪ್ರತೀತಃ** ಎಂಬ ಶಬ್ದಕ್ಕೆ ತನಗೆ ವಿರುದ್ಧರಾದ ಶತ್ರುಗಳನ್ನು ಇತರರ ಸಹಾಯವಿಲ್ಲದೆ ತಾನೇ ಜಯಿಸುವವನೆಂದರ್ಥವು ಮತ್ತು ಸೇನಾಸಹಿತರಾಗಿ ಯುದ್ಧಮಾಡುವ ಶತ್ರುಗಳನ್ನೂ ಈ ರಾಜನು ಜಯಿಸುವನು. ಇಲ್ಲಿ ಅನ್ಯಶಬ್ದಕ್ಕೆ ಸಪತ್ನ ಎಂದರ್ಥವು. ಸಪತ್ನ ಎಂದರೆ ದ್ವೇಷಿಸುವ ಶತ್ರುಗಳು ಎಂದರ್ಥವು. ಈ ರಾಜನು ಯಾವ ವಿಧವಾದ ಶತ್ರುವನ್ನೂ ಜಯಿಸುವನು ಎಂದರ್ಥವು. ಈ ರಾಜನಿಗೆ ಪ್ರತಿಪಕ್ಷರಾದ (ವಿರುದ್ಧರಾದ) ಶತ್ರುಗಳೇ ಇರುವುದಿಲ್ಲವೆಂದರ್ಥವು.

**ಅವಸ್ಯವೇ ಯೋ ವರಿವಃ ಕೃಣೋತೀತಿ ಯದಾಹಾವಸೀಯಸೇ ಯೋಽ-**
**ವಸೀಯಃ ಕರೋತೀತ್ಯೇವ ತದಾ ಹ ।**

ತೃತೀಯ ಪಾದಮನೂದ್ಯ ವ್ಯಾಚಷ್ಟೇ—ಅವಸ್ಯವೇ ವಸುರಹಿತಾಯ ಬ್ರಾಹ್ಮಣಾಯ ಪುರೋಹಿತಾಯ ಯೋ ರಾಜಾ ವರಿವಃ ಕೃಣೋತಿ ಪರಿಚರ್ಯಾಂಕರೋತೀತಿ ಮಂತ್ರೋ ಯದಾಹ ತತ್ರಾವಸೀಯಸೇಽತ್ಯಂತದರಿದ್ರಾಯ ಧನರಹಿತಾಯ ಯೋ ರಾಜಾಽವಸಿಯೋಽತಿಶಯೇನ ಧನಿಕತ್ವಂ ಕರೋತೀತ್ಯನೇನೈವ ಪ್ರಕಾರೇಣ ಮಂತ್ರೋ ಬ್ರೂತೇ ॥

ಈಗ ಮೂರನೇ ಪಾದವನ್ನು ವಿವರಿಸುವರು. ಧನರಹಿತನೂ, ದರಿದ್ರನೂ ಆದ ಪುರೋಹಿತನಿಗೆ ಅತಿಶಯವಾಗಿ ಧನಾದಿಗಳನ್ನು ಕೊಟ್ಟು ಉಪಚಾರಗಳನ್ನು ಮಾಡುವ ರಾಜನು ಶತ್ರುರಾಜರನ್ನು ಜಯಿಸಿ ಸುಖದಿಂದಿರುವನು ಎಂಬ ವಿಷಯ ವನ್ನು ಈ ಮಂತ್ರವು ವಿವರಿಸುವುದು.

**ಬ್ರಹ್ಮಣೇ ರಾಜಾ ತಮವಂತಿ ದೇವಾ ಇತಿ ಪುರೋಹಿತಮೇವೈತದಭಿವದತಿ ॥**

ಚತುರ್ಥಂ ಪಾದಮನೂದ್ಯ ವ್ಯಾಚಷ್ಟೇ-ಬ್ರಹ್ಮಣೇ ಬ್ರಾಹ್ಮಣಾಯ ಪೂರ್ವೋಕ್ತೇನಾವಸ್ಯವ ಇತಿ ಚತುರ್ಥ್ಯಂತೇನಾನ್ವೇತಿ । ತಥಾ ರಾಜೇತಿ ಪದಂ ಯ ಯ ಇತ್ಯನೇನಾನ್ವೇತಿ ತಂ ತಾದೃಶಂ ಪುರೋಹಿತಪೂಜಕಂ ರಾಜಾನಂ ದೇವಾ ಅವಂತಿ ಪಾಲಯಂತಿ । ಏತದೇತೇನ ಬ್ರಹ್ಮಣ ಇತಿ ಪದೇನ ಪುರೋಹಿತಮೇವ ಮಂತ್ರೋಽಭಿವದತಿ ॥

ನಾಲ್ಕನೆಯ ಪಾದದ ಅರ್ಥವನ್ನು ವಿವರಿಸುವರು. ಬ್ರಾಹ್ಮಣನಾದ ಪುರೋಹಿತನಿಗೆ ಧನಾದಿಗಳನ್ನು ಕೊಟ್ಟು ಆದರಿಸುವ ರಾಜನನ್ನು ದೇವತೆಗಳು ರಕ್ಷಿಸುವರು ಅಥವಾ ಪಾಲಿಸುವರು, ಇಲ್ಲಿ ಬ್ರಹ್ಮಣೇ ಎಂಬ ಪದವು ಬ್ರಾಹ್ಮಣನಾದ ಪುರೋಹಿತ ನೆಂಬ ಅರ್ಥವನ್ನು ಸೂಚಿಸುವುದು.

---

*English Translation*

**(Agni protects the King who appoints a house-priest)**

This Agni Vaisvanara, who is the purohita, is possessed of five destructive powers. With them he surrounds the King for his defence, just as the sea surrounds the earth. The empire of such a ruler (arya) will be safe. Neither will he die before the expiration of the full life term (100 ydars) ; buț live up to his old age, and enjoy the full term apportioned for his life. Nor will he die again for he is free from being born again as a mortal, if he has a Brahmana who possesses such a knowledge as his Purohita, and guardian of his

empire : for he obtains by means of his own royal dignity that for another, his son, and by means of his bravery that of another. The subjects of such a King obey him unanimously and undivided.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ಚತ್ವಾರಿಂಶಾಧ್ಯಾಯೇ ತೃತೀಯಃ ಖಂಡಃ।

ಇಲ್ಲಿಗೆ ಐತರೇಯಬ್ರಾಹ್ಮಣದ ನಲವತ್ತನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.

---

## ಚತ್ವಾರಿಂಶಾಧ್ಯಾಯೇ ಚತುರ್ಥಃ ಖಂಡಃ

### ನಲವತ್ತನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು

---

[ಪುರೋಹಿತನ ಯೋಗ್ಯತೆ ಇತ್ಯಾದಿ—ಮೂರು ವಿಧ ಪುರೋಹಿತರು—ಪುರೋಹಿತಸ್ಥಾನಕ್ಕೆ ಇರಾವ ಅರ್ಹತೆ—ಯಾವ ಮಂತ್ರಪಠನದಿಂದ ಮತ್ತು ಯಾವ ಕರ್ಮದಿಂದ ರಾಜನು ಪುರೋಹಿತನನ್ನು ನೇಮಿಸಿ ಕೊಳ್ಳಬೇಕು ಇತ್ಯಾದಿ]

---

ಯೋ ಹ ವೈ ತ್ರೀನ್ಪುರೋಹಿತಾಂಸ್ತ್ರೀನ್ಪುರೋಧಾತೄನ್ವೇದ ಸ ಬ್ರಾಹ್ಮಣಃ ಪುರೋಹಿತಃ ಸ ವದೇತ ಪುರೋಧಾಯಾ ಅಗ್ನಿರ್ವಾವ ಪುರೋಹಿತಃ ಪೃಥಿವೀ ಪುರೋಧಾತಾ ವಾಯುರ್ವಾವ ಪುರೋಹಿತೋಽನ್ತರಿಕ್ಷಂ ಪುರೋಧಾತಾದಿತ್ಯೋ ವಾವ ಪುರೋಹಿತೋ ದ್ಯೌಃ ಪುರೋಧಾತೈಷ ಹ ವೈ ಪುರೋಹಿತೋ ಯ ಏವಂ ವೇದಾಥ ಸ ತಿರೋಹಿತೋ ಯ ಏವಂ ವೇದ ॥

ಅಥ ಪೌರೋಹಿತ್ಯಸ್ಯ ಯೋಗ್ಯಾಯೋಗ್ಯೌ ಬ್ರಾಹ್ಮಣೌ ವಿವಿನಕ್ತಿ-ರಾಜ್ಞಾ ಸ್ವಹಿತೋಪದೇಶಾರ್ಥಂ ಸ್ವಸ್ಯ ಪುರೋಹಿತೋಽವಸ್ಥಾಪಿತಃ। ತಸ್ಯ ಪುರೋಹಿತಸ್ಯ ಯೋಽಯಮವಸ್ಥಾಪಯಿತಾ ರಾಜಾ ಸ ಪುರೋಧಾತಾ । ದೇವತಾಸು ಮಧ್ಯೇ ತ್ರಯಃ ಪುರೋಹಿತಾಃ ಸಂತಿ । ಯೇ ಚ ತ್ರಯಃ ಪುರೋಧಾತಾರಸ್ತಾನುಭಯವಿಧಾನ್ಯೋ ವೇದ ತತ್ಪ್ರತಿಪಾದಕಂ ಮಂತ್ರಂ ಸರ್ವದಾಽನುಸಂಧತ್ತ ಇತ್ಯರ್ಥಃ । ಸ ತಾದೃಶೋ ಬ್ರಾಹ್ಮಣಃ ಪುರೋಹಿತೋ ಭವಿತುಂ ಯೋಗ್ಯಃ । ಸ ಚ ಬ್ರಾಹ್ಮಣಃ

**ಪುರೋಧಾಯೈ ಪೌರೋಹಿತ್ಯಾರ್ಥಮಗ್ನಿರಿತ್ಯಾದಿಮಂತ್ರಂ ವದೇಜ್ಜಪೇತ್ । ಅಗ್ನಿವಾಯ್ವಾದಿತ್ಯಾಃ ಪುರೋಹಿತರೂಪಾಃ ಪೃಥಿವ್ಯಂತರಿಕ್ಷದ್ಯುಲೋಕಾಃ ಪುರೋಧಾತೃರೂಪಾ ಇತಿ ಮಂತ್ರಾರ್ಥಃ । ಯಃ ಪುಮಾನೇವಂ ವೇದಮಂತ್ರಾರ್ಥಮನುಸಂಧತ್ತೆ ಏಷ ಏವ ಯೋಗ್ಯಃ ಪುರೋಹಿತಃ । ಅಥ ತದ್ವ್ಯತಿರಿಕ್ತೇನ ಯಃ ಪುಮಾನೇವಂ ನ ವೇದ ಸ ಪುರೋಹಿತಃ ಪೌರೋಹಿತ್ಯಾದಂತರ್ಹಿತಸ್ತದಯೋಗ್ಯ ಇತ್ಯರ್ಥಃ ॥**

ರಾಜನಾದವನು ತನ್ನ ಹಿತೋಪದೇಶಾರ್ಥವಾಗಿ ನೇಮಿಸಿಕೊಳ್ಳುವ ಬ್ರಾಹ್ಮಣನಿಗೆ ಪುರೋಹಿತನೆಂದು ಹೆಸರು. ಅಂತಹ ಪುರೋಹಿತನನ್ನು ನೇಮಿಸುವ ರಾಜನಿಗೆ **ಪುರೋಧಾತಾ** ಎಂದು ಹೆಸರು. ಎಂದರೆ ಪುರೋಹಿತನು ಮತ್ತು ಪುರೋಹಿತನನ್ನು ನೇಮಿಸುವವನು ಎಂದು ಎರಡು ವಿಧ. ದೇವತೆಗಳಲ್ಲಿ ಮೂರು ಮಂದಿ ಪುರೋಹಿತರೂ ಅವರನ್ನು ನೇಮಿಸುವ ಮೂರು ಮಂದಿ ಪುರೋಧಾತೃಗಳೂ ಇರುವರು. ಈ ವಿಧವಾದ ಅರ್ಥವನ್ನು ತಿಳಿದಿರುವ ಬ್ರಾಹ್ಮಣನೇ ಪುರೋಹಿತನಾಗಲು ಯೋಗ್ಯನು. ಆ ಬ್ರಾಹ್ಮಣನು ಪೌರೋಹಿತ್ಯವನ್ನು ಮಾಡುವುದಕ್ಕಾಗಿ—**ಅಗ್ನಿರ್ವಾವ ಪುರೋಹಿತ ಪೃಥಿವೀ ಪುರೋಧಾತಾ । ವಾಯುರ್ವಾವ ಪುರೋಹಿತಃ ಅಂತರಿಕ್ಷಂ ಪುರೋಧಾತಾ । ಆದಿತ್ಯೋ ವಾವ ಪುರೋಹಿತಃ ದ್ಯೌಃ ಪುರೋಧಾತಾ** ಎಂಬ ಮಂತ್ರವನ್ನು ಪಠಿಸಬೇಕು ಎಂದರೆ, ದೇವತೆಗಳಲ್ಲಿ ಅಗ್ನಿಯು ಪುರೋಹಿತನು ಪೃಥಿವಿಯು ಪುರೋಧಾತೃವು (ಪುರೋಹಿತನನ್ನು ನೇಮಿಸಿಕೊಳ್ಳುವ ವ್ಯಕ್ತಿಯು) ; ವಾಯುವು ಪುರೋಹಿತನು, ಅಂತರಿಕ್ಷವು ಪುರೋಧಾತೃವು ; ಆದಿತ್ಯನು ಪುರೋಹಿತನು, ದ್ಯೌಃ (ಸ್ವರ್ಗವು) ಪುರೋಧಾತೃವು ಎಂದು ಈ ಮಂತ್ರದ ಅರ್ಥವು. ಈ ಮಂತ್ರಾರ್ಥವನ್ನು ಚೆನ್ನಾಗಿ ತಿಳಿದವನು ಪೌರೋಹಿತ್ಯಮಾಡಲು ಅರ್ಹನು. ಇದನ್ನು ತಿಳಿಯದ ಪುರುಷನು ಪುರೋಹಿತ ಪದವಿಗೆ ಅರ್ಹನಲ್ಲ.

ತಸ್ಯ ರಾಜಾ ಮಿತ್ರಂ ಭವತಿ ದ್ವಿಷಂತಮುಪಬಾಧತೇ ಯಸ್ಯೈವಂ ವಿದ್ವಾನ್ಬ್ರಾಹ್ಮಣೋ ರಾಷ್ಟ್ರಗೋಪಃ ಪುರೋಹಿತಃ । ಕ್ಷತ್ರೇಣ ಕ್ಷತ್ರಂ ಜಯತಿ ಬಲೇನ ಬಲಮಶ್ನುತೇ ಯಸ್ಯೈವಂ ವಿದ್ವಾನ್ಬ್ರಾಹ್ಮಣೋ ರಾಷ್ಟ್ರಗೋಪಃ ಪುರೋಹಿತಸ್ತಸ್ಮೈ ವಿಶಃ ಸಂಜಾನತೇ ಸಂಮುಖಾ ಏಕಮನಸೋ ಯಸ್ಯೈವಂ ವಿದ್ವಾನ್ಬ್ರಾಹ್ಮಣೋ ರಾಷ್ಟ್ರಗೋಪಃ ಪುರೋಹಿತಃ ॥

**ಯೋಗ್ಯಂ ಪುರೋಹಿತಂ ಪ್ರಶಂಸತಿ—ಯಸ್ಯೈವಂ ವಿಧತ್ವಾದಿಗುಣಯುಕ್ತಃ ಪುರೋಹಿತೋ ಭವೇತ್ತಸ್ಯ ರಾಜ್ಞೋ ದೇಶಾಂತರವರ್ತೀ ರಾಜಾ ಮಿತ್ರಂ ಬಂಧುರ್ಭವತಿ । ತಥಾ ದ್ವಿಷಂತಮನ್ಯಂ ರಾಜಾನಂ ಪುರೋಹಿತಯುಕ್ತೋ ರಾಜಾಽಪಬಾಧತೇ ವಿನಾಶಯತಿ ॥**

**ಪುನರಪಿ ದ್ವೇಧಾ ಪ್ರಶಂಸತಿ—ಪೂರ್ವವದ್ವ್ಯಾಖ್ಯೇಯಮ್ ॥**

ಮೇಲೆ ಹೇಳಿದ ಗುಣಗಳಿಂದ ಯುಕ್ತನಾದ ಪುರೋಹಿತನನ್ನು ಪಡೆದಿರುವ ರಾಜನು ಇತರ ದೇಶಗಳ ರಾಜರೊಡನೆ ಸ್ನೇಹವಿಂದಿರುವನು. ಆ ರಾಜರೂ ಈ ರಾಜನೊಡನೆ ಸ್ನೇಹವನ್ನೂ ಬಂಧುತ್ವವನ್ನೂ ಪಡೆಯಲಿಚ್ಛಿಸುವರು. ಹಾಗೆಯೇ

ತನಗೆ ಶತ್ರುವಾದ ರಾಜನನ್ನು ಪುರೋಹಿತಸಹಿತನಾದ ರಾಜನು ಸೋಲಿಸುವನು. ಆದ್ದರಿಂದ ಸಮಸ್ತವನ್ನೂ ತಿಳಿದ ಬ್ರಾಹ್ಮಣಪುರೋಹಿತನು ರಾಷ್ಟ್ರದ ರಕ್ಷಣೆಗೂ ಅಭಿವೃದ್ಧಿಗೂ ಅವಶ್ಯಕವು, ಇಂತಹ ಉತ್ತಮಜ್ಞಾನಿಯಾದ ಬ್ರಾಹ್ಮಣ ಪುರೋಹಿತನಿಂದ ಯುಕ್ತನಾದ ರಾಜನು ಶ್ರೇಷ್ಠನಾದ ಮತ್ತು ಪರಾಕ್ರಮವುಳ್ಳ ಪುತ್ರನನ್ನು ಪಡೆದು ತನ್ನ ಶೌರ್ಯ ಪರಾಕ್ರಮಗಳಿಂದ ಶತ್ರುರಾಜನನ್ನು ನಿಗ್ರಹಿಸುವನು. ಪರಕೀಯ ಸೈನ್ಯಬಲವನ್ನು ತನ್ನ ಸೈನ್ಯಬಲದಿಂದ ಸೋಲಿಸುವನು. ಈ ರಾಜನ ರಾಜ್ಯದಲ್ಲಿ ಪ್ರಜೆಗಳು ಏಕಮನಸ್ಕರಾಗಿ ಎಂದರೆ ರಾಜನೂ ಪ್ರಜೆಗಳೂ ಪರಸ್ಪರ ಸಹಕಾರದಿಂದ ವರ್ತಿಸುತ್ತಾ ರಾಜನ ಆಜ್ಞಾನುವರ್ತಿಗಳಾಗಿ ಸುಖದಿಂದಿರುವರು.

[ ರಾಜನು ಮಾಡುವ ಪುರೋಹಿತ ವರಣಮಂತ್ರ ಇತ್ಯಾದಿ ]

**ಭೂರ್ಭುವಃಸ್ವರೋಮಮೋಽಹಮಸ್ಮಿ ಸತ್ವಂ ಸ ತ್ವಮಸ್ಯಮೋಽಹಂ ದ್ಯೌರಹಂ ಪೃಥಿವೀ ತ್ವಂ ಸಾಮಾಹಮೃಕ್ತ್ವಂ ತಾವೇಹ ಸಂವಹಾವಹೈ। ಪುರಾಣ್ಯಸ್ಮಾನ್ಮಹಾಭಯಾತ್। ತನೂರಸಿ ತನ್ವಂ ಮೇ ಪಾಹಿ ॥**

**ಅಥ ರಾಜ್ಞಃ ಪುರೋಹಿತವರಣಮಂತ್ರ ಮಾಹ—ಭೂರ್ಭುವಃ ಸ್ವರಿತಿ ಶಬ್ದೈರ್ಲೋಕತ್ರಯಾಭಿಮಾನಿನ್ಯೋ ದೇವತಾ ಉಚ್ಯಂತೇ। ಪ್ರಣವೇನ ಪರಮಾತ್ಮಾ। ಏತೇ ಸರ್ವೇಽಸ್ಮನುಗೃಹ್ಣಂತ್ವಿತ್ಯಭಿಪ್ರಾಯಃ। ಪುರೋಹಿತೋಽಹಮಮೋ ದ್ಯುಲೋಕರೂಪೋಽಸ್ಮಿ ತ್ವಂ ತು ಸ ಭೂಲೋಕರೂಪೋಽಸಿ। ಪುನರಪಿ ಸ ತ್ವಮಸ್ಯಮೋಽಹಮಿತ್ಯಭಿಧಾನಂ ದಾರ್ಢ್ಯಾರ್ಥಮ್। ತಸ್ಯೈವ ವ್ಯಾಖ್ಯಾನಂ ದ್ಯೌರಹಂ ಪೃಥಿವೀ ತ್ವಮಿತಿ। ತಥಾ ಸಾಮಸ್ವರೂಪೋಽಹಮೃಕ್‌ಸ್ವರೂಪಸ್ತ್ವಮಿತಿ ತಾವುಭಾವಾನಾಮಿಹ ರಾಷ್ಟ್ರ ಆ ಸಮಂತಾತ್ಪುರಾಣಿ ತದುಪಲಕ್ಷಿತಗ್ರಾಮಾಂಶ್ಚ ಸಂವಹಾವಹೈ ಸಮ್ಯಗ್ವಹನಂ ಪುರಾದಿನಿರ್ವಾಹಂ ಕರವಾವಹೈ। ತ್ವಂ ಮಮ ತನೂಃ ಶರೀರಮಸಿ। ಅತೋ ಮದೀಯಾಂ ತನ್ವಂ ಶರೀರಮಸ್ಮಾದೈಹಿಕಾಮುಷ್ಮಿಕಾದಾಚ್ಚ ಮಹಾಭಯಾತ್ಪಾಹಿ ರಕ್ಷ॥**

ಈ ಮಂತ್ರವನ್ನು ಪುರೋಹಿತನನ್ನು ವರಣಮಾಡುವಾಗ (ನೇಮಿಸುವಾಗ) ಪಠಿಸಬೇಕಾಗಿರುವುದು. **ಭೂಃ ಭುವಃ ಸ್ವಃ** ಎಂಬ ಶಬ್ದಗಳು ಪೃಥಿವೀ ಅಂತರಿಕ್ಷ ಸ್ವರ್ಗ ಎಂಬ ಲೋಕಗಳ ಅಭಿಮಾನದೇವತೆಗಳನ್ನು ಸೂಚಿಸುವವು. ಓಂ ಎಂಬ ಪ್ರಣವವು ಪರಮಾತ್ಮನನ್ನು ನಿರ್ದೇಶಿಸುವವು. ಈ ದೇವತೆಗಳೆಲ್ಲಾ ನನ್ನನ್ನು ಅನುಗ್ರಹಿಸಲಿ ಎಂದಭಿಪ್ರಾಯವು. ಪುರೋಹಿತನಾದ ನಾನು ದ್ಯು (ಸ್ವರ್ಗ) ಲೋಕದ ಸ್ವರೂಪನು. ನೀನು ಭೂಲೋಕದ ಸ್ವರೂಪನಾಗಿರುವೆ. ಮತ್ತು ನೀನು ಭೂಲೋಕಸ್ವರೂಪನಾಗಿರುವೆ. ನಾನು ಸ್ವರ್ಗಲೋಕಸ್ವರೂಪನಾಗಿರುವೆ (ವಿಷಯವನ್ನು ಒತ್ತಿ ಹೇಳುವುದಕ್ಕಾಗಿ ವಾಕ್ಯವು ಎರಡಾವರ್ತಿ ಪಠಿತವಾಗಿದೆ) ಅದರಂತೆಯೇ ನಾನು ಸಾಮವೇದಸ್ವರೂಪನು. ನೀನು ಋಗ್ವೇದಸ್ವರೂಪನು ನಾವಿಬ್ಬರೂ ಈ ರಾಷ್ಟ್ರವನ್ನೂ (ದೇಶವನ್ನೂ) ಈ ದೇಶದ ಗ್ರಾಮಗಳನ್ನೂ ರಕ್ಷಿಸುವ ಕಾರ್ಯದಲ್ಲಿ ಆಸಕ್ತರಾಗೋಣ ಎಂದರೆ, ರಾಜ್ಯಭಾರನಿರ್ವಹಣಕಾರ್ಯದಲ್ಲಿ ಪರಸ್ಪರ ಸಹಾಯಮಾಡೋಣ. ನೀನು (ಪುರೋಹಿತ) ನನ್ನ (ರಾಜನ) ಶರೀರವಾಗಿರುವೆ. ಆದುದರಿಂದ ನೀನು ನನ್ನ ಶರೀರವನ್ನು ಈ ಲೋಕ ಮತ್ತು ಪರಲೋಕಸಂಬಂಧವಾದ ಭಯಾದಿಗಳಿಂದ ರಕ್ಷಿಸಿ ಕಾಪಾಡು. ಇದು ರಾಜನು ಪಠಿಸುವ ಮಂತ್ರವು ಈರೀತಿ ರಾಜನು ಪುರೋಹಿತನನ್ನುದ್ದೇಶಿಸಿ ಹೇಳಿದ ಮೇಲೆ ಪುರೋಹಿತನು ರಾಜನು ತನಗೆ ಕುಳಿತುಕೊಳ್ಳುವುದಕ್ಕಾಗಿ ಸಿದ್ಧಪಡಿಸಿರುವ ಆಸನವನ್ನು ಅಭಿಮಂತ್ರಿಸುವ ಮಂತ್ರವನ್ನು ಪಠಿಸುವನು.

**ಯಾ ಓಷಧೀಃ ಸೋಮರಾಜ್ಞೀರ್ಬಹ್ವೀಃ ಶತವಿಚಕ್ಷಣಾಃ । ತಾ ಮಹ್ಯ-ಮಸ್ಮಿನ್ನಾಸನೇಽಚ್ಛಿದ್ರಂ ಶರ್ಮ ಯಚ್ಛತ ॥**

**ಅನೇನ ಮಂತ್ರೇಣ ರಾಜ್ಞಾ ಕೃತೋ ಯಃ ಪುರೋಹಿತಸ್ತಸ್ಯ ರಾಜದತ್ತವಿಷ್ಟರಾಭಿಮಂತ್ರಣಮಾಹ—ಸೋಮೋ ರಾಜಾ ಯಾಸಾಮೋಷಧೀನಾಂ ತಾಃ ಸೋಮರಾಜ್ಞ್ಯಃ । ಬಹ್ವ್ಯೋ ಬಹುಜಾತೀಯಾಃ । ಶತವಿಚಕ್ಷಣಾಃ ಶತಶಾಖಾಭಿನ್ನಾಃ । ತಾದೃಶ್ಯ ಓಷಧಯೋ ಯಾಃ ಸಂತಿ ತಾಸ್ತಥಾ-ವಿಧಾ ಹೇ ಓಷಧಯೋಽಸ್ಮಿನ್ನಾಸನೇ ತೃಣಾದಿನಿರ್ಮಿತಕಟಾದಿರೂಪೇ ಮಹ್ಯಂ ಪುರೋಹಿತಾಯಚ್ಛಿದ್ರರಹಿತಂ ಶರ್ಮ ದುಃಖಸ್ಪರ್ಶರಹಿತಂ ಸುಖಂ ಯಚ್ಛತ ದತ್ತ ॥**

ಪುರೋಹಿತನು ಕುಳಿತುಕೊಳ್ಳುವುದಕ್ಕಾಗಿ ನಿರ್ಮಿಸಿರುವ ಆಸನವನ್ನು ತೃಣ, ಕುಳ, ದರ್ಭೆ, ಕಾಷ್ಠ ಮೊದಲಾದ ಸಸ್ಯವರ್ಗದ ಪದಾರ್ಥಗಳಿಂದ ರಚಿತವಾಗಿರುವುದರಿಂದ ಸಸ್ಯವರ್ಗ ಎಂದರೆ ಓಷಧಿ ವನಸ್ಪತಿಗಳನ್ನು ಈ ಮಂತ್ರದಲ್ಲಿ ಸ್ತುತಿಸಲಾಗಿದೆ. ಈ ಆಸನಕ್ಕಾಗಿ ಉಪಯೋಗಿಸಲ್ಪಟ್ಟಿರುವ ಓಷಧಿಗಳಿಗೆ (ತೃಣ, ದರ್ಭೇ ಮೊದಲಾದವುಗಳಿಗೆ) ಸೋಮನು ದೇವತೆಯು. ಈ ಓಷಧಿವನಸ್ಪತಿಗಳಿಗೆಲ್ಲಾ ಸೋಮದೇವತೆಯ ಅಧೀನಕ್ಕೊಳಪಟ್ಟಿರುವವು. ಇವುಗಳು ನಾನಾಜಾತಿಗೆ ಸೇರಿದ ಸಸ್ಯಗಳು. ಅನೇಕಶಾಖೆ (ಕೊಂಬೆ) ಗಳಿಂದ ಸಹಿತವಾದವು. ಈ ಆಸನನಿರ್ಮಾಣದಲ್ಲಿ ಉಪಯೋಗಿಸಿರುವ ಇಂತಹ ಓಷಧಿಗಳು ಪುರೋಹಿತನಾದ ನನಗೆ ಯಾವ ಬಾಧೆಯೂ ಇಲ್ಲದಂತೆ ಸುಖವನ್ನುಂಟುಮಾಡಲಿ ಎಂದು ಈ ಮಂತ್ರದ ಮುಖ್ಯಾಭಿಪ್ರಾಯವು. ಈ ರೀತಿ ಆಸನವನ್ನು ಅಭಿಮಂತ್ರಿಸುವ ಮಂತ್ರವನ್ನು ಉಚ್ಚರಿಸಿ ಆಸನದಲ್ಲಿ ಕುಳಿತುಕೊಳ್ಳುವಾಗ ಮುಂದೆ ಹೇಳುವ ಮಂತ್ರವನ್ನು ಪಠಿಸುವನು.

**ಯಾ ಓಷಧೀಃ ಸೋಮರಾಜ್ಞೀರ್ವಿಷ್ಠಿತಾಃ ಪೃಥಿವೀಮನು । ತಾ ಮಹ್ಯಮಸ್ಮಿನ್ನಾಸನೇಽಚ್ಛಿದ್ರಂ ಶರ್ಮ ಯಚ್ಛತ ॥**

**ಅಭಿಮಂತ್ರಿತೇ ವಿಷ್ಟರ ಉಪವೇಶನಮಾಹ—ವಂಶದಲಾದಿನಿರ್ಮಿತವಿಷ್ಟರಗತಾ ಓಷಧಯಃ ಪೃಥಿವೀಮನುವಿಷ್ಠಿತಾ ವಿಶೇಷೇಣ ಸ್ಥಾಪಿತಾಃ । ತಾ ಮಹ್ಯಮಿತ್ಯಾದಿ ಪೂರ್ವವತ್ ॥**

ಸೋಮರಾಜನ ಅಧೀನಕ್ಕೊಳಪಟ್ಟ ಯಾವ ಓಷಧಿಗಳಿರುವವೋ ಅವುಗಳಿಂದ ನಿರ್ಮಿತವಾದ ಈ ಆಸನವನ್ನು ಭೂಮಿಯ ಮೇಲೆ ಹಾಸಿ ಕುಳಿತುಕೊಳ್ಳುವುದಕ್ಕಾಗಿ ಸಿದ್ಧಪಡಿಸಲಾಗಿದೆ. ನಾನು ಈ ಆಸನದಲ್ಲಿ ಕುಳಿತುಕೊಂಡಾಗ ಈ ಓಷಧಿಗಳು ನನಗೆ ಅವಿಚ್ಛಿನ್ನವಾದ ಸುಖವನ್ನುಂಟುಮಾಡಲಿ ಎಂದು ಮಂತ್ರಾಭಿಪ್ರಾಯವು.

**ಅಸ್ಮಿನ್ರಾಷ್ಟ್ರೇ ಶ್ರಿಯಮಾವೇಶಯಾಮ್ಯತೋ ದೇವೀಃ ಪ್ರತಿಪಶ್ಯಾ-ಮ್ಯಾಪಃ ॥**

**ಪುರೋಹಿತಸ್ಯ ಪಾದ್ಯಾರ್ಥಂ ಸಮಾನೀತಾಮಪಾಮಭಿಮಂತ್ರಣಮಂತ್ರಂ ದರ್ಶಯತಿ—ಹೇ ಆಪಃ ಪುರೋಹಿತೋಽಹಮಸ್ಮಿನ್ರಾಷ್ಟ್ರೇ ಶ್ರಿಯಮಾವೇಶಯಾಮಿ ಧನಾತಿಸಂಪದಂ ಸಂಪಾದಯಾಮಿ। ಅತಃ ಕಾರಣಾದ್ದೇವೀರ್ದ್ಯೋತನಾತ್ಮಿಕಾ ಯುಷ್ಮಾನ್ಪ್ರತಿ ಪಶ್ಯಾಮಿ ॥**

ಪುರೋಹಿತನ ಪಾದಪ್ರಕ್ಷಾಳನಾರ್ಥವಾಗಿ ತಂದು ಸಿದ್ಧವಾಗಿರುವ ಉದಕವನ್ನು ನೋಡಿ ಪುರೋಹಿತನು ಈ ಮಂತ್ರವನ್ನು ಪಠಿಸುವನು. ಎಲೈ ಉದಕಾಭಿಮಾನಿದೇವತೆಗಳೇ ಈಗ ನಾನು ಈ ದೇಶದ ರಾಜನಿಗೆ ಪುರೋಹಿತನಾಗಿರುವೆನು. ಈ ರಾಷ್ಟ್ರವು ಧನಧಾನ್ಯಾದಿಸಂಪತ್ತುಗಳಿಂದ ಕೂಡಿ ಸುಖದಿಂದಿರುವುದಕ್ಕಾಗಿಯೂ ಅದರ ಶ್ರೇಯೋಭಿವೃದ್ಧಿಗಾಗಿಯೂ ಸತತವೂ ಪ್ರಯತ್ನಿಸುವೆನು. ಆದುದರಿಂದ ನನಗೆ ಈ ಕಾರ್ಯದಲ್ಲಿ ಸಹಾಯಭೂತವಾದ ಈ ಉದಕಗಳನ್ನು (ಉದಕಾಭಿಮಾನಿದೇವತೆಗಳಾದ ನಿಮ್ಮನ್ನು) ನೋಡುವೆನು.

ದಕ್ಷಿಣಂ ಪಾದಮವನೇನಿಜೇಽಸ್ಮಿನ್ರಾಷ್ಟ್ರ ಇಂದ್ರಿಯಂ ದಧಾಮಿ ।
ಸವ್ಯಂ ಪಾದಮವನೇನಿಜೇಽಸ್ಮಿನ್ರಾಷ್ಟ್ರಂ ಇಂದ್ರಿಯಂ ವರ್ಧಯಾಮಿ ।
ಪೂರ್ವಮನ್ಯಮಪರಮನ್ಯ ಪಾದಾವವನೇನಿಜೇ । ದೇವಾ ರಾಷ್ಟ್ರಸ್ಯ
ಗುಪ್ತ್ಯಾ ಅಭಯಸ್ಯಾವರುಧ್ಯೈ ॥

**ತಾಭಿರದ್ಭಿಃ ಪುರೋಹಿತಸ್ಯ ಪಾದಪ್ರಕ್ಷಾಲನಮಂತ್ರಮಾಹ—ಯದೀಯಂ ದಕ್ಷಿಣಂ ಪಾದಮವನೇನಿಜೇ ಪ್ರಕ್ಷಾಲಯೇ । ತೇನಾಸ್ಮಿನ್ರಾಷ್ಟ್ರೇ ಪ್ರಾಣಿನಾಮಿಂದ್ರಿಯಪಾಟವಹೇತುಂ ಧನಂ ಸಂಪಾದಯಾಮಿ । ವಾಮಪಾದಪ್ರಕ್ಷಾಲನೇನ ಚ ತದ್ವರ್ಧಯಾಮಿ । ಪೂರ್ವಂ ಪ್ರಥಮಮನ್ಯಂ ದಕ್ಷಿಣಂ ಪಾದಂ ಶೋಧಯಿತ್ವಾಽಪರಂ ಪಶ್ಚಾದನ್ಯಂ ವಾಮಂ ಪಾದಂ ಶೋಧಯಾಮಿ । ಹೇ ದೇವಾ ಏವಂಭೂತೌ ಪಾದೌ ಪ್ರಕ್ಷಾಲಯಾಮಿ । ತಚ್ಚ ರಾಷ್ಟ್ರಸ್ಯ ಗುಪ್ತ್ಯೈ ರಕ್ಷಾರ್ಥಮಭಯಸ್ಯ ಚೋರಾದಿಭಯರಾಹಿತ್ಯಸ್ಯಾವರುದ್ಧ್ಯೈ ಸಂಪಾದನಾಯ ಭವತಿ ॥**

ನೀರಿನಿಂದ ಪುರೋಹಿತನು ಪಾದಪ್ರಕ್ಷಾಳನಮಾಡುವಾಗ (ಕಾಲುಗಳನ್ನು ತೊಳದುಕೊಳ್ಳುವಾಗ) ಮೇಲೆ ಹೇಳಿದ ಮಂತ್ರವನ್ನು ಪಠಿಸುವನು. ಎಲೈ ಉದಕಗಳೇ, ನಾನು ಮೊದಲು ನನ್ನ ಬಲಗಾಲನ್ನು ತೊಳೆದುಕೊಳ್ಳುವೆನು. ಅದರಿಂದ ರಾಷ್ಟ್ರದ ಜನಗಳ ಮತ್ತು ಪ್ರಾಣಿಗಳ ಇಂದ್ರಿಯಾದಿಗಳ (ಶರೀರಾವಯವಗಳ) ಪಟುತ್ವವನ್ನೂ ಧನವನ್ನೂ ಒದಗಿಸಿಕೊಡುವೆನು. ಅನಂತರ ಎಡಗಾಲನ್ನು ತೊಳೆದುಕೊಳ್ಳುವೆನು. ಅದರಿಂದ ಪ್ರಾಣಿಗಳ ಇಂದ್ರಿಯಪಾಲನವನ್ನೂ ಧನವನ್ನೂ ಅಭಿವೃದ್ಧಿಪಡಿಸುವೆನು. ನಾನು ಈ ರೀತಿ ಕಾಲುಗಳನ್ನು ತೊಳೆದುಕೊಂಡದ್ದರಿಂದ ದೇವತೆಗಳು ಪ್ರೀತರಾಗಿ ಈ ರಾಷ್ಟ್ರವನ್ನು ಕಳ್ಳರ ಭಯವೇ ಮೊದಲಾದ ಬಾಧೆಗಳಿಂದ ರಕ್ಷಿಸಿ ಕಾಪಾಡಲಿ.

ಆಪಃ ಪಾದಾವನೇಜನೀರ್ದ್ವಿಷಂತಂ ನಿರ್ದಹಂತು ಮೇ ॥

**ಪಾದಪ್ರಕ್ಷಾಲನಾವಶಿಷ್ಟಾನಾಮಪಾಮಭಿಮಂತ್ರಣಮಾಹ—ಪಾದಾವನೇಜನೀಃ ಪಾದಶುದ್ಧಿಕರಣಭೂತಾ ಇಮಾ ಆಪೋ ಮೇ ಮದೀಯಂ ದ್ವಿಷಂತಂ ಶತ್ರುಂ ನಿಃಶೇಷೇಣ ದಹಂತು ॥**

ಮತ್ತು ನನ್ನ ಪಾದಪ್ರಕ್ಷಾಳನೆಗಾಗಿ ಉಪಯೋಗಿಸಿದ ಈ ಉದಕಗಳು ನನ್ನ ಶತ್ರುಗಳನ್ನು ನಿಶ್ಶೇಷವಾಗಿ ನಾಶಮಾಡಲಿ ಎಂದು ಈ ಮಂತ್ರಾಭಿಪ್ರಾಯವು.

*English Translation*

**(The importance of the office of a Purohita proved from three verses of a Vedic hymn.)**

To this power of the Purohita, a Rishi alludes in the following verses ; sa id raja pratijanyani &c. (4,50,7) i.e. the king defeated by his paowess and brav ery all his adversaires. By janyani are enemies and adversaries to be understood; he conquers them by means of his prowess and bravery. The other half of this verse is as follows Brihaspatim yah subhritam bibharti i. e., " who (the king) supports Brihaspati who is well to be supported" For Brihaspati is the Purohita of the gods and him follow the Purohitas of the human kings. The words " who supports Brihaspati who is well to be supported." Therefore mean, who (what king) supports the Purohita who is well to be supported. By the words (the last quarters of the verse above mentioned) valguyati vandate purvabhajam i. e. he honours and salutes him who has the precendence of enjoyment (i. e. the Purohita), he recommends his (the Purohith's) distinction.

In the first half of the following verse, sa it kshetti subhita okasi sve (4, 50, 8), the idea is expressed, that he (the Purohita) lives in his own premises ; the word okas means griha i. e. house, and the word sudhita is the same as suhita, i. e. well-disposed, pleased. The second half of the verse tasma ila pinvate visvadama, i. e. food grows for him the king who keeps a Purohita at all times. Ila here means anna, i. e. food, such one (such a king) is always possessed of essential juice for keeping the life again ; his subjects bow before him. The subjects (the tribes) form kingdoms ; kingdoms by themselves bow before such a king who is preceded (purva eti) by a Brahma Thus one calls him such a Brahmana a Purohita.

The first quarters of the the third verse, 4, 50, 9 is as follows apratito jayati sam dhanani, i. e. he (such a king) conquers realms without being opposed by enemies. By dhanani kingdoms are to be understood ; he conquers them without meeting any opposition. The second quartes of the verse is

as follows, prati janyani uta ya sajanya. By janyani are enemies and adversar ies to be understood; he conquers them without any opposition. In the third quarter avasyave yo varivah karoti, there is said, " Who what king not being possessed of any wealth renders service varivah to a very indigent (Purrohita)" In the last quarter of the verse brahmane raja tam avanti devah, i. e. " if the king is for the Brahman if he support him, then the gods protect him (the king)" he speaks about the Purohita.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಭಾಷ್ಯೇ ಚತ್ವಾರಿಂಶಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ನಲವತ್ತನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು
ಸಮಾಪ್ತವಾದುದು



## ಅಥ ಚತ್ವಾರಿಂಶಾಧ್ಯಾಯೇ ಪಂಚಮಃ ಖಂಡಃ

### ನಲವತ್ತನೆಯ ಅಧ್ಯಾಯದಲ್ಲಿ ಐದನೆಯ ಖಂಡವು



ರಾಜನು ತನ್ನ ಶತ್ರುಗಳನ್ನು ನಾಶಮಾಡುವುದಕ್ಕಾಗಿ ಉಪಯೋಗಿಸಬೇಕಾದ ಮಾಯಾವಿದ್ಯವು. ಅದನ್ನು ಯಾರು ಮೊದಲು ತಿಳಿಸಿದರು ಇತ್ಯಾದಿ



ಅಥಾತೋ ಬ್ರಹ್ಮಣಃ ಪರಿಮರೋ ಯೋ ಹ ವೈ ಬ್ರಹ್ಮಣಃ ಪರಿಮರಂ ವೇದ ಪರ್ಯೇಣಂ ದ್ವಿಷಂತೋ ಭ್ರಾತೃವ್ಯಾಃ ಪರಿ ಸಪತ್ನಾ-ಮ್ರಿಯಂತೇ ||

ಅಥೋಕ್ತಪುರೋಹಿತಸಹಿತಸ್ಯ ಶತ್ರುಕ್ಷಯಾರ್ಥಂ ಕಂಚಿತ್ಪ್ರಯೋಗಮಾಹ—ಅಥ ಪೌರೋಹಿತ್ಯವಿಧಾನಾನಂತರಂ ಯತಃ ಪುರೋಹಿತೇನ ಸಂಪಾದ್ಯಃ ಶತ್ರುಕ್ಷಯೋಽಪೇಕ್ಷಿತೋಽತಃ ಕಾರಣಾದ್ಬೃಹ್ಮಣಃ ಪರಿಮರ ಏತನ್ನಾಮಕಃ ಕರ್ಮವಿಶೇಷೋಽಭಿಧೀಯತ ಇತಿ ಶೇಷಃ । ಬ್ರಹ್ಮ-ಶಬ್ದೇನಾತ್ರ ವಾಯುರ್ವಿವಕ್ಷಿತಃ । ಅಯಂ ವೈ ಬ್ರಹ್ಮ ಯೋಽಯಂ ಪವತ ಇತಿ ವಕ್ಷ್ಯಮಾಣ-ತ್ವಾತ್ । ತಸ್ಯ ವಾಯೋಃ ಪರಿತೋ ವಿದ್ಯುದಾದೀನಾಂ ಮರಣಪ್ರಕಾರಃ ಪರಿಮರ ಇತ್ಯುಚ್ಯತೇ ।

**ತದ್ಭಾವನಾರೂಪಸ್ಯ ಕರ್ಮವಿಶೇಷಸ್ಯ ತದೇವ ನಾಮಧೇಯಮ್ । ಯಃ ಪುಮಾನ್ ಬ್ರಹ್ಮಣಃ ಪರಿಮರಂ ಯದಾ ಮನಸಾ ಭಾವಯೇತ್ । ಏನಂ ಪರಿತ ಏತಸ್ಯ ಪರಿತೋಽವ ಸ್ಥಿತಾಸುಸರ್ವಾಸು ದಿಕ್ಷು ದ್ವೇಷಂ ಕುರ್ವಂತಃ ಶತ್ರವೋ ಮ್ರಿಯಂತೇ । ಇದಾನೀಮೇನಂ ದ್ವಿಷಂತೋ ಜಾತ್ಯಾ ಶತ್ರವಃ ಸಪತ್ನಾಸ್ತೇಽಪಿ ಪರಿತೋ ಮ್ರಿಯಂತೇ । ತಸ್ಮಾದೇತದ್ವೇದನಂ ಸಂಪಾದನೀಯಮ್ ॥**

ಈಗ ಪುರೋಹಿತಸಹಿತನಾದ ರಾಜನ ಶತ್ರುಗಳನ್ನು ನಾಶಮಾಡಲು ಉಪಯೋಗಿಸಬೇಕಾದ ಒಂದು ಪ್ರಯೋಗ ಕ್ರಮವನ್ನು ತಿಳಿಸುವರು. ಪುರೋಹಿತನ ಕ್ರಮ ಮುಂತಾದುವುಗಳನ್ನು ತಿಳಿಸಿದನಂತರ ಶತ್ರುನಾಶವನ್ನು ಅಪೇಕ್ಷಿಸುವ ರಾಜನು ಒಂದು ಕರ್ಮವನ್ನು ಮಾಡಬೇಕಾಗಿರುವುದು. ಈ ಕರ್ಮಕ್ಕೆ **ಬ್ರಹ್ಮಣಃ ಪರಿಮರಃ** ಎಂದು ಹೆಸರು. ಇದನ್ನು ಹೇಳುವರು. ಬ್ರಹ್ಮಶಬ್ದಕ್ಕೆ ಇಲ್ಲಿ ವಾಯುವೆಂದರ್ಥವು. ಈ ವಿಷಯದಲ್ಲಿ **ಅಯಂ ವೈ ಬ್ರಹ್ಮ ಯೋಽಯಂ** ಪವತೆ ಎಂದು ಶ್ರುತಿವಾಕ್ಯವಿರುವುದು. ಈ ವಾಯುವಿನ ಸುತ್ತಲೂ ವಿದ್ಯುದಾದಿ ಶಕ್ತಿಗಳು ಇದ್ದು ಮರಣವನ್ನುಂಟುಮಾಡುವವು. ಇದಕ್ಕೆ ಪರಿಮರಃ (ಸುತ್ತಲೂ ಮರಣವನ್ನುಂಟುಮಾಡುವ ಶಕ್ತಿ) ಎಂದು ಹೆಸರು. ಈ ಅರ್ಥವನ್ನು ಸೂಚಿಸುವ ನಾನಾ ರೂಪಕರ್ಮ ವಿಶೇಷಗಳಿಗೂ ಇದೇ ಹೆಸರಿರುವುದು. ಯಾವ ಪುರುಷನು **ಬ್ರಹ್ಮಣಃ ಪರಿಮರಂ** (ಶತ್ರುನಾಶ) ಎಂಬ ಶಕ್ತಿಯನ್ನು ಮನಸ್ಸಿನಲ್ಲಿ ಭಾವನೆ ಮಾಡುವನೋ ಅವನ ಸುತ್ತಲೂ ಇರುವ ದಿಕ್ಕುಗಳಲ್ಲಿರುವ ದ್ವೇಷಿಸುವ ಶತ್ರುಗಳೆಲ್ಲರೂ ನಾಶವನ್ನೈದುವರು. ಇಲ್ಲಿ ಸಪತ್ನ ಎಂದರೆ ದ್ವೇಷಿಸುವ ಶತ್ರುಗಳು. ಎಲ್ಲಾ ವಿಧ ಶತ್ರುಗಳೂ ನಾಶವಾಗುವರು ಎಂದರ್ಥವು. ಇದನ್ನು ಚೆನ್ನಾಗಿ ತಿಳಿದಿರಬೇಕು.

## ಅಯಂ ವೈ ಬ್ರಹ್ಮ ಯೋಽಯಂ ಪವತೇ ಪಂಚ ದೇವತಾಃ ಪರಿಮ್ರಿಯಂತೇ ವಿದ್ಯುದ್ವೃಷ್ಟಿಶ್ಚಂದ್ರಮಾ ಆದಿತ್ಯೋಽಗ್ನಿಃ ।

**ವೇದನ ಸ್ವರೂಪಮಾಹ—ಯೋಽಯಂ ವಾಯುಃ ಪವತೇಽಂತರಿಕ್ಷೇ ಸಂಚರತಿ ಅಯಮೇವ ಬ್ರಹ್ಮಶಬ್ದೇನ ವಿವಕ್ಷಿತಃ। ಏತಾ ವಿದ್ಯುದಾದಯಃ ಪಂಚ ದೇವತಾ ವಾಯುಂ ಪರಿಮ್ರಿಯಂತೇ । ತಸ್ಯ ಪರಿತೋ ವಿನಾಶಂ ಗಚ್ಛಂತಿ । ತದೇತದನುಸಂಧೇಯರೂಪಮ್ ॥**

ಇದರ ಸ್ವರೂಪವನ್ನು ತಿಳಿಸುವರು ಅಂತರಿಕ್ಷದಲ್ಲಿ ಸದಾ ಬೀಸುತ್ತಿರುವ ವಾಯುವನ್ನೇ ಇಲ್ಲಿ ಬ್ರಹ್ಮಶಬ್ದವು ಸೂಚಿಸುವುದು. ಎಂದರೆ ಬ್ರಹ್ಮಣಃ ಪರಿಮರ (ಮಾರಕ ಶಕ್ತಿಗಳು) ಈ ಶಕ್ತಿಗಳು ಐದು ವಿಧವಾಗಿರುವುದು. ವಿದ್ಯುತ್, (ಸಿಡಿಲು,) ವೃಷ್ಟಿ (ಮಳೆಯು) ಚಂದ್ರ ಸೂರ್ಯ ಮತ್ತು ಅಗ್ನಿ ಎಂಬ ಐದು ವಿಧ ಮಾರಕ ಶಕ್ತಿಗಳೂ ವಾಯುವಿನ ಸುತ್ತಲೂ ವ್ಯಾಪಿಸಿರುವವು. ಈ ಶಕ್ತಿಗಳೇ ಶತ್ರುಗಳ ವಿನಾಶಕ್ಕೆ ಕಾರಣವಾಗಿರುವವು.

## ವಿದ್ಯುದ್ವೈ ವಿದ್ಯುತ್ಯ ವೃಷ್ಟಿಮನು ಪ್ರವಿಶತಿ ಸಾಽನ್ತರ್ಧೀಯತೇ ತಾಂ ನ ನಿರ್ಜಾನಂತಿ ॥

**ತತ್ರಾಽಽದೌ ವಿದ್ಯುತೋ ಮೃತಿಂ ಪ್ರತಿಪಾದಯತಿ—ಯೇಯಂ ವಿದ್ಯುದಸ್ತಿ ಸಾ ವಿದ್ಯುತ್ಯ ಪ್ರಕಾಶಂ ಕೃತ್ವಾ ಪಶ್ಚಾದ್ವೃಷ್ಟಿಮನುಪ್ರವಿಶತಿ । ಅತ ಏವ ಸಾಽಂತರ್ಧೀಯತೇಽಸಾಭಿರ್ನ ದೃಶ್ಯತೇ । ತಾಂ ವೃಷ್ಟೌ ಪ್ರವಿಷ್ಟಾಂ ವಿದ್ಯುತಂ ಕ್ವ ಗತಾ ಕುತ್ರಸ್ಥಿತಾ ಮೃತೇತಿ ಮನುಷ್ಯಾ ನಿಃಶೇಷೇಣ ನ ಜಾನಂತಿ ॥**

ಮೇಲೆ ಹೇಳಿದ ಐದುವಿಧ ಶಕ್ತಿಗಳಲ್ಲಿ ಮೊದಲನೆಯದಾದ ವಿದ್ಯುತ್ಸ್ವರೂಪವನ್ನು ವಿವರಿಸುವರು. ಈ ವಿದ್ಯುಚ್ಛಕ್ತಿಯು ಅತ್ಯಂತ ಪ್ರಕಾಶಮಾನವಾಗಿ ಬೆಳಗಿ ಅನಂತರ ಮಳೆಯನ್ನು ಸುರಿಸುತ್ತಿರುವ ಮೇಘಗಳಲ್ಲಿ ಸೇರಿಹೋಗುವುದು. ಅನಂತರ ಅದು ನಮ್ಮ ಕಣ್ಣಿಗೆ ಕಾಣಿಸುವುದಿಲ್ಲ. ಈ ವಿದ್ಯುಚ್ಛಕ್ತಿಯಿಂದ (ಸಿಡಿಲು) ಮೃತರಾದ ಮನುಷ್ಯರು ಆ ವಿದ್ಯುತ್ ಎಲ್ಲಿಂದ ಬಂದಿತು ಮತ್ತು ಎಲ್ಲಿಗೆ ಹೋಯಿತು ಎಂಬ ವಿಷಯವನ್ನು ಸ್ವಲ್ಪವೂ ತಿಳಿಯುವುದಿಲ್ಲ.

**ಯದಾ ವೈ ಮ್ರಿಯತೇಽಥಾಂತರ್ಧೀಯತೇಽಥೈನಂ ನ ನಿರ್ಜಾನಂತಿ ॥**

**ತತ್ರ ದೃಷ್ಟಾಂತಮಾಹ–ಲೋಕೇ ಕಶ್ಚಿತ್ಪುರುಷೋ ಯಸ್ಮಿನ್ ಕ್ಷಣೇ ಮ್ರಿಯತೇ ತಸ್ಮಿನ್ನೇವ ಕ್ಷಣೇಽನ್ಯೈರ್ನ ದೃಶ್ಯತೇ । ತತೋ ಜನಾ ವಿಚಾರ್ಯಾಪಿ ಕ್ವಗತಃ ಕುತ್ರಾವಸ್ಥಿತ ಇತ್ಯೇನಂ ಪುರುಷಂ ಮೃತಂ ನ ನಿರ್ಜಾನಂತಿ । ಯದ್ಯಪಿ ಕುಣಪಂ ಪಶ್ಯಂತಿ ತಥಾಪಿ ಜೀವಾತ್ಮಾನಂ ನ ಜಾನಂತ್ಯೇವ ತಥೈವ ವಿದ್ಯುದ್ವಿನಾಶ ಇತಿ ದ್ರಷ್ಟವ್ಯಮ್ ॥**

ಇದಕ್ಕೆ ಒಂದು ದೃಷ್ಟಾಂತವನ್ನು ತಿಳಿಸುವರು. ವಿದ್ಯುಚ್ಛಕ್ತಿಯು ಯಾವ ಕ್ಷಣದಲ್ಲಿ ಪುರುಷನನ್ನು ಕೊಲ್ಲುವುದೋ ಆ ಕ್ಷಣದಲ್ಲಿಯೇ ಅಂತರ್ಧಾನವಾಗುವುದು. ಅದನ್ನು ಯಾರೂ ನೋಡಲಾರರು. ವೃಷ್ಟಿ (ಮಳೆ) ಇಲ್ಲದ ಸಮಯದಲ್ಲಿ ಈ ವಿದ್ಯುಚ್ಛಕ್ತಿಯು ವಿದ್ಯುತ್ತಿನಲ್ಲಿಯೇ ಸೇರಿಹೋಗಿ ಅದೃಶ್ಯವಾಗುವುದು. ಈ ವಿದ್ಯುಚ್ಛಕ್ತಿಯು ಎಲ್ಲಿಂದ ಬಂದಿತು, ಎಲ್ಲಿಗೆ ಹೋಯಿತು ಎಂಬುದನ್ನು ಯಾರೂ ತಿಳಿಯಲಾರರು. ಆದರೆ ಈ ಶಕ್ತಿಯಿಂದ ಮೃತನಾದ ಪುರುಷನು ಹಿಂದಿನ ಕ್ಷಣದಲ್ಲಿ ಜೀವಂತನಾಗಿದ್ದನು ಈಗ ಮೃತನಾಗಿರುವನು ಎಂಬುವನ್ನು ಮಾತ್ರ ಮನುಷ್ಯರು ತಿಳಿಯಬಲ್ಲರು. ಏಕೆಂದರೆ ಮೃತನಾದವನ ಶರೀರವು ಅಲ್ಲಿಯೇ ಎಲ್ಲರಿಗೂ ಕಾಣುತ್ತಿರುವುದು.

**ನ ಬ್ರೂಯಾದ್ವಿದ್ಯುತೋ ಮರಣೇ ದ್ವಿಷನ್ಮೇ ಮ್ರಿಯಂತಾಂ ಸೋಽನ್ತ-ರ್ಧೀಯತಾಂ ತಂ ಮಾ ನಿರ್ಜ್ಞಾಸಿಷುರಿತಿ ॥**

**ಯಥೋಕ್ತಧ್ಯಾನವತೋ ಜಪ್ಯಮಂತ್ರಮಾಹ—ವಿದ್ಯುತೋ ಮರಣೇ ಸತಿ ಉಪಾಸಕೋ ದ್ವಿಷದಿತ್ಯಾದಿಕಂ ಮಂತ್ರಂ ಬ್ರೂಯಾತ್ । ತಸ್ಯಾಯಮರ್ಥಃ—ಇಯಂ ವಿದ್ಯುದಿವ ಮದೀಯಃ ಶತ್ರುರ್ಮ್ರಿಯತಾಂ ಸ ಪುನಃ ಕೇನಾಪಿ ನ ದೃಶ್ಯತಾಮ್। ಅತೋ ವಿಚಾರ್ಯಾಪಿ ಕ್ವಗತಃ ಕ್ವಾಸ್ತ ಇತಿ ತಂ ಶತ್ರುಂ ತದೀಯಾ ಬಂಧವೋ ನಿಃ ಶೇಷೇಣ ಮಾ ಜಾನಂತ್ವಿತಿ ॥**

ಈ ಶಕ್ತಿಯನ್ನು ಧ್ಯಾನಮಾಡುವಾಗ ಜಪಿಸುವ ಮಂತ್ರವನ್ನು ತಿಳಿಸುವರು. ವಿದ್ಯುಚ್ಛಕ್ತಿಯಿಂದ ಶತ್ರುವಿನ ಮರಣವು ಸಂಭವಿಸಿದಾಗ ಉಪಾಸಕನು **ದ್ವಿಷನ್ಮೇ ಮ್ರಿಯಂತಾಂ** ಎಂದು ಮೊದಲಾಗುವ ಮಂತ್ರವನ್ನು ಪಠಿಸಬೇಕು. ಇದರ ಅರ್ಥವು-ನನ್ನ ಶತ್ರುವಾದವನು ಈ ವಿದ್ಯುತ್ತಿನಂತೆ ಮೃತನಾಗಲಿ ಎಂದರೆ ಯಾರಿಗೂ ಗೋಚರವಾಗದಿರಲಿ. ಎಂದರೆ ಈ ಶತ್ರುವು ಯಾವ ಶಕ್ತಿಯಿಂದ ಮೃತನಾದನು. ಆ ಶಕ್ತಿಯು ಎಲ್ಲಿದ್ದಿತು ? ಈಗ ಎಲ್ಲಿಗೆ ಹೋಯಿತು? ಮೊದಲಾದ ವಿಷಯಗಳನ್ನು ಆ ಶತ್ರುವಿನ ಬಂಧುಗಳು ಎಷ್ಟು ವಿಚಾರ ಮಾಡಿದರೂ ತಿಳಿದುಕೊಳ್ಳಲು ಅಸಮರ್ಥರಾಗಿರುವರು. ಇದು ಮಂತ್ರದ ಅರ್ಥವು.

**ಕ್ಷಿಪ್ರಂ ಹೈವೈನಂ ನ ನಿರ್ಜಾನಂತಿ**

ಜಪಫಲಂ ದರ್ಶಯತಿ—ಶೀಘ್ರಮೇವ ಮೃತಮೇನಂ ಶತ್ರುಂ ತದೀಯಾ ಬಂಧವೋ ನೈವ ಜಾನಂತಿ ॥

ತಕ್ಷಣವೇ ಮೃತನಾದ ಶತ್ರುವನ್ನು ಅವನ ಬಂಧುಗಳು ಯಾವ ವಿಷಯವನ್ನೂ ತಿಳಿಯಲಸಮರ್ಥರಾಗಿರುವರು.

**ವೃಷ್ಟಿರ್ವೈ ವೃಷ್ಟ್ವಾ ಚಂದ್ರಮಸಮನುಪ್ರವಿಶತಿ ಸಾಽನ್ತರ್ಧೀಯತೇ ತಾಂ ನ ನಿರ್ಜಾನಂತಿ ಯದಾ ವೈ ಮ್ರಿಯತೇಽಥಾನ್ತರ್ಧೀಯತೇಽಥೈನಂ ನ ನಿರ್ಜಾನಂತಿ ಸ ಬ್ರೂಯಾದ್ವೃಷ್ಟೇರ್ಮರಣೇ ದ್ವಿಷನ್ಮೇ ಮ್ರಿಯತಾಂ ಸೋಽನ್ತರ್ಧೀಯತಾಂ ತಂ ಮಾ ನಿರ್ಜ್ಞಾಸಿಷುರಿತಿ ಕ್ಷಿಪ್ರಂ ಹೈವೈನಂ ನ ನಿರ್ಜಾನಂತಿ ।**

ವಿದ್ಯುತ ಇವ ವೃಷ್ಟೇರ್ವಿನಾಶಂ ದರ್ಶಯತಿ—ಯೇಯಂ ವೃಷ್ಟಿರಸ್ತಿ ಸೇಯಂ ವೃಷ್ಟ್ವಾ ಭೂಮೌ ಜಲಂ ಪಾತಯಿತ್ವಾ ಸ್ವಯಮಾಪ್ಯಮಂಡಲರೂಪಂ ಚಂದ್ರಮಸಮನುಪ್ರವಿಶತಿ । ಅನ್ಯತ್ಪೂರ್ವವದ್ಯೋಜ್ಯಮ್ ॥

ವೃಷ್ಟಿಯು ಮಾಡುವ ಶತ್ರುವಿನಾಶಕ್ರಮವನ್ನು ತಿಳಿಸುವರು. ವೃಷ್ಟಿಯು ಭೂಮಿಯ ಮೇಲೆ ಮಳೆಯನ್ನು ಸುರಿಸಿ ಅನಂತರ ಜಲರೂಪವಾದ ಚಂದ್ರಮಂಡಲವನ್ನು ಪ್ರವೇಶಿಸಿ ಅಲ್ಲಿ ಲೀನವಾಗುವುದು. ಇದನ್ನು ಯಾರೂ ನೋಡಲಾರರು. ಹಾಗೆಯೇ ಮೃತನಾಗುವವನು ಹೇಗೆ ಮೃತನಾಗುವನು ಎಂಬುದನ್ನೂ ಯಾರೂ ತಿಳಿಯಲಾರರು. ಇದೇರೀತಿಯಲ್ಲಿ ನನ್ನ ಶತ್ರುವೂ ಮೃತನಾಗಲಿ ಅದನ್ನು ಯಾರೂ ತಿಳಿಯದಿರಲಿ ಎಂದು ರಾಜನು ಹೇಳುವನು.

**ಚಂದ್ರಮಾ ವಾ ಅಮಾವಾಸ್ಯಾಯಾಮಾದಿತ್ಯಮನುಪ್ರವಿಶತಿ ಸೋಽನ್ತರ್ಧೀಯತೇ ತಂ ನ ನಿರ್ಜಾನಂತಿ ಯದಾ ವೈ ಮ್ರಿಯತೇಽಥಾನ್ತರ್ಧೀಯತೇಽಥೈನಂ ನ ನಿರ್ಜಾನಂತಿ ಸ ಬ್ರೂಯಾಚ್ಚಂದ್ರಮಸೋ ಮರಣೇ ದ್ವಿಷನ್ಮೇ ಮ್ರಿಯತಾಂ ಸೋಽನ್ತರ್ಧೀಯತಾಂ ತಂ ಮಾ ನಿರ್ಜ್ಞಾಸಿಷುರಿತಿ ಕ್ಷಿಪ್ರಂ ಹೈವೈನಂ ನ ನಿರ್ಜಾನಂತಿ ॥**

ಚಂದ್ರಮಸೋ ವಿನಾಶಂ ದರ್ಶಯತಿ—ಅಯಂ ಚಂದ್ರಮಾ ಅಮಾವಾಸ್ಯಾಯಾಂ ತಿಥೌ ಸಾಕಲ್ಯೇನಾದಿತ್ಯಮನುಪ್ರವಿಶತಿ । ಅನ್ಯತ್ ಪೂರ್ವವತ್ ॥

ಚಂದ್ರನು ಮಾಡುವ ಶತ್ರುನಾಶವನ್ನು ವಿವರಿಸುವರು. ಚಂದ್ರನು ಅಮಾವಾಸ್ಯೆಯ ದಿನದಲ್ಲಿ ಆದಿತ್ಯಮಂಡಲವನ್ನು ಪ್ರವೇಶಿಸಿ ಅಲ್ಲಿಯೇ ಅಂತರ್ಧಾನನಾಗಿರುವನು ಇದನ್ನು ಯಾರೂ ತಿಳಿಯಲಾರರು. ಮೃತನಾದ ಪುರುಷನು ಸಹ ಅದೃಶ್ಯನಾಗಿರುವುದನ್ನು ಯಾರೂ ತಿಳಿಯಲಾರರು. ರಾಜನು ಹೀಗೆ ಹೇಳುವನು–ಇದರಂತೆಯೇ ಚಂದ್ರನ ಶಕ್ತಿಯಿಂದ ನನ್ನ ಶತ್ರುವು ಮೃತನಾಗಿ ಕೂಡಲೇ ಅದೃಶ್ಯನಾಗಲಿ. ಈ ವಿಷಯವನ್ನು ಯಾರೂ ತಿಳಿಯದಂತಾಗಲಿ.

ಆದಿತ್ಯೋ ವಾ ಅಸ್ತಂ ಯನ್ನಗ್ನಿಮನುಪ್ರವಿಶತಿ ಸೋಽನ್ತರ್ಧೀಯತೇ-
ತಂ ನ ನಿರ್ಜಾನಂತಿ ಯದಾ ವೈ ಮ್ರಿಯತೇಽಥಾನ್ತರ್ಧೀಯತೇಽಥೈನಂ
ನ ನಿರ್ಜಾನಂತಿ ಸ ಬ್ರೂಯಾದಾದಿತ್ಯಸ್ಯ ಮರಣೇ ದ್ವಿಷನ್ಮೇ ಮ್ರಿಯ-
ತಾಂ ಸೋಽನ್ತರ್ಧೀಯತಾಂ ತಂ ಮಾ ನಿರ್ಜ್ಞಾಸಿಷುರಿತಿ ಕ್ಷಿಪ್ರಂ
ಹೈವೈನಂ ನಿರ್ಜಾನಂತಿ ||

ಆದಿತ್ಯಸ್ಯ ವಿನಾಶಂ ದರ್ಶಯತಿ—ಆದಿತ್ಯೋ ಯದಾಸ್ತಮೇತಿ ತದಾಯಮಗ್ನಿಮನುಪ್ರ-
ವಿಶತಿ | ತದೇತತ್ತೈತ್ತರೀಯೈಃ ಸಮಾಮ್ನಾತಮ್— " ಅಗ್ನಿಂ ವಾ ಆದಿತ್ಯಃ ಸಾಯಂ ಪ್ರವಿಶತಿ
ತಸ್ಮಾದಗ್ನಿರ್ದೂರಾನ್ನಕ್ತಂ ದದೃಶೇ ಉಭೇ ಹಿ ತೇಜಸೀ ಸಂಪದ್ಯೇತೇ " ಇತಿ | ಅನ್ಯತ್ಪೂರ್ವವತ್||

ಆದಿತ್ಯನು ಮಾಡುವ ಶತ್ರುವಿನಾಶವನ್ನು ವಿವರಿಸುವರು. ಆದಿತ್ಯನು ಸಾಯಂಕಾಲದಲ್ಲಿ ಮುಳುಗುವಾಗ ಅಗ್ನಿ ಯನ್ನು ಪ್ರವೇಶಿಸುವನು. ಇದನ್ನು ತೈತ್ತಿರೀಯ ಬ್ರಾಹ್ಮಣದಲ್ಲಿ ಹೀಗೆ ಹೇಳಿದೆ—ಅಗ್ನಿಂ ವಾ ಆದಿತ್ಯಃ ಸಾಯಂ ಪ್ರವಿಶತಿ ತಸ್ಮಾದಗ್ನಿರ್ದೂರಾನ್ನಕ್ತಂ ದದೃಶೇ | ಉಭೇ ಹಿ ತೇಜಸೀ ಸಂಪದ್ಯೇತೇ || ಎಂದು ಸೂರ್ಯನು ಮುಳುಗಿದ ನಂತರ ಯಾರಿಗೂ ಕಾಣದಂತೆ ಅದೃಶ್ಯನಾಗಿರುವನು. ರಾಜನು ಹೀಗೆ ಹೇಳುವನು—ಸೂರ್ಯನು ಯಾರಿಗೂ ಕಾಣದಂತೆ ಅದೃಶ್ಯನಾಗಿರುವ ಹಾಗೆಯೇ ನನ್ನ ಶತ್ರುವೂ ಸಹ ಆದಿತ್ಯನು ಅದೃಶ್ಯನಾದಂತೆ ಮೃತನಾಗಿ ಯಾರಿಗೂ ಕಾಣದಂತೆ ಅದೃಶ್ಯ ನಾಗಲಿ ತಕ್ಷಣವೇ ಯಾರೂ ಈ ಶತ್ರುವು ಹೇಗೆ ಮೃತನಾದನು ಎಲ್ಲಿಗೆ ಹೋದನು ಎಂಬ ವಿಷಯವನ್ನೂ ತಿಳಿಯದಂತಾಗಲಿ.

ಅಗ್ನಿರ್ವಾ ಉದ್ವಾನ್ವಾಯುಮನುಪ್ರವಿಶತಿ ಸ್ತೋಽನ್ತರ್ಧೀಯತೇ ತಂ
ನ ನಿರ್ಜಾನಂತಿ ಯದಾ ವೈ ಮ್ರಿಯತೇಽಥಾಂತರ್ಧೀಯತೇಽ ಥೈನಂ
ನ ನಿರ್ಜಾನಂತಿ ಸ ಬ್ರೂಯಾದಗ್ನೇರ್ಮರಣೇ ದ್ವಿಷನ್ಮೇಮ್ರಿಯತಾಂ
ಸ್ತೋಽನ್ತರ್ಧೀಯತಾಂ ತಂ ಮಾ ನಿರ್ಜ್ಞಾಸಿಷುರಿತಿ ಕ್ಷಿಪ್ರಂ ಹೈವೈನಂ
ನ ನಿರ್ಜಾನಂತಿ ||

ಅಗ್ನೇರ್ವಿನಾಶಂ ದರ್ಶಯತಿ—ಉದ್ವಾನಗ್ನಿರುದ್ವಾನಮುಪಶಮಂ ಪ್ರಾಪ್ನುವನ್ನಗ್ನಿ-
ರ್ವಾಯುಮನುಪ್ರವಿಶತಿ ವಾಯುಬಾಹುಲ್ಯೇ ದೀಪವಿನಾಶದರ್ಶನಾತ್ | ಅನ್ಯತ್ಪೂರ್ವವತ್ ||

ಅಗ್ನಿಯು ಮಾಡುವ ಶತ್ರುವಿನಾಶ ಕ್ರಮವನ್ನು ವಿವರಿಸುವರು. ಅಗ್ನಿಯು ಆರಿಹೋಗುವಾಗ ವಾಯುವನ್ನು ಪ್ರವೇಶಿಸಿ ಅಲ್ಲಿಯೇ ಅಂತರ್ಧಾನನಾಗುವನು. ಅದೃಶ್ಯನಾಗಿ ಯಾರಿಗೂ ಕಾಣಿಸುವುದಿಲ್ಲ ಇದು ಯಾರಿಗೂ ತಿಳಿಯುವುದಿಲ್ಲ ಇದರಂತೆಯೇ ಮೃತನಾದವನೂ ವಾಯುವಿನಲ್ಲಿ ಅದೃಶ್ಯನಾಗುವನು. ರಾಜನು ಹೀಗೆ ಹೇಳುವನು.– ಮೇಲೆ ಹೇಳಿದಂತೆಯೇ ನನ್ನ ಶತ್ರುವೂ ಮೃತನಾಗಿ ವಾಯುವಿನಲ್ಲಿ ಲೀನನಾಗಲಿ ಎಂದರೆ ಅದೃಶ್ಯನಾಗಿರಲಿ ಇದನ್ನು ಯಾರೂ ಅರಿಯದಂತಾಗಿರಲಿ ಎಂದು

ತಾ ವಾ ಏತಾ ದೇವತಾ ಅತ ಏವ ಪುನರ್ಜಾಯಂತೇ ||

ವಾಯೋಃ ಪರಿತೋ ಮ್ರಿಯಮಾಣಾನಾಂ ದೇವತಾನಾಂ ಪುನರ್ವಾಯೋರೇವಜನ್ಮ ದರ್ಶಯತಿ—ವಾಯೋರ್ಜಗತ್ಕಾರಣಭೂತಸೂತ್ರಾತ್ಮರೂಪತ್ವಾಜ್ಜಗದೇಕದೇಶಾನಾಂ ವಿದ್ಯುದಾ- ದೀನಾಂ ಜನ್ಮವಿನಾಶೌ ವಾಯ್ವಧೀನೌ । ಪೂರ್ವಂ ವಿದ್ಯುದಾದೀನಾಮಗ್ನ್ಯಂತಾನಾಂ ಕ್ರಮೇಣ ವಿನಾಶೋ ದರ್ಶಿತಃ ॥

ಹಿಂದೆ ಹೇಳಿದ ವಾಯು ಐದು ದೇವತೆಗಳು ಹೇಗೆ ವಿನಾಶಕಾರಿಗಳೋ ಅದರಂತೆ ಆ ದೇವತೆಗಳು ಪುನಃ ಉತ್ಪನ್ನ ರಾಗುತ್ತಾರೆ. ವಾಯುವು ಎಲ್ಲಾ ಕಡೆಯೂ ವ್ಯಾಪಿಸಿರುವುದರಿಂದ ಈ ದೇವತೆಗಳೆಲ್ಲರೂ ವಾಯುವಿನ ಅಧೀನರು.

ವಾಯೋರಗ್ನಿರ್ಜಾಯತೇ ಪ್ರಾಣಾದ್ಧಿ ಬಲಾನ್ಮಥ್ಯಮಾನೋಽಧಿ- ಜಾಯತೇ ತಂ ದೃಷ್ಟ್ವಾ ಬ್ರೂಯಾದಗ್ನಿರ್ಜಾಯತಾಂ ಮಾ ಮೇ ದ್ವಿಷನ್ಜನ್ಯತ ಏವ ಪರಾಙ್‌ಪ್ರಜಿಘ್ಯತ್ವಿತ್ಯತೋ ಹೈವ ಪರಾಙ್ ಪ್ರಜಿಘ್ಯತಿ ॥

ಇದಾನೀಮಗ್ನ್ಯಾದೀನಾಂ ವಿದ್ಯುದಂತಾನಾಂ ಕ್ರಮೇಣೋತ್ಪತ್ತಿಂ ವಿವಕ್ಷುರಗ್ನೇರುತ್ಪತ್ತಿಂ ದರ್ಶಯತಿ—ಯೋಽಯಮಗ್ನಿಃ ಸೋಽಯಂ ವಾಯೋರ್ಜಾಯತೇ । ಕಥಮೇತದಿತಿ ತದುಚ್ಯತೇ । ಪ್ರಾಣಾದ್ಬಲಾತ್ಪ್ರಾಣವಾಯುಸಂಬಂಧಿಶಕ್ತಿವಶಾನ್ಮಥ್ಯಮಾನೋಽಯಮಗ್ನಿರಧಿಕತ್ವೇನ ಜಾಯತೇ । ತಂ ಜಾಯಮಾನಮಗ್ನಿಂ ದೃಷ್ಟ್ವಾ ಸೋಽಯಮಗ್ನ್ಯಾದಿಜನ್ಮಧ್ಯಾತಾಽಗ್ನಿರಿತ್ಯಾದಿಕಂ ಮಂತ್ರಂ ಜಪೇತ್ । ಅಯಮಗ್ನಿರ್ವಾಯೋಃ ಸಕಾಶಾತ್ಸುಖೇನ ಜಾಯತಾಮ್ । ಮೇ ದ್ವಿಷನ್ಮದೀಯಃ ಶತ್ರುರ್ಮಾ ಜನಿ ಮೋತ್ಪದ್ಯತಾಮ್ । ಅತ ಏವ ಮತ್ತಃ ಪರಾಙ್‌ಪ್ರಜಿಘ್ಯತು ವಿಮುಖೋ[illegible]ಭೂತ್ವಾ ಪ್ರಕರ್ಷೇಣ ಗಚ್ಛತು । ಇತ್ಯೇತಸ್ಮಿನ್ಮಂತ್ರೇ ಜಪಿತೇ ಸತ್ಯತೋ ಜಪಿತುಃ ಸಕಾಶಾಚ್ಛತ್ರುರ್ವಿಮುಖೋ ಭೂತ್ವಾ ದೂರೇ ಗಚ್ಛತಿ ॥

ಈಗ ಅಗ್ನಿಯಿಂದ ವಿದ್ಯುತ್‌ವರೆವಿಗೂ ಕ್ರಮವಾಗಿ ಉತ್ಪತ್ತಿ[illegible]ಕ್ರಮವನ್ನು ವಿವರಿಸಲು ಆರಂಭಿಸಿ ಮೊದಲು ಅಗ್ನಿಯ ಉತ್ಪತ್ತಿಕ್ರಮವನ್ನು ತಿಳಿಸುವರು. ಅಗ್ನಿಯು ವಾಯುವಿನಿಂದ ಉತ್ಪನ್ನವಾಗುವುದು. ಹೇಗೆಂದರೆ—ವಾಯು ವೆಂದರೆ ಪ್ರಾಣವಾಯುವು. ಈವಿಧ ಪ್ರಾಣವಾಯುವಿನ ಸ್ವರೂಪವಾದ ಬಲದಿಂದ (ಶಕ್ತಿ) ಕಡೆಯುವುದರಿಂದಲೇ ಅಗ್ನಿಯು ಉತ್ಪನ್ನವಾಗುವುದು. ಈ ಅಗ್ನಿಯು ವಾಯುವಿನಿಂದ ಉತ್ಪತ್ತಿಯಾಗಿರುವುದು. ಆದರೆ ನನ್ನ ಶತ್ರುವು ಇದರಂತೆ ಪುನಃ ಉತ್ಪನ್ನನಾಗಬಾರದು. ಇದಲ್ಲದೆ ಈ ಶತ್ರುವು ನನ್ನಿಂದ ಹಿಂದಕ್ಕೆ ಸರಿದು ದೂರ ಹೊರಟು ಹೋಗಬೇಕು ಎಂಬರ್ಥವಿರುವ ಈ ಮಂತ್ರವನ್ನು ಪಠಿಸಿದಲ್ಲಿ ಶತ್ರುವು ರಾಜನಿಂದ ವಿಮುಖನಾಗಿ ದೂರ ಹೊರಟು ಹೋಗುವನು.

ಅಗ್ನೇರ್ವಾ ಆದಿತ್ಯೋ ಜಾಯತೇ ತಂದೃಷ್ಟ್ವಾ ಬ್ರೂಯಾದಾದಿತ್ಯೋ ಜಾಯತಾಂ ಮಾ ಮೇ ದ್ವಿಷನ್ಜನ್ಯತ ಏವ ಪರಾಙ್ ಪ್ರಜಿಘ್ಯತ್ವಿತ್ಯ- ತೋ ಹೈವ ಪರಾಙ್‌ಪ್ರಜಿಘ್ಯತಿ ॥

**ಆದಿತ್ಯಸ್ಯೋತ್ಪತ್ತಿಂ ದರ್ಶಯತಿ–ರಾತ್ರಾವಗ್ನಿಂಪ್ರವಿಷ್ಟ ಆದಿತ್ಯಃ ಪರೇದ್ಯುರಗ್ನೇರ್ಜಾಯತೇ ಅತ ಏವಾಹನ್ಯಗ್ನಿಸ್ತೇಜೋರಹಿತಃ ಸೂರ್ಯೋಽಧಿಕತೇಜಾ ಭಾಸತೇ । ಅನ್ಯತ್ಪೂರ್ವವತ್ ॥**

ಆದಿತ್ಯನ ಉತ್ಪತ್ತಿಕ್ರಮವನ್ನು ತಿಳಿಸುವರು. ಅಗ್ನಿಯಿಂದಲೇ ಆದಿತ್ಯನು ಉತ್ಪನ್ನನಾಗುವನು. ರಾತ್ರಿಕಾಲದಲ್ಲಿ ಆದಿತ್ಯನು ಅಗ್ನಿಯಲ್ಲಿ ಸೇರಿಹೋಗಿ ಅಂತರ್ಧಾನನಾಗುವನೆಂದು ಹಿಂದೆ ಹೇಳಿದೆಯಷ್ಟೆ. ಪುನಃ ಹಗಲಿನಲ್ಲಿ ಆದಿತ್ಯನು ಅಗ್ನಿಯಿಂದ ಬೇರೆಯಾಗಿ ಉತ್ಪನ್ನನಾಗುವನು. ಅಗ್ನಿಯಲ್ಲೇ ಅಂತರ್ಧಾನನಾಗಿದ್ದ ಆದಿತ್ಯನು ಬೇರೆಯಾಗಿ ಅಗ್ನಿಯು ಮಾತ್ರ ಉಳಿಯುವುದರಿಂದ ಹಗಲಿನಲ್ಲಿ ಅಗ್ನಿಯ ತೇಜಸ್ಸು ಅಧಿಕವಾಗಿರುವುದಿಲ್ಲ. ರಾಜನು ಹೀಗೆ ಹೇಳುವನು.—ಅಗ್ನಿಯಿಂದ ಆದಿತ್ಯನು ಪುನಃ ಉತ್ಪನ್ನನಾಗುವಂತೆ ನನ್ನ ಶತ್ರುವು ಮತ್ತೆ ಉತ್ಪನ್ನನಾಗದಿರಲಿ. ಮತ್ತು ನನ್ನಿಂದ ವಿಮುಖನಾಗಿ (ಬೇರೆ ದಿಕ್ಕಿಗೆ) ದೂರ ಹೊರಟುಹೋಗಲಿ ಎಂದು ಹೇಳಬೇಕು. ಎಂಬ ಮಂತ್ರಪಠನದಿಂದ ರಾಜನ ಶತ್ರುವು ವಿಮುಖನಾಗಿ ದೂರ ಹೊರಟುಹೋಗುವನು.

ಆದಿತ್ಯಾದ್ವೈ ಚಂದ್ರಮಾ ಜಾಯತೇ ತಂ ದೃಷ್ಟ್ವಾ ಬ್ರೂಯಾಚ್ಚಂದ್ರಮಾ
ಜಾಯತಾಂ ಮಾ ಮೇ ದ್ವಿಷಞ್ಜನ್ಯತ ಏವ ಪರಾಙ್‌ಪ್ರಜಿಘ್ಯತ್ವಿತ್ಯ-
ತೋ ಹೈವ ಪರಾಙ್‌ಪ್ರಜಿಘ್ಯತಿ ॥

**ಚಂದ್ರಮಸ ಉತ್ಪತ್ತಿಂ ದರ್ಶಯತಿ—ತಿಥಾವಮಾವಾಸ್ಯಾಯಾಮಾದಿತ್ಯೇ ಪ್ರವಿಷ್ಟ-ಶ್ಚಂದ್ರಮಾಃ ಶುಕ್ಲಪಕ್ಷಪ್ರತಿಪದ್ಯಾದಿತ್ಯಾಜ್ಜಾಯತೇ । ಅನ್ಯತ್ಪೂರ್ವವತ್ ॥**

ಚಂದ್ರನ ಉತ್ಪತ್ತಿಕ್ರಮವನ್ನು ತಿಳಿಸುವರು. ಅಮಾವಾಸ್ಯೆಯಲ್ಲಿ ಸೂರ್ಯನಲ್ಲಿ ಸೇರಿ ಅಂತರ್ಧಾನನಾದ ಚಂದ್ರನು ಶುಕ್ಲಪಕ್ಷದ ಪಾಡ್ಯದಲ್ಲಿ ಪುನಃ ಉತ್ಪನ್ನನಾಗುವನು. ಈ ಚಂದ್ರನನ್ನು ನೋಡಿದ ರಾಜನು ಹೀಗೆ ಹೇಳಬೇಕು–ಈ ಚಂದ್ರನು ಆದಿತ್ಯನಿಂದ ಪುನಃ ಉತ್ಪನ್ನನಾದಂತೆ ನನ್ನ ಶತ್ರುವು ಪುನಃ ಉತ್ಪನ್ನನಾಗಕೂಡದು ಮತ್ತು ನನ್ನಿಂದ ವಿಮುಖನಾಗಿ ದೂರ ಹೊರಟುಹೋಗಬೇಕು ಎಂಬ ಅರ್ಥವಿರುವ ಮಂತ್ರವನ್ನು ಪಠಿಸಿದ ಕೂಡಲೇ ಆ ಶತ್ರುವು ರಾಜನಿಂದ ವಿಮುಖನಾಗಿ ದೂರ ಹೊರಟು ಹೋಗುವನು.

ಚಂದ್ರಮಸೋ ವೈ ವೃಷ್ಟಿರ್ಜಾಯತೇ ತಾಂ ದೃಷ್ಟ್ವಾ ಬ್ರೂಯಾದ್ವೃ-
ಷ್ಟಿರ್ಜಾಯತಾಂ ಮಾ ಮೇ ದ್ವಿಷಞ್ಜನ್ಯತ ಏವ ಪರಾಙ್‌ಪ್ರಜಿಘ್ಯತ್ವಿ-
ತ್ಯತೋ ಹೈವ ಪರಾಙ್‌ಪ್ರಜಿಘ್ಯತಿ ॥

**ವೃಷ್ಟೇರುತ್ಪತ್ತಿಂ ದರ್ಶಯತಿ—ಜಲಮಯೇ ಚಂದ್ರಮಂಡಲೇ ಪ್ರವಿಷ್ಟಾ ವೃಷ್ಟಿಃ ಕಾಲಾಂತರೇ ಚಂದ್ರಾಜ್ಜಾಯತೇ । ಅನ್ಯತ್ಪೂರ್ವವತ್ ॥**

ವೃಷ್ಟಿಯು (ಮಳೆಯು) ಉತ್ಪತ್ತಿಯನ್ನು ತಿಳಿಸುವರು. ಜಲಮಯವಾದ ಚಂದ್ರಮಂಡಲವಲ್ಲಿ ಲೀನವಾಗಿ ಸೇರಿಹೋದ ವೃಷ್ಟಿಯು ಕೆಲವು ಕಾಲದನಂತರ ಪುನಃ ಚಂದ್ರನಿಂದ ಉತ್ಪನ್ನವಾಗುವುದು. ಆದರೆ ನನ್ನ ಶತ್ರುವು ಮಾತ್ರ ಇದರಂತೆ ಮತ್ತೆ ಉತ್ಪನ್ನನಾಗಕೂಡದು. ಅವನು ನನ್ನಿಂದ ವಿಮುಖನಾಗಿ ದೂರ ಹೊರಟುಹೋಗಬೇಕು ಎಂಬ ಅರ್ಥವಿರುವ ಮಂತ್ರವನ್ನು ರಾಜನು ಉಚ್ಚರಿಸಿದ ಕೂಡಲೇ ಆ ಶತ್ರುವು ರಾಜನಿಂದ ವಿಮುಖನಾಗಿ ದೂರ ಸರಿದು ಹೊರಟುಹೋಗುವನು.

## ವೃಷ್ಟೇರ್ವೈ ವಿದ್ಯುಜ್ಜಾಯತೇ ತಾಂ ದೃಷ್ಟ್ವಾ ಬ್ರೂಯಾದ್ವಿದ್ಯುಜ್ಜಾಯತಾಂ ಮಾ ಮೇ ದ್ವಿಷನ್ಜನ್ಯತ ಏವ ಪರಾಙ್ಪ್ರಜಿಷ್ಯತ್ವಿತ್ಯತೋ ಹೈವ ಪರಾಙ್ಪ್ರಜಿಷ್ಯತಿ ।

**ವಿದ್ಯುದುತ್ಪತ್ತಿಂ ದರ್ಶಯತಿ–ವೃಷ್ಟಾ ಪ್ರವಿಷ್ಟಾ ವಿದ್ಯುತ್ಪುನರಪಿ ಕದಾಚಿತ್ಪ್ರಸಕ್ತಾಯಾ ವೃಷ್ಟೇರ್ಜಾಯತೇ ಅನ್ಯತ್ಪೂರ್ವವತ್ ।**

ವಿದ್ಯುದುತ್ಪತ್ತಿಯನ್ನು ತಿಳಿಸುವರು—ವೃಷ್ಟಿಯಿಂದ (ಮಳೆಯಿಂದ) ವಿದ್ಯುತ್ ಉತ್ಪತ್ತಿಯಾಗುವುದು. ಅದನ್ನು ನೋಡಿ ರಾಜನು ಹೇಳುವನು. ಈ ವಿದ್ಯುತ್ ಉತ್ಪತ್ತಿಯಾದಂತೆ ನನ್ನ ಶತ್ರುವು ಮತ್ತೆ ಉತ್ಪನ್ನನಾಗಕೂಡದು. ಅವನು ನನ್ನಿಂದ ವಿಮುಖನಾಗಿ ದೂರ ಹೊರಟುಹೋಗಬೇಕು ಎಂಬರ್ಥವಿರುವ ಮಂತ್ರವನ್ನು ಉಚ್ಚರಿಸಿದ ಕೂಡಲೇ ಆ ಶತ್ರುವು ದೂರ ಸರಿದು ವಿಮುಖನಾಗಿ ಹೊರಟುಹೋಗುವನು.

## ಸ ಏಷ ಬ್ರಹ್ಮಣಃ ಪರಿಮರಃ

**ಉಕ್ತಮರ್ಥಮುಪಸಂಹರತಿ—ಸ ಏಷ ಧ್ಯಾನರೂಪೋ ಜಪರೂಪಶ್ಚ ವಾಯುಸಂಬಂಧೀ ಪರಿಮರನಾಮಕಃ ಕರ್ಮವಿಶೇಷ ಉಕ್ತ ಇತ್ಯರ್ಥಃ ॥**

ಇದುವರೆಗೂ ಹೇಳಿದ ಧ್ಯಾನ ಮತ್ತು ಜಪರೂಪವಾದ ವಾಯುಸಂಬಂಧವಾದ ಕರ್ಮವು ಬ್ರಹ್ಮಣಃ ಪರಿಮರಃ ಎಂದು ಹೇಳಲ್ಪಡುವುದು.

## ತಮೇತಂ ಬ್ರಹ್ಮಣಃ ಪರಿಮರಂ ಮೈತ್ರೇಯಃ ಕೌಷಾರವಃಸುತ್ವನೇ ಕೈರಿಶಯೇ ಭಾರ್ಗಾಯಣಾಯ ರಾಜ್ಞೇ ಪ್ರೋವಾಚ ತಂ ಹ ಪಂಚ ರಾಜಾನಃ ಪರಿಮಮ್ರುಸ್ತತಃ ಸುತ್ವಾ ಮಹಜ್ಜಗಾಮ॥

**ತಮೇತಂ ಕರ್ಮವಿಶೇಷಮುದಾಹರಣಮುಖೇನ ಪ್ರಶಂಸತಿ—ಉಕ್ತಂ ಕರ್ಮವಿಶೇಷಂ ಕುಷಾರವಪುತ್ರೋ ಮೈತ್ರೇಯನಾಮಕೋ ಮಹರ್ಷಿಃ ಸುತ್ವನಾಮ್ನೇ ರಾಜ್ಞೇ ಪ್ರೋವಾಚ ಕೀದೃಶಾಯ ಸುತ್ವನೇ । ಕಿರಿಶಸ್ಯಾಪತ್ಯಂ ಕೈರಿಶಿಸ್ತಸ್ಮೈ ಕೈರಿಶಯೇ ಭರ್ಗಸ್ಯ ಗೋತ್ರಾಪತ್ಯಂ ಭಾರ್ಗಾಯಣಸ್ತಸ್ಮೈ । ಸುತ್ವನಾಮಕಂ ರಾಜಾನಂ ಪರಿತಃ ಸರ್ವದಿಕ್ಷು ವರ್ತಮಾನಾಃ ಪಂಚಸಂಖ್ಯಾಕಾ ದ್ವೇಷಿಣೋ ರಾಜಾನೋ ಮಮ್ರುರ್ಮೃತಾಃ । ತತಃ ಸುತ್ವಾ ರಾಜಾ ಮಹತ್ಪ್ರೌಢ್ಯಂ (ಢಂ) ನಿಃಸಪತ್ನಂ ಪದಂ ಜಗಾಮ ॥**

ಮೇಲೆ ಹೇಳಿದ ಕರ್ಮವಿಶೇಷವನ್ನು ಉದಾಹರಣೆಪೂರ್ವಕವಾಗಿ ಹೇಳುವರು. ಮೇಲೆ ಹೇಳಿದ ಬ್ರಹ್ಮಣಃ **ಪರಿಮರ** ಎಂಬ ಶತ್ರುನಾಶಕವಾದ ಕರ್ಮವಿಶೇಷಕ್ರಮವನ್ನು ಕೂಪಾರವಪುತ್ರನಾದ ಮೈತ್ರೇಯನೆಂಬ ಮಹರ್ಷಿಯು ಸುತ್ವನೆಂಬ ರಾಜನಿಗೆ ಹೇಳಿದನು. ಈ ಸುತ್ವನೆಂಬ ರಾಜನು ಕಿರಿಶ ಎಂಬುವನ ಪುತ್ರನಾದ್ದರಿಂದ ಕೈರಿಶಿಯೆಂದೂ, ಭರ್ಗ ಗೋತ್ರದವನಾದ್ದರಿಂದ ಭಾರ್ಗಾಯಣನೆಂದೂ ಕರೆಯಲ್ಪಡುವನು. ಈ ಮಂತ್ರೋಪದೇಶದಿಂದ ಈ ಸುತ್ವನಾಮಕರಾಜನ

ಶತ್ರುಗಳೆಲ್ಲರೂ ಎಲ್ಲಾ ಕಡೆಯಲ್ಲಿಯೂ ಮೃತರಾದರು. ಆದರಿಂದ ಈ ಸುತ್ವರಾಜನು ಶತ್ರುರಹಿತನಾಗಿ ಮಹಪ್ಪದವಿ (ಗಣ್ಯತೆ) ಯನ್ನು ಪಡೆದನು.

ತಸ್ಯ ವ್ರತಂ ನ ದ್ವಿಷತಃ ಪೂರ್ವ ಉಪವಿಶೇದ್ಯದಿ ತಿಷ್ಠಂತಂ ಮನ್ಯೇತ ತಿಷ್ಠೇತ್ಯೈವ ನ ದ್ವಿಷತಃ ಪೂರ್ವಃ ಸಂವಿಶೇದ್ಯದ್ಯಾಸೀನಂ ಮನ್ಯೇ- ತಾಽಽಸೀತ್ಯೈವ ನ ದ್ವಿಷತಃ ಪೂರ್ವಃ ಪ್ರಸ್ವಪ್ಯಾದ್ಯದಿ ಜಾಗ್ರತಂ ಮನ್ಯೇತ ಜಾಗ್ರಿಯಾದೇವ ॥

ಉಕ್ತಂ ಕರ್ಮವಿಶೇಷಮನುಷ್ಠಾತುರ್ವ್ರತವಿಶೇಷಂ ವಿಧತ್ತೇ—ತಸ್ಯಾನುಷ್ಠಾತುರೇತದ್ವ್ರತ- ಮುಚ್ಯತೇ । ಏತದೀಯೋ ದ್ವಿಷನ್ಯದೋಪವಿಶತಿ ತತಃ ಪ್ರಾಕ್‌ಸ್ವಯಂ ನೋಪವಿಶೇತ್ । ಕಿಂತು ಚಾರಮುಖೇನ (ಣ) ತದೀಯಂ ವೃತ್ತಾಂತ್ತಂ ವಿಚಾರಯೇತ್। ಯದಿ ದ್ವಿಷಂತಂ ತಿಷ್ಠಂತಂ ಮನ್ಯೇತ ತದಾನೀಂ ಸ್ವಯಮಪಿ ತಿಷ್ಠೇತ್ಯೈವ । ತಥಾ ಯದಾ ದ್ವಿಷಞ್‌ಶಯನಂ ಕರೋತಿ ತತಃ ಪ್ರಾಕ್ಸ್ವಯಂ ನ ಸಂವಿಶೇತ್ । ಶಯನಂ ನ ಕುರ್ಯಾತ್ । ಯದಿ ದ್ವಿಷಂತಮುಪವಿಷ್ಟಂ ಮನ್ಯೇತ ತದಾನೀಂ ಸ್ವಯಮುಪವಿಶೇದೇವ ತಥಾ ದ್ವಿಷನ್ಯದಾ ನಿದ್ರಾಂ ಕರೋತಿ ತತಃ ಪ್ರಾಕ್ಸ್ವಯಂ ನ ಪ್ರಸ್ವಪ್ಯಾತ್ । ಕಿಂತು ಯದಿ ದ್ವಿಷಂತಂ ಜಾಗ್ರತಂ ಮನ್ಯೇತ ತದಾನೀಂ ಸ್ವಯಮಪಿ ಜಾಗ್ರಿಯಾ- ದೇವೇತಿ ॥

ಈ ಕರ್ಮವಿಶೇಷವನ್ನು ಆಚರಿಸುವ ಕ್ರಮವನ್ನು ವಿವರಿಸುವರು. ಶತ್ರುನಾಶವಾಗಬೇಕೆಂದು ಬಯಸುವ ರಾಜನು ಈ ರೀತಿ ಮಾಡಬೇಕು—ಈ ಕರ್ಮವನ್ನು ಆಚರಿಸುತ್ತಿರುವಾಗ ರಾಜನು ತನ್ನ ಶತ್ರುವು ಕೂಡುವುದಕ್ಕಿಂತ ಮೊದಲು ಕುಳಿತು ಕೊಳ್ಳಕೂಡದು. (ಈ ವಿಷಯವನ್ನೆಲ್ಲಾ ಚಾರರ ಮುಖಾಂತರ ತಿಳಿದುಕೊಳ್ಳಬೇಕು.) ತನ್ನ ಶತ್ರುವು ನಿಂತಿರುವಾಗ ತಾನೂ ನಿಂತಿರಬೇಕು. ತನ್ನ ಶತ್ರುವು ಮಲಗಿಕೊಂಡಾಗ ತಾನೂ ಮಲಗಿಕೊಳ್ಳಬೇಕು. ಅದಕ್ಕೆ ಮುಂಚೆ ಮಲಗಿಕೊಳ್ಳಕೂಡದು. ಶತ್ರುವು ಕುಳಿತಿದ್ದಾಗ ತಾನೂ ಕುಳಿತಿರಬೇಕು. ತನ್ನ ಶತ್ರುವು ನಿದ್ರೆಯನ್ನು ಮಾಡುವಾಗ ತಾನೂ ನಿದ್ರೆಯನ್ನು ಮಾಡ ಬೇಕು. ಶತ್ರುವು ನಿದ್ರೆಮಾಡುವುದಕ್ಕಿಂತ ಮೊದಲು ತಾನು ನಿದ್ರೆಯನ್ನು ಮಾಡಬಾರದು. ಶತ್ರುವು ನಿದ್ರೆಮಾಡದೆ ಎಚ್ಚರ ವಾಗಿದ್ದಲ್ಲಿ ತಾನೂ ಎಚ್ಚರವಾಗಿರಬೇಕು.

ಅಪಿ ಹ ಯದ್ಯಸ್ಮಾಶ್ಮಮೂರ್ಧಾ ದ್ವಿಷನ್ಭವತಿ ಕ್ಷಿಪ್ರಂ ಹೈವೈನಂ ಸ್ತೃಣುತೇ ಸ್ತೃಣುತೇ ॥

ಏವಂ ವ್ರತಮಾಚರತಃ ಫಲಂ ದರ್ಶಯತಿ—ಅಸ್ಯ ರಾಜ್ಞೋಽನುಷ್ಠಾತುರ್ದ್ವಿಷಞಶತ್ರುರ್ಯದ್ಯಶ್ಮ- ಮೂರ್ಧಾ ಪಾಷಾಣಸದೃಶಶಿರಸ್ಕೋ ಭವತಿ । ಅತಿಪ್ರಬಲ ಇತ್ಯರ್ಥಃ । ತಥಾಪ್ಯಯಂ ಕರ್ಮವಿಶೇಷಃ ಶೀಘ್ರಮೇವೈನಂ ಶತ್ರುಂ ಸ್ತೃಣುತೇ ಹಿನಸ್ತಿ । ಅಭ್ಯಾಸೋಽಧ್ಯಾಯ ಸಮಾಪ್ತ್ಯರ್ಥಃ ॥

ಮೇಲೆ ಹೇಳಿದಂತೆ ವ್ರತವನ್ನು ಆಚರಿಸುವ ರಾಜನಿಗೆ ಉಂಟಾಗುವ ಫಲವನ್ನು ತಿಳಿಸುವರು. ಈ ಕರ್ಮವನ್ನು ಆಚರಿಸುವ ರಾಜನ ಶತ್ರುವು ತನ್ನ ಶಿರಸ್ಸನ್ನು ಪಾಷಾಣಸದೃಶವಾದ (ಕಲ್ಲಿನಿಂದ ನಿರ್ಮಿಸಿದ) ಶಿರಸ್ತ್ರಾಣವನ್ನು ಧರಿಸಿದ್ದರೂ ಈ ಕರ್ಮವಿಶೇಷಫಲದಿಂದ ಅವನು ಶೀಘ್ರವಾಗಿ ಮೃತಿಯನ್ನೈದುವನು,

———

*English Translation*

**The three divine Purohitas. Who is fit for the office of a Purohita. By repeating of what mantra and performance of what ceremony the King has to engage him.)**

The Brahman who knows the following three divine Purohitas, as well as the three appointers to this office, should be nominated to such a post. Agni is one of these three Purohitas ; his appointer is the earth ; the other Purohita is Vayu, his appointer is the air; the third Purohita is Aditya, his appointer is the sky. Who knows this is fit for the office of a Purohita ; but he who does not know it, is unworthy of holding such an office.

That king who appoints a Brahmana, who has this knowledge to be his Purohita and protector of his kingdom, succeeds in making another king his friend, and conquers his enemy. The king who does so obtains by means of (his own) royal dignity that (for another), and by means of (his) bravery that for another (i e. he defeats his). The subjects of such a king obey him unanimously and undivided.

**(Now follows the mantra for appointing the Purohita)**

" Bhur, Bhuuah, Suar, Om ! I am that one, thou art this one ; thou art this one, I am that one ; I am heaven, thou art the earth ; I am the Saman, thou art the Rik. Let us both find here our livelihood (support). Save us from great danger (just as was done) in former time ; thou art (my) body, protect mine. All ye many herbs, of a hundred kinds, over which king Soma rules, grant me (sitting) on this seat, uninterrupted happiness.

All ye herbs ruled by Soma the king, which are spread over the earth, grant me (sitting) on this seat, uninterrupted happiness. I eause to sit in the kingdom this godeess of fortune. Thence I look upon the divine waters (with which the king is washing the feet of the Purohita)"

" By washing his (the Purohitr's) right foot I introduce wealth obtained by sharpness of senses in to the kingdom ; by washing his left foot, I make that sharpness of senses increase. I wash, O gods! the first (right) and second (left) foot for protecting my empire and obtaining safety for it. May the water which served for washing the feet (of the Pnrohita) destrhay my enemy!"

**(Spell to be spoken and applied by King to kill his enemies. Who first eommunicatee it.)**

Now follows the ceremony called "dying rounb the Brahma" (brahmanah parimara). All enemies and foes of him who knows this ceremony, die round about him. This Brahma is he who sweeps (in the air, i.e. Vayu). Round him five deities are dyieg, viz. lightning, rain, moon sun, fire.

Lightning is a observed by lightning when it does not rain, and it can;equently hidden (to our eyes). They do not perceive such a flash of lightning when it dies, and consequently disappears. When they do not see him (the enemy), he (king) shall say, " With the death of lightning my enemy shall die, and disappear ! May they never get aware of him !" Instantly then they do not perceive him the enemy, for he will be killed.

The rain when fallen is absorbed by the moon which disappears ; they do not perceive it, when it dies and disappears. Then when they do not perceive him (the enmy), then he (the king) should say, " With the death of the rain my enemy shall die and disappear. May they never get aware of him !" Instantly then they do not perceive him (the enemy), for he will be killed.

The moon at the time of the new moon, is absorbed by the sun, &c. When they do not perceive him (the enmy) then the king shall say, " With the death of the moon, my enemy shall die, and disappear. May they never get aware of him!" Instantly then they not perceive him (the enemy), for he will be killed.

The sun, when setting, is absorbed by Agni, (fire) &c. Tne king then shall say, " With the death of the sun my enemy shall die, and disappear ! may they never get aware of him ! Instantly then they do not perceive him (the enemy), for he will be killed.

fire when extingyishing, is absorbed by Vayu, &c. The king then shall say, " with the death of the fire my enemy shall die, and disappear. May they never get aware of him! " Instantly then they do not perceive him (the enemy) for he will be killed.

The sun, when setting, is abserved by Agni (fire) &c. The king then shall say, " with the death of the sun my enemy shall die, and disappear ! may they never get aware of him !" Instantly then they do not perceive him (the enemy), for he will be killed.

The fire when extinguishing, is abserved by Vaya, &c. The king then shall say, " with the death of the fire my enemy shall die and disappear. May they never get aware of him !" Instantly then they do not perceive him (the enemy) for he will be killed.

These (five) deities are then born again. The fire is born out of Vayu (wind). For it is pyoduced by friction practised with great force, and restraining the breath. After having seen the fire new born, the king shall say, " May Agni be born, but may my enemy not be born (again); mey he go far off!" Then he goes far off.

Out of fire the sun is born. Having seen him, the king shall say, " May the sun be born, but may my enemy not be born ; may he go far off! " Then he goes far off.

From the sun the moon is born. Having seen it, the king shall say. " May the moon be born, but not my enemy, may he be far off!" Then he goes far off

From the moon the rain is born. Having seen it, the king shall say, " May the rain be born, but not my enemy ; may he be far off." Then he goes far off.

From rain lightning is born. Having seen it, the king shall say, " May lightning be born, but not my enemy ; may he be far off." Then he goes far, off.

This is the Brahmanah parimarah (dying around the Brahma). Maitreya the son of Kusharu, told it to Satvan the son of Ksrisi, a King of the Bharga Gotra. Five kings who were his enemies died round him ; thence he attained th greatness.

He who uses this spell' has to observe the following rules ; He never shall sit before his enemy has taken his seat. When he belive him to be standing. Then he shell stand. He shall not lie down, before also his enemy has done so. When he thinks him sitting, then he shall sit himself. He never shall sleep before his enemy has fallen a sleep. When he believes him to be awake, then he shall also be awake, In this way he puts his enemy down, even if he wears a stone-helmet is well armed.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಚತ್ವಾರಿಂಶಾಧ್ಯಾಯಸ್ಯ ಪಂಚಮಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಚತ್ವಾರಿಂಶೋಽಧ್ಯಾಯಃ ಸಮಾಪ್ತಃ

ಇಲ್ಲಿಗೆ ಐತರೇಯಬ್ರಾಹ್ಮಣದ ನಲವತ್ತನೆಯ ಅಧ್ಯಾಯದಲ್ಲಿ ಐದನೆಯ ಖಂಡವು
ಸಮಾಪ್ತವಾದುದು

ನಲವತ್ತನೆಯ ಅಧ್ಯಾಯವು ಸಮಾಪ್ತವಾದುದು

ಸಮಾಪ್ತಿಮಗಮದಿದಂ ಸಾಯಣಾಚಾರ್ಯಭಾಷ್ಯಸಮೇತಮೈತರೇಯಬ್ರಾಹ್ಮಣಮ್ ॥

ಇಲ್ಲಿಗೆ ಐತರೇಯಬ್ರಾಹ್ಮಣವೂ ಸಹ ಸಮಾಪ್ತವಾದುದು

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತುತೇ ॥

ಶುಭಂ ಭೂಯಾದಧ್ಯೇತುರಧ್ಯಾಪಕಸ್ಯ ಚ

॥ ಮಂಗಳಂ ॥



# ಅಥೈತರೇಯಬ್ರಾಹ್ಮಣಖಂಡಾಂತರ್ಗತಪ್ರತೀಕಾನಾಂ ವರ್ಣಾನುಕ್ರಮಣಿಕಾ ॥

## ಐತರೇಯಬ್ರಾಹ್ಮಣದಲ್ಲಿರುವ ವಾಕ್ಯಗಳ ವರ್ಣಾನುಕ್ರಮಣಿಕಾ

---

| ಪ್ರತೀಕಾನಿ | ಅಧ್ಯಾಯ ಖಂಡ |
|---|---|
| ಅಗನ್ಮ ಮಹಾ ನಮಸಾ | 24 – 1 |
| ಅಗ್ನ ಇಂದ್ರಶ್ಚ | 10 – –5 |
| ಅಗ್ನಯ ಏವ | 5 – 4 |
| ಅಗ್ನಯೇ ಪ್ರಣೀಯಮಾ | 5 – 2 |
| ಅಗ್ನಯೇ ಮಥ್ಯಮಾನಾಯಾ | 3 – 5 |
| ಅಗ್ನಯೇ ವಾ ಏಷಃ | 25 – 3 |
| ಅಗ್ನಿನಾಽಗ್ನಿಃ ಸಮಿ | 3 – 5 |
| ಅಗ್ನಿನಾ ಹಾಸ್ಯ | 25 – 3 |
| ಅಗ್ನಿಮಾತಿಥ್ಯೇ | 14 – 2 |
| ಅಗ್ನಿರ್ದೇವೇದ್ಧಃ | 10 – 2 |
| ಅಗ್ನಿರ್ನೇತಾ ತ್ವಂ | 20 – 1 |
| ಅಗ್ನಿರ್ನೇತಾ ತ್ವಂ | 20 – 3 |
| ಅಗ್ನಿರ್ಮನ್ವಿದ್ಧಃ | 10 – 2 |
| ಅಗ್ನಿರ್ಮುಖಂ ಪ್ರಥಮಃ | 1 – 4 |
| ಅಗ್ನಿರ್ವಾ ಉದ್ವಾನ್ | 40 – 5 |
| ಅಗ್ನಿರ್ವಾ ಏಷಃ | 40 – 2 |
| ಅಗ್ನಿರ್ವಾ ಏಷಃ | 40 – 1 |
| ಅಗ್ನಿರ್ವೃತ್ರಾಣಿ | 1 – 4 |
| ಅಗ್ನಿರ್ವೃತ್ರಾಣಿ ಜಂಘ | 4 – 8 |
| ಅಗ್ನಿರ್ವೈ ದೇವತಾ | 20 – 1 |
| ಅಗ್ನಿರ್ವೈ ದೇವಾನಾಂ | 1 – 1 |
| ಅಗ್ನಿರ್ವೈ ದೇವಾನಾಂ | 5 – 2 |
| ಅಗ್ನಿರ್ವೈ ದೇವಾನಾಂ | 12 – 3 |
| ಅಗ್ನಿರ್ವೈ ಪರಿಕ್ಷಿತ್ | 30 – 6 |
| ಅಗ್ನಿರ್ವೈ ಸರ್ವಾಃ | 1 – 1 |

| ಪ್ರತೀಕಾನಿ | ಅಧ್ಯಾಯ ಖಂಡ |
|---|---|
| ಅಗ್ನಿರ್ಹೋತಾ | 22 – 3 |
| ಅಗ್ನಿರ್ಹೋತಾ ನಃ | 6 – 5 |
| ಅಗ್ನಿಶ್ಚ ಹ ವೈ | 1 – 4 |
| ಅಗ್ನಿಷ್ಟೋಮ ಏತತ್ | 17 – 6 |
| ಅಗ್ನಿಷೋಮಂಪ್ರೈ | 15 – 5 |
| ಅಗ್ನಿಷ್ಟೋಮೇ ಹೋತಾ | 28 – 7 |
| ಅಗ್ನಿಷ್ಟ್ವಾ ಗಾಯತ್ರ್ಯಾ | 37 – 2 |
| ಅಗ್ನಿಂ ಘರ್ಮಂ ಸುರುಚಂ | 4 – 4 |
| ಅಗ್ನಿಂ ದೂತಂ | 20 – 3 |
| ಅಗ್ನಿಂ ನರಃ | 21 – 5 |
| ಅಗ್ನಿಂ ಮಂಥಂತಿ | 3 – 4 |
| ಅಗ್ನಿಂ ಜಯತಿ | 2 – 1 |
| ಅಗ್ನಿ ವೋ ದೇವಮ್ | 23 – 3 |
| ಅಗ್ನಿಃ ಪ್ರತ್ನೇನ | 1 – 4 |
| ಅಗ್ನಿಃ ಸುಷಮಿತ್ | 10 – 2 |
| ಅಗ್ನೀನ್ವಾ ಏಷಃ | 40 – 1 |
| ಅಗ್ನೀಷೋಮಾಭ್ಯಾಂ | 5 – 4 |
| ಅಗ್ನಿಷೋಮಾ ಹವಿಷಃ | 6–10 |
| ಅಗ್ನೇ ಜುಷಸ್ವ | 5 – 4 |
| ಅಗ್ನೇ ಪತ್ನೀರಿಹ | 28 – 2 |
| ಅಗ್ನೇ ಮರುದ್ಭಿಃ | 13–14 |
| ಅಗ್ನೇ ಮೃಳ ಮಹಾನ್ | 23 – 4 |
| ಅಗ್ನೇರೇವ ಸಾಯುಜ್ಯಮ್ | 30 – 6 |
| ಅಗ್ನೇರ್ವೈವಾನಾಮ್ | 7 – 2 |
| ಅಗ್ನೇರ್ವಾ ಆದಿತ್ಯಃ | 40 – 5 |

## ಆ

ಇ

## ಈ



## ಉ

## ಊ

## ಋ



## ಏ

## ಐ



## ಓ



## ಔ



## ಕ

## ಕ್ಷಿ



## ಕ್ಷ



## ಖಾ



## ಗ



## ಗಾ



## ಗೃ



## ಗೋ



## ಗೌ

## ಗ್ರ



## ಘ್ನ



## ಚ



## ಚಿ



## ಛ

## ತ್ಯ

## ತ್ರ

## ದ



## ದಿ



## ದೀ



## ದು



## ದೂ



## ದೇ

## ನಿ



## ನೂ



## ಪ

## ಪಿ



## ಪೀ



## ಪು

## ಪ್ರ

## ಬ

## ಭ



## ಭೂ



## ಮ

## ಮಾ



## ಮಿ



## ಮು



## ಯ

## ರ

# ವ

## ಶ

**ಸಮಾಪ್ತೇಯಮೈತರೇಯ ಬ್ರಾಹ್ಮಣ ಖಂಡಾಂತರ್ಗತ ಪ್ರತೀಕಾನಾಂ**
**ವರ್ಣಾನು ಕ್ರಮಣಿಕಾ**

**ಇಲ್ಲಿಗೆ ಐತರೇಯ ಬ್ರಾಹ್ಮಣದಲ್ಲಿರುವ ವಾಕ್ಯಗಳ ವರ್ಣಾನು ಕ್ರಮಣಿಕೆಯು ಸಮಾಪ್ತವು**



॥ ಶ್ರೀಃ ॥

॥ ತತ್ಸದ್ಬ್ರಹ್ಮಣೇ ನಮಃ ॥

---

## ಬಹ್ವೃಚಾಖ್ಯ (ಋಗ್ವೇದ) ಬ್ರಾಹ್ಮಣಾಂತರ್ಗತಂ

# ಐತರೇಯಾರಣ್ಯಕಂ

### ಶ್ರೀಮತ್ಸಾಯಣಾಚಾರ್ಯವಿರಚಿತಭಾಷ್ಯಸಮೇತಂ

### ಋಗ್ವೇದಬ್ರಾಹ್ಮಣಾಂತರ್ಗವಾದ ಐತರೇಯಾರಣ್ಯಕವು



## ಪ್ರಥಮಾರಣ್ಯಕೇ ಪ್ರಥಮೋಽಧ್ಯಾಯಃ ತತ್ರ ಪ್ರಥಮಃ ಖಂಡಃ

**ಮೊದಲನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು.**

---

**ಅಥ ಶಾಂತಿಃ ॥ ಹರಿಃ ಓಂ**

ಭೂಮಿಮುಪಸ್ಪೃಶೇದಗ್ನ ಇಳಾ ನಮ ಇಳಾ ನಮ ಋಷಿಭ್ಯೋ ಮಂತ್ರಕೃದ್ಭ್ಯೋ ಮಂತ್ರಪತಿಭ್ಯೋ ನಮೋ ವೋ ಅಸ್ತು ದೇವೇಭ್ಯಃ ಶಿವಾನಃ ಶಂತಮಾ ಭವ ಸಮೃಳೀಕಾ ಸರಸ್ವತಿ ಮಾ ತೇ ವ್ಯೋಮ ಸಂದೃಶಿ ॥ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾ ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ । ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿರ್ವ್ಯಶೇಮ ದೇವಹಿತಂ ಯದಾಯುಃ ॥ ಶಂ ನ ಇಂದ್ರಾಗ್ನೀ ಭವತಾಮವೋಭಿಃ ಶಂ ನ ಇಂದ್ರಾವರುಣಾ ರಾತಹವ್ಯಾ । ಶಮಿಂದ್ರಾಸೋಮಾ ಸುವಿತಾಯ ಶಂ ಯೋಃ ಶಂ ನ ಇಂದ್ರಾಪೂಷಣಾ ವಾಜಸಾತೌ ॥ ಸ್ತುಷೇ ಜನಂ ಸುವ್ರತಂ ನವ್ಯಸೀಭಿರ್ಗೀರ್ಭಿರ್ಮಿತ್ರಾವರುಣಾ ಸುಮ್ನಯತಾಂ । ತ ಆಗಮಂತು ತ ಇಹ ಶ್ರುವಂತು ಸುಕ್ಷತ್ರಾಸೋ ವರುಣೋ ಮಿತ್ರೋ ಅಗ್ನಿಃ ॥ ಕಯಾ ನಶ್ಚಿತ್ರ ಆಭುವದೂತೀ ಸದಾವೃಧಃ ಸಖಾ । ಕಯಾ ಶಚಿಷ್ಠಯಾ ವೃತಾ ॥ ಕಸ್ತ್ವಾ ಸತ್ಯೋ ಮದಾನಾಂ ಮಂಹಿಷ್ಠೋ ಮತ್ಸದಂಧಸಃ । ದೃಳ್ಹಾಚಿದಾರುಜೇ

**ವಸು ॥ ಅಭೀ ಷು ಣಃ ಸಖೀನಾಮವಿತಾ ಜರಿತ್ೃಣಾಂ । ಶತಂ ಭವಾಸ್ಯೂತಿಭಿಃ ॥ ಸ್ಯೋನಾ ಪೃಥಿವಿ ಭವಾನೃಕ್ಷರಾ ನಿವೇಶನೀ । ಯಚ್ಛಾ ನಃ ಶರ್ಮ ಸಪ್ರಥಃ ॥**

**॥ ಓಂ ಶಾಂತಿಃ ಶಾಂತಿಃ ಶಾಂತಿಃ ॥**

---

ಶಾಂತಿಮಂತ್ರದ ಮುಖ್ಯಾರ್ಥವು – ಭೂಮಿಯನ್ನು ಸ್ಪರ್ಶಮಾಡುತ್ತಾ (ಕೈಯಿಂದ ಮುಟ್ಟುತ್ತಾ) ಈರೀತಿ ಹೇಳಬೇಕು. ಎಲೈ ಅಗ್ನಿಯೇ, ಎಲೈ ಪೃಥಿವಿಯೇ ನಿಮಗೆ ನಮಸ್ಕಾರವು ; ಮಂತ್ರದ್ರಷ್ಟೃಗಳೂ ಮಂತ್ರಗಳಿಗೆ ಅಧಿಪತಿಗಳೂ ಆದ ಋಷಿಗಳಿಗೆ ನಮಸ್ಕಾರವು ; ಎಲೈ ದೇವತೆಗಳೇ ನಿಮಗೆ ನಮಸ್ಕಾರವು ; ಎಲೈ ಸರಸ್ವತೀದೇವಿಯೇ ನಿನಗೆ ನಮಸ್ಕಾರವು ನೀನು ನಮಗೆ ಮಂಗಳಕರಗಳಾಗಿರು, ಸುಖವನ್ನುಂಟುಮಾಡು.

ಎಲೈ ದೇವತೆಗಳೇ, ನಮ್ಮ ಕಿವಿಗಳಿಂದ ಯಾವಾಗಲೂ ಕಲ್ಯಾಣರೂಪವಾದ (ಶುಭವಾದ) ವಾರ್ತೆಯನ್ನು ಕೇಳುವ ಸಾಮರ್ಥ್ಯವುಳ್ಳವರಾಗುವಂತೆಯೂ ಮತ್ತು ನಮ್ಮ ಕಣ್ಣುಗಳಿಂದ ಮಂಗಳಕರವಾದುದನ್ನೇ ನೋಡುವ ಸಾಮರ್ಥ್ಯವುಳ್ಳವರಾಗುವಂತೆಯೂ ಅನುಗ್ರಹಿಸು. ದೃಢವಾದ ಅವಯವಗಳಿಂದ ನಿಮ್ಮನ್ನು ಸ್ತುತಿಸುತ್ತಾ ಪ್ರಜಾಪತಿಯಿಂದ ಅನುಗೃಹೀತವಾದ ನಮ್ಮ ಆಯುಃಪರಿಮಿತಿಯನ್ನು ಅನುಭವಿಸುವಂತೆ ಅನುಗ್ರಹಿಸಿ.

(ಋ. ಸಂ. ೧–೮೯–೮)

ಇಂದ್ರ ಮತ್ತು ಅಗ್ನಿ ಎಂಬ ದೇವತೆಗಳು ತಮ್ಮ ರಕ್ಷಣೆಗಳೊಡನೆ ನಮಗೆ ಶಾಂತಿದಾಯಕರಾಗಿರಲಿ ; ಹವಿಸ್ಸನ್ನು ಅರ್ಪಿಸಲ್ಪಟ್ಟ ಇಂದ್ರಾವರುಣರು ನಮ್ಮ ಶಾಂತಿದಾತರಾಗಿರಲಿ. ಇಂದ್ರಸೋಮರು ನಮಗೆ ಶಾಂತಿಯನ್ನೂ ಕಲ್ಯಾಣವನ್ನೂ ಉಂಟುಮಾಡಲಿ. ನಮ್ಮ ದುಃಖನಿವಾರಣೆಯ ಮೂಲಕ ನಮಗೆ ಕಲ್ಯಾಣವನ್ನುಂಟುಮಾಡಲಿ. ಇಂದ್ರಾಪೂಷರು ಅನ್ನಾರ್ಥವಾದ (ಆಹಾರಾರ್ಥವಾಗಿ ಮಾಡುವ) ಯುದ್ಧದಲ್ಲಿ ನಮಗೆ ಸುಖದಾತರಾಗಿರಲಿ.

(ಋ. ಸಂ. ೭–೩೫–೧)

ಉತ್ತಮವಾದ ಕರ್ಮಮಾಡುವ ದೇವಜನರನ್ನು ನೂತನವಾದ ಸ್ತುತಿಗಳಿಂದ ಸುತ್ತಿಸುತ್ತೇನೆ. ಸುಖವನ್ನುಂಟುಮಾಡುವ ಮಿತ್ರಾವರುಣರನ್ನು ಸ್ತುತಿಸುತ್ತೇನೆ. ಶ್ರೇಷ್ಠವಾದ ಬಲವುಳ್ಳ ಮಿತ್ರ ವರುಣ ಮತ್ತು ಅಗ್ನಿಗಳು ಇವರೆಲ್ಲರೂ ಕೂಡಿ ನಮ್ಮ ಯಜ್ಞಕ್ಕೆ ಬರಲಿ, ಅವರೆಲ್ಲರೂ ನಮ್ಮ ಸ್ತುತಿಗಳನ್ನೂ ಕೇಳಲಿ.

(ಋ. ಸಂ. ೬–೪೯–೧)

ಸರ್ವದಾ ವೃದ್ಧಿಯನ್ನು ಹೊಂದುತ್ತಿರುವವನೂ ಪೂಜ್ಯನೂ ಮಿತ್ರನೂ ಆದ ಇಂದ್ರನು ಯಾವ ವಿಧವಾದ ತೃಪ್ತಿಗಳಿಂದ ನಮ್ಮ ಅಭಿಮುಖವಾಗಿ ಬರುತ್ತಾನೆ ? ಪ್ರಜ್ಞಾಪೂರ್ವಕವಾದ ಯಾವ ಕರ್ಮದಿಂದ ನಮ್ಮ ಅಭಿಮುಖವಾಗಿ ಬರುತ್ತಾನೆ ?

(ಋ. ಸಂ. ೪–೩೧–೧)

ಎಲೈ ಇಂದ್ರನೇ, ನಿಮಗೆ ಮದಕಾರಕಗಳಾದ ರಸಗಳಲ್ಲಿ ಅತ್ಯಂತ ಪೂಜ್ಯದಾದುದೂ ಸತ್ಯಾತ್ಮಕವಾದುದೂ ಆದ ಯಾವ ಸೋಮರಸವು ಅತ್ಯಂತ ದೃಢವಾಗಿದ್ದರೂ ಸಹ ಶತ್ರುಧನಗಳನ್ನು ಪೂರ್ಣವಾಗಿ ನಾಶಮಾಡುವುದಕೆ ನಿನ್ನನ್ನು ಹುರಿದುಂಬಿಸಬಲ್ಲುದು ?

(ಋ. ಸಂ. ೪-೩೧-೨)

ಎೣ ಇಂದ್ರನೇ ನೀನು ನಿನ್ನ ಮಿತ್ರರಾದ ಸ್ತೋತೃಗಳಿಗೆ ಪೂರ್ಣವಾದ ರಕ್ಷಕನು. ನಾವೂ ಸಹ ನಿನ್ನನ್ನು ಸ್ತುತಿಸುವುದರಿಂದ ನಿನ್ನ ಮಿತ್ರನು. ಆದುದರಿಂದ ಅನೇಕವಿಧವಾದ ರಕ್ಷಣೆಗಳೊಡನೆ ನಮ್ಮ ಅಭಿಮುಖನಾಗು

(ಋ. ಸಂ. ೪-೩೧-೨)

ಎಲೈ ಪೃಥ್ವಿದೇವತೆಯೇ, ನೀನು ಸರ್ವದಾ ವಿಸ್ತಾರವಾಗಿಯೂ ಕಂಟಕರಹಿತವಾಗಿಯೂ ಇರುವ ವಾಸಸ್ಥಾನ ದಲ್ಲಿರುತ್ತೀಯೆ ಇಂತಹ ನೀನು ನಮಗೆ ವಿಸ್ತಾರವಾದ ಆಶ್ರಯವನ್ನು ಕೊಡು.

(ಋ. ಸಂ. ೧-೨೨-೧೫)

**ಇದು ಶಾಂತಿಮಂತ್ರವು**



**ಸಾಯಣಭಾಷ್ಯದ ಅರ್ಥಾನುವಾದವು**

---

**ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।**
**ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥ ೧ ॥**

ಚತುರ್ಮುಖಬ್ರಹ್ಮನೇ ಮೊದಲಾದ ದೇವತೆಗಳು, ತಾವು ಮಾಡುವ ಯಜ್ಞಯಾಗಾದಿಗಳು, ಯುದ್ಧಾರಂಭವು, ಮೊದಲಾದ ಸಮಸ್ತ ಕಾರ್ಯಾರಂಭದಲ್ಲಿಯೂ ಗಜವದನನಾದ ಗಣಪತಿಯನ್ನು ನಮಸ್ಕರಿಸಿ ತಮ್ಮ ಕಾರ್ಯಗಳಲ್ಲಿ ಕೃತಕೃತ್ಯ ರಾಗಿರುವರು, ಎಂದರೆ ಜಯಶೀಲರಾಗಿರುವರು. ಇಂತಹ ವಿಘ್ನನಿವಾರಕನಾದ ಗಣಪತಿಯನ್ನು ನಾನು, ಪ್ರಾರಂಭಿಸ ಲಿರುವ ಋಗ್ವೇದದ ಆರಣ್ಯಕಭಾಷ್ಯವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗಲೆಂದು ನಮಸ್ಕರಿಸುತ್ತೇನೆ.

ಗಣಪತಿಯು ವಿಘ್ನರಾಜನೆಂದು ಪುರಾಣಾದಿಗಳಲ್ಲಿ ಪ್ರಸಿದ್ಧವಾಗಿರುವುದು. ಎಂದರೆ ಕಾರ್ಯಾರಂಭದಲ್ಲಿ ತನ್ನನ್ನು ಪೂಜಿಸಿದವರ ಕಾರ್ಯಗಳು ನಿರ್ವಿಘ್ನವಾಗಿ ನೆರವೇರುವಂತೆ ಅನುಗ್ರಹಿಸುವನು. ಹಿಂದೆ ತ್ರಿಪುರದಹನಕಾಲದಲ್ಲಿ ಈಶ್ವರನು ಗಣಪತಿಯನ್ನು ಪೂಜಿಸದೆ ತ್ರಿಪುರಸಂಹಾರಕ್ಕಾಗಿ ಪ್ರಯತ್ನಿಸಿದಾಗ ತ್ರಿಪುರಗಳೇ ಕಾಣಿಸಲಿಲ್ಲವೆಂದೂ, ಬಳಿಕ ಗಣಪತಿ ಯನ್ನು ಪೂಜಿಸಿದಮೇಲೆ ಅವು ಗೋಚರವಾಗಿ ತ್ರಿಪುರದಹನಕಾರ್ಯವು ಅನಾಯಾಸವಾಗಿ ನೆರವೇರಿತೆಂದೂ ಶಿವಪುರಾಣದಲ್ಲಿ ಹೇಳಿರುವುದು. ವಿಷ್ಣು, ಬ್ರಹ್ಮ, ಇಂದ್ರ ಮೊದಲಾದ ದೇವತೆಗಳೂ ಸಹ ಗಣಪತಿಯನ್ನು ಪೂಜಿಸಿಯೇ ಕಾರ್ಯಾ ರಂಭವನ್ನು ಮಾಡಿರುವರು. ದೇವತೆಗಳೇ ಆರೀತಿ ಮಾಡಿರುವಾಗ ಮನುಷ್ಯರು ಗಣಪತಿಪೂಜೆಯನ್ನು ಅವಶ್ಯಕವಾಗಿ ಮಾಡಲೇಬೇಕು. ವಿದ್ಯಾರಂಭದಲ್ಲಿಯೂ, ವಿವಾಹಾದಿಮಂಗಳಕಾರ್ಯಗಳಲ್ಲಿಯೂ, ವ್ರತಾದಿಗಳಲ್ಲಿಯೂ, ದೇವತಾಪೂಜೆ



ಗಳಲ್ಲಿಯೂ ಗಣಪತಿಯನ್ನು ಮೊದಲು ಪೂಜಿಸುವದು ಪದ್ಧತಿಯಾಗಿವೆ. ಈ ಶಿಷ್ಟಸಂಪ್ರದಾಯವನ್ನನುಸರಿಸಿ ಸಾಯಣಾಚಾರ್ಯರು ಗಣಪತಿಯನ್ನು ನಮಸ್ಕಾರಮಾಡುವರು.

ಈ ಶ್ಲೋಕದಲ್ಲಿರುವ **ವಾಗೀಶ** ಎಂಬ ಶಬ್ದಕ್ಕೆ ಅನೇಕಾರ್ಥಗಳನ್ನು ಕಲ್ಪಿಸಬಹುದು. ವಾಕ್ ಎಂದರೆ ಸರಸ್ವತಿಯು. ಈ ಸರಸ್ವತಿಗೆ ಈಶನೆಂದರೆ ಪತಿಯು, ಆದುದರಿಂದ ವಾಗೀಶನೆಂದರೆ ಸರಸ್ವತೀ ವಲ್ಲಭನಾದ ಚತುರ್ಮುಖಬ್ರಹ್ಮನು ಎಂದಾಗುವುದು. ಇದಲ್ಲದೆ ವಾಗೀಶನೆಂದರೆ, ಬೃಹಸ್ಪತಿಯೆಂದೂ, ವಿದ್ಯಾಧಿದೇವತೆಯಾದ ಈಶ್ವರನೆಂದೂ, ಸೃಷ್ಟಿಕರ್ತನಾದ ವಿಶ್ವಕರ್ಮನೆಂದೂ ಅರ್ಥವಾಗುವುದು. **“ ವಾಚಸ್ಪತಿಂ ವಿಶ್ವಕರ್ಮಾಣಮೂತಯೇ ಮನೋಯುಜಂ ವಾಜೇ ಅದ್ಯಾ ಹುವೇಮ ”** ಎಂದು ಶ್ರುತಿಯಿರುವದು.

**ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।**
**ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥ ೨ ॥**

ಈ ರೀತಿ ಗಣಪತಿಯನ್ನು ನಮಸ್ಕರಿಸಿದನಂತರ, ಭಗವಂತನಾದ ಈಶ್ವರನನ್ನು ನಮಸ್ಕಾರಮಾಡುತ್ತಾರೆ.

ಯಾವ ಪರಮೇಶ್ವರನ ನಿಶ್ವಾಸಗಳೇ ವೇದರೂಪವಾಗಿವೆಯೋ ಮತ್ತು ಯಾವ ಪರಮಾತ್ಮನು ವೇದಗಳಿಂದಲೇ ಸಮಸ್ತ ಜಗತ್ತನ್ನೂ ಸೃಷ್ಟಿಸಿದನೋ ಅಂತಹ, ಸಮಸ್ತವಿದ್ಯೆಗಳಿಗೂ ಅಧಿಪತಿಯಾದ ಮಹೇಶ್ವರನನ್ನು ಅಥವಾ ಸಾಕ್ಷಾದೀಶ್ವರಸ್ವರೂಪನಾದ ವಿದ್ಯಾತೀರ್ಥರೆಂಬ ನಮ್ಮ ಗುರುವನ್ನು ನಮಸ್ಕರಿಸುತ್ತೇನೆ.

ವಿದ್ಯಾತೀರ್ಥರೆಂಬುವರು ಭಾರತೀತೀರ್ಥರೆಂಬುವರಿಗೆ ಗುರುಗಳು. ಈ ಭಾರತೀತೀರ್ಥರು ಮಾಧವಾಚಾರ್ಯರಿಗೆ ಗುರುಗಳು. ಆದುದರಿಂದ ವಿದ್ಯಾತೀರ್ಥರು ಮಾಧವರಿಗೆ ಪರಮಗುರುಗಳೆಂದಾಯಿತು. “ ಗುರುರೇವ ಮಹೇಶ್ವರಃ ” ಎಂಬ ಶಾಸ್ತ್ರವಚನಾನುಸಾರವಾಗಿ ಗುರುವೇ ಸಾಕ್ಷಾತ್ ಪರಮೇಶ್ವರನೆಂದು ಶಿಷ್ಯನು ಭಾವಿಸಬೇಕು. ಈ ಕಾರಣಗಳಿಗಾಗಿ ಮಾಧವಾಚಾರ್ಯರು ವಿದ್ಯಾತೀರ್ಥಮಹೇಶ್ವರರನ್ನು ನಮಸ್ಕರಿಸುವಾಗ ತಮ್ಮ ಗುರುಗಳನ್ನೂ ಮಹೇಶ್ವರನನ್ನೂ ನಮಸ್ಕರಿಸಿದರೆಂದು ಭಾವವು.

ವೇದಗಳು ಪರಮೇಶ್ವರನ ನಿಶ್ವಾಸವೆಂದು ಹೇಳುವರು. **“ ತಸ್ಯ ಹ ವಾ ಏತಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದೋಯಜುರ್ವೇದಸ್ಸಾಮವೇದಃ ’** ಎಂದು ಉಪನಿಷದ್ವಾಕ್ಯವಿರುವುದು. ಆದುದರಿಂದ ವೇದಗಳು ಪರಮಾತ್ಮನ ಮುಖದಿಂದಲೇ ನಿಶ್ವಾಸರೂಪವಾಗಿ ಹೊರಹೊರಟಿರುವವು. ಅಲ್ಲದೆ ವೇದಗಳ ಸಹಾಯದಿಂದಲೇ ಪರಮೇಶ್ವರನು ಜಗತ್ತನ್ನು ಸೃಷ್ಟಿಮಾಡಿರುವನು. ಮತ್ತು ಈ ಭಗವಂತನೇ ಸರ್ವವಿದ್ಯೆಗಳಿಗೂ ಕಾರಣನು. ಇವನಿಂದಲೇ ಸಮಸ್ತವಿದ್ಯೆಗಳೂ, ಶಾಸ್ತ್ರಗಳೂ ಉತ್ಪನ್ನವಾಗಿರುವವು. ಆದುದರಿಂದ ವೇದಭಾಷ್ಯರಚನೆಯ ಕಾಲದಲ್ಲಿ ಸರ್ವವೇದಸ್ವರೂಪನೂ, ಸಕಲ ವಿದ್ಯಾಧೀಶ್ವರನೂ ಆದ **ವಿದ್ಯಾತೀರ್ಥ**ನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವ ಮಹೇಶ್ವರನನ್ನು (ಗುರುವನ್ನು) ನಮಸ್ಕರಿಸುತ್ತೇನೆ ಎಂದು ಈಶ್ವರನ ಮತ್ತು ಗುರುವಿನನಮಸ್ಕಾರರೂಪವಾದ ಮಂಗಳವನ್ನು ಮಾಡಿ ಗ್ರಂಥಾರಂಭವನ್ನು ಮಾಡುವರು.

**ತತ್ಕಟಾಕ್ಷೇಣ ತದ್ರೂಪಂ ದಧದ್ಬುಕ್ಕಮಹೀಪತಿಃ ।**
**ಆದಿಶನ್ಮಾಧವಾಚಾರ್ಯಂ ವೇದಾರ್ಥಸ್ಯ ಪ್ರಕಾಶನೇ ॥ ೩ ॥**

ಈ ವೇದಭಾಷ್ಯರಚನೆಯನ್ನು ಕೈಗೊಳ್ಳಲು ಕಾರಣವೇನೆಂಬುದನ್ನು ಸೂಕ್ಷ್ಮವಾಗಿ ಈ ಶ್ಲೋಕದಲ್ಲಿ ಹೇಳಿರುವರು.

ಹಿಂದೆ ಹೇಳಿದ ವಿದ್ಯಾತೀರ್ಥಮಹೇಶ್ವರನ ಅನುಗ್ರಹದಿಂದಲೇ, ಈಶ್ವರಾಂಶಸಂಭೂತನಾದ ಬುಕ್ಕ ಮಹಾರಾಜನು, ವೇದಗಳು ಜನರಿಗೆ ಸುಲಭವಾಗಿ ತಿಳಿಯಲು ಅವುಗಳ ಅರ್ಥವನ್ನು ವಿಶದವಾಗಿ ವಿವರಿಸುವ ಭಾಷ್ಯವನ್ನು ರಚಿಸುವಂತೆ ಮಾಧವಾಚಾರ್ಯರಿಗೆ ಅಪ್ಪಣೆಮಾಡಿದನು.

ಪ್ರಜೆಗಳನ್ನು ಧರ್ಮದಿಂದ ಪಾಲಿಸುವುದು ರಾಜನ ಪ್ರಥಮಕರ್ತವ್ಯವೆಂದು ಶಾಸ್ತ್ರವಿರುವುದಷ್ಟೆ. ಪಾಲನವೆಂದರೆ ಪ್ರಜೆಗಳಿಗೆ ಉಂಟಾಗಬಹುದಾದ ಕಷ್ಟಗಳನ್ನೂ, ಶತ್ರುಭೀತಿಯನ್ನೂ ನಿವಾರಿಸುವುದಲ್ಲದೆ, ವೇದಶಾಸ್ತ್ರಪುರಾಣೇತಿಹಾಸಗಳ ತತ್ತ್ವಾರ್ಥಗಳನ್ನು ಪ್ರಜೆಗಳು ತಿಳಿದುಕೊಂಡು ಸತ್ಕರ್ಮಾಚರಣೆಯಿಂದ ಈಶ್ವರಾನುಗ್ರಹಕ್ಕೆ ಪಾತ್ರರಾಗುವಂತೆ ಅವರನ್ನು ಮಾಡುವದೂ ಆಗಿರುವದು. ಈ ವಿಧವಾದ ಪ್ರಜಾಪಾಲನವನ್ನು ಮಾಡಬೇಕಾದರೆ ಈಶ್ವರಾನುಗ್ರಹವಿಲ್ಲದಿದ್ದರೆ ಸಾಧ್ಯವಿಲ್ಲ. ಮತ್ತು "**ನಾವಿಷ್ಣುಃ ಪೃಥಿವೀಪತಿಃ**" ಎಂದರೆ ವಿಷ್ಣುವಿನ ಅಂಶವಿಲ್ಲದವನು ರಾಜನಾಗಲಾರನು. ಎಂದು ಸ್ಮೃತಿ ವಾಕ್ಯವಿರುವುದು. ಜಗತ್ಪಾಲನವು ವಿಷ್ಣುವಿನ ಮುಖ್ಯ ಕಾರ್ಯವಾದುದರಿಂದ ಪ್ರಜೆಗಳನ್ನು ಪಾಲಿಸುವ ರಾಜನೂ ವಿಷ್ಣುವಿನ ಅಂಶಸಂಭೂತನೇ ಆಗಿರಬೇಕು. ಇಂತಹ ರಾಜನಿಗೆ ಸದ್ಬುದ್ಧಿಯುಂಟಾಗಬೇಕಾದರೆ ಈಶ್ವರನ ಕಟಾಕ್ಷವು ಅವಶ್ಯಕವಾಗಿರಬೇಕು. ಬುಕ್ಕಮಹಾರಾಜನಿಗೆ ಈ ವಿಧವಾದ ಈಶ್ವರಕಟಾಕ್ಷವಿದ್ದುದರಿಂದಲೇ ವೇದಾರ್ಥಪ್ರಕಾಶನವೆಂಬ ಮಹತ್ಕಾರ್ಯವನ್ನು ಮಾಡಲು ಸಮರ್ಥನಾದನು. ಈಶ್ವರಪ್ರೇರಣೆಯಿಲ್ಲದೆ ಮಹಾಕಾರ್ಯಗಳು ನೇರವೇರುವುದು ಸಾಧ್ಯವಿಲ್ಲವೆಂದು ಅಭಿಪ್ರಾಯವು.

**ಸ ಪ್ರಾಹ ನೃಪತಿಂ ರಾಜನ್ ಸಾಯಣಾರ್ಯೋ ಮಮಾನುಜಃ ।**
**ಸರ್ವಂ ವೇತ್ತ್ಯೇಷ ವೇದಾನಾಂ ವ್ಯಾಖ್ಯಾತೃತ್ವೇ ನಿಯುಜ್ಯತಾಂ ॥ ೪ ॥**

ಬುಕ್ಕಮಹಾರಾಜನ ಅಪ್ಪಣೆಯನ್ನು ಕೇಳಿ ಮಾಧವಾಚಾರ್ಯರು ಆ ರಾಜನನ್ನು ಕುರಿತು—ಎಲೈ ರಾಜನೇ ನನಗೆ ಸಾಯಣನೆಂಬ ಒಬ್ಬ ತಮ್ಮನಿರುವನು. ಅವನು ಸರ್ವಶಾಸ್ತ್ರಪಂಡಿತನು. ಅವನನ್ನು ವೇದವ್ಯಾಖ್ಯಾನ ಬರೆಯುವಂತೆ ಆಜ್ಞಾಪಿಸಬಹುದು ಎಂದು ಬಿನ್ನವಿಸಿಕೊಳ್ಳಲು,

**ಇತ್ಯುಕ್ತೋ ಮಾಧವಾರ್ಯೇಣ ವೀರಬುಕ್ಕಮಹೀಪತಿಃ ।**
**ಅನ್ವಶಾತ್ ಸಾಯಣಾಚಾರ್ಯಂ ವೇದಾರ್ಥಸ್ಯ ಪ್ರಕಾಶನೇ ॥ ೫ ॥**

ಅದರಂತೆ ಬುಕ್ಕಮಹಾರಾಜನು ಸಾಯಣಾಚಾರ್ಯನನ್ನು ಕರೆಸಿ ಲೋಕೋಪಕಾರಾರ್ಥವಾಗಿ ವೇದಗಳಿಗೆ ಭಾಷ್ಯವನ್ನು ರಚಿಸಿ ಪ್ರಕಾಶಪಡಿಸುವಂತೆ ಅಪ್ಪಣೆಮಾಡಿದನು. (ಕೆಲವು ಪ್ರತಿಗಳಲ್ಲಿ ೪, ೫ ನೆಯ ಶ್ಲೋಕಗಳಿಲ್ಲ.)

**ಯೇ ಪೂರ್ವೋತ್ತರಮೀಮಾಂಸೇ ತೇ ವ್ಯಾಖ್ಯಾಯಾತಿಸಂಗ್ರಹಾತ್ ।**
**ಕೃಪಾಲುರ್ಮಾಧವಾಚಾರ್ಯೋ ವೇದಾರ್ಥಂ ವಕ್ತುಮುದ್ಯತಃ ॥ ೬ ॥**

ಈ ಮಾಧವಾಚಾರ್ಯರೆಂಬುವರು ಪರಮದಯಾಶಾಲಿಗಳು. ಇವರು ವಿದ್ವಜ್ಜನರ ಸೌಕರ್ಯಕ್ಕಾಗಿ ಪೂರ್ವಮೀಮಾಂಸಾ, ಉತ್ತರಮೀಮಾಂಸಾ ದರ್ಶನಗಳನ್ನು ಹಿಂದೆಯೇ ವ್ಯಾಖ್ಯಾನಮಾಡಿರುವರು, ಈಗ ವೇದಾರ್ಥವನ್ನು ಪ್ರಕಾಶಪಡಿಸಲು ಉದ್ಯುಕ್ತರಾದರು.

ಪೂರ್ವಮೀಮಾಂಸಾ ಮತ್ತು ಉತ್ತರಮೀಮಾಂಸಾ ದರ್ಶನಗಳು ಷಡ್ದರ್ಶನಗಳಲ್ಲಿ ಕಡೆಯ ಎರಡು ದರ್ಶನಗಳಾಗಿರುವವು. ಪೂರ್ವಮೀಮಾಂಸವನ್ನು ಜೈ[illegible]ಯೂ, ಉತ್ತರಮೀಮಾಂಸಾ ಅಥವಾ ಶಾರೀರ

ಮೀಮಾಂಸಾ ಎಂಬ ವೇದಾಂತಸೂತ್ರಗಳನ್ನು ಬಾದರಾಯಣಮುನಿಯೂ ಬರೆದಿರುವರು. ಪೂರ್ವಮೀಮಾಂಸದಲ್ಲಿ ಕಾರ್ಯಕಾರಣನಿರೂಪಣೆಯೂ, ವಿಷಯವಿಮರ್ಶೆಯ ಸ್ವರೂಪವೂ ಮೊದಲಾದವು ಪ್ರತಿಪಾದಿಸಲ್ಪಟ್ಟಿರುವವು. ಆದುದರಿಂದ ಈ ಪೂರ್ವಮೀಮಾಂಸಾಶಾಸ್ತ್ರವನ್ನು ಸಾಧನಗ್ರಂಥವೆಂದು ಹೇಳಬಹುದು. ಎಂದರೆ ಈ ಗ್ರಂಥದ ಸಹಾಯದಿಂದ ಬೇರೆ ಗ್ರಂಥಗಳಲ್ಲಿರುವ ಗಹನವಾದ ವಿಷಯಗಳನ್ನು ವಿಮರ್ಶೆಯಿಂದ ಸಕಾರಣವಾಗಿ ತಿಳಿದುಕೊಳ್ಳಲು ಸಾಧ್ಯವಾಗುವುದು. ಉತ್ತರಮೀಮಾಂಸಕ್ಕೆ, ವೇದಂತಸೂತ್ರವೆಂದೂ, ಬ್ರಹ್ಮಸೂತ್ರವೆಂದೂ ಬೇರೆ ಬೇರೆ ಹೆಸರುಗಳಿರುವವು. ಉತ್ತರಮೀಮಾಂಸಾಸೂತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವ ವಿಷಯಗಳಿಗೆ ವೇದಗಳೂ ಉಪನಿಷತ್ತುಗಳೂ ಮೂಲವು. ಮತ್ತು ಈಗ ಪ್ರಸಿದ್ಧವಾಗಿರುವ ವೇದಾಂತಗ್ರಂಥಗಳೆಲ್ಲವೂ ಇದರ ಆಧಾರ, ದಿಂದಲೇ ರಚಿತವಾಗಿರುವವು. ಈ ಸೂತ್ರಗಳಿಗೆ ಮತತ್ರಯಗಳ ಆಚಾರ್ಯರೂ, ಇತರ ವೇದಾಂತಿಗಳೂ ವ್ಯಾಖ್ಯಾನಗಳನ್ನು ಬರೆದಿರುವರು. ಮತ್ತು ಈ ಗ್ರಂಥವು ಅನೇಕಭಾಷೆಗಳಲ್ಲಿ ಪ್ರಸಿದ್ಧವಾಗಿರುವುದು. ಅದುದರಿಂದ ಷಡ್ದರ್ಶನಗಳಲ್ಲಿ ವೇದಾರ್ಥಕ್ಕೆ ಸಹಾಯಕವಾದ ಈ ಪೂರ್ವೋತ್ತರಮೀಮಾಂಸಗಳನ್ನು ಮೊದಲು ವಾಖ್ಯಾನ ಮಾಡಿ ಬಳಿಕ ವೇದಭಾಷ್ಯವನ್ನು ಬರೆಯಲು ಉದ್ಯುಕ್ತರಾದರು ಎಂದರೆ ತಮ್ಮನಾದ ಸಾಯಣಾಚಾರ್ಯರಿಗೆ ವೇದಭಾಷ್ಯರಚಿಸುವ ಮಹತ್ಕಾರ್ಯದಲ್ಲಿ ನೆರವಾದರು.

**ಐತರೇಯಬ್ರಾಹ್ಮಣೇಽಸ್ತಿ ಕಾಂಡಮಾರಣ್ಯಕಾಭಿಧಂ ।**
**ಅರಣ್ಯ ಏವ ಪಠ್ಯಂ ಸ್ಯಾದಾರಣ್ಯಕಮಿತೀರ್ಯತಾಂ ॥**

ಐತರೇಯ ಬ್ರಾಹ್ಮಣದಲ್ಲಿ ಆರಣ್ಯಕವೆಂಬ ಒಂದು ಭಾಗವಿರುವುದು. ಇದನ್ನು ಅರಣ್ಯದಲ್ಲಿಯೇ ರಹಸ್ಯವಾಗಿ ಅಧ್ಯಯನಮಾಡಬೇಕೆಂದು ನಿಯಮವಿರುವುದರಿಂದ ಈಭಾಗಕ್ಕೆ (ಐತರೇಯಬ್ರಾಹ್ಮಣದ ಕೊನೆಯ ಭಾಗ ಇದರಲ್ಲಿ ಐತರೇಯವೆಂಬಬಹುಮುಖ್ಯವಾದ ಉಪನಿಷತ್ತೂ ಸೇರಿದೆ) ಆರಣ್ಯಕವೆಂಬ ಹೆಸರು ಬಂದಿದೆ.

ಸಧಾರಣವಾಗಿ ಋಗ್ವೇದಾದಿ ನಾಲ್ಕು ವೇದಗಳ. ಪ್ರತಿಶಾಖೆಗೂ ಒಂದೊಂದುಬ್ರಾಹ್ಮಣವೂ ಆದರ ಕೊನೆಯಲ್ಲಿ ಆರಣ್ಯಕವೆಂಬ ಭಾಗವೂ ಅದರ ಅಂತ್ಯದಲ್ಲಿ ಒಂದು ಉಪನಿಷತ್ತೂ ಇರುವುದು. ಕೆಲವು ಶಾಖೆಗಳಲ್ಲಿ ಇವು ಇಲ್ಲದಿರುವುದೂ ಉಂಟು ಅಥವಾ ಈಕಾಲದಲ್ಲಿ ಲುಪ್ತವಾಗಿರಬಹುದು.

**ಆರಣ್ಯಕಾನಿ ಪಂಚೇತಿ ಪ್ರೋಕ್ತಾನ್ಯರ್ಥವಿಭೇದತಃ ।**
**ಮಹಾವ್ರತಮತಃ ಪ್ರೋಕ್ತಂ ಪ್ರಥಮಾರಣ್ಯಕೇ ಸ್ಫುಟಂ ॥**

ಆರಣ್ಯಕಗ್ರಂಥದಲ್ಲಿ ಐದು ವಿಭಾಗಗಳಿರುವವು. ಅವುಗಳನ್ನು ಪ್ರಥಮಾರಣ್ಯಕ ದ್ವಿತೀಯಾರಣ್ಯಕ ಎಂದು ಮೊದಲಾಗಿ ಕರೆಯುವ ರೂಢಿ ಇದೆ. ಪ್ರತಿ ಆರಣ್ಯಕವೆಂಬ ವಿಭಾಗದಲ್ಲಿಯೂ ಬೇರೆ ಬೇರೆ ವಿಷಯಗಳನ್ನು ಹೇಳಲಾಗಿದೆ. ಮತ್ತು ಪ್ರತಿ ಆರಣ್ಯಕದಲ್ಲಿಯೂ ಕೆಲವು ಅಧ್ಯಾಯಗಳೆಂದೂ, ಅಧ್ಯಾಯಗಳಲ್ಲಿ ಖಂಡಗಳೆಂದೂ ವಿಭಾಗಿಸಲ್ಪಟ್ಟಿದೆ. ಈ ಪ್ರಥಮಾರಣ್ಯಕದಲ್ಲಿ ಮಹಾವ್ರತವೆಂಬ ಕರ್ಮವಿಶೇಷವನ್ನು ವಿವರಿಸಲಾಗಿದೆ.

**ಗವಾಮಯನಮಿತ್ಯುಕ್ತೇ ಸತ್ರೇ ಸಂವತ್ಸರಾತ್ಮಕೇ ।**
**ಉಪಾಂತ್ಯಮಸ್ತಿ ಯದಹಸ್ತನ್ಮಹಾವ್ರತನಾಮಕಂ ॥**

ಬಹುಕಾಲದವರೆಗೆ ನಡೆಯುವ ಯಜ್ಞಕ್ಕೆ ಸತ್ರವೆಂದು ಹೆಸರು. ಒಂದು ಸಂವತ್ಸರದವರೆಗೂ ನಡೆಯುವ ಅನೇಕ ಸತ್ರಗಳಿವೆ. ಅವುಗಳಲ್ಲಿ ಗವಾಮಯನವೆಂಬ ಸತ್ರವೊಂದಿರುವುದು. ಈ ಸತ್ರವು ಮುಗಿಯುವಾಗ ಕೊನೆಯ ದಿನದ ಹಿಂದಿನ ದಿನ ಮಾಡುವ ಕರ್ಮಕ್ಕೆ ಮಹಾವ್ರತವೆಂದು ಹೆಸರು. ಈ ಮಹಾವ್ರತವನ್ನು ಇಲ್ಲಿ ವಿವರಿಸಲಾಗಿದೆ.

**ಸತ್ರಪ್ರಕರಣೇಽನುಕ್ತಿರರಣ್ಯಾಧ್ಯಯನಾದಿತಿ ।**
**ಮಹಾವ್ರತಸ್ಯ ತಸ್ಯಾತ್ರ ಹೌತ್ರಂ ಕರ್ಮ ವಿವಿಚ್ಯತೇ ॥**

ಸತ್ರಯಾಗಗಳನ್ನು ವಿವರಿಸುವ ಸಂದರ್ಭದಲ್ಲಿ ಅವು ರಹಸ್ಯಗಳಾದ್ದರಿಂದ ಬ್ರಾಹ್ಮಣ ಗ್ರಂಥದಲ್ಲಿ ವಿವರಿಸದೇ ಇರುವುದರಿಂದಲೂ ಆ ರಹಸ್ಯ ವಿಷಯಗಳನ್ನು ಅರಣ್ಯದಲ್ಲಿಯೇ ಅಧ್ಯಯನ ಮಾಡಬೇಕೆಂಬ ನಿಯಮವಿರುವುದರಿಂದಲೂ ಆ ವಿವರಗಳನ್ನು ಬ್ರಾಹ್ಮಣದಲ್ಲಿ ವಿವರಿಸಿಲ್ಲದೇ ಇರುವುದರಿಂದಲೂ ಈ ಆರಣ್ಯಕಗ್ರಂಥದಲ್ಲಿ ವಿವರಿಸಲಾಗಿದೆ. ಆದ್ದರಿಂದ ಮಹಾವ್ರತಕ್ಕೆ ಸಂಬಂಧಪಟ್ಟ ವಿಷಯಗಳನ್ನು ಹೋತೃವು ತಿಳಿದುಕೊಂಡು ಪಠಿಸಬೇಕಾದ ರಹಸ್ಯವಾದ ಮಂತ್ರಗಳನ್ನೂ ಆಚರಿಸಬೇಕಾದ ಕ್ರಿಯಾಕಲಾಪಗಳನ್ನೂ ಇಲ್ಲಿ ವಿವರಿಸಲಾಗಿದೆ.

———

**ತತ್ರಾದೌ ವಿವಕ್ಷಿತಮರ್ಥಂ ಪ್ರತಿಜಾನೀತೇ**

ಮುಂದೆ ಹೇಳಬೇಕಾದ ವಿಷಯದ ಅರ್ಥವನ್ನು ವಿಸ್ತಾರವಾಗಿ ವಿವರಿಸುವರು.

## ಓಂ ಅಥ ಮಹಾವ್ರತಂ ॥

**ಅಥಶಬ್ದ ಆರಂಭವಾಚೀ । ಮಹಾವ್ರತಾಖ್ಯಂ ಕರ್ಮ ಪ್ರಾರಬ್ಧಮಿತ್ಯರ್ಥಃ । ಅಥವಾಽಯಮಾನಂತರ್ಯಾರ್ಥೋಽಥಶಬ್ದಃ । ಪ್ರಕೃತಿಜ್ಞಾನಾನಂತರಂ ವಿಕೃತಿರೂಪಂ ಮಹಾವ್ರತಾಖ್ಯಂ ಕರ್ಮಾಭಿಧೀಯತ ಇತಿ ಶೇಷಃ । ಪ್ರಕೃತಿಜ್ಞಾನೇ ಹಿ ಸತಿ ತತ್ಸಕಾಶಾದ್ವಿಕೃತಾವತಿದಿಷ್ಟಾ ಧರ್ಮಾಃ ಸಾಕಲ್ಯೇನಾವಬೋದ್ಧುಂ ಶಕ್ಯಂತೇ । ವಿಶ್ವಜಿಚ್ಚತುರ್ವಿಂಶಾದೀನಿ ಕರ್ಮಾಣಿ ಮಹಾವ್ರತಸ್ಯ ಪ್ರಕೃತಯಃ । ಆಜ್ಯಪ್ರಉಗನಾಮಕೇ ದ್ವೇ ಶಾಸ್ತ್ರೇ ವಿಶ್ವಜಿದಾಖ್ಯಾತ್ಕರ್ಮಣೋ ಮಹಾವ್ರತೇಽತಿದಿಶ್ಯೇತೇ । ಹೋತ್ರಕಾಣಾಂ ಶಸ್ತ್ರಾಣಿ ತು ಚತುರ್ವಿಂಶಾಖ್ಯಾತ್ಕರ್ಮಣೋಽತಿದಿಶ್ಯಂತೇ । ತಥಾ ಚ ಪಂಚಮಾರಣ್ಯಕೇ ಪಠಿಷ್ಯತೇ—“ ಆಜ್ಯಪ್ರಉಗೇ ವಿಶ್ವಜಿತೋ ಹೋತ್ರಾಶ್ಚತುರ್ವಿಂಶಾತ್ ” ಇತಿ ॥**

ಮೇಲಿನ ವಾಕ್ಯದಲ್ಲಿ **ಅಥ** ಎಂಬ ಶಬ್ದವನ್ನು ಪ್ರಾರಂಭದಲ್ಲಿ ಉಪಯೋಗಿಸಲಾಗಿದೆ. ಗ್ರಂಥಾರಂಭವಲ್ಲಿ ಯಾವಾಗಲೂ **ಅಥ** ಶಬ್ದವನ್ನು ಉಪಯೋಗಿಸುವುದು ರೂಢಿಯು. ಅಥವಾ **ಅಥ** ಶಬ್ದಕ್ಕೆ ಅನಂತರ ಎಂದು ಅರ್ಥವಿರುವುದರಿಂದ ಒಂದು ವಿಷಯವನ್ನು ಹೇಳಿದನಂತರ ಎಂದು ಹೇಳಬಹುದು. ಹಿಂದೆ ಯಜ್ಞಾದಿಗಳ ಪ್ರಕೃತಿ ಸ್ವರೂಪವನ್ನು (ಅಗ್ನಿಷ್ಟೋಮಾದಿ) ವಿವರಿಸಲಾಯಿತಷ್ಟೆ. ಈಗ ಅಥ ಅನಂತರವೆಂದರೆ ಪ್ರಕೃತಿಯಜ್ಞದ ಸ್ವರೂಪವನ್ನು ವಿವರಿಸಿದನಂತರ ಎಂದು ಅಥ ಶಬ್ದಕ್ಕೆ ಅರ್ಥವನ್ನು ಹೇಳಿ ಮುಂದೆ ಹೇಳಬೇಕಾದ ವಿಕೃತಿಯಜ್ಞದ ಸ್ವರೂಪವನ್ನು ಎಂದರೆ ಮಹಾವ್ರತ (ಮಹಾವ್ರತವು ವಿಕೃತಿಯು) ವೆಂಬ ಕರ್ಮ ವಿಧಾನವನ್ನು ಹೇಳುವರೆಂದು ಮುಖ್ಯಾಭಿಪ್ರಾಯವು. ಏಕೆಂದರೆ ಪ್ರಕೃತಿ ಸ್ವರೂಪವನ್ನು ಚೆನ್ನಾಗಿ ತಿಳಿದುಕೊಂಡ ಮೇಲೆಯೇ ವಿಕೃತಿ ಸ್ವರೂಪದ ಜ್ಞಾನವು ಸಾಧ್ಯವು. ಇಲ್ಲಿ ವಿಶ್ವಜಿತ್ ಚತುರ್ವಿಂಶ

ಎಂಬ ಕರ್ಮಗಳು ಮಹಾವ್ರತ ಕರ್ಮಕ್ಕೆ ಪ್ರಕೃತಿಸ್ವರೂಪವಾಗಿರುವವು. ವಿಶ್ವಜಿತ್ ಎಂಬ ಕರ್ಮದಲ್ಲಿ ಉಪಯೋಗಿಸಲ್ಪಡುವ ಆಜ್ಯ, ಪ್ರಉಗ ಎಂಬ ಎರಡು ಶಸ್ತ್ರಮಂತ್ರಗಳು ಮಹಾವ್ರತ ಕರ್ಮದಲ್ಲಿಯೂ ಕೆಲವು ವ್ಯತ್ಯಾಸಗಳೊಡನೆ ಪಠಿಸಲ್ಪಡುತ್ತವೆ ಮತ್ತು ಹೋತೃವರ್ಗದವರು ಪಠಿಸಬೇಕಾದ ಶಸ್ತ್ರಮಂತ್ರಗಳು ಚತುರ್ವಿಂಶ ಎಂಬ ಕರ್ಮದಿಂದ ಬಳಸಿಕೊಳ್ಳಲಾಗುವುದು. ಮತ್ತು ಈ ವಿಚಾರದಲ್ಲಿ ಪಂಚಮಾರಣ್ಯಕದಲ್ಲಿ—ಆಜ್ಯಪ್ರಉಗೇ ವಿಶ್ವಜಿತೋ ಹೋತ್ರಾಶ್ಚತುರ್ವಿಂಶಾತ್ ಎಂದು ಹೇಳಿರುವುದು.

## ಇಂದ್ರೋ ವೈ ವೃತ್ರಂ ಹತ್ವಾ ಮಹಾನಭವದ್ಯನ್ಮಹಾನಭವತ್ತನ್ಮಹಾ-ವ್ರತಮಭವತ್ತನ್ಮಹಾವ್ರತಸ್ಯ ಮಹಾವ್ರತತ್ವಂ

ಮಹಾವ್ರತಂ ಪ್ರಶಂಸಿತುಮಾಖ್ಯಾಯಿಕಾಮುಖೇನ ತಚ್ಛಬ್ದನಿರ್ವಚನಂ ದರ್ಶಯತಿ ||

ವೃತ್ರವಧಸ್ಯ ಶ್ರುತ್ಯಂತರಪ್ರಸಿದ್ಧಿದ್ಯೋತನಾರ್ಥೋ ವೈ ಶಬ್ದಃ । ತೈತ್ತರೀಯಕೇ ದರ್ಶ-ಪೂರ್ಣಮಾಸಬ್ರಾಹ್ಮಣಶೇಷೇ 'ತ್ವಷ್ಟಾ ಹತಪುತ್ರಃ' ಇತ್ಯಸ್ಮಿನ್ನನುವಾಕೇ ವೃತ್ರನಾಮ್ನೋಽಸುರ-ಸ್ಯೋತ್ಪತ್ತಿವೃದ್ಧ್ಯಾದಿಕಂ ಬಹುನಾ ಪ್ರಪಂಚೇನಾಭಿಧಾಯಾಂತೇ ದ್ಯಾವಾಪೃಥಿವೀಭ್ಯಾಮನು-ಜ್ಞಾತೇನೇಂದ್ರೇಣ ಕೃತೋ ವೃತ್ರವಧ ಏವಮಾಮ್ನಾಯತೇ— "ಸ ಆಭ್ಯಾಮೇವ ಪ್ರಸೂತ ಇಂದ್ರೋ ವೃತ್ರಮಹನ್" ಇತಿ । ಏವಮನ್ಯತ್ರಾಪಿ—"ಇಂದ್ರೋ ವೃತ್ರಾಯ ವಜ್ರಂ ಪ್ರಾಹರತ್" "ಇಂದ್ರೋ ವೃತ್ರಂ ಹತ್ವಾ" ಇತ್ಯಾದಿಷು ಪ್ರಸಿದ್ಧಿರ್ದ್ರಷ್ಟವ್ಯಾ। ಈ ದೃಶಾತ್ಪ್ರಸಿದ್ಧಾ-ದ್ವೃತ್ರವಧಾದೂರ್ಧ್ವಮಿಂದ್ರೋ ಮಹಾನಭವತ್ । ಭೀತಿರಾಹಿತ್ಯಮಸ್ಯ ಮಹತ್ತ್ವಂ । ವೃತ್ರವಧಾ-ತ್ಪುರಾ ತು ಸ್ವಕೀಯಾಂ ಭೀತಿಂ ಸ್ವಯಮೇವ ಪ್ರಜಾಪತೇರಗ್ರೇ ಪ್ರೋವಾಚ। ತಥಾ ಚ ತೈತ್ತರೀಯ ಆಮನಂತಿ— "ತಸ್ಮಾದಿಂದ್ರೋಽಭಿಬೀತ್ಸ ಪ್ರಜಾಪತಿಮುಪಾಧಾವಚ್ಛತ್ರುರ್ಮೇಽಜನಿ" ಇತಿ । ಇತ್ಥಂ ಭೀತಸ್ಯ ತ್ವಿಚ್ಛಯಾ ಬಹುಷು ದೇಶೇಷು ಸಂಚಾರಾಸಂಭವಾತ್ಸ್ವಗೃಹೇ ಚ ನಿದ್ರಾಭೋಜನಾದೌ ಬಿಭ್ಯತಃ ಸ್ವಾಸ್ಥ್ಯಾಭಾವಾದಲ್ಪತ್ವಂ । ಅತೋ ನಿರ್ಭಯತ್ವಮೇವ ಮಹತ್ತ್ವಮ್ । ಯದ್ಯದಾಽಸಾ-ವಿಂದ್ರೋ ಮಹಾನಭವತ್ತದಾನೀಮಿಂದ್ರಾರ್ಥಂ ಕ್ರಿಯಮಾಣಂ ಸೋಮಪಾನವಿಶೇಷಾತ್ಮಕಂ ಕರ್ಮ ಮಹಾವ್ರತಮಭವತ್ ತತ್ತಸ್ಮಾತ್ಕಾರಣಾದ್ಯಾಜ್ಞಿಕೈರ್ಮಹಾವ್ರತಮಿತಿ ವ್ಯವಹ್ರಿಯಮಾಣಸ್ಯ ಕರ್ಮ-ಣೋ ಮಹಾವ್ರತನಾಮಕತ್ವಂ ಸಂಪನ್ನಮ್ । ತಸ್ಯ ಚ ನಾಮ್ನಸ್ತ್ರೇಧಾ ನಿರ್ವಚನಂ ದ್ರಷ್ಟವ್ಯಮ್— ಮಹಾನ್ಭವತ್ಯನೇನ ವ್ರತೇನೇತಿ ಮಹಾವ್ರತಂ, ಮಹತೋ ದೇವಸ್ಯ ವ್ರತಮಿತಿ ಮಹಾವ್ರತಂ ಮಹಚ್ಚ ತದ್ವ್ರತಮಿತಿ ಮಹಾವ್ರತಮಿತಿ। ಏತಾನಿ ತ್ರೀಣಿ ನಿರ್ವಚನಾನಿ ತೈತ್ತರೀಯಾ ಆಮನನ್ತಿ- 'ಪ್ರಜಾಪತಿಃ ಪ್ರಜಾಃ ಸೃಷ್ಟ್ವಾ ವೃತ್ತೋಽಶಯತ್ । ತಂ ದೇವಾ ಭೂತಾನಾಂ ರಸಂ ತೇಜಃ ಸಂಭೃತ್ಯ । ತೇನೈನಮಭಿಷಜ್ಯನ್ । ಮಹಾನವವರ್ತೀತಿ । ತನ್ಮಹಾವ್ರತಸ್ಯ ಮಹಾವ್ರತತ್ವಮ್ । ಮಹತೋ ವ್ರತಮಿತಿ । ತನ್ಮಹಾವ್ರತಸ್ಯ ಮಹಾವ್ರತತ್ವಂ" ಇತಿ । ವೃತ್ತೋಽಶಯತ್ । ಶ್ರಾಂತೋ ಭೂಮಾವಪತತ್ । ತದಾನೀಂ ತೇ ದೇವಾಸ್ತೇಜೋಹೇತುಂ ತಂ ದ್ಯುಲೋಕಾತ್ ಗಾಯತ್ರ್ಯಾ ಸಮಾನೀತಂ ರಸಾಯನರೂಪಂ ಸೋಮಂ ಮಹಾವ್ರತಾಙ್ಗಭೂತೈರ್ಮಂತ್ರೈಃ ಸಂಪಾದ್ಯಾಥ ಪ್ರಜಾಪತಿಂ ತೇನ ಸೋಮೇನ ಚಿಕಿತ್ಸಿತ್ವಾ ಮಹಾನವವರ್ತೀತಿ ಶ್ರಮರಹಿತೋ ವೃತ್ತೋಽನೇನ ಕರ್ಮ-ಣೇತ್ಯುಕ್ತವಂತಃ । ಛಂದೋಗೈರಪಿ ಮಹದ್ವ್ರತಂ ಮಹತೋ ವ್ರತಮಿತಿ ನಿರುಕ್ತಿದ್ವಯಮಾ-

**ಮ್ನಾತಮ್—ಪ್ರಜಾಪತಿಃ ಪ್ರಜಾ ಅಸೃಜತ । ಸೋಽರಿಚ್ಯತ । ಸೋಽಪದ್ಯತ । ತಂ ದೇವಾ ಅಭಿಸಂಗ-ಚ್ಛಂತ । ತೇ ಬ್ರುವನ್ । ಮಹದಸ್ಮೈ ವ್ರತಂ ಸಂಭರಾಮ । ಯದಿಮಂ ಧಿನವದಿತಿ । ತಸ್ಮೈ ತತ್ಸಂವ-ತ್ಸರಮನ್ನಂ ಪಚ್ಯತೇ । ತತ್ಸಮಭರದಸ್ಮೈ ಪ್ರಾಯಚ್ಛಂಸ್ತದಪ್ರಜಯಂತ ತದೇನಮಧಿನೋನ್ಮಹ-ನ್ಮರ್ಯಾ ವ್ರತಂ ಯದಿಮಮಧಿನ್ವೀದಿತಿ । ತನ್ಮಹಾವ್ರತಸ್ಯ ಮಹಾವ್ರತತ್ವಮ್ । ಪ್ರಜಾಪತಿರ್ವಾವ ಮಹಾಂಸ್ತಸ್ಯೈತದ್ವ್ರತಮ್ ಇತಿ / ಅರಿಚ್ಯತ ಶಕ್ತ್ಯಾ ರಿಕ್ತೋಽಭೂತ್ । ಅಪದ್ಯತ ಭೂಮೌ ಪತಿತಃ ಧಿನವತ್ಪ್ರೀಣಯತಿ । ಅಪ್ರಜಯತ್ ಪ್ರಾಪ್ನೋತ್ । ಅಧಿನೋದಪ್ರೀಣಯತ್ । ಹೇ ಮರ್ಯಾ ಮರಣಯೋಗ್ಯಾ ಮನುಷ್ಯಾ ಯದ್ವ್ರತಮಿಮಂ ಪ್ರಜಾಪತಿಮಧಿನ್ವೀದಪ್ರೀಣಯತ್ತದ್ವ್ರತಂ ಮಹದಿತಿ ದವೋ ಉಕ್ತವಂತ ಇತ್ಯರ್ಥಃ ॥**

ಮಹಾವ್ರತವನ್ನು ಪ್ರಶಂಸಿಸುವುದಕ್ಕಾಗಿ ಒಂದು ಪೂರ್ವೇತಿಹಾಸವನ್ನು ಹೇಳಿ ಮಹಾವ್ರತಶಬ್ದದ ನಿರ್ವಚನವನ್ನೂ ಹೇಳುವರು. ಇಲ್ಲಿ ಮಹಾವ್ರತವೆಂದರೆ ಇಂದ್ರನು ವೃತ್ರಾಸುರನನ್ನು ಸಂಹಾರಮಾಡಿದ ವಿಷಯವು. ಈ ವಿಷಯವು ಅನೇಕ ಶ್ರುತಿಗಳಲ್ಲಿಯೂ ಇತರ ಪುರಾಣಾದಿ ಗ್ರಂಥಗಳಲ್ಲಿಯೂ ವಿವರಿಸಲ್ಪಟ್ಟಿರುವುದು. ದ್ಯಾವಾಪೃಥಿವಿಗಳಲ್ಲಿ ಎಂದರೆ ಸ್ವರ್ಗಭೂಮಿಗಳಿಂದ ಉತ್ಪನ್ನನಾದ ಇಂದ್ರನು ವೃತ್ರನನ್ನು ಸಂಹಾರಮಾಡಿದನು. ಎಂಬರ್ಥವಿರುವ ವಿಷಯವನ್ನು ಮುಂದಿನ ಶ್ರುತಿವಾಕ್ಯಗಳಲ್ಲಿ ಹೇಳಲಾಗಿದೆ. **ಸ ಆಭ್ಯಾಮೇವ ಪ್ರಸೂತ ಇಂದ್ರೋ ವೃತ್ರಮಹನ್ ॥ ಇಂದ್ರೋ ವೃತ್ರಾಯ ವಜ್ರಂ ಪ್ರಾಹರತ್ ॥ ಇಂದ್ರೋ ವೃತ್ರಾಯ ವಜ್ರಮುದಯಚ್ಛತ್ ॥ ಇಂದ್ರೋ ವೃತ್ರಂ ಹತ್ವಾ ॥** ಮುಂತಾದ ಶ್ರುತಿವಾಕ್ಯಗಳು ಪ್ರಸಿದ್ಧವಾಗಿವೆ. ಇಂತಹ ವೃತ್ರವಧವೆಂಬ ಪ್ರಸಿದ್ಧವಾದ ಮಹಾಕಾರ್ಯವನ್ನು ಇಂದ್ರನು ಮಾಡಿದ್ದರಿಂದ ಇಂದ್ರನಿಗೆ **ಮಹಾನ್** ಅತ್ಯಂತ ಗಣ್ಯನಾದವನು ಎಂದು ಪ್ರಸಿದ್ಧಿಯುಂಟಾಯಿತು. **ಮಹಾನ್** ಅಥವಾ **ಮಹತ್ತ್ವ** ವೆಂದರೆ ನಿರ್ಭೀತಿ ಅಥವಾ ಭಯರಾಹಿತ್ಯವೆಂದರ್ಥವು. ಪೂರ್ವದಲ್ಲಿ ಇಂದ್ರನು ವೃತ್ರನನ್ನು ಸಂಹರಿಸುವುದಕ್ಕಿಂತ ಪೂರ್ವದಲ್ಲಿ ಭಯಪಡುತ್ತಿದ್ದನೆಂದು ತೈತ್ತಿರೀಯಾದಿ ಶ್ರುತಿಗಳಲ್ಲಿ ಹೇಳಿದೆ—**ತಸ್ಮಾದಿಂದ್ರೋಽಬಿಭೇತ್ಸ ಪ್ರಜಾಪತಿ-ಮುಪಾಧಾವಚ್ಛತ್ರುರ್ಮೇಽಜನಿ ॥** ವೃತ್ರನು ಹುಟ್ಟಿದ ಸಂದರ್ಭದಲ್ಲಿ ಇಂದ್ರನು ಭಯಪಟ್ಟು ಪ್ರಜಾಪತಿಯ ಬಳಿಗೆ ಓಡಿ ಹೋಗಿ ನನಗೆ ಒಬ್ಬ ಶತ್ರುವು ಹುಟ್ಟಿರುವನು ಎಂದು ಹೇಳಿಕೊಂಡನು ಎಂದಿದೆ. ಸ್ವಸ್ಥಳವನ್ನು ಬಿಟ್ಟು ಎಲ್ಲಿಗೂ ಹೋಗದೆ ಏನನ್ನೂ ಮಾಡದೆ ಇದ್ದರೆ ಭಯವು ಹೋಗುವುದಿಲ್ಲ. ಆದ್ದರಿಂದ ದೇಶ ಸಂಚಾರವಾಡಿ ಕಷ್ಟಕೆಲಸಗಳನ್ನು ಮಾಡುತ್ತಿದ್ದರೆ ಭಯವುಹೋಗಿ ಧೈರ್ಯವುಂಟಾಗುವುದು ಆದ್ದರಿಂದ ಭಯವನ್ನು ಕಳೆದುಕೊಂಡು ಧೈರ್ಯವಾಗಿರುವುದೇ ಮಹತ್ವವು. ಇಂದ್ರನು ಭಯವನ್ನು ಕಳೆದುಕೊಂಡಮೇಲೆ ಅವನು **ಮಹಾನ್** ಎಂದು ಪ್ರಸಿದ್ಧನಾದನು. ಈಗ ಇಂದ್ರನು ಮಾಡಿದ ಭಯರಾಹಿತ್ಯವಾದ ವೃತ್ರವಧೆಯನ್ನು ವಿವರಿಸಿ ಸೋಮಪಾನಮಾಡತಕ್ಕ ಕರ್ಮವಿಶೇಷಕ್ಕೆ **ಮಹಾವ್ರತ** ವೆಂಬ ಹೆಸರು ಪ್ರಸಿದ್ಧವಾಯಿತು. ಆದ್ದರಿಂದ ಯಜ್ಞಕರ್ಮದಲ್ಲಿ ಕುಶಲರಾದವರು ಆಚರಿಸುವ ಈ ವೃತ್ರವಧ ಸಂಬಂಧವಾದ ಕರ್ಮವು **ಮಹಾ**ವ್ರತವೆಂಬ ಹೆಸರಿನಿಂದ ಪ್ರಸಿದ್ಧವಾಯಿತು. ಈ **ಮಹಾವ್ರತ**ವೆಂಬ ಹೆಸರಿಗೆ (ಶಬ್ದಕ್ಕೆ) ಮೂರುವಿಧವಾಗಿ ವ್ಯುತ್ಪತ್ತಿಯನ್ನು ಹೇಳಬಹುದು. **ಮಹಾನ್ಭವತ್ಯನೇನ ವ್ರತೇನೇತಿ ಮಹಾವ್ರತಂ**— ಈ ಕರ್ಮವನ್ನು ಮಾಡಿದ್ದರಿಂದ ಮಹಾನ್ ಎಂಬ ಹೆಸರು. ಬಂದಿದ್ದರಿಂದ ಈ ಕರ್ಮಕ್ಕೆ ಮಹಾವ್ರತವೆಂದು ಹೆಸರು. **ಮಹತೋ ದೇವಸ್ಯ ವ್ರತಮಿತಿ ಮಹಾವ್ರತಂ**— ದೊಡ್ಡ (ಗಣ್ಯ) ದೇವನು ಮಾಡಿದ ಕರ್ಮವಾದ್ದರಿಂದ ಇದಕ್ಕೆ ಮಹಾವ್ರತವೆಂದು ಹೆಸರು; **ಮಹಚ್ಚ ತದ್ವ್ರತಮಿತಿ ಮಹಾವ್ರತಂ**— ಈ ಕರ್ಮವು ಬಹಳ ಮುಖ್ಯವೂ ಗಣ್ಯವೂ ದೊಡ್ಡದೂ ಆದ್ದರಿಂದ ಇದಕ್ಕೆ ಮಹಾವ್ರತವೆಂದೂ ಹೆಸರು. ಈ ಮೂರು ವಿಧವಾದ ನಿರ್ವಚನವನ್ನು (ಅರ್ಥವ್ಯುತ್ಪತ್ತಿಯನ್ನು ತೈತ್ತಿರೀಯಶ್ರುತಿಯಲ್ಲಿ ಹೀಗೆ ಹೇಳಲಾಗಿದೆ— **ಪ್ರಜಾಪತಿಃ ಪ್ರಜಾಃ ಸೃಷ್ಟ್ವಾ ವೃತ್ತೋಽಶಯತ್ । ತಂ ದೇವಾ ಭೂತಾನಾಗ್‍ಂ ರಸಂ ತೇಜಃ ಸಂಭೃತ್ಯ /**

**ತೇನೈನಮಭಿಷಜ್ಯನ್ । ಮಹಾನವವರ್ತೀತಿ । ತನ್ಮಹಾವ್ರತಸ್ಯ ಮಹಾವ್ರತತ್ವಂ । ಮಹತೋ ವ್ರತಮಿತಿ । ತನ್ಮಹಾವ್ರತಸ್ಯ ಮಹಾವ್ರತತ್ವಂ ॥** ಎಂದರೆ ಪೂರ್ವದಲ್ಲಿ ಪ್ರಜಾಪತಿಯು ನಾನಾವಿಧ ಪ್ರಜೆಗಳನ್ನು ಸೃಷ್ಟಿಮಾಡಿದ ಮೇಲೆ ಬಹಳ ಬಳಲಿ ಆಯಾಸವನ್ನು ಹೊಂದಿದನು. ಅದನ್ನು ನೋಡಿ ದೇವತೆಗಳು ದೇವಲೋಕದಲ್ಲಿದ್ದ ಸೋಮರಸವನ್ನು ತಂದು ಪ್ರಜಾಪತಿಗೆ ತಕ್ಕ ಚಿಕಿತ್ಸೆಯನ್ನು ಮಾಡಿದರು. ಅದರಿಂದ ಪ್ರಜಾಪತಿಯು ಪೂರ್ವದಂತೆ ಚೇತರಿಸಿಕೊಂಡು ಮಹಾನ್ ಎಂದು ಪ್ರಸಿದ್ಧನಾದನು ಎಂದರೆ ಪ್ರಜಾಪತಿಯು ಮಾಡಿದ ಸೃಷ್ಟಿಕರ್ಮವು ಅತ್ಯಗಾಧವಾದುದೆಂದು ಪ್ರಸಿದ್ಧವಾಯಿತು. ಆದ್ದರಿಂದಲೇ ಈ ದೊಡ್ಡ ಕಾರ್ಯಕ್ಕೆ ಮಹಾವ್ರತವೆಂದು ಪ್ರಸಿದ್ಧಿಯುಂಟಾಯಿತು. ಸಾಮಗರೂ ಸಹ ಹೀಗೆ ಹೇಳುವರು. **ಪ್ರಜಾಪತಿಃ ಪ್ರಜಾ ಅಸೃಜತ। ಸೋಽರಿಚ್ಯತ । ಸೋಽಪದ್ಯತ । ತೇ ದೇವಾ ಅಭಿಸಂಗಚ್ಛಂತ । ತೇಽಬ್ರುವನ್ । ಮಹದಸ್ಮೈ ವ್ರತಂ ಸಂಭರಾಮ । ಯದಿಮಂ ಧಿನವದಿತಿ । ತಸ್ಮೈ ತತ್ಸಂವತ್ಸರಮನ್ನಂ ಪಚ್ಯತೇ । ತತ್ಸಮಭರದಸ್ಮೈ ಪ್ರಾಯಚ್ಛಂಸ್ತದವ್ರಜಯಂತ ತದೇನಮಧಿನೋನ್ಮಹಸ್ಮರ್ಯಾ ವ್ರತಂ ಯದಿಮಮಧಿನ್ವೀದಿತಿ । ತನ್ಮಹಾವ್ರತಸ್ಯ ಮಹಾವ್ರತತ್ವಂ। ಪ್ರಜಾಪತಿರ್ವಾವ ಮಹಾಂಸ್ತಸ್ಯೈತದ್ವ್ರತಂ ಇತಿ.** ಮೇಲೆ ಹೇಳಿದ ವಿಷಯವನ್ನೇ ಪ್ರಕಾರಾಂತರವಾಗಿ ಹೇಳಿರುವರು. ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿದನಂತರ ಬಹಳ ಆಯಾಸಪಟ್ಟು ತನ್ನ ಶಕ್ತಿಯನ್ನೆಲ್ಲಾ ಕಳೆದುಕೊಂಡು ನಿಶ್ಶಕ್ತನಾಗಿ ಭೂಮಿಯಮೇಲೆ ಬಿದ್ದುಬಿಟ್ಟನು. ಅವನನ್ನು ಉಪಚರಿಸುವುದಕ್ಕಾಗಿ ದೇವತೆಗಳು ಕೆಲವು ಕರ್ಮಗಳನ್ನು ಮಾಡಿ ಪ್ರಜಾಪತಿಯನ್ನು ಸಂತುಷ್ಟನಾಗುವಂತೆ ಮಾಡಿದರು. ಈ ಕರ್ಮವು ಪ್ರಜಾಪತಿಯನ್ನು ಸಂತೋಷಗೊಳಿಸಿದ್ದರಿಂದ ಈ ಕರ್ಮಕ್ಕೆ ಮಹಾವ್ರತವೆಂದು ಹೆಸರಾಯಿತು.

## ದ್ವೇ ಏತಸ್ಯಾಹ್ನ ಆಜ್ಯೇ ಕುರ್ಯಾದಿತಿ ಹೈಕ ಆಹುರೇಕಮಿತಿ ತ್ವೇವ ಸ್ಥಿತಂ ॥

ಇತ್ಥಂ ಮಹಾವ್ರತಂ ಪ್ರಶಸ್ಯ ತತ್ರ ಪ್ರಾತಃಸವನೇ ಹೋತ್ರಾ ಶಂಸನೀಯ ಆಜ್ಯನಾಮಕೇ ಶಸ್ತ್ರೇ ಪೂರ್ವಪಕ್ಷಸಿದ್ಧಾಂತೌ ದರ್ಶಯತಿ —

ಏತಸ್ಯ ಮಹಾವ್ರತಾಖ್ಯಸ್ಯಾಹ್ನಃ ಪ್ರಾಕೃತಂ ವೈಕೃತಂ ಚೇತ್ಯೇವ ದ್ವೇ ಆಜ್ಯಶಸ್ತ್ರೇ ಕುರ್ಯಾತ್ ॥ "ಪ್ರ ವೋ ದೇವಾಗ್ನಯೇ" (ಋ. ಸಂ. ಮಂ. ೩. ಸೂ ೧೩. ಋ. ೧.) ಇತಿ ಸಪ್ತರ್ಚಂ ಸೂಕ್ತಮಾಜ್ಯಶಸ್ತ್ರತ್ವೇನಾಗ್ನಿಷ್ಟೋಮೇಽಭಿಹಿತತ್ವಾತ್ ಪ್ರಾಕೃತಮ್ । "ಅಗ್ನಿಂ ನರೋ ದೀಧಿತಿಭಿಃ" (ಋ. ಸಂ. ಮಂ ೭ ಸೂ. ೧. ಋ. ೧) ಇತಿ ಪಂಚವಿಂಶತ್ಯೃಚಂ ಸೂಕ್ತಮಾಜ್ಯಶಸ್ತ್ರತ್ವೇನ ವಿಶ್ವಜಿತಿ ವಿಧಾನಾದ್ವೈಕೃತಮ್ । ತೇ ದ್ವೇ ಅಪಿ ಪ್ರಾಕೃತವೈಕೃತೇ ಆಜ್ಯೇ ಅಸ್ಮಿನ್ಮಹಾವ್ರತೇ ಕುರ್ಯಾದಿತ್ಯೇವಮೇಕೇ ಶಾಖಾಂತರೀಯಾ ಆಹುಃ । ಸೋಽಯಂ ಪೂರ್ವಃ ಪಕ್ಷಃ । ತಸ್ಯ ಪೂರ್ವಪಕ್ಷಸ್ಯ ವ್ಯಾವೃತ್ತ್ಯರ್ಥಸ್ತುಶಬ್ದಃ । ದ್ವೇ ಆಜ್ಯೇ ನ ಕುರ್ಯಾತ್ಕಿಂತು ವಿಶೇಷವಿಧಾನಾದ್ವೈಕೃತಮೇಕಮಾಜ್ಯಂ ಕುರ್ಯಾದಿತ್ಯೇವ ಸಿದ್ಧಾಂತರಹಸ್ಯಂ ಸ್ಥಿತಮ್ । ಯದಾಽಽಜ್ಯೇ ಶಸ್ತ್ರದ್ವಯಮಂಗೀಕ್ರಿಯೇತ ತದಾನೀಮಗ್ನಿಷ್ಟೋಮಸಂಸ್ಥೇಽಸ್ಮಿನ್ಮಹಾವ್ರತೇ ಪ್ರಕೃತಿತಃ ಪ್ರಾಪ್ತೇಭ್ಯೋ ದ್ವಾದಶಭ್ಯಃ ಶಸ್ತ್ರೇಭ್ಯೋಽಧಿಕಂ ಶಸ್ತ್ರಂ ಪ್ರಾಪ್ನುಯಾತ್, ತಚ್ಚಾಯುಕ್ತಮ್, ದ್ವಾದಶಾಗ್ನಿಷ್ಟೋಮಸ್ಯ ಸ್ತೋತ್ರಾಣಿ ದ್ವಾದಶ ಶಸ್ತ್ರಾಣಿ, ಇತಿ ಶ್ರುತ್ಯಂತರವಿರೋಧಾತ್ । ತದೇವಮತ್ರ ನಿತ್ಯಮಾಜ್ಯಶಸ್ತ್ರಂ ವ್ಯವಸ್ಥಾಪಿತಮ್ ।

ಮಹಾವ್ರತವನ್ನು ಪ್ರಶಂಸೆಮಾಡಿದನಂತರ ಈ ಕರ್ಮದಲ್ಲಿ ಪ್ರಾತಸ್ಸವನದಲ್ಲಿ ಹೋತೃವು ಪಠಿಸಬೇಕಾದ ಆಜ್ಯಶಸ್ತ್ರವು ಎರಡೆಂದು ಕೆಲವರೂ, ಒಂದೆಂದು ಕೆಲವರೂ ಹೇಳುವರು. ಈ ವಿಷಯದಲ್ಲಿ ಪೂರ್ವಪಕ್ಷಸಿದ್ಧಾಂತಗಳನ್ನು ವಿಮರ್ಶೆಮಾಡಿ ತಿಳಿಸುವರು. ಪೂರ್ವಪಕ್ಷವಾದಿಗಳು ಈ ರೀತಿ ಹೇಳುವರು—ಈ ಮಹಾವ್ರತದ ದಿನದಲ್ಲಿ ಪ್ರಾಕೃತ, ವೈಕೃತ ಎಂದು ಎರಡು ಆಜ್ಯಶಸ್ತ್ರಗಳನ್ನು ಪಠಿಸಬೇಕು. **ಪ್ರವೋ ದೇವಾಯಾಗ್ನಯೇ** (ಋ ಸಂ ೨-೧೩-೧) ಎಂಬುದನ್ನು ಅಗ್ನಿಷ್ಟೋಮ ಯಾಗದಲ್ಲಿ ಪಠಿಸುತ್ತಾರೆ. ಅಗ್ನಿಷ್ಟೋಮವು ಪ್ರಕೃತಿಯಾಗವು. ಆದ್ದರಿಂದ ಪ್ರಕೃತಿಯಾಗದಲ್ಲಿ ಪಠಿಸುವ ಈ ಆಜ್ಯಶಸ್ತ್ರವು ಪ್ರಾಕೃತವೇ ಆಗಿರುವುದು. **ಅಗ್ನಿಂ ನರೋ ದೀಧಿತಿಭಿಃ** (ಋ. ಸಂ ೬-೧-೧) ಎಂಬುದು ವಿಕೃತಿಯಾಗದಲ್ಲಿ ಪಠಿಸುವ ಇಪ್ಪತ್ತೈದು ಋಕ್ಕುಗಳ ಆಜ್ಯಶಸ್ತ್ರವು ಇದನ್ನು ವಿಶ್ವಜಿತ್ ಮೊದಲಾದ ವಿಕೃತಿಯಾಗಗಳಲ್ಲಿ ಉಪಯೋಗಿಸುವುದರಿಂದ ವಿಕೃತಿಯಾಗವಾದ ಮಹಾವ್ರತದಲ್ಲಿಯೂ ಇದನ್ನು ಉಪಯೋಗಿಸಬೇಕು. ಆದ್ದರಿಂದ ಈ ಮಹಾವ್ರತದಲ್ಲಿ ಪ್ರಕೃತಿಗೆ ಮತ್ತು ವಿಕೃತಿ ಸಂಬಂಧವಾದ ಎರಡು ಆಜ್ಯ ಶಸ್ತ್ರಗಳನ್ನೂ ಪಠಿಸಬೇಕು, ಇದು ಪೂರ್ವಪಕ್ಷವು. ಆದರೆ ಸಿದ್ಧಾಂತವು ಬೇರೆ ರೀತಿಯಾಗಿರುವುದು. ಈ ಮಹಾವ್ರತದಲ್ಲಿ ಎರಡು ಆಜ್ಯಶಸ್ತ್ರಗಳನ್ನು ಪಠಿಸುವುದು ಅಯುಕ್ತವು. ಈ ಮಹಾವ್ರತದಲ್ಲಿ ವಿಶೇಷನಿಧಿಯ ಪ್ರಕಾರವಾಗಿ ವಿಕೃತಿ ಸಂಬಂಧವಾದ ಒಂದು ಆಜ್ಯಶಸ್ತ್ರವನ್ನು ಮಾತ್ರ ಉಪಯೋಗಿಸಬೇಕು ಏಕೆಂದರೆ ಅಗ್ನಿಷ್ಟೋಮಯಾಗದಲ್ಲಿ—**ದ್ವಾದಶಾಗ್ನಿಷ್ಟೋಮಸ್ಯ ಸ್ತೋತ್ರಾಣಿ । ದ್ವಾದಶ ಶಸ್ತ್ರಾಣಿ** ಎಂದು ವಿಧಿ ಇರುವುದು ಎಂದರೆ ಪ್ರಕೃತಿಯಾದ ಅಗ್ನಿಷ್ಟೋಮವನ್ನು ಅನುಸರಿಸಿರುವ ಈ ಮಹಾವ್ರತದಲ್ಲಿ ಒಟ್ಟು ಹನ್ನೆರಡು ಶಸ್ತ್ರಮಂತ್ರಗಳನ್ನು ಮಾತ್ರ ಉಪಯೋಗಿಸಬೇಕೆಂದು ವಿಧಿಯಿರುವುದು. ಪೂರ್ವಪಕ್ಷವಾದಿಗಳು ಹೇಳುವಂತೆ ಎರಡು ಆಜ್ಯಶಸ್ತ್ರಗಳನ್ನು ಉಪಯೋಗಿಸಿದಲ್ಲಿ ಹನ್ನೆರಡಕ್ಕೆ ಬದಲಾಗಿ ಹದಿಮೂರು ಶಸ್ತ್ರಗಳನ್ನು ಉಪಯೋಗಿಸಿದಂತಾಗುವುದು. ಇದು ಶಾಸ್ತ್ರವಿಧಿಗೆ ವಿರುದ್ಧವು ಆದ್ದರಿಂದ ಒಂದು ಆಜ್ಯಶಸ್ತ್ರವನ್ನು ಮಾತ್ರ ಉಪಯೋಗಿಸಬೇಕು.

## ಪ್ರ ವೋ ದೇವಾಯಾಗ್ನಯ ಇತಿ ರಾದ್ಧಿಕಾಮಃ ॥

**ಅಥ ಕಾಮ್ಯಾನ್ಯಾಜ್ಯಶಸ್ತ್ರಾಣ್ಯುಚ್ಯಂತೇ । ತತ್ರ ಸಮೃದ್ಧಿಫಲಾಯ ಶಸ್ತ್ರವಿಶೇಷಂ ವಿಧತ್ತೇ— ತಚ್ಚ ಸಪ್ತರ್ಚಂ ಸೂಕ್ತಮಿತಿ ಪೂರ್ವಮೇವಾಭಿಹಿತಮ್ ॥**

ಆದರೆ ಬೇರೆ ಬೇರೆ ಇಷ್ಟಾರ್ಥಗಳನ್ನು ಬಯಸುವ ಯಜಮಾನನು ಬೇರೆ ಬೇರೆ ಶಸ್ತ್ರಮಂತ್ರಗಳನ್ನು ಉಪಯೋಗಿಸಬೇಕು. ಆದರೆ ಒಂದು ಶಸ್ತ್ರಮಂತ್ರವನ್ನು ಮಾತ್ರ ಸಮೃದ್ಧಿಯನ್ನು ಬಯಸುವ ಯಜಮಾನನು **ಪ್ರ ವೋ ದೇವಾ-ಯಾಗ್ನಯೇ** ಎಂಬ ಏಳು ಋಕ್ಕಿನ ಸೂಕ್ತವನ್ನು ಮಾತ್ರ ಪಠಿಸಬೇಕು.

## ವಿಶೋ ವಿಶೋ ವಾ ಅತಿಥಿಮಿತಿ ಪುಷ್ಟಿಕಾಮಃ ॥

**ಪುಷ್ಟಿಫಲಾಯ ಸೂಕ್ತಾಂತರಂ ವಿಧತ್ತೇ—ಏತಚ್ಚ ಸೂಕ್ತಂ ಪಂಚದಶರ್ಚಮ್ ॥**

ಪುಷ್ಟಿಯನ್ನು ಅಪೇಕ್ಷಿಸುವ ಯಜಮಾನನು ಆಜ್ಯಶಸ್ತ್ರಕ್ಕಾಗಿ ವಿಶೋ ವಿಶೋ ವಾ (ಋ. ಸಂ ೮-೭೪-೧) ಎಂಬ ಹದಿನೈದು ಋಕ್ಕುಗಳ ಸೂಕ್ತವನ್ನು ಉಪಯೋಗಿಸಬೇಕು.

## ಪುಷ್ಟಿರ್ವೈ ವಿಶಃ ಪುಷ್ಟಿಮಾನ್ಭವತೀತಿ

ತಸ್ಯ ಪುಷ್ಟಿಹೇತುತ್ವಮುಪಪಾದಯತಿ—ವಿಶೋ ವೈಶ್ಯಾಸ್ತೇ ಹಿ ವಾಣಿಜ್ಯೇನ ಬಹುಧನಮಾರ್ಜಯಂತಃ ಕರಮಪಿ ಬಹುಲಂ ಪ್ರಯಚ್ಛಂತಿ । ಅತೋ ವಿಶಾಂ ಪುಷ್ಟಿತ್ವಮ್ । ಅಸ್ಮಿನ್ನರ್ಥೇ ಲೋಕಪ್ರಸಿದ್ಧಿರ್ವಿಶಬ್ದೇನೋಚ್ಯತೇ । ಸೂಕ್ತೇ ತು ವಿಶೋ ವಿಶ ಇತಿ ವೀಪ್ಸಯಾ ಬಹುವಿಧಾನಾಂ ವೈಶ್ಯಾನಾಮಭಿಹಿತತ್ವಾತ್ತೇನ ಸೂಕ್ತೇನಾಯಂ ಯಜಮಾನಃ ಪುಷ್ಟಿಮಾನ್ಭವತೀತ್ಯೇತದುಪಪನ್ನಮ್। ಇತಿಶಬ್ದೋ ಹೇತ್ವರ್ಥಃ । ಯಸ್ಮಾತ್ಪುಷ್ಟಿಮಾನ್ಭವತಿ ತಸ್ಮಾತ್ಪುಷ್ಟಿಕಾಮಸ್ತತ್ಸೂಕ್ತಂ ಕುರ್ಯಾತ್ ॥

ಇಲ್ಲಿ ಪುಷ್ಟಿಯೆಂದರೆ ಧನಾದಿ ಸಂಪತ್ತುಗಳು ಸಾಧಾರಣವಾಗಿ ವ್ಯಾಪಾರಾದಿವೃತ್ತಿಗಳಲ್ಲಿ ಪ್ರವೃತ್ತರಾದ ವೈಶ್ಯರು ಧನಸಂಪತ್ತುಳ್ಳವರಾಗಿಯೂ ರಾಜನಿಗೆ ಕರ (ಕಂದಾಯ) ಗಳನ್ನು ಕೊಡುವ ಧನಾಢ್ಯರಾಗಿಯೂ ಇರುವುದರಿಂದ ಧನವುಳ್ಳವರನ್ನು ನಿರ್ದೇಶಿಸುವುದಕ್ಕಾಗಿ ವಿಶಃ ಎಂಬ ಶಬ್ದಪ್ರಯೋಗವಿದೆ. ಆದ್ದರಿಂದ ಯಜ್ಞಮಾಡುವ ಯಜಮಾನನು ವೈಶ್ಯನಂತೆ ಧನಾಢ್ಯನಾಗುವನೆಂದಭಿಪ್ರಾಯವು.

## ಅತಿಥಿಮಿತಿ ಪದಂ ಭವತಿ ನೈತತ್ಕುರ್ಯಾದಿತ್ಯಾಹುರೀಶ್ವರೋಽತಿಥಿರೇವ ಚರಿತೋಃ ॥

ಅತ್ರ ಪೂರ್ವಪಕ್ಷತ್ವೇನ ತತ್ಸೂಕ್ತಂ ದೂಷಯತಿ—ಅಸ್ಮಿನ್ಸೂಕ್ತೇ ದರಿದ್ರಸ್ಯ ವಾಚಕಮತಿಥಿಮಿತಿ ಪದಂ ವರ್ತತೇ । ತಸ್ಮಾನ್ನೈತತ್ಸೂಕ್ತಂ ಕುರ್ಯಾದಿತ್ಯೇವಂ ಕೇಚಿತ್ಪಂಡಿತಂಮನ್ಯಾ ಆಹುಃ । ತತ್ರೋಪಪತ್ತಿಂ ಚ ವರ್ಣಯನ್ತಿ—ಯ ಏತದಾಜ್ಯಂ ಕುರ್ಯಾತ್ಸೋಽಯಮತಿಥಿರೇವ ದರಿದ್ರ ಏವ ಭೂತ್ವಾ ಯಾಚ್ಞಾರ್ಥಂ ಪರಗೃಹೇಷು ಸರ್ವದಾ ಚರಿತುಂ ಪ್ರಭುರ್ಭವತೀತಿ ॥

ಈ ಆಜ್ಯಸೂಕ್ತದಲ್ಲಿ ಅತಿಥಿ ಎಂಬ ಶಬ್ದವಿರುವುದು. ಈ ಅತಿಥಿ ಶಬ್ದದ ಅರ್ಥವೇನೆಂದರೆ—ಅತಿಥಿಯು ದರಿದ್ರನಾಗಿ ಯಾವಾಗಲೂ ಇತರರ ಮನೆಗೆ ಭಿಕ್ಷಾರ್ಥವಾಗಿ ಹೋಗುತ್ತಿರುವನು. ಇಂತಹ ಪುರುಷನಿಂದ ಆಜ್ಯಶಸ್ತ್ರ ಮಂತ್ರವನ್ನು ಪಠಿಸುವಂತೆ ಮಾಡುವುದು ಯುಕ್ತವೇ ? ಎಂದು ಪೂರ್ವಪಕ್ಷವಾದಿಗಳು ಕೇಳುವರು.

## ತದು ಹ ಸ್ಮಾ ಹ ಕುರ್ಯಾದೇವ ॥

ಅತ್ರ ಸಿದ್ಧಾಂತತ್ವೇನ ತಸ್ಯ ಸೂಕ್ತಸ್ಯ ಪ್ರಸಂಗಂ ಚ ವಿಧತ್ತೇ—ಅತಿಥಿಪದತಾತ್ಪರ್ಯಾಭಿಜ್ಞಃ ಸಿದ್ಧಾಂತೀ ತದುಹ ಸೂಕ್ತಮವಶ್ಯಂ ಕುರ್ಯಾದಿತ್ಯಾಹ ಸ್ಮ ॥

ಅತಿಥಿಪದದ ಶಬ್ದಾರ್ಥವನ್ನು ತಿಳಿದ ಅಭಿಜ್ಞರು ಅತಿಥಿಯಾದವನಿಂದ ಆಜ್ಯಶಸ್ತ್ರವನ್ನು ಅವಶ್ಯಕವಾಗಿ ಹೇಳಿಸಬಹುದೆಂದು ಅಭಿಪ್ರಾಯಪಡುವರು ಏಕೆಂದರೆ—

## ಯೋ ವೈ ಭವತಿ ಯಃ ಶ್ರೇಷ್ಠತಾಮಶ್ನುತೇ ಸ ವಾ ಅತಿಥಿರ್ಭವತಿ ॥

ಪೂರ್ವ ಪಕ್ಷೋಕ್ತದೂಷಣಶಮನಾರ್ಥಮತಿಥಿಶಬ್ದತಾತ್ಪರ್ಯಂ ದರ್ಶಯತಿ—ಅತ್ರಾಸ್ತಿನಾಚೀ ಭೂಧಾತುಃ ಸನ್ಮಾರ್ಗವರ್ತಿನಂ ಬ್ರೂತೇ । ಯಸ್ತು ಪುಮಾನ್ ಸನ್ಮಾರ್ಗಪರ್ತೀ ಭವತಿ ತಸ್ಮಿ-

ನ್ನಪಿ ಸನ್ಮಾರ್ಗವರ್ತಿಸಂಘೇ ಯಃ ಪುಮಾನತಿಶಯೇನ ಪ್ರಾಶಸ್ತ್ಯಂ ಪ್ರಾಪ್ನೋತಿ ಸ ಏವಾತಿಥಿರ್ಭವತಿ । ಅತಃ ಪ್ರಾಶಸ್ತ್ಯಮತ್ರ ಶಬ್ದಪ್ರವೃತ್ತಿನಿಮಿತ್ತಂ ನ ತು ದಾರಿದ್ರ್ಯಮ್ ॥

ಇಲ್ಲಿ ಭೂಧಾತವು ಅಸ್ತಿ (ಇರುವುದು) ಎಂಬ ಸನ್ಮಾರ್ಗಪ್ರವೃತ್ತಿಯನ್ನು ಸೂಚಿಸುವುದು. ಯಾವ ಪುರುಷನು ಸನ್ಮಾರ್ಗದಲ್ಲಿ ಇರುವನೋ ಅವನು ಅತಿಶಯವಾಗಿ ಪ್ರಾಶಸ್ತ್ಯವನ್ನು ಪಡೆದಿರುವನು. ಇಂತಹ ಪುರುಷನೇ ಅತಿಥಿಯು. ಆದ್ದರಿಂದ ಅತಿಥಿ ಶಬ್ದಕ್ಕೆ ಪ್ರಾಶಸ್ತ್ಯವನ್ನು ಪಡೆದಿರುವ ಪುರುಷನೆಂದೇ ಅರ್ಥವು ದರಿದ್ರನೆಂಬ ಅರ್ಥವಲ್ಲ.

ನ ವಾ ಅಸಂತಮಾತಿಥ್ಯಾಯಾಽದ್ರಿಯಂತೇ ॥

ಏತದೇವ ವ್ಯತಿರೇಕಮುಖೇನ ಸ್ಪಷ್ಟಯತಿ—ಸನ್ಮಾರ್ಗರಹಿತಂವ್ರಾತ್ಯಾಭಿಶಸ್ತಾದಿಕಂ ಪುರುಷಮತ್ಯಂತದರಿದ್ರಮಪ್ಯಾತಿಥ್ಯಸತ್ಕಾರಾಯ ನಾಽಽದ್ರಿಯಂತೇ ॥

ಸನ್ಮಾರ್ಗರಹಿತನಾದ ಪುರುಷನು ದರಿದ್ರನಾಗಿರುವನೆಂಬ ಕಾರಣದಿಂದ ಮಾತ್ರ ಅವನಿಂದ ಆಜ್ಯಶಸ್ತ್ರಮಂತ್ರವನ್ನು ಪಠಿಸುವಂತೆ ಮಾಡುವುದಿಲ್ಲ.

ತಸ್ಮಾದು ಕಾಮಮೇವೈತತ್ಕುರ್ಯಾತ್ ॥

ಸಿದ್ಧಮರ್ಥಂ ಕಥಯತಿ—ಯಸ್ಮಾದತಿಥಿಶಬ್ದೋ ನ ದುಷ್ಟಃ ಕಿಂತು ಪ್ರಶಸ್ತಸ್ತಸ್ಮಾದೇವ ಕಾರಣಾದ್ವಿಸ್ರಂಭೇಣೈವೈತತ್ಸೂಕ್ತಂ ಕುರ್ಯಾತ್ ॥

ಅತಿಥಿ ಶಬ್ದವು ದುಷ್ಟನೆಂಬರ್ಥವನ್ನು ಸೂಚಿಸುವುದಿಲ್ಲ. ಪ್ರಶಸ್ತನಾಗಿರುವನು ಎಂಬುದನ್ನು ಮಾತ್ರ ಸೂಚಿಸುವುದು ಅದ್ದರಿಂದ ಅತಿಥಿಯು ಅವಶ್ಯವಾಗಿ ಆಜ್ಯಶಸ್ತ್ರಮಂತ್ರವನ್ನು ಪಠಿಸಬಹುದು. ಇದರಲ್ಲಿ ದೋಷವೇನೂ ಇರುವುದಿಲ್ಲ.

ಸ ಯದ್ಯೇತತ್ಕುರ್ಯಾದಾಗನ್ಮ ವೃತ್ರಹಂತಮಮಿತ್ಯೇತಂ ತೃಚಂ ಪ್ರಥಮಂ ಕುರ್ಯಾತ್ ॥

ತತ್ಸೂಕ್ತಪ್ರಯೋಗೇ ಕಂಚಿದ್ವಿಶೇಷಂ ವಿಧತ್ತೇ—ತಸ್ಮಿನ್ಸೂಕ್ತೇ—"ವಿಶೋ ವಿಶಃ" (ಋ, ಸಂ. ಮಂ. ೮ ಸೂ. ೭೪ ಋ. ೧) ಇತ್ಯಾದಿಕಃ ಪ್ರಥಮಸ್ತೃಚಃ "ಆಗನ್ಮ" ಇತ್ಯಾದಿಕೋ ದ್ವಿತೀಯಸ್ತೃಚಃ । ಪ್ರಯೋಗಕಾಲೇ ತ್ವಾಗನ್ಮೇತ್ಯಾದಿಕಂ ಪ್ರಥಮತ್ವೇನ ಪಠೇತ್ ।

ಈ ಸೂಕ್ತಪಠನದಲ್ಲಿ ಒಂದು ವಿಶೇಷವಿರುವುದು. ಈ ಸೂಕ್ತದ ಮೊದಲನೆಯ ಋಕ್ಕಿನಲ್ಲಿ (ಋ.ಸಂ. ೮-೭೪-೧) ವಿಶೋ ವಿಶಃ ಎಂಬ ಶಬ್ದಪ್ರಯೋಗವಿರುವುದು. ಎರಡನೇ ಋಕ್ಕಿನಲ್ಲಿ ಆಗನ್ಮ ಇತ್ಯಾದಿಶಬ್ದಪ್ರಯೋಗವಿರುವುದು. ಸೂಕ್ತಪಠನಕಾಲದಲ್ಲಿ (ಪ್ರಯೋಗಕಾಲದಲ್ಲ) ಆಗನ್ಮ ಎಂದು ಇರುವ ಋಕ್ಕನ್ನು ಮೊದಲು ಪಠಿಸಿ ಅನಂತರ ಇರುವ ಋಕ್ಕುಗಳನ್ನೂ ಪಠಿಸಬೇಕು.

ಏತದ್ವಾ ಅಪರೀಪ್ಸಂತಃ ಸಂವತ್ಸರಮಾಸತೇ ತ ಆಗಚ್ಛಂತಿ ॥

ತತ್ರೋಪಪತ್ತಿಮಾಹ—ಯೇ ಗವಾಮಯನನಾಮಕಂ ಸಂವತ್ಸರಸತ್ರಮನುತಿಷ್ಠಂತಿ ತೇ ಮಹಾವ್ರತಾಖ್ಯಮೇತದೇವೋಪಾಂತ್ಯಮಹಃ ಪ್ರಾಪ್ತುಮಿಚ್ಛಂತೋಽನುತಿಷ್ಠಂತಿ ।ತಥಾ ಸತ್ಯಗನ್ಮೇತಿ ಪ್ರಾಪ್ತಿವಾಚಕಂ ಶಬ್ದಂ ಪ್ರಯುಂಜಾನಾಸ್ತೇ ಪುರುಷಾ ಏತದಹರಾಗಚ್ಛಂತಿ ತಸ್ಮಾದೇತಸ್ಯ ಪ್ರಾಥಮ್ಯಂ ಯುಕ್ತಮ್ ॥

ಸಂವತ್ಸರದವರೆಗೂ ಮಾಡಬೇಕಾದ ಗವಾಮಯನವೆಂಬ ಸತ್ರಯಾಗವನ್ನು ಆಚರಿಸುವವರು ಕೊನೆಯದಿನ ಹಿಂದಿನ ದಿನ ಮಹಾವ್ರತವೆಂಬ ಕರ್ಮವನ್ನಾಚರಿಸುವರು. ಆದ್ದರಿಂದ ಯಜ್ಞಕರ್ತರು ಪ್ರಾಪ್ತವಾಗುವುದು ಎಂಬರ್ಥ ವನ್ನು ಸೂಚಿಸುವ ಆಗನ್ಮ ಎಂಬ ಶಬ್ದಪ್ರಯೋಗವಿರುವ ಋಕ್ಕನ್ನು ಮೊದಲು ಪಠಿಸುವುದೇ ಯುಕ್ತವಾಗಿರುವುದು.

ತ ಏತೇಽನುಷ್ಟುಪ್‌ಶೀರ್ಷಾಣಸ್ತ್ರಯಸ್ತೃಚಾ ಭವನ್ತಿ ಬ್ರಹ್ಮ ವೈ ಗಾಯತ್ರೀ ವಾಗನುಷ್ಟುಪ್‌ಬ್ರಹ್ಮಣೈವ ತದ್ವಾಚಂ ಸಂದಧಾತಿ ॥

ಅತಿಥಿಮಾಗನ್ಮೇತಿ ಪದದ್ವಯತಾತ್ಪರ್ಯದರ್ಶನೇನ ತೃಚದ್ವಯಂ ವ್ಯಾಖ್ಯಾತಮ್ । ಅಥಾವಶಿಷ್ಟಾನಾಂ ತೃಚಾನಾಂ ತಾತ್ಪರ್ಯಂ ದರ್ಶಯತಿ—ಪಂಚದಶರ್ಚೇ 'ವಿಶೋ ವಿಶಃ' (ಋ. ಸಂ. ಮಂ. ೮–ಸೂ ೭೪. ಋ ೧) ಇತ್ಯಾದಿಕೇ ಸೂಕ್ತೇ ಪ್ರಥಮತಸ್ತೃಚದ್ವಯೇ ಗತೇ ಸತಿ ತತಊರ್ಧ್ವಂ ತ್ರಯಸ್ತೃಚಾಃ ಶಿಷ್ಯಂತೇ । ತೇಷ್ವಂತಿಮಸ್ತೃಚಃ"ಅಹಂ ಹುವಾನಃ"ಇತ್ಯಾದಿಕೋಽನುಷ್ಟುಪ್‌ಛಂದಸ್ಕಃ ।ತತ್ರಾನುಷ್ಟುಪ್‌ಛಂದಸಿ ತದುತ್ತಮಾಂಗಸ್ಥಾನಂ ಯೇಷಾಂ ತೃಚಾನಾಂ ತೇಽನುಷ್ಟುಪ್‌ಶೀರ್ಷಾಣಃ । ಏತೇ ತೃಚಾಸ್ತ್ರಿಸಂಖ್ಯಾಕಾಃ । ತತ್ರೋಪಾಂತ್ಯತೃಚೇ ತತಃ ಪೂರ್ವತನೇ ತೃಚೇ ಚ ಗಾಯತ್ರೀ ಛಂದೋ ವಿದ್ಯತೇ । ಸಾ ಚ ಗಾಯತ್ರೀ ಬ್ರಹ್ಮೈವ, 'ತತ್ಸವಿತುರ್ವರೇಣ್ಯಮ್' (ಋ. ಸಂ. ಮ ೩–ಸೂ ೬೨ ಋ. ೧೦) ಇತ್ಯನಯಾ ಗಾಯತ್ರ್ಯಾ ಪರಬ್ರಹ್ಮಣಃ ಪ್ರತಿಪಾದ್ಯತ್ವಾತ್ । ಯೇಯಂ ತೃಚಗತಾನುಷ್ಟುಪ್‌ಸಾ ವಾಗ್ರೂಪಾ ಚತುಷ್ಪಾತ್ತ್ವಸಾಮಾನ್ಯಾತ್ । "ಚತ್ವಾರಿ ವಾಕ್ಪರಿಮಿತಾ ಪದಾನಿ" (ಋ. ಸಂ. ಮಂ ೧ ಸೂ ೧೬೪. ಋ ೪೫) ಇತಿ ವಾಚಃ ಪಾದಚತುಷ್ಟಯಮಾಮ್ನಾತಮ್ । ಪರಾ ಪಶ್ಯಂತೀ ಮಧ್ಯಮಾ ವೈಖರೀತ್ಯುಕ್ತಂ ತತ್ಪಾದಚತುಷ್ಟಯಮನ್ಯೈರ್ವ್ಯಾಖ್ಯಾತಮ್ । ಅನುಷ್ಟುಭಸ್ತು ಚತುಷ್ಪಾತ್ತ್ವಂ ಪ್ರಸಿದ್ಧಮ್ । ಏವಂ ಸತ್ಯಸ್ಮಿನ್ಸೂಕ್ತೇ ಗಾಯತ್ರ್ಯನುಷ್ಟುಭೋರ್ಮೇಲನೇ ಸತಿ ತಂತ್ರೇಣ ಸೂಕ್ತಪಾಠೇನ ಬ್ರಹ್ಮಣೈವ ವಾಚಂ ಸಂಯೋಜಯತಿ ॥

ಅತಿಥಿ ಮತ್ತು ಆಗನ್ಮ ಎಂಬ ಎರಡು ಶಬ್ದಗಳ ಅರ್ಥವನ್ನು ವಿವರಿಸುವುದಕ್ಕಾಗಿ ಎರಡು ತೃಚ (ಆರು ಋಕ್ಕುಗಳು) ಗಳನ್ನು ತಿಳಿಸಿದ್ದಾಯಿತು. ಈಗ ಉಳಿದ ಋಕ್ಕುಗಳ ತಾತ್ಪರ್ಯವನ್ನು ತಿಳಿಸುವರು. ವಿಶೋ ವಿಶಃ ಎಂಬ ಸೂಕ್ತದಲ್ಲಿ (ಋ. ಸಂ. ೮–೭೪) ಹದಿನೈದು ಋಕ್ಕುಗಳಿರುವವು. ಮೂರು ಋಕ್ಕುಗಳಿಗೆ ಒಂದು ತೃಚವು. ಇಂತಹ ಐದು ತೃಚಗಳು ಈ ಸೂಕ್ತದಲ್ಲಿರುವವು. ಹಿಂದೆ ಎರಡು ತೃಚಗಳನ್ನು (ಆರು ಋಕ್ಕುಗಳನ್ನು) ವಿವರಿಸಿದ್ದಾಯಿತು. ಇನ್ನುಳಿದ ಮೂರು ತೃಚಗಳಲ್ಲಿ ಕೊನೆಯ ತೃಚವು (ಅಹಂ ಹುವಾನಃ) ಅನುಷ್ಟುಪ್ ಛಂದಸ್ಕವು. ಇದು ಕೊನೆಯ ತೃಚವಾದ್ದರಿಂದ ಶೀರ್ಷ (ಶಿರಸ್ಸು) ಸ್ಥಾನೀಯವೆನಿಸುವುದು. ಇದರ ಹಿಂದಿನ ಎರಡು ತೃಚಗಳು ಗಾಯತ್ರೀಛಂದಸ್ಕವು.

ಗಾಯತ್ರಿಯೆಂದರೆ ಬ್ರಹ್ಮವು. ಏಕೆಂದರೆ **ತತ್ಸವಿತುಃ** ಎಂಬ ಗಾಯತ್ರಿಯು ಪರಬ್ರಹ್ಮನನ್ನೇ ಪ್ರತಿಪಾದಿಸುವುದು. ಅನುಷ್ಟುಪ್ ಎಂದರೆ ಚತುಷ್ಪಾದಯುಕ್ತವಾದ ವಾಗ್ರೂಪವು. **ಚತ್ವಾರಿ ವಾಕ್ಪರಿಮಿತಾ ಪದಾನಿ** (ಋ.ಸಂ. ೧-೧೬೪-೪೫) ಎಂದು ಶ್ರುತಿವಾಕ್ಯವಿರುವುದು. ಇದಕ್ಕೆ ಅನೇಕರು ವಾಕ್ಯವು ಪರಾ ಪಶ್ಯಂತೀ ಮಧ್ಯಮಾ ವೈಖರೀ ಎಂದು ನಾಲ್ಕುವಿಧ ಗಳಾಗಿರುವುದೆಂದು ಅರ್ಥಮಾಡಿದ್ದಾರೆ. ಅನುಷ್ಟುಪ್‌ಛಂದಸ್ಸಿಗೆ ನಾಲ್ಕು ಪಾದಗಳಿರುವುದು ಪ್ರಸಿದ್ಧವಾಗಿಯೇ ಇದೆ. ಹೀಗಿರುವಾಗ ಈ ಸೂಕ್ತಪಠನದಿಂದ ಮೂರು ಪಾದಗಳುಳ್ಳ ಗಾಯತ್ರಿಯಲ್ಲಿ ಎಂದರೆ, ಪರಬ್ರಹ್ಮನಲ್ಲಿ ನಾಲ್ಕು ಪಾದ ಗಳುಳ್ಳ ವಾಕ್ಯವನ್ನು (ಅನುಷ್ಟುಪ್ ಛಂದಸ್ಸನ್ನು) ಸೇರಿಸಿದಂತೆ ಆಯಿತು ಎಂದು ಮುಖ್ಯಾಭಿಪ್ರಾಯವು.

## ಅಬೋಧ್ಯಗ್ನಿಃ ಸಮಿಧಾ ಜನಾನಾಮಿತಿ ಕೀರ್ತಿಕಾಮಃ ॥

**ಅಥ ಕೀರ್ತಿಫಲಾರ್ಥಂ ಸೂಕ್ತಾಂತರಂ ವಿಧತ್ತೇ—ಅಬೋಧೀತ್ಯಾದಿಕಂ ದ್ವಾದಶರ್ಚಂ ಸೂಕ್ತಮ್ ॥**

ಕೀರ್ತಿ (ಯಶಸ್ಸನ್ನು) ಅಪೇಕ್ಷಿಸುವ ಪುರುಷನು ಆಜ್ಯಸೂಕ್ತಕ್ಕಾಗಿ **ಅಬೋಧ್ಯಗ್ನಿಃ ಸಮಿಧಾ ಜನಾನಾಂ** ಎಂಬ ಹನ್ನೆರಡು ಋಕ್ಕುಗಳ ಸೂಕ್ತವನ್ನು (ಋ. ಸಂ. ೫-೧) ಪಠಿಸಬೇಕು.

## ಹೋತಾಜನಿಷ್ಟ ಚೇತನ ಇತಿ ಪ್ರಜಾಪಶುಕಾಮಃ ॥

**(ಪ್ರಜಾಪಶು) ಫಲಾರ್ಥಮನ್ಯತ್ಸೂಕ್ತಂ ವಿಧತ್ತೇ—ಹೋತೇತ್ಯಾದಿಕಮಷ್ಟರ್ಚಂ ಸೂಕ್ತಮ್। ಯಥೋಕ್ತಾನಾಂ ಕಾಮ್ಯಸೂಕ್ತಾನಾಂ ಗೋದೋಹನನ್ಯಾಯೇನ ಫಲಾರ್ಥತ್ವಮೇವ ನ ತು ಕ್ರತ್ವರ್ಥತ್ವಮ್ ॥ ಸ ಚ ನ್ಯಾಯಶ್ಚತುರ್ಥಾಧ್ಯಾಯಸ್ಯ ಪ್ರಥಮಪಾದೇ ಚಿಂತಿತಃ ॥**

**ಗೋದೋಹನಂ ದ್ವಯಾರ್ಥಂ ಸ್ಯಾನ್ನ ವಾ ಭಾಗದ್ವಯಾರ್ಥತಾ ।**
**ಅನ್ಯಥಾಽಪಿ ಕ್ರತೋಃ ಸಿದ್ಧೇಃ ಕೇವಲಂ ಪುರುಷಾಯ ತತ್ ॥**

**ದರ್ಶಪೂರ್ಣಮಾಸಯೋಃ ಶ್ರೂಯತೇ—" ಚಮಸೇನಾಪಃ ಪ್ರಣಯೇದ್ಗೋದೋಹನೇನ ಪಶುಕಾಮಸ್ಯ " ಇತಿ ॥ ತತ್ರ ಗೋದೋಹನಸ್ಯ ಕ್ರತ್ವರ್ಥಂ (ರ್ಥತ್ವಂ) ಪುರುಷಾರ್ಥತ್ವಂ ಚೇತ್ಯಾಕಾರದ್ವಯಮಸ್ತಿ । ಪಶುಫಲಜನನೇನ ಪುರುಷಪ್ರೀತಿರ್ಭಾತಿ, ಅಪಾಂ ಪ್ರಣಯನೇನ ಕ್ರತುಪೌಷ್ಕಲ್ಯಮಪಿ ಭಾತೀತಿ ಚೇನ್ನೈವಮ್ । ಗೋದೋಹನಮಂತರೇಣ ಫಲಾಸಿದ್ಧೇರ್ಭವತು ಪುರುಷಾರ್ಥತ್ವಂ ಕ್ರತುಸ್ತು ತದಭಾವೇಽಪಿ ಚಮಸೇನ ಸಿಧ್ಯತೀತಿ ನ ಕ್ರತ್ವರ್ಥತಾ । ಏವಮತ್ರಾಪಿ ಯಥೋಕ್ತಾನಿ ಕಾಮ್ಯಸೂಕ್ತಾನಿ ಫಲಾರ್ಥಾನ್ಯೇವ ನ ತು ಕ್ರತ್ವರ್ಥಾನಿ । ಏವಂ ತರ್ಹಿ ಕ್ರತೋರಂಗವೈಕಲ್ಯಂ ಪ್ರಸಜ್ಯೇತೇತಿ ಚೇತ್ । ನೈವಮ್ । ಕಾಮ್ಯಾನಾಮೇತೇಷಾಂ ಕ್ರತ್ವಂಗತಭೂತಂ ಶಂಸನಮಾಶ್ರಿತ್ಯ ವಿಧಾನಮಿತಿ ಕಾಮ್ಯೈರಪಿ ಸೂಕ್ತೈಃ ಕ್ರತ್ವಂಗಸ್ಯ ಶಂಸನಸ್ಯ ನಿಷ್ಪತ್ತೇಃ, ಕಾಮ್ಯೇನ ನಿತ್ಯಸಿದ್ಧಿರಿತಿ ತಾಂತ್ರಿಕಾಣಾಂ ಡಿಂಡಿಮಃ । ತಸ್ಮಾತ್ಫಲಸಾಧನತ್ವೇನ ವಿಧಾನಾದೇತೈಃ ಫಲಂ ಸಾಕ್ಷಾತ್ಸಿಧ್ಯತ್ಯರ್ಥಾತ್ ಕ್ರತೋಃ ಸಾಂಗತ್ವಮಿತ್ಯುಪಪನ್ನಮ್ ॥**

ಪ್ರಜಾಸಂತತಿಯನ್ನೂ ಪಶುಸಂಪತ್ತನ್ನೂ ಬಯಸುವ ಪುರುಷನು ಆಜ್ಯಶಸ್ತ್ರಕ್ಕಾಗಿ ಹೋತಾಽಜನಿಷ್ಟ ಚೇತನಃ (ಋ. ಸಂ. ೨ ೫) ಎಂಬ ಸೂಕ್ತವನ್ನು ಪಠಿಸಬೇಕು. ಈ ಸೂಕ್ತದಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತವನ್ನು ಪಠಿಸುವುದರಿಂದ ಅಪೇಕ್ಷಿಸಿದ ಫಲವುಂಟಾಗುವುದು. ಯಜ್ಞಕ್ಕಾಗಿಯೇ ಇದನ್ನು ಆಚರಿಸಬೇಕೆಂಬ ನಿಯಮವಿಲ್ಲ.

**॥ ಅಥ ಮೀಮಾಂಸಾ ॥**

ಇಲ್ಲಿಯೂ ಮುಂದೆ ಕೆಲವು ಕಡೆಯೂ ಮೀಮಾಂಸಾವಾಕ್ಯವನ್ನು ಚರ್ಚೆಮಾಡಿರುವರು. ಹಿಂದೆ ಐತರೇಯ ಬ್ರಾಹ್ಮಣದಂತೆ ಗ್ರಂಥವು ವಿಸ್ತಾರವಾಗುವುದೆಂಬ ಭಯದಿಂದಲೂ ಈ ಮೀಮಾಂಸಾಭಾಗವು ಅವಶ್ಯಕವಲ್ಲವಾದ್ದರಿಂದಲೂ ಈ ಭಾಗದ ಅನುವಾದವನ್ನು ಇಲ್ಲಿ ಮಾಡಿರುವುದಿಲ್ಲ.

---

*English Translation*

---

1. Now follows the Mahavrata ceremony.

2. After having killed Vritra, Indra became great. When he became great, then there was the Mahavrata (the great work). This is why the Mahavrata ceremony is called Mahavrata.

3. Some people say : 'Let the priest make two (recitations with the offering of thə) agya (ghee) on that day,' but the right thing is one.

4. He who desires prosperity should use the hymn, pra vo devay-agnaye (Rv. III, 13, 1).

5. He who desires increase should use the hymn, viso viso atithim (Rv. VIII, 74, I)

6. The people (visah) indeed are increase, and therefore he (the sacrificer) becomes increased.

7. But (some say), there is the word atithim (in that hymn, which means a guest or stranger, asking for food). Let him not therefore take that hymn. Verily, atithi (stranger) is able to go begging.

8. 'No,' he said, let him take that hymn.

9. ' For he who follows the good road and obtains distinction, he is an athithi (guest)

10. ' They do not consider him who is not so, worthy to be (called) an atithi [guest].

11. ' Therefore let him by all means take that hymn.'

12. If he takes that hymn, let him place the (second) tristich, aganma vritrahantam...., ' we come near to the victorious,' first.

13. For people worship the whole year (performing the Gavamayana sacrfice) wishing for this day (the last but one)– they do come near.

14. The (next following) three tristichs being with an Anushtubh Now Brahman is Gayatri, speech is Anushtubh. He thus joins speech with Brahman.

15. He who desires glory should use the hymn, abodhy agnih samidha gananam (Rv. V, I, I).

16. He who desires soffspring and cattle should use the hymn, hotaganishta ketanah (Rv. II, 5, I).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ಪ್ರಥಮಾಧ್ಯಾಯೇ ಪ್ರಥಮಃಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ಮಾಧವೀಯ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯದ ಪ್ರಥಮಾರಣ್ಯಕದ
ಪ್ರಥಮಾಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು ||



# ಅಥ ಪ್ರಥಮಾರಣ್ಯಕೇ ಪ್ರಥಮಾಧ್ಯಾಯೇ ದ್ವಿತೀಯಃ ಖಂಡಃ

**ಪ್ರಥಮಾರಣ್ಯಕದ ಪ್ರಥಮಾಧ್ಯಾಯದಲ್ಲಿ ಎರಡನೆಯ ಖಂಡವು.**

---

## ಅಗ್ನಿಂ ನರೋ ದೀಧಿತಿಭಿರರಣ್ಯೋರಿತ್ಯನ್ನಾದ್ಯಕಾಮಃ

ಅನ್ನಾದ್ಯಫಲಾಯ ಸೂಕ್ತಾಂತರಂ ವಿಧತ್ತೇ—ಅತ್ತುಂ ಯೋಗ್ಯಂ (ಆದ್ಯಂ) ಶಾಲ್ಯಾದಿ-ನಿಷ್ಪನ್ನಮನ್ನಂ ಚ ತದಾದ್ಯಂ ಚೇತ್ಯನ್ನಾದ್ಯಕಾಮತ್ವಮಸ್ಯ (ದ್ಯಂ ತಸ್ಮಿನ್‌ಕಾಮೋಽಸ್ಯ) । ಅಗ್ನಿಂ ನರ ಇತ್ಯಾದಿಕಂ ಪಂಚವಿಂಶತ್ಯೃಚ ಮಾಜ್ಯಶಸ್ತ್ರಮುಪಗಂತವ್ಯಮ್ ॥

ತಿನ್ನುವುದಕ್ಕೆ (ಅತ್ತುಂ) ಯೋಗ್ಯವಾದ ಪದಾರ್ಥಕ್ಕೆ **ಆದ್ಯಂ** ಎಂದು ಹೆಸರು. ಆಹಾರವು ಎಂದರ್ಥವು. ಅನ್ನಾದ್ಯಾಹಾರವನ್ನು ಬಯಸುವ ಪುರುಷನು ಆಜ್ಯ ಶಸ್ತ್ರಕ್ಕಾಗಿ **ಅಗ್ನಿಂ ನರೋದೀಧಿತಿಭಿರರಣ್ಯೋಃ** (ಋ. ಸಂ. ೭-೧) ಎಂಬ ಇಪ್ಪತ್ತೈದು ಋಕ್ಕುಗಳ ಸೂಕ್ತವನ್ನು ಪಠಿಸಬೇಕು.

## ಅಗ್ನಿರ್ವಾ ಅನ್ನಾದಃ

ಅಸ್ಯ ಸೂಕ್ತಸ್ಯಾನ್ನಹೇತುತ್ವಂ ಸಂಭಾವಯತಿ—ಅಗ್ನೇರನ್ನಭೋಜಕತ್ವೇ ಲೋಕಪ್ರಸಿದ್ಧಿದ್ಯೋತನಾರ್ಥೋ ವೈಶಬ್ದಃ । ಅಗ್ನೇಃ ಸ್ವಯಮನ್ನಭೋಜಕತ್ವೇನಾನ್ನಪ್ರಿಯತ್ವಾತ್ತದ್ವಿಷಯ-ಸೂಕ್ತೇನಾನ್ನಲಾಭೋಯುಕ್ತ ಇತ್ಯರ್ಥಃ ॥

ಇಲ್ಲಿ ಅನ್ನಾದಃ ಎಂದರೆ ಅಗ್ನಿಗೆ ಹೆಸರು. ಏಕೆಂದರೆ, ಅಗ್ನಿಯು ಹವಿಸ್ಸಿನರೂಪದಲ್ಲಿ ಅನ್ನವನ್ನು ಭಕ್ಷಿಸುವುದು ಪ್ರಸಿದ್ಧವಾಗಿಯೇ ಇದೆ. ಇಂತಹ ಅಗ್ನಿಯನ್ನು ಸ್ತುತಿಸುವುದರಿಂದ ಅನ್ನಲಾಭವುಂಟಾಗುವುದು. ಆದ್ದರಿಂದ ಈ ಸೂಕ್ತವನ್ನು ಪಠಿಸುವುದು ಯುಕ್ತವಾಗಿದೆ.

## ಚಿರತರಮಿವ ವಾ ಇತರೇಷ್ವಾಜ್ಯೇಷ್ವಗ್ನಿಮಾಗಚ್ಛಂತ್ಯಥೇಹ ಮುಖತ ಏವಾಗ್ನಿಮಾಗಚ್ಛಂತಿ ಮುಖತೋಽನ್ನಾದ್ಯಮಶ್ನುತೇ ಮುಖತಃ ಪಾಪ್ಮಾನಮಪಪ್ನುತೇ ॥

ನನು "ಪ್ರವೋದೇವಾಯಾಗ್ನಯೇ" (ಋ-ಸಂ-ಮಂ- ೩ ಸೂ-೧೩-ಋ-೧) ಇತ್ಯಾದಿ-ಸೂಕ್ತೇಷ್ವಪ್ಯಗ್ನಿರ್ವಿದ್ಯತ ಇತ್ಯಾಶಂಕ್ಯ ತೇಭ್ಯೋಽಸ್ಯ ಸೂಕ್ತಸ್ಯ ವಿಶೇಷಂ ದರ್ಶಯತಿ ಇತ-ರೇಷು "ಪ್ರವೋದೇವಾಯಾಗ್ನಯೇ" (ಋ-ಸಂ-ಮ-೩-ಸೂ-೧೩-ಋ-೧) ಇತ್ಯಾದಿಷ್ವಾಜ್ಯ-

**ಶಸ್ತ್ರೇಷು ಯಜಮಾನಾ ಅತ್ಯಂತವಿಲಂಬೋ ಯಥಾ ಭವತಿ ತಥೈವಾಗ್ನಿಂ ಪ್ರಾಪ್ನುವಂತಿ । ಸೂಕ್ತಾದಾವಗ್ನಿಪದಾಭಾವಾತ್ । ಇಹ ತು ತತ್ಸದ್ಭಾವಾದಾದಾವೇವ ಸಹಸಾಽಗ್ನಿಂ ಪ್ರಾಪ್ನುವಂತ । ಅತೋ ಭವದಾ (ತೋಽನ್ನಾ) ದ್ಯಮಾದೌ ವಿಲಂಬಮಂತರೇಣೈವ ಯಜಮಾನಸಂಘಃ ಪ್ರಾಪ್ನೋತಿ । ತಥಾ ತೇ ಯಜಮಾನಾ ಆದಾವೇವ ಪಾಪ್ಮಾನಂ ನಾಶಯಂತಿ ॥**

**ಪ್ರವೋ ದೇವಾಯಾಗ್ನಯೇ** (ಋ. ಸಂ. ೨-೧೨-೧) ಎಂದು ಮೊದಲಾಗುವ ಸೂಕ್ತಗಳಲ್ಲಿಯೂ ಅಗ್ನಿಯನ್ನು ಸ್ತುತಿಸಲಾಗಿದೆ. ಆದರೆ **ಅಗ್ನಿಂ ನರೋ ದೀಧಿತಿಭಿಃ** ಎಂಬ ಸೂಕ್ತದಲ್ಲಿರುವ ವಿಶೇಷಸಂಗತಿಯನ್ನು ತಿಳಿಸುವರು. **ಪ್ರವೋ ದೇವಾಯಾಗ್ನಯೇ** ಎಂದು ಮೊದಲಾಗುವ ಅನೇಕಸೂಕ್ತಗಳು ಅಗ್ನಿಪರವಾಗಿದ್ದರೂ ಅವುಗಳೆಲ್ಲ ಅಗ್ನಿ ಎಂಬ ಶಬ್ದವು ಮೊದಲು ಕಂಡುಬರವುದಿಲ್ಲ; ಅನೇಕ ಇತರ ಶಬ್ದಗಳಾದನಂತರ ವಿಳಂಬವಾಗಿ ಇರುವು. ಆದ್ದರಿಂದ ಅಗ್ನಿಪದ ಪಠನದಿಂದ ಲಭಿಸುವ ಅನ್ನಾದ್ಯಾಹಾರಪ್ರಾಪ್ತಿಯೂ ವಿಳಂಬವಾಗಿಯೇ (ನಿಧಾನವಾಗಿಯೇ) ಲಭಿಸುವುದು. ಆದರೆ **ಅಗ್ನಿಂ ನರೋ ದೀಧಿತಿಭಿಃ** ಎಂಬ ಸೂಕ್ತದಲ್ಲಿ ಹಗಲ್ಲ. ಪ್ರಾರಂಭದಲ್ಲಿಯೇ ಅಗ್ನಿಶಬ್ದಪ್ರಯೋಗವಿರುವುದರಿಂದ ಅನ್ನಾದ್ಯಾಹಾರವೂ ಶೀಘ್ರವಾಗಿಯೇ ಲಭಿಸುವುದು. ಆದ್ದರಿಂದ ಅಗ್ನಿಪರವಾದ ಸೂಕ್ತವನ್ನು ಪಠಿಸುವಾಗ **ಅಗ್ನಿಂ ನರೋ ದೀಧಿತಿಭಿಃ** ಎಂಬ ಸೂಕ್ತವನ್ನು ಪಠಿಸುವುದೇ ಯುಕ್ತವು ಮತ್ತು ಮೊದಲೇ ಯಜಮಾನರ ಪಾಪವೂ ನಾಶವಾಗುವುದು.

**ಹಸ್ತಚ್ಯುತೀ ಜನಯಂತೇತಿ ಜಾತವದೇತಸ್ಮಾದ್ವಾ ಅಹ್ನೋ ಯಜಮಾನೋ ಜಾಯತೇ ತಸ್ಮಾಜ್ಜಾತವತ್ ॥**

**ಸೂಕ್ತಸ್ಯ ಪ್ರಥಮೇಪಾದೇಽಗ್ನಿಶಬ್ದಂ ಪ್ರಶಸ್ಯ ದ್ವಿತೀಯಪಾದೇ ಜನಯಂತೇತಿ ಶಬ್ದಂ ಪ್ರಶಂಸತಿ ಹಸ್ತೇತ್ಯಾದಿರ್ದ್ವಿತೀಯಪಾದಸ್ತಸ್ಯಾಯಮರ್ಥಃ—ಹಸ್ತವ್ಯಾಪಾರೇಣೈವ ವಾಚ್ಯೇನ ಜನಯಂತ ಯಜಮಾನಾ ಅಗ್ನಿಮುತ್ಪಾದಯಂತ ಇತಿ । ತತ್ರ ಜನಯಂತೇತ್ಯನೇನ ಶಬ್ದೇನೇದಂ ಸೂಕ್ತಂ ಜಾತವಜ್ಜನ್ಮವಾಚಕಶಬ್ದೋಪೇತಂ ಭವತಿ । ಏತಸ್ಮಾಜ್ಜನ್ಮವಾಚಿಶಬ್ದೋಪೇತ ಸೂಕ್ತಯುಕ್ತಾದಹ್ನೋ ಮಹಾವ್ರತಾಖ್ಯಾತ್ಕರ್ಮಣೋ ಯಜಮಾನೋಽಯಂ ತತ್ಫಲಯೋಗ್ಯಜನ್ಮವಾಪ್ನೋತಿ ತಸ್ಮಾತ್ಕರ್ಮಣಸ್ತಥಾವಿಧಜನ್ಮಸಾಧನಭೂತಂ ಸೂಕ್ತಮ್ ॥**

ಈ ಸೂಕ್ತದ ಪ್ರಥಮಪಾದದಲ್ಲಿರುವ ಅಗ್ನಿಶಬ್ದವನ್ನು ಪ್ರಶಂಸೆಮಾಡಿ ಎರಡನೇ ಪಾದದಲ್ಲಿರುವ ಜನಯಂತ ಎಂಬ ಶಬ್ದವನ್ನು ಪ್ರಶಂಸೆಮಾಡುವರು. ಇಲ್ಲಿ ಜನಯಂತ ಎಂಬ ಶಬ್ದವು, ಈ ಸೂಕ್ತವು ಜನ್ಮವಾಚಕವಾಗಿರುವುದೆಂದು ತಿಳಿಸುವುದು. ಹಸ್ತಚ್ಯುತೀ ಜನಯಂತ ಎಂದಿರುವುದರಿಂದ ಯಜಮಾನಾದಿ ಋತ್ವಿಜರು ತಮ್ಮ ಹಸ್ತ (ಕೈಗಳಿಂದ) ಗಳಿಂದ ಅರಣ್ಯಗಳಲ್ಲಿ ಅಗ್ನಿಯನ್ನು ತಡೆದು ಉತ್ಪತ್ತಿಮಾಡುವರೆಂದರ್ಥವು. ಜನ್ಮವಾಚಕವಾದ ಈ ಸೂಕ್ತವು ಯಜಮಾನನು ಮಹಾವ್ರತವನ್ನು ಆಚರಿಸಲು ಯೋಗ್ಯವಾದ ಜನ್ಮವನ್ನು ಪಡೆಯುವನು ಎಂಬ ವಿಷಯವನ್ನೂ ಸೂಚಿಸುವುದು. ಈ ಸೂಕ್ತದಲ್ಲಿ (ಋ. ಸಂ. ೭-೧) ಇರುವ ಇಪ್ಪತ್ತೈದು ಋಕ್ಕುಗಳಲ್ಲಿ ಹದಿನೆಂಟು ಋಕ್ಕುಗಳು ವಿರಾಟ್‌ಛಂದಸ್ಕವು. ಉಳಿದ ಏಳು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಈ ನಾಲ್ಕು ಪಾದಗಳುಳ್ಳ ತ್ರಿಷ್ಟುಪ್‌ಛಂದಸ್ಸುಗಳಲ್ಲಿ ಪ್ರತಿಯೊಂದನ್ನೂ ಪ್ರಶಂಸೆಮಾಡುವರು.

**ತಾನಿ ಚತ್ವಾರಿ ಛಂದಾಂಸಿ ಭವಂತಿ ಚತುಷ್ಪಾದಾ ವೈ ಪಶವಃ ಪಶೂನಾಮುವರುಧ್ಯೈ ||**

**ಅಸ್ಮಿನ್ಪಂಚವಿಂಶತ್ಯೃಚೇ ಸೂಕ್ತೇ (ಋ. ಸಂ. ಮ ೭ ಸೂ. ೧.) ಆದಾವಷ್ಟಾದಶರ್ಚೋ ವಿರಾಟ್‌ಛಂದಸ್ಕಾಃ। ಅವಶಿಷ್ಟಾಸ್ತು "ಮಾ ನೋ ಅಗ್ನೇಽವೀರತೇ" ಇತ್ಯಾದಿಕಾಃ ಸಪ್ತರ್ಚಸ್ತ್ರಿಷ್ಟುಪ್‌ಛಂದಸ್ಕಾಃ। ತಾಸ್ವೇಕೈಕಸ್ಯಾಮೃಚಿ ಪಾದಚತುಷ್ಟಯಯುತಾನಿ ಚ್ಛಂದಾಂಸಿ ಪ್ರಶಂಸತಿ— ಏಕಾದಶಾಕ್ಷರಾ ತ್ರಿಷ್ಟುಪ್ ಇತಿ ಶ್ರುತ್ಯಂತರಾದೇಕೈಕಸ್ಮಿನ್ಪಾದ ಏಕೈಕಂ ತ್ರಿಷ್ಟುಬಾಖ್ಯಂ ಛಂದೋಽಸ್ತಿ ತತಶ್ಚತುರ್ಷು ಪಾದೇಷು ಚತ್ವಾರಿ ತ್ರಿಷ್ಟುಪ್‌ಛಂದಾಂಸಿ ಸಂಪದ್ಯಂತೇ। ತತಃ ಪಶೂನಾಂ ಚತುಷ್ಪಾತ್ತ್ವಾತ್ತೇನ ತತ್ಸಾಮ್ಯಾತ್ಪಶುಪ್ರಾಪ್ತಿರ್ಭವತಿ ||**

**ಏಕಾದಶಾಕ್ಷರಾ ತ್ರಿಷ್ಟುಪ್** ಎಂದು ಹೇಳಿರುವ ಪ್ರಕಾರ ತ್ರಿಷ್ಟುಪ್‌ಛಂದಸ್ಸಿನ ಪ್ರತಿಯೊಂದು ಪಾದದಲ್ಲಿಯೂ ಹನ್ನೊಂದು ಅಕ್ಷರಗಳಿರುವವು. ಮತ್ತು ಪ್ರತಿಯೊಂದು ಋಕ್ಕಿನಲ್ಲಿಯೂ ನಾಲ್ಕುಪಾದಗಳಿರುವವು. ಗೋವೇ ಮೊದಲಾದ ಪಶುಗಳಿಗೂ ನಾಲ್ಕು ಪಾದಗಳಿರುವವು. ತ್ರಿಷ್ಟುಪ್ ಛಂದಸ್ಸಿಗೂ ಪಶುಗಳಿಗೂ ಈ ವಿಧವಾದ ಸಾಮ್ಯವಿರುವುದರಿಂದ ಈ ತ್ರಿಷ್ಟುಪ್‌ಛಂದಸ್ಸನ್ನು ಇಲ್ಲಿ ಪಠಿಸುವುದರಿಂದ ಪಶುಸಂಪತ್ತು ಲಭಿಸುವುದು.

**ತಾನಿ ತ್ರೀಣಿ ಛಂದಾಂಸಿ ಭವಂತಿ ತ್ರಯೋ ವಾ ಇಮೇ ತ್ರಿವೃತೋ ಲೋಕಾ ಏಷಾಮೇವ ಲೋಕಾನಾಮಭಿಜಿತ್ಯೈ ||**

**ಯಾಸ್ತು ಸೂಕ್ತಾದಿಗತಾ ವಿರಾಟ್‌ಛಂದಸ್ಕಾ ಋಚಸ್ತಾಸಾಂ ಪಾದಗತಾನಿ ಚ್ಛಂದಾಂಸಿ ಪ್ರಶಂಸತಿ— ಯಥಾ "ಚತುಷ್ಪದಾ ತ್ರಿಷ್ಟುಪ್" "ಏಕಾದಶಾಕ್ಷರಾ ತ್ರಿಷ್ಟುಪ್" ಇತಿ ಶ್ರುತ್ಯೋಃ ಪಾದಸಂಖ್ಯಾಽಕ್ಷರಸಂಖ್ಯಾ ಚ ಶ್ರುತಾ ತಥಾ "ತ್ರಿಪದಾ ವಿರಾಟ್" "ದಶಾಕ್ಷರಾ ವಿರಾಟ್' ಇತಿ ಶ್ರುತ್ಯೋಃ ಸಂಖ್ಯಾದ್ವಯಂ ಶ್ರುತಮ್। ತತಸ್ತ್ರಿಷ್ವಪಿ ಪಾದೇಷು ದಶಾಕ್ಷರಸಂಖ್ಯಾಕಾನಿ ತ್ರೀಣಿ ವಿರಾಟ್‌ಛಂದಾಂಸಿ ಸಂಪದ್ಯತೇ (ನ್ತೇ)। ಲೋಕಾಶ್ಚ ಪೃಥಿವ್ಯಂತರಿಕ್ಷಂ ದ್ಯೌರಿತ್ಯೇವಂ ತ್ರಿಸಂಖ್ಯಾಕಾಃ, ಉತ್ತಮಮಧ್ಯಮಾಧಮೈಃ ಸಾತ್ವಿಕರಾಜಸತಾಮಸೈಃ ಪ್ರಾಣಿಭಿರುಪೇತತ್ವಾತ್ತ್ರಿವೃತಶ್ಚ। ತತಃ ಸಂಖ್ಯಾಸಾಮ್ಯಾಲ್ಲೋಕಜಯೋ ಭವತಿ ||**

ಚತುಷ್ಪದಾ ತ್ರಿಷ್ಟುಪ್—ಏಕಾದಶಾಕ್ಷರಾ ತ್ರಿಷ್ಟುಪ್ ಮತ್ತು ತ್ರಿಪದಾ ವಿರಾಟ್—ದಶಾಕ್ಷರಾ ವಿರಾಟ್ ಎಂದರೆ ತ್ರಿಷುಪ್‌ಛಂದಸ್ಸಿನಲ್ಲಿ ನಾಲ್ಕು ಪಾದಗಳೂ ಪ್ರತಿಪಾದದಲ್ಲಿಯೂ ಹನ್ನೊಂದು ಅಕ್ಷರಗಳಿರುತ್ತವೆಯೆಂದೂ, ವಿರಾಟ್ ಛಂಧಸ್ಸಿನಲ್ಲಿ ಮೂರುಪಾದಗಳೂ, ಪ್ರತಿಪಾದದಲ್ಲಿಯೂ ಹತ್ತು ಅಕ್ಷರಗಳಿರುತ್ತವೆಯೆಂದೂ ಶ್ರುತಿವಾಕ್ಯದಲ್ಲಿಯೇ ಹೇಳಲಾಗಿದೆ. ವಿರಾಟ್ ಛಂದಸ್ಸಿನಲ್ಲಿರುವ ಮೂರು ಪಾದಗಳು ಮೂರು ಲೋಕಗಳನ್ನು ಸೂಚಿಸುವವು. ಈ ಲೋಕಗಳು ಯಾವವೆಂದರೆ—ಪೃಥಿವೀ, ಅಂತರಿಕ್ಷ ಮತ್ತು ಸ್ವರ್ಗಲೋಕಗಳು ಅಥವಾ ಉತ್ತಮ, ಮಧ್ಯಮ, ಅಧಮ ಎಂಬ ಮೂರು ವಿಭಾಗಗಳನ್ನು ಸೂಚಿಸಬಹುದು ಅಥವಾ ಸಾತ್ವಿಕ, ರಾಜಸ, ತಾಮಸವೆಂಬ ಮೂರುವಿಧವಾದ ಗುಣಗಳುಳ್ಳ ಪ್ರಾಣಿವರ್ಗವನ್ನಾದರೂ ತಿಳಿಸಬಹುದು.

ತ್ವೇ ದ್ವೇ ಛಂದಸೀ ಭವತಃ ಪ್ರತಿಷ್ಠಾಯಾ ಏವ ದ್ವಿಪ್ರತಿಷ್ಠೋ ವೈ ಪುರುಷಶ್ಚತುಷ್ಪಾದಾಃ ಪಶವೋ ಯಜಮಾನಮೇವ ತದ್ವಿಪ್ರತಿಷ್ಠಂ ಚತುಷ್ಪಾತ್ಸು ಪಶುಷು ಪ್ರತಿಷ್ಠಾಪಯತಿ ॥

ಸೂಕ್ತೇ ಪೂರ್ವೋತ್ತರಭಾಗಯೋರ್ವರ್ತಮಾನೇ ವಿರಾಟ್ತ್ರಿಷ್ಟುಬಿತ್ಯೇತೇ ದ್ವೇ ಛಂದಸೀ ಪ್ರಶಂಸತಿ—ಛಂದೋದ್ವಯಂ ಪ್ರತಿಷ್ಠಾರ್ಥಮೇವ ಸಂಪದ್ಯತೇ। ಲೌಕಿಕಃ ಪುರುಷಃ ಸರ್ವೋऽಪಿ ಭೂಮೌ ದ್ವಾಭ್ಯಾಂ ಪಾದಾಭ್ಯಾಂ ಪ್ರತಿಷ್ಠಿತತ್ವಾದ್ವಿಪ್ರತಿಷ್ಠೋ ಭವತಿ। ಪಶವಸ್ತು ಚತುಷ್ಪಾದಾಃ। ಏವಂ ಸತಿ ಚ್ಛಂದೋದ್ವಿತ್ವೇನ ಪಾದಚತುಷ್ಟ್ವೇ ನ ಚ ದ್ವಿಪಾದಂ ಯಜಮಾನಂ ಚತುಷ್ಪಾತ್ಸು ಪಶುಷು ಹೋತಾ ಪ್ರತಿಷ್ಠಾಪಯತಿ ॥

ಈ ಸೂಕ್ತದಲ್ಲಿ ಕೆಲವು ಋಕ್ಕುಗಳಿಗೆ ನಾಲ್ಕು ಪಾದಗಳೂ ಇನ್ನು ಕೆಲವು ಋಕ್ಕುಗಳಿಗೆ ಎರಡು ಅರ್ಧಗಳೂ ಇರುವುದರಿಂದ ಇವು ಎರಡು ಪಾದಗಳಿರುವ ಮನುಷ್ಯರನ್ನೂ ನಾಲ್ಕು ಪಾದಗಳಿರುವ ಪಶುಗಳನ್ನೂ ಸೂಚಿಸುವುದು. ಎಂದರೆ ಎರಡು ಪಾದಗಳಿರುವ ಪುರುಷರನ್ನು ನಾಲ್ಕು ಪಾದಗಳಿರುವ ಪಶುಗಳಲ್ಲಿ ಸ್ಥಾಪಿಸಿದಂತಾಗುವುದು ಎಂದರೆ ಪುರುಷರ ಅಧೀನದಲ್ಲಿ ಪಶುಗಳಿರುವವು ಎಂದರ್ಥವು.

ತಾಃ ಪರಾಗ್ವಚನೇನ ಪಂಚವಿಂಶತಿರ್ಭವಂತಿ ಪಂಚವಿಂಶೋऽಯಂ ಪುರುಷೋ ದಶ ಹಸ್ತ್ಯಾ ಅಂಗುಲಯೋ ದಶ ಪಾದ್ಯಾ ದ್ವಾ ಊರೂ ದ್ವೌ ಬಾಹೂ ಆತ್ಮೈವ ಪಂಚವಿಂಶಸ್ತಮಿಮಮಾತ್ಮಾನಂ ಪಂಚ-ವಿಂಶಂ ಸಂಸ್ಕುರುತೇ

ಇದಾನೀಂ ಸರ್ವಾಸ್ವೃಕ್ಷ್ವವಸ್ಥಿತಾಂ ಪಂಚವಿಂಶತಿಸಂಖ್ಯಾಂ ಪ್ರಶಂಸತಿ—ಆವೃತ್ತಿಮಂತ-ರೇಣೋರ್ಧ್ವಪಾಠಃ ಪರಾಗ್ವಚನಂ। ಆತ್ಮಾ ಮಧ್ಯದೇಹಮ್, 'ಮಧ್ಯಂ ಹ್ಯೇಷಾಮಂಗಾನಾಮಾತ್ಮಾ (ಐ. ಆ. ೩ ಅ. ೨ ಖಂ. ೫) ಇತಿ ವಕ್ಷ್ಯಮಾಣತ್ವಾತ್। ತೇನಾತ್ಮನಾ ಸಹಿತೈರವಯವೈಃ ಸರ್ವೈ-ರಯಂ ಪುರುಷಃ ಪಂಚವಿಂಶತಿಸಂಖ್ಯೋಪೇತಃ। ಅತಸ್ತಾದೃಶಂ ಪುರುಷಮೃಗ್ಗತಯಾ ಪಂಚವಿಂಶತಿ ಸಂಖ್ಯಯಾ ಸಂಸ್ಕರೋತಿ ॥

ಈ ಸೂಕ್ತದಲ್ಲಿರುವ ಒಟ್ಟು ೨೫ ಋಕ್ಕುಗಳನ್ನೂ ಪ್ರಶಂಸೆಮಾಡುವರು. ಈ ಸೂಕ್ತದಲ್ಲಿ ಒಟ್ಟು ೨೫ ಋಕ್ಕುಗಳಿರುವವು. ಪುರುಷನ ಶರೀರದಲ್ಲಿಯೂ ಒಟ್ಟು ೨೫ ಅವಯವಗಳಿರುವವು. ಅವು ಯಾವವೆಂದರೆ—ಕೈಗಳ ಬೆರಳುಗಳು ೧೦, ಕಾಲಿನ ಬೆರಳುಗಳು ೧೦, ೨ ತೊಡೆಗಳು, ೨ ಕೈಗಳು, ೧ ಆತ್ಮಾ ಇವೆಲ್ಲವೂ ಸೇರಿ ೨೫ ಅವಯವಗಳು. ಇವೆರಡಕೂ ಸಾಮ್ಯವಿರುವುದರಿಂದ ಈ ೨೫ ಋಕ್ಕುಗಳು ಪುರುಷನ ೨೫ ಅವಯಗಳನ್ನು ನಿರ್ದೇಶಿಸುವವು.

**ಅಥೋ ಪಂಚವಿಂಶಂ ವಾ ಏತದಹಃ ಪಂಚವಿಂಶ ಏತಸ್ಯಾಹ್ನಃ ಸ್ತೋಮಸ್ತತ್ಸಮೇನ ಸಮಂ ಪ್ರತಿಪದ್ಯತೇ ತಸ್ಮಾದ್ದ್ವೇ ಏವ ಪಂಚ-ವಿಂಶತಿರ್ಭವಂತಿ ॥**

**ಪ್ರಕಾರಾಂತರೇಣ ತಾಂ ಸಂಖ್ಯಾಂ ಪ್ರಶಂಸತಿ—ಅಥೋ ಅಪಿ ಚೇತ್ಯರ್ಥಃ। ಯನ್ಮಹಾ-ವ್ರತಾಖ್ಯಮಹಸ್ತದೇತತ್ಪಂಚವಿಂಶತಿಸಂಖ್ಯೋಪೇತಮೇವ।ತತ್ಕಥಮಿತಿ ತದುಚ್ಯತೇ—ಏತಸ್ಯಾಹ್ನೋ ಯಃ ಸ್ತೋಮಃ ಸಾಮಗೈಃ ಸ್ತೋತ್ರಕಾಲೇ ತೃಚಸ್ಯಾಽಽವೃತ್ತ್ಯಾ ಸಂಪದ್ಯತೇ ಸೋಽಯಂ ತ್ರಿವೃತ್ಪಂಚ-ದಶಾದಿರೂಪೋ ನ ಭವತಿ ಕಿಂತು ಪಂಚವಿಂಶಸ್ತಸ್ಮಾತ್ಕಾರಣಾತ್ಪಂಚವಿಂಶತಿಸಂಖ್ಯಯಾ ಸಮೇನ ಸೂಕ್ತೇನ ಪಂಚವಿಶಸ್ತೋಮಯುಕ್ತಂ ಸಮಂ ತದಪಃ ಪ್ರಾಪ್ನೋತೀತಿ ತಸ್ಮಾದೇತದಹಃ ಸೂಕ್ತಂ ಚೇತ್ಯುಭಯಂ ಸಮಂ ತಸ್ಮಾದೇತೇ ದ್ವೇ ಅಹಃ ಸೂಕ್ತೇ ಪಂಚವಿಂಶತಿಸಂಖ್ಯಾಪ್ರಯುಕ್ತೇ ಏವ ಭವತಃ। ಅನ್ಯಥಾ ಸಾಮ್ಯಾಸಂಭವಾತ್। ಭವಂತೀತಿ ಬಹುವಚನಂ ತು ಸೂಕ್ತಗತಾನಾಮೃಚಾಂ ಸ್ತೋತ್ರಗತಾನಾಂ ಚಾಪೇಕ್ಷಯಾ ದ್ರಷ್ಟವ್ಯಮ್ ॥**

ಪ್ರಕಾರಾಂತವಾಗಿ ಈ ೨೫ ಎಂಬ ಸಂಖ್ಯೆಯನ್ನು ವಿವರಿಸುವರು. ಮಹಾವ್ರತವನ್ನು ಮಾಡುವ ದಿನಕ್ಕೂ ಪಂಚ ವಿಂಶವೆಂದು ಹೆಸರು ಏಕೆಂದರೆ, ಈ ದಿವಸದಲ್ಲಿ ಸಾಮಗರು ಸ್ತೋಮವನ್ನು ಪಠಿಸುವಾಗ ಕೆಲವು ತೃಚಗಳ ಆವೃತ್ತಿಯಿಂದ ೨೫ ಸ್ತೋತ್ರಗಳನ್ನು (ಋಕ್ಕುಗಳನ್ನು) ಪಠಿಸುವರು. ಸೂಕ್ತದಲ್ಲಿಯೂ ೨೫ ಋಕ್ಕುಗಳೂ ಸ್ತೋತ್ರಗಳೂ ೨೫ ಇರುವುದರಿಂದ (ಎರಡೂ ಸಮನಾಗಿರುವುದರಿಂದ) ಈ ದಿನಕ್ಕೆ **ಪಂಚವಿಂಶಮಹಃ** ಎಂಬ ಹೆಸರಿರುವುದು. ಇತರ ಸ್ಥಳಗಳಲ್ಲಿರುವಂತೆ ತ್ರಿವೃತ್ ಪಂಚದಶ ಮೊದಲಾದ ಸ್ತೋತ್ರಸಂಖ್ಯೆಯು ಇಲ್ಲಿರುವುದಿಲ್ಲ.

ತಾಸ್ತ್ರಿಃ ಪ್ರಥಮಯಾ ತ್ರಿರುತ್ತಮಯೈಕಯೋನತ್ರಿಂಶನ್ನ್ಯೂನಾಕ್ಷರಾ ವಿರಾಣ್ಣ್ಯೂನೇ ವೈ ರೇತಃ ಸಿಚ್ಯತೇ ನ್ಯೂನೇ ಪ್ರಾಣಾನ್ನ್ಯೂನೇಽನ್ನಾದ್ಯಂ ಪ್ರತಿಷ್ಠಿತಮೇತೇಷಾಂ ಕಾಮಾನಾಮವರುದ್ಧ್ಯೈ ॥

**ತಸ್ಮಿನ್ಸೂಕ್ತೇ ಪ್ರಥಮೋತ್ತಮಯೋರ್ಋಚೋರಾವೃತ್ತಿವಿಧಿಮಭಿಪ್ರೇತ್ಯ ತದಾವೃತ್ತಿ ಸಹಿತಾಂ ಸಂಖ್ಯಾಂ ಪ್ರಶಂಸತಿ—ತಾಃ ಸೂಕ್ತಗತಾಃ ಪಂಚವಿಂಶತಿಸಂಖ್ಯಾಕಾ ಋಚಸ್ತ್ರಿರಾವೃತ್ತಯಾ ಪ್ರಥಮಯಾ ತ್ರಿರಾವೃತ್ತಯಾ ಚೋತ್ತಮಯಾ ಸಹಿತಾಃ ಸತ್ಯೋ ಮಿಲಿತಾ ಏಕೋನತ್ರಿಂಶತ್ಸಂ-ಖ್ಯಾಕಾಃ ಸಂಪದ್ಯಂತೇ। ಏಕಯರ್ಚಾ ನ ಸಂಪೂರ್ಣಾ ತ್ರಿಂಶದಿತ್ಯೇಕಯೋನತ್ರಿಂಶತ್। 'ತ್ರಿಂಶ-ದಕ್ಷರಾ ವಿರಾಟ್' ಇತಿ ಶ್ರುತೇರ್ವಿರಾಟ್ಛಂದಸಸ್ತ್ರಿಂಶತ್ಸಂಖ್ಯೋಪೇತತ್ವಾದತ್ರ ತ್ರಿಂಶತ್ಸಂಖ್ಯಾಯಾ-ಮೇಕಯಾ ನ್ಯೂನತ್ವಾದಿಯಮೃಕ್ಸಂಖ್ಯಾ ನ್ಯೂನಾಕ್ಷರಾ ವಿರಾಟ್ ಸಂಪದ್ಯತೇ। ಲೋಕೇಽಪಿ ನ್ಯೂನೇ ವೈ ಸ್ವಲ್ಪ ಏವ ಗರ್ಭಾಶಯೇ ಪ್ರಜೋತ್ಪಾದನಾರ್ಥಂ ರೇತಃ ಸಿಚ್ಯತೇ। ತಥಾ ಸ್ವಲ್ಪೇ ಹೃದಯ-ಪುಂಡರೀಕೇ ಪ್ರಾಣಾಃ ಪ್ರತಿತಿಷ್ಠಂತಿ, ಸ್ವಲ್ಪೇ ಚೋದರೇಽನ್ನಾದ್ಯಂ ಪ್ರತಿಷ್ಠಿತಂ, ತಸ್ಮಾದಿಯಂ ನ್ಯೂನಾ ವಿರಾಡೇತೇಷಾಂ ಪ್ರಜೋತ್ಪತ್ತಿಪ್ರಾಣಾನ್ನಪ್ರತಿಷ್ಠಾರೂಪಾಣಾಂ ಕಾಮಾನಾಂ ಪ್ರಾಪ್ತ್ಯೈ ಸಂಪದ್ಯತೇ ॥**

ಈ ಸೂಕ್ತವನ್ನು (೨೫ ಋಕ್ಕುಗಳನ್ನು) ಪಠಿಸುವಾಗ ಮೊದಲನೆಯ ಮತ್ತು ಕೊನೆಯ ಋಕ್ಕುಗಳನ್ನು ಮೂರು ಮೂರಾವರ್ತಿ ಪಠಿಸುವುದರಿಂದ ಒಟ್ಟು ೨೯ ಋಕ್ಕುಗಳನ್ನು ಪಠಿಸಿದಂತಾಗುವುದು. ವಿರಾಟ್‌ಛಂದಸ್ಸಿನಲ್ಲಿ ೩೦ ಅಕ್ಷರಗಳಿದ್ದರೂ ಈ ಒಂದಕ್ಷರ ಕಡಿಮೆ ಇರುವ ೨೯ ಅಕ್ಷರಗಳಿಂದಲೇ ೩೦ ಅಕ್ಷರಗಳ ವಿರಾಟ್‌ಛಂಸ್ಸನ್ನು ಪಠಿಸಿದಂತಾಗುವುದು. ಏಕೆಂದರೆ ಲೋಕವ್ಯವಹಾರದಲ್ಲಿ ಸ್ತ್ರೀಯೋನಿಯಲ್ಲಿ ವೀರ್ಯವನ್ನು ಸೇಚನೆ ಮಾಡುವಾಗ ಬಹಳ ಸ್ವಲ್ಪವೀರ್ಯವನ್ನು ಮಾತ್ರ ಮಾಡಲಾಗುವುದು ಮತ್ತು ಹೃದಯದಲ್ಲಿ ನೆಲಸಿರುವ ಪ್ರಾಣವಾಯುವು ಬಹು ಸ್ವಲ್ಪಮಾತ್ರವಿರುವುದು. ಉದರದಲ್ಲಿರುವ ಅನ್ನಾದ್ಯರೂಪವಾದ ಅಗ್ನಿಯು (ಜೀರ್ಣಿಸಲು ಸಹಕಾರಿಯಾದ ಅಗ್ನಿಯು) ಸ್ವಲ್ಪಮಾತ್ರವಾಗಿರುವುದು. ಅದರಂತೆಯೇ ಪಠಿಸಲ್ಪಡುವ ೨೯ ಅಕ್ಷರಗಳು ವಿರಾಟ್‌ಛಂದಸ್ಸಿನ ೩೦ ಅಕ್ಷರಗಳಿಗೆ ಸ್ವಲ್ಪಕಡಮೆಯಾಗಿಯೇ ೨೯ ಅಕ್ಷರಗಳಿರುವವು. ಇದರಿಂದೇನೂ ಬಾಧಕವಿಲ್ಲ. ಸ್ವಲ್ಪಕಡಿಮೆಯಾದ ಅಕ್ಷರಸಂಖ್ಯೆಯುಳ್ಳ ವಿರಾಟ್‌ಛಂದಸ್ಸಿನ ಪಠನದಿಂದಲೇ ಯಜಮಾನನು ಸಮಸ್ತ ಇಷ್ಟಾರ್ಥಗಳನ್ನೂ ಪಡೆಯುವನು.

ಏತಾನ್ಕಾಮಾನವರುಂಧೇ ಯ ಏವಂ ವೇದ ॥

ಯಥೋಕ್ತಾರ್ಥವೇದನಂ ಪ್ರಶಂಸತಿ—ಯಃ ಪುಮಾನೇವಮೃಗ್ಗತಾಮೇಕೋನತ್ರಿಂಶತ್ಸಂಖ್ಯಾಂ ವೇದ ಸ ಪುಮಾನುಕ್ತಾನ್ಕಾಮಾನಾಪ್ನೋತಿ । ವೇದನಮಾತ್ರೇಣ ಫಲಪ್ರಾಪ್ತಿರ್ಯಜುರ್ವೇದಾರ್ಥಪ್ರಕಾಶ ಉಪಪಾದಿತಾ ॥

ಮೇಲೆ ಹೇಳಿದ ವಿಷಯಗಳೆಲ್ಲವನ್ನೂ ತಿಳಿದು ಅದರಂತೆ ಆಚರಿಸುವ ಪುರುಷನು ಸಮಸ್ತ ಇಷ್ಟಾರ್ಥಗಳನ್ನೂ ಪಡೆಯುವನು

ತಾ ಅಭಿಸಂಪದ್ಯಂತೇ ಬೃಹತೀಂ ಚ ವಿರಾಜಂ ಚ ಛಂದೋ ಯೈತಸ್ಯಾಹ್ನಃ ಸಂಪತ್ತಾಮಥೋ ಅನುಷ್ಟುಭಮನುಷ್ಟುಬಾಯತನಾನಿ ಹ್ಯಾಜ್ಯಾನಿ ॥

ಪ್ರಕಾರಾಂತರೇಣ ಸೂಕ್ತಗತಾ ಋಚಃ ಪ್ರಶಂಸತಿ—ಯಾ ಋಚಃ ಸೂಕ್ತೇ ಪ್ರೋಕ್ತಾಃ 'ಅಗ್ನಿಂ ನರಃ' ಇತ್ಯಾದಿಕಾಸ್ತಾಃ ಸರ್ವಾ ಋಚೋ ಮಿಲಿತ್ವಾ ಬೃಹತ್ಯಾಖ್ಯಚ್ಛಂದೋಽಭಿಸಂಪದ್ಯತೇ (ನ್ತೇ)। ತಥಾ ವಿರಾಡಾಖ್ಯಂ ಛಂಧೋಽಭಿಸಂಪದ್ಯತೇ (ನ್ತೇ) ಏವಂ ಸತ್ಯೇತಸ್ಯ ಮಹಾವ್ರತಸ್ಯಾಹ್ನೋಪೇಕ್ಷಿತಾ ಯಾ ಸಂಪತ್ತಾಂ ಪ್ರಾಪ್ತಾ ಭವಂತಿ । ತತ್ರಾಽಽದಾವಷ್ಟಾದಶಾನಾಮೃಚಾಂ ಸ್ವತ ಏವ ವಿರಾಡಭಿಸಂಪತ್ತಿಃ ಸಿದ್ಧಾ । ಯಾಸ್ತೂತ್ತರಾಃ ಸಪ್ತ ತ್ರಿಷ್ಟುಭಸ್ತಾಸು ಬೃಹತೀಛಂದಃ ಸಂಪಾದನೀಯಮ್ । ಅಂತಿಮಾಯಾ ಋಚಸ್ತ್ರಿರಾವೃತ್ತಾ ಸತ್ಯಾಂ ನವ ತ್ರಿಷ್ಟುಭಿಃ ಸಂಪದ್ಯಂತೇ । ತಾಸು ಪ್ರತ್ಯೇಕಮಷ್ಟಾಕ್ಷರೇಷ್ವತೀತೇಷ್ವವಶಿಷ್ಟಾ ನವ ಬೃಹತ್ಯೋ ಭವಂತಿ । ಅಪನೀತ (ತಾ) ಶ್ಚ ನವಸಂಖ್ಯಾಕಾ ಅಷ್ಟಾಕ್ಷರಪಾದಾ ಮಿಲಿತ್ವಾ ದ್ವಾಸಪ್ತತಿರಕ್ಷರಾಣಿ ಸಂಪದ್ಯಂತೇ । ತತ್ ಷಟ್‌ತ್ರಿಂಶದಕ್ಷರೋಪೇತೇ ದ್ವೇ ಬೃಹತ್ಯಾ ನಿಷ್ಪದ್ಯೇತೇ । ತದೇವಂ ಬೃಹತೀಛಂದಃ ಸಂಪತ್ತಿಃ । ಅಪಿ ಚೈವಮಾದ್ಯಾಯಾಮೃಚ್ಯನುಷ್ಟುಪ್ತ್ವಸ್ಯ ಸಂಪಾದಯಿತುಂ ಶಕ್ಯತ್ವಾತ್ತಾಃ ಸೂಕ್ತಗತಾ ಋಚೋಽನುಷ್ಟುಭಮಭಿಸಂಪದ್ಯಂತೇ । ಯದ್ಯಪ್ಯಾದ್ಯಾಯಾಸ್ತ್ರಯಸ್ತ್ರಿಂಶದಕ್ಷರತ್ವಾದೇಕಮಕ್ಷರಮನುಷ್ಟುಭೋಽಧಿಕಂ

ತಥಾಪಿ ನೈತಾವತಾಽನುಷ್ಟುಪ್ತ್ವಂ ಹೀಯತೇ, "ನ ವಾ ಏಕೇನಾಕ್ಷರೇಣ ಚ್ಛಂದಾಂಸಿ ವಿಯಂತಿ ನ ದ್ವಾಭ್ಯಾಮ್" ಇತಿ ಶ್ರುತೇಃ । ಯಥೈವಾಸ್ಯಾಮ್ಯೃಚ್ಯಕ್ಷರತ್ರಯಾಧಿಕತ್ವೇಽಪಿ ವಿರಾಟ್ತ್ವಮನುಕ್ರಮಣಿಕಾಕಾರೈರುಕ್ತಮೇವಮೇಕಾಕ್ಷರಾಧಿಕ್ಯೇಽನುಷ್ಟುಪ್ತ್ವಂ ಕಿಂ ನ ಸ್ಯಾತ್ । ನ ಚೈತಾವತಾ ಪ್ರಯಾಸೇನಾನುಷ್ಟುಪ್‌ಸಂಪಾದನೇ ಪ್ರಯೋಜನಾಭಾವಃ । ಯಸ್ಮಾದಾಜ್ಯಶಸ್ತ್ರಾಣ್ಯನುಷ್ಟುಬಾಶ್ರಿತಾನಿ 'ಪ್ರ ವೋ ದೇವಾಗ್ನಯೇ' (ಋ. ಸಂ. ಮ ೩ ಸೂ ೧೩ ಋ. ೧) ಇತ್ಯಾದೌ ತಥಾ ದೃಷ್ಟತ್ವಾತ್ತಸ್ಮಾದನುಷ್ಟುಪ್‌ಸಂಪತ್ತ್ಯಾ ಪ್ರಶಸ್ತಮಿದಂ ಸೂಕ್ತಮಿತ್ಯಭಿಪ್ರಾಯಃ । ನನ್ವೇತತ್ಸೂಕ್ತಮನ್ನಾದ್ಯಕಾಮಸ್ಯ ವಿಧೀಯತ ಇತಿ ಪುರುಷಾರ್ಥಮಿದಂ ತಥಾ ಕ್ರತ್ವರ್ಥ (ತ್ವ) ಮಪ್ಯಸ್ಯ ಚೋದಕೇನ ಪ್ರಾಪಿತಮ್ । ತಥಾ ಹಿ-ಆಜ್ಯಪ್ರಉಗೇ ವಿಶ್ವಜಿತಿ ಪಂಚಮಾರಣ್ಯಕೇ ವಕ್ಷ್ಯ (ಕ್ಷ್ಯೇ) ತೇ । ವಿಶ್ವಜಿನ್ನಾಮ್ನ ಏಕಾಹಾಚ್ಛಸ್ತ್ರದ್ವಯಮತಿದೇಷ್ಟವ್ಯಮಿತಿ ತಸ್ಯ ವಾಕ್ಯಸ್ಯಾರ್ಥಃ । ವಿಶ್ವಜಿತೋಽಗ್ನಿಂ ನರ ಇತಿ ಸೂತ್ರಕಾರೇಣಾಭಿಧಾನಾದ್ವಿಶ್ವಜಿದ್ವಿಕೃತಿರೂಪೇ ಮಹಾವ್ರತೇಽಪಿ ತದೇವಾತಿದಿಶ್ಯತೇ । ತಸ್ಮಾದೇತ (ಕ) ಸ್ಯೈವಾಗ್ನಿಂ ನರಃ (ಋ. ಸಂ. ಮಂ. ೭ ಸೂ. ೧ ಋ. ೧) ಇತಿ ಸೂಕ್ತಸ್ಯ ಕ್ರತ್ವರ್ಥಂ (ರ್ಥತ್ವಂ) ಪುರುಷಾರ್ಥಂ ಚೇತ್ಯುಭಯವಿಧತ್ವಮುಪಪನ್ನಮ್ । ನಾಯಂ ದೋಷಃ ದಧಿನ್ಯಾಯೇನೋಪಪತ್ತೇಃ ॥

ಸ ಚ ನ್ಯಾಯಶ್ಚತುರ್ಥಾಧ್ಯಾಯಸ್ಯ ತೃತೀಯಪಾದೇ ಚಿಂತಿತಃ

ದಧ್ನಾ ತ್ವಿಂದ್ರಿಯಕಾಮಸ್ಯ ನಿತ್ಯೋಽನ್ಯ ಉತ ತದ್ದಧಿ ।
ಅನ್ಯಃ ಸ್ಯಾತ್ಪೂರ್ವವನ್ಮೈವಂ ಸಂಯೋಗಸ್ಯ ಪೃಥಕ್ತ್ವತಃ ॥

ಅಗ್ನಿಹೋತ್ರೇ ಶ್ರೂಯತೇ—'ದಧ್ನೇಂದ್ರಿಯ ಕಾಮಸ್ಯ ಜುಹುಯಾತ್' ಇತಿ। ತತ್ರ ದಧ್ನಃ ಕಾಮ್ಯತ್ವಾನ್ನಿತ್ಯೇಽಗ್ನಿಹೋತ್ರೇ ಪೂರ್ವವನ್ನ್ಯಾಯೇನ ನ ಪ್ರಯೋಕ್ತವ್ಯಂ ಕಿಂತ್ವನ್ಯದೇವ ಕಿಂಚಿದ್ದ್ರವ್ಯಮಿತಿ ಚೇನ್ಮೈವಮ್ । 'ದಧ್ನಾ ಜುಹೋತಿ' ಇತ್ಯಸ್ಮಿನ್ವಾಕ್ಯಾಂತರೇ ಕಾಮಸಂಯೋಗಮನುಪನ್ಯಸ್ಯ ನಿತ್ಯಹೋಮಸಂಯೋಗೇನ ದಧಿ ವಿಧಾನಾತ್। ತಸ್ಮಾದೇಕಸ್ಯಾಪಿ ದಧ್ನೋ ವಾಕ್ಯದ್ವಯೇನ ನಿತ್ಯತ್ವಂ ಕಾಮ್ಯತ್ವಂ ಚಾವಿರುದ್ಧಮ್ । ಏವಮಗ್ನಿಷೋಮೀಯಪಶೌ "ಖಾದಿರೇ ಬಧ್ನಾತಿ ಖಾದಿರಂ ವೀರ್ಯಕಾಮಸ್ಯ ಯೂಪಂ ಕುರ್ವೀತ" ಇತ್ಯುದಾಹರಣೀಯಮ್ । ಅನೇನ ದಧಿನ್ಯಾಯೇನಾತ್ರಾಪಿ ಕಾಮ್ಯೇನ "ಅಗ್ನಿಂ ನರೋ ದೀಧಿತಿಭಿರರಣ್ಯೋಃ" (ಋ. ಸಂ. ಮ ೭ ಸೂ ೧ ಋ. ) ಇತಿ ಸೂಕ್ತಪ್ರಯೋಗೇಣ ಪುರುಷಾರ್ಥೇನ ಕ್ರತುರಪಿ ನಿಷ್ಪದ್ಯತ ಇತ್ಯೇಕಸ್ಯೈವ ಸೂಕ್ತಸ್ಯ ಚೋದಕಪ್ರತ್ಯಕ್ಷವಚನಾಭ್ಯಾಮುಭಯಾರ್ಥತ್ವಮವಿರುದ್ಧಮ್ ॥

**ಅಗ್ನಿಂ ನರೋ ದಿಧಿತಿಭಿಃ** ಎಂಬ ಈ ಸೂಕ್ತದಲ್ಲಿರುವ ಋಕ್ಕುಗಳು ಅಕ್ಷರ ಸಂಖ್ಯೆಯ ಪ್ರಯೋಗದಿಂದ (ಬದಲಿಸುವುದರಿಂದ) ಬೃಹತೀ ಮತ್ತು ವಿರಾಟ್ ಛಂದಸ್ಸುಗಳಾಗಿ ಪರಿವರ್ತಿತವಾಗಬಹುದು. ಇದರಿಂದ ಮಹಾವ್ರತವೆಂಬ ದಿನಕ್ಕೆ ಸರಿಯಾಗುವಂತೆ ಹೊಂದಿಕೊಳ್ಳುವವು ಮತ್ತು ಈ ಋಕ್ಕುಗಳು ಅನುಷ್ಟುಪ್ ಛಂದಸ್ಸುಗಳಾಗಿಯೂ ಪರಿವರ್ತಿತವಾಗುವುದರಿಂದ ಇವು ಆಜ್ಯಪ್ರದವಾಗಿಯೂ ಆಗುವವು. ಏಕೆಂದರೆ ಅನುಷ್ಟುಪ್ ಛಂದಸ್ಸಿಗೂ ಅಜ್ಯಾಹುತಿಗೂ ಸಂಬಂದವಿರುವುದು ಪ್ರಸಿದ್ಧವಾಗಿಯೇ ಇದೆ.

———

*English Translation*

———

1. He who desires proper food should use the hymn, agnim naro didhitibhih (Rv. VII, I, I).

2. Verily, Agni (fire) is the eater of food.

In the other (recitations accompanying the) offerings of agya (where Agni is likewise mentioned) the worshippers come more slowly near to Agni (because the name of Agni does not stand at the beginning of the hymn). But here a worshipper obtains proper food at once, he strikes down evil at once.

3. Through the words (occurring in the second foot of the first verse), hastakyuti ganayanta, ' they caused the birth of Agni by moving their arms, ' the hymn becomes endowed with (the word) birth. Verily, the sacrificer is born from this day of the sacrifice, and therefore the hymn is endowed with (the word) birth.

4. There are four metrical feet (in the Trishtubh verses of this humn). Verily, cattle have four feet, therefore they serve for the gainiug of cattle.

5. There are three metrical feet (in the Virag verses of this hymn). Verily, three are these three-fold worlds. Therefore they serve for the conquest of the worlds.

6. These (the Trishtubh and Virag verses of the hymu) form two metres, which form a support (pratishtha). Verily, man is supported by two (feet), cattle by four feet. Therefore this hymn places the sacrificer who stands on two feet among cattle which stand on four.

7. By saying them straight on there are twenty-five verses in this hymn. Man also consists of twenty-five. There are ten fingers on his hands ten toes on his feet, two legs, two arms, and the trunk (atman) the twenty-fifth. He adorns that trunk, the twenty-fifth, by this hymn.

8. And then this day (of the sacrifice) consists of twenty-five, and the Stoma hymn of that day consists of twenty-five (verses) ; it becomes the same through the same. Therefore these two, the day and the hymn, are twenty-five.

9. These twenty-five verses, by repeating the first thrice and the last thrice, become thirty less one. This is a Virag verse (consisting of thirty syllables), too small by one. Into the small (heart) the vital spirits are placed into the small stomach food is placed, therefore this Virag, small by one, serves for the obtainment of those desires.

10. He who knows this, obtains those desires.

11. The verses (contained in the hymn agnim naro didhitibhih) becomo the Brihati metre and the Virag metre, (they become) the perfection which belongs to that day (the mahavrata). Then they also become Anushtbh, for the offerings of agya (ghee) dwell in Anushtubhs.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ಪ್ರಥಮಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ಮಾಧವೀಯ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯದ ಪ್ರಥಮಾರಣ್ಯಕದ
ಪ್ರಥಮಾಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವು ॥



## ಅಥ ಪ್ರಥಮಾರಣ್ಯಕೇ ಪ್ರಥಮಾಧ್ಯಾಯೇ ತೃತೀಯಃ ಖಂಡಃ

ಪ್ರಥಮಾರಣ್ಯಕದ ಪ್ರಥಮಾಧ್ಯಾಯದಲ್ಲಿ ಮೂರನೆಯ ಖಂಡವು.

---

**ಗಾಯತ್ರಂ ಪ್ರಉಗಂ ಕುರ್ಯಾದಿತ್ಯಾಹುಸ್ತೇಜೋ ವೈ ಬ್ರಹ್ಮ-ವರ್ಚಸಂ ಗಾಯತ್ರೀತೇಜಸ್ವೀ ಬ್ರಹ್ಮವರ್ಚಸೀ ಭವತೀತಿ ॥**

ಋತುಗ್ರಹಭಕ್ಷಣಾದೂರ್ಧ್ವಂ ನಿವಿತ್ಪದಾನ್ಯುಚ್ಚಾರ್ಯ ಹೋತ್ರಾ ಶಂಸನೀಯಂ ಯದಾಜ್ಯ-ಶಸ್ತ್ರಂ ತನ್ನಿರೂಪಿತಮ್। ವೈಶ್ವದೇವಗ್ರಹಣಾದೂರ್ಧ್ವಂ ಹೋತ್ರಾ ಶಂಸನೀಯ ಪ್ರಉಗನಾಮಕಂ ಯಚ್ಛಸ್ತ್ರಂ ತದ್ವಿಷಯೇ ಛಂದೋವಿಶೇಷಮಾಶ್ರಿತ್ಯ ನಾನಾಶಾಖಾನುಸಾರೇಣ ಸರ್ವೇ ಪಕ್ಷಾಃ ಸಂಭಾವಿತಾಃ, ಗಾಯತ್ರ್ಯುಷ್ಣಿಗನುಷ್ಟುಬ್ಬೃಹತೀ ಪಂಕ್ತಿಸ್ತ್ರಿಷ್ಟುಬ್ಜಗತೀ ಚೇತಿ ಚ್ಛಂದೋವಿ-ಶೇಷಾಸ್ತತ್ರ ಪ್ರಥಮಂ ಪಕ್ಷಮಾಹ—ತೇಜಃ ಶರೀರಕಾಂತೀ ರಾಜ್ಞಾಂ ಸಾಮರ್ಥ್ಯಂ ವಾ ಬ್ರಹ್ಮ-ವರ್ಚಸಂ ಶ್ರುತಾಧ್ಯಯನಸಂಪತ್ತಿಃ, ತದುಭಯಹೇತುತ್ವಾದ್ಗಾಯತ್ರ್ಯಾಸ್ತದ್ರೂಪತ್ವಮ್। ಯ(ಅ)ತೋ ಯಜಮಾನಸ್ತದುಭಯವಾನ್ಭವತ್ವಿತ್ಯನೇನಾಭಿಪ್ರಾಯೇಣ ಪ್ರಉಗಶಸ್ತ್ರಂ ಗಾಯತ್ರೀ-ಛಂದೋವಿಶಿಷ್ಟಂ ಕುರ್ಯಾತ್। ತಸ್ಯ ಗಾಯತ್ರಸ್ಯ ಪ್ರಉಗಸ್ಯ ಸ್ವರೂಪಮಾಶ್ವಲಾಯನೇನ ಪೂರ್ವ-ಷಟ್ಕೇ ಪಂಚಮಾಧ್ಯಾಯೇ ಅಭಿಹಿತಮ್—ವಾಯುರಗ್ರೇ ಗಾ ಯಜ್ಞಪ್ರೀರಿತಿ ಸಪ್ತಾನಾಂ ಪುರೋ-ರುಚಾಂ ತಸ್ಯಾಸ್ತಸ್ಯಾ ಉಪರಿಷ್ಟಾತ್ತ್ರೃಚಂ ತೃಚಂ ಶಂಸೇದ್ವಾಯವಾಯಾಹಿ ದರ್ಶತೇತಿ ಸಪ್ತ ತೃಚಾಃ ''

ಋತುಗ್ರಹಭಕ್ಷಣಾನಂತರ ಹೋತೃವು ನಿವಿತ್ಪದಗಳನ್ನು ಉಚ್ಚರಿಸಿ ಪಠಿಸಬೇಕಾದ ಆಜ್ಯಶಸ್ತ್ರಮಂತ್ರಗಳನ್ನು ತಿಳಿಸಿದ್ದಾಯಿತು. ವೈಶ್ವದೇವಗ್ರಹಣಾನಂತರ ಹೋತೃವು ಪಠಿಸಬೇಕಾದ ಪ್ರಉಗ ಎಂಬ ಶಸ್ತ್ರಮಂತ್ರವನ್ನು ನಾನಾವೇದ ಶಾಖೆಗಳ ಅನುಸಾರವಾಗಿ ನಾನಾ ಛಂದಸ್ಸಿನ ಎಂದರೆ ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ ಪಂಕ್ತಿ, ತ್ರಿಷ್ಟುಪ್ ಜಗತೀ ಎಂಬ ಛಂದಸ್ಸಿನ ಋಕ್ಕುಗಳನ್ನು ಪಠಿಸುವರು. ಇವುಗಳಲ್ಲಿ ಮೊದಲನೆಯ ಕ್ರಮವನ್ನು ವಿವರಿಸುವರು—ಪ್ರಉಗ ಶಸ್ತ್ರಮಂತ್ರಗಳನ್ನು ಪಠಿಸುವಾಗ ಗಾಯತ್ರೀಛಂದಸ್ಸಿನ ಮಂತ್ರಗಳನ್ನು ಪಠಿಸಬೇಕು ಎಂದು ಕೆಲವರು ಹೇಳುವರು. ಏಕೆಂದರೆ ಗಾಯತ್ರೀಋಕ್ಕುಗಳ ಪಠನದಿಂದ ಗಾಯತ್ರೀ ಸ್ವರೂಪವಾದ ತೇಜಸ್ಸು ಅಥವಾ ಶರೀರಕಾಂತಿಯೂ, ಬ್ರಹ್ಮವರ್ಚಸ್ಸು ಅಥವಾ ಶ್ರುತಾಧ್ಯಯನಸಂಪತ್ತಿಯೂ ವೃದ್ಧಿಯಾಗುವವು. ಈ ಕಾರಣಕ್ಕಾಗಿ ಪ್ರಉಗಶಸ್ತ್ರವನ್ನು ಗಾಯತ್ರೀಛಂದಸ್ಸಿನ ಋಕ್ಕುಗಳಿಂದಲೇ ಪಠಿಸಬೇಕು. ಈ ವಿಷಯವನ್ನು ಆಶ್ವಲಾಯನರು ಈ ರೀತಿ ಹೇಳಿರುವರು—**ವಾಯುರಗ್ರೇ ಗಾ ಯಜ್ಞ-ಪ್ರೀರಿತಿ ಸಪ್ತಾನಾಂ ಪುರೋರುಚಾಂ ತಸ್ಯಾಸ್ತಸ್ಯಾ ಉಪರಿಷ್ಟಾತ್ತ್ರೃಚಂ ತೃಚಂ ಶಂಸೇದ್ವಾಯವಾಯಾಹಿ ದರ್ಶತೇತಿ ಸಪ್ತ ತೃಚಾಃ** ಎಂದು

ಔಷ್ಣಿಹಂ ಪ್ರಉಗಂ ಕುರ್ಯಾದಿತ್ಯಾಹುರಾಯುರ್ವಾ ಉಷ್ಣಿಗಾ-
ಯುಷ್ಮಾನ್ಭವತೀತ್ಯಾನುಷ್ಟುಭಂ ಪ್ರಉಗಂ ಕುರ್ಯಾದಿತ್ಯಾಹುಃ
ಕ್ಷತ್ರಂ ವಾ ಅನುಷ್ಟುಪ್‌ಕ್ಷತ್ರಸ್ಯಾಽಽಪ್ತ್ಯೈ ಇತಿ ಬಾರ್ಹತಂ ಪ್ರಉಗಂ
ಕುರ್ಯಾದಿತ್ಯಾಹುಃ ಶ್ರೀರ್ವೈ ಬೃಹತೀ ಶ್ರೀಮಾನ್ಭವತೀತಿ ಪಾಂಕ್ತಂ
ಪ್ರಉಗಂ ಕುರ್ಯಾದಿತ್ಯಾಹುರನ್ನಂ ವೈ ಪಂಕ್ತಿರನ್ನವಾನ್ಭವತೀತಿ
ತ್ರೈಷ್ಟುಭಂ ಪ್ರಉಗಂ ಕುರ್ಯಾದಿತ್ಯಾಹುರ್ಜಾಗತಾ ವೈ ಪಶವಃ
ಪಶುಮಾನ್ಭವತೀತಿ ॥

ದ್ವಿತೀಯಾದಿಪಕ್ಷಾನಾಹ— ಕ್ಷತ್ರಬಲಮನ್ಯತ್ ಪೂರ್ವವದ್ವ್ಯಾಖ್ಯೇಯಮ್ ॥

ಇತರ ಛಂದಸ್ಸುಗಳನ್ನು ಉಪಯೋಗಿಸಿ ಪ್ರಉಗಶಸ್ತ್ರವನ್ನು ಪಠಿಸಿದಲ್ಲಿ ಲಭಿಸುವ ನಾನಾವಿಧ ಫಲಗಳನ್ನು ತಿಳಿಸುವರು. ಉಷ್ಣಿಕ್‌ಛಂದಸ್ಸು ಆಯುಸ್ಸನ್ನು ಸೂಚಿಸುವುದು. ಪ್ರಉಗಶಸ್ತ್ರಮಂತ್ರಗಳನ್ನು ಉಷ್ಣಿಕ್‌ಛಂದಸ್ಸಿನ ಮಂತ್ರಗಳಿಂದ ಪಠಿಸಿದಲ್ಲಿ ಆಯುರ್ವೃದ್ಧಿಯಾಗುವುದು ಅದರಂತೆಯೇ ಅನುಷ್ಟುಪ್‌ಛಂದಸ್ಸು ವೀರ್ಯ ಅಥವಾ ಬಲದ ಸಂಕೇತವು. ಆದ್ದರಿಂದ ಅನುಷ್ಟುಪ್‌ಛಂದಸ್ಸಿನ ಮಂತ್ರಗಳ ಪ್ರಯೋಗದಿಂದ ವೀರ್ಯ ಅಥವಾ ಬಲವು ವೃದ್ಧಿಯಾಗುವುದು ; ಬೃಹತೀಛಂದಸ್ಸು ಶ್ರೀ ಅಥವಾ ಸಂಪತ್ತಿನ ಸಂಕೇತವು ಬೃಹತೀಛಂದಸ್ಸಿನ ಪ್ರಯೋಗದಿಂದ ಸಂಪತ್ತು ವೃದ್ಧಿಯಾಗುವುದು ಹಾಗೆಯೇ ಅನ್ನ ಅಥವಾ ಆಹಾರದ ಸಂಕೇತವಾದ ಪಂಕ್ತಿಶ್ಛಂದಸ್ಸಿನ ಪ್ರಯೋಗದಿಂದ ಅನ್ನಾದ್ಯಾಹಾರಾಭಿವೃದ್ಧಿಯುಂಟಾಗುವುದು. ತ್ರಿಷ್ಟುಪ್ ಛಂದಸ್ಸು ವೀರ್ಯ ಅಥವಾ ಬಲದ (ಪರಾಕ್ರಮ) ಸಂಕೇತವು. ಈ ಛಂದಸ್ಸಿನಪ್ರಯೋಗದಿಂದ ವೀರ್ಯವೃದ್ಧಿಯಾಗುವುದು. ಮತ್ತು ಪಶುಗಳನ್ನು ಸೂಚಿಸುವ ಜಗತೀಛಂದಸ್ಸಿನ ಪ್ರಯೋಗದಂದ ಪಶುಸಂಪತ್ತು ಅಭಿವೃದ್ಧಿಯಾಗುವುದು.

ತದು ಗಾಯತ್ರಮೇವ ಕುರ್ಯಾದ್ಬ್ರಹ್ಮ ವೈ ಗಾಯತ್ರೀ ಬ್ರಹ್ಮೈ-
ತದಹರ್ಬ್ರಹ್ಮಣೈವ ತದ್ಬ್ರಹ್ಮ ಪ್ರತಿಪದ್ಯತೇ ॥

ಏವಂ ನಾನಾವಿಧಬ್ರಾಹ್ಮಣಸಿದ್ಧಾನಿ ಮತಾನ್ಯುಪನ್ಯಸ್ಯ ತೇಷು ಪ್ರಥಮಂ ಸ್ವಕೀಯತ್ವೇನ ಸ್ವೀಕರೋತಿ—ತದು ತೇಷಾಂ ತು ಸಪ್ತಾನಾಂ ಮಧ್ಯೇ ಯತ್ಪ್ರಥಮಮುಪನ್ಯಸ್ತಂ ಗಾಯತ್ರಂ ತದೇವಾಸ್ಮಿನ್ಮಹಾವ್ರತೇ ಕುರ್ಯಾತ್ । ಗಾಯತ್ರ್ಯಾ ಬ್ರಹ್ಮತ್ವಂ ಪೂರ್ವಮೇವೋಕ್ತಮ್ । ಅಸ್ಯ ಚಾಹ್ನೋ ಬ್ರಹ್ಮತ್ವಂ ತತ್ಪ್ರಾಪ್ತಿಹೇತುತ್ವಾದವಗಂತವ್ಯಮ್ । ತದ್ಗಾಯತ್ರಪ್ರಉಗರೂಪೇಣ ಬ್ರಹ್ಮಣಾ ತನ್ಮಹಾವ್ರತರೂಪಂ ಬ್ರಹ್ಮ ಪ್ರಾಪ್ನೋತಿ ॥

ಮೇಲೆ ಹೇಳಿದ ಏಳುವಿಧಛಂದಸ್ಸುಗಳಲ್ಲಿ ಗಾಯತ್ರೀಛಂದಸ್ಸಿನ ಪ್ರಯೋಗದಿಂದ ಲಭಿಸುವ ಇಷ್ಟಾರ್ಥವನ್ನು ವಿವರಿಸವರು. ಈ ಛಂದಸ್ಸನ್ನೇ ಮುಖ್ಯವಾಗಿ ಮಹಾವ್ರತದಲ್ಲಿ ಉಪಯೋಗಿಸಬೇಕು. ಏಂಕೆದರೆ ಗಾಯತ್ರೀಛಂದಸ್ಸು ತೇಜಸ್ಸನ್ನೂ

ಬ್ರಹ್ಮವರ್ಚಸ್ಸನ್ನೂ ವೃದ್ಧಿಮಾಡುವುದು. ಆದ್ದರಿಂದ ಗಾಯತ್ರೀಛಂದಸ್ಸಿನ ಮಂತ್ರಗಳಿಂದ ಪ್ರಉಗಶಸ್ತ್ರವನ್ನು ಮಹಾವ್ರತದಲ್ಲಿ ಪಠಿಸಿದರೆ ಅದರಿಂದ ಪರಬ್ರಹ್ಮ ಪ್ರಾಪ್ತಿಯಾಗುವುದು.

**ತದು ಮಾಧುಚ್ಛಂದಸಂ ॥**

**ದಾಶತಯ್ಯಾಂ ಗಾಯತ್ರೀಛಂದಸ್ಕಾನಾಂ ಬಹೂನಾಂ ವಿದ್ಯಮಾನತ್ವಾತ್ತದ್ವಿಶೇಷಂ ದರ್ಶಯತಿ—ತದಪಿ ಗಾಯತ್ರೀಛಂದಸ್ಕಂ ಪಉಗಂ ಮಧುಚ್ಛಂದೋನಾಮ್ನ ಋಷೇಃ ಸಂಬಂಧಿ ದ್ರಷ್ಟವ್ಯಮ್ । ತೇನರ್ಷಿಣಾ ದೃಷ್ಟಂ '' ವಾಯುವಾಯಾಹಿ '' (ಋ–ಸಂ– ಮ ೧–ಸೂ–೧–ಋ.೧.) ಇತ್ಯಾದಿಕಂ ಯನ್ಮಂತ್ರಜಾತಂ ತದಿತ್ಯರ್ಥಃ ।**

ಈ ಪ್ರಉಗಶಸ್ತ್ರವನ್ನು ಮಧುಛಂದಋಷಿದೃಷ್ಟವಾದ ಗಾಯಿತ್ರೀಛಂದಸ್ಸಿನ ಮಂತ್ರಗಳಿಂದಲೇ ಪಠಿಸಬೇಕು. ಆ ಸೂಕ್ತವು ಯಾವುದೆಂದರೆ **ವಾಯವಾಯಾಹಿ** (ಋ. ಸಂ. ೧–೨–೧) ಎಂಬುವುದೇ ಆ ಮಂತ್ರವು.

**ಮಧು ಹ ಸ್ಮ ವಾ ಋಷಿಭ್ಯೋ ಮಧುಶ್ಛಂದಾಶ್ಛಂದತಿ ತನ್ಮಧುಚ್ಛಂದಸೋ ಮಧುಚ್ಛಂದಸ್ತ್ವಂ ॥**

**ಋಷೇರ್ನಾಮ ನಿರ್ವಕ್ತಿ—ಯೋಽಯಂ ಮಧುಚ್ಛಂದೋನಾಮಕ ಋಷಿಃ ಸೋಽಯಮಿತರೇಭ್ಯ ಋಷಿಭ್ಯೋ ಮಧು ಚ್ಛಂದತಿ ಮಧುರಂ ಭೋಗ್ಯಂ ಸಂಪಾದಯಿತುಮಿಚ್ಛತಿ । ಹ ಸ್ಮ ವಾ ಇತಿ ನಿಪಾತತ್ರಯಸಮೂಹ ಐತಿಹ್ಯಾರ್ಥಃ । ಯಸ್ಮಾದಯಂ ಮಧ್ವಿಚ್ಛತಿ ತಸ್ಮಾದಸ್ಯ ತನ್ನಾಮ ಸಂಪನ್ನಮ್ ॥**

ವಾಯವಾಯಾಹಿ ಎಂಬ ಸೂಕ್ತಕ್ಕೆ ಮಧುಚ್ಛಂದನಾಮಕ ಋಷಿಯು ದ್ರಷ್ಟೃವು. ಈ ಋಷಿಗೆ ಮಧುವು ಇಷ್ಟವಾದ್ದರಿಂದ ಮದುಚ್ಛಂದಋಷಿಯೆಂದು ಹೆಸರು ಪ್ರಸಿದ್ಧವಾಯಿತು.

**ಅಥೋ ಅನ್ನಂ ವೈ ಮಧು ಸರ್ವಂ ವೈ ಮಧು ಸರ್ವೇ ವೈ ಕಾಮಾ ಮಧು ತದ್ಯನ್ಮಾಧುಚ್ಛಂದಸಂ ಶಂಸತಿ ಸರ್ವೇಷಾಂ ಕಾಮಾನಾಮವರುದ್ಧ್ಯೈ ॥**

**ಋಷಿಸಂಬಂಧೇನ ಶಸ್ತ್ರಂ ಪ್ರಶಸ್ಯ ಫಲಸಂಬಂಧೇನಾಪಿ ಪ್ರಶಂಸತಿ—ಮಾಕ್ಷಿಕವಾಚೀ ಮಧುಶಬ್ದಸ್ತನ್ನಿಷ್ಠ ಪ್ರಿಯತ್ವಂ ಲಕ್ಷಯತಿ । ಅನ್ನಸ್ಯ ಪ್ರಿಯತ್ವಂ ಪ್ರಸಿದ್ಧಮ್ । ಯಸ್ಮಾತ್ಪ್ರಿಯತ್ವೇನ ಸರ್ವೇಽಪಿ ಕಾಮಾ ಮಧುರೂಪಾಸ್ತಸ್ಮಾತ್ಕಾರಣಾನ್ಮಧುತ್ವಸಾಮಾನ್ಯಾನ್ಮಾಧುಚ್ಛಂದಸಂ ಶಂಸತೀತಿ ಯದಸ್ತಿ ತತ್ಸರ್ವಕಾಮಪ್ರಾಪ್ತ್ಯೈ ಸಂಪದ್ಯತೇ ॥**

ಈ ಸೂಕ್ತದ ದ್ರಷ್ಟೃವಾದ ಋಷಿಯನ್ನು ಪ್ರಶಂಸೆಮಾಡಿ ಈಗ ಸೂಕ್ತದ ಫಲವನ್ನು ಪ್ರಶಂಸೆಮಾಡುವರು. ಅನ್ನವು ಎಲ್ಲರಿಗೂ ಪ್ರಿಯವಾಗಿರುವುದು ಪ್ರಸಿದ್ಧವಾಗಿಯೇ ಇದೆ. ಅದರಂತೆ ವಸ್ತ್ರವು (ಬಟ್ಟೆಯು) ಎಲ್ಲರಿಗೂ ಬೇಕಾದ

ವಸ್ತುವು. ಎಲ್ಲರಿಗೂ ಬೇಕಾದ ವಸ್ತುಗಳು ಪ್ರಿಯವಾದ ವಸ್ತುಗಳು. ಎಲ್ಲರಿಗೂ ಪ್ರಿಯವಾದ್ದರಿಂದ ರುಚಿಕರವಾದ ಮಧುವಿನಂತೆ ಅಪೇಕ್ಷಿಸಲ್ಪಡುವವು. ಅದರಂತೆ ಈ ಋಷಿಯ ಸೂಕ್ತಗಳು ಪಠಿಸುವವರಿಗೆ ಬೇಕಾದ ಇಷ್ಟಾರ್ಥಗಳನ್ನು ಪೂರೈಸುವುದರಿಂದ ಈ ಸೂಕ್ತವನ್ನು ಈ ಋಷಿಯ ಹೆಸರಿನಿಂದಲೇ ಮಾಧುಚ್ಛಂದಸಂ ಸೂಕ್ತಂ ಎಂದು ಕರೆಯುವುದು ರೂಢಿಯಾಗಿದೆ.

**ಸರ್ವಾನ್ಕಾಮಾನವರುಂಧೇ ಯ ಏವಂ ವೇದ ।**

**ಮಾಧುಚ್ಛಂದಸವೇದನಂ ಪ್ರಶಂಸತಿ—**

ಈ ಮಾಧುಚ್ಛಂದಸಸೂಕ್ತವನ್ನು ಚೆನ್ನಾಗಿ ತಿಳಿದಿರುವ ಪುರುಷನು ತಾನು ಬಯಸುವ ಸಮಸ್ತ ಇಷ್ಟಾರ್ಥಗಳನ್ನೂ ಪಡೆದು ಸುಖಿಸುವನು.

**ತದ್ವೈಕಾಹಿಕಂ ರೂಪಸಮೃದ್ಧಂ ಬಹು ವಾ ಏತಸ್ಮಿನ್ನಹನಿ ಕಿಂಚ ಕಿಂಚ ವಾರಣಂ ಕ್ರಿಯತೇ ಶಾಂತ್ಯಾ ಏವ ಶಾಂತಿರ್ವೈ ಪ್ರತಿಷ್ಠೈಕಾಹಃ ಶಾಂತ್ಯಾಮೇವ ತತ್ಪ್ರತಿಷ್ಠಾಯಾಮಂತತಃ ಪ್ರತಿತಿಷ್ಠಂತಿ ॥**

**ಪುನಃ ಪ್ರಕಾರಾಂತರೇಣ ಶಸ್ತ್ರಂ ಪ್ರಶಂಸತಿ—ತದು ತದಪಿ ಯಥೋಕ್ತಂ ಗಾಯತ್ರಂ ಪ್ರಉಗಮೈಕಾಹಿಕಮೇಕಾಹೇ ಪ್ರಕೃತಿಭೂತೇಽಗ್ನಿಷ್ಟೋಮೇ ನಿಷ್ಪನ್ನಂ ತದೇವ ವಿಶ್ವಜಿದ್‌-ದ್ವಾರೇಣಾಸ್ಮಿನ್ಮಹಾವ್ರತೇ ಪ್ರಾಪ್ತಮಂತತ ಐಕಾಹಿಕತ್ವಾದೇತದ್ರೂಪಸಮೃದ್ಧಮ್ । ಪ್ರಕೃತಿರೂಪೇ ಹ್ಯೇಕಾಹೇ ಕೃತ್ಸ್ನಸ್ಯಾನುಷ್ಠೇಯಸ್ಯ ಪ್ರತ್ಯಕ್ಷವಚನಪ್ರಾಪಿತತ್ವಾದವಿಸ್ಮರಣೇನ ಸರ್ವಮನುಷ್ಠಾತುಂ ಶಕ್ಯಂ । ಸೇಯಂ ರೂಪಸಮೃದ್ಧಿಃ । ನ ಚ ಕಿಮನೇನೈಕಾಹಿಕತ್ವೇನೇತಿ ಶಂಕನೀಯಮ್ । ತಸ್ಯಾನಿಷ್ಟಶಮನಾರ್ಥತ್ವಾತ್ । ಏತಸ್ಮಿನ್ಮಹಾವ್ರತಾಖ್ಯೇಽಹನಿ ವಾರಣಂ ಶಿಷ್ಟೈರ್ನಿವಾರಣೀಯಂ ವರ್ಜನೀಯಂ ಕಿಮಪಿ ಬಹುವಿಧಂ ದಾಸೀನೃತ್ತಬಟುಮೈಥುನಬ್ರಹ್ಮಚಾರಿಪುಂಶ್ಚಲೀಸಂಪ್ರವಾದಾ-ದಿಕಂ ಕ್ರಿಯತೇಽತಸ್ತಸ್ಯ ಶಾಂತ್ಯರ್ಥಮೇವ ಸರೂಪಸಮೃದ್ಧಸ್ಯೈಕಾಹಿಕಸ್ಯ ಪ್ರಉಗಶಂಸನಮ್ । ಏಕಾಹಸ್ಯ ತು ಸರ್ವವಿಕೃತಿಪ್ರತಿಷ್ಠಾಪಕತ್ವಾಚ್ಛಾಂತಿಹೇತುತ್ವಮುಪಪನ್ನಮ್ । ಅತೋ ಯಜ-ಮಾನಾ ಅಪ್ಯಂತತಃ ಸಂವತ್ಸರಸತ್ರಸ್ಯಾವಸಾನ ಉಪಾಂತ್ಯೇಽಸ್ಮಿನ್ನಹನಿ ತತ್ತೇನ ಶಸ್ತ್ರಪಾಠೇನ ಪ್ರತಿಷ್ಠಾರೂಪಾಯಾಮನಿಷ್ಟಶಾಂತ್ಯಾಮೇವ ಪ್ರತಿತಿಷ್ಠಂತಿ ಪ್ರತಿಷ್ಠಾ(ಪ್ರತಿಷ್ಠಿತಾ) ಭವಂತಿ ।**

ಮೇಲೆ ಹೇಳಿದ ಶಸ್ತ್ರಮಂತ್ರವನ್ನು ಪ್ರಕಾರಾಂತವಾಗಿ ಪ್ರಶಂಸೆಮಾಡುವರು. ಗಾಯತ್ರೀಛಂದಸ್ಸಿನ ಋಕ್ಕುಗಳಿಂದ ಕೂಡಿದ ಪ್ರಉಗಶಸ್ತ್ರವು ಏಕಾಹವೆಂಬ ಪ್ರಕೃತಿಭೂತವಾದ ಅಗ್ನಿಷ್ಟೋಮದಲ್ಲಿ ರೂಪಸಮೃದ್ಧಿಯನ್ನುಂಟು ಮಾಡುವುದಾಗಿರುವುದು. ಏಕಾಹ ಎಂದರೆ ಒಂದು ದಿನದಲ್ಲಿ ಮಾಡಿ ಮುಗಿಸಬೇಕಾದ ಯಾಗವು ಪ್ರಕೃತಿರೂಪವಾದ್ದರಿಂದು ಇದರಲ್ಲಿ ಮಾಡಬೇಕಾದ ಎಲ್ಲಾ ಕ್ರಿಯೆಗಳನ್ನೂ ಮಾಡಿ ಮುಗಿಸುವುದು ಸಾಧ್ಯವು ಇದೆ ರೂಪಸಮೃದ್ಧಿಯು ಒಂದು ದಿನದ ಮಟ್ಟಿಗೆ ಮಾಡುವ ಯಾಗ (ಏಕಾಹ) ದಿಂದ ಏನು ಪ್ರಯೋಜನವೆಂದು ಶಂಕಿಸಬಾರದು. ಈ ಏಕಾಹದಿಂದ ಅನಿಷ್ಟವೆಲ್ಲವೂ

ನಿವಾರಣೆಯಾಗಿ ಶಾಂತಿಯು ಲಭಿಸುವುದು. ಶಾಂತ್ಯರ್ಥಕ್ಕಾಗಿಯೇ ಮತ್ತು ರೂಪಸಮೃದ್ಧಿಗಾಗಿಯೇ ಏಕಾಹದಲ್ಲಿ ಪ್ರಉಗ ಶಸ್ತ್ರಮಂತ್ರವನ್ನು ಪಠಿಸಬೇಕು. ಏಕಾಹವು ಶಾಂತಿಗೆ ಕಾರಣಭೂತವಾಗಿರುವುದು ಆದ್ದರಿಂದ ಯಜಮಾನರು ಸತ್ರಯಾಗದ ಕೊನೆಯ ದಿನದ ಹಿಂದಿನ ದಿವಸದಲ್ಲಿ ಈ ಏಕಾಹವನ್ನು ಮಾಡಿ ಶಸ್ತ್ರಪಠನಮಾಡುವುದರಿಂದ ಶಾಂತಿಯನ್ನೇ ಪಡೆಯುವರು.

**ಪ್ರತಿತಿಷ್ಠಂತಿ ಯ ಏವಂ ವೇದ ಯೇಷಾಂ ಚೈವಂ ವಿದ್ವಾನೇತದ್ಧೋತಾ ಶಂಸತಿ**

**ಅಸ್ಯ ಶಸ್ತ್ರಸ್ಯ ಪ್ರತಿಷ್ಠಾಹೇತು (ತ್ವ) ವೇದನಂ ತತ್ಪೂರ್ವಕಾನುಷ್ಠಾನಂ (ಚ) ಪ್ರಶಂಸತಿ— ಯೇಷಾಂ ಸತ್ರಿಣಾಮರ್ಥ ಏವಮುಕ್ತಪ್ರಕಾರೇಣ ಶಸ್ತ್ರಮಹಿಮಾನಂ ವಿದ್ವಾನ್ ಹೋತೈತಚ್ಛಸ್ತ್ರಂ ಶಂಸತಿ ತೇಽಪಿ ಸತ್ರಿಣಃ ಪ್ರತಿತಿಷ್ಠಂತೀತಿ ದ್ರಷ್ಟವ್ಯಮ್ ||**

ಈ ವಿಷಯಗಳನ್ನೆಲ್ಲಾ ತಿಳಿದಿರುವ ವಿದ್ವಾಂಸನಾದ ಯಾವ ಹೋತೃವು ಈ ಶಸ್ತ್ರಮಂತ್ರವನ್ನು ವಿಧ್ಯುಕ್ತವಾಗಿ ಪಠಿಸುವನೋ ಅವನು ಅನಿಷ್ಟ ಪರಿಹಾರವನ್ನೂ ಶಾಂತಿಯನ್ನೂ ಪಡೆಯುವನು.

---

*English Translation*

---

I. Some say : Let him take a Gayatri hymn for the Pra-uga, Verily Gayatri is brightness and glory of countenauce, and thus the sacrificer becomes bright and glorious.

2. Others say : ' Let him take a Ushnih hymn for the Pra-uga. Verily Ushnih is life, and thus the sacrificer has a long life.'

Others say : ' Let him take an Anushtubh hymn for the Pra-uga. Verily Anushtubh is valour, and it serves for obtaining valour. '

Others say : ' Let him take a Brihati hymn for the Pra-uga. Verily Brihati is fortune, and thus the sacrificer becomes fortunate.'

Others say : Let him take a Pankti hymn for the Pra-uga. Verily, Pankti is food, and thus the sacrificer becomes rich in food.'

Others say : ' Let him take a Trishtubh hymn for the Pra-uga. Verily, Trishtubh is strength, and thus the sacrificer becomes strong.'

Others say : ‘ Let him take a Gagati hymn for the Pra–uga. Verily cattle is Gagati–like, and thus the sacaifieer becomes rich in cattle.’

3. But we say : ‘ Let him take a Gayatri hymn only. Verily, Gayatri is Brahman, and that day (the mahavrata) is (for the attainment of) Brahman. Thus he obtains Brahmau by means of Brahman.

4. ‘ And it must be a Gayatri hymn by Madhukkhands,

5. ‘ For Madhukkandas is called Madhukkhandas, because he wishes (khandati) for honey (Madhu) for the Rishis.

6. ‘ Now food verily is honey, all is honey, all desires are honey, and thus if he recites the hymn of Madhukkhandas, it serves for the attainment of all desires.

7. ‘ He who knows this, obtains all desires. ’

This (Gayatri pra–uga), according to the one–day (ekaha) ceremonial. is perfect in form. On that day (the mahavrata) much is done now and then which has to be hidden, and has to be atoned for (by recltation of hymns). Atonement (santi) is rest, the one–day sacrifice. Therefore at the end of the year (on the last day but one of the sacrifice that lasts a whole year) the sacreficers rest on this atonement as their rest.

8. He who knows this resss firm, and they also for whom a Hotri priest who knows this, recites this hymn.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ಪ್ರಥಮಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ಮಾಧವೀಯ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯದ ಪ್ರಥಮಾರಣ್ಯಕದ
ಪ್ರಥಮಾಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವು ॥

---

## ಪ್ರಥಮಾರಣ್ಯಕೇ ಪ್ರಥಮೋಽಧ್ಯಾಯೇ ಚತುರ್ಥಃ ಖಂಡಃ

### ಮೊದಲನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು.

---

ವಾಯವಾಯಾಹಿ ದರ್ಶತೇಮೇ ಸೋಮಾ ಅರಂಕೃತಾ ಇತ್ಯೇತದ್ವಾ
ಅಹರರಂ ಯಜಮಾನಾಯ ಚ ದೇವೇಭ್ಯಶ್ಚ ॥

**ಅಸ್ಮಿನ್ ಪ್ರಉಗಶಸ್ತ್ರೇ ಯೇ ಸಪ್ತ ತೃಚಾಸ್ತೇಷಾಂ ಮಧ್ಯೇ ಪ್ರಥಮತೃಚಸ್ಯ ಪ್ರಥಮಾರ್ಧೇ ಯೋಽಯಮರಮಿತಿ ಶಬ್ದಸ್ತಸ್ಯ ತಾತ್ಪರ್ಯಂ ದರ್ಶಯತಿ—ದರ್ಶತ ದರ್ಶನೀಯ ಹೇ ವಾಯೋಽಸ್ಮಿನ್ಕರ್ಮಣ್ಯಾಗಚ್ಛ, ಇಮ ಐಂದ್ರವಾಯವಾದಿಗೃಹಗತಾ ಸೋಮಾ ಅರಮಲಂ ಸಂಪೂರ್ಣಾ ಯಥಾ ಭವಂತಿ ತಥಾ ಕೃತಾಃ ಸಂಪಾದಿತಾಃ ಇತ್ಯೇವಂ ಮಂತ್ರೇಽಭಿಧೀಯತೇ । ಯಸ್ಮಾದೇತನ್ಮಹಾವ್ರತಾಖ್ಯಮಹೋ ಯ (ಹರ್ಯ) ಜಮಾನಾಯ ಚ ದೇವೇಭ್ಯಶ್ಚಾರಂ ಸೋಮಂ ಪಾತುಮಲಂ ತಸ್ಮಾದ್ಯುಕ್ತೋ ಮಂತ್ರೇಽರಮಿತಿ ಶಬ್ದಃ ॥**

ಈ ಪ್ರಉಗಶಸ್ತ್ರದಲ್ಲಿ ಏಳು ತೃಚ (೩ ಋಕ್ಕುಗಳ) ಇರುವವಷ್ಟೆ. ಇವುಗಳಲ್ಲಿ ಮೊದಲನೇ ತೃಚದ ಪ್ರಥಮಾರ್ಧದಲ್ಲಿ ಇರುವ ಅರಂ ಎಂಬ ಶಬ್ದದ ತಾತ್ಪರ್ಯವನ್ನು ತಿಳಿಸುವರು. **ದರ್ಶತ** ದರ್ಶನೀಯನಾದ (ಆಕರ್ಷಕರೂಪವುಳ್ಳ) **ಹೇ ವಾಯೋ** ಎಲೈ ವಾಯುದೇವನೇ, **ಇಮೇ** ಈ ಐಂದ್ರವಾಯವಾದಿಗ್ರಹಪಾತ್ರೆಗಳಲ್ಲಿ ತುಂಬಿ ಸಿದ್ಧಪಡಿಸಿರುವ **ಸೋಮಾಃ** ಸೋಮರಸಗಳು ಅರಂ (ಅಲಂ–ಸಾಕಾಗುವಷ್ಟು) ಸಂಪೂರ್ಣವಾಗಿ ಅಥವಾ ಯಥೇಚ್ಛವಾಗಿ **ಕೃತಾಃ** ಸಿದ್ಧಪಡಿಸಲ್ಪಟ್ಟಿವೆ. ಇದು ಮಂತ್ರಾರ್ಥವು. ಮಹಾವ್ರತವೆಂಬ ಈ ಕರ್ಮದಲ್ಲಿ ಯಜ್ಞಮಾಡುವ ಯಜಮಾನನಿಗೂ ದೇವತೆಗಳಿಗೂ ಪಾನಮಾಡುವುದಕ್ಕೆ ಬೇಕಾಗುವಷ್ಟು ಎಂದರೆ ಯಥೇಚ್ಛವಾಗಿ ಸೋಮರಸಗಳನ್ನು ಸಿದ್ಧಪಡಿಸಲಾಗಿದೆ ಎಂದು ಮಂತ್ರಾಭಿಪ್ರಾಯವು. ಸೋಮರಸವು ಯಥೇಚ್ಛವಾಗಿದೆ ಎಂಬುದನ್ನು ಸೂಚಿಸುವುದಕ್ಕಾಗಿ ಇಲ್ಲಿ **ಅರಂ** ಶಬ್ದಪ್ರಯೋಗವಿದೆ.

ಅರಂ ಹಾಸ್ಮಾ ಏತದಹರ್ಭವತಿ ಯ ಏವಂ ವೇದ ಯೇಷಾ ಚೈವಂ
ವಿದ್ವಾನೇತದ್ಧೋತಾ ಶಂಸತಿ ॥

**ಸಂಪೂರ್ತಿವೇದನತತ್ಪೂರ್ವಕಾನುಷ್ಠಾನೇ ಪೂರ್ವವತ್ ಪ್ರಶಂಸತಿ—**

ಈ ಸೋಮರಸಗಳು ಈ ದಿವಸವೇ ನಿಮಗಾಗಿ ಸಿದ್ಧಪಡಿಸಲ್ಪಟ್ಟಿವೆ. ಈ ವಿಷಯವನ್ನು ತಿಳಿದು ಮಂತ್ರವನ್ನು ಪಠಿಸುವವನೂ ಅಥವಾ ಯಾರಿಗಾಗಿ ಈ ವಿಷಯವನ್ನು ತಿಳಿದು ಪಠಿಸುವನೋ ಆ ಹೋತೃವು ವಾಯುದೇವತೆಯನ್ನು ಆಹ್ವಾನಮಾಡುವನು.

ಇಂದ್ರವಾಯೂ ಇಮೇ ಸುತಾ ಆಯಾತಮುಪನಿಷ್ಕೃತಮಿತಿ ಯದ್ವೈ
ನಿಷ್ಕೃತಂ ತತ್ಸಂಸ್ಕೃತಂ ||

ದ್ವಿತೀಯಸ್ಯ ತೃಚಸ್ಯಾಂತಿಮಾಯಾಮೃಚಿ ಮಧ್ಯಮಪಾದೇ ನಿಷ್ಕೃತಶಬ್ದಂ ವ್ಯಾಚಷ್ಟೇ— ಹೇ ಇಂದ್ರವಾಯೂ ಇಮೇ ಸೋಮಾ ಭವದರ್ಥಮಭಿಷುತಾಸ್ತಸ್ಮಾದುಪನಿಷ್ಕೃತಮಿಮಂ ಸೋಮಂ ಪ್ರತಿ ಯುವಾಮಾಗಚ್ಛತಮಿತ್ಯಸ್ಮಿನ್ಪಾದೇ ನಿಷ್ಕೃತಮಿತಿ ಯತ್ಪದಮಸ್ತಿ ತತ್ಪದಂ ಸಂಸ್ಕೃತಮಿತ್ಯಮುಮರ್ಥಮಾಹ ||

ಇಲ್ಲಿ ನಿಷ್ಕೃತಂ ಎಂಬ ಪದಕ್ಕೆ ಸಂಸ್ಕೃತಂ, ಸಂಸ್ಕಾರಪೂರ್ವಕವಾಗಿ ಸಿದ್ಧಪಡಿಸಲ್ಪಟ್ಟ ಎಂದರ್ಥವು. ಎಲೈ ಇಂದ್ರ ಮತ್ತು ವಾಯುದೇವತೆಗಳೇ ಈ ಸೋಮರಸಗಳನ್ನು ಚೆನ್ನಾಗಿ ಹಿಂಡಿ ನಿಮಗಾಗಿ ಸಿದ್ಧಪಡಿಸಲಾಗಿದೆ. ಅವುಗಳನ್ನು ಪಾನಮಾಡುವುದಕ್ಕಾಗಿ ಇಲ್ಲಿಗೆ ದಯಮಾಡಿ.

ಆ ಹಾಸ್ಯೇಂದ್ರವಾಯೂ ಸಂಸ್ಕೃತಂ ಗಚ್ಛತೋ ಯ ಏವಂ ವೇದ
ಯೋಷಾಂ ಚೈವಂ ವಿದ್ವಾನೇತದ್ಧೋತಾ ಶಂಸತಿ ||

ವೇದನಾನುಷ್ಠಾನೇ ಪ್ರಶಂಸತಿ—ಅಸ್ಯೈವಾಭಿಜ್ಞಸ್ಯ ಸಂಬಂಧಿನಂ ಸಂಸ್ಕಾರಯುಕ್ತಂ ಸೋಮಮಿಂದ್ರವಾಯೂ ಆಭಿಮುಖ್ಯೇನ ಖಲು ಪ್ರಾಪ್ನುತಃ ||

ಇಂದ್ರ ಮತ್ತು ವಾಯುದೇವತೆಗಳಿಗಾಗಿ ಸೋಮರಸವು ಸಂಸ್ಕಾರಪೂರ್ವಕವಾಗಿ ಸಿದ್ಧಪಡಿಸಿಟ್ಟಿರುವ ವಿಷಯವನ್ನು ತಿಳಿದಿರುವ ಹೋತೃವಾಗಲಿ, ಹೋತೃವು ಪಠಿಸುವ ಯಜಮಾನನಾಗಲಿ ಈ ಮಂತ್ರವನ್ನು ಪಠಿಸುವಾಗ ಈ ಇಂದ್ರ ವಾಯುಗಳು ಖಂಡಿತವಾಗಿಯೂ ಸೋಮಪಾನಮಾಡಲು ಬರುತ್ತಾರೆ.

ಮಿತ್ರಂ ಹುವೇ ಪೂತದಕ್ಷಂ ಧಿಯಂ ಘೃತಾಚೀಂ ಸಾಧಂತೇತಿ ವಾಗ್ವೈ
ಧೀರ್ಘೃತಾಚೀ ||

ತೃತೀಯಸ್ಯ ತೃಚಸ್ಯ ಪ್ರಥಮಾಯಾಮೃಚಿ ತೃತೀಯಪಾದಂ ವ್ಯಾಚಷ್ಟೇ—ಪೂತೇಷು ಶುದ್ಧೇಷು ದಕ್ಷಂ ಕುಶಲಂ ಮಿತ್ರಂ ಹುವ ಆಹ್ವಯಾಮಿ। ಕೀದೃಶಂ ಮಿತ್ರಮ್—ಧಿಯಂ ಘೃತಾಚೀಂ ಸಾಧಯಂತಂ (ಸಾಧಂತಾ) ಧಿಯಂ ಧ್ಯಾನಯೋಗ್ಯಂ ಘೃತಾಚೀ (ಚೀಂ) ಕ್ಷರಣೋಪೇತಂ ದ್ರವ್ಯಮಾಜ್ಯೋದಕಾದಿಕಂ ಪ್ರಾಪಯಂತಮ್ । ಮಂತ್ರರೂಪಾಂ ವಾ ವಾಚಂ ಸಂಪಾದಯಂತಮ್ । ಸಾಧಯಂತಾವಿತಿ ದ್ವಿವಚನಂ ವಾ। ವರುಣಂ ಚೇತಿ ದ್ವಿತೀಯಪಾದೇ ವರುಣಸ್ಯಾಪಿ ಪ್ರಕೃತತ್ವೇನೋಭಯೋರ್ವಿಶೇಷಣತ್ವಾತ್ । ಇತ್ಯೇತಸ್ಮಿಂಸ್ತೃತೀಯಪಾದೇ ಧೀರ್ಘೃತಾಚೀತ್ಯನೇನ ಪದದ್ವಯೇನ ವಾಗೇವ ವಿವಕ್ಷಿತಾ ।

ಶುದ್ಧಿಕಾರ್ಯಗಳಲ್ಲಿ ಕುಶಲನಾದ ಮಿತ್ರನೆಂಬ ದೇವತೆಯನ್ನು ಆಹ್ವಾನಮಾಡುತ್ತೇನೆ. ಈ ಮಿತ್ರನು ಧ್ಯಾನ ಯೋಗ್ಯವಾದ ಆಜ್ಯ ಮೊದಲಾದ ದ್ರವ್ಯಗಳನ್ನು ಹೊಂದಿಸುವವನು. ಇಲ್ಲಿ ಆಜ್ಯಾದಿದ್ರವ್ಯಗಳು ಎಂದರೆ ಮಂತ್ರರೂಪ ವಾದ ವಾಕ್ಯಗಳು. ಇಲ್ಲಿ ಸಾಧಯಂತಾ (ಹೊಂದಿಸಿಕೊಡುವವರು) ಎಂದು ದ್ವಿವಚನವಿರುವುದು. ಏಕೆಂದರೆ ಮುಂದಿನ ಪಾದದಲ್ಲಿ ವರುಣಂ ಎಂಬ ಪದವಿರುವುದು ತಿಳಿಸುವುದು. ಘೃತಾಚೀ ಎಂಬ ಶಬ್ದವು (ವಾಗೇವ) ಮಂತ್ರರೂಪವಾದ ವಾಕ್ಯವನ್ನು ತಿಳಿಸುವುದು.

## ವಾಚಮೇವಾಸ್ಮಿಂಸ್ತದ್ದಧಾತಿ ಯ ಏವಂ ವೇದ ಯೇಷಾಂ ಚೈವಂ ವಿದ್ವಾನೇತದ್ಧೋತಾ ಶಂಸತಿ ॥

**ವೇದನಂ ಶಂಸನಂ ಚ ಶಂಸತಿ—ತತ್ತ್ರೇನ ವೇದನೇನ ಚ ಶಂಸತಿನೇನ ॥**

ಈ ವಿಷಯವನ್ನು ತಿಳಿದಿರುವ ಯಜಮಾನನಾಗಲಿ, ಅವನಿಗಾಗಿ ಪಠಿಸುವ ಹೋತೃವಾಗಲಿ ಮಂತ್ರರೂಪವಾದ ವಾಕ್ಯಗಳಲ್ಲಿ ಕುಶಲತೆಯನ್ನು ಪಡೆಯುವರು.

## ಅಶ್ವಿನಾ ಯಜ್ವರೀರಿಷ ಇತ್ಯನ್ನಂ ವಾ ಇಷೋಽನ್ನಾದ್ಯಸ್ಯಾವರುದ್ಧ್ಯೈ ॥

**ಚತುರ್ಥಸ್ಯ ತೃಚಸ್ಯ ಪ್ರಥಮಪಾದಂ ವ್ಯಾಚಷ್ಟೇ—ಹೇಽಶ್ವಿನೌ ಯಜ್ವರೀರ್ಯಾಗ-ನಿಷ್ಪಾದಕಾ ಇಷೋ ಹವಿರ್ಲಕ್ಷಣಾನ್ಯನ್ನಾನಿ ಸ್ವೀಕುರುತಮಿತ್ಯಾಧ್ಯಾಹಾರಃ । ಯದ್ವಾ ಋಚೋಽಂತಿಮೇನ ಚನಸ್ಯತಮಿತಿ ಪದೇನ ಸಂಬಂಧಃ । ಭಕ್ಷಯತಮಿತಿ ತಸ್ಯಾರ್ಥಃ । ಅತ್ರ ಯದಿದಮಿಷ ಇತಿ ಪದಂ ತಸ್ಮಾನ್ನಮೇವಾಭೋರ್ಽತೋಽನ್ನಪ್ರಾಪ್ತ್ಯರ್ಥಮಿದಂ ಭವತಿ ॥**

ನಾಲ್ಕನೇ ಋಕ್ಕಿನ ಪ್ರಥಮಪಾದವನ್ನು ವಿವರಿಸುವರು. ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ, **ಯಜ್ವರೀಃ**—ಯಾಗನಿಷ್ಪಾದಕನಾದ ಎಂದರೆ ಯಜ್ಞದಲ್ಲಿ ಹೋಮಮಾಡಲ್ಪಡುವ **ಇಷಃ**—ಅನ್ನರೂಪವಾದ ಹವಿಸ್ಸುಗಳನ್ನು ಸ್ವೀಕರಿಸಿರಿ ಅಥವಾ ಕೊನೆಯಪಾದದಲ್ಲಿರುವ **ಚನಸ್ಯತಂ** ಎಂಬ ಪದವೊಡನೆ ಅನ್ವಯಮಾಡಬಹುದು. ಅನ್ನವನ್ನು ಭಕ್ಷಿಸಿ ಎಂದರ್ಥವು. ಇಲ್ಲಿ **ಇಷಃ** ಎಂಬ ಪದವು ಅನ್ನವೆಂಬ ಅರ್ಥವನ್ನು ಸೂಚಿಸುವುದರಿಂದ ಈ ಋಕ್ಕಿನ ಪಠನವು ಅನ್ನಪ್ರಾಪ್ತಿಯನ್ನುಂಟು ಮಾಡುವುದು.

## ಆಯಾತಂ ರುದ್ರವರ್ತನೀ ಇತಿ ॥

**ಏತಸ್ಯ ತೃಚಸ್ಯಾಂತಿಮಪಾದೋ ನಿಗದವ್ಯಾಖ್ಯಾತ ಇತ್ಯೇತದ್ದರ್ಶಯತಿ ಅತ್ರಾಯಾತಾ-ಮಿತ್ಯಾದಿಪಾದಂ ಪಠತಿ । ಅತ್ರಾಶ್ವಿನೋರಾಗಮನಂ ಸ್ಪಷ್ಟಮೇವ ಪ್ರತೀಯತ ಇತ್ಯರ್ಥಃ । ರುದ್ರ-ಸ್ಯೇವ ವರ್ತನಿರ್ಮಾರ್ಗೋ ಯಯೋರಶ್ವಿನೋಸ್ತಾ (ರುದ್ರ) ವರ್ತನೀ । ಯಥಾ ರುದ್ರಸ್ಯ ಜಗ-ದೀಶ್ವರಸ್ಯ ಮಾರ್ಗೋ ನ ಕ್ವಾಪಿ ಪ್ರತಿಬಧ್ಯತೇ ತದ್ವದನಯೋರಪಿ । ತಾದೃಶೌ ಹೇಽಶ್ವಿನಾ-ವಿಹಾಸ್ಮಿನ್ಕರ್ಮಣ್ಯಾಗಚ್ಛತಮ್ ॥**

ಇಲ್ಲಿ ರುದ್ರವರ್ತಿನೀ ಎಂಬ ಶಬ್ದವಿದೆ. **ರುದ್ರಸ್ಯೇವ ವರ್ತನಿರ್ಮಾರ್ಗೋ ಽ ತಯೋರಶ್ವಿನೋಸ್ತೌರುದ್ರವರ್ತನೀ** ಜಗದೀಶ್ವರನಾದ ರುದ್ರನು ಸಂಚರಿಸುವ ಮಾರ್ಗವು ಎಲ್ಲಿಯೂ ಕಂಟಕವಾಗಿರದೆ ಸುಗಮವಾಗಿರುವುದೋ ಅದರಂತೆ ನಿಷ್ಕಂಟಕವಾದ ಗಮನವುಳ್ಳವರೆಂದರ್ಥವು. ಇಂತಹ ಸುಗಮವಾದ ಮಾರ್ಗಗಳಲ್ಲಿ ಸಂಚರಿಸುವ ಎಲೈ ಅಶ್ವಿನೀದೇವತೆಗಳೇ, ನೀವು ಈ ನಮ್ಮ ಯಜ್ಞಭೂಮಿಗೆ ದಯಮಾಡಿಸಿ (ಬನ್ನಿ) ಎಂದರ್ಥವು

**ಆ ಹಾಸ್ಯಾಶ್ವಿನೌ ಯಜ್ಞಂ ಗಚ್ಛತೋ ಯ ಏವಂ ವೇದ ಯೇಷಾಂ ಚೈವಂ ವಿದ್ವಾನೇತದ್ಧೋತಾ ಶಂಸತಿ ||**

**ವೇದನಂ ಪ್ರಶಂಸತಿ**

ಈ ವಿಷಯವನ್ನು ತಿಳಿದಿರುವ ಯಜಮಾನನ ಅಥವಾ ಅವನಿಗಾಗಿ ಮಂತ್ರವನ್ನು ಪಠಿಸುವ ವಿದ್ವಾಂಸನಾದ ಹೋತೃವಿನ ಆಹ್ವಾನವನ್ನು ಮನ್ನಿಸಿ ಅಶ್ವಿನೀದೇವತೆಗಳು ಯಜಮಾನನ ಯಜ್ಞಭೂಮಿಗೆ ಬರುತ್ತಾರೆ.

**ಇಂದ್ರಾಽಽಯಾಹಿ ಚಿತ್ರಭಾನವಿಂದ್ರಾಽಽಯಾಹಿ ಧಿಯೇಷಿತ ಇಂದ್ರಾಽಽ-ಯಾಹಿ ತೂತುಜಾನ ಇತ್ಯಾಯಾಹ್ಯಾಯಾಹೀತಿ ಶಂಸತಿ ||**

**ಪಂಚಮಸ್ಯ ತೃಚಸ್ಯ ತಿಸೃಷ್ವೃಕ್ಷು ಪ್ರಥಮಪಾದಾನಾಂ ತಾತ್ಪರ್ಯಂ ದರ್ಶಯತಿ— ಹೇ ಚಿತ್ರಭಾನೋ ವಿಚಿತ್ರರಶ್ಮಿಯುಕ್ತೇಂದ್ರ ತ್ವಮಸ್ಮಿನ್ಕರ್ಮಣ್ಯಾಯಾಹಿ । ತದ್ಯಥಾ (ತಥಾ) ಹೇ ಇಂದ್ರ ಧಿಯಾ ಸ್ವಬುದ್ಧ್ಯೇಷಿತಃ ಪ್ರೇಷಿತಃ ಸನ್ನನುಗ್ರಹಪೂರ್ವಮಾಯಾಹಿ । ತಥಾ ಹೇ ಇಂದ್ರ ತೂತುಜಾನಃ ಶತ್ರೂನ್ ಹಿಂಸನ್ನಾಯಾಹಿ । ಇತ್ಯೇತೇಷು ತ್ರಿಷು ಪಾದೇಷು ಪುನಃ ಪುನರಾಯಾಹಿ ಪಠನ್ನೇವ ಹೋತಾ ಶಂಸತೀತಿ ತೇನೇಂದ್ರಸ್ತ್ವರಯಾ ಸಮಾಗಚ್ಛತೀತ್ಯಭಿಪ್ರಾಯಃ ।**

**ಹೇ ಚಿತ್ರಭಾನೋ ಇಂದ್ರ**—ವಿಚಿತ್ರರಶ್ಮಿಯುಕ್ತನಾದ ಎಲೈ ಇಂದ್ರನೇ **ಆಯಾಹಿ**—ಈ ನಮ್ಮ ಯಜ್ಞಕರ್ಮಕ್ಕೆ ದಯಮಾಡು (ಬಾ) **ಹೇ ಇಂದ್ರ**— ಎಲೈ ಇಂದ್ರನೇ, **ಧಿಯೇಷಿತಃ**—ಸ್ವಬುದ್ಧಿಯಿಂದ ಪ್ರೇರಿತನಾಗಿ (ಇನ್ನೊಬ್ಬರ ಬಲವಂತವಿಲ್ಲದೆ) **ಆಯಾಹಿ**—ದಯಮಾಡು. **ಹೇ ಇಂದ್ರ**—ಎಲೈ ಇಂದ್ರನೇ, ತೂತುಜಾನಃ—ಶತ್ರುಗಳನ್ನು ಹಿಂಸೆಮಾಡುತ್ತಾ **ಆಯಾಹಿ**—ನಮ್ಮ ಭೂಮಿಗೆ ದಯಮಾಡು ಎಂದು ಈ ಋಕ್ಕುಗಳ ಅರ್ಥವು. ಇದನ್ನು ಹೋತೃವು ಪಠಿಸುವನು ಇಲ್ಲಿ **ಆಯಾಹಿ**—ಎಂದು ಮೂರಾವರ್ತಿ ಪಠಿತವಾಗಿರುವುದರಿಂದ ಶೀಘ್ರವಾಗಿ ಬರಬೇಕೆಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ.

**ಆ ಹಾಸ್ಯೇಂದ್ರೋ ಗಚ್ಛತಿ ಯ ಏವಂ ವೇದ ಯೇಷಾಂ ಚೈವಂ ವಿದ್ವಾನೇತದ್ಧೋತಾ ಶಂಸತಿ ||**

**ವೇದನಂ ಪ್ರಶಂಸತಿ—ಆಗಚ್ಛತಿ ಹೇತ್ಯಸ್ಯಯಃ । ಸರ್ವಥೈವಾಽಽಗಚ್ಛತೀತ್ಯರ್ಥಃ । ಪೂರ್ವಸ್ಮಿನ್ನಶ್ವಿನೋರ್ವಾಕ್ಯೇಽಪ್ಯಾಗಚ್ಛತೋ ಹೇತ್ಯೇವಂ ಯೋಜನೀಯಮ್ ||**

ಈ ವಿಷಯುವನ್ನು ಚೆನ್ನಾಗಿ ತಿಳಿದಿರುವ ವಿದ್ವಾಂಸನಾದ ಹೋತೃವು ತನಗಾಗಿ ಅಥವಾ ಯಜಮಾನನಿಗಾಗಿ ಈ ಮಂತ್ರವನ್ನು ಪಠಿಸಿದಲ್ಲಿ ಇಂದ್ರನು ಯಜ್ಞಭೂಮಿಗೆ ಖಂಡಿತವಾಗಿ ಬಂದೇ ಬರುವನು.

ಓಮಾಸಶ್ಚರ್ಷಣೀಧೃತೋ ವಿಶ್ವೇ ದೇವಾಸ ಆಗತೇತಿ ॥

ಷಷ್ಠಸ್ಯ ತೃಚಸ್ಯ ಪ್ರಥಮಾರ್ಧಂ ಸ್ಪಷ್ಟಾರ್ಥತ್ವಾಭಿಪ್ರಾಯೇಣ ಪಠತಿ । ಹೇ ವಿಶ್ವೇ ದೇವಾ ಅಸ್ಮಿನ್ಕರ್ಮಣ್ಯಾಗಚ್ಛತ । ಕೀದೃಶಾಃ-ಅವಂತಿ ರಕ್ಷಂತೀತ್ಯೋಮಾಸಃ । ಚರ್ಷಣಯೋ ಮನುಷ್ಯಾ ಯಜಮಾನಾಸ್ತಾನ್ಧಾರಯಂತಿ ಪೋಷಯಂತೀತಿ ಚರ್ಷಣೀಧೃತಃ ॥

ಆರನೆಯ ತೃಜದ ಪ್ರಥಮಾರ್ಧವನ್ನು ವಿವರಿಸುವರು. ಓಮಾಸಃ—ರಕ್ಷಿಸುವವರೂ, ಚರ್ಷಣೀಧೃತಃ— ಮನುಷ್ಯರನ್ನು ಧರಿಸಿ ಪೋಷಿಸುವವರೂ ಆದ ಹೇ ವಿಶ್ವೇ ದೇವಾಸಃ—ಎಲೈ ವಿಶ್ವೇದೇವತೆಗಳೇ, ಆಗತ—ನಮ್ಮ ಯಜ್ಞಕ್ಕೆ ದಯಮಾಡಿಸಿ.

ಆ ಹಾಸ್ಯ ವಿಶ್ವೇ ದೇವಾ ಹವಂ ಗಚ್ಛಂತಿ ಯ ಏವಂ ವೇದ ಯೇಷಾಂ ಚೈವಂ ವಿದ್ವಾನೇತದ್ಧೋತಾ ಶಂಸತಿ॥

ವೇದನಶಂಸನೇ ಪ್ರಶಂಸತಿ । ಹೂಯತೇಽತ್ರೇತಿ ಹವೋ ಯಜ್ಞಃ ॥

ಈ ವಿಷಯವನ್ನು ಚೆನ್ನಾಗಿ ತಿಳಿದಿರುವ ಹೋತೃವು ಈ ಮಂತ್ರವನ್ನು ತನಗಾಗಲಿ ಯಜಮಾನನಿಗಾಗಲಿ ಪಠಿಸಿದಲ್ಲಿ ವಿಶ್ವೇದೇವತೆಗಳು ಯಜಮಾನನ ಯಜ್ಞಭೂಮಿಗೆ ಬರುವರು.

ದಾಶ್ವಾಂಸೋ ದಾಶುಷಃ ಸುತಮಿತಿ ಯದಾಹ ದದುಷೋ ದದುಷಃ ಸುತಮಿತ್ಯೇವ ತದಾಹ ।

ದ್ವಿತೀಯಾರ್ಧಂ ವ್ಯಾಚಷ್ಟೇ—ಕೀದೃಶಾ ವಿಶ್ವೇ ದೇವಾಃ—ಸುತಮಭಿಷುತಂ ಸೋಮಂ ದಾಶುಷೋ ದತ್ತವತೋ ಯಜಮಾನಸ್ಯ ದಾಶ್ವಾಂಸಃ ಫಲಂ ದತ್ತವಂತ ಇತ್ಯೇತಸ್ಮಿನ್ ಶ್ರುತಿರ್ಯ- ದಾಹ ದಾಶುಷ ಇತಿ ಯತ್ಪದಂ ತತ್ತೇನ ಪದೇನ ದದುಷೋ ದದುಷ ಇತ್ಯಮುನೇವಾರ್ಥಮಾಹ । ' ದಾಶೃ ದಾನೇ ' (ಭ್ವಾ-ಉ-ಸೇ. ೮೮೨) ಇತ್ಯಸ್ಮಾದ್ಧಾತೋಸ್ತಚ್ಛಬ್ದನಿಷ್ಪತ್ತಿಃ । ಏಕವಚನಸ್ಯ ಯಜಮಾನಜಾತಿವಿಷಯತ್ವಾದ್ದ್ವಿಪ್ಸಾರ್ಥೋಽಪಿ ಲಭ್ಯತೇ ।

ಈ ತೃಚದ ದ್ವಿತೀಯಾರ್ಧವನ್ನು ವಿವರಿಸುವರು. ಹಿಂದಿನ ವಾಕ್ಯದಲ್ಲಿ ಹೇಳಿರುವ ವಿಶ್ವೇದೇವತೆಗಳ ವಿಶೇಷಣ ಪದವನ್ನು ವಿವರಿಸುವರು. ಸುತಂ—ಹಿಂಡಿಸಿಸ್ಥಪಡಿಸಲ್ಪಟ್ಟ ಸೋಮರಸವನ್ನು ದಾಶುಷಃ—ವಿಶ್ವೇದೇವತೆಗಳಿಗೆ ಅರ್ಪಿಸುವ ಯಜಮಾನನಿಗೆ ದಾಶ್ವಾಂಸಃ—ಅನುರೂಪವಾದ ಫಲವನ್ನು ಕೊಡುವ (ವಿಶ್ವೇದೇವತೆಗಳು). ಇಲ್ಲಿ ದಾಶೃ-ದಾನೇ—(ಭ್ವಾ. ಉ. ಸೇ ೮೮೨) ದಾಶೃ ಎಂಬ ಧಾತುವಿಗೆ ಕೊಡು ಎಂಬರ್ಥವಿರುವುದು. ಈ ಧಾತುವಿನಿಂದಲೇ ದಾಶ್ವಾಂಸಃ ದಾಶುಷಃ— ಎಂಬ ಎರಡು ಪದಗಳೂ ನಿಷ್ಪನ್ನವಾಗಿವೆ.

ದದತಿ ಹಾಸ್ಮೈ ತಂ ಕಾಮಂ ದೇವಾ ಯತ್ಕಾಮ ಏತಚ್ಛಂಸತಿ ॥

**ದಾಶ್ವಾಂಸ ಇತಿ ಪದೇನ ಸೂಚಿತಂ ಫಲಂ ದರ್ಶಯತಿ—**

ಈ ಋಕ್ಕನ್ನು ಪಠಿಸುವ ಯಜಮಾನನಿಗೆ ವಿಶ್ವೇದೇವತೆಗಳು ಬೇಕಾದ ಇಷ್ಟಾರ್ಥವನ್ನು ಕೊಡುವರು.

## ಯ ಏವಂ ವೇದ ಯೇಷಾಂ ಚೈವಂ ವಿದ್ವಾನೇತದ್ಧೋತಾ ಶಂಸತಿ ||

**ವೇದನಶಂಸನೇ ಪ್ರಶಂಸತಿ—ದದತಿ ಹಾಸ್ಮಾ ಅಪಿ (ಇತಿ) ಫಲಮತ್ರಾಪ್ಯನುವರ್ತತೇ ।**

ಈ ವಿಷಯವನ್ನು ಚೆನ್ನಾಗಿ ತಿಳಿದಿರುವ ಯಜಮಾನನಿಗಾಗಲಿ, ಅವನಿಗಾಗಿ ಮಂತ್ರವನ್ನು ಪಠಿಸುವ ಹೋತೃವಿಗಾಗಲಿ ವಿಶ್ವೇದೇವತೆಗಳು ಅವರ ಇಷ್ಟಾರ್ಥವನ್ನು ಕೊಡುವರು.

## ಪಾವಕಾ ನಃ ಸರಸ್ವತೀ ಯಜ್ಞಂ ವಷ್ಟು ಧಿಯಾವಸುರಿತಿ ವಾಗ್ವೈ ಧಿಯಾವಸುಃ ॥

**ಸಪ್ತಮಸ್ಯ ತೃಚಸ್ಯ ತೃತೀಯಪಾದೇ ಧಿಯಾವಸುಶಬ್ದಂ ವ್ಯಾಚಷ್ಟೇ—ಯಾ ಸರಸ್ವತೀ ದೇವೀ ಸಾ ನೋಽಸ್ಮಾಕಂ ಪಾವಕಾ ಶುದ್ಧಿಹೇತುಃ ಸತೀ ಯಜ್ಞಮಸ್ಮದೀಯಂ ವಷ್ಟು ವಹತು। ಕೀದೃಶೀ ಸರಸ್ವತೀ—ಧಿಯಾವಸುರ್ಬುದ್ಧ್ಯಾ ಸರ್ವಾನಾಚ್ಛಾದಯಂತೀ ಬುದ್ಧಿಪ್ರದೇತ್ಯರ್ಥಃ ಪಾವಕೇತ್ಯಾದಿಸ್ತೃಚಸ್ಯ ಪ್ರಥಮಪಾದೋ ಯಜ್ಞಮಿತ್ಯಾದಿಸ್ತೃತೀಯಸ್ತಸ್ಮಿನ್ಧಿಯಾವಸುರಿತಿಶಬ್ದೇನ ದೇವತಾಂತರಂ ನಾಭಿಧೀಯತೇ ಕಿಂ ತು ವಾಗೇವ ಪ್ರಥಮಪಾದೋಕ್ತಾ ಸರಸ್ವತ್ಯೇವ ॥**

**ಪಾವಕಾ ನಃ**—ಶುದ್ಧಿಯನ್ನುಂಟುಮಾಡುವವಳೂ, **ಧಿಯಾವಸುಃ**—ನಮಗೆ ಬುದ್ಧಿಪ್ರದಳೂ ಆದ ಸರಸ್ವತೀ—ಸರಸ್ವತೀದೇವೀಯು **ಯಜ್ಞಂ**—ಈ ನಮ್ಮ ಯಜ್ಞವನ್ನು **ವಷ್ಟು**—ನೆರವೇರಿಸಲಿ.

## ವಾಚಮೇವಾಸ್ಮಿಂಸ್ತದ್ದಧಾತಿ ಯ ಏವಂ ವೇದ ಯೇಷಾಂ ಚೈವಂ ವಿದ್ವಾನೇತದ್ಧೋತಾ ಶಂಸತಿ ॥

**ವೇದನಶಂಸನೇ ಪ್ರಶಂಸತಿ । ತತ್ರೈನ ವೇದನೇನ ಶಂಸನೇನ ಚ ॥**

ಈ ವಿಷಯವನ್ನು ಚೆನ್ನಾಗಿ ತಿಳಿದಿರುವ ಹೋತೃವು ತನಗಾಗಲಿ, ಯಜಮಾನನಿಗಾಗಲಿ ಈ ಮಂತ್ರವನ್ನು ಪಠಿಸಿದಲ್ಲಿ ವಾಗ್ದೇವತೆಯಾದ ಸರಸ್ವತಿಯು ವಾಕ್ಸಮೃದ್ಧಿಯನ್ನು ದಯಪಾಲಿಸುವಳು.

## ಯಜ್ಞಂ ವಷ್ಟ್ವಿತಿ ಯದಾಹ ಯಜ್ಞಂ ವಹತ್ವಿತ್ಯೇವ ತದಾ ಹ ||

**ತಸ್ಮಿನ್ನೇವ ತೃತೀಯಪಾದೇ ವಷ್ಟ್ವಿತಿಪದಂ ವ್ಯಾಚಷ್ಟೇ ॥**

**ಯಜ್ಞಂ ವಷ್ಟು**-ಎಂದು ಹೋತೃವು ಹೇಳುವುದರಿಂದ ಈ ಸರಸ್ವತೀದೇವಿಯು ಈ ನಮ್ಮ ಯಜ್ಞವನ್ನು ನಿರ್ವಿಘ್ನವಾಗಿ ನೆರವೇರಿಸಲಿ ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ.

ತಾಃ ಪರಾಗ್ವಚನೇನೈಕವಿಂಶತಿರ್ಭವಂತ್ಯೇಕವಿಂಶೋಽಯಂ ಪುರುಷೋ ದಶ ಹಸ್ತ್ಯಾ ಅಂಗುಲಯೋ ದಶ ಪಾದ್ಯಾ ಆತ್ಮೈಕವಿಂಶಸ್ತಮಿಮ-ಮಾತ್ಮಾನಮೇಕವಿಂಶಂ ಸಂಸ್ಕುರುತೇ ||

ತೃಚಸಪ್ತಕಸ್ಥಿತಾಮೃಕ್ಸಂಖ್ಯಾಂ ಪ್ರಶಂಸತಿ— ಆತ್ಮಾ ಮಧ್ಯದೇಹಃ । ಸ್ಪಷ್ಟಮನ್ಯತ್ ।

ಮೇಲೆ ಹೇಳಿದ ಏಳು ತೃಚಗಳಲ್ಲಿ ಒಟ್ಟು ಇಪ್ಪತ್ತೊಂದು ಋಕ್ಕುಗಳಿರುವವು. ಪುರುಷನಲ್ಲಿಯೂ ಇಪ್ಪತ್ತೊಂದು ಅವಯವಗಳಿರುವವು. ಎರಡು ಹಸ್ತಗಳಲ್ಲಿ ಹತ್ತು ಬೆರಳುಗಳೂ ಎರಡು ಪಾದಗಳಲ್ಲಿ ಹತ್ತು ಬೆರಳುಗಳೂ ಇವುಗಳ ಜತೆಗೆ ಆತ್ಮನೂ ಸೇರಿದರೆ ಇಪ್ಪತ್ತೊಂದು ಆಗುವವು. ಈ ಋಕ್ಸಂಖ್ಯೆಗೂ ಪುರುಷನ ಅವಯವಗಳಿಗೂ ಸಾಮ್ಯವಿರುವುದರಿಂದ ಈ ಋಕ್ಕುಗಳ ಪಠನವು ಪುರುಷನಿಗೆ ಸಂಸ್ಕಾರವನ್ನುಂ (ಶುದ್ಧಿಯನ್ನು)ಟುಮಾಡುವವು ಎಂದಭಿಪ್ರಾಯವು.

ತಾಸ್ತ್ರಿಃ ಪ್ರಥಮಯಾ ತ್ರಿರುತ್ತಮಯಾ ಪಂಚವಿಂಶತಿರ್ಭವಂತಿ ಪಂಚ-ವಿಂಶ ಆತ್ಮಾ ಪಂಚವಿಂಶಃ ಪ್ರಜಾಪತಿರ್ದಶ ಹಸ್ತ್ಯಾ ಅಂಗುಲಯೋ ದಶ ಪಾದ್ಯಾ ದ್ವಾ ಊರೂ ದ್ವೌ ಬಾಹೂ ಆತ್ಮೈವ ಪಂಚವಿಂಶಸ್ತ-ಮಿಮಮಾತ್ಮಾನಂ ಪಂಚವಿಂಶಂ ಸಂಸ್ಕುರುತೇಽಥೋ ಪಂಚವಿಂಶಂ ವಾ ಏತದಹಃ ಪಂಚವಿಂಶ ಏತಸ್ಯಾಹ್ನಃ ಸ್ತೋಮಸ್ತತ್ಸಮೇನ ಸಮಂ ದ್ಯತೇ ತಸ್ಮಾದ್ವೇ ಏವ ಪಂಚವಿಂಶತಿರ್ಭವಂತಿ ಭವಂತಿ ||

ಆವೃತ್ತಿವಿಧಿಪೂರ್ವಕಂ ತತ್ಸಹಿತಾಂ ಸಂಖ್ಯಾಂ ಪ್ರಶಂಸತಿ— ಆತ್ಮಾ ಪುರುಷೋ ಯಜಮಾನಃ ಪ್ರಜಾಪತಿಃ ಸ್ರಷ್ಟಾ ಚತುರ್ಮುಖ ಏವ, ತಾವುಭಾವಪಿ ಹಸ್ತಾಂಗುಲ್ಯಾದಿಪಂಚವಿಂಶತ್ಯಾಽವಯ-ವೋಪೇತೌ । ಅನ್ಯತ್ಸರ್ವಂ ‹ ಅಗ್ನಿಂ ನರಃ › (ಋ. ಸ. ಮಂ. ೭. ಸೂ. ೧. ಋ. ೧) ಇತ್ಯಾಜ್ಯ-ಶಸ್ತ್ರವಿಧಿಶೇಷಾರ್ಥವದ್ವ್ಯಾಖ್ಯೇಯಮ್ । (ಐ. ಆ-೧ ಅ-೧ ಖ-೩) || ದ್ವಿರಭ್ಯಾಸೋಽಧ್ಯಾಯ ಪರಿಸಮಾಪ್ತ್ಯರ್ಥಃ ||

ಈ ಇಪ್ಪತ್ತೊಂದು ಋಕ್ಕುಗಳನ್ನು ಪಠಿಸುವಾಗ ಮೊದಲನೆಯ ಋಕ್ಕನ್ನೂ ಕೊನೆಯ ಋಕ್ಕನ್ನೂ ಮೂರ. ಮೂರಾವರ್ತಿ ಪಠಿಸುವುದರಿಂದ ಒಟ್ಟು ಇಪ್ಪತ್ತೈದು ಋಕ್ಕುಗಳಾಗುವವು. ಪುರುಷನಿಗೆ ಇಪ್ಪತ್ತೈದು ಅಂಗಗಳಿರುವವು ಅವು ಯಾವವೆಂದರೆ ಎರಡು ಹಸ್ತಗಳಲ್ಲಿ ಹತ್ತು ಬೆರಳುಗಳು, ಎರಡು ಪಾದಗಳಲ್ಲಿ ಹತ್ತು ಬೆರಳುಗಳು ಎರಡು ತೊಡೆಗಳು. ಇವುಗಳಿಗೆ ಆತ್ಮಾ ಅಥವಾ (ಪೂರ್ತಾಶರೀರ) ಎಂಬುದನ್ನು ಸೇರಿಸಿದರೆ ಒಟ್ಟು ಇಪ್ಪತ್ತೈದು ಅವಯವಗಳಾಗುವವು. ಈ ವಿಷಯದಲ್ಲಿ ಪುರುಷನಿಗೂ ಪ್ರಜಾಪತಿಗೂ ಸಾಮ್ಯವಿರುವುದು. ಮತ್ತು ಈ ಮಹಾವ್ರತವನ್ನು ಮಾಡುವ ದಿನವೂ ಇಪ್ಪತ್ತೈದ ನೆಯ ದಿನ. ಈ ದಿನದಲ್ಲಿ ಪಠಿಸುವ ಸ್ತೋತ್ರ ಸಂಖ್ಯೆಯೂ (ಸ್ತೋಮ'ಳ ಸಂಖ್ಯೆಯೂ)ಇಪ್ಪತ್ತೈದು. ಇವುಗಳಿಗೂ ಸಾಮ್ಯವಿರುವುದು.

———

*English Translation*

1. Rv. 1, 2, 1–3. Vayav a yahi darsateme soma aram kritah, Approach, O Vayu, conspicuous, these Somas have been made ready. ' Because the word ready occurs in these verses, therefore is this day (of the sacrifice) ready (and auspicious) for the sacrificer and for the goods.

2. Yes, this day is ready (and auspicious) to him who know this, or for whom a Hotri priest who knows this, recites.

3. Rv. 1, 2, 4–6. Indravayu ime suta, a yatam upa nishkritam, ' Indra and Vayu, these Somas are prepared' come hither towards what has been prepared. ' By nishkrita, paepared, he means what has been well prepared (samskrita)

4. Indra and Vayu go to what has been prepared by him who knows this, or for whom a Hotri priest who knows this, recites.

5. Rx. 1, 2, 7. Mitram huve putadaksham, dhiyam ghritakim sadhanta, ' I call Mitra of holy strength ; (he and Varuna) they fulfil the prayer accompanied with clarified butter. ' Verily, speech is the prayer accompanied with clarified butter.

6. Speech is given to him who khows this, or for wnom a Hotri priest who knows this, recites.

7 Rv. 1, 3, 1. Asvina yagvarir ishah, ' O Asvinau, (eat) the sacrificial offerings.' Verily, the sacrificial offerings are food, and this serves for the acquirement of food.

8 Rv. 1, 3, 3. A yatam rudravartani, ' Come hither, ye Rudravartani.'

9. The Asvinau go to the sacrific of him wno knows this, or for whom a Hotri priest who knows this, recites.

10. Rv. 1, 3, 4-6. Indra yahi kitrabhano, indra yahi dhiyeshitah indra yahi tutugana, 'Come hithea, Indra, of bright sylendour, C me hither, Indra, called by prayer, Come hither, Indra, quickly!' Thus he recites, Come hither, come hither

11. Indra comes to the sacrifice of him who knows this, or for whom a Hotri priest who knows this, recites.

12. Rv. 1. 3, 7. Omasas charshanidhrito visve devasa a gata, 'Visva Devas, protectors, supporters of men, come hither!'

13. Verily, the Visve Devas come to the call of hi n who knows this, or for whom a Hotri priest who knows this, recites.

14. Rv I. 3, 7. Dasvamso dasushah sutam, 'Come Ye givers to the libation of the giver!' By dasushah he means dadushah, i. e. to the libation of every one that gives.

15. The gods fulfil his wish, with whatever wish he recites this verse,

16. (The wish of him) who knows this, or for whome a Hotri priest who knows this, recites.

17. Rv. I. 3, 10, Pavaka nah sarasvati yagnam vashtu dhiyavasuh, 'May the holy Sarasvati accept our sacrifice, rich in prayer! 'Speech is meant by 'rich in prayer.'

18. Speech is given to him who knows this, or for whom a Hotri priest who knows this, recites.

19. And when he says is, 'May she accept our sacrifice! what he means is, May she carry off our sacrifice!'

20. If these verses are recited straight on, they are twenty-one. Man also consists of twenty-one. There are ten fingers on his nands, ten toes on

his teet, and the trunk the twenty-first. He adorns that trunk, the twenty-first, by this hymn.

21. By repeating first and the last verses thrice, they becom twenty-five. The trun is the twenty-fifth, and Pragapati is the twenty-fifith. There are ten fingers on his hands, ten toes on his feet, two arms, and the trunk the twenty-fifth. He adorns that trunk, the .wenty-fifth, by this hymn.

Now this day consists of twenty-five, and the Stoma hymn of that day eonsists of twenty-five: it becomes the same through the same. Therefore these two, the day and the hymn, ore twenty-five, yea, twenty-five.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ಪ್ರಥಮಾಧ್ಯಾಯೇ ಚತುರ್ಥಃ ಖಂಡಃ

ಇತಿ ಪ್ರಥಮಾರಣ್ಯಕೇ ಪ್ರಥಮೋಽಧ್ಯಾಯಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ಮಾಧವೀಯ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯದ ಪ್ರಥಮಾರಣ್ಯಕದ
ಪ್ರಥಮಾಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವಾದುದು

ಇಲ್ಲಿಗೆ ಪ್ರಥಮಾರಣ್ಯಕದ ಪ್ರಥಮಾಧ್ಯಾಯವು ಸಮಾಪ್ತವಾದುದು

———

# ಅಥ ಪ್ರಥಮಾರಣ್ಯಕೇ ದ್ವಿತೀಯಾಧ್ಯಾಯೇ ಪ್ರಥಮಃ ಖಂಡಃ

## ಪ್ರಥಮಾರಣ್ಯಕದ ಎರಡನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

**ಆ ತ್ವಾ ರಥಂ ಯಥೋತಯ ಇದಂ ವಸೋ ಸುತಮಂಧ ಇತಿ ಮರುತ್ವತೀಯಸ್ಯ ಪ್ರತಿಪದನುಚರೌ ॥**

ಪ್ರಥಮೇಽಧ್ಯಾಯೇ ಪ್ರಾತಃಸವನಗತಮಾಜ್ಯಪ್ರಉಗಶಸ್ತ್ರದ್ವಯಂ ನಿರೂಪಿತಮ್ । ದ್ವಿತೀಯೇ ಮಾಧ್ಯಂದಿನಸವನಗತಂ ಮರುತ್ವತೀಯಾದಿನಿರೂಪ್ಯತೇ । ತಸ್ಯ ಮರುತ್ವತೀಯಸ್ಯಾದಾ ಪಠನೀಯಂ ತೃಚಂ ವಿಧತ್ತೇ—ಆತ್ವೇತಿ ತೃಚೋ ಮರುತ್ವತೀಯಶಸ್ತ್ರಸ್ಯ ಪ್ರತಿಪತ್ ಪ್ರಾರಂಭ ರೂಪಃ। ಇದಂವಸೋ ಇತ್ಯಯಂ ತೃಚೋಽನುಚರಃ ಪ್ರತಿಪದಮನುಚರತಿ । ಅನಂತರಂ ಪಠನೀಯಂ ಇತ್ಯರ್ಥಃ ॥

ಮೊದಲನೆಯ ಅಧ್ಯಾಯದಲ್ಲಿ ಪ್ರಾತಃಸವನದಲ್ಲಿ ಪಠಿಸುವ ಆಜ್ಯ ಮತ್ತು ಪ್ರಉಗಶಸ್ತ್ರಗಳನ್ನು ವಿವರಿಸಿದ್ದಾಯಿತು. ಎರಡನೇ ಅಧ್ಯಾಯದಲ್ಲಿ ಮಾಧ್ಯಂದಿನಸವನ ಕಾಲದಲ್ಲಿ ಪಠಿಸಬೇಕಾದ ಮರುತ್ವತೀಯಾದಿ ಶಸ್ತ್ರಗಳನ್ನು ವಿವರಿಸಲಾಗುವುದು. ಈ ಮರುತ್ವತೀಯಶಸ್ತ್ರದ ಆದಿಯಲ್ಲಿ ಪಠಿಸಬೇಕಾದ ತೃಚವನ್ನು (ಮೂರು ಋಕ್ಕುಗಳನ್ನು) ವಿವರಿಸುವರು. **ಆ ತ್ವಾ ರಥಂ ಯಥೋತಯೇ** (ಋ. ಸಂ. ೮–೬೮–೧) ಎಂಬ ಋಕ್ಕು ಮರುತ್ವತೀಯಶಸ್ತ್ರದ ಮೊದಲನೆಯ ಋಕ್ಕು. ಈ ಮೊದಲನೆಯ ಋಕ್ಕಿಗೆ **ಪ್ರತಿಪತ್** ಎಂದು ಹೆಸರು. **ಇದಂ ವಸೋ ಸುತಮಂಧ** (ಋ. ಸಂ. ೮–೨–೧) ಎಂಬುದು ಮರುತ್ವತೀಯಶಸ್ತ್ರ ದಲ್ಲಿ ಪಠಿಸುವ ಎರಡನೆಯ ಋಕ್ಕು. ಈ ಎರಡನೆಯ ಋಕ್ಕಿಗೆ ಎಂದರೆ **ಪ್ರತಿಪತ್** ಋಕ್ಕನ್ನು ಪಠಿಸಿದನಂತರ ಪಠಿಸುವ ಎರಡನೇ ಋಕ್ಕಿಗೆ **ಅನುಚರ** ಋಕ್ಕೆಂದು ಹೆಸರು.

**ಐಕಾಹಿಕೌ ರೂಪಸಮೃದ್ಧೌ ಬಹು ವಾ ಏತಸ್ಮಿನ್ನಹನಿ ಕಿಂಚ ಕಿಂಚ ವಾರುಣಂ ಕ್ರಿಯತೇ ಶಾಂತ್ಯಾ ಏವ ಶಾಂತಿರ್ವೈ ಪ್ರತಿಷ್ಠೈ- ಕಾಹಃ ಶಾಂತ್ಯಾಮೇವ ತತ್ಪ್ರತಿಷ್ಠಾಯಾಮಂತತಃ ಪ್ರತಿತಿಷ್ಠಂತಿ ಯ ಏವಂ ವೇದ ಯೇಷಾಂ ಚೈವಂ ವಿದ್ವಾನೇತದ್ಹೋತಾ ಶಂಸತಿ ॥**

ತಾವೇತೌ ತೃಚೌ ಪ್ರಶಂಸತಿ ಏಕಾಹೇ ಪ್ರಕೃತಿಭೂತೇಽಗ್ನಿಷ್ಟೋಮೇ ಸಮುತ್ಪನ್ನಾವೇತೌ ತೃಚಾವೈಕಾಹಿಕೌ । ರೂಪಸಮೃದ್ಧ್ಯಾದಿಕಂ ಮಾಧುಚ್ಛಂದಸಪ್ರಉಗಶೇಷಾರ್ಥವದ್ ವ್ಯಾಖ್ಯೇ- ಯಮ್ (ಐ. ಆ–೧ ಅ–೧ ಖಂ–೧) ।

ಆ ಎರಡು ಋಕ್ಕುಗಳನ್ನು ಪ್ರಶಂಸೆಮಾಡುವರು. ಏಕಾಹವೆಂಬುದು ಪ್ರಕೃತಿಭೂತವಾದ ಅಗ್ನಿಷ್ಟೋಮದಲ್ಲಿ ನೆರವೇರಿಸಲ್ಪಡುವುದು. ಅದರಲ್ಲಿ ಉಪಯೋಗಿಸಲ್ಪಡುವ ಈ ಎರಡು ತೃಚಗಳು ರೂಪಸಮೃದ್ಧಿಯಾಗಿರುವವು ಎಂದರೆ

ಸ್ವಯಂ ಸಂಪೂರ್ಣವಾಗಿರುವವು. ಮಂತ್ರಗಳಲ್ಲಿ ಹೇಳಿರುವ ವಿಷಯಗಳೂ ಯಜ್ಞದಲ್ಲಿ ನೇರವೇರಿಸಲ್ಪಡುವ ಕಾರ್ಯಕಲಾಪಗಳೂ ಪರಸ್ಪರ ಹೊಂದಿಕೊಳ್ಳುವಂತಿದ್ದರೆ ಅದಕ್ಕೆ ರೂಪಸಮೃದ್ಧಿಯೆಂದು ಹೆಸರು. ಈ ಐಕಾಹಿಕವೆಂಬ ದಿವಸದ ಕಾರ್ಯಕಲಾಪಗಳಲ್ಲಿ ನ್ಯೂನತೆಗಳೇನಾದರೂ ಸಂಭವಿಸಿದರೆ ಅವುಗಳ ಪರಿಹಾರಕ್ಕಾಗಿ ಈ ರೂಪಸಮೃದ್ಧಿಯು ಸಹಾಯಕವಾಗಿರುವುದು ಇದಕ್ಕೆ ಶಾಂತಿಯೆಂದು ಹೆಸರು. ಸಂವತ್ಸರದ ಕೊನೆಯಲ್ಲಿ ನ್ಯೂನತೆಗಳ ಪರಿಹಾರಕ್ಕಾಗಿ ಶಾಂತಿಯನ್ನು ಮಾಡುವರು. ಶಾಂತಿಯೆಂದರೆ ವಿಶ್ರಾಂತಿಯು. ಈ ವಿಷಯಗಳನ್ನು ತಿಳಿದು ಆಚರಿಸುವ ಹೋತೃವೂ, ಹೋತೃವು ಯಾರಿಗಾಗಿ ಪಠಿಸುವನೋ ಅಂತಹ ಯಜಮಾನನೂ ಈ ಋಕ್ಕುಗಳನ್ನು ಸರಿಯಾಗಿ ಪಠಿಸುವುದರಿಂದ ಶಾಂತಿಯನ್ನು (ವಿಶ್ರಾಂತಿ) ಪಡೆಯುವರು.

**ಇಂದ್ರ ನೇದೀಯ ಏದಿಹಿ ಪ್ರಸೂತಿರಾ ಶಚೀಭಿರ್ಯೇ ತ ಉಕ್ಥಿನ ಇತ್ಯುಕ್ಥಂ ವಾ ಏತದಹರುಕ್ಥವದ್ರೂಪಸಮೃದ್ಧಮೇತಸ್ಯಾಹ್ನೋ ರೂಪಂ ॥**

**ಅನುರೂಪಸ್ಯಾನಂತರಭಾವಿನಿ ಪ್ರಗಾಥೇ ಯದುಕ್ಥಿನ ಇತಿ ಪದಂ ತತ್ಪ್ರಶಂಸತಿ—ಇಂದ್ರೇತ್ಯಾದಿಃ ಪ್ರಗಾಥಸ್ತಸ್ಮಿನ್ಪ್ರಗಾಥೇ ಪ್ರಥಮಾಯಾಮೃಚಿ ಪ್ರಥಮಃ ಪಾದಃ। ಹೇ ಇಂದ್ರ ನೇದೀಯಃ ಪ್ರತ್ಯಾಸನ್ನತಮಮಿಮಂ ಕರ್ಮ ಪ್ರತ್ಯಾಗಚ್ಛೈವ॥ ಏದಿಹೀತ್ಯತ್ರೈಚ್ಛಬ್ದ ಏವಕಾರಾರ್ಥಃ। ಪ್ರಸೂತಿರಿತ್ಯಾದಿಕೋ ದ್ವಿತೀಯಸ್ಯಾಮೃಚಿ ಪ್ರಥಮಃ ಪಾದಃ। ಹೇ ಇಂದ್ರ ಶಚೀಭಿಃ ಶಕ್ತಿಭಿಃ ಸಹ ಕರ್ಮಣಾಗತೇನ ತ್ವಯಾ ಪ್ರಸೂತಿರನುಜ್ಞಾ ದೇಯಾ। ಯೇ ಹೋತ್ರಾದಯಸ್ತ್ವಯಾಽನುಜ್ಞಾತಾಸ್ತೇಽಸ್ಮಿನ್ಕರ್ಮಣ್ಯುಕ್ಥಿನಃ ಸತ್ರಿಣ ಇತ್ಯೇತಸ್ಮಿನ್ಪಾದ ಉಕ್ಥಿನ ಇತಿ ಪದಂ ತದ್ಯುಕ್ತಂ ಯಸ್ಮಾದೇತನ್ಮಹಾವ್ರತಾಖ್ಯಮಹರುಕ್ಥಂ ವೈ ಶಸ್ತ್ರಾತ್ಮಕಮೇವ। ತದೇವ ಕಥಮಿತಿ ತದುಚ್ಯತೇ—ಏತಸ್ಯ ಮಹಾವ್ರತಾಖ್ಯಸ್ಯಾಹ್ನಃ ಸ್ವರೂಪಮುಕ್ಥವಚ್ಛಸ್ತ್ರೋಪೇತಮ್। ಯದ್ಯಪಿ ಕರ್ಮಾಂತರಮಪ್ಯುಕ್ಥವದೇವ ತಥಾಪ್ಯೇತದ್ರೂಪಸಮೃದ್ಧಂ ಪ್ರಶಸ್ತೈಃ ಶಸ್ತ್ರೈರುಪೇತತ್ವಾತ್। ತಸ್ಮಾದುಕ್ಥಿನ ಇತಿ ಪದಂ ಯುಕ್ತಮ್॥**

ಇಂದ್ರ ನೇದೀಯ ಏದಿಹಿ (ಋ. ಸಂ. ೮–೫೩–೫) ಎಂಬ ಎರಡನೇ ಪ್ರಗಾಥದಲ್ಲಿ ಉಕ್ಥಿನಃ ಎಂಬ ಶಬ್ದಪ್ರಯೋಗವಿದೆ. ಪ್ರಗಾಥವೆಂದರೆ ಎರಡು ಋಕ್ಕುಗಳಿರುವ ವೇದಮಂತ್ರವು. ಇದನ್ನೇ ಸಾಮಗರು ತೃಚವನ್ನಾಗಿ (ಮೂರು ಋಕ್ಕುಗಳನ್ನಾಗಿ) ಮಾಡಿ ಗಾನಮಾಡುವರು. **ಹೇ ಇಂದ್ರ**—ಎಲೈ ಇಂದ್ರನೇ **ನೇದೀಯಃ** ಈ ಕರ್ಮಕ್ಕಾಗಿ ಸಮೀಪಕ್ಕೆ ಬಾ ಎಂದರ್ಥವು. **ಪ್ರಸೂತಿ** (ಋ ಸಂ ೮–೫೪–೬) ಎಂದು ಮೊದಲಾದ ಶಬ್ದಗಳು ಎರಡನೇ ಋಕ್ಕಿನಲ್ಲಿರುವ ಪ್ರಥಮಪಾದವು **ಹೇ ಇಂದ್ರ**—ಎಲೈ ಇಂದ್ರನೇ **ಶಚೀಭಿಃ** ಶಕ್ತಿಗಳಿಂದ ಸಹಿತನಾಗಿ ನಾವು ಮಾಡುತ್ತಿರುವ ಈ ಕಾರ್ಯವನ್ನು ಲಕ್ಷಿ **ತ್ವಯಾ**—ನಿನ್ನಿಂದ **ಪ್ರಸೂತಿಃ** ಅನುಜ್ಞೆಯು ಕೊಡಲ್ಪಡಬೇಕು. ನಿನ್ನಿಂದ ಅನುಜ್ಞೆಯನ್ನು ಪಡೆದ (ಆಜ್ಞಪ್ತರಾದ) ಯಾವ ಹೋತ್ರಾದಿ ಋತ್ವಿಜರಿರುವರೋ ಅವರಿಗೆ **ಉಕ್ಥಿನಃ** ಶಸ್ತ್ರಗಳನ್ನು ಪಠಿಸುವವರು ಎಂದು ಹೆಸರು. ಋತ್ವಿಜರಿಗೆ ಉಕ್ಥಿನಃ ಎಂಬ ಹೆಸರು ಬಂದಿದ್ದರಿಂದ ಮಹಾವ್ರತದ ದಿನಕ್ಕೆ **ಉಕ್ಥಂ** ಶಸ್ತ್ರಾತ್ಮಕವಾದುದು ಎಂದು ಪ್ರಸಿದ್ಧಿಯಾಯಿತು. ಏಕೆಂದರೆ ಈ ಮಹಾವ್ರತದ ದಿನದಲ್ಲಿ ಉಕ್ಥ ಎಂದರೆ ಶಸ್ತ್ರಮಂತ್ರಗಳನ್ನು ಪಠಿಸುವುದರಿಂದ ಈ ದಿನಕ್ಕೆ ಉಕ್ಥವೆಂದೂ ಶಸ್ತ್ರಮಂತ್ರಗಳನ್ನು ಪಠಿಸುವ ಋತ್ವಿಜರಿಗೆ ಉಕ್ಥಿನಃ ಎಂದೂ ಹೆಸರು ಬಂದಿರುವುದು ಈ ಕಾರಣದಿಂದ ಈ ಮಹಾವ್ರತದ ದಿನವು ರೂಪಸಮೃದ್ಧಿಯೆನಿಸಿರುವದು.

**ಪ್ರೈತು ಬ್ರಹ್ಮಣಸ್ಪತಿರಚಾ ವೀರಮಿತಿ ವೀರವದ್ರೂಪಸಮೃದ್ಧಮೇತ-ಸ್ಯಾಹ್ನೋ ರೂಪಮ್ ||**

ಪ್ರಗಾಥಾಂತರಗತಂ ವೀರಮಿತಿ ಪದಂ ಪ್ರಶಂಸತಿ-ಪ್ರೈತ್ವಿತ್ಯಾದಿಃ ಪ್ರಗಾಥಸ್ಯ ಪ್ರಥಮಾಯಾಃ ಪ್ರಥಮಃ ಪಾದಃ । ಅಚ್ಛಾ ವೀರಮಿತಿ ತೃತೀಯಃ ಪಾದಃ । ಬ್ರಹ್ಮಣೋ ವೇದಸ್ಯ ಪತಿಃ ಪಾಲಕ ಏತನ್ನಾಮಕೋ ದೇವೋ ವೀರಂ ಶೀಘ್ರಫಲಪ್ರದತ್ವೇನಾತ್ಯಂತಶೂರಮೇತತ್ಕರ್ಮಾಚ್ಛ ಪ್ರಾಪ್ತುಂ ಪ್ರೈತು ಪ್ರಕರ್ಷೇಣ ಗಚ್ಛತು । ಏತತ್ಪಾಠೇ ಮದಾ (ಚೈತ) ಸ್ಯಾಹ್ನೋ ರೂಪಂ ವೀರವದ್ವೀರಪದ-ಯುಕ್ತಂ ಸದ್ರೂಪೇಣ ಸಮೃದ್ಧಂ ಭವತಿ ।

ಪ್ರೈತು (ಋ. ಸಂ ೧-೪೦-೩) ಮೊದಲಾದ ಪದಗಳು ಮೊದಲನೇ ಪ್ರಗಾಥದ ಮೊದಲನೆಯ ಪಾದದಲ್ಲಿರುವವು. **ಅಚ್ಛಾವೀರಂ** ಎಂಬುದು ಮೂರನೆಯ ಪಾದವು. **ಬ್ರಹ್ಮಣಃ**-ವೇದಕ್ಕೆ (ವೇದಮಂತ್ರಗಳಿಗೆ) **ಪತಿಃ**-ಪಾಲಕನಾದ ದೇವನು **ವೀರಂ**—ಬೇಗನೆ ಫಲವನ್ನು ಕೊಡುವ ಈ ಕರ್ಮವನ್ನು **ಅಚ್ಛ**—ಲಕ್ಷಿಸಿ **ಪ್ರೈತು**—ದಯಮಾಡಲಿ. ಇಲ್ಲಿ ವೀರಶಬ್ದಕ್ಕೆ ಶೀಘ್ರಫಲಪ್ರದವೆಂಬ ಅರ್ಥವಿರುವುದರಿಂದ **ಅಚ್ಛಾವೀರಂ** ಶೀಘ್ರವಾಗಿ ಸಮಾಪಿಸು ಎಂದು ಅರ್ಥವಿರುವುದರಿಂದ ಇಲ್ಲಿ ರೂಪಸಮೃದ್ಧಿಯು ಕಂಡುಬರುತ್ತಿರುವುದು.

**ಉತ್ತಿಷ್ಠ ಬ್ರಹ್ಮಣಸ್ಪತೇ ಸುವೀರ್ಯಮಿತಿ ವೀರ್ಯವದ್ರೂಪಸಮೃದ್ಧ-ಮೇತಸ್ಯಾಹ್ನೋ ರೂಪಂ ||**

ಪ್ರಗಾಥಾಂತರೇ ಸುವೀರ್ಯಮಿತಿ ಪ್ರಶಂಸತಿ-ಉತ್ತಿಷ್ಠೇತ್ಯಾದಿಃ ಪ್ರಗಾಥಸ್ಯ ಪ್ರಥಮಾಯಾಮೃಚಿ ಪ್ರಥಮಃ ಪಾದಃ । ಹೇ ಬ್ರಹ್ಮಣಸ್ಪತ ಉತಿಷ್ಠೇಹಾಯುಕ್ತೋ ಭವ । ತಸ್ಮಿನ್ನೇವ ಪ್ರಗಾಥೇ (ಥೇ) ದ್ವಿತೀಯಸ್ಯಾಮೃಚಿ ತೃತೀಯಪಾದೇ ಸುವೀರ್ಯಮಿತಿ ಪದಂ ವಿದ್ಯತೇ, ತಚ್ಚ ಯಜಮಾನ-ವಿಶೇಷಣಂ ಶೋಭನವೀರ್ಯೋಪೇತಸ್ಯ ಫಲಸ್ಯ ಪ್ರತಿಪಾದನಾದಹ್ನೋ ರೂಪಂ ವೀರ್ಯಪದೋ-ಪೇತತ್ವಾ ದ್ರೂಪಸಮೃದ್ಧಮ್ ||

ಇಲ್ಲಿ ಸುವೀರ್ಯಶಬ್ದವನ್ನು ಪ್ರಶಂಸೆಮಾಡುವರು. ಮೊದಲನೇ ಪ್ರಗಾಥದ ಪ್ರಥಮಪಾದದಲ್ಲಿ **ಉತಿಷ್ಠ** (ಋ.ಸಂ. ೧-೪೦-೧) ಮೊದಲಾದ ಶಬ್ದಗಳಿರುವವು. ಈ **ಉತ್ತಿಷ್ಠ** ಮೊದಲಾದ ಶಬ್ದಗಳು ಬ್ರಹ್ಮಣಸ್ಪತಿಯೆಂಬ ದೇವನನ್ನು ಕುರಿತು ತ್ವರೆಮಾಡಿ (ಶೀಘ್ರವಾಗಿ ಹೊರಡು) ಎಂಬ ಅರ್ಥವನ್ನು ಸೂಚಿಸುವವು. ಇದೇ ಪ್ರಗಾಥದ ಎರಡನೇ ಪಾದದಲ್ಲಿ **ಸುವೀರ್ಯಂ** ಎಂಬ ಪದವಿರುವುದು. ಈ ಶಬ್ದದಿಂದ ಶೋಭನವೀರ್ಯೋಪೇತವಾದ (ಉತ್ತಮವಾದ) ಫಲವನ್ನು ಬೇಗನೆ ಕೊಡಬೇಕೆಂಬ ಪ್ರಾರ್ಥನೆಯು ಭಾಸವಾಗುವುದರಿಂದ ಇಲ್ಲಿಯೂ ರೂಪಸಮೃದ್ಧಿಯು ಕಂಡುಬರುವುದು.

**ಪ್ರ ನೂನಂ ಬ್ರಹ್ಮಣಸ್ಪತಿರ್ಮಂತ್ರಂ ವದತ್ಯುಕ್ಥ್ಯಮಿತ್ಯುಕ್ಥಂ ವಾ ಏತದಹರುಕ್ಥವದ್ರೂಪಸಮೃದ್ಧಮೇತಸ್ಯಾಹ್ನೋ ರೂಪಂ ||**

**ಪ್ರಗಾಥಾಂತರ ಉಕ್ಥಪದಂ ಶಂಸತಿ-ಪ್ರ ನೂನಮಿತಿ ಪ್ರಗಾಥಪೂರ್ವಾರ್ಧಮ್ । ಬ್ರಹ್ಮಣ-ಸ್ಪತಿರ್ದೇವೋ ನೂನಂ ವೇದಸ್ವರೂಪಂ ಪ್ರಕಾಶೇ ವದತಿ । ಕೀದೃಶಂ ಮಂತ್ರಮುಕ್ಥ್ಯಂ ಪ್ರಶಸ್ತಮ್ । ಉತ್ತಿಷ್ಠತ್ಯಭಿವೃದ್ಧಿಂ ಗಚ್ಛತಿ ಕರ್ಮಣ್ಯನೇನ ಶಸ್ತ್ರೇಣೇತ್ಯುಕ್ಥಂ ಶಸ್ತ್ರಂ ತದರ್ಹತಿ ಯೋ ಮಂತ್ರಃ ಸೋಽಯಮುಕ್ಥ್ಯಃ । ಉಕ್ಥಂ ವಾ ಏತದಿತ್ಯಾದಿ ಪೂರ್ವವದ್ವ್ಯಾಖ್ಯೇಯಮ್ ॥**

ಮುಂದಿನ ಪ್ರಗಾಥದಲ್ಲಿರುವ ಉಕ್ಥಪದವನ್ನು ಪ್ರಶಂಸೆಮಾಡುವರು. **ಪ್ರನೂನಂ** (ಋ.ಸಂ. ೧-೪೦-೧) ಎಂಬ ಪದಗಳು ಪ್ರಗಾಥದ ಪೂರ್ವಾರ್ಧದಲ್ಲಿರುವವು. ಬ್ರಹ್ಮಣಸ್ಪತಿಯೆಂಬ ದೇವನು ಪ್ರಶಸ್ಯವೂ ವೇದಸ್ವರೂಪವೂ ಆದ ಮಂತ್ರವನ್ನು ಪಠಿಸುತ್ತಾನೆ. ಈ ಕರ್ಮದಲ್ಲಿ ಅಭಿವೃದ್ಧಿಯನ್ನುಂಟುಮಾಡುವ ಮಂತ್ರಕ್ಕೆ ಶಸ್ತ್ರಮಂತ್ರವೆಂದು ಹೆಸರು. ಇಂತಹ ಮಂತ್ರವನ್ನು ಪಠಿಸುವ ದಿನ ಅಥವಾ ಕರ್ಮಕ್ಕೆ ಉಕ್ಥ್ಯವೆಂದು ಹೆಸರು. ಈ ಮಹಾವ್ರತವೆಂಬ ದಿನದಲ್ಲಿ ಇಂತಹ ಶಸ್ತ್ರ ಮಂತ್ರಗಳನ್ನು ಪಠಿಸುವುದರಿಂದ ಈ ಮಹಾವ್ರತದಿನಕ್ಕೆ ಉಕ್ಥ್ಯವೆಂದೂ ಹೇಳುವರು ಈ ಕಾರಣದಿಂದ ಉಕ್ಥ್ಯಕ್ಕೂ ಮಹಾವ್ರತಕ್ಕೂ ಸಮನ್ವಯವಿರುವುದರಿಂದ ಇಲ್ಲಿಯೂ ರೂಪಸಮೃದ್ಧಿಯು ಕಂಡುಬರುವುದು.

## ಅಗ್ನಿರ್ನೇತಾ ಸ ವೃತ್ರಹೇತಿ ವಾರ್ತ್ರಘ್ನಮಿಂದ್ರರೂಪಮೈಂದ್ರಮೇತದ-ಹರೇತಸ್ಯಾಹ್ನೋ ರೂಪಂ ॥

**ಅಥ ಕಸ್ಯಾಂಚಿದ್ಧಾಯ್ಯಾಯಾಮೃಚಿ ವೃತ್ರಹೇತಿ ಪದಂ ಪ್ರಶಂಸತಿ—ಅಗ್ನಿರ್ನೇತೇತ್ಯೃಚಃ ಪ್ರಕ್ರಮಃ । ಸ ವೃತ್ರಹೇತಿ ತೃತೀಯಪಾದಸ್ಯ ಪ್ರಕ್ರಮಃ । ಅಯಮಗ್ನಿರ್ನೇತಾ ಕರ್ಮಣಃ ಪ್ರವ-ರ್ತಕಃ । ಸ ಚ ವೃತ್ರಹಾ ಶತ್ರುಘಾತೀ । ಯದ್ಯಪ್ಯೇತತ್ಪದಮಗ್ನೇರ್ವಿಶೇಷಣಂ ತಥಾಪಿ ವೃತ್ರ-ಘಾತಿತ್ವಮಿಂದ್ರರೂಪಂ ಸಂಯುಜ್ಯತ ಇಂದ್ರದೇವತಾಕಂ ಚೈತದಹಸ್ತಸ್ಮಾದ್ ವೃತ್ರಹೇತಿ ಪದೇನೈ-ತಸ್ಯೈಂದ್ರಸ್ಯ ಮಹಾವ್ರತಾಖ್ಯಸ್ಯಾಹ್ನೋ ರೂಪಂ ಸಂಪದ್ಯತೇ ॥**

ಇಲ್ಲಿ ಕಂಡುಬರುವ ವೃತ್ರಹಾ ಎಂಬ ಶಬ್ದವನ್ನು ಪ್ರಶಂಸಿಸುವರು. ಇಲ್ಲಿ ಅಗ್ನಿರ್ನೇತಾ ಎಂಬ ಶಬ್ದಗಳು ಪ್ರಾರಂಭದಲ್ಲಿರುವವು. ಸ ವೃತಹಾ ಎಂಬ ಪದಗಳು ಮೂರನೆಯ ಪಾದದಲ್ಲಿರುವವು. ಇಲ್ಲಿ **ಅಗ್ನಿರ್ನೇತಾ** (ಋ.ಸಂ. ೩–೨೧–೪) ಎಂದರೆ ಅಗ್ನಿಯು ಯಜ್ಞನಿರ್ವಾಹಕನು ಎಂದರ್ಥವು. **ಸ ವೃತ್ರಹಾ** ಎಂದರೆ ಆ ಅಗ್ನಿಯೇ ಶತ್ರುನಾಶಕನು ಎಂದರ್ಥವು. ವೃತ್ರಹಾ ಎಂಬ ಶಬ್ದಕ್ಕೆ ಇಲ್ಲಿ ಶತ್ರುನಾಶಕನು ಎಂದು ಅಗ್ನಿಪರವಾಗಿ ಅರ್ಥವಿದ್ದರೂ ಈ ವೃತ್ರಹಾ ಎಂಬ ಶಬ್ದವು ಸಾದಾರಣವಾಗಿ ವೃತ್ರನನ್ನು ಸಂಹಾರಮಾಡಿದ ಇಂದ್ರನು ಎಂಬ ಇಂದ್ರಪರವಾದ ಅರ್ಥವನ್ನೇ ಸೂಚಿಸುವುದರಿಂದ ಇಲ್ಲಿ ಇಂದ್ರಪರವಾದ ಮಹಾವ್ರತವೆಂಬ ಕರ್ಮದಲ್ಲಿ ಇಂದ್ರನೆಂಬ ಅರ್ಥವನ್ನು ಸೂಚಿಸುವ ಪದವನ್ನು ಉಪಯೋಗಿಸುವುದು ರೂಪಸಮೃದ್ಧಿಯೆಂದು ಹೇಳಲು ಸಹಾಯಕವಾಗಿರುವುದು. ಎಂದರೆ ಮಹಾವ್ರತವು ಇಂದ್ರನ ಪರವಾದ ಕರ್ಮವು. ಇಲ್ಲಿ ಉಪಯೋಗಿಸಿರುವ ಶಬ್ದವು (ಇಲ್ಲಿ ಅಗ್ನಿಪರವಾಗಿದ್ದರೂ) ಇಂದ್ರನನ್ನೇ ಸಾಧಾರಣವಾಗಿ ಸೂಚಿಸುವುದು ಆದ್ದರಿಂದ ಇಲ್ಲಿಯೂ ರೂಪಸಮೃದ್ಧಿಯು ಕಂಡುಬರುವುದು.

## ತ್ವಂ ಸೋಮ ಕ್ರತುಭಿಃ ಸುಕ್ರತುರ್ಭೂಸ್ತ್ವಂ ವೃಷಾ ವೃಷತ್ವೇಭಿ-ರ್ಮಹಿತ್ವೇತಿ ವೃಷಣ್ವದ್ವಾ ಇಂದ್ರಸ್ಯ ರೂಪಮೈಂದ್ರಮೇತದಹ-ರೇತಸ್ಯಾಹ್ನೋ ರೂಪಂ ॥

ಧಾಯ್ಯಾಂತರೇ ವೃಷಞ್‌ಶಬ್ದಂ ಪ್ರಶಂಸತಿ-ತತ್ರ ತ್ವಂ ಸೋಮೇತ್ಯೃಚಃ ಪ್ರಥಮಃ ಪಾದಃ। ತ್ವಂ ವೃಷೇತಿ ತೃತೀಯಃ ಪಾದಃ । ಹೇ ಸೋಮ ತ್ವಂ ಕ್ರತುಭಿರೇತೈಃ ಕರ್ಮಭಿಃ ಸುಕ್ರತುರ್ಭೂಃ ಶೋಭನಕರ್ಮಾ ಭವ। ತಥಾ ತ್ವಂ ವೃಷತ್ವೇಭಿರ್ವರ್ಷಕತ್ವೈಃ ಕರ್ಮಭಿರ್ವರ್ಷಣೈರ್ವೃಷಾ ವರ್ಷಿತಾ ಸನ್ಮಹಿತ್ವಾ ಮಹಿಮಾನ್ಭವ । ಅಸ್ಯಾಮೃಚಿ ವೃಷೇತಿ ಪದಂ ಸುವಿದ್ಯತೇ। ಇಂದ್ರಸ್ಯ ರೂಪಮಪಿ ವೃಷಣ್ವದ್ವೈ ವೃಷಶಬ್ದೋಪೇತಮೇವ, ತಸ್ಯ ಶಬ್ದಸ್ಯೇಂದ್ರವಾಚಕತ್ವಾತ್ । ಐಂದ್ರಮಿತ್ಯಾದಿ ಪೂರ್ವವತ್ ।

**ತ್ವಂ ಸೋಮ ಕ್ರತುಭಿಃ** (ಋ. ಸಂ. ೧-೯೧-೨) ಎಂಬುದು ಪ್ರಥಮಪಾದವು. **ತ್ವಂ ವೃಷಾ** ಎಂಬುದು ಮೂರನೆಯ ಪಾದವು. **ಹೇ ಸೋಮ** ಎಲೈ ಸೋಮದೇವನೇ, **ತ್ವಂ** ನೀನು **ಸುಕ್ರತುರ್ಭೂಃ** ಶೋಭನವನ್ನುಂಟು ಮಾಡುವವನಾಗು. ಹಾಗೆಯೇ ನೀನು **ವೃಷತ್ವೇಭಿಃ**- ವೃಷ್ಟಿಯನ್ನುಂಟುಮಾಡುವ ಕರ್ಮಗಳಿಂದ **ವೃಷಾಸನ್**- ವರ್ಷಕನಾಗಿ **ಮಹಿತ್ವಾ** ಮಹಿಮೆಯುಳ್ಳವನಾಗು. ಈ ಋಕ್ಕಿನಲ್ಲಿ **ವೃಷಾ** ಎಂಬ ಪದವಿರುವುದು. ವೃಷಾ ಎಂಬ ಶಬ್ದವು ಇಂದ್ರನ ಸ್ವರೂಪವನ್ನೇ ವರ್ಣಿಸಿ ಇಂದ್ರನನ್ನೇ ಉದ್ದೇಶಿಸಿ ಇಂದ್ರನಿಗೆ ವಿಶೇಷಣವಾಗಿ ಉಪಯೋಗಿಸಲ್ಪಡುವುದು. ಈ ಮಹಾವ್ರತವೆಂಬ ಕರ್ಮವೂ ಇಂದ್ರನ ಪರವಾಗಿರುವುದರಿಂದ ಇಲ್ಲಿಯೂ ರೂಪಸಮೃದ್ಧಿಯು ಕಂಡುಬರುವುದು.

ಪಿನ್ವಂತ್ಯಪೋಽತ್ಯಂ ನ ಮಿಹೇ ವಿನಯಂತಿ ವಾಜಿನಮಿತಿ ವಾಜಿಮದ್ವಾ
ಇಂದ್ರಸ್ಯ ರೂಪಮೈಂದ್ರಮೇತದಹರೇತಸ್ಯಾಹ್ನೋ ರೂಪಂ ॥

ಧಾಯ್ಯಾಂತರೇ ವಾಜಿನಮಿತಿ ಪದಂ ಪ್ರಶಂಸತಿ-ಪಿನ್ವಂತ್ಯಪ ಇತಿ ತಸ್ಯಾ ಋಚಃ ಪ್ರಕ್ರಮಃ । ಅತ್ಯಂ ನ ಮಿಹ ಇತಿ ತೃತೀಯಃ ಪಾದಃ । ಪಿನ್ವಂತಿ ದೇವತಾ ಉದಕಾನಿ ಸಿಂಚಂತಿ। ಮಿಹ ಸೇಚನೇ, ಸೇಚನನಿಮಿತ್ತಂ ವಾಜಿನಂ ಮೇಘಂ ದೇವತಾವಿಶೇಷೇಣ ಪ್ರೇರಯಂತಿ। ವಾಜಿಶಬ್ದೋಽನ್ನವಾಚೀ "ಅನ್ನಂ ವೈ ವಾಜಃ" ಇತಿ ಶ್ರುತೇಃ । ತದ್ಧೇತುತ್ವಾನ್ಮೇಘೋ ವಾಜೀ । ತಸ್ಯ ಪ್ರೇರ್ಯಸ್ಯ ಮೇಘಸ್ಯ ದೃಷ್ಟಾಂತೋಽತ್ಯಂ ನೇತಿ । ಅತ್ಯಶಬ್ದೋಽಶ್ವವಾಚೀ "ಅಶ್ವೋಽಸಿ" "ಹಯೋಽಸಿ" "ಅತ್ಯೋಽಸಿ" "ನರೋಽಸಿ" ಇತ್ಯಶ್ವಮೇಧಗತಾಶ್ವಾಭಿಮಂತ್ರಣಮಂತ್ರೇ ತತ್ಪರತ್ವೇನ ಪ್ರಯೋಗಾತ್ । ತದೀಯ ಬ್ರಾಹ್ಮಣೇ ಚ ತಥೈವ ವ್ಯಾಖ್ಯಾತಮ್—"ಅತ್ಯೋಽಸೀತ್ಯಾಹ । ತಸ್ಮಾದಶ್ವಃ ಸರ್ವಾನ್ ಪಶೂನತ್ಯೇತಿ" ಇತಿ। ನ ಶಬ್ದ ಉಪಮಾರ್ಥಃ। ಯಥಾ ಲೋಕೇಽಶ್ವಾರೂಢೋಽಶ್ವಂ ಪ್ರೇರಯತಿ ತದ್ವದಿತ್ಯರ್ಥಃ । ಅಸ್ಮಿನ್ಪಾದೇ ವಾಜಿಶಬ್ದೋ ವಿದ್ಯತೇ । ಇಂದ್ರಸ್ಯ ರೂಪಮಿತಿ (ಮಪಿ) ವಾಜಿಮದ್ವೈ ವಾಜಿಯುಕ್ತಮೇತದ್ಧರಿತವರ್ಣೈರಶ್ವೈರುಪೇತತ್ವಾತ್ । ತಥಾ ಚ ಶ್ರೂಯತೇ-"ಅಸ್ಮಭ್ಯಂ ತದ್ಧರ್ಯಶ್ವ ಪ್ರಯಂಧಿ" (ಋ. ಸಂ. ಮ ೩ ಸೂ. ೩೬ ಋ. ೯) ಇತಿ । ಐಂದ್ರಮಿತ್ಯಾದಿ ಪೂರ್ವವತ್ ॥

**ಪಿನ್ವಂತ್ಯಪಃ** ಎಂದು ಋಕ್ಕಿನ ಪ್ರಾರಂಭವು. (ಋ. ಸಂ ೧-೬೪-೬) **ಅತ್ಯಂನಮಿಹ** ಎಂಬುದು ಮೂರನೆಯ ಪಾದವು. **ಪಿನ್ವಂತಿ** ಎಂದರೆ ಉದಕವನ್ನು ದೇವತೆಗಳು ಸೇಚನಮಾಡುತ್ತಾರೆ. **ಮಿಹ-ಸೇಚನೇ** ಎಂಬ ಅರ್ಥವಿರುವುದರಿಂದ ಸೇಚನನಿಮಿತ್ತವಾಗಿ ವಾಜಿನಂ—ಮೇಘವನ್ನು ಪ್ರೇರಿಸುತ್ತಾರೆ. ವಾಜಿಶಬ್ದಕ್ಕೆ ಅನ್ನವೆಂದೂ ಅರ್ಥವಿರುವುದು. **ಅನ್ನಂ ವೈ**

**ವಾಜಃ** ಎಂಬ ಶ್ರುತಿವಾಕ್ಯವೂ ಇರುವುದು. ಈ ಕಾರಣದಿಂದ ವಾಜಿಶಬ್ದಕ್ಕೆ ಮೇಘವೆಂದೂ ಅರ್ಥವಾಗುವುದು. ಈ ಮೇಘವನ್ನು ಮಳೆಹುಯ್ಯುವಂತೆ ಪ್ರೇರಿಸುವ ಅರ್ಥವು ಈ ಋಕ್ಕಿನಲ್ಲಿ ಕಂಡುಬರುವುದು. **ಅತ್ಯ** ಎಂದರೆ ಅಶ್ವವು. **ಅಶ್ವೋಽಸಿ ಹಯೋಽಸಿ ಅತ್ಯೋಽಸಿ ನರೋಽಸಿ** ಎಂದು ಅಶ್ವಮೇಧಪ್ರಯೋಗದಲ್ಲಿ ಉಗಯೋಗಿಸುವ ಶ್ರುತಿವಾಕ್ಯವಿರುವುದು. ಬ್ರಾಹ್ಮಣಗ್ರಂಥದಲ್ಲಿಯೂ ಈ ರೀತಿ ವಾಕ್ಯವಿರುವುದು. **ಅತ್ಯೋಽಸೀತ್ಯಾಹ । ತಸ್ಮಾದಶ್ವಃ ಸರ್ವಾನ್ಪಶೂನತ್ಯೇತಿ ।** ಇಲ್ಲಿರುವ ನ ಎಂಬ ಪದವು ಉಪಮಾರ್ಥವನ್ನು ಸೂಚಿಸುವುದು. ಈ ಪಾದದಲ್ಲಿ ವಾಜಿಶಬ್ದವೂ ಇರುವುದು. ಮೇಲೆ ಹೇಳಿದ ವಾಕ್ಯಗಳಲ್ಲಿ ಇಂದ್ರನನ್ನು ಸೂಚಿಸುವ ಉದಕಾರ್ಥವಾಗಿ ಮೇಘಗಳನ್ನು ಪ್ರೇರಿಸುವ ಕಾರ್ಯ, ಅನ್ನಪ್ರದತ್ವ, ಅಶ್ವವುಳ್ಳವನು ಎಂದರೆ ಹರೀ ಎಂಬ ಎರಡು ಅಶ್ವಗಳಿಂದ ಯುಕ್ತನಾದ ಇಂದ್ರ ಇತ್ಯಾದಿ ಇಂದ್ರಪರವಾದ ವಾಕ್ಯಗಳಿರುವುದರಿಂದಲೂ ಈ ಮಹಾವ್ರತವೆಂಬ ಕರ್ಮವು ಇಂದ್ರನನ್ನುದ್ದೇಶಿಸಿ ಮಾಡಲ್ಪಡುವುದರಿಂದಲೂ ಇಲ್ಲಿ ರೂಪ ಸಮೃದ್ಧಿಯಿರುವುದು ಸ್ಪಷ್ಟವಾಗಿದೆ

**ಅಥೋ ಉತ್ಸಂ ದುಹಂತಿ ಸ್ತನಯಂತಮಕ್ಷಿತಮಿತಿ ಸ್ತನಯದ್ವಾ ಇಂದ್ರಸ್ಯ ರೂಪಮೈಂದ್ರಮೇತದಹರೇತಸ್ಯಾಹ್ನೋ ರೂಪಂ ॥**

**ತಸ್ಯಾ ಋಚಶ್ಚತುರ್ಥಪಾದೇ ಸ್ತನಯಂತಮಿತಿ ಪದಂ ಪ್ರಶಂಸತಿ-ವಾಜಿಮತ್ತ್ವಪ್ರಶಂಸಯಾ ಸಹ ಸಮುಚ್ಚಯಾರ್ಥೋಽಥ (ಥೋ) ಶಬ್ದಃ । ಅಸ್ಮಿನ್ಮಂತ್ರೇ ಪ್ರತಿಪಾದ್ಯಾ ಮರುತೋ ದೇವಾಃ ಸ್ತನಯಂತಂ ಗರ್ಜನಯುಕ್ತಮಕ್ಷಿತಂ ಕ್ಷಯರಹಿತಮುತ್ಸಂ ಜಲಪ್ರವಾಹಂ ದುಹನ್ತಿ ಸಂಪಾದ-ಯಂತಿ । ಅತ್ರ ಸ್ತನಯಂತಮಿತಿ ಪದಂ ವಿದ್ಯತೇ । ಇಂದ್ರಸ್ಯ ರೂಪಮಪಿ ಸ್ತನಯದ್ವೈ ಮೇಘ-ಗರ್ಜನಯೋಪೇತಮೇವ ತಸ್ಯ ವೃಷ್ಟಿಸ್ವಾಮಿತ್ವಾತ್ । ಐಂದ್ರಮಿತ್ಯಾದಿ ಪೂರ್ವವತ್ ॥**

**ಉತ್ಸಂ ದುಹಂತಿ ಸ್ತನಯಂತಮಕ್ಷಿತಂ** (ಋ. ಸಂ. ೧-೬೪-೬) ಎಂಬ ಮಂತ್ರದಲ್ಲಿ ಹೀಗೆ ಹೇಳಿದೆ. ಮರುದ್ದೇವತೆಗಳು, ಸಿಡಿಲು, ಗುಡುಗು ಮುಂತಾದ ಶಬ್ದಗಳಿಂದ ಗರ್ಜನೆಮಾಡುತ್ತಾ ವೃಷ್ಟಿಯನ್ನು ಸುರಿಸಿ ಆ ಮೂಲಕ ಕ್ಷಯ ರಹಿತವಾಗಿರುವಂತೆ ಎಂದರೆ ಯಾವಾಗಲೂ ಹರಿಯುತ್ತಿರುವಂತೆ ಜಲಪ್ರವಾಹವನ್ನು (ನದಿಗಳನ್ನು) ಉಂಟುಮಾಡುತ್ತಾರೆ ಇಲ್ಲಿ **ಸ್ತನಯಂತಂ** ಎಂಬ ಪದವಿದೆ. ಇಂದ್ರನು ವೃಷ್ಟಿಗೆ (ಮಳೆಗೆ) ಸ್ವಾಮಿಯಾದ್ದರಿಂದ **ಸ್ತನಯತ್**—ಮೇಘಗರ್ಜನೆಯಿಂದ ಯುಕ್ತವಾದ ರೂಪದಿಂದ ಯುಕ್ತನಾದವನು ಎಂಬ ವಿಷಯವು ಇಂದ್ರನ ವಿಶೇಷಣರೂಪವಾಗಿಯೇ ಇರುವುದು ಆದ್ದರಿಂದ ಈ ಮಹಾವ್ರತವು ಇಂದ್ರನನ್ನು ಪ್ರತಿಪಾದಿಸುವುದರಿಂದಲೂ **ಉತ್ಸಂ ದುಹಂತಿ** ಮೊದಲಾದ ಮಂತ್ರಗಳಲ್ಲಿ ಇಂದ್ರನ ಸಂಬಂಧವಾದ ವಿಷಯಗಳಿರುವುದರಿಂದಲೂ ಮಹಾವ್ರತದಿನವು ರೂಪಸಮೃದ್ಧವೆನಿಸುವುದು.

**ಪ್ರ ವ ಇಂದ್ರಾಯ ಬೃಹತ ಇತಿ ಯದ್ವೈ ಬೃಹತನ್ಮಹನ್ಮಹದ್ರೂ-ಸಮೃದ್ಧಮೇತಸ್ಯಾಹ್ನೋ ರೂಪಂ ॥**

**ಇತ್ಥಂ ಧಾಯ್ಯಾಭಿಧಾ ಋಚಃ ಪ್ರಶಸ್ಯಾನಂತರಂ ಪಠನೀಯೇ ಪ್ರಗಾಥೇ ಬೃಹಪ್ಪದಂ ಪ್ರಶಂಸತಿ-ಪ್ರ ವ ಇತ್ಯಾದಿಃ ಪ್ರಥಮಃ ಪಾದಃ, ತಸ್ಯ ದ್ವಿತೀಯಪಾದಗತೇನ ಮರುತೋ ಬ್ರಹ್ಮಾರ್ಚ-ತೇತಿ ಮರುಚ್ಛಬ್ದೇನಾನ್ವಯಃ ಕರ್ತವ್ಯಃ। ಹೇ ಮರುತೋ ವೋ ಯುಷ್ಮದರ್ಥಂ ಬೃಹತೇ ಪ್ರೌಢಾ-ಯೇಂದ್ರಾಯ ಬ್ರಹ್ಮಪರಿವೃಢಂ ಕರ್ಮ ಪ್ರಾರ್ಚತ ಪ್ರಕರ್ಷೇಣ ಸಂಪಾದಯತ । ತತ್ರ ಪ್ರಥಮ-**

**ಪಾದೇ ಯದೇವ ಬೃಹದಿತಿ ಪದಮಸ್ತಿ ತನ್ಮಹದಿತ್ಯಮುಮರ್ಥಮಾಚಷ್ಟೇ । ಏತಸ್ಯ ಮಹಾವ್ರ-ತಸ್ಯಾಹ್ನೋ ರೂಪಂ ಮಹದ್ವದತ್ಯಂತಂ ಪೌಥಮೇವ ಪ್ರಯೋಗಸ್ಯ ಬಹುಲತ್ವಾದತಃ ಸ್ವರೂಪೇಣ ಸಮೃದ್ಧಮ್ ॥**

ಇದುವರೆಗೂ ಧಾಯ್ಯಾಮಂತ್ರಗಳನ್ನು ಪ್ರಶಂಸೆಮಾಡಿ ಮುಂದೆ ಪಠಿಸಬೇಕಾದ ಪ್ರಗಾಥಮಂತ್ರದಲ್ಲಿರುವ ಬೃಹತ್ ಎಂಬ ಪದವನ್ನು ಪ್ರಶಂಸೆಮಾಡುವರು. **ಪ್ರ ವ ಇಂದ್ರಾಯ ಬೃಹತೇ** (ಋ. ಸಂ. ೮-೮೯-೩) ಎಂಬುದು ಪ್ರಗಾಥ ದಲ್ಲಿ ಮೊದಲನೆಯ ಪಾದವು. ಇಲ್ಲಿ ಹೇಳಿರುವ ವಿಷಯಗಳನ್ನು ಎರಡನೇ ಪಾದದಲ್ಲಿರು **ಮರುತೋ ಬ್ರಹ್ಮಾರ್ಚತ** ಎಂಬ ಶಬ್ದಗಳಿಗೆ ಸಮನ್ವಯಮಾಡಿಕೊಳ್ಳಬೇಕು ಎಲೈ ಮರುದ್ದೇವತೆಗಳೇ ನಿಮಗೋಸ್ಕರ ಪ್ರೌಢನಾದ ಇಂದ್ರನ ಪ್ರೀತ್ಯ ರ್ಥವಾಗಿ ದೊಡ್ಡದಾದ ಸ್ತುತಿಸುವ ಕರ್ಮವನ್ನು ಸಿದ್ಧಪಡಿಸಿಕೊಳ್ಳಿರಿ ಎಂದಭಿಪ್ರಾಯವು. ಪ್ರಥಮಪಾದದಲ್ಲಿರುವ ಬೃಹತ್ ಎಂಬ ಪದಕ್ಕೆ ಮಹತ್ ಎಂದರ್ಥವ. ಈ ಕರ್ಮದ ಹೆಸರೂ ಮಹಾವ್ರತವೆಂದಿರುವುದರಿಂದ ಮಂತ್ರಪಠನಕ್ಕೂ ಕರ್ಮಕ್ಕೂ ರೂಪಸಮೃದ್ಧಿಯಿದ್ದಂತಾಯಿತು.

## ಬೃಹದಿಂದ್ರಾಯ ಗಾಯತೇತಿ ಯದ್ವೈ ಬಹತ್ತನ್ಮಹನ್ಮಹದ್ವದ್ರೂಪ-ಸಮೃದ್ಧಮೇತಸ್ಯಾಹ್ನೋ ರೂಪಂ ॥

**ಅನಂತರಪಾಠ್ಯೇ ಪ್ರಗಾಥೇ ಬೃಹತ್ಪದಂ ಪೂರ್ವವತ್ಪ್ರಶಂಸತಿ ಹೇ ಸಾಮಗಾ ಋತ್ವಿಜ ಇಂದ್ರಾರ್ಥಂ ಬೃಹನ್ನಾಮಕಂ ಪ್ರೌಢಂ ವಾ ಸಾಮ ಗಾಯತ । ಯದ್ವಾ ಇತ್ಯಾದಿ ಪೂರ್ವವತ್ ॥**

**ಬೃಹದಿಂದ್ರಾಯ ಗಾಯತ** (ಋ. ಸಂ. ೮-೮೯-೧) ಎಂಬುದು ಮುಂದಿನ ಪ್ರಗಾಥವು. ಎಲೈ (ಮಹತ್) ಎಂಬ ಹೆಸರಿನ ಸಾಮಮಂತ್ರವನ್ನು ಗಾಯತ ಗಾನಮಾಡಿರಿ ಎಂದು ಮಂತ್ರದ ಅರ್ಥವು. ಇಲ್ಲಿಯೂ ಮಹತ್ ಎಂಬ ಅರ್ಥವಿರುವ ಬೃಹತ್ ಶಬ್ದಪ್ರಯೋಗವಿರುವುದರಿಂದಲೂ ಈ ಕರ್ಮದ ಹೆಸರು ಮಹಾವ್ರತನೆಂದಿರುವುದರಿಂದಲೂ ಇಲ್ಲಿಯೂ ರೂಪಸಮೃದ್ಧಿಯಿಂದ್ದಂತಾಯಿತು.

## ನಕಿಃ ಸುದಾಸೋ ರಥಂ ಪರ್ಯಾಸ ನ ರೀರಮದಿತಿ ಪರ್ಯಸ್ತವದ್ರಾಂ-ತಿಮದ್ರೂಪಸಮೃದ್ಧಮೇತಸ್ಯಾಹ್ನೋ ರೂಪಂ ॥

**ಅನಂತರಪಾಠ್ಯೇ ಪ್ರಗಾಥೇ ದ್ವಿತೀಯಪಾದೇ ಶಬ್ದದ್ವಯಂ ಪ್ರಶಂಸತಿ ಶೋಭನಂ ಫಲಂ ದಾನಂ ಯಸ್ಯೇಂದ್ರಸ್ಯಾಸ್ತಿ ಸೋಽಯಮಿಂದ್ರಃ ಸುದಾಸ್ತಸ್ಯ ಸುದಾಸೋ ರಥಂ ನ ಕಿಃ ಪರ್ಯಾಸ ನೈವ ಪರ್ಯಸ್ತವಾನ್ನತಃ ಕೋಽಪಿ ಸ್ವಾರ್ಥೇನ ಚಾಲಿತವಾನ್ । ತಥಾ ನ ರೀರಮತ್ತೇನ ರಥೇನ ರಮಣಮಪಿ ಶತ್ರುರ್ನ ಕೃತವಾನ್ । ಕಿಂತ್ವಿಂದ್ರ ಏವ ಸ್ವಾರ್ಥಂ ಪರ್ಯಸ್ಯತಿ ಸ್ವಯಮೇವ ರಮತೇ ಚ । ಅತ್ರ ಪರ್ಯಾಸೇತಿ ರೀರಮದಿತಿ ಪದದ್ವಯಸ್ಯ ಶ್ರುತತ್ವಾದೇತಸ್ಯಾಹ್ನೋ ರೂಪಂ ಪರ್ಯಸ್ತ-ವಲ್ಲೋಕಾಂತರಗಮನಾಯ ಪರಿತಶ್ಚಲನವದ್ರಾಂತಿಮದ್ರಮಣಯುಕ್ತಮ್ । ಅತೋ ರೂಪೇಣ ಸಮೃದ್ಧಮ್ ॥**



ಮುಂದಿನ ಪ್ರಗಾಥದ ಎರಡನೇಪಾದದಲ್ಲಿರುವ ಎರಡು ಶಬ್ದಗಳನ್ನು ವಿವರಿಸುವರು. **ನಕಿಃ ಸುದಾಸೋ ರಥಂ** (ಋ.ಸಂ. ೭-೩೨-೧೦) ಎಂಬುದು ಪ್ರಗಾಥವು. ಇದರ ಅರ್ಥವು. **ನಕಿಃ ಸುದಾಸೋ ಸಥಂ ಪರ್ಯಾಸ ನ ರೀರಮತ್**- ಉತ್ತಮದಾನಿಯಾದ ಯಜಮಾನನ ರಥವನ್ನು ಯಾರೂ ಕೂಡ ಎದುರಿಸಿ ಹಿಂತಿರುಗಿಸಲಾರರು. ಯಾರೂ ಪ್ರತಿಬಂಧಿಸಲಾರರು. ಯಾವ ಯಜಮಾನನಿಗೆ ಇಂದ್ರನು ರಕ್ಷಕನಾಗಿಯೂ ಯಾರಿಗೆ ಮರುತ್ತುಗಳು ರಕ್ಷಕವಾಗಿಯೂ ಇರುವರೋ ಆ ಯಜಮಾನನು ಗೋವುಗಳಿಂದ ತುಂಬಿದ ಕೊಟ್ಟಿಗೆಯನ್ನು ಪಡೆಯುವನು. ಇಲ್ಲಿ ಪರ್ಯಾಸ ಮತ್ತು ರೀರಮತ್ ಎಂಬ ಶಬ್ದಗಳ ಪ್ರಯೋಗವಿರುವುದರಿಂದ ಇಲ್ಲಿಯೂ ರೂಪಸಮೃದ್ಧಿಯು ಕಂಡುಬರುವುದು. (ಇಲ್ಲಿ ಹೇಳಿರುವ ನಿದರ್ಶನವು ಹೇಗೆ ರೂಪಸಮೃದ್ಧಿಯನ್ನುಂಟುಮಾಡುವುದು ಎಂದು ಸ್ಪಷ್ಟವಾಗಿಲ್ಲ)

**ಸರ್ವಾನ್ಪ್ರಗಾಥಾನ್ ಶಂಸತಿ ಸರ್ವೇಷಾಮಹ್ನಾಮಾಪ್ತ್ಯೈ ಸರ್ವೇಷಾ-**
**ಮುಕ್ಥಾನಾಂ ಸರ್ವೇಷಾಂ ಪೃಷ್ಠಾನಾಂ ಸರ್ವೇಷಾಂ ಶಸ್ತ್ರಾಣಾಂ**
**ಸರ್ವೇಷಾಂ ಪ್ರಉಗಾಣಾಂ ಸರ್ವೇಷಾಂ ಸವನಾನಾಂ ॥**

**ಧಾಯ್ಯಾಭ್ಯಃ ಪುರಸ್ತಾದುಪರಿಷ್ಟಾಚ್ಚ ಯೇ ಪ್ರಗಾಥಾ ಉದಾಹೃತಾಸ್ತಾನ್ಮಿಲಿತ್ವಾ ಪ್ರಶಂಸತಿ ಅಶೇಷಪ್ರಗಾಥಶಂಸನೇನ ಸರ್ವೇಷಾಮಹರಾದೀನಾಂ ಪ್ರಾಪ್ತಿಃ ಸಂಪದ್ಯತೇ । ಅಹನಿ ಸಂವತ್ಸರಸತ್ರಗತಾನ್ಯುಕ್ಥಾನಿ । ಯಜ್ಞಾಯಜ್ಞೀಯಸಾಮ್ನ ಊರ್ಧ್ವಭಾವೀನ್ಯುಕ್ಥಕ್ರತುನಿಷ್ಪಾದಕಾನಿ ಸ್ತೋತ್ರಾಣಿ ಶಸ್ತ್ರಾಣ್ಯಾಜ್ಯಾದೀನಿ । ಯದ್ಯಪಿ ಶಸ್ತ್ರಾಂತರ್ಭೂತಮೇವ ಪ್ರಉಗಂ ತಥಾಪಿ 'ಬ್ರಾಹ್ಮಣಾ ಆಗತಾಃ ಪರಿವ್ರಾಜಕಾ ಅಪ್ಯಾಗತಾಃ' ಇತಿ ನ್ಯಾಯೇನ ವೈಶಿಷ್ಟ್ಯ ವಿವಕ್ಷಾ (ಯಾಂ) ಪ್ರಉಗಾಣಾಂ ಪೃಥಜ್ ನಿರ್ದೇಶಃ । ಸವನಾನಿ ಪ್ರಸಿದ್ಧಾನಿ । ಏತೇಷಾಂ ಸರ್ವೇಷಾಂ ಪ್ರಾಪ್ತ್ಯರ್ಥಂ ಸರ್ವಪ್ರಗಾಥಶಂಸನಮ್ । ಯಸ್ಮಿನ್ ಋಗ್ದ್ವಯಸಮೂಹೇ ಪ್ರಗಾಥನೇನ ತೃಚಃ ಸಂಪಾದ್ಯತೇ ಸೋಽಯಂ ಪ್ರಗಾಥಃ ।**

ಹೋತೃವು ಮಹಾವ್ರತಕರ್ಮದಲ್ಲಿ ಪಠಿಸುವ ಸ್ತೋತ್ರಾದಿಗಳೇ ಮಹಾವ್ರತದ ಆಯಾ ದಿನಗಳ ಹೆಸರನ್ನು ಪ್ರಸಿದ್ಧಪಡಿಸುವವು. ಆಯಾದಿನಗಳಲ್ಲಿ ಪಠಿಸುವ ಸ್ತೋತ್ರಗಳ ಹೆಸರಿನಿಂದಲೇ ಆಯಾ ದಿನಗಳು ಪ್ರಸಿದ್ಧವಾಗಿರುವವು. ಅವು ಯಾವವೆಂದರೆ **ಉಕ್ಥಾನಿ**—ಸಂ. ತ್ಸರದ ಅನೇಕ ದಿನಗಳಲ್ಲಿ ಪಠಿಸುವ ನಾನಾವಿದ ಸ್ತೋತ್ರಗಳು, ; **ಪೃಷ್ಠಾನಿ**—ಯಜ್ಞಾಯಜ್ಞೀಯವೆಂಬ ಸಾಮಮಂತ್ರವಾದ ಮೇಲೆ ಪಠಿಸಲ್ಪಡುವ ಸ್ತೋತ್ರಗಳಿಗೆ ಪೃಷ್ಠವೆಂದು ಹೆಸರು. ಮಾಧ್ಯಂದಿನಸವನದಲ್ಲಿ ರಥಂತರ, ಬೃಹತ್ ಮೊದಲಾದ ಸ್ತೊತ್ರಗಳನ್ನನುಸರಿಸಿ ಪಠಿಸಲ್ಪಡಬೇಕಾದ ಆಜ್ಯಶಸ್ತ್ರಾದಿಗಳು ಪ್ರಉಗಶಸ್ತ್ರಗಳು—ಪ್ರಉಗವೆಂಬ ಬೇರೆ ಹೆಸರಿದ್ದರೂ ಅವು ಶಸ್ತ್ರಮಂತ್ರಗಳಲ್ಲಿಯೇ ಸೇರಿರುವವು. ಸವನಗಳೆಂದರೆ ಪ್ರಾತಃಸವನ, ಮಾಧ್ಯಂ ದಿನಸವನ, ತೃತೀಯಸವನವೆಂಬ ಮೂರುಸವನಗಳು. ಇವುಗಳೆಲ್ಲವೂ ಪ್ರಗಾಥವನ್ನು ಪಠಿಸುವುದರಿಂದ ತಿಳಿದುಬರುವವು. ಎರಡು ಋಕ್ಕುಗಳ ಸಮೂಹಕ್ಕೆ ಪ್ರಗಾಥವೆಂಬ ಹೆಸರು.

———

*English Translation*

1. The two trikas, RV. VIII, 68, 1–3, a tva ratham yathotaye, and RV VIII, 2, 1–3, idam vaso sutham andhah, form the first (pratipad) and the second (anukara) of the Marutvatiya hymn.

2. Both, as belonging to the one–day ceremonial, are perfect in form. On that day much is done now and then which has to be hidden, and has to be atoned for. Atonement is rest, the one–day sacrifice. Therefore at the end of the year the sacrificers rest on this atonement as their rest. He who knows this rests firm, and they also for whom a Hotri priest who knows this, recites this hymn.

3. In the second verse of (the Pragatha), indra nediya ed ihi, pra su tira sakibhir ye ta ukthinah (RV. VIII, 53, 5, 6), there occurs the word ukthinah, reciters of hymns. Verily, this day (the mahavrata) is an uktha (hymn), and as endowed with an uktha, the form of this day is perfect.

4. In the first verse (of another Pragatha) the word vira, strong, occurs (Rv. I, 40, 3), and as endowed with the word vira, strong, the form of this day is perfect.

5. In the second verse (of another Pragatha) the word suviryam, strengh, occurs (RV. I, 40, 1), and as endowed with the word suvirya, strengh, the form of this day is perfect.

6. In the first verse (of another Pragatha) the word ukthyam, to be hymned, occurs (RV. I. 40 5), Verily, this day is an uktha, and as endowed with an uktha, the form of this day is perfect.

7. In the (Dhayya) verse agnir neta (Rv. III, 20, 4) the word vritraha, killer of Vritra, occurs The killing of Vritra is a form (character) of Indra, this day (the mahavrata) belongs to Indra, and this is the (perfect) form of that day.

8. In the (Dhayya) verse tvam soma kratubhih sukratur bhuh (Rv. I. 91, 2) the word vrisha, powerful, occurs. Powerful is a form (charcter) of Indra, this day belongs to Indra, and this is the (perfect) form of that day.

9. In the (Dhayya) verse pinvanty apah (Rv. I, 64, 6) the word vaginam, endowed with food, occurs. Endowed with food is a form (characttr) of Indra, this day belongs to Indra, and this is the (perfect) form of that day.

10. In the same verse the word stanayantam, thundering, occurs. Endowed with thundering is a form (character) of Indra, this day belongs to Indra, and this is the (perfect) form of that day.

11. In (the Pragatha) pra va indraya brihate (Rv. VIII, 89, 3) (the word brihat occurs). Verily, brihat is mahat (great), and as endowed with mahat, great, the form of this day (mahavrath) is perfect.

12. In (the Pragatha) brihad indraya gayata (Rv. VIII, 89, 1) (the word brihat occues). Verily, brihat is mahat (great), ane as endowed with mahat, the form of this day is perfect.

13. In (the Pragatha) nakih sudaso ratham pary asa na riramad (Rv. VII, 32, 10) the words paryasa (he moved round) and na riramad (he did not enjoy) occur, and as endowed with the words paryasta and ranti the form of this day is perfect.

He recites all (these) Pragathas, in order to obtain all the days (of the sacrifice), all the Ukthas, all the Prishthas, all the Sastras, all the pra-ugas, and all the Savanas (libations).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ದ್ವಿತಿಯಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ಮಾಧವೀಯ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯದ ಪ್ರಥಮಾರಣ್ಯಕದ
ಎರಡನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು ॥

# ಅಥ ಪ್ರಥಮಾರಣ್ಯಕೇ ದ್ವಿತೀಯಾಧ್ಯಾಯೇ ದ್ವಿತೀಯಃ ಖಂಡಃ

## ಪ್ರಥಮಾರಣ್ಯಕದ ಎರಡನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

———

**ಅಸತ್ಸು ಮೇ ಜರಿತಃ ಸಾಭಿವೇಗಃ ಸತ್ಯಧ್ವೃತಮಿತಿ ಶಂಸತಿ ಸತ್ಯಂ ವಾ ಏತದಹಃ ಸತ್ಯವದ್ರೂಪಸಮೃದ್ಧಮೇತಸ್ಯಾಹ್ನೋ ರೂಪಂ ॥**

**ಏತಸ್ಯ ಮಹಾವ್ರತಗತಮರುತ್ವತೀಯಸ್ಯ ಚತುರ್ವಿಂಶಾಖ್ಯಮಹಃ ಪ್ರಕೃತಿಃ । ಅತ ಏವ ಪಂಚಮಾರಣ್ಯಕೇ ವಕ್ಷ್ಯತೇ—'ಚತುರ್ವಿಂಶಾನ್ಮರುತ್ವತೀಯಸ್ಯಾಽತಾನಃ' (ಐ. ಆ. ೫ ಅ-೧ಖಂ-೧) ಇತಿ । ತತ್ರ ಯಾವದತಿದಿಷ್ಟಂ—'ಆ ತ್ವಾ ರಥಂ' ಇತ್ಯಾದಿಕಂ "ನಕಿಃ ಸುದಾಸಃ" ಇತ್ಯೇತದಂತಂ ತತ್ಸರ್ವಂ ವ್ಯಾಖ್ಯಾತಮ್ ॥**

**ಅಥ ನೂತನಂ ಕಿಂಚಿತ್ಸೂಕ್ತಂ ವಿಧತ್ತೇ—ಅಸತ್ಸು ಮ ಇತ್ಯಾದಿಕಂ ಚತುರ್ವಿಂಶತ್ಯೃಚಂ ಸೂಕ್ತಮ್। ತಸ್ಯ ಪ್ರಥಮಃ ಪಾದೋಽಭಿವೇಗ ಇತ್ಯಂತಃ ಪ್ರತೀಕಪ್ರದರ್ಶನಾರ್ಥಂ ಪಠಿತಃ। ತದೀಯಾಯಾಂ ಪ್ರಥಮಾಯಾಮೃಚಿ ಸತ್ಯಧ್ವೃತಮಿತಿ ಪದಂ ವಿದ್ಯತೇ। ತಸ್ಯ ಚ ಪದಸ್ಯ ತತ್ರತ್ಯೇನ ಪ್ರಹಂತಾಸ್ಮೀತ್ಯನೇನ ಸಂಬಂಧಃ। ದಹ (ದ್ರುಹ್ಯ)ತಿ ಧಾತೋರ್ವರ್ಣವ್ಯತ್ಯಯೇನ ಧ್ವೃತಮಿತಿ ಸಂಪದ್ಯತೇ ತಥಾ ಸತಿ ಸತ್ಯದ್ರೋಹಿಣಂ ಹನಿಷ್ಯಾಮೀತಿ ವಾಕ್ಯಾರ್ಥಃ । ತಸ್ಯ ಹನನೇನ ಸತ್ಯಂ ಪ್ರತಿಷ್ಠಿತಂ ಭವತಿ । ತಚ್ಚಾತ್ರ ಯುಕ್ತಂ ಯಸ್ಮಾದೇತನ್ಮಹಾವ್ರತಾಖ್ಯಮಹಃ ಸತ್ಯಂ ವೈ ಸತ್ಯರೂಪಮೇವ ತಸ್ಮಾದೇತಸ್ಯಾಹ್ನೋ ರೂಪಂ ಸತ್ಯವಸ್ತ್ವೇನ ಸಂಯುಕ್ತಂ ರೂಪಸಮೃದ್ಧಂ ಭವತಿ ॥**

ಮಹಾವ್ರತದಲ್ಲಿ ಉಪಯೋಗಿಸಲ್ಪಡುವ ಮರುತ್ವತೀಯಶಸ್ತ್ರಕ್ಕೆ ಚತುರ್ವಿಂಶವೆಂಬ ಹೆಸರಿನ ದಿನವೇ ಪ್ರಕೃತಿಯು. ಅದ್ದರಿಂದಲೇ ಪಂಚಮಾರಣ್ಯಕದಲ್ಲಿ—**ಚತುರ್ವಿಂಶಾನ್ಮರುತ್ವತೀಯಸ್ಯಾಽತಾನಃ** (ಐ. ಆ. ೫-೧-೧) ಎಂದು ಹೇಳಲಾಗಿದೆ. **ಆತ್ವಾರಥಂ** ಎಂದು ಪ್ರಾರಂಭಮಾಡಿ **ನಕಿಃಸುದಾಸಃ** ಎನ್ನುವವರೆಗೆ ಎಲ್ಲವನ್ನೂ ವಿವರಿಸಲಾಗಿದೆ.

ಈಗ ಬೇರೊಂದು ಸೂಕ್ತವನ್ನು ವಿವರಿಸಲಾಗುವುದು. **ಅಸತ್ಸು ಮೇ ಜರಿತಃ** (ಋ.ಸಂ. ೧೦–೨೭–೧) ಎಂಬುದು ಇಪ್ಪತ್ತನಾಲ್ಕು ಋಕ್ಕುಗಳಿರುವ ಒಂದು ಸೂಕ್ತವು. ಈ ಸೂಕ್ತದ ಮೊದಲನೆಯ ಋಕ್ಕಿನ ಪ್ರಥಮ ಪಾದದಲ್ಲಿ **ಅಭಿವೇಗಃ** ಎಂದು ಮೊದಲು ಮಾಡಿ **ಸತ್ಯಧ್ವೃ**ತಂ ಎನ್ನುವವರೆಗೆ ಪದಗಳಿರುವವು. ಆ ಪದಗಳಿಗೆ ಅಲ್ಲಿಯೇ ಇರುವ **ಪ್ರಹಂತಾಸ್ಮಿ** ಎಂಬ ಪದಗಳೊಡನೆ ಸಂಬಂಧವಿರುವುದು. ದ್ರುಹ್ಯತಿಧಾತುವಿನ ವರ್ಣವ್ಯತ್ಯಯದಿಂದ ಇಲ್ಲಿ **ಧ್ವೃತ** ಎಂದಾಗಿರುವುದು. ಆದ್ದರಿಂದ ಸತ್ಯಕ್ಕೆ ದ್ರೋಹಿಯಾಗಿರುವನನ್ನು ಕೊಲ್ಲುವೆನು ಎಂದು **ಪ್ರಹಂತಾಸ್ಮಿ** ಎಂಬವಾಕ್ಯಕ್ಕೆ ಅರ್ಥವು. ಇಂತಹ ಸತ್ಯದ್ರೋಹಿಯನ್ನು ಕೊಲ್ಲುವುದರಿಂದ ಸತ್ಯವು ಸ್ಥಿರವಾಗಿ ನಿಲ್ಲುವುದು ಎಂದು ವಾಕ್ಯಾರ್ಥವು. ಇದು ಯುಕ್ತವೇ ಆಗಿರುವುದು. ಏಕೆಂದರೆ ಈ ಮಹಾವ್ರತವೆಂಬ ದಿನವು **ಸತ್ಯಮಹಃ** ಎಂದರೆ ಸತ್ಯಸ್ವರೂಪವೇ ಆಗಿರುವುದು. ಆದ್ದರಿಂದ ಈ ದಿವಸವು ಸತ್ಯದಂತೆ ರೂಪಸಮೃದ್ಧಿಯುಳ್ಳದ್ದಾಗಿರುವುದು.

**ತದು ವಾಸುಕ್ರಂ ಬ್ರಹ್ಮ ವೈ ವಸುಕ್ರೋ ಬ್ರಹ್ಮೈತದಹರ್ಬ್ರಹ್ಮಣೈವ ತದ್ಬ್ರಹ್ಮ ಪತಿಪ್ರದ್ಯತೇ, ॥**

ತದೇತತ್ಸೂಕ್ತಮೃಷಿದ್ವಾರೇಣ ಪ್ರಶಂಸತಿ—ತದು ತದಪಿ " ಅಸತ್ಸು ಮೇ " (ಋ-ಸಂ-ಮಂ-೧೦ ಸೂ. ೨೭ ಋ. ೧) ಇತ್ಯಾದಿಸೂಕ್ತಂ ವಾಸುಕ್ರಮ್ । ವಸುಕ್ರಾಖ್ಯೇಣ ಮಹರ್ಷಿಣಾ ದೃಷ್ಟಂ ವಾಸುಕ್ರಮ್ । ವಸುಕ್ರೋ ಮಹರ್ಷಿರ್ಬ್ರಹ್ಮ ವೈ ಪರಬ್ರಹ್ಮಸ್ವರೂಪ ಏತದಭಿಜ್ಞತ್ವಾತ್ । ಏತದಪಿ ಮಹಾವ್ರತಾಖ್ಯಮಹರ್ಬ್ರಹ್ಮಸ್ವರೂಪಂ ತತ್ಪ್ರಾಪ್ತಿಹೇತುತ್ವಾತ್ ಅತೋ ಬ್ರಹ್ಮಸ್ವರೂಪೇಣೈವ-ವಾಸುಕ್ರೇಣ ಸೂಕ್ತೇನ ಬಹ್ಮಸ್ವರೂಪಮಹಃ ಪ್ರಾಪ್ನೋತಿ ॥

ಮೇಲೆ ಹೇಳಿದ ಅಸತ್ಸು ಮೇ ಎಂಬ ಸೂಕ್ತವು ವಾಸುಕ್ರವು ಎಂದರೆ ವಸುಕ್ರ ಎಂಬ ಋಷಿಯಿಂದ ದೃಷ್ಟವಾದುದು. ವಸುಕ್ರಮಹರ್ಷಿಯೇ ಬ್ರಹ್ಮಸ್ವರೂಪನು. ಮಹಾವ್ರತವೂ ಪರಬ್ರಹ್ಮಸ್ವರೂಪವೇ ಆಗಿರುವುದು ಎಂದರೆ ಈ ಮಹಾವ್ರತವನ್ನು ಅನುಷ್ಠಾನಮಾಡುವುದರಿಂದ ಬ್ರಹ್ಮಪ್ರಾಪ್ತಿಯಾಗುವುದು. ಆದ್ದರಿಂದ ಬ್ರಹ್ಮಸ್ವರೂಪವಾದ ವಾಸುಕ್ರಸೂಕ್ತಪಠನದಿಂದ ಬ್ರಹ್ಮಸ್ವರೂಪವಾದ ಮಹಾವ್ರತವೆಂಬ ದಿನವನ್ನೇ ಹೊಂದುವನು

**ತದಾಹುರಥ ಕಸ್ಮಾದ್ವಾಸುಕ್ರೇಣೈತನ್ಮರುತ್ವತೀಯಂ ಪ್ರತಿಪದ್ಯತ ಇತಿ ನ ಹ ವಾ ಏತದನ್ಯೋ ವಸುಕ್ರಾನ್ಮರುತ್ವತೀಯಮುದಯಚ್ಛನ್ನ ವಿವ್ಯಾ-ಚೇತಿ ತಸ್ಮಾದ್ವಾಸುಕ್ರೇಣೈವೈತನ್ಮರುತ್ವತೀಯಂ ಪ್ರತಿಪದ್ಯತೇ ॥**

ಪುನರಪಿ ಪ್ರಶ್ನೋತ್ತರಾಭ್ಯಾಂ ಪ್ರಶಂಸತಿ—ತತ್ತಸ್ಮಿನ್ಸೂಕ್ತೇ ಜಿಜ್ಞಾಸವಃ ಪೃಚ್ಛಂತಿ । ಸಂತಿ ವೇದೇ ಬಹೂನ್ಯೃಷ್ಯಂತರದೃಷ್ಟಾನಿ (ಸೂಕ್ತಾನಿ) । ಅಥೈವಂ ಸತಿ ತಾನಿ ಪರಿತ್ಯಜ್ಯ ಕಸ್ಮಾ-ತ್ಕಾರಣಾದ್ವಾಸುಕ್ರೇಣ (ವಸುಕ್ರೇಣ) ದೃಷ್ಟೇನೈವ ಸೂಕ್ತೇನ ಮರುತ್ವತೀಯಶಸ್ತ್ರಂ ಪ್ರತಿಪದ್ಯತೇ । ನ ಹ ವಾ ಇತ್ಯಾದಿಕಮಭಿಜ್ಞಾನಾಮುತ್ತರಮ್ । ವಸುಕ್ರಾನ್ಮಹರ್ಷೇರನ್ಯಃ ಕಶ್ಚಿದಪಿ ಮಹರ್ಷಿ-ರೇತನ್ಮರುತ್ವತೀಯಾಖ್ಯಂ ಶಸ್ತ್ರಂ ನೈವೋದಯಚ್ಛದ್ದಾಶತಯ್ಯಾಃ ಸಕಾಶಾನ್ನೈವೋದ್ಧೃತವಾನ್ । ನಾಪಿ ವಿವ್ಯಾಚಾಯಂ ಪ್ರಥಮಸ್ತೃಚೋಽಯಂ ಚಾನುಚರ ಇತ್ಯಾದಿವಿವೇಕಮನ್ಯೋ ನ ಕೃತವಾನ್ । ತಸ್ಮಾದ್ವಸುಕ್ರೇಣ ಸಂಹಿತಾಯಾಃ ಸಕಾಶಾಚ್ಛಸ್ತ್ರಮುದ್ಧೃತ್ಯ ವಿವೇಚಿತತ್ವಾತ್ತ-ದೀಯೇನೈವ ಸೂಕ್ತೇನ ಶಸ್ತ್ರಪ್ರಾಪ್ತಿರ್ಯುಕ್ತಾ ॥

ಈ ಸೂಕ್ತವನ್ನು ಪ್ರಶ್ನೋತ್ತರರೂಪವಾಗಿ ಪುನಃ ಪ್ರಶಂಸೆಮಾಡುವರು. ಕೆಲವರು ಜಿಜ್ಞಾಸುಗಳು ಈರೀತಿ ಪ್ರಶ್ನೆಮಾಡುವರು. ವೇದದಲ್ಲಿ ಅನೇಕ ಋಷಿಗಳಿಂದ ದೃಷ್ಟವಾದ ಎಷ್ಟೋಸೂಕ್ತಗಳಿರುವವು. ಅವುಗಳನ್ನೆಲ್ಲಾ ಬಿಟ್ಟು ಈ ವಸುಕ್ರಋಷಿಯಿಂದ ದೃಷ್ಟವಾದ ಸೂಕ್ತವನ್ನೇ ಏಕೆ ಪಠಿಸಬೇಕು ? ಬೇರೆ ಸೂಕ್ತಗಳಿವೆಯಲ್ಲಾ ಎಂದರೆ ಅದಕ್ಕೆ ಈರೀತಿ ಸಮಾಧಾನವನ್ನು ಹೇಳಬಹುದು. ವಸುಕ್ರಋಷಿಯನ್ನು ಬಿಟ್ಟರೆ ಹಿಂದೆ ಯಾರೂ ಈ ಮರತ್ವತೀಯಸೂಕ್ತವನ್ನು ವೇದದಿಂದ ಉದ್ಧರಿಸಿ ಹೇಳಲಿಲ್ಲ. ಈ ಮರುತ್ವತೀಯ ಶಸ್ತ್ರಮಂತ್ರಕ್ಕೆ ಪ್ರತಿಪದೃಚ (ಮೊದಲನೆ ಋಕ್ಕು) ಯಾವುದು, ಅನುಚರವಾವುದು ಎಂದು ಸ್ಪಷ್ಟವಾಗಿ ವಿಂಗಡಿಸಿ ಹೇಳಲಿಲ್ಲ. ಆದರೆ ಶಸ್ತ್ರಮಂತ್ರಗಳಿಗಾಗಿಯೇ ಈ ವಸುಕ್ರಮಹರ್ಷಿಯು

ವೇದದಲ್ಲಿರುವ ಈ ಸೂಕ್ತವನ್ನು ಉದ್ಧರಿಸಿ ಪ್ರತಿಪದನುಚರಮಂತ್ರಗಳನ್ನು ಸ್ಪಷ್ಟನಾಗಿ ವಿಂಗಡಿಸಿ ಹೇಳಿವನು. ಆದ್ದರಿಂದ ಮರುತ್ವತೀಯಶಸ್ತ್ರಮಂತ್ರಗಳಿಗಾಗಿ ಈ ವಾಸುಕ್ರಸೂಕ್ತವನ್ನು ಪಠಿಸುವುದೇ ಯುಕ್ತವು

**ತದನಿರುಕ್ತಂ ಪ್ರಾಜಾಪತ್ಯಂ ಶಂಸತ್ಯನಿರುಕ್ತೋ ವೈ ಪ್ರಜಾಪತಿಃ ಪ್ರಜಾಪತೇರಾಪ್ತ್ಯೈ ॥**

**ಪುನರಪಿ ಪ್ರಜಾಪತಿಸಂಬಂಧೇನ ಸೂಕ್ತಂ ಪ್ರಶಂಸತಿ—ದೇವತಾ ವಿಸ್ಪಷ್ಟಂ ನಿಷ್ಕೃಷ್ಯ ಯತ್ರೋಚ್ಯತೇ ತನ್ನಿರುಕ್ತಂ ತದ್ವಿಪರೀತಂ "ಅಸತ್ಸು ಮೇ" ಇತ್ಯಾದಿಕಂ ತಾದೃಶಮ್। ನ ಹಿ ತದೀಯಾಸ್ವೃಕ್ಷು ಕಾಚಿದಪಿ ದೇವತಾ ನಾಮಗ್ರಹಪೂರ್ವಂ ವಿಸ್ಪಷ್ಟಂ ಪ್ರತೀಯತೇ, ತಸ್ಮಾದನಿರುಕ್ತಂ ಪ್ರಜಾಪತಿದೇವತಾಕಮಿತ್ಯವಗಚ್ಛ ಶಂಸೇತ್। ಪ್ರಜಾಪತಿಃ ಪ್ರಜಾಪಾಲಕೋ ಜಗದೀಶ್ವರಃ, ಸ ಚಾನಿರುಕ್ತ ಈಶ್ವರಸ್ಯ ಕರ್ಮಪ್ರಾಪಿತದೇಹಾಭಾವೇನೇಂದ್ರಾದಿವನ್ನಿಷ್ಕೃಷ್ಯ ಮೂರ್ತೇರ್ವಕ್ತುಮಶಕ್ಯತ್ವಾತ್। ತಸ್ಮಾದನಿರುಕ್ತಂ ಸೂಕ್ತಂ ತಥಾವಿಧಪ್ರಜಾಪತಿಪ್ರಾಪ್ತ್ಯೈ ಸಂಪದ್ಯತೇ ॥**

ಪ್ರಜಾಪತಿಸಂಬಂಧದಿಂದ ಈ ಸೂಕ್ತವನ್ನು ಮತ್ತೆ ಪ್ರಶಂಸೆಮಾಡುವರು— ಒಂದು ಮಂತ್ರ ಅಥವಾ ಸೂಕ್ತದಲ್ಲಿ ಪ್ರತಿಪಾದಿಸಲ್ಪಡುವ ದೇವತೆಯ ಹೆಸರನ್ನು ನಿರ್ದಿಷ್ಟವಾಗಿ ಹೇಳಿದ್ದರೆ ಆ ಸೂಕ್ತವು ನಿರುಕ್ತವೆನಿಸುವುದು ಇದಕ್ಕೆ ವಿರುದ್ಧವಾಗಿದ್ದರೆ ಅದು ಅನಿರುಕ್ತವು. ಸೂಕ್ತವು ಅನಿರುಕ್ತವಾಗಿದ್ದರೆ ಅದು ಪ್ರಜಾಪತಿಯನ್ನೇ ನಿರ್ದೇಶಿಸಿರುವ ಸೂಕ್ತವೆಂದು ತಿಳಿಯಬೇಕು. ಏಕೆಂದರೆ ದೇಹಾದ್ಯವಯವಗಳಿಂದ ಮೂರ್ತಿಮಂತರಾದ ಇಂದ್ರಾದಿದೇವತೆಗಳಂತೆ ಪ್ರಜಾಪತಿಯು ಶರೀರಾದ್ಯವಯವರಹಿತನಾದ ಪರಬ್ರಹ್ಮಸ್ವರೂಪನು. ಅಸತ್ಸು ಮೇ ಎಂಬ ಸೂಕ್ತವು ಈ ವಿಧವಾದುದು. ಪ್ರಜಾಪತಿಯು ಜಗದೀಶ್ವರನೂ, ಪ್ರಜಾಪಾಲಕನೂ ಆಗಿರುವುದರಿಂದ ಈ ಸೂಕ್ತದಿಂದ ಪ್ರಜಾಪತಿಯನ್ನು ಪ್ರಶಂಸಿಸುವುದು ಯುಕ್ತವಾಗಿದೆ. ಮತ್ತು ಈ ಸೂಕ್ತಪ್ರಶಂಸನೆಯಿಂದ ಪ್ರಜಾಪತಿಯನ್ನು (ಪರಬ್ರಹ್ಮನನ್ನು ಸುಲಭವಾಗಿ ಪಡೆಯಬಹುದು.)

**ಸಕೃದಿಂದ್ರಂ ನಿರಾಹ ತೇನೈಂದ್ರಾದ್ರೂಪಾನ್ನ ಪ್ರಚ್ಯವತೇ ॥**

**ತಸ್ಮಿನ್ಸೂಕ್ತೇ ದ್ವಾವಿಂಶತ್ಯಾ (ದ್ವಾವಿಂಶತ್ಯಾ) ಮೃಚೀಂದ್ರಾಯೇತಿ ಪದಂ ತತ್ಪ್ರಶಂಸತಿ— ತಸ್ಮಿನ್ಪಾದೇ 'ಇಂದ್ರಾಯ ಸುನ್ವತ್' (ಋ–ಸಂ–ಮಂ–೧೦-ಸೂ–೨೭–ಋ–೨೨) ಇತ್ಯೇಕವಾರಮಿಂದ್ರಂ ಸ್ವನಾಮ್ನಾ ನಿಷ್ಕೃಷ್ಯ ಬ್ರೂತೇ। ತೇನೇಂದ್ರವಚನೇನ ತತ್ಸೂಕ್ತಮಿಂದ್ರಸಂಬಂಧಿನಃ ಸ್ವರೂಪಾದಪ್ರಚ್ಯುತಂ ಭವತಿ। ಅತಃ ಪೂರ್ವೋಕ್ತರೀತ್ಯಾ ಪ್ರಾಜಾಪತ್ಯತ್ವಾದೈಂದ್ರತ್ವಂ ತಚ್ಚಾ (ಚ್ಚೇ) ಸನೇನೋಹನೀಯಮ್ ॥**

ಈ ಸೂಕ್ತದ (ಋ. ಸಂ ೧೦–೨೭–೨೨) ಎಂಬ ಋಕ್ಕಿನ ಒಂದು ಪಾದದಲ್ಲಿ ಇಂದ್ರನ ಹೆಸರು ಇಂದ್ರಾಯಸುನ್ವತ್ ಒಂದಾವರ್ತಿ ಪಠಿತವಾಗಿರುವುದು. ಅದರೂ ಈ ವಚನದಿಂದ ಈ ಸೂಕ್ತಕ್ಕೆ ಪ್ರಜಾಪತಿಯು ದೇವತೆಯೆಂದು ಹೇಳುವ ವಿಷಯದಲ್ಲಿ ಏನೂ ಬಾಧಕವುಂಟಾಗುವುದಿಲ್ಲ.

**ಪಿಬಾ ಸೋಮಮಭಿ ಯಮುಗ್ರ ತರ್ದ ಇತಿ ಶಂಸತಿ ||**

ಸೂಕ್ತಾಂತರಂ ವಿಧತ್ತೇ—ಪಿಬಾ ಸೋಮಮಿತ್ಯೇತತ್ಪಂಚದಶರ್ಚಂ ಸೂಕ್ತಂ ಶಂಸೇತ್ ||

ಪಿಬಾಸೋಮಂ ಎಂಬ ಈ ಸೂಕ್ತದ ಹದಿನೈದನೆಯ ಋಕ್ಕನ್ನು ಇದರಂತೆಯೇ ಪಠಿಸಬೇಕು.

**ಊರ್ವಂ ಗವ್ಯಂ ಮಹಿ ಗೃಣಾನ ಇಂದ್ರೇತಿ ಮಹದ್ವದ್ರೂಪಸಮೃದ್ಧ-ಮೇತಸ್ಯಾಹ್ನೋ ರೂಪಮ್ ||**

ತಸ್ಮಿನ್ಸೂಕ್ತೇ ಪ್ರಥಮಾಯಾಮೃಚಿ ದ್ವಿತೀಯಪಾದೇ ಮಹಿಶಬ್ದಂ ಪ್ರಶಂಸತಿ—ಹೇ ಇಂದ್ರ ತ್ವಮೂರ್ವಮುರು ಪ್ರಭೂತಂ ಗವ್ಯಂ ಪಶುಪ್ರದತ್ವೇನ ಗೋಭ್ಯೋ ಹಿತಂ ಮಹಿ ಮಹ-ತ್ಪೂಜ್ಯಂ ಯಥಾ ಭವತಿ ತಥಾ ಗೃಣಾನಃ ಕಥಯಾ (ಥ್ಯಮಾ) ನೋಽವತಿಷ್ಠಸೇ | ಅತ್ರ ಮಹಿಶಬ್ದಸ್ಯೋಕ್ತತ್ವಾದೇತಸ್ಯಾಹ್ನೋ ರೂಪಂ ಮಹಚ್ಛಬ್ದಯುಕ್ತಂ ಸದ್ರೂಪಸಮೃದ್ಧಂ ಭವತಿ |

ಈ ಸೂಕ್ತದ ಊರ್ಧ್ವಂ ಗವ್ಯಂ ಮಹಿ ಗೃಣಾನ ಇಂದ್ರ ಎಂಬ ಋಕ್ಕಿನಲ್ಲಿ ಮಹಿ (ಮಹತ್ತಾದ) ಎಂಬ ಶಬ್ದವು ಪಠಿತವಾಗಿದೆ. ಮಹತ್ ಎಂಬ ಶಬ್ದವು ಪಠಿತವಾಗಿರುವುದರಿಂದ ಈದಿನದ ಕಾರ್ಯಕ್ಕೆ ಅನುರೂಪವಾದ ಅರ್ಥವನ್ನು ಸೂಚಿಸುವುದು. ಎಂದರೆ ಈ ಅರ್ಥಕ್ಕೂ, ಈ ದಿನದ ಕಾರ್ಯಕ್ಕೂ ಪರಸ್ಪರ ಅನುರೂಪವಿರುವುದರಿಂದ ಇಲ್ಲಿ ರೂಪಸಮೃದ್ಧಿಯಾಗಿರುವುದು

**ತದು ಭಾರದ್ವಾಜಂ ಭರದ್ವಾಜೋ ಹ ವಾ ಋಷೀಣಾಮನೂಚಾನ-ತಮೋ ದೀರ್ಘಜೀವಿತಮಸ್ತಪಸ್ವಿತಮ ಆಸ ಸ ಏತೇನ ಸೂಕ್ತೇನ ಪಾಪ್ಮಾನಮಪಾಹತ ತದ್ಯದ್ಭಾರದ್ವಾಜಂ ಶಂಸತಿ ಪಾಪ್ಮನೋಽ-ಪಹತ್ಯಾ ಅನೂಚಾನೋ ದೀರ್ಘಜೀವೀ ತಪಸ್ವ್ಯಸಾನೀತಿ ತಸ್ಮಾ-ದ್ಭಾರದ್ವಾಜಂ ಶಂಸತಿ ||**

ಋಷಿಸಂಬಂಧೇನ ಸೂಕ್ತಂ ಪ್ರಶಂಸತಿ–ತದು ತದಪಿ ಸೂಕ್ತಂ ಪಿಬಾ ಸೋಮಮ್ "(ಋ.ಸ. ಮಂ ೬–ಸೂ೧೭–ಋ. ೧) ಇತ್ಯಾದಿಕಂ ಭರದ್ವಾಜೇನ ದೃಷ್ಟಮ್ | ಸ ಚ ಭರದ್ವಾಜಃ ಸರ್ವೇಷಾ-ಮೃಷೀಣಾಂ ಮಧ್ಯೇ ವೇದಶಾಸ್ತ್ರಪಾರಂಗತೋಽತಿಶಯೇನ ಚಿರಜೀವ್ಯತಿಶಯೇನ ತಪಸ್ವೀ ಬ-ಭೂವ | ಸ ತಾದೃಶೋ ಭರದ್ವಾಜ ಏತೇನ ಪಿಬಾ ಸೋಮಮಿತ್ಯಾದಿಸೂಕ್ತೇನ ಸ್ವಕೀಯಂ ಪಾಪಂ ನಾಶಿತವಾಂಸ್ತಸ್ಮಾದೇತಚ್ಛಂಸನಂ ಪಾಪನಾಶಾಯ ಭವತಿ | ತಸ್ಮಾದ್ಯಃ ಪುಮಾನನೂಚಾನತ್ವಾದಿ-ಯುಕ್ತೋ ಭವಾನೀತಿ ಕಾಮಯತೇ ಸ ಪುಮಾನ್ ಭಾರದ್ವಾಜಮೇತತ್ಸೂಕ್ತಂ ಶಂಸೇತ್ ||

ಈ ಸೂಕ್ತವು (ಋ. ಸಂ. ೬ವ೧೭–೧) ಭರದ್ವಾಜಋಷಿಯಿಂದ ದೃಷ್ಟವಾದುದು. ಈ ಭರದ್ವಾಜ ಋಷಿಯು ಸಮಸ್ತಋಷಿಗಳಲ್ಲಿಯೂ ಶ್ರೇಷ್ಠನಾದವನು. ವೇದಶಾಸ್ತ್ರಗಳಲ್ಲಿ ಪಾರಂಗತನು. ಬಹಳಕಾಲ (ಚಿರಂಜೀವಿ) ಜೀವಿಸಿದ್ದರಿಂದ ತಪಸ್ವಿಯಾದವನು. ಇಂತಹ ಭರದ್ವಾಜಋಷಿಯಿಂದ ದೃಷ್ಟವಾದ ಸೂಕ್ತವನ್ನು ಪಠಿಸುವ ಪುರುಷನು ತನ್ನ ಪಾಪಗಳೆಲ್ಲವನೂ

ಕಳೆದುಕೊಂಡು ಶುದ್ಧನಾಗುವನು ಆದ್ದರಿಂದ ಈ ಭರದ್ವಾಜಋಷಿದೃಷ್ಟವಾದ ಸೂಕ್ತವನ್ನು ಪಠಿಸುವ ಪುರುಷನು ವಿದ್ಯಾಪಾರಂಗತನೂ, ಚಿರಂ [ಬಹಳಕಾಲ] ಜೀವಿಸಿರುವವನೂ, ತಪಸ್ವಿಯೂ ಆಗುವನು.

**ಕಯಾ ಶುಭಾ ಸವಯಸಃ ಸನೀಳಾ ಇತಿ ಶಂಸತಿ ॥**

**ಸೂಕ್ತಾಂತರಂ ವಿಧತ್ತೇ—ಕಯೇತ್ಯಾದಿಕಂ ಪಂಚದಶರ್ಚಂ ಸೂಕ್ತಮ್ ॥**

ಅನಂತರ ಹೋತೃವು **ಕಯಾ ಶುಭಾಸವಯಸಃ** (ಋ. ಸಂ. ೧-೧೬೫-೧) ಎಂಬ ಸೂಕ್ತವನ್ನು ಪಠಿಸುವನು.

**ಆಶಾಸತೇ ಪ್ರತಿಹರ್ಯಂತ್ಯುಕ್ಥೇತ್ಯುಕ್ಥಂ ವಾ ಏತದಹರುಕ್ಥವದ್ರೂಪ-ಸಮೃದ್ಧಮೇತಸ್ಯಾಹ್ನೋ ರೂಪಮ್ ॥**

**ತಸ್ಮಿನ್ಸೂಕ್ತೇ ಚತುರ್ಥ್ಯಾಮೃಚಿ ತೃತೀಯಪಾದಗತಮುಕ್ಥಶಬ್ದಂ ಪ್ರಶಂಸತಿ—ಆಶಾಸತೇ ಫಲಂ ಕಾಮಯಮಾನಾಯ ಯಜಮಾನಾಯೋಕ್ಥಾ ಶಸ್ತ್ರಾಣಿ ಪ್ರತಿಹರ್ಯಂತ್ಯಪೇಕ್ಷಿತಂ ಕಾಮಂ ಪ್ರತಿಪಾದಯಂತಿ । ಅತ್ರೋಕ್ಥೇತಿ ಪದಸ್ಯ ವಿದ್ಯಮಾನತ್ವಾದೇತದಹರುಕ್ಥರೂಪಮೇವೈತಸ್ಯಾಹ್ನೋ ರೂಪಮುಕ್ಥಯುಕ್ತತ್ವಾದ್ರೂಪಸಮೃದ್ಧಂ ಭವತಿ ॥**

ಈ ಸೂಕ್ತದ ನಾಲ್ಕನೇ ಋಕ್ಕಿನಲ್ಲಿರುವ ಉಕ್ಥಶಬ್ದವನ್ನು ಪ್ರಶಂಸೆಮಾಡುವನು—ಈ ಸೂಕ್ತದಲ್ಲಿ **ಆಶಾಸತೇ**—ಫಲವನ್ನಪೇಕ್ಷಿಸುವ ಯಜಮಾನನಿಗೆ, **ಉಕ್ಥಾ**—ಶಸ್ತ್ರಮಂತ್ರಗಳು **ಪ್ರತಿಹರ್ಯನ್**—ಅವನ ಇಷ್ಟಸಿದ್ಧಿಗಳನ್ನು ಪೂರೈಸುವವು ಎಂಬರ್ಥವನ್ನು ಈ ಆಶಸತೇ ಎಂಬ ಋಕ್ಕು(೧-೧೬೫-೪) ಪ್ರತಿಪಾದಿಸುವುದು. ಆದ್ದರಿಂದ ಉಕ್ಥರೂಪವಾದ ಈ ದಿನವ ಕಾರ್ಯಕಲಾಪಗಳಿಗೂ ಶಸ್ತ್ರಮಂತ್ರಗಳಿಗೂ ಪರಸ್ಪರ ಅನುರೂಪವಿರುವುದರಿಂದ ಇಲ್ಲಿ ರೂಪಸಮೃದ್ಧಿಯಿರುವುದು.

**ತದು ಕಯಾಶುಭೀಯಮೇತದ್ವೈ ಸಂಜ್ಞಾನಂ ಸಂತನಿ ಸೂಕ್ತಂ ಯತ್ಕಯಾಶುಭೀಯಮೇತೇನ ಹ ವಾ ಇಂದ್ರೋಽಗಸ್ತ್ಯೋ ಮರು-ತಸ್ತೇ ಸಮಜಾನತ ತದ್ಯತ್ಕಯಾಶುಭೀಯಂ ಶಂಸತಿ ಸಂಜ್ಞಾತ್ಯಾ ಏವ ॥**

**ನಾಮಧೇಯಮುಪಜೀವ್ಯ ಸೂಕ್ತಂ ಪ್ರಶಂಸತಿ—ತದು ತದಪಿ "ಕಯಾ" (ಋ. ಸಂ.-ಮಂ ೧-ಸೂ. ೧೬೫. ಋ. ೧) ಇತ್ಯಾದಿಕಂ ಸೂಕ್ತಂ ಕಯಾಶುಭೀಯನಾಮಕಂ ಕಯಾ ಶುಭೇತಿ ಪದದ್ವಯಸ್ಯ ತತ್ರ ವಿದ್ಯಮಾನತ್ವಾತ್ । ತದ್ಯದೇತತ್ಕಯಾಶುಭೀಯಂ ಸೂಕ್ತಮಸ್ತ್ಯೇತದೇವ ಸಂಜ್ಞಾನಂ ಸಮೀಚೀನಜ್ಞಾನಹೇತುಃ । ಸಂತನಿ ಸಮ್ಯಗ್ವಿಸ್ತೃತಂ ಚ । ಏತೇನೈವ ಸೂಕ್ತೇನೇಂದ್ರಾ-ದಯೋ ಯೇ ಸಂತಿ ತೇ ಸರ್ವೇಽಪಿ ಸಮಜಾನತ ಸಮ್ಯಗ್‌ಜ್ಞಾನವಂತೋಽಭೂವನ್ । ತಸ್ಮಾತ್ಕಯಾ-ಶುಭೀಯಂ ಶಂಸತೀತಿ ಯದಸ್ತಿ ತತ್ಸಮ್ಯಗ್‌ಜ್ಞಾನಾರ್ಥಮೇವ ಸಂಪದ್ಯತೇ ॥**

**ಕಯಾ** ಎಂಬ ಈ ಸೂಕ್ತದ (ಋ. ಸಂ. ೧-೧೬೫-೧) ಪ್ರಾರಂಭದಲ್ಲಿ **ಕಯಾ ಶುಭಾ** ಎಂಬ ಎರಡು ಪದಗಳಿರುವುದರಿಂದ ಈ ಸೂಕ್ತಕ್ಕೆ ಕಯಾಶುಭೀಯಸೂಕ್ತವೆಂದು ಹೆಸರು ಬಂದಿರುವುದು. ಈ ಸೂಕ್ತವು ಸರಿಯಾವ ಜ್ಞಾನವನ್ನು ತಿಳುವಳಿಕೆಯನ್ನು ಉಂಟುಮಾಡುವುದು. ಈ ಸೂಕ್ತಪಠನದಿಂದ ಇಂದ್ರ ಅಗಸ್ತ್ಯಋಷಿ ಮತ್ತು ಮರುದ್ದೇವತೆಗಳಿಗೆ ಇದ್ದ ಭಿನ್ನಾಭಿಪ್ರಾಯವು ಪರಿಹಾರವಾಗಿ ಇವರೆಲ್ಲರೂ ಒಂದು ತೀರ್ಮಾನಕ್ಕೆ ಬಂದು ಪರಸ್ಪರ ಮೈತ್ರೀಭಾವವನ್ನು ಪಡೆದರು. ಆದ್ದರಿಂದ ಈ ಕಯಾಶುಭೀಯಸೂಕ್ತವನ್ನು ಪಠಿಸುವ ಪುರುಷನು ಇತರರೊಡನೆ ತನಗಿರುವ ಭಿನ್ನಾಭಿಪ್ರಾಯವನ್ನು ಪರಿಹರಿಸಿಕೊಂಡು ಎಲ್ಲರೊಡನೆ ಸ್ನೇಹದಿಂದ ಬಾಳುವನು.

## ತದ್ವಾಯುಷ್ಯಂ ತದ್ಯೋಽಸ್ಯ ಪ್ರಿಯಃ ಸ್ಯಾತ್ಕುರ್ಯಾದೇವಾಸ್ಯ ಕಯಾ-ಶುಭೀಯಂ ||

**ಆಯುರ್ಹೇತುತ್ವೇನ ಪುನಃ ಪ್ರಶಂಸತಿ—ತದು ತದೇವ ಸೂಕ್ತಮಾಯುಷಃ ಕಾರಣಮ್ । ತಥಾ ಸತಿ ಯೋ ಯಜಮಾನೋಽಸ್ಯ ಹೋತುಃ ಪ್ರಿಯಃ ಸ್ಯಾದಸ್ಯ ಯಜಮಾನಸ್ಯಾರ್ಥೇ ಕಯಾಶು-ಭೀಯಮವಶ್ಯಂ ಕುರ್ಯಾತ್ ||**

ಈ ಸೂಕ್ತಪಠನವು ಆಯುಸ್ಸನ್ನು ವೃದ್ಧಿಮಾಡುವುದು. ಆದ್ದರಿಂದ ಹೋತೃವು ತನಗೆ ಯಜಮಾನನು ಪ್ರಿಯನಾಗಿಯೂ ಬಹುಕಾಲ ಜೀವಿಸಿರಬೇಕೆಂದು ಅಪೇಕ್ಷಿಸುವವನಾಗಿಯೂ ಇದ್ದಲ್ಲಿ ಈ ಸೂಕ್ತವನ್ನು ಅವಶ್ಯಕವಾಗಿ ಪಠಿಸಬೇಕು.

## ಮರುತ್ವಾꣳ ಇಂದ್ರ ವೃಷಭೋ ರಣಾಯೇತಿ ಶಂಸತಿ ||

**ಸೂಕ್ತಾಂತರಂ ವಿಧತ್ತೇ—ಮರುತ್ವಾನಿತ್ಯಾದಿಕಂ ಪಂಚರ್ಚಂ ಸೂಕ್ತಂ ಶಂಸೇತ್ ||**

ಅನಂತರ ಹೋತೃವು **ಮರುತ್ವಾꣳ ಇಂದ್ರ ವೃಷಭೋ ರಣಾಯ** (ಋ. ಸಂ. ೩-೪೭-೧) ಎಂಬ ಐದು ಋಕ್ಕುಗಳ ಸೂಕ್ತವನ್ನು ಪಠಿಸುವನು.

## ಇಂದ್ರ ವೃಷಭ ಇತಿ ವೃಷಣ್ವದ್ವಾ ಇಂದ್ರಸ್ಯ ರೂಪಮೈಂದ್ರಮೇತದಹ-ರೇತಸ್ಯಾಹ್ನೋ ರೂಪಂ ||

**ಅತ್ರ ವೃಷಭಶಬ್ದಂ ಪ್ರಶಂಸತಿ—ಹೇ ಇಂದ್ರ ತ್ವಂ ವೃಷಭಃ ಕಾಮಾನಾಂ ವರ್ಷಯಿತಾ ಸಮರ್ಥ ಇತ್ಯೇವಂ ಸೂಕ್ತೇ ಶ್ರೂಯತೇ । ಇಂದ್ರಸ್ಯ ರೂಪಂ ವೃಷಣ್ವದ್ವೈ ಕಾಮಾನಾಂ ವರ್ಷಣ-ಯುಕ್ತಮ್ । ಐಂದ್ರಮೇತದಿತ್ಯಾದಿ ಪೂರ್ವವತ್ ||**

ಈ ಋಕ್ಕಿನಲ್ಲಿರುವ ವೃಷಭಶಬ್ದವನ್ನು ಪ್ರಶಂಸೆಮಾಡುವರು. **ಹೇ ಇಂದ್ರ**—ಎಲೈ ಇಂದ್ರನೇ ನೀನು **ವೃಷಭಃ** ಇಷ್ಟಾರ್ಥಗಳನ್ನು ಕೊಡುವುದರಲ್ಲಿ ಬಹಳ ಸಮರ್ಥನಾಗಿರುವೆ. ಎಂಬ ವಿಷಯವು ಈ ಋಕ್ಕಿನಲ್ಲಿರುವುದು. **ವೃಷಭ** ಶಬ್ದಕ್ಕೆ ಸಮರ್ಥನು ಎಂದರ್ಥವಿರುವುದು. ಈ ದಿವಸದಲ್ಲಿ ಇಂದ್ರನು ವಿಶೇಷವಾಗಿ ಸ್ತುತಿಸಲ್ಪಡುವುದರಿಂದ ಈ ದಿವಸದ ಕಾರ್ಯಕಲಾಪಗಳಿಗೂ ಮಂತ್ರಗಳಿಗೂ ಪರಸ್ಪರ ಅನುರೂಪವಿದ್ದು ರೂಪಸಮೃದ್ಧಿಯಿದ್ದಂತಾಯಿತು.

ತದು ವೈಶ್ವಾಮಿತ್ರಂ ವಿಶ್ವಸ್ಯ ಹ ವೈ ಮಿತ್ರಂ ವಿಶ್ವಾಮಿತ್ರ ಆಸ ||

ಋಷಿಸಂಬಂಧೇನ ಪ್ರಶಂಸತಿ—ತದು ತತ್ಸೂಕ್ತಂ ವಿಶ್ವಾಮಿತ್ರೇಣ ದೃಷ್ಟಂ ವಿಶ್ವಸ್ಯ ಸರ್ವಸ್ಯ ಜಗತೋ ಮಿತ್ರಮಿತ್ಯನಯೈವ ವ್ಯುತ್ಪತ್ತ್ಯಾ ಮುನಿರ್ವಿಶ್ವಾಮಿತ್ರನಾಮಕ ಆಸ | ಉತ್ತರತ್ರಾಪ್ಯೇತನ್ನಾಮಧೇಯಮೇವ ನಿರ್ವಕ್ಷ್ಯತಿ—" ಯದಸ್ಯೇದಂ ವಿಶ್ವಂ ಮಿತ್ರಮಾಸೀದ್ಯದಿದಂ ಕಿಂಚ " (ಐ-ಆ-೨-ಅ-೨-ಖಂ. ೧) (ಇತಿ |) ತಸ್ಮಾದ್ವಿಶ್ವಾಮಿತ್ರಃ | ಈದೃಶೇನ ದೃಷ್ಟತ್ವಾತ್ಪ್ರಶಸ್ತಮಿದಮಿತ್ಯರ್ಥಃ ||

ಈ ಋಕ್ಕನ್ನು ಋಷಿ ಸಂಬಂಧದಿಂದ ಪ್ರಶಂಸೆಮಾಡುವರು. ಈ ಸೂಕ್ತವು ವಿಶ್ವಾಮಿತ್ರಋಷಿದೃಷ್ಟವಾದುದು. ವಿಶ್ವಾಮಿತ್ರನೆಂಬ ಪದಕ್ಕೆ ವಿಶ್ವಸ್ಯ—ಸಮಸ್ತಜಗತ್ತಿಗೂ ಮಿತ್ರಃ—ಸ್ನೇಹಿತನು ಅಥವಾ ಹಿತೈಷಿಯಾದವನು ಎಂದರ್ಥವು. ಆದ್ದರಿಂದ ವಿಶ್ವಸ್ಯ ಮಿತ್ರಃ—ವಿಶ್ವಾಮಿತ್ರಃ ಎಂದು ರೂಢಿಯಲ್ಲಿ ಬಂದಿರುವುದು. ಇದೇ ಆರಣ್ಯಕದ ಡೇರೊಂದು ಭಾಗದಲ್ಲಿ (ಐ. ಆ. ೨-೨-೧) ಯದಸ್ಯೇದಂ ವಿಶ್ವಂ ಮಿತ್ರ ಆಸೀದ್ಯದಿದಂ ಕಿಂಚ ಎಂದು ಹೇಳಿರುವುದು.

ವಿಶ್ವಂ ಹಾಸ್ಮೈ ಮಿತ್ರಂ ಭವತಿ ಯ ಏವಂ ವೇದ ಯೇಷಾಂ ಚೈವಂ ವಿದ್ವಾನೇತದ್ಧೋತಾ ಶಂಸತಿ, ||

ವೇದನಶಂಸನೇ ಪ್ರಶಂಸತಿ—

ಈ ವಿಷಯವನ್ನು ತಿಳಿದಿರುವ ಪುರುಷನಿಗೆ ಪ್ರಪಂಚದ ಸಮಸ್ತಜನರೂ (ಪ್ರಾಣಿಗಳೂ ಸಹ) ಮಿತ್ರರಾಗಿರುವರು. ಈ ಮಂತ್ರವನ್ನು ಪಠಿಸುವ ವಿದ್ವಾಂಸನಾದ ಹೋತೃವು ಯಾವ ಯಜಮಾನನಿಗಾಗಿ ಮಂತ್ರವನ್ನು ಪಠಿಸುವನೋ ಆ ಯಜಮಾನನಿಗೂ ಸಮಸ್ತರೂ ಮಿತ್ರರಾಗಿಯೇ ಇರುವರು.

ಜನಿಷ್ಠಾ ಉಗ್ರಃ ಸಹಸೇ ತುರಾಯೇತಿ ನಿವಿದ್ಧಾನಮೈಕಾಹಿಕಂ ರೂಪಸಮೃದ್ಧಂ ಬಹು ವಾ ಏತಸ್ಮಿನ್ನಹನಿ ಕಿಂಚ ಕಿಂಚ ವಾರಣಂ ಕ್ರಿಯತೇ ಶಾಂತ್ಯಾ ಏವ ಶಾಂತಿರ್ವೈ ಪ್ರತಿಷ್ಠೈಕಾಹಃ ಶಾಂತ್ಯಾಮೇವ ತತ್ಪ್ರತಿಷ್ಠಾಯಾಮಂತತಃ ಪ್ರತಿತಿಷ್ಠಂತಿ ಪ್ರತಿತಿಷ್ಠತಿ ಯ ಏವಂ ವೇದ ಯೇಷಾಂ ಚೈವಂ ವಿದ್ವಾನೇತದ್ಧೋತಾ ಶಂಸತಿ ||

ಸೂಕ್ತಾಂತರಂ ವಿಧತ್ತೇ—ಜನಿಷ್ಠಾ ಇತ್ಯಾದಿಕಮೇಕಾದಶರ್ಚಮ್ | ಅಸ್ಮಿನ್ಸೂಕ್ತೇ ಷಣ್ಣಾಮೃಚಾಂ ಶಂಸನಂ ಕೃತ್ವಾ ತತ ಊರ್ಧ್ವಮಿಂದ್ರೋ ಮರುತ್ವಾನಿತ್ಯಾದೀನಿ ನಿವಿತ್ಪದಾನಿ ಸೂಕ್ತಮಧ್ಯೇ ಧೀಯಂತೇ ತಸ್ಮಾದೇತನ್ನಿವಿದ್ಧಾನಮ್, ತದೇತದೇಕಾಹೇ ಮೂಲಪ್ರಕೃತಿರೂಪೇಽಗ್ನಿಷ್ಟೋಮೇ ಸಮುತ್ಪನ್ನಮಿತ್ಯೈಕಾಹಿಕಮ್ | ರೂಪಸಮೃದ್ಧಮಿತ್ಯಾದಿ ಪೂರ್ವವದ್ವ್ಯಾಖ್ಯೇಯಮ್ | ' ಆ ತ್ವಾ ರಥಂ ' (ಋ-ಸಂ-ಮಂ-೮-ಸೂ-೬೮-ಋ-೧) ಇತ್ಯಾರಭ್ಯ ' ಜನಿಷ್ಠಾ ಉಗ್ರಃ '' (ಋ-ಸಂ-ಮಂ-೧೦-ಸೂ-೭೩-ಋ-೧) ಇತ್ಯೇದಂತಂ ಮರುತ್ವತೀಯಂ ಶಸ್ತ್ರಂ ಪಂಚಮಾರಣ್ಯಕೇ ಸಂಗೃಹ್ಯ ಪ್ರದರ್ಶಿತಮ್—" ಚತುರ್ವಿಂಶಾನ್ಮರುತ್ವತೀಯಸ್ಯಾತಾನೋಽಸತ್ಸು ಮೇ ಜರಿತಃ

**ಸಾಭಿನೇಗಃ ಪಿಬಾ ಸೋಮಮಭಿ ಯಮುಗ್ರತರ್ದಃ ಕಯಾ ಶುಭಾ ಸವಯಸಃ ಸನೀಳಾ ಮರುತ್ವಾ೯ ಇಂದ್ರ ವೃಷಭೋ ರಣಾಯ ಜನಿಷ್ಠಾ ಉಗ್ರಃ ಸಹಸೇ ತುರಾಯೇತಿ ಮರುತ್ವತೀಯಮ್" (ಐ-ಆ-೫-೨-೧-ಖಂ-೧) ಇತಿ । " ಆ ತ್ವಾ ರಥಮ್ " (ಋ-ಸಂ-ಮಂ-೮-ಸೂ-೬೮-ಋ ೧) ಇತ್ಯಾರಭ್ಯ " ಅಸತ್ಸು ಮೇ ಜರಿತಃ " (ಋ-ಸಂ-ಮಂ-೧೦-ಸೂ-೨೭-ಋ-೧) ಇತ್ಯತಃ ಪ್ರಾಚೀನ ಋಕ್ಸಮೂಹೋ ಮೂಲಪ್ರಕೃತಾವುಪ್ಪನ್ನಶ್ಚತುರ್ವಿಂಶಾಹೇ ಚೋದಕಪ್ರಾಪ್ತಸ್ತಸ್ಮಾದಪಿ ಚತುರ್ವಿಂಶಾಹಾದಸ್ಮಿನ್ಮಹಾವ್ರತೇ ಪುನಶ್ಚೋದಕಪ್ರಾಪ್ತಃ । " ಅಸತ್ಸು ಮೇ " ಇತ್ಯಾದಿಕಮತ್ರೈವ ವಿಶೇಷವಿಹಿತಮೇತತ್ಸರ್ವಂ ಮರುತ್ವತೀಯಂ ಶಸ್ತ್ರಮ್ ॥**

**ಜನಿಷ್ಠಾ ಉಗ್ರಃ ಸಹಸೇ ತುರಾಯ** (ಋ.೧೦-೭೩-೧) ಎಂಬುದು ಹನ್ನೊಂದು ಋಕ್ಕಿನ ಸೂಕ್ತವು. ಈ ಸೂಕ್ತವನ್ನು ಪಠಿಸುವಾಗ ಪ್ರಾರಂಭದ ಆರು ಋಕ್ಕುಗಳನ್ನು ಪಠಿಸಿದನಂತರ **ಮರುತ್ವಾ೯ ಇಂದ್ರ** ಎಂದು ಮುಂತಾದ ನಿವಿತ್ಸೂಕ್ತಗಳನ್ನು ಇಲ್ಲಿ (ಸೂಕ್ತಮಧ್ಯದಲ್ಲಿ) ಸೇರಿಸಿ ಪಠಿಸಬೇಕು. ಆದ್ದರಿಂದ ಎಂದರೆ ಸೂಕ್ತಮಧ್ಯದಲ್ಲಿ ಸೇರಿಸಿ ಪಠಿಸುವುದರಿಂದ ಇದಕ್ಕೆ ನಿವಿದ್ಧಾನ ವೆಂದು ಹೆಸರಿರುವುದು, ಇದನ್ನು ಐಕಾಹಿಕವಾದ ಅಗ್ನಿಷ್ಟೋಮಯಾಗದಲ್ಲಿ ಪಠಿಸುವರು. ಪ್ರಕೃತಿ ಸ್ವರೂಪವಾದ ಅಗ್ನಿಷ್ಟೋಮಯಾಗವನ್ನು ಒಂದೇದಿನದ ಅವಧಿಯಲ್ಲಿ ಮಾಡಿ ಮುಗಿಸುವುದರಿಂದ ಅಗ್ನಿಷ್ಟೋಮಯಾಗಕ್ಕೆ ಐಕಾಹಿಕವೆಂದು ಹೆಸರು. ರೂಪಸಮೃದ್ಧಿಯೆಂದರೆ ಪಠಿಸುವ ಮಂತ್ರಕ್ಕೂ ಆಚರಿಸುವ ಕಾರ್ಯಕಲಾಪಗಳಿಗೂ ಸಾಮ್ಯ (ಅನುರೂಪ)ವಿದ್ದಲ್ಲಿ ಅದೇ ರೂಪಸಮೃದ್ಧಿಯು. **ಆತ್ವಾ ರಥಂ** (ಋ.ಸಂ.೮-೬೮-೧) ಎಂಬ ಸೂಕ್ತದಿಂದ ಪ್ರಾರಂಭಿಸಿ **ಜನಿಷ್ಠಾ ಉಗ್ರಃ** (ಋ.ಸಂ.೧೦-೭೩-೧) ಎನ್ನುವ ಸೂಕ್ತದವರಿವಿಗೂ ಇರುವ ಶಸ್ತ್ರಮಂತ್ರಗಳಿಗೆ ಮರುತ್ವತೀಯ ಶಸ್ತ್ರವೆಂದು ಹೆಸರು. ಇವುಗಳನ್ನು ಎಂದರೆ **ಚತುರ್ವಿಂಶಾನ್ಮರುತ್ವತೀಯಸ್ಯಾಽತಾನೋಽಸತ್ಸು ಮೇ ಜರಿತಃ ಸಾಭಿನೇಗಃ ಪಿಬಾ ಸೋಮಮಭಿ ಯಮುಗ್ರತರ್ದಃ ಕಯಾ ಶುಭಾ ಸವಯಸಃ ಸನೀಳಾ ಮರುತ್ವಾ೯ ಇಂದ್ರ ವೃಷಭೋ ರಣಾಯ ಜನಿಷ್ಠಾ ಉಗ್ರಃ ಸಹಸೇ ತುರಾಯೇತಿ ಮರುತ್ವತೀಯಂ** (ಐ.ಆ.೫-೧-೧) ಈ ಸೂಕ್ತಗಳು. ಇವುಗಳನ್ನು ಒಂದೆಡೆ ಸೇರಿಸಿ ಪಂಚಮಾರಣ್ಯಕದಲ್ಲಿ ಹೇಳಲಾಗಿದೆ. **ಆ ತ್ವಾರಥಂ**(ಋ.ಸಂ. ೮-೬೮-೧) ಎಂಬ ಸೂಕ್ತದಿಂದ ಪ್ರಾರಂಭಿಸಿ **ಅಸತು ಮೇ ಜರಿತಃ** (ಋ.ಸಂ.೧೦-೨೭-೧) ಎಂಬ ಸೂಕ್ತದವರಿವಿಗೆ ಇರುವ ಮಂತ್ರಗಳನ್ನೆಲ್ಲವನ್ನೂ ಮೂಲಪ್ರಕೃತಿಯಾದ ಚತುರ್ವಿಂಶಾಹದಲ್ಲಿ ಹೇಳಿದ್ದರೂ ಈಗ ಮಹಾವ್ರತಕ್ಕೆ ಸಂಬಂಧಪಟ್ಟ ಚತುರ್ವಿಂಶಾಹವೆಂಬ ದಿನಕ್ರಮದಲ್ಲಿ ಪುನಃ ಹೇಳಲಾಗಿದೆ. ಐಕಾಹಿಕವೆಂಬ ಪ್ರಕೃತಿರೂಪವಾದ ಅಗ್ನಿಷ್ಟೋಮಯಾಗಕ್ಕೆ ಸೇರಿದ ಚತುರ್ವಿಂಶಾಹವೆಂಬ ದಿನದಲ್ಲಿ ಅನೇಕ ಮಂತ್ರಗಳನ್ನು ಪಠಿಸಬೇಕಾಗಿರುವುದರಿಂದ ಆಗ ಅನೇಕ ಲೋಪದೋಷಗಳುಂಟಾಗಬಹುದು. ಅವುಗಳ ಪರಿಹಾರಕ್ಕಾಗಿ ಮತ್ತು ಶಾಂತಿ (ಪ್ರಾಯಶ್ಚಿತ್ತ)ಗಾಗಿ ಈ ಮಹಾವ್ರತಾಹವೆಂಬ ದಿನದ ಕಾರ್ಯಕಲಾಪಗಳಲ್ಲಿಯೂ ಈ ಮಂತ್ರಗಳನ್ನು ಪುನಃ ಪಠಿಸಬೇಕಾಗಿರುವುದು. ಈ ವಿಷಯಗಳನ್ನೆಲ್ಲಾ ತಿಳಿದು ಅದರಂತೆ ಆಚರಿಸುವ ಪುರುಷನು ಮತ್ತು ಯಾವ ಯಜಮಾನನಿಗಾಗಿ ಈ ಮಂತ್ರಗಳನ್ನು ಪಠಿಸುವನೋ ಆ ಯಜಮಾನನೂ ಸಹ ಸಮಸ್ತ ಲೋಪದೋಷರೂಪವಾದ ಪಾಪಾದಿ ಕಲ್ಮಷಗಳನ್ನು ಕಳೆದ ಕೊಂಡು ಪ್ರಾಯಶ್ಚಿತ್ತರೂಪವಾದ ಶಾಂತಿಯನ್ನು(ಸಮಾಧಾನವನ್ನು) ಪಡೆಯುವನು.

ತಾಃ ಪರಾಗ್ವಚನೇನ ಸಪ್ತನವತಿರ್ಭವಂತಿ ಸಾ ಯಾ ನವತಿಸ್ತ್ರಿ ವೃಸ್ತಾಸ್ತ್ರಿಂಶಿನ್ಯೋ ವಿರಾಜೋಽಥ ಯಾಃ ಸಪ್ತಾತಿಯಂತಿ ಯೈವೈಷಾ ಪ್ರಶಂಸಾ ಸಾಪ್ತ್ಯಸ್ಯ ತಸ್ಯಾ ಏವ ॥

ಏತಸ್ಮಿಞ್ಶಸ್ತ್ರೇ ವಿದ್ಯಮಾನಾನಾಮಷ್ಟಾನಾಮೃಚಾಂ ಸಂಖ್ಯಾಂ ಪ್ರಶಂಸತಿ-ಅತ್ರ ಸ್ತೋತ್ರಿಯಾನುರೂಪಯೋಃ ಷಡೃಚಃ। ಷಟ್ಸು ಪ್ರಗಾಥೇಷು ಪ್ರಥಮಾನಿಷ್ಪನ್ನೋಽಷ್ಟಾ (ನ್ನಾ ಅಷ್ಟಾ) ದಶರ್ಚಃ । ಧ್ಯಾಯ್ಯಾಸ್ತಿಸ್ರಃ। "ಅಸತ್ಸು" (ಋ-ಸಂ-ಮಂ ೧೦ ಸೂ ೨೭ ಋ ೧) ಇತಿ ಸೂಕ್ತೇ ಚತುರ್ವಿಂಶತಿಃ। "ಪಿಬಾ ಸೋಮಮ್" (ಋ-ಸಂ-ಮಂ ೬ ಸೂ ೧೭ ಋ-೧) ಇತ್ಯತ್ರ ಪಂಚದಶ। "ಕಯಾ ಶುಭಾ" (ಋ-ಸಂ-ಮಂ-೧-ಸೂ-೧೬೫-ಋ-೧) ಇತ್ಯತ್ರಾಪಿ ಪಂಚದಶ। "ಮರುತ್ವಾँ ಇಂದ್ರ" (ಋ-ಸಂ-ಮ-೧-ಸೂ-೪೭-ಋ೧) ಇತ್ಯತ್ರ ಪಂಚ।"ಜನಿಷ್ಠಾ ಉಗ್ರಃ" (ಋ-ಸಂ-ಮ-೧೦-ಸೂ-೭೩-ಋ-೧) ಇತ್ರತ್ರೈಕಾದಶ। ತಾಃ ಸರ್ವಾ ಮಿಲಿತ್ವಾವೃತ್ತಿರಹಿತೇನ ಪಾಠೇನ ಸಪ್ತಾಧಿಕಾ ನವತಿರ್ಭವಂತಿ। ತತ್ರ ಯಾ ಋಚೋ ನವತಿಸಂಖ್ಯಾಕಾ (ಸ್ತಾ) ಸ್ತ್ರೇಧಾ ವಿಭಕ್ತಾಃ ಸತ್ಯಃ ಪ್ರತ್ಯೇಕಂ ತ್ರಿಂಶತ್ಸಂಖ್ಯಾಯುಕ್ತಾ ವಿರಾಜೋ ಭವಂತಿ। ತ್ರಿಂಶದಕ್ಷರಾ ವಿರಾಟ್ ಇತಿ ಶ್ರುತೇಃ। ಯಾದೃಶೋ ವಿರಾಜಸ್ತಿಸ್ರಃ। ಅಥ ನವತಿಸಂಖ್ಯಾಯಾ ಊರ್ಧ್ವಂ ಯಾ ಋಚಃ ಸಪ್ತಸಂಖ್ಯಾ ಅತಿಯಂತ್ಯತಿರಿಚ್ಯಂತೇ। ಏವಂ ಸತಿ ಸಾಪ್ತ್ಯಸ್ಯ ಸಪ್ತತ್ವಸ್ಯಾತಿರೇಕನಿಮಿತ್ತಾ ಯಾಃ (ಯಾ) ಪ್ರಶಸ್ತಿರೇಷಾ ತಸ್ಯಾ ಏವ (ನವತೇರೇವ) ನ ತ್ವಂತರೇಣ (ತಾಂ) ಪ್ರಶಂಸಾ ಸಂಪದ್ಯತೇ। ಸಪ್ತಾಧಿಕನವತಿರಿತ್ಯೇವಂ ವ್ಯವಹ್ರಿಯಮಾಣತ್ವಾತ್ ॥

ಈ ಶಸ್ತ್ರಮಂತ್ರಗಳಲ್ಲಿರುವ ಎಂಟು ಋಕ್ಕುಗಳನ್ನು ಪ್ರಶಂಸೆಮಾಡುವರು- ಋಕ್ಸಂಖ್ಯೆಗಳು ಈರೀತಿ ಇರುವವು ಸ್ತೋತ್ರಿಯ ಮತ್ತು ಅನುರೂಪಗಳು- ೬ ಋಕ್ಕುಗಳು. ಅನಂತರ ಆರು ಪ್ರಗಾಥಗಳು (ಪ್ರತಿಯೊಂದು ಪ್ರಗಾಥವೂ) ಮೂರು ಋಕ್ಕುಗಳಾಗಿ ಪರಿವರ್ತಿಸಿದರೆ ಹದಿನೆಂಟು ಋಕ್ಕುಗಳಾಗುವವು; ಮೂರು ಧ್ಯಾಯ್ಯಾಮಂತ್ರಗಳು. ಮೂರ. **ಅಸತ್ಸು** ಎಂಬ ಸೂಕ್ತ (ಋ. ಸಂ. ೧೦-೨೭-೧)—ಇಪ್ಪತ್ತುನಾಲ್ಕು ಋಕ್ಕುಗಳು. **ಪಿಬಾ ಸೋಮಂ** ಎಂಬ ಸೂಕ್ತದಲ್ಲಿ (ಋ. ಸಂ. ೬-೧೭-೧) ಹದಿನೈದು ಋಕ್ಕುಗಳು. **ಕಯಾ ಶುಭಾ** ಎಂಬ ಸೂಕ್ತದಲ್ಲಿ (ಋ. ಸಂ. ೧-೧೬೫-೧) ಹದಿನೈದು ಋಕ್ಕುಗಳು; ಮರುತ್ವಾँ ಇಂದ್ರ (ಋ. ಸಂ. ೩-೪೭-೧) ಎಂಬ ಸೂಕ್ತದಲ್ಲಿ ಐದು ಋಕ್ಕುಗಳು; ಜನಿಷ್ಠಾ ಉಗ್ರಃ (ಋ. ಸಂ. ೧೦-೭೩-೧) ಎಂಬ ಸೂಕ್ತದಲ್ಲಿ ಹನ್ನೊಂದು ಋಕ್ಕುಗಳು; ಇವುಗಳೆಲ್ಲವನ್ನೂ ಸೇರಿಸಿದರೆ (೬+೧೮+೩+೨೪+೧೫+೧೫+೫+೧೧=೯೭) ತೊಂಬತ್ತೇಳು ಋಕ್ಕುಗಳಾಗುವವು. ಇವುಗಳಲ್ಲಿ ತೊಂಬತ್ತು ಋಕ್ಕುಗಳನ್ನು ಮೂರುಭಾಗಮಾಡಿದರೆ ಒಂದೊಂದು ಭಾಗದಲ್ಲಿ ಮೂವತ್ತು ಋಕ್ಕುಗಳಿರುವವು. ವಿರಾಟ್‌ಛಂದಸ್ಸಿನಲ್ಲಿ ಮೂವತ್ತು ಅಕ್ಷರಗಳಿರುವುದರಿಂದ ಮೂರು ಭಾಗದಲ್ಲಿ ಪ್ರತಿಯೊಂದೂ ವಿರಾಟ್‌ಛಂದಸ್ಸಿನಂತೆ ಪರಿಗಣಿಸಲ್ಪಡುವುದು. ಇಂತಹ ವಿರಾಟ್‌ಛಂದಸ್ಸುಗಳು ಮೂರು ಇದ್ದಂತಾಯಿತು. ಇವುಗಳನ್ನು ತೊಂಬತ್ತರಲ್ಲಿ ಕಳೆದರೆ ಏಳು ಋಕ್ಕುಗಳು ಮಾತ್ರ ಉಳಿಯುವವು. ಆದ್ದರಿಂದ ಈ ಉಳಿಯುವ ಏಳು ಋಕ್ಕುಗಳನ್ನು ಪ್ರಶಂಸೆಮಾಡುವುದರಿಂದ ತೊಂಬತ್ತುಋಕ್ಕುಗಳನ್ನೂ ಪ್ರಶಂಸೆಮಾಡಿದಂತೆಯೇ ಆಯಿತು.

## ತಾಸ್ತ್ರಿಃ ಪ್ರಥಮಾಯಾ ತ್ರಿರುತ್ತಮಯೈಕಶತಂ ಭವಂತಿ ॥

ಆವೃತ್ತಿವಿಧಾನಪೂರ್ವಕಂ ಕೃತ್ಸ್ನಸಂಖ್ಯಾಂ ಪ್ರಶಂಸತಿ—ತ್ರಿರಾವೃತ್ತಯಾ ಪ್ರಥಮಯಾ ಚೋತ್ತಮಯಾ ಸಹಿತಾಃ ಪೂರ್ವೋಕ್ತಾ ಋಚಃ ಏಕಾಧಿಕಶತಸಂಖ್ಯಾಕಾಃ ಸಂಪದ್ಯಂತೇ ॥

ಈ ತೊಂಬತ್ತೇಳು ಋಕ್ಕುಗಳನ್ನು ಪಠಿಸುವಾಗ ನಿಯಮದಂತೆ ಮೊದಲು ಮತ್ತು ಕೊನೆಯ ಋಕ್ಕುಗಳನ್ನು ಮೂರು ಮೂರಾವರ್ತಿ ಪಠಿಸುವುದರಿಂದ ಒಟ್ಟು ನೂರೊಂದು ಋಕ್ಕುಗಳಿದ್ದಂತಾಯಿತು.

**ಪಂಚಾಂಗುಲಯಶ್ಚತುಷ್ಪರ್ವಾ ದ್ವೇ ಕಕ್ಷಸೀ ದೋಶ್ಚಾಕ್ಷಶ್ಚಾಂಸ ಫಲಕಂ ಚ ಸಾ ಪಂಚವಿಂಶತಿಃ ಪಂಚವಿಂಶಾನೀತರಾಣಿ ಹ್ಯಂಗಾನಿ ತಚ್ಛತಮಾತ್ಮೈಕಶತತಮಃ ॥**

ಉಕ್ತಸ್ಯ ಪ್ರಶಸ್ತ್ಯಸ್ಯ ಸಿದ್ಧಯೇ ಪುರುಷಾವಯವಸಂಖ್ಯಾಸಾಮ್ಯಂ ದರ್ಶಯತಿ– ಏಕಸ್ಮಿನ್ ಹಸ್ತೇ ಪಂಚಸಂಖ್ಯಾಕಾ ಅಂಗುಲಯಃ । ಏಕೈಕಸ್ಯಾಂಗುಲೌ ಚತ್ವಾರಿ ಪರ್ವಾಣಿ । ಪರ್ವಶಬ್ದೋ ಭಾಗವಾಚೀ । ಅಗ್ರಭಾಗೋ ಮಧ್ಯಭಾಗೋ ಮೂಲಭಾಗಸ್ತನ್ಮೂಲಭಾಗಶ್ಚೇತಿ ಚತ್ವಾರೋ ಭಾಗಾಃ। ಯದ್ಯಪ್ಯಂಗುಷ್ಠೇ ಭಾಗತ್ರಯಮೇವೋಪಲಕ್ಷ್ಯತೇ । ತಥಾಪೀತರಸಾಮಾನ್ಯಾಯ ಭಾಗಚತುಷ್ಟಯಂ ಕೃತ್ವಾ ಗಣನೀಯಂ । ಏವಂ ಸರ್ವ್ಯಂಗುಲಿಗತಪರ್ವಸಂಖ್ಯಾ ವಿಂಶತಿಃ ಸಂಪದ್ಯತೇ । ಕಕ್ಷ(ಃ) ಶಬ್ದೇನ ಕಕ್ಷಸ್ಯ ಪಾರ್ಶ್ವದ್ವಯಂ ವಿವಕ್ಷಿತಮ್ । ತತಃ ಕಕ್ಷೇ ದ್ವಿಸಂಖ್ಯಾಸಂಪತ್ತಿಃ । ದೋರ್ಬಾಹುರೇಕಃ । ಏಕೋಽಕ್ಷಶ್ಚಕ್ಷುರಿಂದ್ರಿಯಮೇಕಮ್ । ಅಂಸಫಲಕಮೇಕಮ್ । ಏವಂ ದಕ್ಷಿಣಭಾಗೇ ಪಂಚವಿಂಶತಿಃ ಸಂಪದ್ಯತೇ । ಏವಂ ವಾಮಭಾಗಗತಾನ್ಯಂಗಾನ್ಯಪಿ ಪಂಚವಿಂಶತಿರ್ಭವಂತಿ । ಮಿಲಿತ್ವಾ ಪಂಚಾಶತ್ಸಂಖ್ಯಾ ಸಂಪನ್ನಾ । ಅನೇನೈವ ನ್ಯಾಯೇನ ನಾಭೇರಧಸ್ತಾದುಭಯೋಃ ಪಾದಯೋರಪಿ ಪಂಚಾಶತ್ಸಂಖ್ಯೋನ್ನೇಯಾ । ದಕ್ಷಿಣಪಾದೇ ಪೂರ್ವವದಂಗುಲಿಪರ್ವಸಂಖ್ಯಾ ವಿಂಶತಿರೂರೂ ಜಂಘೇ ದ್ವೇ ಸಂಧಯಸ್ತ್ರಯ ಇತ್ಯೇವಂ ಪಂಚವಿಂಶತಿಃ । ಏವಂ ವಾಮಪಾದೇಽಪಿ ದ್ರಷ್ಟವ್ಯಮ್ । ತತೋ ಹಸ್ತಯೋಃ ಪಾದಯೋಶ್ಚ ಮಿಲಿತ್ವಾ ತತ್ಸರ್ವಮಂಗಜಾತಂ ಶತಂ ಸಂಪದ್ಯತೇ । ಆತ್ಮಾ ಮಧ್ಯದೇಹಃ ಸ ಚೈಕಶತಸಂಖ್ಯಾಪೂರಕಃ ॥

ಈ ನೂರೊಂದು ಋಕ್ಕುಗಳನ್ನು ಪುರುಷಾವಯವಸಂಖ್ಯೆಯ ಸಾಮ್ಯದಿಂದ ವಿವರಿಸುವರು– ಪುರುಷನ ಹಸ್ತದಲ್ಲಿರುವ ಐದು ಬೆರಳುಗಳು, ಎರಡೆರಡು ಬೆರಳುಗಳ ಮಧ್ಯದಲ್ಲಿರುವ ನಾಲ್ಕು ಸಂಧಿಗಳು, (ಅಥವಾ ಪ್ರತಿಯೊಂದು ಬೆರಳುಗಳಲ್ಲಿರುವ ನಾಲ್ಕು ಗಿಣ್ಣುಗಳು) ಮೊಳಕೆ, ಮತ್ತು ಬಾಹುಗಳು ಎರಡೆರಡು ಕಣ್ಣು, ಹೆಗಲು ಇವೆಲ್ಲವೂ ಸೇರಿದರೆ ಇಪ್ಪತ್ತೈದು ಅವಯವಗಳಾಗುವವು. ಇದು ಬಲಭಾಗದ್ದಾಯಿತು. ಇದರಂತೆ ಎಡಭಾಗದ ಅವಯವಗಳೂ ಇಪ್ಪತ್ತೈದು. ಹಾಗೆಯೇ ಎಡಬಲಪಾದಗಳಿಗೂ ಇಪ್ಪತ್ತೈದು ಇಪ್ಪತ್ತೈದರಂತೆ ಒಟ್ಟು ನೂರು ಅವಯವಗಳು ಆಗುವವು. ಇವುಗಳ ಜತೆಗೆ ಶರೀರದ ಮಧ್ಯಭಾಗವನ್ನೂ (trunk) ಸೇರಿಸಿದರೆ ನೂರೊಂದು ಶರೀರಾಂಗಗಳಾಗುವವು.

ಯಚ್ಛತಂ ತದಾಯುರಿಂದ್ರಿಯಂ ವೀರ್ಯಂ ತೇಜೋ ಯಜಮಾನ ಏಕಶತತಮ ಆಯುಷೀಂದ್ರಿಯೇ ವೀರ್ಯೇ ತೇಜಸಿ ಪ್ರತಿಷ್ಠಿತಃ ॥

ಪುನರಪ್ಯಾಯುರಾದಿರೂಪೇಣ ಸಂಖ್ಯಾಮೇವ ಪ್ರಶಂಸತಿ—ತತ್ರ ಯಾ ಶತಸಂಖ್ಯಾ ಸೇಯಮಾಯುರಾದಿರೂಪಾ, ಆಯುಷಃ ಶತಸಂವತ್ಸರಪರಿಮಿತತ್ವಾತ್ । ಆಯುಷಿ ಸ್ಥಿತೇ ಸತೀಂದ್ರಿಯಂ

**ಚಕ್ಷುರಾದಿಕಂ ಪ್ರವರ್ತತೇ । ವೀರ್ಯಂ ಚ ತೇಜಃ ಕಾಂತಿರಿತ್ಯೇತತ್ಸರ್ವಂ ಸುಸ್ಥಿತಂ ಭವತಿ । ತಾಂ ಶತಸಂಖ್ಯಾಮುಪೇಕ್ಷ್ಯ ಯಜಮಾನ ಏಕಶತಸಂಖ್ಯಾಪೂರಕಃ ಸನ್ನಾಯುರಾದಿಷು ಪ್ರತಿಷ್ಠಿತೋ ಭವತಿ ॥**

ಆಯುರಾದಿಗಳ ಉಪಮಾನವನ್ನು ತಿಳಿಸುವರು. ಒಬ್ಬ ಪುರುಷನ ಆಯುಃ ಸಂಮಿತಿಯು ಒಂದು ನೂರುವರ್ಷಗಳು. ಈ ನೂರುವರ್ಷಗಳವರೆಗೆ ಜೀವಿಸುವಾಗ ಆಯುಸ್ಸಿನಜತೆಗೆ ಪುರುಷನಿಗೆ ಚಕ್ಷು [ಕಣ್ಣು] ರಾದಿ ಇಂದ್ರಿಯಗಳು, ವೀರ್ಯ [ಬಲ] ತೇಜಸ್ಸು [ಕಾಂತಿಯು] ಇರುವುದು. ಆಯುಸ್ಸಿನ ಜತೆಗೆ ಇವುಗಳನ್ನು ಸೇರಿಸಿದರೆ ನೂರೊಂದಾಗುವುದು.

**ತಾಸ್ತ್ರಿಷ್ಟುಭಮಭಿ ಸಂಪದ್ಯಂತೇ ತ್ರೈಷ್ಟುಭೋ ಹಿ ಮಧ್ಯಂದಿನಃ ॥**

**" ಜನಿಷ್ಠಾ ಉಗ್ರಃ " (ಋ-ಸ-ಮ-೧೦-ಸೂ-೭೩-ಋ-೧) ಇತ್ಯಾದಿಷ್ವೃಕ್ಷ್ವವಸ್ಥಿತಂ ತ್ರಿಷ್ಟುಪ್-ಛಂದಃ ಪ್ರಶಂಸತಿ—ತಾಃ ಶಸ್ತ್ರಗತಾ ಋಚೋಽಂತಿಮಸೂಕ್ತಗತಂ ತ್ರಿಷ್ಟುಭಾಖ್ಯಂ ಛಂದ ಆಭಿ-ಮುಖ್ಯೇನ ಪ್ರಾಪ್ನುವಂತಿ। ಮಧ್ಯಂದಿನಸವನಸ್ಯ ಯಥೋಕ್ತಶಸ್ತ್ರೋಪೇತಸ್ಯ ತ್ರಿಷ್ಟುಪ್‌ಸಂಬಂಧಿತ್ವಾತ್ " ತ್ರೈಷ್ಟುಭಂ ಮಾಧ್ಯಂದಿನಂ ಸವನಮ್" ಇತ್ಯಾದಿಶ್ರುತ್ಯಂತರಪ್ರಸಿದ್ಧಿದ್ಯೋತನಾರ್ಥೋ ಹಿ ಶಬ್ದಃ॥**

ಮೇಲೆ ಹೇಳಿದ [ಶಸ್ತ್ರಸಂಬಂಧವಾದ] ಋಕ್ಕುಗಳೆಲ್ಲವನ್ನೂ ಪರಿವರ್ತಿಸಿದರೆ ತ್ರಿಷ್ಟುಪ್‌ಛಂದಸ್ಸುಗಳೆಂದು ಪರಿಗಣಿಸಲ್ಪಡುವವು. **ತ್ರೈಷ್ಟುಭಂ ಮಾಧ್ಯಂದಿನಂ ಸವನಂ** ಎಂದು ಹೇಳಿರುವ ವಿಧಿವಾಕ್ಯದಂತೆ [ಕೊನೆಯ ಸೂಕ್ತದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು] ಇವುಗಳೆಲ್ಲವೂ ಮಾಧ್ಯಂದಿನಸವನದಲ್ಲಿ ಉಪಯೋಗಿಸಲ್ಪಡಬೇಕಾದ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಾಗಿರುವವು.

---

*English Translation*

---

1. He recites the hymn, asat su me garitah sadhivegh (Rv. x. 27, 1), (and in it word) satyadhvritam, the destroyer of the truth. Verily, that day is truth, and as endowed with, the word satya, truth, the form of this day is perfect.

2. That hymn is composed by Vasukra. Verily, Vasukra is Brahman, and that day is Brahman. Thus he obtains Brahman by means of Brahman.

3. Here they say: ' why then is that Marutvatiya hymn completed by the hymn of Vasukra ?.' Surely because no other Rishi but Vasukra brought

out a Marutvatiya hymh, or divided it properly, Therefore that Marutvatiya hymn is completed by the hymn of Vasukra.

4. That hymn, asat sume, is not definitely addressed to any deity, and is therefore supposed to be addressed to Pragapati. Verily, pragapati is indefinite, and therefore the hymn serves to win Pragapati.

5. Once in the hymn (Rv. x. 27,22) he defines Indra (indraya sunvat); therefore it does not fall off from its from, as connected with Indra.

6. He recites the hymn (Rv. VI. 17, 1) piba somam abhi yam ugra tardah.

7. In the verse urvam gavyam mahi grinana indra the word mahi, great, occurs. Endowed with the word mahat, the form of this day is perfect.

8. That hymn is composed by Bharadvaga and Bharadvaga was he who knew most, who lived longest, and performed the greatest austerities among the Rishis, and by this hymn he drove away evil. Therefore if he recites the hymn of Bharadvaga then, after having driven away evil, he becomes learned, long-lived, and full, of austerities.

9. He recites the hymn kaya subha savayasah sanilah(Rv. I. 165,1).

10. In the verse a sasate prati haryanty uktha (Rv.I.165,4) the word unktha occurs. Verily, that day (the mahavrata) is unktha(hymn). Endowed with the word uktha, the form of this day becomes perfect.

11. That hymn is called Kayasubhiya. Verily, that hymn which is called Kayasubhiya, is mutual understanding and it is lasting. By means of it Indra, Agastya, and the Maruts came to a mutual understanding. Therefore, if he recites the Kayasubhiya hymn, it serves for mutual understanding.

12. The same hymn is also long life. Therefore, if the sacrificer is dear to the Hotri, let him recite the Kayasubhiya hymn for him.

13. He recites the hymn marutvan indra vrishabo ranaya (Rv. III. 47, 1).

14. In it the words indra vrishabha (powerful) occur. Verily, powerful is a form of Indra, this day belongs to Indra, and this is the perfect form of that day.

15. That hymn is composed by Visvamitra. Verily, Visvamitra was the friend (mitra) of all (visva).

16. Everybody is the friend of him who knows this, and for whom a Hotri priest who knows this, recites this hymn.

17. The next hymn, ganishtha ugrah sahase turaya (Rv. I. 73, 1), forms a Nividdhana, and, according to the one-day (ekaha) ceremonial, is perfect in form. On that day much is done now and then which has to be hidden, and has to be atoned for (by recitation of hymns). Atonement is rest, the one-day sacrifice. Therefore at the end of the year (on the last day but one of the sacrifice that lasts a whole year) the sacrificers rest on this atonement as their rest.

He who knows this rests firm, and they also for whom a Hotri priest who knows this, recites this hymn.

18. These, if recited straight on, are ninety-seven verses. The ninety are three Virag, each consisting of thirty, and then the seven verses which are over. Whatever is the praise of the seven, is the praise of ninety also.

19. By repeating the first and last verses three times each, they become one hundred and one verses.

20. There are five fingers, of four joints each, two pits (in the elbow and the arm), the arm, the eye, the shoulder-blade ; this makes twenty-five. The other three parts have likewise twenty-five each. That makes a hundred and the trunk is the one hundred and first.

21. Hundred is life, health, strengh, brightness. The sacrificer as the one hundred and first rests in life, health, strengh, and brightness.

22. These verses become Trishtubh, for the noondaylibation consists of Trishtubh verses.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ದ್ವಿತೀಯಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ಮಾಧವೀಯ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯದ ಪ್ರಥಮಾರಣ್ಯಕದ
ದ್ವಿತೀಯಾಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು



## ಅಥ ಪ್ರಥಮಾರಣ್ಯಕೇ ದ್ವಿತೀಯಾಧ್ಯಾಯೇ ತೃತೀಯಃ ಖಂಡಃ

### ಪ್ರಥಮಾರಣ್ಯಕದ ಎರಡನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

ತದಾಹುಃ ಕಿಂ ಪ್ರೇಂಖಸ್ಯ ಪ್ರೇಂಖತ್ವಮಿತ್ಯಯಂ ವೈ ಪ್ರೇಂಖೋ ಯೋಽಯಂ ಪವತ ಏಷ ಹ್ಯೇಷು ಲೋಕೇಷು ಪ್ರೇಂಖತ ಇತಿ ತತ್ಪ್ರೇಂಖಸ್ಯ ಪ್ರೇಂಖತ್ವಮ್ ||

ಮಾಧ್ಯಂದಿನಸವನೇ ಮರುತ್ವತೀಯಂ ಶಸ್ತ್ರಂ ನಿರೂಪಿತಮ್ । ಅಥ ನಿಷ್ಕೇವಲ್ಯ-ಶಸ್ತ್ರಂ ನಿರೂಪಣೀಯಮ್ । ತಸ್ಯ ಚ ಪ್ರೇಂಖಮಾರುಹ್ಯ ಶಂಸನೀಯತ್ವಾದಾದಾ ಪ್ರೇಂಖಂ ವಿಧಾತುಂ ಪ್ರಶ್ನೋತ್ತರಾಭ್ಯಾಂ ತನ್ನಿರ್ವಚನಂ ದರ್ಶಯತಿ—ತ(ತ್ರ)ತ್ರ ನಿಷ್ಕೇವಲ್ಯಶಂಸನಾರ್ಥೇ ಪ್ರೇಂಖೇ ಕೇಚನ ಜಿಜ್ಞಾಸವಃ ಪೃಚ್ಛಂತಿ, ಲೋಕೇ ಪ್ರೇಂಖಶಬ್ದೇನ ದೋಲಾಽಭಿಧೀಯತೇ ತಸ್ಯ ಪ್ರೇಂಖಸ್ಯ ತನ್ನಾಮ ಕಥಂ ಸಂಪನ್ನಮಿತಿ । ಅಯಂ ವಾ ಇತ್ಯಾದಿಕಮಭಿಜ್ಞಾನಾ-ಮುತ್ತರಮ್ । ಯೋಽಯಂ ವಾಯುರಂತರಿಕ್ಷೇ ಪವತೇ ಸಂಚರತ್ಯಯಮೇವ ಪ್ರೇಂಖ-ಶಬ್ದವಾಚ್ಯಃ । ಯಸ್ಮಾದೇಷ ವಾಯುರೇಷು ಪೃಥಿವ್ಯಾದಿಷು ಲೋಕೇಷು ಪ್ರಕರ್ಷೇಣ ಚಲತಿ ತಸ್ಮಾದ್ವಾಯುವದಂತರಿಕ್ಷೇ ಪವತೇ ಸಂಚರತಿ । ಪ್ರಕರ್ಷೇಣೇಂಖತೇ ವಲತ ಇತಿ ವ್ಯುತ್ಪತ್ತ್ಯಾ ಪ್ರೇಂಖನಾಮ ಸಂಪನ್ನಮ್ ||

ಮಾಧ್ಯಂದಿನಸವನದಲ್ಲಿ ಪಠಿಸಬೇಕಾದ ಮರುತ್ವತೀಯಶಸ್ತ್ರವನ್ನು ಹೇಳಿದ್ದಾಯಿತು. ಈಗ ನಿಷ್ಕೇವಲ್ಯಶಸ್ತ್ರವನ್ನು ಹೇಳಬೇಕಾಗಿರುವುದು. ಈ ನಿಷ್ಕೇವಲ್ಯಶಸ್ತ್ರವನ್ನು ಹೋತೃವು ಪಠಿಸುವ ಕಾಲದಲ್ಲಿ ಒಂದು ಉಯ್ಯಾಲೆಯಂತಿರುವ ಹಲಗೆಯ ಮೇಲೆ ಕುಳಿತುಕೊಂಡು ತೂಗಿಕೊಳ್ಳುತ್ತಾ ಶಸ್ತ್ರಮಂತ್ರವನ್ನು ಪಠಿಸಬೇಕು. ಈ ಉಯ್ಯಾಲೆಗೆ ಪ್ರೇಂಖವೆಂದು ಹೆಸರು. ಈ ಶಬ್ದದ ನಿರ್ವಚನವನ್ನು ಇಲ್ಲಿ ತಿಳಿಸುವರು—ನಿಷ್ಕೇವಲ್ಯಶಸ್ತ್ರವನ್ನು ಪಠಿಸುವಾಗ ಪ್ರೇಂಖವಿಷಯವಾಗಿ ಕೆಲವರು ಜಿಜ್ಞಾಸುಗಳು ಈ ರೀತಿ ಕೇಳುತ್ತಾರೆ—ಲೋಕವ್ಯವಹಾರದಲ್ಲಿ ಪ್ರೇಂಖವೆಂದರೆ ಡೋಲಾ (ತೂಗಿಕೊಳ್ಳುವ) ಉಯ್ಯಾಲೆ ಎಂದರ್ಥವು ವಾಯುವು ಅಂತರಿಕ್ಷದಲ್ಲಿ ಯಾವಾಗಲೂ ಬೀಸುತ್ತಿರುವುದರಿಂದ ವಾಯುವು ಪ್ರೇಂಖಶಬ್ದವಾಚ್ಯನು. ಏಕೆಂದರೆ ವಾಯುವು (ಪ್ರ=ಚೆನ್ನಾಗಿ, ಈಂಖತೇ=ಸಂಚರಿಸುವನು) ಯಾವಾಗಲೂ ಚೆನ್ನಾಗಿ ಇಲ್ಲಿಂದಲ್ಲಿಗೆ ಸಂಚರಿಸುತ್ತಿರುವುದರಿಂದ(ಬೀಸುತ್ತಿರುವುದರಿಂದ) ವಾಯುವಿಗೆ ಪ್ರೇಂಖವೆಂದು ಹೆಸರು ರೂಢಿಯಲ್ಲಿ ಬಂದಿರುವುದು. ಲೋಕವ್ಯವಹಾರದಲ್ಲಿ ಪ್ರೇಂಖವೆಂದರೆ ತೂಗಾಡುತ್ತಿರುವ ಉಯ್ಯಾಲೆಯು (ಹಲಗೆಯು).

**ಏಕಂ ಫಲಕಂ ಸ್ಯಾದಿತ್ಯಾಹುರೇಕಧಾ ಹ್ಯೇವಾಯಂ ವಾಯುಃ ಪವತ್ಯೇಽಸ್ಯ ರೂಪೇಣೇತಿ ॥**

**ನಿರ್ವಚನೇನ ಪ್ರೇಂಖಂ ಪ್ರಶಸ್ಯ ತನ್ನಿಷ್ಪಾದಕೇ ಫಲಕೇ ಪೂರ್ವಪಕ್ಷತ್ವೇನ ಪರಕೀಯಮತಮುಪನ್ಯಸ್ಯತಿ—ಅಂತರಿಕ್ಷೇ ವಾಯೋರೇಕೇನೈವ ಪ್ರಕಾರೇಣ ಸಂಚಾರಾದಸ್ಯ ವಾಯೋಃ ಸ್ವರೂಪೇಣ ಪ್ರೇಂಖೋ ನಿಷ್ಪಾದನೀಯ ಇತ್ಯಭಿಪ್ರೇತ್ಯ ಕೇಚಿದೇಕಮೇವ ಫಲಕಮತ್ರ ಭವೇದಿತಿ ॥**

ಪ್ರೇಂಖಶಬ್ದದ ನಿರ್ವಚನವನ್ನು ಹೇಳಿ ಈಗ ಈ ಶಬ್ದದಿಂದ ನಿಷ್ಪನ್ನವಾದ ಹಲಗೆಯ ವಿಷಯದಲ್ಲಿ ಕೆಲವರು ಹೇಳುವ ಪೂರ್ವಪಕ್ಷವನ್ನು ವಿವರಿಸುವರು—ಅಂತರಿಕ್ಷದಲ್ಲಿ ವಾಯುವು ಒಂದು ಮುಖವಾಗಿ ಮಾತ್ರ ಬೀಸುವುದು. ಅದಕ್ಕನುಸಾರವಾಗಿ ಒಂದು ಹಲಗೆಯನ್ನು ಮಾತ್ರ ಉಪಯೋಗಿಸಬೇಕು. ಹೀಗಿರುವಲ್ಲಿ ಎರಡು ಹಲಗೆಯನ್ನು ಉಪಯೋಗಿಸುವುದು ಸರಿಯೇ ? ಎಂದು ಕೆಲವರು ಆಕ್ಷೇಪಿಸುವರು.

**ತತ್ತನ್ನಾಽಽದೃತ್ಯಮ್ ॥**

ಪೂರ್ವಪಕ್ಷಂ ನಿರಾಚಷ್ಟೇ—ತಸ್ಮಿನ್ಪ್ರೇಂಖೇ ತದೇಕಫಲಕಮುಕ್ತಂ ನೈವಾಽಽದರಣೀಯಮ್ ॥

ಈ ಅಭಿಪ್ರಾಯವು ಸರಿಯಲ್ಲ ಎಂದರೆ ಒಂದು ಹಲಗೆಯನ್ನು ಮಾತ್ರ ಉಪಯೋಗಿಸಬೇಕೆಂಬ ಅಭಿಪ್ರಾಯವು ಸರಿಯಲ್ಲ.

**ತ್ರೀಣಿ ಫಲಕಾನಿ ಸ್ಯುರಿತ್ಯಾಹುಸ್ತ್ರಯೋ ವಾ ಇಮೇ ತ್ರಿವೃತೋ ಲೋಕಾ ಏಷಾಂ ರೂಪೇಣೇತಿ ॥**

**ಪುನರಪಿ ಪೂರ್ವಪಕ್ಷತ್ವೇನ ಮತಾಂತರಮುಪನ್ಯಸ್ಯತಿ—ಪೃಥಿವ್ಯಂತರಿಕ್ಷಂ ದ್ಯೌರಿತ್ಯೇವಮೇತೇ ತ್ರಯಃ ಪ್ರಸಿದ್ಧಾ ಲೋಕಾಸ್ತೇ ಚ ತ್ರಿವೃತ ಉಪರ್ಯಧೋಮಧ್ಯಭಾವೇನ**

**ತ್ರೇಧಾ ವರ್ತಂತೇ । ಏಷಾಂ ಪೃಥಿವ್ಯಾದೀನಾಂ ರೂಪೇಣ ನಿಷ್ಪಾದಯಿತುಂ ತ್ರೀಣಿ ಫಲ-ಕಾನಿ ಭವೇಯುರಿತ್ಯೇವಮನ್ಯೇ ಪೂರ್ವಪಕ್ಷಿಣ ಆಹುಃ ॥**

ಮತ್ತೆ ಕೆಲವರು ಹೀಗೆ ಹೇಳುವರು—ಲೋಕಗಳು ಎಂದರೆ ಪೃಥಿವೀ ಅಂತರಿಕ್ಷ ಸ್ವರ್ಗ ಎಂದು ಮೂರು ಲೋಕಗಳು ಒಂದರ ಮೇಲೊಂದಿರುವವು. ಅವುಗಳ ಸಂಕೇತವಾಗಿ ಮೂರು ಹಲಗೆಗಳನ್ನು ಉಪಯೋಗಿಸಬೇಕು ಎಂದೇ ಹೇಳುವರು.

ತತ್ತನ್ನಾಽಽದೃತ್ಯಮ್ ॥

**ಏತಮಪಿ ಪಕ್ಷಂ ನಿರಾಚಷ್ಟೇ—ಪೂರ್ವವದ್ಯೋಜ್ಯಮ್ ॥**

ಈ ಅಭಿಪ್ರಾಯವೂ ಸರಿಯಲ್ಲ ಇದನ್ನು ಒಪ್ಪಕೂಡದು.

ದ್ವೇ ಏವ ಸ್ಯಾತಾಂ ದ್ವೌ ವಾ ಇಮೌ ಲೋಕಾವದ್ಧಾತಮಾವಿವ ದೃಶ್ಯೇತೇ ಯ ಉ ಏನೇ ಅಂತರೇಣಾಕಾಶಃ ಸೋಂತರಿಕ್ಷಲೋಕ-ಸ್ತಸ್ಮಾದ್ದ್ವೇ ಏವ ಸ್ಯಾತಾಮ್ ॥

**ಸಿದ್ಧಾಂತತ್ವೇನ ಸ್ವಮತಂ ದರ್ಶಯತಿ—ಪ್ರೇಂಖಾರ್ಥಫಲಂ ದ್ವೇ ಏವ ಫಲಕೇ ಸಂಪಾದನೀಯೇ, ನ ತ್ವೇಕಂ ನಾಪಿ ತ್ರೀಣಿ । ದ್ವಾವೇವ ಪೃಥಿವೀ ದ್ಯೌಶ್ಚೇತೀಮೌ ಲೋಕಾವದ್ಧಾ-ತಮಾವಿವಾಸ್ಮಾಕಮತಿಶಯೇನ ಪ್ರತ್ಯಕ್ಷಾವಿವ ದೃಶ್ಯೇತೇ। ಭೂಲೋಕವರ್ತಿನಾಂ ಮನುಷ್ಯಾದೀನಾಂ ದ್ಯುಲೋಕವರ್ತಿನಾಂ ಸೂರ್ಯಚಂದ್ರಾದೀನಾಂ ಚ ದೃಶ್ಯಮಾನತ್ವಾತ್ । ಯಸ್ತು ದ್ವಯೋರೇತಯೋ-ರ್ಮಧ್ಯಮಾಕಾಶಃ ಪ್ರಾಣಿದರ್ಶನರಹಿತಃ ಸೋಽಂತರಿಕ್ಷಲೋಕ ಇತ್ಯುಚ್ಯತೇ । ತಸ್ಮಾದಂತರಿಕ್ಷಸ್ಯ ನಿಷ್ಪ್ರಯೋಜನತ್ವಾದಿತರಲೋಕದ್ವಯಾನುಸಾರೇಣ ದ್ವೇ ಏವ ಫಲಕೇ ಭವೇತಾಮ್ ॥**

ಈಗ ಈ ಭಿನ್ನಾಭಿಪ್ರಾಯಗಳನ್ನು ಪರಿಹರಿಸಿ ಸಿದ್ಧಾಂತವನ್ನು ತಿಳಿಸುವರು. ಪ್ರೇಂಖಾರ್ಥವಾಗಿ ಎರಡು ಹಲಗೆಗಳನ್ನು ಉಪಯೋಗಿಸಬೇಕು. ಒಂದನ್ನಾಗಲಿ, ಮೂರು ಹಲಗೆಗಳನ್ನಾಗಲಿ ಅಲ್ಲ. ಏಕೆಂದರೆ ಪೃಥಿವೀ ಮತ್ತು ಸ್ವರ್ಗ ಲೋಕಗಳ ಎಂದರೆ ಎರಡು ಲೋಕಗಳ ಸಂಕೇತಾರ್ಥವಾಗಿ ಎರಡು ಹಲಗೆಗಳನ್ನು ಮಾತ್ರ ಉಪಯೋಗಿಸಬೇಕು. ಈ ಎರಡು ಲೋಕಗಳೂ ನಮಗೆ ಪ್ರತ್ಯಕ್ಷವಾಗಿ ಕಾಣಿಸುತ್ತಿರುವವು. ಪೃಥಿವಿಯಲ್ಲಿ ಎಂದರೆ ಭೂಮಿಯ ಮೇಲೆ ಜನರಿರುವುದು ಎಲ್ಲರಿಗೂ ತಿಳಿದೇ ಇದೆ. ಸ್ವರ್ಗದಲ್ಲಿ ಸೂರ್ಯಚಂದ್ರರು ಬೆಳಗುತ್ತಿರುವುದೂ ಎಲ್ಲರಿಗೂ ಕಾಣಿಸುತ್ತಲೇ ಇರುವುದು ಆದರೆ ಅಂತರಿಕ್ಷವು ಇವೆರಡು ಲೋಕಗಳಿಗೂ ಮಧ್ಯದಲ್ಲಿರುವ ಪ್ರದೇಶವು ಮಾತ್ರ ಇಲ್ಲಿ ಯಾವ ಪ್ರಾಣಿಗಳೂ ಇರುವುದಿಲ್ಲ. ಈ ಅಂತರಿಕ್ಷವು ಎಲ್ಲರಿಗೂ (ಎಲ್ಲಪ್ರಾಣಿಗಳಿಗೂ ವಾಸಿಸಲು) ನಿಷ್ಪ್ರಯೋಜನವು. ಆದ್ದರಿಂದ ಭೂಮಿ ಮತ್ತು ಸ್ವರ್ಗ ಎಂಬ ಎರಡು ಲೋಕಗಳ ಪ್ರತೀಕವಾಗಿ ಎರಡು ಹಲಗೆಗಳನ್ನು ಮಾತ್ರ ಉಪಯೋಗಿಸಬೇಕು.

ಔದುಂಬರೇ ಸ್ಯಾತಾಮೂರ್ಗ್ವಾ ಅನ್ನಾದ್ಯಮುದುಂಬರ ಊರ್ಜೋ-ನ್ನಾದ್ಯಸ್ಯಾವರುದ್ಧ್ಯೈ ॥

ತತ್ಫಲಕನಿಷ್ಪಾದನಾರ್ಥಂ ವೃಕ್ಷವಿಶೇಷಂ ವಿಧತ್ತೇ—ಊರ್ಕ್‌ಶಬ್ದೋ ರಸವಾಚೀ। ಉದುಂಬರಶ್ಚೋರ್ಗ್ರಸ ಇವ ತತ್ಫಲೇಷು ಮಾಧುರ್ಯರಸತ್ವಸ್ಯ ವಿದ್ಯಮಾನತ್ವಾತ್। ತೇಷಾಂ ಚ ಪಕ್ವಫಲಾನಾಂ ಭಕ್ಷ್ಯತ್ವೇನ ಫಲಾನಾಮುಪದಂಶತ್ವೇನಾತ್ತುಂ ಯೋಗ್ಯಮನ್ನಮುದುಂಬರಃ। ಅತೋ ರಸಸ್ಯಾತ್ತುಂ ಯೋಗ್ಯಸ್ಯಾನ್ನಸ್ಯಚ ಪ್ರಾಪ್ತ್ಯೈ ತೇ ಫಲಕೇ ಔದುಂಬರೇ ಭವತಃ॥

ಈ ಹಲಗೆಯು ಯಾವ ಮರ (ವೃಕ್ಷ)ದ್ದಾಗಿರಬೇಕು ಎಂಬ ವಿಷಯವನ್ನು ತಿಳಿಸುವರು. ಈ ಹಲಗೆಗಳು ಉದುಂಬರ ವೃಕ್ಷದಿಂದ ಮಾಡಲ್ಪಟ್ಟಿರಬೇಕು. ಏಕೆಂದರೆ ಊರ್ಕ್ ಎಂದರೆ ರಸವು. ಈ ವೃಕ್ಷದ ರಸವು ಮಧುರವಾಗಿರುವುದು. ಇದರ ಫಲವೂ ತಿನ್ನಲು ಯೋಗ್ಯವಾಗಿರುವುದು. ಆದ್ದರಿಂದ ಅನ್ನ(ಆಹಾರ)ಮತ್ತು ರಸಗಳ ಸಂಕೇತವಾದ ಈ ಉದುಂಬರವೃಕ್ಷದಿಂದ ಈ ಎರಡು ಹಲಗೆಗಳನ್ನು ನಿರ್ಮಿಸಿ ಉಪಯೋಗಿಸಬೇಕು.

ಮಧ್ಯತ ಉದ್ಧೃತೇ ಸ್ಯಾತಾಂ ಮಧ್ಯತೋ ವೈ ಪ್ರಜಾ ಅನ್ನಂ ಧಿನೋತಿ
ಮಧ್ಯತ ಏವ ತದನ್ನಾದ್ಯಸ್ಯ ಯಜಮಾನಂ ದಧಾತಿ ॥

ತಯೋಃ ಫಲಕಯೋರ್ಲಂಬಮಾನತಾಂ ವಿಧತ್ತೇ—ತೇ ಫಲಕೇ ಯಥಾ ಭೂಮಿಂ ನ ಸ್ಪೃಶತೋ ಯಥಾ ಚೋಪರಿತನಂ ವೀತಯನಾಮಕಂ ತಿರ್ಯಕ್ಕಾಷ್ಠಂ ನ ಸ್ಪೃಶತಸ್ತಥೈವ ಭೂಮಿ-ವೀತಯಯೋರ್ಮಧ್ಯದೇಶ ಉದ್ಧೃತೇ ಊರ್ಧ್ವಂ ಭರಣಂ ಪ್ರಾಪ್ತೇ ಭರೇಷಿತಾವ್,(ಭವೇತಾಂ) ಭುಜ್ಯಮಾನಮನ್ನಂ ಮಧ್ಯ ಏವ ಪ್ರಜಾಃ ಪ್ರಾಣನಿ (ಪ್ರೀಣಯತಿ), ತತ್ತೇನೋದ್ಧರಣೇನಾನ್ನಾದ್ಯಸ್ಯ ಭೋಗ್ಯಸ್ಯ ಮಧ್ಯ ಏವ ಯಜಮಾನಂ ಸ್ಥಾಪಯತಿ ॥

ಈ ಹಲಗೆಯನ್ನು ತೂಗಾಡುತ್ತಿರುವಂತೆ ಹಗ್ಗಗಳಿಂದ ಕಟ್ಟಿರುವರು. ಈ ಹಗ್ಗಗಳಿಂದ ಹಲಗೆಗಳು ಭೂಮಿಯನ್ನು ತಾಕುವುದಿಲ್ಲ, ಮೇಲೆ ಕಟ್ಟಿರುವ ತೊಲೆಗೂ ತಗಲುವುದಿಲ್ಲ. ಅಂತರಾಳದಲ್ಲಿ ಹಿಂದಕ್ಕೂ ಮುಂದಕ್ಕೂ ತೂಗಾಡುತ್ತಿರುವುದು. ಪುರುಷನ ಶರೀರದಲ್ಲಿ ಭುಂಜಿಸಿದ ಅನ್ನಾದ್ಯಾಹಾರವು ಶರೀರಮಧ್ಯದಲ್ಲಿ ಎಂದರೆ ಉದರದಲ್ಲಿರುವುದು. ಅದರಂತೆ ಭೂಮಿಯ ಸಂಪರ್ಕವಿಲ್ಲದ ಈ ಹಲಗೆಯು ಯಜ್ಞಮಾಡುವ ಯಜಮಾನನಿಗೆ ಭೋಗ್ಯವಸ್ತುಗಳನ್ನು ಒದಗಿಸಿಕೊಡುವುದು.

ಉಭಯ್ಯೋ ರಜ್ಜವೋ ಭವಂತಿ ದಕ್ಷಿಣಾಶ್ಚ ಸವ್ಯಾಶ್ಚ ದಕ್ಷಿಣಾ ವಾ
ಏಕೇಷಾಂ ಪಶೂನಾಂ ರಜ್ಜವಃ ಸವ್ಯಾ ಏಕೇಷಾಂ ತದ್ಯದುಭಯ್ಯೋ
ರಜ್ಜವೋ ಭವಂತ್ಯುಭಯೇಷಾಂ ಪಶೂನಾಮಾಪ್ತ್ಯೈ ॥

ಪ್ರೇಂಖಬಂಧನಾಯ ರಜ್ಜುದ್ವಯಂ ವಿಧತ್ತೇ—ದಕ್ಷಿಣಹಸ್ತೇನ ನಿರ್ಮಿತಾ ರಜ್ಜವಃ ಪ್ರದಕ್ಷಿಣಾವೃತೋ ವಾಮಹಸ್ತೇನ ನಿರ್ಮಿತಾಃ ಸವ್ಯಾವೃತ ಏವಮುತ್ರೋಭಯವಿಧಾ ರಜ್ಜವೋ ಭವೇಯುಃ। ಲೋಕೇಽಪಿ ಕೇಚಿತ್ಪಶವೋ ದಕ್ಷಿಣಾವೃದ್ಭಿರ್ಬಧ್ಯಂತೇ ಕೇಚಿತ್‌ಸವ್ಯಾವೃದ್ಭಿಃ। ತದು-ಭಯವಿಧಪಶುಪ್ರಾಪ್ತ್ಯರ್ಥಂ ದ್ವಿವಿಧಾ ರಜ್ಜವೋ ಭವೇಯುಃ॥

ಈ ಹಲಗೆಗಳನ್ನು ತೂಗಾಡುವಂತೆ ಕಟ್ಟಲು ಎರಡು ವಿಧವಾದ ಹಗ್ಗಗಳಿರುವವು. ಹಗ್ಗಗಳನ್ನು ಎಡಕ್ಕೂ, ಬಲಕ್ಕೂ ತಿರುಚಿ ಹೊಸೆಯುವರು. ಚೆನ್ನಾಗಿ ಹೊಸೆದು ಕಟ್ಟಿರುವ ಹಗ್ಗವು ಎಡಭಾಗದಲ್ಲಿ ಒಂದೂ ಬಲಭಾಗದಲ್ಲಿ ಒಂದೂ ಇರುವವು.

ಕೆಲವು ಪಶುಗಳನ್ನು ಬಲಭಾದಲ್ಲಿರುವ ಹಗ್ಗದಲ್ಲಿ ಕಟ್ಟುವಂತೆಯೂ ಕೆಲವು ಪಶುಗಳನ್ನು ಎಡಭಾಗದಲ್ಲಿರುವ ಹಗ್ಗದಲ್ಲಿ ಕಟ್ಟುವಂತೆಯೂ ಕಟ್ಟುವರು. ಈ ಎರಡು ವಿಧವಾದ ಹಗ್ಗಗಳಿಂದ ಹಲಗೆಯನ್ನು ಕಟ್ಟುವುದರಿಂದ ಯಜಮಾನನಿಗೆ ಎರಡು ವಿಧವಾದ ಪಶುಗಳೂ ಲಭಿಸುವವು.

**ದಾರ್ಭ್ಯಃ ಸ್ಯುರ್ದರ್ಭೋ ವಾ ಓಷಧೀನಾಮುಪಹತಪಾಪ್ಮಾ ತಸ್ಮಾದ್ದಾರ್ಭ್ಯಃ ಸ್ಯುಃ ||**

**ತಾಸಾಂ ರಜ್ಜೂನಾಂ ಕಾರಣಂ ದ್ರವ್ಯಂ ವಿಧತ್ತೇ—ಓಷಧೀನಾಂ ತೃಣವಿಶೇಷಾಣಾಂ ಮಧ್ಯೇ ದರ್ಭಸ್ಯ ಶುದ್ಧಿಹೇತುತ್ವಾತ್ಪಾಪರಾಹಿತ್ಯಮ್, ‘ ಪವಿತ್ರಂ ವೈ ದರ್ಭಾಃ ’ ಇತಿ ಶ್ರುತ್ಯಂತರಾತ್ । ತಸ್ಮಾದ್ರಜ್ಜವೋ ದರ್ಭೇಣ ನಿಷ್ಪಾದನೀಯಾಃ। ಏತತ್ಸರ್ವಂ ಪಂಚಮೇ ಸಂಗೃಹೀತಮ್—‘ರಜ್ಜೂಭ್ಯಾಮೂರ್ಧ್ವಮುದಯತಿ ದಕ್ಷಿಣತೋ ದಕ್ಷಿಣಯೋತ್ತರತಃ ಸವ್ಯಯಾ ದಾರ್ಭ್ಯೇ ತ್ರಿಗುಣೇ ಸ್ಯಾತಾಮ್’ (ಐ-ಆ-೫. ಅ. ೧ ಖ. ೩) ಇತಿ । ಯದ್ಯಪಿ ದಕ್ಷಿಣೋತ್ತರಭಾಗಯೋರ್ದ್ವೇ ಏವ ರಜ್ಜೂ ತಥಾಽಪ್ಯೇಕೈಕಸ್ಯಾಂ ತ್ರಿಗುಣತ್ವಾತ್ ಷಟ್‌ಸಂಖ್ಯಾಕಾನವಯವಾನಭಿಪ್ರೇತ್ಯ ರಜ್ಜವ ಇತಿ ಬಹುವಚನಮ್ ||**

ಈ ಹಗ್ಗಗಳನ್ನು ದರ್ಭೆಹುಲ್ಲುಗಳಿಂದ ಹೊಸೆದು ನಿರ್ಮಿಸಿರಬೇಕು. ದರ್ಭೆಯು ಶುದ್ಧಿಕಾರಕವು, ಪವಿತ್ರವು. **ಪವಿತ್ರಂ ವೈದರ್ಭಾಃ** ಎಂದು ಶ್ರುತಿಯಲ್ಲಿ ಹೇಳಿರುವುದು. ಈ ವಿಷಯವು ಪಂಚಮಾರಣ್ಯಕದಲ್ಲಿ ಹೇಳಲಾಗಿರುವುದು. (ಐ–ಆ–೫–೧–೩) ಇಲ್ಲಿ ಎರಡು ಹಗ್ಗಗಳನ್ನು ಉಪಯೋಗಿಸಿದ್ದರೂ ಪ್ರತಿಯೊಂದು ಹಗ್ಗವನ್ನೂ ಮೂರು ಎಳೆಗಳಿಂದ ಹೊಸೆದಿರುವುದರಿಂದ ಆರು ಎಳೆಗಳಿದ್ದಂತಾಯಿತು. ಆದ್ದರಿಂದಲೆ ಇಲ್ಲಿ ಹಗ್ಗಗಳು ಎಂದು ಬಹುವಚನ ಪ್ರಯೋಗವಿರುವುದು.

---

*English Translation*

---

1. They say ‘ What is the meaning of prenkha, swing ’ Verily, he is the swing, who blows (the wind). He indeed goes forward (pra+inkhate) in these worlds, and that is way the swing is called prenkha.

2. Some say, that there should be one plank, because the wind blows in one way, and it should be like the wind.

3. That is not to be regarded.

4. Some say, there should be three planks, because there are these three threefold worlds, and it should be like them.

5. That is not to be regarded.

6. Let there be two, for these two worlds (the earth and heaven) are seen as if most real, while the earth (space) between the two is the sky (antariksha). Therefore let there be two planks.

7. Let them be made of Udumbara wood. Verily, the Udumbara tree is sap and eatable food, and thus it serves to obtain sap and eatable food.

8. Let them be elevated in the middle (between the earth and the cross-beem). Food, if placed in the middle, delights man, and thus he places the sacrificer in the middle of eatable food.

9. There are two kinds of rope, twisted towards the right and twisted towards the left. The right ropes serve for some animals, the left rope for others. If there are both kinds of rope, they serve for the attaintmeet of both kinds of cattle.

10. Let them be made of Darbha (Kusa grass), for among plants Darbha is free from evil, therefore they should be made of Darbha grass.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ದ್ವಿತಿಯಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ಮಾಧವೀಯ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯದ ಪ್ರಥಮಾರಣ್ಯಕದ
ಎರಡನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವು ||

---

# ಅಥ ಪ್ರಥಮಾರಣ್ಯಕೇ ದ್ವಿತೀಯಾಧ್ಯಾಯೇ ಚತುರ್ಥಃ ಖಂಡಃ

## ಪ್ರಥಮಾರಣ್ಯಕದ ಎರಡನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು

---

**ಅರತ್ನಿಮಾತ್ರ ಉಪರಿ ಭೂಮೇಃ ಪ್ರೇಂಖಃ ಸ್ಯಾದಿತ್ಯಾಹುರೇತಾವತಾ ವೈ ಸ್ವರ್ಗಾ ಲೋಕಾಃ ಸಂಮಿತಾ ಇತಿ ತತ್ತನ್ನಾಽಽದೃತ್ಯಮ್ ॥**

**ಭೂಮಿಪ್ರೇಂಖಯೋರ್ಮಧ್ಯೇ ವ್ಯವಧಾನಸ್ಯೇಯತ್ತಾಂ ನಿಶ್ಚೇತುಂ ಪೂರ್ವಪಕ್ಷಮುಪನ್ಯಸ್ಯ ನಿರಾಚಷ್ಟೇ—ಅರತ್ನಿಃ ಪ್ರಾದೇಶದ್ವಯಮಾತ್ರಪ್ರಮಾಣಮ್ । ಭೂಮೇರುಪರಿ ತಾವನ್ಮಾತ್ರವ್ಯವಧಾನೇ ಪ್ರೇಂಖಃ ಕಾರ್ಯಃ । ಅಂತರಿಕ್ಷಾದುಪರಿ ವರ್ತಮಾನಭೋಗಹೇತವೋ ಯೇ ಸ್ವರ್ಗಲೋಕಾಸ್ತೇ ಪ್ರಜಾಪತೇರರತ್ನಿಮಾತ್ರೇಣ ಸದೃಶಾ ಭವಂತಿ, ತತ್ಸದೃಶತ್ವಾದರತ್ನೇರುಪರಿ ಪ್ರೇಂಖಃ ಸ್ಥಾಪನೀಯ ಇತಿ ಕೇಚಿದಾಹುಃ । ತ (ತ್ತ) ಸ್ಮಿನ್ ಪ್ರೇಂಖೇ ತನ್ಮತಂ ನಾದರಣೀಯಮ್ ॥**

ಭೂಮಿಯಿಂದ ಎಷ್ಟು ಎತ್ತರದಲ್ಲಿ ಉಯ್ಯಾಲೆ ಇರಬೇಕೆಂಬ ವಿಷಯದಲ್ಲಿ ಕೆಲವರ ಅಭಿಪ್ರಾಯವನ್ನು ತಿಳಿಸುವರು–ಇಲ್ಲಿ ಅರತ್ನಿಯೆಂದರೆ ಒಂದು ಮೊಳಕೈನಷ್ಟು ಅಥವಾ ಎರಡು ಗೇಣಿನಷ್ಟು ಪ್ರದೇಶವು. ಪ್ರೇಂಖವು ಅಥವಾ ಉಯ್ಯಾಲೆಯು ಭೂಮಿಯಿಂದ ಒಂದು ಅರತ್ನಿಯಷ್ಟು ಎತ್ತರದಲ್ಲಿರಬೇಕೆಂದು ಕೆಲವರು ಹೇಳುವರು. ಏಕೆಂದರೆ ಭೂಮಿಗಿಂತ ಊರ್ಧ್ವ ಭಾಗದಲ್ಲಿರುವ ಭೋಗ್ಯಹೇತುವಾದ ಸ್ವರ್ಗಲೋಕವನ್ನು ಅಳೆಯುವಾಗ ಅರತ್ನಿ ಎಂಬ ಪರಿಮಾಣ (ಸಾಧನ) ವನ್ನು ಉಪಯೋಗಿಸುವರು. ಆದ್ದರಿಂದ ಅರತ್ನಿಮಾತ್ರದಷ್ಟು ಭೂಮಿಯಿಂದ ಎತ್ತರವಲ್ಲಿ ಪ್ರೇಂಖವನ್ನು ಕಟ್ಟಬೇಕು ಎಂದು ಕೆಲವರ ಮತವು. ಇದು (ಈ ಮತವು ಅಥವಾ ಅಭಿಪ್ರಾಯವು) ಸರಿಯಲ್ಲ.

**ಪ್ರಾದೇಶಮಾತ್ರೇ ಸ್ಯಾದಿತ್ಯಾಹುರೇತಾವತಾ ವೈ ಪ್ರಾಣಾಃ ಸಂಮಿತಾ ಇತಿ ತತ್ತನ್ನಾದೃತ್ಯಮ್ ॥**

**ಪುನರಪಿ ಪೂರ್ವಪಕ್ಷತ್ವೇಪಿ ಮತಾಂತರಮುಪನ್ಯಸ್ಯ ದೂಷಯತಿ ಪ್ರಾಣವಾಯವೋ ಹಿ ದೇಹಸ್ಯಾಂತರ್ಹೃದಯಾದೂರ್ಧ್ವಂ ಪ್ರಾದೇಶಮಾತ್ರಂ ಸಂಚರಂತಿ ಮುಖಾದ್ಬಹಿರಪಿ ಸಂಚರತಾಂ ಪ್ರಾದೇಶಮಾತ್ರೇಣ ಸಂಮಿತಾ ಭವಂತಿ । ಅನ್ಯತ್ ಪೂರ್ವವದ್ವ್ಯಾಖ್ಯೇಯಮ್ ॥**

ಮತ್ತೆ ಕೆಲವರು ಈ ಪ್ರೇಂಖವನ್ನು ಭೂಮಿಯಿಂದ ಮೇಲಕ್ಕೆ ಒಂದು ಪ್ರಾದೇಶ (ಒಂದು ಗೇಣಿನಷ್ಟು ಪ್ರದೇಶ) ಮಾತ್ರದಷ್ಟು ಎತ್ತರವಾಗಿ ಕಟ್ಟಬೇಕೆಂದು ಹೇಳುವರು. ಏಕೆಂದರೆ ಪ್ರಾಣವಾಯುಗಳು (ಉಚ್ಛ್ವಾಸನಿಃಶ್ವಾಸರೂಪವಾದ ವಾಯುಗಳು) ಶರೀರದಲ್ಲಿ ಹೃದಯದಿಂದ ಮೇಲಕ್ಕೆ ಈ ಪ್ರಾದೇಶ ಪರಿಮಾಣದ ಅಂತರದಲ್ಲಿ ಸಂಚರಿಸುವುದರಿಂದ ಹೀಗೆ ಮಾಡಬೇಕೆಂದು ಅವರ ಮತವು. ಈ ಅಭಿಪ್ರಾಯವನ್ನೂ ಒಪ್ಪಕೂಡದು. ಇದೂ ಸರಿಯಾದದ್ದಲ್ಲ.

ಮುಷ್ಟಿಮಾತ್ರೇ ಸ್ಯಾದೇತಾವತಾ ವೈ ಸರ್ವಮನ್ನಾದ್ಯಂ ಕ್ರಿಯತ ಏತಾ-
ವತಾ ಸರ್ವಮನ್ನಾದ್ಯಮಭಿಪನ್ನಂ ತಸ್ಮಾನ್ಮುಷ್ಟಿಮಾತ್ರ ಏವ ಸ್ಯಾತ್॥

ಸಿದ್ಧಾಂತಂ ದರ್ಶಯತಿ—ಏತಾವತಾ ಮುಷ್ಟಿಪರಿಮಿತೇನ ದ್ರವ್ಯೇಣ ಮೋದಕದೃಕ್ಪೂರಿಕಾದಿ ರೂಪಂ ಸರ್ವಮನ್ನಾದ್ಯಂ ನಿಷ್ಪಾದ್ಯತೇ । ಮುಷ್ಟಿಪರಿಮಿತೇನ ಗ್ರಾಸೇನ ಸರ್ವಮನ್ನಾದ್ಯಂ ಮುಖೇ ಪ್ರಾಪ್ತಂ ಭವತಿ, ತಸ್ಮಾದನ್ನಪ್ರಾಪ್ತ್ಯೈ ಮುಷ್ಟಿಮಾತ್ರ ಏವೋರ್ಧ್ವಪ್ರದೇಶೇ ಪ್ರೇಂಖೋ ಭವೇತ್ ॥

ಆದ್ದರಿಂದ ಭೂಮಿಗೆ ಪ್ರೇಂಖಕ್ಕೂ ಒಂದು ಮುಷ್ಟಿ (ಹಿಡಿ) ಯಷ್ಟು ಅಂತರವನ್ನು ಮಾತ್ರ ಬಿಡಬೇಕು. ಏಕೆಂದರೆ (ಕಡುಬಿನಂತೆ ಇರುವ ಮುಷ್ಟಿ) ಹಿಡಿಯಿಂದ ಪುರುಷನು ಅನ್ನಾದ್ಯಾಹಾರವನ್ನು ತನ್ನ ಬಾಯಿಯ ಬಳಿಗೆ ಒಯುತ್ತಾನೆ. ಇಷ್ಟು ಅನ್ನವಿದೆ ಎಂದು ಹೇಳಬೇಕಾದರೂ ಇಷ್ಟು ಮುಷ್ಟಿ (ಹಿಡಿ) ಅನ್ನವಿದೆ ಎಂದು ಹೇಳುವುದೇ ರೂಡಿಯು. ಆದ್ದರಿಂದ ಅನ್ನಪ್ರಾಪ್ತಿಗಾಗಿ ಭೂಮಿಗೂ ಪ್ರೇಂಖಕ್ಕೂ ಮುಷ್ಟಿಮಾತ್ರ ಅಂತರವಿರಬೇಕು.

ಪುರಸ್ತಾತ್ಪ್ರತ್ಯಂಚಂ ಪ್ರೇಂಖಮಧಿರೋಹೇದಿತ್ಯಾಹುರೇತಸ್ಯ ರೂಪೇಣ
ಯ ಏಷ ತಪತಿ ಪುರಸ್ತಾದ್ಧ್ಯೇಷ ಇಮಾನ್ಲೋಕಾನ್ಪ್ರತ್ಯಙ್ಙಧಿ-
ರೋಹತೀತಿ ತತ್ತನ್ನಾಽಽದೃತ್ಯಮ್ ॥

ಅಥ ಪ್ರೇಂಖಾರೋಹಣೇ ಕಂಚಿತ್ಪೂರ್ವಪಕ್ಷಮುಪನ್ಯಸ್ಯ ದೂಷಯತಿ—ಹೋತಾ ಸ್ವಯಂ ಪೂರ್ವಸ್ಯಾಂ ದಿಶ್ಯವಸ್ಥಾಯ ಪ್ರತ್ಯಂಚಂ ಪಶ್ಚಿಮದಿಶ್ಯವಸ್ಥಿತಂ ಪ್ರೇಂಖಮಧಿರೋಹೇದಿತ್ಯಾಹುಃ । ತತ್ರೇಯಮುಪಪತ್ತಿಃ-ಯ ಆದಿತ್ಯೋಽಸ್ತಿ ಸ ಏಷ ಏತಸ್ಯ ರೂಪೇಣ ಪುರಸ್ತಾದವಸ್ಥಾಯ ಪಶ್ಚಿಮಾರೋಹಣರೂಪೇಣ ತಪತಿ । ಉದಯಾದೂರ್ಧ್ವಮಾಮಧ್ಯಾಹ್ನಂ ಪಶ್ಚಿಮಾಭಿಮುಖಸ್ಯಾದಿತ್ಯಸ್ಯಾ-ರೋಹದರ್ಶನಾತ್ । ಅಯಮೇವಾರ್ಥಃ ಪ್ರಸಿದ್ಧಿವಾಚಕೇನ ಹಿಶಬ್ದೇನೋತ್ತರವಾಕ್ಯೇಽಸ್ಪಷ್ಟೀಕೃತಃ। ತಸ್ಮಾತ್ಪುರಸ್ತಾದವಸ್ಥಾಯಾಧಿರೋಹೇದಿತಿ, ಸೋಽಯಂ ಪೂರ್ವಃಪಕ್ಷೋ ನಾದರಣೀಯಃ ॥

ಈ ಪ್ರೇಂಖವನ್ನು ಹತ್ತಿ ಕುಳಿತುಕೊಳ್ಳುವಾಗ ಕೆಲವರು ಈರೀತಿ ಹೇಳುವರು-ಹೋತೃವು ಪೂರ್ವದಿಕ್ಕಿನಲ್ಲಿದ್ದು ಪಶ್ಚಿಮಾಭಿಮುಖನಾಗಿ ಪ್ರೇಂಖವನ್ನು ಹತ್ತಬೇಕೆಂದು ಕೆಲವರು ಹೇಳುವರು. ಅದಕ್ಕೆ ಅವರು ಹೇಳುವ ಕಾರಣವೇನೆಂದರೆ ಪ್ರಪಂಚವನ್ನೆಲ್ಲಾ ಬೆಳಗುವ ಸೂರ್ಯನು ಪೂರ್ವದಿಕ್ಕಿನಲ್ಲಿ ಉದಯಿಸಿ ಅಲ್ಲಿಂದ ಪಶ್ಚಿಮಾಭಿಮುಖವಾಗಿ ಮುಂದಕ್ಕೆ ಹೋಗುವನು. ಇದು ಅವರು ಹೇಳುವ ಪೂರ್ವಪಕ್ಷವಾದವು. ಈ ಮತವು ಸರಿಯಾದದ್ದಲ್ಲ. ಇದನ್ನು ಅಂಗೀಕರಿಸ ಕೂಡದು.

ತಿರ್ಯಂಚಮಧಿರೋಹೇದಿತ್ಯಾಹುಸ್ತಿರ್ಯಂಚಂ ವಾ ಅಶ್ವಮಧಿರೋ-
ಹಂತಿ ತೇನೋ ಸರ್ವಾನ್ ಕಾಮಾನವಾಪ್ನವಾಮೇತಿ ತತ್ತನ್ನಾಽ-
ದೃತ್ಯಮ್ ॥

ಪುನರಪ್ಯನ್ಯಂ ಪೂರ್ವಪಕ್ಷಮುಪನ್ಯಸ್ಯ ದೂಷಯತಿ ॥ ಪೂರ್ವಪಶ್ಚಿಮಯೋರಾಯತ-ನಸ್ಯ ಪ್ರೇಂಖಸ್ಯೋತ್ತರದಕ್ಷಿಣವಿಸ್ತಾರಸ್ತಿರ್ಯಕ್ತ್ವಂ ತಸ್ಯಾನ್ಯತರಸ್ಯಾಂ ದಿಶ್ಯವಸ್ಥಾಯ ತಿರ್ಯಕ್ತ್ವೇ ನಾವಸ್ಥಿತಂ ಪ್ರೇಂಖಮಧಿರೋಹೇದಿತ್ಯನ್ಯ ಆಹುಃ । ತತ್ರೇಯಮುಪಪತ್ತಿಃ–ಅಶ್ವಸ್ಯ ಪಾರ್ಶ್ವೇಽವಸ್ಥಾಯ ತಿರ್ಯಂಚಮಶ್ವಂ ಜನಾ ಅಧಿರೋಹಂತಿ । ತೇನೋ ತೇನೈವ ತಿರ್ಯಗಧಿರೋಹೇಣ ಸರ್ವಕಾಮಪ್ರಾಪ್ತಿರಿತಿ ತೇಷಾಮಭಿಪ್ರಾಯಃ । ಅಯಮಪಿ ಪಕ್ಷೋ ನಾದರಣೀಯಃ ॥

ಮತ್ತೆಕೆಲವರು ಹೀಗೆ ಹೇಳುವರು—ಪ್ರೇಂಖವನ್ನು ಹತ್ತುವಾಗ ಪೂರ್ವದಿಕ್ಕಿನಿಂದಲೂ ಹತ್ತಬೇಕಾಗಿಲ್ಲ. ಪಶ್ಚಿಮ ದಿಕ್ಕಿನಿಂದಲೂ ಹತ್ತಬೇಕಾಗಿಲ್ಲ. ಇವೆರಡಕ್ಕೂ ಮಧ್ಯಭಾಗದಿಂದ ಹತ್ತಬೇಕು. ಏಕೆಂದರೆ ಜನರು ದೂರ ಪ್ರಯಾಣ ಮಾಡುವಾಗ ಕುದುರೆಯನ್ನು ಹತ್ತಿ ಹೋಗುವರಷ್ಟೆ. ಆ ರೀತಿ ಕುದುರೆಯನ್ನು ಹತ್ತುವಾಗ ಕುದುರೆಯ ಮುಂಭಾಗ ದಿಂದಲೂ ಹತ್ತುವುದಿಲ್ಲ. ಹಿಂಭಾಗದಿಂದಲೂ ಹತ್ತುವುದಿಲ್ಲ ಆದರೆ ಇವೆರಡಕ್ಕೂ ಮಧ್ಯಭಾಗವಾದ ಪಕ್ಕ(ಪಾರ್ಶ್ವ)ದಿಂದ ಹತ್ತುವರು ಅದರಂತೆ ಇಲ್ಲಿಯೂ ಸಹ. ಈ ಅಭಿಪ್ರಾಯವನ್ನು ಸಹ ಒಪ್ಪಬೇಕಾಗಿಲ್ಲ.

ಅನ್ವಂಚಮಧಿರೋಹೇದಿತ್ಯಾಹುರನೂಚೀಂ ವೈ ನಾವಮಧಿರೋಹಂತಿ ನೌರ್ವೈಷಾ ಸ್ವರ್ಗಯಾಣೀ ಯತ್ಪ್ರೇಂಖ ಇತಿ ತಸ್ಮಾದನ್ವಂಚಮೇ-ವಾಧಿರೋಹೇತ್ ॥

ಸಿದ್ಧಾಂತಿನಾಂ ಮತಂ ದರ್ಶಯತಿ—ಪ್ರಾಗಗ್ರಸ್ಯ ಪ್ರೇಂಖಸ್ಯ ಪಶ್ಚಿಮದಿಶ್ಯವಸ್ಥಾಯ ಪ್ರಾಗಾಭಿಮುಖ್ಯೇನಾರೋಹಣಮನ್ವಗಾರೋಹಣಂ ತದೇವ ಕುರ್ಯಾದಿತಿ ಸಿದ್ಧಾಂತಿನ ಆಹುಃ । ಲೋಕೇ ನೌರ್ಯದಾ ಪಶ್ಚಿಮತೀರೇಽವಸ್ಥಾಯ ಪ್ರಾಚೀನತೀರಂ ಗಚ್ಛತಿ ತದಾನೀಂ ಜನಾ ಅಪಿ ಪಶ್ಚಿಮತೀರೇಽವಸ್ಥಾಯ ಪ್ರಾಙ್ಮುಖಾ ಅಧಿರೋಹಂತಿ । ತದಿದಂ ನಾವೋಽನ್ವಗಾರೋಹಣಮ್ । ಪ್ರೇಂಖ ಇತಿ ಯದಸ್ತ್ಯೇಷಾ ಸ್ವರ್ಗಪ್ರಾಪಿಕಾ ನೌರೇವ, ತಸ್ಮಾದನ್ವಗಾರೋಹಣಂ ಯುಕ್ತಮಿತಿ ಸಿದ್ಧಾಂತಃ ॥

ಈ ವಿಷಯದಲ್ಲಿ ಸಿದ್ಧಾಂತವನ್ನು ತಿಳಿಸುವರು. ಪ್ರೇಂಖವನ್ನು ಪೂರ್ವದಿಕ್ಕಿಗೆ ತುದಿಯಿರುವಂತೆ ಮಾಡಿ ಮಾಡಿ ಪೂರ್ವದಿಕ್ಕಿನಿಂದ (ಹಿಂಭಾಗದಿಂದ) ಹತ್ತಬೇಕು ಮತ್ತು ಆ ರೀತಿಯಾಗಿಯೇ ಇಳಿಯಬೇಕು. ಪ್ರಪಂಚದಲ್ಲಿ ದೋಣಿಯು (ಅಥವಾ ಹಡಗು) ಪಶ್ಚಿಮತೀರದಲ್ಲಿದ್ದು ಅಲ್ಲಿಂದ ಪೂರ್ವಾಭಿಮುಖನಾಗಿ ಹೋಗುವುದು. ಅದರಲ್ಲಿ ಕುಳಿತಿರುವ ಜನರೂ ಹಾಗೆಯೇ ಮಾಡುವರು. ಇಲ್ಲಿ ಪ್ರೇಂಖವು ಸ್ವರ್ಗಾರೋಹಣಕ್ಕೆ ಸಾಧನಭೂತವಾದ ನಾವೆಯು. ಆದ್ದರಿಂದ ಈಗ ಹೇಳಿದಂತೆ ಮಾಡುವುದೇ ಯುಕ್ತವು.

ಛುಬುಕೇನೋಪಸ್ಪೃಶೇಚ್ಛುಬುಕೋ ಹ್ಯೈವಂ ವೃಕ್ಷಮಧಿರೋಹತಿ ಸ ಉ ವಯಸಾಮನ್ನಾದತಮ ಇತಿ ತಸ್ಮಾಚ್ಛುಬುಕೇನೋಪಸ್ಪೃಶೇತ್॥

ತಸ್ಮಿನ್ನಧಿರೋಹಣೇ ಕಂಚಿದ್ವಿಶೇಷಂ ವಿಧತ್ತೇ—ಛುಬುಕಶಬ್ದೇನ ಮುಖಸ್ಯಾಧರಫಲಕ-ಮುಚ್ಯತೇ । ತೇನ ಪ್ರೇಂಖಮುಪಸ್ಪೃಶೇತ್ । ಲೋಕೇ ಹಿ ಶುಕನಾಮಕಃ ಪಕ್ಷೀ ಛುಬುಕಸ್ಪರ್ಶನ-

ಪುರಃಸರಂ ವೃಕ್ಷಮಧಿರೋಹತಿ । ಸ ತು ಶುಕಃ ಪಕ್ಷಿಣಾಂ ಮಧ್ಯೇಽತಿಶಯೇನಾನ್ನಾದಃ, ರಾಜಾ-ಮಾತ್ಯಾದಯೋ ವಿನೋದಾರ್ಥಂ ಶುಕಂ ರಕ್ಷಂತಃ ಕ್ಷೀರಾದಿಕಂ ಭೋಜಯಂತಿ । ತಸ್ಮಾದನ್ನಪ್ರಾ-ಪ್ತ್ಯೈ ತು ಚುಬುಕೇನೋಪಸ್ಪೃಶೇತ್ ॥

ಪ್ರೇಂಖವನ್ನು ಹತ್ತುವಾಗ ಒಂದು ವಿಶೇಷವಿರುವುದು. ಹತ್ತುವಾಗ ಪ್ರೇಂಖದ ಮುಂದಿನ ಹಲಗೆಯ ಕೆಳಭಾಗ ವನ್ನು ಸ್ಪರ್ಶಮಾಡಿ ಹತ್ತಬೇಕು. ಪ್ರಪಂಚದಲ್ಲಿ ಗಿಣಿಯು(ಶುಕವು) ವೃಕ್ಷವನ್ನು ಹಿಡಿದು ಹತ್ತಿಕುಳಿತುಕೊಳ್ಳುವಾಗ ಮೊದಲು ತನ್ನ ಕೊಕ್ಕಿನಿಂದ ಹಿಡಿದುಕೊಂಡು ಹತ್ತುವುದು. ಮತ್ತು ಈ ಗಿಣಿಯನ್ನು ರಾಜ, ಅಮಾತ್ಯ ಮೊದಲಾದವರು ವಿನೋದ ಕ್ಕಾಗಿ ಅನ್ನಾದ್ಯಾಹಾರಗಳನ್ನು ಕೊಟ್ಟು ಸಾಕುವರು. ಆದ್ದರಿಂದ ಗಿಣಿಗೆ ಹಾಲು, ಹಣ್ಣು ಮೊದಲಾದ ಆಹಾರವನ್ನು ತಿನ್ನಲು ಬೇಕಾದಷ್ಟು ಅನುಕೂಲವಿರುವುದು. ಹೀಗೆ ಮಾಡುವುದರಿಂದ ಎಂದರೆ ಚುಬುಕ ಸ್ಪರ್ಶನಪೂರ್ವಕವಾಗಿ ಪ್ರೇಂಖ ವನ್ನು ಹತ್ತುವುದರಿಂದ ಯಜಮಾನನಿಗೆ ಅನ್ನಾದ್ಯಾಹಾರವು ಯಥೇಚ್ಛವಾಗಿ ಲಭಿಸುವುದು.

ಬಾಹುಭ್ಯಾಮಧಿರೋಹೇದೇವಂ ಶ್ಯೇನೋ ವಯಾಂಸ್ಯಭಿಸಿವಿಶತ ಏವಂ ವೃಕ್ಷಂ ಸ ಉ ವಯಸಾಂ ವೀರ್ಯವತ್ತಮ ಇತಿ ತಸ್ಮಾದ್ಬಾಹುಭ್ಯಾ-ಮಧಿರೋಹೇತ್ ॥

ಯಥಾ ಚುಬುಕಸ್ಪರ್ಶನಮೇವಮರತ್ನಿಸ್ಪರ್ಶನಂ ವಿಧತ್ತೇ— ಬಾಹುಶಬ್ದೇನಾತ್ರ ಕೂರ್ಪರ-ಮಾರಭ್ಯಾಗ್ರಭಾಗೋಽರತ್ನಿಬ್ದವಾಚ್ಯೋ ವಿವಕ್ಷಿತಃ । ತಥಾ ಚ ಪಂಚಮೇ ಪಠ್ಯತೇ— "ಪಶ್ಚಾರ್ಧೇ ಫಲಕೇಽರತ್ನೀ ಪ್ರತಿಷ್ಠಾಪಯತಿ" (ಐ-ಆ ೫. ಅ. ೧ ಖ- ೪) (ಇತಿ) । ತಾಭ್ಯಾಮರತ್ನಿಭ್ಯಾಮಧಿ-ರೋಹಣಂ ಕುರ್ಯಾತ್ । ಅನೇನೈವ ಪ್ರಕಾರೇಣ ಶ್ಯೇನೋ ಬಲವಾನ್ಪಕ್ಷೀ ವಯಾಂಸ್ಯನ್ಯಾನ್ಪಕ್ಷಿ-ಣೋಽಭಿಲಕ್ಷ್ಯ ತದ್ದರ್ಶನಾರ್ಥಂ ತೇಷಾಂ ದುರ್ಬಲಾನಾಂ ಪಕ್ಷಿಣಾಮುಪರ್ಯರತ್ನಿಭ್ಯಾಮುಪ-ಸ್ಪೃಶ್ಯೋಪವಿಶತಿ । ಕಿಂಚಾನೇನೈವ ಪ್ರಕಾರೇಣಾರತ್ನಿಸ್ಪರ್ಶನಪೂರ್ವಕಂ ವೃಕ್ಷಮಧಿರೋಹತಿ । ಯತ್ತು (ಸ ತು) ಶ್ಯೇನಃ ಪಕ್ಷಿಣಾಂ ಮಧ್ಯೇಽತಿಶಯೇನ ಶಕ್ತಿಮಾನ್ । ಯಸ್ಮಾದೇವಂ ಶ್ಯೇನ-ಸಾದೃಶ್ಯಂ ಭವತಿ ತಸ್ಮಾದರತ್ನೀ ಪ್ರತಿಷ್ಠಾಪಯೇತ್ ॥

ಪ್ರೇಂಖವನ್ನು ಹತ್ತುವಾಗ ಹೋತೃವು ತನ್ನ ಎರಡು ಕೈಗಳಿಂದಲೂ (ಇಲ್ಲಿ ಕೈಗಳೆಂದರೆ ಮೊಳಕೈನಿಂದ ಹಿಡಿದು ಹಸ್ತದಕೊನೆಯವರೆಗೂ ಎಂದರ್ಥವು) ಹಲಗೆಯ ತುದಿಯನ್ನು ಹಿಡಿದುಕೊಂಡು ಹತ್ತಬೇಕು. ಶ್ಯೇನಪಕ್ಷಿಯೂ ಸಹ ಇತರ ಪಕ್ಷಿಗಳ ಮೇಲೆ ಎಗರುವಾಗಲೂ ಮತ್ತು ವೃಕ್ಷವನ್ನು ಹತ್ತುವಾಗಲೂ ತನ್ನಕೊಕ್ಕಿನಿಂದ ಹಿಡಿದುಕೊಂಡೇ ಹತ್ತುವುದು. ಪಕ್ಷಿಗಳಲ್ಲೆಲ್ಲಾ ಶ್ಯೇನಪಕ್ಷಿಯು ಬಹಳ ಬಲಿಷ್ಠವಾದುದು. ಪಂಚಮಾರಣ್ಯಕದಲ್ಲಿಯೂ ಈ ರೀತಿ ಹೇಳಿದೆ (ಐ.ಆ ೫-೧-೪) **ಪಶ್ಚಾರ್ಧೇ ಫಲಕೇಽರತ್ನೀ ಪ್ರತಿಷ್ಠಾಪಯತಿ** ಎಂದು ಆದ್ದರಿಂದ ಈ ರೀತಿ ಪ್ರೇಂಖವನ್ನು ಹತ್ತುವ ಹೋತೃವು ಶ್ಯೇನ ಪಕ್ಷಿಯಂತೆ ಅತ್ಯಂತ ಬಲಶಾಲಿಯಾಗುವನು.

ಅಸ್ಯೈ ಪಾದಂ ನೋಚ್ಛಿಂದ್ಯಾನ್ನೇದಸ್ಯೈ ಪ್ರತಿಷ್ಠಾಯಾ ಉಚ್ಛಿದ್ಯಾ ॥

ಅರತ್ನಿಸ್ಥಾಪನಾದೂರ್ಧ್ವಂ ಪ್ರೇಂಖಮಾರೂಢವತೋ ಹೋತುರೇಕೇನ ಪಾದೇನ ಭೂಮಿ-ಸ್ಪರ್ಶನಂ ವಿಧತ್ತೇ— ಅಸ್ಯಾ ಭೂಮೇಃ ಸಕಾಶಾತ್ ಸ್ವಕೀಯಂ ದಕ್ಷಿಣಂ ಸವ್ಯಂ ವಾ ಪಾದಮೇಕ-

ಮುಚ್ಛ್ರಿನ್ನಂ ನ ಕುರ್ಯಾತ್ಕಿಂತು ಭೂಮೌ ಪಾದಂ ಪ್ರತಿಷ್ಠಾಪಯೇತ್ । ನೇದಿತ್ಯವ್ಯಯಶಮೂಹಃ ಪರಿಭಯಾರ್ಥೇ ವರ್ತತೇ । ಯದ್ಯಹಂ ಪಾದಂ ಭೂಮೇರ್ವಿಯುಕ್ತಂ ಕುರ್ಯಾಂ ತದಾನೀಂ ಪ್ರತಿಷ್ಠಾರೂಪಾಯಾ ಅಸ್ಯಾ ಭೂಮೇಃ ಸಕಾಶಾದಹಮೇವೋಚ್ಛ್ರಿನ್ನೋ ಭೂಯಾಸಮಿತ್ಯಭಿಪ್ರೇತ್ಯ ಸ್ವಕೀಯಂ ಭಯಂ ದ್ಯೋತಯನ್ ಭೀತಿಪರಿಹಾರಾಯ ಭೂಮಿಂ ಸ್ಪೃಷ್ಟ್ವೈವ ತಿಷ್ಠೇತ್ ॥

ಪ್ರೇಂಖವನ್ನು ಹತ್ತುವಾಗ ಒಂದು ಕಾಲನ್ನು ಭೂಮಿಯ ಮೇಲೆ ಚನ್ನಾಗಿ ಊರಿಯೇ ಮತ್ತೊಂದು ಕಾಲನ್ನು (ಎಡ ಅಥವಾ ಬಲಗಾಲನ್ನು) ಪ್ರೇಂಖದ ಮೇಲಿಟ್ಟು ಹತ್ತಬೇಕು. ಏಕೆಂದರೆ ಹತ್ತುವುದಕ್ಕೆ ಮೊದಲೇ ಭೂಮಿಯಿಂದ ಎರಡು ಕಾಲುಗಳನ್ನೂ ತೆಗೆದರೆ ಬೀಳುವ ಸಂಭವವುಂಟು.

ಪ್ರೇಂಖಂ ಹೋತಾಽಧಿರೋಹತ್ಯೌದುಂಬರೀಮಾಸಂದೀಮುದ್ಗಾತಾ ವೃಷಾ ವೈ ಪ್ರೇಂಖೋ ಯೋಷಾಸಂದೀ ತನ್ಮಿಥುನಂ ಮಿಥುನಮೇವ ತದುಕ್ಥಮುಖೇ ಕರೋತಿ ಪ್ರಜಾತ್ಯೈ ॥

ಹೋತುರುದ್ಗಾತುಶ್ಚಾರೋಹಣಸ್ಥಾನವ್ಯವಸ್ಥಾಂ ವಿಧಾಯ ಪ್ರಶಂಸತಿ–ಮಂಚಕವಚ್ಚತುಷ್ಪದೋನ್ನತಾಸಂದೀ । ಹೋತ್ರಾ ಸಮಾರೂಢಃ ಪ್ರೇಂಖಃ ಪುಲ್ಲಿಂಗಶಬ್ದೇನಾಭಿಧಾನಾತ್ವೃಷಾ ರೇತಃ ಸೇಚನಸಮರ್ಥಃ ಪುಮಾನ್ । ಆಸಂದೀ ತು ಸ್ತ್ರೀಲಿಂಗನಿರ್ದೇಶಾದ್ಯೋಷಾ । ತದುಭಯಂ ಮಿಲಿತ್ವಾ ಮಿಥುನಂ ಸಂಪದ್ಯತೇ । ತತ್ತೇನೋಭಯಾವರೋಹಣೇನೋಕ್ಥಮುಖೇ ನಿಷ್ಕೇವಲ್ಯಾಖ್ಯಶಸ್ತ್ರಸ್ಯ ಪ್ರಾರಂಭೇ ಮಿಥುನಮೇವ ಸಂಪಾದಯತಿ । ತಚ್ಚ ಪ್ರಜೋತ್ಪತ್ತ್ಯೈ ಭವತಿ ॥

ಹೋತೃವು ಪ್ರೇಂಖವನ್ನು ಹತ್ತುವನು. ಉದ್ಗಾತೃವು ಉದುಂಬರವೃಕ್ಷದಿಂದ ನಿರ್ಮಿತವಾದ ಆಸಂದಿಯನ್ನು (ಮರದ ಕಾಲುಮಣೆ) ಹತ್ತಿಕುಳಿತುಕೊಳ್ಳುವನು. ಪ್ರೇಂಖವು ಪುಲ್ಲಿಂಗವಾಚಕಶಬ್ದವು. ಆಸಂದೀ ಎಂಬ ಶಬ್ದವು ಸ್ತ್ರೀಲಿಂಗವು ಇವೆರಡೂ ಸೇರಿದರೆ ಮಿಥುನ (ದಂಪತಿ) ವಾಗುವುದು. ಆದ್ದರಿಂದ ನಿಷ್ಕೇವಲ್ಯ ಶಸ್ತ್ರವನ್ನುಪಠಿಸುವ ಪ್ರಾರಂಭದಲ್ಲಿ ಮಿಥುನರೂಪವಾದ ಪ್ರೇಂಖ ಮತ್ತು ಆಸಂದಿಯನ್ನು ಹತ್ತುವುದರಿಂದ ಮಿಥುನವು ಉಂಟಾಗುವುದು. ಮಿಥುನದಿಂದ ಸಂತಾನೋತ್ಪತ್ತಿಯಾಗುವುದು.

ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥

ಏತದ್ವೇದನಂ ಪ್ರಶಂಸತಿ

ಮೇಲೆ ಹೇಳಿದಂತೆ ಆಚರಿಸುವವನು ಸಂತಾನವನ್ನೂ ಪಶುಸಂಪತ್ತನ್ನೂ ಪಡೆದು ಸುಖಿಸುವನು.

ಅಥಾನ್ನಂ ವೈ ಪ್ರೇಂಖಃ ಶ್ರೀರಾಸಂದ್ಯನ್ನಂ ಚೈವ ತಚ್ಛ್ರಿಯಂ ಚಾನ್ವಧಿರೋಹತಃ ॥

ಪ್ರಕಾರಾಂತರೇಣೋಭಯಂ ಪ್ರಶಂಸತಿ ಪೂರ್ವೋಕ್ತಮಿಥುನರೂಪತ್ವಪ್ರಶಂಸಯಾ ಸಹ-ಸಮುಚ್ಚಯಾರ್ಥೋಽಥಶಬ್ದಃ । ಪ್ರೇಂಖಸ್ಯೌದುಂಬರತ್ವಾದನ್ನರೂಪತ್ವಂ ತಚ್ಚ ಫಲವಿಧಾನೇ

**ಪ್ರತಿಪಾದಿತಮ್ । ಶ್ರಿಯಂ ಪ್ರಾಪ್ತಾ ರಾಜಾದಯ ಉಚ್ಚಾಸನಮಧಿರೋಹಂತಿ। ಅತಃ ಶ್ರೀರಾಸಂದೀ। ತದುಭಯಮನ್ನಶ್ರೀರೂಪಮೇತಾವುಭಾವನುಕ್ರಮೇಣಾಧಿರೋಹತಃ । ತದೇತದುಭಯಂ ಯಜುರ್ವೇದ ಆಮ್ನಾತಮ್-“ ಆಸಂದೀಮುದ್ಗಾತಾ ರೋಹತಿ ಸಾಮ್ರಾಜ್ಯಮೇವ ಗಚ್ಛಂತಿ ಪ್ರೇಂಖಂ ಹೋತಾ ನಾಕಸ್ಯೈವ ಪೃಷ್ಠಂ ರೋಹಂತಿ ” ಇತಿ ॥**

ಪ್ರೇಂಖವು ಉದುಂಬರವೃಕ್ಷದಿಂದ ನಿರ್ಮಿತವಾಗಿರುವುದರಿಂದ ಅನ್ನ (ಆಹಾರ) ರೂಪವು ಎಂದರೆ ಅದರಿಂದ ಅನ್ನಾದ್ಯಾಹಾರವು ಲಭಿಸುವುದು. ಆಸಂದಿಯು ಸಂಪತ್ತಿನ ಪ್ರತೀಕವು ರಾಜರು ಮೊದಲಾದವರು ಉನ್ನತಾಸನವಾದ ಆಸಂದಿಯ ಮೇಲೆ ಕುಳಿತುಕೊಳ್ಳುವರು ಅದರಿಂದ ಅವರ ಸಂಪತ್ತು ವೃದ್ಧಿಯಾಗುವುದು. ಪ್ರೇಂಖ ಮತ್ತು ಆಸಂದಿಯನ್ನು ಹತ್ತಿ ಕುಳಿತುಕೊಳ್ಳುವುದರಿಂದ ಅನ್ನಾದ್ಯಾಹಾರವೂ ಸಂಪತ್ತೂ ವೃದ್ಧಿಯಾಗುವವು. ಈ ವಿಷಯವು ಯಜುರ್ವೇದದಲ್ಲಿ ಈರೀತಿ ಹೇಳಲ್ಪಟ್ಟಿರುವುದು. **ಆಸಂದೀಮುದ್ಗಾತಾಽಽರೋಹತಿ ಸಾಮ್ರಾಜ್ಯಮೇವ ಗಚ್ಛಂತಿ ಪ್ರೇಂಖಂ ಹೋತಾ ನಾಕಸ್ಯೈವ ಪೃಷ್ಠಂ ರೋಹಂತಿ** ಎಂದರೆ ಉದ್ಗಾತೃವೆಂಬ ಋತ್ವಿಜನು ಆಸಂದಿ ಎಂಬ ಪೀಠವನ್ನೂ ಹೋತೃವೆಂಬ ಋತ್ವಿಜನು ಪ್ರೇಂಖವನ್ನೂ ಹತ್ತಿ ಕುಳಿತುಕೊಳ್ಳುವರು. ಇದರಿಂದ ಯಜಮಾನರು ಸಾಮ್ರಾಜ್ಯಭೋಗವನ್ನೂ ಸ್ವರ್ಗಪ್ರಾಪ್ತಿಯನ್ನೂ ಪಡೆಯುವರು.

ಬೃಸೀರ್ಹೋತ್ರಕಾಃ ಸಮಧಿರೋಹಂತಿ ಸಬ್ರಹ್ಮಕಾಃ ॥

**ಇತರೇಷಾಮಾಸನಾನಿ ವಿಧತ್ತೇ—ತೃಣವಿಶೇಷವಂಶಶಕಲಾದಿವಿನಿರ್ಮಿತಾ ಆಸನವಿಶೇಷಾ ಬೃಸ್ಯಃ ಕೂರ್ಚಶಬ್ದಾಭಿಧೇಯಾಃ । ಅತಏವ ಪಂಚಮೇ ವಕ್ಷ್ಯತೇ-“ ಕೂರ್ಚಾನ್ ಹೋತ್ರಕಾಃ ಸಮಾರೋಹಂತಿ ಬ್ರಹ್ಮಾ ಚ ” (ಐ. ಆ. ೧. ಖ. ೪. ।) ಇತಿ । ಪ್ರಶಾಸ್ತಾ ಬ್ರಾಹ್ಮಣಾಚ್ಛಂಸೀ ಪೋತಾ ನೇಷ್ಟಾಽಽಗ್ನೀಧ್ರೋಽಚ್ಛಾವಾಕಶ್ಚೇತ್ಯೇತೇ ಹೋತ್ರಕಾಸ್ತೇ ಚ ಬ್ರಹ್ಮಣಾ ಸಹಿತಾ ಬೃಸೀರಧಿರೋಹೇಯುಃ ॥**

ಇತರ ಋತ್ವಿಜರು ಕುಳಿತುಕೊಳ್ಳಬೇಕಾದ ಆಸನಗಳನ್ನು ವಿವರಿಸುವರು. ಇಲ್ಲಿ ಬೃಸೀ ಎಂದರೆ ಒಂದು ವಿಧವಾದ ಹುಲ್ಲು. ಈ ಹುಲ್ಲಿನಿಂದ ಹೆಣೆದುಮಾಡಿರುವ ಮೆತ್ತನೆಯ ಆಸನಗಳ ಮೇಲೆ ಹೋತೃವರ್ಗದ ಋತ್ವಿಜರು ಎಂದರೆ, ಪ್ರಶಾಸ್ತಾ ಬ್ರಾಹ್ಮಣಾಚ್ಛಂಸೀ, ಪೋತಾ, ಆಗ್ನೀಧ್ರ ಅಚ್ಛಾವಾಕ ಎಂಬ ಋತ್ವಿಜರೂ ಬ್ರಹ್ಮನೂ ಸಹ ಕುಳಿತುಕೊಳ್ಳುವರು. ಈ ವಿಷಯವನ್ನು ಪಂಚಮಾರಣ್ಯಕದಲ್ಲಿ ಹೀಗೆ ಹೇಳಿದೆ—**ಕೂರ್ಚಾನ್ ಹೋತ್ರಕಾಃ ಸಮಾರೋಹಂತಿ ಬ್ರಹ್ಮಾ** (ಐ.ಆ. ೫-೧-೪) ಎಂದು.

ಸಮುತ್ಸೃಷ್ಯ ವಾ ಓಷಧಿವನಸ್ಪತಯಃ ಫಲಂ ಗೃಹ್ಣಂತಿ ತದ್ಯದೇತಸ್ಮಿನ್ನಹನಿ ಸರ್ವತಃ ಸಮಧಿರೋಹಂತೀಷಮೇವ ತದೂರ್ಜಮನ್ನಾದ್ಯಮಧಿರೋಹಂತ್ಯೂಜೋರ್ಽನ್ನಾದ್ಯಸ್ಯಾವರುದ್ಧ್ಯೈ ॥

**ತದಧಿರೋಹಣಂ ಪ್ರಶಂಸತಿ—ಓಷಧಯೋ ಬ್ರಾಹ್ಮೀಧವಾದ್ಯಾ ವನಸ್ಪತಯಃ ಪನಸೋದುಂಬರಾದ್ಯಾಸ್ತೇಚ ಸರ್ವೇ ಸಮುತ್ಸೃಷ್ಯ ಸಮ್ಯಗುನ್ನತಾ ಭೂತ್ವಾ ಪಶ್ಚಾತ್ಫಲಂತಿ । ತತ್ತಥಾ ಸತಿ**

**ಯದ್ಯೇತಸ್ಮಿನ್ಮಹಾವ್ರತನಾಮಕೇಽಹ್ನಿ ಸರ್ವೇ ಬ್ರಹ್ಮಾದಯ ಆಸನಾನ್ಯಧಿರೋಹೇಯುಸ್ತತ್ರೇನಾಧಿ-ರೋಹಣೇನೇಷಮನ್ನಮೂರ್ಜಂ ತದ್ರಸಮನಾದ್ಯಂ ಭಕ್ಷಣಯೋಗ್ಯಪ್ರಶಸ್ತಾನ್ನಂ ಚಾಧಿರೂಢಾ ಭವಂತಿ । ತಸ್ಮಾತ್ ಕ್ಷೀರಾದಿರಸಸ್ಯ ಶಾಲ್ಯಾದ್ಯನ್ನಸ್ಯ ಚ ಪ್ರಾಪ್ತ್ಯೈ ತದಧಿರೋಹಣಂ ಸಂಪದ್ಯತೇ ।**

ಈ ಅಧಿರೋಹಣವನ್ನು (ಹತ್ತಿ ಕುಳಿತುಕೊಳ್ಳುವುದನ್ನು) ಪ್ರಶಂಸೆಮಾಡುವರು. ಓಷಧಿವನಸ್ಪತಿಮೊದಲಾದ ಸಸ್ಯ ವರ್ಗವು ಎಂದರೆ ಹಲಸಿನಮರ, ಉದುಂಬರವೃಕ್ಷ ಮೊದಲಾದ ವೃಕ್ಷಗಳು ಎತ್ತರವಾಗಿ ಬೆಳೆದು ಅನಂತರ ಫಲವನ್ನು ಬಿಡುವವು. ಅದರಂತೆಯೇ ಈ ಬ್ರಹ್ಮಾದಿಋತ್ವಿಜರು ಮಹಾವ್ರತವೆಂಬ ಈ ದಿವಸ ಉನ್ನತಾಸನಗಳ ಮೇಲೆ ಕುಳಿತು ಕೊಳ್ಳುವುದರಿಂದ ಭಕ್ಷಿಸಲು ಯೋಗ್ಯವಾದ ಅನ್ನಾದ್ಯಾಹಾರಗಳು ಪಾನಮಾಡಲು ಯೋಗ್ಯವಾದ ಕ್ಷೀರಾದಿ ರಸಗಳು ಲಭಿಸುವವು.

**ವಷಟ್‌ಕೃತ್ಯಾವರೋಹೇದಿತ್ಯಾಹುಸ್ತತ್ತನ್ನಾಽಽದೃತ್ಯಮಕೃತಾ ವೈ ಸಾಪ-ಚಿತಿರ್ಯಾಮುಪಶ್ಯತೇ ಕರೋತಿ ॥**

**ಯದ್ಯಪ್ಯವರೋಹಸ್ಯ ನಾಯಂ ಕಾಲಸ್ತಥಾಽಪ್ಯಾರೋಹಣಪ್ರಸಂಗಾದ್‌ಬುದ್ಧಿಸ್ಥಾವ-ರೋಹಣಂ ವಿಧಾತುಂ ಕಂಚಿತ್ಪೂರ್ವಪಕ್ಷಮುಪನ್ಯಸ್ಯ ದೂಷಯತಿ—ಹೋತಾ ವಷಟ್‌ಶಬ್ದಮು-ಚ್ಚಾರ್ಯಾನಂತರಮೇವ ಪ್ರೇಂಖಾದವರೋಹೇದಿತಿ ಕೇಚಿದಾಹುಸ್ತನ್ಮತಂ ನಾದರಣೀಯಮ್ । ಕುತಃ । ಭಕ್ಷಸ್ಯಾಪಚಿತ್ಯರ್ಥಂ ಹಿ ಪ್ರೇಂಖಾದವರೋಹಣಂ ಸಾ ವಾ (ಚಾ) ಪಚಿತಿಃ ಪೂಜನೀಯೇ ಭಕ್ಷೇ ಸಮಾಗತ್ಯ ನಿರೀಕ್ಷಮಾಣೇ ಸತಿ ಕರ್ತವ್ಯಾ । ಯದ್ಯಪ್ಯಪಶ್ಯತೇ ಭಕ್ಷಸ್ಯಾಪಚಿತಿಃ ಕ್ರಿಯೇತ ತದಾನೀಮಿಯಮಕೃತ್ಯೈವ ಸ್ಯಾನ್ನ ಹಿ ವಷಟ್‌ಕಾರಾನಂತರ್ಯಂ ಭಕ್ಷ್ಯಾಗಮನಸ್ಯಾವಸರಸ್ತಸ್ಯಾನು ವಷಟ್‌ಕಾರಾದೂರ್ಧ್ವಭಾವಿತ್ವಾತ್ ॥**

ಕೆಲವರು ಈರೀತಿ ಹೇಳುವರು—ಪ್ರೇಂಖ ಮೊದಲಾದ ಆಸನಗಳಿಂದ ಇಳಿಯುವಾಗ ವೌಷಟ್ ಎಂದು ಉಚ್ಚರಿಸಿ ವಷಟ್ಕಾರಪೂರ್ವಕವಾಗಿ ಇಳಿಯಬೇಕು ಎಂದು. ಆದರೆ ಇದು ಸರಿಯಲ್ಲ. ಏಕೆಂದರೆ ಪ್ರೇಂಖಾರೋಹಣದಿಂದ ಲಭಿಸುವ ಅನ್ನಾದ್ಯಾಹಾರಗಳು ಇನ್ನೂ ಲಭಿಸಿರುವುದಿಲ್ಲ. ಲಭಿಸುವುದಕ್ಕೆ ಮುಂಚೆಯೇ ಅದನ್ನು ಪ್ರಶಂಸಿಸುವುದು ಯುಕ್ತವಲ್ಲ.

**ನಿಗೃಹ್ಯ ಭಕ್ಷಮವರೋಹೇದಿತ್ಯಾಹುಸ್ತತ್ತನ್ನಾಽಽದೃತ್ಯಮಕೃತಾ ವೈ ಸಾಪಚಿತಿರ್ಯಾಮಧ್ಯೃಷ್ಟಾಯ ಕರೋತಿ ॥**

**ಪುನರಪ್ಯನ್ಯಂ ಪಕ್ಷಮುಪನ್ಯಸ್ಯ ದೂಷಯತಿ—ನಿಗೃಹ್ಯ ನಿತರಾಂ ಹಸ್ತೇ ಗೃಹೀತ್ವಾ ಪಶ್ಚಾ-ದವರೋಹಣಮಿತ್ಯೇತದಪಿ ಮತಂ ನಾದರಣೀಯಮ್ । ಅವರೋಹಲಕ್ಷಣೋಪಚಾರಕಾಲಸ್ಯಾತಿ-ಕ್ರಾಂತತ್ವಾತ್ । ಅಧ್ಯೃಷ್ಟಾಯಾಧಿಕೃತೇನ ಸಮೀಪಂ ಪ್ರಾಪ್ತಾಯ ಯಾಪಚಿತಿಃ ಸೇಯಂ ಕೃತಾಽಪಿ ಕಾಲಾತಿಕ್ರಮಾದಕೃತೈವ ಭವೇತ್ ॥**

ಮತ್ತೆ ಕೆಲವರು ಹೀಗೆ ಹೇಳುವರು—ಅನ್ನಾದ್ಯಾಹಾರಗಳು ಲಬ್ಧವಾದಮೇಲೆ ಎಂದರೆ ಕಣ್ಣಿಗೆ ಕಂಡಮೇಲೆ ಎಂದರೆ ಕಣ್ಣಿಗೆ ಕಂಡಮೇಲೆ ಪ್ರೇಂಖದಿಂದ ಇಳಿಯಬೇಕು ಎಂದು. ಇದನ್ನೂ ಸಹ ಸರಿಯೆಂದು ಹೇಳಲಾಗವುದಿಲ್ಲ. ಏಕೆಂದರೆ

ಇಳಿಯುವಾಗ ಆಹಾರಾದಿಗಳಿಗೆ ತೋರಿಸಬೇಕಾದ ಗೌರವಕ್ಕೆ ಸರಿಯಾದ ಕಾಲವು ಕಳೆದು ಹೋಗಿರುವುದು. ಕಾಲಾತಿಕ್ರಮಣವಾದಮೇಲೆ ಪ್ರದರ್ಶಿಸುವ ಗೌರವವು ಸರಿಯಾದುದಲ್ಲ.

**ಪ್ರತಿಖ್ಯಾಯ ಭಕ್ಷಮವರೋಹೇದೇಷಾ ವಾ ಅಪಚಿತಿರ್ಯಾಂ ಪಶ್ಯತೇ**
**ಕರೋತಿ ತಸ್ಮಾತ್ಪ್ರತಿಖ್ಯಾಯೈವ ಭಕ್ಷಮವರೋಹೇತ್ ॥**

ಸಿದ್ಧಾಂತಂ ದರ್ಶಯತಿ—ಪ್ರತಿಖ್ಯಾಯಾಽಽಗಚ್ಛಂತಂ ಭಕ್ಷಂ ದೃಷ್ಟ್ವಾ ತದಾನೀಮೇವ ತಸ್ಮಿನ್ ಭಕ್ಷೇ ಪಶ್ಯತಿ ಸತಿ ಯೇಯಮವರೋಹಣರೂಪಾಽಪಚಿತಿಃ ಸಾ ಮುಖ್ಯಾ ಪೂಜಾ । ಲೋಕೇಽಪಿ ಹಿ ಶಿಷ್ಟಾ ಆಚಾರ್ಯಾದೀನಾಮಾಗಮನಾತ್ ಪ್ರಾಗಪಿ ಸ್ವಾಸನಾನ್ನೋತ್ತಿಷ್ಠಂತಿ । ತೇಷ್ವಾಗತ್ಯೋಪವಿಷ್ಟೇಷು ಪಶ್ಚಾದಪಿ ನೋತ್ತಿಷ್ಠಂತಿ । ಕಿಂ ತರ್ಹಿ ಯಾವತಾ ದೇಶವ್ಯವಧಾನೇನ ತೇ ಪಶ್ಯಂತಿ ತಾವತಿ ದೇಶೇ ತದ್ದೃಷ್ಟಿಪಾತಕಾಲ ಏವ ಸಹಸೋತ್ತಿಷ್ಠಂತಿ, ತಸ್ಮಾದ್ಭಕ್ಷ್ಯಂ (ಕ್ಷಂ) ಪ್ರತಿಖ್ಯಾಯಾವರೋಹೇದಿತ್ಯೇಷ ಏವ ಸಿದ್ಧಾಂತಃ ।

ಈ ವಿಷಯದಲ್ಲಿ ಸಿದ್ಧಾಂತವನ್ನು (ನಿರ್ಣಯವನ್ನು) ತಿಳಿಸುವರು. ಭಕ್ಷವು ಅಥವಾ ಆಹಾರವು ತರಲ್ಪಟ್ಟಮೇಲೆ ಅದನ್ನು ನೋಡಿದನಂತರ ಪೀಠದಿಂದ ಇಳಿಯಬೇಕು. ಹೀಗೆ ಮಾಡಿದರೆ ಅದಕ್ಕೆ ಗೌರವವನ್ನು ತೋರಿಸಿದಂತಾಗುವುದು. ಲೋಕ ವ್ಯವಹಾರದಲ್ಲಿಯೂ ಹೀಗೆಯೇ ಇರುವುದು. ಶಿಷ್ಟರಾದ ಅಭ್ಯಾಗತರು ಮನೆಗೆ ಬಂದಾಗ ಅವರು ಕುಳಿತ ಆಸನದಿಂದ ಏನನ್ನೂ ಮಾಡದೆ ಎದ್ದು ಹೋಗುವುದಿಲ್ಲ ಅದರೆ ತಾವು ಬಂದ ಕಾರ್ಯವನ್ನು ತಿಳಿಸಿ ತಮಗೆ ಸಲ್ಲಬೇಕಾದ ಸತ್ಕಾರಾದಿಗಳನ್ನು ಸ್ವೀಕರಿಸಿ ಅನಂತರ ಪೀಠವನ್ನು ಬಿಟ್ಟೆದ್ದು ಹೊರಟುಹೋಗುವರು. ಆದ್ದರಿಂದ ಹಾಗೆಯೇ ಮಾಡಬೇಕು.

**ಪ್ರಾಙವರೋಹೇತ್ಪ್ರಾಗ್ವೈ ದೇವರೇತ (ಃ) ಸಂಪ್ರಜಾಯತೇ**
**ತಸ್ಮಾತ್ಪ್ರಾಙವರೋಹೇದವರೋಹೇತ್ ॥**

ತಸ್ಮಿನ್ನವರೋಹೇ ಕಂಚಿನ್ನಿಯಮಂ ವಿಧತ್ತೇ—ಪಶ್ಚಿಮದಿಶಿ ಸನ್ನಾರೂಢೋ ಹೋತಾ ಸ್ವಯಂ ಪ್ರಾಙ್ಮುಖಃ ಸನ್ ಪ್ರಾಚ್ಯಾಂ ದಿಶ್ಯವರೋಹೇತ್। ಪ್ರಾಗ್ವೈ ಪ್ರಾಚ್ಯಾಮೇವ ದಿಶಿ ದೇವಾನಾಮಿಂದ್ರಾದೀನಾಂ ರೇತಃ ಪುತ್ರಾದಿರೂಪೇಣೋತ್ಪದ್ಯತೇ । ದೇವಲೋಕಸ್ಯ ಪೂರ್ವದಿಗ್ವರ್ತಿತ್ವಾತ್ । ತಸ್ಮಾದ್ದೇವತ್ವಾಯ ಪ್ರಾಙೇವಾವರೋಹೇನ್ನ ತು ಪ್ರತ್ಯಙ್ । ಅಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ।

ಈಗ ಪೀಠದಿಂದ ಇಳಿಯುವ ವಿಷಯವನ್ನು ತಿಳಿಸುವರು—ಪ್ರೇಂಖವನ್ನು ಹತ್ತಿಕುಳಿತುಕೊಳ್ಳುವಾಗ ಹೋತೃವು ಪಶ್ಚಿಮ ದಿಕ್ಕಿನಿಂದ ಪೂರ್ವಾಭಿಮುಖವಾಗಿ ಹತ್ತಬೇಕೆಂದು ಹಿಂದೆಯೇ ಹೇಳಿದೆಯಷ್ಟೆ. ಈಗ ಎಂದರೆ ಇಳಿಯುವಾಗ ಪೂರ್ವಾಭಿಮುಖವಾಗಿಯೇ ಇಳಿಯಬೇಕು. ಏಕೆಂದರೆ ಇಂದ್ರಾದಿದೇವತೆಗಳು ವಿಸರ್ಜಿಸುವ ವೀರ್ಯವೂ ಸಹ ಪೂರ್ವಾಭಿಮುಖವಾಗಿಯೇ ಹೊರಟು ಪುತ್ರಾದಿಸಂತಾನವನ್ನುಂಟು ಮಾಡುವುದು. ದೇವಲೋಕವೂ ಪೂರ್ವದಿಕ್ಕಿನಲ್ಲಿಯೇ ಇರುವುದು ಆದ್ದರಿಂದ ಪಶ್ಚಿಮದಿಕ್ಕಿನಿಂದ ಇಳಿಯದೆ ಪೂರ್ವಾಭಿಮುಖವಾಗಿಯೇ ಇಳಿಯಬೇಕು.

———

*English Translation*

1. Some say : ' Let the swing be one ell (aratni) above the ground, for by that measure verily the Svarga worlds are measured.' That is not to be regarded.

2. Others say : ' Let be one span (pradesa), for by that measure verily the vital airs were measured. That is not to be regarged.

3. Let it be one fist (mushti), for by that measure verily all eatable food is made, and by that measure all eatable food is taken : therefore let it be one fist above the ground.

4. They say : ' Let him mount the swing from east to west, like he who shines ; for the sun mounts these worlds from east to west.' That is not to be regarded.

5. Others say : ' Let him mount the swing sideways, for people mount a horse sideways, thinking that thus they will obtain all desires.' That is not to be regarded.

6. They say : ' Let him mount the swing form behind, for people mount a ship from behind, and this swing is a ship in which to go to beaven.' There fore let him mount it from behind.

7. Let him touch the swing with his chin (khubuka). The parrot (suka) thus mounts a tree, and he is of all birds the one who eats most food. Therefore let him touch it with his chin

8. Let him mount the swing with his arms. The hawk swoops thus on birds and on trees, and he is of all birds the strongest. Therefore let him mount with his arms.

9. Let him not withdraw one foot (the right or left) from the earth, for fear that he may lose his hold.

10. The Hotri mounts the swing, the Udgatri the seat made of Udumbara wood. The swing is masculine, the seat feminine, and they form a union. Thus he makes a union at the beginning of the uktha in order to get offspring.

11. He who knows this, gets offspring and cattle.

12. Next the swing is food the seat fortune. Thus he mounts and obtains food and fortude.

13. The Hotrakas (the Prasastri, Brahmanakkhamsin, Potri, Neshtri Agnidhra, and Akkhavaka) together with the Brahman sit down on cushions made of grass, reeds, leaves etc.

14. Plants and trees, after they have grown up, bear fruit. Thus if the priests mount on that day altogether (on their seats), they mount on solid and fluid as their proper food. Therefore this serves for the attainment of solid as proper food.

15. Some say : 'Let him descend after saying vashat.' That is not to be regarded. For, verily, that respect is not shown which is shown to one who does not see it.

16. Others say : 'Let him descend after he has taken the food in his hand.' That is not to be regarded. For, verily, that respect is not shown which is shown to one after he has approached quite close.

17. Let him descend after he has seen the food. For, verily, that is real respect which is shown to one when he sees it. Only after having actually seen the food (that is brought to the sacrifice), let him descend from the swing.

18. Let him desend turning towards the east, for in the east the seed of the gods springs up. Therefore let him rise turning towards the eas, yea, turning towards tha east.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ದ್ವಿತೀಯಾಧ್ಯಾಯೇ ಚತುರ್ಥಃ ಖಂಡಃ

ಇತಿ ಪ್ರಥಮಾರಣ್ಯಕೇ ದ್ವಿತೀಯೋಽಧ್ಯಾಯಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ಮಾಧವೀಯ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯದ ಪ್ರಥಮಾರಣ್ಯಕದ
ದ್ವಿತೀಯಾಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವಾದುದು

ಇಲ್ಲಿಗೆ ಪ್ರಥಮಾರಣ್ಯಕದ ದ್ವಿತೀಯಾಧ್ಯಾಯವು ಸಮಾಪ್ತವಾದುದು



# ಅಥ ಪ್ರಥಮಾರಣ್ಯಕೇ ತೃತೀಯಾಧ್ಯಾಯೇ ಪ್ರಥಮಃ ಖಂಡಃ

## ಪ್ರಥಮಾರಣ್ಯಕದ ಮೂರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

**ಹಿಙ್ಕಾರೇಣೈತದಹಃ ಪ್ರತಿಪದ್ಯೇತೇತ್ಯಾಹುಃ ॥**

ಪೂರ್ವಾಧ್ಯಾಯೇ ನಿಷ್ಕೇವಲ್ಯಶಸ್ತ್ರಪ್ರಶಂಸನಾರ್ಥಂ ಪೂರ್ವಾಧಿರೋಹಣಮುಕ್ತಮ್ । ಅತಸ್ತಚ್ಛಂಸನಂ ವಿವಿಚ್ಯತೇ । ತತ್ರಾದೌ ಪಕ್ಷಿಣಾಮಿತ್ಯೇತಸ್ಯ ಶಬ್ದಸ್ಯೋಚ್ಚಾರಣಂ ವಿಧತ್ತೇ—ಅಹಃ ಶಬ್ದೇನಾತ್ರ ತದೀಯಂ ಶಸ್ತ್ರಮುಪಲಕ್ಷ್ಯತೇ । ತಚ್ಚ ಹಿಂಕಾರೇಣ ಪ್ರಾರಭೇತೇತ್ಯೇವಮಭಿಜ್ಞಾ ಆಹುಃ । ಯದ್ಯಯಂ ಹಿಂಕಾರಶಬ್ದಶ್ಚೋದಕೇನೈವ ಪ್ರಾಪ್ತಸ್ತರ್ಹ್ಯರ್ಥವಾದ ಸಂಬಂಧಾರ್ಥಂ ತದ್ವಿಧ್ಯನುವಾದ ಇತಿ ದ್ರಷ್ಟವ್ಯಮ್ । ಏವಮನ್ಯತ್ರಾಪ್ರಾಪ್ತೌ ವಿಧಿಃ ಪ್ರಾಪ್ತಸ್ಯ ಪ್ರಶಂಸಾರ್ಥ-ಮನುವಾದಃ ॥

ಹಿಂದಿನ ಅಧ್ಯಾಯದಲ್ಲಿ ನಿಷ್ಕೇವಲ್ಯಶಸ್ತ್ರವನ್ನು ಪಠಿಸುವುದಕ್ಕಾಗಿ ಪೂರ್ವಭಾವಿಯಾಗಿ ಮಾಡಬೇಕಾದ ಅಧಿರೋಹಣವನ್ನು (ಪೀಠವನ್ನು ಹತ್ತಿ ಕುಳಿತುಕೊಳ್ಳುವುದನ್ನು) ಹೇಳಿದ್ದಾಯಿತು. ಈಗ ಮಂತ್ರಪಠನಪ್ರಕಾರವನ್ನು ವಿವರಿಸಲಾಗುವುದು. ಇಲ್ಲಿ ಅಹಃ (ದಿನ) ಶಬ್ದವೆಂದರೆ ಆ ದಿನವಲ್ಲಿ ಪಠಿಸಬೇಕಾದ ಶಸ್ತ್ರಮಂತ್ರವು ಎಂದರ್ಥವು. ಈ ಶಸ್ತ್ರಮಂತ್ರವನ್ನು ಹಿಂ ಕಾರವನ್ನು ಉಚ್ಚರಿಸಿ ಅನಂತರ ಪಠಿಸಬೇಕೆಂದು ತಿಳಿದವರು ಹೇಳುವರು.

**ಬ್ರಹ್ಮ ವೈ ಹಿಂಕಾರೋ ಬ್ರಹ್ಮೈವ ತದಹರ್ಬ್ರಹ್ಮಣೈವ ತದ್ಬ್ರಹ್ಮ ಪ್ರತಿಪದ್ಯತೇ ಯ ಏವಂ ವೇದ ॥**

ಹಿಂಕಾರವೇದನಂ ಪ್ರಶಂಸತಿ— ಹಿಂಕಾರಸ್ಯಾಹ್ನಶ್ಚ ಬ್ರಹ್ಮಪ್ರಾಪ್ತಿಹೇತುತ್ವಾದ್ಬ್ರಹ್ಮತ್ವಮ್। ಅತೋ ಬ್ರಹ್ಮರೂಪೇಣೈವ ಹಿಂಕಾರೇಣೈತದ್ಬ್ರಹ್ಮರೂಪಮಹಃ ಪ್ರಾಪ್ನೋತಿ ॥

ಹಿಂಕಾರವೆಂದರೆ ಬ್ರಹ್ಮವು (ಪರಬ್ರಹ್ಮಸ್ವರೂಪವು) ಈ ಮಂತ್ರವನ್ನು ಪಠಿಸುವ ದಿವಸವೂ ಪರಬ್ರಹ್ಮಸ್ವರೂಪವಾಗಿಯೇ ಇರುವುದು. ಯಾವ ಪುರುಷನು ಇದನ್ನು ತಿಳಿಯುವನೋ ಆ ಪುರುಷನು ಬ್ರಹ್ಮಪ್ರಾಪ್ತಿಯನ್ನೇ ಪಡೆಯುವನು.

**ಯದೇವ ಹಿಂಕಾರೇಣ ಪ್ರತಿಪದ್ಯತಾ೩ಇ ವೃಷಾ ವೈ ಹಿಂಕಾರೋ ಯೋಷರ್ಕ್ತನ್ಮಿಥುನಂ ಮಿಥುನಮೇವ ತದುಕ್ಥಮುಖೇ ಕರೋತಿ ಪ್ರಜಾತ್ಯೈ ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥**

ಪುನರಪಿ ಹಿಂಕಾರಂ ಪ್ರಶಂಸತಿ—ಆ (ಅ) ಕಾರಃ ಪ್ಲುತ ಇಕಾರಶ್ಚೇತ್ಯೇತದುಭಯಂ ಪ್ರತಿ-ಪದ್ಯತ ಇತ್ಯೇಕಾರಸ್ಯಸ್ಥಾನೇ ವಿಹಿತಮ್ । ಆದರಾತಿಶಯದ್ಯೋತನಾರ್ಥಂ ಪ್ಲುತಿಃ । ಹಿಂಕಾರೇಣ

**ಶಸ್ತ್ರಂ ಪ್ರಾರಭ್ಯತ ಇತಿ ಯದಸ್ತಿ ತತ್ರ ಹಿಂಕಾರಸ್ಯ ಪುಲ್ಲಿಂಗಶಬ್ದೇನ ನಿರ್ದೇಶಾದೃಚಶ್ಚ ಸ್ತ್ರೀಲಿಂಗ-ಶಬ್ದೇನ ವ್ಯವಹಾರಾದುಭಯಂ ಮಿಲಿತ್ವಾ ಮಿಥುನಂ ಸಂಪದ್ಯತೇ । ಮಿಥುನಮೇವೇತ್ಯಾದಿ ಪೂರ್ವ-ವದ್ವ್ಯಾಖ್ಯೇಯಮ್ ॥**

ಹಿಂಕಾರವನ್ನು ಪುನಃ ಪ್ರಶಂಸೆಮಾಡುವರು. ಶಸ್ತ್ರಮಂತ್ರವನ್ನು ಪಠಿಸುವ ಪ್ರಾರಂಭದಲ್ಲಿ ಉಚ್ಚರಿಸುವ ಹಿಂಕಾರವು ಪುಲ್ಲಿಂಗವು. ಋಕ್ಕುಗಳು(ಮಂತ್ರದಲ್ಲಿರುವ) ಸ್ತ್ರೀಲಿಂಗವು, ಇವೆರಡೂ ಸೇರಿದರೆ ಮಿಥುನವುಂಟಾಗುವುದು. ಈ ಮಿಥುನ ದಿಂದ ಸಂತಾನೋತ್ಪತ್ತಿಯೂ ಪಶುಸಂಪತ್ತೂ ಲಭಿಸುವವು.

## ಯದ್ವೇವ ಹಿಂಕಾರೇಣ ಪ್ರತಿಪದ್ಯತಾ ೩ ಇ ಯಥಾ ವಾ ಅಭ್ರಿರೇವಂ ಬ್ರಹ್ಮಣೋ ಹಿಂಕಾರೋ ಯದ್ವೈ ಕಿಂಚಾಭ್ರಿಯಾಽಭಿತಿತೃತ್ಸತ್ಯಭ್ಯೇ-ವೈನತ್ತೃಣತ್ತ್ಯೇವಮ್, ॥

**ಪುನಃ ಪ್ರಕಾರಾಂತರೇಣ ಪ್ರಶಂಸತಿ—ಯದುಶಬ್ದೋಽಪಿ ಚೇತ್ಯಸ್ಮಿನ್ನರ್ಥೇ ವರ್ತತೇ । ಸ ಚ ಪೂರ್ವಪ್ರಶಂಸಯಾ ಸಮುಚ್ಚಯಾರ್ಥಃ । ಹಿಂಕಾರೇಣೈವ ಪ್ರಾರಭ್ಯತ ಇತಿ ಯದಸ್ತಿ ತತ್ರ ಯಥೈವ ಲೋಕೇಽಭ್ರಿಃ ಖನನಹೇತುಃ ಕಾಷ್ಠವಿಶೇಷ ಏವಂ ಬ್ರಹ್ಮಣೋ ವೇದಸ್ಯ ಹಿಂಕಾರೋ ವೇದಸಾರಸ್ಯ ನಿಧಿಸ್ಥಾನೀಯಸ್ಯ ಖನನಹೇತುಃ । ಏವಂ ಚ ಸತಿ ಲೋಕೇ ಯದೇವ ಕಿಂಚಿತ್ಕಠಿನಂ ಭೂತಲಮಭ್ರಿ-ಯಾ ಖನನಸಾಧನಭೂತಯಾಽಭಿತಿತೃತ್ಸತಿ ಸರ್ವತಸ್ತರ್ದಿತುಂ ಖನಿತುಮಿಚ್ಛತಿ ಸ ಪುಮಾನೇತತ್ಕಠಿನಂ ಭೂತಲಮಭಿತೃಣತ್ತ್ಯೇವ ಸರ್ವಥಾ ಖನತ್ಯೇವಮಯಂ ಹೋತಾ ವೇದೇ ದುರ್ಲಭಂ ಲಭತ ಇತ್ಯರ್ಥಃ**

ಪ್ರಕಾರಾಂತರವಾಗಿ ಹಿಂಕಾರವನ್ನು ಪ್ರಶಂಸೆಮಾಡುವರು. ವೇದಮಂತ್ರಗಳಾದ ಶಸ್ತ್ರಮಂತ್ರಗಳನ್ನು ಹಿಂಕಾರ ಪೂರ್ವಕವಾಗಿಯೇ ಪ್ರಾರಂಭಿಸುವರಷ್ಟೆ. ಲೋಕದಲ್ಲಿಯೂ ಭೂಮಿಯಲ್ಲಿ ಹುದುಗಿರುವ ಕಠಿನವಸ್ತುವನ್ನು ಗುದ್ದಲಿಯಿಂದ ಅಗೆದು ತೆಗೆಯುವರು. ಆದ್ದರಿಂದ ಇಲ್ಲಿ ಹಿಂಕಾರವೇ ಗುದ್ದಲಿಯು. ವೇದಗಳಲ್ಲಿ ಸಾರಭೂತವಾಗಿರುವ ಪರಬ್ರಹ್ಮವಸ್ತುವನ್ನು ಈ ಹಿಂಕಾರವೆಂಬ ಗುದ್ದಲಿಯಿಂದಲೇ ಅಗೆದು ತೆಗೆಯುವರು ಎಂದರೆ ಹಿಂಕಾರಪೂರ್ವಕವಾಗಿ ಮಂತ್ರೋಚ್ಚಾರಣೆಮಾಡುವು ದರಿಂದ ಪರಬ್ರಹ್ಮಸ್ವರೂಪವನ್ನು ತಿಳಿದುಕೊಳ್ಳುವರು.

## ಯಂ ಕಾಮಂ ಕಾಮಯತೇ ಹಿಂಕಾರೇಣಾಭ್ಯೇವೈನಂ ತೃಣತ್ತಿ ಯ ಏವಂ ವೇದ ॥

**ಹಿಂಕಾರವೇದನಂ ಪ್ರಶಂಸತಿ—**

ಯಾವ ಪುರುಷನು ಏನನ್ನು ಪಡೆಯಲು ಬಯಸುವನೋ ಆ ಪುರುಷನು ಈ ಹಿಂಕಾರ (ಪಠನ) ದಿಂದ ಅದೆಲ್ಲವನ್ನೂ ಪಡೆಯುವನು.

ಯದ್ವೇವ ಹಿಂಕಾರೇಣ ಪ್ರತಿಪದ್ಯತಾ ೩ ಇ ವಾಚೋ ವಾ ಏಷಾ ವ್ಯಾ-
ವೃತ್ತಿರ್ದೈವ್ಯೈ ಚ ಮಾನುಷ್ಯೈ ಚ ಯದ್ಧಿಂಕಾರಃ ಸ ಯದ್ಧಿಂಕೃತ್ಯ
ಪ್ರತಿಪದ್ಯತೇ ವಾಚಮೇವ ತದ್ವ್ಯಾವರ್ತಯತಿ ದೈವೀಂಚ ಮಾನುಷೀಂ
ಚ ॥

ಪುನರಪಿ ಪ್ರಕಾರಾಂತರೇಣ ಹಿಂಕಾರಂ ಪ್ರಶಂಸತಿ—ಸ್ತೋತ್ರಶಸ್ತ್ರಾದಿರೂಪಾ ವೈದಿಕೀ ವಾಗ್ದೈವೀ । ಅಶನಾಚ್ಛಾದನಾದಿವಿಷಯಾ ಲೌಕಿಕೀ ವಾಙ್ಮಾನುಷೀ । ಏವಂ ಸತಿ ಹಿಂಕಾರ ಇತಿ ಯದಸ್ತಿ ಸೈಷಾ ದ್ವಿವಿಧಾಯಾ ವಾಚಃ ಪರಸ್ಪರವ್ಯಾವೃತ್ತಿಹೇತುಃ । ದೈವ್ಯಾ ವಾಚಃ ಹಿಂಕಾರಃ ಪ್ರಯುಜ್ಯತೇ ನ ತು ಮಾನುಷ್ಯಾ ತದೇತದ್ಧಿಂಕಾರಸ್ಯ ವ್ಯಾವರ್ತಕತ್ವಮ್ । ಅತೋ ಯದಿ ಹಿಂಕೃತ್ಯ ಶಸ್ತ್ರಂ ಪ್ರಾರಭೇತ ತದಾನೀಮಯಂ ಹೋತಾ ದ್ವಿವಿಧಾಮಪಿ ವಾಚಂ ಪರಸ್ಪರವ್ಯಾವೃತ್ತಾಂ ಕರೋತಿ ।

ಹಿಂಕಾರವನ್ನು ಮತ್ತೆ ಪ್ರಶಂಸೆಮಾಡುವರು. ವಾಕ್ಯವು ಎರಡು ವಿಧವಾಗಿರುವುದು ದೇವತೆಗಳ ವಿಷಯವಾದ ಸ್ತೋತ್ರಶಸ್ತ್ರಮಂತ್ರಗಳಿಂದ ಕೂಡಿದ ವೇದಮಂತ್ರಾದಿಗಳು ವೈದಿಕೀ ವಾಕ್ ಅಥವಾ ವೇದವಾಕ್ಯೆಂದು ಹೇಳಲ್ಪಡುವುದು ಲೋಕದಲ್ಲಿ ಜನರು ತಮ್ಮ ಅಶನವಸನಾದಿಗಳ ವಿಷಯವಲ್ಲಿ ಆಡುವ ಮಾತುಗಳು ಮಾನುಷೀ (ಮನುಷ್ಯರಾಡುವ ಮಾತುಗಳು) ಎಂದು ಎರಡುವಿಧವು. ಈ ಎರಡುವಿಧವಾಕ್ಯಗಳಿಗೂ ಭೇದ (ವ್ಯತ್ಯಾಸ) ವಿರುವುದು. ಹಿಂಕಾರವು ವೇದವಾಕ್ಯಗಳೊಡನೆ ಮಾತ್ರ ಸೇರಿಸಿ ಪಠಿಸಲ್ಪಡುವವು. ಮನುಷ್ಯರಾಡುವ ವಾಕ್ಯಗಳಜತೆಯಲ್ಲಿ ಸೇರಿಸುವುದಿಲ್ಲ. ಆದ್ದರಿಂದ ಹೋತೃವು ಯಾವಾಗಲೂ ವೇದಮಂತ್ರಗಳೊಡನೆ ಹಿಂಕಾರವನ್ನು ಸೇರಿಸಿ ಪಠಿಸುವನು ಮನುಷ್ಯರಾಡುವ ಮಾತಿನ ಜತೆಗೆ ಸೇರಿಸುವುದಿಲ್ಲ. ಆದ್ದರಿಂದ ಈ ಹಿಂಕಾರವು ಈ ಎರಡುವಿಧ ವಾಕ್ಯಗಳ ಪರಸ್ಪರ ವ್ಯತ್ಯಾಸವನ್ನು ಸ್ಪಷ್ಟವಾಗಿ ತಿಳಿಸುವುದು.

---

## *English Translation*

1. Let him begin this day with singing 'him.' Thus they say.

2. Verily, the sound Him is Brahman, that day also is Brahman. He who knows this, obtains Brahman even by Brahman.

3. As he begins with the sound Him, surely that masculine sound of Him and the feminine Rik (the verse) make a couple. Thus he makes a couple at the beginning of the hymn in order to get offspring. He who knows this, gets cattle and offspring.

4. Or, as he begins with the sound Him, surely like a wooden spade, so the sound Him serves to dig up Brahman (the sap of the Veda). Aad as a man wishes to dig up any, even the hardest soil, with a spade, thus he digs up Brahman.

5. He who knows this digs up, by means of the sound Him, everything he may desire.

6. If he begins with the sound Him· that sound is the holding apart of divine and human speech. Therefore, he who begins, after having uttered the sound Him, holds apart divine and human speech.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ತೃತೀಯಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯದ ಪ್ರಥಮಾರಣ್ಯಕದ
ಮೂರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು ॥

---

## ಅಥ ಪ್ರಥಮಾರಣ್ಯಕೇ ತೃತೀಯಾಧ್ಯಾಯೇ ದ್ವಿತೀಯಃ ಖಂಡಃ

### ಪ್ರಥಮಾರಣ್ಯಕದ ಮೂರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

---

**ತದಾಹುಃ ಕೈತಸ್ಯಾಹ್ನಃ ಪ್ರತಿಪದಿತಿ ಮನಶ್ಚ ವಾಕ್ಚೇತಿ ಬ್ರೂಯಾತ್ ॥**

ಶಸ್ತ್ರಪ್ರಾರಂಭಕಾಲೇ ಮನೋವಾಚೋರತ್ಯಂತಸಾಧನತ್ವಮಭಿಪ್ರೇತ್ಯ ಪ್ರಶ್ನೋತ್ತರಾಭ್ಯಾಂ ತದುಭಯಂ ಪ್ರಶಂಸತಿ—ಅಹರುಪಲಕ್ಷಿತಸ್ಯೈತಸ್ಯ ಶಸ್ತ್ರಸ್ಯ ಕಾ ಪ್ರತಿಪತ್ತಿಃ ಪ್ರಾರಂಭಸಾಧನಮಿತಿ ತದಾಹುಸ್ತಸ್ಮಿನ್ ಶಸ್ತ್ರೇ ಜಿಜ್ಞಾಸವಃ ಪೃಚ್ಛಂತಿ । ತತ್ರ ಮನಶ್ಚೇತ್ಯಭಿಜ್ಞಃ ಶ್ರೋ(ಸ್ತೋ)ತ್ತರಮ್ । ಮನಶ್ಚ ವಾಕ್ಚೇತ್ಯೇತದುಭಯಂ ಪ್ರಾರಂಭಸಾಧನಮಿತ್ಯುತ್ತರಂ ಬ್ರೂಯಾತ್ । ಅಪ್ರಮತ್ತೇನ ಮನಸಾ ಪ್ರಥಮಂ ಶಸ್ತ್ರಂ ಪರ್ಯಾಲೋಚ್ಯ ಪಶ್ಚಾದಪ್ರಮತ್ತಯಾ ವಾಚಾ ಶಂಸೇದಿತ್ಯರ್ಥಃ । ನಿಷ್ಕೇವಲ್ಯಸ್ಯ ಬಹುವಿಧವಿಪ್ರಕೀರ್ಣಮಂತ್ರಸಮುದಾಯರೂಪತ್ವಾದ್ವಾಙ್ಮನಸಯೋರತ್ರ ವಿಶೇಷೇಣಾ ಪ್ರಮತ್ತತ್ವಾಭಿಧಾನಮ್ ॥

ಶಸ್ತ್ರಮಂತ್ರಗಳನ್ನು ಪಠಿಸಲು ಪ್ರಾರಂಭಮಾಡುವಾಗ ಹೇಗೆ ಪ್ರಾರಂಭಿಸಬೇಕು ಎಂಬ ವಿಷಯವನ್ನು ಪ್ರಶ್ನೋತ್ತರ ಮುಖಾಂತರ ವಿವರಿಸುವರು. ಅಹಸ್ಸ (ದಿನ) ಎಂಬ ಹೆಸರಿನಿಂದ ಪ್ರಾರಂಭಮಾಡಬೇಕಾದ ಈ ಶಸ್ತ್ರಮಂತ್ರಗಳಿಗೆ ಪ್ರಾರಂಭವು ಯಾವುದು ? ಯಾವುದು ಸಾಧನಭೂತವು ಎಂದು ಜಿಜ್ಞಾಸುಗಳು (ತಿಳಿಯಲಪೇಕ್ಷಿಸುವವರು) ಪ್ರಶ್ನೆಮಾಡುವರು. ಇವಕ್ಕೆ ಉತ್ತರವೇನೆಂದರೆ-ಮನಸ್ಸು ಮತ್ತು ವಾಕ್ಯವು ಎಂದು ಉತ್ತರವನ್ನು ಹೇಳಬೇಕು. ಮೊದಲು ಹೇಳಬೇಕಾದುದನ್ನು ಮನಸ್ಸಿನಲ್ಲಿ ಆಲೋಚಿಸಿ ಅನಂತರ ಅದನ್ನು (ಎಲ್ಲರಿಗೂ ತಿಳಿಯುವಂತೆ) ವಾಕ್ಯಗಳಿಂದ ಹೇಳಬೇಕು. ಇಲ್ಲಿ ಆಲೋಚಿಸಬೇಕಾದ ವಿಷಯವೇನೆಂದರೆ, ನಿಷ್ಕೇವಲ್ಯಶಸ್ತ್ರವು ಅನೇಕವಿಧಮಂತ್ರಗಳಿಂದ ಕೂಡಿರುವುದು. ವೇದದಲ್ಲಿ ಈ ಮಂತ್ರಗಳೆಲ್ಲವೂ ಒಂದೇ ಕಡೆ ಇರುವುದಿಲ್ಲ. ಬೇರೆ ಬೇರೆ ಸ್ಥಳಗಳಲ್ಲಿರುವವು. ಇವುಗಳಲ್ಲಿ ಯಾವುದನ್ನು ಮೊದಲು ಪಠಿಸಬೇಕು, ಅನಂತರ ಯಾವುದನ್ನು ಪಠಿಸಬೇಕು ಅದಾದ ಮೇಲೆ ಮುಂದೆ ಯಾವುದು, ಎಂಬ ಅನೇಕ ವಿಷಯಗಳನ್ನು ನಿರ್ಧರಿಸಬೇಕಾಗಿರುವುದು. ಇದನ್ನೇ ಮನಸ್ಸಿನಲ್ಲಿ ನಿರ್ಧರಿಸಿ ಆಲೋಚಿಸಬೇಕಾದ ವಿಷಯವು. ಮನಸ್ಸಿನಲ್ಲಿ ನಿರ್ಧರಿಸಿದನಂತರ ಅವನ್ನೇ ಸ್ಪಷ್ಟವಾಗಿ ಎಲ್ಲರೂ ತಿಳಿಯುವಂತೆ ವಾಕ್ಯಗಳಿಂದ ಪಠಿಸಬೇಕಾಗಿರುವುದು. ಆದ್ದರಿಂದ ಮನಸ್ಸು ಮತ್ತು ವಾಕ್ಯವು ಈ ಎರಡೂ ಸಾಧನಭೂತವಾಗಿರುವವು.

## ಸರ್ವೇಽನ್ಯಸ್ಮಿನ್ಕಾಮಾಃ ಶ್ರಿತಾಃ ಸರ್ವಾನನ್ಯಾನ್ಕಾಮಾನ್ದುಹೇ॥

**ಮನಶ್ಚ ವಾಕ್ಚೇತ್ಯನಯೋಃ ಪೃಥಗುಪಯೋಗಂ ದರ್ಶಯತಿ—ತಯೋರುಭಯೋರ್ಮಧ್ಯೇ ಯದನ್ಯನ್ಮನಃಶಬ್ದವಾಚ್ಯಂ ತಸ್ಮಿನ್ಸರ್ವೇಕಾಮಾಃ ಶ್ರಿತಾಃ ಪ್ರಾಪ್ತಾಃ। ಯಾತ್ವನ್ಯಾ ವಾಗಸ್ತಿ ಸಾ ಸರ್ವಾನ್ಕಾಮಾನ್ದುಹೇ ದುಗ್ಧೇ ಸಂಪಾದಯತಿ।**

ಈ ಶಸ್ತ್ರಮಂತ್ರಗಳನ್ನು ಪಠಿಸುವಾಗ ಸಾಧನಭೂತಗಳಾದ ಮನಸ್ಸು ಮತ್ತು ವಾಕ್ಯಗಳ ಉಪಯೋಗವೇನು ಎಂಬ ವಿಷಯವನ್ನು ವಿವರಿಸುವರು. ಹೇಗೆಂದರೆ, ಮನಸ್ಸಿನಲ್ಲಿ ತನಗೆ ಏನು ಬೇಕು, ಅವುಗಳನ್ನು ಪಡೆಯುವ ಬಗೆ ಹೇಗೆ ಮುಂತಾದ ಇಷ್ಟಾರ್ಥಗಳು ನೆಲಸಿರುವವು. ವಾಕ್ಯದ ಉಪಯೋಗವೇನೆಂದರೆ, ಮನಸ್ಸಿನಲ್ಲಿರುವ ಅಭಿಲಾಷೆಗಳನ್ನು ವ್ಯಕ್ತವಾಗಿ ವಾಕ್ಯಗಳ ಮೂಲಕ ಎಲ್ಲರಿಗೂ ಸ್ಪಷ್ಟವಾಗಿ ತಿಳಿಯುವಂತೆ ಉಚ್ಚರಿಸುವುದು. ಇವುಗಳೇ ಮನಸ್ಸು ಮತ್ತು ವಾಕ್ಯಗಳ ಉಪಯೋಗವು.

## ಮನಸಿ ವೈ ಸರ್ವೇ ಕಾಮಾಃ ಶ್ರಿತಾ ಮನಸಾ ಹಿ ಸರ್ವಾನ್ ಕಾಮಾನ್ ಧ್ಯಾಯತಿ ॥

**ಮನಸಃ ಕಾಮಾಧಾರತ್ವಂ ವಿಶದಯತಿ-ಕಾಮಾ ಅಭಿಲಾಷಾ ಮನೋವೃತ್ತಿವಿಶೇಷತ್ವಾನ್ಮನಸ್ಯೇವಾವಶ್ರಾಃ(?) (ಸ್ಥಿತಾಃ)। ಅತ ಏವ ಸರ್ವೇ ಲೋಕಾಃ ಕಾಮ್ಯಮಾನಾನ್ಪದಾರ್ಥಾನ್ಮನಸಾ ಧ್ಯಾಯಂತಿ ॥**

ಪುರುಷನು ಬಯಸುವ ಅಭಿಲಾಷೆಗಳೆಲ್ಲವೂ ಮನಸ್ಸಿನಲ್ಲಿಯೇ ಮೊದಲು ರೂಪಗೊಳ್ಳುವವು ಎಂದರೆ ಉತ್ಪನ್ನವಾಗುವವು. ಮನಸ್ಸಿನಲ್ಲಿಯೇ ಪುರುಷನು ತನಗೆ ಬೇಕಾದ ವಿಷಯಗಳನ್ನು ಎಂದರೆ ಅಭಿಲಾಷೆಗಳನ್ನು ಮೊದಲು ಧ್ಯಾನ ಮಾಡುವನು. ಆದ್ದರಿಂದ ಅಭಿಲಾಷೆಗಳಿಗೆಲ್ಲಾ ಮನಸ್ಸೇ ಆಧಾರವು.

## ಸರ್ವೇ ಹಾಸ್ಮಿನ್ಕಾಮಾಃ ಶ್ರಯಂತೇ ಯ ಏವಂ ವೇದ ॥

**ಏತದ್ವೇದನಂ ಪ್ರಶಂಸತಿ—**

ಯಾವ ಪುರುಷನು ಮನಸ್ಸಿನ ಸಂಕಲ್ಪವನ್ನು ವಿಶದವಾಗಿ ತಿಳಿಯುವನೋ ಅವನು ತನ್ನ ಸಮಸ್ತ ಅಭಿಲಾಷೆಗಳನ್ನೂ ಪಡೆಯುವನು.

## ವಾಗ್ವೈ ಸರ್ವಾನ್ಕಾಮಾನ್ದುಹೇ ವಾಚಾ ಹಿ ಸರ್ವಾನ್ಕಾಮಾನ್ವದತಿ ॥

**ವಾಚಃ ಕರ್ಮಸಂಪಾದಕತ್ವಂ ವಿಶದಯತಿ—ವಾಗೇವ ಸರ್ವಾನಭಿಲಷಿತಾನ್ಪದಾರ್ಥಾನ್ಸಂಪಾದಯತಿ। ಯಸ್ಮಾಲ್ಲೋಕೇ ಮನುಷ್ಯಾಃ ಪದಾರ್ಥಾಃ ಸಂತ್ವಿತಿ ದಾತೄಣಾಮಗ್ರೇ ವಾಚ ಯಾಚತೇ ತೇಚಿ ದಾತಾರಃ ಪ್ರಯಚ್ಛಂತಿ ತದಿದಂ ವಾಚಃ ಕಾಮಸಂಪಾದಕತ್ವಮ್ ।**

ಮನಸ್ಸಿನಲ್ಲಿ ಉದ್ಭವಿಸುವ ಸಂಕಲ್ಪಾದಿ ಅಭಿಲಾಷೆಗಳನ್ನು ತಿಳಿಸಿದ್ದಾಯಿತು. ಈ ವಾಕ್ಯವು ಹೇಗೆ ಸಾಧನ ಭೂತವು ಎಂಬ ವಿಷಯವನ್ನು ತಿಳಿಸುವರು. ಮನಸ್ಸಿನಲ್ಲಿ ಹುಟ್ಟುವ ಅಭಿಲಾಷೆ ಮೊದಲಾದವುಗಳು ಮನಸ್ಸಿನಲ್ಲಿಯೇ ರಹಸ್ಯವಾಗಿ ನೆಲೆಸಿರುವವು. ಇತರರಿಗೆ ತಿಳಿಯುವುದಿಲ್ಲ. ಎಂದರೆ, ಒಬ್ಬರ ಮನಸ್ಸಿನಲ್ಲಿರುವ ರಹಸ್ಯವು ಮತ್ತೊಬ್ಬರಿಗೆ ತಿಳಿಯುವುದಿಲ್ಲ. ಆದ್ದರಿಂದ ಪುರುಷನು ತನ್ನ ಮನಸ್ಸಿನಲ್ಲಿ ಉಂಟಾಗುವ ಅಭಿಲಾಷೆಗಳನ್ನು ಸ್ಪಷ್ಟವಾಗಿ ವಾಕ್ಯಗಳ ಮೂಲಕ ಇತರರಿಗೆ ತಿಳಿಯಪಡಿಸುವನು ಆದ್ದರಿಂದ ವಾಕ್ಯವೇ(ಮಾತಿನಿಂದ ತಿಳಿಯಪಡಿಸುವುದೇ) ಇನ್ನೊಂದು ಸಾಧನೋಪಾಯವು. ಲೋಕವ್ಯವಹಾರದಲ್ಲಿಯೂ ಒಬ್ಬ ಪುರುಷನು ಇನ್ನೊಬ್ಬನಿಂದ ತನಗೆ ಬೇಕಾದ ವಸ್ತುವನ್ನು ಅಪೇಕ್ಷಿಸಿದರೆ ಅದನ್ನು ಪಡೆಯಲು ವಾಕ್ಯಗಳಿಂದಲೇ ತಿಳಿಸಬೇಕು. ವಾಕ್ಯಗಳನ್ನು ಕೇಳಿದ ಪುರುಷನು ಅದರಂತೆ ಪುರುಷನ ಇಷ್ಟಾರ್ಥವನ್ನು ನೆರವೇರಿಸುವನು. ಆದ್ದರಿಂದ ಪುರುಷನ ಮನಸ್ಸಿನಲ್ಲಿರುವ ಇಷ್ಟಾರ್ಥವನ್ನು ಇತರರಿಗೆ ತಿಳಿಯಪಡಿಸಬೇಕಾದರೆ ವಾಕ್ಯವೇ ಸಾಧನವು.

## ಸರ್ವಾನ್ಹಾಸ್ಮೈ ಕಾಮಾನ್ವಾಗ್ದುಹೇ ಯ ಏವಂ ವೇದ॥

**ವೇದನಂ ಪ್ರಶಂಸತಿ—**

ಈ ವಿಷಯವನ್ನೆಲ್ಲಾ ತಿಳಿದು ಅದರಂತೆ ಆಚರಿಸುವ ಪುರುಷನು ತನ್ನ ಇಷ್ಟಾರ್ಥಗಳನ್ನೆಲ್ಲಾ ಪಡೆಯುವನು.

## ತದಾಹುರ್ನೈತದಹರ್ಋಚಾ ನ ಯಜುಷಾ ನ ಸಾಮ್ನಾ ಪ್ರತ್ಯಕ್ಷಾತ್ ಪ್ರತಿಪದ್ಯೇತ ನರ್ಚೋ ನ ಯಜುಷೋ ನ ಸಾಮ್ನ ಇಯಾದಿತಿ ॥

**ವಾಙ್ಮನಸಯೋರಪ್ರಮತ್ತತ್ವಂ ವಿಧಾಯ ಹಿಂಕಾರಾದೂರ್ಧ್ವಂ ವ್ಯಾಹೃತಿತ್ರಯೋಚ್ಚಾರಣಂ ವಿಧಾತುಂ ಪ್ರಸ್ತೌತಿ—ಅಯಂ ಕರ್ಮವಿಶೇಷ ಋಗಾದಿಭ್ಯೋ ನೇಯಾನ್ನಾಪಗಚ್ಛೇದಿತ್ಯಭಿಪ್ರೇತ್ಯ ತದೇತದಹಃ ಪ್ರತ್ಯಕ್ಷಾದವ್ಯವಧಾನಾದೃಗಾದಿಭಿರ್ನ ಪ್ರಾರಭೇತೇತ್ಯೇವ ತದಾಹುಃ, ತಸ್ಮಿನ್ ಶಸ್ತ್ರೇಽಭಿಜ್ಞಾಃ ಕಥಯಂತಿ ॥**

ಈ ಶಸ್ತ್ರಮಂತ್ರಪಠನಕಾಲದಲ್ಲಿ ಅಭಿಜ್ಞರಾದವರು ಹೀಗೆ ಹೇಳುವರು. ಈ ಶಸ್ತ್ರಮಂತ್ರವನ್ನು ಹೇಗೆ ಪ್ರಾರಂಭಿಸಬೇಕು ಎಂದರೆ ಮೊದಲು ಪ್ರಾರಂಭ ಮಾಡುವಾಗ ಋಗ್ವೇದದ ಋಕ್ಕನ್ನಾಗಲಿ, ಯಜುರ್ವೇದದ ಮಂತ್ರವನ್ನಾಗಲಿ ಸಾಮವೇದದ ಮಂತ್ರ (ಗಾನ) ವನ್ನಾಗಲಿ ಪಠಿಸಿ ಪ್ರಾರಂಭಮಾಡಕೂಡದು.

**ತದೇತಾ ವ್ಯಾಹೃತೀಃ ಪುರಸ್ತಾಜ್ಜಪೇತ್ ॥**

**ತದವ್ಯವಧಾನಂ ವಾರಯಿತುಂ ವ್ಯವಧಾನಹೇತುಮಂತ್ರಂ ವಿಧತ್ತೇ—ಯಸ್ಮಾದ್ಧಿಂಕಾರಸ್ಯರ್ಗಾದೀನಾಂ ಚ ಮಧ್ಯೇ ವ್ಯವಧಾನಮಪೇಕ್ಷಿತಂ ತಸ್ಮಾದೃಗಾದಿಭ್ಯಃ ಪುರಸ್ತಾದೇತಾ ಏವ ವಕ್ಷ್ಯಮಾಣಾ ವ್ಯಾಹೃತೀರ್ಜಪೇತ್ ॥**

ಮತ್ತೇನನ್ನು ಪಠಿಸಬೇಕು ಎಂದರೆ ವ್ಯಾಹೃತಿಗಳನ್ನು ಪಠಿಸಿ ಅನಂತರ ಶಸ್ತ್ರಮಂತ್ರಗಳನ್ನು ಪಠಿಸಬೇಕು. ಎಂದರೆ ಹಿಂಕಾರಕ್ಕೂ ಋಗಾದಿಮಂತ್ರಗಳಿಗೂ ಮಧ್ಯದಲ್ಲಿ ಈ ವ್ಯಾಹೃತಿಗಳನ್ನು ಪಠಿಸಬೇಕು.

**ಭೂರ್ಭುವಃ ಸ್ವರಿತ್ಯೇತಾ ವಾವ ವ್ಯಾಹೃತಯ ಇಮೇ ತ್ರಯೋ ವೇದಾ ಭೂರಿತ್ಯೇವ ಋಗ್ವೇದೋ ಭುವ ಇತಿ ಯಜುರ್ವೇದಃ ಸ್ವರಿತಿ ಸಾಮವೇದಸ್ತನ್ನರ್ಚಾ ನ ಯಜುಷಾ ನ ಸಾಮ್ನಾ ಪ್ರತ್ಯಕ್ನಾತ್ಪ್ರತಿಪದ್ಯತೇ ನರ್ಚೋ ನ ಯಜುಷೋ ನ ಸಾಮ್ನ ಇತಿ ॥**

**ವ್ಯಾಹೃತೀನಾಂ ಸ್ವರೂಪಂ ತತ್ಪ್ರಶಂಸಾಂ ಚ ದರ್ಶಯತಿ—ಭೂರಿತ್ಯಾದಿಮಂತ್ರತ್ರಯರೂಪಾ ಏವ ವ್ಯಾಹೃತಯಃ ॥ ಇಮೇ ಚ ಮಂತ್ರಾ ವೇದತ್ರಯಪ್ರತಿನಿಧಿರೂಪಾಃ । ಸ ಏವಾರ್ಥೋ ಭೂರಿತ್ಯೇವೇತ್ಯಾದಿನಾ ಸ್ಪಷ್ಟೀಕ್ರಿಯತೇ । ತತ್ತಥಾ ಸತಿ ವ್ಯಾಹೃತೀನಾಂ ಮಧ್ಯೇ ಪ್ರಯೋಗಾದೃಗಾದಿಭಿರವ್ಯವಧಾನಾತ್ ಪ್ರಾರಂಭೋ ನ ಭವತಿ ತಸ್ಮಾದೃಗಾದಿಭ್ಯೋ ನಾಪಗಚ್ಛತಿ ॥**

ವ್ಯಾಹೃತಿಗಳ ಸ್ವರೂಪವನ್ನೂ ಅವುಗಳ ಪ್ರಶಂಸೆಯನ್ನೂ ಮಾಡುವರು. **ಭೂಃ ಭುವಃ ಸ್ವಃ** ಎಂಬವುಗಳೇ ವ್ಯಾಹೃತಿಗಳು. ಇವುಗಳು ಮೂರು ವೇದಗಳಿಗೆ ಪ್ರತಿನಿಧಿರೂಪವಾಗಿರುವವು. ಎಂದರೆ **ಭೂಃ** ಎಂಬ ವ್ಯಾಹೃತಿಯು ಋಗ್ವೇದವನ್ನೂ, ಭುವಃ ಎಂಬ ವ್ಯಾಹೃತಿಯು ಯಜುರ್ವೇದವನ್ನೂ **ಸ್ವಃ** ಎಂಬ ವ್ಯಾಹೃತಿಯು ಸಾಮವೇದವನ್ನೂ ಪ್ರತಿನಿಧಿಸುವವು. ಆದ್ದರಿಂದ ಈ ವ್ಯಾಹೃತಿಗಳನ್ನು ಉಚ್ಚರಿಸದೆ ಹಾಗೆಯೇ ಋಗ್ವೇದವನ್ನಾಗಲಿ, ಯಜುರ್ವೇದವನ್ನಾಗಲಿ ಸಾಮವೇದವನ್ನಾಗಲಿ, ಪಠಿಸಕೂಡದು.

————

## *English Translation*

1. And here they ask : ‘ What is the beginning of this day ? ’ Let him say : ‘ Mind and speech.’

2. All desires dwell in the one (mind), the other yields all desires,

3. All desires dwell in the mind, for with the mind he conceives all desires.

4. All desires come to him who knows this.

5. Speech yields all desires, for with speech he declares all his desires.

6. Speech yields all desires to him who knows this.

7. Here they say ‘ Let him not begin this day with a Rik, a Yagus, or a Saman verse (divine speech), for it is said, he should not start with a Rik, a Yagus, or a Saman.

8. Therefore, let him say these Vyahritis (sacred interejections) first.

9. These interjections, Bhus, Bhuvas, Svar are the three Vedas, Bhus the Rig-veda, Bhuvas the Yagur-veda, Svar the Same-veda. Therefore (by intarcalating these) he does not begin simply with a Rik, Yagus, or Saman verse, he does not start with a Rik, Yagus, or Saman verse.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ತೃತೀಯಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ಮಾಧವೀಯ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯದ ಪ್ರಥಮಾರಣ್ಯಕದ
ಮೂರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವು

———

# ಅಥ ಪ್ರಥಮಾರಣ್ಯಕೇ ತೃತೀಯಾಧ್ಯಾಯೇ ತೃತೀಯಃ ಖಂಡಃ

## ಪ್ರಥಮಾರಣ್ಯಕದ ಮೂರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

———

**ತದಿತಿ ಪ್ರತಿಪದ್ಯತೇ ತತ್ತದಿತಿ ವಾ ಅನ್ನಮನ್ನಮೇವ ತದಭಿಪ್ರತಿ-ಪದ್ಯತೇ ॥**

ನಿಷ್ಕೇವಲ್ಯಶಸ್ತ್ರಸ್ಯಾದೌ ಹಿಂಕಾರಂ ವ್ಯಾಹೃತೀಶ್ಚ ವಿಧಾಯ ‘ ತದಿದಾಸ ’ (ಋ. ಸ. ಮ-೧೦-ಸೂ-೧೨೦-ಋ-೧) ಇತ್ಯಾದಿಸೂಕ್ತಸ್ಯಾದೌ ಯಸ್ತಚ್ಛಬ್ದಸಮೇನಂ (ತಂ) ಪ್ರಶಂಸತಿ— ತದಿತ್ಯನೇನ ಶಬ್ದೇನ ಶಸ್ತ್ರಂ ಪ್ರತಿಪದ್ಯತೇ । ಲೋಕೇ ಹಿ ದೇಶಾಂತರೇ ಕಾಲಾಂತರೇ ಚ ಯದಪ್ಯನ್ನಂ ಸಮೀಚೀನಂ ಭುಕ್ತಂ ತತ್ಸರ್ವಮನ್ನಂ ಪುನಃ ಪುನಸ್ತತ್ತದಿತ್ಯೇವಮನುಸ್ಮರ್ಯತೇ । ಅತೋಽತ್ರಾಪಿ-ತಚ್ಛಬ್ದೋಪಕ್ರಮೇಣಾನ್ನಮೇವಾಭಿಲಕ್ಷ್ಯ ಪ್ರಾರಬ್ಧವಾನ್ಭವತಿ ॥

ನಿಷ್ಕೇವಲ್ಯಶಸ್ತ್ರದ ಆದಿಯಲ್ಲಿ ಹಿಂಕಾರವನ್ನೂ ವ್ಯಾಹೃತಿಗಳನ್ನೂ ಪಠಿಸಿ ಅನಂತರ ಶಸ್ತ್ರದ ಮೊದಲನೇ ಸೂಕ್ತವಾದ **ತದಿದಾಸ ಭುವನೇಷು** (ಋ. ಸಂ. ೧೦-೧೨೦-೧) ಎಂಬ ಸೂಕ್ತದ ಪ್ರಾರಂಭದಲ್ಲಿರುವ ಯಚ್ಛಬ್ದ ತಚ್ಛಬ್ದಗಳನ್ನು ಪ್ರಶಂಸೆಮಾಡುವರು. ಇಲ್ಲಿ **ತತ್** ಎಂಬ ಶಬ್ದವು ಶಸ್ತ್ರಮಂತ್ರವನ್ನು ಸೂಚಿಸುವುದು. ಪ್ರಪಂಚವ್ಯವಹಾರದಲ್ಲಿ ಯಾವ ದೇಶದಲ್ಲಾಗಲಿ, ಯಾವಕಾಲವಲ್ಲಾಗಲಿ ಉತ್ತಮವಾದ ಆಹಾರವನ್ನು ಒಂದಾವರ್ತಿ ಸೇವಿಸಿದರೆ ಅದನ್ನು ಯಾವಾಗಲೂ (ಆಗಾಗ) ಜ್ಞಾಪಿಸಿಕೊಳ್ಳುವುದು ಸ್ವಾಭಾವಿಕ (ಸಹಜ) ವಾಗಿರುವುದು. ಆದ್ದರಿಂದ ಅನ್ನಪ್ರದವಾದ ಈ ನಿಷ್ಕೇವಲ್ಯ ಶಸ್ತ್ರವನ್ನು ಪಠಿಸುವಾಗ ಅನ್ನಸೂಚಕವಾದ **ತತ್** ಎಂಬ ಶಬ್ದದಿಂದಲೇ ಪ್ರಾರಂಭಮಾಡುವುದು ನ್ಯಾಯವಾಗಿದೆ.

**ಏತಾಂ ವಾವ ಪ್ರಜಾಪತಿಃ ಪ್ರಥಮಾಂ ವಾಚಂ ವ್ಯಾಹರೇದೇಕಾಕ್ಷರ-ದ್ವ್ಯಕ್ಷರಾಂ ತತೇತಿ ತಾತೇತಿ ತಥೈವೈತತ್ಕುಮಾರಃ ಪ್ರಥಮವಾದೀ ವಾಚಂ ವ್ಯಾಹರತ್ಯೇಕಾಕ್ಷರದ್ವ್ಯಕ್ಷರಾಂ ತತೇತಿ ತಾತೇತಿ ತಯೈವ ತತ್ತತವತ್ಯಾ ವಾಚಾ ಪ್ರತಿಪದ್ಯತೇ ॥**

ಪ್ರಕಾರಾಂತರೇಣ ತಚ್ಛಬ್ದಂ ಪ್ರಶಂಸತಿ—ಪುರಾ ಪ್ರಜಾಪತಿರ್ಜಗತ್ಸೃಷ್ಟ್ವಾ ತಾಮೇವ ತಕಾರಾದಿಕಂ ಪ್ರಥಮಾಂ ವಾಚಮುಕ್ತವಾನ್ । ಕೀದೃಶೀಂ ವಾಚಮ್ । ಏಕಾಕ್ಷರದ್ವ್ಯಕ್ಷರಾಮ್ । ಏತೇನ ಹ್ರಸ್ವೇನೋಪೇತೈಕಾಕ್ಷರಾ । ದ್ವಾಭ್ಯಾಂ ಹ್ರಸ್ವದೀರ್ಘಾಭ್ಯಾಮುಪೇತಾ ದ್ವ್ಯಕ್ಷರಾ । ಸೈವೋಭಯ-ವಿಧೋದಾಹೃತ್ಯ ಪ್ರದರ್ಶ್ಯತೇ । ತತೇತ್ಯೇಕಾಕ್ಷರಾ । ತಾತೇತಿ ದ್ವ್ಯಕ್ಷರಾ । ಸ ಪ್ರಜಾಪತಿರ್ಜಗದೀಶ್ವರ ಪ್ರಥಮತಃ ಸೃಷ್ಟಂ ಹಿರಣ್ಯಗರ್ಭಂ ಪುತ್ರಮಭಿಲಕ್ಷ್ಯೋಪಾತ್ತಯೋಽಸ್ತಸ್ಮಿನ್ಯಥೋಕ್ತಂ ಪಿತೃವಾಚಕಂ ಶಬ್ದದ್ವಯಂ ಪ್ರಯುಕ್ತವಾನ್ । ಅತ ಏವೇದಾನೀಂತನಾ ಅಪಿ ಸ್ತನಂಧಯಂ ಪುತ್ರಂ ಪಿತೃವಾಚಕ-

**ಶಬ್ದೇನೋಪಲಾಲಯಂತಿ । ಯದ್ವಾ ಪ್ರಜಾಪತಿರ್ಹಿರಣ್ಯಗರ್ಭಃ ಪ್ರಥಮಂ ಭಾಷಾಮಭ್ಯಸ್ಯತ್ತ (ಸ್ಯಂಸ್ತ) ತೇತಿ ವಾ ತಾತೇತಿ ವಾ ವಾಚಂ ವ್ಯಾಹರತಿ । ಏವಂ ಸತಿ ಸೂಕ್ತಾದೌ ತಚ್ಛಬ್ದಂ ಪ್ರಯುಂಜಾನೋ ಹೋತಾ ತತಶಬ್ದೋಪೇತಯಾ ಪ್ರಜಾಪತಿಪ್ರಯುಕ್ತಯಾ ತಥ್ಯೈವ (ಪ್ರಾರಬ್ಧವಾನ್ಭವತಿ) ಈಷದ್ವೈಲಕ್ಷಣ್ಯೇಽಪಿ ತಚ್ಛಬ್ದಸ್ಯ ತತಶಬ್ದೋಪಕ್ರಮಸಾಮ್ಯಾತ್ । (ಯಥೋಕ್ತಸ್ಯ ತಚ್ಛಬ್ದಸ್ಯೋಪಕ್ರಮಸಾಮ್ಯಾತ್)**

ಪ್ರಕಾರಾಂತರವಾಗಿ ತಚ್ಛಬ್ದವನ್ನು ಪ್ರಶಂಸೆಮಾಡುವರು. ಪೂರ್ವದಲ್ಲಿ ಪಜಾಪತಿಯು ಜಗತ್ತನ್ನು ಸೃಷ್ಟಿಮಾಡಿದ ಕಾಲದಲ್ಲಿ ಈ ತಕಾರವನ್ನೇ ಮೊದಲು ಉಚ್ಚರಿಸಿದನು. ಎಂದರೆ ಪ್ರಜಾಪತಿಯು ಮೊದಲು ಉಚ್ಚರಿಸಿದ ವಾಕ್ಯದಲ್ಲಿ ತಚ್ಛಬ್ದವಿದ್ದಿತ್ತು. ಪ್ರಜಾಪತಿಯು ಉಚ್ಚರಿಸಿದ ವಾಕ್ಯದಲ್ಲಿ ತಚ್ಛಬ್ದರೂಪವಾದ ಎರಡು ಶಬ್ದಗಳಿದ್ದವು. ಆ ವಾಕ್ಯದಲ್ಲಿದ್ದ ತಚ್ಛಬ್ದರೂಪಶಬ್ದಗಳಾವವೆಂದರೆ ತತ ಮತ್ತು ತಾತ ಎಂಬುವುಗಳು. ಇವುಗಳಲ್ಲಿ ತತ ಎಂಬ ಶಬ್ದವು ಹ್ರಸ್ವಾಕ್ಷರದಿಂದಲೂ **ತಾತ** ಎಂಬ ಶಬ್ದವು ದೀರ್ಘಾಕ್ಷರದಿಂದಲೂ ಕೂಡಿರುವುದು. ಈ ಎರಡು ಶಬ್ದಗಳನ್ನೂ (ತತ ಮತ್ತು **ತಾತ**) ಪ್ರಜಾಪತಿಯು ತನ್ನ ಪುತ್ರನಾದ ಬ್ರಹ್ಮನ ವಿಷಯದಲ್ಲಿ ಮೊದಲು ಉಪಯೋಗಿಸಿದನು. ಈ ಎರಡು ಶಬ್ದಗಳು ತಂದೆಯು ಪುತ್ರನನ್ನು ಉದ್ದೇಶಿಸಿ ಉಪಯೋಗಿಸುವ ಶಬ್ದಗಳು. ಈಗಲೂ ಸಹ ತಂದೆಯಾದವನು ತನ್ನ ಪ್ರೀತಿಪಾತ್ರನಾದ ಪುತ್ರನನ್ನು ಈ ಶಬ್ದಗಳಿಂದಲೇ ಕರೆಯುವನು. ಅಥವಾ ಪ್ರಜಾಪತಿಯ ಪುತ್ರನಾದ ಬ್ರಹ್ಮನು ತನ್ನ ತಂದೆಯಾದ ಪ್ರಜಾಪತಿಯನ್ನು ಸಂಬೋಧಿಸಿ ಕರೆಯುವಾಗ ತನ್ನ ಬಾಲಭಾಷೆಯಲ್ಲಿ **ತಾತ** ಎಂದೇ ಕರೆಯುತ್ತಿದ್ದನು. ಅದೇ ಈಗಲೂ ರೂಢಿಯಲ್ಲಿರುವುದು. ತತ ಮತ್ತು ತತ್ ಶಬ್ದಗಳಿಗೆ ಸ್ವಲ್ಪ ವ್ಯತ್ಯಾಸವಿದ್ದರೂ ಅದರಿಂದ ಅರ್ಥವೇನೂ ವ್ಯತ್ಯಾಸವಾಗುವುದಿಲ್ಲ.

## ತದುಕ್ತಮೃಷಿಣಾ ॥

**ಯಥೋಕ್ತಸ್ಯ ತಚ್ಛಬ್ದಸ್ಯ ಮಹಿಮಾನಂ ಪ್ರಕಾಶಯಿತುಂ ಕಾಂಚಿದೃಚಮುದಾಹರತಿ— ಯತ್ಪೂರ್ವೇಣ ಬ್ರಾಹ್ಮಣವಾಕ್ಯೇನ ತಚ್ಛಬ್ದಮಾಹಾತ್ಮ್ಯಮುದಿತಂ ತದೇವರ್ಷಿಣಾಽತೀಂದ್ರಿಯಾರ್ಥದರ್ಶಿನಾ ಮಂತ್ರೇಣೋಕ್ತಂ । ಸ ಚ ಮಂತ್ರವಿಶೇಷೋಽತ್ರೈವ ದಾಶತಯ್ಯಾಮೇಮಾನ್ನಾತಃ—**

**“ ಬೃಹಸ್ಪತೇ ಪ್ರಥಮಂ ವಾಚೋ ಅಗ್ರಂ ಯತ್ಪ್ರೈರತ ನಾಮಧೇಯಂ ದಧಾನಾಃ ।**
**ಯದೇಷಾಂ ಶ್ರೇಷ್ಠಂ ಯದರಿಪ್ರಮಾಸೀತ್ಪ್ರೇಣಾ ತದೇಷಾಂ ನಿಹಿತಂ ಗುಹಾಽಽವಿಃ ”**
**(ಋ. ಸಂ. ಮಂ. ೧೦ ಸೂ. ೭೧ ಋ. ೧) ಇತಿ ॥**

**ತಸ್ಯ ಮಂತ್ರವಿಶೇಷಸ್ಯಾಯಮರ್ಥಃ—ಹೇ ಬೃಹಸ್ಪತೇ ಜಾತಸ್ಯ ಪುತ್ರಸ್ಯ ನಾಮಧೇಯಂ ದಧಾನಾಃ ಪಿತ್ರಾದಯೋ ನಿಜಯೋರ್ಯೇತರಸ್ಯಾ ವಾಚೋಽಗ್ರಂ ಶ್ರೇಷ್ಠಂ ಯತ್ಪದಂ ಪ್ರಥಮಂ ಪ್ರೈರತ ಪ್ರಯುಕ್ತವಂತಃ । ಹೇ ಕುಮಾರ ತ್ವಂ ವಿಷ್ಣುಶರ್ಮಾ ರುದ್ರಶರ್ಮಾಸೀತ್ಯೇವಮಾದಿ ದಕ್ಷಿಣಕರ್ಣೇ ಪಠಂತಿ। ಯನ್ನಾಮೈಷಾಂ ತದೀಯಬಂಧುಭಿರ್ವ್ಯವಹ್ರಿಯಮಾಣಾನಾಂ ಮಧ್ಯೇ ಶ್ರೇಷ್ಠಂ “ ದ್ವ್ಯಕ್ಷರಂ ಚತುರಕ್ಷರಂ ವಾ ” ಇತ್ಯಾದಿಶಾಸ್ತ್ರೀಯಲಕ್ಷಣೋಪೇತಮಾಸೀದ್ಯನ್ನಾಮಾರಿಪ್ರಂ ಪಾಪರಹಿತಂ ಲೋಕಶಾಸ್ತ್ರವಿರೋಧರಹಿತಮಾಸೀತ್ । ಏಷಾಂ ಸಂಭಾವಿತಾನಾಂ ಮಧ್ಯೇ ಯನ್ನಾಮಧೇಯಂ ಯದ್ಯಥಾಪ್ರೋಕ್ತಂ ನಾಮ ಪ್ರೇಣಾ ಪ್ರೇಮ್ಣಾ ಬೃಹಸ್ಪತಿಸಂಬಂಧಿನಾ ಸ್ನೇಹೇನ ಚ (ತಿ) ಹಿತಂ ಸಂಪಾದಿತಂ।**

**ತಚ್ಚ ನಾಮ ಕೀದೃಶಮ್ / ಗುಹಾ ಗೂಢಮುಪನಯನಾತ್ಪೂರ್ವಂ ಮಾತಾಪಿತೃಭ್ಯಾಂ ಗೋಪಿತಂ। ತಥಾ ಚಾಶ್ವಲಾಯನಃ—" ತನ್ಮಾತಾಪಿತರೌ ವಿದ್ಯಾತಾಮೋಪನಯನಾತ್ " ಇತಿ। ಯಥಾ ಮನುಷ್ಯೇಷು ಯನ್ನಾಮ ಗೂಢಂ ತಥಾ ದೇವೇಷ್ವಾವಿಃ ಪ್ರಕಟಮ್। ದೇವಾ ಹಿ ಸರ್ವಜ್ಞತ್ವಾದ್ಗೂಢಮಪಿ ಜಾನಂತಿ॥**

ತಚ್ಛಬ್ದವನ್ನು ಪ್ರಶಂಸಿಸುವುದಕ್ಕಾಗಿ ಒಂದು ಋಕ್ಕನ್ನು ಉದಾಹರಿಸುವರು. ತಚ್ಛಬ್ದ ಪ್ರಶಂಸೆಯನ್ನು ಓರ್ವ ಋಷಿಯೂ ಒಂದು ಮಂತ್ರದಲ್ಲಿ ವಿಶದಪಡಿಸಿರುವನು—ಆ ಮಂತ್ರವು ಯಾವುದೆಂದರೆ—

**ಬೃಹಸ್ಪತೇ ಪ್ರಥಮಂ ವಾಚೋ ಅಗ್ರಂ ಯತ್ಪ್ರೈರತ ನಾಮಧೇಯಂ ದಧಾನಾಃ।**
**ಯದೇಷಾಂ ಶ್ರೇಷ್ಠಂ ಯದರಿಪ್ರಮಾಸೀತ್ಪ್ರೇಣಾ ತದೇಷಾಂ ನಿಹಿತಂ ಗುಹಾಽಽವಿಃ॥**

(ಋ. ಸಂ. ೧೦-೭೧-೧)

ಇವರ ಅರ್ಥವು—ಎಲೈ ಬೃಹಸ್ಪತಿಯೇ, ಈಗ ತಾನೇ ಹುಟ್ಟಿರುವ ಪುತ್ರನ (ಮಗುವಿನ) ಹೆಸರನ್ನು ತಂದೆ ತಾಯಿ ಮುಂತಾದವರು ಈ ಕುಮಾರನಿಗೆ ಇಟ್ಟಿರುವರು. ಎಲೈ ಕುಮಾರನೇ ನಿನ್ನ ಹೆಸರು ವಿಷ್ಣುಶರ್ಮನು ಎಂದು ಮಗುವಿನ ಬಲಕಿವಿಯಲ್ಲಿ ನಾಮಕರಣಕಾಲದಲ್ಲಿ ಹೆಸರಿಟ್ಟು ಪಠಿಸುವರು. ಈ ಹೆಸರು ಶ್ರೇಷ್ಠವಾಗಿಯೂ ಪಾಪರಹಿತವಾಗಿಯೂ ಇರುವುದು. ಈ ಹೆಸರು ಯಾರಿಗೂ ಗೊತ್ತಿರುವುದಿಲ್ಲ ತಂದೆತಾಯಿಯರಿಗೆ ಮಾತ್ರ ಗೊತ್ತಿರುವುದು ದೇವತೆಗಳಿಗೆ ಮಾತ್ರ ಗೊತ್ತಿರುವುದು. ಇತ್ಯಾದಿ.

## ಬೃಹಸ್ಪತೇ ಪ್ರಥಮಂ ವಾಚೋ ಅಗ್ರಮಿತ್ಯೇತದ್ಧ್ಯೇವ ಪ್ರಥಮಂ ವಾಚೋ ಅಗ್ರಮ್॥

**ಏತಸ್ಯ ಮಂತ್ರಸ್ಯ ಪ್ರಥಮಪಾದಮನೂದ್ಯ ವ್ಯಾಚಷ್ಟೇ—ಪ್ರಾಥಮಿಕನಾಮಧೇಯಸ್ಯ ವಿಚಾರ್ಯ ನಿರ್ಮಿತತ್ವಾದಿತರವಾಚಾಮಪೇಕ್ಷಯಾ ಶ್ರೇಷ್ಠಾರ್ಥತ್ವ (ತಾ) ದ್ಯೋತನಾರ್ಥೋ ಹಿಶಬ್ದಃ॥**

ಈ ಋಕ್ಕಿನ ಮೊದಲನೇ ಪಾದವನ್ನು ವಿವರಿಸುವರು—ಎಲೈ ಬೃಹಸ್ಪತಿಯೇ ಕುಮಾರನನ್ನು ಸಂಬೋಧಿಸುವ ಈ ಹೆಸರು ಕುಮಾರನನ್ನು ಕುರಿತು ಹೇಳುವ ವಾಕ್ಯಗಳಲ್ಲೆಲ್ಲಾ ಇದೇ ಮೊದಲನೆಯದು ಮತ್ತು ಶ್ರೇಷ್ಠವಾದುದು ಮತ್ತು ಪಾಪರಹಿತವಾದುದು.

## ಯತ್ಪ್ರೈರತ ನಾಮಧೇಯಂ ದಧಾನಾ ಇತಿ ವಾಚಾ ಹಿ ನಾಮಧೇಯಾನಿ ಧೀಯಂತೇ॥

**ದ್ವಿತೀಯಪಾದಮನೂದ್ಯ ವ್ಯಾಚಷ್ಟೇ—ಯಸ್ಮಾನ್ನಾಮಧೇಯಾನಾಂ ವಾಙ್ನಿಷ್ಪಾದ್ಯತ್ವಂ ತಸ್ಮಾದುಚ್ಚಾರಣವಾಚಿನಃ ಪ್ರೈರತೇತಿ ಶಬ್ದಸ್ಯ ಪ್ರಯೋಗೋ ಯುಕ್ತ ಇತ್ಯರ್ಥಃ॥**

ಎರಡನೇ ಪಾದದ ಅರ್ಥವು—ಈ ಹೆಸರನ್ನು ಮನಸ್ಸಿನಲ್ಲಿಯೇ ಯೋಚಿಸಿ ಈಗ ವಾಕ್ಯದ ಉಚ್ಚಾರಣೆಯಿಂದ ತಿಳಿಸಿರುವರು.

ಯದೇಷಾಂ ಶ್ರೇಷ್ಠಂ ಯದರಿಪ್ರಮಾಸೀದಿತ್ಯೇತದ್ಧ್ಯೇವ ಶ್ರೇಷ್ಠ-
ಮೇತದರಿಪ್ರಮ್ ॥

ತೃತೀಯಪಾದಮನೂದ್ಯ ವ್ಯಾಚಷ್ಟೇ—ವಿಚಾರ್ಯ ಸಂಪಾದಿತಸ್ಯ ನಾಮ್ನೋ ಲಕ್ಷಣೋ-
ಪೇತತ್ವಂ ವಿರೋಧರಾಹಿತ್ಯಂ ಚ ಪ್ರಸಿದ್ಧಮ್ ॥

ಮೂರನೇ ಪಾದದ ಅರ್ಥವು—ಈ ಹೆಸರು ಇದುವರೆಗೂ ಗೂಢವಾಗಿದ್ದು ಈಗ ಎಲ್ಲರಿಗೂ ತಿಳಿಯುವಂತೆ ಪ್ರಕಾಶ ಪಡಿಸಲ್ಪಟ್ಟಿದೆ. ಈ ಹೆಸರು ಶ್ರೇಷ್ಠವೂ ಪಾಪರಹಿತವೂ ಆಗಿರುವುದು.

ಪ್ರೇಣಾ ತದೇಷಾಂ ನಿಹಿತಂ ಗುಹಾವಿರಿತೀದಮು ಹ ಗುಹಾಧ್ಯಾತ್ಮ-
ಮಿಮಾ ದೇವತಾ ಅದ ಉ ಆವಿರಧಿದೈವತಮಿತ್ಯೇತತ್ತದುಕ್ತಂ
ಭವತಿ ॥

ಚತುರ್ಥಪಾದಮನೂದ್ಯ ವ್ಯಾಚಷ್ಟೇ—ಆತ್ಮಾನಂ ಲೋಕಪ್ರಸಿದ್ಧಂ ದೇಹೇಂದ್ರಿಯಾದಿ-ಸಂಘಾತಮಧಿಕೃತ್ಯ ವರ್ತತ ಇತ್ಯಧ್ಯಾತ್ಮಂ ತಸ್ಮಿನ್‌ದೇಹಾದಿಸಂಘಾತ ಆಸ್ಥಿತಾ ಇಮಾ ಅಗ್ನ್ಯಾದಿ-ದೇವತಾಃ "ಅಗ್ನಿರ್ವಾಗ್‌ಭೂತ್ವಾ ಮುಖಂ ಪ್ರಾವಿಶದ್ವಾಯುಃ ಪ್ರಾಣೋ ಭೂತ್ವಾ ನಾಸಿಕೇ ಪ್ರಾವಿಶತ್" (ಐ–ಆ–೩ ಅ–೪–ಖ–೨) ಇತ್ಯಾದಿಶ್ರುತೇಃ। ತಾಸಾಂ ದೇವತಾನಾಮಸ್ಮಚ್ಛರೀರೇ ಗೂಢಂ ಯತ್‌ಸ್ವರೂಪಮಿದಮೇವಾತ್ರ ಗುಹೇತ್ಯುಚ್ಯತೇ। ಶರೀರಮಧ್ಯೇ ಗುಹಾ ದೇವಾ ಏವೈತ-ನ್ನಾಮ ಜಾನಂತಿ ನ ಮನುಷ್ಯಾ ಇತಿ ಗುಹಾಶಬ್ದಸ್ಯ ತಾತ್ಪರ್ಯಮ್। ದೈವತಾನಿ ಸ್ವರ್ಗಲೋಕನಿವಾ-ಸೀನ್ಯಧಿಕೃತ್ಯ ವರ್ತತ ಇತ್ಯಧಿದೈವತಮ್। ಸ್ವರ್ಗನಿವಾಸಿಷು ದೇವೇಷು ಪ್ರಸಿದ್ಧಂ ಯನ್ನಾಮಾದ ಉ ಏತದೇವ ಪ್ರಕಟಮಿತ್ಯುಚ್ಯತೇ। ಇತ್ಯೇತದಭಿಪ್ರಾಯದ್ವಯಂ ತತ್ತೇನ ಚತುರ್ಥಪಾದೇನೋಕ್ತಂ ಭವತಿ। ಅಸ್ಮಿನ್‌ಮಂತ್ರೇ ಪ್ರಾಥಮಿಕನಾಮ್ನಃ ಪ್ರಾಶಸ್ತ್ಯಂ ಪ್ರತೀಯತೇ। ಪ್ರಾಥಮಿಕಂ ಚ ತದ್ಯತ್ತ-ದಿದಃಸೇತಿ, ಸೂಕ್ತಾದಾವಪಿ ತಕಾರಃ ಪ್ರಯುಕ್ತಸ್ತಸ್ಮಾತ್ಸೂಕ್ತಂ ಪ್ರಶಸ್ತಮಿತ್ಯರ್ಥಃ ॥

ನಾಲ್ಕನೇ ಪಾದದ ಅರ್ಥವು—ಈ ಹೆಸರಿನ ಗೂಢಾರ್ಥವು ದೇವತೆಗಳಿಗೆ ಹೊರತು ಇತರರಿಗೆ ತಿಳಿಯುವುದಿಲ್ಲ. ದೇಹದ ನಾನಾ ಅವಯವಗಳಲ್ಲಿ ನಾನಾ ಇಂದ್ರಿಯಾಭಿಮಾನಿ ದೇವತೆಗಳು ಇರುವರು ಐತರೇಯಾರಣ್ಯಕದಲ್ಲಿ ೨–೪–೨ ರಲ್ಲಿ ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್ ವಾಯುಃ ಪ್ರಾಣೋ ಭೂತ್ವಾ ನಾಸಿಕಂ ಪ್ರಾವಿಶತ್ ಇತ್ಯಾದಿ ಹೇಳಿದೆ. ಎಂದರೆ ಪ್ರಜಾಪತಿಯು ಇಂದ್ರಿಯಾಭಿಮಾನಿದೇವತೆಗಳನ್ನು ಸೃಷ್ಟಿಮಾಡಿದಾಗ ಅಗ್ನಿಯು ಶರೀರದಲ್ಲಿ ಕಾಂತಿಯಿಂದ ಶರೀರವನ್ನು ಪ್ರವೇಶಮಾಡಿದನು ಇತ್ಯಾದಿ. ಪ್ರಜಾಪತಿಯು ಮೊದಲು ಪಠಿಸಿದ ತದಿದಾಸ ಎಂಬ ಸೂಕ್ತದಲ್ಲಿರುವ ತತ್‌ಶಬ್ದದ ಪ್ರಾಶಸ್ತ್ಯವನ್ನು ತಿಳಿಸುವುದಕ್ಕಾಗಿ ಇಲ್ಲಿ ಈ ಋಕ್ಕನ್ನು ಉದಾಹರಿಸಲಾಗಿದೆ ಎಂದು ತಿಳಿಯಬೇಕು ॥

———

## *English Trxnslation*

---

1. He begins with tad, this, (the first word of the first hymn, tad id asaȷ. Verily, ' this, this ' is food, and thus he obtains food.

2. Pragapati indeed uttered this as the first word, consisting of one or two syllables, viz., tata and tata (or tat). And thus does a child, as soon as he begins to speak, utter the word, consisting of one or two syllables, viz., tata and tata (or tat). With this very word, consisting of tat or tatta, he begins.

3. This has been said by a Rishi (Rv. X. 71, 1)

4. ' O Brihaspati, the first point of speech ;——for this is the first and highest point of speech.

5. ' That which you have uttered, making it a name ; —for names are made by speech.

6. ' That (name) which was the best and without a flaw ; '—for this is the best and without a flaw.

7. ' That which was hidden by their love, is made manifest ;—for this was hidden in the body, viz., those deities (which enter the body, Agni as voice, entering the mouth, mc.) ; and that was manifest among the gods in heaven. This is what was intended by the verse.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ತೃತೀಯಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ಮಾಧವೀಯ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯದ ಪ್ರಥಮಾರಣ್ಯಕದ
ತೃತೀಯಾಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು

---

# ಅಥ ಪ್ರಥಮಾರಣ್ಯಕೇ ತೃತೀಯಾಧ್ಯಾಯೇ ಚತುರ್ಥಃ ಖಂಡಃ

## ಪ್ರಥಮಾರಣ್ಯಕದ ಮೂರನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು

---

ನಿಷ್ಕೇವಲ್ಯಸೂಕ್ತದ ಮೊದಲನೇ ಸೂಕ್ತದ ಮೊದಲನೇ ಋಕ್ಕಿನ ವಿವರಣೆಯನ್ನು ತಿಳಿಯುವುದು ಅತ್ಯವಶ್ಯಕವಾದ ರಿಂದಈ ಋಕ್ಕಿನಲ್ಲಿ ಪ್ರತಿಪಾದಿತನಾದ ಪರಬ್ರಹ್ಮನ ವಿಷಯವನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸಲಾಗಿದೆ—

ಈ ಋಕ್ಕಿನಲ್ಲಿ ಎಲ್ಲಕ್ಕೂ ಮೊದಲು ಎಂದರೆ ಸೃಷ್ಟಿಗೆ ಪೂರ್ವದಲ್ಲಿ ಸರ್ವವೇದಾಂತಪ್ರತಿಪಾದ್ಯವಾದ ಪರಬ್ರಹ್ಮವಸ್ತು ಮಾತ್ರ ಆದಿಯಲ್ಲಿ ಇದ್ದಿತೆಂದೂ ಅದರಿಂದಲೇ ಸೂರ್ಯಾತ್ಮಕನಾದ ಇಂದ್ರನು ಉತ್ಪನ್ನನಾದನೆಂದೂ ಹೇಳಿದೆ. ಮತ್ತು ಆ ಇಂದ್ರನ ಶಕ್ತಿಯು ಅಗಾಧವಾದುದು. ಹುಟ್ಟಿದಕೂಡಲೇ ಶತ್ರುಗಳನ್ನು ನಿಗ್ರಹಿಸಿದನು. ಇಂತಹ ಇಂದ್ರನನ್ನು ಕಂಡು ಸಮಸ್ತಪ್ರಾಣಿಗಳೂ ಹರ್ಷವನ್ನು ವ್ಯಕ್ತಪಡಿಸಿದವು ಎಂದು ವರ್ಣಿಸಲಾಗಿದೆ. ಈ ಋಕ್ಕಿನಲ್ಲಿರುವ ನಾಲ್ಕುಪಾದಗಳಲ್ಲಿಯೂ ನಾಲ್ಕು ಪ್ರತ್ಯೇಕ ವಿಷಯಗಳ ವಿವರಣೆ ಇವೆ. ಅವುಗಳಲ್ಲಿ ಒಂದೊಂದನ್ನೂ ಪ್ರತ್ಯೇಕವಾಗಿ ವಿವರಿಸುವುದು ಅವಶ್ಯಕವು.

**ತತ್ ಇತ್ ಆಸ ಭುವನೇಷು ಜ್ಯೇಷ್ಠಂ—ತತ್** ಎಂದರೆ ಆ ವಸ್ತುವು. ಯಾವ ವಸ್ತುವು? ಜಗತ್ಕಾರಣವೆಂದು ಪ್ರಸಿದ್ಧವೂ ಸರ್ವವೇದಾಂತ ಮೊದಲಾದ ದರ್ಶನಗಳಲ್ಲಿ ವಿಮರ್ಶಿಸಲಾಗುವುದೂ ಆದ ಪರಬ್ರಹ್ಮವೆಂಬ ವಸ್ತುವು ಇದೇ ಅರ್ಥವನ್ನೇ ತತ್ವಮಸಿ ಎಂಬ ಮಹಾವಾಕ್ಯದಲ್ಲಿರುವ (ತತ್+ತ್ವಂ+ಅಸಿ) ತತ್ ಎಂಬ ಶಬ್ದವೂ ನಿರ್ದೇಶಿಸುವುದು. ಪರಬ್ರಹ್ಮನಿಗೆ ಸ್ತ್ರೀಪುರುಷಾದಿ ಲಿಂಗಭೇದಗಳಿಲ್ಲದಿರುವುದರಿಂದ **ತತ್, ಬ್ರಹ್ಮ** ಇತ್ಯಾದಿ ನಪುಸಂಕ ಶಬ್ದಗಳಿಂದ ನಿರ್ದೇಶಿಸಲ್ಪಡುವನು. **ಜ್ಯೇಷ್ಠಂ** ಎಂಬ ಶಬ್ದಕ್ಕೆ ಇಲ್ಲಿ ಅನೇಕಾರ್ಥಗಳನ್ನು ಹೇಳಿದ್ದಾರೆ. **ಜ್ಯೇಷ್ಠಂ ಪ್ರಶಸ್ಯತಮಂ,** ಅತ್ಯಂತ ಶ್ರೇಷ್ಠವಾದ, ಪ್ರಶಂಸಾರ್ಹವಾದ, ಎಂದರ್ಥವು. ಅಥವಾ **ಪರಮಾರ್ಥತ್ವಾತ್ ತದ್ವ್ಯತಿರಿಕ್ತಾನಾಂ ವ್ಯಾವಹಾರಿಕತ್ವಾಚ್ಚ** ಜಗತ್ತಿನಲ್ಲಿರುವ ಸಮಸ್ತವಸ್ತುಗಳಿಗಿಂತಲೂ ಇದು ಬೇರೆಯಾದುದು. ಇತರ ವಸ್ತುಗಳಿಗೆ ನಾಶವಿರುವುದು. ಬ್ರಹ್ಮವಸ್ತುವಿಗೆ ನಾಶವಿಲ್ಲ. ಆದ್ದರಿಂದ ವ್ಯವಹಾರದೃಷ್ಟಿಯಿಂದ ಇದು ಪ್ರಪಂಚದ ಇತರ ವಸ್ತುಗಳಿಗಿಂತ ತೀರಾ ಭಿನ್ನವಾದುದು ಇದರ ಸ್ವರೂಪವು ಯಾವುದನ್ನೂ ಹೋಲುವುದಿಲ್ಲ. **ಅಥವಾ ಜ್ಯೇಷ್ಠಂ ವೃದ್ಧತಮಂ ಜಗತ್ಕಾರಣತ್ವೇನ ಸರ್ವೇಷಾಮಾದಿಭೂತಂ**—ಈ ಬ್ರಹ್ಮವಸ್ತುವು ಜಗತ್ತಿಗೆ ಕಾರಣವು ಎಂದರೆ ಇದರಿಂದಲೇ ಸಮಸ್ತಜಗತ್ತುಗಳೂ ಉಂಟಾದವು. ಆದ್ದರಿಂದ ಇದು ಎಲ್ಲಕ್ಕೂ ಆದಿಯು, ಮೂಲವು. ಇದಕ್ಕಿಂತ ಹಿಂದಿದ್ದ ವಸ್ತುವು ಯಾವುದೂ ಇಲ್ಲ. ಇದೇ ಎಲ್ಲಕ್ಕೂ ಮೊದಲನೆಯದು ಇಂತಹ ಪರಬ್ರಹ್ಮವಸ್ತುವು ಸರ್ವಸೃಷ್ಟಿಗೂ ಆದಿಯಲ್ಲಿ ತಾನೊಂದೇ ಇದ್ದಿತು. ಸ್ವಪ್ರಕಾಶದಿಂದ ತಾನೇತಾನಾಗಿ ಬೆಳಗುತ್ತಿದ್ದಿತು ಎಂದು ವಾಕ್ಯಾರ್ಥವು,

ಬ್ರಹ್ಮ ವಸ್ತುವಿನ ಸ್ವರೂಪವನ್ನು ವರ್ಣಿಸುವ ಸನ್ನಿವೇಶಗಳು ನಾನಾ ಉಪನಿಷತ್ತುಗಳಲ್ಲಿಯೂ, ವೇದಾಂತ ಗ್ರಂಥಗಳಲ್ಲಿಯೂ ವಿಶೇಷವಾಗಿವೆ.

**ಬ್ರಹ್ಮ ದೇವಾನಜನಯತ್ । ಬ್ರಹ್ಮ ವಿಶ್ವಮಿದಂ ಜಗತ್ । ಬ್ರಹ್ಮಣಃ ಕ್ಷತ್ರಂ ನಿರ್ಮಿತಂ । ಬ್ರಹ್ಮ ಬ್ರಾಹ್ಮಣ ಆತ್ಮನಾ । ಅಂತರಸ್ಮಿನ್ನಿಮೇ ಲೋಕಾಃ । ಅಂತರ್ವಿಶ್ವಮಿದಂ ಜಗತ್ । ಬ್ರಹ್ಮೈವ**

**ಭೂತಾನಾಂ ಜ್ಯೇಷ್ಠಂ । ತೇನ ಕೋऽರ್ಹತಿ ಸ್ಪರ್ಧಿತುಂ ಬ್ರಹ್ಮನ್ದೇವಾಸ್ತ್ರಯಸ್ತ್ರಿಗ್‌ಂಶತ್ ।**
**ಬ್ರಹ್ಮನ್ನಿಂದ್ರಪ್ರಜಾಪತೀ । ಬ್ರಹ್ಮನ್ ಹ ವಿಶ್ವಾ ಭೂತಾನಿ । ನಾವೀವಾನ್ತಃ ಸಮಾಹಿತಾ ॥**

(ತೈ. ಬ್ರಾ. ೨-೮-೮-೯-೧೦)

ಬ್ರಹ್ಮನು ಎಂದರೆ ಪರಬ್ರಹ್ಮನು ದೇವತೆಗಳನ್ನು ಉತ್ಪತ್ತಿಮಾಡಿದನು. ಅಷ್ಟೇ ಅಲ್ಲ, ಈ ಸಮಸ್ತ ವಿಶ್ವವೂ ಬ್ರಹ್ಮ ಸ್ವರೂಪವೇ (ಬ್ರಹ್ಮವೇ) ಆಗಿದೆ. ಕ್ಷತ್ರಿಯಜಾತಿಯು ಬ್ರಹ್ಮನಿಂದಲೇ ನಿರ್ಮಿಸಲ್ಪಟ್ಟಿತು. ಬ್ರಾಹ್ಮಣನು ಸ್ವಯಂಬ್ರಹ್ಮ ಸ್ವರೂಪವೇ ಆಗಿರುವನು. ಈ ಬ್ರಹ್ಮನಲ್ಲಿ ಸಮಸ್ತಲೋಕಗಳು, ಈ ಸಮಸ್ತ ಜಗತ್ತೂ ಅಡಗಿವೆ. ಈ ಬ್ರಹ್ಮನು ಪೃಥಿವ್ಯಾದಿ ಪಂಚಮಹಾಭೂತಗಳಿಗೂ, ಸಮಸ್ತಪ್ರಾಣಿಗಳಿಗೂ ಶ್ರೇಷ್ಠನು, ಪ್ರಶಸ್ಯನು, ಆದಿಯು. ಇಂತಹ ಬ್ರಹ್ಮನೊಡನೆ ಶಕ್ತಿ ಸಾಮರ್ಥ್ಯಾದಿಗಳಲ್ಲಿ ಸ್ಪರ್ಧಿಸಲು ಯಾರು ಸಮರ್ಥರು ? ಶ್ವೇತಾಶ್ವತರೋಪನಿಷತ್ತಿನಲ್ಲಿ ಹೇಳಿರುವಂತೆ—**ನ ತತ್ಸಮಶ್ಚಾಭ್ಯ-ಧಿಕಶ್ಚ ದೃಶ್ಯತೇ**—ಈ ಬ್ರಹ್ಮನಿಗೆ ಸಮನಾದವನಾಗಲಿ, ಅಧಿಕನಾದವನಾಗಲಿ ಯಾರೂ ಇಲ್ಲ. ಈ ಬ್ರಹ್ಮನಲ್ಲಿಯೇ ಮೂವತ್ತಮೂರುದೇವತೆಗಳು ಅಂತರ್ಹಿತರಾಗಿರುವರು. ಇಂದ್ರನೂ, ಪ್ರಜಾಪತಿಯೂ ಬ್ರಹ್ಮನಲ್ಲಿಯೇ ಅಂತರ್ಗತ ರಾಗಿರುವರು. ಸಮಸ್ತ ಪ್ರಾಣಿಗಳೂ ಸಹ ನದಿಯನ್ನು ದಾಟುವಾಗ ದೋಣಿಯಲ್ಲಿ ಜನರೆಲ್ಲರೂ ಒಂದೆಡೆಯಲ್ಲಿ ಸೇರುವಂತೆ ಈ ಬ್ರಹ್ಮನಲ್ಲಿಯೇ ನೆಲಸಿರುವರು.

ತೈತ್ತಿರೀಯೋಪನಿಷತ್ತಿನಲ್ಲಿ—

**ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ಪ್ರಯಂತ್ಯಭಿ ಸಂವಿಶಂತಿ । ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ ॥**

(ತೈ. ಉ. ೩-೧)

ಯಾವ ಪರಾತ್ಪರವಸ್ತುವಿನಿಂದ ಈ ಸಮಸ್ತ ಪ್ರಾಣಿಗಳೂ ಉತ್ಪನ್ನನಾಗುವವೋ. ಉತ್ಪನ್ನವಾದ ಪ್ರಾಣಿಗಳು ಯಾರ ಪ್ರಭಾವದಿಂದ ಜೀವಿಸುವವೋ ಮತ್ತು ಕೊನೆಯಲ್ಲಿ ಯಾರಲ್ಲಿಯೇ ಲೀನವಾಗಿ ನಾಶವನ್ನೈದುವವೋ ಅದೇ ಬ್ರಹ್ಮವು. **ಯೋ ದೇವಾನಾಂ ಪ್ರಥಮಂ ಪುರಸ್ತಾತ್** (ತೈ. ಉ. ೪-೧೪-೩) ಎಂಬ ವಾಕ್ಯದಲ್ಲಿ ಆ ಬ್ರಹ್ಮವು ಸಮಸ್ತದೇವತೆಗಳಿಗೂ ಶ್ರೇಷ್ಠವು ಮತ್ತು ಆದಿಯೂ ಆಗಿದೆ ಎಂದು ಹೇಳಿದೆ. ಅದೇ ಉಪನಿಷತ್ತಿನ ಮತ್ತೊಂದೆಡೆಯಲ್ಲಿ—**ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕದಾಚನೇತಿ ॥** (ತೈ. ಉ. ೨-೪) ಈ ಪರಬ್ರಹ್ಮನನ್ನು ವಾಕ್ಯಗಳಿಂದ ವರ್ಣಿಸಲಾಗುವುದಿಲ್ಲ ಮನಸ್ಸಿನಿಂದಲೂ ಧ್ಯಾನಿಸಲಾಗುವುದಿಲ್ಲ. ಅದು ಈ ವಾಙ್ಮನಗಳಿಗೆ ಅತೀತವಾಗಿರುವುದು. ಇಂತಹ ಬ್ರಹ್ಮಸ್ವರೂಪವನ್ನು ತಿಳಿಯುವುದರಿಂದ ಉಂಟಾಗುವ ಆನಂದವನ್ನು ಯಾವ ವಿವೇಕಿಯು ಪಡೆಯುವನೋ ಅವನಿಗೆ ಯಾವವಿಧವಾದ ಭಯವೂ, ವ್ಯಸನವೂ, ದುಃಖವೂ ಇರುವುದಿಲ್ಲ ಎಂದು ಹೇಳಿದೆ.

ಮತ್ತು ಕೇನೋಪನಿಷತ್ತಿನಲ್ಲಿ—

**ಕೇನೇಷಿತಂ ಪತತಿ ಪ್ರೇಷಿತಂ ಮನಃ ಕೇನ ಪ್ರಾಣಃ ಪ್ರಥಮಃ ಪ್ರೈತಿ ಯುಕ್ತಃ । ಕೇನೇ-ಷಿತಾಂ ವಾಚಮಿಮಾಂ ವದಂತಿ ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ ॥**

(ಕೇನ. ಉ. ೧-೧)

ಯಾರ ಇಚ್ಛೆಗನುಸರಿಸಿ, ಯಾರ ಪ್ರೇರಣೆಯಿಂದ ಈ ಮನಸ್ಸು ತನ್ನ ವಿಷಯದಲ್ಲಿ ತೊಡಗುವುದು? ಪ್ರಾಣವು ಮೊಟ್ಟಮೊದಲು ಯಾರ ಆಜ್ಞೆಯಿಂದ ತನ್ನ ಕರ್ಮವನ್ನಾರಂಭಿಸುವುದು? ಯಾರ ಇಚ್ಛೆಯಿಂದ ಜನರು ಮಾತನಾಡುವರು? ಕಣ್ಣುಗಳಿಗೂ ಕಿವಿಗಳಿಗೂ ಆಜ್ಞೆಮಾಡುವ ದೇವತೆ ಯಾರು? ಈ ಪ್ರಶ್ನೆಗಳಿಗೆ ಉತ್ತರವನ್ನು ಈ ರೀತಿ ಅಲ್ಲಿಯೇ ಹೇಳಲಾಗಿದೆ—

**ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣ ಶ್ಚಕ್ಷುಷಶ್ಚಕ್ಷುರತಿಮುಚ್ಯ ಧೀರಾಃ ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವಂತಿ ||**

(ಕೇನ. ಉ. ೧-೨)

ಯಾವುದು ಕಿವಿಗಳಿಗೆ ಕಿವಿಯಂತಿರುವುದೋ, ಮನಸ್ಸಿನ ಮನಸ್ಸೋ, ಮಾತಿಗೆ ಮಾತೋ ಅದು ಪ್ರಾಣದ ಪ್ರಾಣವು, ಕಣ್ಣುಗಳ ಕಣ್ಣು, ಪ್ರಾಜ್ಞರು ಇವುಗಳಾಚೆಗೆ ಎಂದರೆ ಈ ಇಂದ್ರಿಯಗಳನ್ನತಿಕ್ರಮಿಸಿ ಹೋಗುವರು. ಮತ್ತು ಈ ಲೋಕ ದಿಂದ ತೆರಳಿದ ಬಳಿಕ ಅಮೃತಪದವಿಯನ್ನು (ಮರಣರಹಿತವಾದ ಮೋಕ್ಷಪದವಿಯನ್ನು) ಪಡೆಯುವರು.

**ನ ತತ್ರ ಚಕ್ಷುರ್ಗಚ್ಛತಿ ನ ವಾಗ್ಗಚ್ಛತಿ ನೋ ಮನೋ ನ ವಿದ್ಮೋ ನ ವಿಜಾನೀಮೋ ಯಥೈತ-ದನುಶಿಷ್ಯಾದನ್ಯದೇವ ತದ್ವಿದಿತಾದಥೋ ಅವಿದಿತಾದಧಿ। ಇತಿ ಶುಶ್ರುಮ ಪೂರ್ವೇಷಾಂ ಯೇ ನಸ್ತದ್ವ್ಯಾಚಚಕ್ಷಿರೇ ॥**

(ಕೇನ. ಉ. ೧-೩)

ಅದು ಎಂದರೆ ಆ ಬ್ರಹ್ಮವು ಇದ್ದಲ್ಲಿಗೆ ನಮ್ಮ ದೃಷ್ಟಿಯು ಹೋಗಲರಿಯದು. ನಮ್ಮ ವಾಚಾಶಕ್ತಿಗೆ ಅದು ನಿಲುಕದು. ನಮ ಮನಸ್ಸು ಅಲ್ಲಿಯವರೆಗೆ ಹೋಗಿ ಮುಟ್ಟಲಾರದು. ಅದನ್ನು ನಾವು ಅರಿಯೆವು. ಶಿಷ್ಯರಿಗೆ ಉಪದೇಶ ಮಾಡಿ ಅದನ್ನು ಅವರಿಗೆ ತಿಳಿಸುವಷ್ಟು ಪೂರ್ಣ ರೀತಿಯಿಂದ ನಾವು ಅದನ್ನು ತಿಳಿಯೆವು. ಅದು ಇದುವರೆಗೆ ತಿಳಿದಿರುವ ಮತ್ತು ತಿಳಿಯದಿರುವ ವಸ್ತುಗಳಾಚೆ ಇರುವುದು. ನಮಗೆ ಆ ಜ್ಞಾನವನ್ನು ಉಪದೇಶಿಸಿದ ಪೂರ್ವಿಕರಿಂದ ಹೀಗೆ ಕೇಳಿರುವೆವು.

**ಯದ್ವಾಚಾನಭ್ಯುದಿತಂ ಯೇನವಾಗಭ್ಯುದ್ಯತೇ। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದ-ಮುಪಾಸತೇ ॥ ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಂ। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ। ಯಚ್ಚಕ್ಷುಷಾ ನ ಪಶ್ಯತಿ ಯೇನ ಚಕ್ಷೂಂಷಿ ಪಶ್ಯತಿ। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ಯಚ್ಛ್ರೋತ್ರೇಣ ನ ಶೃಣೋತಿ ಯೇನ ಶ್ರೋತ್ರಮಿದಂ ಶ್ರುತಂ। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮು-ಪಾಸತೇ ॥ ಯತ್ಪ್ರಾಣೇನ ನ ಪ್ರಾಣಿತಿ ಯೇನ ಪ್ರಾಣಃ ಪ್ರಣೀಯತೇ। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥**

(ಕೇನ ಉ. ೧-೪-೮)

ಯಾವುದು ವಾಚಾಶಕ್ತಿಯಿಂದ ವರ್ಣಿಸಲ್ಪಡಲಾರದೋ ಯಾವುದರ ಶಕ್ತಿಯಿಂದ ವಾಕ್ಕೇ (ಮಾತನಾಡುವ ಶಕ್ತಿ) ಪ್ರಕಟ ವಾಗುವುದೋ ಅದೇ ಬ್ರಹ್ಮವೆಂದು ತಿಳಿ. ಜನರು ಯಾವುದನ್ನು ಬ್ರಹ್ಮವೆಂದು ಉಪಾಸಿಸುವರೋ ಅದು ಬ್ರಹ್ಮವಲ್ಲ. ಯಾವುದು ಮನಸ್ಸಿನ ಸಹಾಯದಿಂದ ವಿಚಾರಮಾಡಲಾಗುವುದಿಲ್ಲವೋ ಆದರೆ ಮನಸ್ಸೇ ಯಾವುದರ ವಿಚಾರಕ್ಕೆ ವಿಷಯ ವಾಗುವುದೋ ಅದನ್ನೇ ಬ್ರಹ್ಮವೆಂದೂ ತಿಳಿ. ಯಾವುದನ್ನು ಕಣ್ಣುಗಳಿಂದ ನೋಡಲಾಗುವುದಿಲ್ಲವೋ (ನೋಡಲಸಾಧ್ಯವೋ)

ಆದರೆ ಯದವುದು ಕಣ್ಣುಗಳನ್ನೇ ನೋಡಬಲ್ಲದೋ ಅದೇ ಬ್ರಹ್ಮವೆಂದು ತಿಳಿ. ಯಾವುದನ್ನು ಕಿವಿಗಳಿಂದ ಕೇಳಿ ತಿಳಿಯ ಲಾಗುವುದಿಲ್ಲವೋ, ಆದರೆ ಯಾವುದು ಕಿವಿಗಳನ್ನೇ ಕೇಳುವುದೋ ಅದೇ ಬ್ರಹ್ಮವೆಂದು ತಿಳಿ. ಯಾವುದು ಪ್ರಾಣದ ಸಹಾಯದಿಂದ ಉಸಿರಾಡುವುದಿಲ್ಲವೋ ಆದರೆ ಯಾವುದು ಪ್ರಾಣಶಕ್ತಿಯನ್ನೇ ಉಸಿರಾಡಿಸುವುದೋ ಅದೇ ಬ್ರಹ್ಮವೆಂದು ತಿಳಿ. ಜನರು ಯಾವುದನ್ನು ಬ್ರಹ್ಮವೆಂದು ಉಪಾಸಿಸುತ್ತಿರುವರೋ ಅದು ಬ್ರಹ್ಮವಲ್ಲ.

ತೈತರೀಯೋಪನಿಷತ್ತಿನಲ್ಲಿ—

**ಸತ್ಯಂ ಜ್ಞಾನಮನಂತಂ ಬ್ರಹ್ಮ । ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ ।**
**ಸೋಽಶ್ನುತೇ ಸರ್ವಾನ್ಕಾಮಾನ್ ಸಹ । ಬ್ರಹ್ಮಣಾ ವಿಪಶ್ಚಿತೇತಿ ॥**

(ತೈ. ಉ. ೨-೧)

ಬ್ರಹ್ಮವೆಂದರೇನು ? ಬ್ರಹ್ಮವು ಸತ್ಯಸ್ವರೂಪವಾಗಿರುವುದು. ಅದು ಸೂಕ್ಷ್ಮರೂಪದಿಂದಿದ್ದು ಬಾಹ್ಯಚಕ್ಷುಸ್ಸಿಗೆ ಗೋಚರವಾಗದಿದ್ದ ಮಾತ್ರಕ್ಕೆ ಅದು ಇಲ್ಲ, ಅದಿರುವುದು ಸತ್ಯವಲ್ಲ ಎಂದು ಹೇಳಲಾಗುವುದಿಲ್ಲ. ಅದು ಇರುವುದು ಸತ್ಯವು (ನಿಶ್ಚಯವು) ನಮ್ಮ ದೃಷ್ಟಿಶಕ್ತಿಗೆ ಒಂದು ಪರಿಮಿತಿ ಇರುವುದರಿಂದ ಅದನ್ನು ನಾವು ನಮ್ಮ ಕಣ್ಣುಗಳಿಂದ ನೋಡಲಾಗುವುದಿಲ್ಲ **ಜ್ಞಾನಂ** ಎಂದರೆ ತಿಳುವಳಿಕೆ, ಚೈತನ್ಯ. ಬ್ರಹ್ಮವಸ್ತುವು ಸೂಕ್ಷ್ಮಸ್ಥಿತಿಯಲ್ಲಿದ್ದರೂ ಇರುವುದೇನೋ ನಿಶ್ಚಯ ಎಂದು ಒಪ್ಪಿಕೊಂಡರೂ ಅದಕ್ಕೆ ಏನು ಶಕ್ತಿ ಇದೆ ? ಅದು ಪರ್ವತಾದಿಗಳಂತೆ ಒಂದು ಜಡವಸ್ತುವಲ್ಲವೇ ಎಂದರೆ ಹಾಗಲ್ಲ. ಅದು ಚೈತನ್ಯಯುಕ್ತವಾದುದು, ಎಲ್ಲವನ್ನೂ ತಿಳಿದುಕೊಳ್ಳುವ ಶಕ್ತಿಯು ಅದಕ್ಕೆ ಇರುವುದು. ಅಷ್ಟೇ ಅಲ್ಲ; ವಿಶ್ವದಲ್ಲಿರುವ ಸಮಸ್ತ ಚೈತನ್ಯಕ್ಕೂ ಜ್ಞಾನಕ್ಕೂ ಅದೇ ಮೂಲವು. ಅದರಿಂದಲೇ ಅದರ ಅಂಶಗಳಾಗಿ ಸರ್ವ ಪ್ರಾಣಿಗಳ ಚೈತನ್ಯವೂ ಜ್ಞಾನಗಳೂ ಇರುವವು. ಇನ್ನು **ಅನಂತಂ** ಎಂಬ ಶಬ್ದದ ಅರ್ಥವೇನು ಎಂದರೆ—ಹಿಂದೆ ಹೇಳಿದ ಎರಡು ಗುಣಗಳಿಂದ ಎಂದರೆ ಸರ್ವದಾ ಇರುವುದೂ ಚೈತನ್ಯ ಅಥವಾ ಜ್ಞಾನಮಯವಾದುದೂ ಆದ ಆ ಬ್ರಹ್ಮವು ಎಲ್ಲಿಯೋ ಒಂದುಕಡೆ ಇರುವುದೇ ಎಂದರೆ ಹಾಗಲ್ಲ. ಅದು ಎಲ್ಲೆಲ್ಲಿಯೂ ವ್ಯಾಪಿಸಿರುವುದು ಅದಕ್ಕೆ ಕೊನೆ ಮೊದಲಿಲ್ಲ. ಅದು ಇಲ್ಲದಿರುವ ಸ್ಥಳವಾಗಲಿ, ಕಾಲವಾಗಲಿ, ವಸ್ತುವಾಗಲಿ ಇಲ್ಲ. ಅಂತವೆಂದರೆ ಕೊನೆಯು ಅನಂತವೆಂದರೆ ಕೊನೆಯಿಲ್ಲದ್ದು. ಬ್ರಹ್ಮವಸ್ತುವು ಇಲ್ಲಿಗೆ ಮುಗಿಯಿತು. ಇದೇ ಅದರ ಕೊನೆಯು, ಇನ್ನು ಮುಂದೆ ಅದು ಇಲ್ಲ ಎಂದು ಹೇಳುವಹಾಗಿಲ್ಲ. ಅದಕ್ಕೆ ಕೊನೆಯೂ ಇಲ್ಲ, ಮೊದಲೂ ಇಲ್ಲ. ಅದಕ್ಕೆ ದೇಶ ಕಾಲ ವಸ್ತುಗಳ ಪರಿಮಿತಿ ಇಲ್ಲ. ಅದು ಹಿಂದೆಯೂ ಇತ್ತು, ಈಗಲೂ ಇರುವುದು, ಮುಂದೆಯೂ ಇರುವುದು. ಎಲ್ಲಾ ಕಾಲಗಳಲ್ಲಿಯೂ, ಎಲ್ಲಾ ಪ್ರದೇಶಗಳಲ್ಲಿಯೂ, ಎಲ್ಲಾ ವಸ್ತುಗಳಲ್ಲಿಯೂ ಅದು ವ್ಯಾಪಿಸಿರುವುದು. ಇಂತಹ ಸಚ್ಚಿದಾತ್ಮಕವೂ, ಅನಂತವೂ ಆದ ಬ್ರಹ್ಮವನ್ನು ಯಾವ ಪುರುಷನು ತನ್ನ ಹೃದಯವೆಂಬ ಅತ್ಯಂತ ರಹಸ್ಯ ಪ್ರದೇಶದಲ್ಲಿ ನೆಲೆಸಿರುವುದನ್ನು ತಿಳಿದು ಅದನ್ನು ಉಪಾಸಿಸುವನೋ ಅವನು ಸರ್ವಜ್ಞನಾದ ಆ ಬ್ರಹ್ಮನೊಡನೆ ಅವನಲ್ಲೇ ಐಕ್ಯನಾಗಿ ಸಮಸ್ತ ಅಭೀಷ್ಟಗಳನ್ನು ಪಡೆದು ನಿರತಿಶಯವಾದ ಆನಂದವನ್ನನುಭವಿಸುತ್ತಾನೆ ಎಂದು ಮುಖ್ಯಾಭಿಪ್ರಾಯವು.

ತೈತ್ತಿರೀಯೋಪನಿಷತ್ತಿನ ಇನ್ನೊಂದು ಕಡೆ (ತೈ. ಉ. ೪-೧) ಈ ಪರಬ್ರಹ್ಮದ ಸ್ವರೂಪವನ್ನು ವಿಸ್ತಾರವಾಗಿಯೂ ಬಹು ಚೆನ್ನಾಗಿಯೂ ವರ್ಣಿಸಲಾಗಿದೆ. ಅದರ ಸಾರಾಂಶವನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ—

**ಅಂಭಸ್ಯ ಪಾರೇ ಭುವನಸ್ಯ ಮಧ್ಯೇ ನಾಕಸ್ಯ ಪೃಷ್ಠೇ ಮಹತೋ ಮಹೀಯಾನ್ ।**
**ಶುಕ್ರೇಣ ಜ್ಯೋತೀಗ್ಂಷಿ ಸಮನುಪ್ರವಿಷ್ಟಃ ಪ್ರಜಾಪತಿಶ್ಚರತಿ ಗರ್ಭೇ ಅಂತಃ ।**

(ತೈ. ಉ. ೪-೧)

ನಾನಾ ಸಮುದ್ರಗಳ ಅತ್ಯಂತ ಕೊನೆಯಲ್ಲಿಯೂ ಇರುವ ಲೋಕಾಲೋಕ ಪ್ರದೇಶಗಳಲ್ಲಿಯೂ, ಪೃಥಿವ್ಯಾದಿಲೋಕಗಳ ಮಧ್ಯಪ್ರದೇಶದಲ್ಲಿಯೂ, ಸ್ವರ್ಗಲೋಕದ ಮೇಲುಭಾಗದಲ್ಲಿಯೂ ಇರುವ ವಸ್ತುಗಳಲ್ಲಿ ದೊಡ್ಡದಾದ ಯಾವ ವಸ್ತುಗಳಿವೆಯೋ ಆ ಎಲ್ಲಾ ವಸ್ತುಗಳಿಗಿಂತಲೂ ಈ ಬ್ರಹ್ಮವಸ್ತು ಅತಿದೊಡ್ಡದು. ಈ ಬ್ರಹ್ಮವು ಪ್ರಕಾಶಮಾನವಾದ ತನ್ನ ದಿವ್ಯಜ್ಯೋತಿಯಿಂದ ಸಮಸ್ತಪ್ರಾಣಿಗಳ ಹೃದಯ ಜ್ಯೋತಿಗಳನ್ನು ಪ್ರವೇಶಿಸಿ ಆ ಪ್ರಾಣಿಗಳಲ್ಲಿ ಜೀವರೂಪದಿಂದ (ಚೈತನ್ಯರೂಪದಿಂದ) ಇದ್ದು ಅವುಗಳ ಚಲನ ವಲನಗಳನ್ನು ನಿಯಮಿಸುವದು.

**ಯಸ್ಮಿನ್ನಿದಗ್ಂ ಸಂ ಚ ವಿ ಚೈತಿ ಸರ್ವಂ ಯಸ್ಮಿನ್ದೇವಾ ಅಧಿ ವಿಶ್ವೇ ನಿಷೇದುಃ । ತದೇವ ಭೂತಂ ತದು ಭವ್ಯಮಾ ಇದಂ ತದಕ್ಷರೇ ಪರಮೇ ವ್ಯೋಮನ್ ॥**

ಆ ಪರಬ್ರಹ್ಮದಲ್ಲಿ ಸಮಸ್ತ ಜಗತ್ತೂ ಅಡಗಿರುವುದು. ಎಂದರೆ ಸೃಷ್ಟಿಕಾಲದಲ್ಲಿ ವ್ಯಕ್ತರೂಪವಾಗಿ ಗೋಚರಿಸುವುದು. ಸಂಹಾರಕಾಲದಲ್ಲಿ ಅವ್ಯಕ್ತ (ಸೂಕ್ಷ್ಮರೂಪದಿಂದ) ಬ್ರಹ್ಮನಲ್ಲಿಯೇ ಲೀನವಾಗಿ ಅಂತರ್ಗತವಾಗಿರುವುದು. ಆ ಬ್ರಹ್ಮದಲ್ಲಿಯೇ ಸಮಸ್ತ ದೇವತೆಗಳೂ ಅಡಗಿರುವುರು. ಅವ್ಯಕ್ತಸ್ವರೂಪದ ಆ ಬ್ರಹ್ಮದಿಂದಲೇ ಸಮಸ್ತ ದೇವತೆಗಳ ಉತ್ಪತ್ತಿಯೂ ಆಗಿರುವುದು. ಅಂತ್ಯದಲ್ಲಿ ಅವರೆಲ್ಲರೂ ಬ್ರಹ್ಮದಲ್ಲಿಯೇ ಐಕ್ಯರಾಗುವರು. ಆ ಬ್ರಹ್ಮವೇ ಹಿಂದೆ ಇದ್ದ, ಈಗಿರುವ, ಮುಂದೆ ಸೃಷ್ಟಿಯಾಗುವ ಸಮಸ್ತಜಗತ್ತಿಗೂ ಆಧಾರವಾಗಿರುವುದು. ಆಕಾಶದಂತೆ ಸೂಕ್ಷ್ಮರೂಪದಿಂದ ಅವ್ಯಕ್ತಾವಸ್ಥೆಯಲ್ಲಿರುವ ನಾಶರಹಿತವಾದ ಈ ಪರಬ್ರಹ್ಮದಲ್ಲಿಯೆ ಸಮಸ್ತವಿಶ್ವವೂ ಅಂತರ್ಗತವಾಗಿರುವುದು.

**ಯೇನಾವೃತಂ ಖಂ ಚ ದಿವಂ ಮಹೀಂ ಚ ಯೇನಾದಿತ್ಯಸ್ತಪತಿ ತೇಜಸಾ ಭ್ರಾಜಸಾ ಚ । ಯಮಂತಃಸಮುದ್ರೇ ಕವಯೋ ವಯಂತಿ ತದಕ್ಷರೇ ಪರಮೇ ಪ್ರಜಾಃ ॥**

ಆಕಾಶವೂ, ಸ್ವರ್ಗವೂ, ವಿಸ್ತಾರವಾದ ಈ ಭೂಮಿಯೂ ಇವೆಲ್ಲವೂ ಈ ಬ್ರಹ್ಮನಿಂದ ಆವರಿಸಲ್ಪಟ್ಟಿರುವುದು. ಎಂದರೆ ಈ ಲೋಕಗಳ ಒಳಗೂ ಹೊರಗೂ ಬ್ರಹ್ಮವು ವ್ಯಾಪಿಸಿರುವುದು. ಪ್ರಕಾಶಮಾನವಾದ ಸೂರ್ಯನೂ ಈ ಬ್ರಹ್ಮದ ಪ್ರಭಾವದಿಂದಲೇ ತನ್ನ ಕಿರಣಗಳನ್ನು ಪ್ರಸರಿಸಿ ಬೆಳಗಲು ಸಮರ್ಥನಾಗಿರುವನು. ಸಮುದ್ರಸಹಿತವಾದ ಈ ಸಮಸ್ತಜಗತ್ತಿನಲ್ಲಿಯೂ ಯಾವ ಯಾವ ಚರಾಚರ ವಸ್ತುಗಳು ಪ್ರಾಣಿಗಳೂ ಇವೆಯೆಂದು ಕವಿಗಳು (ಋಷಿಗಳು) ವರ್ಣಿಸಿರುವರೊ ಅವರೆಲ್ಲರೂ ನಾಶರಹಿತವಾದ ಈ ಪರಬ್ರಹ್ಮದಲ್ಲಿಯೇ ಅಂತರ್ಗತರಾಗಿರುವರು.

**ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನ ಜೀವಾನ್ವ್ಯಚಸರ್ಜ ಭೂಮ್ಯಾಂ । ಯದೋಷಧೀಭಿಃ ಪುರುಷಾನ್ಪಶೂಗ್ಶ್ಚ ವಿವೇಶ ಭೂತಾನಿ ಚರಾಚರಾಣಿ ॥**

ಬ್ರಹ್ಮದಿಂದ ಈ ಜಗತ್ತಿನ ಸೃಷ್ಟಿಯಾಯಿತು. ಮತ್ತು ಉದಕವೇ ಮೊದಲಾದ ಪಂಚಭೂತಗಳಿಂದ ಭೂಮಿಯಲ್ಲಿ ಪ್ರಾಣಿಗಳ ಉತ್ಪತ್ತಿಯೂ ಆಯಿತು. ಮತ್ತು ಓಷಧಿವನಸ್ಪತಿ (ವೃಕ್ಷ, ಸಸ್ಯವರ್ಗ) ಜನ್ಯವಾದ ಅನ್ನದ (ಆಹಾರದ) ಮೂಲಕ ಆ ಬ್ರಹ್ಮನು ಮಾನವರನ್ನೂ ಇತರ ಪ್ರಾಣಿಗಳನ್ನೂ ಪ್ರವೇಶಿಸಿ ಅವರನ್ನು ಪೋಷಿಸಿದನು. ಜಲಾದಿಗಳಿಂದ ವೃಕ್ಷಗಳೇ ಮೊದಲಾದ ಚರಾಚರವಸುಗಳನ್ನು ಪೋಷಿಸಿ ಅವುಗಳಲ್ಲಿ ಅಂತರ್ಭೂತನಾಗಿದ್ದು ಅವುಗಳು ವೃದ್ಧಿಯನ್ನೈದುವಂತೆ ಮಾಡಿದನು.

**ಅತಃಪರಂ ನಾನ್ಯದಣೀಯಸಗ್ಂ ಹಿ ಪರಾತ್ಪರಂ ಯನ್ಮಹತೋ ಮಹಾಂತಂ । ಯದೇಕ-ಮವ್ಯಕ್ತಮನಂತರೂಪಂ ವಿಶ್ವಂ ಪುರಾಣಂ ತಮಸಃ ಪರಸ್ತಾತ್ ॥**

ಈ ಪರಬ್ರಹ್ಮವಸ್ತುವಿಗಿಂತ ಉತ್ಕೃಷ್ಟ ಅಥವಾ ಶ್ರೇಷ್ಠವಸ್ತುವಿಲ್ಲ. ಇದಕ್ಕಿಂತ ಅತಿ ಸಣ್ಣದಾದ ಅಥವಾ ಸೂಕ್ಷ್ಮವಾದ ವಸ್ತುವಾಗಲೀ ಇದಕ್ಕಿಂತ ಅತಿ ದೊಡ್ಡ ವಸ್ತುವಾಗಲಿ ಇಲ್ಲ. ಈ ಬ್ರಹ್ಮವು ಅದ್ವಿತೀಯವಾಗಿ ಎಂದರೆ ಇದಕ್ಕೆ ಸರಿಗಟ್ಟುವ ವಸ್ತುವಿಲ್ಲದೆ ತಾನೇ ತಾನಾಗಿ ಬೆಳಗುತ್ತಿರುವುದು. ಇಂದ್ರಿಯಗಳಿಗೆ ಗೋಚರವಾಗದರೀತಿ ಅವ್ಯಕ್ತಾ (ಸೂಕ್ಷ್ಮ)ವಸ್ಥೆಯಲ್ಲಿರುವುದು. ಇದಕ್ಕೆ ದೇಶಕಾಲವಸ್ತುಪರಿಚ್ಛೇದವಿಲ್ಲದೆ ಅನಂತವಾಗಿರುವುದು. ಸಮಸ್ತವಿಶ್ವವನ್ನೂ ಒಳಗೊಂಡಿರುವುದು. ತಮಸ್ಸಿನಿಂದ ಎಂದರೆ ಕತ್ತಲಿನಿಂದ ಅಥವಾ ಅಜ್ಞಾನದಿಂದ ಬೇರೆಯಾಗಿದ್ದು ಪ್ರಕಾಶಮಾನವಾಗಿ ಬೆಳಗುತ್ತಿರುವುದು. ಇದು ಅನಾದಿಯಾಗಿಯೂ ಇರುವುದು.

**ತದೇವರ್ತಂ ತದು ಸತ್ಯಮಾಹುಸ್ತದೇವ ಬ್ರಹ್ಮ ಪರಮಂ ಕವೀನಾಂ । ಇಷ್ಟಾಪೂರ್ತಂ**
**ಬಹುಧಾ ಜಾತಂ ಜಾಯಮಾನಂ ವಿಶ್ವಂ ಬಿಭರ್ತಿ ಭುವನಸ್ಯ ನಾಭಿಃ ॥**

ಮನಸ್ಸಿನಲ್ಲಿ ಧ್ಯಾನಮಾಡಿದರೂ, ಮಾತುಗಳಲ್ಲಿ ವರ್ಣಿಸಿದರೂ ಆ ಬ್ರಹ್ಮವಸ್ತುವು ಸತ್ಯವೇ ಆಗಿರುವುದೆಂದು ತಿಳಿದವರು ಹೇಳುವರು. ಇದನ್ನೇ ಸರ್ವೋತ್ಕೃಷ್ಟವಾದ ಬ್ರಹ್ಮವೆಂದು ಕವಿಗಳು ಹೇಳಿರುವರು. ಯಜ್ಞಸ್ವರೂಪವೂ ಈ ಬ್ರಹ್ಮವೇ. ಹಿಂದಿನ ಕಲ್ಪಗಳಲ್ಲಿ ಸೃಷ್ಟಿಸಲ್ಪಟ್ಟದ್ದ ಸಮಸ್ತ ಜಗತ್ತುಗಳೂ ಈಗ ಸೃಷ್ಟಿಸಲ್ಪಟ್ಟಿರುವ ಜಗದಾದಿಗಳೆಲ್ಲವೂ ಈ ಬ್ರಹ್ಮವೇ ಆಗಿರುವುದು. ಜಗತ್ತಿಗೆ ನಾಭಿಯಂತಿರುವ ಎಂದರೆ ಜಗದಾದಿಗಳಲ್ಲಿ ಚೈತನ್ಯರೂಪದಿಂದ ಪ್ರವೇಶಿಸಿ ಅಲ್ಲಿಯೇ ನೆಲಸಿರುವ ಈ ಬ್ರಹ್ಮವು ಸಮಸ್ತ ಜಗತ್ತನ್ನೂ ತನ್ನ ಪ್ರಭಾವದಿಂದ ಧರಿಸಿ ಪೋಷಿಸುತ್ತಿರುವುದು.

**ತದೇವಾಗ್ನಿಸ್ತದ್ವಾಯುಸ್ತತ್ಸೂರ್ಯಸ್ತದು ಚಂದ್ರಮಾಃ । ತದೇವ ಶುಕ್ರಮಮೃತಂ ತದ್ಬ್ರಹ್ಮ**
**ತದಾಪಃ ಸ ಪ್ರಜಾಪತಿಃ ॥**

ಅಗ್ನಿಯೂ ಆ ಬ್ರಹ್ಮಸ್ವರೂಪವೇ ಆಗಿರುವುದು. ಹಾಗೆಯೇ, ವಾಯು, ಸೂರ್ಯಚಂದ್ರ, ಪ್ರಕಾಶಮಾನವಾದ ನಕ್ಷತ್ರಮಂಡಲ, ಉದಕವೇ ಮೊದಲಾದ ಪಂಚಭೂತಗಳು ವಿರಾಡ್ರೂಪನಾದ ಪ್ರಜಾಪತಿ ಇವೆಲ್ಲವೂ ಆ ಬ್ರಹ್ಮವೇ ಆಗಿರುವುದು.

**ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ ।**
**ಕಲಾ ಮುಹೂರ್ತಾಃ ಕಾಷ್ಠಾಶ್ಚಾಹೋರಾತ್ರಾಶ್ಚ ಸರ್ವಶಃ ॥**
**ಅರ್ಧಮಾಸಾ ಮಾಸಾ ಋತವಃ ಸಂವತ್ಸರಶ್ಚ ಕಲ್ಪಂತಾಂ ।**
**ಸ ಆಪಃ ಪ್ರದುಘೇ ಉಭೇ ಇಮೇ ಅಂತರಿಕ್ಷಮಥೋ ಸುವಃ ॥**

ಸ್ವಯಂಪ್ರಕಾಶಮಾನನಾದ ಆ ಬ್ರಹ್ಮನಿಂದಲೇ ಕಾಲವಿಭಾಗಗಳು ಎಂದರೆ ನಿಮೇಷ (ಕಣ್ಣು ರೆಪ್ಪೆ ಮುಚ್ಚಿ ತೆಗೆಯುವಷ್ಟುಕಾಲ) ಕಾಷ್ಠ, ಕಲಾ, ಮುಹೂರ್ತ, ಹಗಲು, ರಾತ್ರಿ ಪಕ್ಷ (ಹದಿನೈದುದಿವಸ ಅಥವಾ ಅರ್ಧಮಾಸ) ಮಾಸ, ಋತುಗಳು, ಸಂವತ್ಸರ ಎಂಬ ಕಾಲವಿಭಾಗಗಳೆಲ್ಲವೂ ಉತ್ಪನ್ನವಾಗಿ ಈ ಪರಬ್ರಹ್ಮಸ್ವರೂಪವೇ ಆಗಿರುವುದು. ಈ ಕಾಲಾತ್ಮಕವಾದ ಬ್ರಹ್ಮನು ಜಲಾದಿಪಂಚಭೂತಗಳಿಂದ ಕೂಡಿದ ಪೃಥಿವಿಯನ್ನೂ ಅಂತರಿಕ್ಷವನ್ನೂ ಸ್ವರ್ಗವನ್ನೂ ಸೃಷ್ಟಿಸಿದನು.

**ನೈನಮೂರ್ಧ್ವಂ ನ ತಿರ್ಯಂಚಂ ನ ಮಧ್ಯೇ ಪರಿಜಗ್ರಭತ್ ।**
**ನ ತಸ್ಯೇಶೇ ಕಶ್ಚನ ತಸ್ಯ ನಾಮ ಮಹದ್ಯಶಃ ।**

ಈ ಬ್ರಹ್ಮಕ್ಕೆ, ಇದು ಸರ್ವತ್ರ ವ್ಯಾಪಿಸಿರುವುದರಿಂದ ಮೇಲುಭಾಗ ಯಾವುದು ಕೆಳಭಾಗ, ಅಗಲ, ಉದ್ದ, ಎತ್ತರ, ಮಧ್ಯ ಎಂಬ ವಿಭಾಗಗಳು ಯಾವುದೂ ಇಲ್ಲ. ಇದು ಒಬ್ಬರ ಆಧೀನದಲ್ಲಿಲ್ಲ ಎಂದರೆ ಇದರ ಮೇಲೆ ಅಧಿಕಾರ ನಡೆಸುವವರು ಯಾರೂ ಇಲ್ಲ. ಇಂತಹ ಸರ್ವತಂತ್ರಸ್ವತಂತ್ರನಾದ್ದರಿಂದಲೇ ಇದರ ಯಶಸ್ಸು ಎಂದರೆ ಮಹಿಮೆಯು ಅಗಾಧವಾಗಿರುವುದು.

**ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಂ ।**
**ಹೃದಾ ಮನೀಷಾ ಮನಸಾಭಿಕ್ಲೃಪ್ತೋ ಯ ಏನಂ ವಿದುರಮೃತಾಸ್ತೇ ಭವಂತಿ ॥**

ಈ ಬ್ರಹ್ಮವು ಯಾರಿಗೂ ಗೋಚರವಾಗುವ ವಸ್ತುವಲ್ಲ. ಇದರ ರೂಪವನ್ನು ಕಣ್ಣಿನಿಂದ ಯಾವ ಪುರುಷನೂ ನೋಡಲು ಸಮರ್ಥನಲ್ಲ. ಹೃದಯಕಮಲದಲ್ಲಿ ನೆಲಸಿರುವ ಈ ಪರಬ್ರಹ್ಮನನ್ನು ಮನಸ್ಸಿನಿಂದ ಧ್ಯಾನಿಸಿ ಸಾಕ್ಷಾತ್ಕರಿಸಿ ಯಾರು ತಿಳಿಯುವರೋ ಅವರು ಮರಣರಹಿತರಾಗಿ ಶಾಶ್ವತವಾದ ಪರಮಪದವಿಯನ್ನು ಪಡೆಯುವರು.

(ತೈ. ಉ. ೪-೧)

ಇವುಗಳಲ್ಲದೆ ಬ್ರಹ್ಮಸ್ವರೂಪವನ್ನು ತಿಳಿಸಲಪೇಕ್ಷಿಸುವ ಮಂತ್ರಗಳೂ, ವಾಕ್ಯಗಳೂ ವೇದಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಅನೇಕವಾಗಿರುವವು. ಒಂದಲ್ಲ ಒಂದುರೀತಿ ಈ ಪರಬ್ರಹ್ಮವನ್ನು ವಿವರಿಸುವುದೇ ಸಮಸ್ತ ಉಪನಿಷತ್ತುಗಳ ಉದ್ದೇಶವಾಗಿರುವುದರಿಂದ ಅವೆಲ್ಲವನ್ನೂ ಇಲ್ಲಿ ವಿವರಿಸುವುದು ಸಾಧ್ಯವಿಲ್ಲ. ಆದ್ದರಿಂದ ಈ ವಿವರವನ್ನು ಇಲ್ಲಿಗೆ ನಿಲ್ಲಿಸಿ ಪ್ರಕೃತ ಋಕ್ಕಿನ ವಿವರಣೆಯನ್ನು ಮುಂದುವರಿಸಲಾಗುವುದು.

**ಯತೋ ಜಜ್ಞ ಉಗ್ರ ಸ್ತ್ವೇಷನೃಮ್ಣಃ**-**ಯಸ್ಮಾದ್ಬ್ರಹ್ಮಣಃ ಉದ್ಗೂರ್ಣಃ ಪ್ರದೀಪ್ತಬಲಃ ಸೂರ್ಯಾತ್ಮಕ ಇಂದ್ರಃ ಜಾತೋ ಬಭೂವ ।** ಈ ಪರಬ್ರಹ್ಮದಿಂದಲೇ ಅತ್ಯಂತ ಪ್ರಕಾಶಮಾನನೂ, ಶಕ್ತಿವಂತನೂ ಸೂರ್ಯಾತ್ಮನೂ ಆದ ಇಂದ್ರನು ಉತ್ಪನ್ನನಾದನು. ಮೇಲೆ ಉದಹರಿಸಿರುವ ಮಂತ್ರಗಳಲ್ಲಿ ಬ್ರಹ್ಮನಿಂದ ಅಗ್ನಿ, ಇಂದ್ರ, ಸೂರ್ಯ ಇವರು ಉತ್ಪನ್ನರಾದರೆಂದು ಹೇಳಿದೆ. ಇದಲ್ಲದೆ **ಚಕ್ಷೋಃ ಸೂರ್ಯೋ ಅಜಾಯತ** (ಋ. ಸಂ. ೧೦-೯೦-೧೩) ಈ ಬ್ರಹ್ಮನ ಎಂದರೆ ಪರಮಪುರುಷನ ಕಣ್ಣಿನಿಂದ ಸೂರ್ಯನು ಉತ್ಪನ್ನನಾದನು ಎಂದು ಮಂತ್ರದಲ್ಲಿಯೂ ಹೇಳಿದೆ. ಮತ್ತು **ಸೂರ್ಯಾ-ಚಂದ್ರಮಸೌ ಧಾತಾ ಯಥಾ ಪೂರ್ವಮಕಲ್ಪಯತ್** (ಋ. ಸಂ. ೧೦-೧೯೦-೩) ಎಂಬ ಮಂತ್ರದಲ್ಲಿಯೂ ಈ ಬ್ರಹ್ಮನು ಹಿಂದಿನ ಕಲ್ಪದಲ್ಲಿದ್ದಂತೆಯೇ ಈ ಕಲ್ಪದಲ್ಲಿಯೂ ಸಹ ಸೂರ್ಯಚಂದ್ರರನ್ನು ಸೃಷ್ಟಿಮಾಡಿದನು ಎಂದು ಹೇಳಿದೆ. ಇಲ್ಲಿ ಸೂರ್ಯನಿಗೂ ಚಂದ್ರನಿಗೂ ತಾದಾತ್ಮ್ಯವನ್ನು ಹೇಳಿದೆ. ಇಂದ್ರ ಮತ್ತು ಸೂರ್ಯರಿಬ್ಬರೂ ಅ ಬ್ರಹ್ಮದ ಅಂಶಗಳೇ ಆಗಿರುವರು.

ಮತ್ತು ಅವರು ಜಗತ್ತಿಗೆ ಪ್ರಭುಗಳೆಂದೂ ಅವರೇ ಬ್ರಹ್ಮಸ್ವರೂಪವೆಂದೂ ಅನೇಕ ಕಡೆ ವರ್ಣಿಸಲಾಗಿದೆ **ಅಸಾವಾದಿತ್ಯೋ ಬ್ರಹ್ಮೇತಿ**-ನಮ್ಮ ಕಣ್ಣಿಗೆ ಕಾಣಿಸುತ್ತಿರುವ ಈ ಆದಿತ್ಯನೇ ಬ್ರಹ್ಮನಲ್ಲದೆ ಬೇರೆಯಲ್ಲ ಎಂಬ ಶ್ರುತಿವಾಕ್ಯವು ಇದನ್ನು ಸಮರ್ಥಿಸುವುದು.

**ಸದ್ಯಃ ಜಜ್ಞಾನಃ ನಿರಿಣಾತಿ ಶತ್ರೂನ್**-ಈ ಇಂದ್ರನು ಹುಟ್ಟಿದ ಕೂಡಲೇ ಶತ್ರುಗಳನ್ನು ನಾಶಮಾಡಿದನು. ಇತರ ಜನರು ಹುಟ್ಟಿದ ಮೇಲೆ ಅನೇಕ ವರ್ಷಗಳಾದನಂತರ ಎಂದರೆ ಬಾಲ್ಯ ಕೌಮಾರಾವಸ್ಥೆಗಳನ್ನು ದಾಟಿ ಯೌವನಾವಸ್ಥೆಗೆ ಬಂದನಂತರ ಶತ್ರುಗಳೊಡನೆ ಯುದ್ಧ ಮಾಡಿ ಅವರನ್ನು ಸಂಹರಿಸುವ ಸಾಮರ್ಥ್ಯವುಳ್ಳವರಾಗುವರು. ಆದರೆ ಇಂದ್ರನ ವಿಷಯವು ಹಾಗಲ್ಲ. ಹುಟ್ಟಿದ ಕೂಡಲೇ ತನ್ನ ಅತಿಶಯವಾದ ಶಕ್ತಿ ಸಾಮರ್ಥ್ಯಗಳಿಂದ ಶತ್ರುಗಳನ್ನು ಸಂಹರಿಸಲು ಸಮರ್ಥನು. ಸೂರ್ಯನ

ವಿಷಯದಲ್ಲಿಯೂ, ಸೂರ್ಯನು ಉತ್ಪನ್ನನಾದ ಕೂಡಲೇ ತಮೋರೂಪವಾದ ಶತ್ರುಗಳನ್ನು ನಾಶಮಾಡಿ ಸಮಸ್ತ ಜಗತ್ತಿಗೂ ಬೆಳಕನ್ನುಂಟುಮಾಡುವನು ಎಂದರೆ ಸೂರ್ಯನು ಉದಯಿಸಿದ ಕೂಡಲೇ ಕತ್ತಲೆಯು ಹೋಗಿ ಬೆಳಕುಂಟಾಗುವುದು. ಅಥವಾ **ಸದ್ಯೋ ಹ್ಯೇಷ ಜಾತಃ ಪಾಪ್ಮಾನಮುಪಾಹತ** (ಐ. ಆ. ೧–೩–೪) ಎಂಬ ಐತರೇಯಾರಣ್ಯಕದ ವಾಕ್ಯದಂತೆ ಸೂರ್ಯನು ಉದಯಿಸಿದ ಕೂಡಲೇ ತನ್ನನ್ನು ಉಪಾಸನೆಮಾಡುವ ಜನರ ಪಾಪಗಳನ್ನು ಪರಿಹಾರಮಾಡುವನು ಅಥವಾ ಮಂದೇಹಾದಿ ರಾಕ್ಷಸರನ್ನು ನಾಶಮಾಡುವನು. ಈ ವಿಷಯದಲ್ಲಿ ತೈತ್ತಿರೀಯಾರಣ್ಯಕದಲ್ಲಿ ಒಂದು ಇತಿಹಾಸವು ಉಕ್ತವಾಗಿದೆ—

**ರಕ್ಷಾಂಗ್ಸಿ ಹ ವಾ ಪುರೋಽನುವಾಕೇ ತಪೋಗ್ರಮತಿಷ್ಠಂತ ತಾನ್ಪ್ರಜಾಪತಿರ್ವರೇಣೋಪಾಮಂತ್ರಯತ ತಾನಿ ವರಮವೃಣೀತಾದಿತ್ಯೋ ನೋ ಯೋದ್ಧಾ ಇತಿ ತಾನ್ಪ್ರಜಾಪತಿರಬ್ರವೀದ್ಯೋಧಯಧ್ವಮಿತಿ ತಸ್ಮಾದುತ್ತಿಷ್ಠಂತಗ್ಂ ಹ ವಾ ಏತಾನಿ ರಕ್ಷಾಗ್ಸ್ಯಾದಿತ್ಯಂ ಯೋಧಯಂತಿ ಯಾವದಸ್ತಮನ್ವಗಾತ್ತಾನಿ ಹ ವಾ ಏತಾನಿ ರಕ್ಷಾಗ್ಂಸಿ ಗಾಯತ್ರಿಯಾಭಿಮಂತ್ರಿತೇನಾಂಭಸಾ ಶಾಮ್ಯಂತಿ ತದು ಹ ವಾ ಏತೇ ಬ್ರಹ್ಮವಾದಿನಃ ಪೂರ್ವಾಭಿಮುಖಾಸ್ಸಂಧ್ಯಾಯಾಂ ಗಾಯತ್ರಿಯಾಭಿಮಂತ್ರಿತಾ ಆಪ ಊರ್ಧ್ವಂ ವಿಕ್ಷಿಪಂತಿ ತಾ ಏತಾ ಆಪೋ ವಜ್ರೀ ಭೂತ್ವಾ ತಾನಿ ರಕ್ಷಾಗ್ಂಸಿ ಮಂದೇಹಾರುಣೇ ದ್ವೀಪೇ ಪ್ರಕ್ಷಿಪಂತಿ ಯತ್ಪ್ರದಕ್ಷಿಣಂ ಪ್ರಕ್ರಮಂತಿ ತೇನ ಪಾಪ್ಮಾನಮವಧೂನ್ವಂತ್ಯುದ್ಯಂತಮಸ್ತಂಯಂತಮಾದಿತ್ಯಮಭಿಧ್ಯಾಯನ್ಕುರ್ವನ್ ಬ್ರಾಹ್ಮಣೋ ವಿದ್ವಾನ್ತ್ಸಕಲಂ ಭದ್ರಮಶ್ನುತೇಽಸಾವಾದಿತ್ಯೋ ಬ್ರಹ್ಮೇತಿ ಬ್ರಹ್ಮೈವ ಸನ್ಬ್ರಹ್ಮಾಪ್ಯೇತಿ ಯ ಏವಂ ವೇದ ॥**

ಪೂರ್ವದಲ್ಲಿ ರಾಕ್ಷಸರು ಉಗ್ರವಾದ ತಪಸ್ಸನ್ನಾಚರಿಸಿದರು. ಆಗ ದೇವನಾದ ಪ್ರಜಾಪತಿಯು ಪ್ರತ್ಯಕ್ಷನಾಗಿ ಅವರಿಗೆ ಯಾವ ವರವು ಬೇಕೆಂದು ಪ್ರಶ್ನಿಸಿದನು. ಆಗ ಅವರು ನಮಗೆ ಸೂರ್ಯನೊಂದಿಗೆ ಯುದ್ಧಮಾಡುವ ಶಕ್ತಿಯನ್ನೂ ಅವಕಾಶವನ್ನೂ ಕಲ್ಪಿಸಿ ಕೊಡು ಎಂದು ಪ್ರಾರ್ಥಿಸಿದರು. ಹಾಗೆಯೇ ಆಗಬಹುದೆಂದು ಪ್ರಜಾಪತಿಯು ಸಮ್ಮತಿಸಿದನು ಆದುದರಿಂದಲೇ ರಾಕ್ಷಸರು ಸೂರ್ಯನು ಉದಯಿಸಿದೊಡನೆಯೇ ಅವನೊಡನೆ ಹೋರಾಡಲುಪಕ್ರಮಿಸಿ ಅಸ್ತಕಾಲದವರೆಗೂ ಹೋರಾಡುತ್ತಲೇ ಇರುವರು. ಆದರೆ ಗಾಯತ್ರೀಪಠನದಿಂದ ಪೂತವಾದ ಉದಕದಿಂದ (ಅರ್ಘ್ಯೋದಕದಿಂದ) ಅವರನ್ನು ಓಡಿಸಲು ಸಾಧ್ಯವಾಗುವುದು. ಆದ್ದರಿಂದಲೇ ಬ್ರಹ್ಮವಾದಿಗಳು ಪ್ರಾತಃಸಂಧ್ಯಾಕಾಲದಲ್ಲಿಯೂ ಸಾಯಂಸಂಧ್ಯಾಕಾಲದಲ್ಲಿಯೂ ಗಾಯತ್ರೀಮಂತ್ರವನ್ನು ಪಠಿಸಿ ಅದರಿಂದ ಶುದ್ಧವಾದ ಉದಕದಿಂದ ಅರ್ಘ್ಯವನ್ನು ಸಮರ್ಪಿಸುತ್ತಾರೆ. ಅರ್ಘ್ಯರೂಪದಲ್ಲಿ ಅರ್ಪಿಸಿದ ಈ ಉದಕಬಿಂದುಗಳು ವಜ್ರಾತ್ಮಕವಾಗಿ ಪರಿಣಮಿಸಿ, ಸೂರ್ಯನೊಡನೆ ಹೋರಾಡುತ್ತಿರುವ ಆ ರಾಕ್ಷಸರನ್ನು ಮಂದೇಹಾರುಣವೆಂಬ ದ್ವೀಪದಲ್ಲಿ ಎಸೆಯುತ್ತದೆ. ಅನಂತರ ಬ್ರಹ್ಮವಾದಿಗಳು ಪ್ರದಕ್ಷಿಣ ನಮಸ್ಕಾರಪೂರ್ವಕವಾದ ಸಂಧ್ಯಾವಂದನೆಯಿಂದ ತಮ್ಮ ಪಾಪವನ್ನು ನೀಗಿಕೊಳ್ಳುತ್ತಾರೆ. ಈ ತತ್ತ್ವವನ್ನರಿತ ಬ್ರಾಹ್ಮಣನು (ಬ್ರಹ್ಮಜ್ಞಾನಿಯೂ) ಸೂರ್ಯೋದಯಕಾಲದಲ್ಲಿಯೂ ಸೂರ್ಯಾಸ್ತಮಯಕಾಲದಲ್ಲಿಯೂ ಸಹ ಗಾಯತ್ರೀಮಂತ್ರವನ್ನು ಪಠಿಸಿ ಅರ್ಘ್ಯವನ್ನರ್ಪಿಸುತ್ತಾ ತನ್ಮೂಲಕ ಆದಿತ್ಯನನ್ನು ಉಪಾಸಿಸುತ್ತಾನೆ. ಅದರಿಂದ ಅವನಿಗೆ ಸಕಲವಿಧವಾದ ಶ್ರೇಯೋಭಿವೃದ್ಧಿಯೂ ಉಂಟಾಗುತ್ತದೆ. ಆದಿತ್ಯನೇ ಪರಬ್ರಹ್ಮನು. ಗಾಯತ್ರ್ಯುಪಾಸ್ಯನಾದ ಆದಿತ್ಯನೇ ಬ್ರಹ್ಮನೆಂದರಿತು ಉಪಾಸನೆಯನ್ನು ಮಾಡತಕ್ಕ ಪುರುಷನು ಬ್ರಹ್ಮಸಾಯುಜ್ಯವನ್ನು ಪಡೆದು ಬ್ರಹ್ಮನೇ ಆಗಿ ಬ್ರಹ್ಮನಲ್ಲಿಯೇ ಐಕ್ಯನಾಗುವನು ಎಂದು ಹೇಳಿದೆ.

**ಅನು ಯಂ ವಿಶ್ವೇ ಮದಂತಿ ಊಮಾಃ**—ಸಮಸ್ತಪ್ರಾಣಿಗಳೂ ಸೂರ್ಯನು ಉದಯಿಸುವುದನ್ನು ಕಂಡು ಹರ್ಷಗೊಳ್ಳುವವು ಎಂದು ಈ ಋಕ್ಕಿನ ಕೊನೆಯ ಪಾದದಲ್ಲಿ ಹೇಳಿದೆ. ರಾತ್ರಿಯಲ್ಲಿ ಕತ್ತಲು ಕವಿದಿರುವುದರಿಂದ ಪ್ರಾಣಿಗಳು ಸಂಚರಿಸುವುದಕ್ಕಾಗಲಿ, ತಮ್ಮ ಆಹಾರಗಳನ್ನು ಸಂಪಾದಿಸಿಕೊಳ್ಳುವುದಕ್ಕಾಗಲಿ ತೊಂದರೆಯಾಗುವದು ಮತ್ತು ಶತ್ರು ಮೊದಲಾದ ಇತರ ಬಾಧೆಗಳ ಸಂಭವವೂ ಉಂಟು. ಆದ್ದರಿಂದ ಸಮಸ್ತ ಪ್ರಾಣಿಗಳೂ (ಮನುಷ್ಯರೂ ಸಹ) ಸೂರ್ಯನ ಆಗಮನವನ್ನೇ ನಿರೀಕ್ಷಿಸುತ್ತಾ ಸೂರ್ಯೋದಯವನ್ನು ಆನಂದದಿಂದ ಸ್ವಾಗತಿಸುವರು ಎಂದು ಹೇಳಿದೆ. ಈ ವಿಷಯದಲ್ಲಿ ಭಾಷ್ಯಕಾರರು—**ಭೂತಾನಿ ವೈ ವಿಶ್ವ ಊಮಾಸ್ತ ಏನಮನುಮದಂತ್ಯುದಗಾದುದಗಾದಿತಿ** । (ಐ. ಆ. ೧-೩-೪) ಐತರೇಯಾರಣ್ಯಕವಾಕ್ಯವನ್ನೂ **ತಸ್ಮಾತ್ಸರ್ವ ಏವ ಮನ್ಯತೇ ಮಾಂಪ್ರತ್ಯುದಗಾದಿತಿ** । (ತೈ. ಸಂ.೬-೫-೪-೨) ಎಂಬ ತೈತ್ತಿರೀಯಸಂಹಿತಾವಾಕ್ಯವನ್ನೂ ಉದಹರಿಸಿರುವರು. ಇಂತಹ ಸೂರ್ಯಾತ್ಮಕನಾದ ಇಂದ್ರನು ಉತ್ಪನ್ನನಾದನು ಎಂದು ಇಂದ್ರನ ಉತ್ಪತ್ತಿ ವಿಷಯವೂ ಇಲ್ಲಿ ಉಕ್ತವಾಗಿದೆ.

ಇತ್ಥಂ ಮಹತಾ ಪ್ರಬಂಧೇನ ಸೂಕ್ತಾದಿಸ್ತಚ್ಛಬ್ದಃ ಪ್ರಶಸ್ತಃ। ಅಥ ಸೂಕ್ತಾದೌ ಯಸ್ತೃಚೋ ರಾಜನಸಾಮ್ನಃ " ಸ್ತ್ರೋತ್ರಿಯೋ ರಾಜನಸ್ತೋತ್ರಿಯೇಣ ಪ್ರತಿಪದ್ಯತೇ " (ಐ. ಆ. ೫ ಅ-೧ಖ. ೫ ಇತಿ ಪಂಚಮೇ ವಕ್ಷ್ಯಮಾಣತ್ವಾತ್ತಮಿಮಂ ತೃಚಂ ಕ್ರಮೇಣ ವ್ಯಾಚಿಖ್ಯಾಸುರಾದೌ ಪ್ರಥಮಾಯಾ ಋಚಃ ಪ್ರಥಮಂ ಪಾದಂ " ತದಿದಾಸ " ಇತ್ಯಾದಿನಾಽನುವದತಿ । ಸೇಯಮೃಗ್ ದಾಶತಯ್ಯಾ-ಮೇವಮಾಮ್ನಾತಾ—

" ತದಿದಾಸ ಭುವನೇಷು ಜ್ಯೇಷ್ಠಂ ಯತೋ ಜಜ್ಞ ಉಗ್ರಸ್ತ್ವೇಷ ನೃಮ್ಣಃ ।
ಸದ್ಯೋ ಜಜ್ಞಾನೋ ನಿರಿಣಾತಿ ಶತ್ರೂನನು ಯಂ ವಿಶ್ವೇ ಮದಂತ್ಯೂಮಾಃ ॥ "
(ಋ. ಸಂ. ಮ. ೧ ಸೂ. ೧೨೦ ಋ. ೧)

**ಭುವನೇಷು ಪೃಥಿವ್ಯಾದಿಷು ಮಧ್ಯೇ ತದಿತ್ಸರ್ವವೇದಪ್ರಸಿದ್ಧಂ ಜಗತ್ಕಾರಣಂ ಬ್ರಹ್ಮ ಜ್ಯೇಷ್ಠಮಾಸಾತಿಶಯೇನ ವೃದ್ಧಂ ಬಭೂವ ಕಾರಣತ್ವೇನ ಜಗತಃ ಪೂರ್ವಂ ವಿದ್ಯಮಾನತ್ವಾತ್ । ಯತೋ ಯಸ್ಮಾತ್ಕಾರಣಾತ್ಬ್ರಹ್ಮಣಸ್ತ್ವೇಷ ನೃಮ್ಣಃ ಪ್ರದೀಪ್ತಾನಲ ಉಗ್ರಃ ಸ್ವಭಾವತೋಽಗ್ನಿರ್ಜಜ್ಞೇ ಸಮುತ್ಪನ್ನಃ । ಸೋಽಗ್ನಿರ್ಜಜ್ಞಾನ ಉತ್ಪನ್ನ ಏವ ಸನ್ಸದ್ಯಸ್ತದಾನೀಮೇವ ಶತ್ರೂನ್ನಿರಿಣಾತಿ ನಿರಾಕರೋತಿ । ಅನಂತೀತ್ಯೂಮಾ ರಕ್ಷಕಾ ವಿಶ್ವೇ ಸರ್ವೇ ದೇವಾದಯಃ ಪ್ರಾಣಿನೋ ಯಮಗ್ನಿಂ ಹೃಷ್ಯಂತಮನುಸ್ವಯಮಭಿಹೃಷ್ಯಂತಿ, ಸೋಽಗ್ನಿರ್ಜಾತ ಇತಿ ಪೂರ್ವತ್ರಾಸಂಬಂಧಃ ॥**

ಈಗ ತದಿದಾಸ ಎಂಬ ಸೂಕ್ತದ ಮೊದಲನೆಯ ಋಕ್ಕನ್ನು ವಿವರಿಸುವರು.

**ತದಿದಾಸ ಭುವನೇಷು ಜ್ಯೇಷ್ಠಂ ಯತೋ ಜಜ್ಞ ಉಗ್ರಸ್ತ್ವೇಷ ನೃಮ್ಣಃ ।
ಸದ್ಯೋ ಜಜ್ಞಾನೋ ನಿರಿಣಾತಿ ಶತ್ರೂನನು ಯಂ ವಿಶ್ವೇ ಮದಂತ್ಯೂಮಾಃ ॥**
(ಋ. ಸಂ. ೧೦-೧೨೦-೧)

ಈ ಸೂಕ್ತದ ಪ್ರಾರಂಭದ ಋಕ್ಕು ಮೇಲೆ ಹೇಳಿದಂತೆ ಇರುವುದು. ಇದರ ಮುಖ್ಯಾರ್ಥವು—ಪೃಥಿವ್ಯಾದಿ ಸಮಸ್ತ ಲೋಕಗಳಿಗೂ **ತತ್** ಎಂದರೆ ಪರಬ್ರಹ್ಮಸ್ವರೂಪವೇ ಮೊದಲನೆಯದಾಗಿರುವುದು. ಈ ಪರಬ್ರಹ್ಮನಿಂದ ಪ್ರಕಾಶಿಸುತ್ತಿರುವ

(ಬೆಳಗುವ) ಅಗ್ನಿಯು ಉತ್ಪನ್ನನಾಗಿರುವನು. ಈ ಅಗ್ನಿಯು ಸಮಸ್ತ ಶತ್ರುಗಳನ್ನೂ ನಾಶಮಾಡುವನು. (ಈ ಋಕ್ಕಿಗೆ ಇರುವ ಅರ್ಥವು ಸ್ವಲ್ಪ ವ್ಯತ್ಯಾಸವಾಗಿದ್ದರೂ ಇಲ್ಲಿ ಆರಣ್ಯಕದಲ್ಲಿ ಹೇಳಬೇಕಾದ ಅರ್ಥಕ್ಕೆ ಅನುಸಾರವಾಗಿ ವ್ಯಾಖ್ಯಾನಮಾಡಲಾಗಿದೆ. ಸಂಹಿತೆಯಲ್ಲಿ ಈ ಸೂಕ್ತಕ್ಕೆ ಇಂದ್ರನ ಪರವಾಗಿ ಅರ್ಥಮಾಡಿದ್ದರೂ ಇಲ್ಲಿ ಎಂದರೆ ಆರಣ್ಯಕದಲ್ಲಿ ಸಂದರ್ಭಕ್ಕೆ ಅನುಸಾರವಾಗಿ ಪರಬ್ರಹ್ಮನ ಪರವಾಗಿ ಅರ್ಥವನ್ನು ವಿವರಿಸಲಾಗಿದೆ.)

**ತದಿದಾಸ ಭುವನೇಷು ಜ್ಯೇಷ್ಠಮಿತಿ ಪ್ರತಿಪದ್ಯತ ಏತದ್ವಾವ ಭುವನೇಷು ಜ್ಯೇಷ್ಠಮ್, ॥**

ಅಸ್ಯಾ ಋಚಃ ಪ್ರಥಮಪಾದಮನೂದ್ಯ ವ್ಯಾಚಷ್ಟೇ—ತದಿತ್ಯಾದಿನಾ ಶಸ್ತ್ರಂ ಪ್ರಾರಭೇತ । ತಚ್ಛಬ್ದೋಕ್ತಸ್ಯ ಪರಬ್ರಹ್ಮಣ ಆದಿತ್ಯಮಂಡಲೋಪಾಧಿಕತ್ವೇನ ದೃಶ್ಯಮಾನತ್ವಾದೇತದ್ವಾವೇತ್ಯುಕ್ತಂ ॥

ಈ ಋಕ್ಕಿನ ಮೊದಲನೇ ಪಾದವನ್ನು ವಿವರಿಸುವರು—ಈ ಬ್ರಹ್ಮನು ಸಮಸ್ತ ಪ್ರಪಂಚಕ್ಕೂ (ವಿಶ್ವಕ್ಕೂ) ಜ್ಯೇಷ್ಠನು ಹಿರಿಯನು ಎಂದರೆ ಮೊದಲನೆಯವನು ಆದಿತ್ಯರೂಪದಿಂದ ನಮಗೆ ಗೋಚರಿಸುತ್ತಿರುವ ಈ ಪರಬ್ರಹ್ಮನು ಸಮಸ್ತ ವಿಶ್ವಕೂ ಮೊದಲನೆಯವನು ಎಂದರ್ಥವು.

**ಯತೋ ಜಜ್ಞ ಉಗ್ರಸ್ತ್ವೇಷ ನೃಮ್ಣ ಇತ್ಯತೋ ಹ್ಯೇಷ ಜಾತ ಉಗ್ರಸ್ತ್ವೇಷ ನೃಮ್ಣಃ ॥**

ದ್ವಿತೀಯಪಾದಾರ್ಥಸ್ಯ ಹಿಶಬ್ದೇನ ಪ್ರಸಿದ್ಧತಾಂ ದರ್ಶಯತಿ—

ಎರಡನೇ ಪಾದದ ಅರ್ಥವು—ನಮ್ಮ ಕಣ್ಣುಗಳಿಗೆ ಕಾಣುತ್ತಿರುವ ಈ ಆದಿತ್ಯ ರೂಪನಾದ ಬ್ರಹ್ಮನು ಉದಯಿಸಿದ ಕೂಡಲೆ ಬಹಳ ಉಗ್ರನಾಗಿರುವನು.

**ಸದ್ಯೋ ಜಜ್ಞಾನೋ ನಿರಿಣಾತಿ ಶತ್ರೂನಿತಿ ಸದ್ಯೋ ಹ್ಯೇಷ ಜಾತಃ ಪಾಪ್ಮಾನಮಪಾಹತ ॥**

ತೃತೀಯಪಾದೇ ಶತ್ರೂನ್ನಿರಿಣಾತೀತಿ ಪದದ್ವಯಸ್ಯ ಪಾಪವಿನಾಶಪರತ್ವಂ ದರ್ಶಯತಿ —

ಮೂರನೇ ಪಾದವು—ಈ ಆದಿತ್ಯನು ಉದಯಿಸಿದ ಕೂಡಲೇ ನಮ್ಮ ಶತ್ರುಗಳನ್ನು ಎಂದರೆ ಪಾಪಗಳನ್ನು ತಕ್ಷಣವೇ ಪರಿಹರಿಸುವನು. ಆದಿತ್ಯದರ್ಶನದಿಂದ ನಮ್ಮ ಪಾಪಗಳೆಲ್ಲವೂ ನಾಶವಾಗುವವು.

**ಅನು ಯಂ ವಿಶ್ವೇ ಮದಂತ್ಯೂಮಾ ಇತಿ ಭೂತಾನಿ ವೈ ವಿಶ್ವ ಊಮಾಸ್ತ ಏನಮನು ಮದಂತ್ಯುದಗಾದುದಗಾದಿತಿ ॥**

ಚತುರ್ಥಪಾದೇ ವಿಶ್ವ ಊಮಾ ಇತ್ಯನೇನ ಪದದ್ವಯೇನ ಸರ್ವಪ್ರಾಣಿವಿವಕ್ಷಾಂ ದರ್ಶಯತಿ ಬ್ರಹ್ಮರೂಪೋಪಾಧಿಭೂತ ಆದಿತ್ಯೋ ದಿವ್ಯುದಿತವಾನಗ್ನಿಶ್ಚ ಭೂಮಾವುದಿತವಾನ್ । ಅತಃ ಸರ್ವವ್ಯವಹಾರಸಿದ್ಧಿರಿತ್ಯೇವಂ ಪ್ರಾಣಿನಾಂ ಹರ್ಷಃ ॥

ನಾಲ್ಕನೆಯ ಪಾದದ ಅರ್ಥವು—ಬ್ರಹ್ಮಸ್ವರೂಪನಾದ ಈ ಆದಿತ್ಯನು ಈಗ ತಾನೆ ಉದಯಿಸಿರುವನು. ಇವನ ಉದಯದಿಂದ ಸಮಸ್ತ ಪ್ರಾಣಿಗಳ ವ್ಯವಹಾರಗಳು ಪ್ರಾರಂಭವಾಗಿರುವವು. ಸೂರ್ಯೋದಯಾನಂತರ ಕತ್ತಲೆಯು ಪರಿಹಾರವಾಗಿ ಜಗತ್ತು ಪ್ರಕಾಶದಿಂದ ವ್ಯಾಪಿಸಿರುವಾಗ ಸಮಸ್ತ ಪ್ರಾಣಿಗಳೂ ಚೈತನ್ಯವನ್ನು ಹೊಂದಿ ತಮ್ಮ ವ್ಯವಹಾರಗಳಲ್ಲಿ ತೊಡಗಿರುವವು. ಇಂತಹ ಪರಬ್ರಹ್ಮಸ್ವರೂಪನಾದ ಈ ಆದಿತ್ಯನು ಈಗ ಉದಯಿಸಿರುವನು.

**ದ್ವಿತೀಯಾಮೃಚಂ ಸಂಹಿತಾಯಾಮೇವಮಾಮನಂತಿ—**

**“ ವಾವೃಧಾನಃ ಶವಸಾ ಭೂರ್ಯೋಜಾಃ ಶತ್ರುರ್ದಾಸಾಯ ಭಿಯಸಂ ದಧಾತಿ ।**
**ಅವ್ಯನಚ್ಚ ವ್ಯನಚ್ಚ ಸಸ್ನಿಸಂತೇ ನವಂತ ಪ್ರಭೃತಾ ಮದೇಷು ”**

**(ಋ. ಸಂ. ಮಂ. ೧೦ ಸೂ. ೧೨೦ ಋ ೨)**

**ಅಯಮಾದಿತ್ಯಮಂಡಲಸ್ಥಃ ಪರಮೇಶ್ವರೋ ವಹ್ನ್ಯುಪಾಧಿವೇದೋ (ದೇವೋ) ವಾ ಶವಸಾ ಬಲೇನ ವಾವೃಧಾನೋಽತಿಶಯೇನ ವರ್ಧಮಾನೋ ಭೂರ್ಯೋಜಾಃ ಪ್ರಭೂತತೇಜೋಯುಕ್ತೋ ಭವತಿ । ಶತ್ರುಃ ಶತ್ರುಶಾತಯಿತಾ ಸಂದಾಸಾಯೋಪಕ್ಷಯಣೀಯಾಯ ವೈರಿಣೇಽತಿಭೀತಿಂ ಬಾಧಾಂ ತೇ (ಚ) ಸಂಪಾದಯಂತಿ (ತಿ) ವಿಶೇಷೇಣಾನಿತಿ ಚೇಷ್ಟತ ವ್ಯನತ್ಪ್ರಾಣೋಪೇತಂ ಜಂಗಮಮವ್ಯನತ್ ಪ್ರಾಣರಹಿತಂ ಸ್ಥಾವರಂ ಸಮುಭಯಮಪಿ ಸ್ಯಗ್ನಿಃ (ಸಸ್ನಿ) ಸೂಯತೇ (ಶೋಧಯತಿ) ಇತಿ ತದ್ಯೋದಯೇ ಸತಿ ಪ್ರಭೃತಾಃ ಸಂಧ್ಯಾವಂದನಾರ್ಥಂ ಪ್ರಕರ್ಷೇಣೋದ್ಯುಕ್ತಾನಿ ಪ್ರಾಣಿಜಾತಾನಿ ಮದೇಷು ನಿಮಿತ್ತಭೂತೇಷು ಸಂನವಂತ ಸಮ್ಯಗೇವ ಸ್ತುವಂತೀತ್ಯೇತಸ್ಯಾ ಋಚೋಽರ್ಥಃ ॥**

ಈ ಸೂಕ್ತದ ಎರಡನೇ ಋಕ್ಕು ಹೀಗಿರುವುದು.—

**ವಾವೃಧಾನಃ ಶವಸಾ ಭೂರ್ಯೋಜಾಃ ಶತ್ರುರ್ದಾಸಾಯ ಭಿಯಸಂ ದಧಾತಿ ।**
**ಅವ್ಯನಚ್ಚ ವ್ಯನಚ್ಚ ಸಸ್ನಿ ಸಂ ತೇ ನವಂತ ಪ್ರಭೃತಾ ಮದೇಷು.**

(ಋ. ಸಂ. ೧೦–೧೨೦–೨)

ಈ ಆದಿತ್ಯಮಂಡಲದಲ್ಲಿರುವ ಪರಮೇಶ್ವರನು ಅನೇಕ ವಿಧವಾದ ದೇವತಾ ರೂಪಗಳಿಂದ ಬಹಳವಾದ ಬಲ (ಶಕ್ತಿ)ಯಿಂದ ಪ್ರವರ್ಧಮಾನನಾಗಿ ಶತ್ರುಗಳಲ್ಲಿ ಭಯವನ್ನುಂಟುಮಾಡುತ್ತಾ ಬೆಳಗುತ್ತಿರುವನು. ಇಂತಹ ಪರಮೇಶ್ವರನನ್ನು ಜನರು ಸಂಧ್ಯಾದಿಗಳಲ್ಲಿ ಬಹಳವಾಗಿ ಸ್ತೋತ್ರಮಾಡುವರು.

## ವಾವೃಧಾನಃ ಶವಸಾ ಭೂರ್ಯೋಜಾ ಇತ್ಯೇಷ ವೈ ವಾವೃಧಾನಃ ಶವಸಾ ಭೂರ್ಯೋಜಾ ।

**ತತ್ರ ಪ್ರಥಮಪಾದೇ ಪ್ರತಿಪ[illegible] ಮಂಡಲೇ ಲಕ್ಷ್ಯಮಾಣ ಆದಿತ್ಯ ಇತ್ಯೇತದ್ದರ್ಶಯತಿ—**

ಈ ಋಕ್ಕಿನ ಪ್ರಥಮ ಪಾದವು—ಈ ಪರಮೇಶ್ವರನು ಆದಿತ್ಯರೂಪದಿಂದ ಉದಯಿಸಿ ಕ್ಷಣಕ್ಷಣಕ್ಕೂ ತೀಕ್ಷ್ಣನಾಗಿ ತನ್ನ ತೇಜಸ್ಸಿನಿಂದ ಎಲ್ಲರಿಗೂ ಹರ್ಷವನ್ನುಂಟುಮಾಡುವನು. ಎಂದರೆ ಸೂರ್ಯೋದಯಾನಂತರ ಸೂರ್ಯನ ತೇಜಸ್ಸು ಮೇಲಕ್ಕೇರಿದಂತೆಲ್ಲಾ ಉಗ್ರ ಅಥವಾ ತೀಕ್ಷ್ಣವಾಗುತ್ತಿರುವುದು. ಎಂದರೆ ಹೆಚ್ಚುತ್ತಿರುವುದು.

**ಶತ್ರುರ್ದಾಸಾಯ ಭಿಯಸಂ ದಧಾತಿ ॥**

ದ್ವಿತೀಯಪಾದೇ ಸರ್ವಂ ಜಗದೇತಸ್ಮಾದಾದಿತ್ಯಮಂಡಲವರ್ತಿನೋಽಂತರ್ಯಾಮಿಣೋ ಭೀತಂ ಬಭೂವೇತ್ಯಮುಮರ್ಥಂ ದರ್ಶಯತಿ—ಸರ್ವಂ ಜಗದೇತಸ್ಮಾದ್ಬಿಭೇತಿ ॥

ಎರಡನೇ ಪಾದವು ಈ ಸೂರ್ಯನ ಪ್ರಖರವಾದ ಕಿರಣಗಳಿಂದ ಸಕಲ ಶತ್ರುಗಳೂ ಭಯದಿಂದ ತತ್ತರಿಸುತ್ತಿರುವರು.

**ಅವ್ಯನಚ್ಚ ವ್ಯನಚ್ಚ ಸಸ್ನೀತಿ ಯಚ್ಚ ಪ್ರಾಣಿ ಯಚ್ಚಾಪ್ರಾಣಿಕಮಿತ್ಯೇವ ತದಾಹ ॥**

ತೃತೀಯಪಾದೇ ಸ್ಥಾವರಜಂಗಮವಿವಕ್ಷಾಂ ದರ್ಶಯತಿ—

ಮೂರನೆಯ ಪಾದವು—ಸೂರ್ಯನ ತಾಪದಿಂದ ಭಯಪಡುವವರು ಪ್ರಾಣಿಗಳು ಮಾತ್ರವೇ ಅಲ್ಲ ಸಮಸ್ತ ಜಗತ್ತು (ಸ್ಥಾವರಜಂಗಮಾತ್ಮಕವಾದ) ಎಲ್ಲ ವಸ್ತುಗಳೂ ಆದಿತ್ಯನ ಶಾಖದಿಂದ ತಲ್ಲಣಿಸಿ ಹೋಗುವವು.

**ಸಂ ತೇ ನವಂತ ಪ್ರಭೃತಾ ಮದೇಷ್ವಿತಿ ತವ ಸರ್ವಂ ವಶ ಇತ್ಯೇವ ತದಾಹ ॥**

ಚತುರ್ಥಪಾದೇ ಸರ್ವಸ್ಯ ಜಗತಃ ಸೂರ್ಯಾಧೀನತ್ವಲಕ್ಷಣಮಭಿಪ್ರಾಯಂ ದರ್ಶಯತಿ—ತೃತೀಯಾಮೃಚಂ ಸಂಹಿತಾಯಾಮೇವಮಾಮನಂತಿ—

"ತ್ವೇ ಕ್ರತುಮಪಿ ವೃಂಜಂತಿ ವಿಶ್ವೇ ದ್ವಿರ್ಯದೇತೇ ತ್ರಿರ್ಭವಂತ್ಯೂಮಾಃ ।
ಸ್ವಾದೋಃ ಸ್ವಾದೀಯಃ ಸ್ವಾದುನಾ ಸೃಜಾ ಸಮದಃ ಸುಮಧು ಮಧುನಾಽಭಿಯೋಧೀಃ"

(ಋ. ಸಂ. ಮ. ೧೦–ಸೂ. ೧೨೦. ಋ.೩)

ಅಸ್ಯಾ(ಅ) ಯಮರ್ಥಃ। ಹೇ ಸೂರ್ಯ ವಿಶ್ವೇ ಸರ್ವೇ ಪ್ರಾಣಿನಃ ಕ್ರತುಮಪಿ ಕ್ರಿಯಮಾಣಂ ಕರ್ಮಾಪಿ ತ್ವೇ ತ್ವಯಿ ವೃಂಜಂತಿ ಸಮರ್ಪಯಂತಿ । ನ ಕೇವಲಂ ಕರ್ಮ ಕಿಂ ತು ಸರ್ವೇ ಪ್ರಾಣಿನಸ್ತೇಷಾಂ ಚ ಸರ್ವಾಣಿ ಮನಾಂಸಿ ತ್ವಯ್ಯೇವ ಸಮರ್ಪಯಂತ ಇತ್ಯೇವಮಪಿಶಬ್ದಸ್ಯಾರ್ಥಃ । ಕಿಂ ಚ ಯದ್ವಾ ಪುರುಷೌ ದ್ವಿಃ ಪೂರ್ವಂ ದ್ವಿಸಂಖ್ಯೋಪೇತೌ ಭೂತ್ವಾ ಪಶ್ಚಾದೇತೇ ಪುತ್ರೇಣ ಸಹಿತಾಸ್ತ್ರಿಸ್ತ್ರಿಃ (ಸ್ತ್ರಿ) ಸಂಖ್ಯಾಕಾಃ ಪರಸ್ಪರರಕ್ಷಕಾ ಭವಂತಿ । ಹೇ ಸೂರ್ಯ ಸ್ವಾದೋಃ ಸ್ವಾದೀಯಃ ಪ್ರೀತಿವಿಷಯಾದ್-ಗೃಹಕ್ಷೇತ್ರಧನಾದೇರಪ್ಯತ್ಯಂತಂ ಪ್ರಿಯಮಪ್ಯಪತ್ಯಂ ಸ್ವಾದುನೋಽಪಿ ರಸಾತ್ಪ್ರಿಯಹೇತುನಾ ಮಾತ್ರ (ತಾ) ಪಿತೃರೂಪೇಣ ಮಿಥುನೇನ ಸಂಯೋಜಯ । ಸ್ವಾದೀಯ ಇತ್ಯನೇನ ಯದಪತ್ಯಮುಕ್ತಂ



ತದೇವಾದಃ ಶಬ್ದೇನ ಪರಮುಚ್ಯತೇ। ತಚ್ಚ ಪುತ್ರರೂಪಮಪತ್ಯಂ ಸ್ನುಷಯಾ ಸಹ ಮಿಥುನಂ ಭೂತ್ವಾ ಸುಷ್ಠು ಮಧು ಪ್ರಿಯಂ ಭವತಿ । ತಾದೃಶಂ ಮಧು ಮಧುನಾ ಪೌತ್ರರೂಪೇಣ ಪ್ರಿಯೇಣ ಸಂಯೋಜ್ಯಾಭಿಯೋಧೀಃ ಸರ್ವತಃ ಸಂಪಾದಯ । ಧಾತೂನಾಮನೇಕಾರ್ಥತ್ವಾದ್ಯುಧಿಧಾತುರತ್ರ ಸಂಪಾದನೇ ವರ್ತತೇ ॥

ನಾಲ್ಕನೆಯ ಪಾದವು—ಈ ಸಮಸ್ತ ಚರಾಚರಾತ್ಮಕವಾದ ಜಗತ್ತೂ ಮತ್ತು ಪ್ರಾಣಿಗಳೂ ಸಹ ನಿನ್ನ ಅಧೀನದಲ್ಲಿದ್ದು ಸಂತೋಷಭರಿತವಾಗುವವು.

ತ್ವೇ ಕ್ರತುಮಪಿ ವೃಂಜಂತಿ ವಿಶ್ವ ಇತಿ ತ್ವಯೀಮಾನಿ ಸರ್ವಾಣಿ ಭೂತಾನಿ ಸರ್ವಾಣಿ ಮನಾಂಸಿ ಸರ್ವೇ ಕ್ರತವೋಽಪಿ ವೃಂಜಂತೀತ್ಯೇವ ತದಾಹ ॥

ಏತಸ್ಯಾ ಋಚಃ ಪ್ರಥಮಂ ಪಾದಂ ವ್ಯಾಚಷ್ಟೇ—ಅತ್ರ ಕ್ರತುಶಬ್ದಃ ಪ್ರಾಣಿನಾ (ನಾಂ) ಮನಸಾ (ಸಾಂ) ಚೋಪಲಕ್ಷಕೇಣ (ಣೇನ) ವ್ಯಾಖ್ಯಾತಃ ॥

ಈ ಸೂಕ್ತದ ಮೂರನೇ ಋಕ್ಕನ್ನು ವಿವರಿಸುವರು—

ತ್ವೇ ಕ್ರತುಮಪಿ ವೃಂಜಂತಿ ವಿಶ್ವೇ ದ್ವಿರ್ಯದೇತೇ ತ್ರಿರ್ಭವಂತ್ಯೂಮಾಃ ।
ಸ್ವಾದೋಃ ಸ್ವಾದೀಯಃ ಸ್ವಾದುನಾ ಸೃಜಾ ಸಮದಃ ಸುಮಧು ಮಧುನಾಭಿಯೋಧೀಃ ॥
(ಋ. ಸಂ. ೧೦-೧೨೦-೩)

ಎಲೈ ಆದಿತ್ಯನೇ ಸಮಸ್ತ ಪ್ರಾಣಿಗಳೂ ತಾವು ನಡೆಸತಕ್ಕ ವ್ಯವಹಾರಾದಿ ಕರ್ಮಗಳನ್ನು ನಿನಗೇ ಸಮರ್ಪಿಸುತ್ತವೆ. ಮತ್ತು ಆ ಪ್ರಾಣಿಗಳ ಮನಸ್ಸೂ ಸಹ ನಿನ್ನಲ್ಲಿ (ಅನುರಕ್ತವಾಗಿರುತ್ತವೆ). ಮೊದಲು ಪತಿಪತ್ನಿಯರು ಇಬ್ಬರಾಗಿದ್ದು ನಿನ್ನ ಪ್ರಭಾವದಿಂದ (ಪತಿಪತ್ನಿಪುತ್ರರೆಂದು) ಮೂವರಾಗಿರುತ್ತಾರೆ. ಎಲೈ ಆದಿತ್ಯನೇ, ನಮಗೆ ಪ್ರಿಯವಸ್ತುಗಳಿಗಿಂತಲೂ ಅತ್ಯಂತ ಪ್ರಿಯವಾದ ಪುತ್ರಾದಿಸಂತತಿಯಿಂದ ನಮ್ಮನ್ನು ಯುಕ್ತರನ್ನಾಗಿ ಮಾಡು ಎಂದರೆ ನಮಗೆ ಪುತ್ರಾದಿಸಂತತಿಯನ್ನು ಕೊಡು ಎಂದರ್ಥವು ಸಮಸ್ತ ಪ್ರಾಣಿಗಳೂ ಅವುಗಳ ಮನಸ್ಸೂ ಸಹ ನಿನ್ನಲ್ಲೇ ಲೀನವಾಗಿರುತ್ತವೆ. ಅವುಗಳು ಮಾಡುವ ಕರ್ಮಗಳೂ ನಿನ್ನನ್ನೇ ಉದ್ದೇಶಿಸಿರುತ್ತವೆ.

ದ್ವಿರ್ಯದೇತೇ ತ್ರಿರ್ಭವಂತ್ಯೂಮಾ ಇತಿ ದ್ವೌ ವೈ ಸಂತೌ ಮಿಥುನೌ ಪ್ರಜಾಯತೇ ಪ್ರಜಾತ್ಯೈ ॥

ದ್ವಿತೀಯಪಾದಂ ವ್ಯಾಚಷ್ಟೇ—

ಎರಡನೇ ಪಾದವು....ಎರಡಿದ್ದದ್ದು ಮೂರಾಗುವವು. ಎಂದರೆ ಮೊದಲು ಮಿಥುನವಾಗಿದ್ದ ಪತಿಪತ್ನಿಯರು ಇಬ್ಬರುಮಾತ್ರವಿದ್ದವರು ನಿನ್ನ ಅನುಗ್ರಹದಿಂದ (ಪತಿಪತ್ನಿಸುತಎಂದು)ಮೂರಾಗುವರು. ಇವೆಲ್ಲವೂ ನಿನ್ನ ಪ್ರಭಾವದಿಂದಲೇ ಆಗುವುದು.

ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥

**ವೇದನಂ ಪ್ರಶಂಸತಿ—**

ಈ ವಿಷಯವೆಲ್ಲವನ್ನೂ ತಿಳಿದಿರುವ ಪುರುಷನು ಪುತ್ರಪೌತ್ರಾದಿಪ್ರಜಾಸಂತತಿಯನ್ನೂ ಪಶುಸಂಪತ್ತನ್ನೂ ಪಡೆದು ಸುಖಿಸುವನು.

ಸ್ವಾದೋಃ ಸ್ವಾದೀಯಃ ಸ್ವಾದುನಾ ಸೃಜಾ ಸಮಿತಿ ಮಿಥುನಂ ವೈ ಸ್ವಾದು ಪ್ರಜಾ ಸ್ವಾದು ಮಿಥುನೇನೈವ ತತ್ಪ್ರಜಾಂ ಸಂಸೃಜತಿ ॥

ಮೂರನೇಪಾದವು—ಮಿಥುನಶಬ್ದವಾಚ್ಯರಾದ ಪತಿಪತ್ನಿಯರು ಪರಸ್ಪರ ಪ್ರೀತಿಯಿಂದಿರುವರು. ಇವರಿಬ್ಬರಿಗೂ ಅತಿಶಯ ಪ್ರೀತಿಯುಕ್ತವಾದ ಸಂತಾನ ಪ್ರಾಪ್ತಿಯಿಂದ ಬಹಳ ಸಂತೋಷವುಂಟಾಗಿ ಸುಖದಿಂದಿರುವರು.

ಅದಃ ಸುಮಧು ಮಧುನಾಽಭಿಯೋಧೀರಿತಿ ಮಿಥುನಂ ವೈ ಮಧು ಪ್ರಜಾ ಮಧು ಮಿಥುನೇನೈವ ತತ್ಪ್ರಜಾಮಭಿಯುಧ್ಯತಿ ॥

**ಚತುರ್ಥಪಾದಂ ವ್ಯಾಚಷ್ಟೇ—**

ನಾಲ್ಕನೆಯ ಪಾದವು—ಈ ಪರಸ್ಪರ ಮಿಥುನಜೀವನು ಬಹಳ ಆಹ್ಲಾದಕರವಾಗಿರುವುದು. ಇಂತಹ ಪರಸ್ಪರ ಪ್ರೀತಿಯಿಂದಿರುವ ದಂಪತಿಗಳಿಗೆ ಬಹುಪ್ರಿಯವಾದ ಸಂತಾನವುಂಟಾಗಿ ಅದರಿಂದಲೂ ಸೌಖ್ಯವುಂಟಾಗುವುದು.

ತದುಕ್ತಮೃಷಿಣಾ ಸ್ವಾಂ ಯತ್ತನೂಂ ತನ್ವಾಮೈರಯತೇತ್ಯಸ್ಯಾಂ ಶಾರೀರ್ಯಾಮಿಮಾಂ ಛಂದೋಮಯೀಮಿತ್ಯೇವ ತದಾಹ ॥

ಇತ್ಥಂ ಸೂತ್ರೋಕ್ತಂ ಸ್ತೋತ್ರಿಯಂ ತೃಚಂ ವ್ಯಾಖ್ಯಾಯ ತದೀಯೋಽರ್ಥೇ ಸಂವಾದಾಯ ಶಾಖಾಂತರೀಯಮೃಕ್ಪಾದಮುದಾಹೃತ್ಯ ವ್ಯಾಚಷ್ಟೇ—“ ಸ್ವಾದೋಃ ಸ್ವಾದೀಯಃ ” (ಋ. ಸಂ. ಮಂ. ೧೦ ಸೂ ೧೨೦ ಋ. ೩) ಇತ್ಯಾದಿನಾ ಪಾದದ್ವಯೇನ ಮಾತಾಪಿತೃಜನ್ಯಂ ಶರೀರಂ ಪ್ರಕೃತಶಾಸ್ತ್ರೋಪಯುಕ್ತಂ ಪ್ರತಿಪಾದಿತಂ ಯದಸ್ತಿ ತದೇವಮೃಷಿಣಾ ಸ್ವಾಂ ಯದಿತ್ಯಾದಿನಾ ಮಂತ್ರಭಾಗೇನ (ಆ) ಪ್ರಕಟೀಕೃತಂ । ಯದ್ವಾ ‘ ತವಿದಾಸ ’ (ಋ. ಸಂ. ಮ ೧೦ ಸೂ. ೧೨೦ ಋ. ೧) ಇತ್ಯಾದಿಕಸ್ಯ ಕೃತ್ಸ್ನಸ್ಯ ಶಸ್ತ್ರಸ್ಯ ತಾತ್ಪರ್ಯಂ ಯದಸ್ತಿ ತತ್ಸರ್ವಮೃಷಿಣಾ ಮಂತ್ರಪಾದೇನ ಸಂಗೃಹ್ಯೋಕ್ತಂ । ಸ ತು ಪಾದ ಏವಂ ಯೋಜನೀಯಃ । ಯದ್ಯಸ್ಮಾತ್ಕಾರಣಾತ್ ಪೂರ್ವೋಕ್ತತೃಚಪ್ರತಿಪಾದ್ಯ ಆದಿತ್ಯೋಪಾಧಿಕ ಈಶ್ವರಃ ಸಃ ಸ್ವಾಂ ತನೂಂ ಯಜಮಾನರೂಪಂ ಶರೀರಂ ತದೀಯಮಾತಾಪಿತೃರೂಪಶರೀರ ಐರಯತ ಪ್ರೇರಿತವಾಂಸ್ತಸ್ಮಾತ್ಸ್ವಾದೋಃ ಸ್ವಾದೀಯ ಇತ್ಯಾದಿಕಮುಪಪನ್ನಮ್ । ಅಥವಾ ತನ್ವಾಂ ಯಜಮಾನಶರೀರೇ ಸ್ವಾಂ ತನೂಂ ಸ್ವಕೀಯಾಂ ತದತಿಶಯೇತ್ಯಾದಿಕಾಸಂಪದ್ರೂಪಾಂ ತನೂಂ ಯಜಮಾನಸಂಸ್ಕಾರತತ್ವೇನ ಯಸ್ಮಾತ್ಸಂಪಾದಿತವಾಂಸ್ತಸ್ಮಾದಿದಂ ನಿಷ್ಕೇವಲ್ಯಶಸ್ತ್ರಂ ಪ್ರಶಸ್ತಮ್ । ತದೇತದ್ದ್ವಿತೀಯಂ ವ್ಯಾಖ್ಯಾನಮಸ್ಯಾಮಿತ್ಯಾದಿನಾ ಬ್ರಾಹ್ಮಣೇನ ಸ್ಪಷ್ಟೀಕ್ರಿಯತೇ ।

**ಅಸ್ಯಾಂ ದೃಶ್ಯಮಾನಾಯಾಂ ಶಾರೀರ್ಯಾಂ ಯಜಮಾನಶರೀರಸಂಬಂಧಿನ್ಯಾಮಾವೃತಾಮಿಮಾಂ ತದಿದಾಸೇತ್ಯಾದಿಕಾಂ ಛಂದೋಮಯೀಂ ವೇದರೂಪಾಂ ತನೂಂ ಸಂಸ್ಕಾರಕತ್ವೇನ ಸಂಪಾದಿತ-ವಾನಿತ್ಯೇತನ್ಮಂತ್ರವಾಕ್ಯಂ ಬ್ರೂತೇ । ತೇನ (ತಸ್ಯ) ಶಸ್ತ್ರಸ್ಯ ಶಿರಃಪಕ್ಷಾದಿಕಲ್ಪನಾಯಾ ವಕ್ಷ್ಯಮಾಣ-ತ್ವಾತ್ (ಐ-ಆ-೧ ಅ-೪ ಖ-೨) ಛಂದೋಮಯಶರೀರತ್ವಂ ಯುಕ್ತಮ್ ॥**

**ಸ್ವಾದೋಃ ಸಾದೀಯಃ** (ಋ.ಸಂ. ೧೦-೧೨೦-೩) ಎಂಬ ಮಂತ್ರದಲ್ಲಿ ಪ್ರತಿಪಾದಿತವಾಗಿರುವ ಶರೀರವೆಂಬ ಅರ್ಥವು ಓರ್ವಋಷಿಯಿಂದ ಹೇಳಲ್ಪಟ್ಟಿರುವುದು. ಈ ಶಸ್ತ್ರಮಂತ್ರಗಳಲ್ಲಿರುವ ಅರ್ಥವನ್ನೆಲ್ಲಾ ಋಷಿಯು ಸಂಗ್ರಹಿ ಒಂದೇ ಪಾದದಲ್ಲಿ ಹೇಳಿರುವನು. ಹೇಗೆಂದರೆ, ಹಿಂದಿನ ತೃಚದಲ್ಲಿ ಹೇಳಲ್ಪಟ್ಟಿರುವ ಆದಿತ್ಯನೇ ಈಶ್ವರನು. ಆ ಈಶ್ವರನೆಸಿ ತನ್ನ ಸ್ವಂತ ಶರೀರವಾದ ಎಂದರೆ ಯಜಮಾನರೂಪವಾದ ಶರೀರವನ್ನು (ಮಾತಾಪಿತೃರ ಶರೀರವನ್ನು) ಪ್ರೇರಿಸಿದನೀ ಎಂದಭಿಪ್ರಾಯವು. ಅಥವಾ **ಸ್ವಾಂ ತನೂಂ** ಎಂದರೆ ಈಶ್ವರನು ತನ್ನ ಆನುದರೂಪವಾದ ಶರೀರವನ್ನು ಯಜಮಾನನಲ್ಲಿ ಪ್ರೇರಿಸಿದನು ಎಂಬರ್ಥವು ಈ ನಿಷ್ಕೇವಲ್ಯವಿರುವುದರಿಂದ ಈ ಶಸ್ತ್ರವು ಪ್ರಶಸ್ತವು ಎಂಬರ್ಥವು ಸೂಚಿತವಾಗುವುದು. ಈ ಅರ್ಥವನ್ನೇ ಋಷಿಯು ತದಿದಾಸ ಎಂಬ ಸೂಕ್ತದಲ್ಲಿ ವಿಶದಪಡಿಸಿರುವನು ಎಂದರ್ಥವು.

## ತನೂರೇವ ತನ್ವೋ ಅಸ್ತು ಭೇಷಜಮಿತ್ಯಸ್ಯೈ ಶಾರೀರ್ಯಾ ಇಯಂ ಛಂದೋಮಯೀತ್ಯೇವ ತದಾಹ ॥

ಪುನರಪಿ ಶಸ್ತ್ರಸ್ತುತ್ಯರ್ಥಮನ್ಯಮಂತ್ರಪಾದಂ ಶಬ್ದತೋ ವ್ಯಾಚಷ್ಟೇ ಶಾರೀರ್ಯಾಶಬ್ದಃ ಪೂರ್ವೋದಾಹರಣೇನ ಸಮುಚ್ಚಯಾರ್ಥಃ । ನ ಕೇವಲಮೃಷಿಣಾ ಪೂರ್ವೇಣೈವ ತದುಕ್ತಂ ಕಿಂ ತು ತನೂರೇವೇತ್ಯಾದಿನಾಽಪ್ಯೃಷಿಣಾ ತದುಕ್ತಮ್ । ಮಂತ್ರಪಾದಶ್ಚೈವಂ ಯೋಜನೀಯಃ । ತನೂಃ " ತದಿದಾಸ " (ಋ-ಸಂ-ಮ ೧೦ ಸೂ-೧೨೦ ಋ.೧) ಇತ್ಯಾದಿಕಾ ಛಂದೋಮಯೀ ತನ್ವೋ ಯಜಮಾನಶರೀರಸ್ಯ ಭೇಷಜಂ ಪಾಪವ್ಯಾಧಿನಿವರ್ತಕಮೌಷಧಮಸ್ತು । ಮಂತ್ರೇ ತನೂ (ಸ್ತನ್ವ) ರಿ (ಇ) ತ್ಯನಯೋಃ ಷಷ್ಠ್ಯಂತಪ್ರಥಮಾಂತಯೋರರ್ಥೋ ಬ್ರಾಹ್ಮಣೇನ ಸ್ಪಷ್ಟೀಕೃತಃ ॥

ಈ ಶಸ್ತ್ರಮಂತ್ರವನ್ನು ಪ್ರಶಂಸಿಸುವುದಕ್ಕಾಗಿ ಬೇರೆ ಮಂತ್ರದ ಒಂದು ಪಾದವನ್ನು ಹೇಳುವರು. **ತನೂರೇವ ತನ್ವೋ ಅಸ್ತು ಭೇಷಜಂ** ಎಂಬುದೇ ಆ ಮಂತ್ರದ ಪಾದವು. ಇಲ್ಲಿ ಶರೀರ್ಯಾಶಬ್ದವು ಹಿಂದೆ ಹೇಳಿದ ಉದಾಹರಣೆಯೊಡನೆ ಸೇರಿರುವುದು. ತನೂ—ಆ ಶರೀರವು (ಯಜಮಾನನ ಶರೀರವು) ಭೇಷಜಂ—ಪಾಪವೆಂಬ ವ್ಯಾಧಿಯಿಂದ ಮುಕ್ತವಾಗಿರುವುದು. ಮತ್ತು ಈ ಶರೀರವು ಛಂದೋಮಯವಾಗಿರುವುದು. ಈ ವಿಷಯವನ್ನು ಈ ಬ್ರಾಹ್ಮಣದಲ್ಲಿಯೇ ಹೇಳಲಾಗಿದೆ.

## ತಸ್ಯೈ ಯಾನ್ಯಷ್ಟಾವಕ್ಷರಾಣಿ ಸಾ ಗಾಯತ್ರೀ ಯಾನ್ಯೇಕಾದಶ ಸಾ ತ್ರಿಷ್ಟುಬ್ಯಾನಿ ದ್ವಾದಶ ಸಾ ಜಗತ್ಯಥ ಯಾನಿ ದಶ ಸಾ ವಿರಾಡ್-ದಶಿನ್ಯೇಷು ತ್ರಿಷು ಛಂದಃಸು ಪ್ರತಿಷ್ಠಿತಾ ॥

ಇತ್ಥಂ ಮಂತ್ರದ್ವಯೋದಾಹರಣೇನ ಶಸ್ತ್ರಂ ಪ್ರಶಸ್ಯ ಬಹುವಿಧಚ್ಛಂದೋಂತರ್ಭಾವೇನಾಪಿ ಶಸ್ತ್ರಂ ಪ್ರಶಂಸತಿ—ತದಿದಾಸ ಭುವನೇಷು " (ಋ-ಸಂ--ಮಂ.೧೦-ಸೂ೧೨೦ ಋ.೧) ಇತ್ಯಾದಿಕಾ

(ಯಾ ಋಕ್) ತಸ್ಯಾ ಋಚಃ ಪ್ರಥಮಪಾದೋ ದಶಾಕ್ಷರಃ । ತಸ್ಯೈ ತಸ್ಯಾ ಋಚಃ ಸಂಬಂಧೀನಿ ಯಾನ್ಯಷ್ಟೌ ಪ್ರಥಮಪಾದಾಕ್ಷರಾಣಿ ಸಂತಿ ಸೇಯಮಷ್ಟಾಕ್ಷರರೂಪಾ ಗಾಯತ್ರೀ ಸಂಪದ್ಯತೇ । ಯಾನಿ ತೃತೀಯಪಾದ ಏಕಾದಶಾಕ್ಷರಾಣ್ಯಾಮ್ನಾತಾನಿ ಸೇಯಮೇಕಾದಶಾಕ್ಷರಾ ತ್ರಿಷ್ಟುಪ್‌ಸಂಪದ್ಯತೇ । ಪ್ರಥಮಪಾದೇ ಯದವಶಿಷ್ಟಮಕ್ಷರದ್ವಯಂ ತದ್ದ್ವಿತೀಯೇ (ಚತುರ್ಥೇ ವಾ) ದಶಾಕ್ಷರಯುಕ್ತೇ ಪಾದೇ ಯೋಜನೀಯಮ್ । ತಥಾ ಸತಿ ಯಾನಿ ದ್ವಾದಶಾಕ್ಷರಾಣಿ ಸಾ ಜಗತೀ ಸಂಪದ್ಯತೇ । ಅಥ ಪ್ರಥಮೇ ದ್ವಿತೀಯೇ ತೃತೀಯೇ ಚತುರ್ಥೇ ವಾ ಪಾದೇ ಯಾನ್ಯಾಮ್ನಾತಾನಿ ದಶಾಕ್ಷರಾಣಿ ಸಾ ವಿರಾಟ್‌ಛಂದೋರೂಪಾ । ಏವಮೇಷಾ ದಶಿನೀ ದಶಾಕ್ಷರೋಪೇತಾ ಸ್ವತಃ ಸಿದ್ಧಾ ವಿರಾಟ್ । ಏವಮುಕ್ತರೀತ್ಯಾ ಸಂಪಾದಿತೇಷು ಗಾಯತ್ರೀತ್ರಿಷ್ಟುಬ್‌ಜಗತೀರೂಪೇಷು ತ್ರಿಷು ಛಂದಃಸು ವಿರಾಟ್‌ಪ್ರತಿಷ್ಠಿತಾ ಪರ್ಯವಸ್ಥಿತಾ ॥

ಈ ದಶ್ರಮಂತ್ರವನ್ನು ಎರಡು ವಿಧ ಉದಾಹರಣೆಗಳಿಂದ ಪ್ರಶಂಸೆಮಾಡಿ ಈಗ ಅನೇಕ ವಿಧ ಛಂಧಸ್ಸಿನಿಂದ ಕೂಡಿರುವುದನ್ನೂ ಪ್ರಶಂಸೆಮಾಡುವರು. ಈ ದಶ್ರದ ಮೊದಲನೇ ಮಂತ್ರವಾದ ತದಿದಾಸ (ಋ. ಸಂ. ೧೦-೧೨೦-೧) ಎಂಬ ಋಕ್ಕಿನ ಮೊದಲನೇ ಪಾದದಲ್ಲಿ ಹತ್ತು ಅಕ್ಷರಗಳಿರುವವು. ಈ ಹತ್ತು ಅಕ್ಷರಗಳಲ್ಲಿ ಮೊದಲಿನ ಎಂಟು ಅಕ್ಷರಗಳು ಸೇರಿ ಗಾಯತ್ರೀಛಂದಸ್ಸಾಗುವವು ಮತ್ತು ಈ ಋಕ್ಕಿನ ಮೂರನೇ ಪಾದದಲ್ಲಿ ಹನ್ನೊಂದು ಅಕ್ಷರಗಳಿರುವವು. ಈ ಹನ್ನೊಂದು ಅಕ್ಷರಗಳು ಸೇರಿ ತ್ರಿಷ್ಟುಪ್‌ಛಂದಸ್ಸಾಗುವುದು. ಮೊದಲನೇ ಪಾದದಲ್ಲಿರುವ ಹತ್ತು ಅಕ್ಷರಗಳಲ್ಲಿ ಗಾಯತ್ರೀಛಂದಸ್ಸಿಗಾಗಿ ಎಂಟು ಅಕ್ಷರಗಳನ್ನು ತೆಗೆದರೆ ಉಳಿಯುವ ಎರಡು ಅಕ್ಷರಗಳನ್ನು ಎರಡನೇ ಅಥವಾ ನಾಲ್ಕನೇ ಪಾದಗಳಿಗೆ ಸೇರಿಸಿದರೆ ಹನ್ನೆರಡಕ್ಷರಗಳಾಗುವುವು. ಈ ಹನ್ನೆರಡಕ್ಷರಗಳು ಜಗತೀಛಂದಸ್ಸಾಗುವುದು ಮತ್ತು ಮೊದಲು ಎರಡು ಮೂರು ಮತ್ತು ನಾಲ್ಕನೇ ಪಾದಗಳಲ್ಲಿ ಹತ್ತು ಹತ್ತು ಅಕ್ಷರಗಳಿರುವುದರಿಂದ ಈ ಛಂದಸ್ಸು ವಿರಾಟ್‌ಛಂದಸ್ಸಾಗಿರುವುದು. ಆದ್ದರಿಂದ ಮೇಲೆ ಹೇಳಿದ ಪ್ರಕಾರವಾಗಿ ಗಾಯತ್ರೀ ತ್ರಿಷ್ಟುಪ್ ಜಗತೀಛಂದಸ್ಸುಗಳಲ್ಲಿ ವಿರಾಟ್‌ಛಂದಸ್ಸು ನೆಲೆಸಿರುವುದು.

## ಪುರುಷ ಇತಿ ತ್ರ್ಯಕ್ಷರಂ ಸ ಉ ವಿರಾಜಿ ॥

**ಅಥೈತಸ್ಯಾಂ ಪ್ರಥಮಾಯಾಮೃಚ್ಯಕ್ಷರತ್ರಯಪ್ರಕ್ಷೇಪಂ ವಿಧತ್ತೇ–ಯದೇತತ್ತ್ರಯರೂಪಂ ಪದಂ ತದೇತಸ್ಯಾಮೃಚಿ ಪ್ರಕ್ಷೇಪಣೀಯಮಿತ್ಯಧ್ಯಾಹಾರಃ । ಸ ಯಃ ಸೋಽಪ್ಯಕ್ಷರಃ (?) ।**

ಮೇಲೆ ವಿವರಿಸಿದಂತೆ ಈ ಋಕ್ಕಿನ(ತದಿದಾಸ) ಮೊದಲನೇ, ಎರಡನೇ ಮತ್ತು ನಾಲ್ಕನೇ ಪಾದಗಳಲ್ಲಿ ಹತ್ತು ಅಕ್ಷರಗಳು ಮಾತ್ರ ಇರುವವು, ಈ ಹತ್ತು ಅಕ್ಷರಗಳು ಹನ್ನೊಂದು ಅಕ್ಷರಗಳಾಗಬೇಕಾದರೆ ಪ್ರತಿಯೊಂದು ಪಾದಕ್ಕೂ ಪುರುಷ ಎಂಬ ಶಬ್ದದ ಒಂದೊಂದು ಅಕ್ಷರಗಳನ್ನು ಸೇರಿಸಬೇಕಾಗುವುದು ಹೇಗೆಂದರೆ—

**ತದಿದಾಸ ಭುವನೇಷು ಜ್ಯೇಷ್ಠಂ ಪು**
**ಯತೋ ಜಜ್ಞ ಉಗ್ರಸ್ತ್ವೇಷನೃಮ್ಣೋ ರು**
**ಸದ್ಯೋ ಜಜ್ಞಾನೋ ನಿರಿಣಾತಿ ಶತ್ರೂನ್**
**ಅನು ಯಂ ವಿಶ್ವೇ ಮದಂತ್ಯೂಮಾಃ ಷಃ ॥**

ಈಗ ಪ್ರತಿಯೊಂದು ಪಾದದಲ್ಲಿಯೂ ಹನ್ನೊಂದು ಅಕ್ಷರಗಳಿದ್ದಂತಾಯಿತು.

ಏತಾನಿ ವಾವ ಸರ್ವಾಣಿ ಚ್ಛಂದಾಂಸಿ ಯಾನ್ಯೇತಾನಿ ವಿರಾಟ್
ಚತುರ್ಥಾನ್ಯೇವಮು ಹೈವೈನಂ ವಿದುಷ ಏತದಹಃ ಸರ್ವೈಶ್ಛಂದೋಭಿಃ
ಪ್ರತಿಪನ್ನಂ ಭವತಿ ॥

(ಪೂರ್ವೋಕ್ತಚ್ಛಂದಶ್ಚತುಷ್ಟಯಸ್ಯ ಸಕಲಚ್ಛಂದೋರೂಪತ್ವಕಥನಪುರಃ ಸರಂ ತದ್ವೇದನಫಲಂ ದರ್ಶಯತಿ)—ವಿರಾಟ್‌ಛಂದಶ್ಚತುಃ ಸಂಖ್ಯಾಪೂರಕಂ ಯೇಷಾಂ ಗಾಯತ್ರೀತ್ರಿಷ್ಟುಬ್‌ಜಗತೀನಾಂ ತಾನಿ ವಿರಾಟ್‌ಚತುರ್ಥಾನೀದೃಶಾನಿ ಯಾನ್ಯೇತಾನಿ ಚತ್ವಾರಿ ಸಂತಿ ತಾನ್ಯೇತಾನೀತಿ ನಿದಂನ್ಯವವಾ (ನ್ಯೇವ ಸಕಲಾನ್ಯವ) ಶಿಷ್ಟಚ್ಛಂದೋರೂಪಾಣಿ । ಗಾಯತ್ರ್ಯಾದೀನಾಂ ಸ್ತವನನಿಷ್ಪಾದಕತ್ವೇನ ಮುಖತ್ವಾತ್ಸರ್ವಚ್ಛಂದೋರೂಪತ್ವೋಪಚಾರಃ । ಏವಮು ಹೈವ ಯಥೋಕ್ತೇನ ಪ್ರಕಾರೇಣ ವಿರಾಜಿ ಗಾಯತ್ರ್ಯಾದೀನಾಂ ತ್ರಯಾಣಾಮಂತರ್ಭಾವೋ ವಿರಾಟ್‌ಸಹಿತಾನಾಂ ಚತುರ್ಣಾಂ ಸರ್ವಚ್ಛಂದೋರೂಪತ್ವೋಪಚಾರ ಇತ್ಯೇವಂ ವಿದುಷೋ ಯಜಮಾನಸ್ಯೈತನ್ಮಹಾವ್ರತಮಹಃ ಸರ್ವೈಶ್ಛಂದೋಭಿಃ ಸಂಪಾದಿತಂ ಭವತಿ ॥

ಮೇಲೆ ಹೇಳಿದಂತೆ ಈ ನಾಲ್ಕು ಛಂದಸ್ಸುಗಳು ಸೇರಿ (ಗಾಯತ್ರೀ, ತ್ರಿಷ್ಟುಪ್, ಜಗತಿ, ವಿರಾಟ್) ಅವುಗಳಲ್ಲಿರುವ ಅಕ್ಷರಗಳಿಂದ ಸಕಲಛಂದಸ್ಸೂ ಸೇರಿದಂತಾಯಿತೆಂಬ ವಿಚಾರವನ್ನು ವಿವರಿಸುವರು. ತದಿದಾಸ ಎಂಬ ಮೊದಲನೇ ಋಕ್ಕಿನ ಪಾದಗಳಲ್ಲಿ ಗಾಯತ್ರಿ, ತ್ರಿಷ್ಟುಪ್, ಜಗತಿ ಎಂಬ ಮೂರುಋಕ್ಕುಗಳಿರುವವೆಂದು ತಿಳಿಸಲಾಯಿತು ಮತ್ತು ಆ ಋಕ್ಕಿನ ಹತ್ತು ಅಕ್ಷರಗಳಿರುವ ಮೊದಲ ಎರಡು ಮತ್ತು ನಾಲ್ಕನೆಯ ಪಾದಗಳಿಗೆ ಪುರುಷ ಶಬ್ದದ ಒಂದೊಂದು ಅಕ್ಷರಗಳನ್ನು ಸೇರಿಸುವುದರಿಂದ ವಿರಾಟ್‌ಛಂದಸ್ಸೂ ಅದರಲ್ಲಿಯೇ ಸೇರಿದಂತಾಯಿತು. ಈ ನಾಲ್ಕು ಛಂದಸ್ಸುಗಳನ್ನೂ ಒಳಗೊಂಡಿರುವವೆಂದು ತಿಳಿಯಬೇಕು. ಈ ವಿಷಯವನ್ನು ತಿಳಿದಿರುವ ವಿದ್ವಾಂಸನಾದ ಪುರುಷನು ಈ ಮಹಾವ್ರತವೆಂಬ ದಿನದಲ್ಲಿ ಸಮಸ್ತ ಛಂದಸ್ಸುಗಳನ್ನೂ ಪಠಿಸಿರುವನೆಂದು ತಿಳಿಯಬೇಕು.

---

*English Translation*

1. He begins with: 'That indeed was the oldest in the worlds;'-for that (the Brahman) is verily the oldest in the worlds.

2. 'Whence was born the fierce one, endowed with brilliant force;'-for from it was born the fierce one, who is endowed with brilliant force.

3. 'When born he at once destroys the enemies;'-for he at once when born struck down the evil one.

4. 'He after whom all friends rejoice;'-verily all friends are the creatures, and they rejoice after him, saying, 'He has risen, he has risen.'

5. 'Growing by strength, the almighty;'–for he (the sun) does grow by rstength, the almighty.

6. 'He, as enemy, causes fear to the slave;'–for everything is afraid of him.

7. 'Taking the breathing and the not-breathing;'–this means thə iving and the lifeless.

8. ' Whatever has been offered at feasts came to thee ; ' —this means everything is in thy power.

9. ' All turn their thought also on thee ; '—this means all these beings, all minds, all thoughts also turn to thee.

10. ' When these two become three protectors ; '—i.e. when these two united beget offspring.

11. He who knows this, gets offspring and cattle.

12. , Join what is sweeter than sweet (offspring) with the sweet (the parents) ; '—for the couple (father and mother) is sweet, the offspring is sweet, and he thus joins the offspring with the couple.

13. ' And this (the son, when married) being very sweet, conquered through the sweet ; '—i.e. the couple is sweet, the offspring is sweet, and thus through the couple he conquers offspring.

14. This is declared by a Rishi : 'Because he (Pragapati) raised his body (the hymn tad id asa or the veda in general) in the body (of the sacrificer) (therefore that Nishkevala hymn is praised) ;—i.e. this body, consisting of the Veda, in that corporeal form (of the sacrificer).

15. ' The let this body indeed be the medicine of that body ; '—i.e. this body, consisting of the Veda, of that corporeal form (of the sacrificer).

16. Of this, (the first foot of Rv. X. 120, 1) the eight syllables are Gayatri, the eleven syllables are Trishtubh, the twelve syllables are Jagati,

the ten syllables are Virag. The Virag, consisting of ten syllables, rests in these three metres.

17. The word purusha, consisting of three syllables, that indeed goes that indeed goes into the virag.

18. Verily, these are all metres, these (Gayathri, Trishtubh, Jagathi) having the Vairag as the fourth. In this manner this day is the complete in all metres to him who knows this.

ಇತಿ ಶ್ರೀಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ತೃತೀಯಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪ್ರಥಮಾರಣ್ಯಕದ
ಮೂರನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವು ॥

---

# ಅಥ ಪ್ರಥಮಾರಣ್ಯಕೇ ತೃತೀಯಾಧ್ಯಾಯೇ ಪಂಚಮಃ ಖಂಡಃ

**ಪ್ರಥಮಾರಣ್ಯಕದ ಮೂರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು**

---

ತಾ ನದೇನ ವಿಹರತಿ ಪುರುಷೋ ವೈ ನದಸ್ತಸ್ಮಾತ್ಪುರುಷೋ ವದಂತ್ಸರ್ವಃ ಸಂನದತೀವ ॥

ಅಥ ಶಸ್ತ್ರಸ್ಯ ವಿಹರಣಂ ವಿಧತ್ತೇ —ತಾಃ ಶಸ್ತ್ರಗತಾಃ "ತದಿದಾಸ" (ಋ·ಸಂ–ಮಂ೧೦–ಸೂ–೧೨೦ಋ–೧) ಇತ್ಯಾದಿಕಾ ಋಚೋ ನದೇನ ನದಲಿಂಗಕೇನ ಮಂತ್ರೇಣ ವಿಹರತಿ ವ್ಯತಿಷಜತಿ ಮಿಶ್ರಯೇದಿತ್ಯರ್ಥಃ। ನದಶಬ್ದಃ ಪುರುಷಸ್ವರೂಪ ಏವ ಯಸ್ಮಾತ್ತಸ್ಮಾಲ್ಲೋಕೇ ಸರ್ವಃ ಪುರುಷೋ ಭಾಷಮಾಣಃ ಸಮ್ಯಗ್ಧ್ವನಿಂ ಕರೋತೀವ ದೃಶ್ಯತೇ। ಗಂಭೀರೋಹಿ ಪುರುಷಸ್ಯ ಧ್ವನಿಃ। ನದಲಿಂಗಕಶ್ಚ ಮಂತ್ರಃ ಸಂಹಿತಾಯಾಮೇವಮಾಮ್ನಾತಃ—

ನದಂ ವ ಓದತೀನಾಂ ನದಂ ಯೋಯುವತೀನಾವ್ ।
ಪತಿಂ ವೋ ಅಘ್ನ್ಯಾನಾಂ ಧೇನೂನಾಮಿಷುಧ್ಯಸಿ ॥

ಋ-ಸಂ-ಮಂ-೮-ಸೂ೬೯ಋ-೨)

ಏತನ್ಮಿಶ್ರಪ್ರಕರಣಂ ಪಂಚಮೇ ಸ್ಪಷ್ಟಮಭಿಧಾಸ್ಯತೇ—ನದಂ ವ ಓದತೀನಾಮಿತ್ಯೇತಯ್ಯೈತಾನಿ ವ್ಯತಿಷಜತಿ ಪಾದ್ಯೈಃ ಪಾದಾನ್ಬೃಹತೀಕಾರಮ್ "(ಐ-ಆ-೫-ಅ-೧-ಖ-೬) ಇತಿ । ತತ್ರಥಾ ತತ್ರೈವೋದಾಹೃತ್ಯಾಪೀತಿ ಪ್ರದರ್ಶಿತಮ್ತದಿದಾಸ ಭುವನೇಷು ಜೇಷ್ಠಂ ಪು ನದಂ ವ ಓದತೀನಾಂ ಯತೋ ಜಜ್ಞ ಉಗ್ರಸ್ತ್ವೇಷ ನೃಮ್ಣೋರು ನದಂ ಯೋಯುವತೀನಾಂ ಸದ್ಯೋ ಜಜ್ಞಾನೋ ನಿರಿಣಾತಿ ಶತ್ರೂನ್ಪತಿಂ ವೋ ಅಘ್ನ್ಯಾನಾಮನು ಯಂ ವಿಶ್ವೇ ಮದಂತ್ಯೂಮಾಃ ಷೋ ಧೇನೂನಾಮಿಷುಧ್ಯಸೋಮ್" (ಐ,ಆ೫-ಅ-೧-ಖ೬) ಇತಿ । ನದಲಿಂಗಕಸ್ಯ ಮಂತ್ರಸ್ಯಾಯಮರ್ಥಃ—ಓದತೀನಾ ತೃತೀಯಸವನಋಜೀಷಮುದಂತೀನಾಮುಹಂತವ್ಯಾನಾಂ ವೋ ಯುಷ್ಮಾಕಂ ಪತಿಂ ಪಾಲಕಂ ಯಜಮಾನಂ ರಕ್ಷತ । ಹೇ ಇಂದ್ರ ತ್ವಂ ಧೇನೂನಾಂ ಧೇನುವತ್ಪ್ರೀಣಯಿತ್ರ್ಯಾಣಾಮಪಾಮಿಷುಯಸಿ, ಈಶ್ವರೋಽಸಿ । " ಇಷುಧ ಐಶ್ವರ್ಯೇ " (ಕ-ಗ-ಪ) ಇತಿ ಧಾತುಃ ॥

ಈಗ ತದಿದಾಸ ಎಂಬ ಋಕ್ಕನ್ನೂ ನದಂವ ಓಷಧೀನಾಂ ನದಂ ಯೋ ಯುವತೀನಾಂ । ಪತಿಂ ಯೋ ಅಘ್ನ್ಯಾನಾಂ ಧೇನೂನಾಮಿಷುಧ್ಯಸಿ ॥ (ಋ. ಸಂ. ೮-೬೯-೨) ಎಂಬ ಋಕ್ಕನ್ನೂ ಮಿಶ್ರಮಾಡುವ ಪ್ರಕಾರವನ್ನು ತಿಳಿಸುವರು. ಮಿಶ್ರಮಾಡುವುದಕ್ಕೆ ವಿಹರಣವೆಂದು ಹೆಸರು. ನದಶಬ್ದವು ಪುರುಷಸ್ವರೂಪವು. ಪುರುಷನ ಧ್ವನಿಯು ಗಂಭೀರವಾಗಿಯೂ ಘಟ್ಟಿಯಾಗಿಯೂ ಇರುವುದು. ಇದನ್ನು ಮೇಲಿನ ಮಂತ್ರದಲ್ಲಿಯೇ ಹೇಳಿದೆ. ತದಿದಾಸ ಎಂಬ ಮಂತ್ರವನ್ನೂ ನದಂ ವ ಎಂಬ ಮಂತ್ರವನ್ನೂ ವಿಹರಣ (ಮಿಶ್ರ) ಮಾಡಿದ್ದು ತದಿದಾಸ ಭುವನೇಷು ಜ್ಯೇಷ್ಠ ಪು ನದಂ ವ ಓಷಧೀನಾಂ ಯತೋ ಜಜ್ಞ ಉಗ್ರಸ್ತ್ವೇಷ ನೃಮ್ಣೋರು ನದಂ ಯೋಯುವತೀನಾಂ ಸದ್ಯೋ ಜಜ್ಞಾನೋ ನಿರಿಣಾತಿ ಶತ್ರೂನ್ಪತಿಂ ವೋ ಅಘ್ನ್ಯಾನಾಮನು ಯಂ ವಿಶ್ವೇ ಮದಂತ್ಯೂಮಾಃ ಷೋ ಧೇನೂನಾಮಿಷುಧ್ಯಸೋಂ (ಐ. ಆ. ೫-೧-೬) ಎಂದಾಗುವುದು. ಇದರ ಅರ್ಥವು—ಋಜೀಷವೆಂಬ ರಸವನ್ನು ಹಿಂಡಿದ ಸೋಮಲತೆಗಳನ್ನು ತಿನ್ನುವೂ, ಕೊಲ್ಲಲ್ಪಡದಿರುವವೂ ಆದ ಎಲೈ ಗೋವುಗಳೇ, ನಿಮ್ಮ ಪಾಲಕನೂ ಯಜಮಾನನೂ ಆದವನನ್ನು ರಕ್ಷಿಸಿ. ಎಲೈ ಇಂದ್ರನೇ, ನೀನು ಗೋವುಗಳಂತೆ ಜನರಿಗೆಲ್ಲಾ ಪ್ರೀತಿಪಾತ್ರನಾಗಿರುವೆ ಮತ್ತು ಅವರಿಗೆಲ್ಲಾ ಪ್ರಭುವಾಗಿರುವೆ ಎಂದರ್ಥವು.

ನದಂ ವ ಓದತೀನಾಮಿತೀರ ಆಪೋ ವಾ ಓದತ್ಯೋ ಯಾ ದಿವ್ಯಾಸ್ತಾ
ಹೀದಂ ಸರ್ವಮುದಂತ್ಯಾಪೋ ವಾ ಓದತ್ಯೋ ಯಾ ಮುಖ್ಯಾಸ್ತಾ
ಹೀದಂ ಸರ್ವಮನ್ನಾದ್ಯಮುಂದಂತಿ, ॥

ಅಸ್ಯಾ ಋಚಃ ಪ್ರಥಮಪಾದಂ ವ್ಯಾಚಷ್ಟೇ—ಅಸ್ಮಿನ್ಪಾದ ಓದತೀಶಬ್ದೇನಾಽಽಪ ಏವ ವಿವಕ್ಷಿತಾಃ । ಯಸ್ಮಾದ್ಯಾ ಆಪೋ ದಿವ್ಯಭವನ್ವೃಷ್ಟಿದ್ವಾರೇಣಾಗತಾಸ್ತಾ ಆಪಃ ಸರ್ವಮಿದಂ ಭೂತ (ಜಾತ) ಮುಂದಂತಿ ಕ್ಲೇದಯಂತಿ, ತಥಾ ಮುಖೇ ಭವಾ ಆಸ್ಯೋದಕರೂಪಾ ಯಾ ಅಪಸ್ತಾಃ

**ಸರ್ವಮನ್ನಾದ್ಯಂ ಶುಷ್ಕಮಪಿ ಪೃಥಗಿವ ಶಷ್ಕುಲ್ಯಾದಿಕಂ ಸರ್ವಂ ಖಾದ್ಯಂ ದ್ರವೀ ಕುರ್ವಂತಿ, ತಸ್ಮಾದೋದತ್ಯ ಇತ್ಯುಚ್ಯಂತೇ। ಇತಿ ಶಬ್ದಸ್ಯೋಪರಿ ಯೋಽಯಂ ಸಾನುನಾಸಿಕಃ ಪ್ಲುತಃ ಸೋಽಯಂ ಪಾದಪ್ರತಿಗ್ರಹಣೇಽನ್ಯತಮಾದರಾರ್ಥಃ।**

ಈ ಋಕ್ಕಿನ ಮೊದಲನೇ ಪಾದವನ್ನು ವಿವರಿಸುವರು—ಈ ಪಾದದಲ್ಲಿರುವ **ಓದತೀಃ** ಎಂಬ ಶಬ್ದಕ್ಕೆ **ಅಪಃ** ನೀರು ಅಥವಾ ಜಲವೆಂದರ್ಥವು. ವೃಷ್ಟಿ (ಮಳೆ) ರೂಪದಲ್ಲಿ ಇರುವ ಉದಕಗಳು ಸಮಸ್ತ ಪ್ರಾಣಿಗಳ ಶರೀರ (ಬಾಯಿ) ದಲ್ಲಿದ್ದು ದ್ರವವಿಲ್ಲದ (ಮೆತ್ತಗಿಲ್ಲದ) ಆಹಾರಾದಿಗಳನ್ನು ತಿನ್ನುವಾಗ ಬಾಯಿಯಲ್ಲಿರುವ ಜೊಲ್ಲಿನ ರೂಪದಿಂದ ಆ ಆಹಾರವನ್ನು ಅಗಿದು ತಿನ್ನುವುದಕ್ಕೆ ಸಹಾಯಮಾಡುವುದರಿಂದ ಉದಕಗಳಿಗೆ **ಓದತ್ಯಃ** ಎಂಬ ಹೆಸರು ರೂಢಿಯಲ್ಲಿರುವುದು.

ನದಂ ಯೋಯುವತೀನಾಮಿತೀ ೩ ಆಪೋ ವಾವ ಯೋಯುವತ್ಯೋ
ಯಾ ಅಂತರಿಕ್ಷ್ಯಾಸ್ತಾ ಹಿ ಪೋಪ್ಲೂಯಂತ ಇವಾಪೋ ವಾವ
ಯೋ ಯುವತ್ಯೋ ಯಾಃ ಸ್ವೇದತೇ ತಾ ಹಿ ಸರೀಸೃಪ್ಯಂತ ಇವ ॥

**ದ್ವಿತೀಯಪಾದಂ ವ್ಯಾಚಷ್ಟೇ—**

ಎರಡನೇ ಪಾದದ ಅರ್ಥವನ್ನು ವಿವರಿಸುವರು—**ನದಂ ವಾ ಓದತೀನಾ** (ಋ. ಸಂ. ೮-೬೯-೨) ಎಂದರೆ ಅಂತರಿಕ್ಷ ದಲ್ಲಿ ಸಂಗ್ರಹವಾಗಿರುವ ಉದಕಗಳು. ಮನುಷ್ಯ (ಅಥವಾ ಪ್ರಾಣಿಗಳ) ಶರೀರದಲ್ಲಿ ಸದಾಕಾಲವೂ ಬೆವರಿನ ರೂಪದಿಂದ ಹೊರಸೂಸುತ್ತಿರುವ ಉದಕಗಳು. ಇವು ಸದಾಕಾಲವೂ ಹೊರಬರುತ್ತಿರುವುದರಿಂದ ಯುವತಿ (ತರುಣಿ) ರೂಪದಿಂದಿರುವ ಉದಕಗಳೆಂದು ಹೇಳಲ್ಪಡುತ್ತವೆ.

ಪತಿಂ ವೋ ಅಘ್ನ್ಯಾನಾಮಿತೀ ೩ ಆಪೋ ವಾ ಅಘ್ನ್ಯಾ ಯಾ
ಅಗ್ನೇರ್ಧೂಮಾಜ್ಜಾಯಂತ ಆಪೋ ವಾ ಅಘ್ನ್ಯಾ ಯಾಃ ಶಿಶ್ನಾತ್-
ಪ್ರಸೃಜ್ಯಂತೇ ॥

ತೃತೀಯಪಾದಂ ವ್ಯಾಚಷ್ಟೇ—ಅಗ್ನೇರುತ್ಪನ್ನೋ ಯೋಽಯಂ ಧೂಮಃ ಸ ಏವ ಮೇಘಾ-ಕಾರೋ ಭೂತ್ವಾ ವೃಷ್ಟಿರೂಪೇಣ ವಾ ಅನ್ನಂ ಜನಯತಿ। ಯಥಾ (ತೋ, ಧೂಮೋಽಗ್ನಿರಿತ್ಯೇತ-ದುಭಯಂ ಯುಕ್ತಸ್ಯಾನ್ನಾದ್ಯನಿಷ್ಪಾದಕತ್ವಮತ ಏವ ಕೈಶ್ಚಿದುಕ್ತಮ್—"ಧೂಮಜ್ಯೋತಿಃ ಸಲಿಲ-ಮರುತಾಂ ಸಂನಿಪಾತಃ ಕ್ವ ಮೇಘಃ" (ಪೂರ್ವಮೇ-ಶ್ಲೋ ೫) ಇತಿ। ತಸ್ಮಾನ್ಮೇಘಾದುತ್ಪನ್ನಾ ಅಪ ಓಷಧಿವನಸ್ಪತಿರೂಪೇಣ ಪರಿಣತಾಃ ಸತ್ಯೋ ನ ಕೇನಾಪಿ ಹನನೀಯಾಃ, ಕಿಂತು ಸರ್ವೇಣಾಪಿ ವರ್ಧನೀಯಾ ಏವಮ್ (ಏವ) ತಥಾ ಶಿಶ್ನಾದುತ್ಪನ್ನಾ ರೇತೋರೂಪಾ ಆಪಃ ಪುತ್ರಾದಿರೂಪೇಣ **ಪರಿಣತಾಃ ಸತ್ಯೋ ನ ಕೇನಾಪಿ ಹನನೀಯಾಃ** ॥

ಮೂರನೇ ಪಾದವನ್ನು ವಿವರಿಸುವರು—ಅಗ್ನಿಯಿಂದ ಧೂಮಾಕಾರದಿಂದ (ಹೊಗೆ ಉತ್ಪನ್ನವಾದ ವೃಷ್ಟಿಯ್ಯು ಮೇಘ ರೂಪದಿಂದ ವೃಷ್ಟಿಯನ್ನುಂಟುಮಾಡುವುದು. ಆದರಿಂದ ಅನ್ನಾದ್ಯಾಹಾರವು ಉತ್ಪನ್ನವಾಗುವುದು. ಈ ಆಹಾರ ದಿಂದ ಪ್ರಾಣಿಗಳಲ್ಲಿ ರೇತಸ್ಸು ಉಂಟಾಗಿ ಪುತ್ರಾದಿ ಸಂತತಿಗೆ ಕಾರಣವಾಗುವುದು. ಆದ್ದರಿಂದ ಎಂದರೆ ಅನ್ನಾದ್ಯಾಹಾರದ ಉತ್ಪತ್ತಿಗೂ ರೇತಸ್ಸಿಗೂ ಕಾರಣವಾದ ಈ ಉದಕಗಳು ಕೊಲ್ಲಲ್ಪಡಬಾರದು ಎಂದರೆ ನಾಶಮಾಡಲ್ಪಡಬಾರದು ಎಂದಭಿಪ್ರಾಯವು.

ಧೇನೂನಾಮಿಷುಧ್ಯಸೀತೀ ೩ ಆಪೋ ವಾವ ಧೇನವಸ್ತಾ ಹೀದಂ
ಸರ್ವಂ ಧಿನ್ವಂತೀಷುಧ್ಯಸೀತಿ ಯದಾಹ ಪತೀಯಸೀತ್ಯೇವ ತದಾಹ

ಚತುರ್ಥಪಾದಂ ವ್ಯಾಚಷ್ಟೇ—ಯಥಾ ಧೇನವಃ ಕ್ಷೀರಪ್ರದಾನೇನ ಪ್ರೀಣಯಂತ್ಯೇವಮಾಪ ಓಷಧಿವನಸ್ಪತ್ಯಾದಿಕಂ ಪ್ರೀಣಯಂತ್ಯತೋ ಧೇನುಸಾಮ್ಯಾದ್ಧೇನುತ್ವಮ್ । ಇಷುಧ್ಯಸೀತಿ ಶಬ್ದೋ ಯದಭಿಧೇಯಂ ಧತ್ತೇ ಪಪ್ತೀಯಸೀತ್ಯಸ್ಯೈವ ಶಬ್ದಸ್ಯಾಭಿಧೇಯಂ ಬ್ರೂತೇ । ಪತಿವತ್ ಸ್ವಾಮಿ-ವದಾಚರತೀ (ಸೀ) ತ್ಯರ್ಥಃ॥

ನಾಲ್ಕನೆಯ ಪಾದವನ್ನು ವಿವರಿಸುವರು. ಗೋವುಗಳು ಹಾಲನ್ನು ಕೊಡುವುದರಿಂದ ಸರ್ವರಿಗೂ ಪ್ರೀತಿಪಾತ್ರ ವಾಗಿರುವವು. ಗಿಡ, ಮರ, ವೃಕ್ಷ ಮೊದಲಾದ ಸಸ್ಯವರ್ಗವನ್ನು ಪ್ರೀತಿಸುವಂತೆಯೇ ಜನರು ಗೋವುಗಳನ್ನೂ ಪ್ರೀತಿ ಸುವರು. ಇವುಗಳಿಗೆಲ್ಲಾ ಸ್ವಾಮಿಯು ಎಂದರ್ಥವು.

ತ್ರಿಷ್ಟುಭಂ ಚಾನುಷ್ಟುಭಂ ಚ ವಿಹರತಿ ವೃಷಾ ವೈ ತ್ರಿಷ್ಟುಬ್ ಯೋಷಾಽ
ನುಷ್ಟುಪ್ತನ್ಮಿಥುನಂ ತಸ್ಮಾದಪಿ ಪುರುಷೋ ಜಾಯಾಂ ವಿತ್ತ್ವಾ
ಕೃತ್ಸ್ನತರಮಿವಾತ್ಮಾನಂ ಮನ್ಯತೇ ॥

“ನದಂ ವಃ” (ಋ-ಸಂ-ಮ-೮-ಸೂ-೬೯-ಋ-೨) ಇತ್ಯಾದಿಕಾಮೃಚಂ ವ್ಯಾಚಷ್ಟುಂ (ಖ್ಯಾಯ) ತದುಭಯೋರ್ವಿಹರಣಂ (ಲೌಕಿಕೋದಾಹರಣೋಕ್ತಿಪೂರ್ವಕಂ ಪ್ರಶಂಸತಿ—ವಿಹರಣಂ) ನಾಮ ಸ್ತ್ರೀಪುರುಷವತ್ಪರಸ್ಪರವ್ಯತಿಷಂಗಃ । ತತ್ರ ತ್ರಿಷ್ಟುಭಃ ಪ್ರವೃದ್ಧತ್ವಾದ್ ವೃಷತ್ವಂ ಸೇಚನ-ಸಮರ್ಥ ಪುರುಷತ್ವಮನುಷ್ಟುಭೋ ನ್ಯೂನತ್ವಾದ್ಯೋಷಿತ್ತ್ವಮ್ । ತದುಭಯಂ ಮಿಲಿತ್ವಾ ಮಿಥುನಂ ಸಂಪದ್ಯತೇ । ಯಸ್ಮಾನ್ಮೇಲನೇನ ಮಿಲಿತತ್ವಂ ಪ್ರಶಸ್ತಂ ತಸ್ಮಾಲ್ಲೋಕೇಽಪಿ ಪುರುಷೋ ಬ್ರಹ್ಮಚಾರೀ ವಿವಾಹೇನ ಜಾಯಾಂ ಲಬ್ಧ್ವಾತಿಶಯೇನ ಸಂಪೂರ್ಣೋ ಜಾತೋಽಸ್ಮೀತ್ಯೇವಂ ಪರಿತುಷ್ಯತಿ ॥

ಈ ಎರಡು ಋಕ್ಕುಗಳ ವಿಹರಣ (ಮಿಶ್ರಣ) ಕ್ರಮವನ್ನು ತಿಳಿಸುವರು. (ವಿಹರಣ ಮಿಶ್ರಣ) ವೆಂದು ಸ್ತ್ರೀಪುರುಷರು ಸೇರಿರುವ ಮೈಥುನಾವಸ್ಥೆಯು. ಇಲ್ಲಿ ತ್ರಿಷ್ಟುಪ್ ಛಂದಸ್ಸು ಸೇಚನ ಸಮರ್ಥವಾದ ಪುರುಷನಂತೆಯೂ ಅನುಷ್ಟುಪ್ ಛಂದಸ್ಸು ಸ್ತ್ರೀಯಂತೆಯೂ ಇರುವುದು. ಇವೆರಡೂ ಸೇರಿದರೆ ಮಿಥುನವಾಗುವುದು. ಲೋಕದಲ್ಲಿ ಅವಿವಾಹಿತ ನಾದ ಪುರುಷನು ಸ್ತ್ರೀಯನ್ನು ಮದುವೆಮಾಡಿಕೊಂಡು ಮಿಥುನ ಎಂಬ ದೆಶೆಯನ್ನು ಪಡೆದರೆ ಆಗ ಆ ಪುರುಷನು ಸಂಪೂರ್ಣವಾದ ಮನುಷತ್ವವನ್ನು ಪಡೆದು ಪ್ರಶಸ್ತನಾಗುವನು. ಅದರಂತೆಯೇ ಇಲ್ಲಿ ತ್ರಿಷ್ಟುಪ್ ಮತ್ತು ಅನುಷ್ಟುಪ್

ಛಂದಸ್ಸುಗಳು ಮಿಥುನವಾಗಿ ಸೇರಿದರೆ ಎಂದರೆ ವಿಹರಣ ರೂಪದಿಂದ (ಮಿಶ್ರೀಭಾವದಿಂದ) ಸೇರಿದರೆ ಮಂತ್ರವು ಸಂಪೂರ್ಣ ವಾಗಿ ಪ್ರಶಸ್ತವಾಗುವುದು.

**ತಾಸ್ತ್ರಿಃ ಪ್ರಥಮಯಾ ಪಂಚವಿಂಶತಿರ್ಭವಂತಿ ಪಂಚವಿಂಶ ಆತ್ಮಾ ಪಂಚವಿಂಶಃ ಪ್ರಜಾಪತಿರ್ದಶ ಹಸ್ತ್ಯಾ ಅಂಗುಲಯೋ ದಶ ಪಾದ್ಯಾ ದ್ವಾ ಊರೂ ದ್ವೌ ಬಾಹೂ ಆತ್ಮೈವ ಪಂಚವಿಂಶಸ್ತಮಿ- ಮಮಾತ್ಮಾನಂ ಪಂಚವಿಂಶಂ ಸಂಸ್ಕುರುತೇಽಥೋ ಪಂಚವಿಂಶಂ ವಾ ಏತದಹಃ ಪಂಚವಿಂಶ ಏತಸ್ಯಾಹ್ನಃ ಸ್ತೋಮಸ್ತತ್ಸಮೇನ ಸಮಂ ಪ್ರತಿಪದ್ಯತೇ ತಸ್ಮಾದ್ದ್ವೇ ಏವ ಪಂಚವಿಂಶತಿರ್ಭವಂತಿ ॥**

ಪ್ರಥಮಾಯಾಮೃಚ್ಯಾವೃತ್ತಿವಿಧಿಪೂರ್ವಿಕಾಂ ಸಂಖ್ಯಾಂ ಪ್ರಶಂಸತಿ—" ತದಿದಾಸ " (ಋ-ಸಂ ಮ-೧೦-ಸೂ-೧೨೦-ಋ-೧) ಇತ್ಯಾದಿಕಂ ಸೂಕ್ತಂ ನವರ್ಚಂ " ತಾಂ ಸುತೇ " (ಋ-ಸಂ-ಮ- ೧೦-ಸೂ-೭೪-ಋ-೧) ಇತಿ ಸೂಕ್ತಂ ಷಡೃಚಂ " ಭೂಯ ಇದ್ವಾವೃಧೇ " (ಋ-ಸಂ-ಮ- ೬-ಸೂ-೩೧-ಋ-೧) ಇತಿ ಪಂಚರ್ಚಂ " ನೃಣಾಮುತ್ವಾ ' (ಋ-ಸಂ-ಮ-೬-ಸೂ-೫೧-ಋ-೪) ಇತ್ಯಯಮೇಕಸ್ತೃಚ ಇತ್ಯೇತಾಃ ಸರ್ವಾಸ್ತ್ರಯೋವಿಂಶತಿರ್ಭವಂತಿ । ತತ್ರ ಪ್ರಥಮಾಯಾಸ್ತ್ರಿರಾವೃತ್ತೌ ಸತ್ಯಾಂ ಪಂಚವಿಂಶತಿಃ ಸಂಪದ್ಯತೇ । ಆತ್ಮಾ ಯಜಮಾನಃ । ಅಥಾಧಿದೈವಂ ಪ್ರಜಾಪತಿಶ್ಚತುರ್ಮು- ಖೋಽಪಿ ಪಂಚವಿಂಶಾವಯವೋಪೇತಃ । ದಶ ಹಸ್ತ್ಯಾ ಇತ್ಯಾದಿ ಪೂರ್ವವದ್ವ್ಯಾಖ್ಯೇಯಮ್ ॥ (ಐ-ಆ-೧-೧-೨) ॥

ಮೊದಲನೆಯ ಋಕ್ಕಿನಲ್ಲಿ ಆವೃತ್ತಿಯಿಂದ ಲಬ್ಧವಾಗುವ ಋಕ್ಕುಗಳ ಸಂಖ್ಯೆಯನ್ನು ತಿಳಿಸುವರು. **ತದಿದಾಸ** (ಋ.ಸಂ. ೧೦-೧೨೦-೧) ಎಂಬ ಸೂಕ್ತದಲ್ಲಿ ಒಂಬತ್ತು ಋಕ್ಕುಗಳಿರುವವು. ಹಾಗೆಯೇ **ತಾಂ ಸುತೇ** (ಋ.ಸಂ. ೧೦-೭೪-೧) ಎಂಬ ಸೂಕ್ತದಲ್ಲಿ ಆರು ಋಕ್ಕುಗಳೂ **ಭೂಯ ಇದ್ವಾವೃಧೇ** (ಋ. ಸಂ. ೯-೩೧-೧) ಎಂಬ ಸೂಕ್ತದಲ್ಲಿ ಐದು ಋಕ್ಕುಗಳೂ **ನೃಣಾಮುತ್ವಾ** (ಋ. ಸಂ. ೩-೫೧-೮) ಎಂಬ ಋಕ್ಕು ಸೇರಿ ಇಪ್ಪತ್ತೊಂದು ಋಕ್ಕುಗಳಾಗುವವು. ಇವು ಗಳಲ್ಲಿ ಮೊದಲನೆಯ ಋಕ್ಕನ್ನು ಮೂರಾವೃತ್ತಿ ಪಠಿಸುವುದರಿಂದ ಒಟ್ಟು ಇಪ್ಪತ್ತೈದು ಋಕ್ಕುಗಳಾಗುವವು. ಹಿಂದೆ ಹೇಳಿದಂತೆ **ದಶ ಹಸ್ತ್ಯಾ ಅಂಗುಲಯಃ** ಇತ್ಯಾದಿವಾಕ್ಯ ಪ್ರಕಾರ ಪ್ರಜಾಪತಿಯು ಇಪ್ಪತ್ತೈದು ಅವಯವಗಳಿಂದ ಕೂಡಿರುವನು. ಆದರಂತೆ ಯಜಮಾನನು ಸಹ ಇಪ್ಪತ್ತೈದು ಅವಯವಗಳಿಂದ ಕೂಡಿರುವನು ಎಂದರ್ಥವು.

---

*English Translation*

—

1. He extends these (verses) by (interpolating) the sound. Verily, the sound is purusha, man. Therefore every man when he speaks, sounds loud, as it were.

2. At the end of each foot of the first verse of the hymn tad id asa, he inserts one foot of the second verse of hymn Rv. VIII, 69, nadam va odatinam & c. Thus the verse is to be recited as follows :

Tad id asa bhuvaneshu gyeshtham pu
nadam va odatinam,
Yato gagna ugras tveshnrimno ru
nadam yoyuvatinam,
Sadyo gagnano ni rinati satrun
patim vo aghnyanam,
Anu yam visve madanti umah sho
dhenunam ishudhyasi.

In nadam va odatinam (Rv. VIII 69, 2), odati are the waters in heaven' for they water all this ; and they are the waters in the mouth, for they water all good food.

3. In nadam yoyuvatinam (Rv. VIII 69, 2), yoyuvati are the waters in the sky, for they seem to inundate ; and they are the waters of perspiration, for they seem to run continually.

4. In patim vo aghnyanam (Rv. VIII 69, 2), aghnya are the waters which spring from the smoke of fire, and they are the waters which spring organ.

5. In dhenunam ishudhyasi (Rv. VIII 29, 2), the dhenu (cows) are the waters, for they delight all this ; and ishudhyasi means, thou art food.

6. He extends a Trishtubh and an Anushtubh. Trishtubh is the man, Anushtubh the wife, and they make couple. Therefore does a man, after having found a wife, consider himself a more perfect man.

7. These verses, by repeating the first three times, become twenty-five. The trunk is the twenty-fifth, and Pragapati is the twenty-fifth. There are ten fingers on his hands, ten toes on his feet, two legs, two arms, and the trunk the twenty-fifth. He adorns that trunk as the twenty-fifth. Now this day consists of twenty-five, and the Stoma hymn of that day consists of twenty-five : it becomes the same through the same. Therefore the two, the day and the hymn, are twenty-five.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ತೃತೀಯಾಧ್ಯಾಯೇ ಪಂಚಮಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪ್ರಥಮಾರಣ್ಯಕದ
ಮೂರನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವು ॥

———

## ಅಥ ಪ್ರಥಮಾರಣ್ಯಕೇ ತೃತೀಯಾಧ್ಯಾಯೇ ಷಷ್ಠಃ ಖಂಡಃ

ಪ್ರಥಮಾರಣ್ಯಕದ ಮೂರನೆಯ ಅಧ್ಯಾಯದಲ್ಲಿ ಆರನೆಯ ಖಂಡವು

———

ತದಿತಿ ಪ್ರತಿಪದ್ಯತೇ ತತ್ತದಿತಿ ವಾ ಅನ್ನಮನ್ನಮೇವ ತದಭಿಪ್ರತಿಪದ್ಯತ ಏತಾಂ ವಾವ ಪ್ರಜಾಪತಿಃ ಪ್ರಥಮಾಂ ವಾಚಂ ವ್ಯಾಹರದೇಕಾಕ್ಷರ-ದ್ವ್ಯಕ್ಷರಾಂ ತತೇತಿ ತಾತೇತಿ ತಥೈವೈತತ್ಕುಮಾರಃ ಪ್ರಥಮವಾದೀ ವಾಚಂ ವ್ಯಾಹರತ್ಯೇಕಾಕ್ಷರದ್ವ್ಯಕ್ಷರಾಂ ತತೇತಿ ತಾತೇತಿ ತಯೈವ ತತ್ತತವತ್ಯಾ ವಾಚಾ ಪ್ರತಿಪದ್ಯತೇ ತದುಕ್ತಮೃಷಿಣಾ ಬೃಹಸ್ಪತೇ

ಪ್ರಥಮಂ ವಾಚೋ ಅಗ್ರಮಿತ್ಯೇತದ್ಧ್ಯೇವ ಪ್ರಥಮಂ ವಾಚೋ ಅಗ್ರಂ ಯತ್ಪ್ರೈರತ ನಾಮಧೇಯಂ ದಧಾನಾ ಇತಿ ವಾಚಾ ಹಿ ನಾಮಧೇಯಾನಿ ಧೀಯಂತೇ ಯದೇಷಾಂ ಶ್ರೇಷ್ಠಂ ಯದರಿಪ್ರ- ಮಾಸೀದಿತ್ಯೇತದ್ಧ್ಯೇವ ಶ್ರೇಷ್ಠಮೇತದರಿಪ್ರಂ ಪ್ರೇಣಾ ತದೇಷಾಂ ನಿಹಿತಂ ಗುಹಾವಿರಿತೀದಮು ಹ ಗುಹಾಥ್ಯಾತ್ಮಮಿಮಾ ದೇವತಾ ಅದ ಉ ಆವಿರಧಿದೈವತಮಿತ್ಯೇತತ್ತದುಕ್ತಂ ಭವತಿ ||

"ತದಿತಿ ಪ್ರತಿಪದ್ಯತೇ" (ಐ-ಆ-೧-ಅ-೩-ಖಂ-೩) ಇತ್ಯಯಂ ಖಂಡಃ ಪೂರ್ವಂ ತಚ್ಛಬ್ದಸ್ಯ ವ್ಯಾಖ್ಯಾನಾರ್ಥಂ ಪಠಿತೋಽಪಿ ಪುನಃ ಕೃತ್ಸ್ನಶಸ್ತ್ರಪ್ರಶಂಸಾರ್ಥಂ ಪಠ್ಯತೇ ಅಕ್ಷರಾರ್ಥಃ ಪೂರ್ವಮೇವ (ಐ-ಆ-೧-ಅ-ಖಂ-೩) ವ್ಯಾಖ್ಯಾತಃ ||

**ತದಿತಿ ಪ್ರತಿಪದ್ಯತೇ** (ಐ. ಆ. ೩-೩) ಎಂಬ ಮೂರನೇ ಅಧ್ಯಾಯದ ಆರನೇ ಖಂಡವು ಈ ಅಧ್ಯಾಯದಲ್ಲಿ ಹಿಂದೆ ಹೇಳಿರುವ ವಿಷಯಗಳನ್ನೇ ಪ್ರತಿಪಾದಿಸುವುದರಿಂದಲೂ ಮೂಲವೂ ಸಹ ಹಿಂದಿನಂತೆಯೇ ಇರುವುದರಿಂದಲೂ ಇಲ್ಲಿ ಮೂಲವನ್ನು ಮಾತ್ರ ಕೊಟ್ಟಿದೆ. ಅರ್ಥಾನುವಾದವನ್ನು ಹಿಂದೆಯೇ ನೋಡಿ ತಿಳಿದು ಕೊಳ್ಳಬೇಕು.

---

*English Translation*

---

This is an exact repection of the third khanda. According to the commentator, the third khanda was intended for the glory of the first word tad, while the sixth is intenned for the glory of the whole hymn.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ತೃತೀಯಾಧ್ಯಾಯೇ ಷಷ್ಠಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪ್ರಥಮಾರಣ್ಯಕದ
ಮೂರನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವು ||

---

# ಅಥ ಪ್ರಥಮಾರಣ್ಯಕೇ ತೃತೀಯಾಧ್ಯಾಯೇ ಸಪ್ತಮಃ ಖಂಡಃ

## ಪ್ರಥಮಾರಣ್ಯಕದ ಮೂರನೆಯ ಅಧ್ಯಾಯದಲ್ಲಿ ಏಳನೆಯ ಖಂಡವು

——

**ತದಿದಾಸ ಭುವನೇಷು ಜ್ಯೇಷ್ಠಮಿತಿ ಪ್ರತಿಪದ್ಯತೇ ಯದ್ವೈ ಜ್ಯೇಷ್ಠಂ ತನ್ಮಹನ್ಮಹದ್ವದ್ರೂಪಸಮೃದ್ಧಮೇತಸ್ಯಾಹ್ನೋ ರೂಪಂ ||**

ಸೂಕ್ತಮಪಿ ಪ್ರಶಸ್ಯ ಸಾಮಾನ್ಯೇನ ಪ್ರಶಂಸಾಮಭಿಧಾಯ ಪುನರ್ವಿಶೇಷಾಕಾರೇಣ ಪ್ರಶಂಸಾಭಿಧೀಯತೇ || ತತ್ರ ಪ್ರಥಮಂ ಸೂಕ್ತಂ ಪ್ರಶಂಸತಿ ಪ್ರಥಮಂ ಶಸ್ತ್ರಂ ಪ್ರಾರಭತೇ | ಅತಿಶಯೇನ ಬಹುವೃದ್ಧಂ ಜ್ಯೇಷ್ಠಂ ತಾದೃಶಮ್ |

ಸೂಕ್ತವನ್ನು (ತದಿದಾಸ ಎಂಬ ಸೂಕ್ತವನ್ನು) ಸಾಮಾನ್ಯವಾಗಿ ಪ್ರಶಂಸೆಮಾಡಿ ಈಗ ಅಲ್ಲಿರುವ ಕೆಲವು ವಿಶೇಷ ಸಂಗತಿಗಳನ್ನು ತಿಳಿಸುವರು. ತದಿದಾಸ ಎಂಬ ಸೂಕ್ತವು ಶಸ್ತ್ರದ ಮೊದಲನೆಯ ಸೂಕ್ತವು **ಭುವನೇಷು ಜ್ಯೇಷ್ಠಂ** ಎಂದರೆ ಸೃಷ್ಟಿಗಿಂತಲೂ ಪೂರ್ವದಲ್ಲಿದ್ದವನೆಂದರ್ಥವು.

**ತಾಂ ಸು ತೇ ಕೀರ್ತಿಂ ಮಘವನ್ಮಹಿತ್ವೇತಿ ಮಹದ್ವದ್ರೂಪಸಮೃದ್ಧಮೇತಸ್ಯಾಹ್ನೋ ರೂಪಮ್ ||**

(ತಾಂ ಸು ತ ಇತ್ಯಾದಿ ಪ್ರಶಂಸತಿ—

ಈಗ ತಾಂ ಸು ತೇ ಕೀರ್ತಿಂ ಮಘವನ್ಮಹಿತ್ವಾ (ಋ. ಸಂ. ೧೦-೫೪-೧) ಎಂಬ ಮಂತ್ರವನ್ನು ವಿವರಿಸುವರು. ಇಲ್ಲಿ ಮಹಿತ್ವಾ ಎಂಬ ಮಹಚ್ಛಬ್ದ ಪ್ರಯೋಗವಿರುವುದರಿಂದ ಈ ಮಂತ್ರವು ಆದಿವಸ ಪಠಿಸಲು ಅವಶ್ಯಕವಾದ ಲಕ್ಷಣಗಳನ್ನುಳ್ಳದ್ದಾಗಿದೆ.

**ಭೂಯ ಇದ್ವಾವೃಧೇ ವೀರ್ಯಾಯೇತಿ ವೀರ್ಯವದ್ರೂಪಸಮೃದ್ಧಮೇತಸ್ಯಾಹ್ನೋ ರೂಪಂ ||**

ಭೂಯ ಇದಿತ್ಯಾದಿ ಪ್ರಶಂಸತಿ—ಭೂಯ ಇದಿತ್ಥಮಿಂದ್ರೋ ವೀರ್ಯಾಯ ಶೌರ್ಯಾರ್ಥಂ ವಾವೃಧೇ ವೃದ್ಧಿಂ ಪ್ರಾಪ್ತವಾನ್ | ವೀರ್ಯಶಬ್ದಸ್ಯ ಶ್ರುತತ್ವಾದಹ್ನೋ ರೂಪಸ್ಯ ವೀರ್ಯವತ್ತ್ವಮ್||

**ಭೂಯ ಇದ್ವಾವೃಧೇವೀರ್ಯಾಯ** (ಋ. ಸಂ. ೬-೩೦-೧) ಎಂಬ ಋಕ್ಕಿನಲ್ಲಿ ವೀರ್ಯಶಬ್ದಪ್ರಯೋಗ ವಿರುವುದರಿಂದ ಈ ಮಂತ್ರದಲ್ಲಿಯೂ ಆದಿವಸ ಪಠಿಸಬೇಕಾದ ಲಕ್ಷಣಗಳಿದ್ದಂತಾಯಿತು

**ನೃಣಾಮು ತ್ವಾ ನೃತಮಂ ಗೀರ್ಭಿರುಕ್ಥೈರಿತ್ಯುಕ್ಥಂ ವಾ ಏತದಹರುಕ್ಥವದ್ರೂಪಸಮೃದ್ಧಮೇತಸ್ಯಾಹ್ನೋ ರೂಪಂ ||**

**ಅಥ ನೃಚಂ ಪ್ರಶಂಸತಿ—ಉತ್ತಿಷ್ಠತ್ಯುತ್ಕರ್ಷಂ ಪ್ರಾಪ್ನೋತ್ಯೇಭಿರಿತ್ಯುಕ್ಥಾನಿ ಶಸ್ತ್ರಾಣಿ ತದ್ರೂಭಿ- ಭಿರ್ಗೀರ್ಭಿ ಹೇ ಇಂದ್ರ ನೃಣಾಮು ಸರ್ವೇಷಾಮಪಿ ಪುರುಷಾಣಾಂ ಮಧ್ಯೇ ನೃತಮಮುತ್ತಮಂ. ಪುರುಷಂ ತ್ವಾಮೃತ್ವಿಜೋಽರ್ಚಂತೀತಿ ಪ್ರಸ್ತವ್ಯಮ್ । ತದೇತನ್ಮಹಾವ್ರತಾಖ್ಯಮಹರುಕ್ಥಮುತ್ಕರ್ಷಂ ಹೇತುತ್ವಾತ್ । ಉಕ್ಥವದಿತ್ಯಾದಿ ಪೂರ್ವವತ್ । (ಐ-ಆ-೧-ಅ-೨-ಖ-೨) ॥**

ಈಗ ಮುಂದಿನ ನೃಚವನ್ನು ಪ್ರಶಂಸೆಮಾಡುವರು. ಉತ್ಕರ್ಷವನ್ನು ಹೊಂದುವನು ಎಂಬರ್ಥವಿರುವ **ಉತ್ತಿಷ ತ್ಯುತ್ಕರ್ಷಂ ಪ್ರಾಪ್ನೋತ್ಯೇಭಿರಿತ್ಯುಕ್ಥಾನಿ** ವಾಕ್ಯದಿಂದ ಉಕ್ಥಾನಿ ಎಂಬ ಪದವು ನಿಷ್ಪನ್ನವಾಗಿದೆ. ಆದುದರಿಂದ **ಈ** ವಾಕ್ಯದ ಅರ್ಥವು ಈರೀತಿ ಇರುವುದು – ಹೇ ಇಂದ್ರ ಎನ್ನೆ ಇಂದ್ರನೇ ನೃಣಾಮು ಸಮಸ್ತ ಪುರುಷರ ಮಧ್ಯದಲ್ಲಿ **ನೃತಮಂ** ಉತ್ತಮ ಪುರುಷನಾದ **ತ್ವಾಂ** ನಿನ್ನನ್ನು ಋತ್ವಿಕ್ಕುಗಳು ಅರ್ಚಿಸುತ್ತಾರೆ. ಈ ವಿಧವಾದ ಅರ್ಥವಿರುವುದರಿಂದ **ಈ** ಮಹಾವ್ರತವೆಂಬ ದಿನವು ಉಕ್ಥವೆಂದು ಹೇಳಲ್ಪಡುವುದು. ಈ ಮಂತ್ರದಲ್ಲಿ ಉಕ್ಥ ಎಂದರೆ ಉತ್ಕರ್ಷತೆಯನ್ನು ಹೇಳಿ ರುವುದರಿಂದ ಈ ಮಂತ್ರದಲ್ಲಿ ಅವಶ್ಯಕವಾದ ಲಕ್ಷಣವಿದ್ದಂತಾಯಿತು.

## ನ್ಯೂನಾಕ್ಷರೇ ಪ್ರಥಮೇ ಪದೇ ವಿಹರತಿ ನ್ಯೂನೇ ವೈ ರೇತಃ ಸಿಚ್ಯತೇ ನ್ಯೂನೇ ಪ್ರಾಣಾ ನ್ಯೂನೇಽನ್ನಾದ್ಯಂ ಪ್ರತಿಷ್ಠಿತಮೇತೇಷಾಂ ಕಾಮಾ- ನಾಮವರುದ್ಧ್ಯಾ ಏತಾನ್ಕಾಮಾನವರುಂಧೇ ಯ ಏವಂ ವೇದ ॥

**ಸೂಕ್ತಂ ಪ್ರಶಸ್ಯ ವ್ಯತಿಷಿಕ್ತಪಾದಯೋರಕ್ಷರನ್ಯೂನತಾಂ ಪ್ರಶಂಸತಿ "ತದಿದಾಸ" (ಋ-ಸಂ- ಮಂ-೧೦-ಸೂ-೧೨೦-ಋ.೧) ಇತ್ಯಯಂ ಪ್ರಥಮಪಾದೋ ದಶಾಕ್ಷರತ್ವಾದೇಕೇನಾಕ್ಷರೇಣ ತ್ರಿಷ್ಟುಭೋ ನ್ಯೂನೋ "ನದಂ ವಃ" (ಋ-ಸಂ-ಮಂ-೮-ಸೂ-೬೯-ಋ-೨) ಇತ್ಯಯಂ ಪಾದಃ ಸಪ್ತಾಕ್ಷರತ್ವಾದೇಕೇನಾಕ್ಷರೇಣ ನ್ಯೂನಾಽನುಷ್ಟುಪ್‌ಪಾದದ್ವಯಂ ವ್ಯತಿಷಿಕ್ತಂ ಭವತಿ । ನ್ಯೂನೇ ವಾ ಇತ್ಯಾದಿಕಂ ಪೂರ್ವಮೇವ (ಐ-ಆ-೧-ಆ-೧-ಖಂ-೧) ವ್ಯಾಖ್ಯಾತಮ್ ॥**

ಮೇಲಿನಂತೆ ಸೂಕ್ತವನ್ನು ಪ್ರಶಂಸೆಮಾಡಿ ಈಗ ಬೇರೆಬೇರೆ ಪಾದಗಳಲ್ಲಿರುವ ಅಕ್ಷರಸಂಖ್ಯೆಯಲ್ಲಿರುವ ನ್ಯೂನತೆ ಯನ್ನು ತಿಳಿಸುವರು. **ತದಿದಾಸ** (ಋ. ಸಂ. ೧–೧೨೦–೧) ಎಂಬ ಮೊದಲನೇ ಪಾದದಲ್ಲಿ ಹತ್ತು ಅಕ್ಷರಗಳಿರುವವು ಹನ್ನೊಂದಕ್ಷರಗಳಿರಬೇಕಾದ ತ್ರಿಷ್ಟುಪ್ ಛಂದಸ್ಸಿನಂತೆ ಇದು ಪರಿಗಣಿಸಲ್ಪಟ್ಟಿರುವುದು ಎಂದರೆ ಈ ಪಾದದಲ್ಲಿ ಏಳು ಅಕ್ಷರಗಳಿರುವುದರಿಂದ ಅನುಷ್ಟುಪ್ ಛಂದಸ್ಸಿನ ಈ ಪಾದದಲ್ಲಿಯೂ ಒಂದಕ್ಷರ ಕಡಿಮೆ ಇದ್ದಂತಾಯಿತು. ಈ ಎರಡು ಪಾದಗಳಲ್ಲಿ ನ್ಯೂನತೆ ಇದ್ದರೂ ಅದ್ದರೂ ಅದನ್ನೇನೂ ಗಮನಿಸಬೇಕಾಗಿಲ್ಲ. ಏಕೆಂದರೆ ಲೋಕವ್ಯವಹಾರದಲ್ಲಿ ಪುರುಷನ ಹೃದಯದಲ್ಲಿ ಇರುವ ಪ್ರಾಣವಾಯುವೂ ಅತ್ಯಲ್ಪವು. ಉದರದಲ್ಲಿ ಸೇರುವ ಆಹಾರವು ಸ್ವಲ್ಪವಾಗಿಯೇ ಇರುವುದು. ಈ ಕಾರಣಗಳಿಂದ ಮಂತ್ರದ ಪಾದದಲ್ಲಿ ಒಂದಕ್ಷರ ಮಾತ್ರ ಕಡಿಮೆಯಾಗಿದ್ದರೆ ಅದರಿಂದ ಯಾವ ಬಾಧಕವೂ ಇಲ್ಲವೆಂದ ಭಿಪ್ರಾಯವು.

## ದ್ವೇ ದಶಾಕ್ಷರೇ ಭವತ ಉಭಯೋರನ್ನಾದ್ಯಯೋರುಪಾಪ್ತ್ಯೈ ಯಚ್ಚ ಪದ್ವದ್ಯಚ್ಚಾಪಾದಕ ಮಿತ್ಯಷ್ಟಾದಶಾಷ್ಟಾದಶಾಕ್ಷರಾಣಿ ಭವಂತಿ

**ಯಾನಿ ದಶ ನವ ಪ್ರಾಣಾ ಆತ್ಮೈವ ದಶಮಃ ಸಾಽಽತ್ಮನಃ ಸಂಸ್ಕೃತಿ-ರಷ್ಟಾವಷ್ಟಾ ಉದ್ಯಂತೇಽಶ್ನುತೇ ಯದ್ಯತ್ಕಾಮಯತೇ ಯ ಏವಂ ವೇದ ॥**

"ತದಿದಾಸ" (ಋ-ಸಂ-ಮಂ-೧೦-ಸೂ-೧೨೦ ಋ-೧) ಇತ್ಯಸ್ಯಾಮೃಚಿ ದ್ವಿತೀಯ ಪಾದಾಕ್ಷರ-ಸಂಖ್ಯಾಂ ಪ್ರಶಂಸತಿ—ಶಿರಸಿ ಸಪ್ತಚ್ಛಿದ್ರಾಣಿ, ಅಧೋಭಾಗೇ ದ್ವೇ, ತನ್ನಿಷ್ಪತ್ತ್ಯೇನ ಪ್ರಾಣಾನಾಂ ನವತ್ವಮ್ । ಅನೇನೈವಾಭಿಪ್ರಾಯೇಣ ಶ್ರುತ್ಯಂತರೇ ಪಠ್ಯತೇ—"ಸಪ್ತ ವೈ ಶೀರ್ಷಣ್ಯಾಃ ಪ್ರಾಣಾ ದ್ವಾವವಾಂಚಾವಿತಿ ನವ" (ಇತಿ) ದಶಮಾಕ್ಷರಂ ತಜ್ಜೀವಾತ್ಮಸ್ವರೂಪಮ್ । ಯಥೋಕ್ತನವ ಪ್ರಾಣಾಪೇಕ್ಷಯಾ ದಶಮತ್ವಾತ್) । ಅತೋ ಯಾ ದಶಾಕ್ಷರೋಕ್ತಿಃ ಸೇಯಮಾತ್ಮನಃ ಸಂಸ್ಕೃತಿಃ, ಅತಿಶಯಹೇತುಃ । ಚತುರ್ವಿಧೇಷು ವ್ರತಿಷಿಕ್ತಾರ್ಥೇಷು ಪ್ರತ್ಯಕ್ಷರೋಪಚಯೋ ಸತ್ಯಷ್ಟಾವಷ್ಟಾವಕ್ಷ-ರಾಣ್ಯುದ್ಯಂತೇ, ಅವಶಿಷ್ಟಾನಿ ಶಿಷ್ಯಂತೇ । ತಾನ್ಯೇವಮುಕ್ತಪ್ರಕಾರೇಣ ಯೋ ವೇದ ಸ ಪುಮಾನ್ಯ-ದ್ಯತ್ಕಾಮಯತೇ ತತ್ತತ್ಪ್ರಾಪ್ನೋತಿ ॥

ತದಿದಾಸ ಎಂಬ ಋಕ್ಕಿನ ಎರಡನೇ ಪಾದದಲ್ಲಿರುವ ಅಕ್ಷರ ಸಂಖ್ಯೆಯನ್ನು ವಿವರಿಸುವರು. ಈ ಋಕ್ಕಿನ ಮುಂದಿನ ಎರಡು ಪದಗಳಲ್ಲಿ ಹತ್ತು ಹತ್ತು ಅಕ್ಷರಗಳಿರುವವು. ಈ ಪದಗಳು ಸಸ್ಯಾಹಾರ ಮತ್ತು ಮಾಂಸಾಹಾರ ಪರಿಗ್ರಹಕ್ಕೆ ಯೋಗ್ಯ ವಾಗಿರುವವು ಹೇಗೆಂದರೆ ಶಿರಸ್ಸಿನಲ್ಲಿ ಏಳು ಛಿದ್ರಗಳಿರುವವು. ಅಧೋಭಾಗದಲ್ಲಿ ಎರಡು, ಇವುಗಳ ಜತೆಗೆ ಆತ್ಮವೂ ಸೇರಿದರೆ ಹತ್ತಾಗುವುದು. ಈ ಹತ್ತು ಅಕ್ಷರಗಳು (ಪ್ರಾಣಗಳು) ಜೀವಾತ್ಮಸ್ವರೂಪವಾಗಿರುವವು ಇವುಗಳೆಲ್ಲವನ್ನೂ ಸೇರಿಸಿದರೆ (೧೦+೭+೧=೧೮) ಹದಿನೆಂಟು ಅಕ್ಷರಗಳಾಗುವವು. ಈ ವಿಷಯವನ್ನೆಲ್ಲವನ್ನೂ ತಿಳಿದಿರುವ ಪುರುಷನು ತನ್ನ ಅಭೀಷ್ಟ ಗಳೆಲ್ಲವನ್ನೂ ಪಡೆದು ಸುಖಿಸುವನು.

---

*English Tronslation*

---

1. Ae begins with the hymn, Tad id asa bhuvaneshu gyestham (Rv. X. 120). Verily, gyeshtha, the oldest, is mahat, great. Endowed with mahat the form of this day is perfect.

2. Then follows the hymn, Tam su te kirtim maghavan mahitva (Rv. X. 54), with the auspicious word mahitva.

3. Then follows the hymn, Bhuya id vavridhe viryaya (Rv. VI. 30), with the auspicious word virya.

4. Then follows the hymn, Nrinam u tva nritamam gobhir ukthaih (Rv. I. 51,4), with the auspicious word uktha.

5. He extends the first two padas, which are too small, by one syllable (Rv. X. 120,1 a, and Rv. VIII, 69, 2 a). Into the small stomach food is placed. It serves for the attainment of these desires. He who knows this, obtains these desires.

6. The two feet, each consisting of ten syllables (Rv. X. 120, a, b), serve for the gaining of both kinds of food, of what has feet (animal food), and what has no feet (vegetable food).

7. They come to be of eighteen syllables each. Of those which are ten, nine are the pranas (openings of the body), the tenth is the (vital) self. This is the perfection of the (vital) self. Eight syllables remain in each. He who knows them, obtains whatever he desires.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ತೃತೀಯಾಧ್ಯಾಯೇ ಸಪ್ತಮಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪ್ರಥಮಾರಣ್ಯಕದ
ಮೂರನೆಯ ಅಧ್ಯಾಯದಲ್ಲಿ ಏಳನೆಯ ಖಂಡವು ಸಮಾಪ್ತವು ॥

---

## ಅಥ ಪ್ರಥಮಾರಣ್ಯಕೇ ತೃತೀಯಾಧ್ಯಾಯೇ ಅಷ್ಟಮಃ ಖಂಡಃ

ಪ್ರಥಮಾರಣ್ಯಕದ ಮೂರನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು

---

**ತಾ ನದೇನ ವಿಹರತಿ ಪ್ರಾಣೋ ವೈ ನದಸ್ತಸ್ಮಾತ್ಪ್ರಾಣೋ ನದನ್-ತ್ಸರ್ವಃ ಸಂನದತೀವ, ॥**

'ತದಿದಾಸ' (ಋ. ಸಂ. ಮ. ೧೦ ಸೂ. ೧೨೦ ಋ. ೧) ಇತ್ಯಾದಿ ಸೂಕ್ತಗತಾನಾಮೃಚಾಂ "ನದಂ ವಃ" (ಋ. ಸಂ. ಮ. ೮-ಸೂ. ೬೯. ಋ. ೨) ಇತ್ಯಾದಿ ಕಯಾಸಹ ಯೋ ವ್ಯತಿಷಂಗಃ ಪೂರ್ವಂ (ಐ-ಆ-೧ ಅ-೩ ಖಂ. ೫) ವಿಹಿತಃ



ತಮೇನಂ ವಿಧಿಮನೂದ್ಯ ನದಶಬ್ದಂ ವ್ಯಾಚಷ್ಟೇ—ನದಶಬ್ದವಾನ್ಮಂತ್ರೋ ನದ ಇತ್ಯುಚ್ಯತೇ। ತಾಃ ಸೂಕ್ತಗತಾ ಋಚೋ ನದಶಬ್ದೋಪೇತಮಂತ್ರೇಣ ಸಹ ವಿಹರತಿ ವ್ಯತಿಷಜತಿ। ತಸ್ಮಿನ್ಮಂತ್ರೇ ಯೋ ನದಶಬ್ದ ಸ ಪ್ರಾಣಮಾಚಷ್ಟೇ। ಪ್ರಾಣಸ್ಯ ಕಾಯೋಪೇತತ್ವಾತ್। ಯಸ್ಮಾದೇವಂ ತಸ್ಮಾದಖಿಲೇಷು ದೇಹೇಷ್ವವಸ್ಥಿತಃ ಸರ್ವಃ ಪ್ರಾಣೋ ನದಞಾಬ್ದಂ ಕುರ್ವನ್ಸಂನದತೀವ, ಸುಷುಪ್ತ್ಯಾದೌ ಸಮಾಶ್ವಾಸರೂಪೇಣ ಸಮ್ಯಗ್ಧ್ವನಿಂ ಕರೋತ್ಯೇವ ॥

ಹಿಂದೆ ಎಂದರೆ ಹಿಂದಿನ ಖಂಡದಲ್ಲಿ ತದಿದಾಸ ಎಂಬ ಋಕ್ಕಿಗೂ ನದಂವಃ ಎಂಬ ಋಕ್ಕಿಗೂ ಕಲ್ಪಿಸಬೇಕಾದ ವ್ಯತಿಷಂಗ (ಮಿಶ್ರಣ) ವನ್ನು ವಿವರಿಸಿದ್ದಾಯಿತು. ಈಗ ನದಶಬ್ದವನ್ನು ವಿವರಿಸುವರು- ನದಶಬ್ದಪ್ರಯೋಗವಿರುವ ಮಂತ್ರಕ್ಕೆ ನದವೆಂದು ಹೆಸರು. ಸೂಕ್ತದಲ್ಲಿರುವ ಋಕ್ಕುಗಳು ನದಶಬ್ದಯುಕ್ತವಾದ ಮಂತ್ರದಿರದ ಮಿಶ್ರವಾಗಿರುವವು. ಈ ಮಂತ್ರದಲ್ಲಿರುವ ನದಶಬ್ದಕ್ಕೆ ಪ್ರಾಣವೆಂದರ್ಥವು. ಪ್ರಾಣವು ಯಾವಾಗಲೂ ಶರೀರದಲ್ಲಿರುವ ಪ್ರಾಣವು ಯಾವಾಗಲೂ ನದವನ್ನು ಎಂದರೆ ಧ್ವನಿಯನ್ನು ಅಥವಾ ಶಬ್ದವನ್ನು ಮಾಡುತ್ತಿರುವುದು. ಇದು ಅದರ ಸ್ವಭಾವವು. ಶರೀರವು ನಿದ್ರೆಮಾಡುತ್ತಿರುವಕಾಲದಲ್ಲಿಯೂ ಉಚ್ಛ್ವಾಸ ನಿಃಶ್ವಾಸರೂಪವಾದ ಶಬ್ದವನ್ನು ಮಾಡುತ್ತಿರುವುದು.

**ನದಂ ವ ಓದತೀನಾಮಿತೀ ೩ ಉಷ್ಣಿಗಕ್ಷರೈರ್ಭವತ್ಯನುಷ್ಟುಪ್ಪಾದೈರಾಯುರ್ವಾ ಉಷ್ಣಿಗ್ವಾಗನುಷ್ಟುಪ್ತದಸ್ಮಿನ್ನಾಯುಶ್ಚ ವಾಚಂ ಚ ದಧಾತಿ॥**

ನದ ಶಬ್ದೋಪೇತಸ್ಯ ಮಂತ್ರಸ್ಯಾಕ್ಷರಾಣಿ ಪಾದಾಂಶ್ಚ ಪ್ರಶಂಸತಿ—ನದಂ ವ ಇತ್ಯಸ್ಯಾ ಋತಶ್ಚತ್ವಾರೋಽಪಿ ಪಾದಾಃ ಪ್ರತ್ಯೇಕಂ ಸಮಾಕ್ಷರಾಃ। ತೃತೀಯೇ ಪಾದೇಽಘ್ನಿಯಾ ಇತ್ಯತ್ರ ಪಕಾರಾದಿಃ ಪೃಥಗಕ್ಷರತ್ವೇನ ಗಣನೀಯಃ। ತಥಾ ಸತ್ಯಷ್ಟಾವಿಂಶತ್ಯಕ್ಷರೋಷ್ಣಿಕ್ ಸಂಪದ್ಯತೇ। ಪಾದಸಂಖ್ಯಯಾ ತ್ವಿಯ ಮನುಷ್ಟುಪ್। ಚತ್ವಾರೋ ಹ್ಯತ್ರ ಪಾದಾಃ ಪಠ್ಯಂತೇ। ಉಷ್ಣಿಹಸ್ತು ತ್ರಯ ಏವ ಪಾದಾಃ। ಏವಮುಕ್ಷರೈಃ ಪಾದೈಶ್ಚ ಛಂದೋದ್ವಯಸಂಪತ್ತಿಃ। ಅತ್ರೋಷ್ಣಿಹ ಆಯುರ್ಹೇತುತ್ವಾದನುಷ್ಟುಭೋ ವಾಗ್ವಿಷಯತ್ವಾಚ್ಚ ದ್ವ್ಯಾತ್ಮಕಸ್ಯ ತಸ್ಯ ಪಾಠೇನಾಸ್ಮಿನ್ಯಜಮಾನ ಆಯುರ್ವಾಚಂ ಚ ಸಂಪಾದಯತಿ।

ನದಶಬ್ದೋಪೇತವಾದ ಮಂತ್ರದಲ್ಲಿರುವ ಅಕ್ಷರಗಳನ್ನೂ ಪಾದಗಳನ್ನೂ ವಿವರಿಸುವರು. **ನದಂ ವಾ** ಎಂಬ ಋಕ್ಕಿನ ನಾಲ್ಕುಪಾದಗಳಲ್ಲಿ ಪ್ರತಿಯೊಂದರಲ್ಲಿಯೂ ಏಳು ಅಕ್ಷರಗಳಿರುವವು. ಮೂರನೇ ಪಾದದಲ್ಲಿ (ಏಘ್ನಿಯಾ) ಎಂಬಲ್ಲಿ ಏ ಎಂಬ ಅವಗ್ರಹ ಚಿಹ್ನವು ಅ ಎಂಬ ಅಕ್ಷರದ ಸಂಕೇತವಾಗಿರುವುದರಿಂದ ಎಂದರೆ ಏಘ್ನಿಯಾ ಅಘ್ನಿಯಾ ಎಂದಿರುವುದರಿಂದ ಏ ಎಂಬುದೂ ಒಂದು ಅಕ್ಷರವೆಂದೇ ಭಾವಿಸಲ್ಪಟ್ಟಿರುವುದು. ಹೀಗಿರುವುದರಿಂದ ಈ ಋಕ್ಕು ಹದಿನೆಂಟು ಅಕ್ಷರಗಳ ಉಷ್ಣಿಕ್ ಛಂದಸ್ಸೆಂದು ಪರಿಗಣಿಸಬೇಕು. ಪಾದಸಂಖ್ಯೆಯ ಪ್ರಕಾರ ಇದ ಅನುಷ್ಟುಪ್ ಛಂದಸ್ಸಿನಲ್ಲಿ ನಾಲ್ಕುಪಾದಗಳೂ ಉಷ್ಣಿಕ್ ಛಂದಸ್ಸಿನಲ್ಲಿ ಮೂರು ಪಾದಗಳೂ ಇರುವವು. ಅಕ್ಷರಸಂಖ್ಯೆಯಿಂದ ಮತ್ತು ಪಾದಸಂಖ್ಯೆಯಿಂದ ಈ ಋಕ್ಕು ಎರಡುವಿಧವಾದ ಛಂದಸ್ಸುಗಳಿಂದ ಕೂಡಿರುವುದು. ಉಷ್ಣಿಕ್ಛಂದಸ್ಸಿಗೆ ಆಯುರ್ವೃದ್ಧಿಯನ್ನುಂಟುಮಾಡುವುದೂ ಅನುಷ್ಟುಪ್ ಛಂದಸ್ಸಿಗೆ ವಾಕ್ಸಂಪತ್ತನ್ನುಂಟುಮಾಡುವುದೂ ಸ್ವಾಭಾವವು. ಆದ್ದರಿಂದ ಈ ಋಕ್ಕನ್ನು ಪಠಿಸುವುದರಿಂದ ಯಜಮಾನನಿಗೆ ಆಯುಸ್ಸು ಮತ್ತು ವಾಕ್ಸಂಪತ್ತಿಯೂ ಅಭಿವೃದ್ಧಿಯಾಗುವವು.

ತಾಸ್ತ್ರಿಃ ಪ್ರಥಮಯಾ ಪಂಚವಿಂಶತಿರ್ಭವಂತಿ ಪಂಚವಿಂಶ ಆತ್ಮಾ ಪಂಚವಿಂಶಃ ಪ್ರಜಾಪತಿರ್ದಶ ಹಸ್ತ್ಯಾ ಅಂಗುಲಯೋ ದಶ ಪಾದ್ಯಾ ದ್ವಾ ಉರೂ ದ್ವೌ ಬಾಹೂ ಆತ್ಮೈವ ಪಂಚವಿಂಶ ಸ್ತಮಿಮಮಾತ್ಮಾನಂ ಪಂಚವಿಂಶಂ ಸಂಸ್ಕುರುತೇಽಥೋ ಪಂಚವಿಂಶಂ ವಾ ಏತದಹಃ ಪಂಚವಿಂಶ ಏತಸ್ಯಾಹ್ನಃ ಸ್ತೋಮಸ್ತತ್ಸಮೇನ ಸಮಂ ಪ್ರತಿಪದ್ಯತೇ ತಸ್ಮಾದ್ವೇ ಏವ ಪಂಚವಿಂಶತಿರ್ಭವಂತೀತ್ಯಧ್ಯಾತ್ಮಂ ಪಂಚವಿಂಶಃ, ಇತಿ ||

ಅಸ್ಯಾ ನದವತ್ಯಾ ಋಚೋಽಹಃ ಸೂಕ್ತತ್ರಯೇ ತೃಚೇ ಪ್ರತ್ಯೃಚಂ ವ್ಯತಿಷಂಗೇ ಸತಿ ವಾ ಪ್ರಥಮಾಽಽವೃತ್ತಿಃ ಸಂಪದ್ಯತೇ । "ತದಿದಾಸ" (ಋ. ಸ. ಮಂ. ೧೨೦ ಋ. ೧) ಇತ್ಯನಯಾ ಪ್ರಥಮಯಾ ಸಹ ವ್ಯತಿಷಿಕ್ತಾಯಾ ಸದವತ್ಯಾಸ್ತ್ರಿರಾವೃತ್ತ್ಯಾ ಸಶ್ಯಂ ಮಿಲಿತ್ವಾ ಪಂಚವಿಂಶತಿಸಂಖ್ಯಾ ಸಂಪದ್ಯತೇ । ತಾಮೇತಾಂ ನದವತ್ಯಾಃ ಸಂಖ್ಯಾಮ್ಯುಗಕ್ಷರ ಸಂಖ್ಯಾವತ್ ಪ್ರಶಂಸತಿ—ಪಂಚವಿಂಶತಿರ್ಭವಂತೀತ್ಯಂತಂ ಪೂರ್ವವತ್ (ಐ-ಆ-೧-ಅ-೩-ಖಂ.೫) ವ್ಯಾಖ್ಯೇಯಮ್ । ಅತ್ರಾಧ್ಯಾತ್ಮಮಧಿದೈವತಂ ಚೇತ್ಯುಭಯತಾ ಸಂಖ್ಯಾ ಪ್ರಶಸ್ಯತೇ । ತತ್ರ ಹಸ್ತಪಾದಾದಿಗಣನಯಾ ಯೋಽಸಂ ಪಂಚವಿಂಶತ್ಯವಯವಸಮೂಹೋಽಭಿಹಿತಃ ಸೋಽಯಮಧ್ಯಾತ್ಮಂ ದ್ರಷ್ಟವ್ಯಃ। ಆತ್ಮಾನಂ ಯಜಮಾನಸ್ಯ ದೇಹೇಂದ್ರಿಯಾದಿ ಸಂಘಾತಮಧಿಕೃತ್ಯ ವರ್ತತ ಇತ್ಯಧ್ಯಾತ್ಮಮ್ ||

ನದಶಬ್ದೋಪೇತವಾದ ಋಕ್ಕು ಈ ದಿನದ ಮೂರುಸೂಕ್ತಗಳಲ್ಲಿಯೂ ತೃಜ (ಮೂರು ಋಕ್ಕುಗಳು) ದಲ್ಲಿಯೂ ಮಿಶ್ರಿತವಾಗಿ ಪ್ರಥಮಾವೃತ್ತಿಯಲ್ಲಿ ಪಠಿತವಾಗುತ್ತದೆ. ತದಿದಾಸ ಎಂಬ ಋಕ್ಕು ನದಶಬ್ದೋಪೇತವಾದ ಋಕ್ಕು ಮೂರಾವೃತ್ತಿಯಲ್ಲಿ ಮಿಶ್ರಿತವಾಗಿ ಇಪ್ಪತ್ತೈದು ಋಕ್ಕುಗಳುಂಟಾಗುವವು. ಈ ಮಿಶ್ರಿತ ಋಕ್ಕನ್ನು ಅಕ್ಷರಸಂಖ್ಯೆಗೆ ಅನುಸಾರವಾಗಿ ಪ್ರಶಂಸಿಸಲಾಗುವುದು. ಇದನ್ನು ಅಧ್ಯಾತ್ಮ ಮತ್ತು ಅಧಿದೈವತೆಯ (ಪ್ರಜಾಪತಿಯ) ವಿಷಯದಲ್ಲಿ ಹಸ್ತಗಳಲ್ಲಿರುವ ಬೆರಳುಗಳು ಹತ್ತು ಪಾದಗಳಲ್ಲಿರುವ ಬೆರಳುಗಳು ಹತ್ತು, ಎರಡು ಪಾದಗಳು, ಎರಡು ಹಸ್ತಗಳು, ಆತ್ಮ ಇವೆಲ್ಲವೂ ಸೇರಿದರೆ ಇಪ್ಪತ್ತೈದು ಅಂಗಗಳಾಗುವವು. ಈ ಯಜ್ಞದಲ್ಲಿ ಈ ದಿನವೂ ಇಪ್ಪತ್ತೈದನೆಯ ದಿನವು ಈ ದಿನದಲ್ಲಿ ಪಠಿಸುವ ಸ್ತೋಮಗಳೂ ಇಪ್ಪತ್ತೈದು. ಇವೆಲ್ಲದರ ಸಂಖ್ಯೆಯೂ ಇಪ್ಪತ್ತೈದೇ ಆಗುವವು. ಆದ್ದರಿಂದ ಈ ಎರಡು ವಿಧಗಳೂ ಎಂದರೆ ಅಧ್ಯಾತ್ಮ ಮತ್ತು ಅಧಿದೈವತಗಳೆಂಬ ಎರಡು ವಿಧವೂ ಒಂದೇರೀತಿಯಾಗಿರುವವು.

ಅಥಾಧಿದೈವತಂ ಚಕ್ಷುಃ ಶ್ರೋತ್ರಂ ಮನೋ ವಾಕ್ಪ್ರಾಣಸ್ತಾ ಏತಾಃ ಪಂಚ ದೇವತಾ ಇಮಂ ವಿಷ್ಟಾಃ ಪುರುಷಂ ಪಂಚೋ ಹ್ಯೇವೈತಾ ದೇವತಾ ಅಯಂ ವಿಷ್ಟಃ ಪುರುಷಃ ಸೋಽತ್ರಾಽಽ ಲೋಮಭ್ಯ ಆ ನಖೇಭ್ಯಃ ಸರ್ವಃ ಸಾಂಗ ಆಪ್ಯತೇ ತಸ್ಮಾತ್ಸರ್ವಾಣಿ ಭೂತಾನ್ಯಾ ಪಿಪೀಲಿಕಾಭ್ಯ ಆಪ್ತಾನ್ಯೇವ ಜಾಯಂತೇ, ಇತಿ ||

**ಯದ್ಯಪಿ ಪಂಚವಿಂಶಃ ಪ್ರಜಾಪತಿರಿತ್ಯುಕ್ತತ್ವಾದಧಿದೈವತಪ್ರಶಂಸಾಪಿ ಕೃತೈವ ತಥಾಪಿ ಪ್ರಕಾರಾಂತರೇಣ ಪುನಃ ಪ್ರಶಂಸತಿ—ಅಥ ಮನುಷ್ಯಶರೀರಗತಪಂಚವಿಂಶತಿಸಂಖ್ಯಾಪ್ರಶಂಸಾನಂತರಮ್ । ಅಧಿದೈವತಂ ದೇವತಾಶರೀರಗತಾ ಪಂಚವಿಂಶತ್ಯಂತರ್ಭೂತಾ ಪಂಚಸಂಖ್ಯಾ ಪ್ರಶಸ್ಯತೇ । ತದ್ಯಥಾ—ಚಕ್ಷುರಾದಯಃ ಪ್ರಾಣಾಂತಾ ಏತಚ್ಛಬ್ದಾಭಿಧೇಯಾ ಯಾದೇವತಾಃ ಸಂತಿ ತಾ ಏತಾ ದೇವತಾಃ ಪಂಚಸಂಖ್ಯಾಕಾ ಇಮಂ ಪುರುಷಂ ಮನುಷ್ಯದೇಹಂ ಪ್ರವಿಷ್ಟಾಃ । ತಥಾ ಚೋಪರಿಷ್ಟಾದಾಮ್ನಾಯತೇ—"ಆದಿತ್ಯಶ್ಚಕ್ಷುರ್ಭೂತ್ವಾ ಅಕ್ಷಿಣೀ ಪ್ರಾವಿಶತ್, ದಿಶಃ ಶ್ರೋತ್ರಂ ಭೂತ್ವಾ ಕರ್ಣೌ ಪ್ರಾವಿಶನ್" (ಐ-ಆ-೨-ಅ-೪-ಖ-೨) ಇತ್ಯಾದಿನಾ । ಯಥಾ ದೇವತಾಃ ಪುರುಷಶರೀರಂ ಪ್ರವಿಷ್ಟಾಸ್ತಥಾಯಂ ಪುರುಷಃ ಪಂಚಾಪ್ಯೇತಾ ದೇವತಾಃ ಪ್ರಾವಿಶತ್ ಏವಮುತ್ರಾನ್ಯೋನ್ಯಪ್ರವೇಶೋ ನಾಮ ತಾದಾತ್ಮ್ಯಾಪತ್ತಿಃ । ಸೈವ ವಿಸ್ಪಷ್ಟೀಕ್ರಿಯತೇ—ಸ ಪುರುಷೋ ದೇವತಾಭಿಃ ಪ್ರವಿಷ್ಟಃ ಸ್ವಯಂ ಚ ದೇವತಾಃ ಪ್ರವಿಶ್ಯಾತ್ರಾಸ್ಮಿನ್ ಶರೀರೇ ಲೋಕವರ್ಷತನ್ನಾಶಪರ್ಯಂತಂ ಚ ಸರ್ವೋಽಪಿ ಸಾಂಗಃ ಸಂಪೂರ್ಣಾವಯವ ಆಸ್ಯತೇ ಪಾಪ್ತೋ ದೃಶ್ಯತೇ । ಯಸ್ಮಾದೇವಂ ಚಕ್ಷುರಾದ್ಯಭಿಮಾನಿದೇವತಾನಾಮಾದಿತ್ಯಾದೀನಾಂ ದೇಹಸ್ಯ ಚ ಪರಸ್ಪರತಾದಾತ್ಮ್ಯಂ ತಸ್ಮಾತ್ಪಿಪೀಲಿಕಾಪರ್ಯಂತಂ ಸರ್ವೇ ಪ್ರಾಣಾಶ್ಚಕ್ಷುರಾದೀಂದ್ರಿಯೈಸ್ತತ್ತದ್ಗೋಲಕೈಶ್ಚ ಸಂಪೂರ್ಣಾ ಏವ ಜಾಯಂತೇ। ಅನಯಾ ದೇವತಾಗತಪಂಚಸಂಖ್ಯಾರೂಪವಯುಪ್ರಶಂಸಾಯಾಸ್ತ (ಸಯಾ ತ) ದವಯವಿರೂಪಾ ಪಂಚವಿಂಶತಿಸಂಖ್ಯಾ ಪ್ರಶಸ್ತಾ ವೇದಿತವ್ಯಾ ॥**

ಮೇಲೆ ಹೇಳಿದ ವಿಷಯವನ್ನು ಪ್ರಕಾರಾಂತವಾಗಿ ವಿವರಿಸುವರು. ಅಧಿದೈವತೆಯಾದ ಪ್ರಜಾಪತಿಯ ವಿಷಯದಲ್ಲಿ ಚಕ್ಷು(ಕಣ್ಣು ಗಳು) ರಭಿಮಾನಿದೇವತೆಗಳು ಶ್ರೋತ್ರಾ(ಕಿವಿ)ಭಿಮಾನಿದೇವತೆಗಳು, ಮನೋಭಿಮಾನಿದೇವತೆಯು, ವಾಗಭಿಮಾನಿ ದೇವತೆಯು ಪ್ರಾಣಾಭಿಮಾನದೇವತೆಯು ಈ ಐವರೂ ಪುರುಷನ ಶರೀರದ ಐದು ಅವಯವಗಳನ್ನು ಪ್ರವೇಶಿಸಿ ಅಲ್ಲಿಯೇ ಅಧಿಷ್ಠಿತರಾಗಿರುವರು. ಎಂದರೆ ಈ ದೇವತೆಗಳು ಪುರುಷಶರೀರದ ಒಂದು ಭಾಗದಲ್ಲಿ ಮಾತ್ರ ನೆಲೆಸಿರುವುದಿಲ್ಲ. ಆದರೆ ನಖ(ಉಗುರು) ಲೋಮ (ಕೂದಲು) ಗಳಲ್ಲಿಯೂ ಸಹ ಶರೀರದ ಸಮಸ್ತಭಾಗದಲ್ಲಿಯೂ ಆವರಿಸಿ ನೆಲೆಸಿ ತನ್ನ ಕಾರ್ಯಗಳನ್ನು ನೆರವೇರಿಸುತ್ತಿರುವರು. ಮುಂದೆ (ಐ-ಆ-೨-೪೨) ಹೇಳುವಂತೆ **ಆದಿತ್ಯಶ್ಚಕ್ಷುರ್ಭೂತ್ವಾ ಅಕ್ಷಿಣೀ ಪ್ರಾವಿಶತ್ । ದಿಶಃ ಶ್ರೋತ್ರಂ ಭೂತ್ವಾ ಕರ್ಣಾ ಪ್ರಾವಿಶತ್** ಇರುವುದು. ಎಂದರೆ ಆದಿತ್ಯನು(ಸೂರ್ಯನು) ಚಕ್ಷುರಭಿಮಾನಿ ದೇವತೆಯಾಗಿ ಪುರುಷನ ಎರಡು ಕಣ್ಣುಗಳನ್ನೂ ಪ್ರವೇಶಿಸಿ ಅಲ್ಲಿಯೇ ನೆಲೆಸಿದನು; ದಿಕ್ಕುಗಳು ಅಥವಾ ದಿಗಭಿಮಾನಿ ದೇವತೆಗಳು ಕಿವಿಗಳಿಗೆ ಅಭಿಮಾನಿದೇವತೆಗಳಾಗಿ ಕಿವಿಗಳನ್ನು ಪ್ರವೇಶಿಸಿದರು. ಇತ್ಯಾದಿ ಈ ಐದುಸಂಖ್ಯೆಯ ಆದಿತ್ಯಾದಿ ದೇವತೆಗಳು ಪುರುಷ ಶರೀರವನ್ನು ಪ್ರವೇಶಿಸಿ ಆ ಶರೀರವು ನಾಶವಾಗುವವರೆಗೂ ಅಲ್ಲಿಯೇ ಪರಸ್ಪರ ಸಹಕಾರದಿಂದ ವರ್ತಿಸುತ್ತಿರುವರು. ಈ ವಿಧಕಾರ್ಯವು ಪುರುಷನ ಶರೀರದಲ್ಲಿ ಮಾತ್ರವೇ ಅಲ್ಲ ಇರುವೆ ಮೊದಲುಗೊಂಡ ಸಣ್ಣದಾದ ಮತ್ತು ದೊಡ್ಡದಾದ ಸಮಸ್ತ ಪ್ರಾಣಿಗಳ ಶರೀರದಲ್ಲಿಯೂ ಸದಾಕಾಲದಲ್ಲಿಯೂ (ಶರೀರನಾಶಪರ್ಯಂತರ) ನಡೆದು ಬರುತ್ತಿರುವುದು. ಈ ಐದು ಅವಯವಗಳಂತೆ ಉಳಿದ ಅವಯಗಳಲ್ಲಿಯೂ ಇರುವುದರಿಂದ ಒಟ್ಟು ಈ ಇಪ್ಪತ್ತೈದು ಎಂಬ ಸಂಖ್ಯೆಯು ಪ್ರಶಸ್ತವೆನಿಸುವುದು.

**ತದುಕ್ತಮೃಷಿಣಾ, ॥ ಇತಿ ॥**

ಬ್ರಾಹ್ಮಣೋಕ್ತೇಽರ್ಥೇ ಸಂಪಾ (ವಾ) ದಕಮಂತ್ರಮುದಾಹರತಿ—ಚಕ್ಷುರಾದ್ಯಭಿಮಾನಿ-ದೇವತಾನಾಂ ತತ್ತದಿಂದ್ರಿಯದ್ವಾರಾ ದೇಹಪ್ರವೇಶಾದ್ದೇಹಸ್ಯ ಚ ತಾಭಿಸ್ತೈರಿಂದ್ರಿಯೈಸ್ತಾದಾತ್ಮ್ಯ-ಪತ್ತೇಃಶ್ಚ ಪಿಪೀಲಿಕಾಂತಾಃ ಸರ್ವೇ ಪ್ರಾಣಿನಃ ಸಂಪೂರ್ಣಾ ಉತ್ಪದ್ಯಂತ ಇತಿ ಯದ್ಬ್ರಾಹ್ಮಣೇನೋಕ್ತಂ ತದೇವರ್ಷಿಣಾ ಸಹಸ್ರಧೇತ್ಯಾದಿನಾ ಮಂತ್ರೇಣಾಪ್ಯುಕ್ತಮ್ ॥

ಸೋಽಯಂ ಮಂತ್ರಃ ಸಂಹಿತಾಯಾಮೇವಂ ಸಮಾಮ್ನಾಯತೇ—

ಸಹಸ್ರಧಾ ಪಂಚದಶಾನ್ಯುಕ್ಥಾ ಯಾವದ್ದ್ಯಾವಾಪೃಥಿವೀ ತಾವದಿತ್ತತ್ ॥
ಸಹಸ್ರಧಾ ಮಹಿಮಾನಃ ಸಹಸ್ರಂ ಯಾವದ್ಬ್ರಹ್ಮ ವಿಷ್ಠಿತಂ ತಾವತೀ ವಾಕ್, ॥
(ಋ-ಸಂ-ಮಂ-೧೦-ಸೂ-೧೧೪-ಋ. ೮)

ಅಸ್ಯಾಯಮರ್ಥಃ—ಸಹಸ್ರಧಾ ಸಹಸ್ರಸಂಖ್ಯಾಕೇಷು ಬ್ರಹ್ಮಾದಿಪಿಪೀಲಿಕಾಂತೇಷು ದೇಹೇಷು ಪಂಚದಶಸಂಖ್ಯಾಕಾನ್ಯುಕ್ಥೋಽತ್ಕೃಷ್ಟಾನಿ ವಿದ್ಯಂತ ಇತಿ ಶೇಷಃ । ಚಕ್ಷುಃ ಶ್ರೋತ್ರಂ ಮನೋ ವಾಕ್‌ಪ್ರಾಣ ಇತ್ಯೇತತ್ಪಂಚಕಂ ತಥಾರತ್ವೇನ ಮಾತಾಪಿತ್ರೋಃ ಸಕಾಶಾದುದ್ಗತಾನಿ ಪೃಥಿವ್ಯಪ್ತೇಜೋವಾಯ್ವಾಕಾಶರೂಪಾಣಿ ಭೂತಾನಿ ಮಾತೃಸಂಬಂಧೀನಿ ಪಿತೃಸಂಬಂಧೀನಿ ಮಿಲಿತ್ವಾ ದಶ ಸಂಪದ್ಯಂತೇ, ಚಕ್ಷುರಾಧಿಪಂಚಕಂ ಚೇತ್ಯೇವಂ ಪಂಚದಶಾಂಗನ್ಯುತ್ಕೃಷ್ಟಾನಿ । ಇತ್ಥಂ ಪ್ರಾಣಿ-ದೇಹೇಷೂಪಪನ್ನೇಷು ದೇಹೇಷು (ದ್ಯಾವಾಪೃಥ್ವ್ಯೋರ್ಯತ್ಪರಿಮಾಣಕಮೇವ (ಣಂ ವಿದ್ಯತೇ) ತತ್ಪ್ರಮಾಣೇ (ಣಂ) ದೇಹಜಾತೇ (ತಂ) ಸಂಪನ್ನಮ್ । ಸಹಸ್ರಧಾ ಸಹಸ್ರಸಂಖ್ಯಾಕೇಷು ದೇಹೇಷು ಸಹಸ್ರಂ ಮಹಿಮಾನಃ ಸಹಸ್ರಸಂಖ್ಯಾಕಾ ಮಹಾಂತೋ ವ್ಯವಹಾರ ವಿಶೇಷಾ ದೃಶ್ಯಂತೇ । ಪ್ರತಿವಿಷಯಂ ಪ್ರತಿಕ್ಷಣಂ ದರ್ಶನಶ್ರವಣಾದಿ ವ್ಯವಹಾರಾಣಾಂ ನಿಷ್ಪತ್ತೇಃ । ಬ್ರಹ್ಮ ಜಗತ್ಕಾರಣಂ ಸತ್ಯಜ್ಞಾನಾದಿರೂಪಂ ವಸ್ತು ತಸ್ತು (ತ್ತು) ನಾನಾವಿಧಪ್ರಾಣಿರೂಪದೇಹೇಣ ಯಾವ-ದಭಿಧೇಯಂ ಭೂತ್ವಾ ವಿಶೇಷೇಣ ಸ್ಥಿತಂ ತಾವತೀ ತತ್ಪರಿಮಾಣಾ ವಾಗ್ಭವತಿ । ಏಕೈಕಸ್ಯಾಭಿಧೇ-ಯಾರ್ಥಸ್ಯೈಕೈಕನಾಮಾಪೇಕ್ಷಣಾತ್ । ಅತ ಏವಾ (ನ್ಯ) ತ್ರ ಶ್ರೂಯತೇ—"ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ ನಾಮಾನಿ ಕೃತ್ವಾಽಭಿವದನ್ಯದಾಸ್ತೇ" (ತೈ-ಆ-ಪ್ರ ೩-೮-೧೨) ಇತಿ ॥

ಈ ಅರಣ್ಯಕ ಗ್ರಂಥದಲ್ಲಿ ಹೇಳಿರುವ ಮೇಲಿನ ವಿಷಯವಾಗಿ ಓರ್ವ ಋಷಿಯೂ ಮಂತ್ರದಲ್ಲಿ ಹೀಗೆ ಹೇಳಿರುವನು. ಚಕ್ಷುರಾದ್ಯಭಿಮಾನಿದೇವತೆಗಳು ಪ್ರಾಣಿಗಳ ದೇಹದಲ್ಲಿ ತನುವಿಗೆ ಸಂಬಂಧಪಟ್ಟ ಅವಯವಗಳನ್ನು ಪ್ರವೇಶಿಸುವುದರಿಂದ (ಜನನಕಾಲದಲ್ಲಿ) ಇರುವೆ ಮೊದಲಾದ ಸಮಸ್ತ ಪ್ರಾಣಿಗಳೂ ಜನಿಸುವಾಗಲೇ ಪೂರ್ಣಾವಯವಗಳಿಂದ ಸಹಿತವಾಗಿ ಹುಟ್ಟುವವು. ಈ ವಿಷಯವು ಸಂಹಿತೆಯ ಕೆಳಗಿನ ಮಂತ್ರದಲ್ಲಿ ಋಷಿಯಿಂದ ಹೇಳಲ್ಪಟ್ಟಿರುವುದು. ಈ ಋಕ್ಕು ಈ ರೀತಿ ಇರುವುದು.

ಸಹಸ್ರಧಾ ಪಂಚದಶಾನ್ಯುಕ್ಥಾ ಯಾವದ್ದ್ಯಾವಾಪೃಥಿವೀ ತಾವದಿತ್ತತ್ ।
ಸಹಸ್ರಧಾ ಮಹಿಮಾನಃ ಸಹಸ್ರಂ ಯಾವದ್ಬ್ರಹ್ಮ ವಿಷ್ಠಿತಂ ತಾವತೀ ವಾಕ್ ॥
(ಋ. ಸಂ. ೧೦-೧೧೪-೮)

ಇದರ ಅರ್ಥವು—ಸಹಸ್ರ(ಅಪರಿಮಿತ) ಸಂಖ್ಯಾಕವಾದ ಬ್ರಹ್ಮಾದಿ ಪಿಪೀಲಿಕಾ ಪ್ರಾಣಿಗಳ ಶರೀರಗಳಲ್ಲಿ ಹದಿನೈದು ಉತ್ಕೃಷ್ಟವಾದ ಅಂಗಗಳಿರುವವು. ಅವುಗಳು ಯಾವವೆಂದರೆ, ಚಕ್ಷುಃ ಶ್ರೋತ್ರ ಮನಸ್ಸು ವಾಕ್ ಮತ್ತು ಪ್ರಾಣಗಳೆಂಬ

ಐದು ಮುಖ್ಯಾಂಗಗಳು. ಇವುಗಳ ಆಧಾರದ ಮೇಲೆ ಪೃಥಿವ್ಯಪ್ ತೇಜೋವಾಯ್ವಾಕಾಶ ಎಂಬ ಪಂಚಭೂತಾತ್ಮಕವಾದ ಐದು ಅಂಗಗಳು ಮಾತೃಸಂಬಂಧವಾದವು ಐದು. ಇವೆಲ್ಲವೂ ಸೇರಿದರೆ ಹದಿನೈದು ಮುಖ್ಯಾಂಗಗಳಿರುವವು. ಸಹಸ್ರ (ಅಪರಿಮಿತ) ಸಂಖ್ಯಾಕವಾದ ಪ್ರಾಣಿಗಳಲ್ಲಿ ಅನೇಕವಿಧವಾದ ಮಹಿಮೆಗಳು ಎಂದರೆ ವ್ಯವಹಾರಗಳು ಕಾಣಲ್ಪಡುತ್ತವೆ. ಈ ವ್ಯವಹಾರಗಳು ಈ ಪ್ರಾಣಿಗಳಲ್ಲಿ (ನೋಡುವುದು, ಕೇಳುವುದು) ಇತ್ಯಾದಿವ್ಯವಹಾರಗಳು ಪ್ರತಿಕ್ಷಣವೂ ಪ್ರತಿ ಪ್ರಾಣಿಯಲ್ಲಿಯೂ ಕಂಡುಬರುವವು. ಇವೆಲ್ಲಕ್ಕೂ ಸತ್ಯಜ್ಞಾನಾನಂದರೂಪನೂ, ಜಗತ್ಕಾರಣನೂ ಆದ ಬ್ರಹ್ಮವಸ್ತುವೇ ಕಾರಣವು. ಎಂದರೆ ಪರಬ್ರಹ್ಮನು ನಾನಾವಿಧಪ್ರಾಣಿಗಳ ರೂಪಗಳಿಂದ ಈ ವ್ಯವಹಾರವೆಲ್ಲವನ್ನೂ ನಡೆಸುತ್ತಿರುವನು. ಈ ವಿಷಯವು ತೈತ್ತಿರೀಯ ಆರಣ್ಯಕ್ಯದಲ್ಲಿ ಈ ರೀತಿ ಹೇಳಲ್ಪಟ್ಟಿದೆ.

**॥ ಸರ್ವಾಣಿ ರೂಪಾಣಿ ವಿಚಿತ್ಯಧೀರೋ ನಾಮಾನಿ ಕೃತ್ವಾಭಿವದನ್ಯದಾಸ್ತೇ ॥**

(ತೈ-೩-೧೨)

## ಸಹಸ್ರಧಾ ಪಂಚದಶಾನ್ಯುಕ್ಥೇತಿ ಪಂಚ ಹಿ ದಶತೋ ಭವಂತಿ, ಇತಿ॥

**ತಸ್ಯೈತಸ್ಯ ವ್ಯಾಖ್ಯಾತಸ್ಯ ಮಂತ್ರಸ್ಯ ಪ್ರಥಮಪಾದಂ ವ್ಯಾಚಷ್ಟೇ–ಚಕ್ಷುರಾದೀನಿ ಪಂಚಾऽऽ-ಕಾಶಾಧೀನಿ ಮಾತೃಪಿತೃಸಂಬಂಧೀನಿ ಭೂತ್ವಾ ದಶಕಾತ್ಸಂ ಪೂರ್ಣದೇಹರೂಪೇಣ ನಿಷ್ಪದ್ಯಂತೇ॥**

ಇದುವರೆಗೆ ವಿವರಿಸಿದ ಮೇಲಿನ ಋಕ್ಕಿನ ಪ್ರಥಮಪಾದವನ್ನು ತಿಳಿಸುವರು. ಇಲ್ಲಿ **ಪಂಚದಶಾನ್ಯುಕ್ಥಾನಿ—** ಹದಿನೈದು ಉತ್ಕೃಷ್ಟವಾದ ಅಂಗಗಳು ಎಂದು ಹೇಳಿರುವುದರಿಂದ ಚಕ್ಷುರಾದಿ ಪಂಚೇಂದ್ರಿಯಗಳು ಇವುಗಳ ಸಂಬಂಧವಾದ ಪಂಚಭೂತಾತ್ಮಕವಾದ (ಎಂದರೆ ಪೃಥವ್ಯಪ್ತೇಜೋವಾಯ್ವಾಕಾಶ) ಐದು ಮಾತೃಸಂಬಂಧವಾದ ಅಂಗಗಳು, ಐದು ಪಿತೃ ಸಂಬಂಧವಾದ ಅಂಗಗಳೂ ಸೇರಿ ಹದಿನೈದು ಉತ್ಕೃಷ್ಟವಾದ ಎಂದರೆ ಮುಖ್ಯವಾದ ಅಂಗಗಳು ಸೇರಿ ದೇಹವೆಂದು ವ್ಯವಹರಿಸಲ್ಪಡುವುದು.

## ಸಹಸ್ರಧಾ ಮಹಿಮಾನಃ ಸಹಸ್ರಮಿತ್ಯುಕ್ಥಾನ್ಯೇವ ತದನು ಮದತಿ ಮಹಯತಿ ॥

**ದ್ವಿತೀಯಪಾದಂ ವ್ಯಾಚಷ್ಟೇ—ಆತ್ಮಾ ದೇಹವಿಶಿಷ್ಟೋ ಜೀವಾತ್ಮಾ । ದ್ಯಾವಾಪೃಥಿವ್ಯೋ-ರ್ಲೋಕಯೋರ್ಜೀವದೇಹೇ ಪೂರ್ಣತ್ವಾದಾತ್ಮನಸ್ತತ್ಸಮಾನಪರಿಮಾಣತ್ವಂ ದ್ರಷ್ಟವ್ಯಮ್ ॥**

ಈ ಋಕ್ಕಿನ ಎರಡನೇ ಪಾದವನ್ನು ವಿವರಿಸುವರು. **ಯಾವದ್ದ್ಯಾವಾ ಪೃಥಿವೀ ತಾವದಿತ್ತತ್** ಈ ಪುರುಷನ ದೇಹದಲ್ಲಿ ವ್ಯಾಪಿಸಿರುವ ಆತ್ಮವು ದ್ಯಾವಾ ಪೃಥಿವಿಗಳಂತೆ (ಸ್ವರ್ಗಲೋಕ ಭೂಲೋಕಗಳಂತೆ) ಅತ್ಯಂತ ದೊಡ್ಡದೂ ವಿಸ್ತಾರವಾದುದೂ ಆಗಿರುವುದು.

## ಯಾವದ್ದ್ಯಾವಾಪೃಥಿವೀ ತಾವದಿತ್ತದಿತಿ ಯಾವತೀ ವೈ ದ್ಯಾವಾ-ಪೃಥಿವೀ ತಾವಾನಾತ್ಮಾ ॥

ತೃತೀಯಪಾದಂ ವ್ಯಾಚಷ್ಟೇ—ಯಾವನ್ತ್ಯುಕ್ಥ್ಯಾನ್ಯಷ್ಟಾನಿ ಚಕ್ಷುರಾದೀನಿ ಸಂತಿ ತಾನ್ಯೇವ ತತ್ತೇನ ಮಹಿಮಾ (ಮ) ಶಬ್ದೇನಾನುವದನ್ನಯಮೃಷಿರ್ಮಂತ್ರೇ ವದತಿ ಹರ್ಷತಿ। ತಥಾ ಮಹಿಮಾ (ಮ) ಶಬ್ದ ಪ್ರಯೋಗಾತ್ತಾನ್ಯಂಗಾನಿ ಮಹಯತಿ ॥

ಮೂರನೆಯ ಪಾದವನ್ನು ವಿವರಿಸುವರು. ಮೇಲೆ ಹೇಳಿದ ಹದಿನೈದು ಮುಖ್ಯಾಂಗಗಳ ಮಹತ್ವವು (ಮಹಿಮೆಯು) ಸಾವಿರಪಾಲು ಅಧಿಕವಾಗಿರುವುದು. ಈ ರೀತಿ ವರ್ಣನೆಮಾಡಿರುವುದು ಅವುಗಳಿಗೆ ಹರ್ಷದಾಯಕವಾಗಿರುವುದು.

**ಯಾವದ್ಬ್ರಹ್ಮ ವಿಷ್ಠಿತಂ ತಾವತೀ ವಾಗಿತಿ ಯತ್ರ ಹ ಕ್ವಚ ಬ್ರಹ್ಮ ತದ್ವಾಗ್ಯತ್ರ ವಾ ವಾಕ್ತದ್ವಾ ಬ್ರಹ್ಮೇತ್ಯೇತತ್ತದುಕ್ತಂ ಭವತಿ ॥**

ಚತುರ್ಥಪಾದಂ ವ್ಯಾಚಷ್ಟೇ—ಬ್ರಹ್ಮೈವಾಭಿಧೇಯಂ ಜಗತ್ಪದಾರ್ಥರೂಪೇಣ (ಯತ್ರ) ಯಾತ್ರಾಸ್ತಿ ತತ್ರ ತತ್ರಾಭಿಧಾಯಕಂ ನಾಮ। ತಥಾ ಯತ್ರ ಯತ್ರ ವಾಚಕಃ ಶಬ್ದಸ್ತತ್ರ ತತ್ರಾಭಿಧೇಯಪದಾರ್ಥಂ ಬ್ರಹ್ಮೇತ್ಯೇವಮನ್ಯೋನ್ಯವ್ಯಾಪ್ತಿಸ್ವರೂಪಂ ಭವತಿ। ತದೇವಮುದಾಹೃತೇನ ಮಂತ್ರೇಣ ಚಕ್ಷುರಾದಿಪಂಚಕೋಪೇತಜಗತ್ಸೃಷ್ಟಿಪ್ರಶಂಸನಾಚ್ಚಕ್ಷುರಾದಿಗತಪಂಚಸಂಖ್ಯಾದ್ವಾರೇಣ ಪಂಚವಿಂಶತಿಸಂಖ್ಯಾ "ನದಂ ವಃ" (ಋ-ಸಂ-ಮಂ ೮ ಸೂ ೬೯-ಋ-೨) ಇತ್ಯೇತದಂಗಾವೃತ್ತಿರೂಪಾ ಪ್ರಶಸ್ತಾ ಭವತೀತಿ ದ್ರಷ್ಟವ್ಯಮ್ ॥

ನಾಲ್ಕನೇ ಪಾದವನ್ನು ವಿವರಿಸುವರು—(ಜಗದ್ರೂಪವಾದ) ಬ್ರಹ್ಮವಸ್ತುವು ಎಲ್ಲಿಯವರೆಗೆ ವ್ಯಾಪಿಸಿರುವುದೋ ಅಲ್ಲಿಯವರೆಗೂ (ಬ್ರಹ್ಮಸ್ವರೂಪವೇ ಆದ) ವಾಗ್ರೂಪವೂ ವ್ಯಾಪಿಸಿರುವುದು. ಆದ್ದರಿಂದ ಇವುಗಳಿಗೆ ಅನ್ಯೋನ್ಯವ್ಯಾಪ್ತಿಯಿರುವುದು. ಎಂದರೆ ಎಲ್ಲಿ ಬ್ರಹ್ಮವಿರುವುದೋ ಅಲ್ಲಿ ವಾಕ್ ಇರುವುದು, ಎಲ್ಲಿ ವಾಕ್ ಇರುವುದೋ ಅಲ್ಲಿ ಬ್ರಹ್ಮವೂ ಇರುವುದು. ಎಂದರೆ ಪರಸ್ಪರವ್ಯಾಪ್ತಿ ಇರುವುದು.

**ಏಷಾಂ ವಾ ಏಷಾಂ ಸೂಕ್ತಾನಾಂ ನವರ್ಚಂ ಪ್ರಥಮಂ ನವ ವೈ ಪ್ರಾಣಾಃ ಪ್ರಾಣಾನಾಂ ಕ್ಲೃಪ್ತ್ಯೈ ॥**

ವಿವಿಧಾನಿ ಸೂಕ್ತಾನಿ ಶಸ್ತ್ರಾರ್ಥಂ "ನದಂ ವಃ" (ಋ-ಸಂ-ಮ೮-ಸೂ೬೯.ಋ) ಇತ್ಯಾದಿಕಂಯಾ ವ್ಯತಿಷಿಕ್ತಾನಿ ಕೇವಲಾನಿ ಚೇತಿ। ತತ್ರಾಽದ್ಯೇನೈಷಾಮಿತ್ಯನೇನ ಪದೇನ ವ್ಯತಿಷಿಕ್ತಾನಿ ಪರಾಮೃಶ್ಯಂತೇ। 'ವಾ ಏಷಾಂ' ಇತ್ಯೇವಂ ವ್ಯತಿಷಿಕ್ತಾನಾಮನಂತರಮೇವ ಪ್ರಕೃತತ್ವಾತ್। ದ್ವಿತೀಯೇನೈಷಾಮಿತನೇನ ವ್ಯತಿಷಕ್ತಾಂತರ್ಭೂತಾನಿ ಕೇವಲಾನಿ ಪರಾಮೃಶ್ಯಂತೇ। ತಾನಿ ಚ "ತದಿದಾಸ" (ಋ.ಸಂ-೧೦ ಸೂ೧೨೦ ಋ-೧) ಇತ್ಯಾದಿವ್ಯಾಖ್ಯಾನಪ್ರಕೃತಾನಿ। ತತ್ರ ಯಾ(ಚಾ)ಕ್ಷರ ಯೋಜನಾ—ಏಷಾಂ ವ್ಯತಿಷಕ್ತಾನಾಂ ಮಧ್ಯೇ ಯಾನಿ ಕೇವಲಾನಿ ಸಂತಿ, ಯೇ (ಏ)ಷಾಂ ಕೇವಲಾನಾಂ ಮಧ್ಯೇ ಯತ್ಪ್ರಥಮಂ ತದಿದಾಸೇತಿ ಸೂಕ್ತಂ ತನ್ನವರ್ಚಮ್। ಪ್ರಾಣಾಶ್ಚ ದೇಹಗತಚ್ಛಿದ್ರವರ್ತಿತಾಂ (ನೋ) ನವಸಂಖ್ಯಾಕಾ ಅತಃ ಪ್ರಾಣಸಂಪಾದನಾರ್ಥಂ ತತ್ಸೂಕ್ತಂ ಸಂಪದ್ಯತೇ ॥

ಈಗ ಆಯಾ ಸೂಕ್ತಗಳಲ್ಲಿರುವ ಋಕ್ಸಂಖ್ಯೆಯನ್ನು ತಿಳಿಸುವರು. ಈ ಶಸ್ತ್ರಮಂತ್ರಗಳನ್ನೊಳಗೊಂಡಿರುವ ಮೊದಲನೆಯ ಸೂಕ್ತದಲ್ಲಿ (ತದಿದಾಸ) ಒಂಭತ್ತು ಋಕ್ಕುಗಳಿರುವವು. ಪ್ರಾಣಗಳೂ ಒಂಭತ್ತಿರುವವು (ಇಲ್ಲಿ ಪ್ರಾಣಗಳೆಂದರೆ ದೇಹದಲ್ಲಿ ಪ್ರಾಣವಾಯುವು ಸಂಚರಿಸುವ ನವಚ್ಛಿದ್ರಗಳು). ಈ ಸೂಕ್ತವನ್ನು ಪಠಿಸುವುದರಿಂದ ಈ ನವವಿಧ ಪ್ರಾಣಗಳಿಗೆ ಉತ್ತೇಜನ ಮಾಡಿದಂತಾಗುವುದು.

**ಷಳೃಚಂ ಭವತಿ ಷಡ್ವಾ ಋತವ ಋತೂನಾಮಾಪ್ತ್ಯೈ ||**

**" ತಾಂ ಸುತೇ " (ಋ-ಸಂ-ಮಂ-೧೦-೫೪-ಋ-೧) ಇತ್ಯಾದಿ ದ್ವಿತೀಯಸೂಕ್ತಗತಾ-ನ್ಯೃಕ್ಸಂಖ್ಯಾಂ ಪ್ರಶಂಸತಿ—**

**ತಾಂ ಸು ತೇ** (ಋ. ಸಂ. ೧೦-೫೪-೧) ಎಂಬುದು ಎರಡನೆಯ ಸೂಕ್ತವು ಇದರಲ್ಲಿ ಆರು ಋಕ್ಕುಗಳಿರುವವು. ಒಂದು ಸಂವತ್ಸರದಲ್ಲಿ ಋತುಗಳೂ ಆರು ಇರುವವು. ಈ ಸೂಕ್ತಪಠನದಿಂದ ಋತುಗಳನ್ನು ಪ್ರಶಂಸೆಮಾಡಿದಂತಾಗುವುದು

**ಪಂಚರ್ಚಂ ಭವತಿ ಪಂಚಪದಾ ಪಂಕ್ತಿಃ ಪಂಕ್ತಿರ್ವಾ ಅನ್ನಮನ್ನಾದ್ಯ-ಸ್ಯಾವರುದ್ಧ್ಯೈ ||**

**" ಭೂಯಃ " (ಋ-ಸಂ-ಮಂ. ೬ ಸೂ. ೩೧ ಋ-೧) ಇತ್ಯಾದಿ ತೃತೀಯ ಸೂಕ್ತಗತಾ-ನ್ಯೃಕ್ಸಂಖ್ಯಾಂ ಪ್ರಶಂಸತಿ—ಪಂಕ್ತಿಶ್ಛಂದಃ ಪಂಚಭಿಶ್ಛಂದಃ ಪಾದೈರುಪೇತಮನ್ನಂ ಚ ಪಂಕ್ತಿಚ್ಛಂದಃ ಸಾಧ್ಯತ್ವಾತ್ಕ್ಷೇತ್ರೇಷು ಪಂಕ್ತಿರೂಪೇಣೋಕ್ತ (ಪ್ತ) ತ್ವಾದ್ವಾ ಪಂಕ್ತಿರೂಪಮ್ । ತಸ್ಮಾದಿಯಂ ಪಂಚಸಂಖ್ಯಾಽನ್ನಪ್ರಾಪ್ತ್ಯೈ ಭವತಿ ||**

ಮೂರನೇ ಸೂಕ್ತವನ್ನು ವಿವರಿಸುವರು. ಈ ಸೂಕ್ತದಲ್ಲಿ ಐದು ಪಾದಗಳಿರುವವು. ಪಂಕ್ತಿಛಂದಸ್ಸಿಗೆ ಅನ್ನಾದ್ಯಾಹಾರವನ್ನು ಕೊಡುವ ಶಕ್ತಿಯಿರುವುದು. ಈ ಸೂಕ್ತಪಠನದಿಂದ ಪಠಿಸುವ ಪುರುಷನಿಗೆ ಅನ್ನಾದ್ಯಾಹಾರವು ಲಭಿಸುವುದು

**ತೃಚೋ ಭವತಿ ತ್ರಯೋ ವಾ ಇಮೇ ತ್ರಿವೃತೋ ಲೋಕಾ ಏಷಾಮೇವ ಲೋಕಾನಾಮಭಿಜಿತ್ಯೈ ||**

**" ನೃಣಾಮು ತ್ವಾ " (ಋ. ಸಂ. ಮಂ. ೩ ಸೂ. ೫೧-ಋ-೪) ಇತ್ಯಾದಿಕೋ ಯಸ್ತೃಚ-ಸ್ತದ್ಗತಾನ್ಯೃಕ್ಸಂಖ್ಯಾಂ ಪ್ರಶಂಸತಿ-"ತ್ರಯೋ ವಾ" ಇತ್ಯಾದಿ ಪೂರ್ವಮೇವ (ಐ-ಆ.೧-ಅ.೧ಖ.೦೨) ವ್ಯಾಖ್ಯಾತಮ್ ||**

ಅನಂತರ **ನೃಣಾಮು ತ್ವಾ** (ಋ. ಸಂ. ೩-೫೧-೪) ಎಂಬ ಮೂರು ಋಕ್ಕುಗಳನ್ನು ಪಠಿಸಬೇಕು ಭೂಮ್ಯಂತರಿಕ್ಷಸ್ವರ್ಗಗಳೆಂಬ ಮೂರು ಲೋಕಗಳಿರುವವು. ಈ ಮೂರು ಋಕ್ಕುಗಳನ್ನು ಪಠಿಸುವುದರಿಂದ ಈ ಮೂರುಲೋಕಗಳ ಪ್ರಾಪ್ತಿಯುಂಟಾಗುವುದು

**ತಾ ಅಭಿ ಸಂಪದ್ಯಂತೇ ಬೃಹತೀಂ ಛಂದೋಽಮೃತಂ ದೇವಲೋಕಮೇಷ ಆತ್ಮೈವಮು ಹೈವೈವಂ ವಿದೇತಯೈವ ಸಂಪದಾಽಮೃತಮೇವಾಽಽತ್ಮಾ-ನಮಭಿ ಸಂಭವತಿ ॥**

ಕೇವಲಾನಿ ಸೂಕ್ತಾನ್ಯೃಚಶ್ಚ ಸಂಖ್ಯಾದ್ವಾರಾ ಪ್ರಶಸ್ಯೈತಾನಿ ಪ್ರಕಾರಾಂತರೇಣ ಪ್ರಶಂಸತಿ–ತಾಃ ಸೂಕ್ತಗತಾಃ ಋಚೋಽಭಿ ಸರ್ವತೋ ಬೃಹತೀಂ ಛಂದಃ ಸಂಪದ್ಯಂತೇ। ತದ್ಯಥಾ-ತ್ರಿಷ್ಟುಪ್. ಛಂದಸ್ಕಾಸ್ವೃಕ್ಷ್ವೇಕೈಕಃ ಪಾದ ಏಕಾದಶಾಕ್ಷರೋಽಷ್ಟಾಕ್ಷರೇಣ " ನದಂ ವಃ " (ಋ.ಸಂ.ಮಂ. ೮-ಸೂ.೬೯-ಋ-೨) ಇತ್ಯಾದಿ ಮಂತ್ರಗತೇನ ಪಾದೇನ ಸಂಯುಜ್ಯತೇ, ತದೇತದಷ್ಟಾದಶಾಕ್ಷರಾತ್ಮಕಂ ಪಾದದ್ವಯಮೇಕಮರ್ಧಂ ಭವತಿ। ತಾದೃಶೇ ದ್ವೇ ಅರ್ಧೇ ಷಟ್‌ತ್ರಿಂಶದಕ್ಷರಾಂ ಬೃಹತೀಂ ಪ್ರಾಪ್ನುತಃ। ಏವಂ ತ್ರಯೋವಿಂಶತಿಸಂಖ್ಯಾ ಋಚಃ ಸರ್ವಾ ಅಪಿ " ನದಂ ವಃ " ಇತ್ಯಾದಿಸಹಿತಾಃ ಷಟ್‌ಚತ್ವಾರಿಂಶದ್‌ಬೃಹತ್ಯೋ ಭವಂತಿ। ತದೇವಂ ಬೃಹತೀಂ ಛಂದೋ ವಿನಾಶರಹಿತಂ ದೇವ-ಲೋಕಂ ತತ್ಪ್ರಾಪ್ತಿಹೇತುತ್ವಾತ್ತಾದೃಶಂ ಛಂದಃ ಸಂಪದ್ಯತ ಇತಿ ಪೂರ್ವತ್ರಾನ್ವಯಃ। ಏಷ ಈದೃಶೋ ಬೃಹತೀಸಂಘ ಆತ್ಮಾ ಪಕ್ಷ್ಯಾಕಾರಸ್ಯ ಶಸ್ತ್ರಸ್ಯ ಮಧ್ಯದೇಹಃ। ಪಕ್ಷಪುಚ್ಛಾದಿಭಾಗಾಶ್ಚೋಪರಿಷ್ಟಾದ-ಭಿಧಾಸ್ಯಂತೇ। ಏವಮು ಹೈವಾನೇನೈವ ಪ್ರಕಾರೇಣ ಪಕ್ಷ್ಯಾಕಾರಸ್ಯ ಮಧ್ಯದೇಹಃ। ಸಂಪಾದಿತ ಇತಿ ಶೇಷಃ। ಯಃ ಪುಮಾನೇವಂ ವೇತ್ತಿ ಧ್ಯಾಯತಿ ಸ ಪುಮಾನೇತಯೈವ ಸಂಪದಾ ಪಕ್ಷಿದೇಹಮಧ್ಯ-ಸಂಪಾದನೇನಾಮೃತಮೇವಾಽಽತ್ಮಾನಂ ವಿನಾಶರಹಿತಂ ಸ್ವರೂಪಮಭಿಸಂಭವತಿ, ತದ್ಧ್ಯಾನಸಹಿತೇ ಮಹಾವ್ರತೇ ಕರ್ಮಣಾ ಮನುಷ್ಯವಚ್ಛೀಘ್ರಂ ವಿನಾಶರಹಿತಂ ದೇವಜನ್ಮ ಪ್ರಾಪ್ನೋತೀತ್ಯರ್ಥಃ। ಅಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ॥

ಮೇಲೆ ಹೇಳಿದ ಸೂಕ್ತಗಳಲ್ಲಿರುವ ಮಂತ್ರಗಳೆಲ್ಲವನ್ನೂ ಸೇರಿಸಿದರೆ ಬೃಹತೀಛಂದಸ್ಸು ಉಂಟಾಗುವುದು ಹೇಗೆಂದರೆ—ತ್ರಿಷ್ಟುಪ್ ಛಂದಸ್ಸಿನ ಒಂದೊಂದು ಪಾದದಲ್ಲಿಯೂ ಹನ್ನೊಂದು ಅಕ್ಷರಗಳಿರುವವು. **ನದಂ ವಃ** ಎಂಬ ಸೂಕ್ತದಲ್ಲಿರುವ ಮಂತ್ರಗಳ ಪ್ರತಿಯೊಂದು ಪಾದದಲ್ಲಿಯೂ ಏಳು ಅಕ್ಷರಗಳಿರುವವು. ಇವುಗಳನ್ನು ಸೇರಿಸಿದರೆ ಹದಿನೆಂಟು ಅಕ್ಷರಗಳಾಗುವವು ಇದರಿಂದ ಬೃಹತೀಛಂದಸ್ಸಿನ ಅರ್ಧಋಕ್ಕಾದಂತಾಯಿತು. ಇಂತಹ ಎರಡು ಅರ್ಧ ಋಕ್ಕುಗಳನು ಸೇರಿಸಿದರೆ ಮೂವತ್ತಾರು ಅಕ್ಷರಗಳುಳ್ಳ ಒಂದು ಬೃಹತೀಛಂದಸ್ಸಾದಂತಾಯಿತು. ಈ ರೀತಿ ಇಪ್ಪತ್ತಮೂರು ಋಕ್ಕುಗಳನ್ನೂ ಸೇರಿಸಿದರೆ ನಲವತ್ತಾರು ಬೃಹತೀಛಂದಸ್ಸಿನ ಋಕ್ಕುಗಳಾಗುವವು. ಈ ಬೃಹತೀಛಂದಸ್ಸಿನ ಮಂತ್ರಗಳನ್ನು ಪಠಿಸುವುದರಿಂದ ನಾಶರಹಿತವಾದ ದೇವಲೋಕಪ್ರಾಪ್ತಿಯುಂಟಾಗುವುದು ಮತ್ತು ಇಲ್ಲಿ ಇನ್ನೊಂದು ವಿಶೇಷವಿರುವುದು. ಶಸ್ತ್ರಮಂತ್ರಗಳು ಪಕ್ಷ್ಯಾಕಾರವಾಗಿರುವವು. ಈ ಪಕ್ಷ್ಯಾಕಾರಕ್ಕೆ ಬೃಹತೀಛಂದಸ್ಸೇ ಆತ್ಮಸ್ವರೂಪವಾಗಿರುವುದು. ಆತ್ಮವೆಂದರೆ ಪಕ್ಷ್ಯಾಕಾರ ಶರೀರದ ಮಧ್ಯಭಾಗವು. ಯಾವ ಪುರುಷನು ಪಕ್ಷ್ಯಾಕಾರಶರೀರಭೂತವೂ ಆತ್ಮಸ್ವರೂಪವೂ ಆದ ಬೃಹತೀಛಂದಸ್ಸುಗಳನ್ನು ಈ ಮಹಾವ್ರತದಲ್ಲಿ ಪಠಿಸುವನೋ ಆ ಪುರುಷನು ವಿನಾಶರಹಿತವಾದ ದೇವತೆಯ ಜನ್ಮವನ್ನು ಪಡೆಯುವನು.

—

*English Translation*

---

1. He extends (these verses) by (interpolating) the sound. Verily, breath (prana) is sound. Therefore every breath when it sounds, sounds loud, as it were.

2. The verse (VIII, 69, 2) nadam va odatinam, & c., is by its syllabls an Ushnih, by its feet an Anushtubh. Ushnih is life, Anushtubh, speech. He thus places life and speech in him (the sacrificer).

3. By repeating the first verse three times, they become twenty-five. The trunk is the twenty-fifth, and Prajapati is the twenty-fifth. There are ten fingers on his hands, ten toes on his feet, two legs, two arms, and the trunk the twenty-fifth. He adorns that trunk as the twenty-fifth. Now this day consists of twenty-five, and the Stoma hymn of that day consists of twenty-five : it becomes the same through the same. Therefore the two, the day and the hymn, are twenty-five. This is the twenty-fifth with regard to the body.

4. Next, with regard to the deities : The eye, the ear, the mind, speech, and breath, these five deities (powers) have entered into that person (Purusha), and that person entered into the five deities. He is wholly pervaded there with his limbs to the very hairs and nails. Therefore all beings to the very insects are born as pervaded (by the deities or senses).

5. This has been declared by a Rishi (Rv. X. 114, 8) :-

6. 'A thousandfold are these fifteen hymns ;' ---for five arise from ten.

7. 'As large as heaven and earth, so large is it ;' ---verily, the self (givatman) is as large as heaven and earth.

8. 'A thousandfold are the thousand powers ;' --- by saying this the poet pleases the hymns (the senses), and magnifies them.

9. 'As far as Brahman reaches, so far reaches speech;' ---wherever there is Brahman, there is a word; and wherever there is a word, there is Brahman, this was intended.

10. The first of the hymns among all those hymns has nine verses. Verily, there are nine pranas (Openings), and it serves for their benefit.

11. Then follows a hymn of six verses. Verily, the seasous are six, and it serves to obtain them.

12. Then follows a hymn of five verses. Verily, the Pankti consists of five feet. Verily, Pankti is food, and it serves for the gaining of proper food.

13. Then follows a tristich. Three are these three-fold worlds, and it serves to conquer them.

14. These verses become Brihatis, that metre being immortal, leading to the world of the Devas. That body of verses is the trunk (of the bird represented by the whole sastra.), and thus it is. He who knows this comes by this way (by making the verses the trunk of the bird) near to the immortal Self, yea, to the immortal Self.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ತೃತೀಯಾಧ್ಯಾಯೇಽಷ್ಟಮಃ ಖಂಡಃ

ಇತಿ ಪ್ರಥಮಾರಣ್ಯಕೇ ತೃತೀಯೋಽಧ್ಯಾಯಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪ್ರಥಮಾರಣ್ಯಕದ
ಮೂರನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು ಸಮಾಪ್ತವು ॥

ಇಲ್ಲಿಗೆ ಪ್ರಥಮಾರಣ್ಯಕದ ಮೂರನೆಯ ಅಧ್ಯಾಯವು ಸಮಾಪ್ತವಾದುದು

---

# ಅಥ ಪ್ರಥಮಾರಣ್ಯಕೇ ಚತುರ್ಥಾಧ್ಯಾಯೇ ಪ್ರಥಮಃ ಖಂಡಃ

## ಪ್ರಥಮಾರಣ್ಯಕದ ನಾಲ್ಕನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

**ಅಥ ಸೂದದೋಹಾಃ ಪ್ರಾಣೋ ವೈ ಸೂದದೋಹಾಃ ಪ್ರಾಣೇನ ಪರ್ವಾಣಿ ಸಂದಧಾತಿ||**

**ತೃತೀಯೇಽಧ್ಯಾಯೇ ನಿಷ್ಕೇವಲ್ಯಶಸ್ತ್ರಸ್ಯ ಪಕ್ಷ್ಯಾಕಾರಸ್ಯ ಮಧ್ಯದೇಶಭಾಗಸ್ತೃಚೋತ್ತರ-ಸೂಕ್ತಾವಯವನಿಷ್ಪದ್ಯೋಽಭಿಹಿತಃ । ಅಥ ಚತುರ್ಥೇ ಗ್ರೀವಾದಿಭಾಗಾನ್ವಿಧತ್ತೇ । ತತ್ರಾಽಽದಾ-ನಾತ್ಮಭಾಗಸ್ಯಾವಸಾನೇ ಪಠನೀಯಾಮೃಚಂ ವಿಧತ್ತೇ—ಅಥ ಶಸ್ತ್ರಸ್ಯ ಮಧ್ಯಭಾಗಕಥನಾನಂತರಂ ಸೂದದೋಹಾಃ ಪಠನೀಯಾ । ಸೂದಂ ಸ್ವಾದಂ ಸರಸಂ ದೋಗ್ಧೀತಿ ಸೂದದೋಹಾಃ ಕಾಮಧೇನು-ರಿತ್ಯರ್ಥಃ । ತದ್ವಾಚಕೋಽಯಂ ಶಬ್ದೋ ಯಸ್ಯಾಮೃಚಿ "ತಾ ಅಸ್ಯ ಸೂದದೋಹಸಃ" (ಋ-ಸಂ-ಮಂ-೮ ಸೂ-೬೯-ಋ-೩) ಇತ್ಯೇವಂ ರೂಪಾ ಯಾ ವರ್ತತೇ ಸಾಽಪ್ಯೃಕ್ಸೂದದೋ-ಹಾಸ್ತಾಂ ಸೂದದೋಹಸಮೃಚಂ ಪಠೇತ್ । ಸೇಯಮೃಕ್ಸೂದದೋಹಃ ಶಬ್ದೇನಾಭಿಧೀಯತೇ । ಸೇಯಂ ಪ್ರಾಣಸ್ವರೂಪೇಣೈ(ಷಿಣ್ಯೇ)ವ । ಯಥಾ ಪ್ರಾಣವಾಯುಃ ಸೂತ್ರಾತ್ಮಾ ಸರ್ವೇಷಾಂ ಶರೀರಾವಯವಾನಾಂ ಸಂಘಾತಾ ಭವತಿ, ಏವಮಿಯಮೃಕ್ಸರ್ವೇಷಾಂ ಶಸ್ತ್ರಭಾಗಾನಾಂ (ಣಾಂ) ಮಧ್ಯೇ ದೇಹಗ್ರೀವಾದೀನಾಂ ಸಂಯಂತ್ರೀ (ಧಾತ್ರೀ) ತಸ್ಮಾತ್ಪ್ರತ್ಯವಯವಂ ಪಠನೀಯಾ ಸ್ಯಾತ್ । ಅಸ್ಯ ಮಧ್ಯಭಾಗಸ್ಯಾಂತೇ ತತ್ಪಾಠೋಽಭಿಹಿತಃ ॥**

ಮೂರನೆಯ ಅಧ್ಯಾಯದಲ್ಲಿ ಪಕ್ಷ್ಯಾಕಾರವಾದ ನಿಷ್ಕೇವಲ್ಯಶಸ್ತ್ರದ ಮಧ್ಯದೇಶಭಾಗವು ತೃಚೋತ್ತರಸೂಕ್ತಾವಯವದಿಂದ ನಿಷ್ಪತ್ತಿಯಾಗುವುದನ್ನು ಹೇಳಿದ್ದಾಯಿತು. ಈಗ ನಾಲ್ಕನೆಯ ಅಧ್ಯಾಯದಲ್ಲಿ ಅದರ ಗ್ರೀವಾದಿ (ಕತ್ತು ಮುಂತಾದ) ಭಾಗಗಳನ್ನು ವಿವರಿಸುತ್ತಾರೆ. ಅಲ್ಲಿ ಮೊದಲು ಆತ್ಮಭಾಗದ ಕೊನೆಯಲ್ಲಿ ಹೇಳಬೇಕಾದ ಋಕ್ಕನ್ನು ತೋರಿಸುತ್ತಾರೆ. ಶಸ್ತ್ರದ ಮಧ್ಯಭಾಗವನ್ನು ಹೇಳಿದ ಮೇಲೆ ಸೂದದೋಹವನ್ನು ಹೇಳಬೇಕು. ಮಧುರವಾದುದನ್ನು (ಹಾಲನ್ನು) ಕರೆಯುವುದು ಸೂದದೋಹ. ಕಾಮಧೇನುವೆಂದರ್ಥ. ಈ ಅರ್ಥವನ್ನು ಹೇಳುವ ಸೂದದೋಹಶಬ್ದವು ಯಾವ ಋಕ್ಕಿನಲ್ಲಿದೆಯೋ ಅದು ಅಂದರೆ 'ತಾ ಅಸ್ಯ ಸೂದದೋಹಸ :—' ಎಂಬ ಋಕ್ಕೂ ಸೂದದೋಹವಾಗುತ್ತದೆ. ಆ ಋಕ್ಕನ್ನು ಪಠಿಸಬೇಕು. ಈ ಋಕ್ಕೇ ಸೂದದೋಹಸ್ ಶಬ್ದದಿಂದ ಹೇಳಿದೆ. ಇದು ಪ್ರಾಣಸ್ವರೂಪವೇ ಆಗಿದೆ. ಹೀಗೆ ಸೂತ್ರಾತ್ಮರೂಪನಾದ (ಶರೀರವನ್ನು ನಿಯಮನಮಾಡುವ) ಪ್ರಾಣವಾಯುವು ಎಲ್ಲಾ ಶರೀರಾವಯುಗಳನ್ನು ಧರಿಸಿರುವುದೋ ಅದರಂತೆ ಈ ಋಕ್ಕು ಎಲ್ಲಾ ಶಸ್ತ್ರಭಾಗಗಳ ಮಧ್ಯದಲ್ಲಿ ದೇಹಕಂಠ ಮುಂತಾದವುಗಳನ್ನು ನಿಯಮಿಸಿರುವುದರಿಂದ ಪ್ರತಿಯೊಂದು ಅವಯವದಲ್ಲಿಯೂ ಪಠಿಸಬೇಕು. ಇದರ ಮಧ್ಯಭಾಗದ ಕೊನೆಯಲ್ಲಿ ಈ ಮಂತ್ರವನ್ನು ಪಠಿಸಬೇಕು.

**ಅಥಾತೋ ಗ್ರೀವಾಸ್ತಾ ಆಚಕ್ಷತೇ ಯಥಾ ಛಂದಸಮುಷ್ಣಿಹ ॥**

ಮಧ್ಯದೇಹಭಾಗಂ ಸಮಾಪ್ಯ ಗ್ರೀವಾಭಾಗಂ ವಿಧತ್ತೇ—ಅಥ ಮಧ್ಯದೇಹಕಥನಾನಂತರಂ ಯಸ್ಮಾತ್‌ಷಡ್‌ವೀರಾಸ್ಯಭಾಗಃ (?) ಪಶ್ಚಾತ್ಕಾರಸ್ಯಾಪೇಕ್ಷಿತೋಽತಃ ಕಾರಣಾದ್ಗ್ರೀವಾರೂಪಾ ಋಚಃ ಶಂಸೇತ್ । ತಾ ಋಚಃ ಶಾಖಾಂತರಾಭಿಜ್ಞಾ ಆಚಕ್ಷತೇ । ಅತ ಏವ ಪಂಚಮೇ ಶೌನಕೇ-ನೋದಾಹೃತಾಃ—"ಗ್ರೀವಾ ಯಸ್ಯೇದಮಾರಜಃ" (ಐ.ಆ-೫-ಅ-೨-ಖಂ-೧) ಇತ್ಯಾದಿನಾ । ತಾಶ್ಚ ತಿಸ್ರ ಋಚೋ ಯಥಾಛಂದಸಮಧ್ಯಾಪಕಪ್ರಸಿದ್ಧವೇದಪಾಠಮನತಿಕ್ರಮ್ಯರ್ಗಕ್ಷರಗಣನಯಾ ತಿಸ್ರಃ ಉಷ್ಣಿಹಃ ಸಂಪದ್ಯಂತೇ । ತಚ್ಚ ಛಂದಃ ಪೂರಣಾಯಾಕ್ಷರಾಂತರಪ್ರಕ್ಷೇಪಂ ಪುರುಷ ಇತ್ಯಾದಿ-ವದಪೇಕ್ಷಂತೇ ॥

ಮಧ್ಯದೇಹಭಾಗವನ್ನು ಮುಗಿಸಿ ಗ್ರೀವಾ (ಕಂಠ) ಭಾಗವನ್ನು ವಿವರಿಸುತ್ತಾರೆ. ಮಧ್ಯದೇಹವನ್ನು ಹೇಳಿದ ಮೇಲೆ ಪಶ್ಚಾತ್ಕಾರಕ್ಕೆ ಕಂಠಭಾಗವು ಅಪೇಕ್ಷಿತವಾದುದರಿಂದ ಗ್ರೀವಾ ರೂಪವಾದ ಋಕ್ಕನ್ನು ಹೇಳಬೇಕು. ಈ ಋಙ್ಮಂತ್ರಗಳನ್ನು ಇತರ ಶಾಖೆಯನ್ನು ತಿಳಿದವರು ಹೀಗೆ ಹೇಳುತ್ತಾರೆ. ಆದುದರಿಂದಲೇ ಐದನೆಯ ಅಧ್ಯಾಯದಲ್ಲಿ ಶೌನಕರು—'ಗ್ರೀವಾ ಯಸ್ಯೇದಮಾರಜಃ—' ಎಂದು ಉದಾಹರಿಸುತ್ತಾರೆ. ಅಧ್ಯಯನ ಪ್ರಕಾರ ವೇದಪಾಠಾನುಸಾರವಾಗಿ ಛಂದಸ್ಸನ್ನು ಮೀರದೆ ಅಕ್ಷರಗಳ ಎಣಿಕೆಯಿಂದ ಈ ಮೂರು ಋಙ್ಮಂತ್ರಗಳು ಮೂರು ಉಷ್ಣಿಕ್‌ಛಂದೋರೂಪವಾಗಿರುತ್ತವೆ. ಅಲ್ಲಿ ಕಡಿಮೆಯಾದಾಗ ಜನರನ್ನು ಸೇರಿಸಿಕೊಳ್ಳುವಂತೆ ಛಂದಃಪೂರ್ತಿಗೋಸ್ಕರ ಇತರ ಅಕ್ಷರಗಳನ್ನು ಸೇರಿಸಿಕೊಳ್ಳಬೇಕು.

ಅಥ ಸೂದದೋಹಾಃ ಪ್ರಾಣೋ ವೈ ಸೂದದೋಹಾಃ ಪ್ರಾಣೇನ ಪರ್ವಾಣಿ ಸಂದಧಾತಿ ॥

ಗ್ರೀವಾಭಾಗಾನಂತರಮಪಿ ಪೂರ್ವವತ್ಸೂದದೋಹಸಂ ವಿಧತ್ತೇ—

ಗ್ರೀವಾಭಾಗವನ್ನು ವಿವರಿಸಿದ ಮೇಲೂ ಹಿಂದಿನಂತೆ ಸೂದದೋಹವನ್ನು ವಿಧಿಸುತ್ತಾರೆ.

ಅಥಾತಃ ಶಿರಸ್ತದ್ಗಾಯತ್ರೀಷು ಭವತ್ಯಗ್ರಂ ವೈ ಛಂದಸಾಂ ಗಾಯತ್ರ್ಯ-ಗ್ರಮಂಗಾನಾಂ ಶಿರಸ್ತದರ್ಕವತೀಷು ಭವತ್ಯಗ್ನಿರ್ವಾ ಅರ್ಕಸ್ತಾ ನವ ಭವಂತಿ ನವಕಪಾಲಂ ವೈ ಶಿರೋ ದಶಮೀಂ ಶಂಸತಿ ತ್ವಕ್ಕೇಶಾ ಇತ್ಯೇವ ಸಾ ಭವತ್ಯಥೋ ಸ್ತೋಮಾತಿಶಂಸನಾಯೈವ ತೌ ತ್ರಿವೃಚ್ಚ ಸ್ತೋಮೌ ಭವತೋ ಗಾಯತ್ರಂ ಚ ಛಂದ ಏತಯೋರ್ವೈ ಸ್ತೋಮಚ್ಛಂದಸೋಃ ಪ್ರಜಾತಿಮನು ಸರ್ವಮಿದಂ ಪ್ರಜಾಯತೇ ಯದಿದಂ ಕಿಂಚ ಪ್ರಜಾತ್ಯೈ ॥

ಗ್ರೀವಾಭಾಗಂ ಸಮಾಪ್ಯ ಶಿರೋಭಾಗಂ ವಿಧತ್ತೇ—ಗ್ರೀವಾನಂತರಂ ಶಿರಸೋಽಪೇಕ್ಷ(ಕ್ಷ್ಯ)ತ್ವಾಚ್ಛಿರೋಭಾಗಂ ಶಂಸೇತ್ । ಸ ಚ ಶಿರೋಭಾಗೋ ಗಾಯತ್ರೀಛಂದಸ್ಕಾಸ್ವೃಕ್ಷು ದ್ರಷ್ಟವ್ಯಃ,

**ಶಿರೋಗಾಯತ್ರ್ಯೋರಗ್ರ್ಯತ್ವಸಾಮ್ಯಾತ್ । ಸಿಸೃಕ್ಷೋಃ ಪ್ರಜಾಪತೇಃ ಪ್ರಥಮಂ ಮುಖತೋ ಗಾಯತ್ರೀ ಸಮುತ್ಪನ್ನಾ । (ಏತಚ್ಚ) ಯಜುರ್ಬ್ರಾಹ್ಮಣೇ ದೃಷ್ಟವ್ಯಮ್ । ಉತ್ಪದ್ಯಮಾನಸ್ಯ ದೇಹಸ್ಯ ಶಿರಃ ಪ್ರಥಮಂ ಯೋನೇರ್ನಿರ್ಗಚ್ಛತೀತಿ ಶಿರಸೋಽಪ್ಯಗ್ರ್ಯತ್ವಮ್ । ಗಾಯತ್ರೀಣಾಂ ಬಹೂನಾಂ ವಿದ್ಯಮಾನತ್ವಾದರ್ಕವತೀಷ್ವಿತಿ ವಿಶೇಷ್ಯತೇ । " ಇಂದ್ರಮಿದ್ಗಾಥಿನಃ '' (ಋ.ಸಂ. ಮ.೧ ಸೂ-೭- ಋ.೧) ಇತ್ಯಾದಿಕಂ ಸೂಕ್ತಂ ದಶರ್ಚಂ ತತ್ರತ್ಯಾ ಋಚೋಽರ್ಕವತ್ಯಃ। "ಇಂದ್ರಮರ್ಕೇಭಿರರ್ಕಿಣಃ" (ಋ.ಸಂ. ಮಂ-೧-ಸೂ.೭-ಋ. ೧) ಇತ್ಯೇವಮರ್ಕಶಬ್ದಯುಕ್ತತ್ವಾದರ್ಕವತ್ಯ ಇತ್ಯುಚ್ಯಂತೇ । ಅತೋಽಗ್ನಿಯುಕ್ತೇ (ಕ್ತುತ್ವೇ) ನ ಪ್ರಶಸ್ತತ್ವಾದರ್ಕವತೀಃ ಶಂಸೇತ್ । ತಾಸ್ವಿಂದ್ರಮಿದ್ಗಾಥಿನ ಇತ್ಯಾದಿ. ಕಾನಾಂ ೧ಬ ಏಕತ್ವ್ವರ್ಷಣೇನಾಮಿತ್ಯಂತಾನಾಂ ಸಂಖ್ಯಾ ಪ್ರಯತಾ ನವೇತಿ ವಾಕ್ಯೇನ ಪ್ರಶಸ್ಯತೇ । ನವಸಂಖ್ಯಾಕಾನಿ ಕಪಾಲಾನ್ಯೇಕಧಾ ಸಂಯೋಜ್ಯ ಪ್ರಜಾಪತಿನಾ ಮನುಷ್ಯಶಿರೋ ನಿರ್ಮಿತಮ್ । ಏತಚ್ಚ (ಅಯಂ ಚ) ಮೃತಪುರುಷಸ್ಯ ಶಿರಸಿ ಶೋಷಣೇ(ಷೇಣ)ತ್ವಗಾದಾವಪಗತೇ ಸತ್ಯಸ್ಥಿಗತೋ ವಿಭಾಗೋ ಬುದ್ಧಿಮದ್ಭಿರುದ್ಭೇತ್ತುಂ ಶಕ್ಯತೇ । ಏತದೇವಾಭಿಪ್ರೇತ್ಯ ತೈತ್ತಿರೀಯಕಾಶ್ಚಾಽಽಮನಂತಿ– "ತಸ್ಮಾನ್ನವಧಾ ಶಿರೋ ವಿಷ್ಯೂತಮ್" (ತೈ. ಸಂ–ಅ ೬–ಪ್ರ. ೨ ಅ.೧) ಇತಿ । ಯಾ ತು "ಇಂದ್ರಂ- ವೋ ವಿಶ್ವತಸ್ಪರಿ '' (ಋ. ಸಂ.ಮಂ.೧ ಸೂ.೭-ಋ. ೧೦) ಇತಿ ದಶಮೀ ತಚ್ಛಂಸನೇ ಶಿರಃ ಕಪಾಲಾನಾಮುಪರಿ ತ್ವಕ್ಸಂಪಾದಿತಾ ಭವತಿ । ತಸ್ಯಾಂ ತ್ವಚ್ಯಪಿ ಕೇಶಾಃ ಸಂಪಾದಿತಾ ಭವಂತಿ । ಅಪಿ ಚೇಯಂ ದಶಮೀ ಸಾ ಸಾಮಗಾನಾಂ ಸಂಬಂಧಿನಸ್ತ್ರಿವೃದಾಖ್ಯಸ್ತೋಮವಿಶೇಷಾತಿಶಯೇನ ಶಂಸ- ನಾರ್ಥಂ ಸಂಪದ್ಯತೇ । ಸಾಮಗಾ ಹಿ ಶಿರೋಭಾಗಂ ಸ್ತುವಂತ ಇಂದ್ರಮಿದ್ಗಾಥಿನ ಇತ್ಯಾದಿಷು ನವಸ್ವೃಕ್ಷು ಚಾಽಽವೃತ್ತಿರಹಿತಂ ತ್ರಿವೃತ್‌ಸ್ತೋಮಂ ಸಂಪಾದಯಂತಿ । ನ ಹ್ಯತ್ರ ತೇಷಾಂ ದಶಮೀ ವಿದ್ಯತೇ । ಹೋತಾ ತು ನವಸಂಖ್ಯಾಕಾಸ್ತಾ ಅತಿಕ್ರಮ್ಯ ದಶಮೀಮಪಿ ಶಂಸತಿ । ತದೇತದತಿಶಂಸನ- ಮತ್ರ ತ್ರಿವೃತ್‌ಸೋಮೇನಾಽಽವೃತ್ತಿರಾಹಿತ್ಯಂ ಚ ಯಥಾ ಸಾಮವೇದೇಽವಗಮ್ಯತೇ ತಥಾ ತೈತ್ತ- ರೀಯಬ್ರಾಹ್ಮಣೇಽಪ್ಯವಗಮ್ಯತೇ—"ತ್ರಿವೃಚ್ಛಿರೋ ಭವತಿ । ತ್ರೇಧಾ ವಿಹಿತಂ ಹಿ ಶಿರಃ । ಲೋಮ ಚ್ಛವೀರಸ್ಥಿ । ಪರಾಚಾ ಸ್ತುವಂತಿ—" (ತೈ. ಬ್ರಾ. ಕಾ-೧ ಪ್ರ–೨ ಅ–೬) ಇತಿ । ಏವಂ ಸತಿ ಯೋಽತ್ರ ಸಾಮಗೈ (ಗ) ಸ್ತ್ರಿವೃತ್‌ಸ್ತೋಮೋ ಯದಪ್ಯೃಗತಂ ಗಾಯತ್ರೀಛಂದಸ್ತಾವೇತೌ ದ್ವೌ ಪ್ರಜೋತ್ಪತ್ತಿ ಹೇತೂ ಸಂಪದ್ಯೇತೇ । ತಯೋಶ್ಚ ಸ್ತೋಮಚ್ಛಂದಸೋಃ ಪ್ರಜೋತ್ಪಾದನಮನು ಲೋಕೇ ಯತ್ಕಿಂಚಿದಿದಂ ಪ್ರಾಣಿಜಾತಂ ದೃಶ್ಯತೇ ತದಿದಂ ಸರ್ವಮುತ್ಪನ್ನಂ ಭವತಿ । ಅತೋ ಶಿರೋಭಾಗ- ಶಂಸನಂ ಪ್ರಜೋತ್ಪಾದನಾಯ ಸಂಪದ್ಯತೇ ॥**

ಗ್ರೀವಾಭಾಗವನ್ನು ಮುಗಿಸಿ ಶೀರೋಭಾಗವನ್ನು ವಿವರಿಸುತ್ತಾರೆ. ಕಂಠಭಾಗವಾದ ಮೇಲೆ ತಲೆಯು ಅಪೇಕ್ಷಿತ ವಾದುದರಿಂದ ಶಿರೋ(ತಲೆ)ಭಾಗವನ್ನು ಹೇಳಬೇಕು. ಶಿರಸ್ಸು, ಗಾಯತ್ರೀ ಇವೆರಡೂ ಶ್ರೇಷ್ಠವಾದುದರಿಂದ ಈ ಶಿರೋ ಭಾಗವನ್ನು ಗಾಯತ್ರೀಛಂದಸ್ಕವಾದ ಋಕ್ಕುಗಳಿಂದ ಪರಿಗಣಿಸಬೇಕು. ಸೃಷ್ಟಿಯನ್ನು ಮಾಡಲುಪಕ್ರಮಿಸಿದ ಬ್ರಹ್ಮನ ಮುಖದಿಂದ ಮೊದಲು ಗಾಯತ್ರೀ ಉಂಟಾಗಿದೆ. ಇದು ಯಜುರ್ವೇದ ಬ್ರಾಹ್ಮಣದಲ್ಲಿ ಹೇಳಿದೆ. ಹುಟ್ಟತಕ್ಕ ಶರೀರದ ತಲೆಯು ಮೊದಲು ಸ್ತ್ರೀಯ ಯೋನಿಯಿಂದ ಹೊರಗೆ ಬರುವುದರಿಂದ ಶಿರಸ್ಸಿಗೂ ಶ್ರೇಷ್ಠತೆ ಇದೆ. ಗಾಯತ್ರೀಛಂದಸ್ಸಿನ ಋಕ್ಕುಗಳೂ ಅನೇಕವಿರುವುದರಿಂದ ಅರ್ಕವತೀಷು ಎಂದು ವಿಶೇಷವಾಗಿ ಹೇಳಿದೆ. 'ಇಂದ್ರಮಿದ್ಗಾಥಿನಃ' (ಋ–

ಸಂ-ಮಂ-೧ಸೂ-೭-ಋ-೧) ಎಂಬ ಹತ್ತು ಋಕ್ಕುಗಳಿಂದ ಕೂಡಿದ ಸೂಕ್ತದಲ್ಲಿರುವ ಋಕ್ಕುಗಳಿಗೆ ಅರ್ಕವತೀ ಋಕ್ಕುಗಳು ಎಂದು ಹೆಸರು. 'ಇಂದ್ರಮರ್ಕೇಭಿರರ್ಕಿಣಃ' (ಋ-ಸಂ-ಮಂ-೧-ಸೂ-೭-ಋ-೧) ಎಂಬುದಾಗಿ ಅರ್ಕಶಬ್ದದಿಂದ ಕೂಡಿರುವುದರಿಂದ ಇವುಗಳಿಗೆ ಅರ್ಕವತೀ ಎಂಬ ಹೆಸರು ಬಂದಿದೆ. ಅರ್ಕವೆಂದರೆ ಅಗ್ನಿ. ಅಗ್ನಿಯಿಂದ ಕೂಡಿಪ್ರಸಸ್ತವಾದುದರಿಂದ ಅರ್ಕವತೀಋಕ್ಕುಗಳನ್ನು ಪಠಿಸಬೇಕು. ಅವುಗಳಲ್ಲಿ 'ಇಂದ್ರಮಿದ್ಗಾಥಿನ' ಎಂಬುದೇ ಆದಿಯಾಗಿದೆ. 'ಯ ಏಕಶ್ಚರ್ಷಣೀನಾಂ' ಎಂಬ ಋಕ್ಕಿನವರೆಗೆ **ಒಂಬತ್ತು** (ಸಂಖ್ಯಾ) ನಿಯತವಾಗಿದೆ. ಇದನ್ನು **ನವ** ಎಂಬ ವಾಕ್ಯದಿಂದ ಪ್ರಶಂಸಿಸುತ್ತಾರೆ. ಬ್ರಹ್ಮನೂಕೂಡ ಒಂಬತ್ತು ಕಪಾಲ (ತಲೆಬುರುಡೆಭಾಗ) ಗಳನ್ನು ಒಂದೇಬಾರಿ ಸೇರಿಸಿ ಮನುಷ್ಯನ ಶಿರಸ್ಸನ್ನು ನಿರ್ಮಾಣಮಾಡಿರುತ್ತಾನೆ. ಮೃತಪುರುಷನ ತಲೆಬುರುಡೆಯನ್ನು ಒಣಗಿಸಿ ಚರ್ಮಾದಿಗಳನ್ನು ಬೇರ್ಪಡಿಸಿದರೆ ಆಗ ಬುದ್ಧಿವಂತನು ಮೂಳೆಯಲ್ಲಿರುವ ನವವಿಭಾಗವನ್ನು ನೋಡಬಹುದು. ಇದರಂತೆಯೇ ತೈತ್ತರೀಯಕರೂ '**ತಸ್ಮಾನ್ನವಧಾ ಶಿರೋ ವಿಷ್ಯೂತಮ್**' ಎಂದು ಹೇಳಿರುತ್ತಾರೆ. ಯಾವ '**ಇಂದ್ರಂ ವೋ ವಿಶ್ವತಸ್ಪರಿ**' ಎಂಬ ಹತ್ತನೆಯ ಋಕ್ಕು ಇದೆಯೋ ಅದನ್ನು ಪಠಿಸುವುದರಿಂದ ತಲೆಬುರುಡೆಯಮೇಲೆ ಚರ್ಮವನ್ನು ಹೊದಿಸಿದಂತಾಗುತ್ತದೆ. ಆ ಚರ್ಮದ ಮೇಲೆ ಕೂದಲನ್ನಿಟ್ಟಂತೆಯೂ ಆಗುತ್ತದೆ. ಈ ಹತ್ತನೆಯ ಋಙ್ಮಂತ್ರವು ಸಾಮವೇದಿಗಳ ತ್ರಿವೃದೆಂಬ ಸ್ತೋಮವಿಶೇಷಕ್ಕಿಂತಲೂ ಅತಿಶಯವಾಗಿ ಪಠಿಸಲು ಸಾಧ್ಯವಾಗಿದೆ. ಸಾಮಗಾಯಕರು ಶಿರೋಭಾಗವನ್ನು ಗಾನಮಾಡುತ್ತಾ '**ಇಂದ್ರಮಿದ್ಗಾಥೀನ**' ಇತ್ಯಾದಿ ಒಂಬತ್ತು ಋಕ್ಕುಗಳಲ್ಲಿ ಆವೃತ್ತಿ ಇಲ್ಲದೇ ತ್ರಿವೃತ್‌ಸ್ತೋಮವನ್ನು ಕಲ್ಪಿಸಿರುತ್ತಾರೆ. ಈ ಹತ್ತನೆಯ ಋಕ್ಕನ್ನು ಅವರು ಪಠಿಸುವುದಿಲ್ಲ ಹೋತೃವಾದರೋ ಆ ಒಂಬತ್ತು ಋಕ್ಕುಗಳನ್ನೂ ಮೀರಿ ಈ ಹತ್ತನೆಯದನ್ನೂ ಪಠಿಸುತ್ತಾರೆ. ಈ ಅತಿಕ್ರಮಿಸಿದ ಪಠನವೂ, ಆವೃತ್ತಿರಹಿತವಾದ ತ್ರಿವೃತ್‌ಸ್ತೋಮವೆಂಬುದೂ **ಸಾಮವೇದ**ದಲ್ಲಿ ಪಠಿತವಾಗಿರುವುದಲ್ಲದೆ ತೈತ್ತರೀಯಬ್ರಾಹ್ಮಣದಲ್ಲಿಯೂ—**ತ್ರಿವೃಚ್ಛಿರೋ ಭವತಿ । ತ್ರೇಧಾ ವಿಹಿತಂ ಹಿ ಶಿರಃ । ಲೋಮಚ್ಛವೀರಸ್ಥಿ । ಪರಾಚಾಸ್ತುವಂತಿ** ಎಂಬುದರಿಂದ ವ್ಯಕ್ತವಾಗುತ್ತದೆ. ಹೀಗಿರುವಾಗ ಈ ಸಾಮಗರ ತ್ರಿವೃತ್‌ಸ್ತೋಮವೂ, ಈ ಋಕ್ಕುಗಳಲ್ಲಿರುವ ಗಾಯತ್ರಿಛಂದಸ್ಸು ಇವೆರಡೂ ಪ್ರಜೋತ್ಪತ್ತಿಗೆ ಕಾರಣಗಳಾಗುತ್ತವೆ. ಈ **ಸ್ತೋಮಚ್ಛಂದಸ್ಸು**ಗಳು ಪ್ರಜೋತ್ಪಾದಕಗಳಾದುದರಿಂದ ಇವನ್ನನುಸರಿಸಿ ಲೋಕದಲ್ಲಿರುವ ಪ್ರಾಣಿಸಮುದಾಯವೆಲ್ಲವೂ ಉಂಟಾಗಿದೆ. ಆದುದರಿಂದ ಶಿರೋಭಾಗಪಠನವು ಪ್ರಜೆಗಳ ಉತ್ಪತ್ತಿಗೆ ಕಾರಣವಾಗುತ್ತದೆ.

## ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥

**ಏತದ್ವೇದನಂ ಪ್ರಶಂಸತಿ—**

ಈ ವಿಷಯಗಳೆಲ್ಲವನ್ನೂ ತಿಳಿದಿರುವ ಪುರುಷನು ಪ್ರಜಾಸಂತತಿಯಿಂದಲೂ ಪಶುಸಂಪತ್ತಿನಿಂದಲೂ ಅಭಿವೃದ್ಧಿಯನ್ನು ಪಡೆಯುತ್ತಾನೆ.

## ಅಥ ಸೂದದೋಹಾಃ ಪ್ರಾಣೋ ವೈ ಸೂದದೋಹಾಃ ಪ್ರಾಣೇನ ಪರ್ವಾಣಿ ಸಂದಧಾತಿ ॥

**ಶಿರೋಭಾಗಶಂಸನಾನಂತರಂ ಪೂರ್ವವತ್ "ತಾ ಅಸ್ಯ" ಋ. ಸಂ ಮ-೮ ಸೂ-೬೯-ಋ-೩ ಇತ್ಯೇತಾಮೃಚಂ ವಿಧತ್ತೇ—**

ಶಿರೋಭಾಗವನ್ನು ವಿವರಿಸಿದನಂತರ **ತಾ ಅಸ್ಯ** (ಋ. ಸಂ. ೮–೬೯–೩) ಎಂಬ ಋಕ್ಕನ್ನು ವಿವರಿಸುವರು— ಈ ಸೂದದೋಹವೇ ಪ್ರಾಣವು. ದೇಹದಲ್ಲಿ ಪ್ರಾಣವು. ಸಕಲ ಸಂಧಿಭಾಗಗಳನ್ನು ಒಂದು ಗೂಡಿಸಿ ಧರಿಸಿರುತ್ತದೆ.

**ಅಥಾತೋ ವಿಜವಸ್ತಾ ವಿರಾಜೋ ಭವಂತಿ ತಸ್ಮಾತ್ಪುರುಷಃ ಪುರುಷ-ಮಾಹ ವಿ ವಾ ಅಸ್ಮಾಸು ರಾಜಸಿ ಗ್ರೀವಾ ವೈ ಧಾರಯಸೀತಿ ಸ್ತಭ-ಮಾನಂ ವಾ ಯದ್ವಾ ದುತಾಃ ಸಂಬಾಹ್ಯತಮಾಃ ಸತ್ಯೋಽನ್ನತಮಾಂ ಪ್ರತ್ಯಚ್ಯಂತೇಽನ್ನಂ ಹಿ ವಿರಾಳನ್ನಮು ವೀರ್ಯಂ ॥**

ಶಿರೋಭಾಗಂ ಸಮಾಪ್ಯಾನಂತರಂ ಪಕ್ಷ್ಯಾಕಾರಸ್ಯ ಪಕ್ಷಮೂಲಭಾಗಾಪೇಕ್ಷಣಾತ್ತತ್ತದ್ಭಾಗ-ಶಂಸನಂ ವಿಧತ್ತೇ—ವಿಶೇಷೇಣ ಜವೋ ವೇಗೋ ಯಸ್ಮಿನ್ಪಕ್ಷಮೂಲೇ (ಸ) ವಿಜವಃ । ಯದ್ವಾ ಗ್ರೀವಾಯಾ ಅಧಸ್ತನಾ ಅಸ್ಥಿವಿಶೇಷಾ ವಿಜವ ಇತ್ಯನೇನೋಚ್ಯಂತೇ । ತದ್ಭಾವ (ಗ) ತ್ವೇನ ಸಂಪಾದ್ಯ-ಮಾನಾಸ್ತಾ ಋಚೋ ವಿರಾಟ್‌ಛಂದಸ್ಕಾ ಭವಂತಿ । ತಾಶ್ಚ ಪಂಚಮೇ ಶೌನಕೇನ ಶಾಖಾಂತರಮಾ-ಶ್ರಿತ್ಯ ಪಠಿತಾಃ—“ಸುತಸ್ತೇ ಸೋಮ ಉಪಯಾಹಿ” (ಐ–ಆ–೫–೨–ಖ–೧) ಇತ್ಯಾದಿನಾ । ಯಸ್ಮಾದ್ಗ್ರೀವಾಯಾ ಅಧೋವರ್ತೀ ಪಕ್ಷಮೂಲಭಾಗೋಽಸ್ಥಿಭಾಗೋ ವಾ ವಿರಾಟ್‌ಛಂದಸ್ಕ ಮಂತ್ರರೂಪೋ ಯ (ಪಸ್ತ) ಸ್ಮಾಲ್ಲೋಕೇ ಕಶ್ಚಿತ್ಪುರುಷ ಇತರಂ ಪುರುಷಂ ಶ್ರುತಾಧ್ಯಯನಸಂಪನ್ನಂ ಸ್ವಾಮಿನಂ ಪ್ರತ್ಯೇವಂ ಪ್ರಬ್ರೂತೇ । ಅಸ್ಮಾಸು ಮಧ್ಯೇ ತ್ವಮೇವ ವಿರಾಜಸೀತಿ । ಅಥವಾ ಸ್ತಭಮಾನಂ ಪ್ರಣಿಪಾತಾದಿವಿನಯರಹಿತಮುತ್ಕಂಧರಂ ಸ್ತಬ್ಧಂ ಪುರುಷಮುಪಾಲಂಭಂ ಕುರ್ವನ್ನೇತದ್ಬ್ರೂತೇ । ಗ್ರೀವಾವಯವಾನೇವ ತ್ವಂ ಧಾರಯಸೀತಿ । ಯದ್ಯಪ್ಯನೇನೈವೋದ್ಧತ್ಯಾಹ್ವಯನೇ (ತ್ಯಾಹ್ವಾನೇ) ನ ಸ್ತುತಿರ್ನ ಪ್ರತೀಯತೇ ತಥಾಪಿ ಗ್ರೀವಾಧಾರತ್ವಾಕಾರೇಣಾತ್ರ ಸ್ತುತಿರ್ದ್ರಷ್ಟವ್ಯಾ । ಇತ್ಥ ಲೌಕಿಕೋಕ್ತಿಮುಪಜೀವ್ಯ ವಿರಾಟ್‌ಛಂದಸ್ಕಾನಾಮೃಚಾಂ ಪ್ರಶಂಸಾ ಕೃತಾ । ಅಥಾನ್ನಹೇತುತ್ವಮುಪ ಜೀವ್ಯ ಪ್ರಶಂಸಾರ್ಥಂ ಯದ್ವೇತಿ ಪಕ್ಷಾಂತರೋಪನ್ಯಾಸಃ । ಗ್ರೀವಾಯಾ ಅಧೋಭಾಗರೂಪಾಃ ಸುತಸ್ತೇ ಸೋಮ ಇತ್ಯಾದಿಕಾ ಋಚೋ ದುತಾಃ ಪ್ರಾಪ್ತಾಃ । “ದು ಗತೌ” (ಬ್ವಾ–ಪ) ಇತ್ಯಸ್ಮಾ-ದ್ಧಾತೋರುತ್ಪನ್ನಃ ಶಬ್ದಃ । ಸಂವಾಹ್ಯತಮಾ ಅತಿಶಯೇನ ಪರಸ್ಪರಸಂಶ್ಲಿಷ್ಟಾಸ್ಥಿರೂಪತ್ವೇನ ದೃಷ್ಟಾಃ ಸತ್ಯೋಽತಿಶಯೇನಾನ್ನರೂಪಾಂ ವಿರಾಜಂ ಪ್ರತ್ಯಂಚ್ಯಂತೇ ಪ್ರಾಪ್ಯಂತೇ । ಯಸ್ಮಾದನ್ನಹೇತುತ್ವೇನ ವಿರಾಡನ್ನಂ ತಚ್ಚ ಶಕ್ತಿಹೇತುತ್ವಾದ್ವೀರ್ಯಂ ತಸ್ಮಾದ್ವಿರಾಜಃ ಶಂಸೇದಿತ್ಯರ್ಥಃ ॥

ಶಿರೋಭಾವನ್ನು ಸಮಾಪ್ತಿಗೊಳಿಸಿ ಪಕ್ಷ್ಯಾಕಾರಕ್ಕೆ ರೆಕ್ಕೆಯ ಮೂಲಭಾಗವು ಅಪೇಕ್ಷಿತವಾದುದರಿಂದ ಆ ಭಾಗವನ್ನು ವಿವರಿಸುತ್ತಾರೆ. ರೆಕ್ಕೆಯ ಮೂಲಭಾಗದಲ್ಲಿ ಅಧಿಕವೇಗವಿರುವುದರಿಂದ ಅದು ವಿಜವ ಎಂದು ಹೇಳಲ್ಪಡುತ್ತದೆ. ಅಥವಾ ಗ್ರೀವಾ (ಕಂಠ) ಭಾಗದ ಕೆಳಗಿರುವ ಅಸ್ಥಿ (ಮೂಳೆ) ವಿಶೇಷಕ್ಕೆ ವಿಜವ ನೆಂದು ಹೆಸರು. ಈ ಭಾವದಿಂದ ಕಲ್ಪಿಸುವ ಋಕ್ಕುಗಳು **ವಿರಾಟ್ ಛಂದಸ್ಕ** ಗಳಾಗಿರುತ್ತವೆ. ಈ ಛಂದಸ್ಸಿನ ಋಕ್ಕುಗಳು ಒಂದನೆಯ ಆರಣ್ಯಕದಲ್ಲಿ ಶೌನಕರು ಶಾಖಾಂತರವನ್ನಾಶ್ರಯಿಸಿ ಹೇಳಿರುತ್ತಾರೆ. **“ಸುತಸ್ತೇ ಸೋಮ ಉಪಯಾಹಿ”**— ಐ–ಆ–೫–ಅ–೨–ಖಂ–೧) ಎಂದು. ಗ್ರೀವಾಭಾಗದ ಕೆಳಗಿರುವ ರೆಕ್ಕೆಯ ಮೂಲಪ್ರದೇಶವಾಗಲೀ, ಅಸ್ಥಿಭಾಗವಾಗಲಿ

ವಿರಾಟ್ಛಂದಸ್ಸಿನ ಮಂತ್ರ ರೂಪವಾಗಿರುವುದರಿಂದ ಲೋಕದಲ್ಲಿಯೂ ಕೂಡ ವೇದಾಧ್ಯಯನಸಂಪನ್ನನಾದ ಶ್ರೋತ್ರಿಯ ಪುರುಷನನ್ನು ಕುರಿತು ಇತರ ಮನುಷ್ಯರು ಹೀಗೆ ಹೇಳುತ್ತಾರೆ. ನಮ್ಮೆಲ್ಲರ ಮಧ್ಯದಲ್ಲಿ ನೀನೇ ಪ್ರಕಾಶಿಸುವಿ. ಅಥವಾ ನಮಸ್ಕಾರವಿನಯಾದಿಗುಣರಹಿತನಾದ ತಲೆಯೆತ್ತಿ ತಿರುಗುವ ಉದ್ಧತಪುರುಷನನ್ನು ನಿಂದಿಸುವುದಕ್ಕೋಸ್ಕರವೂ ಇದನ್ನು ಹೇಳುತ್ತಾರೆ. ಲೋಕದಲ್ಲಿ ಕತ್ತುಳ್ಳವನು ನೀನೊಬ್ಬನೇ. (ಬಗ್ಗಿನಡೆಯುವ ಸ್ವಭಾವವಿಲ್ಲದೆ ಉದ್ಧತನಾಗಿರುವಿ ಎಂದು ತಾತ್ಪರ್ಯ.) ಯದ್ಯಾಪಿ ಉದ್ಧತನಿಗೆ ಹೀಗೆ ಹೇಳುವುದು ಸ್ತುತಿಯಾಗುವುದಿಲ್ಲ ; ಆದರೂ ಗ್ರೀವಾ ಅವಯವದ ಪ್ರಾಧಾನ್ಯದಿಂದ ಸ್ತುತಿಯೆಂದು ತಿಳಿಯಬೇಕು. ಹೀಗೆ ಲೌಕಿಕವ್ಯವಹಾರವನ್ನಾಶ್ರಯಿಸಿ ವಿರಾಟ್ಛಂದಸ್ಸಿನ ಋಕ್ಕುಗಳ ಪ್ರಾಶಸ್ತ್ಯವನ್ನು ಹೇಳಿದ್ದಾಯಿತು. ಇನ್ನು ಅನ್ನಾದಿಕಾರಣತ್ವವನ್ನಾಶ್ರಯಿಸಿ ಶ್ರೈಷ್ಠ್ಯವನ್ನು ಸೂಚಿಸಲು **ಯದ್ವಾ** ಎಂದು ಪಕ್ಷಾಂತರ ಹೇಳಿದೆ. ಗ್ರೀವಾ ಅಧೋಭಾಗರೂಪವಾದ **ಸುತಸ್ತೇ ಸೋಮ** ಇತ್ಯಾದಿ ಋಕ್ಕುಗಳಿಗೆ ಮತಾ ಎಂದು ಹೆಸರು. ಗತ್ಯರ್ಥಕವಾದ ಮಧಾತುವಿನಿಂದ ಈ ಮತಶಬ್ದನಿಷ್ಪನ್ನವಾಗಿದೆ. **ಸಂವಾಹ್ಯತಮಾ** ಅಂದರೆ ಚೆನ್ನಾಗಿ ಪರಸ್ಪರಸೇರಿಕೊಂಡಿರುವ ಅಸ್ಥಿರೂಪವಾಗಿ ಕಲ್ಪಿಸಿರುವ ಈ ವಿರಾಟ್ಛಂದಸ್ಸು ಅತಿಶಯ ಅನ್ನಹೇತುವಾದುದರಿಂದ ಅನ್ನವೆಂದೂ ಹೇಳಲ್ಪಡುತ್ತದೆ. ಅನ್ನವೇ ಅತಿಶಯಶಕ್ತಿಕಾರಣವಾದುದರಿಂದ ವೀರ್ಯವು. ಇದೇ ವಿರಾಟ್ಛಂದೋರೂಪವಾದುದರಿಂದ ಅತಿಪ್ರಶಸ್ತವಾಗಿದೆ.

**ಅಥ ಸೂದದೋಹಾಃ ಪ್ರಾಣೋ ವೈ ಸೂದದೋಹಾಃ ಪ್ರಾಣೇನ ಪರ್ವಾಣಿ ಸಂದಧಾತಿ ॥**

**“ ತಾ ಅಸ್ಯ ಸೂದದೋಹಸಃ ” (ಋ-ಸಂ-ಮಂ-೮-ಸೂ-೬೯-ಋ-೩] ಇತ್ಯೇತಾಮೃಚಂ ವಿಧತ್ತೇ—**

‘ ತಾ ಅಸ್ಯ ಸೂದದೋಹಸಃ ’ (ಋ. ಸಂ. ೮-೬೯-೩) ಎಂಬ ಋಕ್ಕನ್ನು ವಿವರಿಸುತ್ತಾರೆ. ಇದು ಹಿಂದೆ ವಿವರಿಸಿದೆ.

---

*English Translation*

---

1. Next becomes the Sudadohas verse. Sudadohas is breath, and thereby he joins all joints with breath.

2 Next follow the neck verses. They recite them as Ushnih, according to therie metre.

3. Next comes (again) the Sudadohas verse. Sudadohas is breath, and thereby he joins all joints with breath,

4. Next follows the head. That is in Gayatri verses. The Gayatri is the begining of all metres; the head the first of all members. It is in Arkavat verses (Rv. 1. 7, 1–9). Arka is Agni. They are nine verses. The head consists of nine pieces. He recites the tenth verse, and that is the skin and the hairs on the head. It serves for recitihg one verse more than (the nine verses contained in) the Stoma. These form the Trivrit Stoma and the Gayatri metre, and whatever there exists, all this is produced after the production of this Stoma and this metre. Therefore the recitation of these head-hymns serves for productions.

5. He who knows this, gets offspring and cattle.

6. Next comes the Sudadohas verse. Verily, Sudadohas is breath, and thereby he joins all joints with breath.

7. Next follow the vertebrae (of the bird). These verses are Virag (shining). Therefore man says to man, 'Thou shinest above us;' or to a stiff and proud man, 'Thou carriest thy neck stiff.' Or because the (vertebrae of the neck) run close together, they are taken to be the best food. For Virag is food, and food is strengh.

8. Next comes the Sudadohas verse. Sudadohas is breath, and thereby he joins all joints with breath.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ಚತುರ್ಥಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪ್ರಥಮಾರಣ್ಯಕದ
ನಾಲ್ಕನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು ॥

---

# ಅಥ ಪ್ರಥಮಾರಣ್ಯಕೇ ಚತುರ್ಥಾಧ್ಯಾಯೇ ಸಪ್ತಮಃ ಖಂಡಃ

## ಪ್ರಥಮಾರಣ್ಯಕದ ನಾಲ್ಕನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

---

ಅಥಾತೋ ದಕ್ಷಿಣಃ ಪಕ್ಷಃ ಸೋಽಯಂ ಲೋಕಃ ಸೋಽಯಮಗ್ನಿಃ ಸಾ ವಾಕ್ತದ್ರಥಂತರಂ ಸ ವಸಿಷ್ಠಸ್ತಚ್ಛತಂ ತಾನಿ ಷಡ್ವೀರ್ಯಾಣಿ ಭವಂತಿ ಸಂಪಾತ ಏವ ಕಾಮಾನಾಮುಭ್ಯಾಪ್ತ್ಯೈ ಪ್ರತಿಷ್ಠಿತ್ಯಾ ಅನ್ನಾದ್ಯಾಯ ಪಂಕ್ತಿಃ ॥

ಪಕ್ಷ್ಯಾಕಾರಸ್ಯ ಶಸ್ತ್ರಸ್ಯ ಪಕ್ಷಾಪೇಕ್ಷತ್ವಾದಾದೌ ದಕ್ಷಿಣಂ ಪಕ್ಷಂ ವಿಧತ್ತೇ—ಯೋಽಯಂ ದ್ವಿತೀಯಭಾಗೋ ದಕ್ಷಿಣಃ ಪಕ್ಷಃ ಸೋಽಯಂ ಭೂಲೋಕಾಭ್ಯಃ (ಭೂಲೋಕಃ) ಪ್ರಥಮಭಾವಿತ್ವಾತ್ । ಭೂಲೋಕಸ್ಯಾಗ್ನಿನಾ ದೇವೇನಾಧಿಷ್ಠಿತತ್ವಾದಯಂ (ಪಕ್ಷೋ ನಿಃಸರೂಪತ್ವಶ್ಚ) ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್ "(ಐ, ಆ-೨-೪-೨) ಇತಿ ಶ್ರುತೇರಗ್ನಿಸಂಬಂಧಂ (ದ್ಧ) ತ್ವಾದ್ವಾಗ್ರೂಪೋಽಯಂ ಪಕ್ಷಃ । ವಾ) ಗ್ರೂಪಸ್ಯ " ವಾಗ್ವೈ ರಥಂತರ (ಸ್ಯರೂಪಮ್, " (ಐ-ಆ-೩-ಅ-೧-ಖಂ-೯) ಇತಿ ರಥಂತರಸಾಮರೂಪತ್ವಮ್ । ಏತಸ್ಮಿನ್ದಕ್ಷಿಣೇ ಪಕ್ಷೇ ಶಸ್ಯಾ ಋಚಃ ಸಂಪದ್ಯಂತೇ । ತಾಶ್ಚ ಪಂಚಮೇ ಶೌನಕೇನೋದಾಹೃತಾಃ " ರಥಂತರ (ಸ್ಯ) ಸ್ತೋತ್ರಿಯಾಭಿ (ನು) ರೂಪೌ " (ಐ-ಆ-೫-ಅ-೨-ಖಂ-೧) ಇತ್ಯಾದಿಕಾಃ । ತತ್ರ ಸ್ತೋತ್ರಿಯೇ ತೃಚೇ ತದನುರೂಪೇ ಚ ತೃಚಾಂತರೇಣ ಷಟ್ಸಂಖ್ಯಾಕಾ ಋಚಃ । ಇಂದ್ರಸ್ಯ ನು ವೀರ್ಯಾಣಿ " (ಋ-ಸಂ-ಮಂ-೧-ಸೂ-೩೨-ಋ-೧) ಇತಿ ಸೂಕ್ತಂ ಪಂಚದಶರ್ಚಮ್ । " ತ್ವೇ ಹ ಯತ್ಪಿತರಃ " (ಋ-ಸಂ-ಮಂ-೭-ಸೂ-೧೮. ಸೂ-೧) ಇತ್ಯೇತಸ್ಮಿನ್ಪಂಚವಿಂಶತ್ಯೃಚೇ ಪಂಚೋಽಪಶನೀಯಾಃ । " ಯಸ್ತಿಗ್ಮಶೃಂಗಃ " ಋ-ಸಂ-ಮಂ-೭-ಸೂ-೧೯-ಋ-೧) ಇತಿ ಸೂಕ್ತಮೇಕಾದಶರ್ಚಮ್ । " ಉಗ್ರೋ ಜಜ್ಞೇ " (ಋ-ಸಂ-ಮಂ-೭-ಸೂ-೨೦-ಋ-೧) ಇತಿ ಸೂಕ್ತಂ ದಶರ್ಚಮ್ । " ಉದು ಬ್ರಹ್ಮಾಣೀ " (ಋ-ಸಂ-ಮಂ-೭-ಸೂ-೨೪-ಋ-೧) ಇತಿ ಸೂಕ್ತಂ ಷಡೃಚಮ್ । ಆ ತೇ ಮಹ ಇತ್ಯಾದೀನಿ ಪಂಚ ಸೂಕ್ತಾನಿ ತೇಷು ಪ್ರಥಮಮ್- " ಆ ತೇ ಮಹಃ " (ಋ-ಸಂ-ಮಂ-೭-ಸೂ-೨೫-ಋ-೧) ಇತಿ ಸೂಕ್ತಂ ಷಡೃಚಮ್ । " ನಸೋಮಃ " (ಋ-ಸಂ-ಮಂ-೭-ಸೂ-೨೭-ಋ-೧) ಇತಿ ದ್ವಿತೀಯಂ ಪಂಚರ್ಚಮ್ । "ಇಂದ್ರಂ ನರಃ " (ಋ-ಸಂ-ಮಂ-೭-ಸೂ-೨೮-ಋ-೧ ಇತಿ ತೃತೀಯಮಪಿ ಪಂಚರ್ಚಮ್ । " ಬ್ರಹ್ಮಾಣಃ " (ಋ-ಸಂ-ಮಂ-೭-ಸೂ-೨೯-ಋ-೦) ಇತ್ಯೇತಚ್ಚತುರ್ಥಮಪಿ ಪಂಚರ್ಚಮ್ । " ಅಯಂ ಸೋಮಃ " (ಋ-ಸಂ-ಮಂ-೭-ಸೂ-೩೦-ಋ-೧) ಇತ್ಯೇತತ್ಪಂಚಮಮಪಿ ಪಂಚರ್ಚಮ್ । " ಆ ಸ ಇಂದ್ರೋ ದೂರಾತ್ " (ಋ-ಸಂ-ಮಂ-೪-ಸೂ-೨೦-ಋ-೧) ಇತಿ ಸೂಕ್ತಮೇಕಾದಶರ್ಚಮ್ । ತದೇತತ್ಸಂಪಾತಸೂಕ್ತಮಿತಿ ನಾಮ್ನಾ ವ್ಯವಹ್ರಿಯತೇ । " ಇತ್ಥಾ ಹಿ ಸೋಮಃ " (ಋ-ಸಂ-ಮಂ-೧-ಸೂ-೮೦-ಋ-೧) ಇತ್ಯೇಷಾ ಪಂಕ್ತಿಚ್ಛಂದಸ್ಕಗೇಕಾ, ತಸ್ಯಾಃ

ಪಂಕ್ತೇಃ ಪ್ರಾಚೀನಂ ಸರ್ವಮೃಚಾಂ ಶತಂ ಸಂಪದ್ಯತೇ । ಏತಸ್ಮಿನ್‌ದಕ್ಷಿಣೇ ಪಕ್ಷೇ ಪೂರ್ವೋಕ್ತ-ಭೂಲೋಕಾಗ್ನಿವಾಗ್ರಥಂತರವಸಿಷ್ಠಶತಸಂಖ್ಯಾರೂಪಾಣಿ ಯಾನಿ ತಾನಿ ಷಟ್‌ಸಂಖ್ಯಾಕಾನಿ ವೀರ್ಯಾಣಿ ಭವಂತಿ । ‹‹ ಆ ನಃ ›› ಇತ್ಯಾದಿಸೂಕ್ತಗತರ್ಕ್ಸಂಪಾತ ಏವ ಸಮ್ಯಕ್‌ಪ್ರಾಪ್ತಿಹೇತುರೇವ ಅತೋಽಯಂ ಕಾಮಾನಾಮಭಿತಃ ಪ್ರಾಪ್ತ್ಯರ್ಥಂ ಭೂಲೋಕೇ ಪ್ರತಿಷ್ಠಾರ್ಥಮನ್ನಾದ್ಯಪ್ರಾಪ್ತ್ಯರ್ಥಂ ಚ । ತಚ್ಛತಂ ಸಂಪದ್ಯತೇ ತಸ್ಮಾಚ್ಛತಸ್ಯೋಪರಿ ‹‹ ಇತ್ಥಾ ಹಿ ಸೋಮಃ ›› ಇತ್ಯಾದಿಕಾ ಪಂಕ್ತಿಃ ಪಠನೀಯಾ ॥

ಪಕ್ಷ್ಯಾಕಾರವಾದ ನಿಷ್ಕೇವಲ್ಯಶಸ್ತ್ರಕ್ಕೆ ಪಕ್ಷ (ರೆಕ್ಕೆ) ವು ಅವಶ್ಯಕವಾದುದರಿಂದ ಮೊದಲು ಬಲಭಾಗದ ಪಕ್ಷವನ್ನು ವಿವರಿಸುತ್ತಾರೆ. ಮೊದಲು ಉತ್ಪನ್ನವಾಗುವುದರಿಂದ ಈ ಭೂಲೋಕವೇ ದ್ವಿತೀಯಭಾಗವಾದ ದಕ್ಷಿಣಪಕ್ಷವು. ಈ ಭೂಲೋಕವು ಅಗ್ನಿದೇವನಿಂದ ವ್ಯಾಪ್ತವಾದುದರಿಂದ ಅಗ್ನಿಯೂ ಆಗಿರುತ್ತದೆ. **“ ಅಗ್ನಿರ್ವಾಗ್ಭೂತ್ವಾಮುಖಂ ಪ್ರಾವಿಶತ್ ”** (ಐ-ಆ-೨-೪-೨) ಎಂಬ ಶ್ರುತಿಯಿಂದ ವಾಕ್ಕಿಗೆ ಅಗ್ನಿಸಂಬಂಧವಿರುವುದರಿಂದ ಈ ಪಕ್ಷವು ವಾಗ್ರೂಪವಾಗಿರುತ್ತದೆ. ವಾಗ್ರೂಪಕ್ಕೆ ‘ ವಾಗ್ವೈ ರಥಂತರಸ್ಯರೂಪಂ ’ (ಐ-ಆ-೩-೧-೬) ಎಂಬ ಶ್ರುತಿಯಿಂದ ರಥಂತರಸಾಮರೂಪ ಹೇಳಿರುವುದರಿಂದ ಈ ಪಕ್ಷವು ರಥಂತರರೂಪವಾಗಿದೆ. ಇದಕ್ಕೆ ವಸಿಷ್ಠನರೂಪ ಹೇಳಿರುವುದರಿಂದ ಅದು ವಸಿಷ್ಠರೂಪವಾಗಿದೆ. ಈ ದಕ್ಷಿಣಪಕ್ಷದಲ್ಲಿ ನೂರು ಋಕ್ಕುಗಳು ಇರುತ್ತವೆ. ಐದನೆಯ ಆರಣ್ಯಕದಲ್ಲಿ ಶೌನಕರು **ರಥಂತರ (ಸ್ಯ) ಸ್ತೋತ್ರಿಯಾಭಿ (ನು) ರೂಪಾ** (ಐ-ಆ-೫-೨-೧) ಎಂದು ಈ ಋಕ್ಕುಗಳನ್ನು ವಿವರಿಸಿರುತ್ತಾರೆ. ಅಲ್ಲಿ ಸ್ತೋತ್ರೀಯತೃಚದಲ್ಲಿ ಅದಕ್ಕೆ ಅನುನೂಪವಾದ ಇತರ ತೃಚಗಳನ್ನು ಸೇರಿಸುವುದರಿಂದ ಆರುಸಂಖ್ಯೆಯುಳ್ಳ ಋಕ್ಕುಗಳಾಗುತ್ತವೆ. **‘ ಇಂದ್ರಸ್ಯ ನು ವೀರ್ಯಾಣಿ ’** (ಋ. ಸಂ. ೧-೩೨-೧) ಎಂಬುದು ಹದಿನೈದು ಋಕ್ಕುಗಳಿಂದ ಕೂಡಿದ ಸೂಕ್ತವು. **‘ ತ್ವೇಹ ಯತ್ಪಿತರಃ ’** (ಋ. ಸಂ. ೭-೧೮-೧) ಎಂಬಲ್ಲಿರುವ ಇಪ್ಪತ್ತೈದು ಋಕ್ಕುಗಳಲ್ಲಿ ಹತ್ತು ಋಕ್ಕುಗಳನ್ನು ಪಠಿಸಬಾರದು. **ಯಸ್ತಿಗ್ಮಶೃಂಗಃ** (ಋ. ಸಂ. ೭-೧೯-೧) ಎಂಬ ಸೂಕ್ತದಲ್ಲಿ ಹನ್ನೊಂದು ಋಕ್ಕುಗಳಿವೆ. ‘ ಉಗ್ರೋ ಜಜ್ಞೇ ’ (ಋ. ಸಂ. ೭-೨೦-೧) ಸೂಕ್ತದಲ್ಲಿ ಹತ್ತು ಋಕ್ಕುಗಳಿವೆ. ‘ಉದು ಬ್ರಹ್ಮಾಣೀ’ (ಋ.ಸಂ.೭-೨೪-೧ ಸೂಕ್ತದಲ್ಲಿ ಆರು ಋಕ್ಕುಗಳಿವೆ. ಆ ತೇ ಮಹ ಇತ್ಯಾದಿ ಐದು ಸೂಕ್ತಗಳಿರುತ್ತವೆ. ಅವುಗಳಲ್ಲಿ ಮೊದಲನೆಯ **ಆ ತೇ ಮಃ** ಋ. ಸಂ. ೭-೨೫-೧) ಎಂಬ ಸೂಕ್ತದಲ್ಲಿ ಆರು ಋಕ್ಕುಗಳಿವೆ. **ನ ಸೋಮಃ** (ಋ.ಸಂ. ೭-೨೬-೧) ಎಂಬ ಎರಡನೆಯ ಸೂಕ್ತವು ಐದು ಋಕ್ಕುಗಳಿಂದ ಕೂಡಿದೆ. **‘ ಇಂದ್ರಂನರಃ ’** (ಋ. ಸಂ. ೭-೨೭-೧) ಎಂಬ ಮೂರನೆಯಸೂಕ್ತದಲ್ಲಿಯೂ ಐದು-ಋಕ್ಕುಗಳಿವೆ. **‘ ಬ್ರಾಹ್ಮಣಃ ’** (ಋ. ಸಂ. ೭-೨೮-೧) ಎಂಬ ನಾಲ್ಕನೆಯ ಸೂಕ್ತದಲ್ಲಿಯೂ ಐದು ಋಕ್ಕುಗಳಿವೆ. **‘ ಅಯಂ ಸೋಮಃ ’** (ಋ. ಸಂ. ೭-೩೦-೧) ಎಂಬ ಐದನೆಯ ಸೂಕ್ತದಲ್ಲಿಯೂ ಐದು ಋಕ್ಕುಗಳಿವೆ. **‘ ಅ ವ ಇಂದ್ರೋನರಾತ್ ’** (ಋ. ಸಂ. ೧-೮೦-೧) ಎಂಬ ಪಂಕ್ತಿಛಂದಸ್ಸಿನಿಂದ ಕೂಡಿದ ಒಂದು ಋಕ್. ಹೀಗೆ ಇದರ ಹಿಂದೆ ಹೇಳಿರು 6+15 - 15 - 11 - 10+6+6+5+5+5+5+11 ಋಕ್ಕುಗಳೆಲ್ಲಾ ಸೇರಿ ನೂರಾಗುತ್ತವೆ. ಪೂರ್ವದಲ್ಲಿ ಹೇಳಿದ ಭೂಲೋಕ, ಅಗ್ನಿ, ವಾಕ್, ರಥಂತರ, ವಸಿಷ್ಠ, ಶತಸಂಖ್ಯಾರೂಪಗಳಿಂದ ಈ ದಕ್ಷಿಣಪಕ್ಷದಲ್ಲಿ ಷಟ್‌ಸಂಖ್ಯಾಕ(ಆರು)ಗಳಾದ ವೀರ್ಯವು ನಿಷ್ಪನ್ನವಾಗುತ್ತದ. **“ ಆ ನಃ ”** ಇತ್ಯಾದಿ ಸೂಕ್ತಗಳ ಋಕ್ಸಂಪಾತವೇ ಸಕಲ ಇಷ್ಟಾರ್ಥಪ್ರಾಪ್ತಿಗೂ, ಭೂಲೋಕದಲ್ಲಿ ಪ್ರತಿಷ್ಠಸಂಪಾದನೆಗೂ, ಅನ್ನಾದಿಪ್ರಾಪ್ತಿಗೂ ಕಾರಣವಾಗುತ್ತದೆ. ಈ ನೂರು ಋಕ್ಕುಗಳಾದ ಮೇಲೆ **‘ಇತ್ಥಾ ಹಿ ಸೋಮಃ’** ಎಂಬ ಪಂಕ್ತಿಛದಸ್ಸನ್ನು ಪಠಿಸಬೇಕು.

ಅಥಾತ ಉತ್ತರಃ ಪಕ್ಷಃ ಸೋಽಸೌ ಲೋಕಃ ಸೋಽಸಾವಾದಿತ್ಯಸ್ತನ್ಮನ-
ಸ್ತದ್ಬೃಹತ್ಸ ಭರದ್ವಾಜಸ್ತಚ್ಛತಂ ತಾನಿ ಷಡ್ವೀರ್ಯಾಣಿ—ಭವಂತಿ
ಸಂಪಾತ ಏವ ಕಾಮಾನಾಮಭ್ಯಾಪ್ತ್ಯೈ ಪತಿಷ್ಠಿತ್ಯಾ ಅನ್ನಾದ್ಯಾಯ
ಪಂಕ್ತಿಃ ॥

ತತ ಊರ್ಧ್ವಂ “ ತಾ ಅಸ್ಯ ” (ಋ. ಸಂ. ಮ ೮ ಸೂ. ೬೯ ಋ. ೩) ಇತ್ಯೇತಾಮೃಚಂ ವಿಧತ್ತೆ—ಯ ಉತ್ತರಃ ಸೋಽಸೌ ದ್ಯುಲೋಕಸ್ವರೂಪಃ । ಭೂಲೋಕರೂಪಾ (ಪ) ದಕ್ಷಿಣ ಪಕ್ಷಾ-ನಂತರ್ಭಾ (ರಭಾ) ವಿಶ್ವಾತ್ । (ತಥಾ ಸ) ಆದಿತ್ಯಸ್ಯ ದ್ಯುಲೋಕವಾದಿ (ಸಿ) ತ್ವಾತ್ತದ್ರೂಪ (ಃ) ಸ್ಯ (ಸ) ಚ (ಮನೋರೂಪಃ) ಯದ (ದ್ಯ) ಪಿ ಮನಸಶ್ಚಂದ್ರಮಾ ದೇವತಾ ತಥಾಪಿ ಚಂದ್ರಾದಿತ್ಯ-ಯೋರಭೇದ (ಸ್ಯ) ವಿವಕ್ಷಿತತ್ವಾದಿತ್ಯಡಾದಿಮನೋರೂಪಾರೂಪತ್ತಮನೋರೂಪತ್ವಮ್ । (ತಚ್ಚ ಬೃಹತ್) “ ಮನೋ ವೈ ಬೃಹತ್ ” ಇತಿ ಶ್ರುತೇಃ । (ತಸ್ಯ ಚ) ಬೃಹತ್ಸಾಮಾನಂತರಂ “ ಭರದ್ವಾಜೋ ಬೃಹತ್ಯಃ ” (ತ್) ಇತಿ ಶ್ರುತೇರ್ಭರದ್ವಾಜರೂಪತ್ವಮ್ । ತದುತ್ತರಪಕ್ಷಸ್ವರೂಪ ಮೃಚಾಂ ಶತಂ ಸಂಪದ್ಯತೇ । ತಚ್ಚ ಶತಂ ಪಂಚಮೇ “ ತ್ವಾಮಿದ್ಧಿ ” (೫–೮–೫–೮–೨–೫೦–೧) ಇತ್ಯಾದಿನಾ ಶೌನಕ ಉದಾಜಹಾರ । ‘ ತ್ವಾ ಮಿದ್ಧಿ ಹವಾಮಹೇ (ಋ. ಸಂ. ಮಂ. ೬ ಸೂ. ೪೬–ಋ. ೧) “ ತ್ವಂ ಹ್ಯೇಹಿ ಚೇರವೇ ” (ಋ. ಸಂ. ಮಂ ೮–ಸೂ ೬೧ ಋ. ೭) ಇತ್ಯನಯೋ-ಸ್ತೃಚಯೋಃ ಷಡ್ಋಚಃ । “ ತಮುಷ್ಟುಹಿ ” ಇತ್ಯೇತತ್ಪಂಚದಶರ್ಚಂ ಸೂಕ್ತಮ್ । ತತ್ತ್ವ ಮಿತ್ಯಾದಿ ಸೂಕ್ತಾನಿ । ‘ ಸುತೇ ’ (ಋ. ಸಂ. ಮಂ. ೬ ಸೂ ೨೩ ಋ. ೧) ಇತ್ಯೇತತ್ಪ್ರಥಮಂ ದಶರ್ಚಮ್ । ‘ ವೃಷಾಮದಃ ’ (ಋ. ಸಂ. ಮಂ. ೬ ಸೂ. ೩೧ ಋ. ೧) ಇತ್ಯೇತದ್ದ್ವಿತೀಯಮಪಿ ಸೂಕ್ತಮ್ । (ದಶರ್ಚಮ್ । ‘ ಯಾ ತ ಊತಿರವಮಾ ’) (ಋ. ಸಂ. ಮಂ. ೬ ಸೂ. ೨೫ ಋ. ೧ ಇತಿ) ನವರ್ಚಮ್ । “ ಅಭೂರೇಕಃ ” ಇತ್ಯಾದೀನ್ಯಷ್ಟಾ ಸೂಕ್ತಾನಿ । ತೇಷು “ ಅಭೂರೇಕಃ ” (ಋ. ಸಂ. ಮ೬ ೩೧ ಋ. ೧) ಇತಿ ಪ್ರಥಮಂ ಸೂಕ್ತಮ್ । । ಅಪೂರ್ವ್ಯಾ “ ಪುರುತಮಾನಿ ” (ಋ. ಸಂ. ಮಂ೬ ಸೂ. ೩೨ ಋ. ೧) ಇತಿ ದ್ವಿತೀಯಮ್ । “ ಯಓಜಿಷ್ಠಃ ” (ಋ. ಸಂ. ಮ೬–ಸೂ. ೩೩. ಋ. ೧) ಇತಿ ತೃತೀಯಮ್ । “ ಸಂ ಚತ್ವಾ ” (ಋ. ಸಂ. ಮಂ೬ ಸೂ. ೩೪. ಋ. ೧) ಇತಿ ಚತುರ್ಥಮ್ । “ ಕದಾ ಭುವನ್ ” (ಋ. ಸಂ. ಮಂ. ೬ ಸೂ ೩೫ ಋ. ೧) ಇತಿ ಪಂಚ ಮಮ್ । “ ಸತ್ರಾ ಮದಾಸಃ ” (ಋ. ಸಂ. ಮ೬ ಸೂ.೩೬. ಋ. ೧) ಇತಿ ಷಷ್ಠಮ್ । “ ಅರ್ವಾ ಗ್ರಥಃ ” (ಋ. ಸಂ. ಮ. ೬ ಸೂ ೩೭. ಋ. ೧) ಇತಿ ಸಪ್ತಮಮ್ । “ ಅಪಾತ್ ” (ಋ. ಸಂ. ಮಂ.೬ ಸೂ. ೩೮. ಋ. ೧) ಇತ್ಯಷ್ಟಮಮ್ । ತಾನ್ಯೇತಾನ್ಯಷ್ಟಾ ಸೂಕ್ತಾನಿ । ತಾನ್ಯೇತಾನ್ಯಪಿ ಪ್ರತ್ಯೇಕಂ ಪಂಚರ್ಚಾನಿ । “ ಕಥಾ ಮಹಾನ್ ” (ಋ. ಸಂ. ಮ. ೪ ಸೂ ೩೩ ಋ. ೧) ಇತ್ಯೇ ತತ್ಸೂಕ್ತಮೇಕಾದಶರ್ಚಂ ತಚ್ಚ ಸಂಪಾತಶಬ್ದೇನ ವ್ಯವಹ್ರಿಯತೇ । “ ಇಂದ್ರೋ ಮದಾಯ ” (ಋ. ಸಂ. ಮಂ. ೧ ಸೂ ೮೧. ಋ. ೧) ಇತ್ಯೇಕಾ ಪಂಕ್ತಿಚ್ಛಂದಸ್ಕಾ। ತಸ್ಯಾಃ ಪಂಕ್ತೇಃ ಪ್ರಾಚೀನಾ ಋಚೋ ಯದ್ಯಪ್ಯೇಕಾಧಿಕ ಶತಸಂಖ್ಯಾಕಾಸ್ತಥಾಪಿ ತತ್ರ ನ (ಶ) ತಸ್ಯ ವಿದ್ಯಮಾನತ್ವಾತ್ತಚ್ಛತಮಿತ್ಯು ಚ್ಯತೇ ತಾನಿ ಷಡ್ವೀರ್ಯಾಣೀತ್ಯಾದಿಕಂ ಪೂರ್ವವತ್ ॥

ದಕ್ಷಿಣಪಕ್ಷವನ್ನು ವಿವರಿಸಿದನಂತರ 'ತಾ ಅಸ್ಯ' (ಋ-ಸಂ-೮-೬೯-೩) ಎಂಬ ಋಕ್ಕನ್ನು ವಿವರಿಸುತ್ತಾರೆ. ಭೂಲೋಕರೂಪರೂಪದಕ್ಷಿಣದ ಪಕ್ಷದಲ್ಲಿ ಸೇರಿರುವುದರಿಂದ ಶಸ್ತ್ರದ ಉತ್ತರಪಕ್ಷ ಯಾವದಿದೆಯೋ ಅದೇ ದ್ಯುಲೋಕವು. ಇದರಲ್ಲಿ ಆದಿತ್ಯನು ಇರುವುದರಿಂದ ಈ ದ್ಯುಲೋಕವೇ ಆದಿತ್ಯನು. ಇವನು ಮನೋರೂಪನಾದುದರಿಂದ ಆದಿತ್ಯನೇ ಮನಸ್ಸು. ಯದ್ಯಪಿ ಮನಸ್ಸಿಗೆ ಚಂದ್ರನು ದೇವತೆ, ಆದರೂ ಚಂದ್ರಾದಿತ್ಯರಿಗೆ ಅಭೇದವಿವಕ್ಷೆಯಿಂದ ಆದಿತ್ಯನೇ ಮನಸ್ಸೆಂದು ತಿಳಿಯಬೇಕು. **'ಮನೋ ವೈ ಬೃಹತ್'** ಎಂಬ ಶ್ರುತಿಪ್ರಮಾಣದಿಂದ ಈ ಮನಸ್ಸೇ ಬೃಹತ್ಸಾಮ 'ಭರಧ್ವಾಜೋ ಬೃಹತ್ಯಃ(ತ್)' ಎಂಬ ಶ್ರುತಿಯನ್ನನುಸರಿಸಿ ಈ ಬೃಹತ್ಸಾಮ ಭರದ್ವಾಜಸ್ವರೂಪವು. ಉತ್ತರಪಕ್ಷ ಸ್ವರೂಪವೂ ನೂರು ಋಕ್ಕುಗಳಿಂದ ಸಂಪಾದಿತವಾದುದರಿಂದ ಶತಸಂಖ್ಯೆಯೂ ಸಿದ್ಧವಾಗುತ್ತದೆ. ಈ ನೂರು ಸಂಖ್ಯೆಯನ್ನು ಪಂಚಮದಲ್ಲಿ ಶೌನಕರು 'ತ್ವಾಮಿದ್ಧಿ' (ಐ. ಆ. ೫-೨-೧) ಇತ್ಯಾದಿ ಮಂತ್ರಗಳಿಂದ ವಿವರಿಸುತ್ತಾರೆ. 'ತ್ವಾಮಿದ್ಧಿ' ಹವಾಮಹೇ (ಋ. ಸಂ. ೬-೪೬-೧) 'ತ್ವಂ ಹ್ಯೇಹಿ ಚೇರವೇ' (ಋ. ಸಂ. ೮-೬೧-೭) ಈ ಎರಡು ತೃಚಗಳಲ್ಲಿ ಆರು ಋಕ್ಕುಗಳು. 'ತನುಷ್ಟುಹಿ' ಎಂಬಲ್ಲಿ ಹದಿನೈದು ಋಕ್ಕುಗಳು. (ತತ್ವಂ) ಸುತೇ ಇತ್ಯಾದಿ ಮೂರು ಸೂಕ್ತಗಳು. ಅವುಗಳಲ್ಲಿ 'ಸುತೇ' (ಋ. ಸಂ. ೬-೨೩-೧) ಎಂಬ ಪ್ರಥಮಸೂಕ್ತದಲ್ಲಿ ಹತ್ತು ಋಕ್ಕುಗಳಿವೆ 'ವೃಷಾಮದಃ' (ಋ. ಸಂ. ೬-೨೪-೧) ಎಂಬ ದ್ವಿತೀಯಸೂಕ್ತದಲ್ಲಿಯೂ ಹತ್ತು ಋಕ್ಕುಗಳು. 'ಯತ ಊತಿರವಮಾ' (ಋ. ಸಂ. ೬-೨೫-೧) ಎಂಬ ತೃತೀಯ ಸೂಕ್ತದಲ್ಲಿ ಒಂಬತ್ತು ಋಕ್ಕುಗಳು. 'ಅಭೂರೇಕ':- ಇತ್ಯಾದಿ ಎಂಟು ಸೂಕ್ತಗಳಲ್ಲಿ 'ಅಭೂರೇಕಃ' (ಋ. ಸಂ. ೬-೩೧-೧) ಎಂಬುದು ಮೊದಲನೆಯ ಸೂಕ್ತ 'ಅಪೂರ್ವಾ ಪುರುತಮಾನಿ' (ಋ. ಸಂ. ೬-೩೨-೧) ಎರಡನೆಯ ಸೂಕ್ತ. 'ಯಓಜಿಷ್ಠಃ' ಋ. ಸಂ. ೬-೩೩-೧) ಮೂರನೆಯ ಸೂಕ್ತ. 'ಸಂ ಚತ್ವಾ' (ಋ. ಸಂ. ೬-೩೪-೧) ನಾಲ್ಕನೆಯ ಸೂಕ್ತ. 'ಕದಾ ಭುವನ್' (ಋ. ಸಂ. ೬-೩೫-೧) ಐದನೆಯ ಸೂಕ್ತ. 'ಸತ್ರಾಮದಾಸಃ' (ಋ. ಸಂ. ೬-೩೬-೧) ಆರನೆಯ ಸೂಕ್ತ. 'ಅರ್ವಾಗ್ರಥಃ' (ಋ. ಸಂ. ೬-೩೭-೧) ಏಳನೆಯ ಸೂಕ್ತ. 'ಅಪಾತ್' (ಋ. ಸಂ. ೬-೩೮-೧) ಎಂಟನೆಯ ಸೂಕ್ತ. ಈ ಎಂಟು ಸೂಕ್ತಗಳಲ್ಲಿಯೂ ಪ್ರತ್ಯೇಕವಾಗಿ ಐದೈದು ಋಕ್ಕುಗಳಿವೆ. (40) 'ಕಥಾ ಮಹಾಮ್' (ಋ. ಸಂ. ೪-೩೩-೧) ಎಂಬಲ್ಲಿ ಹನ್ನೊಂದು ಋಕ್ಕುಗಳು. ಇದಕ್ಕೆ **ಸಂಪಾತ** ಎಂದು ಕರೆಯುತ್ತಾರೆ. 'ಇಂದ್ರೋಮದಾಯ' (ಋ. ಸಂ. ೧-೮೧-೧) ಎಂಬುದು ಪಂಕ್ತಿಛಂದಸ್ಸಿನಿಂದ ಕೂಡಿದ ಒಂದು ಋಕ್. ಇದಕ್ಕೆ ಪೂರ್ವದಲ್ಲಿ ಹೇಳಿದ ಋಕ್ಕುಗಳು (6+15+10+9+40+11) ಒಟ್ಟಿಗೆ ನೂರೊಂದಾದರೂ ಅಲ್ಲಿ ಶತಸಂಖ್ಯೆಯೂ ಇರುವುದರಿಂದ ಶತವೆಂದು ಹೇಳಿದೆ. ಹೀಗೆ ದ್ಯುಲೋಕ, ಆದಿತ್ಯ, ಮನಸ್ಸು, ಬೃಹತ್ಸಾಮ, ಭಾರದ್ವಾಜ, ಶತಸಂಖ್ಯಾರೂಪದಿಂದ ಪಡ್ವೀರ್ಯಾದಿಗಳನ್ನು ಪೂರ್ವದಂತೆಯೇ ತಿಳಿಯಬೇಕು.

## ತಾ ಊನಾತಿರಿಕ್ತೌ ಭವತೋ ವೃಷಾ ವೈ ಬೃಹದ್ಯೋಷಾ ರಥಂತರ-ಮತಿರಿಕ್ತಂ ವೈ ಪುಂಸೋ ನ್ಯೂನಂ ಸ್ತ್ರಿಯೈ ತಸ್ಮಾತ್, ॥

**ದಕ್ಷಿಣೋತ್ತರಪಕ್ಷಯೋರ್ನ್ಯೂನಾತಿರಿಕ್ತಭಾವಂ ಪ್ರಶಂಸತಿ—ಏಕಯರ್ಚಾ ನ್ಯೂನೋ ದಕ್ಷಿಣಃ ಪಕ್ಷಃ । ಉತ್ತರಸ್ತ್ವೇಕಯರ್ಚಾಽತಿರಿಕ್ತಃ । ತಸ್ಯೋತ್ತರಸ್ಯ ಬೃಹದ್ರೂಪತಾ ಬೃಹತಶ್ಚ ಪುಂರೂಪತ್ವೇನಾಂಗಾಧಿಕ್ಯಂ ಯುಕ್ತಮ್ । ದಕ್ಷಿಣಸ್ಯಾದ್ಯತ್ವಾದ್ರಥಂತರತ್ವಂ ತಸ್ಯ ಸ್ತ್ರೀರೂಪತ್ವಾನ್ನ್ಯೂನಾಂಗತ್ವಂ ಯುಕ್ತಮ್ । ತಸ್ಮಾದುಭೌ ಪಕ್ಷೌ ನ್ಯೂನಾತಿರಿಕ್ತೌ ಕರ್ತವ್ಯೌ ।**

ದಕ್ಷಿಣ, ಉತ್ತರಪಕ್ಷಗಳಿಗೆ ನ್ಯೂನಾಧಿಕ (ಕಡಿಮೆ, ಹೆಚ್ಚು) ಭಾವವನ್ನು ವಿವರಿಸುತ್ತಾರೆ. ದಕ್ಷಿಣಪಕ್ಷವು ಒಂದು ಋಕ್ಕಿನಿಂದ ನ್ಯೂನ (ಕಡಿಮೆ) ವಾಗಿದೆ. (100) ಉತ್ತರಪಕ್ಷವು ಒಂದು ಋಕ್ಕಿನಿಂದ ಅಧಿಕವಾಗಿದೆ (101) ಉತ್ತರ ಪಕ್ಷವು ಬೃಹತ್ಸಾಮರೂಪವಾದುದರಿಂದ ಬೃಹತ್ ಪುಂರೂಪವಾದುದರಿಂದ ಒಂದು ಅಂಶ ಅಧಿಕವಾಗಿರುವುದು ಯುಕ್ತ ವಾಗಿದೆ. ದಕ್ಷಿಣಪಕ್ಷವು ಮೊದಲಾದುದರಿಂದ ಅದು ರಥಂತರರೂಪವಾಗಿದೆ. ರಥಂತರವು ಸ್ತ್ರೀರೂಪವಾದುದರಿಂದ ಅದಕ್ಕೆ ಒಂದು ಅಂಗವು ನ್ಯೂನವಾದುದೂ ಯುಕ್ತವಾಗಿದೆ. ಆದುದರಿಂದ ಈ ಎರಡು ಪಕ್ಷಗಳನ್ನೂ ನ್ಯೂನಾಧಿಕಗಳನ್ನಾಗಿಯೇ ಮಾಡಬೇಕು.

**ಊನಾತಿರಿಕ್ತೌ ಭವತೋಽಥೋ ಏಕೇನ ಹ ವೈ ಪುತ್ರೇಣ ಸುಪರ್ಣಸ್ಯೋತ್ತರಃ ಪಕ್ಷೋ ಜ್ಯಾಯಾಂಸ್ತಸ್ಮಾದೇಕಯರ್ಚೋತ್ತರಃ ಪಕ್ಷೋ ಭೂಯಾನ್ಭವತಿ ॥**

**ಪ್ರಕಾರಾಂತರೇಣ ನ್ಯೂನಾಧಿಕಭಾವಂ ಪ್ರಶಂಸತಿ—ಲೋಕೇ ಪಕ್ಷಿಣ ಉತ್ತರಪಕ್ಷ ಏಕಂ ಪತ್ರಮಧಿಕಂ ಭವತಿ, ಅತೋಽತ್ರಾಪ್ಯುತ್ತರಃ ಪಕ್ಷ ಏಕಯರ್ಚಾಽಧಿಕಃ ಕರ್ತವ್ಯ: ॥**

ಪ್ರಕಾರಾಂತದಿಂದ ನ್ಯೂನಾಧಿಕಭಾವವನ್ನು ವಿವರಿಸುತ್ತಾರೆ. ಲೋಕದಲ್ಲಿ ಪಕ್ಷಿಗಳ ಉತ್ತರ (ಎಡರೆಕ್ಕೆ) ಪಕ್ಷದಲ್ಲಿ ಒಂದು ಗರಿಯು ಅಧಿಕವಾಗಿರುವುದರಿಂದ ಇಲ್ಲಿಯೂ ಉತ್ತರಪಕ್ಷದಲ್ಲಿ ಒಂದು ಋಕ್ಕು ಅಧಿಕವಾಗಿ ಹೇಳಬೇಕು.

**ಅಥ ಸೂದದೋಹಾಃ ಪ್ರಾಣೋ ವೈ ಸೂದದೋಹಾಃ ಪ್ರಾಣೇನ ಪರ್ವಾಣಿ ಸಂದಧಾತಿ ॥**

**" ತಾ ಅಸ್ಯ " (ಋ–ಸಂ–ಮ–-೮–ಸೂ–೭೯–ಋ–೩) ಇತ್ಯೇಷಂ ವಿಧತ್ತೇ—**

ವಾಮಪಕ್ಷವನ್ನು ವಿವರಿಸಿದ ಮೇಲೆ ' ತಾ ಅಸ್ಯ ' (ಋ. ಸಂ. ೮–೬೯–೩) ಎಂಬ ಋಕ್ಕನ್ನು ವಿವರಿಸುತ್ತಾರೆ. ಇದು ಪೂರ್ವದಲ್ಲಿ ವ್ಯಾಖ್ಯಾತವಾಗಿದೆ.

**ಅಥಾತಃ ಪುಚ್ಛಂ ತಾ ಏಕವಿಂಶತಿರ್ದ್ವಿಪದಾ ಭವಂತ್ಯೇಕವಿಂಶತಿರ್ಹೀಮಾನಿ ಪ್ರತ್ಯಂಚಿ ಸುಪರ್ಣಸ್ಯ ಪತ್ರಾಣಿ ಭವಂತಿ ॥**

**ಪಕ್ಷಾನಂತರಂ ಪುಚ್ಛಭಾಗಸ್ಯಾಪೇಕ್ಷಿತತ್ವಾತ್ಪುಚ್ಛಂ ವಿಧತ್ತೇ—ಯಾಃ ಪುಚ್ಛಭಾಗರೂಪಾ ಋಚಸ್ತಾಃ ಪ್ರತ್ಯೇಕಂ ಪಾದದ್ವಯೋಪೇತಾ ಮಿಲಿತ್ವೈಕವಿಂಶತಿಸಂಖ್ಯಾಕಾಃ । ತಾಶ್ಚ ಪಂಚಮೋ ಶೌನಕೇನ " ಇಮಾನುಕಮ್ " (ಐ–ಆ–೫–ಅ–೨–ಖಂ–೨) ಇತ್ಯಾದಿನೋದಾಹೃತಾಃ । " ಇಮಾನುಕಮ್ " (ಋ–ಸಂ–ಮಂ–೧೦–ಸೂ–೧೫೭–ಋ–೧) ಇತ್ಯಸ್ಮಿನ್ಸೂಕ್ತೇ ಪಂಚರ್ಚಃ " ಆಯಾಹಿ ಮನಸಾ ಸಹ " (ಋ–ಸಂ–ಮಂ–೧–ಸೂ–೧೭೨–ಋ–೧) ಇತ್ಯಸ್ಮಿನ್ಸೂಕ್ತೇ ಚತಸ್ರಃ । ತಾ ಏತಾ ನವಸಂಖ್ಯಾಕಾ ದ್ವಿಪದಾಃ ಶಾಕಲ್ಯಸಂಹಿತಾಯಾಮಾಮ್ನಾತಾಃ । ಪ್ರ ವ ಇಂದ್ರಾಯೇತ್ಯಾದಿಕಾ ನವ.**

**ಸಂಖ್ಯಾಕಾ ದ್ವಿಪದಾಃ ಶಾಖಾಂತರಗತಾಃ । ("ಏಷಾ ಬ್ರಹ್ಮಾ" ಇತಿ ತಿಸ್ರಃ) ಇತ್ಯೇವಮೇಕ-ವಿಂಶತಿಃ । ಲೋಕೇಽಪಿ ಪಕ್ಷಿಣಃ ಪುಚ್ಛೇ ಪ್ರತ್ಯಙ್ಮುಖಾನಿ ಪತ್ರಾಣ್ಯೇಕವಿಂಶತಿರ್ಭವಂತಿ, ತಸ್ಮಾ-ತ್ತಾವತೀರ್ಋಚಃ ಶಂಸೇತ್ ॥**

ಎರಡು ಪಕ್ಷಗಳನ್ನೂ ಹೇಳಿದ ಮೇಲೆ ಪುಚ್ಛಭಾಗವು (ರೆಕ್ಕೆಯಗರಿ) ಅಪೇಕ್ಷಿತವಾದುದರಿಂದ ಅದನ್ನು ವಿವರಿಸುತ್ತಾರೆ. ಪುಚ್ಛಭಾಗರೂಪವಾದ ಈ ಋಕ್ಕುಗಳು ಪ್ರತ್ಯೇಕವಾಗಿ ಎರಡೆರಡುಪಾದಗಳಿಂದ ಕೂಡಿರುವುದರಿಂದ ಒಟ್ಟಿಗೆ ಇವು ಇಪ್ಪತ್ತೊಂದಾಗುತ್ತವೆ. ಐದನೆಯ ಆರಣ್ಯಕದಲ್ಲಿ 'ಇಮಾ ನುಕಂ' ಎಂದು ಆರಂಭಿಸಿ ಶೌನಕರು ಇವುಗಳನ್ನು ವಿವರಿಸಿರುತ್ತಾರೆ. 'ಇಮಾ ನು ಕಂ' (ಋ. ಸಂ. ೧೦-೧೫೭-೧) ಎಂಬ ಸೂಕ್ತದಲ್ಲಿ ಐದು ಋಕ್ಕುಗಳು. 'ಆ ಯಾಹಿ ವನಸಾಸಹ' (ಋ. ಸಂ. ೧-೧೭೨-೧) ಎಂಬ ಸೂಕ್ತದಲ್ಲಿ ನಾಲ್ಕು ಋಕ್ಕುಗಳು. ಒಟ್ಟಿಗೆ ಒಂಬತ್ತು ಋಕ್ಕುಗಳೂ ಪಾದದ್ವಯದಿಂದ ಕೂಡಿವೆಯೆಂದು ಶಾಕಲ್ಯಸಂಹಿತೆಯಲ್ಲಿ ಹೇಳಿವೆ. **ಪ್ರ ವ ಇಂದ್ರಾಯ** ಮುಂತಾದ ಒಂಬತ್ತುಸಂಖ್ಯೆಯುಳ್ಳ ದ್ವಿಪದಗಳು ಇತರಶಾಖೆಗಳಲ್ಲಿ ವಿವರಿಸಿವೆ. "ಏಷಬ್ರಹ್ಮಾ" ಎಂಬಲ್ಲಿ ಮೂರು ಋಕ್ಕುಗಳಿವೆ. ಒಟ್ಟಿಗೆ (5+4+9+3=18+3) ಇವು ಇಪ್ಪತ್ತೊಂದಾಗುತ್ತವೆ. ಲೋಕದಲ್ಲಿ ಪಕ್ಷಿಗಳ ಪುಚ್ಛದಲ್ಲಿಯೂ ಮೇಲ್ಮುಖವಾಗಿ ಇಪ್ಪತೊಂದು ಪುಕ್ಕಗಳಿರುವುದರಿಂದ ಈ ಸಂಖ್ಯೆಯಿಂದ ಕೂಡಿದ ಋಕ್ಕುಗಳನ್ನು ಪಠಿಸಬೇಕು.

**ಅಥೋ ಏಕವಿಂಶೋ ವೈ ಸ್ತೋಮಾನಾಂ ಪ್ರತಿಷ್ಠಾ ಪ್ರತಿಷ್ಠಾ ಪುಚ್ಛಂ ವಯಸಾಂ ॥**

**ಪ್ರಕಾರಾಂತರೇಣ ಸಂಖ್ಯಾಂ ಪ್ರಶಂಸತಿ—ಸಾಮವೇದಪ್ರಸಿದ್ಧಾಸ್ತ್ರಿವೃತ್ಪಂಚದಶಸಪ್ತದಶೈಕ-ವಿಂಶನಾಮಕಾ ಯೇ ಸ್ತೋಮಾ ಅಗ್ನಿಷ್ಟೋಮನಿಷ್ಪಾದಕಾಸ್ತೇಷಾಂ ಮಧ್ಯ ಏಕವಿಂಶ ಏವ ಪ್ರತಿ-ಷ್ಠಾ ಸಮಾಪ್ತಿಹೇತುಃ । ಪಕ್ಷಿಣಾಂ ಚ ಪುಚ್ಛಂ ಪ್ರತಿಷ್ಠಾ, ಉತ್ಪನ್ನ (ತನ) ವೃಕ್ಷಾರೋಹಣಸ್ಥಿತ್ಯಾ-ದಾವುಪಯುಕ್ತತ್ವಾತ್ । ಅತಃ ಪುಚ್ಛಸ್ಯೈಕವಿಂಶತಿಸಂಖ್ಯಾ ಯುಕ್ತಾ ॥**

ಪ್ರಕಾರಾಂತರದಿಂದ ಈ ಸಂಖ್ಯೆಯನ್ನು ಪ್ರಶಂಸಿಸುತ್ತಾರೆ. ತ್ರಿವೃತ್, ಪಂಚದಶ, ಸಪ್ತದಶ, ಏಕವಿಂಶವೆಂಬ ಹೆಸರುಳ್ಳ ಅಗ್ನಿಷ್ಟೋಮಯಾಗಸಂಪಾದಕಗಳಾದ ಸ್ತೋಮಗಳು ಸಾಮವೇದದಲ್ಲಿ ಪ್ರಸಿದ್ಧವಾಗಿವೆ. ಅವುಗಳಲ್ಲಿ ಏಕವಿಂಶ ಸ್ತೋಮವೇ ಯಾಗಸಮಾಪ್ತಿಕಾರಣವಾದುದರಿಂದ ಶ್ರೇಷ್ಠವಾಗಿದೆ. ಹಾರುವುದು ಮರದಲ್ಲಿ ಕುಳಿತಿರುವುದು ಇತ್ಯಾದಿ ಕಾರ್ಯಸಾಧಕವಾದುದರಿಂದ ಪಕ್ಷಿಗಳಿಗೂ ಪುಚ್ಛವೇ ಪ್ರತಿಷ್ಠಾಕಾರಣವಾಗಿರುತ್ತದೆ. ಆದುದರಿಂದ ಶಸ್ತ್ರದ ಪುಚ್ಛಕ್ಕೂ ಈ ಇಪ್ಪತ್ತೊಂದು ಸಂಖ್ಯೆಯು ಯುಕ್ತವಾಗಿದೆ.

**ದ್ವಾವಿಂಶೀಂ ಶಂಸತಿ ಪ್ರತಿಷ್ಠಯೋರೇವ ತದ್ರೂಪಂ ಕ್ರಿಯತೇ ತಸ್ಮಾ-ತ್ಸರ್ವಾಣಿ ವಯಾಂಸಿ ಪುಚ್ಛೇನ ಪ್ರತಿತಿಷ್ಠಂತಿ ಪುಚ್ಛೇನೈವ ಪ್ರತಿ-ಷ್ಠಾಯೋತ್ಪತಂತಿ ಪ್ರತಿಷ್ಠಾ ಹಿ ಪುಚ್ಛಮ್ ॥**

**ಅತ ಊರ್ಧ್ವಂ "ಅಧೂರ್ಷ್ವಸ್ಮೈ" (ಋ-ಸಂ-ಮಂ-೭-ಸೂ-೩೪-ಋ-೪) ಇತ್ಯೇತಾ-ಮನ್ಯಾಂ ದ್ವಿಪದಾಂ ವಿಧತ್ತೇ—ಅತ್ರ ದ್ವಾವಿಂಶತ್ಯಾಃ ಶಂಸನೇನ ವಿಂಶತೇರುಪರಿ ಯೇ ದ್ವೇ ಋಚಾ**

ತದೇತತ್ಪ್ರತಿಷ್ಠಯೋಃ ಪಾದಯೋರೇವ ರೂಪಂ ಕ್ರಿಯತೇ ದ್ವಿತ್ವಸಂಖ್ಯಾಯಾಃ ಸಮಾನತ್ವಾತ್ । ತಸ್ಮಾದೇವ ಪುಚ್ಛಸ್ಯ ಪ್ರತಿಷ್ಠಾಹೇತುತ್ವಮ್ । ತಸ್ಮಾತ್ಸರ್ವೇಽಪಿ ಪಕ್ಷಿಣಃ ಪುಚ್ಛೇನ ಪ್ರತಿತಿಷ್ಠಂತಿ ಭೂಮೌ ವೃಕ್ಷಾದೌ ವಾ ಪುಚ್ಛಂ ಪೃಷ್ಠತ ಆಧಾರಂ ಕೃತ್ವಾ ಸ್ಥೈರ್ಯೇಣಾವತಿಷ್ಠಂತೇ । ತಥಾ ಪುಚ್ಛೇನೈವ ಭೂಮಾವವಸ್ಥಿತೇನ ಪ್ರತಿಷ್ಠಾಯ ಸಕೃತ್ಸ್ಥೈರ್ಯೇಣ ಸ್ಥಿತ್ವಾ ಪಶ್ಚಾತ್ಪ್ರಬಲೇನೋತ್ಸಾಹೇನೋತ್ಪತಂತಿ । ಯಸ್ಮಾತ್ಪುಚ್ಛಂ ಪ್ರತಿಷ್ಠಾ ತಸ್ಮಾದೇತದ್ಯುಕ್ತಮ್ ॥

ಪುಚ್ಛವನ್ನು ವಿವರಿಸಿದ ನಂತರ 'ಆಧೂರ್ಷ್ವಸ್ಮೈ' (ಋ. ಸಂ. ೭-೩೪-೪) ಎಂಬ ಇನ್ನೊಂದು ಪಾದದ್ವಯ ಕೂಡಿದ ಋಕ್ಕನ್ನು ವಿವರಿಸುತ್ತಾರೆ. ಇಲ್ಲಿ ಇಪ್ಪತ್ತೆರಡು ಸಂಖ್ಯೆಯನ್ನು ಪ್ರಶಂಸಿಸಿರುವುದರಿಂದ ಇಪ್ಪತ್ತರಮೇಲಿನ ಎರಡು ಋಕ್ಕುಗಳನ್ನು ಸಂಖ್ಯಾಸಾಮ್ಯದಿಂದ ಪಾದರೂಪಗಳೆಂದು ತಿಳಿಯಬೇಕು. ಪಕ್ಷಿಗಳೂ ನೆಲದಲ್ಲಿ ಅಥವಾ ಮರದಲ್ಲಿ ರೆಕ್ಕೆಯ ಗರಿಗಳನ್ನು ಹಿಂಬದಿಯಲ್ಲಿ ಆದಾರವನ್ನಾಗಿ ಮಾಡಿಕೊಂಡು ಸ್ಥಿರವಾಗಿ ಕುಳಿತಿರುತ್ತವೆ. ಪುಚ್ಛದಿಂದ ಸ್ಥಿರವಾಗಿ ಇರುವುದಲ್ಲದೆ ಅದರ ಸಹಾಯದಿಂದಲೇ ಉತ್ಸಾಹದಿಂದ ಆಕಾಶದಲ್ಲಿ ಹಾರುತ್ತವೆ. ಅದರಂತೆ ಶಸ್ತ್ರದ ಪುಚ್ಛವೂ ಪ್ರತಿಷ್ಠಾ ಕಾರಣವಾಗುತ್ತದೆ.

ಸ ಏಷ ದ್ವಾಭ್ಯಾಂ ದಶಿನೀಭ್ಯಾಂ ವಿರಾಡ್ಭ್ಯಾಮನಯೋರ್ದ್ವಾವಿಂಶ್ಯೋರ್ದ್ವಿಪದಯೋರಯಂ ಪುರುಷಃ ಪ್ರತಿಷ್ಠಿತಸ್ತಸ್ಯ ಯತ್ಸುಪರ್ಣರೂಪಂ ತದಸ್ಯ ಕಾಮಾನಾಮುಭ್ಯಾಪ್ತ್ಯಾ ಅಥ ಯತ್ಪುರುಷರೂಪಂ ತದಸ್ಯ ಶ್ರಿಯೈ ಯಶಸೇಽನ್ನಾದ್ಯಾಯಾಪಚಿತ್ಯೈ ॥

ಪುನರಪಿ ದ್ವಾವಿಂಶತಿಸಂಖ್ಯಾಂ ಪ್ರಕಾರಾಂತರೇಣ ಪ್ರಶಂಸತಿ—ದ್ವಾವಿಂಶತಿಸಂಖ್ಯಾಕಾನಾಮೃಚಾಂ ಮಧ್ಯೇ ದ್ವೇ ಅವಸಾನಗತೇ ಋಚೌ ಪರಿಶೇಷ್ಯ ತತಃ ಪೂರ್ವಭಾವಿನೀ ಯಾ ಋಚಾಂ ವಿಂಶತಿಸ್ತಸ್ಯಾ ದ್ವೇ ದಶಿನ್ಯಾ ದಶಸಂಖ್ಯೋಪೇತಸಮೂಹಾವತ ಏವ ತಯೋರ್ವಿರಾಟ್ತ್ವಮ್ । ದ್ವಾಭ್ಯಾಂ (ದಶಿನೀಭ್ಯಾಂ) ಸ ಏಷ ಶಸ್ತ್ರರೂಪಃ ಸುಪರ್ಣಃ ಪ್ರತಿಷ್ಠಿತಃ ಇತ್ಯನ್ವಯಃ ಯೇ ತೂತ್ತರಾಪೂರಿಕೇ ದ್ವೇ ಋಚೌ ದ್ವಿಪದಾರೂಪೇ ತಯೋರ್ಋಚೋರಯಂ ಪುರುಷೋ ದ್ವಿಪಾದ್ಯಜಮಾನಃ ಪ್ರತಿಷ್ಠಿತಃ । ತಥಾ ಸತಿ ತಸ್ಯ ಶಸ್ತ್ರಸ್ಯ ದಶಕದ್ವಯಾತ್ಮಕಂ ಯತ್ಸುಪರ್ಣರೂಪಂ ತದಸ್ಯ ಯಜಮಾನಸ್ಯ ಕಾಮಾನಾಮಭಿತಃ ಪ್ರಾಪ್ತ್ಯೈ ಸಂಪದ್ಯತೇ । ಅನಂತರಮೃಗ್ದ್ವಯಾತ್ಮಕಂ ಯತ್ಪುರುಷರೂಪಮುಕ್ತಂ ತದಸ್ಯ ಯಜಮಾನಸ್ಯ ಶ್ರೀಯಶೋಽನ್ನಾದ್ಯಪೂಜಾರ್ಥಂ ಸಂಪದ್ಯತೇ ॥

ಇಪ್ಪತ್ತೆರಡು ಋಕ್ಕುಗಳಲ್ಲಿ ಕೊನೆಯ ಎರಡು ಋಕ್ಕುಗಳನ್ನು ಬಿಟ್ಟರೆ ಉಳಿದ ಇಪ್ಪತ್ತರಲ್ಲಿ ಎರಡು ದಶಕಗಳಿರುತ್ತವೆ. ಇವೆರಡು ದಶ (ಹತ್ತು) ಸಂಖ್ಯಾದಿಂದ ಕೂಡಿದ ಸಮೂಹವಾಗುವುದರಿಂದ ವಿರಾಟ್ ಸ್ವರೂಪವನ್ನು ಹೊಂದುತ್ತವೆ. ಈ ಎರಡು ದಶಕಗಳಿಂದ ಶಸ್ತ್ರರೂಪವಾದ ಪಕ್ಷಿಯು ಸುಸಂಪನ್ನವಾಗುತ್ತದೆ. ಪಾದದ್ವಯದಿಂದ ಕೂಡಿದ ಮುಂದಿನ ಎರಡು ಋಕ್ಕುಗಳು ಎರಡು ಪಾದಗಳ ಸಾಮ್ಯದಿಂದ ಪುರುಷ ರೂಪವಾಗುತ್ತದೆ. ಹೀಗೆ ಈ ಶಸ್ತ್ರದ ದಶಕದ್ವಯದಿಂದ ಕೂಡಿದ ಪಕ್ಷಿ ರೂಪವು ಯಜಮಾನನ ಸಕಲ ಇಷ್ಟಾರ್ಥಗಳನ್ನೂ ನೆರವೇರಿಸುವುದರಲ್ಲಿ ಸಮರ್ಥವಾಗುತ್ತದೆ. ಮುಂದಿನ ಎರಡು ಋಕ್ಕುಗಳ್ಳ ಪುರುಷ ರೂಪವು ಈ ಯಜಮಾನನಿಗೆ ಸಂಪತ್ತು, ಕೀರ್ತಿ, ಅನ್ನಾದಿ ಗೌರವಗಳನ್ನುಂಟುಮಾಡುವುದು.

**ಅಥ ಸೂದದೋಹಾ ಅಥ ಧಾಯ್ಯಾಽಥ ಸೂದದೋಹಾ ವೃಷಾ ವೈ ಸೂದದೋಹಾ ಯೋಷಾ ಧಾಯ್ಯಾ ತದುಭಯತಃ ಸೂದದೋಹಸ ಧಾಯ್ಯಾಂ ಪರಿಶಂಸತಿ ತಸ್ಮಾದ್ದ್ವಯೋಃ ರೇತಃ ಸಿಕ್ತಂ ಸದೇಕತಾಮೇವಾಪ್ಯೇತಿ ಯೋಷಾಮೇವಾಭ್ಯತ ಆಜಾನಾ ಹಿ ಯೋಷಾಽತಃ ಪ್ರಜಾನಾ ತಸ್ಮಾದೇನಾಮತ್ರ ಶಂಸತಿ ॥**

**ಯಥೋಕ್ತದ್ವಾವಿಂಶತೇರೂರ್ಧ್ವಮುಭಯತಃ ಸೂದದೋಹಸಾಂ ಚೇಷ್ಟಿತಂ "ಯದ್ವಾವಾನ ಪುರುತಮಮ್" (ಋ-ಸಂ-ಮಂ-೧೦-ಸೂ-೭೪-ಋ-೬) ಇತಿ ಧಾಯ್ಯಾಂ (ಚ) ವಿಧತ್ತೇ—ಉಭಯತಃ ಪಠಿತಾಯಾಃ ಸೂದದೋಹಸಃ ಆಧಿಕ್ಯಾತ್ಪುರುಷತ್ವಮ್। ಮಧ್ಯೇ ಪಠಿತಾಯಾ ಯದ್ವಾವಾನೇತಿ ಧಾಯ್ಯಾಯಾ ಅಲ್ಪತ್ವೇನ ಸ್ತ್ರೀರೂಪತ್ವಮ್। ತಸ್ಮಾನ್ಮಿಥುನ ಸಿದ್ಧ್ಯರ್ಥಮುಭಯಥಾ (ತಃ) ಸೂದದೋಹಸಾ ಯುಕ್ತಾಂ ಧಾಯ್ಯಾಂ ಪರಿಶಂಸೇತ್। ಪುರುಷಪರಿಷ್ವಕ್ತಯೋಷಿದ್ವತ್ಸೂದದೋಹಸಾ ಸಹ ಧಾಯ್ಯಾ ಸಂಯೋಜಿತಾ, ತಸ್ಮಾದೇವ ಲೋಕೇಽಪಿ ದ್ವಯೋಃ ಸ್ತ್ರೀಪುರುಷ ಯೋಃ ಸಂಬಂಧಿರೇತೋ ಗರ್ಭಾಶಯೇ ನಿಷಿಕ್ತಂ ಸದೇಕತ್ವಮೇವಾಭಿಲಕ್ಷ್ಯ ತನ್ಮಿಲಿತಮೇವಾವತಿಷ್ಠತೇ ನ ಪುರುಷಶರೀರಃ। ಹಿ ಯಸ್ಮಾತ್ಕಾರಣಾದಿಯಂ ಯೋಷಾಽಽಜಾನಾನಾ (ಷಾಽಽಜಾನಾ), ಅಸ್ಮಾನ್ಮಿಲಿತಾದ್ರೇತೋದ್ವಯಾತ್ಸಾಕಲ್ಯೇನ ಶಾರಿರೋ ವ್ಯನತಿಷ್ಠತೇ ಯಸ್ಯಾಂ ಯೋಷಾಯಾಂ ಸೇಯಮತಃ ಪ್ರ (ತ-ಆ) ಜಾನಾ। ಅಥವಾ ವಿವಕ್ಷ್ಯತೇ—"ತದ್ಯಥಾ (ದಾ) ಸ್ತ್ರಿಯಾಂ ಸಿಂಚತ್ಯಥೈನಜ್ಜನಯತಿ" (ಐ-ಆ-೨-ಅ-೫-ಖಂ-೧) ಇತಿ। ಅತಃ ಕಾರಣಾದಿಯಂ ಯೋಷಾ ಪ್ರಜಾನಾನಾ (ಪ್ರಜಾನಾ)। ಪ್ರಕೃಷ್ಟೋ ಜಾತಃ (ನಃ) ಪುತ್ರಪೌತ್ರೋತ್ಪಾದನಂ ಯಸ್ಯಾಃ ಸಾ ಪ್ರಜಾನಾ। ಯಸ್ಮಾದೇವಂ ಧಾಯ್ಯಾ ಪ್ರಶಸ್ತಾ ತಸ್ಮಾದೇತಾಂ ಧಾಯ್ಯಾಮಸ್ಮಿನ್ನಿಜವಭಾಗೇ ಪಠೇತ್। ಪಕ್ಷ್ಮೂಲಾ ಋಚೋ ನಿಜವಾ ವಿವಕ್ಷಿತಾಃ ॥**

ಇಪ್ಪತ್ತೆರಡು ಋಕ್ಕುಗಳನ್ನು ವಿವರಿಸಿದ ಮೇಲೆ 'ಯದ್ವಾವಾನ ಪುರುತಮಂ" (ಋ-ಸಂ-೧೦-೭೩-೬) ಎಂಬ ಧಾಯ್ಯಾ ಮಂತ್ರವನ್ನು ಅದರ ಪೂರ್ವಾಪರದಲ್ಲಿ ಸೂದದೋಹದ ಪಾಠವನ್ನೂ ವಿವರಿಸುತ್ತಾರೆ. ಎರಡು ಕಡೆಯಲ್ಲಿಯೂ ಸೂದದೋಹದ ಪಾಠದಿಂದ ಅಧಿಕವಾದುದರಿಂದ ಅದಕ್ಕೆ ಪುರುಷ ರೂಪವಾಗುತ್ತದೆ. ಮಧ್ಯದಲ್ಲಿ ಪಠಿತವಾದ **ಯದ್ವಾವಾನ** ಎಂಬ ಧಾಯ್ಯಾ ಮಂತ್ರವು ಅಲ್ಪವಾದುದರಿಂದ ಅದು ಸ್ತ್ರೀರೂಪವಾಗುತ್ತದೆ. ಮಿಥುನಸಿದ್ಧಿ (ಗಂಡು ಹೆಣ್ಣು ಜತೆ) ಗೋಸ್ಕರ ಎರಡು ಕಡೆಯಲ್ಲಿಯೂ ಹೇಳಿದ ಸೂದದೋಹದಿಂದ ಕೂಡಿದ ಧಾಯ್ಯಾ ಮಂತ್ರವನ್ನು ಜಪಿಸಬೇಕು. ಪುರುಷನಿಂದ ಆಲಿಂಗಿತಳಾದ ಸ್ತ್ರೀಯಂತೆ ಸೂದದೋಹಸ್ಸಿನಿಂದ ಧಾಯ್ಯಾ ಸಂಯೋಜಿತವಾಗಿದೆ. ಲೋಕದಲ್ಲಿಯೂ ಸ್ತ್ರೀಪುರುಷರ ಸಂಯೋಗದಿಂದ ರೇತಸ್ಸು ಗರ್ಭಕೋಶದಲ್ಲಿ ನಿಷಿಕ್ತವಾಗಿ ಏಕತ್ವವನ್ನು ಹೊಂದುತ್ತದೆ. ಪುರುಷ ಶರೀರ ಬೇರೆಯಾಗಿ ತೋರುವುದಿಲ್ಲ. ಈ ಮಿಲಿತವಾದ ಶುಕ್ಲ ಶೋಣಿತದಿಂದ ಒಂದು ಶರೀರವಾಗುತ್ತದೆ. ಇದನ್ನು ಸ್ತ್ರೀಯು ಪ್ರಸವಿಸುತ್ತಾಳೆ. ಇದನ್ನು ಮುಂದೆಯೂ 'ತದ್ಯಥಾ (ದಾ) ಸ್ತ್ರಿಯಾಂ ಸಿಂಚತ್ಯಥೈನಜ್ಜನಯತಿ' (ಐ-ಆ-೨-೫-೨) ಎಂದು ವಿವರಿಸುತ್ತಾರೆ. ಆದುದರಿಂದ ಸ್ತ್ರೀಯು

ಪ್ರಜಾನಾನಾ ಅಂದರೆ ಪುತ್ರ ಪೌತ್ರಾದಿಪ್ರಸವಕ್ಕೆ ಕಾರಣವಾದವಳು ಆಗುತ್ತಾಳೆ. ಹೀಗೆ ಧಾಯ್ಯಾ ಮಂತ್ರವು ಸ್ತ್ರೀ ಸ್ಥಾನದಲ್ಲಿದ್ದು ಪ್ರಶಸ್ತವಾದುದರಿಂದ ಇದನ್ನು ವಿಜವಭಾಗದಲ್ಲಿ ಪಠಿಸಬೇಕು. ಪಕ್ಷಮೂಲ ಖುಕ್ಕಿಗೆ ವಿಜವವೆಂದು ಹೆಸರು.

---

*English Translation*

---

1. Next follows the right wing. It is this world (the earth) , it is this Agni, it is speech, it is the Rathantara, it is Vasishtha, it is a hundred. These are the six powers (of the right wing). The Sampata hymn (Rv. IV. 20) serves indeed for obtaining desires and for firmness. The pankti verse (Rv. I. 80, 1) serves for proper food.

2. Next comes the Sudadohas verse. Sudadohas is breath, thereby he joins all joints with breath.

3. Next follows the left wing. It is that world (heaven), it is that sun, it is mind, it is Brihnt, it is Bharadvaga, is is a hundred. These are the six powers (of the left wing). The Sampata hymn (Rv. IV. 23) serves indeed for obtaining desires and for firmness. The pankti verse (Rv. I. 81, 1) serves for proper food.

4. These two (the right and the left wings) are deficient and excessive. The Brihat (the left wing) is man, the Rathantara (the right wing) is woman. The excess belongs to the man, the deficiency to the woman. Therefore they are deficient and excessive.

5. Now the left wing of a bird is verily by one feather better, therefore the left wing is larger by one verse.

6. Next comes the Sudadohas verse. Sudadohas is breath, and thereby he joins all joints with breath.

7. Next follows the tail. They are twenty-one Dvipaba verses. For there are twenty-one backward feathers in a bird.

8. Then the Ekaximsa is the support of all Stomas, and the tail the support of all birds.

9. He recites a twenty-second verse. This is made the form of two supports. Therefore all birds support themselves on their tail, and having supported themselves on their tail, they fly up. For the tail is a support.

10. He (the bird and the hymn) is supported by two decades which are Virag. The man (the sacrificer) is supported by the two Dvipadas, the twenty-first and twenty-second. That which forms the man, serves for his happiness, glory, proper food, and honour.

11. Next comes a Sudadohas verse, then a Dhayya, then a Sudadohas verse. The Sudadohas is a man, the Dhayya a woman, therefore he recites the Dhayya as embraced on both sides by the Sudadohas. Therefore does the seed of both, when it is effused, obtain oneness, and this with regard to the woman only. Hence birth takes place in and from the woman. Therefore he recites that Dhayya in that place.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ಚತುರ್ಥಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪ್ರಥಮಾರಣ್ಯಕದ
ನಾಲ್ಕನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವು ॥

---

## ಅಥ ಪ್ರಥಮಾರಣ್ಯಕೇ ಚತುರ್ಥಾಧ್ಯಾಯೇ ತೃತೀಯಃ ಖಂಡಃ

ಪ್ರಥಮಾರಣ್ಯಕದ ನಾಲ್ಕನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

---

**ಗಾಯತ್ರೀಂ ತೃಚಾಶೀತಿಂ ಶಂಸತ್ಯಯಂ ವೈ ಲೋಕೋ ಗಾಯತ್ರೀ ತೃಚಾಶೀತಿರ್ಯದೇವಾಸ್ಮಿನ್‌ಲೋಕೇ ಯಶೋ ಯನ್ಮಹೋ**

ಯನ್ಮಿಥುನಂ ಯದನ್ನಾದ್ಯಂ ಯಾಽಪಚಿತಿಸ್ತದಶ್ನವೈ ತದಾಪ್ನವಾನಿ ತದವರುಣಧ್ಯೈ ತನ್ಮೇಽಸದಿತಿ ॥

ಅಥ ತಸ್ಯ ಪಕ್ಷಿಣೋಽನ್ನರೂಪಾ ಅಶೀತಯೋ ವಕ್ತವ್ಯಾಸ್ತತ್ರೈಕಾಽಶೀತಿಃ—ಗಾಯತ್ರೀ ತೃಚಾಶೀತಿರಯಮೇವ ಲೋಕೋಽತೋ ಯದಸ್ಮಿನ್‌ಲೋಕೇ ಯಶಃ ಕೀರ್ತಿರ್ಯಚ್ಚ ಮಹಃ ಪೂಜಾ ಯಚ್ಚ ಮಿಥುನಂ ಭಾರ್ಯಾಸಂಬಂಧಿ ಯಚ್ಚಾನ್ನಾದ್ಯಂ ಭಕ್ಷ್ಯಭೋಜ್ಯಾದಿಕಂ ಯಾಽಪ-ಚಿತಿಃ ಪೂಜಾ । ವೇದಶಾಸ್ತ್ರಪ್ರಯುಕ್ತಾ ಪೂಜಾ ಮಹಃ ಶಬ್ದೇನ ಪೂರ್ವಮುಕ್ತಾ । ತೇಜೋ ವಾ ತತ್ಪ್ರೋಕ್ತಮತ್ರ ತು ಧನಧಾನ್ಯಾದಿಸಮೃದ್ಧಿರೂಪಾ ಪೂಜೋಚ್ಯತೇ । ತದ್ಯಶಃ ಪ್ರಭೃತಿಕಮುಪ-ಚಿತ್ಯಂತಂ ಸರ್ವಮಸ್ಮೈ ಪ್ರಾಪ್ನ (ವ್ಯಾಪ್ನ) ವಾನಿ । ಪುತ್ರಪೌತ್ರಾದಿಷು ತತ್ಸಂಪದಧೀನತ್ವಂ ವಾಪ್ತ-ತ್ವಮ್ । ತತ್ಸಿದ್ಧ್ಯರ್ಥಮಾದೌ ತದ್ಯಶಃ ಪ್ರಭೃತಿಕಮಾಪ್ನವಾನಿ ಸಂಪಾದಯಾಮಿ । ಸಂಪಾದಿತಂ ತತ್ಸರ್ವಂ ತದವರುಣಧ್ಯೈ ಸ್ವಾಧೀನಂ ಕರವಾಣಿ । ತಚ್ಚ ಸ್ವಾಧೀನಂ ಮೇ ಮದೀಯಗೃಹೇಸ್ವಸತ್, ಅಸ್ತು । ತದಾನೀಮಿತ್ಯಭಿಪ್ರೇತ್ಯ ಗಾಯತ್ರೀಂ ತೃಚಾಶೀತಿಂ ಪಠೇತ್ ।

ನಿಷ್ಕೇವಲ್ಯಶಸ್ತ್ರಕ್ಕೆ ಪಕ್ಷ್ಯಾಕಾರವನ್ನು ವಿವರಿಸಿದನಂತರ ಈಗ ಅದಕ್ಕೆ ಮೂರು ರೀತಿಯಾದ ಅನ್ನರೂಪವಾಗಿ ತೃಚಾಶೀತಿಗಳನ್ನು ಹೇಳುತ್ತಾರೆ. ಗಾಯತ್ರೀ ತೃಚಾಶೀತಿಯೇ ಈ ಭೂಲೋಕವು. ಈ ಲೋಕದಲ್ಲಿದ್ದೇ ಕೀರ್ತಿಯನ್ನೂ, ಪೂಜೆಯನ್ನೂ, ಭಾರ್ಯಾದಿಸಂಪತ್ತನ್ನೂ, ಭಕ್ಷ್ಯಭೋಜ್ಯಾದಿಗಳನ್ನೂ. ಅಪಚಿತಿ ಅಂದರೆ ಸತ್ಕಾರವನ್ನೂ ಹೊಂದುತ್ತಾರೆ. ಮಹಃ ಶಬ್ದದಿಂದ ವೇದಶಾಸ್ತ್ರಪ್ರಯುಕ್ತವಾದ ಪೂಜೆ ಅಥವಾ ವರ್ಚಸ್ಸು ಹೇಳಿದೆ. ಅಪಚಿತಿಪದದಿಂದ ಧನಧಾನ್ಯಾದಿಸಮೃದ್ಧಿ ನಿಮಿತ್ತವಾದ ಪೂಜೆಯೆಂದು ತಿಳಿಯಬೇಕು. ತಾನು ಹೊಂದುವುದಲ್ಲದೆ ಅವು ಪುತ್ರ ಪೌತ್ರಾದಿಗಳವರೆಗೂ ನೆಲೆ ನಿಲ್ಲುವಂತೆ ಮಾಡಬೇಕು. ಇದಕ್ಕೋಸ್ಕರ ಕೀರ್ತ್ಯಾದಿಗಳನ್ನು ಸಂಪಾದಿಸುವುದಲ್ಲದೆ ಅವುಗಳನ್ನು ಸ್ಥಿರವಾಗಿ ಸ್ವಾಧೀನಮಾಡಿಕೊಳ್ಳಬೇಕು. ಸ್ವಾಧೀನವಾಗಿ ತನ್ನ ಮನೆಯಲ್ಲಿ ಸ್ಥಿರವಾಗಿ ನೆಲಸಲು ಈ ಗಾಯತ್ರೀ ಛಂದಸ್ಸಿನ ತೃಚಾಶೀತಿಯನ್ನು ಪಠಿಸಬೇಕು.

ಅಥ ಸೂದದೋಹಾಃ ಪ್ರಾಣೋ ವೈ ಸೂದದೋಹಾಃ ಪ್ರಾಣೇನಮಂ ಲೋಕಂ ಸಂತನೋತಿ ॥

ಇದಾದ ಮೇಲೆ 'ತಾ ಅಸ್ಯ' (ಋ. ಸಂ ೮.೬೯-೩) ಸೂದದೋಹ ಎಂಬ ಋಕ್ಕನ್ನು ವಿಧಿಸುತ್ತಾರೆ. ಇದು ಹಿಂದೆ ವ್ಯಾಖ್ಯಾತವಾಗಿದೆ.

ಬಾರ್ಹತೀಂ ತೃಚಾಶೀತಿಂ ಶಂಸತ್ಯಂತರಿಕ್ಷಲೋಕೋ ವೈ ಬಾರ್ಹತೀ ತೃಚಾಶೀತಿರ್ಯ ದೇವಾಂತರಿಕ್ಷಲೋಕೇ ಯಶೋ ಯನ್ಮಹೋ ಯನ್ಮಿಥುನಂ ಯದನ್ನಾದ್ಯಂ ಯಾಽಪಚಿತಿಸ್ತದಶ್ನವೈ ತದಾಪ್ನವಾನಿ ತದವರುಣಧ್ಯೈ ತನ್ಮೇಽಸದಿತ್ಯಥ ಸೂದದೋಹಾಃ ಪ್ರಾಣೋ ವೈ ಸೂದದೋಹಾಃ ಪ್ರಾಣೇನಾಂತರಿಕ್ಷಲೋಕಂ ಸಂತನೋತಿ ॥

" ತಾ ಅಸ್ಯ " (ಋ-ಸಂ-ಮಂ-೮-ಸೂ-೬೯-ಋ-೩) ಇತ್ಯೇತಾಮೃಚಂ ವಿಧತ್ತೇ—

ಬೃಹತೀಛಂದಸ್ಕಾಂ ತೃಚಾಶೀತಿಂ ವಿಧತ್ತೇ—ಸೇಯಂ ಬಾರ್ಹತೀ ತೃಚಾಶೀತಿಃ " ಮಾ-ಚಿದನ್ಯಃ " (ಐ-ಆ-೫-ಆ-೨-ಖ-೪) ಇತ್ಯಾದಿಃ ಪಂಚಮೇ ಶೌನಕೇನೋದಾಹೃತಾ । ದ್ವಿತಿಯ-ತ್ವಾದಸ್ಯಾ ಅಂತರಿಕ್ಷರೂಪತ್ವಮ್ ಅನ್ಯತ್ಪೂರ್ವವದ್ವ್ಯಾಖ್ಯೇಯಮ್ ॥

ಬೃಹತೀಛಂದಸ್ಸಿನ ತೃಚಾಶೀತಿಯನ್ನು ವಿವರಿಸುತ್ತಾರೆ. ಈ ಬಾರ್ಹತೀ ತೃಚಾಶೀತಿಯನ್ನು ' **ಮಾ ಚಿದನ್ಯಃ** ' (ಐ. ಆ. ೫–೨–೪) ಇತ್ಯಾದಿ ಮಂತ್ರಗಳಿಂದ ಪಂಚಮಾರಣ್ಯಕದಲ್ಲಿ ಶೌನಕರು ಉದಾಹರಿಸಿರುತ್ತಾರೆ. ಇದು ಎರಡನೆಯ ದಾದುದರಿಂದ ಅಂತರಿಕ್ಷ ಸ್ವರೂಪವನ್ನು ಹೊಂದಿರುತ್ತದೆ. ಇಲ್ಲಿಯೂ ಕೀರ್ತಿ ಮುಂತಾದ ಅರ್ಥವನ್ನು ಹಿಂದಿನಂತೆಯೇ ತಿಳಿಯಬೇಕು.

**ಔಷ್ಣಿಹೀಂ ತೃಚಾಶೀತಿಂ ಶಂಸತ್ಯಸೌ ವೈ ಲೋಕೋ ದ್ಯೌರೌಷ್ಣಿಹೀ ತೃಚಾಶೀತಿರ್ಯದ್ದೇವಾಮುಷ್ಮಿನ್ ಲೋಕೇ ಯಶೋ ಯನ್ಮಹೋ ಯನ್ಮಿಥುನಂ ಯದನ್ನಾದ್ಯಂ ಯೋಽಪಚಿತಿರ್ಯದ್ದೇವಾನಾಂ ದೈವಂ ತದಶ್ನವೈ ತದಾಪ್ನವಾನಿ ತದವರುಣಧೈ ತನ್ಮೇಽಸದಿತ್ಯಥ ಸೂದ-ದೋಹಾಃ ಪ್ರಾಣೋ ವೈ ಸೂದದೋಹಾಃ ಪ್ರಾಣೇನಾಮುಂ ಲೋಕಂ ಸಂತನೋತಿ ಸಂತನೋತಿ ॥**

ಉಷ್ಣಿಕ್ ಛಂದಸ್ಕಾಂ ತೃಚಾಶೀತಿಂ ವಿಧತ್ತೇ—ಸೇಯಮೌಷ್ಣಿಹೀ ಪಂಚಮೇ—" ಯ-ಇಂದ್ರ ಸೋಮಪಾತಮಃ " (ಐ-ಆ-೫-ಅ-೨-ಖಂ-೫) ಇತ್ಯಾದಿನೋದಾಹೃತಾ । ಅಸ್ಯಾ ಉಪರಿ-ತನತ್ವಾದ್‌ದ್ಯುಲೋಕರೂಪತ್ವಮ್ । ಯದ್ಯಪಿ ಪ್ರಾಯೇಣ ವೇದೇಷ್ವಯಂ ಲೋಕೋಽಸೌ ಲೋಕ ಇತಿ ಭೂಲೋ (ಕದ್ಯುಲೋ) ಕಾವೇವಾಭಿಧಿಯೇತೇ ತಥಾಪಿ ದ್ಯೌರಿತ್ಯಾಭಿದಾನಂ ವಿಸ್ಪಷ್ಟಾರ್ಥಮ್ ದೇವಾನಾಮಿಂದ್ರಾದೀನಾಂ ದೈವಂ ಪೂಜ್ಯಂ ಬ್ರಹ್ಮ । ತಥಾ ಚ ಶ್ವೇತಾಶ್ವತರಾ ಆಮನಂತಿ— " ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೇವತಾನಾಂ ಪರಮಂ ಚ ದೈವತಮ್ " ಇತಿ ॥ ಅನ್ಯತ್ಪೂರ್ವವದ್ವ್ಯಾಖ್ಯೇಯಮ್ ॥ ಅಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ॥

ಉಷ್ಣಿಕ್ ಛಂದಸ್ಸಿನ ತೃಚಾಶಾತಿಯನ್ನು ವಿವರಿಸುತ್ತಾರೆ. ಈ ಉಷ್ಣಿಕ್ ಛಂದೋಮಂತ್ರವು ಪಂಚಮಾರಣ್ಯಕದಲ್ಲಿ ' **ಯ ಇಂದ್ರ ಸೋಮಪಾತಮಃ** ' (ಐ-ಆ-೫-೨-೫) ಇತ್ಯಾದಿಗಳಿಂದ ವಿವರಿಸಿದೆ. ಇದು ಅತಿಶಯವಾಗಿ ಮೇಲಿರುವುದ ರಿಂದ ದ್ಯುಲೋಕಸ್ವರೂಪ ಹೊಂದಿರುತ್ತದೆ. ಸಾಮಾನ್ಯವಾಗಿ ವೇದದಲ್ಲಿ ಅಯಂ ಲೋಕಃ, (ಈ ಲೋಕ) ಅಸೌ ಲೋಕಃ (ಆ ಲೋಕ) ಎಂಬುದರಿಂದ ಭೂಲೋಕದ್ಯುಲೋಕಗಳೇ ಹೇಳಲ್ಪಡುತ್ತವೆ ಆದರೂ ಇಲ್ಲಿ ಅಸೌ ಲೋಕಃ ಎಂದು ಹೇಳಿರುವು ದಲ್ಲದೆ ದ್ಯೌಃ ಎಂದು ಹೇಳಿರುವುದು ಸ್ಪಷ್ಟಾರ್ಥವನ್ನು ತಿಳಿಸುತ್ತದೆ. ದೇವತೆಗಳು ಇಂದ್ರಾದಿಗಳು ಅವರಿಗೆ ಪೂಜ್ಯವಾದುದು ಪರಬ್ರಹ್ಮ. ಇದು ದೇವತೆಗಳಿಗೆ ದೇವತೆಯೆಂದು ಶ್ವೇತಾಶ್ವತರ ಉಪನಿಷತ್ತಿನಲ್ಲಿ " ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೇವತಾನಾಂ ಪರಮಂಚ ದೈವತಂ " ಎಂದು ವಿವರಿಸಿದೆ. ಈ ದ್ಯುಲೋಕ ಸ್ವರೂಪದ ಉಷ್ಣಿಕ್ ಛಂದೋಮಂತ್ರದಿಂದ ಕೀರ್ತ್ಯಾದಿಗಳನ್ನು ಪಡೆಯಬೇಕೆಂದು ಹಿಂದಿನಂತೆಯೇ ತಿಳಿಯಬೇಕು. ಕೊನೆಯಲ್ಲಿ ಎರಡು ಬಾರಿ ಹೇಳಿರುವುದು ಅಧ್ಯಾಯ ಸಮಾಪ್ತಿಯನ್ನು ಸೂಚಿಸುತ್ತದೆ.

*English Tronslation*

---

1. He recites the eighty tristichs of Gayatris. Verily, the eighty Gayatri tristichs are this world (earth). Whatever there is in this world of glory, greatness, wives, food, and honour, may I obtain it, may I win it, may it be mine.

2. Next comes the Sudadohas verse. Sudadohas verily is breath. He joins this world with breath.

3. He recites the eight tristichs of Brihatis. Verily, the eighty Brihati tristidhs are the world of the sky. Whatever there is in the world of the sky. Whatever there is in the world of the sky of glory, greatness, wives, food, and honour, may I obtain it, may I win it' may it be mine.

4. Next comes Sudadohas verse. Sudadohas verily is breath. He joins the world of the sky with breath.

5. He recites the eighty tristichs of Ushnih. Verily, the eighty Ushnih tristichs are that world, the heaven. Whatever there is in that world of glory, greatness, wives, food , and honour, also the divine being of the Devas (Brahman), may I obtain it may I win it may it be mine.

6. Next comes the Sudadohas verily is the breath. He joins that world with breath, year, with breath.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ಚತುರ್ಥಾಧ್ಯಾಯೇ ತೃತೀಯಃ ಖಂಡಃ

ಇತಿ ಪ್ರಥಮಾರಣ್ಯಕೇ ಚತುರ್ಥೋಽಧ್ಯಾಯಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪ್ರಥಮಾರಣ್ಯಕದ
ನಾಲ್ಕನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವು ॥

ಇಲ್ಲಿಗೆ ಪ್ರಥಮಾರಣ್ಯಕದ ನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು

# ಅಥ ಪ್ರಥಮಾರಣ್ಯಕೇ ಪಂಚಮಾಧ್ಯಾಯೇ ಪ್ರಥಮಃ ಖಂಡಃ

## ಪ್ರಥಮಾರಣ್ಯಕದ ಐದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

ವಶಂ ಶಂಸತಿ ವಶೇ ಮ ಇದಂ ಸರ್ವಮಸದಿತಿ ॥

**ಚತುರ್ಥೇ ಶಸ್ತ್ರಪಕ್ಷಿಣೋ ಗ್ರೀವಾಸ್ಯಭಾಗ ಉಕ್ತಃ । ಅಂತೇ ತೃಚಾಶೀತಯೋಽನ್ನರೂಪಾ ಅಭಿಹಿತಾಃ । ತಸ್ಯಾನ್ನಸ್ಯ ಧಾರಣಾರ್ಥಮುದರಂ ವಕ್ತವ್ಯಮತಸ್ತದ್ರೂಪಂ ದಶನಾಮಕಂ ಶಸ್ತ್ರಭಾಗಂ ವಿಧತ್ತೇ—ಯದಿದಂ ಸ್ಥಾವರಜಂಗಮರೂಪಂ ಜಗದಸ್ತಿ ತತ್ಸರ್ವಂ ಮೇ ವಶೇ ಭೂಯಾದಿತ್ಯಭಿಪ್ರೇತ್ಯ ವಶಾಖ್ಯಂ ಶಸ್ತ್ರಭಾಗಂ ಪಾಠಂ ಪಠೇತ್ । ಸ ಚ ಭಾಗಃ "ತ್ವಾವತಃ ಪುರೂವಸೋ" (ಐ-ಆ-೫-೨-೩) ಇತ್ಯಾದಿನಾ ಪಂಚಮೇ ಸ್ಪಷ್ಟಮುದಾಹೃತಃ । ವಶನಾಮಕೇನ ಮಹರ್ಷಿಣಾ ದೃಷ್ಟತ್ವಾತ್ತದೇತತ್ಸೂಕ್ತಂ ವಶಮಿತ್ಯುಚ್ಯತೇ ॥**

ನಾಲ್ಕನೆಯ ಅಧ್ಯಾಯದಲ್ಲಿ ಶಸ್ತ್ರರೂಪಪಕ್ಷಿಯ ಗ್ರೀವಾ (ಕಂಠ ಶಿರೋಭಾಗಗಳನ್ನು ವಿವರಿಸಿ ಕೊನೆಯಲ್ಲಿ ತೃಚಾಶೀತಿರೂಪ ಅನ್ನಾದಿಗಳನ್ನೂ ಹೇಳಿದ್ದಾಯಿತು. ಆ ಅನ್ನದ ಧಾರಣೆಗೆ ಉದರವು ಅಪೇಕ್ಷಿತವಾದುದರಿಂದ ಇಲ್ಲಿ ಉದರರೂಪವಾದ ವಶವೆಂಬ ಹೆಸರುಳ್ಳ ಶಸ್ತ್ರಭಾಗವನ್ನು ವಿವರಿಸುತ್ತಾರೆ. ಈ ಸ್ಥಾವರಜಂಗಮಾತ್ಮಕವಾದ ಪ್ರಪಂಚವೆಲ್ಲವೂ ನನ್ನ ವಶದಲ್ಲಿರಲಿ ಎಂಬ ತಾತ್ಪರ್ಯದಿಂದ ವಶವೆಂಬ ಶಸ್ತ್ರಭಾಗವನ್ನು ಪಠಿಸಬೇಕು. ಈ ಶಸ್ತ್ರಭಾಗವು 'ತ್ವಾವತಃ ಪುರೂವಸೋ, (ಐ-ಆ-೫-೨-೫) ಇತ್ಯಾದಿ ಮಂತ್ರಗಳಿಂದ ಪಂಚಮಾರಣ್ಯಕದಲ್ಲಿ ವಿವೃತವಾಗಿದೆ. ವಶವೆಂಬ ಮಹರ್ಷಿಯಿಂದ ದೃಷ್ಟವಾದುದರಿಂದ ಈ ಸೂಕ್ತಕ್ಕೆ ವಶವೆಂಬ ಹೆಸರು ಬಂದಿದೆ.

ತಾ ಏಕವಿಂಶತಿರ್ಭವಂತ್ಯೇಕವಿಂಶತಿರ್ಹಿ ತಾ ಅಂತರುದರೇ ವಿಕೃತಯಃ ॥

**ತತ್ಸೂಕ್ತಗತಾಮೃಕ್ಸಂಖ್ಯಾಂ ಪ್ರಶಂಸತಿ—"ತ್ವಾವತಃ" (ಋ-ಸಂ-ಮಂ-೮-ಸೂ-೪೬-ಋ-೧) ಇತ್ಯಾರಭ್ಯ "ಸನಿತಃ ಸುಸ್ತನಿತಃ" (ಋ-ಸಂ-ಮಂ-೮-ಸೂ-೪೬-ಋ-೨೦) ಇತ್ಯಂತಾ ವಿಂಶತಿಃ । ತತಃ ಸೂದದೋಹಾ ಏಕೇತ್ಯೇವಮೇಕವಿಂಶತಿರ್ದ್ರಷ್ಟವ್ಯಾ । ಹಿ ಯಸ್ಮಾದುದರಮಧ್ಯೇ ವಿದ್ಯಮಾನಾಃ ಕ್ಲೋಮಪ್ಲೀಹಾದ್ಯವಯವರೂಪಾ ವಿಕೃತಸ್ಯ ಏಕವಿಂಶತಿಸಂಖ್ಯಾಕಾಸ್ತಸ್ಮಾದ್ವಶಭಾಗೇ ಸಂಖ್ಯಾ ಪ್ರಶಸ್ತಾ । ತೇ ಚಾವಯವಾಸ್ತತ್ರ ತತ್ರಾನುವರ್ತಮಾನಪ್ರಕರಣಾದೌ ದ್ರಷ್ಟವ್ಯಾಃ ॥**

ವಶಸೂಕ್ತದಲ್ಲಿರುವ ಋಕ್ ಸಂಖ್ಯೆಯನ್ನು ವಿವರಿಸುತ್ತಾರೆ. 'ತ್ವಾವತಃ' (ಋ-ಸಂ-೮-೪೯-೨) ಎಂದು ಆರಂಭಿಸಿ 'ಸನಿತಃ ಸುಸ್ತನಿತಃ' [ಋ-ಸಂ-೮-೪೯-೨೦] ಎಂಬ ಋಕ್ಕಿನವರೆಗೆ ಇಪ್ಪತ್ತು ಆಗುತ್ತವೆ. ಅದಕ್ಕೆ ಸೂದ

ದೋಹಸ್ಸನ್ನೂ ಸೇರಿಸಿ ಇಪ್ಪತ್ತೊಂದು ಋಕ್ಕುಗಳೆಂದು ತಿಳಿಯಬೇಕು. ಉದರ ಮಧ್ಯದಲ್ಲಿಯೂ ಕ್ಲೋಮ [ನೀರಿನ ಚೀಲ] ಪ್ಲೀಹ [ಕಪ್ಪಾದ ಮಾಂಸ] ಮುಂತಾದ ಅವಯವ ವಿಕೃತಿಗಳಿಂದ ಇಪ್ಪತ್ತೊಂದು ಸಂಖ್ಯೆ ಇರುತ್ತದೆ. ಈ ಸಂಖ್ಯೆಯೇ ವಶ ಭಾಗಶಸ್ತ್ರದಲ್ಲಿರುವುದರಿಂದ ಪ್ರಶಸ್ತವಾಗಿದೆ. ಈ ಅವಯವಗಳನ್ನು ಪ್ರಕರಣಾನುಸಾರವಾಗಿ ಅಲ್ಲಲ್ಲಿ ವಿವರಿಸುತ್ತಾರೆ.

**ಅಥೋ ಏಕವಿಂಶೋ ವೈ ಸ್ತೋಮಾನಾಂ ಪ್ರತಿಷ್ಠಾ ಪ್ರತಿಷ್ಠೋದರಮ-ನ್ನಾದ್ಯಾನಾಂ ॥**

**ಪ್ರಕಾರಾಂತರೇಣ ಸಂಖ್ಯಾಂ ಪ್ರಶಂಸತಿ—ತ್ರಿವೃದಾದಿಸ್ತೋಮಾನಾಂ ಮಧ್ಯ ಏಕವಿಂಶ-ಸ್ತೋಮಸ್ಯ ಪ್ರತಿಷ್ಠಾತ್ವಂ ಪೂರ್ವತ್ರೋಕ್ತಮ್ । ಉದರಸ್ಯ ತ್ವನ್ನಾಧಾರತ್ವಂ ಪ್ರಸಿದ್ಧಮ್ ॥**

ಪ್ರಕಾರಾಂತರದಿಂದ ಈ ಸಂಖ್ಯೆಯನ್ನು ಪ್ರಶಂಸಿಸುತ್ತಾರೆ. ಅನ್ನಾದ್ಯಾಹಾರಕ್ಕೆ ಆಧಾರವಾದುದರಿಂದ ಉದರವು ಶರೀರಪ್ರತಿಷ್ಠಾಕಾರಣವಾದಂತೆ ತ್ರಿವೃದಾದಿಸ್ತೋಮಮಧ್ಯದಲ್ಲಿ ಈ ಏಕವಿಂಶಸ್ತೋಮವು ಪ್ರತಿಷ್ಠಾಸಾಧಕವಾಗಿದೆ.

**ತಾ ವಿಚ್ಛಂದಸೋ ಭವಂತಿ ವಿಕ್ಷುದ್ರಮಿವ ವಾ ಅಂತಸ್ತ್ಯಮಣೀಯ ಇವ ಚ ಸ್ಥವೀಯ ಇವ ಚ ॥**

**ತಾಸ್ವೃಕ್ಷು ವಿದ್ಯಮಾನಂ ಪರಸ್ಪರವಿಲಕ್ಷಣಚ್ಛಂದಸ್ತ್ವಂ ಪ್ರಶಂಸತಿ—" ತ್ವಾವತಃ " (ಋ-ಸಂ-ಮಂ-೮-ಸೂ-೪೬-ಋ-೧) ಇತ್ಯಾದಿಕಾ ಋಚೋ ವಶನಾಮ್ನಾ ವಿಹಿತಾಃ ಪರಸ್ಪರವಿಲಕ್ಷಣಛಂದೋಯುಕ್ತಾಃ । ಏತಚ್ಚಾನುಕ್ರಮಣಿಕಾಯಾಂ ವಿಸ್ಪಷ್ಟಮುಕ್ತಮ್—" ತ್ವಾವತಸ್ತ್ರ್ಯಸ್ತ್ರಿಂಶದ್ವಶಾಶ್ವ್ಯಾ ಆದ್ಯಾ ಪಾದನಿಚೃತ್ " ಇತ್ಯಾರಭ್ಯ " ಪಂಚಮ್ಯಾದಿಕಕುಪ್ತ್ರಗಾಥಗಾಯತ್ರೀ ಬೃಹತ್ಯನುಷ್ಟುಪ್ಸತೋಬೃಹತೀ ಗಾಯತ್ರೀ " ಇತ್ಯಾದಿ ॥ ತದೇತನ್ನಾನಾಛಂದಸ್ತ್ವಮುದರರೂಪಸ್ಯ ವಶಸ್ಯ ಯೋಗ್ಯಮ್ । ಲೋಕೇಽಪ್ಯಂತಸ್ತ್ಯಮುದರಮಧ್ಯವರ್ತಿ ಕ್ಲೋಮಪ್ಲೀಹಾದಿಕಂ ವಿಕ್ಷುದ್ರಮಿವ ವೈ ವಿವಿತ್ವೇನಾಲ್ಪ-ಮೇವಾಲ್ಪತ್ವೇನ ದೃಶ್ಯತೇ । ಏಕಸ್ಮಾದಿತರದಲ್ಪಂ ತತೋಽನ್ಯದಲ್ಪಮಿತ್ಯೇವಂ ವಿವಿಧಂ ಕ್ಷುದ್ರತ್ವಮ್ । ತದೇವಾಣೀಯ ಇತ್ಯಾದಿನೋದಾಹ್ರಿಯತೇ । ದ್ವಿವಿಧಮಾತ್ರಂ (ಂತ್ರಂ) ಸ್ಥೂಲಂ ಸೂಕ್ಷ್ಮಂ ಚ ತಸ್ಮಾದುಭಯಾತಿಶಯೇನ ಸ್ಥೂಲಂ ಹೃದಯಮತ್ರ। ಏವಂ ಕ್ಲೋಮಪ್ಲೀಹಾದಿಷು ಯಥಾಯೋಗ್ಯಂ ದ್ರಷ್ಟವ್ಯಮ್ ॥**

ಈ ಇಪ್ಪತ್ತೊಂದು ಋಕ್ಕುಗಳಲ್ಲಿರುವ ಪರಸ್ಪರವಿಲಕ್ಷಣವಾದ ಛಂದಸ್ಸುಗಳನ್ನು ವಿವರಿಸುತ್ತಾರೆ. 'ತ್ವಾವತಃ' (ಋ. ಸಂ. ೮-೪೬-೧) ಇತ್ಯಾದಿ ಋಕ್ಕುಗಳು ವಶನೆಂಬ ಮಹರ್ಷಿಯಿಂದ ಕಂಡುಹಿಡಿಯಲ್ಪಟ್ಟ ಪರಸ್ಪರ ವಿಲಕ್ಷಣ ಛಂದಸ್ಸುಗಳಿಂದ ಕೂಡಿರುತ್ತವೆ. ಈ ವಿಷಯ ಅನುಕ್ರಮಣಿಕಾಗ್ರಂಥದಲ್ಲಿ " ತ್ವಾವತಸ್ತ್ರ್ಯಸ್ತ್ರಿಂಶದ್ವಶಾಶ್ವ್ಯಾ ಆದ್ಯಾ ಪಾದನಿಚೃತ್ " ಎಂದು ಆರಂಭಿಸಿ " ಪಂಚಮ್ಯಾದಿಕಕುಪ್ತ್ರಗಾಥಗಾಯತ್ರೀ ಬೃಹತ್ಯನುಷ್ಟುಪ್‌ಸತೋಬೃಹತೀ ಗಾಯತ್ರೀ " ಇತ್ಯಾದಿವಾಕ್ಯಗಳಿಂದ ವಿವರಿಸಿದೆ. ಬೃಹತೀಗಾಯತ್ರ್ಯಾದಿನಾನಾಛಂದಸ್ಸುಗಳಿಂದ ಕೂಡಿರುವುದು ಉದರರೂಪವಾದವಶಸೂಕ್ತಕ್ಕೆ ಯುಕ್ತವಾಗಿದೆ. ಲೋಕದಲ್ಲಿ ಉದರಮಧ್ಯದಲ್ಲಿಯೂ ಅಂತಸ್ತ್ಯಂ ಅಂದರೆ ಹಿಂದೆ ಹೇಳಿದ ಕ್ಲೋಮಪ್ಲೀಹಾದಿವಿಕೃತಿಗಳು ಒಂದಕ್ಕಿಂತ ಒಂದು ಚಿಕ್ಕದಾಗಿರುತ್ತವೆ. ಒಂದಕ್ಕಿಂತ ಒಂದು ಅಲ್ಪವಾದುದರಿಂದಲೇ ಕ್ಷುದ್ರಗಳಾಗಿರುತ್ತವೆ. ಇದನ್ನೇ ಅಣೀಯಃ

ಇತ್ಯಾದಿಪದಗಳಿಂದ ವಿವರಿಸುತ್ತಾರೆ. ಇವು ಸ್ಥೂಲ, ಸೂಕ್ಷ್ಮಭೇದಗಳಿಂದ ಎರಡುರೀತಿಯಾಗಿದ್ದು ಸ್ಥೌಲ್ಯದಿಂದ ಅತಿಶಯವನ್ನು ಹೊಂದುತ್ತವೆ. ಛಂದಸ್ಸುಗಳಲ್ಲಿಯೂ ದೈರ್ಘ್ಯದಿಂದ ಪ್ರಾಶಸ್ತ್ಯವನ್ನು ತಿಳಿಯಬೇಕು.

**ತಾಃ ಪ್ರಣಾವಂ ಛಂದಸ್ಕಾರಂ ಯಥೋಪಪಾದಂ ಶಂಸತಿ ಯಥೋಪ-ಪಾದಮಿವ ವಾ ಅಂತಸ್ತ್ಯಂ ಹ್ಯಸೀಯ ಇವ ಚ ದ್ರಾಘೀಯ ಇವ ಚ**

ಶಂಸನೇ ಪ್ರಕಾರವಿಶೇಷಂ ವಿಧತ್ತೇ—ಯಾ ಋಚಃ "ತ್ವಾಽವತಃ" (ಋ-ಸಂ-ಮಂ-೮-ಸೂ ೪೬-ಋ-೧) ಇತ್ಯಾದಿಕಾಃ ಸಂತಿ ತಾಸಾಂ ಶಂಸನಕಾಲೇ ಪ್ರಣಾವಂ ಪ್ರಣುತ್ಯ ಪುನಃ ಪುನಃ ಪ್ರಣವಮುಚ್ಚಾರ್ಯ ಚ್ಛಂದಸ್ಕಾರಂ ತತ್ತಚ್ಛಂದೋ ಯಥಾ ನ ವಿಪರ್ಯೇತಿ ತಥಾ ತತ್ರ ಕೃತ್ವಾ ಯಥೋಪಪಾದಮುಕ್ತನಿಯಮಮನತಿಕ್ರಮ್ಯ ಯಥಾ ಶಂಸನಮುಪಪದ್ಯತೇ ತಥಾ ಶಂಸೇತ್ । ಏತದರ್ಥಮೇವ ಸಂದಿಗ್ಧಾಮೃಚಂ ವಿಭಜ್ಯ ಶೌನಕೋ ದರ್ಶಯತಿ—"ದದೀರೇಕ್ಣ ಇತಿ ದ್ವಿಪದಾ ನೂನಮಥೇತ್ಯೇಕಪದಾ" (ಐ-ಆ-೫-ಅ-೨-ಖಂ-೫) ಇತಿ । ತತ್ರ ಶಂಸನಪ್ರಕಾರ ಆಶ್ವಲಾಯನೇನೋದಾಹೃತಃ—"ಪಚ್ಛೋ ದ್ವಿಪದಾ ಉಪಸಂತನುಯಾದೇಕಪದಾಃ" ಇತಿ । ಅಯಮರ್ಥಃ—ಯಾ ಋಚೋ ದ್ವಿಪದಾಃ ಸಂತಿ ತಾಃ ಪಚ್ಛಃ ಶಂಸನೀಯಾಃ, ಪ್ರಥಮಪಾದಂ ಪಠಿತ್ವಾ ತತೋಽವಸಾಯ ಪಶ್ಚಾದ್ದ್ವಿತೀಯಂ ಪಾದಂ ಪಠಿತ್ವಾ ಅಂತೇ ಪ್ರಣವಂ ಕುರ್ಯಾತ್ । ಯಾ ಏಕಪದಾಃ ಸಂತಿ ತಾಃ ಪುರಸ್ತಾದುಪರಿಷ್ಟಾಚ್ಚ ಪ್ರಣವಾಭ್ಯಾಂ ಶಂತನುಯಾತ್ । ಮಧ್ಯೇ ಚ ನಾವಸ್ಯೇತಿ (ದೀ) ದೃಶಂ ಶಂಸನಂ ಯಥೋಪಪಾದಮಿತ್ಯುಚ್ಯತೇ । ಅಂತಸ್ತ್ಯಮುರೋ ಮಧ್ಯೇಽವಸ್ಥಿತಮಪ್ಯತ್ರ ಕ್ಲೋಮಪ್ಲೀಹಾದಿಕಂ ಯಥೋಪಪನ್ನಂ ಭವತಿ ತಥೈವಾವತಿಷ್ಠತೇ । ಕಿಂಚಿದಂಗಮತಿಹ್ರಸ್ವಮಿವಾನ್ಯದಂಗಮತಿದೀರ್ಘಮಿವ ಸ್ಥಿತಂ ತಸ್ಮಾತ್ತತ್ಸಾದೃಶ್ಯಾಯ ನ್ಯೂನಾಧಿಕಚ್ಛಂದಾಂಸಿ ಯಥಾ ತಥಾ ಶಂಸೇತ್ ॥

ಪ್ರಕಾರವಿಶೇಷದಿಂದ ಪ್ರಾಶಸ್ತ್ಯವನ್ನು ತೋರಿಸುತ್ತಾರೆ. ತ್ವಾವತಃ (ಋ-ಸಂ-೮-೪೬-೧) ಇತ್ಯಾದಿ ಇಪ್ಪತ್ತೊಂದು ಋಕ್ಕುಗಳನ್ನು ಪಠಿಸುವಾಗ **ಪ್ರಣಾವಂ** ಅಂದರೆ ಪುನಃ ಪುನಃ ಪ್ರಣವವನ್ನು ಉಚ್ಚರಿಸಿ, **ಛಂದಸ್ಕಾರಂ** ಅಂದರೆ ಆಯಾಯ ಛಂದಸ್ಸುಗಳು ವ್ಯತ್ಯಾಸವಾಗದಂತೆ ನೋಡಿಕೊಂಡು, **ಯಥೋಪಪಾದಂ** ಅಂದರೆ ಉಕ್ತನಿಯಮವನ್ನು ಮೀರದೆ ಪಠಿಸಬೇಕು. ಇದಕ್ಕೋಸ್ಕರವೇ ಶೌನಕರು "ದದೀರೆಕ್ಣ ಇತಿ ದ್ವಿಪದಾ ನೂನಮಥೇತ್ಯೇಕಪದಾ" ಸಂದಿಗ್ಧವಾದ ಋಕ್ಕನ್ನು ವಿಭಾಗಿಸಿ ತೋರಿಸಿರುತ್ತಾರೆ. ಇವುಗಳ ಪಠನರೀತಿಯನ್ನು ಆಶ್ವಲಾಯನರು "ಪಚ್ಛೋ ದ್ವಿಪದಾ ಉಪಸಂತನುಯಾದೇಕ ಪದಾಃ" ಎಂದು ಉದಾಹರಿಸಿರುತ್ತಾರೆ. ಅಂದರೆ ಇವುಗಳಲ್ಲಿ ಯಾವ ದ್ವಿಪದ ಋಕ್ಕುಗಳಿವೆಯೋ ಅವುಗಳನ್ನು ಪಾದಶಃ ಪಠಿಸಬೇಕು. ಅಂದರೆ ಮೊದಲು ಪ್ರಥಮಪಾದವನ್ನು ಪಠಿಸಿ ಆಮೇಲೆ ದ್ವಿತೀಯಪಾದವನ್ನೂ ಹೇಳಿದ ಮೇಲೆ ಕೊನೆಯಲ್ಲಿ ಓಂಕಾರವನ್ನು ಹೇಳಬೇಕು. ಏಕಪದಗಳಾದ ಋಕ್ಕುಗಳನ್ನು ಪಠಿಸಬೇಕಾದರೆ ಮೊದಲೂ, ಕೊನೆಯಲ್ಲಿಯೂ ಪ್ರಣವವನ್ನು ಸೇರಿಸಿ ಪಠಿಸಬೇಕು. ಮಧ್ಯದಲ್ಲಿ ನಿಲ್ಲಿಸಬಾರದು. ಇದನ್ನೇ **ಯಥೋಪಪಾದಂ** ಎಂದು ಹೇಳಿರುತ್ತಾರೆ. ಉದರಮಧ್ಯದಲ್ಲಿಯೂ ಕೂಡಾ ಕ್ಲೋಮಪ್ಲೀಹಾದಿಗಳು ಒಂದಕ್ಕೊಂದು ಹೊಂದಿಕೊಂಡಿರುತ್ತವೆ. ಅವುಗಳಲ್ಲಿ ಕೆಲವು ಅಂಗಗಳು ಅತಿಚಿಕ್ಕದಾಗಿಯೂ ಕೆಲವು ಅತಿದೀರ್ಘವಾಗಿಯೂ ಇರುವಂತೆ ಈ ವಿವಿಧಛಂದಸ್ಸುಗಳೂ ಇರುವುದರಿಂದ ಸಾಮ್ಯ ಹೊಂದುತ್ತವೆ.

ಅಥ ಸೂದದೋಹಾಃ ಪ್ರಾಣೋ ವೈ ಸೂದದೋಹಾಃ ಪ್ರಾಣೇನ ಪರ್ವಾಣಿ ಸಂದಧಾತಿ ॥

ತಾ ಅಸ್ಯೇತ್ಯೇತಾವೃಚಂ ವಿಧತ್ತೇ—

ವಶಸೂಕ್ತವನ್ನು ಪಠಿಸಿದಮೇಲೆ ' ತಾ ಅಸ್ಯ ' ಎಂಬ ಸೂದದೋಹ ಋಕ್ಕನ್ನು ವಿಧಿಸುತ್ತಾರೆ. ಇದು ಹಿಂದೆ ವ್ಯಾಖ್ಯಾತವಾಗಿದೆ.

ತಾಮುತ್ರೋತ್ಸೃಜತಿ ದ್ವಾದಶಕೃತ್ವಃ ಶಸ್ತ್ವಾ ದ್ವಾದಶವಿಧಾ ವಾ ಇಮೇ ಪ್ರಾಣಾಃ ಸಪ್ತ ಶೀರ್ಷಣ್ಯಾ ದ್ವೌ ಸ್ತನ್ಯೌ ತ್ರಯೋಽವಾಂಚೋಽತ್ರ ವೈ ಪ್ರಾಣಾ ಆಪ್ಯಂತೇಽತ್ರ ಸಂಸ್ಕ್ರಿಯಂ ತಸ್ಮಾದೇನಾಮುತ್ರೋತ್ಸೃಜತಿ

ವಶಭಾಗಸ್ಯ ಶಂಸನಾದೂರ್ಧ್ವಂ " ತಾ ಅಸ್ಯ " (ಋ-ಸಂ-ಮಂ-೮-ಸೂ-೯೯-ಋ-೩) ಇತ್ಯಸ್ಯಾ ಋಚಃ ಪರಿತ್ಯಾಗಂ ವಿಧತ್ತೇ—ತಾಂ ಸೂದದೋಹಸಂ ದ್ವಾದಶವಾರಂ ಪಠಿತ್ವಾ ತತ ಊರ್ಧ್ವಮತ್ರ ವಶಶಂಸನಸ್ಥಾನೇ ಪರಿತ್ಯಜೇತ್ । ನ ತ್ವಿತಊರ್ಧ್ವಮೂರುಭಾಗಸ್ಥಾನೇ ತಾಂ ಸೂದ-ದೋಹಸಂ ಪಠೇತ್ । ಶಸ್ತ್ರಪಕ್ಷಿಣಃ ಪೂರ್ವೋಕ್ತಾ ಏಕಾದಶಾವಯವಾ ಆತ್ಮಾ ಗ್ರೀವಾ ಶಿರೋ-ವಿಜವೋ ದ್ವೌ ಪಕ್ಷೌ ಪುಚ್ಛಂ ತೃಚಾಶೀತಿರೂಪಾಣಿ ತ್ರೀಣ್ಯನ್ನಾನಿ ವಶಾಖ್ಯಮುದರಂ ಚೇತಿ, ತತ್ರ ಸರ್ವತ್ರ ಸೂದದೋಹಾಃ ಸಕೃತ್ಪಠಿತಾ ಪುಚ್ಛೇ ತು ಧಾಯ್ಯಾಯಾಃ ಪುರಸ್ತಾದುಪರಿಷ್ಟಾಚ್ಚ ದ್ವಿಃ ಪಠಿತಾ, ಏವಂ ದ್ವಾದಶಾವೃತ್ತಿಃ । ಶರೀರಗತಾ ಇಮೇ ಪ್ರಾಣಾಶ್ಚ ಚ್ಛಿದ್ರಭೇದೇನ ದ್ವಾದಶವಿಧಾಃ । ಶಿರಸಿ ಸಪ್ತ ಚ್ಛಿದ್ರಾಣಿ, ಸ್ತನಯೋರ್ದ್ವೇ ಛಿದ್ರೇ ನಾಭ್ಯಾಂ ಪಾಯುಗುದಯೋಶ್ಚ ತ್ರೀಣಿ । ಏತೇಷು ದ್ವಾದಶಸು ಚ್ಛಿದ್ರೇಷ್ವೇವ ಸರ್ವೇ ಪ್ರಾಣಾಃ ಪ್ರಾಪ್ಯಂತೇ । ಅತ ಏವ ಮಂತ್ರಾತ್ಮನಾ ತೇ ಪ್ರಾಣಾಃ ಸಂಸ್ಕ್ರಿಯಂತೇ । ಯಸ್ಮಾದ್ದ್ವಾದಶವಿಧ ಪ್ರಾಣಸಾಮ್ಯಮತ್ರ ಸಮಾಪ್ತಂ ತಸ್ಮಾದೇನಾಮೃಚಮತ್ರ ಪರಿತ್ಯಜೇತ್ । ನ ತೂಪರಿತನ ಊರುಭಾಗೇ ಪಠೇತ್ ॥

ವಶಭಾಗಪ್ರಶಂಸೆಯನ್ನು ಓದಿಸಿದ ಮೇಲೆ ' ತಾ ಅಸ್ಯ ' (ಋ. ಸಂ. ೮-೯೯-೩) ಎಂಬ ಸೂದದೋಹ ಋಕ್ಕಿನ ಪರಿತ್ಯಾಗವನ್ನು ತೋರಿಸುತ್ತಾರೆ. ಈ ಸೂದದೋಹವನ್ನು ಹನ್ನೆರಡು ಬಾರಿ ಪಠಿಸಿದ ಮೇಲೆ ವಶಭಾಗದ ಸ್ಥಾನದಲ್ಲಿ ಬಿಡಬೇಕು. ಇದಲ್ಲದೆ ಮುಂದೆ ಹೇಳುವ ಊರುಭಾಗಸ್ಥಾನದಲ್ಲಿ ಸೂದದೋಹ ಋಕ್ಕನ್ನು ಪಠಿಸಬಾರದು. ಶಸ್ತ್ರರೂಪಪಕ್ಷಿಗೆ ಹಿಂದೆ ಆತ್ಮಾ, ಗ್ರೀವ, (ಕಂಠ) ಶಿರಃ (ತಲೆ) ವಿಜಯ (ಪಕ್ಷಮೂಲ) ಎರಡು ಪಕ್ಷ (ರೆಕ್ಕೆ) ಪುಚ್ಛ (ಗರಿಗಳತುದಿ) ತೃಚಾಶೀತಿರೂಪಗಳಾದ ಮೂರು ವಿಧ ಅನ್ನಗಳು, ವಶಭಾಗವೆಂಬ ಉದರ ಹೀಗೆ ಹನ್ನೊಂದು ಅವಯವಗಳು ವಿವೃತವಾಗಿವೆ. ಇವುಗಳಲ್ಲಿ ಪ್ರತಿಯೊಂದನ್ನೂ ಪಠಿಸಿದಮೇಲೆ ಒಂದು ಬಾರಿ ಸೂದದೋಹವನ್ನು ಹೇಳಿವೆ. ಪುಚ್ಛದಲ್ಲಿ ಧಾಯ್ಯಾಮಂತ್ರಪಾಠದ ಪೂರ್ವದಲ್ಲಿಯೂ ಪರದಲ್ಲಿಯೂ ಎರಡು ಬಾರಿ ಹೇಳಿವೆ. ಆಗ ಒಟ್ಟಿಗೆ ಹನ್ನೆರಡಾವೃತ್ತಿ ಸೂದದೋಹದ ಪಾಠ ಹೇಳಿದಂತಾಯಿತು. ಶರೀರದಲ್ಲಿರುವ ಪ್ರಾಣಗಳೂ ಆಯಾಯ ಛಿದ್ರಭೇದದಿಂದ ಹನ್ನೆರಡು ವಿಧವಾಗಿರುತ್ತವೆ. ತಲೆಯಲ್ಲಿ (೨ಕಿವಿ, ೨ಮೂಗಿನ ಸೊಳ್ಳೆ, ೨ಕಣ್ಣು ಬಾಯಿ) ಆರು, ಸ್ತನಗಳಲ್ಲಿ ಎರಡು, ನಾಭಿಯಲ್ಲಿ ಒಂದು

(ಹೊಕ್ಕಳು) ಪಾಯ, ಗುದಗಳಲ್ಲಿ ಒಂದೊಂದು (ಮೂತ್ರ, ಮಲದ್ವಾರಗಳು) ಹೀಗೆ ಹನ್ನೆರಡು ವಿಧಗಳಲ್ಲಿ ಎಲ್ಲಾ ಪ್ರಾಣಗಳು ಸೇರಿರುತ್ತವೆ. ಇವು ಈ ಮಂತ್ರದ ಪಠನದಿಂದ ಪವಿತ್ರವಾಗುತ್ತವೆ. ಹನ್ನೆರಡು ರೀತಿಯಾದ ಪ್ರಾಣ ಸಾಮ್ಯವು ಸೂದದೋಹಕ್ಕೆ ಸಂಪನ್ನವಾದುದರಿಂದ ಇದನ್ನು ಇಲ್ಲಿಯೇ ಬಿಡಬೇಕು. ಅಂದರೆ ಮುಂದಿನ ಭಾಗಸ್ಥಾನದಲ್ಲಿ ಪಠಿಸಬಾರದು.

**ಇಂದ್ರಾಗ್ನೀ ಯುವಂ ಸುನ ಇತ್ಯೈಂದ್ರಾಗ್ನಾ ಊರೂ ಉರ್ವಸ್ಥಿವೇ ಪ್ರತಿಷ್ಠೇ ॥**

**ಉದರಭಾಗಮುಕ್ತ್ವಾ ಶಸ್ತ್ರಪಕ್ಷಿಣ ಊರುಭಾಗಂ ವಿಧತ್ತೇ—“ಇಂದ್ರಾಗ್ನೀ ಯುವಮ್ । ಇತ್ಯಾದಿಸೂಕ್ತಂ ದ್ವಾದಶರ್ಚಂ ತಚ್ಚ ಶಸ್ತ್ರಪಕ್ಷಿಣ ಊರುತ್ವೇನ ಪಠನೀಯಮ್ । ಅಸ್ಮಿನ್ಸೂಕ್ತೇ ಯಾವಿಂದ್ರಾಗ್ನೀ ಪ್ರತೀಯೇತೇ ತಯೋಃ ಸಂಬಂಧಿನೌ ಪಕ್ಷಿಣ ಊರೂ । “ಇಂದ್ರಾಗ್ನೀ ವೈ ದೇವಾನಾಮೋಜಿಷ್ಠೌ ಬಲಿಷ್ಠೌ” (ತೈ-ಬ್ರಾ-ಕಾ-೩-ಪ್ರ-೮-ಅ-೭) ಇತಿ ತಯೋಃ ಪ್ರಬಲತ್ವಶ್ರವಣಾದೂರ್ವೋಶ್ಚ ಗಮನಾದಿವ್ಯವಹಾರ ಹೇತುತ್ವೇನ ಪ್ರಬಲತ್ವಾತ್ ॥**

ಉದರಭಾಗವನ್ನು ವಿವರಿಸಿದಮೇಲೆ ಶಸ್ತ್ರರೂಪಪಕ್ಷಿಯ ಊರುಭಾಗ (ತೊಡೆ) ವನ್ನು ವಿವರಿಸುತ್ತಾರೆ. '**ಇಂದ್ರಾಗ್ನಿ ಯುವಂ**' ಎಂಬ ಸೂಕ್ತವು ಹನ್ನೆರಡು ಋಕ್ಕುಗಳಿಂದ ಕೂಡಿದೆ. ಇದನ್ನು ಶಸ್ತ್ರಪಕ್ಷಿಯ ಊರುಭಾಗರೂಪವಾಗಿ ಪಠಿಸಬೇಕು. ಈ ಸೂಕ್ತದಲ್ಲಿ ಇಂದ್ರಾಗ್ನೀ ಎಂಬ ಪದವು ಸೇರಿರುವುದರಿಂದ ಅದರಿಂದ ತೋರುವ ಇಂದ್ರ, ಅಗ್ನಿ ದೇವತೆಗಳೇ ಈ ಪಕ್ಷಿಯ ಊರುಭಾಗಗಳು. 'ಇಂದ್ರಾಗ್ನೀ ವೈ ದೇವಾನಾಮೋಜಿಷ್ಠೌ ಬಲಿಷ್ಠೌ' (ತೈ-ಬ್ರಾ-ಕಾ-೩-೮-೭) ಎಂಬ ಶ್ರುತಿವಾಕ್ಯದಿಂದ ಇಂದ್ರಾಗ್ನಿದೇವತೆಗಳೇ ಅತ್ಯಂತ ಬಲಶಾಲಿಗಳೆಂದು ತಿಳಿಯುವುದರಿಂದ, ಶರೀರದಲ್ಲಿ ತೊಡೆಗಳೂ ಗಮನಾದಿಸಾಧನವಾಗಿ ಬಲಿಷ್ಠಗಳಾದುದರಿಂದ ಊರುಭಾಗಸಾಮ್ಯವು ಯುಕ್ತವಾಗಿದೆ.

**ತಾ ಷಟ್‌ಪದಾ ಭವಂತಿ ಪ್ರತಿಷ್ಠಾಯಾ ಏವ ದ್ವಿಪ್ರತಿಷ್ಠೋ ವೈ ಪುರುಷ ಶ್ಚತುಷ್ಪಾದಃ ಪಶವೋ ಯಜಮಾನಮೇವ ತದ್ವಿಪ್ರತಿಷ್ಠಂ ಚತು-ಷ್ಪಾತ್ಸು ಪಶುಷು ಪ್ರತಿಷ್ಠಾಪಯತಿ॥**

**(ಏತತ್ಸೂಕ್ತಗತಾನಾಮೃಚಾಂ ಷಟ್‌ಪದತ್ವಂ ಪ್ರಶಂಸತಿ) ಅಸ್ಮಿನ್ಸೂಕ್ತೇ ದ್ವಿತೀಯಸ್ಯಾ ಅಂತಿಮಾಯಾಶ್ಚ ವಿಶೇಷಸ್ಯ ವಕ್ಷ್ಯಮಾಣತ್ವಾದ್ಯಾ ಅವಶಿಷ್ಟಾ ದಶರ್ಚಃ ಸಂತಿ ತಾಃ ಪ್ರತ್ಯೇಕಂ ಷಟ್‌ಪದಾ ಭವಂತಿ । ತಚ್ಚ ಪ್ರತಿಷ್ಠಾರ್ಥಮೇವ ಸಂಪದ್ಯತೇ । ತತ್ಕಥಮಿತಿ ತದುಚ್ಯತೇ—ಲೋಕೇ ಮನುಷ್ಯಃ ಪಾದದ್ವಯೇನ ಭೂಮೌ ಪ್ರತಿತಿಷ್ಠತಿ । ಪಶವಸ್ತು ಚತುಷ್ಪಾದಾ ವರ್ತಂತೇ । ಏವಂ ಸತ್ಯ-ತ್ರಾಪಿ ತತ್ತೇನ ಪಾದಷಟ್ಕಪಾಠೇನ ಪಾದದ್ವಯೋಪೇತಂ ಯಜಮಾನಂ ಚತುಷ್ಪಾತ್ಸು ಪ್ರತಿಷ್ಠಿತಂ ಕರೋತಿ ॥**

ಈ ಸೂಕ್ತದಲ್ಲಿರುವ ಋಕ್ಕುಗಳ ಷಟ್‌ಸಂಖ್ಯೆಯನ್ನು ಪ್ರಶಂಸಿಸುತ್ತಾರೆ. ಹನ್ನೆರಡರಲ್ಲಿ ಎರಡನೆಯ ಮತ್ತು ಕೊನೆಯ ಋಕ್ಕುಗಳ ವಿಶೇಷವನ್ನು ಮುಂದೆ ವಿವರಿಸುವುದರಿಂದ ಉಳಿದ ಹತ್ತು ಋಕ್ಕುಗಳು ಪ್ರತ್ಯೇಕವಾಗಿ ಷಟ್ಪದಗ

ಳಾಗಿರುತ್ತವೆ. ಈ ಸಂಖ್ಯೆಯು ಪ್ರತಿಷ್ಠಾಕಾರಣವಾಗುತ್ತದೆ. ಹೇಗೆಂದರೆ— ಲೋಕದಲ್ಲಿಯೂ ಮನುಷ್ಯನು ಎರಡು ಪಾದಗಳಿಂದ ಭೂಮಿಯಲ್ಲಿ ಸ್ಥಿರವಾಗಿ ನಿಲ್ಲುತ್ತಾನೆ. ಪಶುಗಳು ಚತುಷ್ಪಾದಗಳಾಗಿರುತ್ತವೆ. ಈ ಪಾದಷಟ್ಕದಿಂದ ಕೂಡಿದ ಋಕ್ಕುಗಳ ಪಠನದಿಂದ ಪಾದದ್ವಯದಿಂದ ಕೂಡಿದ ಯಜಮಾನನು ಚತುಷ್ಪಾದ ಪ್ರಾಣಿಗಳ ಸ್ವಾಮಿತ್ವವನ್ನು ಹೊಂದುತ್ತಾನೆ.

**ದ್ವಿತೀಯಾ ಸಪ್ತಪದಾ ಭವತಿ ತಾಂ ಗಾಯತ್ರೀಂ ಚಾನುಷ್ಟುಭಂ ಚ ಕರೋತಿ ಬ್ರಹ್ಮ ವೈ ಗಾಯತ್ರೀ ವಾಗನುಷ್ಟುಬ್ ಬ್ರಹ್ಮಣೈವ ತದ್ವಾಚಂ ಸಂದಧಾತಿ ॥**

ದ್ವಿತೀಯಾಯಾಂ " ನ ಹಿ ವಾಂ ವವ್ರಯಾಮಹೇ " (ಋ. ಸಂ-ಮಂ-೮-ಸೂ-೪೦ ಋ-೧) ಇತ್ಯೇತಸ್ಯಾಮೃಚಿ ವಿಶೇಷಂ ವಿಧತ್ತೇ—ದ್ವಿತೀಯಸ್ಯಾ ಋಚಃ ಸಂಬಂಧಿಭಿಃ ಸಪ್ತಭಿಃ ಪಾದೈರ್ಗಾಯತ್ರೀಂ ಕೃತ್ವಾ ಶಂಸೇತ್ । ಪಾದದ್ವಯೇಽವಸಾಯ ತೃತೀಯಪಾದೇ ಪ್ರಣವೋ ಗಾಯತ್ರೀಕರಣಮ್ । ಅವಶಿಷ್ಟೇನ ಪಾದಚತುಷ್ಟಯೇನಾನುಷ್ಟುಭಂ ಕೃತ್ವಾ ಶಂಸೇತ್ । ಪಾದದ್ವಯೇಽವಸಾಯ ಚತುರ್ಥಪಾದೇ ಪ್ರಣವಪ್ರಯೋಗೋಽನುಷ್ಟುಪ್‌ಕರಣಮ್ । ತತ್ರ ಯಾ ತ್ವತ್ರ ನಿಷ್ಪಾದ್ಯಾ ಗಾಯತ್ರೀ ಸಾ ಬ್ರಹ್ಮೈವ " ತತ್ಸವಿತುರ್ವರೇಣ್ಯಮ್ "— (ಋ-ಸಂ-ಮಂ-೩-ಸೂ-೬೨-ಋ-೧೦) ಇತ್ಯನಯಾ ಗಾಯತ್ರ್ಯಾ ಪರಬ್ರಹ್ಮಣಃ ಪ್ರತಿಪಾದಿತತ್ವಾತ್ । ಯಾ ತು ಪಾದಚತುಷ್ಟಯ ಸಂಪನ್ನಾಽನುಷ್ಟುಪ್ ಸಾ ವಾಗ್ರೂಪಾ ವಾಗ್ವಿಶೇಷಾಣಾಂ ಮಧ್ಯೇ ಪ್ರಶಸ್ತತ್ವಾತ್ । ಗಾಯತ್ರ್ಯನುಷ್ಟುಭೋಃ ಸಂಪಾದನೇನ ಪರಬ್ರಹ್ಮಣೈವ ಸಹ ವಾಗ್ದೇವತಾ ಸಂಯೋಜಿತಾ ಭವತಿ ॥

' ನ ಹಿ ವಾಂ ವವ್ರಯಾಮಹೇ ' (ಋ.ಸಂ. ೮-೪೦-೨) ಎಂಬ ಎರಡನೆಯ ಋಕ್ಕಿನ ವಿಶೇಷವನ್ನು ವಿವರಿಸುತ್ತಾರೆ ಈ ಋಕ್ಸಂಬಂಧಿಯಾದ ಏಳು ಪಾದಗಳಿಂದ ಗಾಯತ್ರಿಯನ್ನು ಕಲ್ಪಿಸಿ ಪಠಿಸಬೇಕು. ಪಾದದ್ವಯವನ್ನು ಮುಗಿಸಿದ ಮೇಲೆ ಮೂರನೇ ಪಾದದಲ್ಲಿ ಪ್ರಣವೋಚ್ಚಾರಣೆಯೇ ಗಾಯತ್ರೀಕಲ್ಪನೆ. ಉಳಿದ ಪಾದಚತುಷ್ಟಯ (4) ದಿಂದ ಅನುಷ್ಟುಪನ್ನು ಕಲ್ಪಿಸಿ ಪಠಿಸಬೇಕು. ಅನುಷ್ಟುಪ್ ಆಗಬೇಕಾದರೆ ಪಾದದ್ವಯವಾದ ಮೇಲೆ ನಾಲ್ಕನೆಯ ಪಾದದಲ್ಲಿ ಪ್ರಣವಪ್ರಯೋಗ ಮಾಡಬೇಕು. ಇಲ್ಲಿ ಗಾಯತ್ರೀಕಲ್ಪನೆಯೇ ಪರಬ್ರಹ್ಮಸ್ವರೂಪವು. ಏಕೆಂದರೆ ' ತತ್ಸವಿತುರ್ವರೇಣ್ಯಂ' (ಋ. ಸಂ. ೩-೬೨-೧೦) ಎಂಬ ಗಾಯತ್ರೀಛಂದಸ್ಸಿನಿಂದ ಪರಬ್ರಹ್ಮಸ್ವರೂಪವೇ ವಿವೃತವಾಗಿದೆ. ಪಾದಚತುಷ್ಟಯದಿಂದ ನಿಷ್ಪನ್ನವಾದ ಅನುಷ್ಟುಪ್ ಕೂಡಾ ವಾಗ್ರೂಪವಾಗಿರುತ್ತದೆ. ವಾಗ್ವಿಶೇಷಗಳಲ್ಲಿ ಇದೇ ಅತಿ ಶ್ರೇಷ್ಠವಾದುದು. ಹೀಗೆ ಗಾಯತ್ರೀ ಅನುಷ್ಟುಪ್ ಕಲ್ಪನೆಯಿಂದ ಪರಬ್ರಹ್ಮನೊಡನೆ ವಾಗ್ದೇವತೆಯನ್ನು ಸೇರಿಸಿದಂತಾಗುತ್ತದೆ.

**ತ್ರಿಷ್ಟುಭಮಂತತಃ ಶಂಸತಿ ವೀರ್ಯಂ ವೈ ತ್ರಿಷ್ಟುಬ್ ವೀರ್ಯೇಣೈವ ತತ್ಪಶೂನ್ಪರಿಗೃಹ್ಣಾತಿ ತಸ್ಮಾತ್ಪಶವೋ ವೀರ್ಯಮನೂಪತಿಷ್ಠಂತ ಈರ್ಯತಾಂ ಚೈವಾಭ್ಯುತ್ಥಾನಂ ಚ ॥**

(ಅಂತಿಮಾಯಾ ವಿಶೇಷಂ ವಿಧತ್ತೇ—ಅಂತತಃ ಸೂಕ್ತಸ್ಯಾವಸಾನೇ ಯಾ ತ್ರಿಷ್ಟುಪ್-ಛಂದಸ್ಕಾಽಽಮ್ನಾತಾ ತಾಂ ತ್ರಿಷ್ಟುಭಃ ಸಮಯೇನೈವ ಶಂಸೇತ್ | (ತದೇವ ತ್ರಿಷ್ಟುಪ್ ಸಮಯಃ) | ತ್ರಿಷ್ಟುಭೋ ವೀರ್ಯಹೇತುತ್ವಾದ್ವೀರ್ಯರೂಪತ್ವಂ ತತ್ತೇನ ತ್ರಿಷ್ಟುಪ್‌ಶಂಸನೇನಾಯಂ ಪುರುಷಃ ಸ್ವಸಾಮರ್ಥ್ಯೇನೈವ ಪಶೂನ್ಪರಿತಃ ಪ್ರಾಪ್ನೋತಿ | ಯಸ್ಮಾದೇವಂ ತಸ್ಮಾಲ್ಲೋಕೇ ಪಶವೋ ವೀರ್ಯಮನೂಪತಿಷ್ಠಂತೇ ವಾಕ್ಪಾರುಷ್ಯೇಣ ದಂಡಪಾರುಷ್ಯೇಣ ವಾ ಗೋಪಾಲವೀರ್ಯಮವಧಾರ್ಯ ಪ್ರತ್ಯಾವ್ರಜಂತಿ | ತಥಾ ತದ್ವೀರ್ಯವಶಾದೀರ್ಯತಾಂ ಚ ಶಯನಾದಭ್ಯುತ್ಥಾನಂ ಚ ಪ್ರಾಪ್ನುವಂತ್ಯೇ (ವ ನ) ವೇತಿ ಶೇಷಃ ||

ಕೊನೆಯ ಋಕ್ಕಿನ ವಿಶೇಷವನ್ನು ವಿವರಿಸುತ್ತಾರೆ. ಸೂಕ್ತದ ಕೊನೆಯಲ್ಲಿ ಯಾವ ತ್ರಿಷ್ಟುಪ್ ಇದೆಯೋ ಅದನ್ನು ತ್ರಿಷ್ಟುಪ್ ಸಮಯದಿಂದಲೇ ಪಠಿಸಬೇಕು. ಅಂದರೆ ತ್ರಿಷ್ಟುಪ್ ವೀರ್ಯಕಾರಣವಾದುದರಿಂದ ವೀರ್ಯರೂಪವಾಗಿದೆ. ಇದನ್ನು ಪಠಿಸುವುದರಿಂದ ಯಜಮಾನನು ತನ್ನ ಸಾಮರ್ಥ್ಯದಿಂದಲೇ ಸಕಲ ಪಶುಸಮೃದ್ಧಿಯನ್ನು ಹೊಂದುತ್ತಾನೆ. ಲೋಕದಲ್ಲಿಯೂ ಗೋಪಾಲಕನ ಸಾಮರ್ಥ್ಯವನ್ನನುಸರಿಸಿಯೇ ಪಶುಗಳು ಇರುತ್ತವೆ. ಅಂದರೆ ಅವನ ಮಾತಿನ ಬೆದರಿಕೆಯಿಂದಾಗಲಿ, ಶಿಕ್ಷೆಯ ಬೆದರಿಕೆಯಿಂದಾಗಲೀ ಅವನನ್ನೇ ಆಶ್ರಯಿಸಿರುತ್ತವೆ. ಅವನ ಶಕ್ತಿವಿಶೇಷದಿಂದಲೇ ಏಳುತ್ತವೆ ಅಥವಾ ಚಲಿಸುತ್ತವೆ. ಹಾಗೆ ಯಜಮಾನನೂ ವೀರ್ಯಸಂಪನ್ನನಾಗಿ ಪಶುಸಂಪತ್ತನ್ನು ಹೊಂದುತ್ತಾನೆ.

## *English Translation*

---

1. He recites the Vasa hymn, wishing. May everything, be in my power.

2. They (its verses) are twenty-one, for twenty-one are the parts (the lungs, spleen, &c .) in the belly.

3. Then the Ekavimsa is verily the support of all Stomas, and the belly the support of all food.

4. They consist of different metres. Verily, tbe intestines are confused, some small, some large.

5. He recites them with the pranava, according to ihe metre, and according to rule. Veriiy, the intestines are according to rule, as it were ; some shorter, some longer.

6. Next comes the sudadohas versc. Sudadohas verrily is breath. He joins the joints with breath.

7. After having recited that verse twelve times he leaves it off there. These pranas are verily twelve-fold, seven in the head, two on the breast, three below. In these twelve places the pranas are contained, there they are perfect. Therefore he leaves it off there.

8. The hymn indraghi yuvam sunah (Rv. VIII. 40) forms the two thighs (of the bird) belonging to Indra and Agni, the two supports with broad bones.

9. These (verses) consist of six feet, so that they may stand firm. Man stands firm on two feet animals on four. He thns places man (the sacrifieer) standing on two feet, among four-footed cattle.

10. The second verse has seven feet, and he makes it into a Gayatri and Anushtubh. Gayatri is Brahman, Anushtubh is spech ; and he thus puts together speech with Brahman.

11. He recites a Trishtubh at the end. Trishtubh is strength, and thus does he come round animals by strength. Theretore animals come near where there is strength (of command, &c.) ; they come to be roused and to rise up, (they obey the commands of a strong shepherd).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ಪಂಚಮಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪ್ರಥಮಾರಣ್ಯಕದ
ಐದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು ||

# ಅಥ ಪ್ರಥಮಾರಣ್ಯಕೇ ಪಂಚಮಾಧ್ಯಾಯೇ ದ್ವಿತೀಯಃ ಖಂಡಃ

## ಪ್ರಥಮಾರಣ್ಯಕದ ನಾಲ್ಕನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

ಪ್ರ ವೋ ಮಹೇ ಮಂದಮಾನಾಯಾಂಧಸ ಇತ್ಯೈಂದ್ರೇ ನಿಷ್ಕೇವಲ್ಯೇ ನಿವಿದಂ ದಧಾತಿ ಪ್ರತ್ಯಕ್ಷಾದ್ಧ್ಯೇವ ತದಾತ್ಮನ್ವೀರ್ಯಂ ಧತ್ತೇ ||

**ಅಥ ಶಸ್ತ್ರಪಕ್ಷಿಣೋಽನ್ಯಾವಯವವಿಧಾನಾರ್ಥಂ ಸೂಕ್ತಾಂತರವಿಧಾನಾರ್ಥಂ ಚ ಖಂಡಾಂತರಾರಂಭಃ ಸೂಕ್ತಾಂತರಂ ವಿಧತ್ತೇ—"ಪ್ರ ವೋ ಮಹೇ" ಇತ್ಯಾದಿಕಂ ಸಪ್ತರ್ಚಂ ಸೂಕ್ತಂ ತತ್ರೇಂದ್ರ ಏವ ನಾಮ ತದಾದ್ಯಾದಿ ನಿಷ್ಕೇವಲ್ಯಶಸ್ತ್ರಂ ಪ (ಪಾ) ಠ್ಯಂ | ತತ್ರೇದಾನೀಂ ನಿವಿತ್ಸಂಜ್ಞಕಂ ತದವಶೇಷಜ್ಞಾನಂ ಪ್ರಕ್ಷಿಪೇತ್ | ಇಂದ್ರೋ ದೇವಃ ಸೋಮ ಪಿನ್ನಮಾನ ಇತ್ಯಾದಿಕಂ ನಿವಿತ್ಪದಜಾತಂ ನಿವಿತ್ಸಂಜ್ಞಕೇ ಸಂಘೇ ಪಠಿತಂ | ಸೂಕ್ತಗತಾಸು ಸಪ್ತಸ್ವೃಕ್ಷು ಚತಸ್ರಃ ಪಠಿತ್ವಾ ತಿಸ್ರೋಽವಶೇಷ್ಯ ಮಧ್ಯೇ ನಿವಿದಂ ದಧ್ಯಾತ್ತತ್ರೇನ ನಿವಿತ್ಪ್ರಕ್ಷೇಪೇಣ ಪ್ರತ್ಯಕ್ಷಾದ್ಧ್ಯೇವ ಮುಖ್ಯಮೇವ ವೀರ್ಯಮತ್ರ ಶಸ್ತ್ರರೂಪೇ ಪಕ್ಷಿಣಿ ಸಂಪಾದಯತಿ ||**

ಶಸ್ತ್ರರೂಪ ಪಕ್ಷಿಗೆ ಇತರ ಅವಯವಗಳನ್ನು ವಿವರಿಸಲು ಮತ್ತು ಇತರ ಸೂಕ್ತಗಳನ್ನು ವಿಧಿಸಲು ಬೇರೆ ಖಂಡವನ್ನು ಆರಂಭಿಸುತ್ತಾರೆ. ಮೊದಲು ಒಂದು ಸೂಕ್ತವನ್ನು ವಿವರಿಸುತ್ತಾರೆ. 'ಪ್ರ ವೋ ಮಹೇ' ಇತ್ಯಾದಿ ಏಳು ಋಕ್ಕುಗಳಿರುವ ಸೂಕ್ತ. ಅದರಲ್ಲಿ ಇಂದ್ರನಾಮಕವಾದ ನಿಷ್ಕೇವಲ್ಯಶಸ್ತ್ರವನ್ನು ಪಠಿಸಬೇಕು. ಮತ್ತು 'ಇಂದ್ರೋ ದೇವಃ ಸೋಮ ಪಿಬ್ನಾನ' ಇತ್ಯಾದಿ ನಿವಿತ್ಪದಸಮುದಾಯಗಳನ್ನು ಸೇರಿಸಿಕೊಳ್ಳಬೇಕು. ಇವು ನಿವಿತ್ಸಂಜ್ಞಕ ಸಂಘದಲ್ಲಿ ಹೇಳಿವೆ. ಸೂಕ್ತದಲ್ಲಿರುವ ಏಳು ಋಕ್ಕುಗಳಲ್ಲಿ ನಾಲ್ಕು ಋಕ್ಕುಗಳನ್ನು ಪಠಿಸಿದಮೇಲೆ, ಮೂರನ್ನಿಟ್ಟುಕೊಂಡು ಮಧ್ಯದಲ್ಲಿ ನಿವಿತ್ಪದವನ್ನು ಸೇರಿಸಿಕೊಳಬೇಕು. ಹೀಗೆ ಪ್ರಕ್ಷೇಪಮಾಡುವುದರಿಂದ ಶಸ್ತ್ರರೂಪಪಕ್ಷಿಯಲ್ಲಿ ಪ್ರತ್ಯಕ್ಷವಾಗಿ ಅಂದರೆ ಮುಖ್ಯವಾದ ವೀರ್ಯವನ್ನು ಸಂಪಾದಿಸಿದಂತಾಗುತ್ತದೆ.

ತಾಸ್ತ್ರಿಷ್ಟುಬ್‌ಜಗತ್ಯೋ ಭವಂತಿ ||

**ತತ್ಸೂಕ್ತಗತಾನಾಮೃಚಾಂ ಛಂದೋದ್ವಯಂ ದರ್ಶಯತಿ—ಆದೌ ಪಂಚ ತ್ರಿಷ್ಟುಭ ಉತ್ತರೇ ದ್ವೇ ಜಗತ್ಯೌ | ಯದ್ವಾ ಪ್ರಥಮಾ ಸಪ್ತಮೀ ಚೋಭೇ ಜಗತ್ಯಾವವಶಿಷ್ಟಾಸ್ತ್ರಿಷ್ಟುಭಃ | ತದಾಹಾನುಕ್ರಮಣಿಕಾಕಾರಃ—ಪ್ರವೋ ಮಹೇ ಸಪ್ತ ದ್ವಿಜಗತ್ಯಾದ್ಯಂತಮ್ ||**

ಆ ಸೂಕ್ತದ ಋಕ್ಕುಗಳಲ್ಲಿರುವ ಛಂದಸ್ಸನ್ನು (೩) ವಿವರಿಸುತ್ತಾರೆ. ಏಳು ಋಕ್ಕುಗಳಲ್ಲಿ ಮೊದಲಿನ ಐದು ತ್ರಿಷ್ಟುಪ್‌ಛಂದಸ್ಕಗಳು. ಮೇಲಿನ ಎರಡು ಜಗತೀಛಂದಸ್ಕಗಳು, ಅಥವಾ ಮೊದಲನೆಯ ಮತ್ತು ಏಳನೆಯ ಋಕ್ಕುಗಳು ಜಗತೀಛಂದಸ್ಸೆಂದೂ, ಉಳಿದವುಗಳು ತ್ರಿಷ್ಟುಪ್‌ಗಳೆಂದೂ ತಿಳಿಯಬೇಕು. ಅನುಕ್ರಮಣಿಕಾಕಾರರು 'ಪ್ರ ವೋ ಮಹೇ ಸಪ್ತ ದ್ವಿಜಗತ್ಯಾದ್ಯಂತಂ' ಎಂದು ಇದನ್ನು ವಿವರಿಸುತ್ತಾರೆ.

ತದಾಹುರಥ ಕಸ್ಮಾತ್ತ್ರಿಷುಬ್ಜಗತೀಷು ನಿವಿದಂ ದಧಾತೀತಿ ನ ಹ ವಾ ಏತಸ್ಮಾದ್ಧ್ನ ಏಕಂ ಛಂದೋ ನಿವಿದಂ ದಾಧಾರ ನ ವಿವ್ಯಾಚೇತಿ ತಸ್ಮಾತ್ತ್ರಿಷ್ಟುಬ್ಜಗತೀಷು ನಿವಿದಂ ದಧಾತಿ||

ಸಪ್ತಸು ಚ್ಛಂದೋದ್ವಯವಿಶಿಷ್ಟಾಸ್ವೃಕ್ಷು ನಿವಿತ್ಪ್ರಕ್ಷೇಪಂ ಪ್ರಶ್ನೋತ್ತರಾಭ್ಯಾಂ ವಿಶದಯತಿ

ಛಂದೋದ್ವಯದಿಂದ ಕೂಡಿದ ಈ ಏಳು ಋಕ್ಕುಗಳಲ್ಲಿ ನಿವಿತ್‌ಪ್ರಕ್ಷೇಪ ಎಲ್ಲಿಯೆಂದು ಪ್ರಶ್ನೋತ್ತರಗಳಿಂದ ವಿವರಿಸುತ್ತಾರೆ. ತ್ರಿಷ್ಟುಪ್‌ಜಗತೀಛಂದಸ್ಸಿನ ಈ ಮಂತ್ರಗಳಲ್ಲಿ ಎಲ್ಲಿ ನಿವಿತ್ಪದಗಳನ್ನು ಸೇರಿಸಬೇಕು ? ಎಂದು ಪ್ರಶ್ನೆ. ಒಂದೇ ಛಂದಸ್ಸಿದ್ದರೆ ಆಗ ಈ ಪ್ರಶ್ನೆಗೆ ಅವಕಾಶವಿರುತ್ತಿರಲಿಲ್ಲ. ಈ ಎರಡು ಛಂದಸ್ಸುಗಳಲ್ಲಿಯೂ ಸೇರಿಸಿಪಠಿಸಬೇಕೆಂದು ಉತ್ತರ.

ತದೇತದಹಸ್ತ್ರಿನಿವಿತ್ಕಂ ವಿದ್ಯಾದ್ವಶೋ ನಿವಿದ್ವಾಲಖಿಲ್ಯಾ ನಿವಿನ್ನಿವಿದೇವ ನಿವಿದೇವಮೇನತ್ತ್ರಿನಿವಿತ್ಕಂ ವಿದ್ಯಾತ್ ॥

ಪ್ರಕೃತಸ್ಯಾಹ್ನೋ ನಿವಿದ್ವೈಶಿಷ್ಟ್ಯಂ ಸ ತ್ರಿಧಾ ವಿಧತ್ತೇ

ಪ್ರಕೃತಿದಿವಸದಲ್ಲಿ ನಿವಿದ್ವೈಶಿಷ್ಟ್ಯವನ್ನು ಮೂರುರೀತಿಯಿಂದ ವಿವರಿಸುತ್ತಾರೆ. ಪ್ರಕೃತದಿನಗಳನ್ನು ವಶನಿವಿತ್, ವಾಲಖಿಲ್ಯಾನಿವಿತ್, ನಿವಿತ್‌ನಿವಿತ್ ಎಂದು ಮೂರುರೀತಿಯಾದ ನಿವಿತ್ಪದಜಾತದಿಂದ ಕೂಡಿರುವುದನ್ನಾಗಿ ತಿಳಿಯಬೇಕು.

ಅಥ ಸೂಕ್ತೇ ವನೇನ ವಾಯೋ ನ್ಯಧಾಯಿ ಚಾಕನ್ಯೋ ಜಾತ ಏವ ಪ್ರಥಮೋ ಮನಸ್ವಾನಿತಿ ॥

ಸೂಕ್ತಾಂತರ ಶಂಸನಂ ವಿಧತ್ತೇ—

ಸೂಕ್ತಾಂತರ ಪ್ರಶಂಸೆಯನ್ನು ವಿವರಿಸುತ್ತಾರೆ. 'ವನೇನ ವಾ' (ಋ. ಸಂ. ೧೦–೨೯–೧) 'ಯೋ ಜಾತಃ' (ಋ. ಸಂ. ೨-೧೨–೧) ಎಂದು ಈ ಎರಡು ಸೂಕ್ತಗಳನ್ನು ಪಠಿಸಬೇಕು.

ತಯೋರಸ್ತ್ಯನ್ಯೇ ಸಮಸ್ಯ ಯದಸನ್ಮನೀಷಾ ಇತ್ಯನ್ನಾದ್ಯಸ್ಯಾವರುದ್ಧ್ಯೈ ॥

ಶಂಸನೇ ಫಲವಿಶೇಷಂ ದರ್ಶಯತಿ—

ಈ ಸೂಕ್ತಪಾಠಕ್ಕೆ ಫಲವನ್ನು ತೋರಿಸುತ್ತಾರೆ. ಇದನ್ನು ಪಠಿಸುವವನು ಅನ್ನಬುದ್ಧ್ಯಾದಿ ಸಮೃದ್ಧಿಯನ್ನು ಹೊಂದುತ್ತಾನೆ.

ಅಥಾವಪನಮೇತೇ ಅಂತರೇಣೈಂದ್ರೀಣಾಂ ದಶತೀನಾಂ ತ್ರಿಷ್ಟುಬ್ಜಗತೀನಾಂ ಸಂಪನ್ನಾನಾಂ ಯಾವತೀರಾವಪಂತೇ ತಾವಂತ್ಯೂರ್ಧ್ವಮಾಯುಷೋ ವರ್ಷಾಣಿ ಜೀವಂತ್ಯೇತೇನ ಹೈವಾವಪನೇನಾಯುರಾಪ್ಯತೇ ॥

ಅನ್ಯಾಸಾಮೃಚಾಂ ಶಂಸನಂ ವಿಧತ್ತೇ—ಅಥ ಪೂರ್ವಯೋಃ ಸೂಕ್ತಯೋರೇಕಸ್ಯ
ಶಂಸನಾನಂತರಮೇತೇ ಅಂತರೇಣೈತಯೋಃ “ವನೇನ ವಾ” (ಋ.ಸಂ.ಮಂ. ೧೦ ಸೂ.೨೯ ಋ.೧
“ಯೋಜಾತಃ” (ಋ. ಸಂ. ಮಂ. ೨ ಸೂ. ೧೨ ಋ. ೧) ಇತಿ ಸೂಕ್ತಯೋರ್ಮಧ್ಯೇ ಕಾಸಾಂಚಿ-
ದಿಂದ್ರದೇವತಾಕಾನಾಂ ತ್ರಿಷ್ಟುಬ್ಜಗತ್ಯಾಖ್ಯಚ್ಛಂದೋದ್ವಯಯುಕ್ತಾನಾಂ ಸ್ವಬುದ್ಧಿಕೌಶಲೇನ ಬೃಹ-
ತೀತ್ವಮಾಪಾದಿತಾನಾಮೃಚಾಂ ಮಧ್ಯೇ ಯಾವತೀರ್ಋಚ ಆವಪೇತ್ತಾವಂತಿ ವರ್ಷಾಣಿ ಕ್ಲೃಪ್ತಾ-
ಚ್ಛತಸಂವತ್ಸರಾದಾಯುಷ ಊರ್ಧ್ವಂ ಯಜಮಾನಾ ಜೀವಂತಿ। ಏತೇನರ್ಗಾವಪನೇನೈವಾವಶ್ಯ-
ಮಾಯುಃ ಪ್ರಾಪ್ಯತೇ। ಅತ್ರ ಬುದ್ಧಿಕೌಶಲೇನ ತ್ರಿಷ್ಟುಭಾಂ ಜಗತೀನಾಂ ಕಥಂ ಬೃಹತೀತ್ವಸಂಪತ್ತಿ-
ವಶ ಉಚ್ಯತೇ। ತಿಸೃಷು ಬೃಹತೀಷು ಚತುಷ್ಟಯೋ ಸಂಪಾದಿತೇ ಸತಿ ॥

ಇತರ ಋಕ್ಕುಗಳ ಪ್ರಶಂಸೆಯನ್ನು ಪ್ರಯೋಜನಸಹಿತವಾಗಿ ವಿವರಿಸುತ್ತಾರೆ. ಪೂರ್ವೋಕ್ತಸೂಕ್ತಗಳ ಪಠನವಾದಮೇಲೆ ‘ವನೇನವಾ’ (ಋ. ಸಂ. ೧೦-೨೯-೧) ‘ಯೋ ಜಾತಃ’ (ಋ. ಸಂ. ೨-೧೨-೧) ಎಂಬ ಈ ಎರಡು ಸೂಕ್ತಗಳ ಮಧ್ಯದಲ್ಲಿ ಇಂದ್ರದೇವತಾಕಗಳಾಗ ತ್ರಿಷ್ಟುಪ್‌ಜಗತೀಛಂದಸ್ಸಿನ ಋಕ್ಕುಗಳನ್ನು ತನ್ನ ಬುದ್ಧಿಕೌಶಲದಿಂದ ಬೃಹತೀಛಂದಸ್ಸನ್ನಾಗಿ ಪರಿವರ್ತಿಸಿಕೊಳ್ಳಬೇಕು. ಬೃಹತೀತ್ವವನ್ನು ಹೊಂದಿದ ಇವುಗಳಮಧ್ಯದಲ್ಲಿ ಎಷ್ಟು ಋಕ್ಕುಗಳನ್ನು ಸೇರಿಸುತ್ತಾರೋ ಅಷ್ಟುವರ್ಷ ನಿಯಮಿತವಾದ ನೂರುವರ್ಷ ಆಯುಸ್ಸಿಗಿಂತಲೂ ಅಧಿಕವಾಗಿ ಯಜಮಾನರು ಜೀವಿಸುತ್ತಾರೆ. ಈ ಋಕ್ಕುಗಳನ್ನು ಮಧ್ಯ ಸೇರಿಸುವುದರಿಂದಲೇ ಆಯುಃ ಪ್ರಾಪ್ತಿಯಾಗುತ್ತದೆ. ಮೂರು ರೀತಿಯಾದ ಬೃಹತೀಛಂದಸ್ಸುಗಳನ್ನು ಬುದ್ಧಿಕೌಶಲದಿಂದ ನಾಲ್ಕುರೀತಿ ವಿಭಾಗಿಸುವುದರಿಂದಲೇ ತ್ರಿಷ್ಟುಬ್‌ಜಗತೀಗಳನ್ನು ಬೃಹತೀಛಂದೋರೂಪವಾಗಿ ಕಲ್ಪಿಸಿದಂತಾಗುತ್ತದೆ.

## ಪ್ರಜಾಂ ಮೇ ಪಶವೋಽರ್ಜಯನ್ನಿತ್ಯೇವ ಸಜನೀಯಮನುಶಂಸತಿ ॥

ಸಜನೀಯಸೂಕ್ತಸ್ಯ ಶಂಸನೇ ಫಲವಿಶೇಷಂ ದರ್ಶಯತಿ—ಮದೀಯಾಂ ಪುತ್ರಾದಿರೂಪಾಂ
ಪ್ರಜಾಂ ಗವಾಶ್ವಾದಯಃ ಪಶವೋ ಮಾರ್ಜಯನ್ನಿತ್ಯಭಿಪ್ರೇತ್ಯಾಽವಪನಮನುಸಜನೀಯಸೂಕ್ತಂ
ಶಂಸೇತ್ ॥

ಸಜನೀಯ ಸೂಕ್ತ ಪಠನಕ್ಕೆ ಫಲವಿಶೇಷವನ್ನು ತೋರಿಸುತ್ತಾರೆ. ನನ್ನ ಪುತ್ರಾದಿ ರೂಪವಾದ ಪ್ರಜೆಗಳೂ ಗವಾಶ್ವಾದಿ ರೂಪ ಪಶುಗಳೂ ಸಮೃದ್ಧವಾಗಲೆಂದು ಆವಪನವಾದೊಡನೆ ಸಜನೀಯ ಸೂಕ್ತವನ್ನು ಪಠಿಸಬೇಕು.

## ತಾರ್ಕ್ಷ್ಯಂ ಶಂಸತಿ ಸ್ವಸ್ತ್ಯಯನಂ ವೈ ತಾರ್ಕ್ಷ್ಯಃ ಸ್ವಸ್ತಿತಾಯೈ ಸ್ವಸ್ತ್ಯಯನಮೇವ ತತ್ಕುರುತೇ ॥

ಅಥ “ತ್ಯಮೂ ಷು” (ಋ-ಸಂ-ಮಂ-೧೦-ಸೂ-೧೭೮-ಋ-೧) ಇತ್ಯೇತತ್ಸೂಕ್ತಂ
ತೃಚರೂಪಂ ವಿಧತ್ತೇ—ತಾರ್ಕ್ಷ್ಯೋ ಗರುಡಃ ಸ ಏವೈಷ ದೇವೋ ಯಸ್ಯ “ತ್ಯಮೂ ಷು”
ಇತ್ಯಾದಿಸೂಕ್ತಸ್ಯ ತತ್ಸೂಕ್ತಂ ತಾರ್ಕ್ಷ್ಯಂ ಶಂಸೇತ್। ತಸ್ಮಿನ್ಸೂಕ್ತೇ ಪ್ರತಿಪಾದ್ಯೋ ಯಸ್ತಾರ್ಕ್ಷ್ಯಃ
ಸೋಽಯಂ ಸ್ವಸ್ತ್ಯಯನಂ ವೈ ಕ್ಷೇಮಪ್ರಾಪ್ತಿಮೇವ ಸಂಪಾದಯತೀತಿ ಶೇಷಃ। ಅತಸ್ತತ್ಸೂಕ್ತಂ

ಸ್ವಸ್ತಿತಾಯೈ ಸಂಪದ್ಯತೇ ಯಸ್ಮಾತ್ತಸ್ಮಾದಯಂ ಹೋತಾ ತತ್ತೇನ ಶಂಸನೇನ ಸ್ವಸ್ತ್ಯಯನ-ಮೇವ ಕ್ಷೇಮಪ್ರಾಪ್ತಿಮೇವ ಕುರುತೇ ।

ಸಜನೀಯಸೂಕ್ತ ಪಠನವಾದ ಮೇಲೆ ತೃಚರೂಪವಾದ 'ತ್ಯಮೂಷು' (ಋ-ಸಂ-೧೦-೧೭೮-೧) ಎಂಬ ಸೂಕ್ತವನ್ನು ವಿಧಿಸುತ್ತಾರೆ. ತಾರ್ಕ್ಷ್ಯ ಅಂದರೆ ಗರುಡನೇ ದೇವತೆಯಾಗಿರುವ 'ತ್ಯಮೂಷು' ಇತ್ಯಾದಿ ತಾರ್ಕ್ಷ್ಯ ಸೂಕ್ತವನ್ನು ಪಠಿಸಬೇಕು. ಈ ಸೂಕ್ತದಲ್ಲಿ ಪ್ರತಿಪಾದ್ಯನಾದ ತಾರ್ಕ್ಷ್ಯನು ಕ್ಷೇಮಪ್ರಾಪ್ತಿಯನ್ನುಂಟುಮಾಡುತ್ತಾನೆ. ಕ್ಷೇಮಸಂಪತ್ತಿ ಗೋಸ್ಕರವೇ ಇರುವ ಈ ಸೂಕ್ತವನ್ನು ಹೋತೃವು ಪಠಿಸುವುದರಿಂದ ಕ್ಷೇಮವನ್ನುಂಟುಮಾಡಿದಂತಾಗುತ್ತದೆ.

ಏಕಪದಾಂ ಶಂಸತ್ಯೇಕಧೇದಂ ಸರ್ವಮಸಾನೀತ್ಯಥೋ ಸರ್ವಾ೦ ಛಂದಸ್ಕೃತಿಮಾಪ್ನವಾನೀತಿ ॥

ತತ ಊರ್ಧ್ವಂ—"ಇಂದ್ರೋ ವಿಶ್ವಂ ವಿರಾಜತಿ" ಇತಿ । ತಸ್ಯಾ ಏಕಪದಾಯಾ ಋಚಃ ಶಂಸನಂ ವಿಧತ್ತೇ ಏಕೇನೈವ ಪ್ರಯತ್ನೇನೇದಂ ಸರ್ವಮಸಾನಿ ಪ್ರಾಪ್ತವ್ಯಂ ಫಲ-ಮಾಪ್ನವಾನೀತ್ಯಭಿಪ್ರೇತ್ಯ ತಾಮೇಕಪದಾಂ ಶಂಸತಿ । ಅಪಿ ಚ ಸರ್ವಾ೦ ಛಂದಸ್ಕೃತಿಂ ಸರ್ವೇ-ಷಾಮಪಿ ಚ್ಛಂದಸಾಂ ಸಂಪಾದನಂ ಪ್ರಾಪ್ನವಾನೀತ್ಯೇತಾಂ ಶಂಸೇತ್ । ನ ಹ್ಯೇಕಪದಾಯಾ ಅರ್ವಾಚೀನಂ ಕಿಂಚಿಚ್ಛಂದೋಽಸ್ತಿ । ಉತ್ತರೇಷು ದ್ವಿಪದಾದಿಷು ಸರ್ವೇಷ್ವಪಿ ಚ್ಛಂದಃಸ್ವೇಕಪದವತ್॥

ಇದಾದ ಮೇಲೆ 'ಇಂದ್ರೋ ವಿಶ್ವಂ ವಿರಾಜತಿ'—ಎಂಬ ಸೂಕ್ತವನ್ನು ಪಠಿಸಬೇಕು. ಅಲ್ಲಿರುವ ಏಕಪದ ಋಕ್ಕಿನ ಪ್ರಶಂಸೆ ತೋರಿಸುತ್ತಾರೆ. ಒಂದೇ ಪ್ರಯತ್ನದಿಂದ ಹೊಂದಬೇಕಾದ ಫಲಗಳೆಲ್ಲವನ್ನೂ ಹೊಂದುತ್ತೇನೆ ಎಂಬ ತಾತ್ಪರ್ಯ ದಿಂದ ಈ ಏಕಪದ ಋಕ್ಕನ್ನು ಪಠಿಸಬೇಕು. ಮತ್ತು ಎಲ್ಲಾ ಛಂದಃ ಸಂಪಾದನೆಯನ್ನು ಮಾಡಬೇಕೆಂದೂ ಇದನ್ನು ಪಠಿಸಬೇಕು. ಇದರ ಮುಂದೆ ಯಾವ ಛಂದಸ್ಸೂ ಇರುವುದಿಲ್ಲ. ಉತ್ತರದಲ್ಲಿರುವ ಎಲ್ಲಾ ದ್ವಿಪದ ಛಂದಸ್ಸುಗಳಲ್ಲಿ ಏಕಪದವೇ ಇರುತ್ತದೆ.

ಇಂದ್ರಂ ವಿಶ್ವಾ ಅವೀವೃಧನ್ನಿತಿ ಪದಾನುಷಂಗಾಸ್ತಾಃ ಸಪ್ತಾನುಷಜತಿ ಸಪ್ತ ವೈ ಶೀರ್ಷನ್ಪ್ರಾಣಾಃ ಶೀರ್ಷನ್ನೇವ ತತ್ಪ್ರಾಣಾನ್ದಧಾತ್ಯ-ಷ್ಟಮೀಂ ನಾನುಷಜತಿ ವಾಗಷ್ಟಮೀ ನೇನ್ಮೇ ವಾಕ್ಪ್ರಾಣೈರನುಷ-ಕ್ತಾಽಸದಿತಿ ತಸ್ಮಾದು ಸಾ ವಾಕ್ಸಮಾನಾಯತನಾ ಪ್ರಾಣೈಃ ಸತ್ಯ-ನನುಷಕ್ತಾ

ಅಥ "ಇಂದ್ರಂ ವಿಶ್ವಾಃ" (ಋ-ಸಂ-ಮಂ-೧-ಸೂ೧೧-ಋ-೧) ಇತ್ಯಾದಿಕಮಷ್ಟರ್ಚಂ ಸೂಕ್ತಂ ಪ್ರಯೋಗಪ್ರಕಾರವಿಶೇಷಯುಕ್ತಂ ವಿಧತ್ತೇ "ಇಂದ್ರಂ ವಿಶ್ವಾಃ" ಇತ್ಯಸ್ಮಿನ್ನಷ್ಟರ್ಚೇ ಸೂಕ್ತೇ ಪಾದಾನಾಂ ಪರಸ್ಪರಮನುಷಂಗಃ ಕರ್ತವ್ಯಃ । ತತ್ರ ಸೂಕ್ತಸ್ಯ ಯಃ ಪ್ರಥಮೋಽರ್ಧರ್ಚೋ ಯಶ್ಚಾಂತಿಮಸ್ತಾವುಭಾವರ್ಧರ್ಚೌ ಯಥಾಧ್ಯಾಯನಮೇವ ಪಠನೀಯೌ ನ ತ್ವನುಷಜ (ಞ್ಜ) ನೀಯೌ । ತಯೋರ್ಮಧ್ಯೇ ಯೇ ಚತುರ್ದಶಾರ್ಧರ್ಚಾಸ್ತೇಷ್ವೇಕೈಕಪಾದಾಂತರಿತತ್ವೇನ ಪರಸ್ಪ-ರಾನುಷಂಗಃ ಕರ್ತವ್ಯಃ । ತದ್ಯಥಾ—ಪ್ರಥಮಾಯಾಮೃಚಿ ಯಸ್ತೃತೀಯಃ ಪಾದಸ್ತಂ ದ್ವಿತೀಯ-

ಸ್ಯಾನ್ಯೃಚಿ ಪ್ರಥಮಪಾದೇನ ಸಂಯೋಜ್ಯೈಕೋಽರ್ಧರ್ಚಃ ಕರ್ತವ್ಯಃ । ತಥಾ ಪ್ರಥಮಾಯಾ-ನ್ಯೃಚಿ ಯಶ್ಚತುರ್ಥಃ ಪಾದಃ ಸೋಽಯಂ ದ್ವಿತೀಯಪಾದೇನ ಸಂಯೋಜನೀಯಃ । ಏತೇನಾ ರ್ಧರ್ಚದ್ವಯೇನರ್ಗೇಕಾ ಸಂಪದ್ಯತೇ । ಅನೇನೈವ ಪ್ರಕಾರೇಣ ಸೂಕ್ತಸ್ಯಾಂದ್ಯತಯೋರರ್ಧ-ರ್ಚಯೋರ್ಮಧ್ಯಗತಾಸ್ತಾಃ ಸಪ್ತರ್ಚಃ ಪರಸ್ಪರಮನುಷಜೇತ್ । ಶಿರಸಿ ಚ್ಛಿದ್ರಗತಾಃ ಪ್ರಾಣಾಃ ಸಪ್ತೈವ ತೇನ ಸಪ್ತಾನಾಮನುಷಂಗೇನ ಶಿರಸ್ಯೇವ ಪ್ರಾಣಾನ್ಸಂಪಾದಯತಿ । ಅಷ್ಟಮೀಶಬ್ದೇನ ಸೂಕ್ತಸ್ಯ ಚರಮೋಽರ್ಧ ಏಕೋ ವಿವಕ್ಷಿತಸ್ತಸ್ಯಾನುಷಂಗೋ ನಾಸ್ತಿ । ಉಪರಿತನಪಾದಸ್ಯ ಕತಮಸ್ಯಾಪ್ಯಭಾವಾತ್ । ಅತ ಏವ ಶೌನಕಃ ಪಂಚಮೇ—" ಪ್ರಥಮಾಯಾಃ ಪೂರ್ವಮರ್ಧರ್ಚಂ ಶಸ್ತ್ವಾ " (ಐ-ಆ-೫-೮-೩-ಖಂ-೧) ಇತ್ಯಾದಿನಾ " ಪ್ರಕೃತ್ಯಾ ಶೇಷಃ " ಇತ್ಯಂತೇನ ಗ್ರಂಥೇನ ಸೂಕ್ತಗತಯೋರಾದ್ಯಂತಯೋರರ್ಧರ್ಚಯೋರ್ಯಥಾಪಾಠಮಭಿಧಾಯ ಮಧ್ಯಗತಾನಾಮೇವ ಚತುರ್ದಶಾನಾಮರ್ಧರ್ಚಾನಾಂ ಪಾದವ್ಯತಿಷಂಗಮುಕ್ತವಾನ್ । ಕೇನಾಭಿಪ್ರಾಯೇಣಾಷ್ಟಮ್ಯಾ ವ್ಯತಿಷಂಗೋ ನಾಸ್ತೀತಿ ಚೇದ್ಯೇಯಮೃಗಷ್ಟಮೀ ಸಾ ವಾಗ್ರೂಪಾ । ಅತ ಏವ ವಾಜಸನೇ-ಯಿನಶ್ಚಕ್ಷುರಾದೀಂದ್ರಿಯೇಷು ಗೌತಮಭರದ್ವಾಜರ್ಷಿಧ್ಯಾನಮಧೀಯಾನಾಃ "ವಾಗಷ್ಟಮೀ ಬ್ರಹ್ಮಣಾ ಸಂವಿದಾನಾ " ಇತ್ಯೇವಂ ವಾಚೋಽಷ್ಟಮೀತ್ವಮಾಮನಂತಿ । ಈದೃಗಷ್ಟಮೀ ಮದೀಯಾ ವಾಕ್ಪ್ರಾಣೈರನ್ಯೈರನುಷಕ್ತಾ ಸತೀ ವ್ಯತಿಷಕ್ತಾ ಭವೇದಿತಿ ಭೀತ್ಯಾ ತಾಮಷ್ಟಮೀಂ ನಾನು-ಷಜೇತ್ । ನೇದಿತಿ ನಿಪಾತೋ ಭಯದ್ಯೋತನಾರ್ಥಃ । ಯಸ್ಮಾದೇವಮಷ್ಟಮೀಂ ನಾನು-ಷಜತಿ ತಸ್ಮಾದೇವ ಕಾರಣಾತ್ಸಾಽಷ್ಟಮೀ ವಾಗನ್ಯೈಃ ಪ್ರಾಣೈರ್ಜಿಹ್ವಾತ್ವಗಾದಿಭಿಃ ಸಮಾನಾಯ-ತನೈಕಾಧಾರಾ ಸತ್ಯಪಿ ಸ್ವಯಮನನುಷಕ್ತಾ ತೈಃ ಸಹ ನೈವ ಸಂಕೀರ್ಣಾ ಕಿಂತು ವಿವಿಕ್ತಾ ಸತೀ ಶಬ್ದಮುಚ್ಚಾರಯತಿ ॥

ಏಕಪದ ಋಕ್‌ಪಠನವಾದ ಮೇಲೆ ‘ ಇಂದ್ರಂ ವಿಶ್ವಾಃ ’ (ಋ-ಸಂ-೧-೧೧-೧) ಎಂಬ ಎಂಟು ಋಕ್ಕಿನ ಸಕ್ತ, ವನ್ನು ಪ್ರಯೋಗಿಸುವ ವಿಧಾನವನ್ನು ವಿವರಿಸುತ್ತಾರೆ. ಈ ಎಂಟು ಋಕ್ಕುಗಳ ಪಾದಗಳಿಗೆ ಪರಸ್ಪರ ಸಂಬಂಧವನ್ನು ಕಲ್ಪಿಸಬೇಕು. ಸೂಕ್ತವನ್ನು ಅರ್ಧರ್ಚವಾಗಿ ಮಾಡಿಕೊಂಡಾಗ ಹದಿನಾರು ಅರ್ಧರ್ಚಗಳಾಗುತ್ತವೆ. ಅವುಗಳಲ್ಲಿ ಆದ್ಯ ಅಂತ್ಯ ಅರ್ಧರ್ಚಗಳನ್ನು ಮಾತ್ರ ಅಧ್ಯಯನ ಕ್ರಮದಿಂದಲೇ ಪಠಿಸಬೇಕು. ಅಂದರೆ ಅಲ್ಲಿ ಪಾದಮಿಶ್ರಣವಿಲ್ಲ. ಉಳಿದ ಹದಿನಾಲ್ಕು ಅರ್ಧರ್ಚಗಳಲ್ಲಿ ಮಾತ್ರ ಒಂದೊಂದು ಪಾದಾಂತರ ರೂಪವಾಗಿ ಅನುಷಂಗ ಕಲ್ಪಿಸಬೇಕು. ಅಂದರೆ ಪ್ರಥಮ ಋಕ್ಕಿನ ಯಾವ ತೃತೀಯ ಪಾದವಿದೆಯೋ ಅದನ್ನು ದ್ವಿತೀಯ ಋಕ್ಕಿನ ಪ್ರಥಮ ಪಾದದೊಡನೆ ಸೇರಿಸಿ ಒಂದು ಅರ್ಧರ್ಚ ವನ್ನಾಗಿ ಕಲ್ಪಿಸುವುದು. ಪ್ರಥಮ ಋಕ್ಕಿನ ನಾಲ್ಕನೇ ಪಾದವನ್ನು ಎರಡನೆಯ ಋಕ್ಕಿನ ಎರಡನೆಯ ಪಾದದೊಡನೆ ಸೇರಿಸ ಬೇಕು. ಹೀಗೆ ಈ ಎರಡು ಅರ್ಧರ್ಚಗಳು ಸೇರಿ ಒಂದು ಋಕ್ಕಾಗುತ್ತದೆ. ಆದಿ ಮತ್ತು ಕೊನೆಯ ಅರ್ಧರ್ಚವನ್ನು ಬಿಟ್ಟು ಉಳಿದ ಏಳು ಋಕ್ಕುಗಳಲ್ಲಿಯೂ ಹೀಗೆ ಪರಸ್ಪರ ಸಂಬಂಧ ಕಲ್ಪಿಸಬೇಕು. ಶಿರೋಭಾಗದಲ್ಲಿಯೂ ಛಿದ್ರಗತವಾದ ಪ್ರಾಣಗಳು ಏಳು ರೀತಿಯಾಗಿದ್ದು ಶಿರಸ್ಸಿನಲ್ಲಿಯೇ ಅದು ಪ್ರತಿಷ್ಠಿತವಾಗಿರುತ್ತದೆ. ಅಷ್ಟಮೀ ಶಬ್ದದಿಂದ ಕೊನೆಯ ಅರ್ಧರ್ಚವು ವಿವಕ್ಷಿತ ವಾಗಿದೆ. ಅದಕ್ಕೆ ಎಲ್ಲಿಯೂ ಅನುಷಂಗವಿಲ್ಲ. ಏಕೆಂದರೆ ಇದಕ್ಕೆ ಮುಂದೆ ಯಾವ ಪಾದವೂ ಇರುವುದಿಲ್ಲ. ಶೌನಕರೂ ಪಂಚಮಾರಣ್ಯಕದಲ್ಲಿ ‘ ಪ್ರಥಮಾಯಾಃ ಪೂರ್ವಮರ್ಧಚಂ ಶಸ್ತ್ವಾ’ (ಐ-ಆ-೫-೩-೧) ಎಂದು ಆರಂಭಿಸಿ " ಪ್ರಕೃತ್ಯಾ ಶೇಷಃ'' ಎಂದು ಇದೇ ವಿಷಯವನ್ನು ವಿವರಿಸಿರುತ್ತಾರೆ. ಎಂಟನೆಯ ಅರ್ಧರ್ಚವು ವಾಗ್ರೂಪವಾಗಿದೆಯೆಂದು ವಾಜಸನೇಯರು

"ವಾಗಪ್ಯಮಿಾ ಬ್ರಹ್ಮಣಾ ಸಂವಿದಾನಾಃ'' ಎಂದು ವಿವರಿಸುತ್ತಾರೆ. ಇದು ಪ್ರಾಣಾದಿಗಳಿಂದ ಮಿಶ್ರಿತವಾಗಬಾರದೆಂಬ ಭೀತಿಯಿಂದ ಇದಕ್ಕೆ ಎಲ್ಲಿಯೂ ಅನುಷಂಗವನ್ನೂ ಹೇಳಿಲ್ಲ. ನೇತ್ ಎಂಬ ನಿಪಾತ ಭಯಾರ್ಥವನ್ನು ತಿಳಿಸುತ್ತದೆ. ವಾಗ್ರೂಪವಾಗಿ ಈ ಎಂಟನೆಯ ಅರ್ಧರ್ಚವು ಪ್ರಾಣ ಮತ್ತು ಚಕ್ಷುರಾದಿ ಇಂದ್ರಿಯಗಳಿಂದ ಒಂದೇ ಆಧಾರದಲ್ಲಿ ಇದ್ದರೂ ತಾನು ಯಾರೊಡನೆಯೂ ಸೇರದೆ ವಿವಿಕ್ತವಾಗಿದ್ದು ಶಬ್ದವನ್ನುಚ್ಚರಿಸುವಂತೆ ಮಾಡುತ್ತದೆ.

## ವಿರಾಜಃ ಶಂಸತ್ಯನ್ನಂ ವೈ ವಿರಾಜೋಽನ್ನಾದ್ಯಸ್ಯಾವರುದ್ಧ್ಯೈ ॥

ಅಥ—"ಪಿಬಾ ಸೋಮಮಿಂದ್ರ" (ಋ. ಸಂ. ಮಂ. ೭ ಸೂ. ೨೯. ಋ. ೧) ಇತ್ಯಾದಿಕಾನಾಂ ವಿರಾಟ್ ಛಂದಸ್ಕಾನಾಂ ಶಂಸನಂ ವಿಧತ್ತೇ—ವಿರಾಟ್‌ಛಂದಸೋಽನ್ನಹೇತುತ್ವಾದನ್ನತ್ವಂ ತಸ್ಮಾತ್ತಚ್ಛಂಸನಮನ್ನಪ್ರಾಪ್ತಯೇ ಸಂಪದ್ಯತೇ । ಯದ್ಯಪಿ—"ಪಿಬಾ ಸೋಮಂ" ಇತ್ಯಾದಿಕಂ ನವರ್ಚಂ ಸೂಕ್ತಂ ತಥಾಪ್ಯಂತಿಮಾಸ್ತಿಸ್ರಃ ಪರಿತ್ಯಜ್ಯ ಪ್ರಾಚೀನಾಃ ಷಡೇವ ಪಠೇತ್ । ಅತ ಏವ ಶೌನಕಃ—"ಪಿಬಾ ಸೋಮಮಿಂದ್ರ ಮಂದತು ತ್ವೇತಿ ಷಟ್" (ಐ. ಆ. ೫ ಅ. ೩ ಖಂ.೧) ಇತ್ಯಾಹ ॥

ಅನುಷಂಗದಿಂದ ಪಠಿಸಿದಮೇಲೆ 'ಪಿಬಾ ಸೋಮಮಿಂದ್ರ' (ಋ. ಸಂ. ೭–೨೨–೧) ಇತ್ಯಾದಿ ವಿರಾಟ್ ಛಂದಸ್ಕಸೂಕ್ತಪ್ರಾಶಸ್ತ್ಯವನ್ನು ವಿವರಿಸುತ್ತಾರೆ. ಅನ್ನಸಮೃದ್ಧಿಯನ್ನುಂಟುಮಾಡುವುದು ವಿರಾಟ್‌ಛಂದಸ್ಸಾದುದರಿಂದ ಅದರ ಪಠನದಿಂದ ಅನ್ನಪ್ರಾಪ್ತಿಯುಂಟಾಗುತ್ತದೆ. 'ಪಿಬಾ ಸೋಮಂ' (ಋ. ಸಂ. ೭–೨೨–೧) ಸೂಕ್ತವು ಒಂಬತ್ತು ಋಕ್ಕುಗಳಿಂದ ಕೂಡಿದ್ದರೂ ಕೊನೆಯ ಮೂರು ಋಕ್ಕುಗಳನ್ನು ಬಿಟ್ಟು ಉಳಿದ ಮೊದಲಿನ ಆರು ಋಕ್ಕುಗಳನ್ನು ಮಾತ್ರ ಪಠಿಸಬೇಕು. ಆದುದರಿಂದಲೇ ಶೌನಕರು 'ಪಿಬಾ ಸೋಮಮಿಂದ್ರ ಮಂದತುತ್ವೇತಿ ಷಟ್' (ಐ. ಆ. ೫–೩–೧) ಎಂದು ಹೇಳಿರುತ್ತಾರೆ.

## ವಾಸಿಷ್ಠೇನ ಪರಿದಧಾತಿ ವಸಿಷ್ಠೋಽಸಾನೀತಿ ॥

ತತ ಊರ್ಧ್ವಂ ವಸಿಷ್ಠದೃಷ್ಟೇನ—"ಯೋನಿಷ್ಟ ಇಂದ್ರ ಸದನೇ ಅಕಾರಿ'' (ಋ. ಸಂ. ೭–ಸೂ. ೨೪. ಋ. ೧) ಇತ್ಯನೇನ ಸೂಕ್ತೇನ ನಿಷ್ಕೇವಲ್ಯಶಸ್ತ್ರಸ್ಯ ಸಮಾಪನಂ ವಿಧತ್ತೇ—ಅಹಂ ವಸಿಷ್ಠಃ ಸರ್ವೇಷಾಮತಿಶಯೇನ ನಿವಾಸಹೇತುರ್ಭವಾನೀತ್ಯಭಿಪ್ರೇತ್ಯ ವಾಸಿಷ್ಠಸೂಕ್ತೇನ ಪರಿಧಾನಂ ಕುರ್ಯಾತ್ । ಪರಿಧಾನಂ ಸಮಾಪನಮ್ ।

ವಿರಾಟ್‌ಛಂದಸ್ಕಸೂಕ್ತವನ್ನು ಪಠಿಸಿದಮೇಲೆ ವಸಿಷ್ಠಮಹರ್ಷಿದೃಷ್ಟವಾದ 'ಯೋನಿಷ್ಟ ಇಂದ್ರ ಸದನೇ ಅಕಾರಿ' (ಋ. ಸಂ ೭–೨೪–೧) ಎಂಬ ಸೂಕ್ತದಿಂದ ನಿಷ್ಕೇವಲ್ಯಶಸ್ತ್ರ ಸಮಾಪ್ತಿಯನ್ನು ವಿಧಿಸುತ್ತಾರೆ. ಪರಿಧಾನವೆಂದರೆ ಸಮಾಪ್ತಿ. ನಾನು ವಸಿಷ್ಠನು ಅಂದರೆ ಎಲ್ಲರಿಗೂ ನಿವಾಸಕಾರಣನು(ಆಶ್ರಯ) ಎಂಬ ತಾತ್ಪರ್ಯದಿಂದ ಈ ವಸಿಷ್ಠ ಸೂಕ್ತವನ್ನು ಪಠಿಸುವುದರಿಂದ ಶಸ್ತ್ರವನ್ನು ಸಮಾಪ್ತಿಗೊಳಿಸಬೇಕು.

## ಏಷ ಸ್ತೋಮೋ ಮಹ ಉಗ್ರಾಯ ವಾಹ ಇತಿ ಮಹದ್ವತ್ಯಾ ರೂಪಸಮೃದ್ಧಯಾ ॥

**ತತ್ರ ಕಂಚಿದ್ವಿಶೇಷಂ ವಿಧತ್ತೇ—ಯೋನಿಷ್ಟೇ " ಋ. ಸಂ. ೭-೨೪ ಋ. ೧) ಇತ್ಯಾದಿಕಂ ಷಡರ್ಚಂ ಸೂಕ್ತಂ ತತ್ರ ಷಷ್ಠ್ಯಾ ಪರಿಧಾನಂ ಪ್ರಾಪ್ತಂ ತದಪೋಹ್ಯ— " ಏಷಃ ಸ್ತೋಮಃ " (ಋ. ಸಂ. ೭-೨೪-. ಋ. ೫) ಇತ್ಯನಯಾ ಪಂಚಮ್ಯಾ ಪರಿದಧ್ಯಾತ್ । ಸಾಚ ಮಹದ್ವತಿ ಮಹ ಉಗ್ರಾಯೇತಿ ತತ್ರ ಪಠಿತತ್ವಾತ್ತಸ್ಮಾದಿಯಂ ರೂಪಸಮೃದ್ಧೇತಿ ತಯಾ ಪರಿಧಾನಂ ನ್ಯಾಯ್ಯಮ್ । ಏತಚ್ಚ ಶೌನಕೋ ವಿಸ್ಪಷ್ಟಂ ದರ್ಶಯತಿ— " ಯೋನಿಷ್ಟ ಇಂದ್ರ ಸದನೇ ಅಕಾರೀತ್ಯೇತಸ್ಯ ಚತಸ್ರಃ ಶಸ್ತ್ವೋತ್ತಮಾಮುಪಸಂತತ್ಯೋಪೋತ್ತಮಯಾ ಪರಿದಧಾತಿ " (ಐ. ಆ. ೫ ಅ೩. ಖಂ. ೧) ॥**

ಸಮಾಪ್ತಿ ಮಾಡುವುದರಲ್ಲಿ ವಿಶೇಷ ತೋರಿಸುತ್ತಾರೆ. ' ಯೋನಿಷ್ಟ '— (ಋ-ಸಂ-೭-೨೪-೧) ಎಂಬ ವಸಿಷ್ಠ ಸೂಕ್ತವು ಆರು ಋಕ್ಕುಗಳಿಂದ ಕೂಡಿರುವುದರಿಂದ ಆರನೇ ಋಕ್ಕಿನ ಪಾಠವಾದ ಮೇಲೆ ಸಮಾಪ್ತಿಯಾಗಬೇಕು. ಆದರೆ ಹಾಗೆ ಮಾಡದೆ " ಏಷ ಸ್ತೋಮಃ " (ಋ-ಸಂ-೭-೨೪-೫) ಎಂಬ ಐದನೆಯ ಋಕ್ಕಿನಲ್ಲಿ ಸಮಾಪ್ತಿಮಾಡಬೇಕು. ' ಮಹ ಉಗ್ರಾಯ ' ಎಂದು ಅಲ್ಲಿ ಮಹಚ್ಛಬ್ದವಿರುವುದರಿಂದ ರೂಪಸಮೃದ್ಧಿ ಹೇಳಿದಂತಾಗುವುದರಿಂದ ಅಲ್ಲಿಯೇ ಸಮಾಪ್ತಿ ನ್ಯಾಯವಾಗಿದೆ. ಶೌನಕರೂ ಇದನ್ನು ' ಯೋನಿಷ್ಟ ಇಂದ್ರ '— (ಐ-ಆ-೫-೩-೧) ಎಂಬ ವಾಕ್ಯದಿಂದ ಸ್ಪಷ್ಟವಾಗಿ ವಿವರಿಸಿರುತ್ತಾರೆ. ಕೊನೆಯ ಸಮೀಪದಲ್ಲಿರುವುದು ಉಪೋತ್ತಮ.

## ಧುರೀ ವಾತ್ಯೋ ನ ವಾಜಯುನ್ನಧಾಯೀತ್ಯಂತೋ ವೈ ಧೂರಂತ ಏತ-ದಹರೇತಸ್ಯಾಹ್ನೋ ರೂಪಂ ॥

**ತಸ್ಯಾಃ ಪರಿಧಾನೀಯಾಯಾ ದ್ವಿತೀಯಪಾದೇ ಧುರೀತಿ ಪದಂ ವ್ಯಾಚಷ್ಟೇ—ಯೇಯಂ ಧೂಃ ಸೇಯಂ ರಥಸ್ಯಾಂತೋಽಶ್ವಯೋಜನಸ್ಥಾನಂ । ಅಸ್ಯ (ತ್ರ) ಹಿ ಧೂರಶಬ್ದೇ (ಧೂಃ ಶಬ್ದ) ವಾಚ್ಯೇ ರಥಸ್ಯಾಂತಭಾಗೇ ತೇ (ತೌ) ಯುಗ್ಯಾ ಯೋಜ್ಯೇತೇ । ಏತನ್ಮಹಾವ್ರತಾಖ್ಯಮಹಶ್ಚ ಸಂವತ್ಸರಸತ್ರಸ್ಯಾಂತ ಏತಸ್ಯಾ ಊ (ಸ್ಯೋ) ರ್ಧ್ವಮುದಯನೀಯಾತಿರಾತ್ರೇಣಾಹ್ನಃ ಸಮಾಪ್ಯ-ಮಾನತ್ವಾತ್ । ಅತೋ ಧುರಶ್ಚಾಂತರ (ತ್ವ) ಸಾಮ್ಯಾದ್ಧೂಃ ಶಬ್ದಯುಕ್ತೋ ಮಂತ್ರ ಏತಸ್ಯಾಹ್ನಃ ಸ್ವರೂಪಂ ॥**

ಸಮಾಪ್ತಿ ಸಾಧಕವಾದ ಈ ವಸಿಷ್ಠ ಸೂಕ್ತದ ಎರಡನೆಯ ಪಾದದಲ್ಲಿರುವ ' ಧುರ್ ' ಪದದ ಅರ್ಥವನ್ನು ವಿವರಿಸುತ್ತಾರೆ. ಧೂಃ ಅಂದರೆ ರಥದ ಕೊನೆಯ ಭಾಗ. ಇದರಲ್ಲಿಯೇ ಕುದುರೆಗಳನ್ನು ಕಟ್ಟುವುದು. (ರಥದ ಮೂಕಿ) ಸಂವತ್ಸರ ಸತ್ರದ ಕೊನೆಯ ಭಾಗವಾದ ಈ ಮಹಾವ್ರತದ ಹಗಲೂ ಕೂಡಾ ಮುಂದಿನ ಉದಯನೀಯಾತಿರಾತ್ರದಿಂದ ಸಮಾಪ್ತಿ ಹೊಂದುತ್ತದೆ. ಹೀಗೆ ಧೂಃ ಶಬ್ದಾರ್ಥ ಸಾಮ್ಯದಿಂದ ಧುರ್ ಶಬ್ದದಿಂದ ಕೂಡಿದ ಮಂತ್ರವೂ ರೂಪಸಮೃದ್ಧವಾಗುತ್ತದ.

## ಇಂದ್ರ ತ್ವಾಽಯಮರ್ಕ ಈಟ್ಟೇ ವಸೂನಾಮಿತ್ಯರ್ಕವತ್ಯಾ ರೂಪ-ಸಮೃದ್ಧಯಾ ॥

**ತೃತೀಯಪಾದೇಽರ್ಕಶಬ್ದಂ ಪ್ರಶಂಸತಿ—ಅರ್ಚವಾಚಕೋಽಯಮರ್ಕಶಬ್ದಸ್ತಚ್ಛಬ್ದಯು-ಕ್ತತ್ವಾದಿಯಮೃಗ್ರೂಪ ಸಮೃದ್ಧಾ, ತತಸ್ತಯಾ ಪರಿಧಾನಂ ಯುಕ್ತಂ ॥**

ಮೂರನೆಯ ಪಾದದಲ್ಲಿರುವ ಅರ್ಕಶಬ್ದಾರ್ಥವನ್ನು ವಿವರಿಸುತ್ತಾರೆ. ಅರ್ವಪೆಂದರೆ ಅಶ್ವವಾಚಕವಾದ ಅರ್ಕ ಶಬ್ದದಿಂದ ಕೂಡಿರುವುದರಿಂದ ಈ ಮಂತ್ರವು ರೂಪಸಮೃದ್ಧವಾಗಿದೆ. ಆದುದರಿಂದ ಶಸ್ತ್ರಸಮಾಪನ ಯುಕ್ತವಾಗಿದೆ.

**ದಿವೀವ ದ್ಯಾಮುಧಿ ನಃ ಶ್ರೋಮತಂ ಧಾ ಇತಿ ಯತ್ರ ಹಕ್ವ ಚ ಬ್ರಹ್ಮ-ಣ್ಯಾ ವಾಗುದ್ಯತೇ ತದ್ಧಾಸ್ಯ ಕೀರ್ತಿರ್ಭವತಿ ಯತ್ರೈವಂ ವಿದ್ವಾನೇ-ತಯಾ ಪರಿದಧಾತಿ ತಸ್ಮಾದೇನಂ ವಿದ್ವಾನೇತಯೈವ ಪರಿದಧ್ಯಾತ್ ॥**

ಚತುರ್ಥಪಾದಯುಕ್ತಂ ಪ್ರಶಂಸತಿ ಹೇ ದೇವ ನೋಽಸ್ಮಾಕಂ ಶ್ರೋಮತಂ ಶ್ರವಣೀಯ-ಕೀರ್ತಿಂ ದಿವೀವ ದ್ಯುಲೋಕೇ ಯಥಾ ಸಂಪಾದಯತಿ ತಥಾ ದ್ಯಾಮುಧಿ ದ್ಯುಲೋಕಸ್ಯೋಪರಿ ಸೋಮಲೋಕಾದಾವಪಿ ಧಾ ನಿಧೇಹಿ ಸಂಪಾದಯೇತ್ಯರ್ಥಃ। ಏತಸ್ಯ ಪಾದಸ್ಯ ಪಾಠೇನ ಯತ್ರ ಕ್ವಾಪಿ ವೇದಶಾಸ್ತ್ರವಿದ್ಬಹುಲೇ ದೇಶೇ ಬ್ರಹ್ಮಣ್ಯಾ ವಾಗುದ್ಯತೇ ವೇದನಸಂಬಂಧಿ ವಾಕ್ಯಂ ಪಠ್ಯತೇ ತತ್ರಾಸ್ಯ ಯಜಮಾನಸ್ಯ ಕೀರ್ತಿಃ ಪ್ರಸವತಿ। ಯತ್ರ ಯಸ್ಮಿನ್ಮಹಾವ್ರತೇ ಯ ಏವಂ ವಿದ್ವಾ-ನ್ಕೀರ್ತಿಹೇತುಮೃಚಂ ವಿದ್ವಾನೇತಯರ್ಚಾ ಪರಿಧಾನಂ ಕರೋತಿ ತಸ್ಮಿನ್ಮಹಾವ್ರತೇ ಯ (ತ) ಸ್ಯ ಯಜಮಾನಸ್ಯ ಕೀರ್ತಿರ್ಭವತೀತಿ ಪೂರ್ವತ್ರಾನ್ವಯಃ। ಯಸ್ಮಾದೇವಂ ತಸ್ಯಾ ಋಚೋ ಮಹಿಮಾ ಭೂಯಾಂಸ್ತಸ್ಮಾದೇವಂ ವಿದ್ವಾನ್ಮಂತ್ರಮಹಿಮಾನಂ ಜಾನನ್ಪುಮಾನೇತಯೈವರ್ಚಾ ಪರಿದಧ್ಯಾತ್। ನಿಷ್ಕೇವಲ್ಯಂ ಸಮಾಪಯೇತ್॥

ನಾಲ್ಕನೆಯ ಪಾದಾರ್ಥವನ್ನು ವಿವರಿಸುತ್ತಾರೆ. ಎಲೈ ದೇವನೇ ನಃ ನಮಗೆ ಶ್ರೋಮತಂ ಸುಶ್ರಾವ್ಯವಾದ ಕೀರ್ತಿಯನ್ನು, ದಿವೀವ ಸ್ವರ್ಗಲೋಕದಲ್ಲಿ ಹೇಗೆ ಉಂಟುಮಾಡುವೆಯೋ, ಹಾಗೆ, ದ್ಯಾಮುಧಿ ದ್ಯುಲೋಕದ ಮೇಲಿರುವ ಚಂದ್ರಲೋಕಾದಿಗಳಲ್ಲಿಯೂ ಧಾ ಸಂಪಾದಿಸುವಂತೆ ಮಾಡು. ಈ ಪಾದದ ಪಠನದಿಂದ ಯತ್ರ ವೇದಶಾಸ್ತ್ರವನ್ನು ತಿಳಿದ ವಿದ್ವಾಂಸರಿರುವ ಯಾವದೇಶದಲ್ಲಿಯಾದರೂ, ಬ್ರಹ್ಮಣ್ಯಾ ವಾಗುದ್ಯತೇ ವೇದಸಂಬಂಧವಾದ ವಾಕ್ಯವು ಪಠಿಸಲ್ಪ ಡುವುದೋ, ಅಲ್ಲಿ ಅಸ್ಯ ಯಜಮಾನನ, ಕೀರ್ತಿಃ ಕೀರ್ತಿಯು ಅಭಿವೃದ್ಧಿಯಾಗುತ್ತದೆ. ಯತ್ರ ಯಾವ ಮಹಾವ್ರತದಲ್ಲಿ, ಯ ಏವಂ ವಿದ್ವಾನ್ ಕೀರ್ತಿಗೆ ಕಾರಣವಾದ ಈ ಋಕ್ಕನ್ನು ತಿಳಿದ ವಿದ್ವಾಸನು ಇದರಿಂದ ಸಮಾಪ್ತಿ ಮಾಡಿದರೆ ಆಗ ಯಜಮಾನನು ಕೀರ್ತಿಶಾಲಿಯಾಗುತ್ತಾನೆ. ಹೀಗೆ ಈ ಋಕ್ಕಿನ ಮಹಿಮೆ ಇರುವುದರಿಂದ ಇದನ್ನು ತಿಳಿದು ಹೋತೃವು ಇದರಿಂದಲೇ ನಿಷ್ಕೇವಲ್ಯ ಶಸ್ತ್ರವನ್ನು ಪರಿಸಮಾಪ್ತಿಗೊಳಿಸಬೇಕು.

---

*English Tronslation*

---

1. When he recites the Nishkevalya hymn addressed to India (Rv. x. 50), pra vo mahe, he inserts a Nivid (between the fourth and fifth verses). Thus he clearly places strength in himself (in the sastra, in the bird, in himself).

2. They are Trishtubhs and Gagatis.

3. There they say: 'Why does he insert a Nivid among mixed Trishtubhs and Gagatis?' But surely one metre would never support the Nivid of this day, nor fill it: therefore he inserts the Nivid among mixed Trishtubhs and Gagatis.

4. Let him know that this day has three Nivids; the Vasa hymn is a Nivid, the Valakhilyas are a Nivid, and the Nivid himself is a Nivid. Thus let him know that day as having three Nivids.

5. Then follow the hymns vane na va (Rv. x. 29) and yo gata eva (Rv. II. 12). In the fourth verse of the former hymn occur the worlds anne samasya yed asan manishah, and they serve for the winning of proper food.

6. Then comes an insertion. As many Trishtubh and Gagati verses, taken from the ten Mandalas and addressed to Indra, as they insert (between the two above-mentioned hymns), after changing them into Brihatis, so many years do they live beyond the (usual) age (of the hundred years). By this insertion age is obtained.

7. After that he recites the Saganiya hymn, wishing that cattle may always come to his offspring.

8. Then he recites the Tarkshya hymn. Tarkshya is verily welfare, and the hymn leads to welfare. Thus (by reciting the hymn) he fares well.

9. Then he recites the Ekapada (indro visvam vi ragati), wishing, May I be everything at once, and may I thus finish the work of metres.

10. In reciting the hymn indram visva avivridhan (Rv. I. 11) he intertwines the first seven verses by intertwining their feet. They are seven pranas (openings) in the head, and he thus places seven pranas

in the head. The eighth verse (half-verse) he does not intertwine. The eighth is speech, and he thinks, May my speech never be intertwined with the other pranas. Speech therefore, though dwelling in the same a bode as the other pranas, is not intertwined with them.

11. He recites the Virag verses. Verily, Virag verses are food, and they thus serve for the gaining of food.

12. He ends with the hymn of Vasishtha, wishing. May I be Vasishtha !

13. But let him end with the fifth verse, esha stomo maha ugraya vahe, which, possessing the word mahat, is auspicious.

14. In the second foot of the fifth verse the word dhuri occurs. Verily, dhuh (the place where the horse is fastened to the car) is the end (of the car). This day also is the end (of the sacrifide which lasts a whole year). Thus the verse is fit for the day,

15. In the third foot the word arka is auspicious.

16. The last foot is : 'Make our glory high as heaven over heaven.' Thus wherever Brahamanic speech is uttered, there his glory will be, when he who knows this finishes with that verse. Therefore let a man who knows this, finish (the Nishkevalya) with that verse.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ಪಂಚಮಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪ್ರಥಮಾರಣ್ಯಕದ
ಐದನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವು ॥

———

# ಅಥ ಪ್ರಥಮಾರಣ್ಯಕೇ ಪಂಚಮಾಧ್ಯಾಯೇ ತೃತೀಯಃ ಖಂಡಃ

## ಪ್ರಥಮಾರಣ್ಯಕದ ಐದನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

---

**ತತ್ಸವಿತುರ್ವೃಣೀಮಹೇಽದ್ಯಾನೋ ದೇವ ಸವಿತರಿತಿ ವೈಶ್ವದೇವಸ್ಯ ಪ್ರತಿಪದನುಚರಾವೈಕಾಹಿಕೌ ರೂಪಸಮೃದ್ಧೌ ॥**

ಮಾಧ್ಯಂದಿನಸವನೇ ಶಸ್ತ (ಶಂಸಿತ) ಮ್ಯಂ ನಿಷ್ಕೇವಲ್ಯಂ ಸಮಾಪಿತಂ ತೃತೀಯಸವನೇ ಶಸ್ತವ್ಯ (ಶಂಸಿತ)ಸ್ಯ ವೈಶ್ವದೇವಶಸ್ತ್ರಸ್ಯರ್ಗದ್ವಯಂ ವಿಧತ್ತೆ–ಪ್ರತಿಪದ್ಯತೇ ಪ್ರಾಪ್ಯತೇ ಶಸ್ತ್ರಂ ಯೇನ ತೃಚೇನ ಸೋಽಯಂ ಪ್ರತಿಪತ್ಸ ಚ ತತ್ಸವಿತುರಿತ್ಯಾದಿಕಸ್ತೃಚಸ್ತಂ ತೃಚಮನುಚರತಿ ತದನಂತರಂ ಪದ್ಯ (ಠ್ಯ) ತ ಇತ್ಯನುಚರೋಽದ್ಯಾ ನೋ ದೇವ ಸವಿತರಿತ್ಯಾದಿಕಸ್ತೃಚಸ್ತಾವೇತಾ ವೈಶ್ವದೇವ-ಶಸ್ತ್ರಸ್ಯ ಪ್ರತಿಪದನುಚರಾ ಮಹಾವ್ರತಸ್ಯ ಪ್ರಕೃತಿಭೂತೇ ವಿಶ್ವಜಿದಾಖ್ಯ ಏಹಾಹೇ ತಸ್ಯಾಪಿ ಮೂಲಪ್ರಕೃತಿಭೂತೇಽಗ್ನಿಷ್ಟೋಮಾಖ್ಯ ಏಕಾಹೇ ಭವತ ಇತ್ಯೈಕಾಹಿಕಾವತ ಏವ ಸ್ವರೂಪೇಣ ಸಮೃದ್ಧೌ ತಸ್ಮಾತ್ತೃಚೌ ಕರ್ತವ್ಯಾ ॥

ಮಾಧ್ಯಂದಿನಸವನದಲ್ಲಿ ಪಠಿಸಬೇಕಾದ ನಿಷ್ಕೇವಲ್ಯಶಸ್ತ್ರವನ್ನು ಸಮಾಪ್ತಿಗೊಳಿಸಿ ತೃತಿಯಸವನದಲ್ಲಿ (ಸಾಯಂಕಾಲ ಹೋಮ) ಪಠಿಸಬೇಕಾದ ವೈಶ್ವದೇವಶಸ್ತ್ರದ ಎರಡು ಋಕ್ಕುಗಳನ್ನು ವಿವರಿಸುತ್ತಾರೆ. 'ತತ್ಸವಿತುರ್ವೃಣೀಮಹೇ' ಎಂಬ ಮೊದಲನೆಯ ತೃಚಕ್ಕೆ ಪ್ರತಿಪತ್ ಎಂದು ಹೆಸರು. ಪ್ರತಿಪದ್ಯತೇ ಯೇನ ಯಾವ ತೃಚದಿಂದ ಶಸ್ತ್ರವು ಹೊಂದಲ್ಪಡುವುದೋ ಅದು ಪ್ರತಿಪತ್. ಈ ತೃಚವನ್ನನುಸರಿಸಿ ಆಮೇಲೆ ಪಠಿಸುವುದರಿಂದ ಎರಡನೆಯ 'ಅದ್ಯಾ ನೋ ದೇವ ಸವಿತಃ' ಎಂಬ ತೃಚಕ್ಕೆ ಅನುಚರವೆಂದು ಹೆಸರು. ವೈಶ್ವದೇವಶಸ್ತ್ರದ ಈ ಪ್ರತಿಪದನುಚರವೆಂಬ ತೃಚಗಳು ಮಹಾವ್ರತದ ಪ್ರಕೃತಿಯಾದ ವಿಶ್ವಜಿತ್ ಎಂಬ ಏಕಾಹದಲ್ಲಿಯೂ, ಅದಕ್ಕೂ ಮೂಲಪ್ರಕೃತಿಯಾದ ಅಗ್ನಿಷ್ಟೋಮದ ಏಕಾಹದಲ್ಲಿಯೂ ಇರುವುದರಿಂದ ಐಕಾಹಿಕಸ್ವರೂಪದಿಂದ ರೂಪಸಮೃದ್ಧಿ ಹೊಂದುತ್ತವೆ. ಆದುದರಿಂದ ಪಠಿಸಲು ಯೋಗ್ಯವಾಗಿವೆ.

**ಬಹು ವಾ ಏತಸ್ಮಿನ್ನಹನಿ ಕಿಂಚ ಕಿಂಚ ವಾರಣಂ ಕ್ರಿಯತೇ ಶಾಂತ್ಯಾ ಏವ ಶಾಂತಿರ್ವೈ ಪ್ರತಿಷ್ಠೈಕಾಹಃ ಶಾಂತ್ಯಾಮೇವ ತತ್ಪ್ರತಿಷ್ಠಾಯಾಮಂತತಃ ಪ್ರತಿತಿಷ್ಠಂತಿ ಪ್ರತಿತಿಷ್ಠತಿ ಯ ಏವಂ ವೇದ ಯೇಷಾಂ ಚೈವಂ ವಿದ್ವಾನೇತದ್ಧೋತಾ ಶಂಸತಿ ॥**

ಅನಿಷ್ಟಶಾಂತಿಹೇತುತ್ವೇನ ತೃಚದ್ವಯಂ ಪ್ರಶಂಸತಿ ಪೂರ್ವವದ್ವ್ಯಾಖ್ಯೇಯಮ್ (೫-೪-೧-೧-೩)

ಅನಿಷ್ಟ ಶಾಂತಿಗೋಸ್ಕರ ಎರಡು ತೃಚಗಳನ್ನು ವಿವರಿಸುತ್ತಾನೆ. ಇವು ಹಿಂದೆ ವ್ಯಾಖ್ಯಾತವಾಗಿವೆ. (ಐ.ಆ. ೧-೧-೨)

## ತದ್ದೇವಸ್ಯ ಸವಿತುರ್ವಾರ್ಯಂ ಮಹದಿತಿ ಸಾವಿತ್ರಮಂತೋ ವೈ ಮಹದಂತ ಏತದಹರೇತಸ್ಯಾಹ್ನೋ ರೂಪಂ ॥

**ಪ್ರತಿಪದನುಚರಯೋರೂರ್ಧ್ವಮೇಕಂ ಸೂಕ್ತಂ ವಿಧತ್ತೇ—" ತದ್ದೇವಸ್ಯ " ಇತ್ಯಾದಿಕಂ ಸಪ್ತರ್ಚಂ ಸವಿತೃದೇವತಾಕಂ ಸೂಕ್ತಮ್ । ಸವಿತುರ್ದೇವಸ್ಯ ಸಂಬಂಧಿ ವಾರ್ಯಂ ಸರ್ವೈರ್ವರಣೀಯಂ ತತ್ತೇಜೋ ಮಹತ್ಪ್ರೌಢಮ್ । ಅಸ್ಮಿನ್ಪಾದೇ ಯನ್ಮಹದಿತ್ಯುಕ್ತಂ ತದಂತೋ ವೈ ಪ್ರಾರ್ಥನೀಯಸ್ಯ ಸರ್ವಸ್ಯಾಪ್ಯವಸಾನಭೂಮಿಃ, ನ ಹಿ ಮಹತ್ತ್ವಾದೂರ್ಧ್ವಂ ಕಿಂಚಿತ್ಪ್ರಾರ್ಥನೀಯಮಸ್ತಿ । ಏತನ್ಮಹಾವ್ರತಾಖ್ಯಮಪ್ಯಹಃ ಸಂವತ್ಸರಸತ್ರಸ್ಯಾಂತೋಽತೋಽಂತತ್ವಸಾಮ್ಯಾದಿದಂ ಸೂಕ್ತಮೇತಸ್ಯಾಹ್ನಃ ಸ್ವರೂಪಮ್ ॥**

ಪ್ರತಿಪದನುಚರ ತೃಚಗಳ ಪಠನವಾದಮೇಲೆ ಇನ್ನೊಂದು ಸೂಕ್ತವನ್ನು ವಿಧಿಸುತ್ತಾರೆ. ' ತದ್ದೇವಸ್ಯ ' ಎಂಬ ಸೂಕ್ತಕ್ಕೆ ಸೂರ್ಯನೇ ದೇವತೆ. ಇದರಲ್ಲಿ ಏಳು ಋಕ್ಕುಗಳಿವೆ. **ಸವಿತುಃ ದೇವಸ್ಯ**–ಸೂರ್ಯಸಂಬಂಧಿಯಾದ, **ವಾರ್ಯ**–ಎಲ್ಲರಿಂದಲೂ ಪ್ರಾರ್ಥಿಸಲು ಯೋಗ್ಯವಾದ **ತತ್**—ತೇಜಸ್ಸು, **ಮಹತ್**—ಅತಿಪ್ರೌಢವಾದದ್ದು. ಈ ಮಂತ್ರದ ಪಾದದಲ್ಲಿ ಯಾವ **ಮಹತ್** ಪದವಿದೆಯೋ ಅದೇ **ಅಂತಃ** ಅಂದರೆ ಎಲ್ಲಾ ಇಷ್ಟಾರ್ಥದ ಅವಸಾನ ಅಂದರೆ ಕೊನೆ. ಮಹತ್ತ್ವಕ್ಕಿಂತ ಇನ್ನು ಕೇಳಬೇಕಾದುದದು ಯಾವುದೂ ಇಲ್ಲ. ಈ ಮಹಾವ್ರತದ ಹಗಲೂ ಸಂವತ್ಸರಸತ್ರದ ಅಂತವು. ಅಂತತ್ವಸಾಮ್ಯದಿಂದ ಈ ದಿನ ಪಠಿಸಲು ಇದು ರೂಪಸಮೃದ್ಧವಾಗಿದೆ.

## ಕತರಾ ಪೂರ್ವಾ ಕತರಾಽಪರಾಽಯೋರಿತಿ ದ್ಯಾವಾಪೃಥಿವೀಯಂ ಸಮಾನೋದರ್ಕಂ ಸಮಾನೋದರ್ಕಂ ವಾ ಏತದಹರೇತಸ್ಯಾಹ್ನೋರೂಪಂ

**ಸೂಕ್ತಾಂತರಂ ವಿಧತ್ತೇ—" ಕತರಾ '' ಇತ್ಯಾದಿಕಮೇಕಾದಶರ್ಚಂ ಸೂಕ್ತಂ ದ್ಯಾವಾಪೃಥಿವೀದೇವತಾಕಂ ಶಂಸನೀಯಮ್ । ತಚ್ಚ ಸಮಾನೋದರ್ಕಂ ಸಮಾನ ಏಕ ಉದರ್ಕೋ ಯಸ್ಯ ಸೂಕ್ತಸ್ಯ ತತ್ಸಮಾನೋದರ್ಕಂ ತಸ್ಮಿನ್ಹಿ ಸೂಕ್ತೇ ಬಹುಷ್ವೃಕ್ಷು " ದ್ಯಾವಾ ರಕ್ಷತಂ ಪೃಥಿವೀ ನೋ ಅಭ್ವಾತ್ " ಇತ್ಯಯಮೇವ ಚತುರ್ಥಪಾದಃ ಪಠಿತೋಽತ ಏಕವಿಧಃ । ಏತನ್ಮಹಾವ್ರತಾಖ್ಯಮಹಸ್ತು ಸಮಾನೋದರ್ಕಮ್। ಅಹ್ನೋಽದರ್ಕ ಉತ್ತರಕಾಲಭಾವಿ ಫಲಂ ತಚ್ಚ ಸರ್ವೇಷಾಂ ಸಮಾನಂ ಸರ್ವೇಽಪಿ ಮಹಾವ್ರತಮನುಷ್ಠಾಯ ಬ್ರಹ್ಮ ಪ್ರಾಪ್ನುವಂತಿ । ಅತ ಏವ ಶೌನಕೇನ—" ಬ್ರಹ್ಮ ಭವತಿ" (ಐ-ಆ-೫-ಅ-೩- ಖಂ-೩) ಇತ್ಯುಕ್ತಮ್ । ಏವಂ ಚ ಸತಿ ಸಮಾನೋದರ್ಕಸಾಮ್ಯಾದೇತತ್ಸೂ (ಕ್ತಮೇತಸ್ಯಾಹ್ನಃ ಸ್ವರೂಪಮ್) ॥**

ಇದಾದಮೇಲೆ ' **ಕತರಾ** ' ಎಂಬ ಹನ್ನೊಂದು ಋಕ್ಕುಗಳ ಒಂದು ಸೂಕ್ತವನ್ನು ಪಠಿಸಬೇಕು. ಇದಕ್ಕೆ ದ್ಯಾವಾಪೃಥಿವೀ ದೇವತೆಗಳು ಇಲ್ಲಿಯೂ ರೂಪ ಸಮೃದ್ಧಿಯನ್ನು ಸೂಚಿಸುವ **ಸಮಾನೋದರ್ಕಂ** ಎಂಬುದಿದೆ. ಸಮಾನವಾದ ಉದರ್ಕವ ಅಂದರೆ ಉತ್ತರಕಾಲದಲ್ಲಿ ಉಂಟಾಗುವ ಫಲವುಳ್ಳದ್ದು ಎಂದರ್ಥ. ಈ ಸೂಕ್ತದ ಅನೇಕ ಋಕ್ಕುಗಳಲ್ಲಿ ' ದ್ಯಾವಾ

ರಕ್ಷತಂ ಪೃಥಿವೀ ನೋ ಅಭ್ವಾತ್ ' ಎಂದು ನಾಲ್ಕನೇಪಾದ ಸಮಾನವಾಗಿದೆ. ಮಹಾವ್ರತದ ಹಗಲೂ ಸಮಾನೊದರ್ಕವು, ಉತ್ತರಕಾಲದಲ್ಲಿ ಉಂಟಾಗುವ ಫಲವು ಎಲ್ಲರಗೂ ಸಮಾನವಾಗಿದೆ. ಮಹಾವ್ರತಾನುಷ್ಠಾನಮಾಡಿಯೇ ಬ್ರಹ್ಮ ಸಾಕ್ಷಾತ್ಕಾರ ಹೊಂದುತ್ತಾರೆ. ಆದುದರಿಂದಲೇ ಐದನೆಯ ಆರಣ್ಯಕದಲ್ಲಿ ' ಬ್ರಹ್ಮ ಭವತಿ ' (ಐ. ಆ. ೫-೩-೩) ಎಂದು ಶೌನಕರು ಹೇಳುತ್ತಾರೆ. ಹೀಗೆ ರೂಪಸಮೃದ್ಧವಾದುದರಿಂದ ಈ ಏಕಾಹದಲ್ಲಿ ಪಠಿಸಲು ಯೋಗ್ಯವಾಗಿದೆ.

## ಅನಶ್ವೋ ಜಾತೋ ಅನಭೀಶುರುಕ್ಥ್ಯ ಇತ್ಯಾರ್ಭವಮ್ ॥

ಸೂಕ್ತಾಂತರಂ ವಿಧತ್ತೇ " ಅನಶ್ವಃ " ಇತ್ಯಾದಿಕಂ ನವರ್ಚಮೃಭುದೇವತಾಕಂ ಸೂಕ್ತಂ ದ್ಯಾವಾಪೃಥಿವ್ಯೋಃ ಪೃಥಿವೀಂ ಯಚ್ಚ ಪುಷ್ಯಥೇತಿ ತತ್ರ ಸ್ವಯಮಾಭೀತ್ವಾ (ಸ್ವಯಮೇವಾರ್ಭ-ವತ್ವಾ) ತ್ । ತತ್ಸೂಕ್ತಂ ಶಂಸೇತ್ ॥

ಇದಾದ ಮೇಲೆ ' ಅನಶ್ವಃ ' ಎಂಬ ಒಂಬತ್ತು ಋಕ್ಕುಗಳುಳ್ಳ ಸೂಕ್ತವನ್ನು ಪಠಿಸಬೇಕು. ಇದು ಋಭುದೇವತಾಕ ವಾದುದರಿಂದ ಆರ್ಭವತ್ವ ಸಾಮ್ಯದಿಂದಲೇ ರೂಪಸಮೃದ್ಧಿ ಪಡೆದಿದೆ.

## ರಥಸ್ತ್ರಿಚಕ್ರ ಇತಿ ಪದೇ ತತ್ತ್ರಿವತ್ತದಂತೋ ವೈ ತ್ರಿವದಂತ ಏತದಹ ರೇತಸ್ಯಾಹ್ನೋ ರೂಪಂ ॥

ತತ್ರ ಪ್ರಥಮಾಯಾಮೃಚಿ ದ್ವಿತೀಯಪಾದೇ ತ್ರಿಶಬ್ದಂ ಪ್ರಶಂಸತಿ " ರಥಸ್ತ್ರಿಚಕ್ರಃ ಪರಿವರ್ತತೇ ರಜಃ " ಇತಿ ದ್ವಿತೀಯಪಾದಸ್ತಸ್ಮಿನ್ಪಾದೇ ಯದೇತ್ರಿಶಬ್ದೋಪೇತರಥ ವಿಶೇಷಣಂ ತ್ರಿಚಕ್ರ ಇತ್ಯೇತತ್ಪದಂ ವಿದ್ಯತೇ ತ್ರಿಶಬ್ದೋಽಸ್ಮಿನ್ಪದೇಽಸ್ತೀತಿ ತ್ರಿವತ್ಪದಂ ತಚ್ಚಾಂತೋ ವಾ ಅವಸಾನಭೂಮಿರೇವ । ಯಸ್ಯ ರಥಸ್ಯ ಚಕ್ರದ್ವಯೇನಾ (ಯನು) ನಿರ್ವಾಹಕಂ ಯತ್ರ ತಸ್ಯ ತೃತೀಯಂ ಚಕ್ರಂ ಸಂಪಾದ್ಯತೇ ತಾವತಾ ನಿರ್ವಾಹೋ ಭವತೀತ್ಯಭಿಪ್ರೇತ್ಯ ತತ್ತ್ರಿವತ್ಪದಮಂತ ಇತ್ಯುಚ್ಯತೇ । ಅಂತ ಏತದಹರಿತ್ಯಾದಿಕಂ ಪೂರ್ವವತ್ (ಐ-ಆ-೧-ಅ-೫-ಖಂ-೨) ॥

ಆರ್ಭವಸೂಕ್ತದ ಪ್ರಥಮ ಋಕ್ಕಿನ ದ್ವಿತೀಯಪಾದದಲ್ಲಿರುವ ತ್ರಿಶಬ್ದವನ್ನು ವಿವರಿಸುತ್ತಾರೆ. ' ರಥಸ್ತ್ರಿಚಕ್ರಃ ಪರಿವರ್ತತೇ ರಜಃ ಎಂಬುದು ದ್ವಿತೀಯಪಾದ. ಇಲ್ಲಿ ತ್ರಿಚಕ್ರಃ ಎಂಬುದು ರಥ ವಿಶೇಷಣ. ಇದು ತ್ರಿಪದದಿಂದ ಕೂಡಿರು ವುದರಿಂದ ತ್ರಿವತ್ಪದವಾಗುತ್ತನೆ. ಇದು ಅಂತ ಅಂದರೆ ಅವಸಾನವಾಚಕವಾಗುತ್ತದೆ. ರಥದಲ್ಲಿ ಎರಡು ಚಕ್ರದಿಂದ ನಿರ್ವಾಹವಾಗದಿದ್ದರೆ ಕೆಲವು ಕಡೆ ಮೂರನೆಯ ಚಕ್ರವೂ ಅಪೇಕ್ಷಿತವಾಗುತ್ತದೆ. ಅದರಂತೆ ಇಲ್ಲಿ ತ್ರಿವತ್ಪದವು ಅಂತವಾಚಕ ವಾಗಿ ರೂಪಸಮೃದ್ಧಿಯನ್ನು ಪಡೆದಿರುತ್ತದೆ.

## ಅಸ್ಯ ವಾಮಸ್ಯ ಪಲಿತಸ್ಯ ಹೋತುರಿತಿ ವೈಶ್ವದೇವಂ ಬಹುರೂಪಂ ವಾ ಏತದಹರೇತಸ್ಯಾಹ್ನೋ ರೂಪಂ ॥

ಸೂಕ್ತಾಂತರಂ ವಿಧತ್ತೇ " ಅಸ್ಯ ವಾಮಸ್ಯ " ಇತ್ಯಾದಿಕಂ ದ್ವಿಪಂಚಾಶದೃಚಂ ಸೂಕ್ತಂ ವಿಶ್ವೇ (ಶ್ವ) ದೇವದೇವತಾಕಂ ಪಠೇತ್ । ತಚ್ಚ ಬಹುರೂಪಂ ಬಹ್ವರ್ಥಪ್ರತಿಪಾದಕತ್ವಾತ್ ।

ತಚ್ಚಾನುಕ್ರಮಣಿಕಾಯಾಂ ದರ್ಶಿತಮ್— ಅಸ್ಯ ದ್ವಿಪಂಚಾಶದಲ್ಪಸ್ತವಂತ್ವೇತತ್ಸಂಶಯೋತ್ಥಾಪನ-ಪ್ರಶ್ನಪ್ರತಿವಾಕ್ಯಾನ್ಯತ್ರ ಪ್ರಾಯೇಣ ಜ್ಞಾನಮೋಕ್ಷಾಕ್ಷರಪ್ರಶಂಸಾ ಚೇತಿ । ವೈದಿಕಮಂತ್ರಾದಿದಾ ಲೌಕಿಕವೃತ್ತ್ಯಾದಿನಾ ಚ ತ್ರಿವೃತತ್ವಾದಹ್ನೋಽಬಹುರೂಪತ್ವಮತಃ ಸಾಮ್ಯಾದುಭಯೋರಾಸು ರೂಪ್ಯಮ್ ॥

ಸೂಕ್ತಾಂತರವನ್ನು ವಿವರಿಸುತ್ತಾರೆ. ' ಅಸ್ಯ ವಾಮಸ್ಯ ' ಎಂಬ ವಿಶ್ವೇದೇವದೇವತಾಕವಾದ ಐವತ್ತೆರಡು ಋಕ್ಕುಗಳಿರುವ ಸೂಕ್ತವನ್ನು ಪಠಿಸಬೇಕು. ಇದು ನಾನಾರ್ಥ ಪ್ರತಿಪಾದಕವಾದುದರಿಂದ ಬಹುರೂಪವಾಗಿರುತ್ತದೆ. ಅಲ್ಪಸ್ತವ, ಸಂಶಯೋತ್ಥಾಪನ, ಪ್ರಶ್ನ ಪ್ರತಿವಚನ. ಜ್ಞಾನ, ಮೋಕ್ಷಾದಿ ಬಹ್ವರ್ಥಪ್ರತಿಪಾದಕವಾಗಿದೆಯೆಂದು ಅನುಕ್ರಮಣಿಕೆಯಲ್ಲಿಯೂ ವಿವರಿಸಿರುತ್ತಾರೆ. ವೈದಿಕ ಮಂತ್ರಾದಿಗಳಿಂದಲೂ, ಲೌಕಿಕ ವ್ಯವಹಾರಾದಿಗಳಿಂದಲೂ ವಿವೃತವಾದುದರಿಂದ ಏಕಾಹವೂ ಬಹುರೂಪವಾದುದರಿಂದ ಸಾಮ್ಯ ಎರಡಕ್ಕೂ ಸಮಾನವಾಗಿದೆ.

## ಗೌರೀರ್ಮಿಮಾಯ ಸಲಿಲಾನಿ ತಕ್ಷತೀತ್ಯೇತದಂತಂ ॥

ಯಥೋಕ್ತಸ್ಯ ಕೃತ್ಸ್ನಸ್ಯ ಸೂಕ್ತಸ್ಯ ವಾರಯಿತುಂ ವಿಶಿನಷ್ಟಿ—ಋಚಾಂ ಚತ್ವಾರಿಂಶತಿ (ತ) ಮತಿಕ್ರಮ್ಯಾನಂತರಭಾವಿನೀ " ಗೌರೀಃ " ಇತ್ಯಾದಿಕಾ ತದಂತಮೇವ ಸೂಕ್ತಭಾಗಂ ಪಠೇನ್ನ ತೂಪರಿತನಮ್ । ಅತ ಏವ ಶೌನಕಃ—" ಏಕಚತ್ವಾರಿಂಶತಮ್ '' (ಐ-೯-೫-ಅ-೩-೩೦-೨) ಇತ್ಯಾಹ ॥

ಸಂಪೂರ್ಣಸೂಕ್ತಪಾಠ ಪ್ರಸಕ್ತಿಯನ್ನು ಹೋಗಲಾಡಿಸಲು ವಿಶೇಷವನ್ನು ತೋರಿಸುತ್ತಾರೆ. ಈ ಸೂಕ್ತದ ಐವತ್ತೆರಡು ಋಕ್ಕುಗಳಲ್ಲಿ ಆದಿಯ ನಲವತ್ತು ಋಕ್ಕುಗಳನ್ನು ಬಿಟ್ಟು ಮುಂದಿರುವ ' ಗೌರೀರ್ಮಿಮಾಯ ' ಇತ್ಯಾದಿ ಹನ್ನೆರಡು ಋಕ್ಕುಗಳನ್ನು ಮಾತ್ರ ಪಠಿಸಬೇಕು. ಇದನ್ನು ಶೌನಕರು ' ಏಕಚತ್ವಾರಿಂಶತಮ್ (ಐ. ಆ. ೫-೩-೨) ಎಂದು ವಿವರಿಸಿರುತ್ತಾರೆ.

## ಆನೋ ಭದ್ರಾಃ ಕ್ರತವೋ ಯಂತು ವಿಶ್ವತ ಇತಿ ವೈಶ್ವದೇವಂ ನಿವಿದ್ಧಾನಮೈಕಾಹಿಕಂ ರೂಪಸಮೃದ್ಧಂ ॥

ಸೂಕ್ತಾಂತರಂ ವಿಧತ್ತೇ—" ಆ ನಃ " ಇತ್ಯಾದಿಕಂ ದಶರ್ಚಂ ವಿಶ್ವೇ (ಶ್ವ) ದೇವದೇವ-ತಾಕಂ ಸೂಕ್ತಂ ಪಠೇತ್ । ಅಸ್ಮಿನ್ಸೂಕ್ತೇ ನವರ್ಚಃ ಶಸ್ತ್ವಾ ದಶಮೀಮವಶೇಷ್ಯ ತನ್ಮಧ್ಯೇ ವಿಶ್ವೇ ದೇವಾಃ ಸೋಮಸ್ಯ ಮತ್ಸನ್ನಿತ್ಯಾದೀನಿ ನಿವಿತ್ಪದಾನಿ ಧೀಯಂತೇ ಪ್ರಕ್ಷಿಪ್ಯಂತೇ ತಸ್ಮಾದೇತನ್ನಿವಿದ್ಧಾ-ನಂ ತಚ್ಚ ಮೂಲಪ್ರಕೃತಾವಗ್ನಿಷ್ಟೋಮ ಏಕಾಹೇ ಸಮುತ್ಪನ್ನತ್ವಾದೈಕಾಹಿಕಂ ಸೂಕ್ತಂ ಪಠೇತ್ । ಅತ ಏವ ರೂಪಸಮೃದ್ಧಮ್ ॥

ವೈಶ್ವದೇವಸೂಕ್ತವನ್ನು ಪಠಿಸಿದ ಮೇಲೆ ಮುಂದಿನ ಸೂಕ್ತವನ್ನು ವಿವರಿಸುತ್ತಾರೆ. ' ಆನಃ ' ಇತ್ಯಾದಿ ಹತ್ತು ಋಕ್ಕುಗಳುಳ್ಳ ವಿಶ್ವೇದೇವದೇವತಾಕವಾದ ಇನ್ನೊಂದು ಸೂಕ್ತವನ್ನು ಪಠಿಸಬೇಕು. ಈ ಸೂಕ್ತದಲ್ಲಿ ಒಂಬತ್ತು ಋಕ್ಕುಗಳನ್ನು ಪಠಿಸಿದಮೇಲೆ ಹತ್ತನೆಯ ಋಕ್ಕನ್ನು ಪಠಿಸಬೇಕಾದರೆ ಮೊದಲು ಮಧ್ಯದಲ್ಲಿ ವಿಶ್ವೇ ದೇವಾಃ ಸೋಮಸ್ಯ

ಮತ್ಸನ್' ಇತ್ಯಾದಿ ನಿವಿತ್ಪದಗಳನ್ನು ಸೇರಿಸಿ ಪಠಿಸಬೇಕು. ಇದಕ್ಕೆ ನಿವಿದ್ಧಾನವೆಂದು ಹೆಸರು. ದು ಮೂಲಇ ಪ್ರಕೃತಿಯಾದ ಅಗ್ನಿಷ್ಟೋಮವೆಂಬ ಏಕಾಹದಲ್ಲಿಯೂ ಇರುವುದರಿಂದ ಐಕಾಹಿಕಸಾಮ್ಯದಿಂದ ಈ ಸವು ರೂಪೂಕ ಸಮೃದ್ಧವಾಗಿದೆ.

**ಬಹು ವಾ ಏತಸ್ಮಿನ್ನಹನಿ ಕಿಂಚ ಕಿಂಚ ವಾರಣಂ ಕ್ರಿಯತೇ ಶಾಂತ್ಯಾ ಏವ ಶಾಂತಿರ್ವೈ ಪ್ರತಿಷ್ಠೈಕಾಹಃ ಶಾಂತ್ಯಾಮೇವ ತತ್ಪ್ರತಿಷ್ಠಾ-ಯಾಮಂ ತತಃ ಪ್ರತಿತಿಷ್ಠಂತಿ ಪ್ರತಿತಿಷ್ಠತಿ ಯ ಏವಂ ವೇದ ಯೇಷಾಂ ಚೈವಂ ವಿದ್ವಾನೇತದ್ಧೋತಾ ಶಂಸದಿ ॥**

ಅರಿಷ್ಟಶಾಂತಿಹೇತುತ್ವೇನ ಸೂಕ್ತಂ ಪ್ರಶಂಸತಿ—ಪೂರ್ವವದ್ವ್ಯಾಖ್ಯೇಯಮ್ ॥ (ಐ–ಆ–೧ ಅ–೧–ಖಂ–೩) ॥

ಅರಿಷ್ಟಶಾಂತಿಗೋಸ್ಕರ ಪಠಿಸಬೇಕಾದ ಸೂಕ್ತವನ್ನು ವಿವರಿಸುತ್ತಾರೆ. ಇದು ಹಿಂದೆ ವ್ಯಾಖ್ಯಾತವಾಗಿದೆ. (ಐ. ಆ. ೧–೧–೩) ॥.

**ವೈಶ್ವಾನರಾಯ ಧಿಷಣಾಮೃತಾವೃಧ ಇತ್ಯಾಗ್ನಿಮಾರುತಸ್ಯ ಪ್ರತಿಪದಂ-ತೋ ವೈ ಧಿಷಣಾಂತ ಏತದಹರೇತಸ್ಯಾಹ್ನೋ ರೂಪಂ ॥**

ವೈಶ್ವದೇವತಸ್ತ್ರಪರ್ಯಂತಂ ಸಮಾಪ್ಯಾಗ್ನಿಮಾರುತಶಸ್ತ್ರಸ್ಯ ಪ್ರಾರಂಭೇ ಪಂಚದಶರ್ಚಂ ಸೂಕ್ತಂ ವಿಧತ್ತೇ—ಅತ್ರ ಯಾ ಧಿಷಣಾ ಸಾ ಬುದ್ಧಿಃ ಶ್ರೂಯತೇ । ಸೇಯಮಂತೋ ವೈ ಪರ್ಯವ-ಸ್ಥಾನಭೂಮಿರೇವ । ಸರ್ವಸ್ಯ ವ್ಯವಹಾರಸ್ಯ ಬುದ್ಧ್ಯಧೀನತ್ವಾತ್ । ಅಂತ ಏತದಹರಿತ್ಯಾದಿ ಪೂರ್ವ-ವತ್ (ಐ. ಆ. ೧. ಅ. ೫ ಖಂ. ೨)

ಹೀಗೆ ವೈಶ್ವದೇವಶಸ್ತ್ರವನ್ನು ಸಮಾಪ್ತಿಗೊಳಿಸಿ ಆಗ್ನಿಮಾರುತಶಸ್ತ್ರದ ಪ್ರಾರಂಭದಲ್ಲಿ ಪಠಿಸಬೇಕಾದ ಹದಿನೈದು ಋಕ್ಕುಗಳುಳ್ಳ ಸೂಕ್ತವನ್ನು ವಿವರಿಸುತ್ತಾರೆ. ವೈಶ್ವಾನರಾಯ ಧಿಷಣಾಂ- ಎಂಬುದೇ ಮೊದಲಿನ ಮಂತ್ರ. ಇಲ್ಲಿ ಧೀಷಣಾ ಎಂಬ ಶಬ್ದವು ಬುದ್ಧಿಯನ್ನು ಹೇಳುತ್ತದೆ. ಎಲ್ಲಾ ವ್ಯವಹಾರಗಳೂ ಬುದ್ಧ್ಯಧೀನವಾದುದರಿಂದ ಇದೇ ಅಂದರೆ ಪರ್ಯವಸ್ಥಾನ ಭೂಮಿ. ಅಂತಶಬ್ದಸಾಮ್ಯದಿಂದ ಇದು ರೂಪಸಮೃದ್ಧವಾಗಿ ಪಠಿಸಲು ಯುಕ್ತವಾಗಿದೆ.

**ಪ್ರ ಯಜ್ಯವೋ ಮರುತೋ ಭ್ರಾಜದೃಷ್ಟಯ ಇತಿ ಮಾರುತಂ ಸಮಾ-ನೋದರ್ಕಂ ಸಮಾನೋದರ್ಕಂ ವಾ ಏತದಹರೇತಸ್ಯಾಹ್ನೋ ರೂಪಮ್, ಇತಿ ॥**

ಸೂಕ್ತಾಂತರಂ ದಶರ್ಚಂ ಮರುದ್ದೇವತಾಕಂ ವಿಧತ್ತೇ ಅಸ್ಮಿನ್ನಪಿ ಸೂಕ್ತೇ ಬಹುಷ್ವೃಕ್ಷು "ಶುಭಂ ಯಾತಾಮನುರಥಾ ಅವೃತ್ಸತ" ಇತ್ಯಸ್ಯೈವ ಚತುರ್ಥಪಾದಸ್ಯ ಪಠಿತತ್ವಾತ್ಸಮಾನೋದರ್ಕತ್ವಮ್ । ಅನ್ಯತ್ಪೂರ್ವವದ್ವ್ಯಾಖ್ಯೇಯಮ್ ॥

ಇದಾದಮೇಲೆ ಹತ್ತು ಋಕ್ಕುಗಳುಳ್ಳ ಮರುದ್ದೇವತಾಕವಾದ ಸೂಕ್ತವನ್ನು ವಿವರಿಸುತ್ತಾ. 'ಪ್ರ ಯಜ್ಯವ' ಎಂಬ ಈ ಸೂಕ್ತದಲ್ಲಿ 'ಶುಭಂ ಯಾತಾಮನುರಥಾ ಅವೃತ್ಸತ' ಎಂದು ನಾಲ್ಕನೆಯಪಾದವು ಸಮಾನವಾದುದರಿಂದ ಸಮಾನೋದರ್ಕವಾಗಿದೆ. ಈ ದಿವಸ ಸಮಾನೋದರ್ಕವೆಂದು ಹಿಂದೆ ವಿವರಿಸಿರುವುದರಿಂದ ರೂಪಸಾಮ್ಯದಿಂದ ಪಠಿಸಲು ಯೋಗ್ಯವಾಗಿದೆ.

**ಜಾತವೇದಸೇ ಸುನವಾಮ ಸೋಮಮಿತಿ ಜಾತವೇದಸ್ಯಾಂ ಪುರಸ್ತಾತ್ಸೂಕ್ತಸ್ಯ ಶಂಸತಿ ಸ್ವಸ್ತ್ಯಯನಂ ವೈ ಜಾತವೇದಸ್ಯಾ ಸ್ವಸ್ತಿತಾಯೈ ಸ್ವಸ್ತ್ಯಯನಮೇವ ತತ್ಕುರುತೇ, ಇತಿ ॥**

ಅಥ ಸೂಕ್ತಾತ್ಪ್ರಾಕ್ತನೀಮೇಕಾಮೃಚಂ ವಿಧತ್ತೇ ಜಾತವೇದೋನಾಮಿಕಾ ದೇವತಾ ಯಸ್ಯಾ ಋಚಃ ಸಾ ಜಾತವೇದಸ್ಯಾ ತಾಮೃಚಂ ವಿಧಾಸ್ಯಮಾನಸ್ಯ "ಇಮಂ ಸ್ತೋಮಂ" (ಋ. ಸಂ. ಮಂ. ೧-ಸೂ-೯೪-ಋ-೧) ಇತ್ಯಾದಿಸೂಕ್ತಸ್ಯ ಪುರಸ್ತಾಚ್ಛಂಸೇತ್ । ಸಾ ಚ ಸ್ವಸ್ತ್ಯಯನಂ ಕ್ಷೇಮಪ್ರಾಪ್ತಿಹೇತುರತಃ ಸ್ವಸ್ತಿತಾಯೈ ಕ್ಷೇಮಪ್ರಾಪ್ತಯೇ ಸಮರ್ಥಾ । ತತ್ತೇನಶಂಸನೇನ ಕ್ಷೇಮಪ್ರಾಪ್ತಿಮೇವ ಸಂಪಾದಯತಿ ॥

ಆಮೇಲೆ ಸೂಕ್ತರೂಪವಾದ ಒಂದು ಋಕ್ಕನ್ನು ವಿವರಿಸುತ್ತಾರೆ. 'ಜಾತವೇದಸೇ ಸುನವಾಮ–' ಎಂಬ ಈ ಮಂತ್ರಕ್ಕೆ ಜಾತವೇದಸ್ಸೆಂಬ ದೇವತೆಯಾದುದರಿಂದ ಇದಕ್ಕೆ ಜಾತವೇದಸ್ಯಾ ಎಂದು ಹೆಸರು ಬಂದಿದೆ. ಇದನ್ನು ಮುಂದೆ ಪಠಿಸಬೇಕಾಗಿರುವ 'ಇಮಂ ಸ್ತೋಮಂ' ಋ. ಸಂ ೧-೯೪-೧) ಇತ್ಯಾದಿಸೂಕ್ತಗಳ ಪೂರ್ವದಲ್ಲಿಯೇ ಪಠಿಸಬೇಕು. ಇದು ಕ್ಷೇಮಕ್ಕೆ ಕಾರಣವಾದುದರಿಂದ ಈ ಸೂಕ್ತಪಾಠದಿಂದ ಯಜಮಾನನು ಕ್ಷೇಮವನ್ನು ಹೊಂದುತ್ತಾನೆ.

**ಇಮಂ ಸ್ತೋಮಮರ್ಹತೇ ಜಾತವೇದಸ ಇತಿ ಜಾತವೇದಸ್ಯಂ ಸಮಾನೋದರ್ಕಂ ಸಮಾನೋದರ್ಕಂ ವಾ ಏತದಹರೇತಸ್ಯಾಹ್ನೋ ರೂಪಮಹ್ನೋ ರೂಪಮ್, ಇತಿ ॥**

ಸೂಕ್ತಾಂತರಂ ವಿಧತ್ತೇ—ಇಮಮಿತ್ಯಾದಿಕಂ ಷೋಡಶರ್ಚಂ ಜಾತವೇದೋದೇವತಾಕಂ ಸೂಕ್ತಂ ಪಠೇತ್ । ತಸ್ಮಿನ್ಸೂಕ್ತೇ ಬಹುಷ್ವೃಕ್ಷು "ಅಗ್ನೇ ಸಖ್ಯೇ ಮಾ ರಿಷಾಮಾ ವಯಂ ತವ" ಇತ್ಯಸ್ಯ ಚತುರ್ಥಪಾದಸ್ಯ ಪಠಿತತ್ವಾತ್ಸಮಾನೋದರ್ಕತ್ವಮ್ । ಅನ್ಯತ್ಪೂರ್ವವದ್ವ್ಯಾಖ್ಯೇಯಮ್। ದ್ವಿರಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ಪ್ರಥಮಾರಣ್ಯಕಸಮಾಪ್ತ್ಯರ್ಥಃ ಕರ್ಮಕಾಂಡಸಮಾಪ್ತ್ಯರ್ಥಃ (ರ್ಥಶ್ಚ) ॥

ಏಕಋಕ್‌ಪಾಠವಾದಮೇಲೆ ಇನ್ನೊಂದು ಸೂಕ್ತವನ್ನು ವಿಧಿಸುತ್ತಾರೆ. 'ಇಮಂಸ್ತೋಮಂ' ಎಂಬುದು ಹದಿನಾರು ಋಕ್ಕುಗಳುಳ್ಳ ಜಾತವೇದೋದೇವತಾಕವಾದ ಸೂಕ್ತವನ್ನು ಪಠಿಸಬೇಕು. ಈ ಸೂಕ್ತದಲ್ಲಿಯೂ ಅನೇಕ ಋಕ್ಕುಗಳ ನಾಲ್ಕನೇಪಾದವು 'ಅಗ್ನೇ ಸಖ್ಯೇ ಮಾ ರಿಷಾಮ ವಯಂ ತವ' ಎಂದು ಸಮಾನವಾದುದರಿಂದ ಸಮಾನೋದರ್ಕತ್ವಸಾಮ್ಯದಿಂದ ಈ ಏಕಾಹದಲ್ಲಿ ಪಠಿಸಲು ಯುಕ್ತವಾಗಿದೆ. 'ಅಹ್ನೋರೂಪಂ' ಎಂದು ಎರಡು ಬಾರಿ ಹೇಳಿರುವುದು ಅಧ್ಯಯಸಮಾಪ್ತಿಯನ್ನೂ ಪ್ರಥಮಾರಣ್ಯಕಸಮಾಪ್ತಿಯನ್ನೂ ಕರ್ಮಕಾಂಡಸಮಾಪ್ತಿಯನ್ನೂ ಸೂಚಿಸುತ್ತದೆ.

---

*English Translation*

---

1. Tat savitur vrinimaha (Rv. V. 82, 1–3) and adya no deva savitar (Rv. V. 82, 4–6) are the beginning (pratipad) and the next step (anukara) of the Vaisvadeva hymn, taken from the Ekaha ceremonial and therefore proper.

2. On that day much is done now and then which has to be hidden, and has to be atoned for. Atonement is rest, the one-day sacrifice. Therefore at the end of the year the sacrificers rest on this atonement as their rest. He who knows this rests firm, and they also for whom a Hotri priest who knows this, recites this hymn.

3. Then (follows) the hymn addressed to Savitri, tad devasya savitur varyam mahat (Rv. IV. 53). Verily, mahat, great, (in this foot) is the end. This day too is the end. Thus the verse is fit for the day.

4. The hymn katara purva katara parayoh (Rv. I. 185), addressed to Dyavaprithivi, is one in which many verses have the same ending. Verily, this day also (the mahavrata) is one in which many receive the same reward. Thus it is fit for the day.

5. The hymn anasvo gato anabhisur ukthya (Rv. IV, 33) is addressed to the Ribhus.

6. In the first verse the word tri (kakrah) occurs, and trivat is verily the end. This day also is the end (of the sacrifice). Thus the verse is fit for the day.

7. The hymn asya vamasya palitasya hotuh (Rv. I. 164), addressed to the Visvedevas, is multiform. This day also is multiform. Thus the vrrse is fit for the day.

8. He recites the end of it, beginning with ga~rir mimaya (Rv. I. 164, 41).

9. The hymn a no bhadrah kratavo yantu visvatah (Rv. I. 89), addressed to the Visvedevas, forms the Nividdhana, taken from the Ekaha ceremonial, and therefore proper.

10. On that day much is done now and then which has to be hidden, and has to be atoned for, Atonement is rest, the one-day sacrifice. Therefore at the end of the year the sacrificers rest on this atonement as their rest. He who knows this rests firm, and they also for whom a Hotri priest who knows this, recites this hymn,

11. The hymn vaisvanaraya dhishanam ritavridhe (Rv. III. 2) froms the beginning of the Agnimaruta. Dhishana, thought, is verily the end, this day also is the end. Thus it is fit for the day.

12. The hymn prayagyavo maruto bhragadrishtayeh (Rv. N. 55), addressed to the Maruts, is one in which many verses have the same ending. Verily, this day also is one in which many receive the same reward. Thus it is fit for the day.

13. He recites the verse gatavedase sunavama somam (Rv. I, 99,1), addressed to Gatavedas, before the (next following) hymn. That verse addressed to Gatavedas is verily welfare, and leads to welfare. Thus (by reciting it he fares well.

14. The hymn imam stomam arhate gatavedase (Rv. I. 94), addressed to Gatavedas, is one in which many verses have the same ending. Verily, this day also (the mahavrata) is one in which many receive the same reward. Thus it is fit for the day, it is fit for the day.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪ್ರಥಮಾರಣ್ಯಕೇ
ಪಂಚಮಾಧ್ಯಾಯೇ ತೃತೀಯಃ ಖಂಡಃ

ಇತಿ ಪ್ರಥಮಾರಣ್ಯಕೇ ಪಂಚಮೋಽಧ್ಯಾಯಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪ್ರಥಮಾರಣ್ಯಕದ
ಐದನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವು ||

ಇಲ್ಲಿಗೆ ಪ್ರಥಮಾರಣ್ಯಕದ ಐದನೆಯ ಅಧ್ಯಾಯವು ಸಮಾಪ್ತವಾದುದು

ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕ
ಭೂಪಾಲ ಸಾಮ್ರಾಜ್ಯಧುರಂಧರ ಸಾಯಣಾಮಾತ್ಯಾಕೃತೌ ಮಾಧವೀಯೇ
ವೇದಾರ್ಥಪ್ರಕಾಶ ಐತರೇಯಾರಣ್ಯಕಾಂಡೇ ಪ್ರಥಮಾರಣ್ಯಕಂ ಸಮಾಪ್ತಂ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪ್ರಥಮಾರಣ್ಯಕವು
ಸಮಾಪ್ತವಾದುದು



# ಅಥ ದ್ವಿತೀಯಾರಣ್ಯಕೇ ಪ್ರಥಮಾಧ್ಯಾಯೇ ಪ್ರಥಮಃ ಖಂಡಃ

## ದ್ವಿತೀಯಾರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥ ಮಹೇಶ್ವರಂ ॥ ೧ ॥

ಪ್ರಥಮಾರಣ್ಯಕೇ ಕರ್ಮ ಮಹಾವ್ರತಮುದೀರಿತಂ ।
ಸಂವತ್ಸರಾಖ್ಯಸತ್ರಸ್ಯ ಶೇಷಃ ಪೂರ್ಣೋಽತ್ರ ತಾವತಾ ॥ ೨ ॥

ತದೀಯಾ ವಿಕೃತಿಃ ಸರ್ವಾ ಪ್ರೋಕ್ತೈವೇತಿ ಮನೀಷಯಾ ।
ಕರ್ಮಕಾಂಡಂ ಸಮಾಪ್ಯೈವ ವೇದೋ ಜ್ಞಾನಂ ವಿವಕ್ಷತಿ ॥ ೩ ॥

ಆರಣ್ಯಕಂ ದ್ವಿತೀಯಂ ಚ ತೃತೀಯಂ ಚ ತದಾತ್ಮಕಂ ।
ಜ್ಞಾನಕಾಂಡಂ ತತಃ ಸೋಪನಿಷದಿತ್ಯಭಿಧೀಯತೇ ॥ ೪ ॥

ಕರೋಮ್ಯುಪನಿಷದ್ವ್ಯಾಖ್ಯಾಂ ಶಂಕರಾಚಾರ್ಯವರ್ತ್ಮನಾ ॥
ಆಚಾರ್ಯಸ್ಯ ಪ್ರಸಾದೇನ ಸಂಸಾರಾನ್ಮುಚ್ಯತಾಂ ಬುಧಃ ॥

ಉಪನಿಷಚ್ಛಬ್ದೋ ಬ್ರಹ್ಮವಿದ್ಯಾಮಾಚಷ್ಟೇ। ಸಾ ಹಿ ವಿವಿಕ್ತುಂ ಪುರುಷಮುಪೇತ್ಯ ನಿತರಾಮವಿದ್ಯಾಂ ಸೀದತಿ ವಿಶೀರ್ಣಾಂ ಕರೋತಿ, ಯದ್ವಾ ಬ್ರಹ್ಮತಾಂ ಗಮಯತಿ, ಅಥವಾ ರಾಗದ್ವೇಷಾವವಸಾದಯತಿ ಶಿಥಿಲೀಕರೋತಿ । ತತಃ "ಷದಲೃ ವಿಶರಣಗತ್ಯವಸಾದನೇಷು" (ಧಾ-ಗ-ಪ) ಇತಿ ಪ್ರೋಕ್ತಂ ಧಾತೋರರ್ಥತ್ರಯಂ ತಸ್ಮಿನ್ನುಪನಿಷಚ್ಛಬ್ದೇ ವಿದ್ಯತೇ । ತಥಾವಿಧಾಯಾ ಬ್ರಹ್ಮವಿದ್ಯಾಯಾ ಉತ್ಪಾದಕತ್ವಾದ್ಗ್ರಂಥೋಽಪ್ಯುಪನಿಷದಿತ್ಯುಚ್ಯತೇ । ತಸ್ಯೋಪನಿಷದ್ಗ್ರಂಥಸ್ಯ ವಿಷಯಪ್ರಯೋಜನಾಧಿಕಾರಿ ಸಂಬಂಧ ಪ್ರಾಮಾಣ್ಯಪ್ರಮೇಯ ಸ್ವರೂಪಾಣಿ ನಿರೂಪ್ಯಂತೇ । ಅದ್ವೈತಮಾತ್ಮತತ್ತ್ವಂ ವಿಷಯಃ । ಅನನ್ಯಲಭ್ಯಮಾನತ್ವಾತ್ । ನ ಹೀದೃಶಂ ತತ್ತ್ವಮುಪನಿಷದೋಽನ್ಯೇನ ಕೇನಾಪಿ ಪ್ರಮಾಣೇನ ಲಭ್ಯತೇ । ನ ತಾವಚ್ಚಕ್ಷುರಾದಿಜನ್ಯಂ ಬಾಹ್ಯಂ ಪ್ರತ್ಯಕ್ಷಂ ತತ್ತ್ವೇ ಪ್ರಮಾಣಂ । ತತ್ತ್ವಸ್ಯ ರೂಪರಸಾದಿರಹಿತತ್ವಾತ್। ನಾಪ್ಯಹಂ ಮನುಷ್ಯ ಇತಿ ವಾ ಕರ್ತಾ ಭೋಕ್ತಾಹಮಿತಿ ವಾ ಮಾನಸಪ್ರತ್ಯಕ್ಷಂ ತತ್ತ್ವಬೋಧಕಂ । ತಯೋಃ ಕ್ರಮೇಣ ಸ್ಥೂಲಸೂಕ್ಷ್ಮದೇಹವಿಷಯತ್ವಾತ್ । ಯತ್ತ್ವಹಂ ಬ್ರಹ್ಮೇತಿ ಮಾನಸಪ್ರತ್ಯಕ್ಷಂ ತಚ್ಛಾಸ್ತ್ರಜನ್ಯತ್ವಾನ್ನೋಪನಿಷದೋ ವ್ಯತಿರಿಕ್ತಂ ನಾಪ್ಯಸ್ಯಾನುಮಾನಂ ತತ್ತ್ವೇ ಪ್ರವರ್ತತೇ, ತದ್ವ್ಯಾಪ್ತಸ್ಯ ಲಿಂಗಸ್ಯ ಕಸ್ಯಾಪ್ಯಭಾವಾತ್ । ನ ಹಿ ನಿರ್ಧರ್ಮಕೇ ತತ್ತ್ವೇ ಕಿಂಚಿಲ್ಲಿಂಗಂ ಸಂಭವತಿ । ಶಕ್ಯಮಾನಸ್ಯ ಯಸ್ಯ ಕಸ್ಯಾಪಿ ಲಿಂಗಸ್ಯ ಪಕ್ಷಧರ್ಮತ್ವಾಭಾವೇನಾಸಿದ್ಧತ್ವಪ್ರಸಂಗಾತ್ । ಆಗಮೇಽಪಿ ಕರ್ಮಕಾಂಡೇ ತತ್ತ್ವಂ ನ ಪ್ರತೀಯತೇ ।

ತಸ್ಮಾದುಪನಿಷದೇವ ಪರಿಶಿಷ್ಯತೇ । ಅತ ಏವ ಶ್ರುತಿಃ ಪ್ರತ್ಯಕ್ಷಾದಿಗಮ್ಯತ್ವಂ ನಿರಾಕೃತ್ಯೋಪನಿಷ-ದೇಕಗಮ್ಯತ್ವಂ ದರ್ಶಯತಿ—“ ನಾವೇದವಿನ್ಮನುತೇ ತಂ ಬೃಹಂತಮ್ ” (ತೈ-ಬ್ರಾ-೩-೧೨-೯) ಇತಿ । “ ತಂ ತ್ವೌಪನಿಷದಂ ಪೃಚ್ಛಾಮಿ ” (ಬೃ-೩-೬-೨೬) ಇತಿ ಚ । ತಥಾ ಸತ್ಯನನ್ಯಲಭ್ಯ-ಮೌಷಧಾದಿಕಂ ಯಥಾ ಚಿಕಿತ್ಸಾದಿಶಾಸ್ತ್ರಸ್ಯ ವಿಷಯಸ್ತಥಾ ತತ್ತ್ವಮದ್ವೈತಮುಪನಿಷದೋ ವಿಷಯಃ । ಪ್ರಯೋಜನಂ ಚಾಽಽತ್ಮತತ್ತ್ವಾವಿರ್ಭಾವಾದಿಕಮ್ । ತತ್ರ ಸರ್ವಾತ್ಮಕಪರಬ್ರಹ್ಮ ಸ್ವರೂಪಾತ್ಮಾವಿರ್ಭಾವಃ ಪ್ರಥಮಂ ಫಲಮ್ । “ ಆತ್ಮನ್ಯೇವಾಽಽತ್ಮಾನಂಪಶ್ಯತಿ ” ಇತಿ ಶ್ರುತೇಃ । ತತ ಊರ್ಧ್ವಮವಿದ್ಯಾಗ್ರಂಥಿರ್ವಿಕೀರ್ಯತೇ । “ ಏತದ್ಯೋ ವೇದ ನಿಹಿತಂ ಗುಹಾಯಾಂ ಸೋಽವಿದ್ಯಾಗ್ರಂಥಿಂ ವಿಕಿರತೀಹ ನಾಸ್ಯಃ ” (ಮುಂ. ೨-೧-೧೦) ಇತಿ ಶ್ರುತೇಃ । ನಿವೃತ್ತಾಯಾಮಾವ-ರಣಾವಿದ್ಯಾಯಾಮಂತಃಕರಣತಾದಾತ್ಮ್ಯಗ್ರಂಥಿಭೇದಶ್ಚಿದ್ರೂಪಜಡರೂಪತ್ವಾದಿಸಂಶಯಚ್ಛಿದೋ ಭಾವಿಜನ್ಮಹೇತುಕರ್ಮಕ್ಷಯಶ್ಚ ಭವತಿ ॥

ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್‌ದೃಷ್ಟೇ ಪರಾವರೇ ॥

(ಮುಂ-೨-೨-೮. ಇತಿ ಶ್ರುತೇಃ)

ಪ್ರಥಮಾರಣ್ಯಕದಲ್ಲಿ ಮಹಾವ್ರತದ ಕರ್ಮವನ್ನು ನಿರೂಪಿಸಿದ್ದಾಯಿತು. ಈ ಕರ್ಮನಿರೂಪಣದಿಂದ ಸಂವತ್ಸರ ಸತ್ರದ ಸಕಲಾಂಗಗಳನ್ನೂ ಹೇಳಿದಂತಾಯಿತು ॥ ೨ ॥ ಸಂವತ್ಸರ ಪ್ರಕೃತಿಯಾಗದ ವಿಕೃತಿಗಳೆಲ್ಲವೂ ವಿವೃತವಾದುದರಿಂದ ಕರ್ಮಕಾಂಡವನ್ನು ಸಮಾಪ್ತಗೊಳಿಸಿ ವೇದವು ಈಗ ಜ್ಞಾನಕಾಂಡವನ್ನು ಆರಂಭಿಸುತ್ತದೆ. ॥ ೩ ॥ ಎರಡು ಮತ್ತು ಮೂರನೆಯ ಆರಣ್ಯಕದಲ್ಲಿ ಈ ಜ್ಞಾನಕಾಂಡವು ವಿವೃತವಾದುದರಿಂದ ಇದಕ್ಕೆ ಉಪನಿಷತ್ ಎಂದು ಹೆಸರು. ॥ ೪ ॥ ಶ್ರೀ ಶಂಕರಾಚಾರ್ಯರ ವ್ಯಾಖ್ಯಾನ ಮಾರ್ಗವನ್ನನುಸರಿಸಿ ಈ ಉಪನಿಷತ್ತಿನ ಅರ್ಥವಿವರಣವನ್ನು ಮಾಡುತ್ತೇವೆ. ಎಲ್ಲಾ ಮಾನವರು ಆಚಾರ್ಯರ ಅನುಗ್ರಹದಿಂದ ಸಂಸಾರಕ್ಲೇಶದಿಂದ ಮುಕ್ತರಾಗಲಿ ॥ ೫ ॥ ಉಪನಿಷಚ್ಛಬ್ದವು ಬ್ರಹ್ಮವಿದ್ಯೆಯನ್ನು ಬೋಧಿಸುತ್ತದೆ. ಈ ಬ್ರಹ್ಮವಿದ್ಯೆಯು ಜ್ಞಾನಾಭಿಲಾಷಿಯಾದ ಪುರುಷನನ್ನು ಹೊಂದಿ ಅವನ ಅವಿದ್ಯೆಯನ್ನು ಹೋಗಲಾಡಿಸುತ್ತದೆ, ಅಥವಾ ಬ್ರಹ್ಮಸಾಕ್ಷಾತ್ಕಾರವನ್ನುಂಟುಮಾಡುತ್ತದೆ, ಅಥವಾ ಸಂಸಾರಬಂಧಸಾಧಕಗಳಾದ ರಾಗದ್ವೇಷಗಳನ್ನು ಶಿಥಿಲಮಾಡುತ್ತದೆ. ಉಪ, ನಿ ಎರಡು ಉಪಸರ್ಗಗಳಿಂದ ಕೂಡಿದ ‘ ಷದ್ಲೃ-ವಿಶರಣಗತ್ಯವಸಾದನೇಷು ’ ಎಂಬ ಅರ್ಥತ್ರಯವುಳ್ಳ ಧಾತುವಿನಿಂದ ಉಪನಿಷತ್ಪದವು ನಿಷ್ಪನ್ನವಾದುದರಿಂದ ಹಿಂದೆ ಹೇಳಿದ ಮೂರು ಅರ್ಥ ಸಂಗತವಾಗಿದೆ. ಈ ಬ್ರಹ್ಮವಿದ್ಯೆಗೆ ಸಾಧಕವಾದುದರಿಂದ ಗ್ರಂಥಕ್ಕೂ ಉಪನಿಷತ್ ಎಂದು ಹೆಸರು.

ಬ್ರಹ್ಮವಿದ್ಯೆಗೆ ಅದ್ವೈತಾತ್ಮತತ್ತ್ವವೇ ವಿಷಯ. ಈ ತತ್ತ್ವವು ಉಪನಿಷತ್ತಿನಿಂದಲ್ಲದೆ ಇನ್ನು ಯಾವ ಪ್ರಮಾಣದಿಂದಲೂ ಲಭಿಸುವುದಿಲ್ಲ. ಆತ್ಮತತ್ತ್ವಕ್ಕೆ ರೂಪರಸಾದಿಗಳಿಲ್ಲದಿರುವುದರಿಂದ ಚಕ್ಷುರಾದಿ ಬಾಹ್ಯೇಂದ್ರಿಯಗಳಿಗೆ ಗೋಚರವಾಗುವುದಿಲ್ಲ. ‘ ಅಹಂ ಮನುಷ್ಯಃ ’ (ನಾನು ಮನುಷ್ಯನು, ನಾನು ಭೋಗಿಸುವವನು) ‘ ಅಹಂ ಭೋಕ್ತಾ, ಅಹಂ ಕರ್ತಾ ’ ಇತ್ಯಾದಿ ಮಾನಸಪ್ರತ್ಯಕ್ಷದಿಂದಲೂ ಅದು ತಿಳಿಯುವುದಿಲ್ಲ. ಅಲ್ಲಿ ಕ್ರಮವಾಗಿ ಸ್ಥೂಲಸೂಕ್ಷ್ಮ ದೇಹವೇ ವಿಷಯವಾಗಿ ತೋರುವುದು. ‘ ಅಹಂ ಬ್ರಹ್ಮ ’ (ನಾನೇ ಬ್ರಹ್ಮಸ್ವರೂಪನು) ಎಂಬ ಮಾನಸಪ್ರತ್ಯಕ್ಷವುಂಟಾದರೂ ಅದು ಶಾಸ್ತ್ರಜನ್ಯವಾದುದರಿಂದ ಉಪನಿಷತ್ತಿನಿಂದ ಬೇರೆಯಲ್ಲ. ಈ ಆತ್ಮತತ್ತ್ವ ತಿಳಿಸುವುದರಲ್ಲಿ ಅನುಮಾನವೂ ಪ್ರವರ್ತಿಸುವುದಿಲ್ಲ.

ಏಕೆಂದರೆ ಇದರಲ್ಲಿ ಯಾವ ಧರ್ಮವೂ ಇಲ್ಲದಿರುವುದರಿಂದ ಸಾಧಕವಾದ ಯಾವ ಲಿಂಗವೂ (ಹೇತು) ಸಿಗಲಾರದು. ಹೇಗೋ ಕಲ್ಪಿಸಿ ಹೇತುವನ್ನು ಹೇಳುವುದಾದರೆ ಅದಕ್ಕೆ ಪಕ್ಷಧರ್ಮತ್ವವಿಲ್ಲದೆ (ಹೇತುವು ಪಕ್ಷದಲ್ಲಿರಬೇಕು. ಅದೇ ಇಲ್ಲದಿದ್ದರೆ ಅಸಿದ್ಧ ರೂಪ ಹೇತ್ವಾಭಾಸವಾಗುತ್ತದೆ.) ಅಸಿದ್ಧತ್ವ ಹೇತ್ವಾಭಾಸವುಂಟಾಗುತ್ತದೆ. ಕರ್ಮಕಾಂಡದಿಂದಲೂ ಈ ತತ್ವ ಹೊಂದಲು ಸಾಧ್ಯವಿಲ್ಲ. ಆದುದರಿಂದ ಉಪನಿಷದೊಂದೇ ಇದಕ್ಕೆ ಸಾಧನ. ಶ್ರುತಿಯೂ ಕೂಡ ಪ್ರತ್ಯಕ್ಷಾದಿಗಮ್ಯತ್ವವನ್ನು ನಿರಾಕರಿಸಿ ಕೇವಲ ಉಪನಿಷತ್ತುಗಳಿಂದಲೇ ತಿಳಿಯಬೇಕೆಂದು " ನಾವೇದವಿನ್ಮನುತೇ ತಂ ಬೃಹಂತಂ " " ತಂ ತ್ವೌಪನಿಷದಂ ಪೃಚ್ಛಾಮಿ' ಇತ್ಯಾದಿ ವಾಕ್ಯಗಳಿಂದ ಬೋಧಿಸುತ್ತದೆ. ಅನನ್ಯಲಭ್ಯವಾದ (ಇನ್ನಾವುದರಿಂದಲೂ ತಿಳಿಯದ) ಔಷಧಾದಿಗಳು ಹೇಗೆ ಚಿಕಿತ್ಸಾಶಾಸ್ತ್ರಮಾತ್ರದಿಂದ ತಿಳಿಯಲು ಸಾಧ್ಯವೋ ಹಾಗೆ ಅದ್ವೈತಾತ್ಮತತ್ತ್ವವು ಉಪನಿಷದೊಂದರಿಂದಲೇ ಸಾಧ್ಯವಾದುದರಿಂದ ಉಪನಿಷತ್ತುಗಳಿಗೆ ಆತ್ಮತತ್ತ್ವವೇ ವಿಷಯ ॥

ಈ ತತ್ತ್ವಸಾಕ್ಷಾತ್ಕಾರವೇ ಪ್ರಯೋಜನ ಮೊದಲು ಸರ್ವಾತ್ಮಕವಾದ ಪರಬ್ರಹ್ಮಸ್ವರೂಪಸಾಕ್ಷಾತ್ಕಾರವಾಗುತ್ತದೆ. " ಆತ್ಮನ್ಯೇವಾಽಽತ್ಮಾನಂ ಪಶ್ಯತಿ ' ಎಂದು ಶ್ರುತಿಯೂ ತನ್ನನ್ನು ತಾನೇ ನೋಡುತ್ತಾನೆಂದು ತಿಳಿಸುತ್ತದೆ. ಆಮೇಲೆ ಅವಿದ್ಯಾಗ್ರಂಥಿ ನಾಶವಾಗುತ್ತದೆ. " ಏತದ್ಯೋ ವೇದ ನಿಹಿತಂ ಗುಹಾಯಾಂ ಸೋಽವಿದ್ಯಾಗ್ರಂಥಿಂ ವಿಕಿರತೀಹ ನಾನ್ಯಃ " (ಮುಂ-೨-೧-೧೦) (ಆತ್ಮೈಕ್ಯಾನುಭವವನ್ನು ಪಡೆದವನು ಅವಿದ್ಯಾಗ್ರಂಥಿಯನ್ನು ಕಳೆದುಕೊಳ್ಳುತ್ತಾನೆ.) ಎಂದು ಶ್ರುತಿಯೂ ಬೋಧಿಸುತ್ತದೆ. ಆವರಣ ಅವಿದ್ಯೆಯು ನಷ್ಟವಾದಮೇಲೆ ಅಂತಃಕರಣತಾದಾತ್ಮ್ಯಜ್ಞಾನವೂ ಕರಗಿ, ಆತ್ಮನು ಚಿದ್ರೂಪ, ಜಡರೂಪ ಇತ್ಯಾದಿ ಸಂಶಯಗಳೆಲ್ಲವೂ ದೂರವಾಗುತ್ತವೆ. ಮುಂದಿನ ಜನ್ಮಕ್ಕೆ ಕಾರಣವಾದ ಕರ್ಮವೂ ಕ್ಷೀಣವಾಗುತ್ತದೆ. ' ಆತ್ಮಸಾಕ್ಷಾತ್ಕಾರವಾದೊಡನೆಯೇ ಹೃದಯಗ್ರಂಥಿ ನಾಶವಾಗಿ, ಎಲ್ಲಾ ಸಂಶಯಗಳೂ ದೂರವಾಗಿ ಅವನ ಎಲ್ಲಾ ಕರ್ಮಗಳೂ ನಷ್ಟವಾಗುತ್ತವೆ '' (ಮುಂ-೨-೨-೮) ಎಂದು ಮುಂಡಕದಲ್ಲಿ ವಿವರಿಸಿದೆ.

**ಇಹ ಲೋಕೇಽಪಿ ಹರ್ಷಶೋಕಪರಿತ್ಯಾಗೋ ಭವತಿ । " ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ " (ಕಾ-೨-೧-೧೨) ಇತಿ ಶ್ರುತೇಃ । ತಥಾ ಕಾಮ್ಯಮಾನಸ್ಯ ಸತ್ಯತತ್ತ್ವಸ್ಯ ಪ್ರಾಪ್ತತ್ವಾನ್ನಿಯಮಿತಾಂತಃಕರಣತ್ವೇನ ವಿಷಯದರ್ಶನಾಭಾವಾಚ್ಚ ಕಾಮವಿಲಯೋ ಭವತಿ । " ಪರ್ಯಾಪ್ತಕಾಮಸ್ಯ ಕೃತಾತ್ಮನಶ್ಚ ಇಹೈವ ಸರ್ವೇ ಪ್ರವಿಲೀಯಂತಿ ಕಾಮಾಃ " (ಮು-೩-೨-೨) ಇತಿ ಶ್ರುತೇಃ । ತಥಾ ತಸ್ಯ ದ್ಯೂತಾದಿಸ್ಥಾನೀನೀ ಕ್ರೀಡಾಽಪ್ಯಾತ್ಮನ್ಯೇವ। ಸಂಧ್ಯಾವಂದನಾಗ್ನಿಹೋತ್ರಾದಿ ರೂಪಾ ಕ್ರಿಯಾಪ್ಯಾತ್ಮನ್ಯೇವ । " ಆತ್ಮಕ್ರೀಡ ಆತ್ಮರತಿಕ್ರಿಯಾವಾನೇಷ ಬ್ರಹ್ಮವಿದಾಂ ವರಿಷ್ಠಃ " (ಮುಂ-೩-೧-೪) ಇತಿ ಶ್ರುತೇಃ । ಈದೃಶಸ್ಯ ಲೌಕಿಕವೈದಿಕಕರ್ಮಕರ್ತವ್ಯಾಭಾವಾದಯಂ ಕೃತಕೃತ್ಯಃ । " ಯಸ್ತ್ವಪೂರ್ಣಾನಂದೈಕಬೋಧಂ ತದ್‌ಬ್ರಹ್ಮಾಹಮಸ್ಮೀತಿ ಕೃತಕೃತ್ಯೋ ಭವತಿ " (ಪರಮಹಂ-೩) ಇತಿ ಶ್ರುತೇಃ ॥**

" ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ '' (ಕಾ-೨-೧-೧೨) ಎಂದು ಕಠೋಪನಿಷತ್ತಿನಲ್ಲಿ ಹೇಳಿದಂತೆ ಆತ್ಮಜ್ಞಾನಿಗೆ ಈ ಲೋಕದಲ್ಲಿಯೂ ಯಾವ ಸುಖ ದುಃಖಗಳೂ ಇರುವುದಿಲ್ಲ. ಹೊಂದಬೇಕಾದ ಆತ್ಮತತ್ತ್ವವನ್ನು ಹೊಂದಿದಮೇಲೆ, ಅಂತಃಕರಣ (ಚಿತ್ತ) ನಿಯಮಿತವಾದುದರಿಂದ ಯಾವ ವಿಷಯ ಪ್ರತ್ಯಕ್ಷವೂ ಇಲ್ಲದಿರುವುದರಿಂದ ಸಕಲಕಾಮನಾವಿಲಯವಾಗುತ್ತದೆ. (ಹೊಂದಬೇಕೆಂಬ ಯಾವ ಆಸೆಯೂ ಇರುವುದಿಲ್ಲ.) ಎಲ್ಲಾ ಕಾಮನೆಯನ್ನೊಳಗೊಂಡ ಆತ್ಮಕಾಮನೆಯನ್ನು ಪಡೆದಮೇಲೆ ಕ್ಷುದ್ರಕಾಮನೆಗಳೆಲ್ಲವೂ ನಷ್ಟವಾಗುತ್ತವೆ " ಎಂದು ಶ್ರುತಿಯೂ

ಬೋಧಿಸುತ್ತದೆ. (ಮುಂ-೩-೨-೨). ಆತ್ಮಸಾಕ್ಷಾತ್ಕಾರಪಡೆದವನಿಗೆ ದ್ಯೂತಾದಿಗಳಂತೆ ಕ್ರೀಡೆಯೂ ಆತ್ಮನಲ್ಲಿಯೇ. ಸಂಧ್ಯಾವಂದನ, ಅಗ್ನಿಹೋತ್ರಾದಿ ಕ್ರಿಯೆಯೂ ಆತ್ಮನಲ್ಲಿಯೇ. ಲೌಕಿಕವೈದಿಕಗಳಾದ ಯಾವ ಕರ್ಮಗಳನ್ನೂ ಮಾಡಬೇಕಾಗಿಲ್ಲವಾದುದರಿಂದ ಅವನೇ ಕೃತಕೃತ್ಯನು. ಇದನ್ನೇ ' ಯತ್ಪೂರ್ಣಾನಂದೈಕಬೋಧಂ ತದ್ಬ್ರಹ್ಮಾಹಮಸ್ಮೀತಿ ಕೃತಕೃತ್ಯೋ ಭವತಿ ' ಎಂದು ಶ್ರುತಿಯು ತಿಳಿಸುತ್ತದೆ. " ಜ್ಞಾನಾಮೃತಪಾನದಿಂದ ತೃಪ್ತಿಹೊಂದಿದ ಕೃತಕೃತ್ಯನಾದ ಯೋಗಿಗೆ ಮಾಡಬೇಕಾದ ಕಾರ್ಯ ಯಾವುದೂ ಇಲ್ಲ. ಇರುವುದಾದರೂ ಮಾನಸಿಕವಾದ ವ್ಯಾಪಾರ ಒಂದೇ " ಎಂದು ಸ್ಮೃತಿಯಲ್ಲಿಯೂ ಹೇಳಿದೆ.

ಜ್ಞಾನಾಮೃತೇನ ತೃಪ್ತಸ್ಯ ಕೃತಕೃತ್ಯಸ್ಯ ಯೋಗಿನಃ ।
ನೈವಾಸ್ತಿ ಕಿಂಚಿತ್ಕರ್ತವ್ಯಮಸ್ತಿ ಚೇನ್ಮಾನಸಂ ಚ ತತ್ " ಇತಿ ಸ್ಮೃತೇಶ್ಚ ॥

ಏತಾದೃಶಸ್ಯ ಯೋಗಿನಃ ಸರ್ವದಾ ಮನಸಿ ವಿದ್ಯಾನಿಮಿತ್ತ ಆನಂದ ಆವಿರ್ಭವತಿ । "ರಸೋ ವೈ ಸಃ । ರಸꣳಹ್ಯೇವಾಯಂ ಲಬ್ಧ್ವಾಽಽನಂದೀ ಭವತಿ ।" (ತೈ-ಉ-೨-೭-೧) ಇತಿ ಶ್ರುತೇಃ । ಸೇಯಮುಪನಿಷದಃ ಪ್ರಯೋಜನಪರಂಪರಾ ದ್ರಷ್ಟವ್ಯಾ। ಸಂಬಂಧಶ್ಚ ಕರ್ಮಕಾಂಡೇನ ಸಹ ಸಾಧ್ಯಸಾಧನಭಾವಃ। ಉಪನಿಷದಿ ಸಾಧ್ಯಂ ತತ್ತ್ವಜ್ಞಾನಂ ಪ್ರತಿಪಾದ್ಯತೇ । ಕರ್ಮಕಾಂಡೇಷು ಚಿತ್ತಸಂಸ್ಕಾರಾಯ ಪಾಪಕ್ಷಯೇಣ ವಾ ವಿವಿದಿಷೋತ್ಪಾದನೇನ ವಾ ತಾನಿ ಸಾಧನಾನ್ಯಗ್ನಿಹೋತ್ರಾದಿ ಕರ್ಮಾಣಿ ಪ್ರತಿಪಾದಿತಾನಿ । ಅತ್ರೈತಂ ಯಥೋಕ್ತಸಂಬಂಧಮಸಹಮಾನಾಃ ಪ್ರತಿವಾದಿನೋ ಬಹುಧೋತ್ತಿಷ್ಠಂತಿ । ತೇಷಾಂ ಮಧ್ಯೇ ಕೇಚಿದ್ಬ್ರಹ್ಮಜ್ಞಾನನೈರಪೇಕ್ಷ್ಯೇಣೈವ ಮೋಕ್ಷಂ ವರ್ಣಯಂತಿ। ನಿಷಿದ್ಧಕಾಮ್ಯಯೋಃ ಕರ್ಮಣೋಃ ಸರ್ವಾತ್ಮನಾ ಪರಿತ್ಯಾಗೇನ ಭಾವಿನೋತ್ತಮಾಧಮಜನ್ಮನೋರಸಂಭವಾನ್ನಿತ್ಯನೈಮಿತ್ತಿಕಾನುಷ್ಠಾನೇನ ಪ್ರತ್ಯವಾಯಾನುದಯಾತ್ಪ್ರಾರಬ್ಧಕರ್ಮಣೋ ಭೋಗೇನ ವಿನಾಶಾದ್ದೇಹಾಂತೇ ಮುಕ್ತಿರೇವ ಪರಿಶಿಷ್ಯತ ಇತಿ । ತದಯುಕ್ತಮ್ ॥ ಅನಂತಯೋರ್ನಿಷಿದ್ಧಕಾಮ್ಯಯೋಃ ಸರ್ವಾತ್ಮನಾ ಪರಿತ್ಯಾಗಾಸಂಭವಾನ್ನಿತ್ಯನೈಮಿತ್ತಿಕಯೋರಪಿ ಫಲಸದ್ಭಾವ ಶಾಸ್ತ್ರಾಜ್ಜನ್ಮಾಂತರಕೃತಾನಾಂ ಚ ಬಹುಜನ್ಮಹೇತೂನಾಂ ಸಂಭವಾನ್ನಾಸ್ತಿ ಜ್ಞಾನಮಂತರೇಣ ಮುಕ್ತಿಃ । ಅನ್ಯೇ ತು ಜ್ಞಾನಪ್ರಾಧಾನ್ಯೇನ ವಾ ಕರ್ಮಪ್ರಾಧಾನ್ಯೇನ ವೋಭಯಪ್ರಾಧಾನ್ಯೇನ ವಾ ಜ್ಞಾನಕರ್ಮಣೋಃ ಸಮುಚ್ಚಯೋ ಮುಕ್ತಿಹೇತುರಿತ್ಯಾಹುಃ । ತದಯುಕ್ತಂ ಪರಸ್ಪರವಿರುದ್ಧಯೋಃ ಸಮುಚ್ಚಯಾಸಂಭವಾತ್ । ನಿರ್ವಿಕಾರಾತ್ಮಬುದ್ಧಿರ್ಜ್ಞಾನಂ, ಅಹಂ ಕರ್ತಾ ಮಮೇದಂ ಕುಲಮಿತಿ ಭ್ರಾಂತ್ಯಾ ಕರ್ಮಪ್ರವೃತ್ತಿರಿತಿ ತಯೋರ್ವಿರೋಧಃ ಅಪರೇ ಪುನರ್ಜ್ಞಾನಸ್ಯೈವ ಮುಕ್ತಿಹೇತುತ್ವೇಽಪಿ ಸೋಪಾನಪಂಕ್ತ್ಯಾ ಹರ್ಮ್ಯಾಧಿರೋಹಣನ್ಯಾಯೇನ ಸಂಧ್ಯಾವಂದನಮಾರಭ್ಯ ಸಹಸ್ರಸಂವತ್ಸರಸತ್ರಾಂತೇಷು ವೈದಿಕೇಷು ಕರ್ಮಸ್ವನುಷ್ಠಿತೇಷು ಪಶ್ಚಾತ್ ಜ್ಞಾನಾಧಿಕಾರಮಿಚ್ಛಂತಿ । ತದಪ್ಯಯುಕ್ತಮ್ । ಅಲ್ಪಾಯುಷಾಂ ಮನುಷ್ಯಾಣಾಂ ತದಸಂಭವಾತ್ । ಅಪರೇ ಪುನಃ ಪ್ರಪಂಚಪ್ರವಿಲಾಪನೇನ ಕರ್ಮಕಾಂಡಸ್ಯೋಪಯೋಗಮಿಚ್ಛಂತಿ, ಸ್ವರ್ಗಕಾಮೋ ಯಜೇತೇತ್ಯುಕ್ತೇ ಸತ್ಯರ್ಥಾದ್ದೇಹಾತ್ಮಭಾವಸ್ಯ ಪ್ರವಿಲಾಪ್ಯಮಾನತ್ವಾದಿತಿ ತದಸತ್ । ಬಕಬಂಧಪ್ರಯಾಸಪ್ರಸಂಗಾತ್। ಯಥಾ ಬಕಬಂಧನಕಾಮಸ್ತತ್ಸಮೀಪೇ ಗತ್ವಾ ತದಾನೀಮಬದ್ಧ್ವಾ ಶಿರಸಿ ನವನೀತಂ ಪ್ರಕ್ಷಿಪ್ಯಾಽಽತಪೇನ ವಿಲೀನಸ್ಯ ನವನೀತಸ್ಯ ಚಕ್ಷುಪ್ರವೇಶೇ ಸತಿ ನಿಮೀಲಿತಚಕ್ಷುಷ್ಕಂ ಬಕಂ ಪಶ್ಚಾತ್ ಬಧ್ನಾತಿ ತಥಾಽಯಂ ಪ್ರಪಂಚಪ್ರವಿಲಾಪವಾದೀ ಸಾಕ್ಷಾ-

ದ್ವಿಲಾಪಕಂ—"ಆಸ್ಥೂಲಮನಣು" (ಬೃ. ೩-೮.೮) ಇತ್ಯಾದಿಕಮುಪನಿಷದ್ವಾಕಮುಪೇಕ್ಷ್ಯ ವಿಲಾಪಸ್ಯಾನಭಿಧಾಯಕೇನ ಸ್ವರ್ಗಕಾಮಪದೇನಾರ್ಥಾದ್ವಿಲಾಪಯತೀತಿ ವ್ಯರ್ಥೋಽಯಂ ಪ್ರಯಾಸಃ । ಏಕೇ ತು ವೇದೋಕ್ತಕೃತ್ಸ್ನಕರ್ಮಭಿಸ್ತತ್ತತ್ಫಲೇಷು ಭುಕ್ತೇಷು ಕಾಮೇ ಪ್ರಲೀನೇ ಸತಿ ಪಶ್ಚಾ ಜ್ಞಾನಾಧಿಕಾರ ಇತಿ ವರ್ಣಯಂತಿ । ತದಪ್ಯಯುಕ್ತಮ್ । ಭೋಗೇನ ಕಾಮಲಯಸ್ಯಾಸಂಭವಾತ್ ॥

ಈ ರೀತಿಯಾದ ಯೋಗಿಗೆ ಯಾವಾಗಲೂ ವಿದ್ಯಾನಿಮಿತ್ತವಾದ ಆನಂದವು ಮನಸ್ಸಿನಲ್ಲಿ ನೆಲೆಯಾಗಿರುತ್ತದೆ. "ರಸವೇ ಆತ್ಮತತ್ವವು. ಇದನ್ನು ಹೊಂದಿ ಸದಾ ಆನಂದತುಂದಿಲನಾಗಿರುತ್ತಾನೆ" ಎಂಬ (ತೈ-ಉ-೨-೭-೧) ಶ್ರುತಿಯು ಬೋಧಿಸುತ್ತದೆ. ಹೀಗೆ ಉಪನಿಷತ್ತುಗಳ ಪ್ರಯೋಜನಪರಂಪರೆಯನ್ನು ತಿಳಿಯಬೇಕು. ಕರ್ಮಕಾಂಡಕ್ಕೂ ಇದಕ್ಕೂ ಸಾಧ್ಯಸಾಧನಭಾವಸಂಬಂಧ ತಿಳಿಯಬೇಕು. ಉಪನಿಷತ್ತುಗಳಲ್ಲಿ ಸಾಧ್ಯವಾದ(ಅವಶ್ಯಹೊಂದಬೇಕಾದ) ಆತ್ಮತತ್ತ್ವ ಜ್ಞಾನವು ಪ್ರತಿಪಾದಿತವಾಗಿದೆ. ಕರ್ಮಕಾಂಡದಲ್ಲಿ ಅಂತಃಕರಣಶುದ್ಧಿಗೋಸ್ಕರ ಪಾಪಕ್ಷಯರೂಪದಿಂದ ಅಥವಾ ವಿವಿದಿಷಾ (ಮೋಕ್ಷೇಚ್ಛಾ) ಅಂದರೆ ಆತ್ಮತತ್ತ್ವವನ್ನು ಪಡೆಯಲೇಬೇಕೆಂಬ ಇಚ್ಛೆಯನ್ನು ಹುಟ್ಟಿಸುವುದರಿಂದಾಗಲೀ ಸಾಧನಗಳಾದ ಅಗ್ನಿಹೋತ್ರಾದಿ ಕರ್ಮಗಳು ಬೋಧಿತವಾಗಿವೆ. ಈ ರೀತಿಯಾದ ಸಂಬಂಧವನ್ನು ಅಂಗೀಕರಿಸದೆ ಕೆಲವು ಪ್ರತಿವಾದಿಗಳು ನಾನಾರೀತಿಯಾಗಿ ಆಕ್ಷೇಪಿಸುತ್ತಾರೆ.

ಕೆಲವರು ಬ್ರಹ್ಮಜ್ಞಾನವಿಲ್ಲದೆ ಮೋಕ್ಷವನ್ನು ವರ್ಣಿಸುತ್ತಾರೆ. ನಿಷಿದ್ಧ, ಕಾಮ್ಯಕರ್ಮಗಳನ್ನು ಸಂಪೂರ್ಣವಾಗಿ ತ್ಯಜಿಸಿದರೆ ಆಗ ಮುಂದೆ ಉತ್ತಮ ಅಥವಾ ಅಧಮಜನ್ಮ ಸಂಭವಿಸುವುದಿಲ್ಲ. ನಿತ್ಯನೈಮಿತ್ತಿಕಕರ್ಮಾನುಷ್ಠಾನದಿಂದ ಪ್ರತ್ಯವಾಯ(ದೋಷ, ಪುಣ್ಯಪಾಪ) ಉಂಟಾಗದಿರುವುದರಿಂದಲೂ, ಅನುಭವಿಸುವುದರಿಂದಲೇ ಪ್ರಾರಬ್ಧಕರ್ಮಗಳು ವಿನಾಶವಾಗುವುದರಿಂದ ಈದೇಹಾವಸಾನವಾದೊಡನೇ ಮೋಕ್ಷವಾಗುತ್ತದೆಂದು ಅವರ ಅಭಿಪ್ರಾಯ. ಇದು ಸರಿಯಲ್ಲ. ನಿಷಿದ್ಧ ಕಾಮ್ಯಗಳು ಅನಂತವಾದುದರಿಂದ ಅವುಗಳನ್ನು ಸಂಪೂರ್ಣವಾಗಿ ಬಿಡುವುದು ಅಸಾಧ್ಯವೇ. ನಿತ್ಯನೈಮಿತ್ತಿಕರ್ಮಗಳಿಗೂ ಫಲವಿಲ್ಲವೆಂದು ತಪ್ಪು ಶಾಸ್ತ್ರದಲ್ಲಿ ಅವುಗಳಿಗೆ ಫಲಹೇಳಿರುವುದರಿಂದಲೂ, ಜನ್ಮಾಂತರಕೃತಕರ್ಮಗಳು ಅನಂತವಾದುದರಿಂದ ಬಹುಜನ್ಮ ಹೊಂದಲೇಬೇಕಾಗುತ್ತದೆ. ಆದುದರಿಂದ ಜ್ಞಾನವಿಲ್ಲದೆ ಯಾವುದರಿಂದಲೂ ಮೋಕ್ಷವಿಲ್ಲ.

ಇನ್ನು ಕೆಲವರು ಜ್ಞಾನವೇ ಪ್ರಧಾನವಾಗಲಿ, ಅಥವಾ ಕರ್ಮವೇ ಪ್ರಧಾನವಾಗಲಿ, ಅಥವಾ ಇವೆರಡೂ ಸಮಪ್ರಧಾನವಾಗಲಿ, ಆದರೂ ಇವೆರಡು ಸಮುಚ್ಚಿತವಾಗಿಯೇ (ಸೇರಿಯೇ) ಮುಕ್ತಿಗೆ ಕಾರಣವಾಗುತ್ತದೆಂದು ಹೇಳುತ್ತಾರೆ. ಇದೂ ಸಮಂಜಸವಲ್ಲ. ಜ್ಞಾನಕರ್ಮಗಳು ಪರಸ್ಪರವಿರುದ್ಧಗಳಾದುದರಿಂದ ಇವುಗಳಿಗೆ ಸಮುಚ್ಚಯವೆಂದೂ ಸಂಭವಿಸುವುದಿಲ್ಲ. ಯಾವ ವಿಕಾರವೂ ಇಲ್ಲದ ಆತ್ಮಬುದ್ಧಿಯೇ ಜ್ಞಾನವು, ನಾನೇ ಮಾಡುವವನು, ಇದು ನನ್ನ ಸಂಸಾರವೆಂಬ ಭ್ರಾಂತಿಜ್ಞಾನದಿಂದ ಮಾಡುವುದೇ ಕರ್ಮ. ಹೀಗೆ ವಿರೋಧವಿರುವುದರಿಂದ ಅವೆರಡೂ ಒಂದೆಡೆ ಸೇರುವುದಿಲ್ಲ.

ಮತ್ತೆ ಕೆಲವರು ಜ್ಞಾನವೇ ಮೋಕ್ಷಸಾಧನವಾಗಲಿ ಆದರೆ ಕ್ರಮವಾಗಿ ಸೋಪಾನಗಳ (ಮೆಟ್ಟಲು) ಮೂಲಕ ಮಹಡಿಯನ್ನು ಹತ್ತುವಂತೆ. ಸಂಧ್ಯಾವಂದನೆಯನ್ನಾರಂಭಿಸಿ ಸಹಸ್ರಸಂವತ್ಸರಸತ್ರ (ಸಾವಿರ ವರ್ಷಗಳವರೆಗೆ ಮಾಡುವ ಯಜ್ಞವಿಶೇಷ) ದವರೆಗೆ ಯಾವ ವೈದಿಕಕರ್ಮಗಳು ವಿಹಿತವಾಗಿವೆಯೋ ಅವುಗಳನ್ನೆಲ್ಲಾ ಅನುಷ್ಠಾನ ಮಾಡಿದ ಮೇಲೆಯೇ ಜ್ಞಾನಕ್ಕೆ ಅಧಿಕಾರವೆಂದು ವರ್ಣಿಸುತ್ತಾರೆ. ಇದೂ ಅಸಂಭವ. ಅತ್ಯಲ್ಪವಾದ ಆಯುಸ್ಸುಳ್ಳ ಮನುಷ್ಯನು ಇವೆಲ್ಲವನ್ನೂ ಅನುಷ್ಠಾನ ಮಾಡುವುದಾದರೂ ಹೇಗೆ ?

ಕೆಲವರು ಪ್ರಪಂಚ ಪ್ರವಿಲಾಪನವೇ ಕರ್ಮಕಾಂಡಕ್ಕೆ ಪ್ರಯೋಜನ. ''ಸ್ವರ್ಗ ಕಾಮೋ ಯಜೇತ'' ಎಂದರೆ ಅರ್ಥಾತ್ ದೇಹಾತ್ಮಭಾವ ಅಂದರೆ ದೇಹವೇ ತಾನು ಎಂಬ ಜ್ಞಾನವು ನಷ್ಟವಾಗುತ್ತದೆ ಎಂದು ವಿವರಿಸುತ್ತಾರೆ. ಇದೂ ಯುಕ್ತವಲ್ಲ. ಬಕಬಂಧನ ಪ್ರಯಾಸದಂತೆ ಇದು ವ್ಯರ್ಥ. ಬಕಬಂಧನ ಪ್ರಯಾಸವೆಂದರೆ ಒಬ್ಬನು ಒಂದು ಬಕವನ್ನು (ಕೊಕ್ಕರೆ) ಹಿಡಿಯಲು ಅದರ ಹತ್ತಿರ ಹೋಗಿಯೂ ಹಿಡಿಯದೆ ಅದರ ತಲೆಯ ಮೇಲೆ ಬೆಣ್ಣೆಯನ್ನಿಟ್ಟು ಬಿಸಲಿನಿಂದ ಅದು ಕರಗಿ ಬಕದ ಕಣ್ಣಿನಮೇಲೆ ಸುರಿದಾಗ ಕಣ್ಣುಮುಚ್ಚಿದ ಆ ಬಕವನ್ನು ಆಮೇಲೆ ಹಿಡಿಯುವುದು. ಅದರಂತೆ ಸಾಕ್ಷಾದ್ವಿಲಾಪಕ ವಾದ 'ಅಸ್ಥೂಲಮನಣು' (ಬೃ. ೩-೮-೮) ಇತ್ಯಾದಿ ಉಪನಿಷದ್ವಾಕ್ಯಗಳನ್ನು ಅಲ್ಲಗಳೆದು ವಿಲಾಪನವನ್ನೇ ಹೇಳಿದ ಸ್ವರ್ಗ ಕಾಮಾದಿಪದಗಳಿಂದ ಅರ್ಥಾತ್ ಹೇಳಿದಂತಾಯಿತೆಂದು ಹೇಳುವುದು ವ್ಯರ್ಥವೇ.

ತ ತಥಾ ಚ ಸ್ಮರ್ಯತೇ

" ನ ಜಾತು ಕಾಮಃ ಕಾಮಾನಾಮುಪಭೋಗೇನ ಶ್ಯಾಮ್ಯತಿ ॥
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ " ಇತಿ ॥

ಭಾ-ಆದಿ-ಅ-೭೫-ಶ್ಲೋ-೧೨ ॥

ತಸ್ಮಾನ್ಮತಾಂತರಾಣಾಮಯುಕ್ತತ್ವಾತ್ ಜ್ಞಾನಕರ್ಮಣೋಃ ಸಾಧ್ಯಸಾಧನರೂಪತ್ವಾತ್ತತ್ಪ್ರ. ತಿಪಾದ್ಯಪ್ರತಿಪಾದಕತ್ವಮೇವ ತಯೋಃ ಸಂಬಂಧಃ । ಅಧಿಕಾರೀ ತತ್ರ ಜಿಜ್ಞಾಸುರೇವ ನ ತು ಚಿಕೀ-ರ್ಷುಃ ಯಶ್ಚ ಚಿಕೀರ್ಷೋರಧಿಕಾರಂ ಮನ್ಯತೇ ಸ ಪ್ರಷ್ಟವ್ಯಃ । ವೇದಾಂತಾಧಿಕಾರೀ ಯತ್ಕಾರ್ಯಂ ಚಿಕೀರ್ಷತಿ ತತ್ಕಿಂ ಕಾರ್ಯಸಾಮಾನ್ಯಂ ಕಿಂವಾ ಕಾರ್ಯವಿಶೇಷಃ । ನಾಽಽದ್ಯಃ । ಕಾರ್ಯಸಾಮಾನ್ಯಸ್ಯ ವೇದಾಂತೇಷ್ವಪ್ರತೀತೇಃ । ಸತ್ಯಜ್ಞಾನಾದಿವಾಕ್ಯೇಷು ಕುರ್ಯಾದಿತಿಪದಸ್ಯಾದರ್ಶನಾತ್ । ವಿಶೇಷ-ಪಕ್ಷೇಽಪಿ ಕೋಽಸೌ ಕರ್ತವ್ಯೋ ವಿಶೇಷಃ ಕಿಂ ವಾಸನಾನಾಂ ನಿರೋಧಃ ಕಿಂವಾ ಮನಸೋ ನಿರೋಧ ಉತ ಪ್ರತಿಪತ್ತಿರಾಹೋಸ್ವಿತ್ಪ್ರಸಂಖ್ಯಾನಮ್ । ಸರ್ವಥಾಽಪಿ ವೇದಾಂತಾನಾಂ ಕಾರ್ಯಪರತ್ವಂ ನೋಪಪದ್ಯತೇ । ಸತ್ಯಜ್ಞಾನಾದಿವಾಕ್ಯೇಷು ಯಥೋಕ್ತವಾಸನಾನಿರೋಧಾದಿವಿಧೇರಪ್ರತಿಭಾಸಾತ್ । ಅನರ್ಥನಿವಾರಕತ್ವೇನ ಸುಷುಪ್ತ್ಯಾದೌ ದೃಷ್ಟತ್ವಾದ್ವಾಸನಾಮನೋನಿರೋಧಾವಪೇಕ್ಷಿತಾ-ವಿತಿಚೇತ್ ಏವಂ ತರ್ಹಿ ಸುಷುಪ್ತ್ಯಾದಿದೃಷ್ಟಾಂತೇನಾನ್ವಯವ್ಯತಿರೇಕಸಿದ್ಧತ್ವಾದೇತೌ ಶಾಸ್ತ್ರೇಣ ನ ವಿಧಾತವ್ಯೌ । ನಾಪಿ ತೃತೀಯಃ ಪಕ್ಷಃ । ಕರ್ತುಮಕರ್ತುಮನ್ಯಥಾ ವಾ ಕರ್ತುಮಶಕ್ಯತ್ವೇನಾಪುರುಷತಂತ್ರಾಯಾಃ ಪ್ರಮಾಣೈಕಜನ್ಯಾಯಾಃ ಪ್ರತಿಪತ್ತೇರ್ವಿಧ್ಯಸಂಭ-ವಾತ್ । ನಾಪಿ ಚತುರ್ಥಃ । ಶಬ್ದಯುಕ್ತ್ಯಾವೃತ್ತಿರೂಪಸ್ಯ ಪ್ರಸಂಖ್ಯಾನಸ್ಯ ಸಾಕ್ಷಾತ್ಕಾರಹೇತುತ್ವಾ ಭಾವಾತ್ । ಯಥಾಪ್ರಥಮಪ್ರವೃತ್ತೇ ಶಬ್ದಯುಕ್ತೀ ಸಾಕ್ಷಾತ್ಕಾರಂ ನ ಜನಯತ ಏವಮಸಕೃದಾ-ವೃತ್ತೇರಪಿ । ತಸ್ಮಾತ್ಕಾರ್ಯಸಾಮಾನ್ಯಸ್ಯ ಕಾರ್ಯವಿಶೇಷಸ್ಯ ವಾ ವೇದಾಂತೈರಪ್ರತಿಪಾದ್ಯತ್ವಾನ್ನ ಚಿಕೀರ್ಷೋರತ್ರಾಧಿಕಾರಃ - ಕಿಂ ತು ಸಿದ್ಧಬ್ರಹ್ಮತತ್ತ್ವಸ್ಯೈವ ಪ್ರತಿಪಾದ್ಯತ್ವಾತ್ ಜಿಜ್ಞಾಸೋರೇವಾ ತ್ರಾಧಿಕಾರ ಇತಿ ಸ್ಥಿರಮ್ । ನನು ಜಿಜ್ಞಾಸೋರಪಿ ವೇದಾಂತಾಃ ಪ್ರಮಿತಂ ನ ಜನಯಂತಿ ತತ್ಪ್ರಾ-ಮಾಣ್ಯಸ್ಯೈವಾಭಾವಾದಿತಿ ಚೇತ್ । ತತ್ರ ವಕ್ತವ್ಯಮ್ / ಕಿಂ ಸಾಧಕಾಭಾವಾತ್ಪ್ರಾಮಾಣ್ಯಾಭಾವಃ ಆಹೋಸ್ವಿದಪ್ರಾಮಾಣ್ಯಹೇತುಸದ್ಭಾವಾತ್ । ನಾಽಽದ್ಯಃ । ಸ್ವತಃ ಪ್ರಾಮಾಣ್ಯಾಂಗೀಕಾರೇಣ ಸಾಧಕಾನಪೇಕ್ಷತ್ವಾತ್ । ದ್ವಿತೀಯೇಽಪಿ ಕಿಮಬೋಧಕತ್ವಾದಪ್ರಾಮಾಣ್ಯಮುತ ಬಾಧಿತತ್ವಾದಥ

ನಾಽನುವಾದಕತ್ವಾತ್ । ನಾಽಽದ್ಯಃ । " ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ " (ಐ-ಆ-೨-ಅ ೧-ಖಂ-೧) ಇತ್ಯಾದ್ಯವಾಂತರವಾಕ್ಯಾನಾಂ ಚ ಶ್ರವಣಮಾತ್ರೇಣ ಬೋಧೋಪಲಂಭಾತ್ । ಕರ್ಮ-ಕಾಂಡೋಕ್ತ ಜ್ಯೋತಿಷ್ಟೋಮಾದಿವಾಕ್ಯವತ್ಪದಾರ್ಥಾನಾಂ ಸಂಸರ್ಗ ಏವಾತ್ರಾವಬುಧ್ಯತೇ ನತ್ವ-ಖಂಡಾರ್ಥ ಇತಿ ಚೇನ್ನೈವಮ್। " ಸ ಏಷ ನೇತಿ ನೇತ್ಯಾತ್ಮಾ" (ಬೃಹದಾ) ಇತ್ಯಾದಿತ್ವಂಪದಾರ್ಥ-ಶೋಧಕವಾಕ್ಯೈಃ * ಅಸ್ಥೂಲಮನಣು " (ಬೃ-೩-೮-೮) ಇತ್ಯಾದಿತತ್ಪದಾರ್ಥಶೋಧಕವಾಕ್ಯೈಶ್ಚ ಶೋಧಿತತತ್ತ್ವಂಪದಾರ್ಥಸ್ಯ ಪುರುಷಸ್ಯಾಖಂಡಾರ್ಥತ್ವಾವಬೋಧಾತ್ । ನಾಪಿ ದ್ವಿತೀಯಃ । ಪ್ರತ್ಯ-ಕ್ಷಾನುಮಾನವಿಧಿನಿಷೇಧಶಾಸ್ತ್ರಾದೀನಾಂ ಮಾಯಾಕಲ್ಪಿತಭೇದಮಾಶ್ರಿತ್ಯ ಚರಿತಾರ್ಥಾನಾಂ ವಾಸ್ತ-ವಾದ್ವೈತಬೋಧಿವೇದಾಂತಬಾಧಕತ್ವಾಸಂಭವಾತ್ ॥

ಇನ್ನು ಕೆಲವರು ವೇದೋಕ್ತವಾದ ಎಲ್ಲಾ ಕರ್ಮಗಳಿಂದ ಆಯಾಯ ಫಲಗಳನ್ನೆಲ್ಲಾ ಅನುಭವಿಸಿದಮೇಲೆ ಕಾಮವೆಲ್ಲಾ ನಾಶವಾಗುವುದರಿಂದ ಆಮೇಲೆ ಜ್ಞಾನದಿಂದ ಮೋಕ್ಷಪ್ರಾಪ್ತಿಯೆನ್ನುತ್ತಾರೆ. ಇದೂ ಯುಕ್ತವಲ್ಲ. ಭೋಗದಿಂದ ಎಂದೂ ಕಾಮನಾಶವಾಗುವುದಿಲ್ಲ. '' ತುಪ್ಪದಿಂದ ಬೆಂಕಿಯು ಅಧಿಕವಾದಂತೆ ಕಾಮೋಪಭೋಗದಿಂದ ಕಾಮನೆಯು ಹೆಚ್ಚಾಗುವುದಲ್ಲದೆ ಎಂದೂ ನಾಶವಾಗುವುದಿಲ್ಲ'' ವೆಂದು ಭಾರತದಲ್ಲಿ ಹೇಳಿದೆ. ಆದುದರಿಂದ ಪ್ರತಿವಾದಿಗಳ ವಾದವೆಲ್ಲವೂ ನಿರ್ಯುಕ್ತಿಕವಾದುದರಿಂದ ಜ್ಞಾನಕರ್ಮಗಳು ಸಾಧ್ಯಸಾಧನರೂಪವಾದುದರಿಂದ ಅವುಗಳಿಗೆ ಪ್ರತಿಪಾದ್ಯ ಪ್ರತಿಪಾದಕಭಾವರೂಪಸಂಬಂಧವು ಯುಕ್ತವಾಗಿದೆ.

ಬ್ರಹ್ಮಜಿಜ್ಞಾಸುವೇ ಇಲ್ಲಿ ಅಧಿಕಾರಿ. ಚಿಕೀರ್ಷು ಅಂದರೆ ಕರ್ಮಮಾಡುವವನು ಅಧಿಕಾರಿಯಲ್ಲ. ಅವನೇ ವೇದಾಂತಾಧಿಕಾರಿಯೆಂದರೆ ಅವನು ಮಾಡುವ ಕಾರ್ಯ ಯಾವುದು? ಕಾರ್ಯಸಾಮಾನ್ಯವೇ ? ಅಥವಾ ಕಾರ್ಯವಿಶೇಷವೆ ? ವೇದಾಂತಗಳಲ್ಲಿ ಕಾರ್ಯಸಾಮಾನ್ಯ ಯಾವುದೂ ತೋರದಿರುವುದರಿಂದ ಮೊದಲನೆಯ ಪಕ್ಷ ಯುಕ್ತವಲ್ಲ. ಸತ್ಯಜ್ಞಾನಾದಿ ಬೋಧಕಗಳಾದ ವೇದಾಂತವಾಕ್ಯಗಳಲ್ಲಿ ಕುರ್ಯಾತ್ (ಮಾಡಬೇಕು) ಎಂಬಪದವು ಎಲ್ಲಿಯೂ ಇಲ್ಲ, ವಿಶೇಷಪಕ್ಷ ದಲ್ಲಿಯೂ ಮಾಡಬೇಕಾದ ವಿಶೇಷಕಾರ್ಯ ಯಾವುದು? ವಾಸನಾನಿರೋಧವೇ? ಅಥವಾ ಮನೋನಿರೋಧವೇ? ಅಥವಾ ಪ್ರತಿಪತ್ತಿಯೇ (ಜ್ಞಾನ)? ಅಥವಾ ಪ್ರಸಂಖ್ಯಾನವೇ ಯಾವಪಕ್ಷದಲ್ಲಿಯೂ ಕಾರ್ಯಪರತ್ವ ವೇದಾಂತದಲ್ಲಿ ತೋರುವುದಿಲ್ಲ. ಸತ್ಯಜ್ಞಾನಾದಿಬೋಧಕವಾಕ್ಯಗಳಲ್ಲಿ ವಾಸನಾನಿರೋಧಾದಿವಿಧಾನವು ಎಲ್ಲಿಯೂ ಹೇಳಿಲ್ಲ. ಯಾವ ಅನರ್ಥಾದಿಗಳೂ ಸುಷುಪ್ತಿಯಲ್ಲಿ ತೋರದಿರುವುದರಿಂದ ವಾಸನಾನಿರೋಧಾದಿಗಳು ಅಪೇಕ್ಷಿತವಾಗಿವೆಯೆಂದು ಆಕ್ಷೇಪಿಸಿದರೆ ಅದೂ ನಿರ್ಯುಕ್ತಿಕ ವಾಗಿದೆ. ಸುಷುಪ್ತಿದೃಷ್ಟಾಂತದಿಂದಲೇ ವೇದಾಂತಶಾಸ್ತ್ರದಿಂದ ಅದು ಯಾವುದೂ ವಿಹಿತವಾಗಿಲ್ಲವೆಂದು ಹೇಳಬಹುದು. ಪ್ರತಿಪತ್ತಿವಿಧಾನವೂ ಕೂಡುವುದಿಲ್ಲ. ಅದು ಕಾರ್ಯವಲ್ಲವಾದುದರಿಂದ ಪುರುಷತಂತ್ರ(ಅಧೀನ)ವಲ್ಲ. ಆದುದರಿಂದ ಅದಕ್ಕೆ ವಿಧಿಯೂ ಇಲ್ಲ. ಶಬ್ದಯುಕ್ತ್ಯಾದಿಗಳ ಆವೃತ್ತಿಗೇ ಪ್ರಸಂಖ್ಯಾನವೆಂದು ಹೆಸರು. ಇದೂ ಬ್ರಹ್ಮಸಾಕ್ಷಾತ್ಕಾರ ಹೇತು ವಾಗುವುದಿಲ್ಲ. ಪ್ರಥಮಬಾರಿ ಹೇಳಿದ ಶಬ್ದಯುಕ್ತ್ಯಾದಿಗಳಿಂದ ಸಾಕ್ಷಾತ್ಕಾರವಾಗುವುದಿಲ್ಲವೆಂದಮೇಲೆ ಎಷ್ಟುಬಾರಿ ಆವೃತ್ತಿಮಾಡಿದರೂ ಸಾಕ್ಷಾತ್ಕಾರವಾಗಲಾರದು. ಹೀಗೆ ಕಾರ್ಯತ್ವಸಂಭವಿಸದಿರುವುದರಿಂದ ಚಿಕೀರ್ಷುವಿಗೆ ಅಧಿಕಾರವಿಲ್ಲ. ವೇದಾಂತದಲ್ಲಿ ಸಿದ್ಧಬ್ರಹ್ಮತತ್ವವೇ ಪ್ರತಿಪಾದ್ಯವಾದುದರಿಂದ ಜಿಜ್ಞಾಸುವೇ ಅಧಿಕಾರಿಯೆಂದು ನಿಶ್ಚಿತವಾಗುತ್ತದೆ. ವೇದಾಂತ ಜ್ಞಾನಕ್ಕೆ ಸ್ವತಃ ಪ್ರಾಮಾಣ್ಯವಿರುವುದರಿಂದ ಇತರ ಸಾಧಕಾಪೇಕ್ಷೆಯಾವುದೂ ಇಲ್ಲ. " ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ " ಇತ್ಯಾದ್ಯವಾಂತರವಾಕ್ಯಶ್ರವಣದಿಂದಲೂ, '' ಪ್ರಜ್ಞಾನಂ ಬ್ರಹ್ಮ '' ಇತ್ಯಾದಿಮಹಾವಾಕ್ಯಶ್ರವಣದಿಂದಲೂ, ಜಿಜ್ಞಾಸುವಿಗೆ ಬೋಧಉಂಟಾಗುವುದರಿಂದ ಅಬೋಧಕತ್ವಪ್ರಯುಕ್ತ ಅಪ್ರಾಮಾಣ್ಯಶಂಕೆ ಮಾಡಬಾರದು. ಜ್ಯೋತಿಷ್ಟೋ

ಮಾದಿವಾಕ್ಯಗಳಂತೆ ಪದಾರ್ಥಸಂಸರ್ಗಮಾತ್ರ ಆವಾಕ್ಯಗಳಿಂದ ತೋರುವುದಲ್ಲದೆ ಅಖಂಡವಾಕ್ಯಾರ್ಥಬೋಧ ಅದರಿಂದಾಗುವುದಿಲ್ಲವೆಂದು ಆಪೇಕ್ಷಿಸಬಾರದು. 'ಸ ಏಷ ನೇತಿ ನೇತ್ಯಾತ್ಮಾ' ಇತ್ಯಾದಿ 'ತ್ವಂ' ಪದಾರ್ಥಬೋಧಕವಾಕ್ಯಗಳಿಂದಲೂ ತತ್,ತ್ವಂಪದಾರ್ಥಗಳು ಶೋಧಿತವಾಗುವುದರಿಂದ ಅಖಂಡ ವಾಕ್ಯಾರ್ಥಬೋಧ ಬರಲು ಯಾವ ತೆರಂದರೆಯೂ ಇರುವುದಿಲ್ಲ. ಪ್ರತ್ಯಕ್ಷಾದಿಪ್ರಮಾಣಗಳೂ, ವಿಧಿನಿಷೇಧಾಶಾಸ್ತ್ರಗಳೂ ಮಾಯಾದಿಂದ ಕಲ್ಪಿತವಾದ ಭೇದವನ್ನಾಶ್ರಯಿಸಿ ಚರಿತಾರ್ಥಗಳಾದುದರಿಂದ ಅವುಗಳಿಂದ ವಾಸ್ತವಾದ್ವೈತ ಬೋಧಕವೇದಂಾತಕ್ಕೆ ಬಾಧಕವಿಲ್ಲ. ಇದಕ್ಕೆ ವೇದಾಂತಿಗಳು ಹೀಗೆ ದೃಷಾಂತ ತೋರಿಸುತ್ತಾರೆ.

ಅತ ಏನಾನ್ಯತ್ರೋಕ್ತಂ

"ವಾಸ್ತವೇ ಬ್ರಾಹ್ಮಣೇ ಸ್ವಪ್ನೇ ಕಲಿತಾ ಶೂದ್ರತಾ ಯಥಾ ॥
ನ ವಿರುದ್ಧಾ ತಥಾ ಭೇದೋ ನಾದ್ವೈತೇನ ವಿರುಧ್ಯತೇ" (ವಾ-ವೃ-) ಇತಿ.

ನಾಪಿ ತೃತೀಯಃ । ಆತ್ಮತತ್ವವಿಷಯಸ್ಯ ಪುರೋವಾದಿನಃ ಪ್ರಮಾಣಾಂತರಸ್ಯಾಭಾವೇನಾನುವಾದಕತ್ವಾಸಂಭವಾತ್ । ವೇದಾಂತಸಿದ್ಧಾಂತಮಜಾನದ್ಭಿರ್ವಾದಿಭಿರ್ಲೌಕಿಕೈಶ್ಚಾಹಂ ಮನುಷ್ಯ ಇತ್ಯಾದಿಭಿಃ ಪ್ರಮಾಣೈಃ ಸ್ವಸ್ವಾತ್ಮಗ್ರಹಣಾದಸ್ತಿ ಪುರೋವಾದಿಪ್ರಮಾಣಮಿತಿ ಚೇತ್ । ನ । ತೇಷಾಂ ದೇಹಾದಿವಿಷಯತ್ವೇನಾಽಽತ್ಮತತ್ತ್ವಗೋಚರತ್ವಂ ನಾಸ್ತೀತಿ ಪೂರ್ವಮೇವಾನನ್ಯಲಭ್ಯಂ ವಿಷಯಂ ನಿರೂಪಯದ್ಭಿರಸ್ಮಾಭಿಃ ಪ್ರತಿಪಾದಿತತ್ವಾತ್ । ತಸ್ಮಾದಪ್ರಾಮಾಣ್ಯಕಾರಣಾಭಾವಾದ್ವೇದಾಂತಾನಾಂ ಸ್ವತಃ ಸಿದ್ಧಂ ಪ್ರಾಮಾಣ್ಯಂ ತತ್ಸುಸ್ಥಿತಮ್ । ಏವಮಪ್ಯಾತ್ಮನಃ ಸ್ವಪ್ರಕಾಶತ್ವೇನ ಘಟಾದಿವತ್ಪ್ರಮೇಯತ್ವಂ ನಾಸ್ತೀತಿ ಚೇತ್ । ನೈವಮ್ । ಘಟಾದಿಗ್ರಾಹಕೇಷ್ವಪಿ ವಾಸ್ತವೇಷು ಜ್ಞಾನೇಷು ನ್ಯಾಯತೋ ವಿಚಾರ್ಯಮಾಣೇಷ್ವಾತ್ಮನ ಏವ ಪ್ರಮೇಯತ್ವಾತ್ । ತಥಾ ಹಿ—ಯತ್ರ ಮಾತುಮರ್ಹಂ ತತ್ಪ್ರಮೇಯಂ ತದರ್ಹತ್ವಂ ಚಾಜ್ಞಾತತ್ವಾದಾತ್ಮನ ಏವ ಯುಜ್ಯತೇ ನ ತು ಘಟಾದೇಃ । ಅಜ್ಞಾನೇನಾಽಽವೃತತ್ವಮಜ್ಞಾತತ್ವಮ್ । ಘಟಾದಯಸ್ತ್ವಜ್ಞಾನಕಾರ್ಯತ್ವಾನ್ನಾಜ್ಞಾನೇನಾಽಽವೃತಾಃ ॥

ಶ್ರೋತ್ರಿಯನಾದ ಬ್ರಾಹ್ಮಣನಿಗೆ ಸ್ವಪ್ನದಲ್ಲಿ ಶೂದ್ರನಾಗಿದ್ದಾನೆಂದು ಕಂಡರೆ ಅದರಿಂದ ಹೇಗೆ ಅವನಿಗೆ ತೊಂದರೆ ಇಲ್ಲವೋ ಅದರಂತೆ ಕಲ್ಪಿತಭೇದದಿಂದ ವಾಸ್ತವಾದ್ವೈತಕ್ಕೆ ಯಾವ ಬಾಧಕವೂ ಇಲ್ಲ. ಆತ್ಮತತ್ತ್ವವಿಷಯವು ಎಲ್ಲಿಯೂ ಪ್ರತಿಪಾದಿತವಾಗದಿರುವುದರಿಂದ ವೇದಾಂತಕ್ಕೆ ಅನುವಾದಕತ್ವವೂ ಸಂಭವಿಸುವುದಿಲ್ಲ. ಆತ್ಮತತ್ತ್ವ ಅಜ್ಞಾತವೆಂದರೆ ಅಜ್ಞಾನದಿಂದ ಆವೃತವಾಗಿದೆಯೆಂದರ್ಥ. ಆತ್ಮನು ಅಜ್ಞಾತನಾದುದರಿಂದ ಪ್ರಮೇಯತ್ವವೂ ಅವನಿಗೇ ಸಂಭವಿಸುವುದಲ್ಲದೆ ಘಟಾದಿಗಳಿಗಲ್ಲ. ಆದುದರಿಂದ ಆತ್ಮನು ಸ್ವಪ್ರಕಾಶನಾದುದರಿಂದ ಅವನಿಗೆ ಘಟಾದಿಗಳಂತೆ ಪ್ರಮೇಯತ್ವವು ಸಂಭವಿಸುವುಲ್ಲವೆಂದು ಆಕ್ಷೇಪಿಸಬಾರದು.

ಅತ ಏವಾನ್ಯತ್ರೋಕ್ತಮ್—

ಅಜ್ಞಾತರಜ್ಜುಕಾರ್ಯಸ್ಯ ಸರ್ಪಸ್ಯಾಜ್ಞಾತತಾ ನ ಹಿ ॥
ಅಜ್ಞಾತಬ್ರಹ್ಮಕಾರ್ಯಸ್ಯ ಜಡಸ್ಯಾಜ್ಞಾತತಾ ಕುತಃ ॥
ರಜ್ಜುಸರ್ಪಂ ನ ಜಾನಾಮಿ ಬೋದ್ಧುಮಿಚ್ಛಾಮಿ ಮಾನತಃ ।
ಇತಿ ವ್ಯವಹೃತಿಂ ಪ್ರಾಜ್ಞಾ ನಾಂಗೀಕುರ್ವಂತಿ ಕೇಽಪಿ ಚ ॥

ಕಿಂ ಚಾಜ್ಞಾತತ್ವತೋ ಲಭ್ಯಂ ತಿರೋಧಾನಂ ನ ಚೇತರತ್ ।
ಸ್ವಯಮೇವ ತಿರೋಭೂತೇ ಜಡೇ ಕಾನ್ಯಾ ತಿರೋಹಿತಿಃ ।
ಆವಿರ್ಭೂತೇ ಸ್ವರೂಪೇತು ಚೈತನ್ಯೇಽಜ್ಞಾನನಿರ್ಮಿತಾ ।
ತಿರೋಧಾನಾದ್ವಿಶೇಷೋಽಸ್ತಿ ಶುಭ್ರವಸ್ತ್ರೇ ಮಷೀ ಯಥಾ ।
ಚಂದ್ರಂ ಮಲಿನಯೇದ್ರಾಹುರ್ನಿರ್ಮಲಮೇಘಂ ನ ತು ಕ್ವಚಿತ್ ।
ಏವಂ ಚೈತನ್ಯಮಜ್ಞಾತಂ ಜಡಂ ತ್ವಜ್ಞಾದೇಹಕಮ್ ॥
ಅತೋಽನುಭವ ಏವೈಕೋ ವಿಷಯೋ ಜ್ಞಾನಲಕ್ಷಣಃ ॥
ಅಕ್ಷಾದೀನಾಂ ಸ್ವತಃ ಸಿದ್ಧೌ ಯತ್ರ ತೇಷಾಂ ಪ್ರಮಾಣತಾ ॥
ಅನುಭೂತಿಗೃಹಾಯ್ಯೈವ ಪ್ರವೃತ್ತಾನ್ಯಪಿ ದೃಷ್ಟಯಾ ॥
ಸಾಮಗ್ರ್ಯಾಽಖಿಲಮಾನಾನಿ ಗೃಹ್ಣಂತಿ ಜಡಸಂಯುತಾಮ್ ।
ಶುಕ್ತಿಕಾ ಗೃಹಣಾಯ್ಯೈವ ಪ್ರವೃತ್ತಮಪಿ ಲೋಚನಮ್ ।
ಗೃಹ್ಣೀತೇ ರಜತೋಪೇತಂ ಶುಕ್ತ್ಯಂಶಂ ದೋಷಯೋಗತಃ ।
ವೇದಾಂತೇತರಸಾಮಗ್ರೀ ದೃಷ್ಟ್ಯೈಷಾ ಚಕ್ಷುರಾದಿಕಾ ।
ತಜ್ಞಾ ಧೀರತ್ರ ಗೃಹ್ಣಾತಿ ಸ್ಫೂರ್ತಿಂ ರೂಪಾದಿಸಂಯುತಾಮ್ ।
ಏವಂ ಚ ಸತಿ ವಿಭ್ರಾಂತಃ ಕಲ್ಪಿತೇ ರಜತೇ ಧಿಯಮ್ ॥
ಪ್ರಮಾಣಂ ಮನುತೇ ಯದ್ವದ್ರೂಪಾದೌ ಮನುಜಸ್ತಥಾ ।
ಬ್ರಹ್ಮಣ್ಯಕ್ಷಾದಿಮಾನತ್ವಮಿತಿ ನ್ಯಾಯವಿದಾಂ ಮತಮ್ ।
ರೂಪಾದಾವೇವ ತನ್ಮಾತ್ವಮಿತಿ ಮೂಢಧಿಯೋ ಜಗುಃ ॥(ವಾ-ವೃ)

ನನ್ವೇವಂ ಸತಿ ವಿಷಯತ್ವನಿರೂಪಣಾಯ ಪೂರ್ವೋಕ್ತಮನನ್ಯಲಭ್ಯತ್ವಂ ವಿಪರ್ಯೇತೀತಿ ಚೇತ್ । । ನ । ಮೂಢಾನ್ಪ್ರತ್ಯನನ್ಯಲಭ್ಯತ್ವೋಪನ್ಯಾಸಾತ್ । ಬ್ರಹ್ಮವಿದ್ದೃಷ್ಟ್ಯಾ ತು ಸರ್ವೈರಪಿ ಪ್ರಮಾಣೈರ್ಬ್ರಹ್ಮೈವ ಪ್ರಮೀಯತೇ । ಅತಃ ಪ್ರಮೇಯತ್ವಂ ತಸ್ಯ ಯುಕ್ತಮ್ । ಕಿಂಚಾನಂದಸ್ವರೂಪತ್ವೇನ ಪುರುಷಾರ್ಥತ್ವಾದಪಿ ಪ್ರಮೇಯತ್ವಂ ಯುಕ್ತಮ್ । ತದೇವಂ ವಿಷಯಪ್ರಯೋಜನಸಂಬಂಧಾಧಿಕಾರಿಪ್ರಮಾಣಪ್ರಮೇಯಾಣಾಂ ಸದ್ಭಾವಾದ್ವ್ಯಾಖ್ಯಾತುಂ ಯೋಗ್ಯೇತ್ಯುಪನಿಷದ್ವ್ಯಾಖ್ಯಾ ಪ್ರಾರಭ್ಯತೇ । ತತ್ರಾದೌ ಪರಮಪುರುಷಾರ್ಥಕಾಮಿನಾಂ ಶ್ರೋತೄಣಾಂ ತತ್ಸಾಧನರೂಪಂ ಮಾರ್ಗಮುಪದಿಶತಿ

ಎಲ್ಲಾ ವಿಷಯಗಳೂ ವಾಕ್ಯವೃತ್ತಿಯಲ್ಲಿ ಶ್ಲೋಕಗಳಿಂದ ವಿವೃತವಾಗಿದೆ. ಘಟಾದಿಗಳೆಲ್ಲಾ ಮಾಯಾಕಾರ್ಯಗಳಾದದರಿಂದ ಅವುಗಳಿಗೆ ಅಜ್ಞಾತತ್ವವಿರುವುದಿಲ್ಲ. ಭ್ರಾಂತಿಯಿಂದ ರಜ್ಜುವಿನಲ್ಲಿ (ಹಗ್ಗ) ಸರ್ಪಜ್ಞಾನ ಬರುತ್ತದೆ. ಅಲ್ಲಿ ರಜ್ಜು

ಸರ್ಪವನ್ನು ನಾನು ನೋಡುವುದಿಲ್ಲ. ಅದನ್ನು ಪ್ರಮಾಣದಿಂದ ತಿಳಿಯಬೇಕಾಗಿದೆಯೆಂದು ಯಾರೂ ಹೇಳುವುದಿಲ್ಲ. ಹಾಗೆ ಅಜ್ಞಾತಬ್ರಹ್ಮಕಾರ್ಯ ಈ ಜಡವಾದ ಜಗತ್ತು. ದೋಷಅಂದರೆ ಮಾಯಾಕಲ್ಪಿತವಾಗಿದೆ. ಇದೂ ಎಂದರೆ ಅಜ್ಞಾತವಲ್ಲ. ರಾಹುವು ಶುಭ್ರವಾದ ಚಂದ್ರನಿಗೆ ಮಾಲಿನ್ಯವನ್ನುಂಟುಮಾಡುವುದಲ್ಲದೆ ನೀಲವಾದ ಮೇಘಕ್ಕಲ್ಲ. ಹಾಗೆ ಚೈತನ್ಯಕೆ ಮಾತ್ರಕ್ಕೆ ಅಜ್ಞಾನಾವರಣವಲ್ಲದೆ ಜಡಪ್ರಪಂಚಕ್ಕಲ್ಲ. ಅದು ಅಜ್ಞಾನದ ಕಾರ್ಯ. ಇಂದ್ರಿಯಾದಿ ಪ್ರಮಾಣಗಳು ಯಾವಾಗಲೂ ಜಡಸಂಯುತವಾದುದನ್ನೇ ಗ್ರಹಣಮಾಡುತ್ತವೆ. ಕಣ್ಣು ಶುಕ್ತಿಯನ್ನು (ಕಪ್ಪೆ ಚಿಪ್ಪು) ನೋಡಲು ಪ್ರವೃತ್ತವಾದರೂ ಚಾಕಚಿಕ್ಯ ದೋಷದಿಂದ ರಜತಸಮಿಶ್ರಿತವಾದ ಶುಕ್ತ್ಯಂಶವನ್ನೇ ಗೃಹಣಮಾಡುತ್ತದೆ. ಇಂದ್ರಿಯಗಳಿಂದ ಉಂಟಾಗುವ ಜ್ಞಾನವೆಲ್ಲವೂ ರೂಪಾದಿ ವಿಷಯಗಳೇ ಆಗಿರುವುದರಿಂದ ನೀರೂಪ ಸ್ವತಃಪ್ರಕಾಶ ಆತ್ಮಚೈತನ್ಯವು ಅವುಗಳಿಂದ ಗೃಹೀತವಾಗುವುದಿಲ್ಲ. ಆದುದರಿಂದ ಈ ಬ್ರಹ್ಮವಿಷಯದಲ್ಲಿ ಇಂದ್ರಿಯಾದಿ (ಮನಸ್ಸು) ಗಳೇ ಪ್ರಮಾಣವೆಂದು ನೈಯಾಯಿಕರು ಹೇಳುವುದು ಯುಕ್ತವಲ್ಲ. ॥

ಆತ್ಮನು ವೇದಾಂತವಿಷಯನಾಗುವುದಾದರೆ ಅನನ್ಯಲಭ್ಯತ್ವ (ಬೇರೆಯಾವುದರಿಂದಲೂ ತಿಳಿಯಲ್ಪಡುವವನಲ್ಲ.) ಹೇಗೆ ಸಂಭವಿಸುತ್ತದೆಂದು ಆಕ್ಷೇಪಿಸಬಾರದು. ಮೂಢರಿಗೋಸ್ಕರ ಆತನು ಅನನ್ಯಲಭ್ಯನೆಂದು ಹಿಂದೆ ಹೇಳಿರುವುದು ಬ್ರಹ್ಮಜ್ಞಾನಿಯದೃಷ್ಟಿಯಿಂದ ಎಲ್ಲಾ ಪ್ರಮಾಣಗಳಿಂದಲೂ ಬ್ರಹ್ಮನೇ ತಿಳಿಯಲ್ಪಡುತ್ತಾನೆ. ಹೀಗೆ ಪ್ರಮೇಯತ್ವಸಂಭವಿಸಲು ಯಾವ ಬಾಧಕವೂ ಇಲ್ಲ. ಅದೂ ಅಲ್ಲದೆ ಇವನು ಆನಂದಸ್ವರೂಪನಾದುದರಿಂದ ಪುರುಷಾರ್ಥತ್ವ ಪ್ರಯುಕ್ತವಾಗಿಯೂ ಪ್ರಮೇಯತ್ವ ಸಂಭವಿಸುತ್ತದೆ. ಹೀಗೆ ವಿಷಯ, ಪ್ರಯೋಜನ, ಅಧಿಕಾರಿ, ಪ್ರಮಾಣ, ಪ್ರಮೇಯಗಳೆಲ್ಲವೂ ಸಮಂಜಸವಾಗಿರುವುದರಿಂದ ವ್ಯಾಖ್ಯಾನಮಾಡಲು ಯೋಗ್ಯವಾದುದರಿಂದ ಉಪನಿಷದ್ ವ್ಯಾಖ್ಯಾನಮಾಡಲು ಪ್ರಾರಂಭಿಸಿದೆ. ॥

ಉಪನಿಷದ್ವ್ಯಾಖ್ಯಾನ ಮಾಡಬೇಕಾದರೆ ಮೊದಲು ಪರಮಪುರುಷಾರ್ಥವನ್ನು ಬಯಸುವ ಜಿಜ್ಞಾಸುಗಳಿಗೆ ಮೋಕ್ಷಸಾಧನಮಾರ್ಗಗಳನ್ನು ಉಪದೇಶಿಸುತ್ತಾರೆ. ಏತಚ್ಛಬ್ದವು ಸಂನಿಹಿತವಾದ ಅರ್ಥವನ್ನು ತಿಳಿಸುತ್ತದೆ. ಈ ಮಾರ್ಗವು ಅತೀತ, ಆಗಾಮಿಯೆಂದು ಎರಡು ವಿಧ.

## ಏಷ ಪಂಥಾ ಏತತ್ಕರ್ಮೈತದ್ಬ್ರಹ್ಮೈತತ್ಸತ್ಯಮ್ ॥

**ಏತಚ್ಛಬ್ದಃ ಸಂನಿಹಿತಮರ್ಥಂ ಪರಾಮೃಶತಿ । ಸ ಚ ದ್ವಿವಿಧೋಽತೀತ ಆಗಾಮೀ ಚೇತಿ । ಏಷ ಉಭಯವಿಧೋಽಪಿ ಪಂಥಾಃ ಪುರುಷಾರ್ಥಸ್ಯ ಮಾರ್ಗಃ । ಸಾಧನಮಿತ್ಯರ್ಥಃ। ಕೋಽಸಾವತೀತಃ ಕಶ್ಚಾಽಽಗಾಮೀತ್ಯಪೇಕ್ಷಾಯಾಂ ತದುಭಯಂ ವಿಸ್ಪಷ್ಟಂ ನಿರ್ದಿಶ್ಯತೇ । " ಅಗ್ನಿಮೀ ಳೇ " (ಋ-ಸಂ-ಮಂ-೧-ಸೂ-೧-ಋ-೧) ಇತ್ಯಾರಭ್ಯ " ಅಹ್ನೋ ರೂಪಮಹ್ನೋ ರೂಪಮ್ " (ಐ-ಆ-೧-ಅ-೫ ಖಂ-೩) ಇತ್ಯಂತೇನಾತೀತಸಂನಿಹಿತಗ್ರಂಥೇನ ಯತ್ಪ್ರತಿಪಾದಿತಂ ತದೇತತ್ಕರ್ಮ " ಉಕ್ಥಮುಕ್ಥಮಿತಿ ವೈ ಪ್ರಜಾ ವದಂತಿ " (ಐ-ಆ-೨-ಅ-೧-ಖಂ-೨) ಇತ್ಯಾರಭ್ಯ " ಆಚಾರ್ಯಾ ಆಚಾರ್ಯಾಃ " (ಐ-ಆ-೩-ಅ-೨-ಖಂ-೬) ಇತ್ಯಂತೇನ ಸಂನಿಹಿತೇನಾಽಽರಣ್ಯಕದ್ವಯರೂಪೇಣೋತ್ತರಗ್ರಂಥೇನ ಪ್ರತಿಪಾದಿತಂ ಯತ್ಸಗುಣಂ ನಿರ್ಗುಣಂ ಚ ತದೇತದ್ಬ್ರಹ್ಮೈತದುಭಯಮಪಿ ಪುರುಷಾರ್ಥಸಾಧನಮ್ । ತತ್ರ ಕರ್ಮಶಬ್ದೇನ ತದ್ವಿಷಯಜ್ಞಾನಪೂರ್ವಕಮನುಷ್ಠಾನಂ ವಿವಕ್ಷಿತಮ್ । ಬ್ರಹ್ಮಶಬ್ದೇನ ತು ತದ್ವಿಷಯಜ್ಞಾನಮಾತ್ರಮ್ । ಅತ ಏವ ಮೀಮಾಂಸಾಭಾಷ್ಯೇ ಭಾಷ್ಯಕಾರಾ ಆಹುಃ—**

“ ಅಭ್ಯುದಯಫಲಂ ಧರ್ಮಜ್ಞಾನಂ ತಚ್ಚಾನುಷ್ಠಾನಾಪೇಕ್ಷಂ ನಿಃಶ್ರೇಯಸಫಲಂ ತು ಬ್ರಹ್ಮಜ್ಞಾನಂ ನ ಚಾನುಷ್ಠಾನಾಂತರಾಪೇಕ್ಷಮ್ । ” ಇತಿ । ಅತೀತಾನಾಗತಗ್ರಂಥಸ್ಥಯೋಃ ಕರ್ಮಬ್ರಹ್ಮಣೋರು-ಭಯೋರಪಿ ಪುರುಷಾರ್ಥಹೇತುತ್ವೇ ಕುತಃ ಕಾಂಡಭೇದ ಇತ್ಯಾಶಂಕ್ಯ ವೈಲಕ್ಷಣ್ಯಂ ವಿಷಯಭೇದಾ-ದಿತ್ಯುಚ್ಯತೇ । ಯದೇತದುತ್ತರಕಾಂಡಪ್ರತಿಪಾದ್ಯಂ ಬ್ರಹ್ಮ ತದೇತತ್ಸತ್ಯಮಬಾಧ್ಯಂ । ನ ಹಿ ತಸ್ಯಾಸ್ಯ-ದ್ಬಾಧಕಂ ಪ್ರಮಾಣಂ ಪಶ್ಯಾಮಃ । ಪೂರ್ವಕಾಂಡೋಕ್ತಂ ತು ಕರ್ಮ ಮಿಥ್ಯಾತ್ವಾದ್ಬಾಧ್ಯಂ । ಬಾಧಕಪ್ರಮಾಣಂ ಚ ನೇಹ ನಾನಾಸ್ತಿ (ಬೃ. ೪-೪-೧೯) ಇತ್ಯಾದಿಕಂ ಬಹುಲಮುಪಲಭ್ಯತೇ । ಮಿಥ್ಯಾತ್ವೇಽಪಿ ಧೀಶುದ್ಧಿಹೇತುತ್ವಾದುಪಾದೇಯಮೇವ ॥

ಇವೆರಡೂ ಪುರುಷಾರ್ಥದ ಮಾರ್ಗಗಳು ಅಂದರೆ ಸಾಧನಗಳು. ಅತೀತ ಯಾವುದು? ಆಗಾಮಿ ಯಾವುದು ಎಂದು ಸ್ಪಷ್ಟವಾಗಿ ನಿರೂಪಿಸುತ್ತಾರೆ. ‘ಅಗ್ನಿಮೀಳೇ’ (ಋ.ಸಂ.೧-೧-೧) ಎಂದು ಆರಂಭಿಸಿ, ‘ಅಹ್ನೋ ರೂಪಮಹ್ನೋ ರೂಪಂ’ (ಐ-ಆ-೧-೫-೩) ಎಂದು ಕೊನೆಯಾಗಿ ಅತೀತಸಂನಿಹಿತಗ್ರಂಥಗಳಿಂದ ಯಾವುದು ಪ್ರತಿಪಾದಿತವಾಗಿದೆಯೋ ಅದೇ ಈ ಉಭಯ ಕರ್ಮಗಳು. “ ಉಕ್ಥಮುಕ್ಥಮಿತಿ ವೈ ಪ್ರಜಾವದಂತಿ ” (ಐ-ಆ-೨-೧-೨) ಎಂದು ಆರಂಭಿಸಿ, “ ಆಚಾರ್ಯಾ ಆಚಾರ್ಯಾಃ ” ಐ-ಆ-೩-೨-೬) ಎಂದು ಕೊನೆಯಾಗಿ ಸಂನಿಹಿತ ಆರಣ್ಯಕದ ಉತ್ತರಗ್ರಂಥದಿಂದ ಯಾವ ಸಗುಣ, ನಿರ್ಗುಣಸ್ವರೂಪ ನಿರೂಪಿತವಾಗಿದೆಯೋ ಅದೇ ಈ ಬ್ರಹ್ಮವು. ಇವೆರಡೂ ಸಾಧನಗಳೆಂದು ತಿಳಿಯಬೇಕು. ಇಲ್ಲಿ ಕರ್ಮಪದದಿಂದ ಕರ್ಮವಿಷಯಕಜ್ಞಾನಪೂರ್ವಕಾನುಷ್ಠಾನ ವಿವಕ್ಷಿತವಾಗಿದೆ. ಬ್ರಹ್ಮಪದದಿಂದ ಬ್ರಹ್ಮ ವಿಷಯಕ ಜ್ಞಾನಮಾತ್ರ ತೆಗೆದುಕೊಳ್ಳಬೇಕು. ಶಾಬರಭಾಷ್ಯದಲ್ಲಿಯೂ ‘ ಧರ್ಮಜ್ಞಾನವು ಅನುಷ್ಠಾನಸಾಪೇಕ್ಷಿತವಾಗಿ ಅಭ್ಯುದಯಫಲವನ್ನು ಕೊಡುತ್ತದೆ, ಬಹ್ಮಜ್ಞಾನಕ್ಕೆ ಮೋಕ್ಷವೇ ಫಲ. ಅದಕ್ಕೆ ಅನುಷ್ಠಾನಾಪೇಕ್ಷೆ ಇಲ್ಲ ’ ಎಂದು ಹೇಳಿದೆ. ಹೀಗೆ ವಿಷಯಭೇದವಿರುವುದರಿಂದ ಕಾಂಡಭೇದ ಸಿದ್ಧವಾಗಿದೆ. ಉತ್ತರಕಾಂಡಪ್ರತಿಪಾದ್ಯವಾದ ಬ್ರಹ್ಮಜ್ಞಾನವು ಯಾವುದಿದೆಯೋ ಅದೇ ಸತ್ಯವು ಅಂದರೆ ತ್ರಿಕಾಲಬಾಧಾರಹಿತವು. ಅದಕ್ಕೆ ಬಾಧಕವಾದ ಪ್ರಮಾಣ ಯಾವುದೂ ಇಲ್ಲ. ಪೂರ್ವಕಾಂಡದಲ್ಲಿ ವಿವರಿಸಿದ ಕರ್ಮವಾದರೋ ಮಿಥ್ಯಾರೂಪವಾದುದರಿಂದ ಅದು ಬಾಧ್ಯವು. ‘ ನೇಹ ನಾನಾಸ್ತಿ ’ (ಬೃ-ಉ-೪-೪-೧೯) ಇತ್ಯಾದಿ ಬಾಧಕಪ್ರಮಾಣಗಳು ಅಲ್ಲಲ್ಲಿ ಬಹಳವಾಗಿ ಹೇಳಿವೆ. ಕರ್ಮ ಮಿಥ್ಯಾ ಇದ್ದರೂ ಅಂತಃ ಕರಣಶುದ್ಧಿಗೆ ಕಾರಣವಾದುದರಿಂದ ಅದೂ ಉಪಾದೇಯವಾಗಿದೆ.

ತಸ್ಮಾನ್ನ ಪ್ರಮಾದ್ಯೇತ್ತನ್ನಾತೀಯಾತ್ ॥

ಯಥೋಕ್ತಸ್ಯೋಭಯಸ್ಯ ಮಾರ್ಗತ್ವಂ ದ್ರಢಯಿತುಮಯೋಗವ್ಯಾವೃತ್ತಿಮನ್ಯಯೋಗ-ವ್ಯಾವೃತ್ತಿಂ ಚ ವಿಧತ್ತೇ—ತಸ್ಮಾದುಭಯವಿಧಾದಾಮ್ನಾಯ ಮಾರ್ಗಾತ್ಪ್ರಮಾದಂ ನ ಕುರ್ಯಾತ್ । ಕರ್ಮಾನುಷ್ಠಾನಬ್ರಹ್ಮಜ್ಞಾನಯೋರಸಂಪಾದನಂ ಪ್ರಮಾದಃ । ತಥಾ ಸಂಪಾದಯಿತುಂ ಪ್ರವೃತ್ತೇ-ನಾಪ್ಯಾಲಸ್ಯಾದಿನಾ ತತ್ಪರಿತ್ಯಾಗೋಽಪಿ ಪ್ರಮಾದ ಏವ । ತದುಭಯಂ ನ ಕುರ್ಯಾತ್ । ಅನೇನಾ-ಯೋಗವ್ಯಾವೃತ್ತಿರುಕ್ತಾ । ಕೃಷಿವಾಣಿಜ್ಯಾದೌ ವಾ ಶಾಸ್ತ್ರಾಂತರಸಿದ್ಧೇ ಚೈತ್ಯವಂದನಾದೌ ವಾ ಪುರುಷಾರ್ಥಸಾಧನತ್ವಬುದ್ಧ್ಯಾ ಪ್ರವೃತ್ತಿಸ್ತಸ್ಯ ಪೂರ್ವೋಕ್ತಮಾರ್ಗಾತ್ಯಯಃ ಸೋಽಯಮನ್ಯ-ಯೋಗಃ, ತದ್ವ್ಯಾವೃತ್ತಿಸ್ತನ್ನಾತೀಯಾದಿತ್ಯನೇನೋಚ್ಯತೇ । ತತ್ಪೂರ್ವೋಕ್ತಮಾರ್ಗರೂಪಮು-ಭಯಂ ನಾತಿಕ್ರಾಮೇತ್ ॥

ಈ ಉಭಯಮಾರ್ಗವನ್ನು ದೃಢೀಕರಿಸಲು ಅಯೋಗವ್ಯಾವೃತ್ತಿ (ಅವಶ್ಯಸಂಬಂಧ) ಅನ್ಯಯೋಗ್ಯವ್ಯಾವೃತಿ (ಇತರ ಮಾರ್ಗಾನುಸರಣದಿಂದ ತ್ಯಾಗ) ಯನ್ನೂ ವಿವರಿಸುತ್ತಾರೆ. ವೇದೋಕ್ತವಾದ ಈ ಉಭಯಮಾರ್ಗಾನುಸರಣೆಯಲ್ಲಿ ಎಂದೂ ಪ್ರಮಾದಮಾಡಬಾರದು. ಕರ್ಮಾನುಷ್ಠಾನ, ಬ್ರಹ್ಮಜ್ಞಾನವನ್ನು ಸಂಪಾದಿಸದಿರುವುದು, ಅಥವಾ ಅವನ್ನು ಸಂಪಾದಿಸಲಾರಂಭಿಸಿ ಮಧ್ಯದಲ್ಲಿ ಆಲಸ್ಯಾದಿಗಳಿಂದ ಬಿಡುವುದೂ ಪ್ರಮಾದ. ಇದನ್ನು ಹೊಂದದಿರುವುದೇ ಅಯೋಗ ವ್ಯಾವೃತ್ತಿ. ಶಾಸ್ತ್ರಾಂತರದಲ್ಲಿ ಹೇಳಿದ ಕೃಷಿ ವಾಣಿಜ್ಯಾದಿಗಳಿಲ್ಲಾಗಲೀ, ಇದೇ ಪುರುಷಾರ್ಥವೆಂಬ ಭ್ರಾಂತಿಯಿಂದ ಚೈತ್ಯವಂದನಾದಿಗಳಲ್ಲಿಯಾಗಲೀ ಪ್ರವೃತ್ತಿ ಹೊಂದಿದರೆ ಆಗ ಪೂರ್ವೋಕ್ತಮಾರ್ಗಗಳನ್ನು ಅತಿಕ್ರಮಿಸಿದಂತಾಗುತ್ತದೆ. 'ತನ್ನಾಶೀಯಾತ್' ಎಂಬುದರಿಂದ ಅದನ್ನು ವಿವರಿಸಿರುತ್ತಾರೆ. ಅತಿಕ್ರಮಿಸದಿರುವುದೇ ಅನ್ಯಯೋಗವ್ಯಾವೃತ್ತಿ. ಹೀಗೆ ಈ ಉಭಯಸಾಧನಗಳನ್ನು ಅತಿಕ್ರಮಿಸಬಾರದು.

**ನ ಹ್ಯತ್ಯಾಯನ್ಪೂರ್ವೇ ಯೇಽತ್ಯಾಯಂಸ್ತೇ ಪರಾ ಬಭೂವುಃ ॥**

ತಮೇವಾನತಿಕ್ರಮಂ ಸ್ವಪಕ್ಷಸಾಧನಪರಪಕ್ಷದೂಷಣಾಭ್ಯಾಂ ದ್ರಢಯತಿ—ಪೂರ್ವೇ ಮಹರ್ಷಯೋ ವ್ಯಾಸವಸಿಷ್ಠಾದಯಸ್ತದುಕ್ತಂ ಪಂಥಾನಂ ನೈವಾತ್ಯಾಯನ್ನಾತ್ಯಕ್ರಾಮನ್ । ಯೇ ತು ನಾಸ್ತಿಕಾ ಅತ್ಯಕ್ರಾಮಂಸ್ತೇ ಪರಾಬಭೂವುಃ ಪರಾಭೂತಾಃ ಪುರುಷಾರ್ಥಾತ್ ಭ್ರಷ್ಟಾಃ ॥

ಈ ರೀತಿ ಅನತಿಕ್ರಮಣವನ್ನು ಸ್ವಪಕ್ಷಸಾಧನ, ಪರಪಕ್ಷದೂಷಣಗಳಿಂದ ದೃಢೀಕರಿಸುತ್ತಾರೆ. ಹಿಂದೆ ವ್ಯಾಸ ವಸಿಷ್ಠಾದಿಮಹರ್ಷಿಗಳು ವೇದೋಕ್ತವಾದ ಈ ಉಭಯಸಾಧನವನ್ನು ಎಂದೂ ಮೀರಿರಲಿಲ್ಲ. ಹಾಗೆ ಅನುಸರಿಸಿದುದರಿಂದ ನಿಃಶ್ರೇಯಸ್ಸನ್ನು ಹೊಂದಿದರು. ವೇದಪ್ರಾಮಾಣ್ಯವನ್ನು ಅಂಗೀಕರಿಸದ ನಾಸ್ತಿಕರು ಈ ಮಾರ್ಗವನ್ನತಿಕ್ರಮಿಸಿದುದರಿಂದ ಪುರುಷಾರ್ಥವನ್ನು ಕಳೆದುಕೊಂಡರು.

**ತದುಕ್ತಮೃಷಿಣಾ ಪ್ರಜಾ ಹ ತಿಸ್ರೋ ಅತ್ಯಾಯಮೀಯುರ್ನ್ಯ೧ನ್ಯಾ ಅರ್ಕಮಭಿತೋ ವಿವಿಶ್ರೇ । ಬೃಹದ್ಧ ತಸ್ಥೌ ಭುವನೇಷ್ವಂತಃ ಪವಮಾನೋ ಹರಿತ ಆ ವಿವೇಶೇತಿ ॥**

ಬ್ರಾಹ್ಮಣೇನೋಕ್ತಸ್ಯಾರ್ಥಸ್ಯ ದಾರ್ಢ್ಯಾಯ ಮಂತ್ರಮುದಾಹರತಿ—ತತ್ಪೂರ್ವೋಕ್ತ‐ಮಾರ್ಗಾತಿಕ್ರಮಾನತಿಕ್ರಮಯೋರ್ಬಾಧಾಬಾಧಾವಿತ್ಯೇತದರ್ಥಜಾತಮೃಷಿಣಾ ಕೇನಚಿನ್ಮಂತ್ರದರ್ಶಿನಾ ಪುರುಷೇಣ ತನ್ಮಂತ್ರರೂಪಯಾ ವಾಚಾ ಕಯಾಚಿದುಕ್ತಂ । "ಪ್ರಜಾ ಹ" (ಋ. ಸಂ. ಮಂ. ೮‐ ಸೂ. ೧೦೧ ಋ. ೧೪) ಇತ್ಯಾದಿಕೋ ಮಂತ್ರಃ । ಬ್ರಾಹ್ಮಣಕ್ಷತ್ರಿಯವಿಟ್‌ಶೂದ್ರಾಃ ಪ್ರಜಾಸ್ತಾಸಾಂ ಭಾಗಚತುಷ್ಟಯೇನ ವಿಭಾಗತ್ರಯವರ್ತಿನ್ಯಸ್ತಿಸ್ರಃ ಪ್ರಜಾ ವೈದಿಕಮಾರ್ಗಶ್ರದ್ಧಾರಹಿತಾಃ ಸತ್ಯೋ ಯಥೋಕ್ತಸ್ಯ ಮಾರ್ಗಸ್ಯಾತ್ಯಾಯಮತಿಕ್ರಮಮೀಯುಃ ಪ್ರಾಪ್ತಾಃ । ಲೋಕೇ ಹಿ ಗುರುಶಾಸ್ತ್ರೋ‐ಪದೇಶರಹಿತಾನಾಂ ಬಾಹುಲ್ಯಮುಪಲಭ್ಯತೇ ತತ್ಪ್ರಸಿದ್ಧಿದ್ಯೋತನಾರ್ಥೋ ಹ ಶಬ್ದಃ ಚತುರ್ಥ‐ಭಾಗೇಽವಸ್ಥಿತಾನಾಂ ಪ್ರಜಾನಾಂ ಮಧ್ಯೇಽನ್ಯಾಃ ಕಾಶ್ಚಿತ್ಪ್ರಜಾಃ ಅರ್ಕಮರ್ಚನೀಯಮಗ್ನಿಮಭಿತೋ ನಿವಿವಿಶ್ರೇ ನಿವಿಷ್ಟಾಸ್ತದುಪಾಸನೇ ಪ್ರವೃತ್ತಾ ಇತ್ಯರ್ಥಃ । ಭುವನೇಷ್ವಂತಃ ಸರ್ವೇಷು ಲೋಕೇಷು

ಮಧ್ಯೇ ಬೃಹತ್ಪ್ರೌಢಂ ಸರ್ವಜಗತ್ಪ್ರಕಾಶಕಂ ಹ ಪ್ರಸಿದ್ಧಮಾದಿತ್ಯಮಂಡಲಂ ತಸ್ಥೌ । ತನ್ಮಂಡಲ-ವರ್ತಿನಮುಪಸ್ಯನಾಃ ಕಾಶ್ಚಿತ್ಪ್ರಜಾ ಅಭಿತೋ ನಿವಿಷ್ಟಾ ಇತ್ಯನ್ವಯಃ । ಪವಮಾನೋ ಜಗತಃ ಶುದ್ಧ್ಯರ್ಥಂ ಸರ್ವದಾ ಸಂಚರನ್ವಾಯುರ್ಹರಿತಃ ಸರ್ವಾ ದಿಶಃ ಆ ವಿವೇಶ । ತಮುಪಸ್ಯನ್ತ್ಯಾ ಅಭಿತೋ ನಿವಿಷ್ಟಾ ಇತ್ಯನ್ವಯಃ ಇತಿ ಶಬ್ದೋ ಮಂತ್ರಸಮಾಪ್ತ್ಯರ್ಥಃ ॥

ಉಕ್ತಾರ್ಥವನ್ನು ದೃಢೀಕರಿಸಲು ಮಂತ್ರವನ್ನು ಉದಾಹರಿಸುತ್ತಾರೆ. ಈ ವಿಷಯವನ್ನು ಮಂತ್ರದ್ರಷ್ಟೃವಾದ ಒಬ್ಬಮಹರ್ಷಿಯು ಮಂತ್ರರೂಪಮಾತಿನಿಂದ ವಿವರಿಸುತ್ತಾನೆ. "ಪ್ರಜಾಹ"—(ಋ. ಸಂ. ೮-೧೦೧-೧೪) ಎಂಬುವೇ ಈ ಮಂತ್ರವು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕುವಿಧವಾದ ಪ್ರಜೆಗಳಲ್ಲಿ ಮುಕ್ಕಾಲುಭಾಗ ಜನರು ವೈದಿಕಮಾರ್ಗದಲ್ಲಿ ಶ್ರದ್ಧೆ ಇಲ್ಲದೆ ಪೂರ್ವೋಕ್ತಗಳಾದ ಮಾರ್ಗಗಳನ್ನು ಅತಿಕ್ರಮಿಸಿದರು. ಅಂದರೆ ಆಚರಿಸದೆ ಇತರ ಮಾರ್ಗವನ್ನು ಸ್ವೀಕರಿಸಿದರು. ಸಾಮಾನ್ಯವಾಗಿ ಹೆಚ್ಚುಜನರೇ ಗುರುಶಾಸ್ತ್ರೋಪದೇಶಗಳಲ್ಲಿ ಶ್ರದ್ಧೆ ಇಲ್ಲದವರೆಂದು ಪ್ರಸಿದ್ಧಿಯನ್ನು ತಿಳಿಸಲು ಹಶಬ್ದಹೇಳಿದೆ. ಇನ್ನು ಉಳಿದ ಕಾಲುಭಾಗ ಪ್ರಜೆಗಗಲ್ಲಿ ಕೆಲವರು ಪೂಜಿಸಲು ಯೋಗ್ಯನಾದ ಅಗ್ನಿಯ ಉಪಾಸನೆ ಮಾಡಿದರು. ಇನ್ನುಕೆಲವರು ಲೋಕಶುದ್ಧಿಗೋಸ್ಕರ ಸಕಲದಿಕ್ಕುಗಳಲ್ಲಿ ಸಂಚರಿಸುವ ವಾಯುದೇವನ ಉಪಾಸನೆಯನ್ನು ಕೈಗೊಂಡರು. ಇತಿ ಶಬ್ದವು ಮಂತ್ರಸಮಾಪ್ತಿಯನ್ನು ತಿಳಿಸುತ್ತದೆ.

**ಪ್ರಜಾ ಹ ತಿಸ್ರೋ ಅತ್ಯಾಯಮೀಯುರಿತಿ ಯಾ ವೈ ತಾ ಇಮಾಃ ಪ್ರಜಾಸ್ತಿಸ್ರೋ ಅತ್ಯಾಯಮಾಯಂಸ್ತಾನೀಮಾನಿ ವಯಾಂಸಿ ವಂಗಾವಗಧಾಶ್ಚೇರಪಾದಾಃ ॥**

ತಸ್ಯಾ ಋಚಃ ಪ್ರಥಮಪಾದಂ ವ್ಯಾಚಷ್ಟೇ—ತಾಃ ಪೂರ್ವಮಂತ್ರೋಕ್ತಾ ಇಮಾ ಅಸ್ಮಾ-ಭಿರ್ದೃಶ್ಯಮಾನಾಃ ಶ್ರದ್ಧಾರಹಿತಾಸ್ತ್ರಿವಿಧಾಃ ಪ್ರಜಾ ಯಾಃ ಕಾಶ್ಚಿದ್ವೈದಿಕಸ್ಯಾತಿಕ್ರಮಂ ಪ್ರಾಪ್ತಾ-ಸ್ತಾನಿ ತಥಾವಿಧಪ್ರಜಾನಾಂ ಶರೀರಾಣಿ ತದ್ದೋಷಫಲಂ ಭೋಕ್ತುಂ ಪ್ರವೃತ್ತಾನೀಮಾನ್ಯಸ್ಮಾಭಿರ್ದೃ-ಶ್ಯಂತೇ । ಸಾಮಾನ್ಯತಃ ಪ್ರೋಕ್ತಾನಾಂ ಪುನರ್ವಯಾಂಸೀತ್ಯಾದಿನಾ ವಿಶೇಷನಿರ್ದೇಶಃ । ವಯಾಂಸಿ ಪಕ್ಷಿಣಃ ಕಾಕಗೃಧ್ರಾದಯ ಆಕಾಶೇ ದೃಶ್ಯಂತೇ । ಸೋಽಯಂ ಪಕ್ಷಿಸಂಘಸ್ತ್ರಿವಿಧಾನಾಂ ಪ್ರಜಾನಾ-ಮೇಕೋ ಭಾಗಃ । ವಂಗಾ ವನಗತಾ ವೃಕ್ಷಾ ಅವಗಧಾ ಅವಂತಿ ಮನುಷ್ಯಾದೀನ್ರಕ್ಷಂತಿ ತೈರ್ಗೃ-ಧ್ಯಂತೇಽಭಿಕಾಂಕ್ಷಂತ ಇತಿ ವ್ರೀಹಿಯವಾದ್ಯಾ ಓಷಧಯೋಽವಗಧಾಃ । "ಗೃಧು-ಅಭಿಕಾಂಕ್ಷಾ-ಯಾಮ್" ಇತಿ ಧಾತೋರ್ಗಧಶಬ್ದನಿಷ್ಪತ್ತಿಃ । ಸೋಽಯಮೋಷಧಿವನಸ್ಪತಿರೂಪಃ ಪ್ರಜಾನಾಂ ದ್ವಿತೀಯೋ ರಾಶಿರ್ಭೂಮೌ ವರ್ತತೇ । ಈರಪಾದಾ ಉರ (ರಃ) ಪಾದಾಃ ಸರ್ಪಾ ಭೂಬಿಲವಾಸಿನಃ ಸೋಽಯಂ ತೃತೀಯೋ ರಾಶಿಃ । ತದೇತತ್ತ್ರಜಾತ್ರಯಂ ವೈದಿಕಾತಿಕ್ರಮದೋಷಜನ್ಯಂ ನರಕಮನು-ಭವತಿ—

ಆ ಮಂತ್ರದ ಪ್ರಥಮಪಾದವನ್ನು ವಿವರಿಸುತ್ತಾರೆ. ವೈದಿಕಕರ್ಮಶ್ರದ್ಧಾರಹಿತರಾದ ಹಿಂದೆ ಹೇಳಿದ ಮೂರುವಿಧ ಪ್ರಜೆಗಳು ಮಾರ್ಗದ್ವಯವನ್ನತಿಕ್ರಮಿಸಿರುವುದರಿಂದುಂಟಾದ ದೋಷಫಲವನ್ನನುಭವಿಸಲು ಜನ್ಮಾಂತರದಲ್ಲಿ ಮೂರುರೀತಿ

ಯಾದ ಶರೀರವನ್ನು ಹೊಂದಿರುವುದನ್ನು ನಾವು ನೋಡುತ್ತೇವೆ. ಸಾಮಾನ್ಯರೀತಿಯಿಂದ ಹೇಳಿರುವುದನ್ನೇ ತಿರುಗಿ ವಯಾಂಸಿ (ಪಕ್ಷಿಗಳು) ಇತ್ಯಾದಿ ವಾಕ್ಯಗಳಿಂದ ವಿಶೇಷವಾಗಿ ವಿವರಿಸಿರುತ್ತಾರೆ. ವಯಾಂಸಿ ಅಂದರೆ ಕಾಗೆ ಹದ್ದು ಮೊದಲಾದ ಪಕ್ಷಿಗಳು. ಇವುಗಳು ಆಕಾಶದಲ್ಲಿ ಹಾರಾಡುವುದನ್ನು ನಾವು ನೋಡುತ್ತೇವೆ. ಈ ಪಕ್ಷಿ ಸಂಘವು ಈ ಮೂರು ವಿಧ ಪ್ರಜೆಗಳಲ್ಲಿ ಒಂದು ಭಾಗವು. ವನಂಗತಾಃ ವಂಗಾಃ. ಕಾಡಿನಲ್ಲಿ ಬೆಳೆಯುವ ಮರ ಮುಂತಾದವುಗಳು. ಅವಗಧಾಃ–ಅವಂತಿ–ಮನುಷ್ಯಾದೀನ್ ರಕ್ಷಂತಿ. ಮನುಷ್ಯಾದಿಗಳನ್ನು ರಕ್ಷಿಸುವವುಗಳು. ತೈಃ ಗೃಧ್ಯಂತೇ ಮನುಷ್ಯಾದಿಗಳಿಂದ ಅಪೇಕ್ಷಿಸುವುದು. ಭತ್ತ ಗೋಧಿ ಮುಂತಾದ ವನಸ್ಪತಿಗಳು ಅವಗಧಗಳು. ಗೃಧು–ಅಭಿಕಾಂಕ್ಷಾಯಾಂ ಎಂಬ ಧಾತುವಿನಿಂದ ಗಧ ಶಬ್ದವು ನಿಷ್ಪನ್ನವಾಗಿವೆ. ಪೂರ್ವೋಕ್ತ ಪ್ರಜೆಗಳಲ್ಲಿ ಈ ವೃಕ್ಷ ಓಷಧಿ ವನಸ್ಪತಿಗಳು ಎರಡನೆಯ ರಾಶಿಯಾಗಿ ಭೂಮಿಯಲ್ಲ ತೋರುತ್ತವೆ. ಇವು ಅ ಪ್ರಜೆಗಳಲ್ಲಿ ಮೂರನೆಯ ರಾಶಿ. ಹೀಗೆ ಈ ಮೂರು ರೀತಿಯಾದ ಜನರು ಮೂರು ರೀತಿಯಾದ ಜನರು ಮೂರು ರೀತಿಯಾದ ಶರೀರಗಳಿಂದ ವೈದಿಕ ಮಾರ್ಗದ ಉಲ್ಲಂಘನೆಯಿಂದ ಉಂಟಾದ ದೋಷದಿಂದ ಆದ ನರಕ ದುಃಖವನ್ನು ಅನುಭವಿಸುತ್ತಾರೆ.

**ನ್ಯಗನ್ಯಾ ಅರ್ಕಮಭಿತೋ ವಿವಿಶ್ರ ಇತಿ ತಾ ಇಮಾಃ ಪ್ರಜಾ ಅರ್ಕಮಭಿತೋ ನಿವಿಷ್ಟಾ ಇಮಮೇವಾಗ್ನಿಮ್ ॥**

**ದ್ವಿತೀಯಪಾದಂ ವ್ಯಾಚಷ್ಟೇಯೋಽಗ್ನಿರಾಹವನೀಯಾದಿರೂಪೋ ದೃಶ್ಯತೇಽಯಮೇವಾರ್ಚನೀಯತ್ವಾದರ್ಕ ಇತ್ಯರ್ಥಃ ॥**

ಮಂತ್ರದ ಎರಡನೆಯ ಪಾದವನ್ನು ವಿವರಿಸುತ್ತಾರೆ. ಇನ್ನು ಕೆಲವರು ಪ್ರಸಿದ್ಧವಾದ ಅರ್ಕ ಅಂದರೆ ಅಗ್ನಿಯನ್ನು ನಾನಾ ರೀತಿಯಿಂದ ಉಪಾಸಿಸುತ್ತಾರೆ. ಯಾವ ಅಗ್ನಿಯು ಆಹವನೀಯಾದಿ ರೂಪದಿಂದ ತೋರುತ್ತದೆಯೋ ಅದೇ ಪೂಜಿಸಲ್ಪಡುವುದರಿಂದ ಅರ್ಕಪದ ವಾಚ್ಯವಾಗುತ್ತದೆ. ಅರ್ಚ ಧಾತುವಿನಿಂದ ಅರ್ಕಪದವುಂಟಾಗಿದೆ.

**ಬೃಹದ್ಧ ತಸ್ಥೌ ಭವನೇಷ್ವಂತರಿತ್ಯದ ಉ ಏವ ಬೃಹದ್ಭುವನೇಷ್ವಂತರಸಾವಾದಿತ್ಯಃ ॥**

**ತೃತೀಯಪಾದಂ ವ್ಯಾಚಷ್ಟೇ— ಬೃಹಚ್ಛಬ್ದೇನಾಽಽಕಾಶೇ ದೃಶ್ಯಮಾನಮುದಸ್ತೇಜೋಮಂಡಲಮೇವ ವಿವಕ್ಷಿತಮ್ । ಸರ್ವಜಗತ್ಪ್ರಕಾಶಕತ್ವೇನ ಪ್ರೌಢತ್ವಾತ್ । ತೇನ ಚ ಮಂಡಲೇನ ತತ್ರಾವಸ್ಥಿತೋಽಸಾವಾದಿತ್ಯ ಉಪಲಕ್ಷಿತಃ ॥**

ಮೂರನೆಯ ಪಾದವನ್ನು ವಿವರಿಸುತ್ತಾರೆ. ಬೃಹಚ್ಛಬ್ದದಿಂದ ಇಲ್ಲಿ ಆಕಾಶದಲ್ಲಿ ತೋರುವ ಪ್ರಸಿದ್ಧವಾದ ಆದಿತ್ಯನ ತೇಜೋಮಂಡಲವು ವಿವಕ್ಷಿತವಾಗಿದೆ. ಅದು ಸರ್ವಜಗತ್ಪ್ರಕಾಶಕವಾದುದರಿಂದ ಅತಿ ಪ್ರೌಢವಾಗಿದೆ. ಆ ತೇಜೋಮಂಡಲದಿಂದ ಅಲ್ಲಿರುವ ಪೂಜ್ಯನಾದ ಆದಿತ್ಯದೇವತೆಯನ್ನು ತಿಳಿದುಕೊಳ್ಳಬೇಕು.

**ಪವಮಾನೋ ಹರಿತ ಆ ವಿವೇಶೇತಿ ವಾಯುರೇವ ಪವಮಾನೋ ದಿಶೋ ಹರಿತ ಆವಿಷ್ಟಃ ॥**

ಚತುರ್ಥಪಾದಂ ವ್ಯಾಚಷ್ಟೇ — ಪಾದಪ್ರಕ್ಷಾಲನನಿಷ್ಠೀವನಾದಿಪ್ರದೇಶಸ್ಯ ಶೋಷಣೇನ ಶುದ್ಧಿಹೇತುತ್ವಾದಯಂ ವಾಯುರೇವ ಪವಮಾನ ಇತ್ಯುಚ್ಯತೇ। ಪ್ರಾಚ್ಯಾದಿದಿಶಸ್ತತ್ತತ್ಕರ್ಮಸು ವಿಹಿತಾಃ ಸತ್ಯೋಽನುಷ್ಠಾನವೈಕಲ್ಯಂ ಹರಂತೀತಿ ಹರಿಚ್ಛಬ್ದೇನೋಚ್ಯಂತೇ। ವಾಯೋರ್ದಿಕ್ಷು ಸಂಚಾರಾತ್ತತ್ರಾಽಽವಿಷ್ಟತ್ವಮ್। ವೈದಿಕಾತಿಕ್ರಮಂ ಕೃತವತ್ಯಃ ಪ್ರಜಾಸ್ತ್ರಿವಿಧಾ ಅಪಿಪಕ್ಷ್ಯಾದಿ-ರೂಪೇಣ ನರಕಜನ್ಮಾನುಭವಂತಿ, ಚತುರ್ಥಭಾಗವರ್ತಿನ್ಯಸ್ತು ಶ್ರದ್ಧಾಯುಕ್ತಾಃ ಸತ್ಯ ಉತ್ತಮ-ಲೋಕಪ್ರಾಪ್ತ್ಯರ್ಥಮಗ್ನಿವಾಯ್ವಾದಿದೇವತಾ ಉಪಾಸತ ಇತ್ಯೇವಂ ಹಾನಿವೃದ್ಧ್ಯೋರ್ಮಂ-ತ್ರೇಣೋಕ್ತತ್ವಾದ್ವೈದಿಕಮೇತಂ ಪಂಥಾನಂ ಸರ್ವಥಾ ನಾತಿಕ್ರಾಮೇದಿತ್ಯರ್ಥಃ ॥

ಮಂತ್ರದ ನಾಲ್ಕನೆಯ ಪಾದವನ್ನು ವಿವರಿಸುತ್ತಾರೆ. ಪವಮಾನ ಅಂದರೆ ಪವಿತ್ರ ಮಾಡುವವನು. ಕಾಲು ತೊಳೆಯುವುದು, ಉಗುಳುವುದು ಇವುಗಳಿಂದ ಅಪವಿತ್ರವಾದ ಪ್ರದೇಶವನ್ನು ಒಣಗಿಸಿ ಶುದ್ಧಿಮಾಡುವುದರಿಂದ ವಾಯುವೇ ಪವಮಾನನಾಗುತ್ತಾನೆ. ಹರಿತ್ ಎಂದರೆ ದಿಕ್ಕು. ಪೂರ್ವ ಮುಂತಾದ ದಿಕ್ಕುಗಳು ಆಯಾಯ ಕರ್ಮದಲ್ಲಿ ಹೇಳಲ್ಪಟ್ಟು ಅನುಷ್ಠಾನವೈಕಲ್ಯವನ್ನು ಹೋಗಲಾಡಿಸುವುದರಿಂದ ಅವುಗಳಿಗೆ ಹರಿತ್ ಎಂದು ಹೆಸರು ಬಂದಿದೆ. ವಾಯುವು ಸಕಲ ದಿಕ್ಕುಗಳಲ್ಲಿಯೂ ಸಂಚರಿಸುವುದರಿಂದ ಅಲ್ಲಿ ಆವಿಷ್ಟನಾಗಿರುತ್ತಾನೆ. ವೈದಿಕ ಮಾರ್ಗವನ್ನು ಅತಿ ಕ್ರಮಿಸಿದ ಮೂರು ರೀತಿಯಾದ ಪ್ರಜೆಗಳು ಪೂರ್ವೋಕ್ತ ರೀತಿಯಿಂದ ಪಕ್ಷ್ಯಾದಿ ರೂಪದಿಂದ ನರಕ ಜನ್ಮವನ್ನನುಭವಿಸುತ್ತಾರೆ. ನಾಲ್ಕನೆಯ ಭಾಗದ ಜನರು ಶ್ರದ್ಧಾಸಂಪನ್ನರಾಗಿ ಉತ್ತಲೋಕವನ್ನು ಹೊಂದುವುದಕ್ಕೋಸ್ಕರ ಅಗ್ನಿ ವಾಯ್ವಾದಿ ದೇವತೆಗಳನ್ನು ಉಪಾಸನೆ ಮಾಡುತ್ತಾರೆ. ಹೀಗೆ ಹಾನಿ ಮತ್ತು ವೃದ್ಧಿ ಇವೆರಡನ್ನೂ ಈ ಮಂತ್ರವು ಬೋಧಿಸುವುದರಿಂದ ವೈದಿಕ ಮಾರ್ಗವನ್ನು ಯಾವ ರೀತಿಯಿಂದಲೂ ಅತಿಕ್ರಮಿಸಬಾರದೆಂದು ವ್ಯಕ್ತವಾಗುತ್ತದೆ.

---

## *English Translation*

With the second Aranyaka the Upanishad begins. It comprises the second and third Aranyakas, and may be said to consist of three divisions, or three Upanishads. Their general title is Bahvrika-upanishad, sometimes Mahaitareya-upanishad, while the Upanishad generally known as Aitareya-upanishad comprises the 4th, 5th and 6th adhyayas only of the second Aranyaka.

The character of the three component portions of the Upanishad can best be described in Sankara's own words (Ar. III. 1, 1, Introd. p. 306): 'There are three classes of men who want to acquire knowledge. The highest consists of those who have turned away from the world, whose minds are fixed on one subject and collected, and who yearn to be free at once.

For these a knowledge of Brahman is intended, as taught in the Ait. Ar. II. 4-6. The middle class are those who wish to become free gradually by attain ing to the world of Hiranyagarbha. For them the knowledge and worship of prana (breath and life) is intended, as explained in the Ait. Ar. II. 1-3. The lowest class consists of those who do not care either for immediate or gradual freedom, but who desire nothing but off spring, cattle, and c. For. these the mediative worship of the Samhita is intended, as explained in the third Aranyaka. They cling too strongly to the letter of the sacred text to be able to surrender it for a knowledge either of Prana (life) or of Brahman.

The connection between the Upanishad or rather the three Upanishads and the first Aranyaka seems at first sight very slight. Still we soon perceive that it would be impossible to understand the first Upanishad, without a previous knowledge of the Mahavrata ceremony as described in the first Aranyaka.

On this point too there are some pertinent remarks in Shankar' s commentary on the Aranyaka II, 1, 2. ' Our first duty', he says, ' consis ts in performing sacrifices, such as are described in the first portion of the Veda the Samhita, Brahmanas, and, to a certian extent, in the Aranyakas also Afterwards arises a desire for knowledge, which cannot be satisfied except a man has first attained complete concentration of thought (ekagrata). In order to acquire that concentration, the performance of certain upasanas or meditations is enjoyed such as we find described in our Upanishad, viz., in Ar. II. 1-3 '.

This meditation or, as it sometimes translated, worship is of two kinds, either brahmopasana or pratikopsana. Brahmopasana or meditation on Brahman consists in thinking of him as distinguished by certian qualities. Pratlkopasana or meditation on symbols consists in looking upon certain wordly objects as if they were Brahman, in order thus to withdraw the mind from the too powerful influence of external of objects.

These objects, thus lifted up into symbols of Brahman, are of two kinds, either connected wita sacrifice or not. In our Upanishad we have to deal with the former class only, viz., with certain portions of the Mahavratr, as described in the first Aranyaka. Iu order that the mind may not be entirely absorbed by the sacrifice, it is lifted up during the performace from the consideration of these sacrifical objects to a meditation on higher objects, leading up at last to Brahman as prana or life.

This meditation is to be performed by the priests, and while they meditate, they may meditate on a hymn or on a single word of it as meaning something else, such as the sun, the earth, or the sky, but not vice versa. And if in one Sakha, as in that of the Aitareyins, for instance, a certian hymn has been symbolically explained, the same explanation may be adopted by another Sakha also, such as that of the Kaushitakins. It is not necessary however, that every part of the sacrifice should be accompanied by meditation, but it is left optional to the priest in what particular meditation he wishes to engage, nor is even the time of the sacrifice the only right time for him to engage in these meditations.

1. This is the parth : this sacrifice, and this Brahman. This is the true.

2. Let no man swerve from it, let no man transgress it.

3. For the old (sages) did not transgress it, and those who did transgress, became lost.

4. This has been declared by a Rishi (Rv. VIII. 101. 14 ' Three clases of) people transgressed, others settled down rouud about the venerable (Agni, fire) ; the great (sun) stood in the midst of the worlds, the blowing (Vayu, air) entered the Harits (the dawns, or the ends of the earth).

5. When he says : ' Three (classes of) people transgrassed,' the three (classes of) people who transgressed are what we see here on earth, born again) as birds, trees, herbs, and serpents.'

6. When he says : 'Others settled down round about the venerable,' he means those who now sit down to worshiy Agni (fite).

7. When he says : ' The great stood in ihe midst of thc world is meant for this Adity, the sun.

8. When he says : Tye blowing entered the Harits,' he means that Vayu, the air, the purifier, entered all the corners of the earth.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ಪ್ರಥಮಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು ॥

---

# ಅಥ ದ್ವಿತೀಯಾರಣ್ಯಕೇ ಪ್ರಥಮಾಧ್ಯಾಯೇ ದ್ವಿತೀಯಃ ಖಂಡಃ

**ಎರಡನೆಯ ಆರಣ್ಯದ ಮೊದಲನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು**

---

ಪೂರ್ವೋತ್ತರಕಾಂಡಾರ್ಥರೂಪೋ ದ್ವಿವಿಧೋ ಮಾರ್ಗ ಉಪದಿಷ್ಟಃ । ತತ್ರ "ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ" (ಬೃ. ಉ. ೬-೪-೨೨) ಇತ್ಯೇವಂ ವಿವಿದಿಷಾಹೇತುತ್ವಶ್ರವಣಾತ್ಪ್ರಥಮಮನುಷ್ಠೇಯತ್ವೇನ ಪೂರ್ವಕಾಂಡೇ ಯಜ್ಞಾದೀನಿ ಕರ್ಮಾಣ್ಯುಕ್ತಾನಿ । ತೈಃ ಕರ್ಮಭಿರುತ್ಪನ್ನಾಯಾಮಪಿ ವಿವಿದಿಷಾಯಾಂ "ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ" (ಕ. ಉ. ೩-೧೨) ಇತಿ ಶ್ರುತೇರೇಕಾಗ್ರಚಿತ್ತಸ್ಯೈವ ಬ್ರಹ್ಮದರ್ಶನಹೇಕುತ್ವಾತ್ತದೈಕಾಗ್ರ್ಯಸಿದ್ಧ್ಯರ್ಥಮಸ್ಮಿನ್ಕಾಂಡೇ ಪ್ರಥಮಮುಪಾಸನಮಭಿಧೀಯತೇ । ತಚ್ಚೋಪಾಸನಂ ದ್ವಿವಿಧಮ್ । ಬ್ರಹ್ಮೋಪಾಸನಂ ಪ್ರತೀಕೋಪಾಸನಂ ಚೇತಿ । ಬ್ರಹ್ಮಣ ಏವ ಗುಣವಿಶಿಷ್ಟತ್ವೇನ ಚಿಂತನಂ ಬ್ರಹ್ಮೋಪಾಸನಂ ಪ್ರಬಲಲೌಕಿಕಪದಾರ್ಥವಾಸನೋಪೇತಸ್ಯ ತತ್ಪರಿತ್ಯಾಗೇನ ಬ್ರಹ್ಮಣಿ ಚಿತ್ತಸ್ಯಾಪ್ರವೇಶಾದ್ಬ್ರಹ್ಮಭಾವನಯಾ ಲೌಕಿಕವಸ್ತುಚಿಂತೆನಂ ಪ್ರತೀಕೋಪಾಸನಂ । ತಚ್ಚ ಪ್ರತೀಕಂ ದ್ವಿವಿಧಮ್ । ಯಜ್ಞಾದ್ಬಹಿರ್ಭೂತಂ ಯಜ್ಞಾಂಗಂ ಚೇತಿ । ತತ್ರ ಮಹಾವ್ರತಾಂತ ಬಹುವಿಧಯಜ್ಞವಾಸನಾವಾಸಿತಸ್ಯ ಯಜ್ಞಾಂಗೇ ಸಹಸಾ ಚಿತ್ತಂ ಪ್ರವಿಶತೀತಿ ಮತ್ವಾ "ಉಕ್ಥಮುಕ್ಥಮ್" ಇತ್ಯಾದಿನಾಽಂಗವಬದ್ಧ-

ಮುಪಾಸನಮುಚ್ಯತೇ । ಏತೇಷ್ವಂಗಾವಬದ್ಧೇಷೂಪಾಸನೇಷು ಪಂಚ ವಿಚಾರಾ ಮೀಮಾಂಸಾಯಾಂ ಪ್ರವೃತ್ತಾಃ। ಋತ್ವಿಜ ಏವಾತ್ರಾಧಿಕಾರೋ ನ ಯಜಮಾನಸ್ಯೇತ್ಯೇಕೋ ವಿಚಾರಃ । ಕರ್ಮಾಂಗೇಷು ಪ್ರತೀಕೇಷ್ವೇವ ಪೃಥಿವ್ಯಾದಿ ದೇವತಾದೃಷ್ಟಿರ್ನ ತು ದೇವತಾಯಾಮಂಗದೃಷ್ಟಿರಿತಿ ದ್ವಿತೀಯಃ । ಯಸ್ಯಾಂ ಶಾಖಾಯಾಂ ಯದ್ಧ್ಯಾನಂ ವಿಹಿತಂ ತಚ್ಛಾಖಾಗತ ಏವಾಂಗೇ ತದಿತಿ ನಾಸ್ತಿ ನಿಯಮಃ ಕಿಂತು ಶಾಖಾಂತರಗತೇಽಪ್ಯಂಗ ಇತಿ ತೃತೀಯಃ । ಯಾವಂತ್ಯಂಗಾವಬದ್ಧಾನ್ಯುಪಾಸನಾನಿ ಸಂತಿ ತಾನಂತಿ ಸರ್ವಾಣ್ಯನುಷ್ಠೇಯಾನೀತಿ ನಾಸ್ತಿ ನಿಯಮಃ ಕಿಂ ತ್ವೇಕಂ ಬಹೂನಿ ವಾ ಸ್ವೇಚ್ಛಯೇತಿ ಚತುರ್ಥಃ । ಕರ್ಮಾನುಷ್ಠಾನಕಾಲೇಽಂಗಾವಬದ್ಧೋಪಾಸನಾನ್ಯವಶ್ಯಮನುಷ್ಠೇಯಾನೀತಿ ನಾಸ್ತಿ ನಿಯಮಃ ಕಿಂತು ಸ್ವೇಚ್ಛಯಾ ತದನುಷ್ಠಾನಮಿತಿ ಪಂಚಮಃ ॥

ಪೂರ್ವೋತ್ತರಕಾಂಡಗಳಲ್ಲಿ ಎರಡು ವಿಧವಾದ ಮಾರ್ಗವು ಉಪದಿಷ್ಟವಾಗಿದೆಯೆಂದು ಹೇಳಿದ್ದಾಯಿತು. "ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ" ಎಂಬ ಶ್ರುತಿವಚನದಿಂದ ಯಜ್ಞಾದಿಗಳಿಗೆ ವಿವಿದಿಷಾಕಾರಣತ್ವಪ್ರತಿಪಾದಿತವಾದುದರಿಂದ ಪೂರ್ವಕಾಂಡದಲ್ಲಿ ಯಜ್ಞಾದಿಕರ್ಮಗಳು ವಿವೃತವಾಗಿವೆ. ಬ್ರಹ್ಮಜ್ಞಾನೇಚ್ಛೆಗೆ ವಿವಿದಿಷಾ ಎಂದು ಹೆಸರು. ಯಜ್ಞಾದಿಕರ್ಮಾನುಷ್ಠಾನದಿಂದ ವಿವಿದಿಷಾ ಉತ್ಪನ್ನವಾದರೂ "ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ" ಇತ್ಯಾದಿಶ್ರುತಿವಾಕ್ಯದಿಂದ ಏಕಾಗ್ರಚಿತ್ತನಿಗೇ ಬ್ರಹ್ಮಸಾಕ್ಷಾತ್ಕಾರವಾಗುತ್ತದೆಂದು ತಿಳಿಯುವುದರಿಂದ ಆ ಏಕಾಗ್ರಚಿತ್ತತೆಗೋಸ್ಕರ ಈ ಕಾಂಡದಲ್ಲಿ ಮೊದಲು ಉಪಾಸನೆಯನ್ನು ಹೇಳುತ್ತಾರೆ. ಬ್ರಹ್ಮೋಪಾಸನೆ, ಪ್ರತೀಕೋಪಾಸನೆಯೆಂದು ಈ ಉಪಾಸನೆ ಎರಡುವಿಧವಾಗಿದೆ. ಬ್ರಹ್ಮನನ್ನೇ ಗುಣವಿಶಿಷ್ಟವಾಗಿ ಧ್ಯಾನಮಾಡುವುದು ಬ್ರಹ್ಮೋಪಾಸನೆ. ಪ್ರಬಲಲೌಕಿಕಪದಾರ್ಥವಾಸನೆಯಿಂದ ಕೂಡಿದವನಿಗೆ ಅದನ್ನು ಬಿಟ್ಟು ಕೇವಲ ಬ್ರಹ್ಮನನ್ನು ಧ್ಯಾನಿಸುವುದು ಅಸಾಧ್ಯವಾದುದರಿಂದ ಲೌಕಿಕವಸ್ತುವನ್ನು ಧ್ಯಾನಿಸುವುದಕ್ಕೆ ಪ್ರತೀಕೋಪಾಸನೆಯೆಂದು ಹೆಸರು. ಈ ಪ್ರತೀಕವೂ ಎರಡುವಿಧ. ಯಜ್ಞಕ್ಕೆ ಸಂಬಂಧಪಡದವಸ್ತು ಚಿಂತನವೊಂದು. ಯಜ್ಞಾಂಗವಸ್ತು ಚಿಂತನ ಎರಡನೆಯ ಪ್ರಕಾರ. ಮಹಾವ್ರತಾಂತವವರೆಗೆ ವಿಧಿಸಿದಯಜ್ಞಗಳಲ್ಲಿ ಆಸಕ್ತನಾದವನಿಗೆ ಯಜ್ಞಾಂಗಗಳಲ್ಲಿಯೇ ಮೊದಲು ಪ್ರವೃತ್ತಿಯುಂಟಾಗುವುದರಿಂದ 'ಉಕ್ಥಮುಕ್ಥಂ' ಎಂದು ಅಂಗಸಂಬದ್ಧವಾದ ಉಪಾಸನೆ ಹೇಳಿದೆ.

ಈ ಅಂಗಸಂಬದ್ಧ ಉಪಾಸನೆಗಳಲ್ಲಿ ಐದುರೀತಿ ವಿಚಾರ ಮೀಮಾಂಸಾಶಾಸ್ತ್ರದಲ್ಲಿ ಪ್ರತಿಪಾದಿಸಿವೆ. ಋತ್ವಿಜರಿಗೇ ಈ ಉಪಾಸನೆಯಲ್ಲಿ ಅಧಿಕಾರವಲ್ಲದೆ ಯಜಮಾನನಿಗಲ್ಲವೆಂದು ಮೊದಲನೆಯ ವಿಚಾರ. ಕರ್ಮಾಂಗಪ್ರತೀಕಗಳಲ್ಲಿಯೇ ಪೃಥಿವ್ಯಾದಿದೇವತಾದೃಷ್ಟಿಯಲ್ಲದೆ ದೇವತೆಯಲ್ಲಿ ಅಂಗದೃಷ್ಟಿಯಲ್ಲವೆಂದು ಎರಡನೆಯ ವಿಚಾರ. ಯಾವ ಶಾಖೆಯಲ್ಲಿ ಯಾವಧ್ಯಾನವು ವಿಹಿತವಾಗಿದೆಯೋ ಆಶಾಖೆಗೆ ಸಂಬಂಧಿಸಿದ ಅಂಗದಲ್ಲಿಯೇ ಉಪಾಸನೆಯೆಂಬ ನಿಯಮವಿಲ್ಲ, ಇತರ ಶಾಖೆಗಳ ಅಂಗದಲ್ಲಿಯೂ ಅದನ್ನು ಹೇಳಬಹುದೆಂದು ಮೂರನೆಯ ವಿಚಾರ. ಎಷ್ಟು ಅಂಗಸಂಬದ್ಧವಾಗಿ ಉಪಾಸನೆಗಳು ಹೇಳಿವೆಯೋ ಅವೆಲ್ಲವನ್ನೂ ಅನುಷ್ಠಾನಮಾಡಬೇಕೆಂಬನಿಯಮವಿಲ್ಲ. ಒಂದಾಗಲೀ, ಹಲವಾಗಲೀ ಸ್ವೇಚ್ಛೆಯಿಂದ ಮಾಡಬಹುದು ಎಂದು ನಾಲ್ಕನೆಯ ನಿರ್ಣಯ ಕರ್ಮಾನುಷ್ಠಾನಕಾಲದಲ್ಲಿ ಅಂಗಸಂಬದ್ಧೋಪಸನೆಗಳನ್ನೂ ಮಾಡಬೇಕೆಂಬನಿಯಮವಿಲ್ಲ. ಅದನ್ನೂ ಸ್ವೇಚ್ಛೆಯಿಂದ ಮಾಡಬಹುದು ಎಂದು ಐದನೆಯ ವಿಚಾರ.

ತತ್ರ ಪ್ರಥಮೋ ವಿಚಾರಸ್ತೃತೀಯಾಧ್ಯಾಯಸ್ಯ ಚತುರ್ಥಪಾದೇಽಭಿಹಿತಃ ||

" ಅಂಗಧ್ಯಾನಂ ಯಜಮಾನಮಾರ್ತ್ವಿಜ್ಯಂ ವಾ ಯತಃ ಫಲಮ್ |
ಧ್ಯಾತುರೇವ ಶ್ರುತಂ ತಸ್ಮಾದ್ಯಾಜಮಾನಮುಪಾಸನಮ್ ||
ಬ್ರೂಯಾದೇವಂ ವಿದುದ್ಗಾತೇತ್ಯಾರ್ತ್ವಿಜ್ಯಂ ತು ಸ್ಫುಟಂ ಶ್ರುತಮ್ |
ಕ್ರೀತತ್ವಾದೃತ್ವಿಜಸ್ತೇನ ಕೃತಂ ಸ್ವಾಮಿಕೃತಂ ಭವೇತ್ ||

ಅಂಗಾವಬದ್ಧೇಷೂಪಾಸನೇಷು ಯಜಮಾನ ಏವಾನುಷ್ಠಾತಾ ನರ್ತ್ವಿಕ್, ಧ್ಯಾತುಃ ಫಲಶ್ರವಣಾತ್ | ಫಲಂ ತು ಯಜಮಾನಸ್ಯೈವೋಚಿತಂ ಸ್ವಾಮಿತ್ವಾತ್ | ತಸ್ಮಾತ್ಫಲಿನೋ ಯಜಮಾನಸ್ಯೈವ ಧ್ಯಾತೃತ್ವಮಿತಿ ಪ್ರಾಪ್ತೇ ಬ್ರೂಮಃ | ಏವಂ ವಿದುದ್ಗಾತಾ ಬ್ರೂಯಾದಿತಿ ವಾಕ್ಯಶೇಷಾದುದ್ಗಾತುರುಪಾಸಕತ್ವಂ ಸ್ಪಷ್ಟಂ ಶ್ರೂಯತೇ | ಯುಕ್ತಂ ಚೈತತ್ | ಋತ್ವಿಜಾಮಶೇಷಕರ್ತವ್ಯಾನುಷ್ಠಾನಾಯ ಯಜಮಾನೇನ ಕ್ರೀತತ್ವಾತ್ | ತಸ್ಮಾದೃತ್ವಿಕ್ಕೃತಮಪಿ ಯಜಮಾನೇನೈವ ಕೃತಮಿತಿ ತ್ವೋಪಪತ್ತೇರುಪಾಸನಮೃತ್ವಿಜಾಂ ಕರ್ಮ |"

ಇವುಗಳಲ್ಲಿ ಪ್ರಥಮ ವಿಚಾರವು ಮೂರನೇ ಅಧ್ಯಾಯದ ನಾಲ್ಕನೇ ಪಾದದಲ್ಲಿ 'ಅಂಗಧ್ಯಾನಂ ಯಾಜಮಾನಂ'-ಇತ್ಯಾದಿ ಶ್ಲೋಕವಾಕ್ಯಗಳಿಂದ ವಿವರಿಸಿದೆ. ಧ್ಯಾನಮಾಡುವವನಿಗೇ ಫಲಶ್ರವಣವಿರುವುದರಿಂದ ಅಂಗಸಂಬದ್ಧ ಉಪಾಸನೆಗಳಲ್ಲಿ ಯಜಮಾನನೇ ಅನುಷ್ಠಾನಕರ್ತೃವಲ್ಲದೆ ಋತ್ವಿಜರಲ್ಲ. ಯಜಮಾನನೇ ಸ್ವಾಮಿಯಾದುದರಿಂದ ಫಲಹೊಂದುವವನು ಅವನೇ ಆದುದರಿಂದ ಧ್ಯಾನಕರ್ತೃವೂ ಅವನೇ ಎಂದು ಪೂರ್ವಪಕ್ಷ. 'ಏವಂ ವಿದುದ್ಗಾತಾಬ್ರೂಯಾತ್' ಇತ್ಯಾದಿ ವಾಕ್ಯಶೇಷದಿಂದ ಉದ್ಗಾತೃವಿಗೆ ಉಪಾಸನೆ ಸ್ಪಷ್ಟವಾಗಿ ತಿಳಿಯುತ್ತದೆ. ಸಕಲಕಾರ್ಯಗಳ ಅನುಷ್ಠಾನಕ್ಕೋಸ್ಕರ ಯಜಮಾನನಿಂದ ಋತ್ವಿಜರು ದಕ್ಷಿಣೆಯಿಂದ ಕ್ರೀತರಾದುದರಿಂದ ಋತ್ವಿಜರುಮಾಡಿದರೂ ಯಜಮಾನನೇ ಮಾಡಿದಂತಾಗುವುದರಿಂದ ಉಪಾಸನವು ಋತ್ವಿಕ್ಕರ್ಮವೆಂದು ಸಿದ್ಧವಾಗುತ್ತದೆ.

ದ್ವಿತೀಯೋ ವಿಚಾರಶ್ಚತುರ್ಥಾಧ್ಯಾಯಸ್ಯ ಪ್ರಥಮಪಾದೇ ದರ್ಶಿತಃ :—

ಆದಿತ್ಯಾದಾವಂಗದೃಷ್ಟಿರಂಗೇ ರವ್ಯಾದಿಧೀರುತ |
ನೋತ್ಕರ್ಷೋ ಬ್ರಹ್ಮಜತ್ವೇನ ದ್ವಯೋಸ್ತೇನೈಷ್ಟಿ (ಚ್ಛೈ) ಕೀ ಮತಿಃ |
ಆದಿತ್ಯಾದಿಧಿಯಾಂಗಾನಾಂ ಸಂಸ್ಕಾರೇ ಕರ್ಮಣಃ ಫಲೇ |
ಯುಜ್ಯತೇಽತಿಶಯಸ್ತಸ್ಮಾದಂಗೇಷ್ವರ್ಕಾದಿದೃಷ್ಟಯಃ ||

" ಯ ಏವಾಸೌತಪತಿ ತಮುದ್ಗೀಥಮುಪಾಸೀತ " ಇತ್ಯಾದಿತ್ಯದೇವತಾಂ ಪ್ರತೀಕಂ ಕೃತ್ವಾ ಕರ್ಮಾಂಗಭೂತೋದ್ಗೀಥದೃಷ್ಟಿಃ ಕರ್ತವ್ಯಾ | ವಿಪರ್ಯಯೇಣ ವಾ ಕರ್ಮಾಂಗ ಆದಿತ್ಯದೃಷ್ಟಿಃ | ಅದಿತ್ಯೋದ್ಗೀಥಯೋರುಭಯೋರ್ಬ್ರಹ್ಮಕಾರ್ಯತ್ವೇನ ಪೂರ್ವಾಧಿಕರಣೋಕ್ತೋತ್ಕರ್ಷನ್ಯಾಯಾವತಾರೇಣ ನಿಯಾಮಕಾಭಾವಾತ್ | ಇತಿ ಪ್ರಾಪ್ತೇ ಬ್ರೂಮಃ—ಆದಿತ್ಯದೃಷ್ಟ್ಯಾ ಕರ್ಮಾಂಗಂ ಸಂಸ್ಕರ್ತವ್ಯಮ್ | ತಥಾ ಸತಿ ದೃಷ್ಟಿಭಿಃ ಸಂಸ್ಕೃತಸ್ಯ ಕರ್ಮಣಃ ಫಲಾತಿಶಯಸಂಭವಾತ್ | ವಿಪರ್ಯಯೇ ತು ಕರ್ಮಾಂಗೈರಾದಿತ್ಯದೇವತಾಯಾಂ ಸಂಸ್ಕೃತಾಯಾಂ ಕಿಂ ತತ್ಕರಿಷ್ಯತಿ | ನ ಹ್ಯಕ್ರಿಯಾ—

**ತ್ಮಿಕಾ ದೇವತಾ ಫಲಸ್ಯ ಸಾಧನಂ ಭವತಿ, ಅನ್ಯಥಾ ದೇವತಾಯಾಃ ಸಾಧಾರಣತ್ವೇನ ಯಜಮಾನಾ-ಯಜಮಾನಯೋಃ ಫಲಸಾಮ್ಯಪ್ರಸಂಗಾತ್ । ತಸ್ಮಾದಂಗೇಷ್ವಾದಿತ್ಯಾದಿದೃಷ್ಟಯಃ ಕರ್ತವ್ಯಾಃ " ॥**

ದ್ವಿತೀಯವಿಚಾರವು ನಾಲ್ಕನೆಯಪಾದದಲ್ಲಿ ವಿವರಿಸಿದೆ. ಇದು 'ಆದಿತ್ಯಾದಾವಂಗದೃಷ್ಟಿ' :- ಎಂಬಿವೇ-ಮುಂತಾದ ಶ್ಲೋಕವಾಕ್ಯಗಳಿಂದ ಅರಬ್ಧವಾಗಿದೆ. " ಯಏವಾಸೌ ತಪತಿ ತಮುದ್ಗೀಥಮುಪಾಸೀತ " ಎಂದು ಆದಿತ್ಯ-ದೇವತಾಪ್ರತೀಕದಲ್ಲಿ ಕರ್ಮಾಂಗಭೂತವಾದ ಉದ್ಗೀಥದೃಷ್ಟಿಮಾಡಬೇಕೇ? ಅಥವಾ ಕರ್ಮಾಂಗಉದ್ಗೀಥದಲ್ಲಿ ಆದಿತ್ಯ-ದೃಷ್ಟಿಯೇ? ಎಂದರೆ ಆದಿತ್ಯ ಉದ್ಗೀಥಗಳೆರಡೂ ಬ್ರಹ್ಮಕಾರ್ಯವಾದುದರಿಂದ ವಿಶೇಷನಿಯಾಮಕಯಾವುದೂ ಇಲ್ಲದಿರು-ವುದರಿಂದ ಹೇಗಾದರೂ ಆಗಬಹುದೆಂದು ಪೂರ್ವಪಕ್ಷ. ಆದಿತ್ಯದೃಷ್ಟಿಯಿಂದಲೇ ಕರ್ಮಾಂಗವನ್ನು ಸಂಸ್ಕರಿಸಬೇಕು ಎಂದು ಸಿದ್ಧಾಂತ. ಹೀಗೆ ಆದಿತ್ಯದಿದೃಷ್ಟಿಯಿಂದ ಸಂಸ್ಕೃತವಾದ ಕರ್ಮವೇ ಅತಿಶಯಫಲದಾಯಕವಾಗುತ್ತದೆ. ಕರ್ಮಾಂ-ಗದಿಂದ ಆದಿತ್ಯಾದಿದೇವತೆಗಳು ಸಂಸ್ಕೃತವಾದರೆ ಯಾವ ಪ್ರಯೋಜನವೂ ಇಲ್ಲ. ದೇವತೆಯು ಕ್ರಿಯಾಸ್ವರೂಪವಾಗ-ದಿರುವುದರಿಂದ ಫಲಸಾಧಕವಾಗುವುದಿಲ್ಲ. ಆದುದರಿಂದ ಅಂಗದಲ್ಲಿಯೇ ಆದಿತ್ಯಾದಿದೃಷ್ಟಿ ಯುಕ್ತವಾಗಿದೆ.

**ತೃತೀಯೋ ವಿಚಾರಸ್ತೃತೀಯಾಧ್ಯಾಯಸ್ಯ ತೃತೀಯಪಾದೇ ದರ್ಶಿತಃ—**

**" ಉಕ್ಥಾದಿಧೀಃ ಸ್ವ ಶಾಖಾಂಗೇಷ್ವೇವಾನ್ಯತ್ರಾಪಿ ವಾ ಭವೇತ್ ।**
**ಸಾಂನಿಧ್ಯಾತ್ಸ್ವಸ್ವಶಾಖಾಂಗೇಷ್ವೇವಾಸೌ ವ್ಯವತಿಷ್ಠತೇ ।**
**ಉಕ್ಥೋದ್ಗೀಥಾದಿಸಾಮಾನ್ಯಂ ತತ್ತಚ್ಛಬ್ದೈಃ ಪ್ರತೀಯತೇ ।**
**ಶ್ರುತ್ಯಾ ಚ ಸಂನಿಧೇರ್ಬಾಧಸ್ತತೋಽನ್ಯತ್ರಾಪಿ ಯಾತ್ಯಸೌ ॥**

**ಅಂಗಾವಬದ್ಧೋಪಾಸನೇಷೂಕ್ಥಶಸ್ತ್ರಸ್ಯ ಕರ್ಮಾಂಗೇ ಪೃಥಿವ್ಯಾದಿದೃಷ್ಟಿರೈತರೇಯೋಪನಿಷದಿ ಶ್ರೂಯತೇ । ಉಕ್ಥಂ ತು ಕೌಷೀತಕ್ಯಾದಿಶಾಖಾಂತರೇಷ್ವಪಿ ವಿಹಿತಮ್ । ತತ್ರ ಪೃಥಿವೀದೃಷ್ಟಿರೈತ-ರೇಯಕೋಕ್ಥ ಏವ ವ್ಯವತಿಷ್ಠತ ಉತ ಕೌಷೀತಕ್ಯಾದಿಷ್ವನುವರ್ತತ ಇತಿ ಸಂದೇಹೇ ಸತಿ ಸಂನಿಹಿ-ತತ್ವಾತ್ ಸ್ವಶಾಖಾಯಾಮೇವ ವ್ಯವಸ್ಥಿತೇತಿ ಪ್ರಾಪ್ತೇ ಬ್ರೂಮಃ । ಉಕ್ಥಶಬ್ದಸ್ತಾವನ್ಮುಖ್ಯಯಾ ವೃತ್ತ್ಯಾ ಸರ್ವಶಾಖಾಗತಮುಕ್ಥಸಾಮಾನ್ಯಮಾಚಷ್ಟೇ । ತತ ಉಕ್ಥಶ್ರುತಿವಶಾತ್ಸರ್ವಶಾಖಾಗತೋ-ಕ್ಥೇಷ್ವನುವೃತ್ತಿಃ ಪ್ರಾಪ್ತಾ । ಶ್ರುತಿಃ ಸಂನಿಧೇರ್ಬಲೀಯಸೀ, ತಸ್ಮಾತ್ಕ್ವಚಿದ್ವಿಹಿತಾ ಧೀಃ ಶಾಖಾಂತ ರೇಷ್ವನುಗಚ್ಛತಿ ॥ "**

" ಉಕ್ಥಾದಿಧೀಃ ಸ್ವಶಾಖಾಂಗೇಷು- " ಇತ್ಯಾದಿಶ್ಲೋಕವಾಕ್ಯಗಳಿಂದ ಮೂರನೆಯ ವಿಚಾರವೂ ಮೂರನೇ ಅಧ್ಯಾಯದ ಮೂರನೇಪಾದದಲ್ಲಿ ವಿವರಿಸಿದೆ. ಅಂಗಸಂಬದ್ಧೋಪಾಸನೆಗಳಲ್ಲಿ ಉಕ್ಥಶಸ್ತ್ರದ ಕರ್ಮಾಂಗದಲ್ಲಿ ಪೃಥಿವ್ಯಾದಿ-ದೃಷ್ಟಿಯು ಐತರೇಯೋಪನಿಷತ್ತಿನಲ್ಲಿ ವಿಹಿತವಾಗಿದೆ. ಉಕ್ಥವಾದರೋ ಕೌಷೀತಕ್ಯಾದಿಶಾಖಾಂತರದಲ್ಲಿಯೂ ವಿಹಿತ-ವಾಗಿದೆ. ಇಲ್ಲಿ ಪೃಥಿವ್ಯಾದಿದೃಷ್ಟಿಯು ಐತರೇಯವಿಹಿತಉಕ್ಥದಲ್ಲಿ ಮಾತ್ರವೇ ಅಥವಾ ಕೌಷೀತಕ್ಯಾದಿಉಕ್ಥಗಳಲ್ಲಿಯೂ ಅನುವೃತ್ತವಾಗುತ್ತದೆಯೇ ಎಂದು ಸಂದೇಹ ಬಂದರೆ ಸಂನಿಹಿತವಾದುದರಿಂದ ಸ್ವಶಾಖಾಗತಉಕ್ಥದಲ್ಲಿಮಾತ್ರವೆಂದು ಪೂರ್ವ-ಪಕ್ಷ. ಉಕ್ಥಶಬ್ದವು ಮುಖ್ಯವೃತ್ತಿಯಿಂದ ಎಲ್ಲಾಶಾಖೆಗಳಲ್ಲಿರುವ ಉಕ್ಥಸಾಮಾನ್ಯವನ್ನು ಹೇಳುತ್ತದೆ. ಆಗ ಉಕ್ಥಶ್ರುತಿ-ಯಿಂದ ಸರ್ವಶಾಖಾಗತಉಕ್ಥಗಳಲ್ಲಿಯೂ ಅದು ಅನುವೃತ್ತವಾಗುತ್ತದೆಂದು ಸಿದ್ಧಾಂತ. ಸಂನಿಧಿಗಿಂತ ಶ್ರುತಿಗೇಪ್ರಾಬಲ್ಯ ವಿರುವುದರಿಂದ ಒಂದುಕಡೆ ವಿಹಿತವಾದರೆ ಅದು ಸರ್ವಶಾಖೆಗಳಲ್ಲಿಯೂ ಅನುವೃತ್ತವಾಗುತ್ತದೆ.

ಚತುರ್ಥೋ ವಿಚಾರಸ್ತತ್ರೈವ ದರ್ಶಿತಃ—

" ಸಮುಚ್ಚಯೋಽಂಗಬದ್ಧೇಷು ಯಾಥಾಕಾಮ್ಯೇನ ವಾ ಮತಿಃ ।
ಸಮುಚ್ಚಿತತ್ವಾದಂಗಾನಾಂ ತ್ವ (ತ)ದ್ವದ್ಧೇಷು ಸಮುಚ್ಚಯಃ ॥
ಗ್ರಹಂ ಗೃಹೀತ್ವಾ ಸ್ತೋತ್ರಸ್ಯಾರಭ್ಯ ಇತ್ಯಾದಿವನ್ನಹಿ ॥
ಶ್ರೂಯತೇ ಸಹಭಾವೋಽತ್ರ ಯಾಥಾಕಾಮ್ಯಂ ತತೋ ಭವೇತ್ ॥

ದ್ವಿವಿಧಾನಿ ಪ್ರತೀಕಾನಿ, ಲೌಕಿಕಾನಿ ಕರ್ಮಾಂಗಾಣಿ ಚ । ತತ್ರ ಲೌಕಿಕೇಷು ಪ್ರತೀಕೇಷು ನಿರ್ಣಯಃ ಪೂರ್ವೋಕ್ತಃ । ಅತ್ರ ಕರ್ಮಾಂಗೇಷು ಸಮುಚ್ಚಯಯಾಥಾಕಾಮ್ಯೇ ವಿಚಾರ್ಯೇತೇ ತತ್ರ ಕರ್ಮಾಂಗಾಣಿ ಸಮುಚ್ಚಿತ್ಯೈವಾನುಷ್ಠೇಯತಯಾ ಪ್ರಯೋಗವಿಧಿಪ್ರಾಪಿತಾನಿ । ತಥಾ ಚಾಂಗ-ತಂತ್ರತ್ವಾದಂಗಾವಬದ್ಧೋಪಾಸನಾನಾಮಪಿ ಸಮುಚ್ಚಯನಿಯಮ ಇತಿ ಪ್ರಾಪ್ತೇ ಬ್ರೂಮಃ— " ಗ್ರಹಂ ವಾ ಗೃಹೀತ್ವಾ ಚಮಸಂ ವೋನ್ನೀಯ ಸ್ತೋತ್ರಮುಪಕುರ್ಯಾತ್ " " ಸ್ತುತಮನುಶಂಸ " ಇತ್ಯಾದೌ ಯಥಾ ಗ್ರಹಸ್ತೋತ್ರಶಂಸನಾದೀನಾಂ ನಿಯತಪೌರ್ವಾಪರ್ಯೇಣ ಸಹಭಾವಃ ಶ್ರುತೋ ನ ತಥೋಪಾಸನೇಷು ಶ್ರೂಯತೇ । ತಸ್ಮಾದ್ವಿಕಲ್ಪಸಮುಚ್ಚಯಯೋರ್ಯಾಥಾ-ಕಾಮ್ಯಮ್ ॥

' ಸಮುಚ್ಚಯೋಂಗಬದ್ಧೇಷು '– ಇತ್ಯಾದಿವಾಕ್ಯಗಳಿಂದ ನಾಲ್ಕನೆಯ ವಿಚಾರವೂ ಅಲ್ಲಿಯೇ ವಿವೃತವಾಗಿದೆ, ಲೌಕಿಕ ಕರ್ಮಾಂಗವೆಂದು ಪ್ರತೀಕವು ಎರಡು ವಿಧವಾಗಿದೆ. ಲೌಕಿಕಪ್ರತೀಕವಿಚಾರ ಹಿಂದೆ ಹೇಳಿದೆ. ಕರ್ಮಾಂಗಗಳಲ್ಲಿ ಸಮುಚ್ಚಯವೇ ? ಅಥವಾ ಇಚ್ಛಾನುಸಾರವೇ ಎಂದು ವಿಚಾರಿಸಬೇಕು. ಪ್ರಯೋಗವಿಧಿಪ್ರಾಪಿತವಾದುದರಿಂದ ಕರ್ಮಾಂ-ಗಗಳನ್ನು ಸಮುಚ್ಚಯದಿಂದ (ಎಲ್ಲಾ ಕೂಡಿಕೊಂಡು) ಅನುಷ್ಠಾನ ಮಾಡಬೇಕು. ಲಿಂಗಾಧೀನವಾದುದರಿಂದ ಅಂಗ-ಸಂಬದ್ಧಗಳಾದ ಉಪಾಸನೆಗಳಿಗೂ ಈ ಸಮುಚ್ಚಯ ನಿಯಮವೇ ಎಂದು ಪೂರ್ವಪಕ್ಷ. ಗ್ರಹಂ ವಾ ಗೃಹೀತ್ವಾ ಚಮಸಂ ವೋನ್ನೀಯ ಸ್ತೋತ್ರಮುಪಾಕುರ್ಯಾತ್ ಇತ್ಯಾದಿ ವಿಧಿವಾಕ್ಯಗಳಿಂದ ಗ್ರಹಸ್ತೋತ್ರಾದಿಗಳಿಗೆ ನಿಯತಪೌರ್ವಾಪರ್ಯದಿಂದ ಸಹಭಾವ ಶ್ರುತವಾದರೂ ಉಪಾಸನಾವಿಷಯದಲ್ಲಿ ಇಂತಹವಾಕ್ಯ ಶ್ರುತವಾಗದಿರುವುದರಿಂದ ಸಮುಚ್ಚಯನಿಯಮವಿಲ್ಲ. ವಿಕಲ್ಪಸಮುಚ್ಚಯಗಳಿಗೆ ಇಚ್ಛಾಧೀನತ್ವ ವ್ಯಕ್ತವಾಗುತ್ತದೆ.

ಪಂಚಮೋ ವಿಚಾರಸ್ತತ್ರೈವದರ್ಶಿತಃ—

" ನಿತ್ಯಾ ಅಂಗಾವಬದ್ಧಾಃ ಸ್ಯುಃ ಕರ್ಮಸ್ವನಿಯತಾ ಉತ ॥
ಪರ್ಣವತ್ಕ್ರತುಸಂಬಂಧೋ ವಾಕ್ಯಾನ್ನಿತ್ಯಾಸ್ತತೋ ಮತಾಃ ।
ಪೃಥಕ್ಫಲಶ್ರುತೇರ್ನೈತಾ ನಿತ್ಯಾ ಗೋದೋಹನಾದಿವತ್ ॥
ಉಭೌ ಕುರುತ ಇತ್ಯುಕ್ತೇಽ ಕರ್ಮೋಪಾಸ್ಯನುಪಾಸಿನೋಃ ॥

ಉದ್ಗೀಥಾದಿಷು ಕರ್ಮಾಂಗೇಷು ಪ್ರತಿಮಾದಿವತ್ಪ್ರತೀಕಭೂತೇಷು ವಿಧೀಯಮಾನಾ ದೇವತೋ-ಪಾಸ್ತಯೋಽಂಗಾಪಬದ್ಧಾಃ । ತಾಶ್ಚ ಕರ್ಮಸ್ವನುಷ್ಠೀಯಮಾನೇಷು ಕರ್ಮಾಂಗವನ್ನಿಯಮೇ-ನಾನುಷ್ಠಾತವ್ಯಾಃ । ಕರ್ಮಪ್ರಕರಣಮಾರಭ್ಯಾಧ್ಯಯನಾಭಾವೇಽಪಿ ವಾಕ್ಯಾತ್ ಕ್ರತುಸಂಬಂಧೋ-ಪಪತ್ತೇಃ । ಯಥಾ—" ಯಸ್ಯ ಪರ್ಣಮಯೀ ಜುಹೂರ್ಭವತಿ " ಇತ್ಯನಾರಭ್ಯಾಧೀತಸ್ಯಾಪ್ಯಚರಿತ-

ಜುಹೂದ್ವಾರಾ ವಾಕ್ಯಾತ್ಕ್ರತುಸಂಬಂಧಃ ಪ್ರತೀಯತೇ । ತಸ್ಮಾತ್ಕರ್ಮಸು ನಿಯತಾ ಉಪಾಸ್ತಯ ಇತಿ ಪ್ರಾಪ್ತೇ ಬ್ರೂಮಃ—ಗೋದೋಹನಾದಿವದನಿಯತಾ ಉಪಾಸ್ತಯಃ । ಯಥಾ "ಚಮಸೇನಾಪಃ ಪ್ರಣಯೇತ್" "ಗೋದೋಹನೇನ ಪಶುಕಾಮಸ್ಯ" ಇತ್ಯತ್ರಾಪ್ಪ್ರಣಯನಮಾಶ್ರಿತ್ಯ ವಿಧೀಯಮಾನಮಪಿ ಗೋದೋಹನಮಕ್ರತ್ವರ್ಥತ್ವಾದೈಚ್ಛಿಕಂ ನ ತು ಪ್ರಣಯನಾದಿವನ್ನಿಯತಂ ತಥಾ ಕರ್ಮಾಂಗಾಣ್ಯಾಶ್ರಿತ್ಯ ವಿಧೀಯಮಾನಾ ಉಪಾಸ್ತಯೋ ನ ಕ್ರತ್ವರ್ಥಾಃ ಕಿಂತು ಪುರುಷಾರ್ಥಾಃ । ಕರ್ಮಫಲಾತ್ಪೃಥಕ್ಫಲಶ್ರವಣಾತ್ । "ವರ್ಷತಿ ಹಾಸ್ಮೈ" ಇತಿ ಪಂಚವಿಧೇ ಸಾಮನಿ ವೃಷ್ಟಿದೇವತಾಮುಪಾಸೀನಸ್ಯ ಕಾಮವೃಷ್ಟಿಃ ಕ್ರತುಫಲಾತ್ಪೃಥಕ್ಫಲತ್ವೇನ ಶ್ರೂಯತೇ । ಕಿಂಚ "ತಾವುಭೌ ಕುರುತೋ ಯಶ್ಚೈವಂ ವೇದ ಯಶ್ಚ ನ ವೇದ" ಇತ್ಯಸ್ಮಿನ್ನಂಗಾವಬದ್ಧೋಪಾಸ್ತಿವಾಕ್ಯಶೇಷೇ ಉಪಾಸಕಾನುಪಾಸಕಯೋರುಪಾಸ್ತ್ಯಾಧಾರಭೂತೇನ ತೇನಾಂಗೇನ ಕರ್ಮಾನುಷ್ಠಾನಂ ವಿಸ್ಪಷ್ಟಮಾಮ್ನಾಯತೇ । ತಸ್ಮಾತ್ಕರ್ಮಸ್ವನಿಯತಾ ಉಪಾಸ್ತಯಃ" ತದೇತೈಃ ಪಂಚಭಿರ್ವಿಚಾರೈರ್ನಿರ್ಣೀತಮಂಗಾವಬದ್ಧೋಪಾಸನಂ ನಾನಾವಿಧವಿಶೇಷಣವಿಶಿಷ್ಟಮ್ "ಉಕ್ಥಮುಕ್ಥಮ್" ಇತ್ಯಾರಭ್ಯ "ಆತ್ಮಾ ವಾ ಇದಮ್" ಇತ್ಯತಃ ಪ್ರಾಕ್ತನೇನ ಗ್ರಂಥೇನ ಪ್ರತಿಪಾದ್ಯತೇ । ತತ್ರಾದೌ ಮಹಾವ್ರತಾಂಗಭೂತೇ ನಿಷ್ಕೇವಲ್ಯಾಖ್ಯಶಸ್ತ್ರೇ ಪೃಥಿವ್ಯಾದ್ಯಾಧಿದೈವಿಕದೇವತಾದೃಷ್ಟಿಂ ವಾಗಾದ್ಯಾಧ್ಯಾತ್ಮಿಕದೇವತಾದೃಷ್ಟಿಂ ಚ ಕ್ರಮೇಣ ವಿಧಿತ್ಸುಃ ಪೃಥಿವೀಧ್ಯಾನಂ ದರ್ಶಯತಿ—

ಐದನೆಯ ವಿಚಾರವೂ "ನಿತ್ಯಾ ಅಂಗಾವಬದ್ಧಾ :-" ಇತ್ಯಾದಿವಾಕ್ಯಗಳಿಂದ ಆ ತೃತೀಯ ಪಾದದಲ್ಲಿಯೇ ವಿವರಿಸಿದೆ. ಉದ್ಗೀಥಾದಿಕರ್ಮಾಂಗಗಳಲ್ಲಿ ವಿಹಿತವಾದ ದೇವತೋಪಾಸನಗಳೂ ಅಂಗಸಂಬದ್ಧವಾದುದರಿಂದ ಕರ್ಮಗಳನ್ನು ಅನುಷ್ಠಾನಮಾಡುವಾಗ ಕರ್ಮಾಂಗಗಳಂತೆ ಉಪಾಸನೆಗಳನ್ನೂ ನಿಯಮದಿಂದ ಅನುಷ್ಠಾನಮಾಡಬೇಕು. ಕೆಲವು ಕರ್ಮಾಂಗಗಳಿಗೆ ಸಾಕ್ಷಾತ್ಕ್ರತು(ಯಾಗ)ಸಂಬಂಧ ತೋರದಿದ್ದರೂ, "ಏವಂ ವಿದ್ವಾನುದ್ಗಾಯತಿ" "ಏವಂ ವಿದ್ವಾನ್ಸಾಮ ಗಾಯತಿ" ಇತ್ಯಾದಿವಾಕ್ಯಗಳಲ್ಲಿ ನಿಯತಕ್ರತುಸಂಬಂಧಿಗಳಾದ ಉದ್ಗೀಥಾದಿಮೂಲಕ ಉಪಾಸನೆಗಳೂ ಕ್ರತುಸಂಬಂಧತೋರುವುದರಿಂದ ಅವುಗಳೂ ನಿಯತಾನುಷ್ಠಾನಪ್ರಾಪ್ತವಾಗುತ್ತವೆ ಎಂದು ಪೂರ್ವಪಕ್ಷ. ಇದಕ್ಕೆ ಸಿದ್ಧಾಂತಿಗಳ ಉತ್ತರ ಗೋದೋಹನೇ(ಹಾಲುಕರೆಯುವುದು.)ದಿಕಾರ್ಯವಂತೆ ಉಪಾಸನೆಗಳೂ ಅನಿಯತವಾದವುಗಳೇ. 'ಚಮಸೇನಾಪಃ ಪ್ರಣಯೇತ್' "ಗೋದೋಹನೇನ ಪಶುಕಾಮಸ್ಯ" ಎಂದು ಅಪ್ಪ್ರಣಯನಪೂರ್ವಕ ಗೋದೋಹನ ವಿಹಿತವಾದರೂ ಅದು ಕ್ರತ್ವರ್ಥವಾಗದಿರುವುದರಿಂದ ಹೇಗೆ ಐಚ್ಛಿಕವೋ ಅಪ್ಪ್ರಣಯನವಂತೆ ನಿಯತವಲ್ಲವೋ ಅದರಂತೆ ಕರ್ಮಾಂಗಗಳನ್ನಾಶ್ರಯಿಸಿ ಉಪಾಸನೆಗಳನ್ನು ವಿಧಿಸಿದರೂ ಅವು ಕ್ರತ್ವರ್ಥವಾಗುವುದಿಲ್ಲ. ಕರ್ಮಫಲಕ್ಕಿಂತ ಬೇರೆಯಾದ ಫಲಶ್ರವಣದಿಂದ ಅವು ಪುರುಷಾರ್ಥವಾಗುತ್ತವೆ. ಆದುದರಿಂದ ಕರ್ಮಾಂಗಸಂಬದ್ಧವಾದರೂ ಅವುಗಳು ಅನಿಯತಗಳೇ ಕರ್ಮಾಂಗಾನುಷ್ಠಾನದಂತೆ ನೈಯತ್ಯವಿಲ್ಲ.

ಉಕ್ಥಮುಕ್ಥಮಿತಿ ವೈ ಪ್ರಜಾ ವದಂತಿ ತದಿದಮೇವೋಕ್ಥಮಿಯಮೇವ
ಪೃಥಿವೀತೋ ಹೀದಂ ಸರ್ವಮುತ್ತಿಷ್ಠತಿ ಯದಿದಂ ಕಿಂಚ ಇತಿ ||

ಉಕ್ಥಂ ಶಸ್ತ್ರಂ, ಉತ್ತಿಷ್ಠತ್ಯನೇನ ದೇವತಾಪ್ರಸಾದ ಇತಿ ವ್ಯುತ್ಪತ್ತೇಃ । ತತ್ರ ಯಜ್ಞಂ ನಿಷ್ಪಾದಯಂತೋ ಹೋತೃಯಜಮಾನಾದಯಃ ಪ್ರಜಾಸ್ತತ್ತಚ್ಛಸ್ತ್ರೇ ಧ್ಯಾತವ್ಯಂ ರಹಸ್ಯಂ ಸ್ವರೂಪಮಜ್ಞಾತ್ವಾ ಕೇವಲಂ ನಾಮಮಾತ್ರೇಣೋಕ್ಥಮುಕ್ಥಮಿತ್ಯೇವ ವ್ಯವಹರಂತಿ ॥ ತದ್ರಹಸ್ಯಂ ತ್ವಭಿಧೀಯತೇ—ತದುಕ್ಥಸ್ವರೂಪಮಿದಮೇವ ವಕ್ಷ್ಯಮಾಣಂ ಯೇಯಂ ಪೃಥಿವೀ ದೃಶ್ಯತೇ ಸೈವ ತದ್ರೂಪಮ್ ॥ ಇತೋ ಹಿ ಪೃಥಿವ್ಯಾಃ ಸಕಾಶಾದಿದಂ ಸ್ಥಾವರಜಂಗಮರೂಪಂ ಸರ್ವಂ ಜಗದುತ್ತಿಷ್ಠತಿ ತಸ್ಮಾತ್ಪೃಥಿವ್ಯಾ ಉಕ್ಥತ್ವಂ ಯುಕ್ತಮ್ । ಉಕ್ಥೇ ಪೃಥಿವೀದೃಷ್ಟಿಃ ಕರ್ತವ್ಯೇತ್ಯರ್ಥಃ ॥

ಹೀಗೆ ಕರ್ಮವಿಷಯದಲ್ಲಿ ಅನಿಯತಗಳಾದ ಅಂಗಸಂಬಂಧ್ಧಉಪಾಸನೆಗಳು ನಾನಾವಿಶೇಷಣವಿಶಿಷ್ಟಗಳಾಗಿ "ಉಕ್ಥಮುಕ್ಥಂ" ಎಂದು ಆರಂಭಿಸಿ, "ಆತ್ಮಾ ವಾ ಇದಮ್" ಎಂಬ ಶ್ರುತಿವಾಕ್ಯದವರೆಗೆ ವಿವರಿಸುತ್ತಾರೆ. ಮೊದಲು ಮಹಾವ್ರತಾಂಗಭೂತವಾದ ನಿಷ್ಕೇವಲ್ಯವೆಂಬಶಸ್ತ್ರದಲ್ಲಿ ಪೃಥಿವ್ಯಾದಿ ಆಧಿದೈವಿಕದೇವತಾದೃಷ್ಟಿಯನ್ನೂ, ಕ್ರಮವಾಗಿ ವಿಧಿಸಲು ಪೃಥಿವೀಧ್ಯಾನವನ್ನು ತೋರಿಸುತ್ತಾರೆ. ಉಕ್ಥವೆಂದರೆ ಶಸ್ತ್ರಮಂತ್ರ "ಉತ್ತಿಷ್ಠತಿ ಅನೇನ ದೇವತಾಪ್ರಸಾದ :" (ಇದರಿಂದ ದೇವತಾನುಗ್ರಹವುಂಟಾಗುತ್ತದೆ) ಪ್ರಜೆಗಳು ಆಯಾಯಶಸ್ತ್ರದಲ್ಲಿ ಧ್ಯಾನಿಸಬೇಕಾದ ರಹಸ್ಯಸ್ವರೂಪವನ್ನು ತಿಳಿಯದೇ 'ಉಕ್ಥಂ, ಉಕ್ಥಂ' ಎಂದು ಕೇವಲನಾಮದಿಂದ ವ್ಯವಹರಿಸುತ್ತಾರೆ. ಅದರ ರಹಸ್ಯಸ್ವರೂಪ ಹೀಗಿದೆ. ಈ ತೋರತಕ್ಕ ಯಾವ ಪೃಥಿವಿಇದೆಯೋ ಇದೇ ಉಕ್ತದಸ್ವರೂಪ. ಈ ಪೃಥಿವಿಯಿಂದಲೇ ಸ್ಥಾವರಜಂಗಮಗಳೆಲ್ಲವೂ ಉಗುರವಾಗುವುದರಿಂದ ಪೃಥಿವಿಗೆ ಉಕ್ಥತ್ವವು ಯುಕ್ತವಾಗಿದೆ. ಹೀಗೆ ಉಕ್ಥದಲ್ಲಿ ಪೃಥಿವೀದೃಷ್ಟಮಾಡಬೇಕೆಂದು ತಾತ್ಪರ್ಯ.

ತಸ್ಯಾಗ್ನಿರರ್ಕೋಽನ್ನಮಶೀತಯೋಽನ್ನೇನ ಹೀದಂ ಸರ್ವಮಶ್ನುತೇ ॥

ತೇನ ಶಸ್ತ್ರೇಣಾರ್ಚನೀಯೇ ದೇವೇಽಗ್ನಿದೃಷ್ಟಿಂ ಶಸ್ತ್ರಸಂಬಂಧಿನೀಷು ಗಾಯತ್ರ್ಯಾದಿತೃಚಾಶೀತಿಷ್ವನ್ನದೃಷ್ಟಿಂ ಚ ವಿಧತ್ತೇ—ತಸ್ಯ ಶಸ್ತ್ರಸ್ಯ ಸಂಬಂಧೀ ಯೋಽಯಮರ್ಕೋಽರ್ಚನೀಯೋ ದೇವಃ ಸೋಽಯಮಗ್ನಿಸ್ವರೂಪಃ ॥ ಯಾಸ್ತು ಗಾಯತ್ರೀಬೃಹತ್ಯುಷ್ಣಿಕ್ಛಂದಸ್ಕಾಸ್ತೃಚಾನಾಮಶೀತಯಸ್ತ್ರಿವಿಧಾಸ್ತಾಃ ಸರ್ವಾ ಅನ್ನಸ್ವರೂಪಾಃ ॥ ತಸ್ಮಾತ್ಕಾರಣಾಲ್ಲೌಕಿಕಃ ಪುರುಷೋಽನ್ನೇನೇದಂ ಸರ್ವಂ ಪ್ರಾಣಿಜಾತಮಶ್ನುತೇ ವ್ಯಾಪ್ನೋತಿ । ಅನ್ನವಂತಂ ಪುರುಷಂ ಸರ್ವೇ ಜನಾಸ್ತಲ್ಲಾಭಾಯ ಸೇವಂತೇ ॥

ಶಸ್ತ್ರದಿಂದ ಪೂಜಿಸಬೇಕಾದ ದೇವತೆಯಲ್ಲಿ ಅಗ್ನಿದೃಷ್ಟಿಯನ್ನೂ, ಗಾಯತ್ರ್ಯಾದಿತೃಚಾಶೀತಿಗಳಲ್ಲಿ ಅನ್ನದೃಷ್ಟಿಯನ್ನೂ ವಿಧಿಸುತ್ತಾರೆ. ಶಸ್ತ್ರಸಂಬಂಧಿಯಾದ ಅರ್ಕನು ಅಂದರೆ ಪೂಜಿಸಲ್ಪಡುವ ದೇವನು ಅಗ್ನಿಸ್ವರೂಪನಾಗಿರುತ್ತಾನೆ. ಗಾಯತ್ರೀ, ಬೃಹತೀ, ಉಷ್ಣಿಕ್ಛಂದಸ್ಕಗಳಾದ ತೃಚಾಶೀತಿಮಂತ್ರಗಳು ಮೂರುವಿಧವಾಗಿ ಹಿಂದೆ ಯಾವುದು ಹೇಳಿವೆಯೋ ಅವೆಲ್ಲವೂ ಅನ್ನಸ್ವರೂಪಗಳು. ಲೋಕದಲ್ಲಿಯೂ ಪುರುಷನು ಅನ್ನದಿಂದಲೇ ಸರ್ವಪ್ರಾಣಿಗಳನ್ನು ವಶಮಾಡಿಕೊಳ್ಳುತ್ತಾನೆ. ಅನ್ನಕ್ಕೋಸ್ಕರ ಪ್ರಾಣಿಜಾತವು ಅನ್ನವುಳ್ಳಮನುಷ್ಯನನ್ನು ಆಶ್ರಯಿಸುತ್ತದೆ.

ಅಂತರಿಕ್ಷಮೇವೋಕ್ಥಮಂತರಿಕ್ಷಂ ವಾ ಅನು ಪತಂತ್ಯಂತರಿಕ್ಷಮನು ಧಾವಯಂತಿ ತಸ್ಯ ವಾಯುರರ್ಕೋಽನ್ನಮಶೀತಯೋಽನ್ನೇನ ಹೀದಂ ಸರ್ವಮಶ್ನುತೇ ॥

ಪೂರ್ವೋಕ್ತಪೃಥಿವ್ಯಾದಿವದುಕ್ಥ ದೇವತಾಶೀತಿಷ್ವಂತರಿಕ್ಷವಾಯ್ವನ್ನದೃಷ್ಟಿಂ ವಿಧತ್ತೇ— ಪಕ್ಷಿಣಃ ಸರ್ವೇಽಪ್ಯಂತರಿಕ್ಷಮವಕಾಶಮನುಸೃತ್ಯೈವಾಶ್ವಬಲೀವರ್ದಾದೀನ್ಧಾವಯಂತಿ ತಸ್ಮಾದಂತ-ರಿಕ್ಷಸ್ಯೋಕ್ಥತ್ವಂ ಯುಕ್ತಮ್ ॥

ಉಕ್ಥದೇವತಾಶೀತಿಗಳಲ್ಲಿ ಅಂತರಿಕ್ಷ, ವಾಯು, ಅನ್ನದೃಷ್ಟಿಯನ್ನು ವಿವರಿಸುತ್ತಾರೆ. ಉಕ್ಥವು ಅಂತರಿಕ್ಷ ಸ್ವರೂಪವು. ಎಲ್ಲಾ ಪಕ್ಷಿಗಳೂ ಆಕಾಶದಲ್ಲಿಯೇ ಹಾರಾಡುತ್ತವೆ. ಮನುಷ್ಯರೂ ಭೂಮಿಯಮೇಲೆ ಅಂತರಿಕ್ಷಾವಕಾಶ ಹೊಂದಿಯೇ ಎತ್ತು ಕುದುರೆಮುಂತಾದುವುಗಳನ್ನು ಓಡಿಸುತ್ತಾರೆ. ಅದುದರಿಂದ ಅಂತರಿಕ್ಷರೂಪ ಯುಕ್ತವಾಗಿದೆ.

ಅಸಾವೇವ ದ್ಯೌರುಕ್ಥಮಮುತಃ ಪ್ರದಾನಾದ್ಧೀದಂ ಸರ್ವಮುತ್ತಿಷ್ಠತಿ ಯದಿದಂ ಕಿಂಚ ತಸ್ಯಾಸಾವಾದಿತ್ಯೋಽರ್ಕೋಽನ್ನಮಶೀತಯೋಽ-ನ್ನೇನ ಹೀದಂ ಸರ್ವಮಶ್ನುತೇ ॥

ದ್ಯುಲೋಕಾದಿದೃಷ್ಟಿಂ ವಿಧತ್ತೇ—ಅಮುತೋ ದ್ಯುಲೋಕಾದ್ಭೂಮೌ ಪ್ರದೀಯತೇ ಯದ್‌ವೃಷ್ಟಿಜಲಂ ತಸ್ಮಾಜ್ಜಲಪ್ರದಾನಾದಿದಂ ಸರ್ವಮೋಷಧಿವನಸ್ಪತ್ಯಾದಿಕಂ ಯತ್ಕಿಂಚಿದಸ್ತಿ ತದುತ್ತಿಷ್ಠತಿ ತಸ್ಮಾದ್‌ದ್ಯುಲೋಕಸ್ಯೋಕ್ಥತ್ವಂ ಯುಕ್ತಮ್ ॥

ದ್ಯುಲೋಕಾದಿದೃಷ್ಟಿಯನ್ನು ವಿವರಿಸುತ್ತಾರೆ. ಈ ದ್ಯುಲೋಕವೇ ಉಕ್ಥವು. ದ್ಯುಲೋಕದಿಂದಲೇ ಮಳೆನೀರು ಭೂಮಿಯಲ್ಲಿ ಬೀಳುತ್ತದೆ. ಮಳೆಯಿಂದಲೇ ಎಲ್ಲಾ ಓಷಧಿವನಸ್ಪತಿಮುಂತಾದುವುಗಳು ಅಭಿವೃದ್ಧವಾಗುವುದರಿಂದ ಉಕ್ಥಕ್ಕೆ ದ್ಯುಲೋಕಸ್ವರೂಪವಾಯುಕ್ತನಿಾಗಿದೆ.

ಇತ್ಯಧಿದೈವತಮಥಾಧ್ಯಾತ್ಮಮ್ ॥

ನೃಪಶೋರ್ಬುದ್ಧಿಸಮಾಧಾನಾಯೋಕ್ತವಕ್ಷ್ಯಮಾಣಯೋರ್ಧ್ಯಾನಯೋರ್ವಿಭಾಗಂ ದರ್ಶ-ಯತಿ—ದೈವತಾನಿ ಪೃಥಿವ್ಯಾದೀನ್ಯಧಿಕೃತ್ಯ ಪ್ರವೃತ್ತಂ ಧ್ಯಾನಮಧಿದೈವತಮ್ । ತಚ್ಚೇತ್ಯುಕ್ತಪ್ರಕಾ-ರೇಣ ವ್ಯವಸ್ಥಿತಮ್ । ಆತ್ಮಾನಂ ಮನುಷ್ಯಶರೀರಮಧಿಕೃತ್ಯ ಪ್ರವೃತ್ತಂ ಧ್ಯಾನಮಧ್ಯಾತ್ಮಮ್ । ತತ್ತ್ವ-ಥಾನಂತರಮಭಿಧೀಯತೇ ॥

ಅಧಿದೈವತ, ಅಧ್ಯಾತ್ಮಧ್ಯಾವಿಭಾಗವನ್ನು ತೋರಿಸುತ್ತಾರೆ. ಪೃಥಿವ್ಯಾದಿದೇವತೆಗಳನ್ನಧಿಕರಿಸಿ ಪ್ರವೃತ್ತವಾದ ಧ್ಯಾನಕ್ಕೆ ಅಧಿದೈವತವೆಂದು ಹೆಸರು. ಹಿಂದೆ ಹೇಳಿದಂತೆ ಅದು ವ್ಯವಸ್ಥಿತವಾಗಿದೆ. ಆತ್ಮಾಅಂದರೆ ಮನುಷ್ಯಶರೀರವನ್ನಧಿಕರಿಸಿ ಹೇಳುವ ಧ್ಯಾನಕ್ಕೆ ಅಧ್ಯಾತ್ಮವೆಂದು ಹೆಸರು. ಇದನ್ನು ಮುಂದೆ ವಿವರಿಸುತ್ತಾರೆ.

ಪುರುಷ ಏವೋಕ್ಥಮಯಮೇವ ಮಹಾನ್ಪ್ರಜಾಪತಿರಹಮುಕ್ಥ-ಮಸ್ಮೀತಿ ವಿದ್ಯಾತ್ ॥

ತತ್ರಾಽಽದೌ ಶಸ್ತ್ರೇ ಶರೀರದೃಷ್ಟಿಂ ವಿಧತ್ತೇ—ಶಿರಃಪಾಣ್ಯಾದಿಮಾನ್ದೇಹಃ ಪುರುಷಸ್ತಸ್ಯ ಮಹತ್ತ್ವಂ ಶ್ರೇಷ್ಠತ್ವಮ್ "ಅಯಂ ಪುರುಷೋ ಬ್ರಹ್ಮಣೋ ಲೋಕಃ"(ಐ-ಆ-೨-ಅ-೧-ಖಂ. ೩) ಇತ್ಯತ್ರ ವಕ್ಷ್ಯತೇ । ಪ್ರಜಾಪತಿತ್ವಂ ಚ "ತಸ್ಯ ವಾಚಾ ಸೃಷ್ಟೌ ಪೃಥಿವೀ ಚಾಗ್ನಿಶ್ಚ"(ಐ.ಆ-೨-ಅ-೧-ಖಂ.೭) ಇತ್ಯತ್ರಾಭಿಧಾಸ್ಯತೇ । ತಸ್ಮಾದುತ್ಕರ್ಷಹೇತುತ್ವಾದ್ದೇಹಸ್ಯೋಕ್ಥತ್ವಮ್ । ತಚ್ಚೋಕ್ಥಮಹಮಸ್ಮೀತ್ಯೇವಂ ಧ್ಯಾಯೇತ್ । ನಾತ್ರ ವಿದಿಧಾತುಃ ಪ್ರಮಾಣಜನ್ಯಂ ಜ್ಞಾನಮಾಚಷ್ಟೇ ಕಿಂತು ಪುರುಷತಂತ್ರಾಂ ಧ್ಯಾನಕ್ರಿಯಾಮ್ । ಯದ್ಯಪಿ 'ವಿದ-ಜ್ಞಾನೇ' (ಅದಾ-ಗ-ಪ-) ಇತಿ ಧಾತುಸ್ತಥಾಪಿ ಜ್ಞಾನಧ್ಯಾನಯೋರ್ಮಾನಸತ್ವಸಾಮ್ಯೇನ ಧ್ಯಾನಮಾತ್ರ ವಿವಕ್ಷಿತಮ್ । ಉಪಾಸನಾಪ್ರಕರಣಸ್ಯ ವರ್ತಮಾನತ್ವಾತ್ । ನನ್ವಹಮುಕ್ಥಮಸ್ಮೀತ್ಯೇತನ್ಮೀಮಾಂಸಯಾ ವಿರುದ್ಧಮ್ । ತತ್ರ ಹಿ ಚತುರ್ಥಾಧ್ಯಾಯೇ—"ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ"(ಬ್ರ-ಸೂ-ಅ-೪-ಪಾ-೧-ಸೂ-೩) ಇತಿ ಸೂತ್ರೇಣ ತತ್ತ್ವವಿದ್ಯಾಯಾಂ ಬ್ರಹ್ಮೋಪಾಸನೇಷು ಚಾಹಂಗ್ರಹಮಭಿಧಾಯ "ನ ಪ್ರತೀಕೇ ನ ಹಿಸಃ"(ಬ್ರ-ಸೂ-ಅ-೪-ಪಾ-೧-ಸೂ-೪) ಇತಿ ಸೂತ್ರೇಣ ಪ್ರತೀಕೇಷ್ವಹಂಗ್ರಹೋ ನಿವಾರಿತಃ । ಅತ್ರ ಚೋಕ್ಥಂ ಪ್ರತೀಕಮ್ । ತಸ್ಮಾದಹಮುಕ್ಥಮಸ್ಮೀತ್ಯಹಂಗ್ರಹೋ ನ ಯುಕ್ತ ಇತಿ ಚೇತ್ । ನಾಯಂ ದೋಷಃ । ತಸ್ಮಿನ್ಸೂತ್ರೇ ನ್ಯಾಯಬಲಾದೇವಾಹಂಗ್ರಹಸ್ಯ ನಿಷಿದ್ಧತ್ವಾತ್ । ಇಹ ತು ವಚನಬಲಾದಹಂಗ್ರಹೋ ವಿಧೀಯತೇ । "ಕಿಮಿವ ಹಿ ವಚನಂ ನ ಕುರ್ಯಾನ್ನಾಸ್ತಿ ವಚನಸ್ಯಾತಿಭಾರಃ" ಇತಿ ಹಿ ಶಾಸ್ತ್ರಕಾರಾಣಾಂ ಡಿಂಡಿಮಃ । ಯದ್ಯಪಿ ಕೃತ್ಸ್ನಮುಪಾಸ್ಯಸ್ವರೂಪಮಭಿಧಾಯಾಂತೇಽಹಂಗ್ರಹೋ ವಕ್ತವ್ಯಸ್ತಥಾಪಿ ವಕ್ಷ್ಯಮಾಣೇಷೂಪಾಸ್ಯಾವಯವವಿಶೇಷೇಷು ಪ್ರತ್ಯೇಕಮಹಂಗ್ರಹಸಿದ್ಧ್ಯರ್ಥಮಾದಾವೇವಾಸೌ ವಿಧೀಯತೇ ॥

ಮೊದಲು ಶಸ್ತ್ರದಲ್ಲಿ ಶರೀರದೃಷ್ಟಿಯನ್ನು ವಿಧಿಸುತ್ತಾರೆ. ಪುರುಷನೇ ಉಕ್ಥವು ಪ್ರಾಣಿ(ಕೈ)ಶಿರಸ್ಸು ಇತ್ಯಾದ್ಯವಯವಗಳಿಂದಕೂಡಿದ ಶರೀರವೇ ಪುರುಷನು. "ಅಯಂಪುರುಷೋ ಬ್ರಹ್ಮಣೋ ಲೋಕಃ" ಎಂದು ಮುಂದೆ ಇವನ ಮಹತ್ತ್ವ ಅಂದರೆ ಶ್ರೈಷ್ಠ್ಯವನ್ನು ಹೇಳುತ್ತಾರೆ. ಇವನಿಗೆ ಪ್ರಜಾಪ್ರತಿಧರ್ಮವೂ "ತಸ್ಯ ವಾಚಾಸೃಷ್ಟೌ ಪೃಥಿವೀ ಚಾಗ್ನಿಶ್ಚ", ಎಂದೂ ಮುಂದೆ ವಿವರಿಸುತ್ತಾರೆ. ಹೀಗೆ ಉತ್ಕರ್ಷಹೇತುವಾದುದರಿಂದ ದೇಹವು ಉಕ್ತವಾಗಿದೆ. ಉಕ್ಥವೇನಾನಾಗಿದ್ದೇನೆ ಎಂದು ಧ್ಯಾನಿಸಬೇಕು. ಇಲ್ಲಿ ವಿದಧಾತುವು ಜ್ಞಾನಾರ್ಥಕವಾದರೂ(ವಿದ-ಜ್ಞಾನೇ(ಅ-ಗ.ಪ) ಪುರುಷಾಧೀನವಾದ ಧ್ಯಾನ ಕ್ರಿಯಾವಾಚಿಯೆಂದು ತಿಳಿಯಬೇಕು. ಜ್ಞಾನಪುರುಷತಂತ್ರವಲ್ಲ. ಆದರೂ ಜ್ಞಾನಧ್ಯಾನಗಳು ಮಾನಸಗಳಾದುದರಿಂದ ಇಲ್ಲಿ ಸಾಮ್ಯದಿಂದ ಉಪಾಸನಾಪ್ರಕರಣದಲ್ಲಿರುವುದರಿಂದ ಧ್ಯಾನವೇ ವಿವಕ್ಷಿತವಾಗಿದೆ. ಯದ್ಯಪಿ ನಾನೇ ಉಕ್ಥಸ್ವರೂಪನೆಂದು ಧ್ಯಾನಿಸಿದರೆ ವೇದಾಂತವಿರೋಧ ತೋರುತ್ತದೆ. ಬ್ರಹ್ಮಸೂತ್ರದನಾಲ್ಕನೆಯ ಅಧ್ಯಾಯದಲ್ಲಿ 'ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿಚ' ಎಂಬ ಸೂತ್ರದಿಂದ ಬ್ರಹ್ಮೋಪಾಸನೆಗಳಲ್ಲಿ ಅಹಂಗ್ರಹವನ್ನು ಹೇಳಿ "ನ ಪ್ರತೀಕೇನ ಹಿಸಃ" ಎಂಬ ಸೂತ್ರದಿಂದ ಪ್ರತೀಕಗಳಲ್ಲಿ ಅಹಂಗ್ರಹವನ್ನು ನಿಷೇಧಿಸುತ್ತಾರೆ. ಇಲ್ಲಿ ಉಕ್ಥವೇ ಪ್ರತೀಕವಾದುದರಿಂದ ನಾನು ಉಕ್ಥವಾಗಿದ್ದೇನೆಂದು ತಿಳಿಯುವುದು ಹೇಗೆ? ಅಂದರೆ ಇದು ದೋಷವಲ್ಲ. ಸೂತ್ರದಲ್ಲಿ ನ್ಯಾಯಬಲದಿಂದ ನಿಷೇಧಿಸಿದೆ. ಇಲ್ಲಿ ವಚನದಿಂದ ಏನನ್ನಾದರೂ ಕಲ್ಪಿಸಬಹುದೆಂದು ಶಾಸ್ತ್ರಕಾರರಸಮಯ. ಸಂಪೂರ್ಣವಾಗಿ ಉಪಾಸ್ಯಸ್ವರೂಪವನ್ನು ವಿವರಿಸಿ ಕೊನೆಯಲ್ಲಿ ಅಹಂಗ್ರಹ ಹೇಳುವುದು ಯುಕ್ತವಾದರೂ ಮುಂದ ಉಪಾಸ್ಯಾವಯವ ವಿಶೇಷಗಳಲ್ಲಿಯೂ ಪ್ರತ್ಯೇಕವಾಗಿ ಅಹಂಗ್ರಹಸಿದ್ಧಿಗೋಸ್ಕರ ಮೊದಲೇ ಈ ಉಪಾಸನೆ ಹೇಳಿದೆ.

ತಸ್ಯ ಮುಖಮೇವೋಕ್ಥಂ ಯಥಾ ಪೃಥಿವೀ ತಥಾ ||

ಆಧಿದೈವಿಕದೃಷ್ಟಾಂತೇನಾಽಽಧ್ಯಾತ್ಮಿಕ ಮುಖದೃಷ್ಟಿಂ ವಿಧತ್ತೇ—ತಸ್ಯ ಪುರುಷಸ್ಯ ದೇಹ-ರೂಪಸ್ಯ ಯನ್ಮುಖಂ ತದ್ದೃಷ್ಟಿರುಕ್ಥೇ ಕರ್ತವ್ಯಾ | ಅಧಿದೈವಂ ಯಥಾ ಪ್ರಥಮಪರ್ಯಾಯೇಣ ಪೃಥಿವೀದೃಷ್ಟಿಸ್ತದ್ವತ್ ||

ಆಧಿದೈವಿಕದೃಷ್ಟಾಂತದಿಂದ ಆಧ್ಯಾತ್ಮಿಕದೃಷ್ಟಿಯನ್ನು ವಿಧಿಸುತ್ತಾರೆ. ದೇಹರೂಪಪುರುಷನ ಯಾವಮುಖವಿದೆಯೋ ಉಕ್ಥದಲ್ಲಿ ಆಮುಖದೃಷ್ಟಿಯನ್ನು ಮಾಡಬೇಕು. ಪೃಥಿವೀದೃಷ್ಟಿಯಂತೆ ಮುಖವೇ ಉಕ್ಥವೆಂದು ಧ್ಯಾನಿಸಬೇಕು.

ತಸ್ಯ ವಾಗರ್ಕೋಽನ್ನಮಶೀತಯೋಽನ್ನೇನ ಹೀದಂ ಸರ್ವಮಶ್ನುತೇ ||

ಅರ್ಚನೀಯೇ ದೇವೇ ವಾಗ್ದೃಷ್ಟಿಮಶೀತಿಷ್ವನ್ನದೃಷ್ಟಿಂ ಚ ವಿಧತ್ತೇ—

ಪೂಜ್ಯ ಅಗ್ನಿಯಲ್ಲಿ ಅಗ್ನಿದೃಷ್ಟಿಯನ್ನು ಅಶೀತಿಗಳಲ್ಲಿ ಅನ್ನದೃಷ್ಟಿಯನ್ನೂ ವಿಧಿಸುತ್ತಾನೆ, ಪುರುಷನ ವಾಕ್ಕೇ ಅಗ್ನಿಯು. ಅನ್ನವೇ ಅಶೀತಿಗಳು. ಅನ್ನದಿಂದಲೇ ಸರ್ವವನ್ನೂ ವ್ಯಾಪಿಸುತ್ತಾನೆ.

ನಾಸಿಕೇ ಏವೋಕ್ಥಂ ಯಥಾಽಂತರಿಕ್ಷಂ ತಥಾ ||

ಆಧಿದೈವಿಕಾಂತರಿಕ್ಷ ದೃಷ್ಟಾಂತೇನ ದ್ವಿತೀಯ ಪರ್ಯಾಯಂ ವಿಧತ್ತೇ—

ಅಂತರಿಕ್ಷದೃಷ್ಟಾಂತದಿಂದ ದ್ವಿತೀಯಪರ್ಯಾಯವನ್ನು ವಿವರಿಸುತ್ತಾನೆ. ಅಂತರಿಕ್ಷದಂತೆ ನಾಸಿಕವೇ(ಮೂಗು) ಉಕ್ಥವೆಂದು ಧ್ಯಾನಿಸಬೇಕು.

ತಸ್ಯ ಪ್ರಾಣೋಽರ್ಕೋಽನ್ನಮಶೀತಯೋಽನ್ನೇನ ಹೀದಂ ಸರ್ವಮ-ಶ್ನುತೇ ||

ದೇವೇ ಪ್ರಾಣದೃಷ್ಟಿಮಶೀತಿಷ್ವನ್ನದೃಷ್ಟಿಂ ಚ ವಿಧತ್ತೇ—

ಪುರುಷನ ಪ್ರಾಣವೇ ಪೂಜನೀಯನಾದ ಅಗ್ನಿಯು. ಅನ್ನವೇ ಅಶೀತಿಗಳೆಂದು ಹಿಂದಿನಂತೆ ತಿಳಿಯಬೇಕು.

ತದೇತದ್ಬೃಧ್ನಸ್ಯ ವಿಷ್ಟಪಂ ಯದೇತನ್ನಾಸಿಕಾಯೈ ವಿನತಮಿವ ||

ಭ್ರುವೋರಧಸ್ತಾನ್ನಾಸಿಕಾಯಾ ಮೂಲಂ ನಿಮ್ನದೇಶಂ ಪ್ರಶಂಸತಿ—ನಾಸಿಕಾಯಾಃ ಸಂಬಂಧಿ ವಿಶೇಷೇಣ ನತಮತ್ಯಂತನಿಮ್ನಂ ಯನ್ಮೂಲಮಸ್ತಿ ತದೇತದ್ಬೃಧ್ನಸ್ಯಾಽಽದಿತ್ಯಸ್ಯ ವಿಷ್ಟಪಂ ಸ್ಥಾನಂ | "ಅಸೌ ವಾ ಆದಿತ್ಯೋ ಬ್ರಧ್ನಃ" (ತೈತ್ತ) ಇತಿ ಶ್ರುತ್ಯಂತರಾತ್ | ತಚ್ಚ ಮೂಲಂ ಬ್ರಹ್ಮಣಃ ಸ್ಥಾನತ್ವಾದ್ಬ್ರಹ್ಮೋ-ಪಾಧೇರಾದಿತ್ಯಸ್ಯಾಪಿ ಸ್ಥಾನಮ್ | ಧ್ಯಾನಸ್ಥಾನತ್ವಂ ಚ ಪ್ರಶ್ನೋತ್ತರಾಭ್ಯಾಂ ಜಾಬಾಲಾ ಆಮನಂತಿ ಕತಮ-

ಚ್ಚಾಸ್ಯ ಸ್ಥಾನಂ ಭವತೀತಿ ಭ್ರುವೋಃ ಪ್ರಾಣಸ್ಯ ಚ ಸಂಧಿಃ ಸ ಏಷ ದ್ಯೌರ್ಲೋಕಸ್ಯ ಪರಸ ಸಂಧಿರ್ಭವತಿ" (ಜಾಂಬಾ-ಖಂ. ೨) ಇತಿ। ವಿನತಮಿವೇತೀವಶಬ್ದೋಽನರ್ಥಕ ಏವಕಾರಾರ್ಥೋ ವಾ ॥

ಹುಬ್ಬುಗಳ ಕೆಳಗಡೆ ಇರುವ ಮೂಗಿನ ಮೂಲಭಾಗವಾದ ಆಳವಾದ ಪ್ರದೇಶವನ್ನು ವಿವರಿಸುತ್ತಾರೆ. ನಾಸಿಕಾ ಸಂಬಂಧಿಯಾಗಿ, ವಿನತಂಅಂದರೆ ಅತಿ ಆಳವಾಗಿರುವ ಯಾವ ಮೂಲಭಾಗವಿದೆಯೋ ಅದು ಆದಿತ್ಯನ ಸ್ಥಾನವು. 'ಅಸೌ ವಾ ಆದಿತ್ಯೋ ಬ್ರಧ್ನಃ' ಎಂದು ಇದು ಇತರ ಶ್ರುತಿಯಲ್ಲೂ ಹೇಳಿದೆ. ಈ ಮೂಲಭಾಗವು ಬ್ರಹ್ಮಸ್ಥಾನವಾದುದರಿಂದ ಬ್ರಹ್ಮೋಪಾಧಿಯಾದ ಆದಿತ್ಯನಸ್ಥಾನವೆಂದು ಹೇಳಿದೆ. ವಿನತಮಿವ ಎಂಬಲ್ಲಿ ಇವಶಬ್ದಕ್ಕೆ ಅರ್ಥವಿಲ್ಲ. ಅಥವಾ ಏವಕಾರಾರ್ಥ ಹೇಳಬೇಕು. ಧ್ಯಾನಸ್ಥಾನವನ್ನು ಪ್ರಶ್ನೋತ್ತರಗಳಿಂದ ಜಾಬಾಲರು ವಿವರಿಸುತ್ತಾರೆ-ಧ್ಯಾನಕ್ಕೆ ಸ್ಥಾನ ಯಾವುದು? ಹುಬ್ಬು ಮತ್ತು ಪ್ರಾಣಗಳ ಸಂಧಿಸ್ಥಾನವೇ ಅದು. ಇದು ದ್ಯುಲೋಕ ಪರಲೋಕಗಳ ಸಂಧಿಸ್ಥಾನ ವಾಗುತ್ತದೆ. ಎಂದು ಈ ಮೂಲಭಾಗವನ್ನೇ ಹೇಳಿರುತ್ತಾರೆ.

**ಲಲಾಟಮೇವೋಕ್ಥಂ ಯಥಾ ದ್ಯೌಸ್ತಥಾ ತಸ್ಯ ಚಕ್ಷುರರ್ಕೋಽನ್ನಮ-
ಶೀತಯೋಽನ್ನೇನ ಹೀದಂ ಸರ್ವಮಶ್ನುತೇ ॥**

ತೃತೀಯಪರ್ಯಾಯಂ ವಿಧತ್ತೇ—ಆಧಿದೈವಿಕಾಧ್ಯಾತ್ಮಿಕಪರ್ಯಾಯೇಷು ಷಟ್ಸ್ವಪ್ಯರ್ಕೇ ಧ್ಯಾತವ್ಯಾ ಅಗ್ನ್ಯಾದಯೋ ವಿವಿಧಾಸ್ತದ್ವದಶೀತಿಷು ಧ್ಯಾತವ್ಯಸ್ಯಾಪಿ ನಾನಾವಿಧತ್ವಶಂಕಾಂ ವ್ಯಾವರ್ತ್ಯ ಪೂರ್ವೋಕ್ತಮನೇಕತ್ವಧ್ಯಾನಂ ಪ್ರಶಂಸತಿ

ಮೂರನೆಯ ಪರ್ಯಾಯವನ್ನು ವಿವರಿಸುತ್ತಾರೆ. ದ್ಯುಲೋಕದಂತೆ ಲಲಾಟವೇ ಉಕ್ಥವು. ಪುರುಷನ ಕಣ್ಣೇ ಆದಿತ್ಯನು. ಅನ್ನವೇ ಅಶೀತಿಗಳೆಂದು ಹಿಂದಿನಂತೆ ತಿಳಿಯಬೇಕು.

**ಸಮಾನಮಶೀತಯೋಽಧ್ಯಾತ್ಮಂ ಚಾಧಿದೈವತಂ ಚಾನ್ನಮೇವಾನ್ನೇವ
ಹೀಮಾನಿ ಸರ್ವಾಣಿ ಭೂತಾನಿ ಸಮನಂತೀಷ್ಟ ಅನ್ನೇನೇಮಂ
ಲೋಕಂ ಜಯತ್ಯನ್ನೇನಾಮುಂ ತಸ್ಮಾತ್ಸಮಾನಮಶೀತಯೋಽ-
ಧ್ಯಾತ್ಮಂ ಚಾಧಿದೈವತಂ ಚಾನ್ನಮೇವ ॥**

ಗಾಯತ್ರ್ಯೋ ಬಾರ್ಹತ್ಯ ಔಷ್ಣಿಹ್ಯಶ್ಚ ಯಾಃ ಸರ್ವಾಸ್ತ್ರ್ಯಚಾಶೀತಯಸ್ತಾಃ ಸರ್ವಾ ಅಧ್ಯಾತ್ಮಾಧಿದೈವಪರ್ಯಾಯೇಷು ಸರ್ವೇಷ್ವಪ್ಯನ್ನಮೇವೇತ್ಯೇತತ್ಸಮಾನಮ್। ನ ತ್ವನ್ನಾದನ್ಯತ್ಕಿಂಚಿತ್ತಾಸು ಧ್ಯೇಯಮಸ್ತಿ। ಅನ್ನಸ್ಯಾತ್ಯಂ ತಂ ಪ್ರಶಸ್ತತ್ವಾತ್। ಇಮಾನಿ ಸರ್ವಾಣಿ ಭೂತಾನಿ ಪ್ರಾಣಿನೋಽನ್ನೇನೈವ ಸಮನಂತಿ ಸಮ್ಯಕ್ ಚೇಷ್ಟಂತೇ। ಅನ್ನಜನ್ಯಸ್ಯ ಬಲಸ್ಯ ಶರೀರಚೇಷ್ಟಾಹೇತುತ್ವಾತ್। ಸಾನುನಾಸಿಕಾ ಸಮನಂತೀತಿ ಪ್ಲುತಿರುಕ್ತಾರ್ಥಪ್ರಸಿದ್ಧಾ(ದ್ಧ್ಯ)ರ್ಥಾ। ನ ಕೇವಲಮನ್ನಸ್ಯ ಚೇಷ್ಟಾಹೇತುತ್ವಂ ಕಿಂ ತು ಲೋಕದ್ವಯಮಪಿ ತೇನ ಜಿತಂ ಭವತಿ। ಅನ್ನಪ್ರದಾನೇನ ಮನುಷ್ಯಾಣಾಂ ವಶ್ಯತ್ವಮೇತಲ್ಲೋಕಸ್ಯ ಜಯಃ। ಶಾಸ್ತ್ರೀಯೇಣಾನ್ನದಾನೇನ ದೇವತಾತುಷ್ಟಿಃ ಸ್ವರ್ಗಲೋಕ ಜಯಃ। ತದೇವಮನ್ನಸ್ಯ ಪ್ರಶಸ್ತತ್ವಾತ್ಸರ್ವತ್ರಾಶೀತೀನಾಮನ್ನರೂಪತ್ವಮೇವ ಧ್ಯೇಯಮ್ ॥

ಆಧಿದೈವಿಕ ಆಧ್ಯಾತ್ಮಿಕಪರ್ಯಾಯಗಳಲ್ಲಿ ಅಗ್ನ್ಯಾದಿಗಳು ಹೇಗೆ ನಾನಾಪ್ರಕಾರವಾಗಿವೆಯೋ ಅದರಂತೆ ತೃಚಾಶೀತಿಗಳಲ್ಲಿಯೂ ಧ್ಯಾನಯೋಗ್ಯವಾದ ಅನ್ನದವೈವಿಧ್ಯಶಂಕೆಯನ್ನು ಹೋಗಲಾಡಿಸಿ ಅನೇಕತ್ವಧ್ಯಾನವನ್ನು ಪ್ರಶಂಸಿಸುತ್ತಾರೆ. ಗಾಯತ್ರೀ, ಬೃಹತೀ, ಉಷ್ಣಿಕ್‌ಛಂದಸ್ಕಗಳಾದ ತೃಚಾಶೀತಿಗಳಲ್ಲಿ ಆಧಿದೈವಿಕಾದಿಭೇದದಿಂದ ಅನ್ನದೃಷ್ಟಿಒಂದೇ ಸಮಾನವಾಗಿರುತ್ತದೆ. ಅನ್ನಕ್ಕಿಂತ ಬೇರೆ ಅವುಗಳಲ್ಲಿ ಧ್ಯಾನಿಸಬೇಕಾದುದೇನೂ ಇಲ್ಲ. ಏಕೆಂದರೆ ಅನ್ನಕ್ಕಿಂತ ಪ್ರಶಸ್ತವಾದುದು ಯಾವುದೂ ಇಲ್ಲ. ಅನ್ನದಿಂದುಂಟಾದ ಬಲವೇ ಶರೀರಚಲನೆಗೆ ಕಾರಣವಾಗುತ್ತದೆ. ಪ್ರಸಿದ್ಧಿಯನ್ನು ಸೂಚಿಸಲು ಪ್ಲುತ ಹೇಳಿದೆ. ಶರೀರಚೇಷ್ಟಾಕಾರಣವಾದುದಲ್ಲದೆ ಅನ್ನದಿಂದ ಲೋಕದ್ವಯಜಯವೂ ಆಗುತ್ತದೆ. ಅನ್ನದಾನದಿಂದ ಜನರು ವಶ್ಯರಾಗುವುದರಿಂದ ಈ ಲೋಕಜಯವೂ, ಶಾಸ್ತ್ರೋಕ್ತರೀತಿಯಿಂದ ಮಾಡುವ ಅನ್ನದಾನದಿಂದ ದೇವತೆಗಳು ಸಂತುಷ್ಟರಾಗುವುದರಿಂದ ಸ್ವರ್ಗಲೋಕಜಯವೂ ಸಿದ್ಧಿಸುತ್ತದೆ. ಹೀಗೆ ಅನ್ನವು ಅತಿಪ್ರಶಸ್ತವಾದುದರಿಂದ ತೃಚಾಶೀತಿಗಳಲ್ಲಿ ಅನ್ನರೂಪವೊಂದನ್ನೇ ಧ್ಯಾನಿಸಬೇಕು.

**ತದಿದಮನ್ನಮನ್ನಾದಮಿಯಮೇವ ಪೃಥಿವೀತೋ ಹೀದಂ ಸರ್ವಮು-**
**ತ್ತಿಷ್ಠತಿ ಯದಿದಂ ಕಿಂಚ ॥**

ಉಕ್ತೇ ಧ್ಯಾತವ್ಯತ್ವೇನೋಕ್ತಾಯಾಃ ಪೃಥಿವ್ಯಾ ಭೋಕ್ತೃಭೋಗ್ಯರೂಪಕೃತ್ಸ್ನಜಗದ್ರೂಪತ್ವಧ್ಯಾನಂ ವಿಧತ್ತೇ— ಲೋಕೇ ಯದನ್ನಮಸ್ತಿ ಯಚ್ಚಾನ್ನಾದಂ ಭೋಕ್ತೃಜಾತಂ ತದಿದಂ ಸರ್ವಜಗದ್ರೂಪಮಿಯ-ಮೇವ ಪೃಥಿವೀ । ಪೃಥಿವ್ಯಾಸ್ತದಾತ್ಮಕತ್ವಂ ಧ್ಯೇಯಮಿತ್ಯರ್ಥಃ । ಯತ್ಕಿಂಚಿದಿದಂ ಭೋಕ್ತೃಭೋಗ್ಯ-ಜಾತಮಸ್ತಿ ತತ್ಸರ್ವಮಿತಃ ಪೃಥಿವ್ಯಾಃ ಸಕಾಶಾದುತ್ಪನ್ನಂ ತಸ್ಮಾತ್ತದಾತ್ಮಕತ್ವಂ ಯುಕ್ತಂ ಪೃಥಿವ್ಯಾಃ ॥

ಉಕ್ಥದಲ್ಲಿ ಧ್ಯಾನಿಸಬೇಕಾದ ಪೃಥಿವಿಯನ್ನು ಜಗದ್ರೂಪದಿಂದ ಧ್ಯಾನಮಾಡಬೇಕೆಂದು ವಿವರಿಸುತ್ತಾರೆ. ಲೋಕದಲ್ಲಿ ಅನ್ನಅಂದರೆ ಆಹಾರದವಸ್ತು ಯಾವುದಿದೆಯೋ ಅನ್ನಾದ ಅಂದರೆ ಅನ್ನವನ್ನು ತಿನ್ನುವಪ್ರಾಣಿಜಾತಿಯಾವುದಿದೆಯೋ ಅವೆಲ್ಲವೂ ಈ ತೋರತಕ್ಕ ಜಗತ್ತು. ಪೃಥಿವಿಯನ್ನು ಈ ಜಗದ್ರೂಪವೆಂದು ಧ್ಯಾನಿಸಬೇಕು. ಭೋಕ್ತೃಭೋಗ್ಯ ಸಮುದಾಯವೆಲ್ಲವೂ ಈ ಪೃಥಿವಿಯಿಂದಲೇ ಉತ್ಪನ್ನವಾದುದರಿಂದ ಇದಕ್ಕೆ ಜಗದ್ರೂಪವು ಯುಕ್ತವಾಗಿದೆ.

**ಯದ್ಧಂ ಕಿಂಚೇದಂ ಪ್ರೇತ್ಯಾ೩ಇ ತದಸೌ ಸರ್ವಮತ್ತಿ ಯದು**
**ಕಿಂಚಾತಃ ಪ್ರೈತೀ೩^ ತದಿಯಂ ಸರ್ವಮತ್ತಿ ಸೇಯಮಿತ್ತ್ಯಾ-**
**ದ್ಯಾऽತ್ತ್ರೀ ॥**

ಕೃತ್ಸ್ನಭೋಕ್ತೃಭೋಗ್ಯಾತ್ಮಕತ್ವಮುಪಪಾದಯತಿ— ಯತ್ಕಿಂಚೇದಂ ಪ್ರಾಣಿಜಾತಂ ಪೃಥಿವ್ಯಾಂ ವರ್ತಮಾನಂ ಪ್ರೇತ್ಯ (ಪ್ರೈ) ಪ್ರೇತಿ ಮ್ರಿಯತೇ । “ ಈರ–ಗತೌ ” (ಅದಾ–ಗ–ಆ–) ಇತ್ಯಸ್ಯ ಧಾತೋಃ ಪ್ರಪೂರ್ವಸ್ಯ ಮರಣಾರ್ಥತ್ವಂ ದ್ರಷ್ಟವ್ಯಮ್ । “ ಇಣ–ಗತೌ ” (ಅದಾ–ಗ–ಪ) ಇತಿ ಧಾತೌ ತದ್ದರ್ಶನಾತ್ । ಭೂಮೌ ಮೃತಂ ತತ್ಸರ್ವಂ ಪ್ರಾಣಿಜಾತಂ ಸ್ವಾನುಷ್ಠಿತಪುಣ್ಯಕರ್ಮವಶಾತ್ ಸ್ವರ್ಗಂ ಗಚ್ಛತಿ । ತಚ್ಚ ಸ್ವರ್ಗಸ್ಥಮಸೌ ಸ್ವರ್ಗಲೋಕೋऽತ್ತಿ ಭಕ್ಷಯತಿ ವಶೀಕರೋತಿ । ಯದು ಕಿಂಚ ಯದಪಿ ಕಿಂಚಿತ್ಸ್ವರ್ಗಸ್ಥಂ ಪ್ರಾಣಿಜಾತಂ ಸ್ವಕರ್ಮಫಲಭೋಗೇ ಸಮಾಪ್ತೇ ಸತ್ಯತೋऽಸ್ಮಾತ್ಸ್ವರ್ಗಾತ್ ಪ್ರೈತಿ

ನ್ಯೃತೋ (ತ್ವಾ) ಭೂಮಾವಾಗಚ್ಛತಿ ತತ್ಸಮಾಗತಂ ಸರ್ವಂ ಪ್ರಾಣಿಜಾತಮಿಯಂ ಭೂಮಿರತ್ತಿ ಭಿಕ್ಷಯತಿ ವಶೀಕರೋತಿ । ಭೂಮೌ ಯಾಗಂ ಕುರ್ವಂತೋ ಯಜಮಾನಾ ಮರಣಾದೂರ್ಧ್ವಂ ಸ್ವರ್ಗಂ ಭುಕ್ತ್ವಾ ಪುನರ್ಭೂಮಾವಾಗಚ್ಛಂತೀತಿ ವಾಕ್ಯದ್ವಯಾರ್ಥಃ । ತತ್ಪ್ರಸಿದ್ಧ್ಯರ್ಥಂ ಪ್ಲುತಿದ್ವಯಂ ದ್ರಷ್ಟವ್ಯಮ್ । ಪ್ರೇರ್ತ ಇತ್ಯೇಕಾರಸ್ಯಾಕಾರ ಪ್ಲುತಿರಿಕಾರಸಹಿತಾ ವ್ಯಾಕರಣೇ ವಿಹಿತಾ (ಪಾ-ಸೂ-೮-೮-ಪಾ-೨-ಸೂ-೧೦೫) ಏವಂ ಸತಿ ಸೇಯಂ ಭೂಮಿರಿತ್ಯುಕ್ತೇನ ಪ್ರಕಾರೇಣಾಽಽದ್ಯಾಪಿ ಭವತಿ । ಅತ್ರೀ ಚ ಭವತಿ । ಭೂಮಿಷ್ಠಾನಾಂ ಯಜಮಾನಾನಾಂ ಸ್ವರ್ಗೇ ಯದ್ದೇವತಾಪಾರತಂತ್ರ್ಯಂ ತದೇತದ್ಭೂಮೇರಾದ್ಯತ್ವಮ್ । ಸ್ವರ್ಗಸ್ಥಾನಾಂ ಚ ಪುನರಾಗಮನೇ ಸತಿ ತೇಷಾಂ ವಶೀಕರಣಲಕ್ಷಣಂ ಸ್ವಾತಂತ್ರ್ಯಂ ಭೂಮೇರತ್ತೃತ್ವಮ್ । ಅನೇನ ಪ್ರಕಾರೇಣ ಕೃತ್ಸ್ನಭೋಗ್ಯಭೋಕ್ತೃರೂಪಾ ಪೃಥಿವೀ ॥

ಭೋಕ್ತೃಭೋಗ್ಯಜಾತವನ್ನು ವಿವರಿಸುತ್ತಾರೆ. ಈ ಭೂಮಿಯಲ್ಲಿ ತೋರುವ ಪ್ರಾಣಿಜಾತವೆಲ್ಲವೂ ಮರಣ ಹೊಂದುತ್ತವೆ. ಪ್ರಉಪಸರ್ಗದಿಂದಕೂಡಿದ 'ಈಸ-ಗತೌ' ಧಾತುವಿಗೆ ಮರಣಾರ್ಥವನ್ನು ತಿಳಿಯಬೇಕು. ಇಣ್-ಗತೌ ಎಂಬ ಧಾತುವಿನಲ್ಲಿಯೂ ಹೀಗೆಯೇ ಅರ್ಥ ಹಿಂದೆ ಹೇಳಿದೆ. ಭೂಮಿಯಲ್ಲಿ ಮರಣಹೊಂದಿದ ಪ್ರಾಣಿವರ್ಗವು ತಾನುಮಾಡಿದ ಪುಣ್ಯಕರ್ಮದಿಂದ ಸ್ವರ್ಗದಲ್ಲಿ ಕರ್ಮಫಲಭೋಗಮುಗಿದಮೇರ ಸ್ವರ್ಗದಿಂದ ಪುನಃ ಭೂಮಿಗೆ ಬರುತ್ತದೆ. ಭೂಮಿಗೆ ಬಂದ ಪ್ರಾಣಿವರ್ಗವನ್ನು ಈ ಭೂಮಿಯೂ ಸ್ವಾಧೀನಮಾಡಿಗೂಳ್ಳುತ್ತದೆ. ಭೂಮಿಯಲ್ಲಿ ಯಾಗವನ್ನು ಮಾಡಿದ ಯಜಮಾನನು ಮರಣಾನಂತರ ಸ್ವರ್ಗಸುಖವನ್ನನುಭವಿಸಿ ಪುನಃ ಭೂಮಿಗೆ ಬರುತ್ತಾನೆಂದು ತಾತ್ಪರ್ಯ. ಈ ಪ್ರಸಿದ್ಧಿಯನ್ನು ಸೂಚಿಸಲು ಎರಡುಪ್ಲುತಿ ಹೇಳಿದೆ. ಪ್ರೇರ್ತೇ ಎಂಬಲ್ಲಿ ಏಕಾರಕ್ಕೆ ಇಕಾರದಿಂದ ಕೂಡಿದ ಆಕಾರ ಪ್ಲುತವಾಗಿ ಬರುತ್ತದೆಂದು ವ್ಯಾಕರಣದಲ್ಲಿ ವಿಧಿಸಿದೆ. (ಪಾ-ಸೂ-೮-೨-೧೦೭) ಈ ಭೂಮಿಯು ಆದ್ಯಾ, ಅತ್ರೀ ಎಂದೆನಿಸಿದೆ. ಭೂಮಿಯಲ್ಲಿರುವ ಯಜಮಾನನಿಗೆ ಸ್ವರ್ಗದಲ್ಲಿ ದೇವತಾಪಾರತಂತ್ರ್ಯವಿರುವುದರಿಂದ ಭೂಮಿಗೆ ಆದ್ಯತ್ವವೂ, ಸ್ವರ್ಗದಿಂದ ಬಂದಪ್ರಾಣಿವರ್ಗವನ್ನು ವಶೀಕರಿಸಿಕೊಳ್ಳುವುದರಿಂದ ಅತ್ತೃತ್ವವೂ ಸಂಭವಿಸುತ್ತದೆ. ಹೀಗೆ ಪೃಥಿವಿಯು ಭೋಗ್ಯಭೋಕ್ತೃರೂಪವಾಗಿದೆ.

ಈ ರೀತಿ ಧ್ಯಾನದ ಫಲವನ್ನು ವಿವರಿಸುತ್ತಾರೆ. ಅತ್ತಾ ಅಂದರ ಭೋಕ್ತೃವೂ, ಆದ್ಯ ಅಂದರೆ ಭೋಗ್ಯವೂ ಆದ ಪದಾರ್ಥಗಳು. ಈ ಉಭಯ ರೂಪದಿಂದ ಸರ್ವಾತ್ಮಕನಾಗುತ್ತಾನೆ ಎಂದರ್ಥ.

**ಅತ್ತಾ ಹ ವಾ ಆದ್ಯೋ ಭವತಿ ॥**

ಏತದ್ಗುಣಧ್ಯಾನಸ್ಯ ಫಲಮಾಹ—ಅತ್ತಾ ಯೋಽಯಂ ಲೋಕೇ ಭೋಕ್ತಾ ಯುಶ್ಚಾಽಽದ್ಯೋ ಭೋಗ್ಯಃ ಪದಾರ್ಥಸ್ತದುಭಯರೂಪೇಣ ಸರ್ವಾತ್ಮಕೋ ಭವತೀತ್ಯರ್ಥಃ ॥

ನನು ಲೋಕೇ ಕಶ್ಚಿತ್‌ಸ್ವಾಮೀ ಭೃತ್ಯೈಃ ಸೇವ್ಯಮಾನೋ ಭೃತ್ಯಾನಾಂ ಭೋಕ್ತಾ ಭವತಿ ತಥಾ ಜೀವಿತಪ್ರದಾತೃತ್ವೇನ ಭೃತ್ಯೈರ್ಭುಜ್ಯತ ಇತಿ ಭೋಗ್ಯೋಽಪಿ ಭವತಿ । ಅನೇನ ನ್ಯಾಯೇನ ಸರ್ವೋಽಪ್ಯನ್ಯೈರುಪಕ್ರಿಯಮಾಣೋ ಭೋಕ್ತಾ ಸ್ವಯಮುಪಕುರ್ವನ್ ಭೋಗ್ಯಶ್ಚ ಭವತಿ । ತಥಾ ಸತ್ಯುಪಾಸನ ಫಲರೂಪೇ ಭೋಕ್ತೃಭೋಗ್ಯಾತ್ಮಕತ್ವೇ ಕೋ ನಾಮ ವಿಶೇಷ ಇತ್ಯಾಶಂಕ್ಯಾಽಽಹ—

ಲೋಕದಲ್ಲಿ ಒಬ್ಬ ಧನಿಕನು ಸೇವಕರಿಂದ ಸೇವಿಸಲ್ಪಡುವುದರಿಂದ ಸೇವಕರಿಗೆ ಭೋಕ್ತೃವೂ, ಭೃತ್ಯರಿಗೆ ಜೀವಿಕೆಯನ್ನು ಕೊಡುವುದರಿಂದ ಸೇವಕರಿಂದ ಭೋಗ್ಯನೂ ಆಗುತ್ತಾನೆ. ಹೀಗೆ ಇದೇ ರೀತಿ ಎಲ್ಲರೂ ಉಪಕಾರ ಹೊಂದುವುದರ ಮೂಲಕ ಭೋಕ್ತೃವೂ, ಉಪಕಾರ ಮಾಡುವುದರಿಂದ ಭೋಗ್ಯನೂ ಆಗುವುದರಿಂದ ಉಪಾಸನೆಯಿಂದ ಭೋಕ್ತೃಭೋಗ್ಯಭಾವವನ್ನು ಹೊಂದುವುದರಿಂದ ವಿಶೇಷವೇನು ? ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾರೆ.

**ನ ತಸ್ಯೇಶೇ ಯಸ್ಮಾದ್ವಾದ್ಯದ್ಯೈಸಂ ನಾದ್ಯುಃ ||**

**ಅನುಪಾಸಕೋ ಲೌಕಿಕಃ ಪುರುಷಃ ಸ್ವಧರ್ಮಕರ್ಮಪ್ರಾಪ್ತಮಶನಾದಿಕಂ ಕಿಯದೇವಾತ್ತಿ ನ ತು ಸರ್ವಂ ಸರ್ವಸ್ಯ ಸ್ವಕರ್ಮಪ್ರಾಪಿ(ತ)ತ್ವಾಭಾವಾತ್ । ತಥಾ ಸತಿ ಯದ್ವಸ್ತು ಸ್ವಯಂ ನಾದ್ಯಾನ್ನ ಭುಂಜೀತ ತಸ್ಯ ವಸ್ತುನೋ ನೇಶೇ ನೇಷ್ಟೇ ಸ್ವಾಮೀ ನ ಭವತಿ । ಉಪಾಸಕಸ್ತು ಹಿರಣ್ಯ-ಗರ್ಭರೂಪಃ ಸನ್ಸರ್ವಮಸ್ತೀತಿ ಸರ್ವಸ್ಯ ಸ್ವಾಮೀ । ಸೋಽಯಮೇಕೋ ವಿಶೇಷಃ । ವಾಶಬ್ದಃ ಸಮುಚ್ಚಯವಾಚೀ । ಯದ್ವಾ ಯಸ್ಮಾಚ್ಚ ಕಾರಣಾದೇನಮುಪಾಸಕಂ ನಾದ್ಯುರನ್ಯೇ ಪುರುಷಾ ನ ಭುಂಜೀರಂಸ್ತಸ್ಮಾತ್ಪರಾಧೀನಲಕ್ಷಣಂ ಭೋಗ್ಯತ್ವಂ ನಾಸ್ತಿ, ಅನುಪಾಸಕಸ್ಯ ತು ತದಸ್ತೀತ್ಯಯ-ಮಪರೋ ವಿಶೇಷಃ । ನನು ಭೋಗ್ಯತ್ವಾಭಾವೇ ಸತ್ಯಾದ್ಯೋ ಭವತೀತಿ ಕಥಮುಚ್ಯತೇ । ನಾಯಂ ದೋಷಃ । ಪರಾಧೀನತ್ವಲಕ್ಷಣಸ್ಯ ಭೋಗ್ಯತ್ವಸ್ಯೈವ ನಿಷೇಧಾತ್ । ಆದ್ಯೋ ಭವತೀತ್ಯನೇನ ತು ಸ್ವಾತ್ಮಭೂತಸರ್ವಭೋಗ್ಯಜಾತರೂಪತ್ವಮಭಿಧೀಯತ ಇತಿ ನ ಕೋಽಪಿ ವಿರೋಧಃ**

ಉಪಾಸಕನಲ್ಲದ ಪುರುಷನು ತನ್ನ ಕರ್ಮ ಫಲಾನುಸಾರವಾಗಿ ಕೆಲವೇ ಭೋಗ್ಯವರ್ಗವನ್ನು ಹೊಂದುತ್ತಾನೆ. ತನ್ನ ಧರ್ಮಕರ್ಮಗಳಿಂದ ಎಲ್ಲವನ್ನೂ ಹೊಂದುವುದು ಅಸಾಧ್ಯ. ಆಗ ಯಾವ ವಸ್ತು ಭೋಗ್ಯವಾಗುವುದಿಲ್ಲವೋ ಅದರ ಸ್ವಾಮಿತ್ವ ಅವನಿಗೆ ಲಭಿಸುವುದಿಲ್ಲ. ಉಪಾಸಕನಾದರೋ ಹಿರಣ್ಯಗರ್ಭನ ರೂಪ ಹೊಂದುವುದರಿಂದ ಸರ್ವ ಭೋಗ್ಯವಸ್ತುಗಳ ಸ್ವಾಮಿಯಾಗುತ್ತಾನೆ. ಇದೊಂದು ವಿಶೇಷ. ವಾ ಶಬ್ದ ಸಮುಚ್ಚಯಾರ್ಥಕವಾಗಿದೆ ಮತ್ತು ಉಪಾಸಕನನ್ನು ಇತರ ಪುರುಷರು ಭೋಗಿಸದಿರುವುದರಿಂದ ಪರಾಧೀನ ಲಕ್ಷಣವಾದ ಭೋಗ್ಯತ್ವ ಇರುವುದಿಲ್ಲ. ಉಪಾಸನಾ ಶೂನ್ಯನಿಗೆ ಇದು ಇದೆ. ಇದೊಂದು ವಿಶೇಷ. ಭೋಗ್ಯತ್ವ ಇಲ್ಲವಾದರೆ ಆದ್ಯತ್ವ ಹಿಂದೆ ಹೇಳಿದುದು ಹೇಗೆ ? ಎಂದು ಶಂಕಿಸಬಾರದು. ಪರಾಧೀನ ಲಕ್ಷಣವಾದ ಭೋಗ್ಯತ್ವವನ್ನು ನಿಷೇಧಿಸಿದರೂ ಸ್ವಾತ್ಮಭೂತವಾದ ಸರ್ವಭೋಗ್ಯ ವರ್ಗರೂಪವಿರುವುದರಿಂದ ಭೋಗ್ಯತ್ವ ಸಂಭವಿಸುತ್ತದೆ.

---

## *English Translation*

1. People say : ' Uktha, uktha, ' hymns, hymns ! (without knowing what uktha, hymn, means.) The hymn is truly (to be considered as) the earth, for from it all whatsoever exists arises.

2. The object of its praise is Agni (fire), and the eighty verses (of the hymn) are food, for by means of food one obtains everything.

3. The hymn is truly the sky, for the birds fly along sky, and men drive following the sky. The object of its praise is Vayu (air), and the eighty verses (of the hymn) are food, for by means of food one obtains everything.

4. The hymn is truly the heaven, for from its gift (rain) all whatsoever exists arises. The object of its praise is Aditya (the sun), and eighty verses are food, for by means of food one obtains everything.

5. So much with reference to the gods (mythological); now with reference to man (physiological).

6. The hymn is truly man. He is great, he is Pragapati. Let him think, I am the hymn.

7. The hymn is his mouth, as before in the case of the earth.

8. The object of its praise is speech, and the eighty verses (of the hymn) are food, for by means of food he obtains everything.

9. The hymn is the nostrils, as before in the case of the sky.

10. The object of its praise is breath, and the eighty verses (of the hymn) are food, for by means of food he obtains everything,

11. The slight bent (at the root) of the nose is, as it were, the place of the brilliaht (Aditya, the sun).

12. The hymn is the forehead, as before in the case of heaven. The object of its praise is the eye, and the eighty verses (of the hymn) are food, for by means of food he obtains everything.

13. The eighty verses (of the hymn) are alike food with reference to the gods as well as with reference to man. For all these beings breathe and live by means of food indeed. By food (given in alms, &c.) he conquers this world, by food (given in sacrifice) he conquers the other. Therefore the eighty verses (of the hymn) are alike food, with reference to the gods as well as with reference to man.

14. All this that is food, and all this that consumes food, is only the earth, for from the earth arises all whatever there is.

15. And all that goes hence (dies on earth), heaven consumes it all; and all that goes thence (returns from heaven to a new life) the earth consumes it all.

16. That earth is thus both food and consumer.

He also (the true worshipper who meditates on himself as being the uktha) is both consumer and consumed (subject and object). No one passes-ses that which he does not eat, or the things which do not eat him.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ಪ್ರಥಮಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವು

---

## ಅಥ ದ್ವಿತೀಯಾರಣ್ಯಕೇ ಪ್ರಥಮಾಧ್ಯಾಯೇ ತೃತೀಯಃ ಖಂಡಃ

ಎರಡನೆಯ ಆರಣ್ಯದ ಮೊದಲನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

---

**ಅಥಾತೋ ರೇತಸಃ ಸೃಷ್ಟಿಃ ಪ್ರಜಾಪತೇ ರೇತೋ ದೇವಾ ದೇವಾನಾಂ ರೇತೋ ವರ್ಷಂ ವರ್ಷಸ್ಯ ರೇತ ಓಷಧಯ ಓಷಧೀನಾಂ ರೇತೋನ್ನ ಮನ್ನಸ್ಯ ರೇತೋ ರೇತೋ ರೇತಸೋ ರೇತಃ ಪ್ರಜಾಃ ಪ್ರಜಾನಾಂ ರೇತೋ ವಾಗ್ವಾಚೋ ರೇತಃ ಕರ್ಮ ತದಿದಂ ಕರ್ಮ ಕೃತಮಯಂ ಪುರುಷೋ ಬ್ರಹ್ಮಣೋ ಲೋಕಃ ||**

ಪೂರ್ವತ್ರೋಕ್ಥೇಷು ಪುರುಷತ್ವದೃಷ್ಟಿಂ ವಿಧಾತುಂ ಮಹತ್ತ್ವಮಯಮೇವ ಮಹಾನಿತ್ಯ-ಭಿಹಿತಮ್ । ತದೇತನ್ಮಹತ್ತ್ವಮುಪಪಾದಯತಿ–ಅಥ ಪುರುಷ ಏವೋಕ್ಥಮಿತ್ಯೇವಮುಕ್ಥೇ ಪುರುಷ-ದೃಷ್ಟಿಕಥನಾನಂತರಮ್ । ಯತಃ ಕಾರಣಾತ್ಪುರುಷಸ್ಯ ಉಕ್ಥತ್ವಂ ಸಂಭಾವಯಿತುಮಯಮೇವ ಮಹಾನಿತ್ಯುಕ್ತಂ ವೈಶಿಷ್ಟ್ಯಂ ವಕ್ತವ್ಯಮತಃ ಕಾರಣಾದ್ವೈಶಿಷ್ಟ್ಯಸಿದ್ಧಯೇ ರೇತಸಃ ಸಾರಭೂತಸ್ಯ

ಸೃಷ್ಟಿರಭಿಧೀಯತ ಇತಿ ಶೇಷಃ । ಆದೌ ಪ್ರಜಾಪತೇರ್ಜಗದೀಶ್ವರಸ್ಯ ರೇತಃ ಸಾರಭೂತಂ ಕಾರ್ಯಂ ದೇವಾಃ । ಸಾತ್ವಿಕತ್ವಾದ್ದೇವಾನಾಂ ಸಾರಭೂತತ್ವಂ ಯುಕ್ತಮ್ । ಮನುಷ್ಯಾಣಾಂ ರಾಜಸತ್ವಾದ್ಗ-ವಾಶ್ವಾದೀನಾಂ ತಾಮಸತ್ವಾಚ್ಚ ನಾಸ್ತಿ ಸಾರಕಾರ್ಯತ್ವಮ್ । ತೇಷಾಂ ಚ ದೇವಾನಾಂ ರೇತಃ ಸಾರ-ಭೂತಂ ಕಾರ್ಯಂ ವರ್ಷಮ್ । ಘರ್ಮಕಾಲೇ ಸಂತಪ್ತಾ ಭೂಮಿರ್ವರ್ಷೇಣಾಽಽಪ್ಯಾಯತೇ ತತೋಽಸ್ಯ ಸಾರತ್ವಮ್ । ತಸ್ಯಾಪಿ ವರ್ಷಸ್ಯ ಸಾರಮೋಷಧಯಃ, ಪ್ರಾಣ್ಯುಪಕಾರಕತ್ವಾತ್ । ನ ಹಿ ತದ್ವೃಷ್ಟಿಕಾರ್ಯಮಪಿ ಪಂಕಾದಿಕಂ ಪ್ರಾಣಿಭಿಃ ಸೇವ್ಯತೇ । ಓಷಧೀನಾಮಪ್ಯನ್ನಂ ಸಾರಂ ನ ತು ಪಲಾಲತುಷಾದಿಕಮ್ । ಅನ್ನಸ್ಯಾಪಿ ರೇತಃ ಸಾರಂ ನ ತು ಪುರೀಷಾದಿಕಮ್ । ರೇತಸೋಽಪಿ ಸಾರಂ ಪುತ್ರಾದಿರೂಪಾಃ ಪ್ರಜಾ ನ ತು ವಂಧ್ಯಾಯೋನಾವುತ್ಸೃಷ್ಟಸ್ಯ ಸಾರತ್ವಮಸ್ತಿ । ಪ್ರಜಾನಾಮಪಿ ಸಾರಂ ಹೃದಯಪುಂಡರೀಕಂ, ಜೀವಾತ್ಮನಃ ಸ್ಥಾನತ್ವಾತ್ । "ಹೃದಿಹ್ಯೇಷ ಆತ್ಮಾ" ಇತಿ ಶ್ರುತೇಃ । ಹೃದಯಸ್ಯ ಸಾರಂ ಮನಃ, ಜ್ಞಾನಶಕ್ತಿಯುಕ್ತತ್ವಾತ್ । ನ ತು ಮಾಂಸಮಯಾನಾಮಷ್ಟದಲಾನಾಂ ತಚ್ಛಕ್ತಿರಸ್ತಿ । ಮನಸಃ ಸಾರಂ ವೇದರೂಪಾ ವಾಕ್ । "ಯದ್ಧಿ ಮನಸಾ ಧ್ಯಾಯತಿ ತದ್ವಾಚಾ ವದತಿ" ಇತಿ ಶ್ರುತೇರ್ವಾಚೋ ಮನಃಕಾರ್ಯತ್ವಮ್ । ನ ತು ಮನಸ ಉತ್ಪನ್ನಾನಾಂ ರಾಗ-ದ್ವೇಷಾದೀನಾಂ ವೇದವತ್ಸಾರತ್ವಮಸ್ತಿ । ವೇದಸ್ಯಾಪಿ ಸಾರಮಗ್ನಿಹೋತ್ರಾದಿಕಂ ಕರ್ಮ, ವೈದಿಕ-ಮಂತ್ರಾಣಾಂ ತದನುಷ್ಠಾನಾರ್ಥತ್ವಾತ್ । ತದಿದಂ ಕರ್ಮ ಪೂರ್ವಸ್ಮಿನ್ಜನ್ಮನಿ ಕೃತಂ ಸದಿಹ ಜನ್ಮನಿ ವೇದಶಾಸ್ತ್ರಕರ್ಮಾನುಷ್ಠಾನ ಬ್ರಹ್ಮೋಪಾಸನಬ್ರಹ್ಮಜ್ಞಾನಯೋಗ್ಯಃ ಪುರುಷೋ ಭವತಿ, ನ ಹಿ ನಿರತಿಶಯಿತಸುಕೃತಮಂತರೇಣೇದೃಶಂ ಜನ್ಮ ಸಂಭವತಿ । ತಸ್ಮಾತ್ಪುರುಷೋ ಬ್ರಹ್ಮಣ ಉಪಾಸ-ನೀಯಸ್ಯ ವೇದನೀಯಸ್ಯ ಚ ಲೋಕಃ ಸ್ಥಾನಮಿತಿ ತಸ್ಯ ಮಹತ್ತ್ವಂ ಸಿದ್ಧಮಿತ್ಯರ್ಥಃ ॥

ಹಿಂದಿನ ಖಂಡದಲ್ಲಿ ಉಕ್ಥಗಳಲ್ಲಿ ಪುರುಷತ್ವದೃಷ್ಟಿ ವಿಧಿಸಲು ಪುರುಷನಿಗೆ ಮಹಾನ್ ಎಂದು ಮಹತ್ವಹೇಳಿದೆ. ಆ ಮಹತ್ತ್ವವನ್ನು ಇಲ್ಲಿ ವಿವರಿಸುತ್ತಾರೆ. ಅಥ ಅಂದರೆ ಪುರುಷನೇ ಉಕ್ಥವೆಂದು ಉಕ್ಥದಲ್ಲಿ ಪುರುಷದೃಷ್ಟಿ ಹೇಳಿದ ಮೇಲೆ ಪುರುಷನಿಗೆ ಉಕ್ಥತ್ವಕೂಡಬೇಕಾದರೆ ಒಂದು ವೈಶಿಷ್ಟ್ಯ ಹೇಳಬೇಕು, ಇದನ್ನೇ 'ಅಯಮೇನ ಮಹಾನ್' ಎಂದು ಹಿಂದೆ ಹೇಳಿದುದು. ಈ ವೈಶಿಷ್ಟ್ಯವನ್ನು ಪ್ರತಿಪಾದಿಸಲು ರೇತಸ್ಸಿನ ಅಂದರೆ ಸಾರಭೂತವಸ್ತುವಿನ ಸೃಷ್ಟಿಯನ್ನು ವಿವರಿಸುತ್ತಾರೆ. ಮೊದಲು ಪ್ರಜಾಪತಿಯ ಅಂದರೆ ಜಗದೀಶ್ವರನ ರೇತಸ್ಸು ಅಂದರೆ ಸಾರಭೂತವಾದ ಕಾರ್ಯವೇ ದೇವತೆಗಳು ಇವರು ಸಾತ್ವಿಕರಾದುದರಿಂದ ಸಾರಭೂತರು ಎಂದಿದೆ. ಮನುಷ್ಯರು ರಜೋಗುಣವುಳ್ಳವರೂ, ಅಶ್ವಗೋಮುಂತಾದವುಗಳು ತಾಮಸಸ್ವಭಾವವುಗಳಾದುದರಿಂದ ಸಾರಕಾರ್ಯತ್ವ ಸಂಭವಿಸುವುದಿಲ್ಲ. ದೇವತೆಗಳ ರೇತಸ್ಸು ಅಂದರೆ ಸಾರವಾದ ಕಾರ್ಯವು ಮಳೆ. ಗ್ರೀಷ್ಮಕಾಲದಲ್ಲಿ ಕಾದ ಭೂಮಿಯು ಮಳೆಯಿಂದ ಹರ್ಷವೃದ್ಧಿಹೊಂದುವುದರಿಂದ ಮಳೆ ಸಾರಭೂತವಾಗಿದೆ. ಮಳೆಯ ಸಾರವು ಓಷಧಿವನಸ್ಪತಿಗಳು. ಪ್ರಾಣಿಗಳಿಗೆ ಉಪಕಾರಕಗಳಾದುದರಿಂದ ಇವುಗಳಿಗೆ ಸಾರತ್ವಯುಕ್ತವಾಗಿದೆ. ಕೆಸರು ಮುಂತಾದವುಗಳು ವೃಷ್ಟಿಕಾರ್ಯವಾದರೂ ಅವನ್ನು ಪ್ರಾಣಿಗಳು ಸೇವಿಸದಿರುವುದರಿಂದ ಅವು ಮಳೆಯಸಾರ ವಾಗುವುದಿಲ್ಲ. ಓಷಧಿಗಳ ಸಾರವೇ ಅನ್ನ ಹೊಟ್ಟು ಮುಂತಾದುವುಗಳಲ್ಲ. ಅನ್ನದಸಾರವೇ ರೇತಸ್ಸು ಅಂದರೆ ವೀರ್ಯ. ಮಲಾದಿಗಳಲ್ಲ. ರೇತಸ್ಸಿನ ಕಾರ್ಯ ಪುತ್ರಾದಿರೂಪಪ್ರಜೆಗಳು. ಬಂಜೆಯಲ್ಲಿಟ್ಟ ರೇತಸ್ಸಿನಲ್ಲಿ ಸಾರವಿಲ್ಲ. ಜೀವಾತ್ಮನ ಸ್ಥಾನವಾದುದರಿಂದ ಪ್ರಜೆಗಳ ಸಾರವು ಹೃದಯಪುಂಡರೀಕ. "ಹೃದಿ ಹ್ಯೇಷ ಆತ್ಮಾ" ಎಂದು ಶ್ರುತಿ. ಜ್ಞಾನಶಕ್ತಿಯಿಂದ

ಕೂಡಿರುವುದರಿಂದ ಹೃದಯದಸಾರ ಮನಸ್ಸು. ಮಾಂಸಮಯವಾದ ಅಷ್ಟದಲಾತ್ಮಕಹೃದಯಕ್ಕೆ ಆಸಕ್ತಿ ಇರುವುದಿಲ್ಲ. ಮನಸ್ಸಿನ ಸಾರವೇ ವೇದರೂಪವಾದ ವಾಕ್. ಮನಸ್ಸಿನಲ್ಲಿ ಎಣಿಸಿದುದನ್ನೇ. ಮಾತಿನಿಂದ ಹೇಳುವುದರಿಂದ ವಾಕ್ಯ ಮನಸ್ಸಿನಕಾರ್ಯವೆಂದು ವ್ಯಕ್ತವಾಗುತ್ತದೆ. ಮನಸ್ಸಿನಲ್ಲಿ ಹುಟ್ಟಿದ ರಾಗದ್ವೇಷಾದಿಗಳಿಗೆ ವೇದದಂತೆ ಸಾರತ್ವವಿಲ್ಲ. ವೇದಕ್ಕೂ ಸಾರಭೂತವಾದದ್ದು ಅಗ್ನಿಹೋತ್ರಾದಿಕರ್ಮಗಳು. ಇವರ ಅನುಷ್ಠಾನಕ್ಕೋಸ್ಕರವೇ ಮಂತ್ರಗಳಿರುತ್ತವೆ. ಈ ವೈದಿಕ ಕರ್ಮಗಳು ಪೂರ್ವಜನ್ಮದಲ್ಲಿ ಮಾಡಿದವುಗಳಾದರೆ ಈ ಜನ್ಮದಲ್ಲಿ ವೇದಶಾಸ್ತ್ರಕರ್ಮಾನುಷ್ಠಾನ, ಬ್ರಹ್ಮೋಪಾಸನೆ, ಬ್ರಹ್ಮ ಜ್ಞಾನ ಇವುಗಳಿಗೆ ಯೋಗ್ಯನಾದ ಪುರುಷನಾಗುತ್ತಾನೆ. ಅತಿಶಯ ಸುಕೃತವಿಲ್ಲದೆ ಈ ಪುರುಷಜನ್ಮದೊರೆಯಲಾರದು. ಆದುದರಿಂದ ಪುರುಷನೇ ಉಪಾಸನಾಯೋಗ್ಯನಾದ, ವೇದ್ಯನಾದ ಬ್ರಹ್ಮನಿಗೆ ಆಶ್ರಯ(ಸ್ಥಾನ) ನಾದುದರಿಂದ ಅವನ ಮಹತ್ತ್ವ ಪ್ರಸಿದ್ಧವಾಗಿದೆ.

**ಸ ಇರಾಮಯೋ ಯದ್ಧೀರಾಮಯಸ್ತಸ್ಮಾದ್ಧಿರಣ್ಮಯಃ ॥**

**ತಸ್ಯ ಪುರುಷಸ್ಯ ಹಿರಣ್ಮಯಾಖ್ಯೋ ಗುಣೋ ಜ್ಞಾನಾಯ ವಿಧೀಯತೇ—ಇರಾಶಬ್ದೋಽ ನ್ನವಾಚೀ । ಸ ಪುರುಷಃ ಶಿರಃಪಾಣ್ಯಾದಿಯುಕ್ತೋಽನ್ನಮಯಃ । ಅತ ಏವ ತೈತ್ತರೀಯಕಾ ಆಮನಂತಿ—"ಸ ವಾ ಏಷ ಪುರುಷೋಽನ್ನರಸಮಯಃ" (ತೈ-ಉ-೨-೧-೧) ಇತಿ । ಯದ್ಧಿ ಯಸ್ಮಾದೇವ ಕಾರಣಾದಯಮಿರಾಮಯಸ್ತಸ್ಮಾತ್ಕಾರಣಾದ್ಧಿರಣ್ಮಯ ಇತ್ಯುಪಾಸಕಾನಾಂ ಪ್ರಸಿದ್ಧಿಃ ಇರಾಹಿರಣ್ಮಯಶಬ್ದಯೋರಕ್ಷರಸಾಮ್ಯಾತ್ತಥೋಚ್ಯತೇ । ಯಥಾಧ್ಯಾತ್ಮಮನ್ನಮ.ಯ ಏವಮಧಿ- ದೈವಂ ಬ್ರಹ್ಮಾಂಡರೂಪೇಣ ಸ್ವರ್ಣಮಯಃ ॥**

ಜ್ಞಾನಕ್ಕೋಸ್ಕರ ಪುರುಷನಿಗೆ ಹಿರಣ್ಮಯನೆಂಬ ಗುಣವಿಶೇಷವನ್ನು ವಿವರಿಸುತ್ತಾರೆ. ಇರಾ ಎಂದರೆ ಅನ್ನ. ಶಿರಸ್ಸುಪಾಣಿ ಮುಂತಾದುವುಗಳಿಂದ ಕೂಡಿದ ಈ ಪುರುಷನು ಅನ್ನಮಯನಾಗಿರುತ್ತಾನೆ. ತೈತ್ತರೀಯಕರುಕೂಡಾ "ಸ ವಾ ಏಷ ಪುರುಷೋಽನ್ನರಸಮಯಃ" ಎಂದು ಅನ್ನಮಯತ್ವವನ್ನು ಹೇಳುತ್ತಾರೆ. ಇರಾಮಯನಾದುದರಿಂದಲೇ ಹಿರಣ್ಮಯನೆಂದು ಪ್ರಸಿದ್ಧಿ ಬಂದಿದೆ. ಇರಾ,ಹಿರಣ್ಮಯಶಬ್ದಗಳಿಗೆ ಅಕ್ಷರ ಸಾಮ್ಯದಿಂದ ಅಭೇದ ಹೇಳಿದೆ. ಅಧ್ಯಾತ್ಮ ಸ್ವರೂಪದಿಂದ ಅನ್ನಮಯನಾದರೆ ಅಧಿದೈವದಿಂದ ಬ್ರಹ್ಮಾಂಡರೂಪನಾದ ಹಿರಣ್ಯಮಯನೆಂದು ತಾತ್ಪರ್ಯ.

**ಹಿರಣ್ಮಯೋ ಹ ವಾ ಅಮುಷ್ಮಿಲ್ಲೋಕೇ ಸಂಭವತಿ ಹಿರಣ್ಮಯಃ ಸರ್ವೇಭ್ಯೋ ಭೂತೇಭ್ಯೋ ದದೃಶೇ ಯ ಏವಂ ವೇದ॥**

**ಏತದ್ಗುಣಧ್ಯಾನಸ್ಯ ಫಲಮಾಹ—ಯಃ ಪುಮಾನೇವಂ ಹಿರಣ್ಮಯತ್ವಗುಣಮುಪಾಸ್ತೇ ಸ ಪುಮಾನ್ಸ್ವರ್ಗಲೋಕೇ ಜ್ಯೋತಿರ್ಮಯೋ ಭವತಿ । ತಥಾವಿಧೋ ಭೂತ್ವಾ ಸರ್ವಪ್ರಾಣ್ಯುಪ- ಕಾರಾರ್ಥಮಾದಿತ್ಯಮಂಡಲರೂಪೇಣ ಸರ್ವದಾ ದೃಶ್ಯತೇ ॥**

ಈ ಗುಣಧ್ಯಾನದ ಫಲವನ್ನು ವಿವರಿಸುತ್ತಾರೆ. ಯಾವ ಪುರುಷನು ಇದನ್ನು ತಿಳಿದು ಹಿರಣ್ಮಯತ್ವಗುಣ ವನ್ನು ಉಪಾಸಿಸುತ್ತಾನೋ ಅವನು ಸ್ವರ್ಗಲೋಕದಲ್ಲಿ ಜ್ಯೋತಿಸ್ವರೂಪದಿಂದ ಇದ್ದು ಸರ್ವಪ್ರಾಣಿಗಳ ಉಪಕಾರಕ್ಕೋಸ್ಕರ ಆದಿತ್ಯಮಂಡಲರೂಪದಿಂದ ಯಾವಾಗಲೂ ಪ್ರಕಾಶಿಸುತ್ತಾನೆ.

*English Translation*

1 Next follows the origin of seed. The seed of pragapati are the Devas (gods). The seed of the Devas is rain. The seed of rain are herbs. The seed of herbs is food. The seed of food is seed. The seed of seed are creatures. The seed of creatures is the heart. The seed of the heart is the mind. The seed of the mind is speech (Veda). The seed of speech is action (sacrifice). The action done (in a former state) is the man, the abode of Brahman.

2. He (man) consists of food (ira), and because he consists of food (iramaya), he consists of gold (hiranmaya). He who knows this becomes golden (as the sun) for the benefit of all beings.

ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತವಾದ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ಪ್ರಥಮಾಧ್ಯಯೇ ತೃತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯದ ದ್ವಿತೀಯಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವು ॥

---

# ಅಥ ದ್ವಿತೀಯಾರಣ್ಯಕೇ ಪ್ರಥಮಾಧ್ಯಾಯೇ ಚತುರ್ಥಃ ಖಂಡಃ

**ಎರಡನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು**

---

ತಂ ಪ್ರಪದಾಭ್ಯಾಂ ಪ್ರಾಪದ್ಯತ ಬ್ರಹೇಮಂ ಪುರುಷಂ ಯತ್ಪ್ರಪದಾ-
ಭ್ಯಾಂ ಪ್ರಾಪದ್ಯತ ಬ್ರಹ್ಮೇಮಂ ಪುರುಷಂ ತಸ್ಮಾತ್ಪ್ರಪದೇ
ತಸ್ಮಾತ್ಪ್ರಪದೇ ಇತ್ಯಾಚಕ್ಷತೇ ಶಫಾಃ ಖುರಾ ಇತ್ಯನ್ಯೇಷಾಂ
ಪಶೂನಾಮ್ ॥

ಸ್ಥೂಲದೇಹರೂಪೇಣೋಕ್ತಸ್ಯೋಪಾಸನಮಭಿಧಾಯ ಸೂಕ್ಷ್ಮದೇಹಾತ್ಮಕಪ್ರಾಣರೂಪೇ-ಣೋಪಾಸನಂ ವಕ್ತುಂ ಪ್ರಾಣೋಪಾಧಿಕಸ್ಯ ಪರಮಾತ್ಮನಃ ಶರೀರೇ ಪ್ರವೇಶಂ ದರ್ಶಯತಿ— ಯಜ್ಜಗತ್ಕಾರಣಂ "ಸತ್ಯಂ ಜ್ಞಾನಮನಂತಂ ಬ್ರಹ್ಮ" (ತೈ-ಉ-೨-೧-೧) ಇತ್ಯಾದಿ ವಾಕ್ಯಪ್ರತಿ-ಪಾದ್ಯ ಬ್ರಹ್ಮಾಸ್ತಿ ತದೇತತ್ಸೃಷ್ಟಿಕಾಲೇ ಸ್ಥೂಲದೇಹಂ ಸೃಷ್ಟ್ವಾ ತಂ ಸೃಷ್ಟಮಿದಂ ದೃಶ್ಯಮಾನಂ ಪುರುಷಶಬ್ದವಾಚ್ಯಂ ಸ್ಥೂಲಂ ದೇಹಂ ಪ್ರಪದಾಭ್ಯಾಂ ಪಾದಾಗ್ರಾಭ್ಯಾಂ ಪ್ರಾಪದ್ಯತ ಪ್ರವಿಷ್ಟವತ್ । "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" (ತೈ-ಉ-೨-೬-೧) ಇತಿ ಶ್ರುತ್ಯಂತರಮ್ । ಯದ್ಯಪಿ ಸರ್ವಗತಸ್ಯ ಬ್ರಹ್ಮಣಃ ಪ್ರವೇಶೋ ನ ಸಂಭವತಿ ಪ್ರಾಣೋಪಾಧಿಕಸ್ಯ ಪ್ರಾಣಪ್ರವೇಶೇನೈವ ಪ್ರವೇಶ ಉಪಚರ್ಯತೇ । ಅತ ಏವ ಮೈತ್ರಾಯಣೀಯಾ ಆಮನಂತಿ— "ಸ ವಾಯುಮಿವಾತ್ಮಾನಂ ಕೃತ್ವಾಽ-ಭ್ಯಂತರಂ ಪ್ರಾವಿಶತ್" (ಮೈ-ಉ-ಪ್ರ-೨) ಇತಿ ॥ ಯಸ್ಮಾತ್ಪಾದಾಗ್ರಾಭ್ಯಾಂ ಪ್ರವೇಶಸ್ತಸ್ಮಾತ್ಪ್ರಾ-ಪದ್ಯತೋಭಾಭ್ಯಾಮಿತಿ ವ್ಯುತ್ಪತ್ತ್ಯಾ ಪಾದಾಗ್ರಯೋಃ ಪ್ರಪದತ್ವಂ ಸಂಪನ್ನಮ್ । ಯಸ್ಮಾದವಯ-ವಾರ್ಥಸ್ತಯೋರಸ್ತಿ ತಸ್ಮಾಲ್ಲೋಕೇ ಶಾಬ್ದಿಕಾಃ ಪ್ರಪದೇ ಇತ್ಯನೇನೈವ ಶಬ್ದೇನ ಪಾದಾಗ್ರದ್ವಯಂ ವ್ಯವಹರಂತಿ । ಮನುಷ್ಯಶರೀರೇಷು ಪಾದಾಗ್ರಸದ್ಭಾವಾದ್ದ್ವಾರೇಣ ಪ್ರವೇಶೇಽಪಿ ಗವಾಶ್ವಾದಿಶರೀ-ರೇಷು ತದಸಂಭವ ಇತಿ ಚೇನ್ನ। ತಚ್ಛರೀರೇಷ್ವಪಿ ಶಫಶಬ್ದೇನ ಖುರಶಬ್ದೇನ ಚ ತತ್ತದ್ದೇಶೇ ಪ್ರಾಣಿ-ಭಿರ್ವ್ಯವಹ್ರಿಯಮಾಣಾನಾಂ ಪಾದಭಾಗಾನಾಮೇವ ಪ್ರಪದತ್ವಾತ್ । ಶಫಖುರಶಬ್ದಯೋರ್ದೇಶ-ವಿಶೇಷೇಣ ವ್ಯವಹಾರಭೇದಃ ॥

ಸ್ಥೂಲದೇಹರೂಪದಿಂದ ಉಕ್ತವಸ್ತುದ ಉಪಾಸನೆಯನ್ನು ತಿಳಿಸಲು ಮೊದಲು ಪ್ರಾಣೋಪಾಧಿಕನಾದ ಪರಮಾತ್ಮನು ಶರೀರದಲ್ಲಿ ಪ್ರವೇಶಿಸಿದುದನ್ನು ವಿವರಿಸುತ್ತಾರೆ. ಜಗತ್ಕಾರಣವಾದ "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂದು ಶ್ರುತಿ ಪ್ರತಿಪಾದಿತವಾದ ಯಾವ ಬ್ರಹ್ಮಚೈತನ್ಯವಿದೆಯೋ ಅದು ಸೃಷ್ಟಿಕಾಲವಲ್ಲಿ ಸ್ಥೂಲದೇಹವನ್ನು ಸೃಷ್ಟಿಮಾಡಿ ಆ ಸೃಷ್ಟವಾದ ತೋರತಕ್ಕ ಪುರುಷಶಬ್ದವಾಚ್ಯವಾದ ಸ್ಥೂಲದೇಹವನ್ನು ಎರಡುಪಾದಾಗ್ರಭಾಗಗಳಿಂದ ಪ್ರವೇಶಿಸಿತು. 'ತತ್ ಸೃಷ್ಟ್ವಾ ತದೇವಪ್ರಾವಿಶತ್' ಎಂದು ಇದೇ ವಿಷಯಶ್ರುತ್ಯಂತರದಲ್ಲಿಯೂ ಹೇಳಿದೆ. ಸರ್ವವ್ಯಾಪಕನಾದ ಬ್ರಹ್ಮನಿಗೆ ಪ್ರವೇಶ ಸಂಭವಿಸುವುದು ಹೇಗೆ ಎಂದು ಆಶಂಕಿಸಬಾರದು. ಪ್ರಾಣರೂಪಉಪಾಧಿಯಿಂದ ಪ್ರಾಣಪ್ರವೇಶದಿಂದ ಬ್ರಹ್ಮನಲ್ಲಿಯೂ ಪ್ರವೇಶವು ಆರೋಪಿತವಾಗುತ್ತದೆ. ಇದನ್ನು ಮೈತ್ರಾಯಣೀಯರು ಅವನು ವಾಯುವಿನಂತೆ ಶರೀರವಮಾಡಿಕೊಂಡು ಒಳಗೆ ಪ್ರವೇಶಿಸಿದನೆಂದು 'ಸವಾಯುಮಿವ–' ಇತ್ಯಾದಿವಾಕ್ಯಗಳಿಂದ ವಿವರಿಸಿರುತ್ತಾರೆ. 'ಪ್ರಾಪದ್ಯತ ಉಭಾಭ್ಯಾಂ' ಎಂಬ ವ್ಯುತ್ಪತ್ತಿಯಿಂದ (ಎರಡುಪಾದಗಳಿಂದ ಒಳಗೆ ಪ್ರವೇಶಿಸಿದನು) ಪಾದಾಗ್ರಗಳಿಗೆ ಪ್ರಪದ ಎಂಬ ಹೆಸರು ಪ್ರಸಿದ್ಧವಾಗಿದೆ. ಈ ಅವಯವಾರ್ಥವನ್ನನುಸರಿಸಿಯೇ ಶಾಬ್ದಿಕರು ಪ್ರಪದೇ ಎಂಬ ಒಂದುಪದದಿಂದಲೇ ಪಾದಾಗ್ರಗಳೆರಡನ್ನೂ ವ್ಯವಹರಿಸುತ್ತಾರೆ. ಮನುಷ್ಯನಿಗಾದರೋ ಪಾದಾಗ್ರಗಳಿರುತ್ತವೆ. ಗವಾಶ್ವಾದಿ ಪ್ರಾಣಿಗಳಿಗೆ ಪಾದಾಗ್ರ ಇಲ್ಲದಿರುವುದರಿಂದ ಅಲ್ಲಿ ಪ್ರವೇಶ ಹೇಗೆ ಎಂದರೆ ಅಲ್ಲಿಯೂ ಶಫ, ಖುರ(ಗೊರಸು) ಇತ್ಯಾದಿಶಬ್ದಗಳಿಂದ ವ್ಯವಹರಿಸಲ್ಪಡುವ ಪಾದಭಾಗಗಳೇ ಪ್ರಪದಗಳಾಗುತ್ತವೆ. ಆದುದರಿಂದ ಅಲ್ಲಿಯೂ ಪ್ರವೇಶಕ್ಕೆ ತೊಂದರೆ ಇಲ್ಲ.

ತದೂರ್ಧ್ವಮುದಸರ್ಪತ್ತಾ ಊರೂ ಅಭವತಾಮ್ ॥

ಪಾದಾಗ್ರಯೋಃ ಪ್ರವಿಷ್ಟಸ್ಯ ಬ್ರಹ್ಮಣಃ ಕ್ರಮೇಣ ಶಿರಃಪರ್ಯಂತಾಂ ವ್ಯಾಪ್ತಿಂ ದರ್ಶಯಿತು ಮೂರುಪರ್ಯಂತಂ ತಾವದ್ದರ್ಶಯತಿ—ತತ್ಪಾದಾಗ್ರಯೋಃ ಪ್ರವಿಷ್ಟಂ ಬ್ರಹ್ಮೋರ್ಧ್ವಾಭಿಮುಖತ್ವೇನ ವ್ಯಾಪ್ತವತ್ । ಯಸ್ಮಾದೇವಂ ತಸ್ಮಾದುಪಸರ್ಪದನಯೋರಿತಿ ವ್ಯುತ್ಪತ್ತ್ಯಾ ತಾವೂರೂ ಊರ್ಧ್ವಪ್ರದೇಶಾವೂರೂಶಬ್ದವಾಚ್ಯಾವಭವತಾಮ್ ॥

ಪಾದಾಗ್ರದಿಂದ ಪ್ರವೇಶಿಸಿದ ಬ್ರಹ್ಮನಿಗೆ ಕ್ರಮವಾಗಿ ಶಿರಸ್ಸಿನ ವರೆಗಿನ ಪ್ರವೇಶವನ್ನು ತಿಳಿಸಲು ಮೊದಲು ಊರು (ತೊಡೆ) ಗಳವರೆಗೆ ವ್ಯಾಪ್ತಿ ತೋರಿಸುತ್ತಾರೆ. ಪಾದಾಗ್ರಗಳಿಂದ ಪ್ರವೇಶಿಸಿದ ಬ್ರಹ್ಮಚೈತನ್ಯವು ಊರ್ಧ್ವ (ಮೇಲೆ) ಮುಖವಾಗಿ ಚಲಿಸಿತು. 'ಊರ್ಧ್ವಂ ಉದ ಸರ್ಪತ್' (ಮೇಲಕ್ಕೆ ಪ್ರವೇಶಿಸಿತು) ಎಂಬ ವ್ಯುತ್ಪತ್ತಿಯಿಂದ ಕಾಲಿನ ಮೇಲ್ಭಾಗಗಳಿಗೆ ಊರು ಎಂಬ ಹೆಸರು ಬಂದಿದೆ.

## ಉರು ಗೃಣೀಹೀತ್ಯಬ್ರವೀತ್ತದುದುರಮಭವತ್ ॥

ಉರುದೇಶಾದಪ್ಯೂರ್ಧ್ವದೇಶವ್ಯಾಪ್ತಿಂ ದರ್ಶಯತಿ—ಉರು ವಿಸ್ತೀರ್ಣಂ ಯಥಾ ಭವತಿ ತಥಾ ಗೃಣೀಹಿ ನಿಗರಣಯೋಗ್ಯಂ ವಿಪುಲಚ್ಛಿದ್ರಂ ಕುರ್ವಿತ್ಯೇವಮುಪರಿತನಂ ಶರೀರಭಾಗಂ ಪ್ರತ್ಯೂರ್ವೋರವಸ್ಥಿತಂ ಬ್ರಹ್ಮಾಬ್ರವೀತ್ತಸ್ಯ ಬ್ರಹ್ಮಣಃ ಸಂಕಲ್ಪವಶಾತ್ತತ್ಸ್ಥಾನಮುಪರಿತನಮುದರಶಬ್ದವಾಚ್ಯಂ ವಿಪುಲಚ್ಛಿದ್ರಮಭವತ್ ॥ ಉರುಶಬ್ದೇನ ಸಹಾಕ್ಷರಸಾಮ್ಯಾದುದರನಾಮತ್ವಮ್ ॥

ಊರು ಪ್ರದೇಶಗಳಿಗಿಂತಲೂ ಮೇಲಿನ ವ್ಯಾಪ್ತಿಯನ್ನು ವಿವರಿಸುತ್ತಾರೆ. ಆ ಬ್ರಹ್ಮಚೈತನ್ಯವು ಉರು ಅಂದರೆ ವಿಸ್ತಾರವಾಗಿರುವ ನುಂಗಲು ಯೋಗ್ಯವಾದ ದೊಡ್ಡ ಛಿದ್ರವಿರುವ ದೇಲ್ಭಾಗವನ್ನು ಮಾಡೆಂದು ಹೇಳಿತು. ಅಂದರೆ ಈ ಬ್ರಹ್ಮನ ಸಂಕಲ್ಪದಿಂದಲೇ ಊರು ಮೇಲ್ಭಾಗದಲ್ಲಿ ಉದರ (ಹೊಟ್ಟೆ)ವೆಂಬ ಸ್ಥಾನ ಉಂಟಾಯಿತು. ಉರು (ದೊಡ್ಡದು) ಶಬ್ದದ ಅಕ್ಷರ ಸಾಮ್ಯದಿಂದ ಉದರ ಎಂದಾಗಿದೆ.

## ಉರ್ವೇವ ಮೇ ಕುರ್ವಿತ್ಯಬ್ರವೀತ್ತದುರೋಽಭವತ್ ॥

ಪುನರಪ್ಯುಪರಿ ದೇಶೇ ಸಂಚಾರಂ ದರ್ಶಯತಿ—ಉದರವತಿನೋ ಮಮ ಭೂಯೋಽಪಿ ವಿಸ್ತೀರ್ಣಮೇವ ಛಿದ್ರಂ ಕುರ್ವಿತ್ಯೇವಂ ಬ್ರಹ್ಮಸಂಕಲ್ಪವಶಾತ್ತದೇತದುಪರಿತನಂ ಸ್ಥಾನಮುರಃಶಬ್ದವಾಚ್ಯಂ ವಿಪುಲಚ್ಛಿದ್ರಮಭೂತ್ । ಅತ್ರಾಪ್ಯಕ್ಷರಸಾಮ್ಯಾನ್ನಿರ್ವಚನಂ ದ್ರಷ್ಟವ್ಯಮ್ ॥

ಉದರದಲ್ಲಿರುವ ನನಗೆ ಇನ್ನೂ ವಿಸ್ತೀರ್ಣವುಳ್ಳ ಛಿದ್ರವನ್ನು ಮಾಡು ಎಂದು ಸಂಕಲ್ಪಿಸಿರುವುದರಿಂದ ಆ ಸಂಕಲ್ಪದಿಂದಲೇ ಉದರದ ಮೇಲೆ ಉರಃ (ಎದೆ) ಶಬ್ದ ವಾಚ್ಯವಾದ ವಿಶಾಲನಾದ ಸ್ಥಾನವುಂಟಾಯಿತು. ಇಲ್ಲಿಯೂ ಉರ ಎಂಬ ಶಬ್ದದ ಅಕ್ಷರ ಸಾಮ್ಯದಿಂದಲೇ ಉರಃ ಎಂದಾಗಿದೆ. ಉದರದ ಮೇಲಿನ ವಕ್ಷಃಸ್ಥಲದಲ್ಲಿ ಪ್ರವೇಶಿಸಿದನೆಂದದು ತಾತ್ಪರ್ಯ.

## ಉದರಂ ಬ್ರಹ್ಮೇತಿ ಶಾರ್ಕರಾಕ್ಷ್ಯಾ ಉಪಾಸತೇ ಹೃದಯಂ ಬ್ರಹ್ಮೇತ್ಯಾರುಣಯೋ ಬ್ರಹ್ಮಾಹೈವ ತಾ೩ ಇ ॥

ಅನಯೋಃ ಕುಕ್ಷ್ಯುರಸೋರ್ಬ್ರಹ್ಮಸಂಕಲ್ಪವಿಶೇಷೇಣ ಪ್ರೀತಿಪೂರ್ವಕೇಣೋತ್ಪನ್ನತ್ವಾದ್ಬ್ರಹ್ಮಧ್ಯಾನಪ್ರತೀಕತ್ವಂ ದರ್ಶಯತಿ—ಶರ್ಕರಾಕ್ಷಿನಾಮಕಸ್ಯ ಮಹರ್ಷೇಃ ಪುತ್ರಾ ಉದರೇ ಬ್ರಹ್ಮದೃಷ್ಟಿಂ ಕೃತ್ವೋಪಾಸತೇ । ಆರುಣಾಖ್ಯಸ್ಯ ಮಹರ್ಷೇಃ ಪುತ್ರಾ ಹೃದಯಸ್ಥಾನಗತೇಽಷ್ಟದಲ-ಕಮಲಮಧ್ಯಸ್ಥೇ ಹೃದಯಚ್ಛಿದ್ರೇ ಬ್ರಹ್ಮದೃಷ್ಟಿಂ ಕೃತ್ವೋಪಾಸತೇ । ತೇ ಉಭೇ ಅಪಿ ಸ್ಥಾನೇ ಬ್ರಹ್ಮಣಃ ಪ್ರೀತಿವಿಷಯತ್ವಾದ್ಬ್ರಹ್ಮೈವ । ಪ್ಲುತಿಃ ಶಾಸ್ತ್ರೀಯಪ್ರಸಿದ್ಧ್ಯರ್ಥಾ ॥

ಈ ಉದರ ಮತ್ತು ವಕ್ಷಃ ಪ್ರದೇಶಗಳು ಪ್ರೀತಿಪೂರ್ವಕವಾಗಿ ಬ್ರಹ್ಮಸಂಕಲ್ಪದಿಂದ ಉತ್ಪನ್ನಗಳಾದುದರಿಂದ ಇವುಗಳಿಗೆ ಬ್ರಹ್ಮಧ್ಯಾನಪ್ರತೀಕತ್ವವನ್ನು ವಿವರಿಸುತ್ತಾರೆ. ಶರ್ಕರಾಕ್ಷಿ ಎಂಬ ಮಹರ್ಷಿಯ ಮಕ್ಕಳು ಉದರದಲ್ಲಿ ಬ್ರಹ್ಮದೃಷ್ಟಿಯನ್ನಿಟ್ಟು ಉಪಾಸನೆ ಮಾಡುತ್ತಾರೆ. ಆರುಣನೆಂಬ ಮಹರ್ಷಿಯ ಪುತ್ರರು ಹೃದಯದಲ್ಲಿರುವ ಅಷ್ಟದಳ ಕಮಲದ ಮಧ್ಯದಲ್ಲಿರುವ ಹೃದಯಚ್ಛಿದ್ರದಲ್ಲಿ ಬ್ರಹ್ಮದೃಷ್ಟಿಯಿಂದ ಉಪಾಸಿಸುತ್ತಾರೆ. ಈ ಎರಡುಸ್ಥಾನಗಳೂ ಬ್ರಹ್ಮನ ಪ್ರೀತಿವಿಷಯವಾದುದರಿಂದ ಬ್ರಹ್ಮಸ್ವರೂಪವೇ ಆಗಿರುತ್ತವೆ. ಪ್ಲುತವು ಶಾಸ್ತ್ರೀಯ ಪ್ರಸಿದ್ಧಿಯನ್ನು ಸೂಚಿಸುತ್ತದೆ.

ಊರ್ಧ್ವಂ ತ್ವೇವೋದಸರ್ಪತ್ತಚ್ಛಿರೋಽಶ್ರಯತ ಯಚ್ಛಿರೋಽಶ್ರಯತ-ತಚ್ಛಿರೋಽಭವತ್ತಚ್ಛಿರಸಃ ಶಿರಸ್ತ್ವಮ್ ॥

ಪುನರಪಿ ಬ್ರಹ್ಮಣ ಊರ್ಧ್ವದೇಶೇ ಸಂಚಾರಂ ದರ್ಶಯತಿ—ಉರಃ ಪರ್ಯಂತಮುದ್ಗತ್ಯಾಪಿ ತದ್ಬ್ರಹ್ಮ ನೋಪರೇಮೇ ಕಿಂತು ತತೋಽಪ್ಯೂರ್ಧ್ವಮುದಸರ್ಪದೇವ । ಊರ್ಧ್ವಂ ಗತ್ವಾ ಚ ತದ್ಬ್ರಹ್ಮ ಶಿರೋದೇಶಮಶ್ರಯತ ಸೇವಿತವತ್ । ಯಸ್ಮಾದೇವಂ ತಸ್ಮಾಚ್ಛ್ರಿತಮನೇನೇತಿ ವ್ಯುತ್ಪತ್ತ್ಯಾ ತತ್ಸ್ಥಾನಂ ಶಿರಃಶಬ್ದವಾಚ್ಯಮಭವತ್ । ತಸ್ಮಾದೇವ ಕಾರಣಾಲ್ಲೋಕೇಽಪ್ಯೂರ್ಧ್ವ-ಭಾಗಸ್ಯ ಶಿರಃಶಬ್ದವಾಚ್ಯತ್ವಂ ಪ್ರಾಣಿಭಿರ್ವ್ಯವಹ್ರಿಯತೇ ॥

ತಿರುಗಿ ಬ್ರಹ್ಮನ ಮುಂದಿನ ಸಂಚಾರವನ್ನು ವಿವರಿಸುತ್ತಾರೆ. ಎದೆಯವರೆಗೆ ಪ್ರವೇಶಿಸಿಯೂ ಆ ಬ್ರಹ್ಮಚೈತನ್ಯವು ನಿಲ್ಲಲಿಲ್ಲ, ಅದಕ್ಕೂ ಮುಂದೆ ಚಲಿಸಿತು. ಮೇಲಕ್ಕೆ ಹೋಗಿ ಆ ಬ್ರಹ್ಮವು ಶಿರೋದೇಶವನ್ನಾಶ್ರಯಿಸಿತು. 'ಶ್ರಿತಂ ಅನೇನ ಇವನಿಂದ ಆಶ್ರಯಿಸಲ್ಪಟ್ಟದ್ದು ಎಂಬ ವ್ಯುತ್ಪತ್ತಿಯಿಂದ ತಲೆಗೆ ಶಿರಃ ಎಂಬ ಹೆಸರು ಬಂದಿದೆ. ಈ ಕಾರಣದಿಂದ ಲೋಕದಲ್ಲಿಯೂ ಶರೀರದ ಮೇಲ್ಭಾಗಕ್ಕೆ ಶಿರಸ್ಸೆಂದು ಕರೆಯುತ್ತಾರೆ.

ತಾ ಏತಾಃ ಶೀರ್ಷಞ್ಛ್ರಿಯಃ ಶ್ರಿತಾಶ್ಚಕ್ಷುಃ ಶ್ರೋತ್ರಂ ಮನೋ ವಾಕ್ಪ್ರಾಣಃ ॥

ಶಿರೋಭಾಗಂ ಪುನಃ ಪ್ರಶಂಸತಿ—ಶೀರ್ಷಂಛಿರೋಭಾಗೇ ತಾ ಬ್ರಹ್ಮಣಾ ಸೃಷ್ಟತ್ವೇನ ಶ್ರುತಾ ಪ್ರಸಿದ್ಧಾ ಏತಾ ಅಸ್ಮಾಭಿರನುಭೂಯಮಾನಾಃ ಶ್ರಿಯೋ ದರ್ಶನಶ್ರವಣಾದಿವ್ಯವಹಾರಸಂಪದಃ ಶ್ರಿತಾಃ ಪ್ರಾಪ್ತಾಃ ಕಾಸ್ತಾಃ ಶ್ರಿಯ ಇತಿ ಚೇತ್ತದುಚ್ಯತೇ—ಚಕ್ಷುರಾದಯಃ ಶ್ರಿಯೋ ವ್ಯವಹಾರ-ಸಂಪದಸ್ತನ್ನಿಷ್ಪತ್ತೇಃ ॥

ಶಿರೋಭಾಗವನ್ನು ಪ್ರಶಂಸಿಸುತ್ತಾರೆ. ಈ ಶಿರೋಭಾಗದಲ್ಲಿ ಬ್ರಹ್ಮನಿಂದ ಸೃಷ್ಟವಾದ ಇತರ ಶ್ರುತಿಗಳಲ್ಲಿಯೂ ಪ್ರಸಿದ್ಧನಾದ ದರ್ಶನಶ್ರವಣಾದಿವ್ಯವಹಾರಸಂಪತ್ತುಗಳು ಆಶ್ರಯಿಸಿರುತ್ತವೆ. ಶ್ರೀ ಅಂದರೆ ವ್ಯವಹಾರಸಂಪತ್ತೆಂದರ್ಥ. ಇದಕ್ಕೆ ಸಾಧಕವಾದುದರಿಂದ ಚಕ್ಷುಸು, (ಕಣ್ಣು) ಶ್ರೋತ್ರ (ಕಿವಿ) ಮನಸ್ಸು, ವಾಕ್, ಪ್ರಾಣಗಳೂ ಶ್ರೀಶಬ್ದವಾಚ್ಯಗಳಾಗುತ್ತವೆ. ಇವೆಲ್ಲವೂ ಶಿರಸ್ಸನ್ನಾಶ್ರಯಿಸಿರುತ್ತವೆ.

**ಶ್ರಯಂತೇಽಸ್ಮಿಂಛ್ರಿಯೋ ಯ ಏವಮೇತಚ್ಛಿರಸಃ ಶಿರಸ್ತ್ವಂ ವೇದ,**

ಶಿರಸ್ತ್ವವೇದನಂ ಪ್ರಶಂಸತಿ—ಯಃ ಪುಮಾಂಛಿರೋನಾಮ ವಿದಿತ್ವೋಪಾಸ್ತೇಽಸ್ಮಿನ್ಪುರುಷೇ ಚಕ್ಷುರಾದಿಪಾಟವಜನ್ಯೋತ್ತಮಸಂಪದ ಆಶ್ರಿತಾ ಭವಂತಿ ॥

ಈ ಶಿರಃ ಶಬ್ದಾರ್ಥವನ್ನು ಚೆನ್ನಾಗಿ ತಿಳಿದು ಯಾರು ಉಪಾಸನೆಮಾಡುವರೋ ಅವರಿಗೆ ಚಕ್ಷುರಾದಿಪಾಟವದಿಂದುಂಟಾದ ಉತ್ತಮ ಸಂಪತ್ತುಂಟಾಗುತ್ತದೆ.

**ತಾ ಅಹಿಂಸಂತಾಹಮುಕ್ಥಮಸ್ಮ್ಯಹಮುಕ್ಥಮಸ್ಮೀತಿ ತಾ ಅಬ್ರುವನ್ಹಂತಾಸ್ಮಾಚ್ಛರೀರಾದುತ್ಕ್ರಾಮಾಮ ತದ್ಯಸ್ಮಿನ್ನ ಉತ್ಕ್ರಾಂತ ಇದಂ ಶರೀರಂ ಪತ್ಸ್ಯತಿ ತದುಕ್ಥಂ ಭವಿಷ್ಯತೀತಿ ॥**

ಇದಾನೀಂ ಶಿರಃ ಪರ್ಯಂತೇ ಶರೀರೇಽವಸ್ಥಿತಾನಾಂ ಚಕ್ಷುರಾದೀನಾಂ ಮಧ್ಯೇ ಪ್ರಾಣಸ್ಯ ಶ್ರೈಷ್ಠ್ಯಂ ವಕ್ತುಂ ಸಂವಾದಂ ದರ್ಶಯತಿ—ತಾಃ ಪೂರ್ವೋಕ್ತಾಃ ಶ್ರಿಯಶ್ಚಕ್ಷುರಾದಿರೂಪಾಸ್ತದಭಿಮಾನಿನ್ಯೋ ದೇವತಾ ಅಹಿಂಸಂತ ಪರಸ್ಪರಸ್ಪರ್ಧಾರೂಪಾಂ ಹಿಂಸಾಮಕುರ್ವನ್ । ಸ್ಪರ್ಧಾವಿಷಯೋ ವಿಸ್ಪಷ್ಟಮುಚ್ಯತೇ—ಅಹಮುಕ್ಥಮಸ್ಮಿ । ಉಕ್ಥೇ ಚಕ್ಷುಃ ಸ್ವರೂಪಸ್ಯ ಮಮೈವ ದೃಷ್ಟಿಃ ಕರ್ತವ್ಯೇತ್ಯೇವಂ ಚಕ್ಷುರ್ದೇವತಾ ವಕ್ತಿ। ತಥೈವ ಶ್ರೋತ್ರಾದಯೋಽಪೀತಿ ವಿವಕ್ಷಯಾ ವೀಪ್ಸೋಕ್ತಾ। ತಾಃ ಸ್ಪರ್ಧಮಾನಾ ದೇವತಾಃ ಸ್ಪರ್ಧಾನಿವಾರಣಾರ್ಥಂ ಸಮಯವಿಶೇಷೇ ಪರಸ್ಪರಮಬ್ರುವನ್ । ನಿವಾರಣೋಪಾಯದರ್ಶನನಿಮಿತ್ತಹರ್ಷಾರ್ಥೋ ಹಂತಶಬ್ದಃ । ವಯಂ ಸರ್ವಾ ಅಪಿ ಕ್ರಮೇಣಾಸ್ಮಾಚ್ಛರೀರಾದುತ್ಕ್ರಾಂತಿಂ ಕರವಾಮ । ತಥಾ ಸತ್ಯಸ್ಮಾಕಂ ಮಧ್ಯೇ ಯಸ್ಮಿನ್ನುತ್ಕ್ರಾಂತೇ ಸತೀದಂ ಶರೀರಂ ಪತಿಷ್ಯತಿ ತದೇವೋಕ್ತಂ ಭವಿಷ್ಯತಿ । ಇತಿಶಬ್ದಃ ಸಮಯಬಂಧ ಸಮಾಪ್ತ್ಯರ್ಥಃ ॥

ಶಿರಸ್ಸಿನ ವರೆಗಿರುವ ಶರೀರವನ್ನಾಶ್ರಯಿಸಿರುವ ಚಕ್ಷುರಾದಿ ಅವಯವಗಳಲ್ಲಿ ಪ್ರಾಣದ ಶ್ರೈಷ್ಠ್ಯವನ್ನು ಹೇಳಲು ಪರಸ್ಪರ ಸಂವಾದವನ್ನು ವಿವರಿಸುತ್ತಾರೆ. ಸಂಪದ್ರೂಪವಾದ ಚಕ್ಷುರಾದಿ ಇಂದ್ರಿಯಗಳ ಅಭಿಮಾನಿದೇವತೆಗಳು ಪರಸ್ಪರ ಸ್ಪರ್ಧಾರೂಪವಾದ ಹಿಂಸೆಯನ್ನು ಮಾಡಿದವು. ಸ್ಪರ್ಧೆ ಏನೆಂದರೆ ಉಕ್ಥಶಸ್ತ್ರದಲ್ಲಿ ಚಕ್ಷುಸ್ ರೂಪನಾದ ನನ್ನ ದೃಷ್ಟಿಯನ್ನೇ ಇಡಬೇಕೆಂದು ಚಕ್ಷುರಭಿಮಾನಿದೇವತೆ ಹೇಳುತ್ತದೆ. ಹೀಗೆ ಶ್ರೋತ್ರಾದ್ಯಭಿಮಾನಿದೇವತೆಗಳು ಶ್ರೋತ್ರಾದಿದೃಷ್ಟಿಯನ್ನೆ ಇಡಬೇಕೆಂದು ವಾದಿಸಲು ಪ್ರಾರಂಭಿಸಿದುವು. ವಿವಾದಮಾಡುತ್ತಾ ಅವುಗಳು ತಮ್ಮಲ್ಲಿಯೇ ಒಂದು ಕರಾರನ್ನು ಮಾಡಿಕೊಂಡವು. ವಿವಾದ ನಿವಾರಣೋಪಾಯ ತೋರಿದುದಕ್ಕೆ ಹರ್ಷ ಸೂಚಿಸಲು ಹಂತ ಎಂದಿದೆ. ನಾವೆಲ್ಲರೂ ಕ್ರಮವಾಗಿ ಒಬ್ಬೊಬ್ಬರೇ

ಈ ಶರೀರವನ್ನು ಬಿಟ್ಟು ಹೊರಡೋಣ. ಆಗ ನಮ್ಮವರಲ್ಲಿ ಯಾರು ಹೊರಗೆ ಹೊರಟಾಗ ಈ ಶರೀರವು ಬಿದ್ದುಹೋಗುವುದೋ ಅವರೇ ಉಕ್ಥರಾಗುತ್ತಾರೆ. ಇದೇ ಅವರ ಕರಾರು. ಸಮಯಬಂಧ ಸಮಾಪ್ತಿಯನ್ನು ಇತಿ ಶಬ್ದ ತಿಳಿಸುತ್ತದೆ.

ವಾಗುದಕ್ರಾಮದವದನ್ನಶ್ನನ್ಪಿಬನ್ನಾಸ್ತೈವ ಚಕ್ಷುರುದಕ್ರಾಮದಪಶ್ಯ-
ನ್ನಶ್ನನ್ಪಿಬನ್ನಾಸ್ತೈವ ಶ್ರೋತ್ರಮುದಕ್ರಾಮದಶೃಣ್ವನ್ನಶ್ನನ್ಪಿಬನ್ನಾ-
ಸ್ತೈವ ಮನ ಉತ್ಕ್ರಾಮನ್ ಮೀಲಿತ ಇವಾಶ್ನನ್ ಪಿಬನ್ನಾಸ್ತೈವ
ಪ್ರಾಣ ಉದಕ್ರಾಮತ್ತತ್ಪ್ರಾಣ ಉತ್ಕ್ರಾಂತೇಽಪದ್ಯತ ॥

**ಕ್ರಮೇಣೋತ್ಕ್ರಾಂತಿಂ ಶರೀರಪತನಪರ್ಯಂತಾಂ ದರ್ಶಯತಿ—ವಾಕ್ಚಕ್ಷುಃಶ್ರೋತ್ರ-ಮನಸಾಮೇಕೈಕಸ್ಮಿನ್ನುತ್ಕ್ರಾಂತೇ ಸತಿ ತತ್ತದಿಂದ್ರಿಯಸಾಧ್ಯವ್ಯಾಪಾರಮಾತ್ರಂ ಲುಪ್ಯತೇ ನ ತು ಶರೀರಂ ಪತತಿ, ಕಿಂ ತ್ವನ್ನಪಾನೇ ಸ್ವೀಕುರ್ವನ್ಯಥಾಪೂರ್ವಮಭವದೇವ। ಮೀಲಿತ ಇವೇತ್ಯಸ್ಯಾ-ಯಮರ್ಥಃ–ಯಥಾ ಮುಗ್ಧಶ್ಚಕ್ಷುರ್ನಿಮೀಲನೋನ್ಮೀಲನಮಾತ್ರಂ ಕುರ್ವನ್ವಿಷಯವಿವೇಕಮಕುರ್ವ-ನ್ನಾಸ್ತೇ ತದ್ವದಯಂ ದೇಹ ಇತಿ। ತಚ್ಛರೀರಂ ಪ್ರಾಣ ಉತ್ಕ್ರಾಂತೇ ಸತಿ ಪತಿತಮಭೂನ್ನ ತ್ವಶ್ನಾತಿ ನಾಪಿ ಪಿಬತಿ ॥**

ಶರೀರ ಪತನದವರೆಗಿನ ಚಕ್ಷುರಾದಿಗಳ ಉತ್ಕ್ರಾಂತಿಯನ್ನು (ಬಿಟ್ಟು ಹೋಗುವುದನ್ನು) ವರ್ಣಿಸುತ್ತಾರೆ. ವಾಕ್, ಚಕ್ಷುಸ್ಸು, ಶ್ರೋತ್ರ, ಮನಸ್ಸುಗಳಲ್ಲಿ ಒಂದೊಂದೇ ಶರೀರವನ್ನು ಬಿಟ್ಟುಹೋಯಿತೋ ಆ ಇಂದ್ರಿಯ ಸಾಧ್ಯವ್ಯಾಪಾರ ಮಾತ್ರ ಶರೀರದಲ್ಲಿ ನಷ್ಟವಾಯಿತು. ಅದರೆ ಶರೀರ ಮಾತ್ರ ಬೀಳಲಿಲ್ಲ. ಅನ್ನಪಾನಾದಿಗಳನ್ನು ಸ್ವೀಕರಿಸುತ್ತಾ ಹಿಂದಿನಂತೆಯೇ ಇದ್ದಿತು. ವಾಕ್ ಹೋದಾಗ ಮಾತಾಡದೆ ಅನ್ನಪಾನಾದಿಗಳನ್ನು ಸ್ವೀಕರಿಸಿ ಚೇಷ್ಟಾಯುಕ್ತವಾಗಿತ್ತು. ಹೀಗೆಯೇ ಒಂದೊಂದು ಇಂದ್ರಿಯಗಳು ಹೋದಾಗಲೂ ತಿಳಿಯಬೇಕು. ಮುಗ್ಧನು ಅಂದರೆ ಏನೂ ತಿಳಿಯದವನು ಕಣ್ಣುಮುಚ್ಚಿ ತೆರೆಯುತ್ತಾ ವಿಷಯವಿವೇಕವಿಲ್ಲದೆ ಇರುತ್ತಾನೋ ಅದರಂತೆ ದೇಹವಿರುತ್ತದೆ. ಕೊನೆಯಲ್ಲಿ ಪ್ರಾಣವು ಉತ್ಕ್ರಾಂತಿ ಹೊಂದಿತು. ಆಗ ಶರೀರವು ಅನ್ನಪಾನಾದಿಯಾವ ವ್ಯವಹಾರವೂ ಇಲ್ಲದೆ ಕೆಳಗೆ ಬಿದ್ದುಹೋಯಿತು.

ತದಶೀರ್ಯತಾಶಾರೀತೀಂ೩ ತಚ್ಛರೀರಮಭವತ್ತಚ್ಛರೀರಸ್ಯ ಶರೀರತ್ವಮ್[5]

**ತದೇವ ಪತನಂ ಶರೀರಶಬ್ದನಿರ್ವಚನೇನ ಪ್ರಪಂಚಯತಿ—ಯತ್ಪತಿತಂ ಶರೀರಂ ತಚ್ಛೀ-ರ್ಣಮಭೂತ್, ಅವಯವವಿಶ್ಲೇಷೇಣ ವಿನಷ್ಟಮಭೂತ್, ಅತೋ ಲೋಕೋ ಪ್ರಾಣರಹಿತಂ ಶರೀರಂ ದೃಷ್ಟ್ವೈತದಶಾರಿ ವಿಶೀರ್ಣಮಭೂದಿತ್ಯೇವಂ ವರ್ಣಯಂತಿ। ತತ್ಪ್ರಸಿದ್ಧಿದ್ಯೋತನಾಯ ಪ್ಲುತಿರಿತಿ। ತಚ್ಚ ಶೀರ್ಣತ್ವಯೋಗ್ಯತ್ವಾಚ್ಛರೀರಮಭೂತ್। ತತ್ತಸ್ಮಾಚ್ಛೀರ್ಣತ್ವವಚನಾದೇವ ಶರೀರನಾಮ ಸರ್ವೈರ್ವ್ಯವಹ್ರಿಯತೇ ॥**

ಈ ಪತನವನ್ನೇ ಶರೀರ ಶಬ್ದನಿರ್ವಚನದಿಂದ ವಿವರಿಸುತ್ತಾರೆ. ಕೆಳಗೆ ಬಿದ್ದ ಶರೀರವು ಶೀರ್ಣವಾಯಿತು ಅಂದರೆ ಅವಯವಗಳ ಶೈಥಿಲ್ಯದಿಂದ ವಿನಾಶ ಹೊಂದಿತು. ಆದುದರಿಂದ ಲೋಕದಲ್ಲಿ ಪ್ರಾಣವಿಲ್ಲದ ಶರೀರವನ್ನು ನೋಡಿ ವಿಶೀರ್ಣವಾಯಿತೆಂದು ಹೇಳುತ್ತಾರೆ. ಪ್ರಸಿದ್ಧಿಯನ್ನು ತಿಳಿಸಲು ಪ್ಲುತಿ ಹೇಳಿದೆ. ಶಿಥಿಲವಾಗುವುದರಿಂದ ಶರೀರವೆಂದು ಹೆಸರು ಬಂದಿದೆ.

**ಶೀರ್ಯತೇ ಹ ವಾ ಅಸ್ಯ ದ್ವಿಷನ್ಪಾಪ್ಮಾ ಭ್ರಾತೃವ್ಯಃ ಪರಾऽಸ್ಯ ದ್ವಿಷ-ನ್ಪಾಪ್ಮಾ ಭ್ರಾತೃವ್ಯೋ ಭವತಿ ಯ ಏವಂ ವೇದ ॥**

ಏತನ್ನಾಮನಿರ್ವಚನವೇದನಂ ಪ್ರಶಂಸತಿ—ಯಃ ಪುಮಾನೇವಂ ಶರೀರತ್ವಂ ವಿದಿತ್ವೋ-ಪಾಸ್ತೇऽಸ್ಯ ವೇದಿತುರ್ದ್ವೇಷಂ ಕುರ್ವನ್ಪಾಪರೂಪಃ ಶತ್ರುರ್ವಿಶೀರ್ಣೋ ಭವತಿ । ಕಥಂಚಿದ-ವಿಶೀರ್ಣತ್ವೇऽಪಿ ಪರಾಭವತಿ ತಿರಸ್ಕೃತೋ ಭವತಿ ॥

ಯಾವ ಪುರುಷನು ಶರೀರಶಬ್ದಾರ್ಥವನ್ನು ತಿಳಿದು ಉಪಾಸನೆಮಾಡುತ್ತಾನೋ ಆಗ ಅವನನ್ನು ದ್ವೇಷಿಸುವ ಶತ್ರುವು ವಿಶೀರ್ಣ ಅಂದರೆ ವಿನಾಶಹೊಂದುತ್ತಾನೆ. ಹೇಗೋ ಉಪಾಯಾಂತದಿಂದ ಶಿಥಿಲನಾಗದಿದ್ದರೂ ಲೋಕ ತಿರಸ್ಕೃತನಾಗುತ್ತಾನೆ.

**ತಾ ಅಹಿಂಸಂತೈವಾಹಮುಕ್ಥಮಸ್ಮ್ಯಹಮುಕ್ಥಮಸ್ಮೀತಿ ತಾ ಅಬ್ರು-ವನ್ ಹಂತೇದಂ ಪುನಃ ಶರೀರಂ ಪ್ರವಿಶಾಮ ತದ್ಯಸ್ಮಿನ್ನಃ ಪ್ರಪನ್ನ ಇದಂ ಶರೀರಮುತ್ಥಾಸ್ಯತಿ ತದುಕ್ಥಂ ಭವಿಷ್ಯತೀತಿ ॥**

ಪ್ರಾಣೋತ್ಕ್ರಮಣಸ್ಯ ದೇಹಪತನಹೇತುತ್ವಮಭಿಧಾಯ ಪ್ರಾಣಪ್ರವೇಶಸ್ಯ ದೇಹೋ-ತ್ಥಾಪನಹೇತುತ್ವಮಭಿಧಾತುಂ ಪುನರಪಿ ಸಂವಾದಂ ಸಮುಯಬಂಧಂಚ ದರ್ಶಯತಿ—ಅಹಿಂಸಂ-ತೈವ ನ ತು ಸ್ಪರ್ಧಾಯಾ ಉಪರತಾಃ । ಪ್ರಪನ್ನೇ ಪ್ರವಿಷ್ಟೇ । ಅನ್ಯತ್ಪೂರ್ವವದ್ವ್ಯಾಖ್ಯೇ-ಯಮ್ 3

ಪ್ರಾಣೋತ್ಕ್ರಮಣದಿಂದ ದೇಹಪಾತವನ್ನು ಹೇಳಿ ಪ್ರಾಣಪ್ರವೇಶವು ದೇಹೋತ್ಪತ್ತಿಗೆ ಕಾರಣವೆಂದು ತಿಳಿಸಲು ಪುನಃ ಪರಸ್ಪರ ಸಂವಾದವನ್ನು ವರ್ಣಿಸುತ್ತಾರೆ. ಹಿಂದಿನಂತೆ ಚಕ್ಷುರಾದಿ ಇಂದ್ರಿಯಗಳಲ್ಲಿ ನಾನೇ ಉಕ್ಥನೆಂದು ಪರಸ್ಪರಸ್ಪರ್ಧೆಯುಂಟಾಯಿತು. ಆಗ ಅವುಗಳು ಒಂದುಒಪ್ಪಂದಕ್ಕೆ ಬಂದವು. ನಮ್ಮಲ್ಲಿ ಯಾರು ಪ್ರವೇಶಿಸಿದರೆ ಈ ಶರೀರವು ಪುನಃ ಉತ್ಥಾನ ಹೊಂದುವುದೋ ಅದೇ ಉಕ್ಥವು ಎಂದು ನಿರ್ಧರಿಸಿದುವು.

**ವಾಕ್ಪ್ರಾವಿಶದಶಯದೇವ ಚಕ್ಷುಃ ಪ್ರಾವಿಶದಶಯದೇವ ಶ್ರೋತ್ರಂ ಪ್ರಾವಿಶದಶಯದೇವ ಪ್ರಾಣಃ ಪ್ರಾವಿಶತ್ತತ್ಪ್ರಾಣೇ ಪ್ರಸನ್ನ ಉದ-ತಿಷ್ಠತ್ತದುಕ್ಥಮಭವತ್ ॥**

ಪ್ರಾಣಪ್ರವೇಶೇನ ದೇಹಸ್ಯೋತ್ಥಾನಂ ದರ್ಶಯತಿ—ಅಶಯದೇವ ಶಯಾನಮೇವಾಭೂತ್। ನ ತೂತ್ಥಿತಮಭೂತ್ । ತತ್ಪ್ರಾಣಸ್ವರೂಪಮುತ್ಥಾನಹೇತುತ್ವಾದುಕ್ಥಮಭೂತ್ ।

ಪ್ರಾಣ ಪ್ರವೇಶದಿಂದ ದೇಹೋತ್ಥಾನವನ್ನು ವಿವರಿಸುತ್ತಾರೆ. ಹಿಂದಿನಂತೆ ಕ್ರಮವಾಗಿ ವಾಗಾದಿಗಳು ಶರೀರವನ್ನು ಪ್ರವೇಶಿಸಿದವು. ಆದರೆ ಶರೀರವು ಬಿದ್ದೇ ಇದ್ದಿತು. ಮೇಲಕ್ಕೇಳಲಿಲ್ಲ. ಕೊನೆಯಲ್ಲಿ ಪ್ರಾಣವು ಪ್ರವೇಶಿಸಿದೊಡನೆಯೇ ಅದು ಮೇಲಕ್ಕೆದ್ದಿತು. ಎಂದಿನಂತೆ ಚೇಷ್ಟಾಯುಕ್ತವಾಯಿತು.

**ತದೇತದುಕ್ಥಾಙ್ಕ್ಷ್ ಪ್ರಾಣ ಏವ ||**

ಪ್ರಾಣಸ್ಯೋತ್ಥಾನಹೇತುತ್ವಲಕ್ಷಣಮುಕ್ಥತ್ವಂ ಪ್ರಸಿದ್ಧಮಿತಿ ಪ್ಲುತಿಪ್ರಯೋಗೇಣ ದರ್ಶ-ಯತಿ—ಚಕ್ಷುರಾದೀನಾಮುತ್ಥಾನ ಹೇತುಭಾವಾದುಕ್ಥತ್ವಾಭಾವಾರ್ಥ ಏವಕಾರಃ ||

ಪ್ರಾಣವೇ ಉತ್ಥಾನಕಾರಣವಾದುದರಿಂದ ಅವೇ ಉಕ್ಥವೆಂದು ಪ್ರಸಿದ್ಧಿತೋರಿಸಲು ಪ್ಲುತಿಯಿಂದ ವಿವರಿಸುತ್ತಾರೆ. ಚಕ್ಷುರಾದಿಗಳು ಶರೀರೋತ್ಥಾನಕ್ಕೆ ಕಾರಣವಾಗದಿರುವುದರಿಂದ ಉಕ್ಥತ್ವವೂ ಇಲ್ಲವೆಂದು ಏವಕಾರದಿಂದ ವ್ಯಕ್ತವಾಗುತ್ತದೆ.

**ಪ್ರಾಣ ಉಕ್ಥಮಿತ್ಯೇವ ವಿದ್ಯಾತ್ ||**

ಯಥರ್ಥಂ ಪ್ರಾಣಪ್ರವೇಶ ಪ್ರಾಣಸಂವಾದಾವುಪನ್ಯಸ್ತೌ ತದಿದಾನೀಂ ವಿಧತ್ತೇ—ನಿಷ್ಕೇವ-ಲ್ಯಾಖ್ಯೇ ಶಸ್ತ್ರೇ ಪ್ರಾಣದೃಷ್ಟಿಂ ಕುರ್ಯಾದೇವೇತ್ಯರ್ಥಃ ||

ಪ್ರಾಣವೇ ಶ್ರೇಷ್ಠವಾದುದರಿಂದ ನಿಷ್ಕೇವಲ್ಯಶಸ್ತ್ರದಲ್ಲಿ ಪ್ರಾಣದೃಷ್ಟಿಮಾಡಬೇಕು.

**ತಂ ದೇವಾ ಅಬ್ರುವನ್ತ್ವಮುಕ್ಥಮಸಿ ತ್ವಮಿದಂ ಸರ್ವಮಸಿ ತವ ವಯಂ ಸ್ಮಸ್ತ್ವಮಸ್ಮಾಕಮಸೀತಿ ||**

ಏತಸ್ಯಾರ್ಥಸ್ಯ ದಾರ್ಢ್ಯಾಯ ಚಕ್ಷುರಾದಿದೇವಕರ್ತೃಕಾಂ ಪ್ರಾಣಸ್ತುತಿಂ ದರ್ಶಯತಿ—ತಂ ಪ್ರಾಣಂ ಚಕ್ಷುರಾದ್ಯಾ ದೇವಾ ಅನೇನ ಪ್ರಕಾರೇಣೋಕ್ತವಂತಃ । ಹೇ ಪ್ರಾಣ ತ್ವಂ ದೇಹ-ಸ್ಯೋತ್ಥಾನಹೇತುತ್ವಾದುಕ್ಥಸ್ವರೂಪಮಸಿ । ಅತಃ ಸರ್ವದೇಹವ್ಯಾಪಾರಸ್ಯ ತ್ವದಧೀನತ್ವಾದಿದಂ ಸರ್ವಂ ಜಗತ್ತ್ವಮೇವಾಸಿ । ವಯಂ ತವ ಭೃತ್ಯಾಃ ಸ್ಮಃ । ತ್ವಂ ಚಾಸ್ಮಾಕಂ ಸ್ವಾಮ್ಯಸಿ । ಇತಿ ಶಬ್ದಃ ಸ್ತುತಿಸಮಾಪ್ತ್ಯರ್ಥಃ ||

ದೃಢವಾದ ಅರ್ಥಜ್ಞಾನಕ್ಕೋಸ್ಕರ ಚಕ್ಷುರಾದಿದೇವತೆಗಳಿಂದ ಮಾಡಿದ ಪ್ರಾಣಸ್ತುತಿಯನ್ನು ವಿವರಿಸುತ್ತಾರೆ. ಆ ಪ್ರಾಣನನ್ನು ಕುರಿತು ಚಕ್ಷುರಾದಿಅಭಿಮಾನಿದೇವತೆಗಳು ಈ ರೀತಿಯಾಗಿ ಹೇಳಿದರು. ಎಲೈ ಪ್ರಾಣನೇ ನೀನೇ ಶರೀರೋತ್ಥಾನಕ್ಕೆ ಕಾರಣನಾದುದರಿಂದ ಉಕ್ಥಸ್ವರೂಪನಾಗಿರುವಿ. ಸಕಲದೇಹವ್ಯಾಪಾರವೆಲ್ಲಾ ನಿನ್ನ ಅಧೀನವಾಗಿರುವುದರಿಂದ ಸಕಲಜಗತ್ತೂ ನೀನೇ ಆಗಿರುವಿ. ನಾವೆಲ್ಲರೂ ನಿನ್ನ ಸೇವಕರು. ನೀನು ನಮಗೆ ಸ್ವಾಮಿಯಾಗಿರುವಿ. ಇತಿ ಶಬ್ದವು ಸ್ತುತಿಯಸಮಾಪ್ತಿ ತಿಳಿಸುತ್ತದೆ.

**ತದಪ್ಯೇತದೃಷಿಣೋಕ್ತಂ ತ್ವಮಸ್ಮಾಕಂ ತವ ಸ್ಮಸೀತಿ ||**

ಉಕ್ತಾರ್ಥದಾರ್ಢ್ಯಾಯ ಮಂತ್ರಮುದಾಹರತಿ—ಯದೇತತ್ಪ್ರಾಣಸ್ತುತಿರೂಪಂ ಬ್ರಾಹ್ಮ-ಣೇನೋಕ್ತಂ ತದೇತದೃಷಿಣಾ ಮಂತ್ರೇಣಾಪ್ಯುಕ್ತಮ್ । ತ್ವಮಸ್ಮಾಕಮಿತ್ಯಾದಿಃ ಪ್ರತೀಕಪ್ರದರ್ಶ-ನಾರ್ಥೋಽಯಂ ಮಂತ್ರಸ್ಯ ಚರಮಃ ಪಾದಃ । ಮಂತ್ರಸ್ತು ಸಂಹಿತಾಯಾಮೇವಾಮ್ನಾತಃ—“ ತ್ವಯೇ-ದಿಂದ್ರ ಯುಜಾ ವಯಂ ಪ್ರತಿ ಬ್ರುವೀಮಹಿ ಸ್ಪೃಧಃ । ತ್ವಮಸ್ಮಾಕಂ ತವ ಸ್ಮಸಿ ” ಇತಿ । ಹೇ

ಇಂದ್ರ ಪ್ರಾಣರೂಪ ಪರಮೇಶ್ವರ ವಯಂ ಚಕ್ಷುರಾದ್ಯಾಃ ಪ್ರಾಣಾಸ್ತ್ವಯೈವ ಸಹ ಯುಜಾ ಯೋಗೇನ ರಸಯೋಗೇಣ ತಾಮ್ರಮಿವ ತ್ವದ್ಯೋಗೇನ ಲಬ್ಧವೀರ್ಯಾಃ ಸಂತಃ ಸ್ಪೃಧಃ ಸ್ಪರ್ಧಾ-ಹೇತೂಞ್ಛತ್ರೂನ್ ಪ್ರತಿಬ್ರುವೀಮಹಿ । ಪ್ರತಿವಕ್ಷ್ಯಾಮೋ ನಿರಾಕರಿಷ್ಯಾಮಃ । ಅತಸ್ತ್ವಮ-ಸ್ಮಾಕಂ ಸ್ವಾಮೀ, ವಯಂ ಚ ತವ ತ್ವದೀಯಾ ಭೃತ್ಯಾಃ ಸ್ಮಸಿ ಭವಾಮಃ । ತಮೇತಂ ಮಂತ್ರ-ಮುಪಲಕ್ಷಯಿತುಂ ತ್ವಮಸ್ಮಾಕಮಿತ್ಯಾದಿಪಾದ ಉದಾಹೃತಃ ॥

ಈ ಅರ್ಥವನ್ನು ಪುಷ್ಟೀಕರಿಸಲು ಮಂತ್ರವನ್ನು ಉದಾಹರಿಸುತ್ತಾರೆ. ಬ್ರಾಹ್ಮಣದಲ್ಲಿ ಹೇಳಿದ ಪ್ರಾಣಸ್ತುತಿಯು ಮಂತ್ರದಲ್ಲಿಯೂ ವಿವರಿಸಿದೆ. ' ತ್ವಮಸ್ಮಾಕಂ "—ಎಂಬುದು ಆ ಮಂತ್ರದ ಕೊನೆಯ ಪಾದ. " ತ್ವಯೇದಿಂದ್ರ " ಯುಜಾ ವಯಂ ಪ್ರತಿ ಬ್ರವೀಮಹಿ ಸ್ಪೃಧಃ ! ತ್ವಮಸ್ಮಾಕಂ ತವ ಸ್ಮಸಿ " (ಋ. ಸಂ. ೮-೯೨-೩೨) ಎಂಬುದೇ ಈ ಮಂತ್ರ **ಹೇ ಇಂದ್ರ**— ಪ್ರಾಣರೂಪ ಪರಮೇಶ್ವರನೇ, **ವಯಂ**—ಚಕ್ಷುರಾದಿಗಳಾದ ನಾವು, **ತ್ವಯಾ ಇತ್**—ನಿನ್ನಿಂದಲೇ **ಯುಜಾ**—ಸಂಬಂಧಹೊಂದಿ, ಅಂದರೆ ರಸ ಸಂಬಂಧದಿಂದ ತಾಮ್ರದಂತೆ ನಿನ್ನ ಸಂಬಂಧದಿಂದ ವೀರ್ಯವಂತರಾಗಿ **ಸ್ಪೃಧಃ**—ಸ್ಪರ್ಧೆಗೆ ಕಾರಣರಾದ ಶತ್ರುಗಳನ್ನು **ಪ್ರತಿಬ್ರುವೀಮಹಿ**—ನಿರಾಕರಿಸುತ್ತೇವೆ. ಆದುದರಿಂದ **ತ್ವಂ**—ನೀನು **ಅಸ್ಮಾಕಂ**—ನಮಗೆ ಯಜಮಾನನಾಗಿರುವಿ. ನಾವು **ತವ**—ನಿನಗೆ ಸೇವಕರು **ಸ್ಮಸಿ**—ಆಗಿರುತ್ತೇವೆ. ಈ ಮಂತ್ರವನ್ನು ತೋರಿಸಲು ಅದರ ಕೊನೆಯಪಾದ ಇಲ್ಲಿ ಹೇಳಿದೆ.

———

## *English Translation*

—

1. Brahman (in the shape of prana, breath) entered into that mau by the tips of his feet, and because Brahmau entered (prapadyate) into that man by the tips of his feet, therefore people call them the tips of the feet (prapada), but hoofs and claws in other animals.

2. Then Brahman crept up higher, and therefore they were (called) the thighs (uru).

3. Then he said : " Grasp wide," and that was (called) the belly (udara).

4. Then he said : 'Make room for me,' and that was (called) the chest (uras).

5. The Sarkarakshyas meditate on the belly as Brahman. The Arunis on the heart. Both (these places) are Brahman indeed.

6. But Brahman crept upwards and came to the head, and because he came to the head, therefore the head is called head.

7. Then these delights alighted in the head, sight, hearing, mind, speech, breath.

8. Delights alight on him who thus knows, why the head is called head.

9. These (five delights or senses) strove together, saying : 'I am the uktha (hymn), I am the uktha.' weil, they said, 'let us all go out from this body; then on whose departure this body shall fall, he shall be the uktha among us.'

10. Speech went out, yet the body without speaking remained, eating and drinking.

Sight went out, yet the body without seeking ramained, eating and drinking.

Hearing went out, yet the body without hearing remained, eating and drinking.

Mind went out, yet the body, as if blinking, remained, eating and drinking.

Breath went out, then when breath was gone out, the body fell.

11. It was decayed, and because people said, it decayed, therefore it was (called) bedy (sarira). That is the reason of its name.

12. If a man knows this, then the evil enemy who hates him decays, or the evil enemy who hates him is defeated.

13. They strove again, saying : 'I am the uktha, I am the uktha.' 'Well,' they said, 'let us enter that body again ; then on whose entrance this body shall rise again, he shall be the uktha among us.'

14. Speech entered, but the body lay still. Sight enternd, but the body lay still. Hearing entered, but the body lay still. Mind ertered, but the body lay still. Breath entered, and when breath had entered, the body rose, and it became the uktha.

15. Therefore breath alone is the uktha.

16. Let people know that breath is the uktha indeed.

17. The Devas (the other senses) said to breath : 'Thou art the uktha, thou art all this, we are thine, thou art ours.'

18. This has also been said by a Rishi (Rv. VIII, 92, 32) : 'thou art ours, we are thine.'

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ಪ್ರಥಮಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವು ॥



# ಅಥ ದ್ವಿತೀಯಾರಣ್ಯಕೇ ಪ್ರಥಮಾಧ್ಯಾಯೇ ಪಂಚಮಃ ಖಂಡಃ

## ಎರಡನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ಐದನೆಯ ಖಂಡವು

ತಂ ದೇವಾಃ ಪ್ರಾಣಯಂತ ಸ ಪ್ರಣೀತಃ ಪ್ರಾತಾಯತ ಪ್ರಾತಾ-
ಯೀತೀಃ ತತ್ಪ್ರಾತರಭವತ್ಸಮಾಗಾದಿತೀಃ ತತ್ಸಾಯಮಭವದಹ-
ರೇವ ಪ್ರಾಣೋ ರಾತ್ರಿರಪಾನಃ ||

ಅಹಮುಕ್ಥಮಸ್ಮೀತಿ ವಿದ್ಯಾದಿತ್ಯುಪಾಸನಾದೌ ಸರ್ವೇಷ್ವಪಿ ವಕ್ಷ್ಯಮಾಣಗುಣೇಷ್ವನುವೃತ್ತ್ಯರ್ಥಂ ಯೋಽಯಮಹಂಗ್ರಹವಿಧಿರುಕ್ತಃ ಸ ಏವ ತಾಮನುವೃತ್ತಿಂ ದರ್ಶಯಿತುಂ ಪುನರಪಿ ಪ್ರಾಣ ಉಕ್ಥಮಿತ್ಯೇವ ವಿದ್ಯಾದಿತ್ಯನೂದಿತಃ । ತತ್ರೋಕ್ತೇ ಯಸ್ಯ ಪ್ರಾಣಸ್ಯ ದೃಷ್ಟಿವಿಧಿಸ್ತಸ್ಯ ಪ್ರಾಣಸ್ಯ ಕಾಲಾತ್ಮಕತ್ವವಾಗಾದಿದೇವಾತ್ಮಕತ್ವಸತ್ಯರೂಪತ್ವಗುಣಾ ಧ್ಯಾನಾರ್ಥಂ ವಿಧಾತವ್ಯಾಃ, ತತ್ರಾ-ಹೋರಾತ್ರರೂಪಕಲಾತ್ಮಕತ್ವ ವಿಧತ್ತೇ-ತಮುಕ್ಥೇ ಧ್ಯಾತವ್ಯಂ ಪ್ರಾಣಂ ದೇವಾ ವಾಗಾದಯಃ ಪ್ರಾಣ-ಯಂತ “ತ್ವಮಸ್ಮಾಕಂ ತವ ಸ್ಮಸಿ” (ಋ-ಸಂ-ಮಂ-ಸೂ-೯೨-ಋ-೩೨) ಇತ್ಯಾದಿ ಶ್ರುತ್ಯಾ ಪ್ರಕರ್ಷಮುತ್ಸಾಹಂ ಪ್ರಾಪಿತವಂತಃ। ಸ ಚ ಪ್ರಾಣಃ ಪ್ರಣೀತೋ ದೈವೈರುತ್ಸಾಹಂ ಪ್ರಾಪಿತಃ ಸನ್ಪ್ರಾತಾಯತ ಪ್ರಕರ್ಷೇಣ ವಿಸ್ತೃತೋಽಭೂಜ್ಜಾಗರಣಕಾಲೇ ಸ್ವಭೃತ್ಯರೂಪಾನ್ವಾಗಾದೀಂಸ್ತದ್ಗೋಲಕೇಷು ಪ್ರಕರ್ಷೇಣ ಪ್ರಸಾರಿತವಾನ್ । ಅಯಮೇವ ಪ್ರಾಣಸ್ಯ ವಿಸ್ತಾರಃ । ತಂ ದೃಷ್ಟ್ವಾ ವಾಗಾದಿದೇವಾ ಮನುಷ್ಯಾ ವಾ ಪ್ರಾತಾಯೀತ್ಯೇವಮುಕ್ತವಂತಃ । ಪ್ರಕರ್ಷೇಣ ವಿಸ್ತೃತೋಽಭೂದಿತಿ ತಸ್ಯ ಶಬ್ದ-ಸ್ಯಾರ್ಥಃ । ಪ್ಲುತಿಃ ಪ್ರಸಿದ್ಧ್ಯರ್ಥಾ । ರಾತ್ರಾವಪನೀತಾಯಾಂ ಪ್ರಭಾತೇ ಜಾಗರಣಾಯ ಸ್ವಾರ್ಥಂ ವಾಗಾದೀನಾಂ ಗೋಲಕೇಷು ಪ್ರಸರಣಂ ಸರ್ವಲೋಕಪ್ರಸಿದ್ಧಮ್ । ಯಸ್ಮಾತ್ಪ್ರಾತಾಯೀತ್ಯೇವ-ಮುಕ್ತವಂತಸ್ತಸ್ಮಾದಯಂ ವಾಗಾದಿಪ್ರಸರಣಪೂರ್ವಕೋ ಜಾಗರಣಕಾಲಃ ಪ್ರಾತಃಶಬ್ದವಾಚ್ಯೋಽ-ಭೂತ್ । ಪ್ರಾತಾಯಿ ಪ್ರಾತರಿತ್ಯನಯೋಃ ಶಬ್ದಯೋರಕ್ಷರಸಾಮ್ಯಾತ್ । ಸ ಪ್ರಾಣಃ ಪುನರಪಿ ರಾತ್ರೌ ಸುಷುಪ್ತ್ಯರ್ಥಂ ವಾಗಾದಿಪ್ರಸರಣಂ ಸಂಹೃತವಾಂಸ್ತಂ ಸಂಹಾರಂ ದೃಷ್ಟ್ವಾ ಸಮಾಗಾದಿತ್ಯು-ಕ್ತವಂತಃ । ಸಂಕೋಚಂ ಪ್ರಾಪ್ತವಾನಿತಿ ತಸ್ಯಾರ್ಥಃ । ಸ ಕಾಲಃ ಸಾಯಂಶಬ್ದವಾಚ್ಯೋಽಭೂತ್। ಸಮಾಗಾತ್ಸಾಯಮಿತ್ಯನಯೋರಕ್ಷರಸಾಮ್ಯಾತ್ । ತಸ್ಯ ಚ ಪ್ರಾಣಸ್ಯ ದಿವಸೇ ವಾಗಾದಿಪ್ರಸರಣ-ರೂಪಜಾಗರಣಾವಸ್ಥಾನಿಷ್ಪಾದಕಃ ಪ್ರಾಣಶಬ್ದವಾಚ್ಯ ಏಕೋ ವ್ಯಾಪಾರಃ । ತಥಾ ರಾತ್ರೌ ಸುಷು-ಪ್ತ್ಯರ್ಥಂ ವಾಗಾದಿಸಂಹಾರರೂಪೋಽಪಾನಶಬ್ದವಾಚ್ಯೋ ವ್ಯಾಪಾರೋ ದ್ವಿತೀಯಃ । ತಾವೇತೌ ಪ್ರಾಣಾ ಪಾನವ್ಯಾಪಾರಾವಹೋರಾತ್ರರೂಪತ್ವೇನ ಧ್ಯೇಯೌ ||

ನಾನೇ ಉಕ್ಥಸ್ವರೂಪನು ಎಂಬ ಧ್ಯಾನವು ಮುಂದೆ ಹೇಳುವ ಗುಣಗಳಲ್ಲಿಯೂ ಅನುವೃತ್ತವಾಗಬೇಕೆಂದು ತಿಳಿಸಲು “ಪ್ರಾಣ ಉಕ್ಥಮಿತ್ಯೇವ ವಿದ್ಯಾತ್” ಎಂದು ಪುನಃ ಹಿಂದಿನ ಖಂಡದಲ್ಲಿ ಅನೂದಿತವಾಗಿ ಉಕ್ಥದಲ್ಲಿ ಪ್ರಾಣದೃಷ್ಟಿ ಇಡು

ಬೇಕೆಂದು ಹೇಳಿದೆ. ಆ ಪ್ರಾಣಕ್ಕೆ ಧ್ಯಾನಸೌಲಭ್ಯಕ್ಕೋಸ್ಕರ ಕಾಲಸ್ವರೂಪ, ವಾಗಾದಿ ದೇವಾತ್ಮಕತ್ವ, ಸತ್ಯರೂಪತ್ವ ಗುಣಗಳನ್ನು ವಿಧಿಸಲು ಮೊದಲು ಹಗಲು ರಾತ್ರಿರೂಪವಾದ ಕಾಲಸ್ವರೂಪವನ್ನು ವಿವರಿಸುತ್ತಾರೆ. ಉಕ್ಥದಲ್ಲಿ ಧ್ಯಾನಿಸ ಬೇಕಾದ ಪ್ರಾಣನನ್ನು ವಾಗಾದಿದೇವತೆಗಳು ನೀನೇ ನಮ್ಮ ಸ್ವಾಮಿಯಾಗಿರುವೆಯೆಂದು ಉತ್ಸಾಹಭರಿತನನ್ನಾಗಿ ಮಾಡಿದರು. ದೇವತೆಗಳಿಂದ ಉತ್ಸಾಹಗೊಳಿಸಲ್ಪಟ್ಟ ಪ್ರಾಣನು ಅತಿಶಯ ವಿಸ್ತಾರಹೊಂದಿದನು. ಜಾಗರಣ ಕಾಲದಲ್ಲಿ ತನ್ನ ಭೃತ್ಯರಾದ ವಾಗಾದಿಗಳನ್ನು ಆಯಾಯ ಗೋಲಕಗಳಲ್ಲಿ ಸೇರಿಸಿ ವಿಸ್ತರಿಸಿದನು. ಇದೇ ಪ್ರಾಣದ ವಿಸ್ತಾರ. ಇದನ್ನು ನೋಡಿ ವಾಗಾದಿ ದೇವತೆಗಳು ಮತ್ತು ಮನುಷ್ಯರು 'ಪ್ರಾತಾಯಿ' ಎಂದರು. ಪ್ರಕರ್ಷದಿಂದ (ಅತಿಶಯವಾಗಿ) ವಿಸ್ತೃತನಾದನೆಂದರ್ಥ. ಪ್ಲುತಿಯು ಪ್ರಸಿದ್ಧಿಯನ್ನು ಸೂಚಿಸುತ್ತದೆ. ರಾತ್ರಿ ಕಳೆದೊಡನೆಯೇ ಪ್ರಾತಃ ಕಾಲದಲ್ಲಿ ಜಾಗರಣೆಗೋಸ್ಕರ ವಾಗಾದಿಗಳು ತಮ್ಮ ಗೋಲಕಗಳಲ್ಲಿ ಪ್ರಸರಿಸುವುದು ಲೋಕ ಪ್ರಸಿದ್ಧವಾಗಿದೆ. ಪ್ರಾತಾಯಿ ಎಂದು ಹೇಳಿರುವುದರಿಂದಲೇ ವಾಗಾದಿ ಪ್ರಸರಣಪೂರ್ವಕ ಜಾಗರಣ ಕಾಲಕ್ಕೆ ಪ್ರಾತಃ ಎಂದು ಹೆಸರು ಬಂದಿದೆ. ಪ್ರಾತಾಯಿ, ಪ್ರಾತಃ ಇವೆರಡೂ ಶಬ್ದಗಳಿಗೆ ಅಕ್ಷರಸಾಮ್ಯವಿರುವುದರಿಂದ ಈ ಶಬ್ದ ಯುಕ್ತವಾಗಿದೆ. ಅವೇ ಪ್ರಾಣವು ತಿರುಗಿ ರಾತ್ರಿಯಲ್ಲಿ ಸುಷುಪ್ತಿಗೋಸ್ಕರ ವಾಗಾದಿ ಪ್ರಸರಣವನ್ನು ಉಪಸಂಹಾರಮಾಡಿದನು. ಈ ಸಂಕೋಚವನ್ನು ನೋಡಿ **ಸಮಾಗಾತ್**—ಸಂಕೋಚವನ್ನು ಹೊಂದಿದನು ಎಂದು ದೇವತೆಗಳು ಹೇಳಿದರು. ಆ ರಾತ್ರಿ ಕಾಲಕ್ಕೆ 'ಸಾಯಂ' ಎಂದು ಹೆಸರುಂಟಾಯಿತು. ಸಮಾಗಾತ್, ಸಾಯಂ ಈ ಎರಡು ಶಬ್ದಗಳಿಗೂ ಅಕ್ಷರಸಾಮ್ಯವಿರುವುದರಿಂದ ಈ ಹೆಸರು ಯುಕ್ತವಾಗಿದೆ. ಹಗಲಿನಲ್ಲಿ ವಾಗಾದಿಪ್ರಸಾರಣಾರೂಪ ಜಾಗರಣಾವಸ್ಥೆಯನ್ನುಂಟುಮಾಡುವ ಪ್ರಾಣವೆಂದು ಕರೆಯಲ್ಪಡುವ ಪ್ರಾಣದೇವನ ವ್ಯಾಪಾರ ಒಂದು ರಾತ್ರಿಯಲ್ಲಿ ಸುಷುಪ್ತಿ ಗೋಸ್ಕರ ವಾಗಾದಿಸಂಹಾರರೂಪವಾದ ಅಪಾನಶಬ್ದದಿಂದ ಕರೆಯಲ್ಪಡುವ ವ್ಯಾಪಾರ ಎರಡನೇದು. ಈ ಪ್ರಾಣಾಪಾನ ವ್ಯಾಪಾರಗಳನ್ನು ಹಗಲು ರಾತ್ರಿರೂಪದಿಂದ ಧ್ಯಾನಿಸಬೇಕು.

**ವಾಗಗ್ನಿಶ್ಚಕ್ಷುರಸಾವಾದಿತ್ಯಶ್ಚಂದ್ರಮಾ ಮನೋ ದಿಶಃ ಶ್ರೋತ್ರಂ ಸ ಏಷ ಪ್ರಹಿತಾಂ ಸಂಯೋಗೋಽಧ್ಯಾತ್ಮಮಿಮಾ ದೇವತಾ ಅದ ಉ ಆವಿರಧಿದೈವತಮಿತ್ಯೇತತ್ತದುಕ್ತಂ ಭವತಿ ॥**

**ಕಾಲಾತ್ಮಕತ್ವಮುಕ್ತ್ವಾ** ದೇವತಾತ್ಮಕತ್ವಂ ದರ್ಶಯತಿ—ವಾಗಾದೀಂದ್ರಿಯಾಭಿಮಾನಿನೀ-ನಾಮಗ್ನ್ಯಾದಿದೇವತಾನಾಂ ವಾಗಾದಿರೂಪತ್ವಂ "ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್" (ಐ-ಆ-೨-ಅ-೪-ಖಂ-೨) ಇತ್ಯಾದಿನಾ ವಕ್ಷ್ಯತೇ ॥ ಅತಃ ಪ್ರಾಣಭೃತ್ಯಸ್ವರೂಪಾ ಉಪಾಸಕಸ್ಯ ವಾಗಾದಯೋಽಗ್ನ್ಯಾದಿರೂಪತಯಾ ಧ್ಯಾತವ್ಯಾಃ । ತಸ್ಯ ವಾಗಾದಿಧ್ಯಾನವಿಧಿವಾಕ್ಯಸ್ಯ ತಾತ್ಪರ್ಯಂ ಸ ಏಷ ಇತ್ಯಾದಿನಾ ಸ್ಪಷ್ಟೀಕ್ರಿಯತೇ । ಯಾ ಏತಾ ಅಗ್ನ್ಯಾದಯೋ ದೇವತಾಃ ಸಂತಿ ತಾಸಾಂ ಪ್ರಹಿತಾಂ ಪ್ರಕರ್ಷೇಣ ಹಿತಾನಾಂ ದೇವಲೋಕಗತೇಷು ಸ್ವಸ್ವಸ್ಥಾನೇಷು ಪ್ರಸಾರಣೇನ ವಿಸ್ರಂಭೇ-ಣಾವಸ್ಥಿತಾನಾಮಧ್ಯಾತ್ಮಂ ಪುರುಷಶರೀರೇ ವಾಗಾದೀಂದ್ರಿಯೇಷು ಯಃ ಪ್ರವೇಶಃ ಸ ಏಷ ಸಂಯೋಗಃ ಸಂಕೋಚರೂಪೇಣ ವಾಗಾದಿತಾದಾತ್ಮ್ಯಂ ತಥಾಽಧಿದೈವತಮದ ಉ ಶಾಸ್ತ್ರಪ್ರಸಿದ್ಧಂ ಸ್ವಸ್ವಸ್ಥಾನೇಷ್ವವಸ್ಥಿತಾನಾಮಾವಿಃ ಪ್ರಕಟೀಭಾವಃ ಇತ್ಯೇತದರ್ಥಜಾತಂ ತದುಕ್ತಂ ಭವತಿ ತೇನ ವಾಗಗ್ನಿರಿತ್ಯಾದಿವಾಕ್ಯೇನಾಭಿಹಿತಂ ಭವತಿ । ಅಗ್ನ್ಯಾದೀನಾಂ ಶರೀರೇ ಸಂಕೋಚೋ ದೇವಲೋಕೇ ವಿಕಾಸ ಇತ್ಯೇತಾದೃಶಂ ತಾತ್ಪರ್ಯಂ ಶ್ರುತ್ಯಾ ದರ್ಶಿತಮ್ ॥

ಪ್ರಾಣನಿಗೆ ದೇವತಾಸ್ವರೂಪವನ್ನು ವಿವರಿಸುತ್ತಾರೆ. ವಾಗಾದಿ ಇಂದ್ರಿಯಾಭಿಮಾನಿಗಳಾದ ಅಗ್ನ್ಯಾದಿದೇವತೆಗಳು ವಾಗಾದಿರೂಪಗಳಿಂದು "ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್" ಎಂಬಿವೇ ಶ್ರುತಿವಾಕ್ಯಗಳಿಂದ ಮುಂದೆ ವಿವರಿಸುತ್ತಾರೆ. ಆದುದರಿಂದ ಪ್ರಾಣಭೃತ್ಯರಾದ ಉಪಾಸಕನ ವಾಗಾದೀಂದ್ರಿಯಗಳನ್ನು ಅಗ್ನ್ಯಾದಿದೇವತಾರೂಪದಿಂದ ಧ್ಯಾನಿಸಬೇಕು. 'ಸ ಏಷಃ' ಎಂಬ ವಾಕ್ಯದಿಂದ ವಾಗಾದಿಧ್ಯಾನವಿಧಿವಾಕ್ಯದ ತಾತ್ಪರ್ಯವು ವ್ಯಕ್ತವಾಗುತ್ತದೆ. ಅಗ್ನ್ಯಾದಿದೇವತೆಗಳು ದೇವಲೋಕದಲ್ಲಿ ತಮ್ಮ ತಮ್ಮ ಸ್ಥಾನಗಳಲ್ಲಿ ವಿಸ್ತಾರವಾಗಿದ್ದು (ಪ್ರಸರಿಸಿದ್ದು) ಪುರುಷ ಶರೀರದಲ್ಲಿ ವಾಗಾದೀಂದ್ರಿಯಗಳಲ್ಲಿ ಪ್ರವೇಶಿಸಿ ಸಂಕುಚಿತರೂಪದಿಂದ ವಾಗಾದಿತಾದಾತ್ಮ್ಯವನ್ನು ಹೊಂದಿದವು. ಆದುದರಿಂದಲೇ ವಾಕ್ ಅಗ್ನಿರೂಪವೆಂದಾಗಿದೆ. ಹೀಗೆ ಇತರ ಇಂದ್ರಿಯಗಳಲ್ಲಿಯೂ ತಿಳಿಯಬೇಕು. ಅಗ್ನ್ಯಾದಿದೇವತೆಗಳಿಗೆ ಶರೀರದಲ್ಲಿ ಸಂಕೋಚವೂ ದೇವಲೋಕದಲ್ಲಿ ವಿಕಾಸವೂ ಈ ಶ್ರುತಿವಾಕ್ಯದಿಂದ ಹೇಳಿದಂತಾಯಿತು.

ಏತದ್ಧ ಸ್ಮ ವೈ ತದ್ವಿದ್ವಾನಾಹ ಹಿರಣ್ಯದನ್ಬೈದೋ ನ ತಸ್ಯೇಶೇ ಯಂ
ಮಹ್ಯಂ ನ ದದ್ಯುರಿತಿ ಪ್ರಹಿತಾಂ ವಾ ಅಹಮಧ್ಯಾತ್ಮಂ ಸಂಯೋಗಂ
ನಿವಿಷ್ಟಂ ವೇದೈತದ್ಧ ತತ್ ||

**ಪ್ರಾಣಸ್ಯ ವಾಗಗ್ನ್ಯಾದಿರೂಪತ್ವಧ್ಯಾನಂ ಪ್ರಶಂಸಿತುಂ ಕಸ್ಯಚಿನ್ಮಹರ್ಷೇರ್ವಾಕ್ಯಮುದಾಹರತಿ– ಹಿರಣ್ಮಯಾ ದಂತಾ ಯಸ್ಯ ಮಹರ್ಷೇಃ ಸೋಽಯಂ ಹಿರಣ್ಯದನ್ । ಬಿದನಾಮಕಸ್ಯ ಮಹರ್ಷೇಃ ಸುತೋ ಬೈದಃ ಸ ಚ ತದೇತತ್ಪ್ರಾಣರೂಪಂ ವಿದ್ವಾನುಪಾಸೀನಃ ಕಸ್ಮಿಂಶ್ಚಿತ್ಪ್ರಸಂಗ ಇದಂ ವಾಕ್ಯ- ಮಾಹ । ನಿಪಾತತ್ರಯಸಮುದಾಯಃ ಪ್ರಸಿದ್ಧ್ಯರ್ಥಃ । ಕಿಂ ತದ್ವಾಕ್ಯಮಿತಿ ಚೇತ್ತದುಚ್ಯತೇ–ಅಹಂ ಬೈದಾಖ್ಯೋ ಮಹರ್ಷಿಃ ಪ್ರಹಿತಾಂ ವೈ ಪ್ರಹಿತಾನಾಂ ದ್ಯುಲೋಕೇ ಪ್ರಸಾರಣೇನಾವಸ್ಥಿತಾನಾಮ- ಗ್ನ್ಯಾದೀನಾಮೇವಾಧ್ಯಾತ್ಮಂ ನಿವಿಷ್ಟಂ ಮನುಷ್ಯಶರೀರೇಽಸ್ಮಿ ತಾದೃಶಾಯ ಮಹ್ಯಂ ಲೌಕಿಕಜನಾ ಯಂ ಪದಾರ್ಥಮಭೀಷ್ಟಾರ್ಥಮಭೀಷ್ಟಂ ನ ದದ್ಯುರ್ನೈವ ಸಮರ್ಪಯೇಯುಸ್ತಸ್ಯ ತಾದೃಶಸ್ಯ ಪದಾರ್ಥಸ್ಯ ನೇಶೇ ನೈವ ತೇ ಸ್ವಾಮಿನೋ ಭವಂತಿ। ಯಸ್ಯ ಯಸ್ಯ ಪುರುಷಸ್ಯ ಯಸ್ಮಿನ್ ಯಸ್ಮಿನ್- ಭೋಗ್ಯೇ ಸ್ವಾಮಿತ್ವಮಸ್ತಿ ಸ ಸ ಪುರುಷಃ ಸರ್ವೋಽಪಿ ಪ್ರಾಣೋಪಾಸನೇನ ಸರ್ವಾತ್ಮಕಾಯ ಮಹ್ಯಂ ತತ್ತದ್ಭೋಗ್ಯಂ ಸಮರ್ಪಯತ್ಯೇವೇತಿ ಮಹರ್ಷಿವಾಕ್ಯಸ್ಯಾಭಿಪ್ರಾಯಃ। ಏತದ್ಧ ಏತನ್ಮಹ- ರ್ಷಿಣೋಕ್ತಮೇತದೇವ ತತ್ ||**

ಪ್ರಾಣಕ್ಕೆ ವಾಗಗ್ನ್ಯಾದಿರೂಪದಿಂದ ಧ್ಯಾನವನ್ನು ಪ್ರಶಂಸೆಮಾಡಲು ಓರ್ವ ಋಷಿಯ ವಾಕ್ಯವನ್ನು ಉದಾಹರಿಸು ತ್ತಾರೆ. ಆ ಮಹರ್ಷಿಗೆ ಚಿನ್ನದದಂತಗಳಿರುವುದರಿಂದ ಹಿರಣ್ಯದನ್ ಎಂದು ಹೆಸರು. ಬಿದನೆಂಬ ಮಹರ್ಷಿಯ ಮಗನಿಗೆ ಬೈದನೆಂದು ಹೆಸರು. ಸ್ವರ್ಣದಂತವುಳ್ಳ ಈ ಬೈದನು ಈ ಪ್ರಾಣಸ್ವರೂಪವನ್ನು ಚೆನ್ನಾಗಿ ಅರಿತು ಉಪಾಸನೆ ಮಾಡುತ್ತಾ ಒಂದು ಸಂದರ್ಭದಲ್ಲಿ ಈ ವಾಕ್ಯವನ್ನು ಹೇಳಿದನು. ಮೂರು ನಿಪಾತಗಳೂ (ಹ, ವೈ ಇತ್ಯಾದಿ) ಪ್ರಸಿದ್ಧಿಯನ್ನು ತಿಳಿಸು ತ್ತವೆ. ಆ ವಾಕ್ಯವನ್ನು ವಿವರಿಸುತ್ತಾರೆ. ಬೈದಮಹರ್ಷಿಯಾದ ನಾನು ದ್ಯುಲೋಕದಲ್ಲಿ ವ್ಯಾಪಕರಾಗಿದ್ದ ಅಗ್ನ್ಯಾದಿದೇವತೆ ಗಳು ಶರೀರದಲ್ಲಿ ಪ್ರವೇಶಿಸಿ ಸಂಕೋಚದಿಂದಿರುವುದನ್ನು ಚನ್ನಾಗಿ ತಿಳಿದು ಧ್ಯಾನಿಸುತ್ತೇನೆ. ಈ ರೀತಿಯಾದ ನನಗೆ ಲೌಕಿಕ ಜನರು ಯಾವ ಇಷ್ಟವಾದ ಪದಾರ್ಥವನ್ನು ಕೊಡುವುದಿಲ್ಲವೋ ಆಗ ಅವರು ಆ ಪದಾರ್ಥದ ಸ್ವಾಮಿತ್ವವನ್ನು

ಹೊಂದುವುದಿಲ್ಲ. ಯಾವ ಯಾವ ಪುರುಷನಿಗೆ ಯಾವ ಯಾವ ಭೋಗ್ಯವಸ್ತುವಿನಲ್ಲಿ ಸ್ವಾಮಿತ್ವವಿದೆಯೋ ಆಯಾಯ ಪುರುಷರು ಪ್ರಾಣೋಪಾಸನೆಯಿಂದ ಸರ್ವಾತ್ಮಕನಾದ ನನಗೆ ಆಯಾಯ ಭೋಗ್ಯಪದಾರ್ಥಗಳನ್ನು ಅವಶ್ಯವಾಗಿ ಸಮರ್ಪಿಸುತ್ತಾರೆ ಎಂದು ಮಹರ್ಷಿ ವಾಕ್ಯದ ತಾತ್ಪರ್ಯ. ಇದೇ ಮಹರ್ಷಿ ಹೇಳಿದ ವಾಕ್ಯ.

**ಅನೀಶಾನಾನಿ ಹ ವಾ ಅಸ್ಮೈಭೂತಾನಿ ಬಲಿಂ ಹರುತಿ ಯ ಏವಂ ವೇದ॥**

**ಪೂರ್ವತ್ರ ಬ್ರಾಹ್ಮಣೇನೋಕ್ತಂ ಪ್ರಾಣಧ್ಯಾನಸ್ಯ ಮಾಹಾತ್ಮ್ಯ(ಮ್)ವಾಗಾದಿಸರ್ವದೇವಾತ್ಮಕತ್ವ ಗುಣಧ್ಯಾನಫಲಮಾಹ—ಯಃ ಪುಮಾನೇವಮುಕ್ತಪ್ರಕಾರೇಣಾಧಿದೈವಂ ಪ್ರಸೃತಾನಾಮಗ್ನ್ಯಾದೀನಾಮಧ್ಯಾತ್ಮಂ ವಾಗಾದಿರೂಪೇಣ ಸಂಕೋಚಮುಪಾಸ್ತೇಽಸ್ಮಾ ಉಪಾಸಕಾಯ ಸರ್ವೇ ಪ್ರಾಣಿನಃ ಸ್ವಯಮನೀಶಾ ಉಪಾಸಕಂ ಪ್ರತಿ ಗುಣಭಾವಮುಪೇತಾಃ ಸಂತೋ ಬಲಿಂ ಹರಂತಿ ಪೂಜಾಂ ಸಮರ್ಪಯಂತಿ ॥**

ವಾಗಾದಿಸರ್ವದೇವತಾಸ್ವರೂಪದಿಂದ ಪ್ರಾಣೋಪಾಸನೆಯ ಫಲವನ್ನು ವಿವರಿಸುತ್ತಾರೆ. ಯಾವ ಪುರುಷನು ಹಿಂದೆ ಹೇಳಿದಂತೆ ದ್ಯುಲೋಕಾದಿಗಳಲ್ಲಿ ವಿಸ್ತೃತರಾದ ಅಗ್ನ್ಯಾದಿದೇವತೆಗಳು ವಾಗಾದಿರೂಪದಿಂದ ಸಂಕೋಚಹೊಂದಿದನ್ನು ತಿಳಿದು ಅದರಂತೆ ಧ್ಯಾನಿಸುತ್ತಾನೋ, ಅಂತಹ ಉಪಾಸಕನಿಗೆ ಎಲ್ಲಾ ಪ್ರಾಣಿಗಳು ವಶವಾಗಿ ಅವನನ್ನು ಪೂಜಿಸುತ್ತವೆ.

**ತತ್ಸತ್ಯಂ ಸದಿತಿ ಪ್ರಾಣಸ್ತೀತ್ಯನ್ನಂ ಯಮಿತ್ಯಸಾವಾದಿತ್ಯಸ್ತದೇತತ್ತ್ರಿವೃತ್ತ್ರಿವೃದಿವ ವೈ ಚಕ್ಷುಃ ಶುಕ್ಲಂ ಕೃಷ್ಣಂ ಕನೀನಿಕೇತಿ ॥**

**ತಸ್ಯೈವ ಪ್ರಾಣಸ್ಯ ಸತ್ಯಸ್ವರೂಪಂ ಗುಣಾಂತರಂ ಧ್ಯೇಯತ್ವೇನ ವಿಧತ್ತೇ—ತತ್ಪ್ರಾಣಸ್ವರೂಪಂ ಸತ್ಯಶಬ್ದವಾಚ್ಯಮಿತಿ ಧ್ಯಾತ್ವಾ ತಚ್ಛಬ್ದಗತೇಷ್ವಕ್ಷರೇಷು ತ್ರಿಷು ಪ್ರಾಣಾನ್ನಾದಿತ್ಯದೃಷ್ಟಯಃ ಕರ್ತವ್ಯಾಃ । ಮಧ್ಯಾಕ್ಷರ ಇಕಾರ ಉಚ್ಚಾರಣಾರ್ಥಃ । ತದೇತತ್ಸತ್ಯಶಬ್ದಾಕ್ಷರೇಷು ಧ್ಯೇಯಂ ಸ್ವರೂಪಂ ತ್ರಿವೃತ್ಪ್ರಾಣಾನ್ನಾದಿತ್ಯೈಸ್ತ್ರಿಗುಣಮ್ । ಚಕ್ಷುರಪಿ ಶುಕ್ಲಾದಿರೂಪೈಸ್ತ್ರಿವೃದಿವ ತ್ರಿಗುಣಮೇವ ॥**

ಪ್ರಾಣದ ಸತ್ಯತ್ವರೂಪಗುಣವನ್ನು ಧ್ಯಾನಕ್ಕೋಸ್ಕರ ವಿವರಿಸುತ್ತಾರೆ. ಆ ಪ್ರಾಣಸ್ವರೂಪವನ್ನು ಸತ್ಯವೆಂದು ಧ್ಯಾನಿಸಿ ಅದರಲ್ಲಿರುವ ಸ, ತ್, ಯ ಎಂಬ ಮೂರು ಅಕ್ಷರಗಳಲ್ಲಿ ಪ್ರಾಣ, ಅನ್ನ, ಆದಿತ್ಯದೃಷ್ಟಿಯನ್ನಿಡಬೇಕು. 'ತಿ' ಎಂಬಲ್ಲಿ ಉಚ್ಚಾರಣೆಗೋಸ್ಕರ ಇಕಾರ ಹೇಳಿದೆ. ಸತ್ಯಶಬ್ದದ ಅಕ್ಷರಗಳಲ್ಲಿ ಧ್ಯಾನಿಸಬೇಕಾದ ಸ್ವರೂಪವು ತ್ರಿವೃತ್ ಅಂದರೆ ಪ್ರಾಣಾನ್ನಾದಿತ್ಯರೂಪಗಳಿಂದ ತ್ರಿಗುಣವಾಗಿದೆ. ಚಕ್ಷುರಿಂದ್ರಿಯವೂ ಕೂಡಾ ಶುಕ್ಲಾದಿರೂಪಗಳಿಂದ ತ್ರಿಗುಣವಿಶಿಷ್ಟವಾಗಿದೆ.

**ಸ ಯದಿ ಹ ವಾ ಅಪಿ ಮೃಷಾ ವದತಿ ಸತ್ಯಂ ಹೈವಾಸ್ಯೋದಿತಂ ಭವತಿ ಯ ಏವಮೇತತ್ಸತ್ಯಸ್ಯ ಸತ್ಯತ್ವಂ ವೇದ ॥**

ಚಕ್ಷುಃ ಸಾಮ್ಯಪ್ರದರ್ಶನೇನ ಸತ್ಯಾಕ್ಷರಧ್ಯಾನಂ ಪ್ರಶಸ್ಯ ತದ್ಗುಣೋಪಾಸನಸ್ಯ ಫಲಂ-ದರ್ಶಯತಿ—ಯಃ ಪುಮಾನುಕ್ತಪ್ರಕಾರೇಣ ಸತ್ಯರೂಪಸ್ಯ ಪ್ರಾಣಸ್ಯ ಸತ್ಯತ್ವಂ ಸಕಾರಾದ್ಯಕ್ಷರತ್ರ-ಯಧ್ಯೇಯ ಪ್ರಾಣಾದಿಸ್ವರೂಪತ್ವೇನೋಪಾಸ್ತೇ ಸ ಪುಮಾನ್ಯದ್ಯಪಿ ಲೋಕೇ ವ್ಯವಹಾರೇ ಕಿಂಚದ-ನೃತಂ ವದೇತ್ತಥಾಽಪ್ಯಸ್ಯ ತದ್ವಾಕ್ಯಂ ಸತ್ಯಮೇವೋದಿತಂ ಭವತಿ । ಅನೃತಭಾಷಣಪ್ರತ್ಯವಾಯ **ಏನಂ ನ ಸ್ಪೃಶತೀತ್ಯರ್ಥಃ ॥**

ನಯನಸಾಮ್ಯದಿಂದ ಸತ್ಯಶಬ್ದಾಕ್ಷರಧ್ಯಾನವನ್ನು ವಿವರಿಸಿ ಆ ಗುಣೋಪಾಸನೆಯ ಫಲವನ್ನು ತೋರಿಸುತ್ತಾರೆ. ಯಾವ ಪುರುಷನು ಹಿಂದೆ ಹೇಳಿದಂತೆ ಪ್ರಾಣದ ಸತ್ಯಸ್ವರೂಪವನ್ನು ಸಕಾರಾದಿಅಕ್ಷರತ್ರಯದಲ್ಲಿ ಪ್ರಾಣಾದಿಸ್ವರೂಪದಿಂದ ಉಪಾಸನೆ ಮಾಡುವನೋ ಅವನು ವ್ಯವಹಾರಕಾಲದಲ್ಲಿ ಸುಳ್ಳು ಹೇಳಿದರೂ ಅದು ಸತ್ಯರೂಪವಾಗಿಯೇ ಪರಿಣಾಮವಾಗುತ್ತದೆ. ಅನೃತಭಾಷಣನಿಮಿತ್ತವಾದ ಪಾಪವುಂಟಾಗುವುದಿಲ್ಲವೆಂದು ತಾತ್ಪರ್ಯ.

---

## *English Translation*

---

1. Then the Devas carried him (the breath) forth, and being carried forth, he was stretched out, and when people said, ‘ He was stretched out, then it was in the morning ; when they said ; He is gone to rest,’ then it was in the evening. Day, therefore, is the breathing up, night the breathing down.

2. Speech is Agni, sight that Aditya (sun), mind the the moon, hearing the Dis (quarters) : this is the prahitam samyoga, the union of the deities as sent forth. These deities (Agni, &c.,) are thus in the body, but their (phenomenal) appearance yonder is among the deities-- this was itended.

3. And Hiranyadat Vaida also, who knew this (and who by his knowledge had became Hiranyagarbha or the universal spirit), said : ‘ whatever they do not give to me, they do not possess themselves.’ I know the prahitam samyoga, the union of the deities, as entered into the body. This is it.

4. To him who knows this all creatures, without being constrained, offer gifts.

5. That breath is (to be called) sattya (the true), for sat is breath, it is food, yam is the sun. This is threefold, and threefold the eye also may be called, it being white, dark, and the pupil. He who knows why true is true (why sattya is sattya), even if he should speak falsely, yet what he says is true.

ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತವಾದ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ಪ್ರಥಮಾಧ್ಯಾಯೇ ಪಂಚಮಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಭಾಷ್ಯದ ದ್ವಿತೀಯಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವು ||

---

## ಅಥ ದ್ವಿತೀಯಾರಣ್ಯಕೇ ಪ್ರಥಮಾಧ್ಯಾಯೇ ಷಷ್ಠಃ ಖಂಡಃ

### ಎರಡನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ಆರನೆಯ ಖಂಡವು

---

**ತಸ್ಯ ವಾಕ್ತಂತಿರ್ನಾಮಾನಿ ದಾಮಾನಿ ತದಸ್ಯೇದಂ ವಾಚಾ ತಂತ್ಯಾ ನಾಮಭಿರ್ದಾಮಭಿಃ ಸರ್ವಂ ಸಿತಂ ಸರ್ವಂ ಹೀದಂ ನಾಮನೀಃ ಸರ್ವಂ ವಾಚಾಽಭಿವದತಿ ||**

ಗುಣಾಂತರಂ ವಿಧತ್ತೇ—ಯಥಾ ಬಹುಬಲೀವರ್ದಸ್ವಾಮಿನೋ ವಣಿಜಸ್ತದ್ಬಂಧನಾರ್ಥಾ ಕಾಚಿದ್ರಜ್ಜುಃ ಶಂಕುದ್ವಯೇ ಬದ್ಧಾ ಪ್ರಸಾರಿತಾ ಭವತಿ ತಸ್ಯಾಂ ರಜ್ವಾ ಪ್ರತ್ಯೇಕಂ ಬಂಧನಾಯ ಪೃಥಕ್ಪಾಶಾ ಭವಂತಿ ತಥಾ ತಸ್ಯ ಪ್ರಾಣಸ್ಯ ವಾಕ್ತಂತಿಃ ಶಬ್ದಸಾಮಾನ್ಯಂ ಪ್ರಸಾರಿತದೀರ್ಘರಜ್ಜುಸ್ಥಾನೀಯಂ ದೇವದತ್ತಯಜ್ಞದತ್ತನಾಮಾನಿ ಪೃಥಕ್ ಪೃಥಗ್ಬಂಧನದಾಮಸ್ಥಾನೀಯಾನಿ | ತತ್ತಥಾ ಸತ್ಯಸ್ಯ ಪ್ರಾಣಸ್ಯಸಂಬಂಧಿನ್ಯಾ ವಾಕ್ಸಾಮಾನ್ಯರೂಪಯಾ ದೀರ್ಘತಂತ್ಯಾ ನಾಮವಿಶೇಷರೂಪೈರ್ದಾಮಭಿಶ್ಚ ಸರ್ವಮಿದಂ ಸ್ಥಾವರಜಂಗಮರೂಪಂ ಜಗತ್ಸಿತಂ ಬದ್ಧಮಿತಿ ಧ್ಯಾಯೇತ್ | ಸರ್ವಂ ಜಗದಭಿಧೇಯರೂಪಮಭಿಧಾಯಕೇ ನಾಮನಿ ವ್ಯವಸ್ಥಿತಮಿತಿ ಲೋಕಪ್ರಸಿದ್ಧಮೇತತ್|

ಅತ ಏವ ಸರ್ವಂ ವಸ್ತೂದ್ದಿಶ್ಯ ಸರ್ವೋಽಪಿ ಪುರುಷೋ ವಾಚಾ ತತ್ತನ್ನಾಮ್ನಾಽಭಿವದತಿ । ಯದೀಯೇನ ನಾಮ್ನಾ ಪುರುಷಮಾಕಾರಯತಿ ಸ ಏವ ಪುರುಷೋ ರಜ್ಜುಬಂಧನೇನಾಽಽಕೃಷ್ಟ ಇವ ಸಮಾಗಚ್ಛತಿ ॥

ಇತರ ಗುಣವನ್ನು ವಿವರಿಸುತ್ತಾರೆ. ಲೋಕದಲ್ಲಿ ಅನೇಕ ಎತ್ತುಗಳ ಸ್ವಾಮಿಯಾದ ವೈಶ್ಯನ ಹತ್ತಿರ ಆ ಎತ್ತುಗಳನ್ನು ಕಟ್ಟಲು ಒಂದು ದೊಡ್ಡ ಹಗ್ಗವಿದ್ದು ಅದು ಎರಡು ಗೂಡಗಳಲ್ಲಿ ಕಟ್ಟಲ್ಪಟ್ಟು ಉದ್ದವಾಗಿ ಪ್ರಸಾರಿತವಾಗಿರುತ್ತದೆ. ಅವರಲ್ಲಿ ಒಂದೊಂದು ಎತ್ತನ್ನು ಕಟ್ಟಲು ಬೇರೆ ಬೇರೆ ತುಂಡು ಹಗ್ಗಗಳನ್ನು ಕಟ್ಟಿರುತ್ತಾರೆ. ಆದರಂತೆ ಪ್ರಾಣದ ವಾಕ್ತಂತಿಯು ಶಬ್ದಸಾಮಾನ್ಯರೂಪದಿಂದ ಉದ್ದವಾದ ಹಗ್ಗದ ಸ್ಥಾನದಲ್ಲಿರುತ್ತದೆ. ದೇವದತ್ತ, ಯಜ್ಞದತ್ತಾದಿ ನಾಮಧೇಯಗಳು ಉದ್ದವಾದ ಹಗ್ಗದಲ್ಲಿ ಜೋಡಿಸಿರುವ ಚಿಕ್ಕಹಗ್ಗಗಳಂತಿರುತ್ತವೆ. ಚಿಕ್ಕಹಗ್ಗಗಳಿಂದ ಕಟ್ಟಿದ ಎತ್ತುಗಳು ಉದ್ದವಾದ ಹಗ್ಗದಲ್ಲಿ ಸಾಲಾಗಿ ಕಟ್ಟಿರುವಂತೆ ಸ್ವರೂಪಪ್ರಾಣಸಂಬಂಧಿಯಾದ ವಾಕ್ಸಾಮಾನ್ಯರೂಪ ಉದ್ದವಾದ ತಂತಿಯಿಂದ ನಾಮವಿಶೇಷರೂಪ ಚಿಕ್ಕತಂತಿಗಳೊಡನೆ ಈ ಎಲ್ಲಾ ಸ್ಥಾವರಜಂಗಮರೂಪ ಪ್ರಪಂಚವು ಕಟ್ಟಲ್ಪಟ್ಟಿದೆಯೆಂದು ಧ್ಯಾನಿಸಬೇಕು. ಅಭಿಧೇಯರೂಪವಾದ ಈ ಜಗತ್ತು ಅಭಿಧಾಯಕವಾದ ನಾಮದಲ್ಲಿ ವ್ಯವಸ್ಥಿತವಾಗಿರುವುದು ಲೋಕಪ್ರಸಿದ್ಧವಾಗಿದೆ. ಆದುದರಿಂದಲೇ ಸಕಲವಸ್ತುಗಳನ್ನೂ ಪುರುಷರು ಆಯಾಯ ಹೆಸರಿನಿಂದ ವ್ಯವಹರಿಸುತ್ತಾರೆ. ಯಾರ ಹೆಸರನ್ನು ಕರೆಯುತ್ತಾರೋ ಅವನು ಕಟ್ಟಿದ ಹಗ್ಗದಿಂದ ಎಳದಂತೆ ಹತ್ತಿರ ಬರುತ್ತಾನೆ.

ವಹಂತಿ ಹ ವಾ ಏನಂ ತಂತಿಸಂಬದ್ಧಾ ಯ ಏವಂ ವೇದ ॥

ಏತದ್ಧ್ಯಾನಸ್ಯ ಫಲಮಾಹ— ಬಲೀವರ್ದಾ ಇವ ವಾಗಾಖ್ಯಾತಂತಿಸಂಬದ್ಧಾಃ ಸರ್ವೇ ಪ್ರಾಣಿನಃ ಏನಮುಪಾಸಕಂ ಪ್ರತಿ ವಹಂತಿ ಪೂಜಾದ್ರವ್ಯಮಾನಯಂತಿ ॥

ಈ ರೀತಿಯಾಗಿ ತಿಳಿದು ಉಪಾಸನೆಮಾಡುವವನಿಗೆ ಲೋಕದಲ್ಲಿ ಎತ್ತುಗಳಂತೆ ವಾಕ್ತಂತಿ ಸಂಬದ್ಧಗಳಾದ ಎಲ್ಲಾ ಪ್ರಾಣಿಗಳೂ ವಶವಾಗಿ ಅವನಿಗೆ ಪೂಜಾದ್ರವ್ಯವನ್ನು ಒದಗಿಸುತ್ತವೆ.

ತಸ್ಯೋಷ್ಣಿಗ್ಲೋಮಾನಿ ತ್ವಗ್ಗಾಯತ್ರೀ ತ್ರಿಷ್ಟುಮ್ಮಾಂಸಮನುಷ್ಟುಪ್ಸ್ನಾ-ವಾನ್ಯಸ್ಥಿ ಜಗತೀ ಪಂಕ್ತಿರ್ಮಜ್ಜಾ ಪ್ರಾಣೋ ಬೃಹತೀ ಸ ಛಂದೋ-ಭಿಶ್ಛನ್ನೋ ಯಚ್ಛಂದೋಭಿಶ್ಛನ್ನಸ್ತಸ್ಮಾಚ್ಛಂದಾಂಸೀತ್ಯಾಚಕ್ಷತೇ ॥

ಪುನರಪಿ ಗುಣಾಂತರಂ ವಿಧತ್ತೇ— ತಸ್ಯ ಧ್ಯೇಯಸ್ಯ ಪ್ರಾಣದೇವಸ್ಯ ಗಾಯತ್ರ್ಯಾದಿ-ಚ್ಛಂದೋಮಯೇನ ದೇಹೇನಾಽಽಚ್ಛಾದಿತತ್ವಂ ಧ್ಯಾಯೇತ್ । ಉಷ್ಣಿಗಾದೀನಾಂ ಛಂದಸಾಂ ಲೋಮಾದಿರೂಪದೇಹಾವಯವತ್ವಂ ಧ್ಯಾತವ್ಯಮ್ । ಬೃಹತೀಛಂದಸಃ ಪ್ರಾಣವಾಯುರೂಪಾವ-ಯವತ್ವಂ ನ ವಿರುದ್ಧಮ್ । ಜಡಸ್ಯ ವಾಯೋರತ್ರ ಪ್ರಾಣಶಬ್ದೇನ ವಿವಕ್ಷಿತತ್ವಾತ್ । ಧ್ಯಾತವ್ಯಸ್ತು ಪ್ರಾಣಶ್ಚೇತನದೇವತಾರೂಪ ಇತಿ ವಿಶೇಷಃ । ಯಸ್ಮಾದಯಂ ಪ್ರಾಣಾಖ್ಯೋ ದೇವೋ ಗಾಯ-ತ್ರ್ಯಾದಿಚ್ಛಂದೋಭಿಶ್ಛನ್ನೋ ಭವತಿ ತಸ್ಮಾಚ್ಛಾದನಹೇತುತ್ವಾದ್ಗಾಯತ್ರ್ಯಾದೀನಾಂ ಛಂದಸ್ತ್ವಂ ದ್ರಷ್ಟವ್ಯಮ್ ॥

ತಿರುಗಿಯೂ ಗುಣಾಂತರವನ್ನು ವಿವರಿಸುತ್ತಾರೆ. ಗಾಯತ್ರ್ಯಾದಿಚ್ಛಂದೋರೂಪವಾದ ದೇಹದಿಂದ ಪ್ರಾಣದೇವನು ಆಚ್ಛಾದಿತನಾಗಿರುವನೆಂದು ಧ್ಯಾನಿಸಬೇಕು. ಉಷ್ಣಿಗಾದಿ ಛಂದಸ್ಸುಗಳೇ ರೋಮಮುಂತಾದ ದೇಹಾವಯವಗಳು. ಬೃಹತೀ ಛಂದಸ್ಸು ಪ್ರಾಣವಾಯುರೂಪಾವಯವವಾಗುತ್ತದೆ. ಇಲ್ಲಿ ಜಡವಾಯು ಪ್ರಾಣಶಬ್ದದಿಂದ ವ್ಯವಹೃತವಾಗಿದೆ. ಧ್ಯಾನ ಯೋಗ್ಯನಾದ ಪ್ರಾಣನು ಚೇತನದೇವತಾರೂಪನೆಂದು ತಿಳಿಯಬೇಕು. ಈ ಪ್ರಾಣದೇವನು ಗಾಯತ್ರ್ಯಾದಿಛಂದಸ್ಸು ಗಳಿಂದ ಆವೃತನಾದುದರಿಂದ ಅವು ಆಚ್ಛಾದಕಗಳಾದುದರಿಂದ ಅವುಗಳಿಗೆ ಛಂದಃ ಎಂಬ ಹೆಸರು ಬಂದಿದೆ.

**ಛಾದಯಂತಿ ಹ ವಾ ಏನಂ ಛಂದಾಂಸಿ ಪಾಪಾತ್ಕರ್ಮಣೋ ಯಸ್ಯಾಂ-ಕಸ್ಯಾಂಚಿದ್ದಿಶಿ ಕಾಮಯತೇ ಯ ಏವಮೇತಚ್ಛಂದಸಾಂ ಛಂದಸ್ತ್ವಂ ವೇದ ॥**

**ಛಂದೋಭಯದೇಹಾವೃತತ್ವಧ್ಯಾನಸ್ಯ ಫಲಮಾಹ — ಯಃ ಪುಮಾನ್ ಪ್ರಾಣಸ್ಯಾಽಽಚ್ಛಾದನಾದ್ಗಾಯತ್ರ್ಯಾದೀನಾಂ ಛಂದಸ್ತ್ವಮಿತಿ ಜಾನಾತಿ ಸ ಪುಮಾನ್ಯಸ್ಯಾಂ ಕಸ್ಯಾಂಚಿದ್ದಿಶಿ ವರ್ತಮಾನಃ ಕಿಂಚಿತ್ಪಾಪಂ ಕರ್ತುಂ ಕಾಮಯತೇ ತಸ್ಮಾತ್ಪಾಪಾತ್ಕರ್ಮಣಸ್ತಮುಪಾಸಕಂ ಗಾಯತ್ರ್ಯಾದೀನಿ ಚ್ಛಂದಾಂಸಿ ಛಾದಯಂತಿ, ಪಾಪಂ ಯಥಾ ನ ಸ್ಪೃಶತಿ ತಥಾ ತಂ ಗೋಪಾಯಂತೀತ್ಯರ್ಥಃ ॥**

ಛಂದೋಮಯದೇಹಾವೃತನೆಂದು ತಿಳಿದು ಧ್ಯಾನಿಸುವುದಕ್ಕೆ ಫಲವನ್ನು ವಿವರಿಸುತ್ತಾರೆ. ಯಾರು ಪ್ರಾಣದೇವನ ಆಚ್ಛಾದಕಗಳಾದುದರಿಂದ ಗಾಯತ್ರ್ಯಾದಿಗಳನ್ನು ಛಂದಸ್ಸೆಂದು ತಿಳಿದು ಧ್ಯಾನಿಸುವನೋ ಅವನು ಯಾವದಿಕ್ಕಿನಲ್ಲಿದ್ದರೂ, ಏನಾದರೊಂದು ಪಾಪಕರ್ಮಮಾಡಲು ಬಯಸಿದರೆ ಆಗ ಅವನನ್ನು ಗಾಯತ್ರ್ಯಾದಿಛಂದಸ್ಸುಗಳು ತಡೆದು ಅವನಿಗೆ ಪಾಪ ಬರದಂತೆ ರಕ್ಷಿಸುತ್ತವೆ. ॥

**ತದುಕ್ತಮೃಷಿಣಾ ॥**

ಯಥೋಕ್ತಪ್ರಾಣಮಹಿಮಪ್ರತಿಪಾದಕಂ ಮಂತ್ರಮುದಾಹರತಿ—ಸ ಚ ಮಂತ್ರಃ ಸಂಹಿತಾಯಾಮೇವಮಾಮ್ನಾತಃ— "ಅಪಶ್ಯಂ ಗೋಪಾಮನಿಪದ್ಯಮಾನಮಾ ಚ ಪರಾ ಚ ಪಥಿಭಿಶ್ಚರಂತಮ್ । ಸ ಸಧ್ರೀಚೀಃ ಸ ವಿಷೂಚೀರ್ವಸಾನ ಆವರೀವರ್ತಿ ಭುವನೇಷ್ವಂತಃ ॥" (ಋ-ಸಂ-ಮಂ-೧-೧೦-ಸೂ-೧೬೪, ೧೬೭-ಋ-೩೧-೩) ಅಸ್ಯ ಮಂತ್ರಸ್ಯ ದ್ರಷ್ಟಾ ದೀರ್ಘತಮಾ ನಾಮ ಕಶ್ಚಿದೃಷಿರ್ಮಂತ್ರರೂಪಂ ವಾಕ್ಯಂ ಬ್ರೂತೇ—ಅಹಮೃಷಿಃ ಪ್ರಾಣಂ ದೇವಮಪಶ್ಯಂ ಸಾಕ್ಷಾತ್ಕೃತವಾನಸ್ಮಿ । ಕೀದೃಶಂ ಪ್ರಾಣಮ್ । ಗೋಪಾಮಿಂದ್ರಿಯಾಣಾಂ ರಕ್ಷಕಮ್ । ಅನಿಪದ್ಯಮಾನಂ ನಿಪದನಂ ವಿನಾಶಸ್ತದ್ರಹಿತಮ್। ಪಥಿಭಿರ್ನಾನಾವಿಧೈರ್ನಾಡೀಮಾರ್ಗೈರಾಚರಂತಮ್ । ಪರಾಚರಂತಂ ಚ । ಪ್ರಾಣವಾಯುರ್ಹಿ ಮುಖನಾಸಿಕದ್ವಾರಾ ಕ್ಷಣೇ ಕ್ಷಣೇ ದೇಹಮಧ್ಯಂ ಸಮಾಗಚ್ಛತ್ಯಪಿ ತದಾನೀಮೇವ ಪುನರ್ಗಚ್ಛತ್ಯಪಿ । ಗಮನಾಗಮನಯೋಃ ಪರಸ್ಪರಸಮುಚ್ಚಯಾರ್ಥೌ ವಾ ಚಕಾರೌ ದ್ರಷ್ಟವ್ಯೌ । ಸ ಚ ಪ್ರಾಣಃ ಸ್ವಯಮಧ್ಯಾತ್ಮಂ ವಾಯುರೂಪೇಣ ವರ್ತಮಾನೋಽಧಿದೈವಮಾದಿತ್ಯರೂಪೇಣಾವಸ್ಥಿತಃ ಸನ್ಸಧ್ರೀಚೀರ್ವಿಷೂಚೀಶ್ಚ ದ್ವಿವಿಧಾ ಅಪಿ ಮುಖ್ಯಾ ದಿಶೋಽವಾಂತರ-

ದಿಶಶ್ಚ ವಸಾನ ಆಚ್ಛಾದಯನ್ವ್ಯಾಪ್ನುವನ್ವರ್ತತೇ । ಭುವನೇಷ್ವಂತಃ ಸರ್ವೇಷು ಲೋಕೇಷು ಮಧ್ಯ ಆವರೀ-ವರ್ತಿ ಪುನಃ ಪುನರಾಗತ್ಯ ವರ್ತತೇ । ಇತಿ ಮಂತ್ರಸ್ಯ ಯೋಜನಾ ॥

ಹಿಂದೆ ಹೇಳಿದಂತೆ ಪ್ರಾಣಮಹಿಮೆಯನ್ನು ಪ್ರತಿಪಾದಿಸುವ ಮಂತ್ರವನ್ನು ಉದಾಹರಿಸುತ್ತಾರೆ. 'ಅಪಶ್ಯಂ ಗೋಪಾಂ—' (ಋ-ಸಂ-೧-೧೬೪-೧, ೧೦-೧೭೭-೩) ಎಂಬುದೇ ಈ ಮಂತ್ರ. ಈ ಮಂತ್ರವನ್ನು ಕಂಡುಹಿಡಿದ ದೀರ್ಘತಮಾ ಎಂಬ ಮಹರ್ಷಿಯು ಮಂತ್ರರೂಪವಾಕ್ಯದಿಂದ ಹೇಳುತ್ತಾನೆ—ಋಷಿಯಾದ ನಾನು ಪ್ರಾಣದೇವನನ್ನು **ಅಪಶ್ಯಂ**- ಸಾಕ್ಷಾತ್ಕರಿಸಿದೆನು. ಅವನ ಸ್ವರೂಪವನ್ನು ವಿವರಿಸುತ್ತಾರೆ. **ಗೋಪಾಂ**- ಇಂದ್ರಿಯಗಳನ್ನು ರಕ್ಷಿಸುವವನು, **ಅನಿಪದ್ಯಮಾನಂ**- ವಿನಾಶರಹಿತನು, **ಪಥಿಭಿಃ**- ನಾನಾವಿಧವಾದ ನಾಡಿಮಾರ್ಗಗಳಿಂದ **ಆಚರಂತಂ, ಪರಾಚರಂತಂಚ**- ಮುಖನಾಸಿಕಾದ್ವಾರದಿಂದ ಕ್ಷಣಕ್ಷಣಕ್ಕೂ ದೇಹಮಧ್ಯವನ್ನು ಪ್ರವೇಶಿಸಿ ಪುನಃ ಹೊರಗೆ ಬರುವವನು, ಎಗಡುಚಕಾರಗಳು ಅಸಕೃದಾವೃತ್ತಿ(ನಿಲ್ಲದೆ ಗಮನಾಗಮನಗಳಸಮುಚ್ಚಯ)ಯನ್ನು ಸೂಚಿಸುತ್ತದೆ. ಈ ರೀತಿ ಇರುವವನ್ನು ನೋಡಿದೆನು ಎಂದರ್ಥ. **ಸಃ**- ಆ ಪ್ರಾಣದೇವನು, ಅಧ್ಯಾತ್ಮನಾಗಿವಾಯುರೂಪದಿಂದ ಇದ್ದರೂ ಅಧಿದೈವವಾದ ಆದಿತ್ಯರೂಪದಿಂದ ಇದ್ದು **ಸಧ್ರೀಚೀಃ, ವಿಷೂಚೀಃ** ದಿಕ್ಕು, ವಿದಿಕ್ಕುಗಳನ್ನೂ **ವಸಾನಃ**- ವ್ಯಾಪಿಸುವವನಾಗಿ, **ಭುವನೇಷುಅಂತಃ**- ಸರ್ವ ಲೋಕಮಧ್ಯದಲ್ಲಿ **ಆವರೀವರ್ತಿ**- ಪುನಃಪುನಃ ತಿರುಗುತ್ತಿರುತ್ತಾನೆ.

**ಅಪಶ್ಯಂ ಗೋಪಾಮಿತ್ಯೇಷ ವೈ ಗೋಪಾ ಏಷ ಹೀದಂ ಸರ್ವಂ ಗೋಪಾ-ಯತಿ, ಇತಿ ॥**

ತಸ್ಯ ಮಂತ್ರಸ್ಯ ಪ್ರಥಮಪಾದೇ ಪೂರ್ವಭಾಗಂ ವ್ಯಾಚಷ್ಟೇ—ಆಯುರ್ಹೇತುತ್ವಾತ್ಪ್ರಾಣಸ್ಯ ರಕ್ಷಕತ್ವಂ ಗ್ರಸಿದ್ಧಮ್ । ತಚ್ಚ ಕೌಷೀತಕಿನ ಆಮನಂತಿ—"ಯಾವದ್ಧ್ಯಸ್ಮಿನ್ ಶರೀರೇ ಪ್ರಾಣೋ ವಸತಿ ತಾವದಾಯುಃ" (ಕೌಗೀ. ೧-೨)

ಪೂರ್ವೋಕ್ತಮಂತ್ರದ ಪ್ರಥಮಪಾದದ ಪೂರ್ವಭಾಗವನ್ನು ವಿವರಿಸುತ್ತಾರೆ. ಪ್ರಾಣದೇವನು ಆಯುಸ್ಸಿಗೆ ಕಾರಣನಾದುದರಿಂದ ಗೋಪಾಃ ರಕ್ಷಕನು ಎಂದು ಪ್ರಸಿದ್ಧನಾಗಿರುತ್ತಾನೆ. 'ಯಾವತ್'—(ಕೌಷೀ-೧-೨) ವಾಕ್ಯದಿಂದ ಕೌಷೀತಕಿಯರೂ ಎಲ್ಲಿಯವರೆಗೆ ಈ ಶರೀರದಲ್ಲಿ ಪ್ರಾಣವಿರುವುದೋ ಅಲ್ಲಿಯವರೆಗೆ ಆಯುಸ್ಸು ಎಂದು ವಿವರಿಸುತ್ತಾರೆ.

**ಅನಿಪದ್ಯಮಾನಮಿತಿ ನ ಹ್ಯೇಷ ಕದಾಚನ ಸಂವಿಶಂತಿ ॥**

**ಉತ್ತರಭಾಗಂ ವ್ಯಾಚಷ್ಟೇ—ಸಂವೇಶನಂ ವ್ಯಾಪಾರೋಪರಮಃ । ಯಥಾ ಸುಷುಪ್ತೌ ವಾಗಾದೀನಾಂ ವ್ಯಾಪಾರ ಉಪರತೋ ಭವತಿ ನ ತ್ವೇವಂ ಪ್ರಾಣಸ್ಯ । ಅತ ಏವ ಸುಷುಪ್ತಿ ಪ್ರಕರಣೇ ಶ್ರುತ್ಯಂತರೇ ಪಠ್ಯತೇ ಪ್ರಾಣಾಗ್ನಯ ಏವೈತಸ್ಮಿನ್ಪುರೇ ಜಾಗ್ರತಿ' (ಪ್ರಶ್ನ. ೪-೩) ಇತಿ ॥**

ಉತ್ತರಭಾಗವನ್ನು ವಿವರಿಸುತ್ತಾರೆ. ಸಂವೇಶನವೆಂದರೆ ವ್ಯಾಪಾರವಿಶ್ರಾಂತಿ. ಸುಷುಪ್ತಿಯಲ್ಲಿ ವಾಗಾದೀಂದ್ರಿಯಗಳ ವ್ಯಾಪಾರವು ನಿಂತಂತೆ ಪ್ರಾಣವು ಎಂದೂ ನಿಲ್ಲುವುದಿಲ್ಲ. ಇದನ್ನೇ ಸುಷುಪ್ತಿಪ್ರಕರಣದಲ್ಲಿ ಇತರ ಶ್ರುತಿಯು ವ್ಯಕ್ತಪಡಿಸುತ್ತದೆ. "ಪ್ರಾಣಾಗ್ನಯಃ"—(ಪ್ರಶ್ನ-೪-೩). ಸುಷುಪ್ತಿಯಲ್ಲಿ ಈ ಪ್ರಾಣಾಗ್ನಿಯು ಮಾತ್ರ ಜಾಗೃತವಾಗಿರುತ್ತದೆಂದರ್ಥ.

**ಆ ಚ ಪರಾ ಚ ಪಥಿಭಿಶ್ಚರಂತಮಿತ್ಯಾ ಚ ಹ್ಯೇಷ ಪರಾ ಚ ಪಥಿಭಿಶ್ಚರತಿ ||**

ದ್ವಿತೀಯಪಾದಂ ವ್ಯಾಚಷ್ಟೇ—ಪ್ರಾಣಸ್ಯ ಪ್ರತಿಕ್ಷಣಂ ಗಮನಾಗಮನಯೋಃ ಸರ್ವೈರನು-ಭೂಯಮಾನತ್ವಾತ್ಪ್ರಸಿದ್ಧಿ ದ್ಯೋತನಾರ್ಥೋ ಹಿ ಶಬ್ದಃ ||

ದ್ವಿತೀಯಪಾದದ ಅರ್ಥವನ್ನು ವಿವರಿಸುತ್ತಾರೆ. ಪ್ರಾಣವಾಯುವು ಪ್ರತಿಕ್ಷಣದಲ್ಲಿ ಹೋಗಿಬರುವುದು ಎಲ್ಲರಿಗೂ ತಿಳಿದ ವಿಷಯ. ಈ ಪ್ರಸಿದ್ಧಿಯನ್ನು ತಿಳಿಸಲು ಹಿಶಬ್ದ ಹೇಳಿದೆ.

**ಸ ಸಧ್ರೀಚೀಃ ಸ ವಿಷೂಚೀರ್ವಸಾನ ಇತಿ ಸಧ್ರೀಚೀಶ್ಚ ಹ್ಯೇಷ ವಿಷೂ-ಚೀಶ್ಚ ವಸ್ತ ಇಮಾ ಏವ ದಿಶಃ ||**

ತೃತೀಯಪಾದಂ ವ್ಯಾಚಷ್ಟೇ— ಸಹಾಂಚಂತಿ ಚತುಷ್ಕೋಣರೂಪೇಣ ಪರಸ್ಪರಸಂಶ್ಲಿಷ್ಟಾ ವರ್ತಂತ ಇತಿ ಪ್ರಾಚ್ಯಾದಯಶ್ಚತಸ್ರೋ ದಿಶಃ ಸಧ್ರೀಚ್ಯಃ | ವಿಷ್ವಗಂಚಂತಿ ಪರಸ್ಪರಂ ವಿಯುಜ್ಯ ವರ್ತಂತ ಇತ್ಯಾಗ್ನೇಯ್ಯಾದಯಶ್ಚತಸ್ರೋ ವಿದಿಶೋ ವಿಷೂಚ್ಯ ಇತಿ | ಏವಮೇತಾ ದಿಶ ಏವ ಶಬ್ದದ್ವಯೇನೋಚ್ಯಂತೇ | ಯದ್ಯಪ್ಯಾದಿತ್ಯ ಏವ ಸ್ವಪ್ರಕಾಶೇನ ತಾ ದಿಶ ಆಚ್ಛಾದಯತಿ ನ ತು ಪ್ರಾಣಸ್ತಥಾಽಪಿ ನಾಸ್ತಿ ವಿರೋಧಃ, ಆದಿತ್ಯಸ್ಯ ಬಾಹ್ಯದೇಶವರ್ತಿಪ್ರಾಣರೂಪತ್ವಾತ್ | " ಆದಿತ್ಯೋ ವೈ ಬಾಹ್ಯಪ್ರಾಣ ಉದಯತ್ಯೇಷ ಹ್ಯೇನಂ ಚಾಕ್ಷುಷಂ ಪ್ರಾಣಮನುಗೃಹ್ಣಾನಃ " (ಪ್ರಶ್ನೋ ೧-೭-) ಇತಿ ಶ್ರುತ್ಯಂತರಾತ್ ||

ತೃತೀಯಪಾದದ ಅರ್ಥವನ್ನು ವಿವರಿಸುತ್ತಾರೆ. ಪೂರ್ವದಕ್ಷಿಣಾದಿ ನಾಲ್ಕುದಿಕ್ಕುಗಳು ಚತುಷ್ಕೋಣರೂಪದಿಂದ ಪರಸ್ಪರಸಂಬದ್ಧವಾಗಿ ಇರುವುದರಿಂದ ಇವುಗಳಿಗೆ (ಸಹಅಂಚಂತಿ) ಸಧ್ರೀಚಿಗಳೆಂದು ಹೆಸರು. ವಿಷ್ವಕ್ ಅಂಚಂತಿ—ಆಗ್ನೇಯಾದಿ ವಿದಿಕ್ಕುಗಳು ಪರಸ್ಪರ ವಿಯೋಗಹೊಂದಿರುವುದರಿಂದ ವಿಷೂಚಿಗಳಾಗುತ್ತವೆ. ಎಂಟು ದಿಕ್ಕುಗಳು ಈ ಎರಡು ಶಬ್ದಗಳಿಂದ ಹೇಳಿವೆ. ಯದ್ಯಪಿ ಸೂರ್ಯನೇ ತನ್ನ ಪ್ರಕಾಶದಿಂದ ಆ ದಿಕ್ಕುಗಳನ್ನು ಮುಚ್ಚುವವನು, ಆದರೂ ದೋಷ ವಿಲ್ಲ. ಏಕೆಂದರೆ ಆದಿತ್ಯನು ಬಾಹ್ಯ-(ಹೊರಗಿನ) ದೇಶದಲ್ಲಿರುವ ಪ್ರಾಣನೇ ಆಗಿರುತ್ತಾನೆ. ಇದು " ಆದಿತ್ಯೋ ವೈ ಬಾಹ್ಯ-" (ಪ್ರಶ್ನ-೧-೭) ಎಂದು ಶ್ರುತಿಯಲ್ಲಿ ಹೇಳಿದೆ.

**ಆವರೀವರ್ತಿ ಭುವನೇಷ್ವಂತರಿತ್ಯೇಷ ಹ್ಯಂತರ್ಭುವನೇಷ್ವಾವರೀವರ್ತಿ ||**

ಚತುರ್ಥಪಾದಾರ್ಥಸ್ಯಾದಿತ್ಯರೂಪೇಣ ಪರಿವರ್ತನಸ್ಯ ಪ್ರಸಿದ್ಧಿಂ ದರ್ಶಯತಿ—ಪ್ರಾಣಮಹಿಮ ಪ್ರತಿಪಾದಕಂ ಮಂತ್ರಾಂತರಂ ದರ್ಶಯಿತುಂ ತಸ್ಯ ಮಂತ್ರಸ್ಯ ತೃತೀಯಪಾದಂ ಪ್ರತೀಕತ್ವೇನೋದಾಹರತಿ ||

ಪ್ರಾಣದೇವನು ಆದಿತ್ಯರೂಪದಿಂದ ಇರುವುದನ್ನು ವಿವರಿಸುತ್ತಾರೆ. ಸಕಲದಿಕ್ಕನ್ನು ಆವರಿಸಿರುವುದರಿಂದಲೇ ಇವನು ಆದಿತ್ಯರೂಪನೆಂದರ್ಥ.

**ಅಥೋ ಆವೃತಾಸೋಽವತಾಸೋ ನ ಕರ್ತೃಭಿರಿತಿ ||**

ಅಥೋಶಬ್ದೋ ಮಂತ್ರಾಂತರಸಮುಚ್ಚಯಾರ್ಥಃ ತಚ್ಚ ಮಂತ್ರಾಂತರಂ ಸಂಹಿತಾಯಾಮೇವಮಾ-ಮ್ನಾತಮ್—“ ಅಪ್ರಕ್ಷಿತಂ ವಸು ಬಿಭರ್ಷಿ ಹಸ್ತಯೋರಷಾಳ್ಹಂ ಸಹಸ್ತನ್ವಿ ಶ್ರುತೋದಧೇ ॥ ಆವೃತಾಸೋಽ-ವತಾಸೋ ನ ಕರ್ತೃಭಿಸ್ತನೂಷು ತೇ ಕ್ರತವ ಇಂದ್ರ ಭೂರಯಃ ” (ಋ. ಸಂ. ಮಂ. ೧-ಸೂ-೫೫-ಋ-೮) ಇತಿ ॥

ಹೇ ಇಂದ್ರ ಪ್ರಾಣಾದಿತ್ಯರೂಪ ಪರಮೇಶ್ವರಾಪ್ರಕ್ಷಿತಮನುಪಹಿಂಸಿತಮಪ್ರಕ್ಷೀಣಂ ವಾ ವಸು ಕರ್ಮ-ಫಲಾಖ್ಯಂ ಧನಂ ಹಸ್ತಯೋರಧಿದೈವಂ ಹಸ್ತಸದೃಶಯೋರ್ದಕ್ಷಿಣೋತ್ತರಾಯಣಯೋರ್ಬಿಭರ್ಷಿ ಧಾರಯಸಿ ॥ ಅಧ್ಯಾತ್ಮಂ ಚ ಜೀವನಾದಿಲಕ್ಷಣಂ ಕರ್ಮಫಲಂ ಹಸ್ತಸದೃಶಯೋಃ ಪ್ರಾಣಾಪಾನವೃತ್ತ್ಯೋರ್ಧಾರಯಸಿ॥ ಕಿಂ ಚ ಸಹೋ ಬಲಂ ತ್ವದೀಯಮಷಾಳ್ಹಮನ್ಯೈರತಿರಸ್ಕಾರ್ಯಮತಃ ಕರ್ಮಫಲಂ ಧಾರಯಿತುಂ ಸಮರ್ಥೋಽಸಿ ॥ ಕಿಂಚ ತನ್ವಿ ತನೌ ಸ್ವಾತ್ಮನಃ ಶರೀರೇ ಶ್ರುತಃ ಶ್ರವಣಾನಿ ಜ್ಞಾನಾನಿ ದಧೇ ಧಾರಯಸಿ ॥ ಅತೋ ನುಷ್ಠಾನ-ಪ್ರಯಾಸಂ ಜ್ಞಾತ್ವಾ ತದನುರೂಪಂ ಫಲಂ ದದಾಸೀತ್ಯರ್ಥಃ ॥ ಕಿಂಚ ಕರ್ತೃಭಿರ್ಭೂಮೌ ಹಿರಣ್ಯನಿಧಿಪ್ರಕ್ಷೇಪ-ಕಾರಿಭಿರವತಾಸೋ ನ ನಿಧಿಸ್ಥಾಪನಾರ್ಥಂ ಖಾತಾ ಅವಟಾ ಗರ್ತಾ ಇವಾಽಽವೃತಾಸೋ ದಿಶಃ ಸರ್ವಾ ಅಪಿ ತದೀಯಪ್ರಕಾಶೇನಾಚ್ಛಾದಿತಾಃ । ನಿಧಿಸ್ಥಾಪಕಾ ಹಿ ಗರ್ತೇ ನಿಧಿಂ ಪ್ರಕ್ಷಿಪ್ಯ ತಂ ಗರ್ತಂ ಮೃತ್ಪಾಷಾಣಾದಿ-ಭಿರಾಚ್ಛಾದಯಂತಿ, ಏವಂ ತ್ವಮಪಿ ತ್ವದೀಯರಶ್ಮಿಭಿಃ ಸರ್ವಮಾಚ್ಛಾದಯಸಿ ॥ ತಾದೃಶಸ್ಯ ತೇ ತವ ತನೂಷು ಶರೀರೇಷು ಕ್ರತವಃ ಸಂಕಲ್ಪವಿಶೇಷಾಃ ಫಲಪ್ರದಾ ಭೂರಯೋ ಬಹವೋ ವಿದ್ಯಂತೇ ॥ ಯೋ ಯತ್ಫಲಮಿಚ್ಛತಿ ತಸ್ಮೈ ತತ್ಫಲಮಸ್ತ್ವಿತ್ಯೇವಂ ಸಂಕಲ್ಪಮಾತ್ರೇಣೈವ ದದಾಸೀತ್ಯರ್ಥಃ ॥

ಪ್ರಾಣಮಹಿಮೆಪ್ರತಿಪಾದನೆಗೋಸ್ಕರ ಬೇರೊಂದು ಮಂತ್ರವನ್ನು ತೋರಿಸಲು ಆ ಮಂತ್ರದ ಮೂರನೆಯ ಪಾದವನ್ನು ಪ್ರತೀಕರೂಪವಾಗಿ ಉದಾಹರಿಸುತ್ತಾರೆ. ಅಥೋ ಶಬ್ದವು ಇತರ ಮಂತ್ರಸಮುಚ್ಚಯವನ್ನು ತಿಳಿಸುತ್ತದೆ. “ ಅಪ್ರಕ್ಷಿತಂ ವಸು ಬಿಭರ್ಷಿ—(ಋ. ಸಂ. ೧-೫೫-೮) ಎಂಬುದೇ ಆ ಮಂತ್ರ. ಅದರ ಅರ್ಥವನ್ನು ವಿವರಿಸುತ್ತಾರೆ. **ಹೇ ಇಂದ್ರ** ಪ್ರಾಣಾದಿತ್ಯರೂಪನಾದ ಪರಮೇಶ್ವರನೇ, **ಅಪ್ರಕ್ಷಿತಂ** ಹಿಂಸೆ ಇಲ್ಲದ ಅಥವಾ ನಾಶವಾಗದ, **ವಸು** ಕರ್ಮಫಲರೂಪವಾದ ಧನವನ್ನು, **ಹಸ್ತಯೋಃ** ಅಧಿದೈವರೂಪದಿಂದ ಹಸ್ತಸಮಾನವಾದ ದಕ್ಷಿಣಾಯನ ಉತ್ತರಾಯಣ ಗಳಲ್ಲಿಯೂ, ಅಧ್ಯಾತ್ಮರೂಪದಿಂದ. ಜೀವನರೂಪಕರ್ಮಫಲವನ್ನು ಹಸ್ತಸಮಾನವಾದ ಪ್ರಾಣಾಪಾನವೃತ್ತಿಗಳಲ್ಲಿಯೂ, **ಬಿಭರ್ಷಿ** ಧರಿಸಿರುವಿ. ಮತ್ತು **ಸಹಃ** ನಿನ್ನಬಲವು, ಅಷಾಳ್ಹಂ ಇನ್ನೊಬ್ಬರಿಂದ ತಿರಸ್ಕರಿಸಲು ಅಸಾಧ್ಯವಾದದ್ದು. ಆದುದರಿಂದ ಕರ್ಮಫಲಧಾರಣೆಯಲ್ಲಿ ಸಮರ್ಥನಾಗಿರುವಿ ಎಂದರ್ಥ. **ತನ್ವಿ** ನಿನ್ನ ಶರೀರದಲ್ಲಿ, **ಶುತಃ** ನಾನಾ ಜ್ಞಾನ ಗಳನ್ನು, **ದಧೇ** ಧರಿಸಿರುವಿ. ಇದರಿಂದಲೇ ನೀನು ಅನುಷ್ಠಾನಪ್ರಯಾಸವನ್ನು ತಿಳಿದು ಅದಕ್ಕೆ ಅನುರೂಪವಾದ ಫಲವನ್ನು ಕೊಡುವಿಯೆಂದರ್ಥ. **ಕರ್ತೃಭಿಃ** ಭೂಮಿಯಲ್ಲಿ ಸ್ವರ್ಣನಿಧಿಯನ್ನು ಹೂಳಿಡುವವರಿಂದ, **ಅವತಾಸೋನ** ನಿಧಿಯನ್ನಿಡಬೇಕಾದರೆ ಅಗೆದಿರುವ ಗಣಿಯಂತೆ (ಹೊಂಡ), **ಆವೃತಾಸಃ** ಎಲ್ಲಾ ದಿಕ್ಕುಗಳೂ ನಿನ್ನ ಪ್ರಕಾಶದಿಂದ ಮುಚ್ಚಲ್ಪಟ್ಟಿವೆ. ನಿಧಿಯನ್ನಿಡುವವರು ಗಣಿಯಲ್ಲಿ ಅದನ್ನಿಟ್ಟು ಆಮೇಲೆ ಆ ಗಣಿಯನ್ನು ಕಲ್ಲುಮಣ್ಣುಮುಂತಾದವು ಗಳಿಂದ ಮುಚ್ಚುವಂತೆ ನೀನೂ ನಿನ್ನಕಿರಣಗಳಿಂದ ಪ್ರಪಂಚವೆಲ್ಲವನ್ನೂ ಆಚ್ಛಾದನಮಾಡುವಿ ಅಂದರೆ ಮುಚ್ಚಿಬಿಡುವಿ ಯೆಂದರ್ಥ. ಅಂತಹ **ತೇ** ನಿನ್ನ **ತನೂಷು** ಶರೀರಗಳಲ್ಲಿ **ಕ್ರತವಃ** ಫಲವನ್ನುಕೊಡುವ ಸಂಕಲ್ಪವಿಶೇಷಗಳು, **ಬಹವಃ** ಅಧಿಕವಾಗಿ ಇರುತ್ತವೆ. ಯಾರು ಯಾವಫಲವನ್ನೂ ಬಯಸುತ್ತಾರೋ ಅವರಿಗೆ ಆ ಫಲವನ್ನು ಸಂಕಲ್ಪಮಾತ್ರದಿಂದ ಕೊಡುವಿಯೆಂದರ್ಥ.

ಸರ್ವಂ ಹೀದಂ ಪ್ರಾಣೇನಾಽಽವೃತಮ್ ॥

ಉದಾಹೃತೇ ಮಂತ್ರಪಾದ ಅವೃತಾಸ ಇತಿ ಪದಂ ವ್ಯಾಚಷ್ಟೇ— ದೇವತಿರ್ಯಙ್ಮನುಷ್ಯಾದಿಕಮಿದಂ ಸರ್ವಂ ದೇಹಜಾತಂ ಪ್ರಾಣವಾಯುನಾ ವ್ಯಾಪ್ತಮಿತ್ಯೇತತ್ಪ್ರಸಿದ್ಧಮ್ ॥

ಮಂತ್ರದಲ್ಲಿರುವ ಆವೃತಾಸಪದದ ಅರ್ಥವನ್ನು ವಿವರಿಸುತ್ತಾರೆ. ದೇವ, ತಿರ್ಯಙ್ಮನುಷ್ಯಾದಿ ಸಕಲದೇಹವೂ ಪ್ರಾಣವಾಯುವಿನಿಂದ ವ್ಯಾಪ್ತವಾಗಿರುವುದು ಲೋಕಪ್ರಸಿದ್ಧವಾಗಿದೆ.

ಸೋಽಯಮಪಾಕಾಶಃ ಪ್ರಾಣೇನ ಬೃಹತ್ಯಾ ವಿಷ್ಟಬ್ಧಸ್ತದ್ಯಥಾಽಯಮಾಕಾಶಃ ಪ್ರಾಣೇನ ಬೃಹತ್ಯಾ ವಿಷ್ಟಬ್ಧ ಏವಂ ಸರ್ವಾಣಿ ಭೂತಾನ್ಯಾ ಪಿಪೀಲಿಕಾಭ್ಯಃ ಪ್ರಾಣೇನ ಬೃಹತ್ಯಾ ವಿಷ್ಟಬ್ಧಾನೀತ್ಯೇವಂ ವಿದ್ಯಾತ್ ॥

ಗುಣಾಂತರಂ ವಿಧತ್ತೇ — ಸರ್ವಪ್ರಾಣ್ಯಾಧಾರಭೂತೋಽಯಮಾಕಾಶಃ, ಸೋಽಯಂ ಬೃಹತೀಛಂದೋರೂಪೇಣ ಪ್ರಾಣೇನ ವಿಷ್ಟಬ್ಧೋ ವಿಶೇಷೇಣ ಸ್ಥಾಪಿತ ಇತಿ ಧ್ಯಾಯೇತ್ । ತತ ಊರ್ಧ್ವಂ ತದ್ವ್ಯಷ್ಟ್ಯಾಂತೇನ ಪಿಪೀಲಿಕಾಪರ್ಯಂತಾಃ ಸರ್ವೇ ಪ್ರಾಣಿನೋ ಬೃಹತೀಛಂದೋರೂಪೇಣ ಪ್ರಾಣೇನ ವಿಧೃತಾ ಇತ್ಯೇವಂ ಧ್ಯಾಯೇತ್ ॥

ಗುಣಾಂತರವನ್ನು ವಿವರಿಸುತ್ತಾರೆ. ಸಕಲಚರಾಚರಗಳಿಗೆ ಆಧಾರವಾದುದು ಆಕಾಶ. ಇದು ಬೃಹತೀಛಂದೋರೂಪಪ್ರಾಣದಿಂದ ಸ್ಥಾಪಿತವಾಗಿದೆಯೆಂದು ಧ್ಯಾನಿಸಬೇಕು. ಹೀಗೆಯೇ ಇರುವೆಯವರೆಗಿರುವ ಎಲ್ಲಾ ಪ್ರಾಣಿ ಸಮುದಾಯವೂ ಈ ಬೃಹತೀಛಂದೋರೂಪ ಪ್ರಾಣದಿಂದಲೇ ಸ್ಥಿತಿಯನ್ನು ಹೊಂದಿದೆ (ಧರಿಸಲ್ಪಟ್ಟಿದೆ) ಯೆಂದು ಧ್ಯಾನಿಸಬೇಕು.

---

*English Translation*

---

1. Speech is his ( the breath's ) the rope, names the knots. thus by his speech as by a rope, and by his names as by knots, all this is bouud. For all this are names indeed, and with speech he calls everything.

2. People carry him who knows this, as if they were bound by a rope.

3. Of the body of the breath thus meditated on the ushnih verse forms the hairs, the Gayatri the skin, the Trishtubh the flesh, the Anushtubh the

museles, the Gagati the bone, Pankti the marrow, the Brihati the breath (prana) He is covered with verses, (khandas, metres). Because he is thus covered with verses, therefore they call them khandas (coverings, metres.

4. If a man knows the reason why khandas are called khandas, the verses cover him in whatever place he likes against any evil deed.

5. this is said by a Rsihi (Rv. 1.164.13):–

6. ' I saw (the breath) as a guardian, never tiring, coming and going on his ways (the arteries). That breath (in the body, being identified with the sun among the Devas), illuminating the principal and intermediate quarters of the sky, is returning constantly in the midst of the worlds."

He says : " I saw a guardian " because he, the breath is a guardian, for he guards everything.

7. He says : " Never tiring, " because the breath never rests.

8. He says : ' Coming and going on his ways, ' because the breath comes and goes on his ways.

9. He says : ' Illuminating the principle and intermediate,' because he illuminates these only, the principal and intermediate quarters of the sky.

10. He says; 'He is returning constantly in the midst of the worlds, ' because he returns indeed constantly in the midst of worlds.

11. And then, three is another verse (Rv.1.55,81) ; ' They are coverd like caves by those who make them.

12. For all this is covered indeed by breath.

13. This ether is supported by breath as Brihati, and as this ether is supported by breath as Brihati, so one should know that all things, not excepting ants, are supported by breath as Brihati

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ಪ್ರಥಮಾಧ್ಯಾಯೇ ಷಷ್ಠಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವು

---

## ಅಥ ದ್ವಿತೀಯಾರಣ್ಯಕೇ ಪ್ರಥಮಾಧ್ಯಾಯೇ ಸಪ್ತಮಃ ಖಂಡಃ

**ಎರಡನೆಯ ಆರಣ್ಯದ ಮೊದಲನೆಯ ಅಧ್ಯಾಯದಲ್ಲಿ ಏಳನೆಯ ಖಂಡವು**

---

ಅಥಾತೋ ವಿಭೂತಯೋಽಸ್ಯ ಪುರುಷಸ್ಯ, ||

ಗುಣಾಂತರಾಣಿ ಧ್ಯಾತವ್ಯಾನಿ ಪ್ರತಿಜಾನೀತೇ—ಅಥ ಪೂರ್ವೋಕ್ತಪ್ರಾಣಗುಣಧ್ಯಾನಾನಂತರಂ ಯತಃ " ಅಯಮೇವ ಮಹಾನ್ಪ್ರಜಾಪತಿಃ " (ಐ-ಆ-೨-೩-೧) ಇತಿ ಪೂರ್ವತ್ರ ಪ್ರತಿಜ್ಞಾತಂ ಪುರುಷಸ್ಯ ಪ್ರಜಾಪತಿತ್ವಂ ಪೃಥಿವ್ಯಾದಿಸ್ರಷ್ಟೃತ್ವೇನೋಪಪಾದನೀಯಂ ಫಲಾಂತರಾಯ ತತ್ತತ್ಸ್ರಷ್ಟೃತ್ವಗುಣಾ ಅಪಿ ವಿಧಾತವ್ಯಾ ಅತಃ ಕಾರಣಾದಸ್ಯ ಪುರುಷಸ್ಯ ವಿಭೂತಯಃ ಪೃಥಿವ್ಯಾದಿಸ್ರಷ್ಟೃತ್ವರೂಪಾಣ್ಯೈಶ್ವರ್ಯಾಣ್ಯುಚ್ಯಂತ ಇತಿ ಶೇಷಃ ||

ಇತರ ಗುಣಗಳನ್ನು ಧ್ಯಾನಿಸಬೇಕೆಂದು ವಿಧಿಸುತ್ತಾರೆ. ಪೂರ್ವೋಕ್ತಗುಣಗಳನ್ನು ಧ್ಯಾನಿಸಿದ ಮೇಲೆ " ಅಯಮೇವ ಮಹಾನ್ ಪ್ರಜಾಪತಿಃ " (ಐ. ಆ. ೨-೩-೧) ಎಂದು ಪುರುಷನಿಗೆ ಹೇಳಿದ ಪ್ರಜಾಪತಿತ್ವ ಧರ್ಮವನ್ನು ಪೃಥಿವ್ಯಾದಿ ಸ್ರಷ್ಟೃತ್ವರೂಪದಿಂದ ಉಪಪಾದನೆ ಮಾಡಬೇಕಾಗಿದೆ. ಇತರ ಫಲಸಿದ್ಧಿಗೋಸ್ಕರ ಆಯಾಯ ಸೃಷ್ಟಿರೂಪಗುಣಗಳನ್ನೂ ಹೇಳಬೇಕಾಗಿದೆ. ಆದುದರಿಂದ ಈ ಪುರುಷನಿಗೆ ಪೃಥಿವ್ಯಾದಿ ಸೃಷ್ಟಿಕರ್ತೃತ್ವರೂಪ ಐಶ್ವರ್ಯಗಳನ್ನು ವಿವರಿಸುತ್ತಾರೆ.

ತಸ್ಯ ವಾಚಾ ಸೃಷ್ಟಾ ಪೃಥಿವೀ ಚಾಗ್ನಿಶ್ಚಾಸ್ಯಾ ಮೋಷಧಯೋ ಜಾಯಂತೇಽಗ್ನಿಃ ರೇನಾ ಸ್ವದಯತೀದಮಾಹರತೇದಮಾಹರತೇತ್ಯೇವಮೇತೌ ವಾಚಂ ಪಿತರಂ ಪರಿಚರತಃ ಪೃಥಿವೀ ಚಾಗ್ನಿಶ್ಚ,||

ತತ್ರ ಪ್ರಥಮಾಂ ವಿಭೂತಿಮಾಹ—ತಸ್ಯ ಯಥೋಕ್ತಗುಣವಿಶಿಷ್ಟಪ್ರಾಣಧ್ಯಾಯಕಃ ಪುರುಷಸ್ಯ ಪ್ರಜಾಪತಿರೂಪಸ್ಯ ವಾಗಿಂದ್ರಿಯೇಣ ಪೃಥಿವ್ಯಗ್ನಿಶ್ಚೇತ್ಯುಭೌ ಸೃಷ್ಟಾವಿತಿ ಧ್ಯಾಯೇತ್ । ಯದಿ ಪುರುಷಸ್ಯ ಪಿತರಂ ಪ್ರತಿ ತಾವುಭೌ ಕಥಮುಪಕುರುತ ಇತಿ ಪೃಚ್ಛ್ಯೇತ್ಸೋಽಯಮುಪಕಾರ ಉಚ್ಯತೇ । ಅಸ್ಯಾಂ ಪೃಥಿವ್ಯಾಂ ವ್ರೀಹಿಯವಾದ್ಯಾ ಓಷಧಯ ಉತ್ಪದ್ಯಂತೇ । ಅಗ್ನಿಶ್ಚೈನಾ ಉತ್ಪನ್ನಾ ಓಷಧೀಃ ಸ್ವದಯತಿ ಭಕ್ಷ್ಯಭೋಜ್ಯಾದಿಪಾಕೇನ ಸ್ವಾದೂಕರೋತಿ । ಅತ ಏವ ಲೋಕೇ ಕಸ್ಯಾಂಚಿತ್ಪಂಕ್ತಾವುಪವಿಶ್ಯ ಭುಂಜಾನಾಃ ಪುರುಷಾಃ ಪರಿವೇಷ್ಟೄನ್ ಪ್ರತಿ ಸ್ವಾದುತಮಂ ಪಕ್ವಮಿದಂ ಭಕ್ಷ್ಯಮಾಹರತೇದಂ ಚ ಭೋಜ್ಯಮಾಹರತೇತಿ ಪುನಃ ಪುನರ್ಯಾಚಂತೇಽನೇನ ಪ್ರಕಾರೇಣೈತೌ ಪೃಥಿವ್ಯಗ್ನೀ ಪುರುಷವಾಗ್ರೂಪಂ ಪಿತರಂ ಪ್ರತ್ಯುಪಕುರುತಃ ॥

ಮೊದಲನೆಯ ಐಶ್ವರ್ಯವನ್ನು ವಿವರಿಸುತ್ತಾರೆ. ಪೂರ್ವೋಕ್ತಗುಣವಿಶಿಷ್ಟನಾದ ಪ್ರಾಣದೇವನನ್ನು ಧ್ಯಾನಿಸುವ ಪ್ರಜಾಪತಿರೂಪ ಪುರುಷನ ವಾಗಿಂದ್ರಿಯದಿಂದ ಪೃಥಿವೀ, ಅಗ್ನಿ ಇವೆರಡೂ ಸೃಷ್ಟವಾಗಿವೆಯೆಂದು ಧ್ಯಾನಿಸಬೇಕು. ಪುರುಷ ರೂಪ ಪಿತೃವಿಗೆ ಅವೆರಡು ಹೇಗೆ ಉಪಕಾರ ಮಾಡುತ್ತವೆಂದು ತಿಳಿಸುತ್ತಾರೆ. ಈ ಪೃಥಿವಿಯಲ್ಲಿ ವ್ರೀಹಿಯವರೂಪವಾದ ಓಷಧಿಗಳು ಹುಟ್ಟುತ್ತವೆ. ಅಗ್ನಿಯು ಈ ಓಷಧಿ ವನಸ್ಪತಿಗಳನ್ನು ಭಕ್ಷಭೋಜ್ಯಾದಿರೂಪದಿಂದ ಪಾಕಗೊಳಿಸಿ ರುಚಿಕರವನ್ನಾಗಿ ಮಾಡುತ್ತಾನೆ. ಆದುದರಿಂದಲೇ ಊಟಕ್ಕೆ ಕುಳಿತ ಪುರುಷರು ಬಡಿಸುವವರನ್ನು ಕುರಿತು ಪರಿಪಕ್ವವಾದ ರುಚಿಕರವಾದ ಭಕ್ಷ್ಯವನ್ನು ಬಡಿಸಿರಿ. ಮಧುರಭೋಜ್ಯವನ್ನು ತನ್ನಿ ಎಂದು ಪ್ರಾರ್ಥಿಸುತ್ತಾರೆ. ಹೀಗೆ ಪೃಥಿವೀ ಅಗ್ನಿಗಳು ವಾಗ್ರೂಪ ಪಿತೃವಿಗೆ ಉಪಕಾರವನ್ನು ಮಾಡುತ್ತವೆ.

**ಯಾವದನುಪೃಥಿವೀ ಯಾವದನ್ವಗ್ನಿಸ್ತಾವಾನಸ್ಯ ಲೋಕೋ ಭವತಿ ನಾಸ್ಯ ತಾವಲ್ಲೋಕೋ ಜೀರ್ಯತೇ ಯಾವದೇತಯೋರ್ನ ಜೀರ್ಯತೇ ಪೃಥಿವ್ಯಾಶ್ಚಾಗ್ನೇಶ್ಚ ಯ ಏವಮೇತಾಂ ವಾಚೋ ವಿಭೂತಿಂ ವೇದ ॥**

ಏತದ್ವಿಭೂತಿಧ್ಯಾನಫಲಮಾಹ—ಯಾವದ್ವಸ್ತುಜಾತಮನುಲಕ್ಷ್ಯ ಪೃಥಿವೀ ಪ್ರವೃತ್ತಾಽಗ್ನಿಶ್ಚ ಯಾವದ್ಭೋಗ್ಯಜಾತಮನುಲಕ್ಷ್ಯ ಪ್ರವರ್ತತೇ ತಾವಾನ್ವಸ್ತುವಿಶಿಷ್ಟೋ ದೇಶವಿಶೇಷೋಽಸ್ಯ ವಾಗ್ವಿಭೂತ್ಯುಪಾಸಕಸ್ಯ ಲೋಕೋ ಭೋಗಭೂಮಿರ್ಭವತಿ । ಕಿಂ ಚ ಪೃಥಿವ್ಯಗ್ನ್ಯೋರ್ಭೋಗಪ್ರದೇಶೋ ಯಾವಂತಂ ಕಾಲಂ ನ ಜೀರ್ಣೋ ಭವತಿ ತಾವಂತಂ ಕಾಲಮುಪಾಸಕಸ್ಯಾಪಿ ಭೋಗದೇಶೋ ನ ಜೀರ್ಯತೇ ॥

ಈ ವಿಭೂತಿಧ್ಯಾನದ ಫಲವನ್ನು ವಿವರಿಸುತ್ತಾರೆ. ಯಾವ ಯಾವ ವಸ್ತುಗಳಿಗಾಶ್ರಯವಾಗಿ ಈ ಪೃಥಿವಿಯು ಪ್ರವೃತ್ತವಾಗಿದೆಯೊ, ಆ ಎಲ್ಲಾ ವಸ್ತುಗಳಿಗಾಶ್ರಯವಾದ ದೇಶವಿಶೇಷವು ವಾಗೈಶ್ವರ್ಯೋಪಾಸಕನಿಗೆ ಭೋಗಭೂಮಿಯಾಗುತ್ತದೆ. ಪೃಥಿವೀ ಅಗ್ನಿಪ್ರದೇಶಗಳು ಎಲ್ಲಿಯವರೆಗೆ ಶಿಥಿಲವಾಗುವುದಿಲ್ಲವೋ ಅಲ್ಲಿಯವರೆಗೆ ಈ ಉಪಾಸಕನ ಭೋಗ ಭೂಮಿಯೂ ನಶಿಸುವುದಿಲ್ಲ.

ಪ್ರಾಣೇನ ಸೃಷ್ಟಾವಂತರಿಕ್ಷಂ ಚ ವಾಯುಶ್ಚಾಂತರಿಕ್ಷಂ ವಾ ಅನುಚ-
ರಂತ್ಯಂತರಿಕ್ಷಮನು ಶೃಣ್ವಂತಿ ವಾಯುರಸ್ಮೈ ಪುಣ್ಯಂ ಗಂಧಮಾವ-
ಹತ್ಯೇವಮೇತೌ ಪ್ರಾಣಂ ಪಿತರಂ ಪರಿಚರತೋಽಂತರಿಕ್ಷಂ ಚ
ವಾಯುಶ್ಚ ಯಾವದನ್ವಂತರಿಕ್ಷಂ ಯಾವದನು ವಾಯುಸ್ತಾವಾನಸ್ಯ
ಲೋಕೋ ಭವತಿ ನಾಸ್ಯ ತಾವಲ್ಲೋಕೋ ಜೀರ್ಯತೇ ಯಾವದೇ-
ತಯೋರ್ನ ಜೀರ್ಯತೋಽಂತರಿಕ್ಷಸ್ಯ ಚ ವಾಯೋಶ್ಚ ಯ ಏವ-
ಮೇತಾಂ ಪ್ರಾಣಸ್ಯ ವಿಭೂತಿಂ ವೇದ ॥

ದ್ವಿತೀಯಾಂ ವಿಭೂತಿಮಾಹ—ನಾಸಿಕಾಯಾಮವಸ್ಥಿತೋ ಘ್ರಾಣೇಂದ್ರಿಯರೂಪೋ ಯಃ ಪ್ರಾಣಸ್ತೇನಾಂತರಿಕ್ಷವಾಯೂ ಸೃಷ್ಟಾವಿತಿ ಧ್ಯಾಯೇತ್ । ಸರ್ವೇ ಪ್ರಾಣಿನೋಽಂತರಿಕ್ಷಮೇವಾನುಸೃತ್ಯ ಸಂಚಾರಂ ಕುರ್ವಂತಿ। ದೂರದೇಶೇ ಪ್ರೋಕ್ತಾಂ ವಾರ್ತಾಮಪಿ ಶೃಣ್ವಂತಿ । ನ ಹಿ ಮೂರ್ತೇನ ಕುಡ್ಯಪರ್ವತಾದಿನಾಽವರುದ್ಧೇ ದೇಶೇ ಸಂಚಾರೋ ವಾರ್ತಾಶ್ರವಣಂ ವಾ ಸಂಭವತಿ । ಸೋಽಯಮಂತರಿಕ್ಷಕೃತ ಉಪಕಾರಃ । ವಾಯುಶ್ಚ ಚಂಪಕಕೇತಕ್ಯಾದಿಗತಂ ಪುಣ್ಯಗಂಧಮಾನಯತಿ । ದುರ್ಗಂಧಾನಯನಂ ತು ನ ವಾಯುಸ್ವಭಾವಕೃತಂ ನಾಪಿ ತದಭಿಜ್ಞಾನಮಿಂದ್ರಿಯ ಸ್ವಭಾವಕೃತಂ ಕಿಂ ತ್ವಾಸುರಪಾಪವೇಧಕೃತಮಿತಿ ಚ್ಛಂದೋಗ (ಛಾಂದೋಗ್ಯ) ಬೃಹದಾರಣ್ಯಕಯೋಃ ಪ್ರಪಂಚಿತಮ್ । ತದಿದಂ ಪುಣ್ಯಗಂಧಾನಯನಂ ವಾಯುಕೃತ ಉಪಕಾರಃ । ಅನ್ಯತ್ಪೂರ್ವವದ್ವ್ಯಾಖ್ಯೇಯಮ್ ॥

ಎರಡನೆಯ ವಿಭೂತಿಯನ್ನು ವಿವರಿಸುತ್ತಾರೆ. ಮೂಗಿನತುದಿಯಲ್ಲಿರುವ ಘ್ರಾಣೇಂದ್ರಿಯರೂಪನಾದ ಪ್ರಾಣ ಅಂತರಿಕ್ಷ ಮತ್ತು ವಾಯು ಸೃಷ್ಟವಾಗಿವೆಯೆಂದು ಧ್ಯಾನಿಸಬೇಕು. ಸಕಲಪ್ರಾಣಿಗಳೆಲ್ಲವೂ ಅಂತರಿಕ್ಷವನ್ನಾಶ್ರಯಿಸಿಯೇ ಸಂಚರಿಸುತ್ತವೆ. ಇದರ ಮೂಲಕವೇ ದೂರದೇಶದ ವೃತ್ತಾಂತವನ್ನೂ ತಿಳಿಯುತ್ತವೆ. ಗೋಡೆಪರ್ವತಾದಿಗಳಿಂದ ವ್ಯವಹಿತವಾದರೆ (ತಡೆಯಲ್ಪಟ್ಟರೆ) ಆಗ ತಿರುಗುವುದಾಗಲೀ ವಾರ್ತೆಯನ್ನು ಕೇಳುವುದಾಗಲೀ ಸಾಧ್ಯವಿಲ್ಲ. ಇದು ಅಂತರಿಕ್ಷದ ಉಪಕಾರ. ವಾಯುವೂ ಕೂಡಾ ಸಂಪಿಗೆಕೇತಕೀಮುಂತಾದ ಸುಗಂಧಕುಸುಮಗಳ ಪರಿಮಳವನ್ನು ಹೊತ್ತು ತರುತ್ತದೆ. ದುರ್ಗಂಧತರುವುದು ವಾಯುಸ್ವಭಾವವಲ್ಲವೆಂದೂ, ಅದನ್ನು ಆಘ್ರಾಣಿಸುವುದು ಘ್ರಾಣೇಂದ್ರಿಯದ ಸ್ವಭಾವವಲ್ಲವೆಂದು, ಅದು ಆಸುರಪಾಪಸಂಬಂಧದಿಂದ ಸಂಭವಿಸುವುದೆಂದು ಛಾಂದೋಗ್ಯಬೃಹದಾರಣ್ಯ ಉಪನಿಷತ್ತುಗಳಲ್ಲಿ ವಿವರಿಸಿವೆ ಹೀಗೆ ಪುಣ್ಯಗಂಧವನ್ನು ತರುವುದು ವಾಯುವಿನ ಉಪಕಾರ. ಈ ವಿಭೂತಿಧ್ಯಾನಫಲವನ್ನು ಹಿಂದಿನಂತೆ ತಿಳಿಯಬೇಕು.

ಚಕ್ಷುಷಾ ಸೃಷ್ಟೌ ದ್ಯೌಶ್ಚಾಽಽದಿತ್ಯಶ್ಚ ದ್ಯೌರ್ಹಾಸ್ಮೈ ವೃಷ್ಟಿಮನ್ನಾದ್ಯಂ
ಸಂಪ್ರಯಚ್ಛತ್ಯಾದಿತ್ಯೋಽಸ್ಯ ಜ್ಯೋತಿಃ ಪ್ರಕಾಶಂ ಕರೋತ್ಯೇವ-
ಮೇತೌ ಚಕ್ಷುಃ ಪಿತರಂ ಪರಿಚರತೋ ದ್ಯೌಶ್ಚಾಽಽದಿತ್ಯಶ್ಚ ಯಾವದನು
ದ್ಯೌರ್ಯಾವದನ್ವಾದಿತ್ಯಸ್ತಾವಾನಸ್ಯ ಲೋಕೋ ಭವತಿ ನಾಸ್ಯ ತಾವ-

ಲ್ಲೋಕೋ ಜೀರ್ಯತೇ ಯಾವದೇತಯೋರ್ನ ಜೀರ್ಯತೇ ದಿವ-
ಶ್ಚಾಽಽದಿತ್ಯಸ್ಯ ಚ ಯ ಏವಮೇತಾಂ ಚಕ್ಷುಷೋ ವಿಭೂತಿಂ ವೇದ ॥

ತೃತೀಯಾಂ ವಿಭೂತಿಮಾಹ—ದ್ಯುಲೋಕೋ ಹಿ ಮೇಘಂ ಸಂಪಾದ್ಯ ವೃಷ್ಟಿದ್ವಾರೇಣ ವ್ರೀಹ್ಯಾದ್ಯನ್ನಂ ಪ್ರಯಚ್ಛತಿ । ಆದಿತ್ಯಸ್ತು ಸ್ವಕೀಯಂ ಜ್ಯೋತಿಃ ಪ್ರಸಾರ್ಯ ವಸ್ತೂನಾಂ ಪ್ರಕಾಶಮಭಿವ್ಯಕ್ತಿಂ ಕರೋತಿ । ಅನ್ಯತ್ಪೂರ್ವವತ್ ॥

ಮೂರನೆಯ ಐಶ್ವರ್ಯವನ್ನು ವಿವರಿಸುತ್ತಾರೆ. ಚಕ್ಷುರಿಂದ್ರಿಯರೂಪಿಯಾದ ಪ್ರಾಣದೇವನಿಂದ ದ್ಯುಲೋಕ ಮತ್ತು ಆದಿತ್ಯನ ಸೃಷ್ಟಿಯಾಗಿದೆ. ದ್ಯುಲೋಕವು ಮೇಘಗಳಮೂಲಕ ಮಳೆಯನ್ನುಂಟುಮಾಡಿ ಭತ್ತಮುಂತಾದ ಅನ್ನ ವನ್ನು ಕೊಡುತ್ತದೆ. ಸೂರ್ಯನು ತನ್ನ ಕಿರಣಗಳನ್ನು ಪ್ರಸರಿಸಿ ಸಕಲವಸ್ತುಪ್ರಕಾಶವನ್ನುಂಟುಮಾಡುತ್ತಾನೆ. ಹೀಗೆ ಇವೆರಡರ ಉಪಕಾರವನ್ನು ತಿಳಿಯಬೇಕು. ಧ್ಯಾನಫಲವಿಂದಿನಂತೆ ತಿಳಿಯಬೇಕು.

ಶ್ರೋತ್ರೇಣ ಸೃಷ್ಟಾ ದಿಶಶ್ಚ ದಿಗ್ಭ್ಯೋ ಹ್ಯಯಮಾಯತೀಃ ದಿಗ್ಭ್ಯ
ವಿಶೃಣೋತಿ ಚಂದ್ರಮಾ ಅಸ್ಮೈ ಪೂರ್ವಪಕ್ಷಾಪರಪಕ್ಷಾನ್ವಿಚಿನೋತಿ
ಪುಣ್ಯಾಯ ಕರ್ಮಣ ಏವಮೇತೇ ಶ್ರೋತ್ರಂ ಪಿತರಂ ಪರಿಚರಂತಿ
ದಿಶಶ್ಚ ಚಂದ್ರಮಾಶ್ಚ ಯಾವದನು ದಿಶೋ ಯಾವದನು ಚಂದ್ರ-
ಮಾಸ್ತಾವಾನಸ್ಯ ಲೋಕೋ ಭವತಿ ನಾಸ್ಯ ತಾವಲ್ಲೋಕೋ
ಜೀರ್ಯತೇ ಯಾವದೇತೇಷಾಂ ನ ಜೀರ್ಯತೇ ದಿಶಾಂ ಚ
ಚಂದ್ರಮಸಶ್ಚ ಯ ಏವಮೇತಾಂ ಶ್ರೋತ್ರಸ್ಯ ವಿಭೂತಿಂ ವೇದ॥

ಚತುರ್ಥೀಂ ವಿಭೂತಿಮಾಹ–ಏನಮುಪಾಸಕಂ ಪುರುಷಂ ಪ್ರತಿ ದಿಗ್ಭ್ಯಃ ಸಕಾಶಾತ್ಸೇವಕಾಃ ಪುರುಷಾ ಭೋಗ್ಯವಸ್ತೂನಿ ಚಾಗಚ್ಛಂತಿ । ತಥಾ ಮೂರ್ತದ್ರವ್ಯವ್ಯವಧಾನಾಭಾವೇ ಸತಿ ದಿಗ್ಭ್ಯಃ ಸಕಾಶಾದ್ದೂರೇ ಪ್ರೋಕ್ತಮಪಿ ವಚನಂ ವಿಶೇಷೇಣ ಶೃಣೋತಿ । ಚಂದ್ರಮಾಸ್ತಸ್ಯ ಪುರುಷಸ್ಯ ದರ್ಶಪೂರ್ಣಮಾಸಾದಿಪುಣ್ಯಕರ್ಮಾರ್ಥಂ ಶುಕ್ಲಕೃಷ್ಣಪಕ್ಷಾನ್ಬಹುವಿಧಮಾಸಂಗತಾನ್ವಿಶೇಷೇಣ ಸಂಪಾದಯತಿ ॥

ನಾಲ್ಕನೆಯ ವಿಭೂತಿಯನ್ನು ವಿವರಿಸುತ್ತಾರೆ. ಶ್ರೋತ್ರೇಂದ್ರಿಯರೂಪ ಪ್ರಾಣದೇವನಿಂದ ದಿಕ್ಕುಗಳು ಚಂದ್ರನು ಸೃಷ್ಟವಾಗಿದ್ದಾರೆಂದು ಧ್ಯಾನಿಸಬೇಕು. ಉಪಾಸಕಪುರುಷನ ಸಮೀಪಕ್ಕೆ ನಾನಾದಿಕ್ಕುಗಳಿಂದ ಸೇವಕಪುರುಷರೂ, ಭೋಗ್ಯ ವಸ್ತುಗಳೂ ಬರುತ್ತವೆ. ಮಧ್ಯದಲ್ಲಿ ಗೋಡೆಮುಂತಾದವುಗಳ ವ್ಯವಧಾನ ಇಲ್ಲದೆ ಇದ್ದರೆ ದೂರದಿಕ್ಕಿನಲ್ಲಿ ಹೇಳಿದುದನ್ನೂ ಕೇಳುತ್ತಾನೆ. ಚಂದ್ರನೂ ಕೂಡಾ ಉಪಾಸಕನಿಗೆ ದರ್ಶಪೂರ್ಣಮಾಸಾದಿಪುಣ್ಯಕರ್ಮಾನುಷ್ಠಾನಕ್ಕೋಸ್ಕರ ಶುಕ್ಲ, ಕೃಷ್ಣ ಪಕ್ಷ ಭೇದದೊಡನೆ ನಾನಾಮಾಸಗಳನ್ನು ಸಂಪಾದಿಸಿಕೊಡುತ್ತಾನೆ ಇದೇ ಅವೆರಡರ ಉಪಕಾರ.

ಮನಸಾ ಸೃಷ್ಟಾ ಆಪಶ್ಚ ವರುಣಶ್ಚಾಪೋ ಹಾಸ್ಮೈ ಶ್ರದ್ಧಾಂ ಸಂನ ಮಂತೇ ಪುಣ್ಯಾಯ ಕರ್ಮಣೇ ವರುಣೋಽಸ್ಯ ಪ್ರಜಾಂ ಧರ್ಮೇಣ ದಾಧಾರೈವಮೇತೇ ಮನಃ ಪಿತರಂ ಪರಿಚರ್ಯಂತ್ಯಾಪಶ್ಚ ವರುಣಶ್ಚ ಯಾವದನ್ನಾಪೋ ಯಾವದನು ವರುಣಾಸ್ತಾವಾನಸ್ಯ ಲೋಕೋ ಭವತಿ ನಾಸ್ಯ ತಾವಲ್ಲೋಕೋ ಜೀರ್ಯತೇ ಯಾವದೇತೇಷಾಂ ನ ಜೀರ್ಯತೇಷಾಂ ಚ ವರುಣಸ್ಯ ಚ ಯ ಏವಮೇತಾಂ ಮನಸೋ ವಿಭೂತಿಂ ವೇದ ॥

ಪಂಚಮೀಂ ವಿಭೂತಿಮಹ-ತಟಾಕಪುಣ್ಯನದ್ಯಾದಿಷು ವರ್ತಮಾನಾ ಆಪಃ ಸ್ನಾನಾಚಮನ-ಮಾರ್ಜನದ್ವಾರೇಣಾಸ್ಯೋಪಾಸಕಸ್ಯ ಶ್ರೌತಸ್ಮಾರ್ತಪುಣ್ಯಕರ್ಮಾನುಷ್ಠಾನಾಯ ಶ್ರದ್ಧಾಮಾಸ್ತಿಕ್ಯಮು-ತ್ಪಾದಯಂತಿ । ವರುಣಸ್ತ್ವಸ್ಯ ಪುತ್ರಾದಿರೂಪಂ ಪ್ರಜಾಂ ಪಾಪಪ್ರವೃತ್ತೇರ್ನಿವಾರ್ಯ ಧರ್ಮೇ ಪ್ರವ-ರ್ತಯತಿ । ಅನ್ಯತ್ಪೂರ್ವವತ್ । ನನು "ಹೃದಯಾನ್ಮನೋ ಮನಸಶ್ಚಂದ್ರಮಾಃ" (ಐ-ಆ-೨-ಅ-೪-ಖಂ-೧) ಇತ್ಯೇವಮುಪರಿಷ್ಟಾಚ್ಚಂದ್ರಮಸೋ ಮನಃ ಕಾರ್ಯತ್ವಂ ವಕ್ಷ್ಯತಿ । ಅತ್ರ ತು ಶ್ರೋತ್ರೇಣ ಸೃಷ್ಟಾ ದಿಶಶ್ಚ ಚಂದ್ರಮಾಶ್ಚೇತಿ ಶ್ರೋತ್ರಕಾರ್ಯತ್ವಂ ಕಥಮುಚ್ಯತ ಇತಿ, ನಾಯಂ ದೋಷಃ । ಅಸ್ಯಾಃ ಸೃಷ್ಟೇರುಪಾಸನಾರ್ಥತ್ವಾತ್ । ನ ಖಲು ಯಥಾವಸ್ತ್ವೇವೋಪಾಸಿತವ್ಯಮಿತಿ ಕಶ್ಚಿನ್ನಿಯಮೋಽಸ್ತಿ ಕಿಂ ತು ಯಥಾವಚನಮೇವೋಪಾಸಿತವ್ಯಮಿತ್ಯೇತಾವಾನೇವ ನಿಯಮಃ ॥

ಐದನೆಯ ವಿಭೂತಿಯನ್ನು ವರ್ಣಿಸುತ್ತಾರೆ. ಮನೋರೂಪಿಪ್ರಾಣದೇವನಿಂದ ನೀರೂ ವರುಣನೂ ಸೃಷ್ಟರಾಗಿ ರುವರೆಂದು ಧ್ಯಾನಿಸಬೇಕು. ಕೆರೆ, ಪುಣ್ಯನದೀಮುಂತಾದವುಗಳಲ್ಲಿರುವ ನೀರು ಉಪಾಸಕನಿಗೆ ಸ್ನಾನ, ಆಚಮನಾದಿಮೂಲಕ, ಶ್ರೌತಸ್ಮಾರ್ತಪುಣ್ಯಕರ್ಮಾನುಷ್ಠಾನಮಾಡಲು ಶ್ರದ್ಧೆಯನ್ನೂ ಆಸ್ತಿಕ್ಯಬುದ್ಧಿಯನ್ನೂ ಉಂಟುಮಾಡುತ್ತದೆ. ವರುಣನಾದರೋ ಈ ಉಪಾಸಕನ ಪುತ್ರಾದಿಪ್ರಜೆಗಳನ್ನು ಪಾಪದಿಂದ ತಿರುಗಿಸಿ ಧರ್ಮಕಾರ್ಯಪ್ರವೃತ್ತರನ್ನಾಗಿ ಮಾಡುತ್ತಾನೆ. ಧ್ಯಾನಫಲ ಹಿಂದಿನಂತೆ ತಿಳಿಯಬೇಕು. ಆಶಂಕೆಯನ್ನು ತೋರಿಸುತ್ತಾರೆ. 'ಹೃದಯಾನ್ಮನೋ'- (ಐ-ಆ-೨-೪-೧) ಎಂಬ ಶ್ರುತಿಯಿಂದ ಚಂದ್ರನು ಮನಃಕಾರ್ಯವೆಂದು ಮುಂದೆ ಹೇಳುತ್ತಾರೆ. ಇಲ್ಲಿ ಶ್ರೋತ್ರಕಾರ್ಯ ಚಂದ್ರನೆಂದುದು ಹೇಗೆ? ಅಂದರೆ ಇವರಲ್ಲಿ ದೋಷವಿಲ್ಲ. ಉಪಾಸನೆಗೋಸ್ಕರ ಈ ಸೃಷ್ಟಿಕ್ರಮ ಹೇಳಿದೆ. ಯಥಾವತ್ತಾದ ವಸ್ತುವನ್ನೇ ಉಪಾಸಿಸ ಬೇಕೆಂಬನಿಯಮವಿಲ್ಲ. ಹೇಗೆ ಶ್ರುತಿವಚನವಿದೆಯೋ ಅದರಂತೆ ಉಪಾಸನೆಮಾಡಬೇಕೆಂದು ಮಾತ್ರ ನಿಯಮ ವಿರುತ್ತದೆ.

---

*English Translation*

1. Next follow the powers of that person,

2. By his speech earth and fire were created. Herbs are produced on the earth, and Agni (fire) makes them ripe and sweet. Take this, take this, thus saying do earth and firc serve their parent, speech.

3. As far as the earth reaches, as far as fire reaches, so far does his world extend, and as long as the world of the earth and fire does not decay, so long does his world not decay who thus knows this power of speech.

4. By breath (in the nose) the sky and the air were created. people follow the sky, and hear along the sky, while the air carries along pure scent. Thus do sky and air serve their parent, the breath.

As far as the sky reaches, as far as the air reaches, so far does his world extend, and as long as the world of the sky and the air does not decay, so long does his world not decay who thus knows this power of breath.

5. By his eye heaven and the sun were created. Heaven gives him rain and food, while the sun causes his light to shine, Thus do the heaven and the sun serve their parent, the eye.

As far as heaven reaches and as for as the sun reaches, so far does his world extend and as long as the world of heaven and the sun does not decay, so long does his world not decay who thus knows the power of the eye.

6. By his car the quarters and the moon were created. From all the quarters they come to him and from all the quarters he hears, while the moon produces for him the bright and the dark halves for the sake of sacrifcial work. Thus do the quarters and the moon serve their parent, the ear.

As far as the quarters reach and as far as the moon reaches, so far does his world extend, and as long as the world of the quarters & the moon does not decay so long does his world not decay who thus knows the power of the ear

7. By his mind the water and varuna were created. Water yields to him faith (being used for sacred acts), Varuna keeps his offspring within the law. Thus do water and varuna serve their parent, the mind.

As far as water reaches and as far as Varuna reaches, so far does his world extend, and as long as the world of water and Varuna does not decay, so long does his world not decay who thus knows the power of the mind.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ಪ್ರಥಮಾಧ್ಯಾಯೇ ಸಪ್ತಮಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ಏಳನೆಯ ಖಂಡವು ಸಮಾಪ್ತವು

---

# ಅಥ ದ್ವಿತೀಯಾರಣ್ಯಕೇ ಪ್ರಥಮಾಧ್ಯಾಯೇ ಅಷ್ಟಮಃ ಖಂಡಃ

## ಎರಡನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು

---

**ಆಪಾ೩ ಇತ್ಯಾಪ ಇತಿ ತದಿದಮಾಪ ಏವೇದಂ ವೈ ಮೂಲಮದ ಸ್ತೂಲಮುಯಂ ಪಿತ್ರೈತೇ ಪುತ್ರಾ ಯತ್ರ ಹ ಕ್ವ ಚ ಪುತ್ರಸ್ಯ ತತ್ಪಿತು ರ್ಯತ್ರ ವಾ ಪಿತುಸ್ತದ್ವಾ ಪುತ್ರಸ್ಯೇತ್ಯೇತತ್ತದುಕ್ತಂ ಭವತಿ ॥**

ಪ್ರಾಣದೇವತ·ಯಾ ನಾನಾವಿಧವಿಭೂತಿರೂಪಾನ್ ಧ್ಯೇಯಗುಣಾನುಕ್ತ್ವಾ ಸಮಸ್ತಕಾರ್ಯ ಕಾರಣ
ರೂಪಜಗದಾತ್ಮಕತ್ವಲಕ್ಷಣಂ ಗುಣಂ ಧ್ಯೇಯಂ ವಿಧತ್ತೇ—ಪೂರ್ವತ್ರ— 'ತಸ್ಯ ವಾಚಾ ಸೃಷ್ಟೌ '(ಐ-ಆ-
೨-ಅ-೧-ಖ೮೭) ಇತ್ಯಾದಿನಾ ಪುರುಷಸ್ಯ ಸೃಷ್ಟಿಹೇತುತ್ವಂ ಯದುಕ್ತಂ ತದೇತಸ್ನಿಮಿತ್ತಕಾರಣತ್ವಾಭಿ-
ಪ್ರಾಯಮ್ । ಪುರುಷೋ ಹಿ ಪೂರ್ವಸ್ಮಿನ್ ಜನ್ಮನಿ ಜ್ಞಾನಕರ್ಮಣೀ ಅನುಷ್ಠಾಯೇದಾನೀಂತನಸೃಷ್ಟೇ-
ರ್ನಿಮಿತ್ತಂ ಭವತಿ । ಅತ್ರ ತು ಜಗತ ಉಪಾದಾನಕಾರಣಂ ವಿಚಾರ್ಯ ನಿರ್ಣೀಯತೇ । ಪ್ಲುತಿರ್ವಿಚಾರಾರ್ಥಾ ।
ಅಪ್ ಶಬ್ದೇನ ಪಂಚ ಭೂತಾನ್ಯುಪಲಕ್ಷ್ಯಂತೇ । ಸ್ಥಾವರ ಜಂಗಮದೇಹರೂಪಸ್ಯ ಜಗತಃ ಕಿಂ ಪಂಚ
ಭೂತಾನ್ಯುಪಾದಾನಮಾಹೋಸ್ವಿದನ್ಯತ್ಕಿಂಚಿದಿತಿ ಸಂಶಯೇ ಸತ್ಯಪ್ಶಬ್ದೋಪಲಕ್ಷಿತಾನಿ ಪಂಚ ಭೂತಾನ್ಯೇವೋ-

ಪಾದಾನಮಿತಿ ನಿರ್ಣೀಯತೇ । ಕಾರ್ಯಭೂತೇಷು ದೇಹೇಷು ಪಂಚಭೂತಾನುಗತೇರ್ದೃಶ್ಯಮಾನತ್ವಾತ್ । ಸಾ ಚಾನುಗತಿರ್ಗರ್ಭೋಪನಿಷದ್ಯಾಮ್ನಾತಾ—"ಅಸ್ಮಿನ್ ಪಂಚಾತ್ಮಕೇ ಶರೀರೇ ಯತ್ಕಠಿನಂ ಸಾ ಪೃಥಿವೀ ಯದ್ದ್ರವಂ ತದಾಪೋ ಯದುಷ್ಣಂ ತತ್ತೇಜೋ ಯತ್ಸಂಚರತಿ ಸ ವಾಯುರ್ಯತ್ಸುಷಿರಂ ತದಾಕಾಶ-ಮಿತ್ಯುಚ್ಯತೇ" (ಗರ್ಭೋ-೧) ಇತಿ । ತತ್ತಸ್ಮಾತ್ಕಾರಣಾದಿದಂ ಕೃತ್ಸ್ನದೇಹರೂಪಂ ಜಗದಪ್ಶಬ್ದೋ-ಪಲಕ್ಷಿತಾನಿ ಪಂಚ ಭೂತಾನ್ಯೇವ ಕಾರ್ಯಕಾರಣಯೋರ್ಮೃದ್ಘಟಯೋರತ್ಯಂತಭೇದಾದರ್ಶನಾತ್ । ಇದಂ ನೈ ಯಥೋಕ್ತಮಪ್ಶಬ್ದೋಪಲಕ್ಷಿತಭೂತಪಂಚಕಮೇವ ಮೂಲಮುಪಾದಾನಂ ಕಾರಣಮದಃ ಸ್ಥಾವರ-ಜಂಗಮದೇಹರೂಪಂ ಜಗತ್ತೂಲಂ ಕಾರ್ಯಮ್ ॥ ಅತಃ ಪರಸ್ಪರೈಕ್ಯಂ ಯುಕ್ತಮ್ । ತಥಾ ನಿಮಿತ್ತ-ಕಾರಣಭೂತೋಽಯಂ ಪುರುಷಃ ಪಿತಾ ! ಏತೇ ಪೃಥಿವ್ಯಗ್ನ್ಯಾದಿದೇವತಾದೇಹಾಃ ಪುತ್ರಾಃ । ತಯೋಶ್ಚ ಪರಸ್ಪರಂ ನಾತ್ಯಂತಂ ಭೇದಃ । ಕಥಂ ಭೇದಾಭಾವ ಇತಿ ಚೇತ್ತದುಚ್ಯತೇ— ಲೋಕೇ ಪುತ್ರಸ್ಯ ವಸ್ತು ಯತ್ರ ಹ ಕ್ವಚ ಯಸ್ಮಿನ್ಕಸ್ಮಿನ್ನಪಿ ಗ್ರಾಮಾಂತರೇ ವಿದ್ಯಮಾನಂ ತತ್ಸರ್ವಂ ಪಿತುಃ ಸ್ವಂ ಭವತಿ । ಪಿತಾ ಹಿ ತದಾನೀಯಾನುಭವತಿ । ಅಥವಾ ಪಿತುಃ ಸಂಬಂಧಿ ಯದ್ವಸ್ತು ಗ್ರಾಮಾಂತರೆ ವಿದ್ಯತೇ ತದ್ವಾ ತದಪಿ ಪುತ್ರಸ್ಯ ಸ್ವಂ ಭವತ್ಯೇವ । ಪುತ್ರೋಽಪಿ ತದಾನೀಯಾನುಭವತಿ । ಪರಸ್ಪರದ್ರವ್ಯಾನುಭವೇನ ಯದೈಕ್ಯ-ಮಸ್ತ್ಯೇತದೈಕ್ಯಂ ತತ್ತೇನಾಯಂ ಪಿತ್ರೈತೇ ಪುತ್ರಾ ಇತಿ ವಾಕ್ಯೇನೋಕ್ತಂ ಭವತಿ । ಭೂತಪಂಚಕಸ್ಯ ಪೃಥಿವ್ಯಾದಿದೇವತಾದೇಹಾನಾಂ ಚ ಕಾರ್ಯಕಾರಣರೂಪೇಣ ಯದೈಕ್ಯಮುಪಾಸಕಪುರುಷಸ್ಯ ಪಿತೃರೂಪಸ್ಯ ಪುತ್ರರೂಪಾಣಾಂ ದೇವತಾತ್ಮನಾಂ ಚ ಯದೈಕ್ಯಂ ತದುಭಯಂ ಪ್ರಾಣಗುಣತ್ವೇನ ಧ್ಯೇಯಮಿತ್ಯರ್ಥಃ ॥

ಪ್ರಾಣದೇವತೆಯ ನಾನಾವಿಧವಿಭೂತಿರೂಪಗಳಾದ ಗುಣಗಳನ್ನು ಧ್ಯಾನಕ್ಕೋಸ್ಕರ ಹಿಂದಿನ ಖಂಡದಲ್ಲಿ ಹೇಳಿದ್ದಾಯಿತು. ಈ ಸಮಸ್ತಕಾರ್ಯಕಾರಣರೂಪವಾದ ಜಗತ್ಸ್ವರೂಪಗುಣವನ್ನು ಧ್ಯಾನಕ್ಕೋಸ್ಕರ ವಿವರಿಸುತ್ತಾರೆ. ಪುರುಷನು ಸೃಷ್ಟಿಕಾರಣನೆಂದು ಹಿಂದೆ ಹೇಳಿರುವುದು ನಿಮಿತ್ತಕಾರಣನೆಂಬ ಅಭಿಪ್ರಾಯದಿಂದ ಎಂದು ತಿಳಿಯಬೇಕು. ಪುರುಷನು ಹಿಂದಿನಜನ್ಮದಲ್ಲಿ ಜ್ಞಾನಕರ್ಮಾನುಷ್ಠಾನಮಾಡಿ ಈಗಿನ ಸೃಷ್ಟಿಗೆ ನಿಮಿತ್ತಕಾರಣನಾಗುತ್ತಾನೆ. ಈಗ ಈ ಜಗತ್ತಿಗೆ ಉಪಾದಾನಕಾರಣ ಯಾವುದೆಂದು ವಿಚಾರಿಸಿ ನಿರ್ಧರಿಸುತ್ತಾರೆ. ಶ್ರುತಿಯಿಂದ ವಿಚಾರ ತಿಳಿಯುತ್ತದೆ. ಇಲ್ಲಿ ಅಪ್ (ಜಲ)ಶಬ್ದದಿಂದ ಪಂಚಭೂತಗಳನ್ನು ತೆಗೆದುಕೊಳ್ಳಬೇಕು. ಸ್ಥಾವರಜಂಗಮದೇಹರೂಪವಾದ ಈಜಗತ್ತಿಗೆ ಪಂಚಮಹಾಭೂತಗಳು ಉಪಾದಾನಕಾರಣವೇ ಅಥವಾ ಅದಕ್ಕಿಂತ ಬೇರೆಯಾದುದೇ ಎಂದು ಸಂಶಯಬಂದರೆ ಅಪ್ಶಬ್ದೋಪಲಕ್ಷಿತವಾದ ಪಂಚಭೂತಗಳೇ ಉಪಾದಾನಕಾರಣವೆಂದು ನಿರ್ಣಯಿಸಿ ಹೇಳುತ್ತಾರೆ. ಕಾರ್ಯವಾಗಿರುವ ಶರೀರದಲ್ಲಿ ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶಗಳೆಂಬ ಪಂಚಭೂತಗಳು ತೋರುವುದರಿಂದ ಇದು ನಿರ್ಣೀತವಾಗುತ್ತದೆ. 'ಅಸ್ಮಿನ್ಪಂಚಾತ್ಮಕೇ—' (ಗರ್ಭೋ-೧) ಎಂದು ಗರ್ಭೋಪನಿಷತ್ತಿನಲ್ಲಿ ಇದು ವಿವೃತವಾಗಿದೆ. ಈ ಪಂಚಭೂತಾತ್ಮಕಶರೀರದಲ್ಲಿ ಯಾವ ಕಠಿಣ ಭಾಗವಿದೆಯೋ ಅದು ಪೃಥಿವೀ, ದ್ರವಭಾಗವೇ ಜಲ, ಉಷ್ಣವಾದುದು ತೇಜಸ್ಸು, ಸಂಚರಿಸುವುದು ವಾಯು ಬಿಲರೂಪವಾಗಿರುವುದೇ ಆಕಾಶ ಎಂದು ಅದರ ತಾತ್ಪರ್ಯ. ಆದುದರಿಂದ ಈ ಸಮಸ್ತದೇಹರೂಪ ಜಗತ್ತೂ ಪಂಚಭೂತಗಳೇ ಕಾರ್ಯಕಾರಣಗಳಾದ ಮಣ್ಣು ಮತ್ತು ಘಟಗಳಿಗೆ ಅತ್ಯಂತಭೇದ ತೋರುವುದಿಲ್ಲ. ಅಪ್ ಶಬ್ದದಿಂದ ಉಪಲಕ್ಷಿತವಾದ ಭೂತಪಂಚಕವು ಉಪಾದಾನಕಾರಣವೂ, ಸ್ಥಾವರಜಂಗಮರೂಪಜಗತ್ತು ಕಾರ್ಯವೂ ಆದುದರಿಂದ ಪರಸ್ಪರಐಕ್ಯ ತೋರುತ್ತದೆ. ನಿಮಿತ್ತಕಾರಣನಾಗಿರುವ ಈ ಪುರುಷನೇ ಪಿತೃವು ಪೃಥಿವೀಅಗ್ನ್ಯಾದಿದೇವತಾದೇಹಗಳೇ ಪುತ್ರರು. ಇವರಲ್ಲಿಯೂ ಅತ್ಯಂತ ಭೇದವಿರುವುದಿಲ್ಲ. ಇದಕ್ಕೆ ಉದಾಹರಣೆ ತೋರಿಸುತ್ತಾರೆ. ಪುತ್ರನ ವಸ್ತುವು ಗ್ರಾಮಾಂತರದಲ್ಲಿ ಇರುವುದಾ ಅದರೆದ,

ತಂದೆಯ ಸ್ವತ್ತೂ ಆಗುತ್ತದೆ. ತಂದೆಯು ಅದನ್ನು ತರಿಸಿ ಅನುಭಸುತ್ತಾನೆ. ಅಥವಾ ತಂದೆಯ ಸ್ವತ್ತು ಎಲ್ಲಿಯಾದರೂ ಗ್ರಾಮಾಂತರದಲ್ಲಿ ಇದ್ದರೆ ಅದು ಪುತ್ರನದಾಗಿ ಅವನು ತರಿಸಿಕೊಂಡು ಅದನ್ನು ಅನುಭವಿಸುತ್ತಾನೆ. ಈ ರೀತಿ ದ್ರವ್ಯಾನುಭವದಿಂದ ಪ್ರಾಪ್ತವಾದ ಐಕ್ಯವನ್ನೇ ಇಟ್ಟುಕೊಂಡು ಇವನು ತಂದೆ, ಇವರುಮಕ್ಕಳು ಎಂದು ಹೇಳುತ್ತಾರೆ. ಭೂತ ಪಂಚಕಕ್ಕೂ ಪೃಥಿವ್ಯಾದಿದೇವತಾದೇಹಗಳಿಗೂ ಕಾರ್ಯಕಾರಣಭಾವದಿಂದ ಪ್ರಾಪ್ತವಾದ ಐಕ್ಯವನ್ನೂ, ಉಪಾಸಕ ಪಿತೃರೂಪ ಪುರುಷರಿಗೂ, ಪುತ್ರರವಸ ದೇವತೆಗಳಿಗೂ ಪ್ರಾಪ್ತವಾದ ಐಕ್ಯವನ್ನೂ ಪ್ರಾಣದೇವನ ಗುಣವೆಂದು ತಿಳಿದು ಧ್ಯಾನಿಸಬೇಕು.

**ಏತದ್ಧ ಸ್ಮ ವೈ ತದ್ವಿದ್ವಾನಾಹ ಮಹಿದಾಸ ಐತರೇಯ ಆಽಹಂ ಮಾಂ ದೇವೇಭ್ಯೋ ವೇದ ಓ ಮದ್ದೇವಾನ್ವೇದೇತಃ ಪ್ರದಾನಾ ಹ್ಯೇತ ಇತಃ ಸಂಭೃತಾ ॥**

**ಉಕ್ತಾರ್ಥದಾರ್ಢ್ಯಾಯ ಮಹರ್ಷಿವಾಕ್ಯಂ ದರ್ಶಯತಿ—ಇತರಾಖ್ಯಾಯಾಃ ಕಸ್ಯಾಶ್ಚಿತ್-ಸ್ತ್ರಿಯಾ ಅಪತ್ಯನ್ಯೈತರೇಯಃ ಸ ಚ ನಾಮ್ನಾ ಮಹಿದಾಸಸ್ತಾದೃಶೋ ಮಹರ್ಷಿಸ್ತದೇತತ್ಪೂರ್ವೋ-ಕ್ತಂ ಕಾರ್ಯಕಾರಣದ್ರವ್ಯೈಕ್ಯಂ ಪಿತೃಪುತ್ರೈಕ್ಯಂ ಚೋಪಾಸನಯಾ ಪ್ರಾಣಾತ್ಮಕತ್ವಂ ಪ್ರಾಪ್ತಸ್ಯ ಸ್ವಸ್ಯ ಗುಣತ್ವೇನ ವಿದ್ವಾನ್ ಶಿಷ್ಯಾಣಾಮಗ್ರೇ ತತ್ಪ್ರಕಟನಾರ್ಥಮಿದಂ ವಾಕ್ಯಮುಕ್ತವಾನ್ । ಮಾಮಹ-ಮಾ ದೇವೇಭ್ಯೋ ವೇದ । ಆಕಾರೋ ನಿಪಾತೋಽಭಿವಿಧೌ ವರ್ತತೇ । ದೇವೈಃ ಸಹಿತಂ ತದಭಿನ್ನಂ ಮತ್ಸ್ವರೂಪಮಹಂ ವೇದೋಪಾಸೇ । ಓ ಮದಿತ್ಯತ್ರಾಽಽಕಾರ ಉಕಾರಶ್ಚೇತಿ ಪದದ್ವಯಮ್ । ದೇವಾನು ದೇವಾನಪಿ ಸರ್ವಾನಾ ಮದ್ವೇದ ಮಯಾ ಸಹಿತಾನೇಕತ್ವೇನೋಪಾಸೇ । ನ ಚ ಪುರು-ಷಸ್ಯ ಮಮ ದೇವಸಾಹಿತ್ಯಮಯುಕ್ತಮಿತಿ ಶಂಕನೀಯಮ್ । ಏತೇ ದೇವಾ ಇತಃಪ್ರದಾನಾ ಹಿ । ಇತೋಽಸ್ಮಾಲ್ಲೋಕಾತ್ಪುರೋಡಾಶಾದಿ ಪ್ರದಾನಂ ಯೇಷಾಂ ತೇ ಇತಃಪ್ರದಾನಾಃ । ತಸ್ಮಾದೇವ ಕಾರಣಾದಿತಃ ಸಂಭೃತಾ ಏತಲ್ಲೋಕಪ್ರತ್ತಾದ್ಧವಿಷಃ ಸಮ್ಯಕ್ಪೋಷಿತಾಃ। ತೇನೋಪಾಸಕಸ್ಯ ದೇವೈಃ ಸಾಹಿತ್ಯಂ ಯುಕ್ತಮಿತ್ಯೇವಂ ಮಹರ್ಷಿರುವಾಚ ॥**

ಅರ್ಥನಿಶ್ಚಯಕ್ಕೋಸ್ಕರ ಮಹರ್ಷಿವಾಕ್ಯವನ್ನು ವಿವರಿಸುತ್ತಾರೆ. ಇತರಾ ಎಂಬುವಳ ಮಗನು ಐತರೇಯನು. ಮಹಿದಾಸನೆಂದು ಅವನ ಹೆಸರು. ಉಪಾಸನೆಯಿಂದ ಪ್ರಾಣಸ್ವರೂಪವನ್ನು ಹೊಂದಿದ ಈ ಮಹರ್ಷಿಯು ಕಾರ್ಯಕಾರಣ ದ್ರವ್ಯೈಕ್ಯವನ್ನೂ, ಪಿತೃಪುತ್ರೈಕ್ಯವನ್ನೂ ತನ್ನ ಗುಣವೆಂದು ತಿಳಿದು ಇದನ್ನು ತನ್ನ ಶಿಷ್ಯರಿಗೆ ಪ್ರಕಟಪಡಿಸಲು ಈ ವಾಕ್ಯವನ್ನು ಹೇಳಿರುತ್ತಾನೆ. ದೇವತೆಗಳೊಡನೆ ಅಭಿನ್ನವಾಗಿರುವ ನನ್ನ ಸ್ವರೂಪವನ್ನು ತಿಳಿದು ಉಪಾಸಿಸುತ್ತೇನೆ. ಆಕಾರ ಉಕಾರ ಸೇರಿ ಓ ಎಂದಾಗಿದೆ. ಎಲ್ಲಾ ದೇವತೆಗಳನ್ನೂ ನನ್ನಿಂದ ಅಭಿನ್ನರು ಎಂದು ಏಕತ್ವ ಭಾವನೆಯಿಂದ ಉಪಾಸಿಸುತ್ತೇನೆ. ಪುರುಷನಾದ ನಾನೂ ದೇವತೆಗಳೂ ಒಂದು, ಹೇಗೆ ಎಂದು ಶಂಕಿಸಬಾರದು. ದೇವತೆಗಳಿಗೆ ಈ ಲೋಕದಿಂದಲೇ ಪುರೋಡಾಶಾದಿಪ್ರದಾನವಿರುವುದರಿಂದ ಅವರು ಇತಃಪ್ರದಾನರು. ಈ ಕಾರಣದಿಂದಲೇ ಭೂಲೋಕದಿಂದ ಕೊಟ್ಟ ಹವಿಸ್ಸಿನಿಂದ ಅವರು ಪೋಷಿತರಾಗಿರುತ್ತಾರೆ. ಆದುದರಿಂದ ಪಿತೃಪುತ್ರೈಕ್ಯದಂತೆ ಉಪಾಸಕನಿಗೆ ದೇವತಾಸಾಹಿತ್ಯವು ಯುಕ್ತವಾಗಿದೆ.

ಸ ಏಷ ಗಿರಿಶ್ಚಕ್ಷುಃ ಶ್ರೋತ್ರಂ ಮನೋ ವಾಕ್ಪ್ರಾಣಸ್ತಂ ಬ್ರಹ್ಮಗಿರಿ-
ರಿತ್ಯಾಚಕ್ಷತೇ ॥

ಗುಣಾಂತರಂ ವಿಧತ್ತೇ—ಯೋಽಯಂ ಚಕ್ಷುರಾದೀಂದ್ರಿಯಸಮೂಹಃ ಸ ಏಷ ಪ್ರಾಣ-ದೇವತಾಯಾ ಗಿರಣಾದ್ಗಿರಿರಿತ್ಯುಚ್ಯತೇ । ಯಥಾ ನಿಗೀರ್ಣಮನ್ನಾದಿಕಂ ಬಹಿರ್ನೋಪಲಭ್ಯತೇ ತಥೇಯಂ ಪ್ರಾಣದೇವತಾ ಚಕ್ಷುರಾದೀಂದ್ರಿಯೈರ್ನಿಗೀರ್ಣೇವ ತಿರೋಹಿತಾ ಸತೀ ಲೌಕಿಕೈರ್ನೋ-ಪಲಭ್ಯತೇ । ಯಸ್ಮಾದೇವಂ ತಸ್ಮಾತ್ತಂ ಚಕ್ಷುರಾದೀಂದ್ರಿಯಸಂಘಾತಂ ಬ್ರಹ್ಮಗಿರಿರಿತ್ಯೇವಮಭಿಜ್ಞಾ ಆಚಕ್ಷತೇ । ಪ್ರಾಣರೂಪಸ್ಯ ಬ್ರಹ್ಮಣೋ ನಿಗರಣತಿರೋಧಾನಾದ್ಬ್ರಹ್ಮಗಿರಿತ್ವಮ್ । ಚಕ್ಷುರಾದಿ-ರೂಪೇಣ ತಿರೋಹಿತಂ ಪ್ರಾಣರೂಪಂ ಬ್ರಹ್ಮೇತಿ ಧ್ಯಾಯೇತ್ ॥

ಗುಣಾಂತರವನ್ನು ವಿವರಿಸುತ್ತಾರೆ. ಚಕ್ಷುರಾದಿ ಇಂದ್ರಿಯಸಮುದಾಯವು ಪ್ರಾಣದೇವತೆಯನ್ನು ನುಂಗಿರುವುದರಿಂದ ಅಂದರೆ ಸ್ವರೂಪವನ್ನು ತಮ್ಮ ರೂಪಗಳಿಂದ ಮುಚ್ಚಿರುವುದರಿಂದ ಗಿರಿ ಎಂಬ ನಾಮಧೇಯ ಹೊಂದುತ್ತದೆ. ನುಂಗಿದ ಅನ್ನಾದಿಗಳು ಹೇಗೆ ಹೊರಗೆ ತೋರುವುದಿಲ್ಲವೋ ಹಾಗೆ ಪ್ರಾಣದೇವತೆಯು ಚಕ್ಷುರಾದೀಂದ್ರಿಯಗಳಿಂದ ತಿರೋಹಿತವಾಗಿ (ಮುಚ್ಚಲ್ಪಟ್ಟು) ಲೌಕಿಕರಿಂದ ನೋಡಲ್ಪಡುವುದಿಲ್ಲ. ಇದನ್ನು ತಿಳಿದವರು ಅವುಗಳಿಗೆ ಬ್ರಹ್ಮಗಿರಿಯೆಂದು ಕರೆಯುತ್ತಾರೆ. ಪ್ರಾಣರೂಪಬ್ರಹ್ಮನನ್ನು ಮುಚ್ಚಿರುವುದರಿಂದ ಈ ಹೆಸರು ಸಾರ್ಥಕವಾಗಿದೆ. ಹೀಗೆ ಚಕ್ಷುರಾದಿರೂಪದಿಂದ ಮರೆಮಾಚಿದ ಪ್ರಾಣರೂಪ ಬ್ರಹ್ಮನನ್ನು ಧ್ಯಾನಿಸಬೇಕು.

ಗಿರತಿ ಹ ವೈ ದ್ವಿಷಂತಂ ಪಾಪ್ಮಾನಂ ಭ್ರಾತೃವ್ಯಂ ಪರಾಽಸ್ಯ ದ್ವಿಷ-
ನ್ಪಾಪ್ಮಾ ಭ್ರಾತೃವ್ಯೋ ಭವತಿ ಯ ಏವಂ ವೇದ ॥

ಬ್ರಹ್ಮಗಿರಿ(ತ್ವ)ಗುಣಧ್ಯಾನಸ್ಯ ಫಲಮಾಹ—ಪಾಪರೂಪಃ ಶತ್ರುರನುಷ್ಠಾನವಿಘ್ನರೂಪಂ ದ್ವೇಷಂ ಕರೋತಿ । ತಂ ಗಿರತಿ ವಿನಾಶಯತಿ । ಸ ಚ ಪಾಪ್ಮಾ ಪರಾಭೂತಃ ಸರ್ವಾತ್ಮನಾ ವಿನಷ್ಟೋ ಭವತಿ ॥

ಬ್ರಹ್ಮಗಿರಿಗುಣಧ್ಯಾನದ ಫಲವನ್ನು ವಿವರಿಸುತ್ತಾರೆ. ಇದನ್ನು ತಿಳಿದು ಉಪಾಸಿಸುವವನ ಅನುಷ್ಠಾನಕ್ಕೆ ವಿಘ್ನವನ್ನುಂಟುಮಾಡುವ ಶತ್ರುವನ್ನು ನಾಶಮಾಡುತ್ತದೆ. ಅಂದರೆ ಆ ಪಾಪಿಷ್ಠನು ತಿರಸ್ಕೃತನಾಗಿ ಸರ್ವವಿಧದಿಂದಲೂ ನಾಶ ಹೊಂದುತ್ತಾನೆ ಎಂದರ್ಥ.

ಸ ಏಷೋಽಸುಃ ಸ ಏಷ ಪ್ರಾಣಃ ಸ ಏಷ ಭೂತಿಶ್ಚಾಭೂತಿಶ್ಚ ॥

ತಾಮೇತಾಮುಪಾಸ್ಯಾಂ ಪ್ರಾಣದೇವತಾಂ ಪ್ರಶಂಸತಿ । ಯದ್ವಾ ಗುಣಾಂತರಾಣಿ ವಿಧತ್ತೇ—ಯೋಽಯಮುಪಾಸ್ಯೋ ದೇವಃ ಸ ಏಷಃ ದೇಹೇಂದ್ರಿಯಾದಿಸಂಘಾತಮಸ್ಯತಿ ಕ್ಷಿಪತಿ ಪ್ರೇರಯತೀತ್ಯಸುಃ । ಪ್ರಕರ್ಷೇಣಾನಿತಿ ಸ್ವಯಂ ಚೇಷ್ಟತ ಇತಿ ಪ್ರಾಣಃ । ಏತಸ್ಯಾ ದೇವತಾಯಾಃ ಶರೀರೇಷ್ವವಸ್ಥಾನೇ ಸತಿ ಜೀವಾತ್ಮಾಪಿ ತತ್ರ ಭವತ್ಯವತಿಷ್ಠತೇ ತಸ್ಮಾಜ್ಜೀವಾತ್ಮಸದ್ಭಾವಹೇತುತ್ವಾದ್ಭೂತಿರಿತ್ಯುಚ್ಯತೇ । ಪ್ರಾಣ-

ದೇವತಾಯಾ ನಿರ್ಗಮನೇ ಸತ್ಯತ್ರ ಜೀವಾತ್ಮಾ ನ ಭವತಿ ನಾವತಿಷ್ಠತೇ ತಸ್ಮಾದಭೂತಿರಿತ್ಯುಚ್ಯತೇ । ಗುಣಚತುಷ್ಟಯಂ ಧ್ಯೇಯಮಿತ್ಯರ್ಥಃ

ಗುಣಾಂತರವನ್ನು ವಿವರಿಸುತ್ತಾರೆ. ಉಪಾಸ್ಯನಾದ ಪ್ರಾಣದೇವನು ದೇಹೇಂದ್ರಿಯಾದಿಸಂಘವನ್ನು ಪ್ರೇರೇಪಿಸುವುದರಿಂದ ಅಸು ಎಂದು ಹೇಳಲ್ಪಡುತ್ತಾನೆ. ಅಸ್ಯತಿ ಇತಿ ಅಸುಃ ಅತಿಶಯವಾಗಿ ತಾನು ಚೇಷ್ಟೆಹೊಂದುವುದರಿಂದ (ಚಲಿಸುವುದರಿಂದ) ಪ್ರಾಣನಾಗಿರುತ್ತಾನೆ. ಪ್ರ ಅನಿತಿ ಇತಿ ಪ್ರಾಣಃ. ಇವನು ಶರೀರದಲ್ಲಿರುವಾಗ ಜೀವಾತ್ಮನೂ ಇರುವುದರಿಂದ ಭೂತಿಯಾಗಿರುತ್ತಾನೆ. ಇವನು ಶರೀರವನ್ನು ಬಿಟ್ಟರೆ ಆಗ ಅಲ್ಲಿ ಜೀವಾತ್ಮನೂ ಇರುವುದಿಲ್ಲ. ಇವಕ್ಕೆ ಅಭೂತಿಯೆಂಬು ಹೆಸರು. ಪ್ರಾಣನ ಈ ನಾಲ್ಕುಗುಣಗಳನ್ನು ತಿಳಿದು ಧ್ಯಾನಿಸಬೇಕು.

**ತಂ ಭೂತಿರಿತಿ ದೇವಾ ಉಪಾಂಸಾಂಚಕ್ರಿರೇ ತೇ ಬಭೂವುಸ್ತಸ್ಮಾದ್ಧಾ-ಪ್ಯೇತರ್ಹಿ ಸುಪ್ತೋ ಭೂರ್ಭೂರಿತ್ಯೇವ ಪ್ರಶ್ವಸಿತಿ ॥**

ತತ್ರ ಭೂತಿಗುಣಂ ಪ್ರಶಂಸತಿ— ತಂ ಪ್ರಾಣದೇವಂ ಜೀವಾತ್ಮಸದ್ಭಾವಹೇತುತ್ವೇನ ಭೂತಿಗುಣ-ಯುಕ್ತೋಽಯಮಿತ್ಯುಪಾಸ್ಯ ವಾಗಾದ್ಯಭಿಮಾನಿನೋ ದೇವಾ ಬಭೂವುರ್ಭೂತಿಮೈಶ್ವರ್ಯಂ ಪ್ರಾಪುಃ । ಯಸ್ಮಾದ್ಭೂತಿಗುಣಯುಕ್ತೋಽಯಂ ಪ್ರಾಣಸ್ತಸ್ಮಾದೇವ ಕಾರಣಾದಿದಾನೀಮಪಿ ಸುಪ್ತಃ ಪುಮಾನ್ಭೂತಿ-ಗುಣದ್ಯೋತಕಂ ಭೂಶಬ್ದಸ್ಯಾನುಕರಣರೂಪಂ ಧ್ವನಿಂ ಪುನಃ ಪುನಃ ಕುರ್ವನ್ಪ್ರಕರ್ಷೇಣ ಶ್ವಾಸಂಕರೋತಿ ॥

ಭೂತಿಗುಣವನ್ನು ಪ್ರಶಂಸಿಸುತ್ತಾರೆ. ಈ ಪ್ರಾಣದೇವನು ಜೀವಾತ್ಮನಿರುವುದಕ್ಕೆ ಕಾರಣನಾದುದರಿಂದ ಭೂತಿಗುಣದಿಂದ ಕೂಡಿರುತ್ತಾನೆ ಎಂದು ಉಪಾಸನೆಮಾಡಿ ವಾಗಾದ್ಯಭಿಮಾನಿದೇವತೆಗಳು ಐಶ್ವರ್ಯವನ್ನು ಹೊಂದಿದುವು. ಪ್ರಾಣನು ಭೂತಿ(ಐಶ್ವರ್ಯ)ಗುಣದಿಂದ ಕೂಡಿರುವುದರಿಂದಲೇ ಪುರುಷನು ಮಲಗಿರುವಾಗ ಈ ಭೂತಿಗುಣವನ್ನು ಪ್ರಕಟಮಾಡಲು ಭೂಎಂಬ ಶಬ್ದವನ್ನು ಅನುಕರಿಸುವ ಧ್ವನಿಯನ್ನು ಪುನಃ ಪುನಃ ಮಾಡುತ್ತಾ ಶ್ವಾಸೋಚ್ಛ್ವಾಸವನ್ನು ಮಾಡುತ್ತಿರುತ್ತಾನೆ.

**ಅಭೂತಿರಿತ್ಯಸುರಾಸ್ತೇ ಪರಾಬಭೂವುಃ ॥**

ಅಭೂತಿಗುಣಂ ನಿಂದತಿ— ಪ್ರಾಣನಿರ್ಗಮನೇನ ಜೀವಸ್ಯಾತ್ರ ಯೋಽಯಮಭಾವಃ ಸೋಽಯ-ಮಭೂತಿ ಶಬ್ದೇನೋಚ್ಯತೇ । ತದ್ಗುಣಕಂ ಪ್ರಾಣಮುಪಾಸ್ಯಾಸುರಾಃ ಪರಾಭೂತಾ ವಿನಷ್ಟಾಃ । ಅತ ಏವ ಚ ಶ್ರುತ್ಯಂತರೇ ಸರ್ಯತೇ— '' ತಂ ಯಥಾ ಯಥೋಪಾಸತೇ ತದೇವ ಭವತಿ '' ಇತಿ ॥

ಅಭೂತಿಗುಣನಿಂದೆಯನ್ನು ವಿವರಿಸುತ್ತಾರೆ. ಪ್ರಾಣನು ಇಲ್ಲದಿರುವಾಗ ಜೀವಾತ್ಮನೂ ಇಲ್ಲದಿರುವುದರಿಂದ ಅದಕ್ಕೆ ಅಭೂತಿಯೆಂದು ಕರೆಯುತ್ತಾರೆ. ಈ ಅಭೂತಿಗುಣದಿಂದಕೂಡಿದ ಪ್ರಾಣನನ್ನು ಉಪಾಸನೆಮಾಡಿ ರಾಕ್ಷಸರು ವಿನಾಶಹೊಂದಿದರು. ಉಪಾಸನೆಮಾಡಿದಂತೆ ಫಲ ಹೊಂದುತ್ತಾನೆಂದು 'ತಂ ಯಥಾ ಯಥೋಪಸತೆ—' ಎಂದು ಶ್ರುತ್ಯಂತರದಲ್ಲಿ ವಿವರಿಸಿದೆ.

**ಭವತ್ಯಾತ್ಮನಾ ಪರಾಽಸ್ಯ ದ್ವಿಷನ್ಪಾಪ್ಮಾ ಭ್ರಾತೃವ್ಯೋ ಭವತಿ ಯ ಏವಂ ವೇದ ॥**

ಭೂತ್ಯಭೂತಿಗುಣದ್ವಯಧ್ಯಾನಸ್ಯ ಫಲಂ ದರ್ಶಯತಿ—ಅಯಂ ಪ್ರಾಣದೇವಃ ಸ್ವಸ್ಯ ಸದ್ಭಾವಹೇತುರ್ವೈರಿಣಾಮಭಾವಹೇತುರಿತ್ಯೇವಂ ಯಃ ಪುಮಾನುಪಾಸ್ತೇ ಸ ಪುಮಾನಾತ್ಮನಾ ಭವತಿ ಸ್ವಯಂ ಚಿರಜೀವೀ ಭವತಿ । ಶತ್ರುಶ್ಚ ಪರಾಭವತಿ । ನನ್ವಭೂತಿಗುಣಃ ಪೂರ್ವಂ ನಿಂದಿತಃ ಕಥಮಂಗೀಕ್ರಿಯತ ಇತಿ ಚೇತ್ಪ್ರಕಾರಭೇದಾದಿತಿ ಬ್ರೂಮಃ । ತ (ಸ್ವ) ಸ್ಯೈವಾಭಾವಹೇತುರಿತ್ಯೇವಮಸುರಾಣಾಂ ಯದುಪಾಸನಂ ತನ್ನಿಂದಿತಂ ವೈರಿಣಾಮಭಾವಹೇತುರಿತ್ಯುಪಾಸನಂ ತ್ವಂಗೀಕ್ರಿಯತೇ ॥

ಭೂತಿ ಅಭೂತಿ ಈ ಎರಡುಗುಣಗಳಿಂದ ಕೂಡಿದ ಪ್ರಾಣೋಪಾಸನೆಯ ಫಲವನ್ನು ಹೇಳುತ್ತಾರೆ. ಈ ಪ್ರಾಣ ದೇವನು ತಾನು ಇರುವುದಕ್ಕೆ ಕಾರಣನು, ಶತ್ರುನಾಶಕ್ಕೆ ಕಾರಣನು ಎಂದು ಯಾರು ಉಪಾಸನೆಮಾಡುತ್ತಾರೋ ಅವರು ಚಿರಕಾಲ ಬದುಕಿರುತ್ತಾರೆ. ಅವರ ಶತ್ರುವು ನಾಶವಾಗುತ್ತಾನೆ. ಅಭೂತಿಗುಣವನ್ನಿಂದೆಮಾಡಿರುವಾಗ ಪುನಃ ಇಲ್ಲಿ ಅಂಗೀಕರಿಸಿದುದು ಹೇಗೆ ಎಂಬುದನ್ನು ತಿಳಿಸುತ್ತಾರೆ. ಅಸುರೋಪಾಸನೆಯಿಂದ ಹಿಂದೆ ನಿಂದೆ ಹೇಳಿದೆ. ವೈರಿನಾಶ ಕಾರಣವೆಂದು ಉಪಾಸಿಸುವುದು ಭಿನ್ನರೀತಿಯಾದುದರಿಂದ ಇಲ್ಲಿ ಅಂಗೀಕರಿಸಿದೆ.

## ಸ ಏಷ ಮೃತ್ಯುಶ್ಚೈವಾಮೃತಂ ಚ ॥

ಗುಣಾಂತರಂ ವಿಧತ್ತೇ—ಸ್ವನಿರ್ಗಮನೇನ ದೇಹಮರಣಾತ್ಪ್ರಾಣಸ್ಯ ಮೃತ್ಯುತ್ವಮ್ । ಸ್ವಾವಸ್ಥಾನೇನ ದೇಹಮರಣಾಭಾವಾದಮೃತತ್ವಮ್ । ಏತದ್ಗುಣದ್ವಯಂ ಧ್ಯಾಯೇತ್ ॥

ಗುಣಾಂತರವನ್ನು ವಿವರಿಸುತ್ತಾರೆ. ಸ್ವನಿರ್ಗಮನದಿಂದ ದೇಹಮರಣವಾಗುವುದರಿಂದ ಪ್ರಾಣನು ಮೃತ ವಾಗುತ್ತಾನೆ. ತಾನು ಇರುವುದರಿಂದ ದೇಹಮರಣವಿಲ್ಲದಿರುವುದರಿಂದ ಅವನಿಗೆ ಅಮೃತತ್ವವು ಸಂಭವಿಸುತ್ತದೆ. ಇವನ ಈ ಮೃತ್ಯುತ್ವ, ಅಮೃತತ್ವಗುಣಗಳನ್ನರಿತು ಧ್ಯಾನಿಸಬೇಕು.

## ತದುಕ್ತಮೃಷಿಣಾ ॥

ಯಥೋಕ್ತಗುಣೋಪೇತಂ ಪ್ರಾಣಂ ಪ್ರಶಂಸಿತುಂ ಮಂತ್ರಮುದಾಹರತಿ—ಸಚ ಮಂತ್ರಃ ಸಂಹಿತಾಯಾಮೇವಮಾಮ್ನಾತಃ ॥

" ಅಪಾಙ್ಪ್ರಾಙೇತಿ ಸ್ವಧಯಾ ಗೃಭೀತೋಽಮರ್ತ್ಯೋ ಮರ್ತ್ಯೇನಾ ಸಯೋನಿಃ ॥
ತಾ ಶಶ್ವಂತಾ ವಿಷೂಚೀನಾ ವಿಯಂತಾ ನ್ಯ೧ ನ್ಯಂ ಚಿಕ್ಯುರ್ನ ನಿಚಿಕ್ಯುರನ್ಯಮ್ " ॥

(ಋ-ಸಂ-ಮಂ-೧-ಸೂ-೧೬೪-ಋ-೩೮)

ತಸ್ಯಾಯಮರ್ಥಃ—ಅಯಂ ಪ್ರಾಣವಾಯುರ್ದೇಹಮಧ್ಯೇ ಸ್ವಧಯಾ ಗೃಭೀತಃ । ಸ್ವಧಾಶಬ್ದೋಽನ್ನವಾಚೀ । ಭುಕ್ತೇನಾನ್ನೇನ ಪರಿಗೃಹೀತೋಽವಸ್ಥಾಪಿತಃ ಸನ್ನಧ ಊರ್ಧ್ವಂ ಚ ಸಂಚರತಿ । ಮಲಮೂತ್ರಾಪನಯನಾರ್ಥಮಧೋಭಾಗೇಽಂಚತಿ ಗಚ್ಛತೀತ್ಯಪಾಙ್ । ಶ್ವಾಸಾರ್ಥಂ ಪ್ರಕೃಷ್ಟೇ ಮುಖೇಽಂಚತಿ ಗಚ್ಛತೀತ್ಯಪಾಙ್ । ಏವಂ ವಿಧಃ ಸನ್ನೇತಿ ಗಚ್ಛತಿ ಸರ್ವದಾ ಸಂಚರತಿ । ಸ ಚ ಪ್ರಾಣಃ ಸ್ವಯಮಮರ್ತ್ಯೋ ಮರಣರಹಿತಃ ಸನ್ಮರ್ತ್ಯೇನ ಮರಣೋಪೇತೇನ ಶರೀರೇಣ ಸಹ(ಸ)ಯೋನಿಃ

ಸನೊನಸ್ಥಾನ ಏಕತ್ರಾವಸ್ಥಿತಃ । ಜತುಕಾಷ್ಠವದ್ದೇಹಪ್ರಾಣಯೋರತ್ಯಂತಂ ಸಂಶ್ಲೇಷಃ ಏಕತ್ರಾವ-ಸ್ಥಾನಮ್ । ಪ್ರಾಣಸ್ಯ ನಿರ್ಗಮೇ ದೇಹಸ್ಯ ಮರಣಾನ್ಮರ್ತ್ಯತ್ವಮ್ । ಪ್ರಾಣಸ್ಯ ತು ಮರಣಶಬ್ದ-ವಾಚ್ಯ ಪ್ರಾಣವಿಯೋಗಾಸಂಭವಾದಮರ್ತ್ಯತ್ವಮ್ । ತಾ ಶಶ್ವಂತಾ ತೌ ದೇಹಪ್ರಾಣೌ ಶಾಶ್ವತಿಕೌ ॥ ಪ್ರಾಣಸ್ಯ ವಿನಾಶಭಾವೇನ ತತ್ಸಹಚಾರಿಣೋ ದೇಹಸ್ಯಾಪಿ ಛತ್ರಿಣೋ ಗಚ್ಛಂತೀತಿವಚ್ಛಾಶ್ವತಿಕತ್ವ-ಮುಪಚರ್ಯತೇ । ಕೀದೃಶೌ ತೌ ವಿಷೂಚೀನಾ ವಿಷ್ವಕ್ಸರ್ವತೋಽಂಚತಸ್ತೌ ವಿಷೂಚೀನೌ, ವಿವಿಧವ್ಯಾಪಾರಯುಕ್ತೌ । ಪ್ರಾಣೋ ದೇಹೇಂದ್ರಿಯಾದೀಂಶ್ಚಾಲಯತಿ, ದೇಹಸ್ತು ಪ್ರಾಣೇಂದ್ರಿ-ಯಾಣಾಮಾಧಾರತ್ವೇನಾವತಿಷ್ಠತೇ । ಪುನರಪಿ ಕೀದೃಶೌ—ವಿಯಂತಾ ಪರಸ್ಪರ ವಿರೋಧೇನ ಗಚ್ಛಂತೌ । ದೇಹೋ ಮೃತಃ ಸನ್ಭೂಮೌ ಗಚ್ಛತಿ, ತದ್ವೈಪರಿತ್ಯೇನ ಪ್ರಾಣ ಊರ್ಧ್ವಂ ಲೋಕಾಂ-ತರೇ ಗಚ್ಛತಿ । ತಯೋರುಭಯೋರ್ಮಧ್ಯೇಽನ್ಯತರಂ ದೇಹಂ ನಿಚಿಕ್ಯುಃ । ಅನ್ನಪಾನಾಭ್ಯಾಂ ಮನು-ಷ್ಯಾದಯೋ ನಿಚಯಂ ವೃದ್ಧಿಂ ಪ್ರಾಪಿತವಂತಃ । ಅನ್ಯಂ ತು ಪ್ರಾಣಂ ನ ನಿಚಿಕ್ಯುಃ, ನಹ್ಯನ್ನಪಾ-ನಾಭ್ಯಾಂ ಪ್ರಾಣೋ ವರ್ಧತ ॥

ಪೂರ್ವೋಕ್ತ ಗುಣದಿಂದಕೂಡಿದ ಪ್ರಾಣವೇವನನ್ನು ಪ್ರಶಂಸಿಸಲು ಮಂತ್ರವನ್ನು ಉದಾಹರಿಸುತ್ತಾರೆ. 'ಅಪಾಙ್ ಪ್ರಾಙೇತಿ'—(ಋ. ಸಂ. ೧-೧೬೪-೩೮) ಎಂಬುದೇ ಈ ಮಂತ್ರ. ಅದರ ಅರ್ಥವನ್ನು ವಿವರಿಸುತ್ತಾರೆ. ಈ ಪ್ರಾಣ ವಾಯುವು ದೇಹಮಧ್ಯದಲ್ಲಿ ಸ್ವಧೆಯಿಂದ ಅಂದರೆ ಅನ್ನದಿಂದ ಧರಿಸಲ್ಪಟ್ಟದೆ. ಇದು ಕೆಳಕ್ಕೂ ಮೇಲಕ್ಕೂ ಸಂಚರಿಸುತ್ತದೆ. ಮಲಮೂತ್ರಾದಿಗಳನ್ನು ಕೆಳಗೆ ಹಾಕಿಸಲು ಅಧೋಭಾಗದಲ್ಲಿ ಸಂಚರಿಸುವುದರಿಂದ ಇದಕ್ಕೆ ಅಪಾಙ್ ಎಂದು ಹೆಸರು. ಶ್ವಾಸಕ್ಕೋಸ್ಕರ ಪ್ರಕೃಷ್ಟವಾದ ಮುಖದಲ್ಲಿ ಸಂಚರಿಸುವುದರಿಂದ ಪ್ರಾಙ್ ಎಂದು ಹೆಸರು. ಈರೀತಿಯಾಗಿ ಯಾವಾಗಲೂ ಸಂಚರಿಸುತ್ತಾ ಇರುತ್ತಾನೆ. ಪ್ರಾಣವು ತಾನು ಮರಣಧರ್ಮವುಳ್ಳ ಶರೀರದೊಡನೆ ಒಂದು ಕಡೆಯಲ್ಲಿ ಇರುತ್ತಾನೆ. ಅರಗುಕಾಷ್ಠ (ಜೋಡಿಸಿದಮರ) ಗಳಂತೆ ದೇಹಪ್ರಾಣಗಳ ಅನ್ಯೋನ್ಯಸಂಬಂಧಕ್ಕೆ ಒಂದುಕಡೆ ಇರುವುದೆಂದರ್ಥ. ಪ್ರಾಣ ಹೋದೊಡನೆ ದೇಹಮೃತವಾಗುವುದರಿಂದ ಅದು ಅರ್ತ್ಯ. ಪ್ರಾಣಕ್ಕೆ ಇನ್ನೊಂದು ಪ್ರಾಣವಿಯೋಗವಿಲ್ಲದಿರುವುದರಿಂದ ಅದು ಅಮರ್ತ್ಯ. ಈ ದೇಹಪ್ರಾಣಗಳೆರಡೂ ಶಾಶ್ವತಗಳು. ದೇಹಮರಣಶೀಲವಾದರೂ ವಿನಾಶವಿಲ್ಲದ ಪ್ರಾಣದೊಡನೆ ಹೇಳಿರು ವುದರಿಂದ ಛತ್ರಿನ್ಯಾಯದಿಂದ (ಅನೇಕಛತ್ರಿಹಿಡಿದವರು ಹೋಗುವಾಗ ಅವರ ಮಧ್ಯೆ ಕೆಲವರು ಹಾಗೆಯೇ ಹೋಗುತ್ತಿದ್ದರೂ ಕೊಡೆಯವರು ಹೋಗುತ್ತಾರೆ ಎನ್ನುತ್ತಾರೆ. ಇದಕ್ಕೆ ಛತ್ರಿನ್ಯಾಯವೆಂದು ಹೆಸರು.) ದೇಹ ಶಾಶ್ವತವೆಂದಿದೆ. ಔಪ ಚಾರಿಕಪ್ರಯೋಗ. ಇವೆರಡೂ ನಾನಾವ್ಯಾಪಾರಗಳಿಂದ ಕೂಡಿವೆ. ಪ್ರಾಣವು ದೇಹದಲ್ಲಿದ್ದು ಇಂದ್ರಿಯಾದಿಗಳನ್ನು (ಅವುಗಳ ವ್ಯಾಪಾರದಲ್ಲಿ) ಚಲಿಸುವಂತೆ ಮಾಡುತ್ತದೆ. ದೇಹವು ಪ್ರಾಣೇಂದ್ರಿಯಗಳ ಆಧಾರವಾಗಿರುತ್ತದೆ. ಪರಸ್ಪರ ವಿರುದ್ಧವಾಗಿಯೂ ಹೋಗುತ್ತವೆ. ದೇಹವು ಮೃತವಾಗಿ ಭೂಮಿಯಲ್ಲಿ ಬೀಳುತ್ತದೆ. ಆಗ ಪ್ರಾಣವು ಮೇಲೆ ಲೋಕಾಂ ತರಕ್ಕೆ ಹೋಗುತ್ತದೆ. ದೇಹವನ್ನು ಅನ್ನಪಾನಾದಿಗಳಿಂದ ಬೆಳೆಸುತ್ತಾರೆ. ಪ್ರಾಣವು ಅವುಗಳಿಂದ ಎಂದೂ ವೃದ್ಧಿ ಹೊಂದುವುದಿಲ್ಲ.

**ಅಪಾಙ್ ಪ್ರಾಙೇತಿ ಸ್ವಧಯಾ ಗೃಭೀತ ಇತ್ಯಪಾನೇನ ಹ್ಯಯಂ ಯತಃ ಪರಾಙ್ಭವತಿ ಪ್ರಾಣೋ ನ ಪರಾಙ್ಭವತಿ ॥**

ತಸ್ಯ ಮಂತ್ರಸ್ಯ ಪ್ರಥಮಂ ಪಾದಂ ವ್ಯಾಚಷ್ಟೇ—ಯತೋ ಯಸ್ಮಾತ್ಕಾರಣಾದ್ವಯಂ ಪ್ರಾಣೋಽಪಾನೇನಾಧೋವೃತ್ತಿವ್ಯಾಪಾರೇಣಾಂತರಾಕೃಷ್ಟಃ ಸನ್ಪರಾಙ್ ಬಹಿರ್ಗತೋ ನ ಭವತಿ । ಯದ್ಯಪಾನವೃತ್ತ್ಯಾನಾಽಽಕೃಷ್ಯೇತ ತರ್ಹಿ ಶ್ವಾಸರೂಪೇಣ ಬಹಿರ್ನಿರ್ಗತ್ಯ ತತ್ರೈವ ಗಚ್ಛೇತ್ । ನ ಪುನರ್ದೇಹೇ ಪ್ರತ್ಯಾನಚ್ಛೇತ್ । ಅಸ್ಯಾರ್ಥಸ್ಯಾನುಭವಪ್ರಸಿದ್ಧ್ಯರ್ಥೋ ಹಿಶಬ್ದಃ ॥

ಹಿಂದೆ ಹೇಳಿದ ಮಂತ್ರದ ಪಾದವನ್ನು ವಿವರಿಸುತ್ತಾರೆ. ಈ ಪ್ರಾಣವಾಯುವು ಅಪಾನವಾಯುವಿನಿಂದ ಒಳಗೆ ಸೆಳೆಯಲ್ಪಡದಿದ್ದರೆ ಅವನು ಶ್ವಾಸರೂಪದಿಂದ ಹೊರಗೆ ಹೋದವನು ಬರುತ್ತಲೇ ಇರಲಿಲ್ಲ. ಹೊರಗೇ ಹೋಗುತ್ತಿದ್ದನು. ಅಪಾನವೃತ್ತಿಯಿಂದ ಎಳೆಯಲ್ಪಡುವುದರಿಂದ ಪುನಃ ಪುನಃ ದೇಹದೊಳಗೆ ಬರುತ್ತಿರುತ್ತಾನೆ. ಹಿಶಬ್ದವು ಅನುಭವಪ್ರಸಿದ್ಧಿಯನ್ನು ತಿಳಿಸುತ್ತದೆ.

**ಅಮರ್ತ್ಯೋ ಮರ್ತ್ಯೇನಾ ಸಯೋನಿರಿತ್ಯೇತೇನ ಹೀದಂ ಸರ್ವಂ ಸಯೋನಿ ಮರ್ತ್ಯಾನಿ ಹೀಮಾನಿ ಶರೀರಾಣ್ಯ॒ಮೃತೈಷಾ ದೇವತಾ ॥**

ದ್ವಿತೀಯಪಾದಂ ವ್ಯಾಚಷ್ಟೇ—ಏತೇನ ಪ್ರಾಣೇನ ಸಹೇದಂ ಸರ್ವಂ ಶರೀರಜಾತಂ ಸಮಾನಸ್ಥಾನಕಮಿತ್ಯೇತತ್ಪ್ರಸಿದ್ಧಮ್ । ಶರೀರಾಣಿ ಮರ್ತ್ಯಾನೀತ್ಯೇತದತ್ಯಂತಂ ಪ್ರಸಿದ್ಧಮಿತಿ ದ್ಯೋತಯಿತುಂ ಹಿ ಶಬ್ದಃ ಪ್ಲುತಿಶ್ಚ । ಪ್ರಾಣದೇವತಾ ತ್ವಮೃತಾ ॥

ಮಂತ್ರದ ದ್ವಿತೀಯಪಾದವನ್ನು ವಿವರಿಸುತ್ತಾರೆ. ಪ್ರಾಣದೊಡನೆ ಸಕಲಶರೀರಜಾತವು ಸೇರಿ ಒಂದೇಸ್ಥಳದಲ್ಲಿರುತ್ತದೆ. ಶರೀರಗಳೆಲ್ಲವೂ ಮರ್ತ್ಯ ಅಂದರೆ ಮರಣಶೀಲಗಳು. ಪ್ರಾಣದೇವತೆಯು ಅಮರ್ತ್ಯವು.

**ತಾ ಶಶ್ವಂತಾ ವಿಷೂಚೀನಾ ವಿಯಂತಾ ನ್ಯನ್ಯಂ ಚಿಕ್ಯುರ್ನ ನಿಚಿಕ್ಯುರನ್ಯಮಿತಿ ನಿಚಿನ್ವಂತಿ ಹ್ಯೇವೇಮಾನಿ ಶರೀರಾಣ್ಯ॒ಮೃತೈವೈಷಾ ದೇವತಾ ॥**

ಉತ್ತರಾರ್ಧಂ ವ್ಯಾಚಷ್ಟೇ-ಶರೀರಾಣಾಮನ್ನಾದಿನಾ ವೃದ್ಧಿರತ್ಯಂತಪ್ರಸಿದ್ಧಾ। ಪ್ರಾಣದೇವತಾ ತ್ವಮೃತೈವ ನ ತು ಜನ್ಮವೃದ್ಧ್ಯಾದಿ ವಿಕಾರಸ್ತಸ್ಯಾ ಅಸ್ತಿ ॥

ಮಂತ್ರದ ಉತ್ತರಾರ್ಧವನ್ನು ವಿವರಿಸುತ್ತಾರೆ. ಶರೀರಗಳು ಅನ್ನಾದಿಗಳಿಂದ ಪುಷ್ಟವಾಗುವುದು. ಅತ್ಯಂತ ಪ್ರಸಿದ್ಧವಾಗಿದೆ. ಪ್ರಾಣದೇವತೆ ಅಮೃತವಾದುದರಿಂದ ಇದಕ್ಕೆ ಜನ್ಮವೃದ್ಧ್ಯಾದಿಯಾವ ವಿಕಾರಗಳೂ ಇಲ್ಲ.

**ಅಮೃತೋ ಹ ವಾ ಅಮುಷ್ಮಿಲ್ಲೋ॒ಕೇ ಸಂಭವತ್ಯಮೃತಃ ಸರ್ವೇಭ್ಯೋ ಭೂತೇಭ್ಯೋ ದದೃಶೇ ಯ ಏವಂ ವೇದ ಯ ಏವಂ ವೇದ ॥**

**ಅಮೃತತ್ವಗುಣಧ್ಯಾನ ಫಲಮಾಹ—ಉಪಾಸಕಃ ಸ್ವರ್ಗಲೋಕೇ ಹಿರಣ್ಯಗರ್ಭತ್ವಂ ಪ್ರಾಪ್ಯ ಮರಣರಹಿತೋ ಭವತಿ । ತತಃ ಸರ್ವಪ್ರಾಣ್ಯುಪಕಾರಾರ್ಥಮಾದಿತ್ಯಮಂಡಲೇ ಸರ್ವೈರ್ದೃಶ್ಯಮಾನೋ ಭವತಿ । ಅಭ್ಯಾಸೋಽಧ್ಯಾಯ ಸಮಾಪ್ತ್ಯರ್ಥಃ ॥**

ಅಮೃತತ್ವಗುಣದ ಧ್ಯಾನಕ್ಕೆ ಫಲವನ್ನು ವಿವರಿಸುತ್ತಾರೆ. ಉಪಾಸಕನು ಸ್ವರ್ಗಲೋಕದಲ್ಲಿ ಹಿರಣ್ಯಗರ್ಭತ್ವವನ್ನು ಹೊಂದಿ ಮರಣರಹಿತನಾಗುತ್ತಾನೆ. ಸಕಲಪ್ರಾಣಿಗಳ ಉಪಕಾರಕ್ಕೋಸ್ಕರ ಆದಿತ್ಯಮಂಡಲದಲ್ಲಿದ್ದು ಎಲ್ಲರಿಂದಲೂ ನೋಡಲ್ಪಡುತ್ತಾನೆ. ದ್ವಿರಾವೃತ್ತಿ ಅಧ್ಯಾಯದಸಮಾಪ್ತಿಯನ್ನು ತಿಳಿಸುತ್ತದೆ.

---

*English Translation*

---

1. Was it water really ? was it water ? Yes, all this was water indeed. This (water) was the root (cause), that (the world) was the shoot (effect). He (the person) is the father, they (earth, fire, &c.) are the sons. Whatever there is belonging to the son, belongs to the father ; whatever there is belonging to the father, belongs to the son. This was intended.

2. Mahidasa Aitareya, who knew this, said : 'I know myself (reaching) as far as the gods, and I know the gods (reaching) as far as me. For these gods receive their gifts from hence, and are supported from hence.'

3. This is the mountain, viz. eye, ear, mind, speech, and breath. They call it the mountain of Brahman.

4. He who knows this, throws down the evil enemy who hates him ; the evil enemy who hates him is defeated.

5. He (the Prana, identified with Brahman) is the life, the breath; he is being (while the givatman remains), and not-being (when the givatman departs).

6. The Devas (speech, &c.) worshipped him (prana) as Bhuti or being and thus they became great beings. And therefore even now a man who sleeps, breathes like bhurbhuh.

7. The Asuras worshipped him as Abhuti or not-being, and thus they were defeated.

8. He who knows this, becomes great by himself, while the evil enemy who hates him, is defeated.

9. He (the breath) is death (when he departs,) immortality (while he abides).

10. And this has been said by a Rishi (Rv.1. I64. 38):-

11. 'Downwards and upwards he (the wind of the breath) goes, held by food; ' ---for this up-breathing, being held back by down-breathing, does not move forward (and leave the body altogether).

12. 'The immortal dwells with the mortal;' --for through him (the breath) all this dwells together, the bodies being clearly mortal, but this being (the breath), being immortal.

13. 'These two (body and breath) go for ever in different directions (the breath moving the senses of the body supporting the senses of the breath; the former going upwards to another world, the body dying and remaining on earth). They increase the one (the body), but they do not increase the other ' i e. they increase those bodies (by food), but this being (breath) is immortal.

I4. He who knows this becomes immotral in that world (having become united with hiranyagarbha), and is seen as immortal (in the sun by all beings, yea, by all beings.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ಪ್ರಥಮಾಧ್ಯಾಯೇ ಅಷ್ಟಮಃ ಖಂಡಃ

ಇತಿ ಬಹ್ವೃಚ ಬ್ರಾಹ್ಮಣಾರಣ್ಯಕ ಕಾಂಡೇ ದ್ವಿತೀಯಾರಣ್ಯಕೇ ಪ್ರಥಮೋಽಧ್ಯಾಯಃ ||
ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು ಸಮಾಪ್ತವು ||
ಎರಡನೆಯ ಅರಣ್ಯಕದಲ್ಲಿ ಮೊದಲನೆಯ ಅಧ್ಯಾಯವು ಸಮಾಪ್ತವಾದುದು

# ಅಥ ದ್ವಿತೀಯಾರಣ್ಯಕೇ ದ್ವಿತೀಯಾಧ್ಯಾಯೇ ಪ್ರಥಮಃ ಖಂಡಃ

## ಎರಡನೆಯ ಆರಣ್ಯಕದ ಎರಡನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

ಏಷ ಇಮಂ ಲೋಕ್ಯಮಭ್ಯಾರ್ಚತ್ಪುರುಷರೂಪೇಣ ಯ ಏಷ ತಪತಿ
ಪ್ರಾಣೋ ವಾವ ತದಭ್ಯಾರ್ಚತ್ಪ್ರಾಣೋ ಹ್ಯೇಷ ಯ ಏಷ ತಪತಿ ತಂ
ಶತಂ ವರ್ಷಾಣ್ಯಭ್ಯಾರ್ಚತ್ತಸ್ಮಾಚ್ಛತಂ ವರ್ಷಾಣಿ ಪುರುಷಾಯುಷೋ
ಭವಂತಿ ತಂ ಯಚ್ಛತಂ ವರ್ಷಾಣ್ಯಭ್ಯಾರ್ಚತ್ತಸ್ಮಾಚ್ಛತರ್ಚಿನಸ್ತಸ್ಮಾ-
ಚ್ಛತರ್ಚಿನ ಇತ್ಯಾಚಕ್ಷತ ಏತಮೇವ ಸಂತಮ್ ||

ಉಕ್ಥೇ ಧ್ಯಾತವ್ಯಸ್ಯ ಪ್ರಾಣಸ್ಯ ಪರಸ್ಪರವಿಲಕ್ಷಣಾ ಬಹವ ಉಪಾಸ್ಯಗುಣಾಃ ಪ್ರಥಮೇಽ-ಧ್ಯಾಯೇ ದರ್ಶಿತಾಃ । ದ್ವಿತೀಯೇ ತು ಪ್ರಥಮಮಂಡಲದ್ರಷ್ಟೃಮುನಿರೂಪತ್ವಾದಯೋ ಬಹವೋ ಗುಣಾ ವಕ್ತವ್ಯಾಃ । ತತ್ರೈಕಂ ಗುಣಂ ವಿಧತ್ತೇ—ಯ ಏಷ ಆದಿತ್ಯೋ ಮಂಡಲೇ ತಪತಿ ಸ ಏಷ ಪುರುಷರೂಪೇಣೋಪಾಸಕ ಜೀವರೂಪೇಣೇಮಂ ಲೋಕಮವಲೋಕ್ಯಮಾನಮಿಮಮುಪಾ ಸಕದೇಹಮಭ್ಯಾರ್ಚತ್ಸ್ವಪ್ರವೇಶೇನಾಭಿತೋಽರ್ಚನೀಯಮಕರೋತ್ । ಪುರುಷರೂಪಾಭಾವೇ ಹಿ ಶವರೂಪೋ ದೇಹೋಽಯಮಪೂಜ್ಯಃ ಸ್ಯಾತ್ । ನ ಚ ಪ್ರಸ್ತುತಂ ಪ್ರಾಣಂ ಪರಿತ್ಯಜ್ಯ ಕಿಮಿತ್ಯಾ-ದಿತ್ಯೋ ವರ್ಣ್ಯತ ಇತಿ ಶಂಕನೀಯಮ್ । ಯಸ್ಮಾದಾದಿತ್ಯರೂಪೇಣ ಪ್ರಾಣ ಏವ ತಚ್ಛರೀರಮ-ರ್ಚನಯೋಗ್ಯಮಕರೋತ್ । ಯ ಏಷ ಮಂಡಲಸ್ಥೋಽಸ್ಮಾಭಿರ್ದೃಶ್ಯಮಾನಸ್ತಪತಿ ಸ ಏಷ ಪ್ರಾಣೋ ಹಿ। ನ ಖಲ್ವಾದಿತ್ಯಪ್ರಾಣಯೋರ್ಭೇದೋಽಸ್ತಿ, ಅಧ್ಯಾತ್ಮಮಧಿದೈವಂ ಚೇತ್ಯೇವಂ ಸ್ಥಾನ-ಭೇದಮಾತ್ರಮ್ । ಅತ ಏವ— "ಆದಿತ್ಯೋ ಹ ವೈ ಬಾಹ್ಯಃ ಪ್ರಾಣ ಉದಯತ್ಯೇಷ ಹ್ಯೇನಂ ಚಾಕ್ಷುಷಂ ಪ್ರಾಣಮನುಗೃಹ್ಣೀಷೇ" (ಪ್ರಶ್ನೋ-೩-೮) ಇತಿ ಶ್ರುತ್ಯಂತರೇ ಪಠ್ಯತೇ । ಏಕ ಏವ ಪದಾರ್ಥೋ ದೇಹಂ ಪ್ರವರ್ತಯಿತು ಮಂತಃ ಸ್ಥಿತೋ ದೃಷ್ಟಿಮನುಗ್ರಹೀತುಂ ಬಹಿಃ ಸ್ಥಿತ ಇತ್ಯೇ-ತಾವದೇವ ದ್ವಯೋರ್ವೈಷಮ್ಯಮ್ । ಸ ಪ್ರಾಣಸ್ತಂ ಮನುಷ್ಯದೇಹಂ ಶತಸಂಖ್ಯಾಕಾನ್ಸಂವತ್ಸರಾ-ನ್ಪೂಜನೀಯಮಕರೋತ್ । ತಸ್ಮಾತ್ತತ್ಕಾರಣಾತ್ಪುರುಷಾಯುಷೋ ಮನುಷ್ಯಾಣಾಮಾಯೂಂಷಿ ಶತಸಂಖ್ಯಾಕಾಃ ಸಂವತ್ಸರಾಃ ಭವಂತಿ । ಯಸ್ಮಾದಯಂ ಪ್ರಾಣಸ್ತಂ ಮನುಷ್ಯದೇಹಂ ವರ್ಷಶತ-ಮರ್ಚಿತವಾಂಸ್ತಸ್ಮಾತ್ತಥೈವ ವ್ಯುತ್ಪತ್ತ್ಯಾ ಪ್ರಾಣಸ್ಯಾವತಾರಭೂತಾಃ ಪ್ರಥಮ ಮಂಡಲದ್ರಷ್ಟಾರೋ ಮುನಯಃ ಶತರ್ಚಿಸಂಜ್ಞಕಾಃ ಸಂಪನ್ನಾಃ । ಯಸ್ಮಾತ್ಪ್ರಾಣನಿಷ್ಪಾದಿತಾರ್ಚನೀಯಮಶಾಚ್ಛತರ್ಚಿ-ನಾಮಕಾ ಮುನಯಸ್ತಸ್ಮಾತ್ತದುಪಾಸಕಾ ಏತಮೇವ ಪ್ರಾಣರೂಪಂ ಸಂತಂ ಶತರ್ಚಿನಾಮಕಾ ಮುನಯ ಇತ್ಯಾಚಕ್ಷತೇ । ಪ್ರಾಣಸ್ಯ ತನ್ಮುನಿರೂಪತ್ವಂ ಧ್ಯಾಯೇದಿತ್ಯರ್ಥಃ ।

ಮೊದಲನೆಯ ಅಧ್ಯಾಯದಲ್ಲಿ ಉಕ್ಥದಲ್ಲಿ ಧ್ಯಾನಿಸಬೇಕಾದ ಪ್ರಾಣನ ಪರಸ್ಪರವಿಲಕ್ಷಣಗಳಾದ ನಾನಾ ಉಪಾಸ್ಯ ಗುಣಗಳನ್ನು ಹೇಳಿದ್ದಾಯಿತು. ಈಗ ಪ್ರಥಮಮಂಡಲದಲ್ಲಿ ಹೇಳಿದ ಮಂತ್ರಗಳನ್ನು ಕಂಡುಹಿಡಿದ (ದ್ರಷ್ಟೃ) ಮುನಿ ರೂಪತ್ವಾದಿ ನಾನಾಗುಣಗಳನ್ನು ವಿವರಿಸುತ್ತಾರೆ. ಅವುಗಳಲ್ಲಿ ಮೊದಲನೆಯ (ಮುನಿರೂಪ) ಒಂದು ಗುಣವನ್ನು ವಿವರಿಸುತ್ತಾರೆ. ಸೂರ್ಯಮಂಡಲದಲ್ಲಿ ಪ್ರಕಾಶಿಸುತ್ತಿರುವ ಆದಿತ್ಯನು ಉಪಾಸಕನ ಜೀವರೂಪದಿಂದ ಒಳಗೆ ಪ್ರವೇಶಿಸಿ ತೋರುತ್ತಿರುವ ಅವನಸ್ಥೂಲದೇಹವನ್ನು ಪೂಜ್ಯವನ್ನಾಗಿಮಾಡಿದನು. ಪುರುಷರೂಪವಿಲ್ಲದಿದ್ದರೆ ಅಂದರೆ ಜೀವರೂಪದಿಂದ ದೇಹದಲ್ಲಿ ಪ್ರವೇಶವಿಲ್ಲದಿದ್ದರೆ ಅದು ಶವವಾಗಿ ಅಪೂಜ್ಯವಾಗುತ್ತಿತ್ತು. ಪ್ರಕೃತ ಪ್ರಾಣದೇವನನ್ನು ಬಿಟ್ಟು ಆದಿತ್ಯನನ್ನು ವರ್ಣಿಸಲು ಆರಂಭಿಸಿರುವುದು ತಪ್ಪಲ್ಲವೇ ಎಂದು ಶಂಕಿಸಬಾರದು. ಆದಿತ್ಯರೂಪದಿಂದ ಪ್ರಾಣನೇ ಉಪಾಸಕನ ಶರೀರ ವನ್ನು ಪೂಜಾಯೋಗ್ಯವನ್ನಾಗಿ ಮಾಡಿರುತ್ತಾನೆ. ಮಂಡಲಮಧ್ಯದಲ್ಲಿದ್ದು ಜ್ವಲಿಸುವವನು ಪ್ರಾಣದೇವನೇ ಅಲ್ಲದೆ ಬೇರೆದೇವತೆಯಲ್ಲ. ಅಧ್ಯಾತ್ಮ, ಅಧಿದೈವರೂಪದಿಂದ ಸ್ಥಾನಭೇದಮಾತ್ರ ಇರುವುದಲ್ಲದೆ ಪ್ರಾಣ ಆದಿತ್ಯರಿಗೆ ಇನ್ನಾವ ಭೇದವೂ ಇರುವುದಿಲ್ಲ. ಈ ವಿಷಯ "ಆದಿತ್ಯೋ ಹ ವೈ ಬಾಹ್ಯಃ ಪ್ರಾಣಃ"- (ಪ್ರ-೩-೩-೮) ಎಂದು ಶ್ರುತ್ಯಂತರ ದಲ್ಲಿಯೂ ಹೇಳಿದೆ. ಒಂದೇ ಪದಾರ್ಥವು ದೇಹವನ್ನು ನಡೆಸಲು ಒಳಗೆ ಇದ್ದು, ದೃಷ್ಟಿಯನ್ನನುಗ್ರಹಿಸಲು ಹೊರಗೂ ಇರುತ್ತದೆ. ಈ ಆದಿತ್ಯಾಭಿನ್ನಪ್ರಾಣನು ಉಪಾಸಕನ ದೇಹವನ್ನು ನೂರುವರ್ಷಗಳವರೆಗೆ ಪೂಜ್ಯವನ್ನಾಗಿ ಮಾಡಿದನು. ಆದುದರಿಂದಲೇ ಪುರುಷನ ಆಯುಸ್ಸು ನೂರುವರ್ಷವೆಂದು ಪ್ರಸಿದ್ಧವಾಗಿದೆ. ಯಾವಕಾರಣದಿಂದ ಪ್ರಾಣನು ಮನುಷ್ಯ ದೇಹವನ್ನು ನೂರುವರ್ಷ ಅರ್ಚಿತ (ಪೂಜ್ಯ) ವನ್ನಾಗಿಮಾಡಿದನೋ ಅದೇ ವ್ಯುತ್ಪತ್ತಿಯಿಂದ ಪ್ರಾಣನ ಅವತಾರರೂಪ ರಾದ, ಪ್ರಥಮಮಂಡಲವನ್ನು ಕಂಡುಹಿಡಿದ ಮುನಿಗಳು ಶತರ್ಚಿಎಂಬ ಸಂಜ್ಞೆಯನ್ನು ಹೊಂದಿದರು. ಪ್ರಾಣನ ಶತಾರ್ಚ ನವ್ಯಾಪಾರದಿಂದ ಶತರ್ಚಿಗಳೆಂಬ ಮುನಿಗಳಾದುದರಿಂದ ಉಪಾಸಕರು ಈ ಪ್ರಾಣದೇವನನ್ನು ಶತರ್ಚಿಗಳೆಂಬ ಮುನಿ ಗಳೆಂದು ಕರೆಯುತ್ತಾರೆ. ಆ ಮುನಿರೂಪದಿಂದ ಪ್ರಾಣನನ್ನು ಧ್ಯಾನಿಸಬೇಕೆಂದರ್ಥ.

**ಸ ಇದಂ ಸರ್ವಂ ಮಧ್ಯತೋ ದಧೇ ಯದಿದಂ ಕಿಂಚ ಸ ಯದಿದಂ**
**ಸರ್ವಂ ಮಧ್ಯತೋ ದಧೇ ಯದಿದಂ ಕಿಂಚ ತಸ್ಮಾನ್ಮಧ್ಯಮಾಸ್ತಸ್ಮಾ-**
**ನ್ಮಾಧ್ಯಮಾ ಇತ್ಯಾಚಕ್ಷತ ಏತಮೇವ ಸಂತಮ್॥**

ದ್ವಿತೀಯ ಗುಣಂ ವಿಧತ್ತೇ—ಪ್ರಾಣದೇವೋ ಯತ್ಕಿಂಚಿದ್ದೇಹಜಾತಮಸ್ತಿ ತದಿದಂ ಸರ್ವಂ ಸ್ವಯಂ ಮಧ್ಯತೋಽವಸ್ಥಾಯ ಧಾರಿತವಾಂಸ್ತಸ್ಮಾತ್ಪ್ರಾಣಾವತಾರವಿಶೇಷಾಃ ಕೇಚಿದೃಷಯೋ ಮಾಧ್ಯಮನಾಮಕಾಃ ಸಂಪನ್ನಾಃ। ತದ್ರೂಪತ್ವಂ ಪ್ರಾಣಸ್ಯ ಧ್ಯಾಯೇತ್ ॥

ದ್ವಿತೀಯಗುಣವನ್ನು ವಿವರಿಸುತ್ತಾರೆ. ಪ್ರಾಣದೇವನು ಲೋಕದಲ್ಲಿ ಯಾವಯಾವ ಶರೀರ ಜಾತಿ (ಸಮುದಾಯ) ವಿದೆಯೋ ಅವುಗಳ ಮಧ್ಯದಲ್ಲಿದ್ದು ಅವುಗಳನ್ನು ಧರಿಸುತ್ತಾನೆ. ಇದರಿಂದಲೇ ಪ್ರಾಣನ ಅವತಾರವಿಶೇಷಗಳಾದ ಕೆಲವು ಮುನಿಗಳು ಮಾಧ್ಯಮ ಎಂಬ ಹೆಸರನ್ನು ಹೊಂದಿದರು. ಮಾಧ್ಯಮ ಋಷಿರೂಪದಿಂದ ಪ್ರಾಣೋಪಾಸನೆ ಮಾಡಬೇಕೆಂದು ತಾತ್ಪರ್ಯ.

ಪ್ರಾಣೋ ವೈ ಗೃತ್ಸೋಽಪಾನೋ ಮದಃ ಸ ಯತ್ಪ್ರಾಣೋ ಗೃತ್ಸೋಽಪಾನೋ ಮದಸ್ತಸ್ಮಾದ್ಗೃತ್ಸಮದಸ್ತಸ್ಮಾದ್ಗೃತ್ಸಮದ ಇತ್ಯಾಚಕ್ಷತ ಏತಮೇವ ಸಂತಮ್ ॥

**ತೃತೀಯಂ ಗುಣಂ ವಿಧತ್ತೇ—ಯಃ ಪ್ರಾಣೋಽಸ್ತಿ ಸ ಏವ ಸ್ವಾಪಕಾಲೇ ವಾಗಾದೀನಾಂ ನಿಗರಣಾದ್ಗೃತ್ಸ ಇತ್ಯುಚ್ಯತೇ। ಅಪಾನಶ್ಚ ರೇತೋವಿಸರ್ಗಕಾರಕಮದ ಹೇತುತ್ವಾನ್ಮದ ಇತ್ಯುಚ್ಯತೇ॥ ತದುಭಯಾವತಾರೋ ಮುನಿರ್ಗೃತ್ಸಮದನಾಮಕಃ ॥**

ಮೂರನೆಯ ಗುಣವನ್ನು ವಿವರಿಸುತ್ತಾರೆ. ಪ್ರಾಣನು ಮಲಗಿದ ಸಮಯದಲ್ಲಿ ವಾಗಾದೀಂದ್ರಿಯಗಳನ್ನು ನುಂಗುವುದರಿಂದ (ತನ್ನಅಧೀನಮಾಡಿಕೊಂಡು) ಗೃತ್ಸ ಎಂದು ಹೇಳಲ್ಪಡುತ್ತಾನೆ. ಅಪಾನವಾಯುವು ರೇತಸ್ಖಲನೆಯನ್ನುಂಟುಮಾಡುವ ಮದಕ್ಕೆ ಕಾರಣನಾದುದರಿಂದ ಮದ ಎಂದು ಹೇಳಲ್ಪಡುತ್ತದೆ. ಇವರೆಡರ ಅವತಾರರೂಪದಿಂದ ಉಂಟಾದ ಮುನಿಗಳು ಗೃತ್ಸಮದ ನಾಮದಿಂದ ಪ್ರಸಿದ್ಧರಾದರು.

ತಸ್ಯೇದಂ ವಿಶ್ವಂ ಮಿತ್ರಮಾಸೀದ್ಯದಿದಂ ಕಿಂಚ ತದ್ಯದಸ್ಯೇದಂ ವಿಶ್ವಂ ಮಿತ್ರಮಾಸೀದ್ಯದಿದಂ ಕಿಂಚ ತಸ್ಮಾದ್ವಿಶ್ವಾಮಿತ್ರಸ್ತಸ್ಮಾದ್ವಿಶ್ವಾಮಿತ್ರ ಇತ್ಯಾಚಕ್ಷತ ಏತಮೇವ ಸಂತಮ್ ॥

**ಚತುರ್ಥಂ ಗುಣಂ ವಿಧತ್ತೇ—ತಸ್ಯ ಪ್ರಾಣದೇವಸ್ಯ ಭೋಕ್ತುರಿದಂ ವಿಶ್ವಂ ಭೋಗ್ಯತ್ವೇನ ಮಿತ್ರಮಾಸೀತ್ ॥**

ನಾಲ್ಕನೆಯ ಗುಣವನ್ನು ವಿವರಿಸುತ್ತಾರೆ. ಪ್ರಾಣದೇವನು ಭೋಕ್ತೃಅಂದರೆ ಭೋಗಿಸುವವನಾದುದರಿಂದ ಭೋಗ್ಯಜಾತವಾದ ಈ ಸಕಲ ವಿಶ್ವವೂ (ಜಗತ್ತು) ಮಿತ್ರಆಯಿತು. ಆದುದರಿಂದ ಇವನ ಅವತಾರವಾದ ಋಷಿಯೂ ಕೂಡಾ ವಿಶ್ವಾಮಿತ್ರ ಎಂಬ ಸಂಜ್ಞೆಯನ್ನು ಹೊಂದಿದನು. ವಿಶ್ವಾಮಿತ್ರರೂಪದಿಂದ ಪ್ರಾಣಧ್ಯಾನಮಾಡಬೇಕೆಂದು ತಾತ್ಪರ್ಯ.

ತಂ ದೇವಾ ಅಬ್ರುವನ್ನಯಂ ವೈ ನಃ ಸರ್ವೇಷಾಂ ವಾಮ ಇತಿ ತಂ ಯದ್ದೇವಾ ಅಬ್ರುವನ್ನಯಂ ವೈ ನಃ ಸರ್ವೇಷಾಂ ವಾಮ ಇತಿ ತಸ್ಮಾದ್ವಾಮದೇವಸ್ತಸ್ಮಾದ್ವಾಮದೇವ ಇತ್ಯಾಚಕ್ಷತ ಏತಮೇವ ಸಂತಮ್ ॥

**ಪಂಚಮಂ ವಿಧತ್ತೇ—ವಾಗಾದಯೋ ದೇವಾಃ ಸರ್ವೇ ತಂ ಪ್ರಾಣಮುದ್ದಿಶ್ಯ ಪರಸ್ಪರಮಬ್ರುವನ್ । ಅಯಂ ವೈ ಪ್ರಾಣ ಏವ ನೋಽಸ್ಮಾಕಂ ಸರ್ವೇಷಾಂ ಮಧ್ಯೇ ವಾಮೋ ವನನೀಯೋ ಭಜನೀಯ ಇತಿ । ದೇವೇಷು ಮಧ್ಯೇ ವಾಮ ಇತಿ ವ್ಯುತ್ಪತ್ತ್ಯಾ ವಾಮದೇವ ನಾಮ ಸಂಪನ್ನಮ್ ॥**

ಐದನೆಯ ಗುಣವನ್ನು ವಿವರಿಸುತ್ತಾರೆ. ವಾಗಾದಿ ದೇವತೆಗಳೆಲ್ಲಾ ಸೇರಿ ಆಪ್ರಾಣನನ್ನು ಕುರಿತು ಹೀಗೆ ಹೇಳಿದವು. ನಮ್ಮೆಲ್ಲರಮಧ್ಯದಲ್ಲಿ ಪ್ರಾಣನಾದ ನೀನೇ ವಾಮ ಅಂದರೆ ಸೇವಿಸಲು ಯೋಗ್ಯನಾಗಿರುವಿ. ದೇವತೆಗಳ ಮಧ್ಯದಲ್ಲಿ ವಾಮನಾದುದರಿಂದಲೇ ಅವತಾರರೂಪನಾದ ಋಷಿಯೂ ವಾಮದೇವನೆಂದು ಪ್ರಸಿದ್ಧನಾದನು.

**ಸ ಇದಂ ಸರ್ವಂ ಪಾಪ್ಮನೋಽತ್ರಾಯತ ಯದಿದಂ ಕಿಂಚ ಸ ಯದಿದಂ ಸರ್ವಂ ಪಾಪ್ಮನೋಽತ್ರಾಯತ ಯದಿದಂ ಕಿಂಚ ತಸ್ಮಾದತ್ರಯಸ್ತ-ಸ್ಮಾದತ್ರಯ ಇತ್ಯಾಚಕ್ಷತ ಏತಮೇವ ಸಂತಮ್ ||**

ಷಷ್ಠಂ ವಿಧತ್ತೇ—ಯತ್ಕಿಂಚಿದಿದಂ ಮನುಷ್ಯಜಾತಮಸ್ತಿ ತತ್ಸರ್ವಂ ಸ ಪ್ರಾಣಃ ಪಾಪ್ಮನಃ ಸಕಾಶಾದತ್ರಾಯತ ರಕ್ಷಿತವಾನ್ । ತಸ್ಮಾದತ್ರಾಯತೇತ್ಯತ್ರಿರಿತಿ ನಿರ್ವಚನಂ ಸಂಪನ್ನಮ್ ||

ಆರನೆಯ ಗುಣವನ್ನು ವಿವರಿಸುತ್ತಾರೆ. ಈ ಪ್ರಾಣದೇವನು ಸಕಲ ಮನುಷ್ಯರನ್ನೂ ಪಾಪಕಾರ್ಯದಿಂದ ರಕ್ಷಿಸುತ್ತಾನೆ. (ಅತ್ರಾಯತ) ತ್ರೈಧಾತುವಿಗೆ ರಕ್ಷಣೆ ಅರ್ಥ. ಆದುದರಿಂದ ಪ್ರಾಣನ ಅವತಾರರೂಪನಾದ ಮಹರ್ಷಿಯು ಅತ್ರಿ ಎಂಬ ನಾಮಧೇಯವನ್ನು ಹೊಂದಿದನು. ಅತ್ರಿಮುನಿರೂಪದಿಂದ ಪ್ರಾಣನನ್ನು ಧ್ಯಾನಿಸಬೇಕೆಂದರ್ಥ.

———

*English Translation*

———

1. He (the sun), who shines, honoured this world (the body of the worshipper, by entering into it), in the form of man (the worshipper who meditates on breath). For he who shines (the sun) is (the same as) the breath. He honoured this (body of the worshipper) during a hundred years, therefore there are a hundred years in the life of a man. Because he honoured him during a hundred years, therefore there are (the poets of the first Mandala of the Rig-veda, called) the Satarkin, (having honour for a hundred years). Therefore people call him who is really prana (breath), the Satarkin poets.

2. He (breath) placed himself in the midst of all whatsoever exists. Because he placed himself in the midst of all whatsoever exists. therefore there are (the poets of the second to the ninth Mandala of the Rig-veda, called) the Madhyamas. Therefore people call him who is really Prana (breath), the Madhyama poets.

3. He as up-breathing is the swallower (gritsa), as down-breathing he is delight (mada). Because as up-breathing he is swallower (gritsa) and as down-breathing delight (mada), therefore there is (the poet of the second Mandala of the Rig-veda, called) Gritsamada. Therefore people call him who is really prana (breath), Gritsamada.

4. Of him (breath) all this whatsoever was a friend. Because of him all (visvam) this whatsoever was a friend (mitram), therefore there is (the poet of the third Mandala of the Rig-veda, called) Visvamitra. Therefore people call him who is really Prana (breath), Visvamitra.

5. The Devas (speech, & c.) said to him (the breath) : ' He is to be loved by all of us. ' Because the Devas said of him, that he was to be loved (vama) by all of them, therefore there is (the poet of the fourth Mandala of the Rig-veda, called) Vamadeva. Therefore people call him who is really Prana (breath), Vamadeva.

6. He (breath) guarded all this whatsoever from evil. Because he guarded (atrayata) all this whatsoever from evil, therefore there are (the poets of the fifth Mandala of the Rig-veda, called) Atrayah. Therefore people call him who is really Prana (breath), Atrayah.

ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ದ್ವಿತೀಯಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಎರಡನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು ॥

---

# ಅಥ ದ್ವಿತೀಯಾರಣ್ಯಕೇ ದ್ವಿತೀಯಾಧ್ಯಾಯೇ ದ್ವಿತೀಯಃ ಖಂಡಃ

## ಎರಡನೆಯ ಆರಣ್ಯಕದ ಎರಡನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

ಏಷ ಉ ಏವ ಬಿಭ್ರದ್ವಾಜಃ ಪ್ರಜಾ ವೈ ವಾಜಸ್ತಾ ಏಷ ಬಿಭರ್ತಿ ಯದ್ಬಿಭರ್ತಿ ತಸ್ಮಾದ್ಭರದ್ವಾಜಸ್ತಸ್ಮಾದ್ಭರದ್ವಾಜ ಇತ್ಯಾಚಕ್ಷತ ಏತ-ಮೇವ ಸಂತಮ್ ‖

ಪೂರ್ವತ್ರ ಶತರ್ಚಿಪ್ರಭೃತಿ ಮುನಿಸ್ವರೂಪಲಕ್ಷಣಾಃ ಷಡ್ಗುಣಾ ಅಭಿಹಿತಾಃ, ಅಥ ಭರ-ದ್ವಾಜ ಸ್ವರೂಪತ್ವಾದಯೋ ದಶ ಗುಣಾ ಉಚ್ಯಂತೇ । ತತ್ರ ಪ್ರಥಮಂ ಗುಣಂ ವಿಧತ್ತೇ—ಯಃ ಪ್ರಾಣೋಽಸ್ತಿ ಸ ಏಷ ಏವ ಬಿಭ್ರದ್ವಾಜನಾಮಕಃ । ವಜಿಧಾತುರ್ಗತ್ಯರ್ಥಃ । ಗತಿಮತ್ತ್ವಾ-ತ್ಪ್ರಜಾನಾಂ ದೇಹೋ ವಾಜಶಬ್ದೇನೋಚ್ಯತೇ । ಅಥವಾ ಶ್ರುತಾ—"ಅನ್ನಂ ವೈ ವಾಜಃ" ಇತ್ಯು-ಕ್ತೇರನ್ನಸಂಬಂಧಾದ್ವಾಜ ಶಬ್ದೇನ ಪ್ರಜಾ ವಿವಕ್ಷಿತಾಃ । ತಂ ಪ್ರಜಾರೂಪಂ ವಾಜಮೇಷ ಪ್ರಾಣಃ ಸ್ವ ಪ್ರವೇಶೇನ ಬಿಭರ್ತಿ ಪೋಷಯತೀತಿ ಬಿಭ್ರದ್ವಾಜಃ । ಪ್ರಜಾ ವೈ ವಾಜ ಇತ್ಯಾದಿನಾ ಭರದ್ವಾಜ-ನಾಮನಿರ್ವಚನಮುಕ್ತಮ್ ‖

ಪೂರ್ವಖಂಡದಲ್ಲಿ ಶತರ್ಚಿಮುಂತಾದ ಮುನಿಸ್ವರೂಪಗಳಾದ ಆರುಗುಣಗಳು ಹೇಳಿವೆ. ಈಗ ಭರದ್ವಾಜ ಸ್ವರೂಪತ್ವಾದಿ ಹತ್ತುಗುಣಗಳನ್ನು ವಿವರಿಸುತ್ತಾರೆ, ಅವುಗಳಲ್ಲಿ ಮೊದಲನೆಯಗುಣವನ್ನು ವಿವರಿಸುತ್ತಾರೆ. ಪ್ರಾಣನಿಗೆ **ಬಿಭ್ರದ್ವಾಜ** ಎಂದು ಹೆಸರು. ವಜಧಾತುವಿಗೆ ಗತ್ಯರ್ಥ(ವಜ–ಗತೌ)ವಿದೆ. ಗತಿ(ಚಲನೆ) ವಿಶಿಷ್ಟವಾದುದರಿಂದ ಪ್ರಜೆಗಳ ದೇಹಕ್ಕೆ **ವಾಜ** ಎಂದು ಹೆಸರು ಅಥವಾ "ಅನ್ನಂ ವೈ ವಾಜಃ" ಎಂದು ಶ್ರುತಿ ಇರುವುದರಿಂದ ಅನ್ನಸಂಬಂಧದಿಂದ ವಾಜ ಅಂದರೆ ಪ್ರಜೆಗಳೆಂದರ್ಥ. ಈ ಪ್ರಜಾರೂಪವಾಜರನ್ನು ಪ್ರಾಣವಾಯುವು ಪ್ರವೇಶಿಸುವುದರಮೂಲಕ ಧರಿಸುವುದರಿಂದ ಬಿಭ್ರದ್ವಾಜನಾಗುತ್ತಾನೆ. ಇದರಿಂದ ಇವನ ಅವತಾರರೂಪಮುನಿಯು ಭರದ್ವಾಜನೆಂದು ಪ್ರಸಿದ್ಧನಾದನು.

ತಂ ದೇವಾ ಅಬ್ರುವನ್ನಯಂ ವೈ ನಃ ಸರ್ವೇಷಾಂ ವಸಿಷ್ಠ ಇತಿ ತಂ ಯದ್ದೇವಾ ಅಬ್ರುವನ್ನಯಂ ವೈ ನಃ ಸರ್ವೇಷಾಂ ವಸಿಷ್ಠ ಇತಿ ತಸ್ಮಾದ್ವಸಿಷ್ಠಸ್ತಸ್ಮಾದ್ವಸಿಷ್ಠ ಇತ್ಯಾಚಕ್ಷತ ಏತಮೇವ ಸಂತಮ್ ‖

ದ್ವಿತೀಯಂ ಗುಣಂ ವಿಧತ್ತೇ–ಅಯಮೇವ ಪ್ರಾಣೋಽಸ್ಮಾಕಂ ಸರ್ವೇಷಾಂ ಸ್ವಪ್ರವೇಶೇ-ನಾತ್ಯಂತಂ ನಿವಾಸಹೇತುಃ ಸನ್ವಸಿಷ್ಠ ಇತಿ ಚ ದೇವಾ ಅಬ್ರುವನ್ ‖

ಎರಡನೆಯಗುಣವನ್ನು ವಿವರಿಸುತ್ತಾರೆ. ವಾಗಾದಿದೇವತೆಗಳು ಈ ಪ್ರಾಣನನ್ನು ಕುರಿತು ' ನೀನೇ ಸ್ವಪ್ರವೇಶದ ಮೂಲಕ ನಮ್ಮೆಲ್ಲರ ನಿವಾಸಕ್ಕೆ ಕಾರಣನಾದುದರಿಂದ ವಸಿಷ್ಠನಾಗಿರುವಿ ' ಎಂದು ಹೇಳಿದರು. ಇದರಿಂದ ಇವನ ಅವತಾರರೂಪನಾದ ಮುನಿಯೂ ವಸಿಷ್ಠನಾಮದಿಂದ ಪ್ರಸಿದ್ಧನಾದನು.

**ಸ ಇದಂ ಸರ್ವಮಭಿಪ್ರಾಗಾದ್ಯದಿದಂ ಕಿಂಚ ಸ ಯದಿದಂ ಸರ್ವಮಭಿ-ಪ್ರಾಗಾದ್ಯದಿದಂ ಕಿಂಚ ತಸ್ಮಾತ್ಪ್ರಗಾಥಾಸ್ತಸ್ಮಾತ್ಪ್ರಗಾಥಾ ಇತ್ಯಾ-ಚಕ್ಷತ ಏತಮೇವ ಸಂತಮ್ ||**

ತೃತೀಯಂ ವಿಧತ್ತೇ— ಸ ಪ್ರಾಣ ಇದಂ ಸರ್ವಂ ಶರೀರಜಾತಂ ಸ್ವಾನುಪ್ರವೇಶೇನಾಭಿ-ಪ್ರಾಗತ್ಸರ್ವತಃ ಪ್ರಗತವಾಂಸ್ತಸ್ಮಾತ್ಪ್ರಾಣದೇವತಾಯಾ ಮೂರ್ತಿವಿಶೇಷ ಪ್ರತಿಪಾದಕಾ ಋಗ್ದ್ವ-ಯಾತ್ಮಕ ಸೂಕ್ತರೂಪಾ ಮಂತ್ರವಿಶೇಷಾಃ ಪ್ರಗಾಥಾ ಇತ್ಯುಚ್ಯಂತೇ । ತನ್ಮಂತ್ರದ್ರಷ್ಟಾರೋ ಮಹರ್ಷಯೋಽಪಿ ಪ್ರಗಾಥನಾಮಕಾಃ ||

ಮೂರನೆಯಗುಣವನ್ನು ವಿವರಿಸುತ್ತಾರೆ. ಪ್ರಾಣದೇವನು ಸಕಲಶರೀರಗಳನ್ನು ಪ್ರವೇಶಿಸಿ ಎಲ್ಲಾಕಡೆಯಲ್ಲಿಯೂ ವ್ಯಾಪಿಸಿರುವುದರಿಂದ ಈ ಪ್ರಾಣದೇವತೆಯಮೂರ್ತಿವಿಶೇಷವನ್ನು ಪ್ರತಿಪಾದಿಸುವ ಎರಡು ಋಕ್ಕುಗಳಿಂದ ಕೂಡಿದಸೂಕ್ತಗಳ ಮಂತ್ರವಿಶೇಷಕ್ಕೆ ಪ್ರಗಾಥಗಳೆಂದು ಹೆಸರು. ಈ ಮಂತ್ರಗಳನ್ನು ಕಂಡುಹಿಡಿದ ಮಹರ್ಷಿಗಳಿಗೂ ಪ್ರಗಾಥರೆಂದು ಹೆಸರು ಪ್ರಸಿದ್ಧವಾಯಿತು.

**ಸ ಇದಂ ಸರ್ವಮಭ್ಯಪವಯುತ ಯದಿದಂ ಕಿಂಚ ಸ ಯದಿದಂ ಸರ್ವ-ಮಭ್ಯಪವಯುತ ಯದಿದಂ ಕಿಂಚ ತಸ್ಮಾತ್ಪಾವಮಾನ್ಯಸ್ತಸ್ಮಾತ್ಪಾವ-ಮಾನ್ಯ ಇತ್ಯಾಚಕ್ಷತ ಏತಮೇವ ಸಂತಮ್ ||**

ಚತುರ್ಥಂ ವಿಧತ್ತೇ—ಲೋಕೇ ಕ್ಷುದ್ರಂ ಯತ್ಕಿಂಚಿದಸ್ತಿ ತತ್ಸರ್ವಂ ಪ್ರಾಣೋಽಭ್ಯಪವ-ಯತಾಭಿತಃ ಪೂತಂ ಶುದ್ಧಮಕರೋತ್ತತಸ್ತನ್ಮೂರ್ತಿ ವಿಶೇಷಪ್ರತಿಪಾದಿಕಾ ಋಚಸ್ತದ್ದ್ರಷ್ಟಾರೋ-ಮಹರ್ಷಯಶ್ಚ ಪಾವಮಾನ್ಯ ಇತ್ಯುಚ್ಯಂತೇ ||

ನಾಲ್ಕನೇಗುಣವನ್ನು ವಿವರಿಸುತ್ತಾರೆ. ಲೋಕದಲ್ಲಿ ಅತಿಕ್ಷುದ್ರವಾದ ವಸ್ತುವೇನಿದೆಯೋ ಅವೆಲ್ಲವನ್ನೂ ಪ್ರಾಣ ವಾಯುವು ಸರ್ವಾಂಶದಿಂದ ಪವಿತ್ರವನ್ನಾಗಿ ಮಾಡಿದನು. ಆದುದರಿಂದ ಆಪ್ರಾಣಸ್ವರೂಪವಿಶೇಷಪ್ರತಿಪಾದಕಗಳಾದ ಋಕ್ಕುಗಳಿಗೂ ಅದನ್ನು ಕಂಡುಹಿಡಿದ ಮಹರ್ಷಿಗಳಿಗೂ ಪಾವಮಾನ್ಯ ಎಂದು ಹೆಸರಾಯಿತು.

**ಸೋಽಬ್ರವೀದಹಮಿದಂ ಸರ್ವಮಸಾನಿ ಯಚ್ಚ ಕ್ಷುದ್ರಂ ಯಚ್ಚ ಮಹದಿತಿ ತೇ ಕ್ಷುದ್ರಸೂಕ್ತಾಶ್ಚಾಭವನ್ಮಹಾಸೂಕ್ತಾಶ್ಚ ತಸ್ಮಾತ್-ಕ್ಷುದ್ರಸೂಕ್ತಾಸ್ತಸ್ಮಾತ್ ಕ್ಷುದ್ರಸೂಕ್ತಾ ಇತ್ಯಾಚಕ್ಷತ ಏತಮೇವ ಸಂತಮ್ ||**

ಪಂಚಮಂ ವಿಧತ್ತೇ—ಲೋಕೇ ಕ್ಷುದ್ರಂ ಪಿಪೀಲಿಕಾದಿರೂಪಂ ಯದಸ್ತಿ ಮಹಚ್ಚ ಗಜಾ-ಶ್ವಾದಿರೂಪಂ ಯದಸ್ತಿ ತತ್ಸರ್ವಮಹಮೇವ ಭವಾನೀತ್ಯೇವಂ ಸ ಪ್ರಾಣದೇವಃ ಕದಾಚಿದಬ್ರವೀದ-ತಸ್ತತ್ಪ್ರಾಣಪ್ರತಿಪಾದಕಸಂಘಾಃ ಕ್ಷುದ್ರಸೂಕ್ತಮಹಾಸೂಕ್ತನಾಮಾನೋಽಭವನ್-- "ಜಾತವೇದಸೇ" (ಋ. ಸ. ಮಂ-೧-ಸೂ-೯೯-ಋ-೧) ಇತಿ ಸೂಕ್ತಮೇಕರ್ಚತ್ವಾತ್ ಕ್ಷುದ್ರಸೂಕ್ತರೂಪಮ್ । "ಅಸ್ಯ ವಾಮಸ್ಯ" (ಋ. ಸಂ. ಮಂ-೧-ಸೂ-೧೬೪-ಋ-೧) ಇತ್ಯೇತತ್ಸೂಕ್ತಂ ದ್ವಿಪಂಚಾಶದೃಚ-ತ್ವಾನ್ಮಹಾಸೂಕ್ತಮ್ । ಏವಮುದಾಹರಣಾಂತರಾಣಿ ದ್ರಷ್ಟವ್ಯಾನಿ । ತತ್ತತ್ಸೂಕ್ತದ್ರಷ್ಟಾರೋ ಮಹ-ರ್ಷಯಶ್ಚ ಕ್ಷುದ್ರಸೂಕ್ತ ಮಹಾಸೂಕ್ತನಾಮಭ್ಯಾಮುಚ್ಯಂತೇ। ತಸ್ಮಾತ್ ಕ್ಷುದ್ರಸೂಕ್ತಾ ಇತಿ ವಾಕ್ಯಂ ಮಹಾಸೂಕ್ತಾನಾಮಪ್ಯುಪಲಕ್ಷಣಮ್ ॥

ಐದನೆಯ ಗುಣವನ್ನು ವಿವರಿಸುತ್ತಾರೆ. ಲೋಕದಲ್ಲಿ ಕ್ಷುದ್ರವಾದ ಇರುವೆಮುಂತಾದವುಗಳೂ, ಮಹತ್ತಾದ (ದೊಡ್ಡ)ಆನೆಕುದುರೆ ಮುಂತಾದವುಗಳೆಲ್ಲವೂ ನಾನೇ ಆಗಿರುವೆನೆಂದು ಒಂದು ಸಮಯ ಈ ಪ್ರಾಣದೇವನು ಹೇಳಿದನು. ಈ ರೀತಿ ಹೇಳಿದ ಪ್ರಾಣನನ್ನು ಪ್ರತಿಪಾದಿಸುವ ಮಂತ್ರಸಮುದಾಯವು ಕ್ಷುದ್ರಸೂಕ್ತ, ಮಹಾಸೂಕ್ತ ಎಂದಾಯಿತು. 'ಜಾತವೇದಸೇ-' (ಋ.ಸಂ-೧-೯೯-೧) ಎಂಬ ಸೂಕ್ತವು ಒಂದೇ ಋಕ್ಕಿನಿಂದ ಕೂಡಿರುವುದರಿಂದ ಕ್ಷುದ್ರಸೂಕ್ತವಾಗಿವೆ, "ಅಸ್ಯ ವಾಮಸ್ಯ" (ಋ.ಸಂ-೧-೧೬೪-೧) ಎಂಬಸೂಕ್ತವು ಐವತ್ತೆರಡುಋಕ್ಕುಗಳಿಂದ ಕೂಡಿರುವುದರಿಂದ ಮಹಾ ಸೂಕ್ತವಾಗಿದೆ. ಹೀಗೆಯೇ ಇತರ ಉದಾಹರಣೆಗಳನ್ನು ತಿಳಿಯಬೇಕು. ಈ ಸೂಕ್ತಗಳನ್ನು ಕಂಡುಹಿಡಿದ ಋಷಿಗಳೂ ಕ್ಷುದ್ರಸೂಕ್ತ, ಮಹಾಸೂಕ್ತ ಹೆಸರಿನಿಂದ ಕರೆಯಲ್ಪಡುತ್ತಾರೆ. ಕ್ಷುದ್ರಸೂಕ್ತದಿಂದ ಮಹಾಸೂಕ್ತವನ್ನೂ ಉಪಲಕ್ಷಣದಿಂದ ತಿಳಿಯಬೇಕು.

ಸೂಕ್ತಂ ಬತಾವೋಚತೇತಿ ತತ್ಸೂಕ್ತಮಭವತ್ತಸ್ಮಾತ್ಸೂಕ್ತಂ ತಸ್ಮಾ-ತ್ಸೂಕ್ತಮಿತ್ಯಾಚಕ್ಷತ ಏತಮೇವ ಸಂತಮ್ ॥

ಷಷ್ಠಂ ವಿಧತ್ತೇ—ಕದಾಚಿದಯಂ ಪ್ರಾಣದೇವಃ ಸ್ವಮಹಿಮಪ್ರತಿಪಾದಕಸ್ಯ ಮಂತ್ರಜಾತಸ್ಯ ವಕ್ತಾರಂ ಕಂಚಿನ್ಮಹರ್ಷಿಂ ದೃಷ್ಟ್ವಾ ತಮುವಾಚಾಯಂ ಮಹರ್ಷಿಃ ಸೂಕ್ತಂ ಶೋಭನಂ ವಚನ-ಮವೋಚತಾಽಽಶ್ಚರ್ಯಮೇತದಿತಿ । ಬತಶಬ್ದ ಆಶ್ಚರ್ಯವಾಚೀ । ಯಸ್ಮಾದಯಂ ದೇವೋ ಮಂತ್ರಜಾತಂ ಸೂಕ್ತಶಬ್ದೇನ ವ್ಯಾಜಹಾರ ತಸ್ಮಾನ್ಮಂತ್ರಜಾತಂ ಸೂಕ್ತನಾಮಕಮಭವತ್ । ತದ್ದ್ರ-ಷ್ಟಾಪಿ ಸೂಕ್ತನಾಮಕೋಽಭೂತ್ ॥

ಆರನೆಯ ಗುಣವನ್ನು ವಿವರಿಸುತ್ತಾರೆ. ಒಂದಾನೊಂದು ಸಮಯ ಈಪ್ರಾಣದೇವನು ತನ್ನ ಮಹಿಮೆಯನ್ನು ವರ್ಣಿಸುವ ಮಂತ್ರಸಮೂಹವನ್ನು ಹೇಳಿದ ಒಬ್ಬ ಮಹರ್ಷಿಯನ್ನು ನೋಡಿ ಸಂತೋಷದಿಂದ ಹೇಳಿದನು. ಈ ಮಹರ್ಷಿಯು ಸೂಕ್ತ ಅಂದರೆ ಶೋಭನವಾದ ಮಾತನ್ನು ಹೇಳಿದನು. ಅತ್ಯಾಶ್ಚರ್ಯವು. ಎಂದು ಬತ ಎಂಬ ಅವ್ಯಯ ಆಶ್ಚರ್ಯ ಸೂಚಕವಾಗಿದೆ. ಪ್ರಾಣದೇವನು ಈ ಮಂತ್ರಸಂಘವನ್ನು ಸೂಕ್ತವೆಂದು ಹೇಳಿದುದರಿಂದ ಮಂತ್ರಸಂಘಕ್ಕೆ ಸೂಕ್ತವೆಂದು ಹೆಸರಾಯಿತು. ಇದನ್ನು ಕಂಡುಹಿಡಿದ ಋಷಿಗಳೂ ಸೂಕ್ತಸಂಜ್ಞೆಯುಳ್ಳವರಾದರು.

**ಏಷ ವಾ ಋಗೇಷ ಹ್ಯೇಭ್ಯಃ ಸರ್ವೇಭ್ಯೋ ಭೂತೇಭ್ಯೋಽರ್ಚತ ಸ ಯದೇಭ್ಯಃ ಸರ್ವೇಭ್ಯೋ ಭೂತೇಭ್ಯೋಽರ್ಚತ ತಸ್ಮಾದೃಕ್ತಸ್ಮಾದೃಗಿತ್ಯಾಚಕ್ಷತ ಏತಮೇವ ಸಂತಮ್ ||**

ಸಪ್ತಮಂ ವಿಧತ್ತೇ-ಯೋಽಯಂ ಪ್ರಾಣದೇವೋಽಸ್ತ್ಯೇಷಃ ಏವರ್ಕ್ಶಬ್ದೇನಾಭಿಧೀಯತೇ । ಯಸ್ಮಾದೇಷಪ್ರಾಣಃ ಸರ್ವಭೂತಾರ್ಥಂ ತಂ ತಂ ದೇಹಮರ್ಚತ ಸ್ವಪ್ರವೇಶೇನ ಪೂಜಿತಮಕರೋತ್ತಸ್ಮಾತ್ಪ್ರಾಣಪ್ರತಿಪಾದಕೋ ಮಂತ್ರಸ್ತದ್ದ್ರಷ್ಟಾ ಚರ್ಕ್ಶಬ್ದೇನಾಭಿಧೀಯತೇ ||

ಏಳನೆಯ ಗುಣವನ್ನು ವಿವರಿಸುತ್ತಾರೆ. ಪ್ರಾಣದೇವನು ಋಕ್‌ಶಬ್ದದಿಂದ ಕರೆಯಲ್ಪಡುತ್ತಾನೆ. ಯಾವ ಕಾರಣದಿಂದ ಈ ಪ್ರಾಣದೇವನು ಪ್ರಾಣಿಹಿತಕ್ಕೋಸ್ಕರ ತನ್ನ ಪ್ರವೇಶದಿಂದ ಆಯಾಯದೇಹವನ್ನು ಪವಿತ್ರವನ್ನಾಗಿ ಮಾಡಿದನೋ ಅದರಿಂದ ಈ ಪ್ರಾಣಪ್ರತಿಪಾದಕಮಂತ್ರಕ್ಕೂ ಅದನ್ನು ಕಂಡುಹಿಡಿದ ಋಷಿಗೂ ಋಕ್ ಎಂಬ ಹೆಸರು ಬಂದಿದೆ.

**ಏಷ ವಾ ಅರ್ಧರ್ಚ ಏಷ ಹ್ಯೇಭ್ಯಃ ಸರ್ವೇಭ್ಯೋಽರ್ಧೇಭ್ಯೋಽರ್ಚತ ಸ ಯದೇಭ್ಯಃ ಸರ್ವೇಭ್ಯೋಽರ್ಧೇಭ್ಯೋಽರ್ಚತ ತಸ್ಮಾದರ್ಧರ್ಚಸ್ತಸ್ಮಾದರ್ಧರ್ಚ ಇತ್ಯಾಚಕ್ಷತ ಏತಮೇವ ಸಂತಮ್ ||**

ಅಷ್ಟಮಂ ವಿಧತ್ತೇ—ಋಚೋ ಭಾಗೋಽರ್ಧರ್ಚಃ ಸೋಽಪ್ಯೇಷ ಪ್ರಾಣ ಏವ । ಅರ್ಧರ್ಚ ಶಬ್ದಃ ಸ್ಥಾನವಾಚೀ । ದೇವಮನುಷ್ಯಾದೀನಾಂ ಲೋಕವಿಶೇಷರೂಪಾಣಿ ಯಾನಿ ಸ್ಥಾನಾನಿ ಸರ್ವಾಣಿ ತದರ್ಥಮಯಂ ಪ್ರಾಣೋಽರ್ಚತ ತತ್‌ಸ್ಥಾನವಾಸಿ ಪ್ರಾಣಿಜಾತಂ ಪೂಜಿತಮಕರೋತ್ತಸ್ಮಾತ್ತಾದೃಶಪ್ರಾಣಮಹಿಮವಾಚೀ ಮಂತ್ರಭಾಗಸ್ತದ್ದ್ರಷ್ಟಾ ಚಾರ್ಧರ್ಚಶಬ್ದೇನೋಚ್ಯತೇ||

ಎಂಟನೆಯ ಗುಣವನ್ನು ವಿವರಿಸುತ್ತಾರೆ. ಋಕ್ಕಿನ ಭಾಗಕ್ಕೆ ಅರ್ಧರ್ಚ ಎಂದು ಹೆಸರು. ಇದೂ ಪ್ರಾಣ ವಾಚಕವಾಗಿದೆ. ಸ್ಥಾನಕ್ಕೂ ಅರ್ಧರ್ಚ ಎಂದು ಹೆಸರು. ದೇವಮನುಷ್ಯ ಮುಂತಾದವರ ಲೋಕವಿಶೇಷರೂಪವಾದ ಯಾವಸ್ಥಾನಗಳಿವೆಯೋ ಅಲ್ಲಿ ವಾಸಿಸುವ ಸಮಸ್ತಪ್ರಾಣಿಜಾತಗಳನ್ನೂ ಈ ಪ್ರಾಣದೇವನು ಪೂಜಿತವನ್ನಾಗಿ ಮಾಡಿದನು. ಆದುದರಿಂದ ಈ ಪ್ರಾಣದೇವನ ಮಹಿಮೆಯನ್ನು ಹೇಳುವ ಮಂತ್ರಭಾಗವೂ ಅದನ್ನು ಕಂಡುಹಿಡಿದ ಋಷಿಯೂ ಅರ್ಧರ್ಚ ಶಬ್ದದಿಂದ ವ್ಯವಹರಿಸಲ್ಪಡುತ್ತಾರೆ.

**ಏಷ ವೈ ಪದಮೇಷ ಹೀಮಾನಿ ಸರ್ವಾಣಿ ಭೂತಾನಿ ಪಾದಿ ಸ ಯದಿಮಾನಿ ಸರ್ವಾಣಿ ಭೂತಾನಿ ಪಾದಿ ತಸ್ಮಾತ್ಪದಂ ತಸ್ಮಾತ್ಪದಮಿತ್ಯಾಚಕ್ಷತ ಏತಮೇವ ಸಂತಮ್ ||**

ನವಮಂ ವಿಧತ್ತೇ—ಪದಶಬ್ದೇನ ಸುಬಂತತಿಙಂತಾದಿರೂಪಃ ಕಸ್ಯಚಿದರ್ಥಸ್ಯ ವಾಚಕಃ ಶಬ್ದೋ ವಿವಕ್ಷಿತಃ। ತಥೈವಾರ್ಧರ್ಚಸ್ಯ ಭಾಗಃ ಪಾದಶಬ್ದಾಭಿಧೇಯೋಽಪಿ ವಿವಕ್ಷಿತಃ । ತದುಭಯ–

ಮೇಷ ಪ್ರಾಣ ಏವ। ಯಸ್ಮಾತ್ಸರ್ವಾಣಿ ಭೂತಾನ್ಯಸೌ ಪ್ರಾಣಃ ಪಾದಿ ಸ್ವಪ್ರವೇಶೇನ ಪ್ರಾಪ್ತ-ವಾಂಸ್ತಸ್ಮಾತ್ತನ್ಮಹಿಮ ಪ್ರತಿಪಾದಕೋಽರ್ಧರ್ಚಭಾಗಃ ಶಬ್ದವಿಶೇಷಸ್ತದ್ದ್ರಷ್ಟಾ ಚ ಪದಶಬ್ದೇನೋ-ಚ್ಯತೇ ॥

ಒಂಬತ್ತನೆಯ ಗುಣವನ್ನು ವಿವರಿಸುತ್ತಾರೆ. ಸುಬಂತತಿಙಂತರೂಪವಾಗಿ ಒಂದು ಅರ್ಥವನ್ನು ಕೊಡುವ ಶಬ್ದಕ್ಕೆ ಪದನೆಂದು ಹೆಸರು. ಇದರಿಂದ ಅರ್ಧರ್ಚದ ಭಾಗವಾದ ಪಾದಶಬ್ದವೂ ವಿವಕ್ಷಿತವಾಗಿದೆ. ಇದೆಲ್ಲವೂ ಪ್ರಾಣದೇವ ಸ್ವರೂಪವೇ ಆಗಿವೆ. ಯಾವಕಾರಣದಿಂದ ಈ ಪ್ರಾಣದೇವನು ಸಕಲಭೂತಪ್ರಪಂಚವನ್ನು ತನ್ನ ಪ್ರವೇಶದಿಂದ ಹೊಂದಿದನೋ (ಪಾದ) ಅದರಿಂದ ಅವನ ಮಹಿಮೆಯನ್ನು ಹೇಳುವ ಅರ್ಧರ್ಚದ ಭಾಗವಾದ ಶಬ್ದವಿಶೇಷವೂ ಅದನ್ನು ಕಂಡು ಹಿಡಿದ ಋಷಿಯೂ ಪದಶಬ್ದದಿಂದ ಕರೆಯಲ್ಪಡುತ್ತಾರೆ.

**ಏಷ ವಾ ಅಕ್ಷರಮೇಷ ಹ್ಯೇಭ್ಯಃ ಸರ್ವೇಭ್ಯೋ ಭೂತೇಭ್ಯಃ ಕ್ಷರತಿ ನ ಚೈನಮತಿಕ್ಷರಂತಿ ಸ ಯದೇಭ್ಯಃ ಸರ್ವೇಭ್ಯೋ ಭೂತೇಭ್ಯಃ ಕ್ಷರತಿ ನ ಚೈನಮತಿಕ್ಷರಂತಿ ತಸ್ಮಾದಕ್ಷರಂ ತಸ್ಮಾದಕ್ಷರಮಿತ್ಯಾಚಕ್ಷತ ಏತ-ಮೇವ ಸಂತಮ್ ॥**

ದಶಮಂ ವಿಧತ್ತೇ—ಅಕಾರಾದಿರೂಪಂ ಯದಕ್ಷರಂ ಲೋಕಪ್ರಸಿದ್ಧಂ ತದೇಷ ಪ್ರಾಣ ಏವ। ಯಸ್ಮಾದೇಷ ಸರ್ವಭೂತಾನಾಮನುಷ್ಠಾತೄಣಾಮರ್ಥೇ ಕ್ಷರತಿ ಕ್ಷರಣಂ ಫಲಪ್ರದಾನರೂಪಂ ಕರೋತಿ। ಪ್ರಾಣವದನ್ಯೇ ಪುರುಷಾ ಏನಂ ನೈವಾತಿಕ್ಷರಂತಿ ಪ್ರಾಣಮವಿಲಂಘ್ಯ ಕ್ಷರಣೇ ಫಲಪ್ರ-ದಾನೇ ಸ್ವಯಂ ನ ಸಮರ್ಥಾಃ। ಅತ ಏವ ಛಂದೋಗಾ ಆಮನಂತಿ—"ಪ್ರಾಣಃ ಪ್ರಾಣಾಯ ದದಾತಿ" (ಛಾಂದೋ-೭-೧೫-೧) ಇತಿ। ನ ಖಲು ಪ್ರಾಣರಹಿತಃ ಶವದೇಹೋಽನ್ಯಸ್ಮೈ ಶವದೇ-ಹಾಯ ಯತ್ಕಿಂಚಿದ್ಗವಾದಿಕಂ ದಾತುಂ ಪ್ರಭವತಿ, ಅತೋಽಯಂ ಪ್ರಾಣಮತಿಲಂಘ್ಯ ಕ್ಷರಣಂ ನಾಸ್ತಿ ತಸ್ಯ ಪ್ರಾಣಸ್ಯ ವಾಚಕಂ ವರ್ಣಜಾತಂ ತದ್ದ್ರಷ್ಟಾ ವಾಽಕ್ಷರಶಬ್ದೇನೋಚ್ಯತೇ। ತದೇವಂ ಸರ್ವಮಂತ್ರ ಸರ್ವಮಹರ್ಷಿಸ್ವರೂಪಂ ಪ್ರಾಣಸ್ಯ ಧ್ಯೇಯಮಿತಿ ತಾತ್ಪರ್ಯಾರ್ಥಃ ॥

ಹತ್ತನೆಯ ಗುಣವನ್ನು ವಿವರಿಸುತ್ತಾರೆ. ಲೋಕಪ್ರಸಿದ್ಧವಾದ ಅಕಾರಾದಿ ಅಕ್ಷರಗಳೆಲ್ಲವೂ ಪ್ರಾಣಸ್ವರೂಪವೇ. ಈ ಪ್ರಾಣದೇವನು ಅನುಷ್ಠಾನಮಾಡುವ ಉಪಾಸಕನಿಗೆ ಕ್ಷರಣ ಅಂದರೆ ಫಲಪ್ರದಾನವನ್ನು ಮಾಡುತ್ತಾನೆ. ಪ್ರಾಣದಂತೆ ಇತರ ದೇವತೆಗಳು ಪ್ರಾಣನಸಹಾಯವಿಲ್ಲದೆ ಸ್ವತಂತ್ರವಾಗಿ ಫಲವನ್ನು ಕೊಡುವುದರಲ್ಲಿ ಸಮರ್ಥರಾಗುವುದಿಲ್ಲ. ಆದುದರಿಂದಲೇ ಛಂದೋಗರು "ಪ್ರಾಣಃ ಪ್ರಾಣಾಯ ದದಾತಿ" (ಛಾಂದೋ-೭-೧೫-೧) ಎಂದು ವಿವರಿಸಿರುತ್ತಾರೆ. ಪ್ರಾಣ ರಹಿತವಾದ ಶವದೇಹವು ಇತರ ಶವದೇಹಕ್ಕೆ ಗೋವುಂತಾದವುಗಳನ್ನು ಕೊಡಲು ಸಮರ್ಥವಾಗುವುದಿಲ್ಲ. ಪ್ರಾಣವನ್ನು ಬಿಟ್ಟರೆ ಇನ್ನಾರೂ ಕ್ಷರಣಸಮರ್ಥರಾಗುವುದಿಲ್ಲ. ಆದುದರಿಂದ ಈ ಪ್ರಾಣವಾಚಕವಾದ ಅಕ್ಷರಸಮುದಾಯವೂ, ತದ್ದ್ರಷ್ಟೃ ಋಷಿಗಳೂ ಅಕ್ಷರ ಶಬ್ದದಿಂದ ವ್ಯವಹರಿಸಲ್ಪಡುತ್ತಾರೆ. ಹೀಗೆ ಪ್ರಾಣದೇವನು ಸಕಲ ಮಂತ್ರಸ್ವರೂಪನೂ ಸಕಲ ಋಷಿ ಸ್ವರೂಪನೂ ಎಂದು ಧ್ಯಾನಿಸಬೇಕೆಂದು ತಾತ್ಪರ್ಯ.

ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವ ಪ್ರಾಣ ಋಚಃ ಇತ್ಯೇವ ವಿದ್ಯಾತ್॥

ತಮಿಮಂ ಸಂಕ್ಷಿಪ್ಯ ದರ್ಶಯತಿ—"ಅಗ್ನಿಮೀಳೇ ಪುರೋಹಿತಮ್" (ಋ-ಸಂ-ಮಂ-೧-ಸೂ.೧.ಋ-೧) ಇತ್ಯಾರಭ್ಯ "ಯಥಾ ವಃ ಸುಸಹಾ ಸತಿ" (ಋ-ಸಂ-ಮ-೧೦-ಸೂ-೧೯೧-ಋ-೪) ಇತ್ಯಂತಾಃ ಸಮಾಮ್ನಾತಾ ಋಚೋ ಯಾಃ ಸಂತಿ ತಾ ಏತಾಃ ಸರ್ವಾ ಅಪ್ಯೇಕೈವ ವ್ಯಾಹೃತಿರೇಕ-ಶಬ್ದಾತ್ಮಿಕಾಃ। ತಥಾ ಚಗ್ವೇದಯಜುರ್ವೇದಾದಯೋ ವೇದಾಃ ಸಂತಿ ತೇ ಸರ್ವ ಏಕೈವ ವ್ಯಾಹೃತಿಃ। ಕೋಽಸಾವೇಕಃ ಶಬ್ದ ಇತಿ ಉಚ್ಯತೇ—ಪ್ರಾಣ ಏವ ಪ್ರಾಣಶಬ್ದೇನೈವ ಸರ್ವಂ ಶಬ್ದಜಾತಂ ಸಂಗ್ರ-ಹೀತಮ್ । ಪ್ರಾಣಶಕ್ತ್ಯೈವ ಸರ್ವೇಷಾ ಮುಚ್ಚಾರ್ಯಮಾಣತಯಾ ಪ್ರಾಣೇಽಂತರ್ಭಾವಾತ್ । ತಸ್ಮಾತ್ ಪ್ರಾಣ ಋಚ ಋಗುಪಲಕ್ಷಿತಂ ಸರ್ವಂ ಶಬ್ದಜಾತಂ ಮಹರ್ಷಿಜಾತಂ ಚ ಪ್ರಾಣ-ಸ್ವರೂಪಮಿತ್ಯೇವೋಪಾಸಿತವ್ಯಮ್ ॥

ಪೂರ್ವೋಕ್ತವಾದ ಅರ್ಥವನ್ನು ಸಂಕ್ಷೇಪದಿಂದ ವಿವರಿಸುತ್ತಾರೆ. "ಅಗ್ನಿಮೀಳೇ ಪುರೋಹಿತಂ" (ಋ.ಸಂ. ೧-೧-೧) ಎಂದು ಆರಂಭಿಸಿ " ಯಥಾ ವಃ ಸುಸಹಾಸತಿ " (ಋ. ಸಂ. ೧೦-೧೯೧-೪) ಎಂಬ ಋಕ್ಕಿನವರೆಗೆ ಯಾವ ಋಗ್ವೇದ ಮಂತ್ರಗಳಿರುತ್ತವೆಯೋ ಅವೆಲ್ಲವೂ ಏಕವ್ಯಾಹೃತಿರೂಪವಾಗಿವೆ. ಅಂದರೆ ಏಕಶಬ್ದರೂಪಗಳು. ಹಾಗೆಯೇ ಋಗ್ವೇದ ಯಜುರ್ವೇದಾದಿ ನಾಲ್ಕುವೇದಗಳೂ ಯಭಘಢಧಮುಂತಾ ಘೋಷಪ್ರಯತ್ನವಿಶಿಷ್ಟವರ್ಣಗಳೂ ಒಂದೇ ವ್ಯಾಹೃತಿರೂಪವಾಗಿದೆ. ಆ ವ್ಯಾಹೃತಿ ಅಂದರೆ ಶಬ್ದವು ಪ್ರಾಣವಲ್ಲದೆ ಬೇರೆಯಲ್ಲ. ಪ್ರಾಣಶಬ್ದವೊಂದರಿಂದಲೇ ಸಕಲಶಬ್ದಜಾತವು ಸಂಗ್ರಹಿಸಲ್ಪಡುತ್ತದೆ. ಪ್ರಾಣಶಕ್ತಿಯಿಂದಲೇ ಎಲ್ಲಾ ಶಬ್ದಗಳೂ ಉಚ್ಚಾರಿತವಾಗುವುದರಲ್ಲಿ ಎಲ್ಲವೂ ಪ್ರಾಣದಲ್ಲಿಯೇ ಸೇರಿವೆ. ಆದುದರಿಂದ ಋಗುಪಲಕ್ಷಿತವಾದ ಸಕಲ ಶಬ್ದಸಮುದಾಯಗಳೂ. ಸಕಲ ಮಹರ್ಷಿಗಳೂ ಪ್ರಾಣಸ್ವರೂಪವೆಂದೇ ಉಪಾಸಿಸಬೇಕು.

---

*English Translation*

---

1. He (breath) is likewise a Bibhradvaga (bringer of offspring). Off-spring is vaga, and he (breath) supports offspring. Because he supports it, therefore there is the poet of the sixth Mandala of the Rig-veda, called) Bharadvaga. Therefore people call him who is really Prana (breath), Bharadvaga.

2. The Devas (speech, &c.) said to him : 'He it is who chiefly causes us to dwell on earth.' Because the Devas said of him, that he chiefly caused them to dwell on earth, therefore there is (the poet of the seventh Mandala of the Rig-veda, called) Vasishtha. Therefore people call him who is really Prana (breath), Vasishtha.

3. He (breath) went forth towards all this whatsoever. Because he went towards all this whatsover, therefore there are (the poets of the eigth Mandala of the Rig-veda, called) the Pragathas. Therefore people call him who is really Prana (breath), the Pragathas.

4. He (breath) purified all this whatsoever. Because he purified ull this whatsoever, therefore there are (the hymns and also the poets of the ninth Mandala of the Rig-veda, called) the Pavamanis. Therefore people ealled him who is really Prana (breath), the Pavamanis.

5. He (breath) said : 'Let me be everything whatsoever, small (kshudra) and great (mahat), and this became the Kshudrasuktas and Mahasuktas.' Therefore there were (the hymns and also the poets of the tenth Mandala of the Rig-veda, called) the Kshudrasuktas (and Mahasuktas). Therefore people call him who is really Prana (breath), the Kshudrasuktas (and Mahasuktas).

6. He (breath) said once : 'You have said what is well said (su-ukta) indeed. This became a Sukta (hymn).' Therefore there was the Sukta. Therefore people call him who is really Prana (breath), Sukta.

7. He (breath) is a Rik (verse), for he did honour to all beings (by entering into them). Because he did honour to all beings, therefore there was the Rik verse. Therefore people call him who is really Prana (breath), Rik.

8. He (breath) is an Ardharka (half-verse), for he did honour to all places (ardha). Because he did honour to all places, therefore there was the Ardharka. Therefore people call him who is really Prana (breath), Ardharka.

9. He (breath) is a Pada (word), for he got into all those beings. Because he got (padi) into all these beings, therefore there was the Pada (word). Therefore people call him who is really Prana (breath), Pada.

10. He (breath) is an Akshara (syllable), for he pours out (ksharati) gifts to all these beings, and without him no one can pour out (artiksharati) gifts. Therefore there was the Akshara (syllable). Therefore people call him who is really Prana (breath), Akshara.

11. Thus all these Rik verses, all Vedas, all sounds are one word, viz, Prana (breath). Let him know that Prana is all Rik verses.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ದ್ವಿತೀಯಾಧ್ಯಾಯೇ ದ್ವಿತೀಯ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಎರಡನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವು



## ಅಥ ದ್ವಿತೀಯಾರಣ್ಯಕೇ ದ್ವಿತೀಯಾಧ್ಯಾಯೇ ತೃತೀಯಃ ಖಂಡಃ

ಎರಡನೆಯ ಆರಣ್ಯಕದ ಎರಡನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

**ವಿಶ್ವಾಮಿತ್ರಂ ಹ್ಯೇತದಹಃ ಶಂಸಿಷ್ಯಂತಮಿಂದ್ರ ಉಪನಿಷಸಸಾದ ಸ ಹಾನ್ನಮಿತ್ಯಭಿವ್ಯಾಹೃತ್ಯ ಬೃಹತೀಸಹಸ್ರಂ ಶಶಂಸ ತೇನೇಂದ್ರಸ್ಯ ಪ್ರಿಯಂ ಧಾಮೋಪೇಯಾಯ ॥**

ಪ್ರಾಣಸ್ಯ ಕೃತ್ಸ್ನಶಬ್ದಾರ್ಥರೂಪಧ್ಯಾನಮಭಿಧಾಯ ಶಸ್ತ್ರಗತಾಸು ತೃಚಾಶೀತಿಷ್ವಿಂದ್ರಸಂಬಂಧ್ಯನ್ನತ್ವದೃಷ್ಟಿಂ ವಿಧಾತುಮುಪಾಖ್ಯಾನಮಾಹ—ಕದಾಚಿನ್ಮಹಾವ್ರತಾಖ್ಯೇ ಕರ್ಮಣಿ ವಿಶ್ವಾ-

ಮಿತ್ರೋ ಮಹರ್ಷಿರ್ಹೋತಾಸನ್ನೇತನ್ಮಹಾವ್ರತಾಖ್ಯಮಹಃ ಶಂಸಿಷ್ಯತಿ ಶಂಸಿತುಮುಪಕ್ರಮಂ ಕರೋತಿ ತದಾನೀಮಿಂದ್ರೋಽನ್ನಾರ್ಥೀ ಸಂಸ್ತಂ ವಿಶ್ವಾಮಿತ್ರಮುಪನಿಷಸಸಾದೋಪೇತ್ಯ ಸಮೀಪೇ ಸ್ಥಿತವಾನ್ । ಅಧಿಕಃ ಸಕಾರಶ್ಛಾಂದಸಃ । ಸ ಚ ವಿಶ್ವಾಮಿತ್ರ ಇಂದ್ರಸ್ಯಾಭಿಪ್ರಾಯಂ ಜ್ಞಾತ್ವಾ ತವಾನ್ನಮೇವ ತನ್ಮಂತ್ರಜಾತಮಿತೀಂದ್ರಸ್ಯಾಗ್ರೇ ಕಥಯಿತ್ವಾ ಬೃಹತೀಛಂದಸ್ಕ ಮಂತ್ರಸಹಸ್ರಂ ಶಂಸಿತ್ವಾ ತೇನ ಶಂಸನೇನೇಂದ್ರಸ್ಯ ಯತ್ಪ್ರಿಯಂ ಸ್ಥಾನಂ ಸ್ವರ್ಗರೂಪಂ ತತ್ಪ್ರಾಪ್ತವಾನ್ । ಅತ್ರ ಮಹಾವ್ರತಾಖ್ಯೇ ಕರ್ಮಣಿ ಮಾಧ್ಯಂದಿನಸವನೇ ನಿಷ್ಕೇವಲ್ಯಾಖ್ಯಂ ಕಿಂಚಿಚ್ಛಸ್ತ್ರಂ ಪಠ್ಯತೇ । ತಸ್ಯ ಚ ಶಸ್ತ್ರಸ್ಯ ಪಕ್ಷಿರೂಪತಾಂ ಪರಿಕಲ್ಪ್ಯ ತದವಯವರೂಪಾಃ ಶಸ್ತ್ರಭಾಗವಿಶೇಷಾಃ ಕ್ರಮೇಣ ಪಠ್ಯಂತೇ। ಪಕ್ಷಿಣಶ್ಚ ಮಧ್ಯದೇಹೋಗ್ರೀವಾ ಶಿರಃ ಪಕ್ಷಮೂಲಂ ದಕ್ಷಿಣಃ ಪಕ್ಷ ಉತ್ತರಃ ಪಕ್ಷಃ ಪುಚ್ಛಮುದ-ಸ್ಥಾನಮುದರಮೂರೂ ಇತ್ಯೇವಂ ದಶಾವಯವಾಃ ಸಂತ್ಯತಃ ಶಸ್ತ್ರೇಽಪಿ ದಶಾವಯವರೂಪತ್ವೇನ "ತದಿದಾಸ ಭುವನೇಷು ಜ್ಯೇಷ್ಠಮ್" (ಋ-ಸಂ-ಮಂ-೧೦-ಸೂ-೨೦-ಋ-೧) ಇತ್ಯಾದಿಕಾಃ ಬಹುವಿಧಾಃ ಸೂಕ್ತವಿಶೇಷಾಃ ಪ್ರಥಮಾರಣ್ಯೇ—(ಐ-ಆ-೧-ಅ-೩-ಖಂ-೪) ವಿಹಿತಾಃ । ತೇ ಚ ಪಂಚಮಾರಣ್ಯಕೇ ಶೌನಕೇನ ಸಮ್ಯಗ್ವಿಸ್ತೃತ್ಯೋದಾಹೃತಾಃ (ಐ-ಆ-೫-ಅ-೧-ಖಂ-೬)। ತೇಷು ಸರ್ವೇಷು ನಾನಾವಿಧಚ್ಛಂದಸ್ಕಾ ಮಂತ್ರಾ ಆಮ್ನಾತಾಸ್ತಥಾಪಿ ತೇಷು ಸರ್ವೇಷ್ವಕ್ಷರಾಣಿ ಗಣಯಿತ್ವಾ ಷಟ್‌ತ್ರಿಂಶದಕ್ಷರೋಪೇತಾನಾಂ ಬೃಹತೀನಾಂ ಸಹಸ್ರಂ ದೃಷ್ಟವ್ಯಮ್ ॥

ಪ್ರಾಣದ ಸಕಲಶಬ್ದಾರ್ಥರೂಪಧ್ಯಾನವನ್ನು ಹೇಳಿದಮೇಲೆ ಶಸ್ತ್ರದಲ್ಲಿರುವ ತೃಚಾಶೀತಿಗಳಲ್ಲಿ ಇಂದ್ರಸಂಬಂಧಿಯಾದ ಅನ್ನದೃಷ್ಟಿಯನ್ನು ವಿಧಿಸಲು ಅದಕ್ಕೆ ಮೊದಲು ಒಂದು ಉಪಾಖ್ಯಾನವನ್ನು ಹೇಳುತ್ತಾರೆ. ಒಂದಾನೊಂದು ಸಮಯ ವಿಶ್ವಾಮಿತ್ರಮಹರ್ಷಿಯು ಮಹಾವ್ರತಕರ್ಮದಲ್ಲಿ ಹೋತೃವಾಗಿದ್ದು ಈಮಹಾವ್ರತದ ಹಗಲನ್ನು ಸ್ತುತಿಸಲು ಪ್ರಾರಂಭಿಸಿದನು. ಆ ಸಮಯದಲ್ಲಿ ಇಂದ್ರನು ಅನ್ನಾರ್ಥಿಯಾಗಿ ಅವನ ಸಮೀಪಕ್ಕೆ ಬಂದು ನಿಂತನು. ಧಾತುವಿನಲ್ಲಿ ಒಂದುಸಕಾರಛಾಂದಸ ವಾಗಿ ಹೆಚ್ಚಾಗಿ ಬಂದಿದೆ. ಆ ವಿಶ್ವಾಮಿತ್ರನು ಇಂದ್ರನ ಅಭಿಪ್ರಾಯವನ್ನು ತಿಳಿದು ನಿನಗೆ ಅನ್ನರೂಪವಾದ ಮಂತ್ರ ಸಂಘವೊಂದಿದೆಯೆಂದು ಹೇಳಿ ಬೃಹತೀಛಂದಸ್ಕವಾದ ಮಂತ್ರಸಹಸ್ರವನ್ನು ಪಠಿಸಿದನು. ಈ ಮಂತ್ರಪಠನದಿಂದ ಇಂದ್ರನಿಗೆ ಪ್ರಿಯಸ್ಥಾನವಾದ ಸ್ವರ್ಗವನ್ನು ಪಡೆದನು. ಈ ಮಹಾವ್ರತಕರ್ಮದ ಮಾಧ್ಯಂದಿನಸವನದಲ್ಲಿ ನಿಷ್ಕೇವಲ್ಯವೆಂಬ ಒಂದು ಶಸ್ತ್ರವನ್ನು ಪಠಿಸುತ್ತಾರೆ. ಆ ಶಸ್ತ್ರಕ್ಕೆ ಪಕ್ಷಿರೂಪವನ್ನು ಕಲ್ಪಿಸಿ ಅದರ ಅವಯವರೂಪವಾಗಿ ಶಸ್ತ್ರಭಾಗವಿಶೇಷಗಳನ್ನು ಕ್ರಮವಾಗಿ ಪಠಿಸುತ್ತಾರೆ. ಪಕ್ಷಿಗೆ ಪ್ರಧಾನವಾಗಿ ಮಧ್ಯದೇಹ, ಗ್ರೀವಾ(ಕಂಠ),ಶಿರಸ್ಸು, ಪಕ್ಷಮೂಲ, ದಕ್ಷಿಣಪಕ್ಷ, ಉತ್ತರಪಕ್ಷ, ಪುಚ್ಛ, ಉದರಸ್ಥಾನ ಉದರ, ಊರು ಹೀಗೆ ಹತ್ತು ಅವಯವಗಳಿರುತ್ತವೆ. ಶಸ್ತ್ರದಲ್ಲಿಯೂ ಕೂಡಾ ದಶಾವಯವರೂಪವಾಗಿ 'ತದಿದಾಸ ಭುವನೇಷು' (ಋ-ಸಂ-೧೦-೧೨೦-೧) ಇತ್ಯಾದಿ ಬಹುವಿಧಗಳಾದ ಸೂಕ್ತವಿಶೇಷಗಳೂ ಪ್ರಥಮಾರಣ್ಯಕದಲ್ಲಿ ಹೇಳಿ ಪಂಚಮಾರಣ್ಯಕದಲ್ಲಿ ಶೌನಕರು ಇದನ್ನು ಸಂಪೂರ್ಣವಾಗಿ ವಿವರಿಸುತ್ತಾರೆ. ಇಲ್ಲಿ ನಾನಾವಿಧಛಂದಸ್ಸುಳ್ಳ ಮಂತ್ರಗಳು ಹೇಳಿದ್ದರೂ ಅವುಗಳ ಅಕ್ಷರಗಳನ್ನು ಎಣಿಸಿ ಮೂವತ್ತಾರು ಅಕ್ಷರಗಳಿಂದ ಕೂಡಿದ ಸಹಸ್ರ ಬೃಹತೀಛಂದಸ್ಕಗಳೆಂದು ತಿಳಿಯಬೇಕು.

ತಮಿಂದ್ರ ಉವಾಚ ಋಷೇ ಪ್ರಿಯಂ ವೈ ಮೇ ಧಾಮೋಪಾಗಾಃ ಸ
ವಾ ಋಷೇ ದ್ವಿತೀಯಂ ಶಂಸೇತಿ ಸ ಹಾನ್ನಮಿತ್ಯೇವಾಭಿವ್ಯಾಹೃತ್ಯ

ಬೃಹತೀಸಹಸ್ರಂ ಶಶಂಸ ತೇನೇಂದ್ರಸ್ಯ ಪ್ರಿಯಂ ಧಾಮೋಪೇ-
ಯಾಯ ॥

ಪುನರಪಿ ಪೂರ್ವವದಾಖ್ಯಾನಮಾಹ—ವಿಶ್ವಾಮಿತ್ರಂ ಪ್ರತೀಂದ್ರ ಏವಮುವಾಚ, ಹೇ ಮಹರ್ಷೇ ತ್ವಂ ಮದೀಯಾನ್ನಬುದ್ಧ್ಯಾ ಶಂಸಿತ್ವಾ ಮದೀಯಂ ಪ್ರಿಯಂ ಸ್ಥಾನಂ ಪ್ರಾಪ್ತವಾನಸಿ ಹೇ ಮಹರ್ಷೇ ಸ ತಾದೃಶಸ್ತ್ವಂ ಶಸ್ತ್ರಂ ಪುನರಪಿ ದ್ವಿತೀಯಂ ಶಂಸೇತಿ । ಅನ್ಯತ್ಪೂರ್ವವದ್ವ್ಯಾಖ್ಯೇಯಮ್ । ನನು ಕೃತ್ಸ್ನೇಽಪಿ ನಿಷ್ಕೇವಲ್ಯೇ ಶಸ್ತ್ರೇಽಕ್ಷರಗಣನಯಾ ಬೃಹತೀಸಹಸ್ರಮೇಕಮೇವ ಸಂಪದ್ಯತೇ ನ ತು ದ್ವಿತೀಯಮಸ್ತಿ ತತ್ಕಥಂ ದ್ವಿತೀಯಂ ಶಂಸೇತ್ಯಭಿಧೀಯತೇ, ನಾಯಂ ದೋಷಃ। ಅತ್ರ ಬೃಹತೀಸಹಸ್ರಶಬ್ದೇನ ತದವಯವಾನಾಂ ವಿವಕ್ಷಿತತ್ವಾತ್ । ತೃಚಾಶೀತಯೋಽನ್ನತ್ವೇನಾಭಿಹಿತಾಃ "ಅನ್ನಮಶೀತಯಃ" ಇತ್ಯುಕ್ತತ್ವಾತ್ । ಅತ್ರಾಪಿ ತ್ರಿವಾರಮನ್ನತ್ವೇನೋಪನ್ಯಸ್ಯಂತೇ । ಅತೋ ಬೃಹತೀಸಹಸ್ರಶಬ್ದೇನಾತ್ರ ಪ್ರಥಮಪರ್ಯಾಯೇ ಗಾಯತ್ರೀ ತೃಚಾಶೀತಿರ್ವಿವಕ್ಷಿತಾ । ದ್ವಿತೀಯಪರ್ಯಾಯೇ ಬಾರ್ಹತೀ ತೃಚಾಶೀತಿಃ ॥

ತಿರುಗಿಯೂ ಈ ವಿಷಯದಲ್ಲಿ ಉಪಾಖ್ಯಾನವನ್ನು ಹೇಳುತ್ತಾರೆ. ಇಂದ್ರನು ವಿಶ್ವಾಮಿತ್ರಮಹರ್ಷಿಯನ್ನು ಕುರಿತು ಹೀಗೆ ಹೇಳಿದನು. ಎಲೈ ಮಹರ್ಷಿಯೇ ನೀನು ನನ್ನ ಬುದ್ಧಿಯಿಂದ ಮಂತ್ರಜಾತವನ್ನು ಪಠಿಸಿ ನನ್ನ ಪ್ರಿಯ ಸ್ಥಾನವನ್ನು ಹೊಂದುವಿ. ಆ ನೀನು ತಿರುಗಿಯೂ ಎರಡನೇ ಶಸ್ತ್ರವನ್ನು ಪಠಿಸು. ಎಂದು ಉಳಿದುದನ್ನು ಹಿಂದಿನಂತೆಯೇ ತಿಳಿಯಬೇಕು. ಆ ಶಂಕೆಯನ್ನು ತೋರಿಸುತ್ತಾರೆ. ಸಂಪೂರ್ಣ ನಿಷ್ಕೇವಲ್ಯಶಸ್ತ್ರದಲ್ಲಿ ಅಕ್ಷರಗಣನೆಯಿಂದ ಕೇವಲ ಒಂದೇ ಬೃಹತೀ ಸಹಸ್ರವಾಗುತ್ತದೆ. ಎರಡನೇಯದು ಇಲ್ಲದಿರುವಾಗ ಎರಡನೆಯ ಬೃಹತೀಸಹಸ್ರವನ್ನು ಪಠಿಸುವುದು ಹೇಗೆ ? ಅಂದರೆ ಇಲ್ಲಿ ಬೃಹತೀಸಹಸ್ರಶಬ್ದದಿಂದ ಅದರ ಅವಯವವು ವಿವಕ್ಷಿತವಾದುದರಿಂದ ದೋಷವಿಲ್ಲ. "ಅನ್ನಮಶೀತಯಃ" ಎಂದು ಶ್ರುತ್ಯಂತರದಲ್ಲಿ ಹೇಳಿರುವಂತೆ ತೃಚಾಶೀತಿಗಳೇ ಅನ್ನವೆಂದು ತಿಳಿಯಬೇಕು. ಇಲ್ಲಿಯೂ ಮೂರುಬಾರಿ ಅನ್ನರೂಪದಿಂದ ವಿವರಿಸುತ್ತಾರೆ. ಆದುದರಿಂದ ಬೃಹತೀಸಹಸ್ರಶಬ್ದದಿಂದ ಇಲ್ಲಿ ಪ್ರಥಮಪರ್ಯಾಯದಲ್ಲಿ ಗಾಯತ್ರೀತೃಚಾಶೀತಿಯು ವಿವಕ್ಷಿತವಾಗಿದೆ. ದ್ವಿತೀಯಪರ್ಯಾಯದಲ್ಲಿ ಬಾರ್ಹತೀತೃಚಾಶೀತಿಯು ವಿವಕ್ಷಿತವಾಗಿದೆ.

ತಮಿಂದ್ರ ಉವಾಚ ಋಷೇ ಪ್ರಿಯಂ ವೈ ಮೇ ಧಾಮೋಪಾಗಾಃ ಸ
ವಾ ಋಷೇ ತೃತೀಯಂ ಶಂಸೇತಿ ಸ ಹಾನ್ನಮಿತ್ಯೇವಾಭಿವ್ಯಾಹೃತ್ಯ
ಬೃಹತೀಸಹಸ್ರಂ ಶಶಂಸ ತೇನೇಂದ್ರಸ್ಯ ಪ್ರಿಯಂ ಧಾಮೋಪೇ-
ಯಾಯ ॥

ತೃತೀಯಂ ಪರ್ಯಾಯಮಾಹ—ಔಷ್ಣಿಹೀ ತೃಚಾಶೀತಿರತ್ರ ಬೃಹತೀಶಬ್ದೇನ ವಿವಕ್ಷಿತಾ ।

ಮೂರನೆಯ ಪರ್ಯಾಯವನ್ನು ವಿವರಿಸುತ್ತಾರೆ. ಉಷ್ಣಿಕ್‌ಛಂದೋಪೇತವಾದ ತೃಚಾಶೀತಿಯು ಇಲ್ಲಿ ಬಾರ್ಹತೀ ಶಬ್ದದಿಂದ ವಿವಕ್ಷಿತವಾಗಿದೆ. ಸಂವಾದಾದಿಗಳನ್ನು ಪೂರ್ವದಂತೇ ತಿಳಿಯಬೇಕು.

ತಮಿಂದ್ರ ಉವಾಚ ಋಷೇ ಪ್ರಿಯಂ ವೈ ಮೇ ಧಾಮೋಪಾಗಾ ವರಂ ತೇ ದದಾಮೀತಿ ಸ ಹೋವಾಚ ತ್ವಾಮೇವ ಜಾನೀಯಾಮಿತಿ ತಮಿಂದ್ರ ಉವಾಚ ಪ್ರಾಣೋ ವಾ ಅಹಮಸ್ಮ್ಯೃಷೇ ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ ಪ್ರಾಣೋ ಹ್ಯೇಷ ಯ ಏಷ ತಪತಿ ಸ ಏತೇನ ರೂಪೇಣ ಸರ್ವಾ ದಿಶೋ ವಿಷ್ಟೋಽಸ್ಮಿ ತಸ್ಯ ಮೇಽನ್ನಂ ಮಿತ್ರಂ ದಕ್ಷಿಣಂ ತದ್ವೈಶ್ವಾಮಿತ್ರಮೇಷ ತಪನ್ನೇವಾ-ಸ್ಮೀತಿ ಹೋವಾಚ ॥

ತೃಚಾಶೀತಿಷ್ವಿಂದ್ರಾನ್ನತ್ವದೃಷ್ಟಿಂ ವಿಧಾಯ ಪ್ರಾಣಸ್ಯ ಸರ್ವಾತ್ಮತ್ವಂ ದರ್ಶಯನ್ನಾಖ್ಯಾ-ಯಿಕಾಮುಪಸಂಹರತಿ—ಇಂದ್ರೋ ಹಿ ಯಥೋಕ್ತಪ್ರಾಣಾತ್ಮಧ್ಯಾನೇನ ತತ್ಸಾಕ್ಷಾತ್ಕಾರಂ ಪ್ರಾಪ್ಯ ಸ್ವಾನುಭವಸಿದ್ಧಂ ಸರ್ವಾತ್ಮಕತ್ವಮುಪದಿಶ್ಯ ಸರ್ವಾತ್ಮನಃ ಸ್ವಸ್ಯ ತೃಚಾಶೀತಿರೂಪಂ ಯದನ್ನಂ ಧ್ಯಾತವ್ಯಂ ತನ್ಮಿತ್ರಾದಿವಿಶೇಷಣೈಃ ಪ್ರಶಂಸ । ಲೌಕಿಕಮಿತ್ರವತ್ಪ್ರೀತಿಜನಕತ್ವಾದನ್ನಸ್ಯ ಮಿತ್ರತ್ವಮ್ । ಅಭಿವೃದ್ಧಿಹೇತುತ್ವಾದ್ದಕ್ಷಿಣತ್ವಮ್ । " ದಕ್ಷ-ವೃದ್ಧೌ " (ಭ್ವಾ-ಗ-ಪ-) ಇತಿ ಧಾತುಃ । ವಿಶ್ವಾ-ಮಿತ್ರೇಣ ಶಂಸನಕಾಲೇ ಸಂಪಾದಿತತ್ವಾದಿದಂ ವೈಶ್ವಾಮಿತ್ರಮ್ । ತಾದೃಗನ್ನಂ ಪ್ರಾಪ್ಯಾಽಽದಿತ್ಯ-ರೂಪೇಣ ಸರ್ವದಾ ಲೋಕೇ ತಪನ್ನೇಷ ಏವಾಸ್ಮೀತ್ಯೇವಂ ಧ್ಯಾನದೃಷ್ಟಿಸಿದ್ಧಂ ಸ್ವಕೀಯಂ ರೂಪ-ಮಿಂದ್ರಃ ಪ್ರೋವಾಚ ॥

ತೃಚಾಶೀತಿಗಳಲ್ಲಿ ಇಂದ್ರನ ಅನ್ನತ್ವದೃಷ್ಟಿಯನ್ನು ವಿಧಿಸಿ ಪ್ರಾಣನ ಸರ್ವಾತ್ಮತ್ವ ಸ್ವರೂಪವನ್ನು ವ್ಯಕ್ತಪಡಿಸಲು ಆಖ್ಯಾಯಿಕಾ ಉಪಸಾಂಹಾರವನ್ನು ತೋರಿಸುತ್ತಾರೆ. ಇಂದ್ರನು ಹಿಂದೆ ಹೇಳಿದಂತೆ ಪ್ರಾಣಾತ್ಮಧ್ಯಾನದಿಂದ ಪ್ರಾಣ ಸಾಕ್ಷಾತ್ಕಾರವನ್ನು ಪಡೆದು ತನ್ನ ಅನುಭವಕ್ಕೆ ಗೋಚರವಾದ ಸರ್ವಾತ್ಮತ್ವವನ್ನು ಇತರ ದೇವತೆಗಳಿಗೆ ಉಪದೇಶಿಸಿ ಸರ್ವಾತ್ಮಸ್ವರೂಪವನ್ನು ಹೊಂದಿದ ತನ್ನ ತೃಚಾಶೀತಿರೂಪ ಅನ್ನವನ್ನೂ ಮಿತ್ರಾದಿವಿಶೇಷಣದಿಂದ ಪ್ರಶಂಸೆಮಾಡಿದನು. ಲೋಕದಲ್ಲಿರುವ ಸ್ನೇಹಿತರಂತೆ ಪ್ರೀತಿಜನಕವಾದುದರಿಂದ ಅನ್ನವೂ ಮಿತ್ರವಾಗುತ್ತದೆ. ಅದು ಅಭಿವೃದ್ಧಿಗೆ ಕಾರಣವಾದುದರಿಂದ ದಕ್ಷಿಣಪದವಾಚ್ಯವೂ ಆಗಿದೆ. ದಕ್ಷಧಾತುವಿಗೆ ವೃದ್ಧ್ಯರ್ಥ ಪ್ರಸಿದ್ಧವಾಗಿದೆ. ಶಂಸನಕಾಲದಲ್ಲಿ ವಿಶ್ವಾಮಿತ್ರನಿಂದ ಸಂಪಾದಿತವಾದುದರಿಂದ ಇದು ವೈಶ್ವಾಮಿತ್ರವೆಂದೂ ಪ್ರಸಿದ್ಧವಾಗಿದೆ. ಈ ರೀತಿಯಾದ ಅನ್ನವನ್ನು ಹೊಂದಿ ಇಂದ್ರನು ಆದಿತ್ಯರೂಪದಿಂದ ಲೋಕದಲ್ಲಿ ಪ್ರಕಾಶಿಸುತ್ತಾ ಈ ಆದಿತ್ಯನೇ ನಾನು ಎಂದು ಧ್ಯಾನದಿಂದ ಪ್ರಾಪ್ತವಾದ ಸರ್ವಾತ್ಮಭಾವವನ್ನು ಪ್ರಕಟಪಡಿಸುತ್ತಾ ಇಂದ್ರನು ಇದನ್ನು ಹೇಳಿದನು. ॥

---

*English Translation*

1. While Visvamitra was going to repeat the hymns of this day (the mahavrata), Indra sat down near him. Visvamitra (guessing that Indra wanted food) said to him, ' This (the verses of the hymn) is food,' and repeated the thousand Brihati verses. By means of this he went to the delightful home of Indra (Svarga).

2. Indra said to him : ' Rishi, thou hast come to my delightful home. Rishi, repeat a second hymn.' Visvamitra (guessing that Indra wanted food) said to him, ' This (the verses of the hymn) is food,' and repeated the thousaud Brihati verses. By means of this he went to the delightful home of Indra (Svarga).

3. Indra said to him : ' Rishi, thou hast come to my delightful home. Rishi, repeat a third hymn.' Visvamitra (guessing that Indra wanted food) said to him, ' This (the verses of the hymn) is food,' and repeated the thousand Brihati verses. By means of this he went to the delightful home of Indra (Svarga).

4. Indra said to him : ' Rishi, thou hast come to my delightful home. I grant thee a boon.' Visvamitra said : ' May I know thee.' Indra said : ' I am Prana (breath), O Rishi, thou art Prana, all things are Prana. For it is Prana who shines as the sun, and I here pervade all regions under that form. This food of mine (the hymn) is my friend and my support (dakshina). This is the food prepared by Visvamitra. I am verily he who shines (the sun).'

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ದ್ವಿತೀಯಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಎರಡನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವು

# ಅಥ ದ್ವಿತೀಯಾರಣ್ಯಕೇ ದ್ವಿತೀಯಾಧ್ಯಾಯೇ ಚತುರ್ಥಃ ಖಂಡಃ

## ಎರಡನೆಯ ಆರಣ್ಯಕದ ಎರಡನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು

---

ತದ್ವಾ ಇದಂ ಬೃಹತೀಸಹಸ್ರಂ ಸಂಪನ್ನಂ ತಸ್ಯ ಯಾನಿ ವ್ಯಂಜನಾನಿ
ತಚ್ಛರೀರಂ ಯೋ ಘೋಷಃ ಸ ಆತ್ಮಾ ಯ ಊಷ್ಮಾಣಃ ಸ ಪ್ರಾಣಃ॥

**ತಿಸೃಷು ತೃಚಾಶೀತಿಷ್ವನ್ನದೃಷ್ಟಿಂ ವಿಧಾಯ ವರ್ಣವಿಶೇಷೇಷು ಶರೀರಾದಿದೃಷ್ಟಿಂ ವಿಧತ್ತೇ- " ತದಿದಾಸ ಭುವನೇಷು " (ಋ. ಸಂ. ಮಂ-೧೦-ಸೂ-೧೨೦-ಋ-೧) ಇತ್ಯಾದಿಕಂ ಯನ್ಮಂತ್ರ-ಜಾತಂ ನಿಷ್ಕೇವಲ್ಯಶಸ್ತ್ರೇ ವಿಹಿತಂ ತದೇವೇದಮಕ್ಷರಗಣನಾರೂಪೇಣ ಬುದ್ಧಿಕೌಶಲೇನ ಬೃಹತೀ-ಸಹಸ್ರಂ ಸಂಪಾದ್ಯ ಧ್ಯಾತವ್ಯಮ್ । ತಸ್ಯ ಬೃಹತೀಸಹಸ್ರಸ್ಯ ಮಧ್ಯೇ ಯಾನಿ ಕಕಾರಾದೀನಿ ವ್ಯಂಜ-ನಾನಿ ಸಂತಿ ತೇಷು ಶರೀರದೃಷ್ಟಿಂ ಕುರ್ಯಾತ್ । ಕಕಾರಾದೀನಾಂ ಹಲಿತಿ ಪಾಣಿನೀಯಸಂಜ್ಞಾ । ವ್ಯಂಜನಮಿತಿ ಶ್ರೌತಸಂಜ್ಞಾ । ತಾಮೇವೋಪಜೀವ್ಯ ಕೌಮಾರವ್ಯಾಕರಣೇ-"ಕಾದೀನಿ ವ್ಯಂಜನಾನಿ" ಇತಿ ಸೂತ್ರಿತಮ್ । ಯೋ ಘೋಷೋ ಘಕಾರಾದಿವರ್ಣಃ ಸ ಆತ್ಮಾ ಮಧ್ಯಶರೀರಮ್ । ಯೇ ತೂಷ್ಮಾಣಃ ಶಷಸಹಾಸ್ತೇ ಪ್ರಾಣವಾಯುಸ್ವರೂಪಾಃ । ಘೋಷೋಷ್ಮಾದಿಸಂಜ್ಞಾಪಿ ಕೌಮಾರೇ ಸೂತ್ರಿತಾ— " ವರ್ಗಪ್ರಥಮದ್ವಿತೀಯಾಃ ಶಷಸಾಶ್ಚಾಘೋಷಾ ಘೋಷವಂತೋಽನ್ಯೇ " " ಶಷಸಹಾ ಊಷ್ಮಾಣಃ " ॥**

ಪೂರ್ವಖಂಡದಲ್ಲಿ ಮೂರು ತೃಚಾಶೀತಿಗಳಲ್ಲಿ ಅನ್ನದೃಷ್ಟಿಯನ್ನು ವಿಧಿಸಿ ಈಗ ವರ್ಣವಿಶೇಷಗಳಲ್ಲಿ ಶರೀರಾದಿ ದೃಷ್ಟಿಯನ್ನು ವಿಧಿಸುತ್ತಾರೆ **ತದಿದಾಸಭುವನೇಷು**(ಋ-ಸಂ-೧೦-೧೨೦-೧ ಇತ್ಯಾದಿ ಮಂತ್ರಸಮೂಹವು ನಿಷ್ಕೇವಲ್ಯ ಶಸ್ತ್ರದಲ್ಲಿ ಹೇಳಿದೆ. ಅಲ್ಲಿ ಬುದ್ಧಿಕೌಶಲದಿಂದ ಅಕ್ಷರಗಳನ್ನು ಎಣಿಸಿ ಬೃಹತೀಸಹಸ್ರವನ್ನು ಕಲ್ಪಿಸಿಕೊಂಡು ಧ್ಯಾನಿಸಬೇಕು. ಆ ಬೃಹತೀಸಹಸ್ರದ ಮಧ್ಯದಲ್ಲಿರುವ ಕಕಾರದಿ ವ್ಯಂಜನಗಳಲ್ಲಿ ಶರೀರದೃಷ್ಟಿಯನ್ನಿಡಬೇಕು. ಕಕಾರಾದಿಗಳಿಗೆ **ಹಲ್** ಎಂದು ಪಾಣಿನೀಯಸಂಜ್ಞೆ. ಶ್ರೌತದಲ್ಲಿ ವ್ಯಂಜನಗಳೆಂದು ಹೇಳಿದೆ. ಇದನ್ನು ಆಶ್ರಯಿಸಿ ಕೌಮಾರವ್ಯಾಕರಣದಲ್ಲಿ **ಕಾದೀನಿ ವ್ಯಂಜನಾನಿ** ಎಂದು ಸೂತ್ರಮಾಡಿ ಹೇಳಿದೆ. ವ್ಯಂಜನಗಳಲ್ಲಿರುವ ಘೋಷಗಳು ಅಂದರೆ ಘಕಾರಾದಿವರ್ಣಗಳು ಆತ್ಮಾ ಅಂದರೆ ಮಧ್ಯಶರೀರವಾಗುತ್ತವೆ. ಊಷ್ಮಾಕ್ಷರಗಳು ಅಂದರೆ ಶಷಸಹಗಳು ಪ್ರಾಣವಾಯುಸ್ವರೂಪಗಳು.

ಏತದ್ಧ ಸ್ಮ ವೈ ತದ್ವಿದ್ವಾನ್ವಸಿಷ್ಠೋ ವಸಿಷ್ಠೋ ಬಭೂವ ತತ ಏತನ್ನಾಮ-
ಧೇಯಂ ಲೇಭೇ ॥

**ತದೇತಚ್ಛರೀರಾದಿಧ್ಯಾನಂ ಪ್ರಶಂಸತಿ–ವಸಿಷ್ಠನಾಮಕೋ ಯೋ ಮಹರ್ಷಿರಸ್ತಿ ಸೋಽಯಂ ತದೇತದ್ವ್ಯಂಜನಾದೀನಾಂ ಶರೀರಾದಿರೂಪತ್ವಂ ವಿದ್ವಾನ್ವಸಿಷ್ಠಶಬ್ದಸ್ಯಾಭಿಧೇಯೋ ಬಭೂವ । ಅತಿಶಯೇನ ನಿವಾಸಹೇತುತ್ವಮಾಚ್ಛಾದಯಿತೃತ್ವಂ ವಾ ವಸಿಷ್ಠತ್ವಮ್। ಪ್ರಾಣೋ ಹಿ ಸ್ವಪ್ರವೇಶೇನ ನಿವಾಸ ಹೇತುರ್ಭವತಿ । ಸ್ವವ್ಯಾಪ್ತ್ಯಾ ಸರ್ವಮಾಚ್ಛಾದಯತಿ । ತಾದೃಶಂ ಪ್ರಾಣಾತ್ಮತ್ವಂ ಧ್ಯಾನೇನ ಪ್ರಾಪ್ತವಾನ್ಮುನಿರಪ್ಯರ್ಥದ್ವಯವತ್ತ್ವೇನ ವಸಿಷ್ಠನಾಮಕತ್ವಂ ಲಬ್ಧವಾನ್ ॥**

ಶರೀರಾದಿಧ್ಯಾನವನ್ನು ಪ್ರಶಂಸುತ್ತಾರೆ. ವಸಿಷ್ಠನೆಂಬ ಮಹರ್ಷಿಯು ಕಕರಾದಿವ್ಯಂಜನಗಳ ಶರೀರಸ್ವರೂಪವನ್ನು ತಿಳಿದುದರಿಂದ ವಸಿಷ್ಠನೆಂಬ ಹೆಸರನ್ನು ಹೊಂದಿದನು. ವಸಿಷ್ಠಶಬ್ದದಿಂದ ನಿವಾಸಕ್ಕೆಕಾರಣವಾಗಿರುವುದು, ಆಚ್ಛಾದನ ಮಾಡುವುದು(ಮುಚ್ಚುವುದು) ಎಂದು ಎರಡು ಅರ್ಥ ತಿಳಿದುಬರುತ್ತದೆ. ಪ್ರಾಣದೇವನು ತನ್ನ ಪ್ರವೇಶದಿಂದ ನಿವಾಸ ಕಾರಣನಾಗುತ್ತಾನೆ. ಮತ್ತು ತನ್ನ ವ್ಯಾಪ್ತಿಯಿಂದ ಎಲ್ಲವನ್ನೂ ಮುಚ್ಚುತ್ತಾನೆ. ಈ ರೀತಿಯಾದ ಪ್ರಾಣಸ್ವರೂಪವನ್ನು ಧ್ಯಾನದಿಂದ ಹೊಂದಿದ ಮುನಿಯೂ ಕೂಡಾ ಆ ಎರಡು ಅರ್ಥಗಳಿಂದ ಕೂಡಿರುವುದರಿಂದ ವಸಿಷ್ಠನೆಂಬ ಹೆಸರನ್ನು ಹೊಂದಿದನು.

## ಏತದು ಹೈವೇಂದ್ರೋ ವಿಶ್ವಾಮಿತ್ರಾಯ ಪ್ರೋವಾಚೈತದು ಹೈವೇಂದ್ರೋ ಭರದ್ವಾಜಾಯ ಪ್ರೋವಾಚ ತಸ್ಮಾತ್ಸ ತೇನ ಬಂಧುನಾ ಯಜ್ಞೇಷು ಹೂಯತೇ ॥

**ಪುನರಪಿ ಪ್ರಕಾರಾಂತರೇಣ ಪ್ರಶಂಸತಿ—ಏತದೇವ ವ್ಯಂಜನಾದಿಷು ಶರೀರತ್ವಾದಿ ದರ್ಶನ- ಮಿಂದ್ರೋ ವಿಶ್ವಾಮಿತ್ರಭರದ್ವಾಜಾಭ್ಯಾಮನುಪದಿಷ್ಟವಾನ್ । ತಸ್ಮಾತ್ಸ ಇಂದ್ರಸ್ತೇನ ಶಿಷ್ಯರೂಪೇಣ ಬಂಧುನಾ ಸೋಮಯಾಗೇಷು ಸುಬ್ರಹ್ಮಣ್ಯಾಯಾಮಿಂದ್ರಾಽಽಗಚ್ಛ ಹರಿವ ಆಗಚ್ಛೇತ್ಯೇವಂ ಸಮಾ- ಹೂಯತೇ । ಮಹತೇಂದ್ರೇಣ ಮಹದ್ಭ್ಯಮುಪದಿಷ್ಟತ್ವಾತ್ಪ್ರಶಸ್ತಮಿತ್ಯರ್ಥಃ ॥**

ಪೂರ್ವೋಕ್ತವಾದ ಅರ್ಥವನ್ನೇ ಪ್ರಕಾರಾಂತರದಿಂದ ವಿವರಿಸುತ್ತಾರೆ. ಇಂದ್ರನು ವ್ಯಂಜನಾದಿಗಳಲ್ಲಿ ಶರೀರ ದೃಷ್ಟಿಯನ್ನು ವಿಶ್ವಾಮಿತ್ರಭರದ್ವಾಜಮುನಿಗಳಿಗೆ ಉಪದೇಶಿಸಿದನು. ಆದುದರಿಂದ ಆ ಇಂದ್ರನು ಶಿಷ್ಯರೂಪಬಂಧುವಿನಿಂದ ಸೋಮಯಾಗಗಳಲ್ಲಿ ಇಂದ್ರಾಗಚ್ಛ ಹರಿವಃ ಇತ್ಯಾದಿಮಂತ್ರಗಳಿಂದ ಕರೆಯಲ್ಪಡುತ್ತಾನೆ. ಶ್ರೇಷ್ಠನಾದ ಇಂದ್ರನಿಂದ ಮಹಾತ್ಮರಾದಮುನಿಗಳಿಗೆ ಉಪದಿಷ್ಟವಾದುದರಿಂದ ಇದು ಅತಿಪ್ರಶಸ್ತವಾಗಿದೆಯೆಂದರ್ಥ.

## ತದ್ವಾ ಇದಂ ಬೃಹತೀಸಹಸ್ರಂ ಸಂಪನ್ನಂ ತಸ್ಯ ವಾ ಏತಸ್ಯ ಬೃಹತೀ- ಸಹಸ್ರಸ್ಯ ಸಂಪನ್ನಸ್ಯ ಷಟ್‌ತ್ರಿಂಶತಮಕ್ಷರಾಣಾಂ ಸಹಸ್ರಾಣಿ ಭವಂತಿ ತಾವಂತಿ ಶತಸಂವತ್ಸರಸ್ಯಾಹ್ನಾಂ ಸಹಸ್ರಾಣಿ ಭವಂತಿ ವ್ಯಂಜನೈರೇವ ರಾತ್ರೀರಾಪ್ನುವಂತಿ ಸ್ವರೈರಹಾನಿ ॥

ಪುನರಪಿ ವ್ಯಂಜನಾನಿ ಸ್ವರಾಂಶ್ಚ ವಿಭಜ್ಯ ತತ್ರ ರಾತ್ರಿಧ್ಯಾನಮಹರ್ಧ್ಯಾನಂ ಚ ವಿಧತ್ತೇ— ವಿಶೇಷವಿಧಿಸಂಬಂಧಾರ್ಥಂ ತದ್ವಾ ಇತ್ಯಾದೇಃ ಪುನಃಪುನರನುವಾದಃ । ಷಟ್‌ತ್ರಿಂಶದಕ್ಷರಾ ಬೃಹತೀ । ತಸ್ಯಾಂ ಚ ಸಹಸ್ರಗುಣಿತಾಯಾಮಕ್ಷರಾಣ್ಯಪಿ ಷಟ್‌ತ್ರಿಂಶತ್ಸಂಖ್ಯಾಕೈಃ ಸಹಸ್ರೈರ್ಯುಕ್ತಾನಿ ಭವಂತಿ। ಸಂವತ್ಸರಶ್ಚ ಷಷ್ಟ್ಯುತ್ತರಶತತ್ರಯದಿನಾತ್ಮಕಃ । ತಸ್ಮಿನ್ಸಂವತ್ಸರೇ ಶತಗುಣಿತಾನಿ ದಿನಾನ್ಯಪಿ ಷಟ್‌-ತ್ರಿಂಶತ್ಸಹಸ್ರ ಸಂಖ್ಯಾಕಾನಿ ಭವಂತಿ । ತತಃ ಸಂಖ್ಯಾಸಾಮ್ಯೇ ಸತ್ಯಕ್ಷರಗತೇಷು ತಾವತ್ಸಂಖ್ಯಾಕೇಷು ವ್ಯಂಜನೇಷು ತಾವತ್ಸಂಖ್ಯಾಕರಾತ್ರಿದೃಷ್ಟಿಂ ಕುರ್ಯಾತ್ । ಅಕಾರಮಾರಭ್ಯ ಮಾತೃಕಾಯಾ-ಮೌಕಾರಪರ್ಯಂತಾ ವರ್ಣಾಃ ಸ್ವರಾಃ । ಅತ ಏವ ಕುಮಾರೇಣೈವಂ ಸೂತ್ರಿತಮ್— "ಸಿದ್ಧೋ ವರ್ಣಸಮಾಮ್ನಾಯಃ" "ತತ್ರ ಚತುರ್ದಶಾದೌ ಸ್ವರಾಃ" ಇತಿ ॥

ತಿರುಗಿಯೂ ಸ್ವರ, ವ್ಯಂಜನಗಳನ್ನು ವಿಭಾಗಿಸಿ ಅವುಗಳಲ್ಲಿ ರಾತ್ರಿಧ್ಯಾನ, ಹಗಲುಧ್ಯಾನವನ್ನು ವಿವರಿಸುತ್ತಾರೆ. ಮೂವತ್ತಾರು ಅಕ್ಷರಗಳುಳ್ಳದ್ದು ಬೃಹತೀಛಂದಸ್ಸು. ಇದನ್ನು ಸಾವಿರಬಾರಿ ಆವೃತ್ತಿಮಾಡಿದಾಗ ಮೂವತ್ತಾರು ಅಕ್ಷರಗಳೂ ಸಾವಿರದಿಂದ ಗುಣಿಸಿದನಂತರ ಆಗುತ್ತವೆ. (36000) ಸಂವತ್ಸರವೂ ಕೂಡಾ ಮೂನ್ನೂರಅರವತ್ತು ದಿನಗಳಿಂದ ಕೂಡಿದೆ. ನೂರರಿಂದ ಗುಣಿಸಿದಾಗ ಅವೂ ಮೂವತ್ತಾರುಸಾವಿರವಾಗುತ್ತವೆ. ಹೀಗೆ ಸಂಖ್ಯಾಸಾಮ್ಯಬಂದಾಗ ಆ ಸಂಖ್ಯೆಯಿಂದ ಕೂಡಿದ ವ್ಯಂಜನಗಳಲ್ಲಿ ಅಷ್ಟು ಸಂಖ್ಯೆಯಿಂದ ಕೂಡಿದ ರಾತ್ರಿದೃಷ್ಟಿಯನ್ನಿಡಬೇಕು. ಅದರಂತೆ ಸ್ವರಗಳಲ್ಲಿ ಅಹರ್ದೃಷ್ಟಿ(ಹಗಲು)ಯನ್ನು ಮಾಡಬೇಕು. **ತತ್ರ ಚತುರ್ದಶಾಽಽದೌ ಸ್ವರಾಃ** ಎಂದು ಅಕಾರವನ್ನಾರಂಭಿಸಿ ಔಕಾರದ ವರೆಗೆ ಹದಿನಾಲ್ಕುಸ್ವರಗಳೆಂದು ಕೌಮಾರವ್ಯಾಕರಣದಲ್ಲಿ ಹೇಳಿದೆ.

ತದ್ವಾ ಇದಂ ಬೃಹತೀಸಹಸ್ರಂ ಸಂಪನ್ನಂ ತಸ್ಯ ವಾ ಏತಸ್ಯ ಬೃಹತೀ-ಸಹಸ್ರಸ್ಯ ಸಂಪನ್ನಸ್ಯ ಪರಸ್ತಾತ್ಪ್ರಜ್ಞಾಮಯೋ ದೇವತಾಮಯೋ ಬ್ರಹ್ಮಮಯೋಽಮೃತಮಯಃ ಸಂಭೂಯ ದೇವತಾ ಅಪ್ಯೇತಿ ಯ ಏವಂ ವೇದ ॥

**ಯಥೋಕ್ತಸರ್ವವಿಶೇಷಣವಿಶಿಷ್ಟ ಪ್ರಾಣದೇವಧ್ಯಾನಸ್ಯ ಪ್ರಧಾನಫಲಂ ದರ್ಶಯತಿ— ಪ್ರಜ್ಞಾಮಯತ್ವಾದಿಗುಣಚತುಷ್ಟಯೇನ ಫಲೇನ ಚ ಸಂಬಂಧಾರ್ಥಂ ತದ್ವಾ ಇದಮಿತ್ಯನುವಾದಃ । ಬುದ್ಧಿವಿಶೇಷಸಂಪಾದಿತಸ್ಯ ಬೃಹತೀಸಹಸ್ರಸ್ಯ ಸ್ವರೂಪಭೂತಃ ಪ್ರಾಣದೇವಃ ಪ್ರಜ್ಞಾಮಯಶ್ಚಿ-ತ್ಸ್ವರೂಪಃ ಸರ್ವಜ್ಞ ಇತ್ಯರ್ಥಃ । ದೇವತಾಮಯೋಽಗ್ನಿವಾಯ್ವಾದಿ ಸರ್ವದೇವತಾಸಮಷ್ಟ್ಯಾ-ತ್ಮಕಃ । ಬ್ರಹ್ಮಮಯಃ ಸರ್ವವೇದಾತ್ಮಕಃ । ಅಮೃತಮಯಸ್ತತ್ವಜ್ಞಾನೋತ್ಪಾದನೇನ ಮೋಕ್ಷ-ಹೇತುತ್ವಾನ್ಮುಕ್ತಿರೂಪಃ । ಯಃಪುಮಾನೇವಮುಪಾಸತೇ ಸ ಪುಮಾನೇವ ತಾ ಅಗ್ನಿವಾಯ್ವಾದಿಕಾಃ ಸಂಭೂಯ ಸರ್ವಾ ಅಪ್ಯೇಕೀಕೃತ್ಯಾಪ್ಯೇತಿ ತದ್ದೇವತಾಸಮಷ್ಟಿರೂಪಂ ಹಿರಣ್ಯಗರ್ಭಂಪ್ರಾಪ್ನೋತಿ ॥**

ಪೂರ್ವೋಕ್ತವಿಶೇಷಣವಿಶಿಷ್ಟವಾದ ಪ್ರಾಣದೇವಧ್ಯಾನದ ಪ್ರಧಾನಫಲವನ್ನು ವಿವರಿಸುತ್ತಾರೆ. ಪ್ರಜ್ಞಾಮಯತ್ವಾದಿ ಗುಣಚತುಷ್ಟಯ ಮತ್ತು ಫಲದೊಡನೆ ಸಂಬಂಧತಿಳಿಸಲು **ತದ್ವಾ ಇದಂ** ಎಂದು ಅನುವಾದಮಾಡಿದೆ. ಬುದ್ಧಿವಿಶೇಷದಿಂದ ಸಂಪಾದಿಸಿದಬೃಹತೀಸಹಸ್ರದ ಸ್ವರೂಪವುಳ್ಳ ಪ್ರಾಣದೇವನು ಪ್ರಜ್ಞಾಮಯನು ಅಂದರೆ ಸರ್ವಜ್ಞನು. **ದೇವತಾಮಯನು**

ಅಂದರೆ ಅಗ್ನಿವಾಯುಮುಂತಾದ ಸಕಲದೇವತಾಸಮಷ್ಟಿರೂಪನು. ಸರ್ವದೇವಾತ್ಮಕನಾದುದರಿಂದಲೇ **ಬ್ರಹ್ಮಮಯನು.** ತತ್ವಜ್ಞಾನವನ್ನು ಹುಟ್ಟಿಸಿ ಮೋಕ್ಷಕಾರಣನಾದುದರಿಂದ **ಅಮೃತಮಯನು** ಅಂದರೆ ಮುಕ್ತಿರೂಪನು. ಈ ರೀತಿಯಾಗಿ ತಿಳಿದು ಯಾರು ಉಪಾಸಿಸುವರೋ ಅವರು ಅಗ್ನಿವಾಯ್ವಾದಿದೇವತಾಸಮಷ್ಟಿರೂಪನಾದ ಹಿರಣ್ಯಗರ್ಭನನ್ನು ಹೊಂದುತ್ತಾರೆ.

## ತದ್ಯೋಽಹಂ ಸೋಽಸೌ ಯೋಽಸೌ ಸೋಽಹಮ್ ||

ತಸ್ಯ ಚೋಪಾಸಕಸ್ಯಾಧ್ಯಾತ್ಮಮಧಿದೈವಂ ಚ ವ್ಯತಿಹಾರೇಣ ಧ್ಯಾನಂ ವಿಧತ್ತೇ—ತತ್ತಸ್ಮಿನ್ಸರ್ವಾತ್ಮಕೇ ಪ್ರಾಣದೇವತಾಸ್ವರೂಪೇ ಯೋಽಹಮುಪಾಸಕಶರೀರವರ್ತೀ ಸೋಽಸೌ ಸ ಏವಾಽಽದಿತ್ಯಮಂಡಲಸ್ಥಃ ಪುರುಷಃ। ತಥಾ ಯೋಽಸಾವಧಿದೇ(ದೈ)ವಮಾದಿತ್ಯಮಂಡಲಸ್ಥೋ ಯಃ ಪುರುಷಃ ಸೋಽಹಂ ಸ ಏವೋಪಾಸಕಶರೀರಸ್ಥೋಽಹಮಸ್ಮಿತ್ಯೇವಮನ್ಯೋಽನ್ಯತಾದಾತ್ಮ್ಯಂ ಧ್ಯಾಯೇತ್ ||

ಉಪಾಸಕನಿಗೆ ಅಧ್ಯಾತ್ಮ, ಅಧಿದೈವಗಳ ವ್ಯತಿಹಾರದಿಂದ (ಒಂದರಲ್ಲಿ ಒಂದು ಆರೋಪಿಸಿ) ಧ್ಯಾನವನ್ನು ವಿಧಿಸುತ್ತಾರೆ. ಸರ್ವಾತ್ಮಕನಾದ ಪ್ರಾಣದೇವನಲ್ಲಿ ಉಪಾಸಕನ ಶರೀರದಲ್ಲಿರುವವನು ಯಾವನೋ ಅವನೇ ಆದಿತ್ಯಮಂಡಲದಲ್ಲಿರುವ ಪುರುಷನೆಂದೂ, ಆದಿತ್ಯಮಂಡಲದಲ್ಲಿ ಯಾವ ಪುರುಷನಿರುವನೋ ಅವನೇ ಉಪಾಸಕ ಶರೀರದಲ್ಲಿರುವ ನಾನೆಂದು ಅನ್ಯೋನ್ಯತಾದಾತ್ಮ್ಯಭಾವನೆಯಿಂದ ಧ್ಯಾನಿಸಬೇಕು.

## ತದುಕ್ತಮೃಷಿಣಾ—ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚೇತಿ ||

ಅಧ್ಯಾತ್ಮಮಧಿದೈವಂ ಚ ಧ್ಯೇಯವಸ್ತುನ ಏಕತ್ವೇ ಸಂವಾದಾರ್ಥಂ ಮಂತ್ರಮುದಾಹರತಿ—ಕೃತ್ಸ್ನಮಂತ್ರಸ್ಯ ಪ್ರತೀಕದರ್ಶನಾಯ ಚತುರ್ಥಪಾದಃ ಪಠಿತಃ । ಸ ಚ ಮಂತ್ರಃ ಸಂಹಿತಾಯಾಮೇವಮಾಮ್ನಾತಃ —

" ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ||
ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ || "

(ಋ. ಸಂ. ಮಂ-೧-ಸೂ-೧೧೫-ಋ-೧)

ಅನೀಕಶಬ್ದೋ ಮುಖವಾಚೀ ಸೈನ್ಯವಾಚೀ ವಾ । ಯದೇತದಾದಿತ್ಯಮಂಡಲಂ ತದೇತದ್ದೇವಾನಾಂ ಮುಖಂ ಸರ್ವವ್ಯವಹಾರಹೇತುತ್ವಾತ್ । ದೇವಾನಾಂ ಮಧ್ಯೇ ಮುಖ್ಯಮಿತ್ಯರ್ಥಃ । ಸೈನ್ಯಪಕ್ಷೇ ಬಹುವಿಧರಶ್ಮಿಸಮೂಹರೂಪಮಿತಿ ವ್ಯಾಖ್ಯೇಯಮ್ । ತಚ್ಚ ಮಂಡಲಂ ಚಿತ್ರಂ ಚಾಯನೀಯಮ್ ಪೂಜನೀಯಮ್ । ಯದ್ವಾ ಸರ್ವದಿಕ್ಷು ರಶ್ಮಿಪ್ರಸಾರಣೇನ ವಿಚಿತ್ರಮ್ । ದೇವಾನಾಂ ಮುಖಮಿತ್ಯೇತದೇವ ಚಕ್ಷುರಾದಿತ್ಯಾದಿನಾ ಪ್ರಪಂಚ್ಯತೇ—ಮಿತ್ರವರುಣಾದೀನಾಂ ಚಕ್ಷುಃಸ್ಥಾನೀಯಮಿದಂ ಮಂಡಲಮ್ । ಏತದೀಯೇನ ಹಿ ಪ್ರಕಾಶೇನ ಸರ್ವೇ ದೇವಾಃ ಪಶ್ಯಂತಿ । ತಚ್ಚ ಮಂಡಲಂ ಲೋಕತ್ರಯಮಾಪ್ರಾಃ ಸರ್ವತಃ ಪೂರ್ಣಂ ಸಮ್ವರ್ತತೇ । ತನ್ಮಂಡಲಸ್ಥಃ ಸೂರ್ಯೋ ಜಗತೋ ಜಂಗಮಸ್ಯ ತಸ್ಥುಷಶ್ಚ ಸ್ಥಾವರಸ್ಯಾಪಿ ಪ್ರಾಣಿಜಾತಸ್ಯಾತ್ಮಾ ಪ್ರತ್ಯಕ್ಸ್ವರೂಪಮಿತಿ ಮಂತ್ರಸ್ಯಾರ್ಥಃ ||

ಅಧ್ಯಾತ್ಮ, ಅಧಿದೈವವೆಂಬ ಇವೆರಡು ಧ್ಯೇಯವಸ್ತುಗಳು ಒಂದೇ ಆಗಿವೆಯೆಂಬುದನ್ನಿಲ್ಲಿ ಸಿದ್ಧಾಂತತೋರಿಸಲು ಮಂತ್ರವನ್ನು ಉದಾಹರಿಸುತ್ತಾರೆ. ಸಂಪೂರ್ಣಮಂತ್ರದ ಪ್ರತೀಕವನ್ನು ತಿಳಿಸಲು ನಾಲ್ಕನೇಪಾದ ಮಾತ್ರ ಹೇಳಿದೆ. ಆ ಮಂತ್ರ ಹೀಗಿದೆ.

ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ||
ಆ ಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ
(ಋ. ಸಂ. ೧–೧೧೫-೧)

ಇಲ್ಲಿ ಅನೀಕ ಶಬ್ದವು ಮುಖವಾಚಕ ಮತ್ತು ಸೈನ್ಯವಾಚಕವಾಗಿದೆ. ಆದಿತ್ಯಮಂಡಲವು ಸರ್ವವ್ಯವಹಾರಕ್ಕೆ ಕಾರಣವಾದ ದೇವತೆಗಳ ಮುಖವು. ದೇವತೆಗಳ ಮಧ್ಯದಲ್ಲಿ ಮುಖ್ಯವೆಂದು ತಾತ್ಪರ್ಯ. ಸೈನ್ಯಾರ್ಥದಲ್ಲಿ ನಾನಾವಿಧ ಗಳಾದ ರಶ್ಮಿಸಮೂಹವೆಂದರ್ಥ. ಈ ಸೂರ್ಯಮಂಡಲವು ಚಿತ್ರಂಪೂಜಿಸಲು ಯೋಗ್ಯವಾದುದು. ಅಥವಾ ಎಲ್ಲಾದಿಕ್ಕು ಗಳಲ್ಲಿ ಕಿರಣಪ್ರಸಾರದಿಂದ ವಿಚಿತ್ರವಾದುದು ಎಂದರ್ಥ. ದೇವತೆಗಳ ಮುಖವೆಂಬುದನ್ನು ವಿವರಿಸುತ್ತಾರೆ. ಈ ಸೂರ್ಯ ಮಂಡಲವು ಮಿತ್ರವರುಣಾದಿಗಳ ಕಣ್ಣಾಗಿದೆ. ಇದರ ಪ್ರಕಾಶದಿಂದಲೇ ಎಲ್ಲಾ ದೇವತೆಗಳು ನೋಡುತ್ತಾರೆ. ಆಪ್ರಾ– ಈ ಮಂಡಲವು ಲೋಕತ್ರಯವನ್ನು ವ್ಯಾಪಿಸಿ ಪೂರ್ಣವಾಗಿರುತ್ತದೆ. ಈ ಮಂಡಲದಲ್ಲಿರುವ ಸೂರ್ಯನು ಜಗತಃ– ಜಂಗಮದ, ತಸ್ಥುಷಶ್ಚಃ ಸ್ಥಾವರಾತ್ಮಗಳಾದ ಪ್ರಾಣಿಜಾತದ ಆತ್ಮಾ ಪ್ರತ್ಯಕ್‌ಸ್ವರೂಪನು. (ಎಲ್ಲರಲ್ಲಿಯೂ ಆತ್ಮರೂಪದಿಂದ ಇರುವವನು.)

## ಏತದು ಹೈವೋಪೇಕ್ಷೇತೋಪೇಕ್ಷೇತ ||

ಏತದ್ವಿಜ್ಞಾನಮುಪಸಂಹರತಿ—ಏತದೇವ ಸರ್ವಾತ್ಮಕಮಾದಿತ್ಯಸ್ವರೂಪಂ ಗುರುಮುಖಾ- ದುಪೇಕ್ಷೇತ ಸಾಕ್ಷಾತ್ಕುರ್ಯಾತ್ | ಅಭ್ಯಾಸೋಽಧ್ಯಾಯ ಸಮಾಪ್ತ್ಯರ್ಥಃ ||

ತದ್ಯೋಽಹಮಿತ್ಯತ್ರ ಯೋ ವ್ಯತಿಹಾರ ಉಕ್ತಃ ಸೋಽಯಂ ತೃತೀಯಾಧ್ಯಾಯಸ್ಯ ತೃತೀಯಪಾದೇ ಚಿಂತಿತಃ—

" ವ್ಯತಿಹಾರೇ ಸ್ವಾತ್ಮರವ್ಯೋರೇಕಧಾ ಧೀರುತ ದ್ವಿಧಾ
ವಸ್ತ್ವೈಕ್ಯಾದೇಕಧೈವ ಸ್ಯಾದ್ದಾರ್ಢ್ಯಾಯ ವ್ಯತಿಹಾರಧೀಃ ||
ಐಕ್ಯೇಽಪಿ ವ್ಯತಿಹಾರೋಕ್ತ್ಯಾ ಧೀರ್ದ್ವೇಧೇಶಸ್ಯ ಜೀವತಾ |
ಯುಕ್ತೋಽಸ್ಯೈ ವಾಚನಿಕೀ ಮೂರ್ತಿವದ್ದಾರ್ಢ್ಯಮಾರ್ಥಿಕಮ್ ||"

ಐತರೇಯಕೇ ಪಠ್ಯತೇ—"ತದ್ಯೋಽಹಂ ಸೋಽಸೌ ಯೋಽಸೌ ಸೋಽಹಮ್" ಇತಿ || ತಸ್ಯಾಯಮರ್ಥಃ—ಯ ಏಷ ದೇಹೇಂದ್ರಿಯಸಾಕ್ಷೀ ಜೀವಾತ್ಮಾ ಸ ಏವಾದಿತ್ಯಮಂಡಲವರ್ತೀ ಪರಮಾತ್ಮಾ, ಯೋ ಮಂಡಲವರ್ತೀ ಸ ಏವಾಸ್ಮದ್ದೇಹಾದಿವರ್ತೀತಿ | ತತ್ರ ಸ್ವದೇಹರವಿಮಂಡಲ- ಯೋರನ್ಯೋನ್ಯವ್ಯತಿಹಾರೇ ಶ್ರೂಯಮಾಣೇಽಪಿ ಜೀವಬ್ರಹ್ಮೈಕ್ಯಲಕ್ಷಣಸ್ಯ ವಸ್ತುನ ಏಕತ್ವಾದೇಕ- ಧೈವ ಬುದ್ಧಿಃ ಕರ್ತವ್ಯಾ | ನ ಚ ವ್ಯತಿಹಾರಪಾಠವೈಯರ್ಥ್ಯಮೇಕಸ್ಯಾಪಿ ವಸ್ತುನೋ ದಾರ್ಢ್ಯಾಯ ತದುಪಪತ್ತೇಃ, ಇತಿ ಪ್ರಾಪ್ತೇ ಬ್ರೂಮಃ—ನ ಖಲ್ವಿದಂ ತತ್ತ್ವಾವಬೋಧಪ್ರಕರಂ ಯೇನೈಕತ್ವಪ್ರತಿ-

ಪತ್ತಿದಾರ್ಢ್ಯಮಪೇಕ್ಷತೇ। ಕಿಂ ತರ್ಹಿ ಸಗುಣೋಪಾಸ್ತಿಪ್ರಕರಣಮ್। ಉಪಾಸ್ತಿಶ್ಚ ಯಥಾವಚನಮನುಷ್ಠೇಯಾ। ತಯೋರ್ವ್ಯತಿಹಾರೇಣ ದ್ವೇಧಾ ಬುದ್ಧಿಃ ಕರ್ತವ್ಯಾ। ನನ್ವೇವಂ ಸತಿ ಜೀವಸ್ಯ ಬ್ರಹ್ಮೈಕ್ಯಮುತ್ಕರ್ಷಾಯ ಕಲ್ಪತೇ। ಬ್ರಹ್ಮಣಸ್ತು ಜೀವೈಕ್ಯಮಪಕರ್ಷಾಯ ಸ್ಯಾದಿತಿ ಚೇನ್ನಾಯಂ ದೋಷಃ। ಯಥಾದಿ ದೇಹಾದಿರಹಿತಸ್ಯಾಪ್ಯುಪಾಸಕ ಚಿತ್ತಸ್ಥೈರ್ಯಾರ್ಥಂ ಚತುರ್ಭುಜಾಷ್ಟಭುಜಾದಿಮೂರ್ತಿವ್ಯಪದೇಶೇಽಪಿ ನಾಪಕರ್ಷಃ, ತಥಾವಚನಬಲಾದೀಶ್ವರಸ್ಯ ಜೀವತ್ವೋಪಾಸನೇ ಕಾ ತವ ಹಾನಿಃ। ಯದ್ಯುಪಾಸನಸ್ಯ ವ್ಯತಿಹಾರೇಽನುಷ್ಠೀಯಮಾನೇಽರ್ಥಾಜ್ಜೀವಬ್ರಹ್ಮಣೋರೇಕತ್ವ ಪ್ರತಿಪತ್ತಿರ್ದೃಢಾ ಭವೇತ್ತರ್ಹಿ ಚರಿತಾರ್ಥಾಃ ಸಂಪದ್ಯಾಮಹೇ। ತಸ್ಮಾದ್ವ್ಯತಿಹಾರೇಣ ದ್ವಿಧಾ ಬುದ್ಧಿಃಕರ್ತವ್ಯಾ ॥

ಈ ರೀತಿಯಾದ ವಿಜ್ಞಾನದ ಉಪಸಂಹಾರವನ್ನು ತೋರಿಸುತ್ತಾರೆ. ಈ ಸರ್ವಾತ್ಮಕವಾದ ಆದಿತ್ಯಸ್ವರೂಪವನ್ನು ಗುರುಮುಖದಿಂದಲೇ ಸಾಕ್ಷಾತ್ಕರಿಸಬೇಕು. ದ್ವಿರಾವೃತ್ತಿ ಅಧ್ಯಾಯಸಮಾಪ್ತಿಯನ್ನು ತಿಳಿಸುತ್ತದೆ.

ಹಿಂದೆ ಹೇಳಿದ ತಾದಾತ್ಮ್ಯಧ್ಯಾನವು ತೃತಿಯಾಧ್ಯಾಯದ ಮೂರನೇ ಪಾದದಲ್ಲಿ ವಿವರಿಸಿದೆ. ಐತರೇಯಕದಲ್ಲಿ ಹೀಗೆ ಹೇಳಿದೆ: **ತದ್ಯೋಽಹಂ ಸೋಽಸೌ ಯೋಽಸೌ ಸೋಽಹಮ್.** ಇದರ ಅರ್ಥ. ದೇಹೇಂದ್ರಿಯಸಾಕ್ಷಿಯಾದ ಯಾವ ಜೀವಾತ್ಮನಿರುವನೋ ಅವನೇ ಸೂರ್ಯಮಂಡಲದಲ್ಲಿರುವ ಪರಮಾತ್ಮನು. ಸೂರ್ಯಮಂಡಲದಲ್ಲಿರುವವನೇ ನಮ್ಮ ದೇಹದಲ್ಲಿರುವನು. ಇಲ್ಲಿ ಪರಸ್ಪರತಾದಾತ್ಮ್ಯ ತೋರಿದರೂ ಜೀವಬ್ರಹ್ಮೈಕ್ಯರೂಪ ವಸ್ತುವು ಒಂದೇ ಎಂಬ ಬುದ್ಧಿ ಇರಬೇಕು. ಹಾಗಾದರೆ ವ್ಯತೀಹಾರ ಹೇಳಿರುವುದು ವ್ಯರ್ಥವಲ್ಲವೇ ಅಂದರೆ ವಸ್ತುದಾರ್ಢ್ಯಪ್ರತಿಪತ್ತಿಗೋಸ್ಕರ ಅದು ಸಾರ್ಥಕವಾಗಿದೆ. ಎಂದು ಪೂರ್ವಪಕ್ಷಿಯ ಆ ಶಂಕೆ. ಅದಕ್ಕೆ ಸಮಾಧಾನ ತೋರಿಸುತ್ತಾರೆ. ಇದು ತತ್ತ್ವಜ್ಞಾನಬೋಧಪ್ರಕರಣವಲ್ಲ. ಸಗುಣೋಪಾಸನಾಪ್ರಕರಣ ಹೇಗೆ ಶ್ರುತಿವಚನವಿದೆಯೋ ಹಾಗೆ ಉಪಾಸನೆ ಮಾಡಬೇಕು. ಜೀವಪರಮಾತ್ಮರಿಗೆ ವ್ಯತಿಹಾರ ಧ್ಯಾನ ಹೇಳಿರುವುದರಿಂದ ಎರಡುರೀತಿ ಬುದ್ಧಿಯೇ ಉಚಿತವಾಗಿದೆ. ಹೀಗೆ ದ್ವೇಧಾಭಾವನೆ ಇದ್ದರೆ ಜೀವನಿಗೆ ಬ್ರಹ್ಮೈಕ್ಯ ಹೇಳಿದಾಗ ಉತ್ಕರ್ಷಸಿದ್ಧವಾದರೂ, ಬ್ರಹ್ಮನಿಗೆ ಜೀವೈಕ್ಯಹೇಳಿದಾಗ ಅಪಕರ್ಷ ಬರುವುದಿಲ್ಲವೇ ಎಂದರೆ ಇದರಿಂದ ಯಾವದೋಷಕ್ಕೂ ಅವಕಾಶವಿಲ್ಲ. ಏಕೆಂದರೆ ಉಪಾಸಕನ ಚಿತ್ತಸ್ಥೈರ್ಯಕ್ಕೋಸ್ಕರ ದೇಹಾದಿರಹಿತನಾದರೂ ಪರಮಾತ್ಮನಿಗೆ ನಾಲ್ಕುತೋಳಿನ, ಅಥವಾ ಎಂಟುತೋಳಿನ ಮೂರ್ತಿಯನ್ನು ಕಲ್ಪಿಸುವುದರಿಂದ ಹೇಗೆ ಅಪಕಷವುಂಟಾಗುವುದಿಲ್ಲವೋ ಆದರಂತೆ ಶ್ರುತಿವಚನದಿಂದ ಈಶ್ವರನೇ ಜೀವನೆಂದು ಉಪಾಸಿಸಿದರೂ ಯಾವ ದೋಷವೂ ಇಲ್ಲ. ಈ ಉಪಾಸನೆಗೋಸ್ಕರ ವ್ಯತಿಹಾರಧ್ಯಾನಾನುಷ್ಠಾನಸಮಯದಲ್ಲ ಜೀವಬ್ರಹ್ಮರಿಗಿರುವ ಏಕತ್ವಜ್ಞಾನವು ದೃಢವಾಗುವುದಾದರೆ ಚಾರಿತಾರ್ಥ್ಯ ಹೊಂದಿದಂತಯೇ. ಆದುದರಿಂದ ತಾದಾತ್ಮ್ಯಾನುಸಂಧ್ಯಾನದಿಂದ ಎರಡುರೀತಿಯಾಗಿ ತಿಳಿಯುವುದೇ ಯುಕ್ತವಾಗಿದೆ.

---

*English Translation*

---

1. This then becomes perfect as a thousand of Brihati verses. Its consonates form its body, its (vowels) the soul, its sibilants the air of the breath.

2. He who knew this became Vasishtha he took this name from thence.

3. Indra verily declared this to Visvamitra, and Indra verily declared this to Bharadvaga. Therefore Indra is invoked by him as a friend.

4. This becomes perfect as a thousand of Brihati verses, and of that hymn perfect with a thousand Brihati verses, there are 36,000 syllables. So many are also the thousands of days of a hundred years (36,000). With the consonants they fill the nights, with the vowels the days.

5. This becomes perfect as a thousand of Brihati verses. He who knows this. after this thousand of Brihatis thus accomplished, becomes full of knowledge, full of the gods, full of Brahman, full of the immortal, and then goes also to the gods.

6. What I am (the worshipper), that is he (sun); what he is, that am I.

7. This has been said by a Rishi (Rv. I. 115, 1); The sun is the self of all that moves and rests.

8. Let him look to that, let him look to that !

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ದ್ವಿತೀಯಾಧ್ಯಾಯೇ ಚತುರ್ಥಃ ಖಂಡಃ

ಇತಿ ಬಹ್ವೃಚ ಬ್ರಾಹ್ಮಣಾರಣ್ಯಕ ಕಾಂಡೇ ದ್ವಿತೀಯಾರಣ್ಯಕೇ ದ್ವಿತೀಯೋಽಧ್ಯಾಯಃ ||

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಎರಡನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವು ||

ಇಲ್ಲಿಗೆ ಸಾಯಣಾಚಾರ್ಯ ವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಎರಡನೆಯ ಆರಣ್ಯಕದಲ್ಲಿ
ಎರಡನೆಯ ಅಧ್ಯಾಯವು ಸಮಾಪ್ತವಾದುದು ||



# ಅಥ ದ್ವಿತೀಯಾರಣ್ಯಕೇ ತೃತೀಯೋಽಧ್ಯಾಯೇ ಪ್ರಥಮಃ ಖಂಡಃ

## ಎರಡನೆಯ ಆರಣ್ಯದ ಮೂರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

**ಯೋ ಹ ವಾ ಆತ್ಮಾನಂ ಪಂಚವಿಧಮುಕ್ಥಂ ವೇದ ಯಸ್ಮಾದಿದಂ ಸರ್ವ ಮುತ್ತಿಷ್ಠತಿ ಸ ಸಂಪ್ರತಿವಿತ್ಪೃಥಿವೀಂ ವಾಯುರಾಕಾಶ ಆಪೋ ಜ್ಯೋತೀಂಷೀತ್ಯೇಷ ವಾ ಆತ್ಮೋಕ್ಥಂ ಪಂಚವಿಧಮೇತಸ್ಮಾದ್ಧೀದಂ ಸರ್ವಮುತ್ತಿಷ್ಠತ್ಯೇತಮೇವಾಪ್ಯೇತ್ಯಯನಂ ಹ ವೈ ಸಮಾನಾನಾಂ ಭವತಿ ಏವಂ ವೇದ ||**

ದ್ವಿತೀಯೇ ಮಹರ್ಷಿಮಂತ್ರರೂಪತ್ವಾದಿಗುಣಾ ಉಕ್ತಾಃ । ತೃತೀಯೇ ಪಂಚವಿಧತ್ವಾದೀನಿ ಗುಣಾಂತರಾಣ್ಯುಚ್ಯಂತೇ । ತತ್ರೋಕ್ಥಸ್ಯ ಭೂತಪಂಚಕರೂಪತ್ವಂ ವಿಧತ್ತೇ—ಯಸ್ಮಾತ್ಪ್ರಾಣದೇವಸ್ಯ ಪ್ರತೀಕಭೂತಾದುಕ್ಥಾದಿದಂ ಸರ್ವಮುತ್ತಿಷ್ಠತಿ । ಉಕ್ಥಾನುಷ್ಠಾನತದುಪಾಸನಫಲಭೂತತ್ವಾಜ್ಜಗ-ದುತ್ಪತ್ತೇಃ । ತಾದೃಶಮುಕ್ಥಂ ನಿಷ್ಕೇವಲ್ಯಾಖ್ಯಂ ಶಸ್ತ್ರಂ ಪಂಚವಿಧಮಾತ್ಮಾನಂ ವಕ್ಷ್ಯಮಾಣಪೃಥಿ-ವ್ಯಾದಿಪಂಚಪ್ರಕಾರೇಣೋಪಾಸಕಸ್ಯ ಸ್ವರೂಪಭೂತಂ ಯಃ ಪುಮಾನುಪಾಸ್ತೇ ಸ ಪುಮಾನ್ಸಂಪ್ರತಿ-ವಿತ್ಸಮ್ಯಗಭಿಜ್ಞಃ । ಕೇ ತೇ ಪಂಚ ಪ್ರಕಾರಾ ಇತಿ ಚೇದುಚ್ಯತೇ—ಪೃಥಿವ್ಯಾದೀನಿ ಯಾನಿ ಪಂಚ ಭೂತಾನಿ ಸಂತಿ ತದ್ರೂಪ ಉಪಾಸಕಸ್ಯಾತ್ಮಾ ಪಂಚವಿಧಮುಕ್ಥಮ್ । ಏತಸ್ಮಾತ್ಪಂಚಭೂತಾತ್ಮಕಾ-ದುಕ್ಥಾದೇವ ಸರ್ವಮಿದಂ ಶರೀರಜಾತಮುತ್ಪದ್ಯತೇ । ಪುನರಪ್ಯೇತಮೇವೋಕ್ಥಮಪ್ಯೇತಿ ಸಂಹಾರ-ಕಾಲೇ ಪ್ರವಿಶತಿ । ನ ಹ್ಯುಕ್ಥಸ್ವರೂಪತ್ವೇನ ಪ್ರತಿಪಾದಿತಾನಿ ಪಂಚ ಭೂತಾನಿ ವಿಹಾಯ ಭೌತಿಕಸ್ಯ ಶರೀರಸ್ಯೋತ್ಪತ್ತಿರ್ಲಯೋ ವಾ ಸಂಭವತಿ । ಯಃ ಪುಮಾನೇವಮೇತಸ್ಯೋಕ್ಥಸ್ಯ ಪಂಚವಿಧತ್ವ-ಮುಪಾಸ್ತೇ ಸ ಪುಮಾನ್ಸಮಾನಾನಾಂ ಜ್ಞಾತೀನಾಮಯನಮಾಶ್ರಯೋ ಭವತಿ ||

ಎರಡನೆಯ ಅಧ್ಯಾಯದಲ್ಲಿ ಮಹರ್ಷಿಮಂತ್ರರೂಪತ್ವಾದಿ ಗುಣಗಳನ್ನು ಹೇಳಿದ್ದಾಯಿತು. ಈಗ ಮೂರನೆಯ ಅಧ್ಯಾಯದಲ್ಲಿ ಪಂಚವಿಧತ್ವಾದಿ(ಐದುರೀತಿಯಾಗಿರುವುದು) ಇತರಗುಣಗಳನ್ನು ವಿವರಿಸುತ್ತಾರೆ. ಮೊದಲು ಉಕ್ಥಕ್ಕೆ ಪೃಥಿವ್ಯಾದಿಪಂಚಭೂತಸ್ವರೂಪವನ್ನು ವಿಧಿಸುತ್ತಾರೆ. ಪ್ರಾಣದೇವನ ಪ್ರತೀಕವೇ ಉಕ್ಥವಾದುದರಿಂದ ಅದರಿಂದಲೇ ಎಲ್ಲವೂ ಉತ್ಪನ್ನವಾಗುತ್ತವೆ. ಸಕಲಜಗದುತ್ಪತ್ತಿಯು ಉಕ್ಥೋಪಾಸನೆಯ ಫಲರೂಪವು. ಉಕ್ಥದ ಅಂದರೆ ನಿಷ್ಕೇವಲ್ಯಶಸ್ತ್ರದ ಐದುವಿಧವಾದ ಸ್ವರೂಪವನ್ನು ಉಪಾಸಕನ ಸ್ವರೂಪವಾದ ಪೃಥಿವ್ಯಾದಿಐದುರೀತಿಯೆಂದು ತಿಳಿದ ಪುರುಷನೇ ಚನ್ನಾಗಿ ತಿಳಿದವನು. ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶರೂಪವಾದ ಪಂಚಭೂತಗಳೇ ಉಪಾಸಕನ ಸ್ವರೂಪವೇ

ಆದುದರಿಂದ ಉಪಾಸಕನಸ್ವರೂಪವಾದ ಉಕ್ಥವೂ ಐದುರೀತಿಯಾಗಿರುತ್ತದೆ. ಈ ಪಂಚವಿಧಉಕ್ಥದಿಂದಲೇ ಸಕಲಶರೀರ ವರ್ಗದ ಉತ್ಪತ್ತಿಯಾಗುತ್ತದೆ. ತಿರುಗಿ ಲಯಕಾಲದಲ್ಲಿ ಉಕ್ಥವನ್ನೇ ಹೋಗಿ ಸೇರುತ್ತವೆ. ಉಕ್ಥಸ್ವರೂಪದಿಂದ ಪ್ರತಿ ಪಾದಿತವಾದ ಪಂಚಭೂತಗಳನ್ನು ಬಿಟ್ಟರೆ ಬೇರೆ ಭೌತಿಕ ಶರೀರದ ಉತ್ಪತ್ತಿಯಾಗಲೀ ಲಯವಾಗಲೀ ಇರುವುದಿಲ್ಲ. ಈ ರೀತಿ ಉಕ್ಥದ ಐದುರೀತಿಗಳನ್ನು ತಿಳಿದು ಉಪಾಸಿಸುವವನು ಸಕಲಬಂಧುಗಳಿಗೂ ಆಶ್ರಯನಾಗುತ್ತಾನೆ.

ತಸ್ಮಿನ್ಯೋಽನ್ನಂ ಚಾನ್ನಾದಂ ಚ ವೇದಾಹಾಸ್ಮಿನ್ನನ್ನಾದೋ ಜಾಯತೇ ಭವತ್ಯಸ್ಯಾನ್ನಮಾಪಶ್ಚ ಪೃಥಿವೀ ಚಾನ್ನಮೇತನ್ಮಯಾನಿ ಹ್ಯನ್ನಾನಿ ಭವಂತಿ ಜ್ಯೋತಿಶ್ಚ ವಾಯುಶ್ಚಾನ್ನಾದಮೇತಾಭ್ಯಾಂ ಹೀದಂ ಸರ್ವ ಮನ್ನಮತ್ತ್ಯಾವಪನಮಾಕಾಶ ಆಕಾಶೇ ಹೀದಂ ಸರ್ವಂ ಸಮೋ-ಪ್ಯತ ಆವಪನಂ ಹ ವೈ ಸಮಾನಾನಾಂ ಭವತಿ ಯ ಏವಂ ವೇದ ||

ತೇಷಾಮುಕ್ಥಸ್ವರೂಪಾಣಾಂ ಪಂಚಭೂತಾನಾಮನ್ನಾದಿರೂಪತ್ವಧ್ಯಾನಂ ವಿಧತ್ತೇ—**ತಸ್ಮಿನ್ಪಂಚಭೂತಾತ್ಮಕ ಉಕ್ಥೇ ಯಃ ಪುಮಾನಿದಮನ್ನಂ ಭೋಗ್ಯಮಿದಂ ಚಾನ್ನಾದಂ ಭೋಕ್ತೃರೂಪಮಿತಿ ವಿಭಜ್ಯೋಪಾಸ್ತೇಽಸ್ಮಿನ್ನುಪಾಸಕೇಽನ್ನಾದೋ ಭೋಕ್ತುಂ ಸ ರ್ಥಾ ರೋಗ-ರಹಿತಃ ಪುತ್ರೋ ಜಾಯತೇ । ಅಸ್ಯ ಚೋಪಾಸಕಸ್ಯಾನ್ನಮಪೇಕ್ಷಿತಂ ಸರ್ವಂ ಸಂಪದ್ಯತ ಏವ । ಕಿಂ ತದನ್ನಂ ಕಿಂ ವಾಽನ್ನಾದಮಿತಿ ಚೇತ್ತದುಚ್ಯತೇ—ಪಂಚಭೂತೇಷು ಮಧ್ಯ ಆಪಶ್ಚ ಪೃಥಿವೀ ಚೇತ್ಯು-ಭಯಮನ್ನಮ್ । ಯಸ್ಮಾದ್ವ್ರೀಹಿಯವಾದೀನ್ಯನ್ನಾನಿ ಭೂಮ್ಯುದಕವಿಕಾರರೂಪಾಣಿ ಭವಂತಿ ತಸ್ಮಾದ್ಭೂಮ್ಯುದಕಯೋರನ್ನತ್ವಂ ಯುಕ್ತಮ್ । ತೇಜಶ್ಚ ವಾಯುಶ್ಚೇತಿ ಭೂತದ್ವಯಂ ಭೋಕ್ತೃ-ರೂಪಮ್ । ಪ್ರಾಣವಾಯುನಾ ಜಾಠರಾಗ್ನೌ ಪ್ರದೀಪಿತೇ ಸತ್ಯೇತಾಭ್ಯಾಮಗ್ನಿವಾಯುಭ್ಯಾಂ ಸರ್ವ-ಮಿದಮನ್ನಜಾತಂ ಜನೋ ಭಕ್ಷಯತಿ । ತಸ್ಮಾಜ್ಜ್ಯೋತಿರ್ವಾಯ್ವೋರನ್ನಾದತ್ವಂ ಯುಕ್ತಮ್ । ನ ಚ ಭೂತಚತುಷ್ಟಯಸ್ಯೈವೋಪಯೋಗೋ ನ ತ್ವಾಕಾಶಸ್ಯೇತಿ ಶಂಕನೀಯಮ್ । ಆಕಾಶಸ್ಯಾವ-ಪನರೂಪತ್ವಾತ್ । ಯಸ್ಮಾದಾಕಾಶೇ ಸರ್ವಮಿದಂ ಭೋಕ್ತೃಭೋಗ್ಯಜಾತಂ ಸಮೋಪ್ಯತೇ ಸಮ್ಯಗಾ ಸಮಂತಾತ್ಪ್ರಕ್ಷಿಪ್ಯತೇ ತಸ್ಮಾದಾಕಾಶಸ್ಯಾಽಽವಪನತ್ವಮ್ । ಯಃ ಪುಮಾನೇವಮಾಕಾಶಸ್ಯಾವಕಾಶ-ಪ್ರದಾನೇನ ಭೋಕ್ತೃಭೋಗ್ಯಾಧಾರತ್ವಮುಪಾಸ್ತೇ ಸ ಪುಮಾನ್ಸಮಾನಾನಾಂ ಜ್ಞಾತೀನಾಮಾವಪ-ನಮಾಧಾರೋ ಭವತ್ಯೇವ ।**

ಉಕ್ಥದ ಪೃಥಿವ್ಯಾದಿಪಂಚರೂಪಗಳ ವಿಕಾರವಾದ ಅನ್ನಾದಿರೂಪಧ್ಯಾನವನ್ನು ವಿವರಿಸುತ್ತಾರೆ. ಪಂಚಭೂತಾತ್ಮಕ ವಾದ ಉಕ್ಥದಲ್ಲಿ ಯಾವ ಪುರುಷನು ಅನ್ನಂ ಅಂದರೆ ಸಕಲಭೋಗ್ಯಜಾತವನ್ನೂ, ಅನ್ನಾದಂ ಅಂದರೆ ಭೋಕ್ತೃರೂಪವನ್ನೂ ವಿಭಾಗಿಸಿ ತಿಳಿದು ಉಪಾಸಿಸುತ್ತಾನೋ ಅವನಿಗೆ ರೋಗರಹಿತನಾದ ಪುತ್ರನು ಹುಟ್ಟುತ್ತಾನೆ. ಆ ಪುತ್ರನಿಗೆ ಅಪೇಕ್ಷಿತವಾದ ಭೋಗ್ಯಸಂಪತ್ತು ಲಭಿಸುತ್ತದೆ. ಅನ್ನ ಯಾವುದು ? ಅನ್ನಾದ ಯಾವುದೆಂದು ವಿವರಿಸುತ್ತಾರೆ. ಪಂಚಭೂತಗಳಲ್ಲಿ ಪೃಥಿವೀ ಜಲಗಳೇ ಅನ್ನವು. ವ್ರೀಹಿಯವಾದಿಗಳೆಲ್ಲವೂ ಭೂಮಿ ಮತ್ತು ಉದಕದ ವಿಕಾರಗಳಾದುದರಿಂದ ಭೂಮಿ, ಜಲಗಳಿಗೆ ಅನ್ನತ್ವಯುಕ್ತವಾಗಿದೆ. ತೇಜಸ್ಸು ಮತ್ತು ವಾಯು ಇವೆರಡುಭೂತಗಳು ಭೋಕ್ತೃರೂಪವಾಗಿವೆ. ಪ್ರಾಣ

ವಾಯುವಿನಿಂದ ಜಠರಾಗ್ನಿಯು ಪ್ರಜ್ವಲಿಸಿದಾಗಮಾತ್ರ ಜನರು ಅನ್ನಜಾತ ಅಂದರೆ ಆಹಾರವನ್ನು ಸೇವಿಸುವುದರಿಂದ ತೆಜೋವಾಯುಗಳಿಗೆ ಅನ್ನಾದತ್ವ ಅಂದರೆ ಭೋಕ್ತೃತ್ವ ಯುಕ್ತವಾಗಿದೆ. ಇಲ್ಲಿ ನಾಲ್ಕು ಭೂತಗಳ ವಿನಿಯೋಗಮಾತ್ರ್ರ ಹೇಳಿ ಆಕಾಶವನ್ನು ಬಿಟ್ಟಿರುವುದು ಯುಕ್ತವೇ ? ಎಂದು ಆಶಂಕಿಸಬಾರದು. ಆಕಾಶವು ಆವಪನವಾಗಿದೆ ಅಂದರೆ ಪೂರ್ವೋಕ್ತವಾದ ಭೋಗ್ಯಭೋಕ್ತೃಪ್ರಪಂಚಕ್ಕೆ ಅವಕಾಶ ಕೊಡುವುದರಮೂಲಕ ಆಧಾರವಾಗಿವೆಯೆಂದು ತಿಳಿಯಬೇಕು. ಹೀಗೆ ಸಕಾಲಾಧಾರವಾದ ಆಕಾಶವನ್ನು ತಿಳಿದು ಉಪಾಸಿಸುವನು ಸಕಲಬಂಧುಗಳಿಗೂ ಆಶ್ರಯದಾತೃವಾಗುತ್ತಾನೆ.

ತಸ್ಮಿನ್ನ್ಯೋಽನ್ಯಂ ಚಾನ್ನಾದಂ ಚ ವೇದಾಹಾಸ್ಮಿನ್ನನ್ನಾದೋ ಜಾಯತೇ
ಭವತ್ಯಸ್ಯಾನ್ನಮೋಷಧಿವನಸ್ಪತಯೋಽನ್ನಂ ಪ್ರಾಣಭೃತೋಽನ್ನಾದ-
ಮೋಷಧಿವನಸ್ಪತೀನ್ಹಿ ಪ್ರಾಣಭೃತೋಽದಂತಿ ||

**ಉಕ್ತಸ್ವರೂಪೇಷು ಭೂತೇಷು ಭೋಕ್ತೃಭೋಗ್ಯಧ್ಯಾನಂ ವಿಧಾಯ ಭೌತಿಕೇಷು ತದ್ಧ್ಯಾನಂ ವಿಧತ್ತೇ—ಓಷಧಿವನಸ್ಪತೀನಾಮನ್ನತ್ವಂ ಪ್ರಾಣಭೃತಾಂ ಮನುಷ್ಯಗವಾಶ್ವಾದೀನಾಂ ಭೋಕ್ತೃತ್ವಂ ಚ ಲೋಕೇ ಪ್ರಸಿದ್ಧಮಿತಿ ದ್ಯೋತಯಿತುಂ ಹಿ ಶಬ್ದಃ ||**

ಉಕ್ತರೂಪಪಂಚಭೂತಗಳಲ್ಲಿ ಭೋಕ್ತೃಭೋಗ್ಯಧ್ಯಾನವನ್ನು ವಿಧಿಸಿ ಭೌತಿಕದಲ್ಲಿ ಧ್ಯಾನವನ್ನು ವಿವರಿಸುತ್ತಾರೆ. ಓಷಧಿವನಸ್ಪತಿಗಳು ಅನ್ನವೂ,(ಭೋಗ್ಯ) ಪ್ರಾಣಧರಿಸಿರುವ ಮನುಷ್ಯ ಅಶ್ವಾದಿಪ್ರಾಣಿಗಳು ಭೋಕ್ತೃವೂ (ಅನ್ನಾದ) ಎಂಬ ವಿಷಯ ಲೋಕಪ್ರಸಿದ್ಧವಾಗಿದೆಯೆಂದು ತಿಳಿಸಲು ಹಿಶಬ್ದ ಹೇಳಿದೆ.

ತೇಷಾಂ ಯ ಉಭಯತೋದಂತಾಃ ಪುರುಷಸ್ಯಾನುವಿಧಾ ವಿಹಿತಾ-
ಸ್ತೇಽನ್ನಾದಾ ಅನ್ನಮಿತರೇ ಪಶವಸ್ತಸ್ಮಾತ್ತ ಇತರಾನ್ಪಶೂನಧೀವ
ಚರಂತ್ಯಧೀವ ಹ್ಯನ್ನೇಽನ್ನಾದೋ ಭವತಿ ||

**ಅಥ ಪ್ರಾಣಭೃತ್ಸ್ವೇವ ಭೋಕ್ತೃಭೋಗ್ಯವಿಭಾಗಧ್ಯಾನಂ ವಿಧತ್ತೇ-ತೇಷಾಂ ಪ್ರಾಣಭೃತಾಂ ಮಧ್ಯೇ ಯೇ ಕೇಚಿದಶ್ವಾದಯ ಉಭಯತೋದಂತಾ ಅಧೋಭಾಗೇ ಚೋರ್ಧ್ವಭಾಗೇ ಚ ದಂತ-ಪಂಕ್ತಿಯುಕ್ತಾಃ ಪುರುಷಸ್ಯಾನುವಿಧಾ ಮನುಷ್ಯಸ್ಯ ಪ್ರಕಾರಮನುಸೃತ್ಯ ವಿಹಿತಾ ಉತ್ಪಾದಿತಾಃ || ಯಥಾ ಮನುಷ್ಯಸ್ಯೋಭಯತೋ ಭೋಕ್ತೃರೂಪೇಭ್ಯ ಇತರೇಽಧೋಭಾಗ ಏವ ದಂತಪಂಕ್ತಿ-ಯುಕ್ತಾ ಗೋಮಹಿಷಾದಯಃ ಪಶವೋ ಯೇ ಸಂತಿ ತೇಽನ್ನರೂಪಾಃ । ಯಸ್ಮಾದೇವಂ ತಸ್ಮಾ-ಲ್ಲೋಕ ಉಭಯತೋದಂತಾ ಮನುಷ್ಯಾಶ್ವಾದಯ ಇತರಾನ್ಗೋಮಹಿಷಾದೀನ್ಪ್ರತ್ಯಧೀವ ಚರಂತಿ ಅಧಿಕಾ ಇವ ವರ್ತಂತೇ । ಅಶ್ವಾದೀನಾಂ ಮೂಲ್ಯಬಾಹುಲ್ಯಾನ್ನಾತಿಶಯೇನ ರಕ್ಷ್ಯಮಾಣತ್ವಾ-ಚ್ಚಾಽಽಧಿಕ್ಯಮ್ । ಯಸ್ಮಾಲ್ಲೋಕೇಽಪಿ ವ್ರೀಹಿಯವಾದಿಕಾ ಯೋಽನ್ನೇ ಪಾತ್ರೇ ಪ್ರಕ್ಷಿಪ್ತೇ ಸತ್ಯ-ನ್ನಾದೋ ಭೋಕ್ತಾ ಮನುಷ್ಯೋಽಧಿಕ ಇವ ಭವತಿ । ತತ್ರ ಮನುಷ್ಯಸ್ಯ ಸ್ವಾತಂತ್ರ್ಯಾಧಿಕತ್ವಮನ್ನಸ್ಯ ಪಾರತಂತ್ರ್ಯನ್ಯೂನತ್ವಮ್ ।**

ಪ್ರಾಣಧರಿಸಿರುವವರಲ್ಲಿಯೇ ಭೋಕ್ತೃಭೋಗ್ಯವಿಭಾಗದಿಂದ ಧ್ಯಾನವನ್ನು ವಿವರಿಸುತ್ತಾರೆ. ಪ್ರಾಣಿಗಳಲ್ಲಿ ಅಶ್ವಾದಿಗಳು ಉಭಯದಂತಗಳಾಗಿವೆ. ಅಂದರೆ ದವಡೆಯ ಮೇಲ್ಭಾಗದಲ್ಲಿಯೂ, ಕೆಳಭಾಗದಲ್ಲಿಯೂ ದಂತವಿಶಿಷ್ಟಗಳಾಗಿ ಮನುಷ್ಯನಂತೆ ಸೃಜಿಸಲ್ಪಟ್ಟಿವೆ. ಮನುಷ್ಯನಿಗೂ ಮೇಲ್ಭಾಗದಲ್ಲಿಯೂ ಕೆಳಭಾಗದಲ್ಲಯೂ ಹಲ್ಲುಗಳಿವೆ. ಹೀಗೆ ಉಭಯದಂತ ಪ್ರಾಣಿಗಳಾದ ಕುದುರೆಮುಂತಾದವುಗಳೂ ಮನುಷ್ಯರೂ ಭೋಕ್ತೃ (ಅನ್ನಾದ)ವಾಗಿರುತ್ತಾರೆ. ಇವರಿಂದ ಬೇರೆಯಾದ ಕೆಳಭಾಗದಲ್ಲಿಮಾತ್ರದಂತವುಳ್ಳ ಹಸು ಎಮ್ಮೆ ಮುಂತಾದವುಗಳು ಅನ್ನ ಅಂದರೆ ಭೋಗ್ಯರೂಪಗಳಾಗಿವೆ. ಆದುದರಿಂದ ಲೋಕದಲ್ಲಿ ಹಸುಮುಂತಾದ ಏಕದಂತಪ್ರಾಣಿಗಳಿಗಿಂತ ಮನುಷ್ಯ ಅಶ್ವಾದಿಗಳು ಅಧಿಕವಾಗಿವೆ. (ಶ್ರೈಷ್ಠ್ಯಹೊಂದಿವೆ.) ಅಶ್ವಾದಿಗಳಿಗೆ ಬಹಳಬೆಲೆ ಇರುವುದರಿಂದಲೂ ಅತಿಪ್ರಯತ್ನದಿಂದ ರಕ್ಷಿಸಬೇಕಾದುದರಿಂದಲೂ ಆಧಿಕ್ಯವುಂಟಾಗಿದೆ. ವ್ರೀಹಿಯವಾದಿಗಳನ್ನು ಪಾತ್ರದಲ್ಲಿ ಇಟ್ಟಾಗಪುರುಷನಿಗೆ ಆಧಿಕ್ಯ ಅಂದರೆ ಮನುಷ್ಯನು ಸ್ವತಂತ್ರನಾದುದರಿಂದ ಆಧಿಕನೆಂದೂ ಅನ್ನಕ್ಕೆ ಪಾರತಂತ್ರ್ಯದಿಂದ ನ್ಯೂನತೆಯನ್ನೂ ತಿಳಿಯಬೇಕು.

**ಅಧೀವ ಹ ಸಮಾನಾನಾಂ ಜಾಯತೇ ಯ ಏವಂ ವೇದ॥**

**ಭೋಕ್ತುರಾಧಿಕ್ಯಧ್ಯಾನಸ್ಯ ಫಲಮೂಹ......**

ಭೋಕ್ತೃವು ಅಧಿಕನೆಂಬ ಧ್ಯಾನಕ್ಕೆ ಫಲವನ್ನು ವಿವರಿಸುತ್ತಾರೆ. ಈ ವಿಷಯವನ್ನು ಚೆನ್ನಾಗಿ ತಿಳಿದು ಉಪಾಸಿಸುವವನು ತನ್ನ ಬಂಧುಗಳಿಗೆಲ್ಲಾ ಆಶ್ರಯನಾಗುತ್ತಾನೆ.

---

*English Translation*

---

1. He who knows himself as the fivefold hymn (uktha), the emblem of Prana (breath), from whence all this springs, he is clever. These five are the earth, air, ether, water, and fire (gyotis). This is the self, the fivefold uktha. For from him all this springs, and into him it enters again (at the dissolution of the world). He who knows this, becomes lhe refuge of his friends.

2. And to him who knows the food (object) and the feeder (subject) in that uktha, a strong son is born, and food is never wanting. Water and earth are food, for all food consists of these two. Fire and air are the feeder, for by means of them man eats all food. Ether is the bowl, for all this is poured into the ether. He who knows tbis, becomes the bowl or support of his friends.

3. To him who knows the food and the feeder in that uktha, a strong son is born, and food is never wanting. Herbs and trees are food, animals the feeder, for animals eat herbs and trees.

4. Of them again those who have teeth above and below, shaped after the likeness of man, are feeders, the other animals are food. Therefore these overcome the other animals, for the eater is over the food.

5. He who knows this is over his friends.

ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ತೃತೀಯಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಮೂರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು ||

---

## ಅಥ ದ್ವಿತೀಯಾರಣ್ಯಕೇ ತೃತೀಯಾಧ್ಯಾಯೇ ದ್ವಿತೀಯಃ ಖಂಡಃ

### ಎರಡನೆಯ ಆರಣ್ಯಕದ ಮೂರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

---

ತಸ್ಯ ಯ ಆತ್ಮಾನಮಾವಿಸ್ತರಾಂ ವೇದಾಶ್ನುತೇ ಹಾಽಽವಿರ್ಭೂಯಃ ||

ಅನ್ನಾದಿಧ್ಯಾನಮುಕ್ತ್ವಾ ಪುರುಷಸ್ಯೋತ್ಕೃಷ್ಟಸ್ವರೂಪಸ್ಯಾತ್ಮಚೈತನ್ಯಾವಿರ್ಭಾವಾತಿಶಯಯು-ಕ್ತತ್ವಧ್ಯಾನಂ ವಿಧತ್ತೇ—ತಸ್ಯೋತ್ಕೃಷ್ಟರೂಪಸ್ಯ ಪುರುಷಸ್ಯ ಶರೀರೇ ವರ್ತಮಾನಂ ಚಿದ್ರೂಪಮಾತ್ಮಾನ-ಮಾವಿಸ್ತರಾಮತಿಶಯೇನ ಪ್ರಕಟಂ ಯಃ ಪುಮಾನುಪಾಸ್ತೇ ಸ ಪುಮಾನ್ಭೂಯ ಆವಿರತಿಶಯೇನ ಪ್ರಕಟತ್ವಮಶ್ನುತೇ ಹ ವ್ಯಾಪ್ನೋತ್ಯೇವ। ವಿದ್ಯೈಶ್ವರ್ಯಾದಿಕೀರ್ತಿಂ ಬಹುಲಾಂ ಪ್ರಾಪ್ನೋತೀ-ತ್ಯರ್ಥಃ ||—

ಚೈತನ್ಯಸ್ಯೋಪಾಧಿವಿಶೇಷೇಷು ತಾರತಮ್ಯೇನಾವಿರ್ಭಾವಂ ದರ್ಶಯಿತುಮಾದಾವೇಕಮುಪಾಧಿಮುದಾಹರತಿ—

ಪೂರ್ವಖಂಡದಲ್ಲಿ ಉಕ್ಥರೂಪಪುರುಷನಿಗೆ ಅನ್ನಾದಿಧ್ಯಾನಗಳನ್ನು ಹೇಳಿ ಈಗ ಆತ್ಮಚೈತನ್ಯಾವಿರ್ಭಾವಲಕ್ಷಣ ಧ್ಯಾನವನ್ನು ವಿವರಿಸುತ್ತಾರೆ. ಈ ಉಕ್ಥರೂಪ ಪುರುಷನ ಶರೀರದಲ್ಲಿರುವ ಚಿದ್ರೂಪನಾದ ಆತ್ಮನನ್ನು ಚನ್ನಾಗಿ ತಿಳಿದು ಉಪಾಸಿಸುವ ಪುರುಷನು ಅತಿಶಯ ಪ್ರಸಿದ್ಧಿಯನ್ನು ಹೊಂದುತ್ತಾನೆ. ಅತಿಶಯವಾದ ವಿದ್ಯಾ ಐಶ್ವರ್ಯ ನಿಮಿತ್ತವಾದ ಕೀರ್ತಿಯನ್ನು ಪಡೆಯುತ್ತಾನೆ ಎಂದರ್ಥ.

**ಓಷಧಿವನಸ್ಪತಯೋ ಯಚ್ಚ ಕಿಂಚ ಪ್ರಾಣಭೃತ್ಸ ಆತ್ಮಾನಮಾವಿಸ್ತರಾಂ ವೇದೌಷಧಿವನಸ್ಪತಿಷು ಹಿ ರಸೋ ದೃಶ್ಯತೇ ಚಿತ್ತಂ ಪ್ರಾಣಭೃತ್ಸು ॥**

ಸಚ್ಚಿದಾನಂದರೂಪಸ್ಯ ಜಗತ್ಕಾರಣಸ್ಯ ಪರಮಾತ್ಮನಃ ಕಾರ್ಯಭೂತಾಃ ಸರ್ವೇಽಪಿ ಪದಾರ್ಥಾಃ ಆವಿರ್ಭಾವೋಪಾಧಯಃ । ತತ್ರಾಚೇತನೇಷು ಮೃತ್ಪಾಷಾಣಾದಿಷು ಸತ್ತಾಮಾತ್ರಮಾವಿರ್ಭವತಿ ನ ಚಾತ್ಮನೋ ಜೀವರೂಪತ್ವಮ್ । ಯೇ ತ್ವೋಷಧಿವನಸ್ಪತಯೋ ಜೀವರೂಪಾಃ ಸ್ಥಾವರಾ ಯೇ ಚ ಶ್ವಾಸರೂಪಪ್ರಾಣಧಾರಿಣೋ ಜೀವರೂಪಾ ಜಂಗಮಾಸ್ತದುಭಯಮತಿಶಯೇನಾಽಽವಿರ್ಭಾವಸ್ಥಾನಮಿತಿ ಯೋ ನಿಶ್ಚಿನೋತೀತ್ಯಧ್ಯಾಹಾರಃ। ಸ ಪುಮಾನಾತ್ಮಾನಮತಿಶಯೇನಾಽಽವಿರ್ಭೂತಮುಪಸ್ತೇ। ಕಥಂ ಸ್ಥಾವರಜಂಗಮಜೀವಯೋರಾವಿರ್ಭಾವಾತಿಶಯ ಇತಿ ಚೇದುಚ್ಯತೇ । ಓಷಧಿವನಸ್ಪತಿಷು ಸ್ಥಾವರಜೀವಶರೀರೇಷು ರಸ ಆರ್ದ್ರತ್ವಂ ತದೇತಜ್ಜೀವಾತ್ಮನೋ ಲಿಂಗಮ್ । ನ ಕಾಷ್ಠಪಾಷಾಣಾದಿಷು ರಸೋಽಸ್ತಿ । ಯದಪಿ ಪ್ರಾಣಭೃತ್ಸು ಜಂಗಮಜೀವಶರೀರೇಷು ಚಿತ್ತಮಂತಃಕರಣಂ ತದಪಿ ಜೀವಾತ್ಮನೋ ಲಿಂಗಮ್ । ತಚ್ಚ ಮೃತ್ಪಾಷಾಣಾದಿಷು ನ ದೃಶ್ಯತೇ । ಅತೋ ರಸಚಿತ್ತಯೋರ್ಜೀವಲಿಂಗಯೋರ್ದರ್ಶನಾದೋಷಧ್ಯಾದಿಷು ಅತಿಶಯೇನಾಽಽವಿರ್ಭಾವಃ ಸಿದ್ಧಃ ॥

ಆತ್ಮಚೈತನ್ಯದ ಉಪಾಧಿವಿಶೇಷಗಳಲ್ಲಿ ತಾರತಮ್ಯದಿಂದ ಸಾಕ್ಷಾತ್ಕಾರ ತಿಳಿಸಲು ಮೊದಲು ಒಂದು ಉಪಾಧಿಯನ್ನು ಉದಾಹರಿಸುತ್ತಾರೆ. ಸಚ್ಚಿದಾನಂದರೂಪನೂ, ಜಗತ್ಕಾರಣನೂ ಆದ ಪರಮಾತ್ಮನ ಕಾರ್ಯಗಳೇ ಈ ಪ್ರಪಂಚದಲ್ಲಿರುವ ಸಕಲಪದಾರ್ಥಗಳಾದುದರಿಂದ ಅವೆಲ್ಲವೂ ಪರಮಾತ್ಮನ ಆವಿರ್ಭಾವಕ್ಕೆ ಉಪಾಧಿಗಳಾಗುತ್ತವೆ. ಅಚೇತನಗಳಾದ ಮಣ್ಣು ಕಲ್ಲು ಮುಂತಾದವುಗಳಲ್ಲಿ ಪರಮಾತ್ಮನ ಸತ್ತಾಮಾತ್ರ ಆವಿರ್ಭಾವವಿರುತ್ತದೆ. ಅಲ್ಲಿ ಆತ್ಮನಜೀವರೂಪವಿಲ್ಲ. ಓಷಧಿ ವನಸ್ಪತಿರೂಪಸ್ಥಾವರಗಳಲ್ಲಿಯೂ, ಶ್ವಾಸರೂಪಪ್ರಾಣಧಾರಿಗಳಾದ ಜಂಗಮಗಳಲ್ಲಿಯೂ ಆತ್ಮನ ಆವಿರ್ಭಾವ ಅತಿಶಯವಾಗಿರುತ್ತದೆ. ಇದನ್ನು ತಿಳಿದ ಉಪಾಸಕನು ಆತ್ಮನನ್ನು ಪ್ರಕಟವಾಗಿ ಉಪಾಸಿಸುತ್ತಾನೆ. ಅತಿಶಯಾವಿರ್ಭಾವಕ್ಕೆ ಕಾರಣ ತೋರಿಸುತ್ತಾರೆ. ಓಷಧ್ಯಾದಿ ಸ್ಥಾವರಜೀವಶರೀರಗಳಲ್ಲಿರುವ ರಸ ಅಂದರೆ ಆರ್ದ್ರಭಾವವೇ ಜೀವಾತ್ಮನಿಗೆ ಲಿಂಗವಾಗುತ್ತದೆ. ಕಾಷ್ಠಪಾಷಾಣಾದಿಗಳಲ್ಲಿ ಯಾವರಸವೂ ಇಲ್ಲ. ಪ್ರಾಣಧರಿಸಿದ ಜಂಗಮಗಳಲ್ಲಿ ಚಿತ್ತ ಅಂದರೆ ಅಂತಃಕರಣವಿರುವುದರಿಂದ ಅದು ಜೀವಾತ್ಮನಿಗೆ ಜ್ಞಾಪಕವಾಗುತ್ತದೆ. ಮಣ್ಣುಕಲ್ಲುಗಳಲ್ಲಿ ಅದೂ ಇಲ್ಲ, ಆದುದರಿಂದ ಜೀವಾತ್ಮನಿಗೆ ಜ್ಞಾಪಕಗಳಾದ ರಸಚಿತ್ತಗಳಿರುವುದರಿಂದ ಓಷಧ್ಯಾದಿಗಳಲ್ಲಿ ಆತ್ಮನ ಆವಿರ್ಭಾವ ಅಧಿಕವಾಗಿದೆಯೆಂದು ಸಿದ್ಧವಾಗುತ್ತದೆ.

ಪ್ರಾಣಭೃತ್ಸು ತ್ವೇವಾಽಽವಿಸ್ತರಾಮಾತ್ಮಾ ತೇಷು ಹಿ ರಸೋಽಪಿ
ದೃಶ್ಯತೇ ನ ಚಿತ್ತಮಿತರೇಷು ॥

ಉದಾಹೃತೋಪಾಧಾವಪಿ ಸ್ಥಾವರೇಭ್ಯೋ ಜಂಗಮೇಷ್ವಾವಿರ್ಭಾವಾತಿಶಯಂ ದರ್ಶಯತಿ ತುಶಬ್ದ ಓಷಧಿವನಸ್ಪತಿವ್ಯಾವೃತ್ತ್ಯರ್ಥಃ। ಪ್ರಾಣಭೃತ್ಸು ಮನುಷ್ಯಗವಾದಿಷ್ವೇವ ಚಿದಾತ್ಮನ ಆವಿ-ರ್ಭಾವಾತಿಶಯೋ ನ ತ್ವೋಷಧ್ಯಾದಿಷು । ತತ್ರ ಹೇತುರುಚ್ಯತೇ ತೇಷು ಪ್ರಾಣಭೃಚ್ಛರೀರೇಷು ರಕ್ತ-ರೂಪೋ ರಸೋ ದೃಶ್ಯತೇ। ಅಪಿ ಶಬ್ದೇನ ಪೂರ್ವೋಕ್ತಂ ಚಿತ್ತಂ ಸಮುಚ್ಚಿನೋತಿ । ಅತೋ ಲಿಂಗದ್ವಯಸದ್ಭಾವಾದಾವಿರ್ಭಾವಾತಿಶಯಃ । ಇತರೇಷ್ವೋಷಧಿವನಸ್ಪತಿಶರೀರೇಷು ಚಿತ್ತಂ ನ ದೃಶ್ಯತೇ ಕಿಂತು ರಸರೂಪಮೇಕಮೇವ ಲಿಂಗಂ ತಸ್ಮಾನ್ನಾಸ್ತ್ಯತಿಶಯಃ ॥

ಸ್ಥಾವರಗಳಿಗಿಂತಲೂ ಜಂಗಮಗಳಲ್ಲಿ ಆವಿರ್ಭಾವಾತಿಶಯವನ್ನು ತೋರಿಸುತ್ತಾರೆ. ಪ್ರಾಣವುಳ್ಳ ಮನುಷ್ಯಾದಿಗಳಲ್ಲಿಯೇ ಚಿದಾತ್ಮನ ಆವಿರ್ಭಾವವು ಅಧಿಕವಾಗಿರುತ್ತದೆ. ಏಕೆಂದರೆ ಅವರ ಶರೀರದಲ್ಲಿ ರಕ್ತರೂಪವಾದ ರಸವು ಅಧಿಕವಾಗಿದೆ. ಅಪಿಶಬ್ದದಿಂದ ಪೂರ್ವೋಕ್ತವಾದ ಚಿತ್ತವೂ ಇದೆಯೆಂದು ತಿಳಿಯಬೇಕು. ಹೀಗೆ ರಕ್ತ, ಚಿತ್ತರೂಪ ಲಿಂಗದ್ವಯವಿರುವುದರಿಂದ ಆವಿರ್ಭಾವಾತಿಶಯವಿರುತ್ತದೆ. ಓಷಧಿವನಸ್ಪತಿಗಳಲ್ಲಿ ಚಿತ್ತವಿಲ್ಲ. ರಸ ಒಂದೇ ಲಿಂಗವಿರುವುದರಿಂದ ಅತಿಶಯವಿಲ್ಲ.

ಪುರುಷೇ ತ್ವೇವಾಽಽವಿಸ್ತರಾಮಾತ್ಮಾ ಸ ಹಿ ಪ್ರಜ್ಞಾನೇನ ಸಂಪನ್ನತಮೋ
ವಿಜ್ಞಾತಂ ವದತಿ ವಿಜ್ಞಾತಂ ಪಶ್ಯತಿ ವೇದ ಶ್ವಸ್ತನಂ ವೇದ ಲೋಕಾ-
ಲೋಕೌ ಮರ್ತ್ಯೇನಾಮೃತಮೀಪ್ಸತ್ಯೇವಂ ಸಂಪನ್ನಃ ॥

ಪ್ರಾಣಭೃದುಪಾಧಿಷ್ವಪಿ ತಾರತಮ್ಯಂ ದರ್ಶಯತಿ—ಮನುಷ್ಯಾ ಗವಾಶ್ವಾದಯಶ್ಚ ಪ್ರಾಣ-ಭೃತಸ್ತೇಷಾಂ ಮಧ್ಯೇ ಪುರುಷೇ ಮನುಷ್ಯ ಏವಾತಿಶಯೇನಾಽಽತ್ಮಾವಿರ್ಭಾವೋ ನ ತು ಗವಾದಿಷು। ಯಸ್ಮಾತ್ಸ ಮನುಷ್ಯೋಽತ್ಯಂತಂ ಪ್ರಕೃಷ್ಟಜ್ಞಾನೇನ ಸಂಪನ್ನಃ। ತದೇವ ಕಥಮಿತಿ ಚೇತ್ತದು-ಚ್ಯತೇ ಪೂರ್ವೇದ್ಯುರ್ಯದ್ವಸ್ತು ವಿಜ್ಞಾತಂ ತತ್ಸರ್ವಮದ್ಯ ಸ್ಮೃತ್ವಾ ಮಯೇದಂ ವಿದಿತಮಿತಿ ಜನಾನಾಮಗ್ರೇ ವದಿತುಂ ಸಮರ್ಥಃ। ತಥಾ ಪೂರ್ವೇದ್ಯುರ್ಯದ್ವಸ್ತು ಸಮೀಚೀನಂ ವಿಜ್ಞಾತಂ ತದದ್ಯ ಸ್ಮೃತ್ವಾ ತಸ್ಮಿನ್ದೇಶೇ ಗತ್ವಾ ದ್ರಷ್ಟುಂ ಸಮರ್ಥಃ। ಯದ್ಯಪಿ ಗವಾದೀನಾಂ ದರ್ಶನೇ ಸಾಮರ್ಥ್ಯಮಸ್ತಿ ತಥಾಪಿ ವಿವೇಕಾಭಾವಾನ್ನ ಸಾಕಲ್ಯೇನ ದರ್ಶನಮ್। ಕಿಂಚ ಯಥಾಽತೀತಸ್ಯ ಕಥನಂ ತಥಾ ಶ್ವಸ್ತನಂ ಭವಿಷ್ಯತ್ಕರ್ತವ್ಯಮಮಪಿ ಜಾನಾತಿ। ತಥಾ ಲೋಕಾಲೋಕಾವುತ್ತಮಂ ಸ್ವರ್ಗಲೋಕಮಧಮಂ ನರಲೋಕಂ ಚ ಶಾಸ್ತ್ರೇಣ ವಿವಿಚ್ಯ ಜಾನಾತಿ। ತಥಾ ಮರ್ತ್ಯೇನ ವಿನ-ಶ್ವರೇಣ ಜ್ಞಾನಕರ್ಮರೂಪಸಾಧನೇನಾಮೃತಮವಿನಶ್ವರಂ ಮುಕ್ತಿಪದಮೀಪ್ಸತಿ ಪ್ರಾಪ್ತುಮಿಚ್ಛತಿ॥ ಏವಮನೇನ ಪ್ರಕಾರೇಣ ಮನುಷ್ಯೋಽತ್ಯಂತವಿವೇಕೇನ ಸಂಪನ್ನಃ ॥

ಪ್ರಾಣಧಾರಿಗಳಾದ ಉಪಾಧಿಗಳಲ್ಲಿಯೂ ತಾರತಮ್ಯವನ್ನು ತೋರಿಸುತ್ತಾರೆ. ಮನುಷ್ಯ, ಗೋವು ಅಶ್ವ ಮುಂತಾದವುಗಳೆಲ್ಲಾ ಪ್ರಾಣವುಳ್ಳವುಗಳು. ಅವುಗಳಲ್ಲಿ ಮನುಷ್ಯನಲ್ಲಿಯೇ ಆತ್ಮಾವಿರ್ಭಾವವು ಅತಿಶಯವಾಗಿದೆ. ಅಶ್ವಾದಿಗಳಲ್ಲಿಲ್ಲ. ಏಕೆಂದರೆ ಮನುಷ್ಯನು ಪ್ರಕೃಷ್ಟಜ್ಞಾನಸಂಪನ್ನನಾಗಿರುತ್ತಾನೆ. ಇದನ್ನು ಉದಾಹರಣೆಯಿಂದ ವಿವರಿಸುತ್ತಾರೆ. ಹಿಂದಿನದಿನ ಒಂದು ವಸ್ತುವನ್ನು ತಿಳಿದು ಈದಿನ ಅದನ್ನು ಸ್ಮರಿಸಿ ಇದು ನನಗೆ ತಿಳಿದಿದೆಯೆಂದು ಜನರಮುಂದೆ ಹೇಳಲು ಸಮರ್ಥನಾಗಿರುತ್ತಾನೆ. ಹಿಂದಿನದಿನ ಒಂದು ವಸ್ತುವನ್ನು ಚನ್ನಾಗಿ ತಿಳಿದಿದ್ದು ಇಂದು ಅದನ್ನು ಸ್ಮರಿಸಿ ಅದು ಇರುವ ದೇಶಕ್ಕೆ ಹೋಗಿ ಅದನ್ನು ಪಡೆಯುತ್ತಾನೆ. ಅಶ್ವಾದಿಗಳು ನೋಡಲು ಸಮರ್ಥಗಳಾಗಿದ್ದರೂ ವಿವೇಕವಿಲ್ಲದಿರುವುದರಿಂದ ಸಂಪೂರ್ಣಪರಿಜ್ಞಾನದಿಂದ ಹೊಂದಲು ಸಮರ್ಥವಾಗುವುದಿಲ್ಲ. ಪುರುಷನು ಕಳೆದು ಹೋದುದನ್ನು ಸ್ಮರಿಸಿ ಹೇಳುವಂತೆ ಮುಂದಿನ ಕರ್ತವ್ಯವನ್ನೂ ತಿಳಿಯುತ್ತಾನೆ, ಉತ್ತಮವಾದ ಸ್ವರ್ಗಲೋಕವನ್ನೂ, ದುಃಖಕರವಾದ ನರಕಲೋಕವನ್ನೂ ಶಾಸ್ತ್ರದಿಂದ ವಿವೇಚಿಸಿ ತಿಳಿಯಲು ಸಮರ್ಥನು. ಹಾಗೆಯೇ ವಿನಶ್ವರವಾದ ಜ್ಞಾನಕರ್ಮರೂಪಸಾಧನದಿಂದ ನಾಶರಹಿತವಾದ ಮೋಕ್ಷವನ್ನು ಹೊಂದಲು ಬಯಸುತ್ತಾನೆ. ಹೀಗೆ ಅತ್ಯಂತವಿವೇಕಸಂಪನ್ನನಾದುದರಿಂದ ಅತಿಶಯವನ್ನು ಹೊಂದಿರುತ್ತಾನೆ.

**ಅಥೇತರೇಷಾಂ ಪಶೂನಾಮಶನಾಪಿಪಾಸೇ ಏವಾಭಿವಿಜ್ಞಾನಂ ನ ವಿಜ್ಞಾತಂ ವದಂತಿ ನ ವಿಜ್ಞಾತಂ ಪಶ್ಯಂತಿ ನ ವಿದುಃ ಶ್ವಸ್ತನಂ ನ ಲೋಕಾಲೋಕೌ ತ ಏತಾವಂತೋ ಭವಂತಿ ಯಥಾಪ್ರಜ್ಞಂ ಹಿ ಸಂಭವಾಃ ||**

ಗವಾದಿಪಶುಷೂಕ್ತವೈಪರೀತ್ಯಂ ದರ್ಶಯತಿ—ಮನುಷ್ಯವೈಲಕ್ಷಣ್ಯದ್ಯೋತನಾರ್ಥೋಽಥಶಬ್ದಃ । ತದೇವ ವೈಲಕ್ಷಣ್ಯಂ ಪ್ರಪಂಚ್ಯತೇ—ಅಶನಾಶಬ್ದೇನಾಶಿತುಮಿಚ್ಛೋಚ್ಯತೇ । ಅಶನಾಯೇತಿ ಪದೇ ಯಾಕಾರಸ್ಯ ಲುಪ್ತತ್ವಾತ್ । ಯೇಯಂ ಬುಭುಕ್ಷಾ ಯಾ ಚ ಪಿಪಾಸಾ ತೇ ಏವೋಭೇ ಅಭಿಲಕ್ಷ್ಯ ಪಶೂನಾಂ ವಿಜ್ಞಾನಮಸ್ತಿ, ನ ತು ಮನುಷ್ಯವತ್ಪೂರ್ವವಿಜ್ಞಾತಕಥನಾದಿಕಮ್ । ತೇ ಗವಾಶ್ವಾದಿಪಶವ ಏತಾವಂತ ಏತಾವನ್ಮಾತ್ರವಿಜ್ಞಾನಾಸ್ತಾತ್ಕಾಲಿಕಕ್ಷುಧಾದಿಜ್ಞಾನಮಾತ್ರೋಪೇತಾ ಭವಂತಿ । ತತ್ರ ಹೇತುರುಚ್ಯತೇ—ಯಥಾಪ್ರಜ್ಞಂ ಪೂರ್ವಸ್ಮಿನ್ ಜ್ಞಾನಕರ್ಮಾನುಷ್ಠಾನಾಧಿಕಾರಯುಕ್ತೇ ಜನ್ಮನಿ ಯಾದೃಶೀ ಪ್ರಜ್ಞಾ ಶಾಸ್ತ್ರೀಯಾ ಲೌಕಿಕೀ ವಾಽಭ್ಯಸ್ತಾ । ಕರ್ಮಣೋಽಪ್ಯೇತದುಪಲಕ್ಷಣಮ್ । ಕರ್ಮಾಪಿ ವಿಹಿತಂ ಪ್ರಸಿದ್ಧಂ ವಾ ಯಾದೃಶಮನುಷ್ಠಿತಂ ತಾದೃಶೀಂ ಪ್ರಜ್ಞಾಂ ತಾದೃಶಂ ಕರ್ಮ ಚಾನತಿಕ್ರಮ್ಯ ಯಸ್ಮಾತ್ಸಂಭವಾಃ ಪ್ರಾಣಿನಾಂ ಜನ್ಮಾನಿ ಭವಂತಿ । ತಸ್ಮಾತ್ ಜ್ಞಾನಕರ್ಮಾನುಸಾರೇಣ ಪಶೂನಾಂ ಬುದ್ಧಿಮಾತ್ರಂ ಯುಕ್ತಮ್ । ಏತದೇವಾಭಿಪ್ರೇತ್ಯ ಪರಲೋಕಗಾಮಿನಂ ಜೀವಂ ಪ್ರತಿ ವಾಜಸನೇಯಿನ ಆಮನಂತಿ— "ತಂ ವಿದ್ಯಾಕರ್ಮಣೀ ಸಮನ್ವಾರಭೇತೇ ಪೂರ್ವಪ್ರಜ್ಞಾ ಚ" (ಬೃಹ-೪-೪-೨) ಇತಿ ॥ "ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ" (ಬೃಹ-೪-೪-೫) ಇತಿ ಚ । ತದೇವಂ ಮನುಷ್ಯದೇಹಸ್ಯೋತ್ತಮೋಪಾಧಿತ್ವಾತ್ತಸ್ಮಿನ್ನೇವಾಽಽತ್ಮನ ಆವಿರ್ಭಾವಾತಿಶಯಂ ಧ್ಯಾಯೇತ್ । ಯದ್ಯಪಿ ದೇವಾದಿದೇಹಾ ಇತೋಽಪ್ಯುತ್ತಮೋಪಾಧಯಸ್ತಥಾಪಿ ಮನುಷ್ಯಸ್ಯೈವ ಪ್ರಾಯೇಣ ಶಾಸ್ತ್ರಾಧಿಕಾರಿತ್ವಾತ್—"ಪುರುಷ

**ಏವೋಕ್ಥಮಯಮೇವ ಮಹಾನ್ಪ್ರಜಾಪತಿಃ " (ಐ-ಆ-೨-ಅ-೧-ಖಂ-೨° ಇತಿ ಪ್ರಸ್ತುತತ್ವಾದೇತ-ಸ್ಮಿನ್ನೇವ ಧ್ಯಾನಮುಚಿತಮ್ ।**

ಗೋ ಅಶ್ವಾದಿಗಳಲ್ಲಿ ಪೂರ್ವೋಕ್ತಧರ್ಮ ವೈಪರೀತ್ಯವನ್ನು ವಿವರಿಸುತ್ತಾರೆ. ಅರ್ಥಶಬ್ದವು ಮನುಷ್ಯವೈಲಕ್ಷಣ್ಯವನ್ನು ತಿಳಿಸುತ್ತದೆ. ತಿನ್ನುವ ಮತ್ತು ಕುಡಿಯುವ ವಿಷಯದಲ್ಲಿ ಮಾತ್ರ ಪಶು ಮುಂತಾದವುಗಳಿಗೆ ಜ್ಞಾನವಿರುತ್ತದೆ ಅಶನಾಯು ಎಂಬಲ್ಲಿ ಯಾಕಾರಲುಪ್ತವಾಗಿದೆ. ಆಹಾರೇಚ್ಛೆ ಬಂದಲ್ಲದೆ ಹಿಂದೆ ಅನುಭೂತವಾದುದನ್ನು ಹೇಳುವ ಸಾಮರ್ಥ್ಯವಿಲ್ಲ. ತತ್ಕಾಲದಲ್ಲಿ ಉಂಟಾಗುವ ಹಸಿವು ಬಾಯಾರಿಕೆಯನ್ನು ಕಳೆದುಕೊಳ್ಳುವುದಲ್ಲದೆ ಇನ್ನಾವಜ್ಞಾನವೂ ಇಲ್ಲ. ಪೂರ್ವಜನದಲ್ಲಿ ವಿಹಿತವಾದ ಅಥವಾ ಪ್ರತಿಷಿದ್ಧವಾದ ಕರ್ಮಾನುಷ್ಠಾನಮಾಡಿದ್ದರೆ ಅದಕ್ಕೆ ಉಚಿತವಾದ ಜ್ಞಾನ, ಕರ್ಮಗಳನ್ನೊಳಗೊಂಡು ಈ ಜನ್ಮದಲ್ಲಿ ಪ್ರಾಣಿಯು ಜನ್ಮಹೊಂದುತ್ತದೆ. ಆದುದರಿಂದ ಜ್ಞಾನಕರ್ಮಾನುಸಾರವಾಗಿ ಪಶುಗಳಿಗೆ ಕೇವಲ ಬುದ್ಧಿಮಾತ್ರ ಇರುತ್ತದೆ. ಈ ವಿಷಯ ಬೃಹದಾರಣ್ಯಕದಲ್ಲಿ **ತಂ ವಿದ್ಯಾ ಕರ್ಮಣೀ ಸಮನ್ವಾರಭೇತೇ ಪೂರ್ವ-ಪ್ರಜ್ಞಾ ಚ** ಎಂದು ವರ್ಣಿಸಿದೆ. **ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ** (ಬೃಹ-೪-೪-೫) ಎಂದೂ ಹೇಳಿದೆ. ಹೀಗೆ ಮನುಷ್ಯದೇಹವು ಉತ್ತಮೋಪಾಧಿಯಾದುದರಿಂದ ಅಲ್ಲಿಯೇ ಆತ್ಮಚೈತನ್ಯದ ಆವಿರ್ಭಾವವು ಅತಿಶಯವಾಗಿದೆಯೆಂದು ಧ್ಯಾನಿಸಬೇಕು. ದೇವಾದಿಶರೀರಗಳು ಇದಕ್ಕಿಂತ ಹೆಚ್ಚಾಗಿ ಉತ್ತಮೋಪಾಧಿಗಳಾದರೂ ಸಾಮಾನ್ಯವಾಗಿ ಮನುಷ್ಯನಿಗೇ ಶಾಸ್ತ್ರಾಧಿಕಾರವಿರುವುದರಿಂದಲೂ **ಪುರುಷ ಏವೋಕ್ಥಮಯಮೇವ ಮಹಾನ್ಪ್ರಜಾಪತಿಃ** (ಐ-೨-೧-೨) ಎಂದು ಮನುಷ್ಯನೇ ಪ್ರಸ್ತುತನಾದುದರಿಂದಲೂ ಇವನಲ್ಲಿಯೇ ಧ್ಯಾನವು ಉಚಿತವಾಗಿದೆ.

---

*English Translation*

---

1. He who knows the gradual development of the self in him (the man conceived as the uktha), obtains himself more development.

2. There are herbs and trees and all that is animated, and he knows the self gradually developing in them. For in herbs and trees sap only is seen, but thought (kitta) in animated beings.

3. Among animated beings again the self develops gradually, for in some sap (blood) is seen (as well as thought), but in other thought is not seen.

4 And in man again the self develops gradually, for he is most endowed with knowledge. He says what he has known, he sees what he has

known. He knows what is to happen to-morrow, he knows heaven and hell. By means of the mortal he desires the immortal—thus is he endowed.

5. With regard to the other animals hunger and thurst only are a kind of understanding. But they do not say what they have known, nor do they see what they have known. They do not know what is to happen to-morrow, nor heaven and hell. They go so far and no further, for they are born according to their knowledge (in a former life).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ತೃತೀಯಾಧ್ಯಾಯೇ ದ್ವಿತೀಯ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಮೂರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವು

---

## ಅಥ ದ್ವಿತೀಯಾರಣ್ಯಕೇ ತೃತೀಯಾಧ್ಯಾಯೇ ತೃತೀಯಃ ಖಂಡ

ಎರಡನೆಯ ಆರಣ್ಯಕದ ಮೂರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

---

**ಸ ಏಷ ಪುರುಷಃ ಸಮುದ್ರಃ ಸರ್ವಂ ಲೋಕಮತಿ ಯದ್ಧ ಕಿಂಚಾ-ಶ್ನುತೇಽತ್ಯೇನಂ ಮನ್ಯತೇ ಯದ್ಯಂತರಿಕ್ಷಲೋಕಮಶ್ನುತೇಽತ್ಯೇನಂ ಮನ್ಯತೇ ಯದ್ಯಮುಂ ಲೋಕಮಶ್ನುವೀತಾತ್ಯೇವೈನಂ ಮನ್ಯೇತ ॥**

ಪೂರ್ವತ್ರಾಽಽತ್ಮಾವಿರ್ಭಾವಧ್ಯಾನಮುತ್ತಮತ್ರ ಸಮುದ್ರರೂಪತ್ವಾದಿಧ್ಯಾನಮುಚ್ಯತೇ । ತತ್ರಾದೌ ಪುರುಷಸ್ಯ ಸಮುದ್ರರೂಪತ್ವಧ್ಯಾನಂ ವಿಧತ್ತೇ— " ಪುರುಷ ಏವೋಕ್ಥಮ್ " (ಐ-೩-೨-೪-೧-ಖಂ-೧) ಇತಿ ಶಸ್ತ್ರಸ್ವರೂಪತ್ವೇನ ಯಃ ಪುರುಷಃ ಪ್ರಕೃತಃ ಸ ಏಷ ಪುರುಷಃ ಸಮುದ್ರರೂಪಃ । ಯಥಾ ಸಮುದ್ರಸ್ತ-

ಟಾಕನವ್ಯಾದಿಕಂ ಸರ್ವಮತಿಕ್ರಮ್ಯ ಪ್ರೌಢೋ ವರ್ತತೇ ತಥಾಽಯಂ ಪುರುಷೋಽಪಿ ಸರ್ವಂ ಲೋಕ-ಮತಿಕ್ರಮ್ಯ ವರ್ತತೇ । ಸ ಏವಾತಿಕ್ರಮಃ ಕಥಮಿತಿ ಚೇತ್ತದುಚ್ಯತೇ- ಯದ್ಧ ಕಿಂಚ ಭೂಲೋಕೇ ಯತ್ಕಿಂಚಿದ್ಭೋಗ್ಯಜಾತಮಸ್ತಿ ತತ್ಸರ್ವಂ ವ್ಯಾಪ್ನೋತಿ ತಮೇನಂ ಭೋಗ್ಯಪದಾರ್ಥಮತಿಕ್ರಮ್ಯ ಮನ್ಯತೇಽನ್ತರಿಕ್ಷ-ಲೋಕಗತಮಪಿ ಭೋಗ್ಯಂ ಮೇ ಭೂಯಾದಿತಿ ಕಾಮಯತೇ । ಯದಾ ತ್ವಂತರಿಕ್ಷಲೋಕಗತಂ ಪ್ರಾಪ್ನೋತಿ ತದಾನೀಮೇನಮಪಿ ಭೋಗ್ಯಪದಾರ್ಥಮತಿಕ್ರಮ್ಯ ಮನ್ಯತೇ ಸ್ವರ್ಗಭೋಗೋಽಪಿ ಮೇ ಭೂಯಾದಿತಿ ಕಾಮ-ಯತೇ । ತಸ್ಯಾಪಿ ಪ್ರಾಪ್ತೌ ತಮತಿಕ್ರಮ್ಯ ಸತ್ಯಲೋಕಾದಿಭೋಗೋಽಪಿ ಮೇ ಭೂಯಾದಿತಿ ಕಾಮ-ಯೇತೈವ । ಏತದೇವಾಭಿಪ್ರೇತ್ಯ ಶಾಖಾಂತರೇ ಮಂತ್ರಬ್ರಾಹ್ಮಣ ಏವಮಾಮ್ನಾಯತೇ—"ಕಾಮಂ ಸಮು-ದ್ರಮಾವಿಶೇತ್ಯಾಹ । ಸಮುದ್ರ ಇವ ಹಿ ಕಾಮಃ । ನೈವ ಹಿ ಕಾಮಸ್ಯಾಂತೋಽಸ್ತಿ । ನ ಸಮುದ್ರಸ್ಯ" (ತೈ-ಬ್ರಾ-ಕಾಂ-೨-ಪ್ರ-೨-ಅನು-೫) ಇತಿ । ಅತಃ ಸಮುದ್ರಸಮಾನತ್ವಾತ್ಪುರುಷೇ ಸಮುದ್ರಧ್ಯಾನಂ ಯುಕ್ತಮ್ ॥

ಪೂರ್ವದಲ್ಲಿ ಆತ್ಮಾವಿರ್ಭಾವಧ್ಯಾನವನ್ನು ಹೇಳಿದ್ದಾಯಿತು. ಈಗ ಪುರುಷನಿಗೆ ಸಮುದ್ರರೂಪತ್ವಧ್ಯಾನವನ್ನು ವಿವರಿಸು ತ್ತಾರೆ. **ಪುರುಷ ಏವ ಉಕ್ಥಂ** (ಐ-ಆ-೨-೧-೨) ಎಂದು ಶಸ್ತ್ರರೂಪವಾಗಿ ಯಾವ ಪುರುಷನು ಹಿಂದೆ ವರ್ಣಿತನಾಗಿದ್ದನೋ ಆ ಪುರುಷನು ಸಮುದ್ರರೂಪನೂ ಆಗಿರುತ್ತಾನೆ- ಸಮುದ್ರವು ಕೆರೆ ನದಿ ಮುಂತಾದವುಗಳನ್ನೆಲ್ಲಾ ಅತಿಕ್ರಮಿಸಿ ಅಧಿಕವಾಗಿರುವಂತೆ ಈ ಪುರುಷನೂ ಸರ್ವಲೋಕವನ್ನತಿಕ್ರಮಿಸಿರುತ್ತಾನೆ. ಅತಿಶಯವನ್ನು ವಿವರಿಸುತ್ತಾರೆ. ಭೂಲೋಕದಲ್ಲಿ ಯಾವ ಭೋಗ್ಯ ಜಾತವಿದೆಯೋ ಅವೆಲ್ಲವನ್ನು ವ್ಯಾಪಿಸಿರುವುದಲ್ಲದೆ-ಅವುಗಳನ್ನತಿಕ್ರಮಿಸಿ ಪುರುಷನು ಅಂತರಿಕ್ಷದಲ್ಲಿರುವ ಭೋಗ್ಯಪದಾರ್ಥಗಳೂ ತನಗೆ ಸಿಗಲಿ ಎಂದು ಬಯಸುತ್ತಾನೆ. ಅವುಗಳನ್ನೂ ಹೊಂದಿದಮೇಲೆ ಅದರಿಂದ ತೃಪ್ತನಾಗದೆ ಸ್ವರ್ಗದ ಎಲ್ಲಾ ಭೋಗಗಳೂ ತನಗಾಗಲಿ ಎಂದು ಇಚ್ಛೆಪಡುತ್ತಾನೆ. ಅದನ್ನೂ ಪಡೆದನೆಂದರೆ ಅದನ್ನೂ ಅತಿಕ್ರಮಿಸಿ ಸತ್ಯಲೋಕದ ಭೋಗವು ತನ ಗಾಗಲಿ ಎಂದು ಪ್ರಾರ್ಥಿಸುತ್ತಾನೆ. ಕಾಮ ಅಂದರೆ ಇಚ್ಛೆಯು ಸಮುದ್ರಸಮಾನನೆಂದು ಇತರಶಾಖೆಯ ಮಂತ್ರ ಬ್ರಾಹ್ಮಣದಲ್ಲಿ ಕಾಮಂ ಸಮುದ್ರಮಾವಿಶೇತ್ಯಾಹ । ಸಮುದ್ರ ಇವ ಹಿ ಕಾಮಃ। **ನೈವಹಿ ಕಾಮಸ್ಯಾಂತೋಽಸ್ತಿ । ನ ಸಮುದ್ರಸ್ಯ** ಎಂದು ವಿವರಿಸಿವೆ. ಹೀಗೆ ಸಮುದ್ರಸಮಾನನಾದ ಕಾಮನೆ ಇರುವುದರಿಂದ ಪುರುಷ ಸಮುದ್ರರೂಪ ನೆಂದು ಧ್ಯಾನಿಸಬೇಕು.

**ಸ ಏಷ ಪುರುಷಃ ಪಂಚವಿಧಸ್ತಸ್ಯ ಯದುಷ್ಣಂ ತಜ್ಜ್ಯೋತಿರ್ಯಾನಿ ಖಾನಿ ಸ ಆಕಾಶೋಽಥ ಯಲ್ಲೋಹಿತಂ ಶ್ಲೇಷ್ಮಾ ರೇತಸ್ತಾ ಆಪೋ ಯಚ್ಛರೀರಂ ಸಾ ಪೃಥಿವೀ ಯಃ ಪ್ರಾಣಃ ಸ ವಾಯುಃ ॥**

ಪುರುಷಶರೀರಾವಯವೇಷು ಪಂಚಭೂತಧ್ಯಾನಂ ವಿಧತ್ತೇ—. ಉಷ್ಣಂ ಜಾಠರಾಗ್ನ್ಯಾದಿರೂಪಮ್। ಖಾನಿ ಮುಖನಾಸಿಕಾದಿಚ್ಛಿದ್ರಾಣಿ । ಶರೀರಶಬ್ದೇನ ಕಾಠಿನ್ಯಂ ವಿವಕ್ಷಿತಮ್ । "ಯತ್ಕಠಿನಂ ಸಾ ಪೃಥಿವೀ" (ಗರ್ಭೋಪ-೧) ಇತಿ ಶ್ರುತ್ಯಂತರಾತ್ ॥

ಪುರುಷನ ಶರೀರಾವಯಗಳಲ್ಲಿ ಪಂಚಭೂತಗಳ ಧ್ಯಾನವನ್ನು ವಿವರಿಸುತ್ತಾರೆ. ಪಂಚಭೂತಾತ್ಮಕವಾದುದು ಪುರುಷಶರೀರ. ಜಾಠರಾಗ್ನ್ಯಾದಿಗಳೇ ತೇಜಸ್ಸು. ಮುಖನಾಸಿಕಾಛಿದ್ರಗಳೇ ಆಕಾಶ. ರಕ್ತಶ್ಲೇಷ್ಮರೇತಸ್ಸಾದಿಗಳು ಜಲ

ಶರೀರಶಬ್ದದಿಂದ ಕಾಠಿಣ್ಯ ವಿವಕ್ಷಿತವಾಗಿದೆ. **ಯತ್ಕಠಿಣಂ ಸಾಪೃಥಿವೀ** ಎಂದು ಗರ್ಭೋಪನಿಷತ್ತಿನಲ್ಲಿ ಹೇಳಿದೆ. ಶರೀರದ ಕಠಿಣಭಾಗಗಳೆಲ್ಲಾ ಪೃಥಿವಿಯೆಂದು ತಿಳಿಯಬೇಕು. ಪ್ರಾಣವೇ ವಾಯುವೆಂದು ತಿಳಿದು ಧ್ಯಾನಿಸಬೇಕು.

**ಸ ಏಷಃ ವಾಯುಃ ಪಂಚವಿಧಃ ಪ್ರಾಣೋಽಪಾನೋ ವ್ಯಾನ ಉದಾನಃ ಸಮಾನಸ್ತಾ ಏತಾ ದೇವತಾಃ ಪ್ರಾಣಾಪಾನಯೋರೇವ ನಿವಿಷ್ಟಾ-ಶ್ಚಕ್ಷುಃ ಶ್ರೋತ್ರಂ ಮನೋ ವಾಗಿತಿ ಪ್ರಾಣಸ್ಯ ಹ್ಯನ್ವಪಾಯಮೇತಾ ಅಪಿಯಂತಿ ||**

ಪುರುಷಶರೀರಗತಸ್ಯ ಪ್ರಾಣವಾಯೋಃ ಪಂಚವೃತ್ತಿಭೇದಧ್ಯಾನಂ ವಿಧತ್ತೇ— ಹೃದಯಾದೂರ್ಧ್ವಂ ಮುಖನಾಸಿಕಯೋಃ ಸಂಚರನ್ವಾಯುಃ ಪ್ರಾಣಃ | ಅಧೋದ್ವಾರೇ ಸಂಚರನ್ನಪಾನಃ | ಸರ್ವಾಸು ನಾಡೀಷು ವ್ಯಾಪ್ಯ ವರ್ತಮಾನೋ ವ್ಯಾನಃ| ಜೀವೋತ್ಕ್ರಾಂತ್ಯಾದಿಕಂ ಕರ್ತುಮೂರ್ಧ್ವಭಾಗೇ ಕಂಠೇಽವಸ್ಥಿತ ಉದಾನಃ| ಅನ್ನಪಾನೇ ಸಾಮ್ಯೇನ ಕೃತ್ಸ್ನಶರೀರೇ ನೇತುಂ ನಾಭಿಸಮೀಪೇಽವಸ್ಥಿತಃ ಸಮಾನಃ | ತದೇತದ್ವಾಯೋಃ ಪಂಚವಿಧತ್ವಂ ಧ್ಯಾಯೇತ್ | ಚಕ್ಷುಃ ಶ್ರೋತ್ರಮನೋವಾಗಾದಿದೇವತಾ ಅಪ್ಯತ್ರ ಪೃಥಗ್ಧ್ಯಾತವ್ಯಾ ಇತಿ ನ ಶಂಕನೀಯಮ್ | ತಾಸಾಂ ದೇವತಾನಾಮೂರ್ಧ್ವಾಧೋಭಾಗವರ್ತಿನೋಃ ಪ್ರಾಣಾಪಾನಯೋರೇವಾಂತ-ರ್ಭಾವಾತ್ | ತದೇವ ಕಥಮಿತಿ ಚೇತ್ತದುಚ್ಯತೇ— ಯಸ್ಮಾತ್ಪ್ರಾಣಸ್ಯಾಪಾಯಂ ದೇಹಾದಪಗಮನಮನು ಸರ್ವಾ ಏತಾಶ್ಚಕ್ಷುರಾದಿದೇವತಾ ಅಪಿಯಂತಿ ಲೀಯಂತೇ ನ ದೇಹೇ ತಿಷ್ಠಂತಿ, ತಸ್ಮಾದಂತರ್ಭೂತತ್ವಾನ್ನ ಪೃಥಗ್ಧ್ಯಾನಮ್ ||

ಶರೀರದಲ್ಲಿರುವ ಪ್ರಾಣವಾಯುವಿನ ಐದುವಿಧವಾದ ವ್ಯಾಪಾರಗಳ ಧ್ಯಾನವನ್ನು ವಿವರಿಸುತ್ತಾರೆ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನನೆಂದು ಪ್ರಾಣವಾಯು ಐದುವಿಧವಾಗಿದೆ. ಹೃದಯದಮೇಲೆ ಮುಖನಾಸಿಕಾವಯ ಗಳಲ್ಲಿ ಸಂಚರಿಸುವ ವಾಯುವೇ ಪ್ರಾಣ. ಕೆಳಭಾಗದಲ್ಲಿ ಸಂಚರಿಸುವ ವಾಯುವು ಅಪಾನವು. ಸಕಲನಾಡಿಗಳಲ್ಲಿ ಸಂಚರಿಸುವುದು ವ್ಯಾನ. ಜೀವನ ಉತ್ಕ್ರಾಂತಿಗೆ ಕಾರಣವಾಗಿ ಮೇಲಿನ ಕಂಠಭಾಗದಲ್ಲಿರುವುದು ಉದಾನವಾಯು. ಅನ್ನಪಾನಾದಿಗಳನ್ನು ಒಂದೇ ರೀತಿಯಿಂದ ಸಕಲ ಶರೀರಕ್ಕೆ ಒಯ್ಯಲು ಕಾರಣವಾಗಿ ನಾಭಿಸಮೀಪದಲ್ಲಿರುವ ವಾಯು ಸಮಾನವಾಗುತ್ತದೆ. ಹೀಗೆ ಐದುವಿಧವನ್ನು ತಿಳಿದು ಧ್ಯಾನಿಸಬೇಕು. ಚಕ್ಷುರಾದೀಂದ್ರಿಯಗಳ ದೇವತೆಗಳನ್ನೂ ಈ ಸಂದರ್ಭದಲ್ಲಿ ಬೇರೆಯಾಗಿ ಧ್ಯಾನಿಸಬೇಡವೇ? ಎಂದು ಶಂಕಿಸಬಾರದು. ಏಕೆಂದರೆ ಆ ದೇವತೆಗಳೆಲ್ಲವೂ ಊರ್ಧ್ವ ಭಾಗ ಅಧೋಭಾಗಗಳಲ್ಲಿರುವ ಪ್ರಾಣ ಮತ್ತು ಅಪಾನಗಳಲ್ಲಿಯೇ ಅಂತರ್ಭೂತಗಳಾಗಿರುತ್ತವೆ. ಅಂತರ್ಭಾವವನ್ನು ವಿವರಿಸುತ್ತಾರೆ. ಪ್ರಾಣವು ಈ ದೇಹವನ್ನು ಬಿಟ್ಟುಹೋಗುವಾಗ ಚಕ್ಷುರಾದ್ಯಭಿಮಾನಿದೇವತೆಗಳು ಅದನ್ನನುಸರಿಸಿ ಹೋಗುತ್ತವೆ. ಯಾರೂ ಈ ದೇಹದಲ್ಲಿರುವುದಿಲ್ಲ. ಆದುದರಿಂದ ಪ್ರಾಣದಲ್ಲಿಯೇ ಲೀನವಾದುದರಿಂದ ಬೇರೆಯಾಗಿ ಧ್ಯಾನಿಸಬೇಕಾಗಿಲ್ಲ.

**ಸ ಏಷ ವಾಚಶ್ಚಿತ್ತಸ್ಯೋತ್ತರೋತ್ತರಿಕ್ರಮೋ ಯದ್ಯಜ್ಞಃ ಸ ಏಷ ಯಜ್ಞಃ ಪಂಚವಿಧೋಽಗ್ನಿಹೋತ್ರಂ ದರ್ಶಪೂರ್ಣಮಾಸೌ ಚಾತು-**

**ರ್ಮಾಸ್ಯಾನಿ ಪಶುಃ ಸೋಮಃ ಸ ಏಷ ಯಜ್ಞಾನಾಂ ಸಂಪನ್ನ-ತಮೋ ಯತ್ಸೋಮ ಏತಸ್ಮಿನ್ಹ್ಯೇತಾಃ ಪಂಚ ವಿಧಾ ಅಧಿ-ಗಮ್ಯಂತೇ ಯತ್ಪ್ರಾಕ್ಸವನೇಭ್ಯಃ ಸೈಕಾವಿಧಾ ತ್ರೀಣಿ ಸವನಾನಿ ಯದೂರ್ಧ್ವಂ ಸಾ ಪಂಚಮೀ ||**

ಯಜ್ಞಸ್ಯಾವಾಂತರಭೇದರೂಪೇಣ ಧ್ಯಾನಂ ವಿಧತ್ತೇ— ವಾಚೋ ಮಂತ್ರೋಚ್ಚಾರಣಾದಿವ್ಯಾಪೃ-ತಾಯಾಶ್ಚಿತ್ತಸ್ಯ ಶಾಸ್ತ್ರವಿಹಿತಾರ್ಥಪರ್ಯಾಲೋಚನವ್ಯಾಪೃತಸ್ಯಾಂತಃ ಕರಣಸ್ಯ ಚೋತ್ತರೋತ್ತರಿಕ್ರಮಃ | ಏಕಸ್ಮಾದಿತರಸ್ಯೋತ್ತರೋತ್ತರತ್ವಂ ತಸ್ಮಾದಪ್ಯನ್ಯಸ್ಯೋತ್ತರತ್ವಮಿತ್ಯೇವಮುತ್ತರೋತ್ತರ ಭಾವೋ ಯಸ್ಯ ಕ್ರಮಸ್ಯಾಸ್ತಿ ಸೋಽಯಮುತ್ತರೋತ್ತರಿಕ್ರಮಃ | ಕ್ರಮೇಣ ವ್ಯಾಪಾರ ಇತ್ಯರ್ಥಃ | ತೂಷ್ಣೀಮವಸ್ಥಾನಾ-ದುತ್ತರಭಾವೀ ಮನಸಾ ಶಾಸ್ತ್ರಾರ್ಥಪರ್ಯಾಲೋಚನವ್ಯಾಪಾರರೂಪೋ ಯಜ್ಞ ಇತಿ ಯದಸ್ತಿ ಸ ಏಷಃ ಉಕ್ಥಾತ್ಮಕ ಪುರುಷರೂಪಃ ಪ್ರಾಣದೇವಃ | ಸ ಚ ಯಜ್ಞಾತ್ಮಕಃ ಪ್ರಾಣಾಗ್ನಿಹೋತ್ರಾದಿಭೇದೈಃ ಪಂಚವಿಧ ಇತಿ ಧ್ಯಾಯೇತ್ | ನ ಚ ಸೋಮಾದಪ್ಯಧಿಕಂ ಕಿಂಚಿತ್ಕರ್ಮಾಂತರಂ ಕುತೋ ನೋ ಚ್ಯುತ ಇತಿ ವಾಚ್ಯಮ್| ಅಧಿಕಸ್ಯ ಕರ್ಮಾಂತರಸ್ಯಾಭಾವಾತ್ | ಸೋಮಯಾಗ ಇತಿ ಯದಸ್ತಿ ಸ ಏಷ ಯಜ್ಞಾನಾಂ ಮಧ್ಯೇಽತಿಶ-ಯೇನ ಸಂಪನ್ನಃ| ಯಸ್ಮಾದೇತಸ್ಮಿನ್ಸೋಮಯಾಗೇ ಪಂಚಪ್ರಕಾರಮನುಷ್ಠಾನಂ ದೃಶ್ಯತೇ | ಸುತ್ಯಾದಿ-ನೇಽನುಷ್ಠೇಯೇಭ್ಯಃ ಸವನೇಭ್ಯಃ ಪ್ರಾಚೀನಂ ದೀಕ್ಷಣೀಯಾದಿಕಂ ಯದಸ್ತಿ ಸೋಽಯಮೇಕಃ ಪ್ರಕಾರಃ | ಪ್ರಾತಃಸವನಂ ಮಾಧ್ಯಂದಿನಂ ಸವನಂ ತೃತೀಯಸವನಂ ಚೇತಿ ಪ್ರಕಾರತ್ರಯಮ್ | ಸವನೇಭ್ಯ ಊರ್ಧ್ವ-ಮವಭೃಥಮಾರಭ್ಯೋದವಸಾನೀಯಾಂತಂ ಯತ್ಕರ್ಮಜಾತಮಸ್ತಿ ಸೋಽಯಂ ಪಂಚಮಃ ಪ್ರಕಾರಃ | ಏತೇಷಾಂ ಪಂಚಪ್ರಕಾರಾಣಾಂ-ಸೋಮಯಾಗಾದನ್ಯತ್ರಾಸಂಭವಾತ್ಸೋಮಯಾಗ ಏವ ಸಂಪನ್ನತಮಃ ||

ಯಜ್ಞದ ಅವಾಂತರ ಭೇದರೂಪಧ್ಯಾನವನ್ನು ವಿವರಿಸುತ್ತಾರೆ. ಚಿತ್ತಾದಿಗಳಲ್ಲಿ ಒಂದಕ್ಕಿಂತ ಒಂದು ಉತ್ತರವಾಗಿರುವುದರಿಂದ ಈ ಕ್ರಮಿಕವಾದ ಉತ್ತರೋತ್ತರ ಭಾವಕ್ಕೆ **ಉತ್ತರೋತ್ತರಿಕ್ರಮ** ವೆಂದು ಹೆಸರು. ಕ್ರಮಿಕವ್ಯಾಪಾರವೆಂದರ್ಥ. ಶಾಸ್ತ್ರವಿಹಿತವಾದ ಅರ್ಥವಿಚಾರದಲ್ಲಿ ವ್ಯಾಪೃತವಾದುದರಿಂದ ಚಿತ್ತ ಅಂದರೆ ಅತಃಕರಣವು ಇತರ ವ್ಯಾಪಾರ ಶೂನ್ಯವಾಗಿರುತ್ತದೆ. ಇದಕ್ಕಿಂತ ಉತ್ತರದಲ್ಲಿರುವುದು ವಾಕ್. ಇದು ಮಂತ್ರೋಚ್ಚಾರಣಾದಿ ವ್ಯಾಪಾರಮಗ್ನವಾಗಿರುತ್ತದೆ. ಇವೆರಡರಿಂದ ಕೂಡಿರುವುದು ಯಜ್ಞ. ಇದು ಉಕ್ಥಾತ್ಮಕಪುರುಷರೂಪವಾದ ಪ್ರಾಣದೇವತೆಯಾಗಿರುತ್ತದೆ. ಈ ಯಜ್ಞಾತ್ಮಕ ಪ್ರಾಣವನ್ನು ಅಗ್ನಿಹೋತ್ರ, ದರ್ಶಪೂರ್ಣಮಾಸಗಳು, ಚಾತುರ್ಮಾಸ್ಯಗಳು, ಪಶು, ಸೋಮವೆಂಬ ಐದು ರೀತಿ ಭೇದದಿಂದ ಧ್ಯಾನಿಸಬೇಕು. ಸೋಮಕ್ಕಿಂತ ಅಧಿಕವಾದ ಕರ್ಮಗಳು ಯಾವುದು ಇಲ್ಲದಿರುವುದರಿಂದ ಸೋಮವನ್ನೇ ಐದನೆಯದನ್ನಾಗಿ ಹೇಳಿರುತ್ತಾರೆ. ಸೋಮಯಾಗವು ಯಜ್ಞಗಳಲ್ಲಿ ಅತಿಶಯಸಂಪನ್ನವಾಗಿದೆ. ಏಕೆಂದರೆ ಇದು ಐದು ವಿಧಗಳ ಅನುಷ್ಠಾನಗಳಿಂದ ಕೂಡಿರುತ್ತದೆ. ಸುತ್ಯಾದಿನದಲ್ಲಿ ಅನುಷ್ಠಾನಮಾಡಬೇಕಾದ ಸವನ ಕರ್ಮಗಳಿಗಿಂತಲೂ ಪೂರ್ವದಲ್ಲಿ ಆಚರಿಸುವ ದೀಕ್ಷಣೀಯಾದಿಗಳು ಒಂದು ವಿಧ. ಪ್ರಾತಃಸವನ, ಮಾಧ್ಯಂದಿನಸವನ, ತೃತೀಯ ಸವನವೆಂಬ ಮೂರು ಅನುಷ್ಠಾನಗಳು. ಒಟ್ಟಿಗೆ ನಾಲ್ಕಾಯಿತು. ಸವನದ ಮೇಲಿನ ಅವಭೃತಕರ್ಮವೇ ಆದಿಯಾಗಿ

ಉದವಸಾನೀಯಕರ್ಮಾನುಷ್ಠಾನದವರೆಗಿರುವ ಕರ್ಮಸಮುದಾಯ ಐದನೇ ಪ್ರಕಾರ. ಹೀಗೆ ಪಂಚ ಪ್ರಕಾರಗಳು ಸೋಮ ಯಾಗವನ್ನು ಬಿಟ್ಟರೆ ಬೇರೆಯಾಗದಲ್ಲಿ ಸಂಭವಿಸದಿರುವುದರಿಂದ ಸೋಮಯಾಗವೇ ಅತಿಶಯ ಸಂಪನ್ನವಾಗಿರುತ್ತದೆ.

---

*English Translation*

---

1. That man (conceived as uktha) is the sea, rising beyond the whole world. Whatever he reaches, he wishes to go beyond. If he reaches the sky, he wishes to go beyond.

2. If he should reach that (heavenly) world, he would wish to go beyond.

3. That man is fivefold. The heat in him is fire; the apertures (of the senses) are ether ; blood, mucus, and seed are water ; the body is earth, breath is air.

4. That air is fivefold, viz., up-breathing, down-breathing, back-breathing, out-breathing on-breathing. The other powers (devatas), viz., sight, hearing, mind, and speech, are comprised under up-breathing and down-breathing. For when breath departs, they also depart with it.

5. That man (conceived as uktha) is the sacrifice, which is a succession now of speech and now of thought. That sacrifice is fivefold, viz., the Agnihotra, the new and full moon sacrifices, the four-monthly sacrifices, the animal sacrifice, the Soma sacrifice. The Soma sacrifice is the most perfect of sacrifices, for in it these five kinds of ceremonies are seen : the first which

precedes the libations (the Diksha, & c.), then three libations and what follows (the Avabhritha, & c.) is the fifth.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ತೃತೀಯಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಮೂರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವು

---

## ಅಥ ದ್ವಿತೀಯಾರಣ್ಯಕೇ ತೃತೀಯಾಧ್ಯಾಯೇ ಚತುರ್ಥಃ ಖಂಡಃ

### ಎರಡನೆಯ ಆರಣ್ಯಕದ ಮೂರನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು

---

**ಯೋ ಹ ವೈ ಯಜ್ಞೇ ಯಜ್ಞಂ ವೇದಾಹನ್ಯಹರ್ದೇವೇಷು ದೇವಮಧ್ಯೂಹ್ಯಂ ಸ ಸಂಪ್ರತಿವಿದೇಷ ವೈ ಯಜ್ಞೇ ಯಜ್ಞೋಽಹನ್ಯಹರ್ದೇವೇಷು ದೇವೋಽಧ್ಯೂಹ್ಯೋ ಯದೇತನ್ಮಹದುಕ್ಥಮ್॥**

ಪೂರ್ವತ್ರ (ಐ–ಆ–೨–ಅ-೩–ಖಂ–೩) ಸಮುದ್ರರೂಪತ್ವಾದಿಧ್ಯಾನಮುಕ್ತಮ್ । ಅತ್ರ ಸ್ತೋಮಪಂಚಕತ್ವಾದಿ ಧ್ಯಾನಮುಚ್ಯತೇ । ತಸ್ಮಿನ್ಧ್ಯಾನೇ ಪ್ರರೋಚನಾರ್ಥಂ ಪ್ರಾಣರೂಪಮುಕ್ಥಂ ಪ್ರಶಂಸತಿ— ಯಥಾ ಹಸ್ತಿನೋಽಪ್ಯತ್ಯಂತಶ್ರೇಷ್ಠೋ ರಾಜಾ ಹಸ್ತಿನಮಾರೋಹತಿ, ಏವಮತ್ರ ಶ್ರೇಷ್ಠೋ ಯಜ್ಞ ಇತರಂ ಯಜ್ಞಮಧಿರೂಢ ಇತ್ಯುಪಚರ್ಯತೇ । ತಥೈವೋತ್ಕೃಷ್ಟಮಹರಿತರಸ್ಮಿನ್ನಹನ್ಯಧಿರೂಢಮ್ ಉತ್ಕೃಷ್ಟ ದೇವ ಇತರದೇವೇಷ್ವಧಿರೂಢಃ। ತಥಾ ಸತಿ ಯಃ ಪುಮಾನಧಮಯಜ್ಞಾದಿಷ್ವಧ್ಯೂಹ್ಯಮುಪರ್ಯವಸ್ಥಿತಮುತ್ತಮಯಜ್ಞಾದಿರೂಪಮುಪಾಸ್ತೇ ಸ ಪುಮಾನ್ಸಂಪ್ರತಿವಿತ್ಸಮ್ಯಗಭಿಜ್ಞಃ । ಕೋಽಸಾವುತ್ತಮಯಜ್ಞಾದಿರೂಪಃ ಪದಾರ್ಥ ಇತಿ ಚೇದುಚ್ಯತೇ—ಯದೇತನ್ಮಹದುಕ್ಥಂ ಪ್ರೌಢಂ ನಿಷ್ಕೇವಲ್ಯಶಸ್ತ್ರಮೇಷ ಏವೋತ್ತಮಯಜ್ಞಾದಿರೂಪಃ ಪದಾರ್ಥ ಇತಿ ಸೋಮಯಾಗಸ್ಯ ಸಂಪನ್ನತಮತ್ವಂ **ಪೂರ್ವಮುಕ್ತಮ್** । (ಐ ಆ. ೨ ಅ. ೩ ಖಂ. ೩) ಅತೋಽಯಂ ವರ್ತಮಾನಃ ಸಹಸ್ರಸಂವತ್ಸರಸತ್ರಾಖ್ಯೋಽಯಂ ಸೋಮಯಾಗ ಇತರ ಯಜ್ಞೇಽಗ್ನಿಹೋತ್ರಾದಾವಧಿರೂಢಃ, ತಥಾ ಮಹದ್ವ್ರತಂ ಮಹತೋ ವ್ರತಮಿತ್ಯಾದಿನಿರ್ವಚನವಿಶೇಷಸ್ಯ ಪೂರ್ವಮೇವ

(ಐ. ಆ. ೧ ಅ. ೧ ಖಂ. ೧) ದರ್ಶಿತತ್ವಾನ್ಮಹಾವ್ರತಾಖ್ಯಮೇವೈತದಹರಿತರಸ್ಮಿನ್ನಹನ್ಯಧ್ಯೂಢ (ಢ) ಮ್, ದೇವಶ್ಚ ಪ್ರಾಣರೂಪಃ ಶ್ರೇಷ್ಠತ್ವಾದ್ವಾಗಾದಿದೇವೇಷ್ವಧಿರೂಢ, ತದ್ರೂಪತ್ವಾದುಕ್ಥಮಧಿಕಮ್ ॥

ಪೂರ್ವಖಂಡದಲ್ಲಿ ಸಮುದ್ರರೂಪತ್ವಧ್ಯಾನ ಹೇಳಿದ್ದಾಯಿತು. ಇಲ್ಲಿ ಸ್ತೋಮಪಂಚಕತ್ವಾದಿಧ್ಯಾನವನ್ನು ವಿವರಿಸುತ್ತಾರೆ. ಈ ಧ್ಯಾನವಲ್ಲಿ ಅಭಿರುಚಿಯುಂಟಾಗಲು ಪ್ರಾಣರೂಪ ಉಕ್ಥವನ್ನು ಪ್ರಶಂಸಿಸುತ್ತಾರೆ. ಹೇಗೆ ಆನೆಗಿಂತಲೂ ಶ್ರೇಷ್ಠನಾದರಾಜನು ಆನೆಯಮೇಲೆ ಕುಳಿತುಕೊಳ್ಳುವನೋ ಅದರಂತೆ ಶ್ರೇಷ್ಠವಾದ ಯಜ್ಞವು ಇತರಯಜ್ಞಗಳಮೇಲೇರಿ ಇರುತ್ತದೆಂದು ಔಪಚಾರಿಕವಾಗಿ ತಿಳಿಯಬೇಕು. ಹಾಗೆಯೇ ಉತ್ಕೃಷ್ಟವಾದ ಹಗಲು ಇತರಹಗಲನ್ನತಿಕ್ರಮಿಸಿರುತ್ತವೆ. ಉತ್ತಮದೇವನೂ ಇತರದೇವತೆಗಳಲ್ಲಿ ಅಧಿರೂಢನಾಗಿರುತ್ತಾನೆ. ಯಾವ ಪುರುಷನು ಅಧಮಯಜ್ಞಾದಿಗಳಲ್ಲಿ ಅಧಿರೂಢವಾದ ಉತ್ತಮಯಜ್ಞಾದಿರೂಪದಿಂದ ಧ್ಯಾನಿಸುವನೋ ಅವನೇ ಚನ್ನಾಗಿ ತಿಳಿದವನು. ಉತ್ತಮಯಜ್ಞಾದಿರೂಪ ಪದಾರ್ಥವನ್ನು ವಿವರಿಸುತ್ತಾರೆ. ಪ್ರೌಢವಾದ ನಿಷ್ಕೇವಲ್ಯಶಸ್ತ್ರವೇ ಉತ್ತಮಯಜ್ಞಾದಿರೂಪಪದಾರ್ಥವಾಗಿವೆ. ಇದರಿಂದಲೇ ಸೋಮಯಾಗಕ್ಕೆ ಅತಿಶಯಸಂಪನ್ನತ್ವ ಹಿಂದೆ ಹೇಳಿರುವುದು. ಆದುದರಿಂದ ಪ್ರಕೃತ ಸಹಸ್ರ ಸಂವತ್ಸರಸತ್ರವೆಂಬ ಈ ಸೋಮಯಾಗವು ಇತರಯಜ್ಞಗಳನ್ನತಿಕ್ರಮಿಸಿರುತ್ತದೆ. ಮಹಾವ್ರತಪದದ ವ್ಯುತ್ಪತ್ತಿ ಹಿಂದೆ ವಿವೃತವಾಗಿದೆ. ಅದರಂತೆ ಮಹಾವ್ರತದದಿನವು ಇತರದಿನಗಳನ್ನತಿಕ್ರಮಿಸಿರುತ್ತದೆ. ಪ್ರಾಣದೇವನು ಶ್ರೇಷ್ಠನಾದುದರಿಂದ ವಾಗಾದಿದೇವತೆಗಳಲ್ಲಿ ಅಧಿರೂಢನಾಗಿರುತ್ತಾನೆ. ಅತಿಶಯಹೊಂದಿರುತ್ತಾನೆಂದರ್ಥ. ಪ್ರಾಣದೇವರೂಪಹೊಂದಿರುವುದರಿಂದ ಉಕ್ಥವೂ ಅಧಿಕವಾಗಿ ಸಕಲಾತಿಶಯವನ್ನು ಹೊಂದಿರುತ್ತದೆ.

**ತದೇತ್ಪಂಚವಿಧಂ ತ್ರಿವೃತ್ಪಂಚದಶಂ ಸಪ್ತದಶಮೇಕವಿಂಶಂ ಪಂಚವಿಂಶಮಿತಿ ಸ್ತೋಮತೋ ಗಾಯತ್ರಂ ರಥಂತರಂ ಬೃಹದ್ಭದ್ರಂ ರಾಜನಮಿತಿ ಸಾಮತೋ ಗಾಯತ್ರ್ಯುಷ್ಣಿಕ್ ಬೃಹತೀ ತ್ರಿಷ್ಟುಪ್‌-ದ್ವಿಪದೇತಿ ಚ್ಛಂದಸ್ತಃ ಶಿರೋ ದಕ್ಷಿಣಃ ಪಕ್ಷ ಉತ್ತರಃ ಪಕ್ಷಃ ಪುಚ್ಛಮಾತ್ಮೇತ್ಯಾಖ್ಯಾನಮ್ ॥**

ತಸ್ಯೋಕ್ಥಸ್ಯ ಪಂಚವಿಧತ್ವಧ್ಯಾನಂ ವಿಧತ್ತೇ—ಗೀಯಮಾನತೃಚಾವಸ್ಥಿತಾನಾಮೃಗ್ವಿಶೇಷಾಣಾಂ ಸಮೂಹಃ ಸ್ತೋಮಃ। ಸ ಚ ಸಾಮಗೈಸ್ತ್ರಿವೃದಾದಿನಾಮ್ನಾ ವ್ಯವಹ್ರಿಯತೇ। ತತ್ರ ತ್ರಿವೃತ್‌ಸ್ತೋಮಸ್ಯ ಸ್ವರೂಪಂ ಸಾಮಬ್ರಾಹ್ಮಣೇ ಸಮಾಮ್ನಾತಮ್—“ತಿಸೃಭ್ಯೋ ಹಿಂ ಕರೋತಿ ಸ ಪ್ರಥಮಯಾ ತಿಸೃಭ್ಯೋ ಹಿಂ ಕರೋತಿ ಸ ಮಧ್ಯಮಯಾ ತಿಸೃಭ್ಯೋ ಹಿಂ ಕರೋತಿ ಸ ಉತ್ತಮಯೋದ್ಯತೀ ತ್ರಿವೃತೋ ವಿಷ್ಟುತಿಃ” ಇತಿ। ಅಯಮರ್ಥಃ। “ಉಪಾಸ್ಮೈ ಗಾಯತಾ” (ಋ. ಸಂ. ಮಂ-೯-ಸೂ-೧೧-ಋ-೧) ಇತ್ಯಾದೀನಿ ತೃಚಾತ್ಮಕಾನಿ ತ್ರೀಣಿ ಸೂಕ್ತಾನಿ ಸಂತಿ, ತೇಷು ತಿಸೃಭಿರ್ಋಗ್ಭಿರ್ಹಿಂ ಕರೋತಿ ಗಾಯೇತ್। ಕಾಭಿಸ್ತಿಸೃಭಿಃ, ಪ್ರಥಮಯಾ ತ್ರಿಷ್ವಪಿ ಸೂಕ್ತೇಷು ಯಾ ಯಾ ಪ್ರಥಮಾ ತಯಾ ಸ ಉದ್ಗಾತಾ ಗಾಯೇತ್। ತಥಾ ಸತಿ ತಿಸೃಭಿರ್ಗೀತಂ ಭವತಿ, ಸೋಽಯಂ ಪ್ರಥಮಃ ಪರ್ಯಾಯಃ। ದ್ವಿತೀಯೇ ಸೂಕ್ತತ್ರಯಗತಯಾ ಮಧ್ಯಮಯಾ ಗಾಯೇತ್। ತೃತೀಯಪರ್ಯಾಯೇ ಸೂಕ್ತತ್ರಯಗತಯೋತ್ತಮಯಾ ಗಾಯೇತ್। ಅನೇನ ಪ್ರಕಾರೇಣ ತ್ರಿವೃತ್-

ಸ್ತೋಮಸಂಬಂಧಿನೀ ವಿಶಿಷ್ಟಾ ಸ್ತುತಿಃ ಸಂಪದ್ಯತೇ। ಸೇಯಂ ಸ್ತುತಿರುದ್ಯತೀತಿ ನಾಮ್ನಾಽಭಿಧೀಯತ ಇತಿ। ಪಂಚದಸ್ತೋಮ ಏವಮಾಮ್ನಾತಃ—"ಪಂಚಭ್ಯೋ ಹಿಂ ಕರೋತಿ ಸ ತಿಸೃಭಿಃ ಸ ಏಕಂ ಸ ಏಕಯಾ ಪಂಚಭ್ಯೋ ಹಿಂ ಕರೋತಿ ಸ ಏಕಯಾ ಸ ತಿಸೃಭಿಃ ಸ ಏಕಯಾ ಪಂಚಭ್ಯೋ ಹಿಂ ಕರೋತಿ ಸ ಏಕಯಾ ಸ ಏಕಯಾ ಸತಿಸೃಭಿ ಪಂಚಪಂಚಿನೀ ಪಂಚದಶಸ್ಯ ವಿಷ್ಟುತಿಃ" ಇತಿ॥ ಪೂರ್ವೋಕ್ತತ್ರಿವೃತ್‌ಸ್ತೋಮ ಏಕ ಏವ ಸೂಕ್ತತ್ರಯನಿಷ್ಪಾದ್ಯಃ, ಅನ್ಯೇ ತು ಸ್ತೋಮಾ ಏಕೈಕೇನೈವ ತೃಚಾತ್ಮಕೇನ ಸೂಕ್ತೇನ ನಿಷ್ಪಾದ್ಯಂತೇ। ತತ್ರಾಯಂ ಕ್ರಮಃ—ಪ್ರಥಮ ಪರ್ಯಾಯ ಆವೃತ್ತಿಸಹಿತಾಭಿಃ ಪಂಚಭಿರ್ಋಗ್ಭಿರ್ಗಾಯೇತ್। ತದ್ಯಥಾ-ಪ್ರಥಮಪರ್ಯಾಯೇ ಪ್ರಥಮಾಮೃಚಂ ತ್ರಿರ್ಗಾಯೇತ್। ಇತರೇ ದ್ವೇ ಸಕೃತ್ಸಕೃದ್ಗಾಯೇತ್। ದ್ವಿತೀಯಪರ್ಯಾಯೇ ಮಧ್ಯಮಾಂ ತ್ರಿರ್ಗಾಯೇತ್। ತೃತೀಯಪರ್ಯಾಯೇ ಉತ್ತಮಾಂ ತ್ರಿರ್ಗಾಯೇತ್। ಸೇಯಂ ಪಂಚದಶಸ್ಯ ಸ್ತೋಮಸ್ಯ ಸಂಬಂಧಿನೀ ವಿಷ್ಟುತಿಃ ಪಂಚಪಂಚಿನೀತಿ ನಾಮ್ನಾ ವ್ಯವಹ್ರಿಯತೇ। ಸಪ್ತ-ದಶಸ್ತೋಮ ಏವಮಾಮ್ನಾತಃ-"ಪಂಚಭ್ಯೋ ಹಿಂ ಕರೋತಿ ಸ ತಿಸೃಭಿಃ ಸ ಏಕಯಾ ಸ ಏಕಯಾ ಪಂಚಭ್ಯೋ ಹಿಂ ಹಿಂ ಕರೋತಿ ಸ ಏಕಯಾ ಸ ತಿಸೃಭಿಃ ಸ ಏಕಯಾ ಸಪ್ತಭ್ಯೋ ಹಿಂ ಕರೋತಿ ಸ ಏಕಯಾ ಸ ತಿಸೃಭಿಃ ಸ ತಿಸೃಭಿರ್ದಶಸಪ್ತ ಸಪ್ತದಶಸ್ಯ ವಿಷ್ಟುತಿಃ" ಇತಿ। ಪ್ರಥಮ ಪರ್ಯಾಯೇ ಪ್ರಥಮಾಮೃಚಂ ತ್ರಿರ್ಗಾಯೇತ್। ದ್ವಿತೀಯಪರ್ಯಾಯೇ ಮಧ್ಯಮಾಂ ತ್ರಿರ್ಗಾಯೇತ್। ತೃತೀಯಪರ್ಯಾಯೇ ಮಧ್ಯಮಾಮುತ್ತಮಾಂ ಚ ತ್ರಿರ್ಗಾಯೇತ್। ಸೇಯಂ ಸಪ್ತದಶಸ್ತೋಮ-ಸಂಬಂಧಿನೀ ವಿಷ್ಟುತಿಃ। ಸೇಯಂ ದಶಸಪ್ತೇತ್ಯುಚ್ಯತೇ। ಏಕವಿಂಶಸ್ತೋಮ ಏವಮಾಮ್ನಾತಃ—"ಸಪ್ತಭ್ಯೋ ಹಿಂ ಕರೋತಿ ಸ ತಿಸೃಭಿಃ ಸ ತಿಸೃಭಿಃ ಏಕಯಾ ಸಪ್ತಭ್ಯೋ ಹಿಂ ಕರೋತಿ ಸ ತಿಸೃಭಿಃ ಸ ಏಕಯಾ ಸ ತಿಸೃಭಿಃ ಸಪ್ತಭ್ಯೋ ಹಿಂಕರೋತಿ ಸ ಏಕಯಾ ಸ ತಿಸೃಭಿಃ ಸ ತಿಸೃಭಿಃ ಸಪ್ತಸಪ್ತಿನ್ಯೇಕವಿಂಶಸ್ಯ ವಿಷ್ಟುತಿಃ" ಇತಿ। ಪ್ರಥಮಪರ್ಯಾಯ ಉತ್ತಮಾಂ ಸಕೃದ್ಗಾ-ಯೇತ್। ದ್ವಿತೀಯಪರ್ಯಾಯೇ ಮಧ್ಯಮಾಂ ಸಕೃದ್ಗಾಯೇತ್। ತೃತೀಯಪರ್ಯಾಯೇ ಪ್ರಥಮಾಂ ಸಕೃದ್ಗಾಯೇತ್। ಸೇಯಮೇಕವಿಂಶಸ್ತೋಮಸಂಬಂಧಿನೀ ವಿಷ್ಟುತಿಃ ಸಪ್ತಸಪ್ತಿನೀತ್ಯ-ಭಿಧೀಯತೇ। ಪಂಚವಿಂಸ್ತೋಮಸ್ಯ ತ್ವಾವೃತ್ತಿಪ್ರಕಾರಭೇದಃ ಸಾಮಸೂತ್ರೇ ದ್ರಷ್ಟವ್ಯಃ। ತದೇವ-ಮುಕ್ಥಂ ಸ್ತೋಮವಶಾತ್ಪಂಚವಿಧಂ ಧ್ಯಾಯೇತ್। "ತತ್ಸವಿತುರ್ವರೇಣ್ಯಮ್" (ಋ. ಸಂ. ಮಂ-೩-ಸೂ-೬೨-ಋ-೧೦) ಇತ್ಯಸ್ಯಾಮೃಚ್ಯುತ್ಪನ್ನಂ ಸಾಮ ಗಾಯತ್ರನಾಮಕಮ್। "ಅಭಿ ತ್ವಾ ಶೂರ" (ಋ. ಸಂ. ಮಂ-೭-ಸೂ-೩೩-ಋ-೨೨) ಇತ್ಯಸ್ಯಾಮುತ್ಪನ್ನಂ ರಥಂತರಮ್। "ತ್ವಾಮಿದ್ಧಿ ಹವಾಮೇವೆ" (ಋ. ಸಂ. ಮಂ-೬-ಸೂ-೪೬-ಋ-೧) ಇತ್ಯಸ್ಯಾಮೃಚ್ಯುತ್ಪನ್ನಂ ಭದ್ರಮ್। "ಇಮಾನುಕಮ್" (ಋ. ಸಂ. ಮಂ-೧೦-ಸೂ-೧೫೭-ಋ-೧) ಇತ್ಯಸ್ಯಾಮೃಚ್ಯುತ್ಪನ್ನಂ ಭದ್ರಮ್। "ಇಂದ್ರಂ ನರೋ ನೇಮ ಧಿತಾ" (ಋ. ಸಂ. ಮಂ-೭-ಸೂ-೨೭-ಋ-೨೮) ಇತ್ಯಸ್ಯಾ-ಮೃಚ್ಯುತ್ಪನ್ನಂ ರಾಜನಮ್। ಏವಮುಕ್ಥಸ್ಯ ಸಾಮತಃ ಪಂಚವಿಧತ್ವಮ್। ಚತುರ್ವಿಂಶತ್ಯಕ್ಷರಾ ಗಾಯತ್ರೀ। ಅಷ್ಟಾವಿಂಶತ್ಯಕ್ಷರೋಷ್ಣಿಕ್। ಷಟ್‌ತ್ರಿಂಶದಕ್ಷರಾ ಬೃಹತೀ। ಚತುಶ್ಚತಾರಿಂಶದಕ್ಷರಾ ತ್ರಿಷ್ಟುಪ್। ಪಾದದ್ವಯೇನೈವ ನಿಷ್ಪನ್ನಾ ದ್ವಿಪದಾ। ಇತ್ಯೇವಂ ಛಂದೋವಶಾತ್ಪಂಚವಿಧತ್ವಮ್। ಯಥಾ ಪಕ್ಷಿಣಃ ಶಿರಃಪಕ್ಷಾದ್ಯವಯವಾಸ್ತಥಾ ನಿಷ್ಕೇವಲ್ಯಶಸ್ತ್ರಸ್ಯ "ಇಂದ್ರಮಿದ್ಗಾಥಿನಃ" (ಋ. ಸಂ. ಮಂ-೧-ಸೂ-೭-ಋ-೧) ಇತ್ಯಾದಿ ಮಂತ್ರಸಮೂಹಃ ಶಿರಃ। "ಅಭಿತ್ವಾ ಶೂರ"

(ಋ. ಸಂ. ಮಂ-೭-ಸೂ-೩೩-ಋ-೨೨) ಇತ್ಯಾದಿಕೋ ದಕ್ಷಿಣಃ ಪಕ್ಷಃ । " ತ್ವಾಮಿದ್ಧಿ " (ಋ ಸಂ. ಮಂ-೬-ಸೂ-೪೬-ಋ-೧) ಇತ್ಯಾದಿಕ ಉತ್ತರಃ ಪಕ್ಷಃ । " ಇಮಾನುಕಮ್'' (ಋ. ಸಂ. ಮಂ-೧೦-ಸೂ-೧೫೭-ಋ-೧) ಇತ್ಯಾದಿ ಸಮೂಹಃ ಪುಚ್ಛಮ್ । " ತದಿದಾಸ '' (ಋ. ಸಂ.ಮಂ-೧೦-ಸೂ-೧೨೦-ಋ-೧) ಇತ್ಯಾದಿಕೋ ಮಧ್ಯಶರೀರರೂಪ ಆತ್ಮಾ । ಇತ್ಯೇವಂ ಪಕ್ಷಿರೂಪಂ ಬ್ರಾಹ್ಮಣೇನಾಽಖ್ಯಾಯತೇ । ತದೇತದಾಖ್ಯಾಯಮಾನಂ ಪಂಚವಿಧಂ ಪಕ್ಷಿರೂಪಮುಕ್ಥಂ ಧ್ಯಾಯೇ-ದಿತ್ಯರ್ಥಃ ॥

ಉಕ್ಥದ ಪಂಚವಿಧತ್ವಧ್ಯಾನವನ್ನು ವಿವರಿಸುತ್ತಾರೆ. ಗಾನಮಾಡುವ ತೃಚಗಳಲ್ಲಿರುವ ಋಗ್ವಿಶೇಷ ಸಮೂಹಕ್ಕೆ ಸ್ತೋಮವೆಂದು ಹೆಸರು. ಸಾಮಗರು ಇದನ್ನು ತ್ರಿವದಿತ್ಯಾದಿನಾಮದಿಂದ ವ್ಯವಹರಿಸುತ್ತಾರೆ. ತ್ರಿವೃತ್‌ಸ್ತೋಮದ ಸ್ವರೂಪವು ಸಾಮ ಬ್ರಾಹ್ಮಣದಲ್ಲಿ **ತಿಸೃಭ್ಯೋ ಹಿಂಕರೋತಿ ಸ ಪ್ರಥಮಯಾ** ಇತ್ಯಾದಿ ವಾಕ್ಯಗಳಿಂದ ವಿವರಿಸಿರುತ್ತಾರೆ. ಅದರ ಅರ್ಥ ಹೀಗಿದೆ. **ಉಪಾಸ್ಮೈಗಾಯತಾ** (ಋ. ಸಂ. ೯-೧೧-೧) **ಇತ್ಯಾದಿ ತೃಚರೂಪವಾದ ಮೂರುಸೂಕ್ತಗಳಿವೆ.** ಅವುಗಳಲ್ಲಿ ಮೂರು ಋಕ್ಕುಗಳಿಂದ ಗಾನಮಾಡಬೇಕು. ಮೊದಲು ಮೂರುಸೂಕ್ತಗಳ ಪ್ರಥಮ ಋಕ್ಕಿನ ಗಾನವನ್ನು ಒಂದೊಂದಾವರ್ತಿ ಮಾಡಿದ ಮೇಲೆ ದ್ವಿತೀಯ ಪರ್ಯಾಯದಲ್ಲಿ ಮೂರು ಸೂಕ್ತಗಳ ಮಧ್ಯಮ ಋಕ್ಕುಗಳನ್ನು ಮೂರಾವರ್ತಿ ಕ್ರಮವಾಗಿ ಗಾನಮಾಡಬೇಕು. ತೃತೀಯ ಪರ್ಯಾಯದಲ್ಲಿ ಮೂರು ಸೂಕ್ತಗಳ ಉತ್ತಮ (ಕೊನೆಯ) ಋಕ್ಕುಗಳನ್ನು ಗಾನಮಾಡಬೇಕು. ಈ ರೀತಿಯಿಂದ ತ್ರಿವೃತ್‌ಸ್ತೋಮದ ವಿಶಿಷ್ಟ ಸ್ತುತಿಮಾಡಿದಂತಾಗುತ್ತದೆ. ಈಸ್ತುತಿಗೆ ಉದ್ಯತಿ ಎಂದು ಕರೆಯುತ್ತಾರೆ. ಪಂಚದಶಸ್ತೋಮವೂ ಕೂಡ **ಪಂಚಭ್ಯೋ ಹಿಂ ಕರೋತಿ** ಇತ್ಯಾದಿ ವಾಕ್ಯಗಳಿಂದ ವಿವೃತವಾಗಿದೆ. ತ್ರಿವೃತ್‌ಸ್ತೋಮವು ಸೂಕ್ತತ್ರಯದಿಂದ ಸಂಪನ್ನವಾಗಿ ಒಂದೇ ಆಗಿರುತ್ತದೆ. ಇತರ ಸ್ತೋಮವು ಒಂದೊಂದು ತೃಚಾತ್ಮಕ ಸೂಕ್ತದಿಂದ ಉಂಟಾಗುತ್ತವೆ. ಅಲ್ಲಿ ಕ್ರಮ ಹೀಗೆ ತಿಳಿಯಬೇಕು. ಪ್ರಥಮ ಪರ್ಯಾಯದಲ್ಲಿ ಆವೃತ್ತಿಯಿಂದಕೂಡಿದ ಐದು ಋಕ್ಕುಗಳಿಂದ ಗಾನಮಾಡಬೇಕು. ಅಂದರೆ ಪ್ರಥಮ ಋಕ್ಕನ್ನು ಮೂರು ಬಾರಿಯೂ, ಉಳಿದ ಎರಡು ಋಕ್ಕುಗಳನ್ನು ಒಂದೊಂದು ಬಾರಿ ಗಾನಮಾಡಬೇಕು. ದ್ವಿತೀಯ ಪರ್ಯಾಯದಲ್ಲಿ ಮಧ್ಯಮ ಋಕ್ಕನ್ನು ಮೂರುಬಾರಿಯೂ ತೃತೀಯ ಪರ್ಯಾಯದಲ್ಲಿ ಉತ್ತಮವನ್ನು ಮೂರು ಬಾರಿಯೂ ಉಳಿದವುಗಳನ್ನು ಒಂದೇ ಸಲ ಗಾನಮಾಡಬೇಕು. ಹೀಗೆ ಪಂಚದಶ (15) ಸ್ತೋಮಸಂಬಂಧವಾದ ಸ್ತುತಿಗೆ ಪಂಚಪಂಚಿನೀ ಎಂದು ಕರೆಯುತ್ತಾರೆ. ಸಪ್ತದಶಸ್ತೋಮಸ್ವರೂಪವನ್ನು **ಪಂಚಭ್ಯೋ ಹಿಂ ಕರೋತಿ** ಇತ್ಯಾದಿ ವಾಕ್ಯಗಳಿಂದ ವಿವರಿಸಿರುತ್ತಾರೆ. ಪ್ರಥಮ ಪರ್ಯಾಯದಲ್ಲಿ ಹಿಂದಿನಂತೆ ಪ್ರಥಮ ಋಕ್ಕನ್ನು ಮೂರು ಬಾರಿಯೂ, ದ್ವಿತೀಯ ಪರ್ಯಾಯದಲ್ಲಿ ಮಧ್ಯಮಾ ಋಕ್ಕನ್ನು ಮೂರುಬಾರಿಯೂ, ತೃತೀಯ ಪರ್ಯಾಯದಲ್ಲಿ ಮಧ್ಯಮ ಮತ್ತು ಉತ್ತಮಗಳನ್ನೂ ಮೂರಾವೃತ್ತಿ ಗಾನಮಾಡಬೇಕು. ಈ ಸಪ್ತದಶಸ್ತೋಮಸಂಬಂಧಿಸ್ತುತಿಗೆ ದಶಸಪ್ತ ಎಂದು ಹೆಸರು. ಏಕವಿಂಶಸ್ತೋಮದ ಲಕ್ಷಣ **ಸಪ್ತಭ್ಯೋ ಹಿಂ ಕರೋತಿ ಇತ್ಯಾದಿ** ವಾಕ್ಯಗಳಿಂದ ವಿವೃತವಾಗಿದೆ. ಪ್ರಥಮ ಪರ್ಯಾಯದಲ್ಲಿ ಉತ್ತಮವನ್ನು ಒಂದುಸಲ, ದ್ವಿತೀಯ ಪರ್ಯಾಯದಲ್ಲಿ ಪ್ರಥಮವನ್ನು ಒಂದುಸಲ ಹೀಗೆ ಗಾನಮಾಡಬೇಕು. ಈ ಸ್ತುತಿಗೆ ಸಪ್ತಸಪ್ತಿನೀ ಎಂದು ಹೆಸರು. ಪಂಚವಿಂಶಸ್ತೋಮದ ಆವೃತ್ತಿರೀತಿಯನ್ನು ಸಾಮಸೂತ್ರದಿಂದ ತಿಳಿಯಬೇಕು. ಈ ಸ್ತೋಮಭೇದದಿಂದ ಉಕ್ಥವು ಪಂಚವಿಧವೆಂದು ತಿಳಿದು ಧ್ಯಾನಿಸಬೇಕು. **ತತ್ಸವಿತುರ್ವರೇಣ್ಯಂ** (ಋ.ಸಂ.೩-೬೨-೧೦) ಎಂಬ ಋಕ್ಕಿನಿಂದ ಉಂಟಾದ ಸಾಮಕ್ಕೆ **ಗಾಯತ್ರ**ವೆಂದು ಹೆಸರು. **ಅಭಿ ತ್ವಾ ಶೂರ** (ಋ.ಸಂ.೭-೩೨-೨೨) ಎಂಬಋಕ್ಕಿನಿಂದ **ರಥಂತರ** ಸಾಮ ಉಂಟಾಗಿದೆ. **ತ್ವಾಮಿದ್ಧಿ ಹವಾಮಹೇ** (ಋ.ಸಂ.೬-೪೬-೧) ಎಂಬ ಋಕ್ಕಿನಲ್ಲಿ ಉಂಟಾದ ಸಾಮಕ್ಕೆ **ಬೃಹತ್** ಎಂದು ಹೆಸರು. **ಇಮಾನುಕಂ**

(ಋ.ಸಂ.೧೦-೧೫೭-೧) ಎಂಬ ಋಕ್ಕಿನಿಂದ **ಭದ್ರ** ಎಂಬ ಸಾಮ ಉಂಟಾಗಿದೆ. **ಇಂದ್ರಂ ನರೋ ನೇಮ ಧಿತಾ** (ಋ.ಸಂ.೭-೨೭-೨೮) ಎಂಬ ಋಕ್ಕಿನಿಂದ ಉಂಟಾದ ಸಾಮಕ್ಕೆ **ರಾಜನ** ಎಂದು ಹೆಸರು. ಹೀಗೆ ಸಾಮದಿಂದ ಉಕ್ಥಕ್ಕೆ ಪಂಚವಿಧತ್ವ ಸಂಭವಿಸುತ್ತದೆ. ಇಪ್ಪತ್ನಾಲ್ಕು ಅಕ್ಷರಗಳುಳ್ಳದ್ದು **ಗಾಯತ್ರೀ** ಛಂದಸ್ಸು. ಹದಿನೆಂಟು ಅಕ್ಷರಗಳಿರುವುದು **ಉಷ್ಣಿಕ್** ಮೂವತ್ತಾರು ಅಕ್ಷರಗಳಿಂದ ಕೂಡಿರುವುದು **ಬೃಹತೀ**. ನಲವತ್ತನಾಲ್ಕು ಅಕ್ಷರಗಳುಳ್ಳದ್ದು **ತ್ರಿಷ್ಟುಪ್**, ಎರಡುಪಾದಗಳಿಂದ ನಿಷ್ಪನ್ನವಾದುದು **ದ್ವಿಪದಾ**ಛಂದಸ್ಸು. ಹೀಗೆ ಛಂದೋಭೇದದಿಂದ ಉಕ್ಥವು ಐದು ವಿಧವಾಗುತ್ತದೆ. ಪಕ್ಷಿಗೆ ಶಿರಃಪಕ್ಷಾದಿಗಳಿರುವಂತೆ ನಿಷ್ಕೇವಲ್ಯಶಸ್ತ್ರಕ್ಕೆ **ಇಂದ್ರಮಿದ್ಗಾಥಿನಃ** (ಋ.ಸಂ.೧-೭-೧) ಇತ್ಯಾದಿ ಮಂತ್ರ ಸಮೂಹವೇ ಶಿರಸ್ಸು(ತಲೆ)**ಅಭಿ ತ್ವಾ ಶೂರ** (ಋ.ಸಂ.೭-೩೨-೨೨) ಇತ್ಯಾದಿ ಮಂತ್ರಗಳು ದಕ್ಷಿಣಪಕ್ಷ. **ತ್ವಾಮಿದ್ಧಿ** (ಋ.ಸಂ.೬-೪೬-೧) ಇತ್ಯಾದಿಗಳು ಉತ್ತರಪಕ್ಷ **ಇಮಾನುಕಂ** (ಋ.ಸಂ.೧೦-೧೫೭-೧) ಇತ್ಯಾದಿ ಸಮೂಹವು ಪುಚ್ಛ **ತದಿದಾಸ** (ಋ.ಸಂ.೧೦-೧೨೦-೧) ಇತ್ಯಾದಿಮಂತ್ರಗಳು ಮಧ್ಯಶರೀರರೂಪವಾದ ಆತ್ಮಾ ಹೀಗೆ ಪಕ್ಷಿರೂಪವು ಬ್ರಾಹ್ಮಣದಲ್ಲಿ ವಿವರಿಸಿದಂತೆ ಉಕ್ಥದ ಪಂಚವಿಧಪಕ್ಷಿರೂಪವನ್ನು ಧ್ಯಾನಿಸಬೇಕು.

**ಪಂಚಕೃತ್ವಃ ಪ್ರಸ್ತೌತಿ ಪಂಚಕೃತ್ವ ಉದ್ಗಾಯತಿ ಪಂಚಕೃತ್ವಃ ಪ್ರತಿ-ಹರತಿ ಪಂಚಕೃತ್ವ ಉಪದ್ರವತಿ ಪಂಚಕೃತ್ವೋ ನಿಧನಮುಪಯಂತಿ ತತ್ ಸ್ತೋಭಸಹಸ್ರಂ ಭವತಿ ॥**

**ಪ್ರಕಾರಾಂತರೇಣ ಪಂಚವಿಧತ್ವಧ್ಯಾನಂ ವಿಧತ್ತೇ—ಸಾಮಗಾ ಮಹಾವ್ರತೇ ರಾಜನಸಾಮ್ನಾ ಸ್ತುವತೇ। ಸಾಮ್ನಿ ಚ ಪಂಚ ಭಾಗಾಃ ಸಂತಿ। ಪ್ರಸ್ತಾವ ಉದ್ಗೀಥಃ ಪ್ರತಿಹಾರ ಉಪದ್ರವೋ ನಿಧನಮಿತ್ಯೇತೇ ಭಾಗಾಃ। ತತ್ರ ಪ್ರಸ್ತಾವ ಭಾಗಂ ಗಾಯನ್ಪ್ರಸ್ತೋತಾ ಪಂಚಕೃತ್ವ ಆವೃತ್ತಂ ಗಾಯತಿ। ಏವಮುದ್ಗಾತಾಪ್ರತಿಹರ್ತಾರೌ ಸ್ವಸ್ವಭಾಗಂ ಪಂಚಕೃತ್ವೋ ಗಾಯತಃ। ಋತ್ವಿಗಂತ-ರಾಭಾವಾದುಪದ್ರವಭಾಗಮುದ್ಗಾತ್ರೈವ ಗಾಯತಿ। ಸೋಽಪಿ ಪಂಚಕೃತ್ವೋ ಗಾಯತಿ। ಸರ್ವೇ ನಿಧನಮುಪಯಂತೀತಿ ವಿಧಾನಾತ್ ಪ್ರಸ್ತೋತ್ರಾದಯಃ ಸರ್ವೇಽಪಿ ಪಂಚಕೃತ್ವೋ ನಿಧನಭಾಗಂ ಗಾಯಂತಿ। ಏವಂ ಸತ್ಯತ್ರ ಭಾಗಭೇದೇನ ಯತ್ಪಂಚವಿಧತ್ವಂ ಯಚ್ಚೈಕೈಕಸ್ಯ ಆವೃತ್ತ್ಯಾ ಪಂಚ-ವಿಧತ್ವಂ ತದುಭಯಮುಕ್ಥೇ ಧ್ಯಾತವ್ಯಮ್। ಪ್ರಸ್ತಾವಾದಿಭಾಗಾನಾಂ ಪಂಚಕೃತ್ವೋ ಗಾನಮಸ್ತಿ। ತತ್ರಾಸ್ಮಿನ್ಗಾನೇ ಸ್ತೋಭಾನಾಂ ಸಹಸ್ರಂ ಸಂಪದ್ಯತೇ। ಋಗಕ್ಷರವ್ಯತಿರೇಕೇಣ ಗೀತಿಪೂರಣಾರ್ಥಂ ಯೇಽಕ್ಷರಸಮೂಹಾಃ ಪ್ರಕ್ಷಿಪ್ಯಂತೇ ತೇ ಸ್ತೋಭಸಂಜ್ಞಕಾಸ್ತೇಷಾಂ ಸಹಸ್ರತ್ವಸಂಪಾದನಂ ಸಾಮ-ಸೂತ್ರೇ ದ್ರಷ್ಟವ್ಯಮ್ ಸೇಯಂ ಸಹಸ್ರಸಂಖ್ಯಾ ಯಥೋಕ್ತ ಪಂಚವಿಧತ್ವ ಪ್ರಶಂಸಾರ್ಥಮುಪನ್ಯ-ಸ್ಯತೇ ॥**

ಇತರರೀತಿಯಿಂದ ಪಂಚವಿಧತ್ವಧ್ಯಾನವನ್ನು ವಿವರಿಸುತ್ತಾರೆ. ಮಹಾವ್ರತದಲ್ಲಿ ಸಾಮಗರು ರಾಜನಸಾಮದಿಂದ ಸ್ತುತಿಸುತ್ತಾರೆ. ಅದರಲ್ಲಿ ಪ್ರಸ್ತಾವ, ಉದ್ಗೀಥ, ಪ್ರತಿಹಾರ, ಉಪದ್ರವ, ನಿಧನವೆಂದು ಐದುಭಾಗಗಳಿರುತ್ತವೆ. ಅವುಗಳಲ್ಲಿ ಪ್ರಸ್ತೋತೃವು ಪ್ರಸ್ತಾವಭಾಗಗಳನ್ನು ಐದುಸಲ ಆವೃತ್ತಿಯಿಂದ ಗಾನಮಾಡುತ್ತಾನೆ. ಉದ್ಗಾತೃ, ಪ್ರತಿಹರ್ತೃ ಇಬ್ಬರು ತಮ್ಮಭಾಗಗಳನ್ನು ಅಂದರೆ ಉದ್ಗೀಥ, ಪ್ರತಿಹಾರಭಾಗಗಳನ್ನು ಐದುಸಲ ಗಾನಮಾಡುತ್ತಾರೆ. ಇತರ ಋತ್ವಿಜ

ರಿಲ್ಲದಿರುವುದರಿಂದ ಉಪದ್ರವಭಾಗವನ್ನು ಉದ್ಗಾತೃವೇ ಐದುಬಾರಿ ಗಾನಮಾಡುತ್ತಾನೆ. ಪ್ರಸ್ತೋತ್ರಾದಿಗಳೆಲ್ಲರೂ ಐದು ಬಾರಿ ನಿಧನಭಾಗವನ್ನು ಗಾನಮಾಡುತ್ತಾರೆ. ಈ ರೀತಿ ಭಾಗಭೇದದಿಂದ ಐದುವಿಧವನ್ನೂ ಒಂದೊಂದುಭಾಗದ ಐದಾವೃತ್ತಿಯನ್ನೂ ಉಕ್ಥದಲ್ಲಿ ಧ್ಯಾನಿಸಬೇಕು. ಪ್ರಸ್ತಾವಾದಿಭಾಗಗಳ ಐದಾವೃತ್ತಿಗಾನದಿಂದ ಅಲ್ಲಿ ಸ್ತೋಭಸಹಸ್ರ ಉಂಟಾಗುತ್ತದೆ. ಋಗಕ್ಷರವಲ್ಲದೆ ಗೀತಿಪೂರ್ಣಕ್ಕೋಸ್ಕರ ಯಾವ ಅಕ್ಷರಸಮುದಾಯವು ಸೇರಿಸಿಕೊಳ್ಳಲ್ಪಡುವುದೋ ಅದಕ್ಕೆ ಸ್ತೋಭವೆಂದು ಹೆಸರು. ಅವು ಸಾವಿರ ಆಗುವರೀತಿ ಸಾಮಸೂತ್ರದಲ್ಲಿ ವಿವರಿಸಿದೆ. ಪಂಚವಿಧದ ಪ್ರಶಂಸೆಗೋಸ್ಕರ ಅವುಗಳ ಸಹಸ್ರಸಂಖ್ಯೆ ಇಲ್ಲಿ ಹೇಳಿದೆ.

**ಏವಂ ಹ್ಯೇತಾಃ ಪಂಚ ವಿಧಾ ಅನುಶಸ್ಯಂತೇ ಯತ್ಪ್ರಾಕ್ತೃಚಾಶೀತಿಭ್ಯಃ**
**ಸೈಕಾ ವಿಧಾ ತಿಸ್ರಸ್ತೃಚಾಶೀತಯೋ ಯದೂರ್ಧ್ವಂ ಸಾ ಪಂಚಮೀ॥**

**ಪ್ರಕಾರಾಂತರೇಣ ಪಂಚವಿಧತ್ವಧ್ಯಾನಂ ವಿಧತ್ತೇ—ಯಥಾ ಪ್ರಸ್ತಾವಾದಿಭಾಗೈಸ್ತತ್ತದಾವೃತ್ತಿಭಿಶ್ಚ ಪಂಚವಿಧಂ ಸ್ತೋತ್ರಂ ಸಾಮಗಾಃ ಸಂಪಾದಯಂತಿ, ಏವಮೇವೈತಾ ನಿಷ್ಕೇವಲ್ಯಗತಾ ಋಚೋ ಹೋತ್ರಾ ಪಂಚ ವಿಧಾ ಅನುಶಸ್ಯಂತೇ । ಕಥಂ ಪಾಂಚವಿಧ್ಯಮಿತಿ ಚೇತ್ತದುಚ್ಯತೇ— "ಮಹಾಁ ಇಂದ್ರೋ ಯ ಓಜಸಾ" (ಋ. ಸಂ. ಮಂ-೮-೬-ಋ-೧) ಇತ್ಯಾದಿಕಾ ಯೇಯಂ ಗಾಯತ್ರೀ ತೃಚಾಶೀತಿರ್ಯಾ ಚ "ಮಾ ಚಿದನ್ಯತ್" (ಋ. ಸಂ. ಮಂ-೮-ಸೂ-೧-ಋ-೧) ಇತ್ಯಾದಿಕಾ ಬಾರ್ಹತೀ ತೃಚಾಶೀತಿರ್ಯಾಪಿ "ಯ ಇಂದ್ರ ಸೋಮ" (ಪಾತಮಃ) (ಋ. ಸಂ. ಮಂ-೮-ಸೂ-೧೨-ಋ-೧) ಇತ್ಯಾದಿ ಕೌಷ್ಣಿಹೀ ತೃಚಾಶೀತಿಸ್ತಾಸ್ತಿಸ್ರಸ್ತೃಚಾಶೀತಯಃ । ಶಸ್ತ್ರಪಕ್ಷಿಣೋಽನ್ನರೂಪಾಸ್ತಾಭ್ಯಃ ಪ್ರಾಚೀನಮಾತ್ಮ ಶಿರಃ ಪಕ್ಷಾದಿ ಭಾಗರೂಪಂ ಯನ್ಮಂತ್ರಜಾತಮಸ್ತಿ ಸೇಯಮೇಕಾ ವಿಧಾ । ತೃಚಾಶೀತಯಸ್ತು ತ್ರಿ (ತಿಸ್ರೋ) ವಿಧಾಃ । ತಾಭ್ಯ ಊರ್ಧ್ವಮುದರಭಾಗಶ್ಚೇತ್ಯೇವಂರೂಪಂ ಯನ್ಮಂತ್ರಜಾತಮಸ್ತಿ ಸಾ ಪಂಚ ವಿಧಾ । ತದೇತಚ್ಛಸ್ತ್ರಸ್ಯ ಪಂಚವಿಧತ್ವಂ ಧ್ಯಾಯೇತ್ ॥**

ಪ್ರಕಾರಾಂತದಿಂದ ಪಂಚವಿಧಧ್ಯಾನವನ್ನು ವಿವರಿಸುತ್ತಾರೆ. ಪ್ರಸ್ತಾವಾದಿಭಾಗಗಳಿಂದಲೂ ಅವುಗಳ ಅವೃತ್ತಿಯಿಂದಲೂ ಸಾಮಗರು ಸ್ತೋತ್ರವನ್ನು ಐದುರೀತಿ ಮಾಡಿಕೊಂಡಂತೆ ನಿಷ್ಕೇವಲ್ಯಶಸ್ತ್ರದ ಋಕ್ಕುಗಳನ್ನೂ ಹೋತೃವು ಐದುವಿಧವಾಗಿ ವಿಭಾಗಿಸಿಕೊಳ್ಳುತ್ತಾನೆ. **ಮಹಾಂ ಇಂದ್ರೋ ಯ ಓ ಜಸಾ** (ಋ. ಸಂ. ೮-೬-೧) ಇತ್ಯಾದಿ ಗಾಯತ್ರಿ ತೃಚಾಶೀತಿ ಮೊದಲನೆಯ ವಿಭಾಗ. **ಮಾಚಿದನ್ಯತ್** (ಋ. ಸಂ. ೮-೧-೧) ಇತ್ಯಾದಿ ಬಾರ್ಹತೀತೃಚಾಶೀತಿ ಎರಡನೆಯದು. **ಯ ಇಂದ್ರ ಸೋಮ** ಋ. ಸಂ. ೮-೧೨-೧) ಇತ್ಯಾದಿ ಔಷ್ಣಿಹೀತೃಚಾಶೀತಿ ಮೂರು ತೃಚಾಶೀತಿಗಳು ಶಸ್ತ್ರರೂಪ ಪಕ್ಷಿಯ ಅನ್ನರೂಪಗಳು. ಅವುಗಳಿಗಿಂತ ಮೊದಲು ಆತ್ಮ, ಪಕ್ಷಭಾಗರೂಪವಾಗಿ ಯಾವ ಮಂತ್ರ ಸಮೂಹ ಹೇಳಿದೆಯೋ ಅದು ಒಂದುಭಾಗ (4) ತೃಚಾಶೀತಿಗಳನಂತರ ಹೇಳಿದ ಉದರಭಾಗದ ಮಂತ್ರಜಾತವು ಐದನೆಯ ಭಾಗವಾಗುತ್ತದೆ. ಹೀಗೆ ಶಸ್ತ್ರದ ಪಂಚವಿಧವನ್ನು ತಿಳಿದು ಧ್ಯಾನಿಸಬೇಕು.

**ತದೇತತ್ಸಹಸ್ರಂ ತತ್ಸರ್ವಂ ತಾನಿ ದಶ ದಶೇತಿ ವೈ ಸರ್ವಮೇತಾವತೀ**
**ಹಿ ಸಂಖ್ಯಾ ದಶ ದತತಸ್ತಚ್ಛತಂ ದಶ ಶತಾನಿ ತತ್ಸಹಸ್ರಂ ತತ್ಸರ್ವಂ**

ತಾನಿ ತ್ರೀಣಿ ಚ್ಛಂದಾಸಿ ಭವಂತಿ ತ್ರೇಧಾ ವಿಹಿತಂ ವಾ ಇದಮನ್ನ-
ಮಶನಂ ಪಾನಂ ಖಾದಸ್ತದೇತೈರಾಪ್ನೋತಿ ||

ತದೇತಚ್ಛಸ್ತ್ರಗತಂ ಪಂಚವಿಧತ್ವಂ ಪ್ರಶಂಸತಿ—ಯಥೋಕ್ತಪಂಚವಿಧ ಶಸ್ತ್ರೇ ಯದೇತ-
ನ್ಮಂತ್ರಜಾತಮಸ್ತಿ ತತ್ಸರ್ವಂ ಮಿಲಿತ್ವಾ ಬುದ್ಧಿಕೌಶಲೇನಾಕ್ಷರಗಣನಯಾ ಬೃಹತೀಸಹಸ್ರಂ ಸಂಪ-
ದ್ಯತೇ। ಪೂರ್ವೋಕ್ತಸ್ತೋಭದ್ವಾರಾ ಚ ಯತ್ಸಹಸ್ರಂ ಸಂಪನ್ನಂ ತತ್ಸರ್ವಮ್ । ನ ಹಿ ಸಹಸ್ರವ್ಯತಿ
ರೇಕೇಣ ಕಿಂಚಿಜ್ಜಗದಸ್ತಿ, ಅಶೇಷಸಂಖ್ಯಾಯಾಃ ಸಹಸ್ರೇಽಂತರ್ಭಾವಾತ್ । ಸಂಖ್ಯೇಯಸ್ಯ ಚ ವಸ್ತು
ಜಾತಸ್ಯ ಸಂಖ್ಯಾಯಾಮಂತರ್ಭಾವಾತ್। ಕಥಮಶೇಷಸಂಖ್ಯಾಯಾಃ ಸಹಸ್ರೇಂತರ್ಭಾವ ಇತಿ ಚೇತ್ತ-
ದುಚ್ಯತೇ—ತಾನಿ ಸಂಖ್ಯಾಪರ್ವಾಣಿ ದಶ ದಶೇತ್ಯೇವ ವ್ಯವಹ್ರಿಯಂತೇಽತಃ ಸಂಖ್ಯಾಜಾತಂ ಸರ್ವಂ
ಸಹಸ್ರೇಽಸ್ತಿ । ದಶ ಶಬ್ದೇನ ಯಾವತ್ಯುಚ್ಯತ ಏತಾವತ್ಯೇವ ಲೋಕೇ ವಿದ್ಯಮಾನಾ ಸರ್ವಂ ಸಂಖ್ಯಾ
ನ ತ್ವಿತೋಽಧಿಕಾ ಕಾಚಿದಸ್ತಿ। ತಥಾ ಹಿ—ಏಕಂ ದ್ವೇ ತ್ರೀಣೀತ್ಯೇವಂ ಗಣನಾಯಾಂ ದಶ-
ಪರ್ಯಂತಾ ನೂತನಾಃ ಸಂಖ್ಯಾಸ್ತತ ಊರ್ಧ್ವಂ ತಸ್ಯಾ ಏವ ಸಂಖ್ಯಾಯಾ ಆವೃತ್ತಿರ್ಗಣ್ಯತೇ।
ಏಕಾದಶ ದ್ವಾದಶೇತ್ಯೇವಂ ದಶಕಾದೂರ್ಧ್ವಮೇಕಾದಿ ಸಂಖ್ಯಾಯಾ ಏವ ವ್ಯವಹ್ರಿಯಮಾಣತ್ವಾತ್।
ಶತಂ ಸಹಸ್ರಮಯುತಮಿತ್ಯಾದಿಕಂ ಸಂಖ್ಯಾಂತರಂ ವಿದ್ಯತ ಇತಿ ಚೇನ್ನ । ತಸ್ಯಾಪ್ಯಾವೃತ್ತಾಯಾಂ
ದಶಸಂಖ್ಯಾಯಾಮಂತರ್ಭಾವಾತ್ । ದಶ ದಶತ ಇತ್ಯಾದಿನಾಽಂತರ್ಭಾವ ಏವೋದಾಹೃತ್ಯ ಪ್ರದ-
ರ್ಶ್ಯತೇ । ತಕಾರಾಂತೋ ದಶಚ್ಛಬ್ದೋ ದಶಾನಾಂ ಸಮೂಹಂ ಬ್ರೂತೇ । ಪಂಚದ್ದಶತೌ ವರ್ಗೇ ವಾ
(ಪಾ. ಸೂ. ಅ. ೫ ಪಾ. ೧ ಸೂ. ೬೦) ಇತಿ ಪಾಣಿನಿನಾ ಸೂತ್ರಿತತ್ವಾತ್ । ದಶಸಂಖ್ಯಾಕಾನಿ ವರ್ಗ-
ರೂಪಾಣಿ ದಶಕಾನಿ ಯಾನಿ ಸಂತಿ ತಾನಿ ಮಿಲಿತ್ವಾ ಶತಶಬ್ದೇನೋಚ್ಯಂತೇ । ತಥಾ ದಶಸಂಖ್ಯಾಕಾನಿ-
ಶತಾನಿ ಯಾನಿ ಸಂತಿ ತಾನಿ ಮಿಲಿತ್ವಾ ಸಹಸ್ರಶಬ್ದೇನೋಚ್ಯಂತೇ । ಏವಂ ದಶತ್ವಸಂಖ್ಯಾವೃತ್ತಿಬಲಾ-
ದೇವಾಯುತಲಕ್ಷಾದಿನಿಷ್ಪತ್ತೇಸ್ತತ್ಸರ್ವಂ ಸಂಖ್ಯಾಜಾತಂ ಯಥೋಕ್ತೇಷ್ವೇವ ದಶಶತಸಹಸ್ರ-
ರೂಪೇಷು ಸಂಖ್ಯಾಪರ್ವಸ್ವಂತರ್ಭವತಿ। ಯದ್ಯಪಿ ದಶಸಂಖ್ಯಾಯಾಮೇವಾಂತರ್ಭಾವಸ್ತಥಾಪಿ
ತದುತ್ಪತ್ತಯೇ ಶತಸಂಖ್ಯಾ ಸಹಸ್ರಸಂಖ್ಯಾ ಚೋದಾಹರಣೀಯಾ, ತಸ್ಮಾತ್ತಾನಿ ಸಂಖ್ಯಾಪರ್ವಾಣಿ
ತ್ರೀಣಿ ಚ್ಛಂದಾಂಸಿ ಚ್ಛಾದಕಾನಿ ಸರ್ವಸಂಖ್ಯಾವ್ಯಾಪಕಾನಿ ಭವಂತಿ । ತಚ್ಚ ಪರ್ವತ್ರಯಂ ತ್ರೇಧೇತ್ಯಾ
ದಿನಾ ಪ್ರಶಸ್ಯತೇ । ಲೋಕೇ ಪ್ರಾಣಿಭಿರ್ಭುಜ್ಯಮಾನಂ ಯದಿದಮನ್ನಮಸ್ತಿ ತಚ್ಚ ತ್ರೇಧಾ ವಿಹಿತ-
ಮಶನಮೋದನರೂಪಂ ಪಾನಂ ಜಲಕ್ಷೀರಾದಿರೂಪಂ ಖಾದೋ ಲಡ್ಡುಕಾದಿ । ತಚ್ಚ ತ್ರಿವಿಧಮನ್ನ-
ಮೇತೈರ್ದಶ ಶತಂ ಸಹಸ್ರಮಿತ್ಯೇವಂ ರೂಪೈಸ್ತ್ರಿಭಿಃ ಸಂಖ್ಯಾಪರ್ವಭಿಃ ಪ್ರಾಪ್ನೋತಿ । ಫಲೇನ ಪ್ರಶಸ್ಯ
ಮಾನತ್ವಾತ್ಪರ್ವತ್ರಯಂ ಧ್ಯಾತವ್ಯಮ್ ||

ಶಸ್ತ್ರದ ಪಂಚಪ್ರಕಾರಗಳನ್ನು ಪ್ರಶಂಸಿಸುತ್ತಾರೆ. ಪೂರ್ವೋಕ್ತರೀತಿಯಿಂದ ಐದುವಿಧವಾದ ಶಸ್ತ್ರದಲ್ಲಿ ಯಾವ
ಮಂತ್ರಜಾತಹೇಳಿದೆಯೋ ಅವೆಲ್ಲವನ್ನೂ ಸೇರಿಸಿ ಬುದ್ಧಿಕೌಶಲದಿಂದ ಅಕ್ಷರಗಳನ್ನು ಎಣಿಸಿ ಬೃಹತೀಸಹಸ್ರವುಂಟಾಗುತ್ತದೆ.
ಹಿಂದೆಹೇಳಿದ ಸ್ತೋಭದ ಮೂಲಕವೂ, ಬೃಹತೀ ಮೂಲಕವೂ ಯಾವ ಸಹಸ್ರ ಸಂಖ್ಯೆಯಾಗಿದೆಯೋ ಅದೇ ಈ ಸಕಲ
ಪ್ರಪಂಚವು. ಎಲ್ಲಾ ಸಂಖ್ಯೆಯೂ ಸಹಸ್ರದಲ್ಲಿ ಅಡಕವಾದುದರಿಂದ ಸಹಸ್ರಕ್ಕಿಂತ ಮಿಗಿಲಾವ ಜಗತ್ತಿಲ್ಲ. ವಸ್ತು

ಸಮೂಹವೆಲ್ಲವೂ ಸಂಖ್ಯೇಯವಾದುದರಿಂದ ಅದು ಸಂಖ್ಯೆಯಲ್ಲಿ ಅಂತರ್ಭಾವಹೊಂದುತ್ತದೆ. ಸಕಲಸಂಖ್ಯೆಯೂ ಸಹಸ್ರದಲ್ಲಿ ಸೇರಿರುವುದನ್ನು ವಿವರಿಸುತ್ತಾರೆ. ಸಂಖ್ಯಾಪರ್ವಸ್ಥಾನವು ದಶಕವೆಂದು ವ್ಯವಹರಿಸಲ್ಪಡುತ್ತದೆ. ದಶಕದಿಂದ ಅಧಿಕವಾಗಿ ಯಾವ ಸಂಖ್ಯೆಯೂ ಇಲ್ಲ. ಒಂದರಿಂದ ಆರಂಭಿಸಿ ಎಣಿಸಿದರೆ ಹತ್ತನೇ ಸಂಖ್ಯೆಯದವರೆಗೇ ನೂತನ ಸಂಖ್ಯೆ ಇರುವುದಲ್ಲದೆ ಮುಂದಿನ ಸಂಖ್ಯೆಯೆಲ್ಲವೂ ಅವುಗಳ ಆವೃತ್ತಿಯಿಂದಲೇ ಎಳಿಸಲ್ಪಡುತ್ತವೆ. ಹನ್ನೊಂದು, ಹನ್ನೆರಡು ಎಂದು ಪುನಃ ಒಂದೆರಡರಿಂದಲೇ ಆರಂಭವಾಗುತ್ತದೆ. ಶತ, ಸಹಸ್ರ, ಅಯುತ (ಹತ್ತುಸಾವಿರ) ಮುಂತಾದ ಸಂಖ್ಯೆಗಳೆಲ್ಲವೂ ದಶಕದ ಆವೃತ್ತಿಯಿಂದಲೇ ಆಗುತ್ತವೆ. ದಶ, ದಶತ ಎಂದು ಅಂತರ್ಭಾವವನ್ನೇ ಉದಾಹರಿಸಿ ತೋರಿಸಿರುತ್ತಾರೆ. ತಕಾರಾಂತವಾದ ದಶತ್ ಶಬ್ದಕ್ಕೆ ದಶಸಮೂಹವೆಂದರ್ಥ. ಪಂಚದ್ದಶತೌ ವರ್ಗೇವಾ (ಪಾ-ಸೂ-೫-೧-೬೦) ಎಂಬ ಪಾಣಿನಿಸೂಕ್ತದಿಂದ ಈ ಶಬ್ದನಿಷ್ಪತ್ತಿಯಾಗಿದೆ. ದಶಕದ ದಶವರ್ಗವೇ ಶತ. ಶತಕದ ದಶವರ್ಗವೇ ಸಹಸ್ರ. ಹೀಗೆಯೇ ದಶಕಾಭಿವೃದ್ಧಿಯಿಂದ ಅಯುತ, ಲಕ್ಷ, ಪ್ರಯುತ, ಕೋಟಿ ಮುಂತಾದ ಅಧಿಕ ಸಂಖ್ಯೆಯಾಗುತ್ತವೆ. ದಶ ಸಂಖ್ಯೆಯಲ್ಲಿಯೇ ಸಕಲಾಂತರ್ಭಾವವಿದ್ದರೂ ಇದರ ವಿವರಣೆಗೆ ಶತ ಸಂಖ್ಯಾ, ಸಹಸ್ರ ಸಂಖ್ಯಾ ಇವೆರಡೂ ಉದಾಹರಿಸಲ್ಪಟ್ಟಿವೆ. ಈ ಮೂರು ಸಂಖ್ಯಾ ಪರ್ವಗಳೂ, ಮೂರು ಛಂದಸ್ಸುಗಳೂ ಸರ್ವಸಂಖ್ಯಾವ್ಯಾಪಕಗಳಾಗಿರುತ್ತವೆ. ಈ ಪರ್ವತ್ರಯವನ್ನು ಲೋಕದೃಷ್ಟಾಂತದಿಂದ ಪ್ರಶಂಸಿಸುತ್ತಾರೆ. ಲೋಕದಲ್ಲಿಯೂ ಪ್ರಾಣಿಗಳು ತಿನ್ನುವ ಆಹಾರವೂ ಮೂರು ವಿಧವಾಗಿರುತ್ತದೆ. ಅನ್ನಾದಿರೂಪ, ಜಲಕ್ಷೀರಾದಿರೂಪ, ಲಡ್ಡುಕಾದಿರೂಪವೆಂದು ಮೂರು ವಿಭಾಗ ಪ್ರಸಿದ್ಧವಾಗಿದೆ. ಈ ತ್ರಿವಿಧವಾದ ಆಹಾರವನ್ನೂ ದಶ, ಶತ, ಸಹಸ್ರವೆಂಬ ಮೂರು ವಿಧವಾದ ಸಂಖ್ಯಾಪರ್ವದಿಂದಲೇ ಹೊಂದುತ್ತಾರೆ. ಹೀಗೆ ಫಲದಾಯಕವಾದುದರಿಂದ ಈ ಪರ್ವತ್ರಯವನ್ನು ಧ್ಯಾನಿಸಬೇಕು.

———

*English Translation*

———

1. He who knows one sacrifice above another, one day above another one deity above the others, he is clever. Now this great uktha (the nishkevalya-sastra) is the sacrifice above another, the day above another, the deity above others.

2. This uktha is fivefold. With regard to its being performed as a Soma (chorus), it is Trivrit, Pankadasa, Saptadasa, Ekavimsa, and Pankavimsa. With regard to its being performed as a Saman (song), it is Gayatra, Rathantara, Brihat, Bhadra, and Ragana. With regard to metre, it is Gayatri, Ushnih, Brihati, Trishtubh, and Dvipada. And the explanation (given before in the Aranyaka) is that it is the head, the right wing, the left wing, the tail, and the body of the bird.

3. He performs the Prastava in five ways, he performs the Udgitha in five ways, he performs the Pratihara in five ways, he performs the Upadrava in five ways, he performs the Nidhana in five ways. All this together forms one thousand Stobhas, or musical syllables.

4. Thus also are the Rik verses, contained in the Nishkevalya, recited (by the Hotri) in five orders. What precedes the eighty trikas, that is one order, then follow the three sets of eighty trikas each, and what comes after is the fifth order.

5. This (the hymns of this Sastra) as a whole (off properly contained with the Stobha syllables) comes to one thousand (of Brihati verses). That (thousand) is the whole, and ten, ten is called the whole. For number is such (measured by ten). The tens or a hundred, ten hundreds are a thousand, and that is the whole. These are the three metres (the tens, prevading everything). And this food also (the three sets of hymns being represented as food) is threefold, eating, drinking, and chewing. He obtains that food by those (three numbers, ten, hundred, and thousand, or by the three sets of eighty trikas).

ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ತೃತೀಯಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಮೂರನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವು ॥

———

# ಅಥ ದ್ವಿತೀಯಾರಣ್ಯಕೇ ತೃತೀಯಾಧ್ಯಾಯೇ ಪಂಚಮಃ ಖಂಡಃ

## ಎರಡನೆಯ ಆರಣ್ಯದ ಮೂರನೆಯ ಅಧ್ಯಾಯದಲ್ಲಿ ಐದನೆಯ ಖಂಡವು

---

**ತದ್ವಾ ಇದಂ ಬೃಹತೀಸಹಸ್ರಂ ಸಂಪನ್ನಮ್ ||**

ಉಕ್ಥಸ್ಯ ಪಂಚವಿಧತ್ವಾದಿಧ್ಯಾನಮಭಿಧಾಯ ಬೃಹತೀಸಹಸ್ರರೂಪತ್ವಧ್ಯಾನಂ ವಿಧತ್ತೇ—ಯನ್ನಿಷ್ಕೇವಲ್ಯ ಶಸ್ತ್ರಮುಪಾಸನಾಯಾಂ ಪ್ರತೀಕತ್ವೇನ ಪ್ರಕೃತಂ ತದೇವೇದಮಕ್ಷರಗಣನಯಾ ಬೃಹತೀಛಂದಸ್ಕಾನಾಮೃಚಾಂ ಸಹಸ್ರಂ ಸಂಪನ್ನಮಿತಿ ಧ್ಯಾಯೇತ್ ||

ಪೂರ್ವಖಂಡದಲ್ಲಿ ಉಕ್ಥದ ಪಂಚವಿಧತ್ವಧ್ಯಾನವನ್ನು ಹೇಳಿ ಈಗ ಬೃಹತೀಸಹಸ್ರರೂಪತ್ವಧ್ಯಾನವನ್ನು ವಿವರಿಸುತ್ತಾರೆ. ನಿಷ್ಕೇವಲ್ಯಶಸ್ತ್ರದ ಉಪಾಸನೆಯಲ್ಲಿ ಹೇಳಿದ ಮಂತ್ರಗಳ ಅಕ್ಷರಗಣನೆಯಿಂದ ಉಂಟಾದ ಬೃಹತೀಛಂದಸ್ಸಿನ ಋಕ್ಕುಗಳ ಸಹಸ್ರವನ್ನು ಧ್ಯಾನಿಸಬೇಕು.

**ತದ್ಧೈತದೇಕೇ ನಾನಾಚ್ಛಂದಸಾಂ ಸಹಸ್ರಂ ಪ್ರತಿಜಾನತೇ ಕಿಮನ್ಯತ್-ಸದನ್ಯದ್ಬ್ರೂಯಾಮೇತಿ ||**

ತದೇತತ್ ಸ್ವಮತಂ ಪ್ರಶಂಸಿತುಂ ಪರಮತಮುಪನ್ಯಸ್ಯತಿ—ಏಕೇ ಶಾಖಿನೋ ನಾನಾ-ವಿಧಾನಂ ಛಂದಸಾಂ ಸಹಸ್ರರೂಪಂ ನಿಷ್ಕೇವಲ್ಯಶಸ್ತ್ರಮಿತಿ ಪ್ರತಿಜ್ಞಾಂ ಕುರ್ವಂತಿ | ತತ್ರ ಸಹಸ್ರ-ಸಂಪಾದನ ಏವ ನಿಯಮೋ ನ ಬೃಹತೀಛಂದಸೀತಿ ತೇಷಾಮಭಿಪ್ರಾಯಃ | ತೇ ಹಿ ಪರಸ್ಪರಂ ವಿಚಾರ್ಯ ನಿಶ್ಚಿನ್ವಂತಿ | ಪ್ರಕೃತಾದ್ ಬೃಹತೀಸಹಸ್ರಾದನ್ಯಚ್ಛಂದೋಂತರಯುಕ್ತಂ ಸಹಸ್ರಂ ಕಿಂ ತತ್ಸಮೀಚೀನಮಿತ್ಯೇವಮೇಕಸ್ಯ ಪ್ರಶ್ನಃ | ಅತ್ರೇತರಸ್ಯೋತ್ತರಾರ್ಥಂ ಸಚ್ಛಬ್ದ ಆವರ್ತನೀಯಃ | ಪ್ರಶ್ನೋತ್ತರಾಭ್ಯಾಂ ಮತಾಂತರಸ್ಯ ಸಮ್ಯಕ್ತ್ವನಿಶ್ಚಯಾದ್ ಬೃಹತೀಸಹಸ್ರಾದನ್ಯಚ್ಛಂದೋಂತರ-ಯುಕ್ತಂ ಸಹಸ್ರಂ ಬ್ರೂಯಾಮೇತಿ ಪರಸ್ಪರ ಮುಕ್ತವಂತಃ ||

ತನ್ನ ಮತವನ್ನು ಪ್ರಶಂಸಿಸಲು ಪರಮತವನ್ನು ವಿವರಿಸುತ್ತಾರೆ. ಕೆಲವು ಶಾಖೆಯವರು ನಾನಾವಿಧ ಛಂದಸ್ಸುಗಳ ಸಹಸ್ರವೇ ನಿಷ್ಕೇವಲ್ಯಶಸ್ತ್ರವೆಂದು ಪ್ರತಿಜ್ಞೆ ಮಾಡುತ್ತಾರೆ. ಸಹಸ್ರಸಂಪಾದನೆಯೇ ಮುಖ್ಯವಲ್ಲದೆ ಬೃಹತೀಛಂದಸ್ಸಿನಲ್ಲಿಯೇ ಕಲ್ಪಿಸಬೇಕೆಂಬ ನಿಯಮವಿಲ್ಲವೆಂದು ಅವರ ಅಭಿಪ್ರಾಯ. ಅವರೆಲ್ಲರೂ ತಮ್ಮಲ್ಲಿಯೇ ವಿಚಾರಿಸಿ ಒಂದು ನಿಶ್ಚಯಕ್ಕೆ ಬಂದರು. ಪ್ರಶ್ನೋತ್ತರಗಳಿಂದ ಮತಾಂತರವೇ ಸರಿಯೆಂಬ ನಿಶ್ಚಯದಿಂದ ಬೃಹತೀಸಹಸ್ರಕ್ಕಿಂತ ಬೇರೆಯಾದ ಛಂದಸ್ಸುಗಳಿಂದಲೇ ಸಹಸ್ರವನ್ನು ಹೇಳುತ್ತೇವೆಂದು ಪರಸ್ಪರ ಮಾತನಾಡಿಕೊಂಡರು.

**ತ್ರಿಷ್ಟುಪ್‌ಸಹಸ್ರಮೇಕೇ ಜಗತೀಸಹಸ್ರಮೇಕೇಽನುಷ್ಟುಪ್‌ಸಹಸ್ರಮೇಕೇ ||**

ಅನ್ಯತ್ರ ಪಕ್ಷೇಽಪ್ಯವಾಂತರಮತ ಭೇದಾನ್ ದರ್ಶಯತಿ—

ಈ ಪಕ್ಷದಲ್ಲಿಯೇ ಮತಾಂತರಭೇದವನ್ನು ತೋರಿಸುತ್ತಾರೆ. ತ್ರಿಷ್ಟುಪ್‌ಸಹಸ್ರವನ್ನು ಕೆಲವರೂ, ಜಗತೀಸಹಸ್ರವನ್ನು ಕೆಲವರೂ. ಅನುಷ್ಟುಪ್‌ಸಹಸ್ರವನ್ನು ಇನ್ನೂ ಕೆಲವರೂ ಹೇಳುತ್ತಾರೆ.

**ತದುಕ್ತಮೃಷಿಣಾ ||**

ತತ್ರಾನುಷ್ಟುಬ್ವಾದಿನಃ ಸ್ವಮತಪ್ರಶಂಸಾರ್ಥಂ ಮಂತ್ರಮುದಾಹರತಿ । ಸ ಚ ಮಂತ್ರಃ ಸಂಹಿತಾಯಮೇವಮಾಮ್ನಾತಃ ।—

"ಬೀಭತ್ಸೂನಾಂ ಸಯುಜಂ ಹಂಸಮಾಹುರಪಾಂ ದಿವ್ಯಾನಾಂ ಸಖ್ಯೇಚರಂತಮ್ ।
ಅನುಷ್ಟುಭಮನು ಚರ್ಚೂರ್ಯಮಾಣಮಿಂದ್ರಂ ನಿಚಿಕ್ಯುಃ ಕವಯೋಮನೀಷಾ" ಇತಿ ।
(ಋ. ಸಂ. ಮಂ-೧೦-ಸೂ-೧೨೪-ಋ-೯)

ಯೋಽಯಮಿಂದ್ರೋಽಸ್ತಿ ತಮಿಂದ್ರಮಭಿಜ್ಞಾಃ ಪುರುಷಾ ಹಂಸಮಾಹುಃ । ಹಂತಿ ವರ್ಷಾಯ ಮೇಘಂ ಭಿನತ್ತೀತಿ ಹಂಸಃ । ಕೀದೃಶಮಿಂದ್ರಂ ದಿವ್ಯಾನಾಂ ದ್ಯುಲೋಕವರ್ತಿಮೇಘಸ್ಥಿತಾನಾಮಪಾಂ ಸಖ್ಯೇ ಚರಂತಮ್ । ಆಪೋ ಹಿ ಸ್ವಪ್ರವರ್ತಕತ್ವೇನೇಂದ್ರಂ ಸಖಾಯಂ ಮನ್ಯಂತೇ । ಕೀದೃಶೀನಾಮಪಾಂ ಬೀಭತ್ಸೂನಾಂ । ಸಂಬಂಧಮಿಚ್ಛವೋ ಬೀಭತ್ಸವಃ । ಮೇಘಗತಾ ಹ್ಯಾಪಃ ಸ್ಥಾವರಜಂಗಮಪ್ರಾಣಿನಾಮುಪಕಾರಂ ಕರ್ತುಂ ತೈಃ ಪ್ರಾಣಿಭಿಃ ಸಹ ಭೂಮೌ ಸಂಬಂಧಮಿಚ್ಛಂತಿ । ಅತಸ್ತಾದೃಶೀನಾಮಪಾಂ ಭೂಮೌ ಪ್ರೇರಣಾಯೇಂದ್ರಸ್ತಾಭಿರದ್ಭಿಃ ಸಹ ಯುಜ್ಯತೇ । ತಾದೃಶಂ ಸಯುಜಮಾಹುರಿತ್ಯನ್ವಯಃ । ಅನುಷ್ಟುಪ್‌ಶಬ್ದೇನ ಮೇಘಗರ್ಜನರೂಪಾ ವಾಗುಪಲಕ್ಷ್ಯತೇ "ವಾಗ್ವಾ ಅನುಷ್ಟುಪ್" (ನೃ-ಪೂ-೧-೧) ಇತಿ ಶ್ರುತೇಃ । ತಾದೃಶೀಮನುಷ್ಟುಪ್‌ಶಬ್ದೋಪಲಕ್ಷಿತಾಂ ಗರ್ಜನರೂಪಾಂ ವಾಚಮನುಸೃತ್ಯ ಚರ್ಚೂರ್ಯಮಾಣಂ ಪುನಃಪುನಶ್ಚರಂತಮಿಂದ್ರಂ ಪರಮೈಶ್ವರ್ಯಯುಕ್ತಂ ಪ್ರಾಣದೇವಂ ಕವಯೋ ಮೇಧಾವಿನ ಉಪಾಸಕಾ ಮನೀಷಾ ಮನನೇನ ವಿವೇಕಜ್ಞಾನೇನ ನಿಚಿಕ್ಯುರ್ನಿತರಾಮುಪಚಿತವಂತಃ । ಧ್ಯಾತವಂತ ಇತ್ಯರ್ಥಃ ॥

ಅನುಷ್ಟುಪ್‌ಸಹಸ್ರವನ್ನು ಹೇಳುವವರು ತಮ್ಮ ಮತಪ್ರಶಂಸೆಗೋಸ್ಕರ ಒಂದು ಮಂತ್ರವನ್ನು ಉದಾಹರಿಸುತ್ತಾರೆ.

ಬೀಭತ್ಸೂನಾಂ ಸಂಯುಜ ಹಂಸಮಾಹುರಪಾಂ ದಿವ್ಯಾನಾಂ ಸಖ್ಯೇ ಚರಂತಂ ।
ಅನುಷ್ಟುಭಮನು ಚರ್ಚೂರ್ಯಮಾಣಮಿಂದ್ರಂ ನಿಚಿಕ್ಯುಃ ಕವಯೋ ಮನೀಷಾ ॥
(ಋ. ಸಂ. ೧೦-೧೨೪-೯)

ಎಂಬುದೇ ಈ ಮಂತ್ರ ತಿಳಿದವರು ಇಂದ್ರನನ್ನು ಹಂಸನೆಂದು ಕರೆಯುತ್ತಾರೆ. ಹಂತಿ ಇತಿ ಹಂಸಃ. ಮಳೆಸುರಿಸಲು ಮೋಡವನ್ನು ಸೀಳುವನೆಂದರ್ಥ. ದಿವ್ಯಾನಾಂ ಸಖ್ಯೇ ಚರಂತಂ=ದ್ಯುಲೋಕದಲ್ಲಿರುವ ಮೇಘಗಳಲ್ಲಿರುವ ನೀರಿನ ಮಿತ್ರದಲ್ಲಿರುವವನನ್ನು ನೀರು ತನ್ನನ್ನು ಪ್ರೇರೇಪಿಸುವ ಇಂದ್ರನನ್ನು ಮಿತ್ರನೆಂದು ತಿಳಿಯುತ್ತದೆ ಸಂಬಂಧವನ್ನು ಬಯಸುವವುಗಳು. ಬೀಭತ್ಸುಗಳು. ಮೇಘದಲ್ಲಿರುವ ನೀರು ಸ್ಥಾವರಜಂಗಮಪ್ರಾಣಿಗಳಿಗೆ ಉಪಕಾರಮಾಡಲು ಆ ಪ್ರಾಣಿಗಳೊಡನೆ ಭೂಮಿಯಲ್ಲಿ ಸಂಬಂಧವನ್ನು ಬಯಸುತ್ತದೆ. ಆದುದರಿಂದ ಇಂದ್ರನು ಅದನ್ನು ಪ್ರೇರೇಪಿಸಲು ಅದರೊಡನೆ ಬೆರೆಯುತ್ತಾನೆ.

ಅನುಷ್ಟುಪ್‌ಶಬ್ದದಿಂದ ಮೇಘಗರ್ಜನರೂಪ ವಾಕ್ ತೆಗೆದುಕೊಳ್ಳಬೇಕೆಂದು ವಾಗ್ವಾ ಅನುಷ್ಟುಪ್ (ನೃ-ಪೂ-೧-೧) ಎಂಬ ಶ್ರುತಿಯಿಂದ ವ್ಯಕ್ತವಾಗುತ್ತದೆ. ಹೀಗೆ ಅನುಷ್ಟುಪ್ ಉಪಲಕ್ಷಿತವಾದ ಗರ್ಜನರೂಪ ವಾಕ್ಕನ್ನನುಸರಿಸಿ ಪುನಃಪುನಃ ತಿರುಗುತ್ತಿರುವ ಪರಮೈಶ್ವರ್ಯದಿಂದ ಕೂಡಿರುವ ಇಂದ್ರನಾದ ಪ್ರಾಣದೇವನನ್ನು ಪ್ರಾಜ್ಞರು ಅಂದರೆ ಉಪಾಸಕರು ವಿವೇಕಜ್ಞಾನದಿಂದ ನಿಚಿಕ್ಯುಃ= ಚೆನ್ನಾಗಿ ಧ್ಯಾನಿಸಿದರು ಎಂದರ್ಥ.

ಅನುಷ್ಟುಭಮನು ಚಂಚೂರ್ಯಮಾಣಮಿಂದ್ರಂ ನಿಚಿಕ್ಯುಃ ಕವಯೋ ಮನೀಷೇತಿ ವಾಚಿ ವೈ ತದ್ಯೈಂದ್ರಂ ಪ್ರಾಣಂ ನ್ಯಚಾಯನ್ನಿತ್ಯೇತತ್ತದುಕ್ತಂ ಭವತಿ ||

**ಅಸ್ಯ ಮಂತ್ರಸ್ಯೋತ್ತರಾರ್ಧಂ ಪ್ರಕೃತಸ್ಯಾನುಷ್ಟುಪ್ ಪಕ್ಷಸ್ಯೋಪಯುಕ್ತಂ ವ್ಯಾಚಷ್ಟೇ— ಅನುಷ್ಟುಪ್ ಶಬ್ದೋಪಲಕ್ಷಿತಾಯಾಂ ವಾಚ್ಯೇವ ತದೋಪಾಸನಕಾಲೇ ಪ್ರಾಣಮಿಂದ್ರಸಂಬಂಧಿನಂ ನ್ಯಚಾಯನ್ನಿತರಾಂ ಧ್ಯಾತವಂತಃ । ಇತ್ಯೇತದರ್ಥಜಾತಂ ತತ್ತೇನೋತ್ತರಾರ್ಧೇನೋಕ್ತಂ ಭವತಿ ||**

ಪೂರ್ವೋಕ್ತಮಂತ್ರದ ಉತ್ತರಾರ್ಧವನ್ನು ಪ್ರಕೃತಅನುಷ್ಟುಪ್‌ಪಕ್ಷಕ್ಕೆ ಸಾಧಕವಾದುದರಿಂದ ವಿವರಿಸುತ್ತಾರೆ. ಅನುಷ್ಟುಪ್‌ಶಬ್ದೋಪಲಕ್ಷಿತವಾದ ವಾಕ್ಕಿನಲ್ಲಿಯೇ ಉಪಾಸನಾಕಾಲದಲ್ಲಿ ಪ್ರಾಣರೂಪಿ ಇಂದ್ರನನ್ನು ಧ್ಯಾನಿಸಿದರು. ಈ ವಿಷಯವನ್ನೇ ಉತ್ತರಾರ್ಧದಲ್ಲಿ ಹೇಳಿದೆ.

ಸ ಹೇಶ್ವರೋ ಯಶಸ್ವೀ ಕಲ್ಯಾಣಕೀರ್ತಿರ್ಭವತೋಃ ||

**ಅಸ್ಮಿನ್ಪಕ್ಷೇ ಪೂರ್ವವಾದಿನೋಽಭಿಪ್ರೇತಂ ಗುಣಂ ದರ್ಶಯತಿ—ಸೋಽನುಷ್ಟುಪ್‌ಸಹಸ್ರೇಣ ಶಂಸಿತಾ ಹೋತಾ ಯಶೋಯುಕ್ತಃ ಪುಣ್ಯಕೀರ್ತಿಯುಕ್ತಶ್ಚ ಭವಿತೋರೀಶ್ವರೋ ಭವಿತುಂ ಪ್ರಭವತಿ । ಯಶೋ ಧನಾದಿನಿಮಿತ್ತಂ ಲೌಕಿಕಮ್ । ಕಲ್ಯಾಣಕೀರ್ತಿರ್ಯಾಗಾದಿನಿಮಿತ್ತಾ ವೈದಿಕೀ । ತ್ರಿಷ್ಟುಪ್ ಜಗತೀಪಕ್ಷಯೋರಪ್ಯಯಂ ಗುಣೋ ದ್ರಷ್ಟವ್ಯಃ ||**

ಈ ಪಕ್ಷದಲ್ಲಿ ಅಂಗೀಕರಿಸಿದ ಗುಣವನ್ನು ವಿವರಿಸುತ್ತಾರೆ. ಈ ಅನುಷ್ಟುಪ್‌ಸಹಸ್ರವನ್ನು ಪಠಿಸುವ ಹೋತೃವು ಯಶೋಯುಕ್ತನಾಗಿಯೂ, ಪುಣ್ಯಕೀರ್ತಿಯಿಂದ ಕೂಡಿದವನೂ ಆಗಿ ಈಶ್ವರನಾಗಲು ಸಮರ್ಥನಾಗುತ್ತಾನೆ. ಧನಾದಿನಿಮಿತ್ತವಾಗಿ ಹೊಂದಿದ ಯಶಸ್ಸು ಲೌಕಿಕವಾಗಿಯೂ, ಯಾಗಾದಿನಿಮಿತ್ತವಾಗಿಬಂದ ಯಶಸ್ಸು ವೈದಿಕವಾಗಿ ಇರುವುದರಿಂದ ಪರಸ್ಪರಭೇದ ತಿಳಿಯಬೇಕು. ತ್ರಿಷ್ಟುಪ್, ಜಗತೀಸಹಸ್ರಪಕ್ಷದಲ್ಲಿಯೂ ಈ ಗುಣಾತಿಶಯವನ್ನೇ ತಿಳಿಯಬೇಕು.

ಈಶ್ವರೋ ಹ ತು ಪುರಾಽಽಯುಷಃ ಪ್ರೈತೋರಿತಿ ಹ ಸ್ಮಾಽಽಹಾಕೃತ್ಸ್ನೋ ಹ್ಯೇಷ ಆತ್ಮಾ ಯದ್ವಾಗಭಿ ಹಿ ಪ್ರಾಣೋ ನ ಮನಸೋಽಸ್ಯಮಾನೋ ವಾಚಾ ನಾನುಭವತಿ ||

ಇದಾನೀಂ ಸಿದ್ಧಾಂತೀ ತಸ್ಮಿನ್ನನುಷ್ಟುಪ್ ಪಕ್ಷೇ ದೋಷಂ ದರ್ಶಯತಿ—ತು ಶಬ್ದೇನಾನುಷ್ಟು-ಪ್‌ಪಕ್ಷೋ ನಿರಾಕ್ರಿಯತೇ । ಅನುಷ್ಟುಪ್‌ಸಹಸ್ರೇಣ ಶಂಸನ್‌ಹೋತಾ ಕ್ಲಪ್ತಾದಾಯುಷಃ ಪುರಾ ಪ್ರೈತೋರೀಶ್ವರೋ ಭವತಿ । ಮರ್ತುಂ ಪ್ರಭುರ್ಭವತಿ । ಅಪಮೃತ್ಯುನಾ ಮ್ರಿಯತ ಇತ್ಯರ್ಥಃ । ಇತ್ಯೇವಮಭಿಜ್ಞಃ ಪುರುಷ ಆಹ ಸ್ಮ । ಯುಕ್ತಂ ಚೈದತಭಿಜ್ಞಸ್ಯ ವಚನಮ್ । ಅನುಷ್ಟುಬ್ರೂಪ-ಸ್ಯಾಽಽತ್ಮನೋಽಕೃತ್ಸ್ನತ್ವಾತ್ । ಕಥಮಕೃತ್ಸ್ನತ್ವಮಿತಿ ಚೇತ್ತದುಚ್ಯತೇ—ಯದ್ಯದಾ ವಾಗಭಿ ಹಿ ವಾಗ್ರೂಪತ್ವೇನ ಸ್ತುತಾಮನುಷ್ಟುಭಮೇವಾಭಿಲಕ್ಷ್ಯ ಶಸ್ತ್ರೇ ಪ್ರವರ್ತತೇ ನ ತು ಪ್ರಾಣತ್ವೇನ ಸ್ತುತೇ ಬೃಹತೀಸಹಸ್ರೇ ಪ್ರವರ್ತತೇ । "ವಾಗ್ವಾ ಅನುಷ್ಟುಪ್ ಪ್ರಾಣೋ ಬೃಹತೀ" ಇತ್ಯೇವಂ ಹಿ ತತ್ತ-ದ್ರೂಪೇಣ ಸ್ತುತಿಃ । ತದಾನೀಂ ಪ್ರಾಣರೂಪಾಂ ಬೃಹತೀಮುಪೇಕ್ಷ್ಯ ವಾಗ್ರೂಪಾಯಾಮನುಷ್ಟುಭ್ಯೇವ ಮನಸೇಽಸ್ಯಮಾನಃ ಸ್ವಚಿತ್ತೇನಾಸ್ಯಮಾನಃ ಪ್ರೇರ್ಯಮಾಣೋ ಹೋತಾ ಸ್ವಕೀಯಯಾ ವಾಚಾ ತಚ್ಛಸ್ತ್ರಂ ನಾನುಭವತಿ । ನ ಹಿ ಪ್ರಾಣಶಕ್ತಿಸಹಾಯಮಂತರೇಣ ಕೇವಲಂ ಮಾನಸಮಾತ್ರೇಣ ಹೋತಾ ವಾಚಾ ಶಸ್ತ್ರಂ ನಕ್ತುಂ ಕ್ಷಮತೇ, ಸರ್ವಸ್ಯೇಂದ್ರಿಯವ್ಯಾಪಾರಸ್ಯ ಪ್ರಾಣಾಧೀನತ್ವಾತ್ ॥

ಸಿದ್ಧಾಂತಿಯು ಅನುಷ್ಟುಪ್‌ಸಹಸ್ರ ಪಕ್ಷದಲ್ಲಿ ದೋಷವನ್ನು ತೋರಿಸುತ್ತಾನೆ. ತುಶಬ್ದದಿಂದ ಅನುಷ್ಟುಪ್ ಪಕ್ಷದ ನಿರಾಕರಣೆ ತೋರುತ್ತದೆ. ಅನುಷ್ಟುಪ್‌ಸಹಸ್ರವನ್ನು ಪಠಿಸುವ ಹೋತೃವು ತನ್ನ ಕ್ಲಪ್ತವಾದ ಆಯುಸ್ಸಿಗಿಂತ ಮೊದಲೇ ಅಪಮೃತ್ಯುವಿನಿಂದ ಮರಣ ಹೊಂದುತ್ತಾನೆ. ಇದನ್ನು ತಿಳಿದವರು ಹೇಳುತ್ತಾರೆ. ಈ ಅನುಷ್ಟುಪ್‌ಸ್ವರೂಪವು ಸಂಪೂರ್ಣವಾದುದು. ವಾಗ್ವಾ ಅನುಷ್ಟುಪ್‌ಪ್ರಾಣೋಬೃಹತೀ ಎಂದು ತತ್ತದ್ರೂಪದಿಂದ ಸ್ತುತಿವಿಹಿತವಾದುದರಿಂದ ವಾಗ್ರೂಪದಿಂದಸ್ತುತವಾದ ಅನುಷ್ಟುಭನ್ನಾಶ್ರಯಿಸಿ ಪ್ರಾಣರೂಪ ಬೃಹತಿಯನ್ನು ಉಪೇಕ್ಷಿಸಿ ಪಠಿಸುವ ಹೋತೃವು ತನ್ನ ವಾಗ್ವ್ಯಾಪಾರದಿಂದಶಸ್ತ್ರವನ್ನು ತಿಳಿಯಲಾರನು. (ಶಸ್ತ್ರಾನುಭವಹೊಂದಲಾರನು) ಪ್ರಾಣಶಕ್ತಿಸಹಾಯವಿಲ್ಲದೆ ಹೋತೃವು ವಾಕ್ಕಿನಿಂದ ಶಸ್ತ್ರವನ್ನು ಸ್ತುತಿಸಲು ಸಮರ್ಥನಾಗುವುದಿಲ್ಲ. ಸಕಲೇಂದ್ರಿಯಗಳ ವ್ಯಾಪಾರವೂ ಪ್ರಾಣಾಧೀನವೆಂದು ಹಿಂದೆಯೇ ವಿವರಿಸಿದೆ.

ಬೃಹತೀಮಭಿ ಸಂಪಾದಯೇದೇಷ ವೈ ಕೃತ್ಸ್ನ ಆತ್ಮಾ ಯದ್‌ಬೃಹತೀ॥

ಏವಮಕೃತ್ಸ್ನತ್ವದೋಷೇಣೇತರಪಕ್ಷಂ ನಿಂದಿತ್ವಾ ಸ್ವಪಕ್ಷಂ ಸಮರ್ಥಯತೇ—ಅಕ್ಷರಗಣ-ನಯಾ ಬೃಹತೀಂ ಸಂಪಾದ್ಯ ಯದಾ ಧ್ಯಾಯೇತ್ತದಾನೀಂ ಬೃಹತೀತಿ ಯದಸ್ತಿ ಪ್ರಾಣರೂಪ ಏಷ ಏವ ಪ್ರಾಣಃ ಕೃತ್ಸ್ನಃ ಸಂಪೂರ್ಣ ಆತ್ಮಾ । "ಪ್ರಾಣೋ ಬೃಹತೀ" ಇತ್ಯುಕ್ತತ್ವಾದ್‌ಬೃಹತ್ಯಾಃ ಪ್ರಾಣರೂಪತ್ವಮ್ । ಪ್ರಾಣಸ್ಯಾ (ಶ್ಚಾ) ಭಿವದನಾದಿ ಸರ್ವೇಂದ್ರಿಯವ್ಯಾಪಾರನಿಷ್ಪಾದಕತ್ವಾತ್ ಸಂಪೂರ್ಣ ಆತ್ಮಾ ॥

ನ್ಯೂನತೆ ಇರುವುದರಿಂದ ಇತರಪಕ್ಷವನ್ನು ನಿಂದಿಸಿ ಸ್ವಪಕ್ಷವನ್ನು ಸಮರ್ಥಿಸುತ್ತಾರೆ. ಅಕ್ಷರಗಣನೆಯಿಂದ ಬೃಹತೀ ಛಂದಸ್ಸನ್ನು ಸಂಪಾದಿಸಿ ಧ್ಯಾನಿಸಬೇಕು. ಪ್ರಾಣೋಬೃಹತೀ ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ಬೃಹತೀಛಂದಸ್ಸೇ ಪ್ರಾಣರೂಪವಾಗಿದೆ. ಪ್ರಾಣದೇವನೇ ವಾಗಾದೀಂದ್ರಿಯವ್ಯಾಪಾರವನ್ನು ಹುಟ್ಟಿಸಿಕೊಡುವುದರಿಂದ ಅವನೇ ಸಂಪೂರ್ಣ ಆತ್ಮನಾಗಿರುತ್ತಾನೆ.

ಸೋಽಯಮಾತ್ಮಾ ಸರ್ವತಃ ಶರೀರೈಃ ಪರಿವೃತಸ್ತದ್ಯಥಾಽಯಮಾತ್ಮಾ ಸರ್ವತಃ ಶರೀರೈಃ ಪರಿವೃತಃ ಏವಮೇವ ಬೃಹತೀ ಸರ್ವತಶ್ಛಂದೋಭಿಃ ಪರಿವೃತಾ ॥

ಲೌಕಿಕಜೀವಾತ್ಮದೃಷ್ಟಾಂತೇನ ಬೃಹತೀಂ ಪ್ರಶಂಸತಿ— ದೇಹಮಧ್ಯವರ್ತೀ ಲೌಕಿಕಪ್ರಸಿದ್ಧೋ ಯೋ ಜೀವಾತ್ಮಾ ಸೋಽಯಂ (ಸರ್ವತಃ ಶರೀರೈಃ) ಪರಿವೃತಃ ಸರ್ವಾಸು ದಿಕ್ಷು ಶರೀರಾವಯವೈರ್ವೇಷ್ಟಿತೋ ವರ್ತತೇ । ತತ್ತಥಾ ಸತಿ ಜೀವಾತ್ಮವದೇವ ಬೃಹತ್ಯಪಿ ಸಹಸ್ರತ್ವೇನ ಸಂಪಾದಿತಾ ಸತೀ ಸರ್ವತಃ ಶಸ್ತ್ರಮಧ್ಯೇ ಸರ್ವೇಷು ಸ್ಥಾನೇಷು ಚ್ಛಂದೋಭಿರಧ್ಯಯನಕಾಲೀನೈಸ್ತತ್ತದೃಗ್ಗತೈರ್ಗಾಯತ್ರ್ಯಾದಿಭಿಃ ಸರ್ವತೋ ವೇಷ್ಟಿತಾ ॥

ಲೌಕಿಕಜೀವಾತ್ಮದೃಷ್ಟಾಂತದಿಂದ ಬೃಹತೀಛಂದಸ್ಸನ್ನು ಸ್ತುತಿಸುತ್ತಾರೆ- ದೇಹಮಧ್ಯದಲ್ಲಿರುವ ಪ್ರಸಿದ್ಧನಾದ ಜೀವಾತ್ಮನು ಸುತ್ತಲೂ ಶರೀರಾವಯುಗಳಿಂದ ಸುತ್ತಿಕೊಂಡಿರುವಂತೆ ಸಹಸ್ರತ್ವರೂಪದಿಂದ ಸಂಪಾದಿತವಾದ ಬೃಹತಿಯೂ ಕೂಡಾ ಶಸ್ತ್ರಮಧ್ಯದಲ್ಲಿ ಸಕಲಸ್ಥಾನದಲ್ಲಿಯೂ ಆಯಾಯ ಋಕ್ಕುಗಳಲ್ಲಿರುವ ಗಾಯತ್ರ್ಯಾದಿಛಂದಸ್ಸುಗಳಿಂದ ಆವೃತವಾಗಿರುತ್ತದೆ.

ಮಧ್ಯಂ ಹ್ಯೇಷಾಮಂಗಾನಾಮಾತ್ಮಾ ಮಧ್ಯಂ ಛಂದಸಾಂ ಬೃಹತೀ ॥

ಜೀವಾತ್ಮದೃಷ್ಟಾಂತೇನ ಪ್ರಶಸ್ಯ ಮಧ್ಯಶರೀರದೃಷ್ಟಾಂತೇನಾಪಿ ಪ್ರಶಂಸತಿ— ಜೀವಾತ್ಮನೋಽವಸ್ಥಾನಪ್ರದೇಶತ್ವಾದ್ಧೃದಯರೂಪೋ ಮಧ್ಯದೇಹಭಾಗೋ ವಾತ್ಮಶಬ್ದೇನ ವಿವಕ್ಷಿತಃ । ಸ ಚಾಂಗಾನಾಮಿತರೇಷಾಂ ಹಸ್ತಪಾದಾದೀನಾಂ ಮಧ್ಯಂ ಭವತಿ । ತಥಾ ಛಂದಸಾಂ ಮಧ್ಯೇ ಬೃಹತೀ ಮಧ್ಯಂ ನ್ಯೂನಾನಾಂ ಗಾಯತ್ರ್ಯಾದೀನಾಮಧಿಕಾನಾಂ ತ್ರಿಷ್ಟುಬಾದೀನಾಂ ಚ ಬೃಹತ್ಯಾ ಅಭಿತೋ ವಿದ್ಯಮಾನತ್ವಾತ್ ॥

ಮಧ್ಯಶರೀರದೃಷ್ಟಾಂತದಿಂದ ಪ್ರಶಂಸೆಮಾಡುತ್ತಾರೆ. ಜೀವಾತ್ಮನ ಆಶ್ರಯಸ್ಥಾನವಾದ ಹೃದಯರೂಪ ಮಧ್ಯದೇಹ ಭಾಗವು ಆತ್ಮಶಬ್ದದಿಂದ ವ್ಯವಹರಿಸಲ್ಪಡುತ್ತದೆ. ಅದು ಹಸ್ತಪಾದಾದಿ ಸಕಲಾವಯವಗಳ ಮಧ್ಯದಲ್ಲಿರುತ್ತದೆ. ಅದರಂತೆ ಛಂದಸ್ಸುಗಳ ಮಧ್ಯದಲ್ಲಿರುವ ಬೃಹತಿಯೂ ಮಧ್ಯವಾಗುತ್ತದೆ. ಅಂದರೆ ನ್ಯೂನವಾದ ಗಾಯತ್ರ್ಯಾದಿಗಳ ಅಧಿಕವಾದ ತ್ರಿಷ್ಟುಬಾದಿಗಳಿಂದ ಇದು ವ್ಯಾಪಿಸಲ್ಪಟ್ಟಿದೆ. ಇದರ ಸುತ್ತಲೂ ಅವು ವ್ಯಾಪಿಸಿರುತ್ತವೆ.

ಸ ಹೇಶ್ವರೋ ಯಶಸ್ವೀ ಕಲ್ಯಾಣಕೀರ್ತಿರ್ಭವಿತೋರೀಶ್ವರೋ ಹ ತು ಪುರಾಽಽಯುಷಃ ಪ್ರೈತೋರಿತಿ ಹ ಸ್ಮಾಹ ಕೃತ್ಸ್ನೋ ಹ್ಯೇಷ ಆತ್ಮಾ ಯದ್‌ಬೃಹತೀ ತಸ್ಮಾದ್ ಬೃಹತೀಮೇವಾಭಿ ಸಂಪಾದಯೇತ್ ॥

ಅನುಷ್ಟುಪ್ಪಕ್ಷೋಕ್ತದೋಷಂ ಸ್ವಮತೇ ತತ್ಪರಿಹಾರಂ ಚಾಸೂದ್ಯ ಸ್ವಮತಮುಪಸಂ-ಹರತಿ—ಯಥಾ ಬೃಹತೀಸಹಸ್ರಂ ಸಂಪಾದ್ಯ ಧ್ಯಾನಮುಕ್ತಂ ತಥೈವಾನುಷ್ಟುಪ್ ಸಂಪಾದನೇನಾಪಿ **ಧ್ಯಾನಮುಚ್ಯತೇ ||**

ಅನುಷ್ಟುಪಕ್ಷದಲ್ಲಿ ಹೇಳಿದ ದೋಷಪರಿಹಾರವನ್ನು ತನ್ನ ಪಕ್ಷದಲ್ಲಿ ತೋರಿಸಿ ಉಪಸಂಹಾರಮಾಡುತ್ತಾರೆ. ಬೃಹತೀ ಸಹಸ್ರಸಂಪಾದನದಿಂದ ಧ್ಯಾನಿಸುವವನು ಯಶಸ್ವಿಯೂ, ಪುಣ್ಯಕೀರ್ತಿಯುಕ್ತನೂ ಆಗುತ್ತಾನೆ. ಇದು ಪೂರ್ಣತೆಯನ್ನು ಹೊಂದಿರುವುದರಿಂದ ಇದನ್ನೇ ಸ್ತುತಿಸಬೇಕು.

---

## *English Translation*

---

1. This (nishkevalya–sastra) becomes perfect as a thousand of Brihati verses.

2. Some teachers (belonging to a different Sakha) recognise a thousand of different metres (not of Brihatis only). They say : 'Is another thousand (a thousand of other verses) good ? Let us say it is good.'

3. Some say, a thousand of Trishtubh verses, others a thousand of Gagati verses, others a thousand of Anushtubh verses.

4. This has been said by a Rishi (Rev. X. 124, 9) :—

5. 'Poets through their understanding discovered Indra dancing an Anushtubh.' This is meant to say : They discovered (and meditated) in speech (called Anushtubh)—at that time (when they worshipped the uktha)—the Prana (breath) connected with Indra.

6. He (who takes the recited verses as Anushtubhs) is able to become celebrated and of good report.

7. No ! he says ; rather is such a man liable to die before his time. For that self (consisting of Anushtubhs) is incomplete. For if a man confines

ತ್ವಚಾ ಸ್ಪೃಷ್ಟಂ ಯದಿ ಮನಸಾ ಧ್ಯಾತಂ ಯದ್ಯಪಾನೇನಾಭ್ಯಪಾ-
ನಿತಂ ಯದಿ ಶಿಶ್ನೇನ ವಿಸೃಷ್ಟಮಥ ಕೋಽಹಮಿತಿ ॥

" ಕಥಂ ನು " ಇದಮಿತಿ ವಾಕ್ಯೇನ ಜೀವಪ್ರವೇಶಸ್ಯ ದೇಹೇಂದ್ರಿಯವ್ಯವಹಾರಪಾಲನ-ರೂಪಂ ಪ್ರಯೋಜನಂ ವಿಚಾರಿತವಂ । ಇದಾನೀಮಾತ್ಮಬೋಧರೂಪಸ್ಯ ಪ್ರಯೋಜನಾಂತರಸ್ಯ ವಿಚಾರಂ ದರ್ಶಯತಿ— ಮಾಂ ಸ್ವಾಮಿನಮುಪೇಕ್ಷ್ಯ ವಾಗಾದಯೋಽಭಿವದನಾದಿವ್ಯಾಪಾರೇಷು ಸ್ವತಂತ್ರಾಃ ಕರ್ತಾರಃ ಸ್ಯುಸ್ತದಾನೀಮಹಂ ಕೋ ನಾಮ ಸ್ಯಾಂ ನ ಕೋಽಪಿ ಭವೇಯಮ್ । ಅಸ್ತಿ ಕಶ್ಚಿದೇಷ ದೇಹಾದಿವ್ಯತಿರಿಕ್ತಶ್ಚಿದಾತ್ಮಾ । ಸ ಚ ಪರಬ್ರಹ್ಮಸ್ವಭಾವ ಇತ್ಯೇವಂ ಕಶ್ಚಿದಪಿ ನ ಜಾನೀ-ಯಾತ್ । ಯದಾ ತ್ವಹಮೇವ ಸರ್ವವ್ಯಾಪಾರಾಣಾಂ ಕರ್ತಾ ವಾಗಾದಯಸ್ತು ಮಯಾ ಪ್ರೇರಿತಾಃ ಸಂತೋಽಭಿವಾದನಾದಿಕ್ರಿಯಾಃ ಕುರ್ಯುಸ್ತದಾನೀಂ ವಾಗಾದಿಕರಣಕೋ ವ್ಯಾಪಾರಃ ಸಕರ್ತೃಕೋ ಭವಿತುಮರ್ಹತಿ ಕ್ರಿಯಾತ್ವಾಲ್ಲೋಕಪ್ರಸಿದ್ಧಗಮನಾದಿಕ್ರಿಯಾವದಿತಿ ಮಮ ಸದ್ಭಾವೋಽನು-ಮಾತುಂ ಶಕ್ಯತೇ । ಸೋಽಯಮನುಮಾನೇನಾಽಽತ್ಮಸದ್ಭಾವ ಉಪಸ್ತಬ್ರಾಹ್ಮಣೇ ಸಮಾಮ್ನಾತಃ " ಯಃ ಪ್ರಾಣೇನ ಪ್ರಾಣಿತಿ ಸ ತ ಆತ್ಮಾ ಸರ್ವಾಂತರಃ " (ಬೃಹ-೩-೪-೧) ಇತಿ । ತಸ್ಮಾದಾತ್ಮ-ಬೋಧೋಽಪಿ ಜೀವರೂಪಪ್ರವೇಶಸ್ಯ ಪ್ರಯೋಜನಮ್ । ತದೇತದಭಿಪ್ರೇತ್ಯಾನ್ಯತ್ರ ಶ್ರೂಯತೇ- " ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ " (ಋ-ಸಂ-ಮಂ೬ ಸೂ-೪೭-ಸೂ-೧೮) ಇತಿ । (ಏವಂ) ಪ್ರವೇಶದ್ವಾರಂ ದೇಹೇಂದ್ರಿಯಾದಿಪಾಲನಸ್ವಾತ್ಮಾವಬೋ-ಧರೂಪೇ ಪ್ರವೇಶಪ್ರಯೋಜನೇ ಚ ವಿಚಾರಿತವಾನ್ ॥

ಆತ್ಮಬೋಧರೂಪ ಪ್ರಯೋಜನಾಂತರವನ್ನು ವಿವರಿಸುತ್ತಾರೆ. ಸ್ವಾಮಿಯಾದ ನನ್ನನ್ನು ಬಿಟ್ಟು ವಾಗಾದಿಗಳು ಶಬ್ದೋಚ್ಚಾರಣಾದಿ ತಮ್ಮತಮ್ಮ ವ್ಯಾಪಾರಗಳಲ್ಲಿ ಸ್ವತಂತ್ರಗಳಾದರೆ ಆಗ ನಾನು ಗಣನೆಗೇ ಇಲ್ಲದಂತೆ ಆಗುತ್ತೇನೆ. ದೇಹಾದಿ ಸಂಘಾತಕ್ಕಿಂತ ಬೇರೆಯಾಗಿ ಒಬ್ಬ ಆತ್ಮನಿರುತ್ತಾನೆ. ಅವನು ಪರಬ್ರಹ್ಮಸ್ವಭಾವವನೆಂದು ಯಾರೂ ತಿಳಿಯ ಲಾರರು. ನಾನೇ ಸಕಲವ್ಯಾಪಾರಗಳಿಗೂ ಕರ್ತೃವಾಗಿ ವಾಗಾದಿಗಳಿಗೆ ಪ್ರೇರಕನಾದರೆ ಆಗ ನಾನು ದೇಹದಲ್ಲಿರುವೆನೆಂದು ಅನುಮಾನಮಾಡಲು ಸಾಧ್ಯವಾಗುತ್ತದೆ. ಒಬ್ಬ ಕರ್ತೃವಿಲ್ಲದೇ ವಾಗಾದಿಕರಣಗಳ ವ್ಯಾಪಾರವು ಸಂಭವಿಸಲಾರದು. ಲೋಕ ದಲ್ಲಿಯೂ ಕಟ್ಟಿಗೆ ಒಡೆಯಲು ಕೊಡಲಿ ಕರಣವಾದರೆ ಅದರಲ್ಲಿ ವ್ಯಾಪಾರವಾಗಬೇಕಾದರೆ ಕಟ್ಟಿಗೆಒಡೆಯುವವನೊಬ್ಬ ಕರ್ತೃವಿರಬೇಕು. ಅದರಂತೆ ಅನುಮಾನದಿಂದ ಆತ್ಮಸದ್ಭಾವ ವ್ಯಕ್ತವಾಗುತ್ತದೆ. ಈ ವಿಷಯ ಯಃ ಪ್ರಾಣೇನ ಪ್ರಾಣಿತಿ ಸ ತ ಆತ್ಮಾ ಸರ್ವಾಂತರಃ (ಬೃಹ-೩-೪-೧) ಎಂದು ಶ್ರುತ್ಯಂತರದಲ್ಲಿ ವಿವೃತವಾಗಿದೆ. ಜೀವರೂಪಪ್ರವೇಶಕ್ಕೆ ಆತ್ಮಾವಬೋಧವೇ ಪ್ರಯೋಜನವೆಂದು ರೂಪಂರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ (ಋ. ಸಂ ೬-೪೭-೧೮) ಎಂದು ಶ್ರುತಿಯಲ್ಲಿ ಪ್ರತಿಪಾದಿತವಾಗಿದೆ. ಹೀಗೆ ಈಶ್ವರನು ತಾನು ಪ್ರವೇಶಿಸುವ ದ್ವಾರವನ್ನೂ ಪ್ರವೇಶಯೋಜನೆಗಳನ್ನೂ ವಿಚಾರಿಸಿದನು.

ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ ॥

ಅಥ ಪ್ರವೇಶಂ ದರ್ಶಯತಿ—ಪೂರ್ವಂ "ತಂ ಪ್ರಪದಾಭ್ಯಾಂ ಪ್ರಾಪದ್ಯತ" (ಐ-ಆ-೨-ಅ-೧-ಖಂ-೪) ಇತ್ಯತ್ರ ಪ್ರಾಣರೂಪಕ್ರಿಯಾಶಕ್ತ್ಯುಪಾಧಿಕಸ್ಯ ಪಾದಾಗ್ರೇ ಪ್ರವೇಶೋಽಭಿಹಿತಃ। ಇದಾನೀಂ ಜ್ಞಾನಶಕ್ತ್ಯುಪಾಧಿಕಸ್ಯ ಮೂರ್ಧಮಧ್ಯಸ್ಥಿತಚ್ಛಿದ್ರೇ ಪ್ರವೇಶೋಽಭಿಧೀಯತೇ। ಯಥೋಕ್ತವಿಚಾರೋಪೇತಃ ಸ ಪರಮೇಶ್ವರ ಏತಮೇವ ಮೂರ್ಧಮಧ್ಯಭಾಗಮೇವ ಕಪಾಲಸಂಧಿರೂಪಂ ಸೀಮಾನಂ ಸ್ಥಾನವಿಶೇಷಂ ವಿದಾರ್ಯ ಛಿದ್ರಂ ಕೃತ್ವಾ ತಚ್ಛಿದ್ರರೂಪಯಾ ದ್ವಾರಾ ಜ್ಞಾನಶಕ್ತಿಸಹಿತಃ ಸನ್ ದೇಹಮಧ್ಯೇ ಪ್ರಾವಿಶತ್। ಯಸ್ಮಾತ್ ಜ್ಞಾನೋಪಾಧಿಕಸ್ಯ ಮೂರ್ಧಮಧ್ಯೇ ಪ್ರವೇಶಸ್ತಸ್ಮಾನ್ಮೂರ್ಧನಿ ಜ್ಞಾನೇಂದ್ರಿಯಬಾಹುಲ್ಯಮುಪಲಭ್ಯತೇ। ಕ್ರಿಯಾಶಕ್ತ್ಯುಪಾಧಿಕಸ್ಯ ಪಾದಾಗ್ರೇ ಪ್ರವೇಶಾತ್ಕಂಠಾಧೋಭಾಗೇ ಕರ್ಮೇಂದ್ರಿಯ ಬಾಹುಲ್ಯಮುಪಲಭ್ಯತೇ ॥

ಆತ್ಮನ ಪ್ರವೇಶವನ್ನು ವಿವರಿಸುತ್ತಾರೆ. ಪೂರ್ವದಲ್ಲಿ ತಂಪ್ರಪದಾಭ್ಯಾಂ ಪ್ರಾಪದ್ಯತ (ಐ. ಆ.೨-೧-೪) ಎಂದು ಪ್ರಾಣರೂಪಕ್ರಿಯಾಶಕ್ತಿಯೇ ಉಪಾಧಿಯಾಗಿರುವ ಆತ್ಮನಿಗೆ ಪಾದಾಗ್ರದಲ್ಲಿ ಪ್ರವೇಶವು ಹೇಳಿದೆ. ಈಗ ಜ್ಞಾನಶಕ್ತಿಯೇ ಉಪಾಧಿಯಾಗಿರುವ ಆತ್ಮನಿಗೆ ನೆತ್ತಿಯಲ್ಲಿರುವ ಛಿದ್ರದಲ್ಲಿ ಪ್ರವೇಶ ಹೇಳುತ್ತಾರೆ. ಹೀಗೆ ವಿಚಾರಮಾಡಿದ ಈಶ್ವರನು ನೆತ್ತಿಯಮಧ್ಯಭಾಗದ ಕಪಾಲಸಂಧಿಭಾಗವನ್ನು ಸೀಳಿ ಅಂದರೆ ರಂಧ್ರಮಾಡಿಕೊಂಡು ಅದರಿಂದ ಜ್ಞಾನಶಕ್ತಿಸಹಿತನಾಗಿ ದೇಹಮಧ್ಯವನ್ನು ಪ್ರವೇಶಿಸಿದನು. ಜ್ಞಾನೋಪಾಧಿಕನಾಗಿ ನೆತ್ತಿಯಮಧ್ಯದಿಂದ ಪ್ರವೇಶಿಸಿದುದರಿಂದ ತಲೆಯಲ್ಲಿಯೇ ಜ್ಞಾನೇಂದ್ರಿಯಾಧಿಕ್ಯ ತೋರುತ್ತದೆ. ಕ್ರಿಯಾಶಕ್ತ್ಯುಪಾಧಿಕನಾಗಿ ಪಾದಾಗ್ರದಲ್ಲಿ ಪ್ರವೇಶಿಸಿದುದರಿಂದ ಕಂಠದಕೆಳಗೆ ಕರ್ಮೇಂದ್ರಿಯಬಾಹುಲ್ಯವು ತೋರುತ್ತದೆ.

## ಸೈಷಾ ವಿದೃತಿರ್ನಾಮ ದ್ವಾಸ್ತದೇತನ್ನಾಂದನಮ್ ॥

ಮೂರ್ಧಗತಂ ಪ್ರವೇಶದ್ವಾರಂ ಪ್ರಶಂಸತಿ—ಅಕ್ಷಿಶ್ರೋತ್ರಾದಿಗೋಲಕಾನಾಂ ಭೃತ್ಯಾದಿಸ್ಥಾನೀಯೈಶ್ಚಕ್ಷುರಾದೀಂದ್ರಿಯೈರಧಿಷ್ಠಿತತ್ವಾತ್ ಸ್ವಾಮಿನಃ ಸ್ವಸ್ಯ ಪ್ರವೇಶಾರ್ಥಮಸಾಧಾರಣಂ ಕಿಂಚಿದ್ದ್ವಾರಮಪೇಕ್ಷಿತಮಿತ್ಯಭಿಪ್ರೇತ್ಯ ಪ್ರೀತಿಪೂರ್ವಕಂ ವಿದಾರಿತತ್ವಾದಿಕಮುತ್ಕರ್ಷಂ ಪ್ರಕಟಯಿತುಂ ತಸ್ಯ ದ್ವಾರಸ್ಯ ವಿದೃತಿರಿತಿ ನಾಮ ಸಂಪನ್ನಮ್। ತೇನ ದ್ವಾರೇಣ ನಿರ್ಗತಸ್ಯ ಬ್ರಹ್ಮಲೋಕಪ್ರಾಪ್ತಿದ್ವಾರಾ ಮುಚ್ಯಮಾನತ್ವಾದಾನಂದಹೇತುತ್ವೇನ ದಶೇತದ್ದ್ವಾರಂ ನಾಂದನಮಿತ್ಯುಚ್ಯತೇ ॥

ತಲೆಯಲ್ಲಿರುವ ಆತ್ಮನ ಪ್ರವೇಶದ್ವಾರವನ್ನು ಪ್ರಶಂಸಿಸುತ್ತಾರೆ. ಕಣ್ಣುಕಿವಿಮುಂತಾದ ಗೋಲಕಗಳಲ್ಲಿ ಸೇವಕರಂತಿರುವ ಚಕ್ಷುರಾದಿ ಇಂದ್ರಿಯಗಳು ಸೇರಿರುವುದರಿಂದ ಸ್ವಾಮಿಯಾದ ತಾನು ಅಸಾಧಾರಣದ್ವಾರದಿಂದಲೇ ಪ್ರವೇಶಿಸಬೇಕೆಂದು ತಿಳಿದು ಪ್ರೀತಿಪೂರ್ವಕವಾಗಿ ನೆತ್ತಿಯಲ್ಲಿ ರಂದ್ರಮಾಡಿರುವುದರಿಂದ ಅದರ ಉತ್ಕರ್ಷವನ್ನು ತಿಳಿಸಲು ಆಸ್ಥಾನಕ್ಕೆ ವಿದೃತಿ ಎಂಬ ಹೆಸರು ಉಂಟಾಯಿತು. ಆ ದ್ವಾರದಿಂದ ಹೊರಟ ಜೀವನು ಬ್ರಹ್ಮಲೋಕಪ್ರಾಪ್ತಿಮೂಲಕವಾಗಿ ಮುಕ್ತಿ ಹೊಂದುವುದರಿಂದ ಆನಂದಕ್ಕೆ ಕಾರಣವಾದುದರಿಂದ ಆ ರಂಧ್ರದ್ವಾರಕ್ಕೆ ನಾಂದನಂ ಎಂದೂ ಹೆಸರಾಯಿತು.

## ತಸ್ಯ ತ್ರಯ ಆವಸಥಾಸ್ತ್ರಯಃ ಸ್ವಪ್ನಾ ಅಯಮಾವಸಥೋಽಯಮಾವಸಥೋಽಯಮಾವಸಥ ॥

ಶರೀರೇ ಪ್ರವಿಷ್ಟಸ್ಯ ಸಂಚಾರಸ್ಥಾನಾನಿ ತೇಷ್ವವಸ್ಥಾವಿಶೇಷಾಂಶ್ಚ ದರ್ಶಯತಿ— ಯಥಾ ಮಹಾರಾಜಸ್ಯ ಕ್ರೀಡಾರ್ಥಮುಪರ್ಯಧೋಭಾವೇನ ವರ್ತಮಾನಾಃ ಪ್ರಾಸಾದಸ್ಯ ಭೂಮಯೋ ನಿರ್ಮೀಯಂತ ಏವಮಸ್ಯಾತ್ಮನಃ ಶರೀರಮಧ್ಯೇ ಕ್ರೀಡಾರ್ಥಂ ತ್ರಯ ಆವಸಥಾಸ್ತ್ರೀಣಿ ಸ್ಥಾನಾನಿ ನಿರ್ಮಿತಾನಿ। ತ್ರಿಷು ಸ್ಥಾನೇಷು ತ್ರಯಃ ಸ್ವಪ್ನಾಸ್ತೇನಾತ್ಮನಾಽವಲೋಕ್ಯಂತೇ। ಅಯಮಾವಸಥ ಇತ್ಯಾದಿನಾ ನೇತ್ರಕಂಠಹೃದಯಾಖ್ಯಾನಿ ಸ್ಥಾನಾನಿ ಹಸ್ತಾಗ್ರೇಣ ಪ್ರದರ್ಶ್ಯಂತೇ। ತೇಷು ಹಿ ಜಾಗರಣಾದ್ಯವಸ್ಥಾನಾಂ ನಿಷ್ಪತ್ತಿಃ ತಥಾ ಚ ಬ್ರಹ್ಮೋಪನಿಷದ್ಯಾಮ್ನಾಯತೇ-" ನೇತ್ರಸ್ಥಂ ಜಾಗರಿತಂ ವಿದ್ಯಾತ್ಕಂಠೇ ಸ್ವಪ್ನಂ ಸಮಾದಿಶೇತ್। ಸುಷುಪ್ತಂ ಹೃದಯಸ್ಥಂ ತು " (ಬ್ರಹ್ಮೋಪ-೩) ಇತಿ। ಜಾಗರಿತಾದೀನಾಂ ಮಹಾರಾಜಸ್ಯ ಪ್ರಾಸಾದತ್ರಯೇ ಕ್ರೀಡಾವಜ್ಜೀವಕ್ರೀಡಾರೂಪತ್ವಂ ಕೈವಲ್ಯೋಪನಿಷದ್ಯಾಮ್ನಾಯತೇ—

" ಸ್ತ್ರ್ಯನ್ನಪಾನಾದಿವಿಚಿತ್ರಭೋಗೈಃ ಸ ಏವ ಜಾಗ್ರತ್ಪರಿತೃಪ್ತಿಮೇತಿ।
ಸ್ವಪ್ನೇಷು ಜೀವಃ ಸುಖದುಃಖಭೋಕ್ತಾ ಸ್ವಮಾಯಯಾ ಕಲ್ಪಿತವಿಶ್ವಲೋಕೇ।
ಸುಷುಪ್ತಿಕಾಲೇ ಸಕಲೇ ವಿಲೀನೇ ತಮೋಽಭಿಭೂತಃ ಸುಖರೂಪಮೇತಿ।
ಪುನಶ್ಚ ಜನ್ಮಾಂತರ ಕರ್ಮಯೋಗಾತ್ಸ ಏವ ಜೀವಃ ಸ್ವಪಿತಿ ಪ್ರಬುದ್ಧಃ।
ಪುರತ್ರಯೇ ಕ್ರೀಡತಿ ಯಶ್ಚ ಜೀವಸ್ತತಸ್ತು ಜಾತಂ ಸಕಲಂ ವಿಚಿತ್ರಮ್ "॥

ಕೈವ-೧೨)

ನನು ಜಾಗರಣಸುಷುಪ್ತಯೋಃ ಸ್ವಪ್ನಾದನ್ಯತ್ವೇ ತ್ರಯಃ ಸ್ವಪ್ನಾ ಇತ್ಯಯುಕ್ತಮಿತಿ ಚೇನ್ನ। ಸ್ವಪ್ನಲಕ್ಷಣೋಪೇತತ್ವಾತ್। ವಿದ್ಯಮಾನಂ ವಸ್ತುತತ್ತ್ವಂ ತಿರೋಧಾಯ ಸಮುತ್ಪನ್ನೋಽನ್ಯಥಾಪ್ರತಿಭಾಸಃ ಸ್ವಪ್ನಃ ಇತಿ ತಲ್ಲಕ್ಷಣಮ್। ಜಾಗರಸುಷುಪ್ತಯೋರಪಿ ವಿದ್ಯಮಾನಸ್ಯ ಬ್ರಹ್ಮತತ್ತ್ವಸ್ಯ ತಿರೋಧಾನೇನಾನ್ಯಥಾಭೂತಸ್ಯ ಜೀವತತ್ತ್ವಸ್ಯ ಚಾವಭಾಸ ಇತ್ಯಸ್ತಿ ಲಕ್ಷಣಮ್। ತಸ್ಮಾಲ್ಲೋಕಪ್ರಸಿದ್ಧಸ್ಯ ಸ್ವಪ್ನಸ್ಯೈಕತ್ವೇಽಪಿ ಲಕ್ಷಣಸಿದ್ಧಾಃ ಸ್ವಪ್ನಾಸ್ತ್ರಯಃ। ತ್ರಯ ಆವಸಥಾ ಇತ್ಯನೇನ ಪಿತೃಶರೀರ ಮಾತೃಶರೀರಸ್ವಶರೀರರೂಪಾಣಿ ವಾ ತ್ರೀಣಿ ಸ್ಥಾನಾನಿ ಲಕ್ಷ್ಯಂತೇ। ತಥಾಚೋಪರಿತನಾಧ್ಯಾಯೇ ಪ್ರಪಂಚಯಿಷ್ಯತೇ। ಸಂಸಾರೋ ದ್ವಿವಿಧಃ। ದೈನಂದಿನವ್ಯವಹಾರೋ ಜನ್ಮಾಂತರಸ್ವೀಕಾರಶ್ಚೇತಿ। ತತ್ರ ದೈನಂದಿನವ್ಯವಹಾರಸ್ಯ ನೇತ್ರಾದೀನಿ ಸ್ಥಾನಾನಿ ಜನ್ಮಾಂತರವ್ಯವಹಾರಸ್ಯ ಪಿತೃಮಾತೃಸ್ವೀಯಶರೀರಾಣಿ ಸ್ಥಾನಾನೀತಿ ವಿವೇಕಃ। ಇತಿಶಬ್ದಃ ಸಂಸಾರರೂಪಸ್ಯಾಧ್ಯಾರೋಪ ಪ್ರಕರಣಸ್ಯ ಸಮಾಪ್ತ್ಯರ್ಥಃ॥

ಶರೀರದಲ್ಲಿ ಪ್ರವೇಶಿಸಿದ ಆತ್ಮನ ಸಂಚಾರಸ್ಥಾನಗಳನ್ನೂ, ಅವುಗಳ ಅವಸ್ಥಾವಿಶೇಷಗಳನ್ನೂ ವಿವರಿಸುತ್ತಾರೆ. ಲೋಕದಲ್ಲಿ ಮಹಾರಾಜನಿಗೆ ವಿಹರಿಸುವುದಕ್ಕೆ ಹೇಗೆ ಕೆಳಗೂ ಮೇಲೂ ಪ್ರಾಸಾದದ ಉಪ್ಪರಿಗೆಗಳು ರಚಿಸಲ್ಪಡುವವೋ ಹಾಗೆ ಆತ್ಮನಿಗೆ ಶರೀರಮಧ್ಯದಲ್ಲಿ ವಿಹಾರಕ್ಕೋಸ್ಕರ ಮೂರು ಸ್ಥಾನಗಳು ನಿರ್ಮಿಸಲ್ಪಟ್ಟವೆ. ಆ ಮೂರುಸ್ಥಾನಗಳಲ್ಲಿ ವಿಹಾರಕ್ಕೋಸ್ಕರ ಮೂರು ಸ್ವಪ್ನಗಳನ್ನು ನೋಡುತ್ತಾನೆ. ಇವು ಸ್ಥಾನಗಳೆಂದು ನೇತ್ರ, ಕಂಠ, ಹೃದಯ ಇವುಗಳನ್ನು ಕೈಯಿಟ್ಟು ತೋರಿಸುತ್ತಾರೆ. ಆತ್ಮನ ನೇತ್ರದಲ್ಲಿದ್ದು ಜಾಗರಣಾವಸ್ಥೆಯನ್ನೂ, ಕಂಠದಲ್ಲಿದ್ದು ಸ್ವಪ್ನಾವಸ್ಥೆಯನ್ನೂ,

ಹೃದಯದಲ್ಲಿದ್ದು ಸುಷುಪ್ತ್ಯವಸ್ಥೆಯನ್ನೂ, ಅನುಭವಿಸುತ್ತಿರುತ್ತಾನೆ. ಮಹಾರಾಜನು ಪ್ರಾಸಾದದಲ್ಲಿದ್ದು ಕ್ರೀಡಿಸುವಂತೆ ದೇಹದಲ್ಲಿರುವ ಆತ್ಮನ ಈ ಕ್ರೀಡೆಯನ್ನು ಕೈವಲ್ಯೋಪನಿಷತ್ತಿನಲ್ಲ ಹೀಗೆ ವಿವರಿಸಿರುತ್ತಾರೆ. (ಕೈವ-೧೨) ಜಾಗರಣಾ ವಸ್ಥೆಯಲ್ಲಿ ಇವನು ಸ್ತ್ರೀ ಅನ್ನಪಾನಾದಿವಿಚಿತ್ರಭೋಗಗಳಿಂದ ತೃಪ್ತಿಹೊಂದುತ್ತಾನೆ. ಸ್ವಪ್ನಾವಸ್ಥೆಯಲ್ಲಿ ತನ್ನ ಮಾಯೆ ಯಿಂದಲೇ ಕಲ್ಪಿತವಾದ ವಿಶ್ವಲೋಕದಲ್ಲಿ ಸುಖದುಃಖಗಳನ್ನನುಭವಿಸುತ್ತಾನೆ. ಸುಷುಪ್ತಿಯಲ್ಲಿ ಎಲ್ಲವೂ ಲೀನವಾದು ದರಿಂದ ತಮಸ್ಸಿನಿಂದ ಆಕ್ರಾಂತನಾಗಿ ಸುಖವನ್ನನುಭವಿಸುತ್ತಾನೆ. ತಿರುಗಿ ಜನ್ಮಾಂತರಕರ್ಮಸಂಬಂಧದಿಂದ ಅದೇ ಜೀವನ. ಮಲಗಿದವನು ಎಚ್ಚರಹೊಂದುತ್ತಾನೆ. ಹೀಗೆ ಅವನು ಮೂರುಪುರಗಳಲ್ಲಿ ಕ್ರೀಡಿಸುತ್ತಿರುವುದು ಅತಿವಿಚಿತ್ರ ವಾಗಿರುತ್ತದೆ. ಜಾಗರಣಸುಷುಪ್ತಿಗಳೆರಡೂ ಸ್ವಪ್ನಕ್ಕಿಂತ ಬೇರೆಯಾದರೆ ಹಿಂದೆ ಮೂರುಸ್ವಪ್ನಗಳೆಂದುದು ಹೇಗೆ? ಎಂದು ಶಂಕಿಸಬಹುದು. ಆದರೆ ಅವು ಸ್ವಪ್ನಲಕ್ಷಣದಿಂದ ಕೂಡಿರುವುದರಿಂದ ಸ್ವಪ್ನವೆಂದು ಹೇಳಿದೆ. ಇರತಕ್ಕ ವಸ್ತುತತ್ವವನ್ನು ಮರೆಮಾಚಿ ಇನ್ನೊಂದು ರೀತಿಯಾಗಿ ತೋರುವುದಕ್ಕೆ ಸ್ವಪ್ನವೆಂದು ಹೆಸರು. ಜಾಗ್ರತ್ಸುಷುಪ್ತಿಗಳಲ್ಲಿಯೂ ಇರತಕ್ಕ ಬ್ರಹ್ಮತತ್ವವನ್ನು ಮರೆಮಾಚಿ ಬೇರೆರೀತಿಯಿಂದ ಜೀವತತ್ವ ತೋರುವುದರಿಂದ ಸ್ವಪ್ನಲಕ್ಷಣ ಅಲ್ಲಿ ಸಂಗತವಾಗುತ್ತದೆ. ಲೋಕಪ್ರಸಿದ್ಧವಾದ ಸ್ವಪ್ನ ಒಂದೇ ಆದರೂ ಸ್ವಪ್ನಲಕ್ಷಣಾಕ್ರಾಂತಗಳು ಮೂರು ಎಂದು ತಿಳಿಯಬೇಕು. ಅಥವಾ ಆವಸಥ ಎಂದರೆ ಪಿತೃಶರೀರ, ಮಾತೃಶರೀರ, ತನ್ನ ಶರೀರ ಹೀಗೆ ಮೂರುಸ್ಥಾನಗಳೆಂದು ತಿಳಿಯಬೇಕು. ಇದನ್ನು ಮುಂದಿನಾಧ್ಯಾಯದಲ್ಲಿ ವಿವರಿಸುತ್ತಾರೆ. ಸಂಸಾರ ಎರಡು ರೀತಿಯಾಗಿರುತ್ತದೆ. ದೈನಂದಿನವ್ಯವಹಾರ, ಜನ್ಮಾಂತರ ಸ್ವೀಕಾರವೆಂದು ಅವುಗಳ ಹೆಸರು. ದೈನಂದಿನವ್ಯವಹಾರಕ್ಕೆ ನೇತ್ರಾದಿಗಳೇಸ್ಥಾನಗಳೆಂದೂ, ಜನ್ಮಾಂತರವ್ಯವಹಾರಕ್ಕೆ ಪಿತೃ, ಮಾತೃಸ್ವಶರೀರಗಳು ಸ್ಥಾನಗಳೆಂದು ತಿಳಿಯಬೇಕು. ಇತಿಶಬ್ದವು ಸಂಸಾರಾಧ್ಯಾರೋಪಪ್ರಕರಣದ ಸಮಾಪ್ತಿಯನ್ನು ತಿಳಿಸುತ್ತದೆ.

**ಸ ಜಾತೋ ಭೂತಾನ್ಯಭಿವ್ಯೈಖ್ಯತ್ಕಿಮಿಹಾನ್ಯಂ ವಾವದಿಷದಿತಿ ಸ ಏತ-**
**ಮೇವ ಪುರುಷಂ ಬ್ರಹ್ಮತತಮಪಶ್ಯತ್ ॥**

ಅಥಾಪವಾದಪ್ರಕರಣಾರ್ಥಂ ಸಂಕ್ಷಿಪ್ಯ ದರ್ಶಯತಿ—ಸ ಪರಮಾತ್ಮಾ ಜಾತೋ ದೇಹ-ಪ್ರವೇಶೇನ ಜನ್ಮಮರಣಜಾಗರಣಸ್ವಪ್ನಸುಷುಪ್ತಿಭಿಃ ಸಂಸಾರೀಭೂತಃ ಸನ್‌ಕದಾಚಿದೀಶ್ವರಾನುಗ್ರ-ಹಾದ್ ಗುರುಶಾಸ್ತ್ರಪ್ರಸಾದೇನ ಚ ಭೂತಾನ್ಯಾಕಾಶಾದೀನಿ ಪ್ರಾಣಿನಶ್ಚಾಭಿವ್ಯೈಖ್ಯತ್ಸರ್ವತೋ ವಿವೇಕೇನ ಜ್ಞಾತವಾನ್ । ದೃಶ್ಯಮಾನಾನ್ಯಾಕಾಶಾದೀನಿ ಭೂತಾನಿ ಪ್ರಾಣದೇಹಾಶ್ಚ ಕುತ ಉತ್ಪ-ದ್ಯಂತೇ ಕೇನ ವಾ ರಕ್ಷ್ಯಂತೇ ಕಸ್ಮಿನ್ವಾ ಪ್ರಲೀಯಂತೇ ಇತ್ಯೇವಂ ಶಾಸ್ತ್ರಂ ವಿವಿಚ್ಯ ಸರ್ವಸ್ಯ ಸಂಸಾ-ರಸ್ಯ ಮಾಯಾಕಲ್ಪಿತತ್ವಾದ್ ಬ್ರಹ್ಮೈವ ಸರ್ವಸ್ಯಾಪಿ ವಸ್ತುತ್ವಂ ತಸ್ಮಾದಿಹ ಜಗತಿ ಕಿಂ ವಾ ವಸ್ತು ಬ್ರಹ್ಮಣೋಽನ್ಯದ್ವಾವದಿಷದ್ವದಿಷ್ಯಾಮಿ ನ ಕಿಂಚಿದಪಿ ಬ್ರಹ್ಮವ್ಯತಿರಿಕ್ತತಯಾ ವಕ್ತುಂ ಶಕ್ನೋಮೀತಿ ನಿಶ್ಚಿತ್ಯ ಸ ಜೀವ ಏತಮೇವ ಶರೀರೇ ಪ್ರವಿಷ್ಟಂ ಪುರುಷಂ ಚಿದ್ರೂಪಂ ಸಾಕ್ಷಿಣಂ ಬ್ರಹ್ಮಾಪಶ್ಯತ್ । ಬ್ರಹ್ಮತ್ವೇನ ನಿಶ್ಚಿತವಾನ್ । ಕೀದೃಶಂ ಬ್ರಹ್ಮ ತತಮಮ್ । ಏತಸ್ತಕಾರೋ ಲುಪ್ತಃ । ಅತಿಶಯೇನ ತತಂ ವಿಸ್ತೃತಂ ತತತಮಮ್ । ದೃಶ್ಯಸ್ಯ ಸರ್ವಸ್ಯ ಜಗತೋ ದ್ರಷ್ಟುರ್ಜೀವಸ್ಯ ಚ ಬ್ರಹ್ಮೈವ ತತ್ತ್ವಮಿತ್ಯಪವಾದಪ್ರಕರಣಸ್ಯ ಸರ್ವಸ್ಯ ತಾತ್ಪರ್ಯಾರ್ಥಃ ॥

ಅಪವಾದಪ್ರಕರಣವನ್ನು ಸಂಕ್ಷೇಪದಿಂದ ವಿವರಿಸುತ್ತಾರೆ. ಪರಮಾತ್ಮನು ದೇಹಪ್ರವೇಶದಿಂದ ಜನನಮರಣ ಜಾಗರಣಸ್ವಪ್ನಸುಷುಪ್ತಿಗಳಿಂದಲೂ ಸಂಸಾರಿಯಾದನು ಅವನ ಒಂದು ಸಮಯ ಈಶ್ವರಾನುಗ್ರಹ, ಗುರೂಪದೇಶಾದಿಗಳಿಂದ ಆಕಾಶಾದಿಭೂತಗಳನ್ನೂ ಪ್ರಾಣಿಗಳನ್ನೂ ವಿವೇಕದಿಂದ ತಿಳಿದನು. ತೋರತಕ್ಕ ಆಕಾಶಾದಿಭೂತಗಳು ಪ್ರಾಣದೇಹಗಳು ಇವು ಎಲ್ಲಿಂದ ಉಂಟಾದವು ? ಯಾರಿಂದ ರಕ್ಷಿಸಲ್ಪಡುತ್ತವೆ ? ಯಾರಲ್ಲಿ ಲೀನವಾಗುತ್ತವೆ ? ಹೀಗೆ ವಿವೇಕದಿಂದ ವಿಚಾರಿಸಿ, ಸಕಲಸಂಸಾರವೂ ಮಾಯಾಕಲ್ಪಿತವೆಂದೂ ಬ್ರಹ್ಮನೇ ಸಕಲವಸ್ತುವೆಂದೂ ತಿಳಿದನು. ಈ ಜಗತ್ತಿನಲ್ಲಿ ಬ್ರಹ್ಮನಿಗಿಂತ ಬೇರೆಯಾದ ವಸ್ತು ಯಾವುದೂ ಇಲ್ಲದಿರುವುದರಿಂದ ಆ ಜೀವನು ದೇಹವನ್ನು ಪ್ರವೇಶಿಸಿರುವ ಪುರುಷನನ್ನು ಸಚ್ಚಿದಾನಂದ ರೂಪ ಬ್ರಹ್ಮವೆಂದು ತಿಳಿದನು. ಸಕಲವೂ ಬ್ರಹ್ಮತತ್ವವೇ. ಅದು ಅತಿವಿಸ್ತೃತವಾದದ್ದು ಅಂದರೆ ದೃಶ್ಯವಾದ ಸಕಲ ಜಗತ್ತೂ, ದ್ರಷ್ಟೃವಾದ ಜೀವನೂ ಎಲ್ಲವೂ ಬ್ರಹ್ಮತತ್ವವೇ ಎಂದು ಅಪವಾದಪ್ರಕರಣದ ತಾತ್ಪರ್ಯ

ಇದಮದರ್ಶಮಿತೀ೩ಁ ತಸ್ಮಾದಿದಂದ್ರೋ ನಾಮೇದಂದ್ರೋ ಹ ವೈ ನಾಮ ತಮಿದಂದ್ರಂ ಸಂತಮಿಂದ್ರ ಇತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಃ ಪರೋಕ್ಷಪ್ರಿಯಾ ಇವ ಹಿ ದೇವಾಃ ॥

ಯಥೋಕ್ತಂ ಬ್ರಹ್ಮಸಾಕ್ಷಾತ್ಕಾರಂ ನಾಮನಿರ್ವಚನೇನ ಪ್ರಶಂಸತಿ—ಶರೀರೇ ಪ್ರವಿಷ್ಟಃ ಸ ಜೀವಾತ್ಮಾ ಬ್ರಹ್ಮಾತ್ಮತ್ವಂ ಸಾಕ್ಷಾತ್ಕೃತ್ಯೇದಮದರ್ಶಮಿತಿ ವಾಕ್ಯೇನ ಸ್ವಕೀಯಮಪರೋಕ್ಷಾನುಭವಂ ಪ್ರಕಟಯನ್ಪರಿತುತೋಷ । ಪರಿತೋಷದ್ಯೋತನಾರ್ಥಾ ಪ್ಲುತಿಃ । ಯಸ್ಮಾದಿದಮದರ್ಶಮಿತ್ಯುಕ್ತ-ವಾಂಸ್ತಸ್ಮಾದಿದಂ ದೃಷ್ಟಮಿತ್ಯರ್ಥೇನ ವ್ಯುತ್ಪತ್ತ್ಯಾ ಸೋಽಯಮಿದಂದ್ರ ಇತಿ ನಾಮ ಪ್ರಾಪ್ತವಾನ್ । ತಸ್ಯ ನಾಮ್ನೋ ನಿರ್ವಚನಾನುಸಾರೇಣ ಯೋಗ್ಯತ್ವಪ್ರಸಿದ್ಧಿಂ ದ್ಯೋತಯಿತುಮಿದಂದ್ರೋ ಹ ವೈ ನಾಮೇತ್ಯುಕ್ತಮ್ । ನ ಚ ಲೋಕೇ ಪರಮೇಶ್ವರಮಿಂದ್ರ ಇತ್ಯೇವಂ ವ್ಯವಹರಂತಿ ನ ತ್ವಿದಂದ್ರಮಿತಿ ತಂಕನೀಯಮ್ । ಪರಮಾರ್ಥತೋ ಯಥೋಕ್ತರೀತ್ಯೇದಂದ್ರಮೇವ ಸಂತಂ ಪರೋಕ್ಷತ್ವಾರ್ಥ-ಮೇಕಮಕ್ಷರಂ ವಿಲೋಪ್ಯೇಂದ್ರ ಇತ್ಯೇವ ವ್ಯವಹೃತತ್ವಾತ್ । ನಾಪಿ ಪರೋಕ್ಷತ್ವಸ್ಯ ವೈಯರ್ಥ್ಯಂ ಶಂಕನೀಯಮ್ । ಯಸ್ಮಾದ್ದೇವಾಃ ಪೂಜ್ಯಾಃ ಸರ್ವೇ ಸ್ವಕೀಯಂ ನಾಮ ಗೂಢಂ ಕೃತ್ವೋಪಾ-ಧ್ಯಾಯಾ ಆಚಾರ್ಯಾ ಇತ್ಯಾದಿಕೇ ಪರೋಕ್ಷನಾಮನ್ಯೇವ ಪ್ರೀತಿಂ ಕುರ್ವಂತಿ । ಹಿಶಬ್ದೇನಾಸ್ಮಿ-ನ್ನರ್ಥೇ ಲೋಕಪ್ರಸಿದ್ಧಿರ್ದರ್ಶಿತಾ । ಅಭ್ಯಾಸೋಽಧ್ಯಾಯ ಸಮಾಪ್ತ್ಯರ್ಥಃ ॥

ಪೂರ್ವೋಕ್ತವಾದ ಬ್ರಹ್ಮಸಾಕ್ಷಾತ್ಕಾರವನ್ನು ನಾಮನಿರ್ದೇಶದಿಂದ ಪ್ರಶಂಸಿಸುತ್ತಾರೆ. ಶರೀರದಲ್ಲಿ ಪ್ರವೇಶಿಸಿದ ಜೀವಾತ್ಮನು ಬ್ರಹ್ಮತತ್ವವನ್ನು ಸಾಕ್ಷಾತ್ಕರಿಸಿ ತನ್ನ ಅಪರೋಕ್ಷಾನುಭವವನ್ನು ಪ್ರಕಟಪಡಿಸುತ್ತಾ ಸಂತೋಷಪಟ್ಟನು. ಸಂತೋಷದ್ಯೋತಕವಾಗಿ ಪ್ಲುತಿಹೇಳಿದೆ. ಬ್ರಹ್ಮಸಾಕ್ಷಾತ್ಕಾರಪಡೆದುದರಿಂದ ಇದಂ ದೃಷ್ಟಂ (ಇದನ್ನುನೋಡಿದೆ) ಎಂಬ ವ್ಯುತ್ಪತ್ತಿಯಿಂದ ಅವನಿಗೆ ಇದಿಂದ್ರ ಎಂಬ ಹೆಸರು ಉಂಟಾಯಿತು. ಈ ಹೆಸರು ಯೋಗ್ಯತಾಸಿದ್ಧಿಯನ್ನು ವ್ಯಕ್ತ ಪಡಿಸುತ್ತದೆ. ಲೋಕದಲ್ಲಿ ಪರಮೇಶ್ವರನಿಗೆ ಇಂದ್ರ ಎಂದು ವ್ಯವಹಾರವಿದ್ದರೂ ಇದಿಂದ್ರ ಎಂಬುದೇ ಪಾರಮಾರ್ಥಿಕ ನಾಮಧೇಯವಾಗಿರುತ್ತದೆ. ಆದರೆ ದೇವತೆಗಳೆಲ್ಲರೂ ಪ್ರತ್ಯಕ್ಷಕ್ಕಿಂತ ಪರೋಕ್ಷಪ್ರಿಯರಾದುದರಿಂದ ಪರೋಕ್ಷತಾಸಿದ್ಧಿಗೋಸ್ಕರ

ಒಂದು ಅಕ್ಷರವನ್ನು ಲೋಪಮಾಡಿ ಇಂದ್ರ ಎಂದು ಕರೆಯುತ್ತಾರೆ. ಲೋಕದಲ್ಲಿಯೂ ಪೂಜ್ಯರು ತಮ್ಮ ನಾಮವನ್ನು ಗೂಢವಾಗಿಟ್ಟುಕೊಂಡು ಉಪಾಧ್ಯಾಯ, ಆಚಾರ್ಯ ಇತ್ಯಾದಿ ಪರೋಕ್ಷನಾಮಗಳಲ್ಲಿಯೇ ಪ್ರೀತಿಹೊಂದುತ್ತಾರೆ. ಅಧ್ಯಾಯ ಸಮಾಪ್ತಿಯನ್ನು ಸೂಚಿಸಲು ದ್ವಿರಾವೃತ್ತಿಹೇಳಿದೆ.

---

## *English Translation*

---

1. He thought : 'There are these worlds and the guardians of the worlds. Let me send forth food for them.'

He brooded over the water. From the water thus brooded on, matter (murti) was born. And that matter which was born, that verily was food.

2. When this food (the object matter) had thus been sent forth, it wished to flee, crying and turning away. He (the subject) tried to grasp it by speech. He could not grasp it by speech. If he had grasped it by speech man would be satisfied by naming food.

He tried to grasp it by scent (breath). He could not grasp it by scent. If he had grasped it by scent, man would be satisfied by smelling food.

He tried to grasp it by the eye. He could not grasp it by the eye. If he had grasped it by the eye, man would be satisfied by seeing food.

He tried to grasp it by the ear. He could not grasp it by the ear. If he had grasped it by the air, man would be satisfied by hearing food.

He tried to grasp it by the skin. He could not grasp it by the skin. If he had grasped it by the skin, man would be satisfied by touching food.

He tried to gtasp it by the mind. He could not grasp it by the mind. If he had grasped it by the mind, man would be satisfied by thinking food.

He tried to grasp it by the generative organ. He could not grasp it by the organ. If he had grasped it by the organ, man would be satisfied by sending forrh food.

He tried to grasp it by the down-breathing (the breath which helps to swallow food through the mouth and to carry it off through the rectum, the payvindriya). He got it.

3. Thus it is Vayu (the getter) who lays hold of food, and the Vayu is verily Annayu (he who gives life or who lives by food).

4. He thought : 'How can all this be without me ?'

5. And then he thought : 'By what way shall I get there ?'

6. And then he thought : 'If speech names, if scent smells, if the eye sees, if the air hears, if the skin feels, if the mind thinks, if the off-breathing digests, if the organ sends forth, then what am I ?'

7. Then opening the suture of the skull, he got in by that door.

8. That door is called the Vidriti (tearing asunder), the Nandana (the place of bliss).

9. There are three dwelling-places for him, three dreams ; this dwelling-place (they eye), this dwelling-place (the throat), this dwelling-place (the heart).

10. When born (when the Highest Self had entered the body) he looked through all things, in order to see whether anything wished to proclaim

here another (Self). He saw this person only (himself) as the widely spread Brahman. 'I saw it,' thus he said;

Therefore he was Idam–dra (seeing this).

11. Being Idamdra by name, they eall him Indra mysteriously. For the Devas love mystery, yea, they love mystery.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ಚತುರ್ಥಾಧ್ಯಾಯೇ ತೃತೀಯಃ ಖಂಡಃ

ಇತಿ ಬಹ್ವೃಚ ಬ್ರಾಹ್ಮಣಾರಣ್ಯಕ ಕಾಂಡೇ ದ್ವಿತೀಯಾರಣ್ಯಕೇ ಚತುರ್ಥೋಽಧ್ಯಾಯಃ ॥

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ನಾಲ್ಕನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವು ॥

ಇಲ್ಲಿಗೆ ಸಾಯಣಾಚಾರ್ಯ ವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಎರಡನೆಯ ಆರಣ್ಯಕದಲ್ಲಿ
ನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು ॥

---

# ಅಥ ದ್ವಿತೀಯಾರಣ್ಯಕೇ ಪಂಚಮಾಧ್ಯಾಯೇ ಪ್ರಥಮಃ ಖಂಡಃ

## ಎರಡನೆಯ ಆರಣ್ಯಕದ ಐದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

" ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ ।
ಶಿಷ್ಯಾಣಾಂ ಬೋಧಸಿದ್ಧ್ಯರ್ಥಂ ಕೃತಜ್ಞೈಃ ಕಲ್ಪಿತಃ ಕ್ರಮಃ ॥"

ಇತಿ ಪೂರ್ವಾಚಾರ್ಯೈಃ ಕೃತ್ಸ್ನವೇದಾಂತಾನಾಂ ತಾತ್ಪರ್ಯಂ ಸಂಗ್ರಹೀತಮ್ । ತದೇ-ವಾತ್ರ ಚತುರ್ಥಾಧ್ಯಾಯೇ ವಿಸ್ಪಷ್ಟಮುದೀರಿತಮ್ । " ಆತ್ಮಾ ವಾ ಇದಮೇಕ ಏವಾಗ್ರ ಆಸೀನ್ನಾ-ನ್ಯತ್ಕಿಂಚನ ಮಿಷತ್ " (ಐ-ಆ-೨-ಅ-೪-ಖಂ-೧) ಇತ್ಯೇತನ್ನಿಷ್ಪ್ರಪಂಚಬ್ರಹ್ಮತತ್ತ್ವಸ್ಯ ಪ್ರತಿಪಾದಕಂ ಸೂತ್ರಮ್ । ತಸ್ಯ ಸೂತ್ರಸ್ಯಾರ್ಥಮವಬೋಧಯಿತುಂ " ಸ ಈಕ್ಷತ ಲೋಕಾನ್ನು ಸೃಜೈ " (ಐ-ಆ-೨-ಅ-೪-ಖಂ-೧) ಇತ್ಯಾರಭ್ಯ " ಅಯಮಾವಸಥಃ " (ಐ-ಆ-೨-ಅ-೪-ಖಂ-೩) ಇತ್ಯಂತೇ ನ ಗ್ರಂಥೇನ ಕೃತ್ಸ್ನಪ್ರಪಂಚಸ್ಯಾಧ್ಯಾರೋಪಃ ಪ್ರತಿಪಾದಿತಃ । ಬ್ರಹ್ಮಾಂಡಸ್ಯ ಮಧ್ಯೇ ಯ ಏತೇ ಚತುರ್ದಶ ಲೋಕಾ ಯಶ್ಚೈತಾಁಲ್ಲೋಕಾನಾತ್ಮಶರೀರತ್ವೇನಾಭಿಮನ್ಯಮಾನೋ ವಿರಾಟ್ಪುರುಷೋ ಯಾನಿ ಚ ತದ್ದೇಹಚ್ಛಿದ್ರೇಷೂತ್ಪನ್ನಾನಿ ವಾಕ್ಚಕ್ಷುರಾದೀಂದ್ರಿಯಾಣಿ ಯಾಶ್ಚ ತದಿಂದ್ರಿಯಾಭಿಮಾನಿ-ನ್ಯೋಽಗ್ನಿವಾಯ್ವಾದಿತ್ಯಾದಿದೇವತಾ ಯಾನಿ ಚ ತಾಸಾಂ ದೇವತಾನಾಂ ಭೋಗಯೋಗ್ಯಾನಿ ಗವಾ-ಶ್ವಮನುಷ್ಯಾದಿ ಶರೀರಾಣಿ ಯಚ್ಚ ತೇಷು ಶರೀರೇಷು ಪ್ರವಿಷ್ಟಾನಾಂ ದೇವತಾನಾಮನ್ನಂ ಯಶ್ಚ ವಾಯುನೈವ ತದನ್ನಸ್ವೀಕಾರೋ ಯದಪಿ ಜೀವರೂಪೇಣ ತೇಷು ದೇಹೇಷು ಪ್ರವಿಶ್ಯ ಜಾಗರಣಾ-ದ್ಯವಸ್ಥಾತ್ರಯಸ್ಯ ಶರೀರಾಂತರಸಂಚಾರಸ್ಯ ಚಾನುಭವನಂ ಸೋಽಯಂ ಸರ್ವೋಽಪ್ಯದ್ವಿತೀಯೇ ಪರಮಾತ್ಮನ್ಯಧ್ಯಾರೋಪಿತಃ ಪ್ರಪಂಚಃ। ಸ ಚಾಽಽತ್ಮಬೋಧೋಪಯೋಗ್ಯಃ। ಏತೇನ ಹಿ ಜಗದಂಕು-ರೇಣ ತನ್ಮೂಲಮಾತ್ಮತತ್ತ್ವಮಸ್ತೀತ್ಯವಗಂತುಂ ಶಕ್ಯಮ್ । ಏತದೇವಾಭಿಪ್ರೇತ್ಯ ಛಂದೋಗ ಆಮ-ನಂತಿ—"ಅನ್ನೇನ ಸೋಮ್ಯ ಶುಂಗೇನಾಪೋ ಮೂಲಮನ್ವಿಚ್ಛಾದ್ಭಿಃ ಸೋಮ್ಯ ಶುಂಗೇನ ತೇಜೋ ಮೂಲಮನ್ವಿಚ್ಛ ತೇಜಸಾ ಸೋಮ್ಯ ಶುಂಗೇನ ಸನ್ಮೂಲಮನ್ವಿಚ್ಛ ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸಂಪ್ರತಿಷ್ಠಾಃ "(ಛಾಂದೋ-೬-೮-೪) ಇತಿ । ತದೇವಮಧ್ಯಾ-ರೋಪೇಣಾದ್ವಿತೀಯಸ್ಯಾತ್ಮತತ್ತ್ವಸ್ಯಾಸ್ತಿತ್ವಮಾತ್ರಂ ಸಿದ್ಧಮ್ । ತಸ್ಯಾಧ್ಯಾರೋಪಸ್ಯಾಪವಾದೇನ ತತ್ತ್ವಸ್ಯೇತ್ಥಂ ಭಾವೋಽವಗಂತುಂ ಶಕ್ಯತೇ । ತಸ್ಮಾತ್—" ಸ ಜಾತೋ ಭೂತಾನಿ " (ಐ-ಆ-೨-ಅ-೪-ಖಂ-೩) ಇತ್ಯಾರಭ್ಯ " ಪರೋಕ್ಷಪ್ರಿಯಾ ಇವ ಹಿ ದೇವಾಃ " (ಐ-ಆ-೨-ಅ-೪-ಖಂ-೩) ಇತ್ಯಂತೇನ ಗ್ರಂಥೇನಾಧ್ಯಾರೋಪಸ್ಯಾಪವಾದಃ ಸಂಗೃಹೀತಃ । ತತ್ರಾಧ್ಯಾರೋಪಭಾಗೇ " ತಸ್ಯ ತ್ರಯ ಆವಸಥಾಃ " (ಐ-ಆ-೨-ಅ-೪-ಖಂ-೩) ಇತಿ ವಾಕ್ಯೇನ ಶರೀರಾಂತರಸಂಚಾರೋಽಪಿ

**ಸಂಗ್ರಹೇಣ ಪ್ರತಿಪಾದಿತಃ । ತದೇತತ್ಪಿತೃಶರೀರಂ ಮಾತೃಶರೀರಂ ಸ್ವಶರೀರಮಿತ್ಯೇತದಾವಸಥತ್ರಯಂ ಪಂಚಮಾಧ್ಯಾಯೇ ವಿವರಿಷ್ಯತೇ । ತತ್ರಾಽಽದೌ ಪಿತೃಶರೀರರೂಪಮಾವಸಥಂ ದರ್ಶಯತಿ—**

ಅಧ್ಯಾರೋಪ, ಅಪವಾದಗಳಿಂದಲೇ ಪ್ರಪಂಚದ ನಶ್ವರತ್ವವು ವಿವರಿಸಲ್ಪಡುತ್ತದೆ. ಪೂರ್ವಾಚಾರ್ಯರು ಶಿಷ್ಯರ ಬೋಧೆಗೋಸ್ಕರ ಈ ಕ್ರಮವನ್ನನುಸರಿಸುತ್ತಿದ್ದರು. ನಾಲ್ಕನೇ ಅಧ್ಯಾಯದಲ್ಲಿ ಅಧ್ಯಾರೋಪ, ಅಪವಾದಗಳನ್ನೇ ಸ್ಪಷ್ಟವಾಗಿ ವಿವರಿಸಿವೆ. **ಆತ್ಮಾ ವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ಕಿಂಚನ ಮಿಷತ್** ಎಂಬುದು ಬ್ರಹ್ಮತತ್ವಪ್ರತಿಪಾದಕವಾದ ಸೂತ್ರ. ಇದರ ಅರ್ಥವನ್ನು ವಿವರಿಸಲು **ಸ ಈಕ್ಷತ ಲೋಕಾನ್ನು ಸೃಜೈ** ಎಂದು ಆರಂಭಿಸಿ **ಅಯಮಾವಸಥಃ** ಎಂಬ ಗ್ರಂಥದವರೆಗೆ ಸಕಲ ಪ್ರಪಂಚದ ಅಧ್ಯಾರೋಪವು ಪ್ರತಿಪಾದಿತವಾಗಿದೆ. ಬ್ರಹ್ಮಾಂಡಮಧ್ಯದಲ್ಲಿರುವ ಹದಿನಾಲ್ಕುಲೋಕಗಳೂ, ಈ ಲೋಕಗಳನ್ನು ಶರೀರವನ್ನಾಗಿ ಅಭಿಮಾನಪಡುವ ವಿರಾಟ್ಪುರುಷನೂ, ಅವನ ಶರೀರದ ಛಿದ್ರಗಳಿಂದ ಉಂಟಾದ ವಾಗಾದೀಂದ್ರಿಯಗಳೂ, ಆ ಆ ಇಂದ್ರಿಯಾಭಿಮಾನಿಗಳಾದ ಅಗ್ನ್ಯಾದಿದೇವತೆಗಳೂ, ಆ ದೇವತೆಗಳ ಭೋಗಯೋಗ್ಯವಾದ ಗೋಅಶ್ವಮನುಷ್ಯಾದಿಗಳ ಶರೀರಗಳೂ ಆ ಶರೀರಗಳಲ್ಲಿ ಪ್ರವೇಶಿಸಿದ ದೇವತೆಗಳ ಅನ್ನವೂ, ಅಪಾನವಾಯುವಿನಿಂದಲೇ ಆ ಅನ್ನದ ಸ್ವೀಕಾರವೂ, ಜೀವರೂಪದಿಂದ ಆ ಶರೀರದಲ್ಲಿ ಪ್ರವೇಶಿಸಿ ಜಾಗರಣ, ಸ್ವಪ್ನಸುಷುಪ್ತಿಯಲ್ಲಿ ಶರೀರಾಂತರ ಸಂಚಾರದ ಅನುಭವ ಇವೆಲ್ಲವೂ ಪರಮಾತ್ಮನಲ್ಲಿ ಅಧ್ಯಾರೋಪಿತವಾದ ಪ್ರಪಂಚವು. ಆತ್ಮಬೋಧೆಗೆ ಇದೂ ಒಂದು ಸಾಧನ. ಏಕೆಂದರೆ ಈ ಜಗದಂಕುರದಿಂದ ಅದರ ಮೂಲವಾದ ಒಂದು ಆತ್ಮತತ್ವವಿದೆಯೆಂದು ತಿಳಿಯಲು ಸುಲಭವಾಗುತ್ತದೆ. ಇದು ಛಾಂದೋಗ್ಯದಲ್ಲಿ ವಿವೃತವಾಗಿದೆ. (ಛಾಂ–೬–೮–೪) ಅನ್ನದಿಂದ ಜಲದ ಮೂಲವನ್ನೂ, ಜಲದಿಂದ ತೇಜೋಮೂಲವನ್ನೂ, ಅದರಿಂದ ಸನ್ಮೂಲವನ್ನೂ ಶೋಧಿಸು. ಸಕಲ ಪ್ರಾಣಿಜಾತವೆಲ್ಲವೂ ಸನ್ಮೂಲದಿಂದಲೇ ಉಂಟಾಗಿವೆ ಎಂದು ಅಲ್ಲಿ ಹೇಳಿರುತ್ತಾರೆ. ಹೀಗೆ ಅಧ್ಯಾರೋಪದಿಂದ ಆತ್ಮನ ಅಸ್ತಿತ್ವ ಸಿದ್ಧವಾಗುತ್ತದೆ. **ಸ ಜಾತೋ ಭೂತಾನಿ** ಎಂದು ಆರಂಭಿಸಿ **ಪರೋಕ್ಷಪ್ರಿಯಾ ಇವ ಹಿ ದೇವಾಃ** ಎಂಬ ಗ್ರಂಥದವರೆಗೆ ಅಪವಾದವು ಸಂಗೃಹೀತವಾಗಿದೆ. **ತಸ್ಯ ತ್ರಯ ಆವಸಥಾಃ** ಎಂಬ ವಾಕ್ಯದಿಂದ ಜೀವನ ಶರೀರಾಂತರಸಂಚಾರವೂ ಪ್ರತಿಪಾದಿತವಾಗಿದೆ. ಪಿತೃಶರೀರ, ಮಾತೃಶರೀರ, ಸ್ವಶರೀರಗಳೆಂಬ ಮೂರು ಸ್ಥಾನಗಳನ್ನು ಈ ಐದನೆಯ ಅಧ್ಯಾಯದಲ್ಲಿ ವಿವರಿಸುತ್ತಾರೆ.

## ಪುರುಷೇ ಹ ವಾ ಅಯಮಾದಿತೋ ಗರ್ಭೋ ಭವತಿ ಯದೇತದ್ರೇತಃ ॥

**ಯೋಽಯಂ ಶರೀರಂ ಜಿಘೃಕ್ಷುರ್ಜೀವಾತ್ಮಾ ಸೋಽಯಂ ಪುರುಷೇ ಪಿತೃಶರೀರೇ ಪ್ರಥಮತೋ ಗರ್ಭೋ ಭವತಿ। ನ ಚಾತ್ರ ಸ್ತ್ರೀಗರ್ಭವದುದರವೃದ್ಧ್ಯಾ ಸೋಽಭಿವ್ಯಜ್ಯತೇ, ಕಿಂತು ಯದೇತತ್ಪಿತೃಶರೀರೇ ಸಪ್ತಮಧಾತುರೂಪಂ ರೇತೋಽಸ್ತಿ ತದೇವ ಗರ್ಭ ಇತ್ಯುಚ್ಯತೇ । ತಸ್ಮಿನ್ನೇ ರೇತಸಿ ಜನಿಷ್ಯಮಾಣಸ್ಯ ಜೀವಸ್ಯ ಪ್ರವಿಷ್ಟತ್ವಾತ್ । ಸ್ವರ್ಗಾದ್ವಾ ನರಕಾದ್ವಾ ವೃಷ್ಟಿದ್ವಾರಾ ಭೂಮೌ ಸಮಾಗತೋ ಜೀವೋ ವ್ರೀಹಿಯವಾದ್ಯನ್ನದ್ವಾರಾ ಪಿತೃಶರೀರೇ ಪ್ರವಿಶತಿ । ಏತಚ್ಚ ಪಂಚಾಗ್ನಿವಿದ್ಯಾಯಾಂ ಪ್ರಪಂಚೇನಾಮ್ನಾತಮ್। ತಸ್ಮಿಂಶ್ಚ ಪುರುಷಶರೀರೇಽನ್ನರಸಶೋಣಿತಮಾಂಸಾದಿಕ್ರಮೇಣ ಪರಿಣತೇ ರೇತಸ್ಯವಸ್ಥಿತೋ ಭವತಿ ಸೋಽಯಂ ಪುರುಷೇ ಗರ್ಭ ಇತ್ಯುಚ್ಯತೇ ॥**

ಮೊದಲು ಪಿತೃಶರೀರರೂಪಸ್ಥಾನವನ್ನು ವಿವರಿಸುತ್ತಾರೆ. ಶರೀರವನ್ನು ಹೊಂದಲು ಬಯಸುವ ಜೀವಾತ್ಮನು ಮೊದಲು ಪಿತೃಶರೀರದಲ್ಲಿ ಗರ್ಭವಾಗುತ್ತಾನೆ. ಆದರೆ ಸ್ತ್ರೀಗರ್ಭದಂತೆ ಇಲ್ಲಿ ಉದರ ದೊಡ್ಡದಾಗಿ ತೋರುವುದಿಲ್ಲ. ಅವನ್ನು ಶರೀರದಲ್ಲಿ ಯಾವ ಏಳನೆಯ ಧಾತುವಾದ ರೇತಸ್ಸಿದೆಯೋ ಅದೇ ಗರ್ಭವೆಂದು ತಿಳಿಯಬೇಕು. ಸ್ವರ್ಗದಿಂದ ಅಥವಾ ನರಕದಿಂದ ಜೀವನು ಮಳೆಯನೀರಿನ ಮೂಲಕ ಭೂಮಿಗೆ ಬಂದು ಅನ್ನದಮೂಲಕ ಪಿತೃಶರೀರದಲ್ಲಿ ಪ್ರವೇಶಿಸಿ ಅನ್ನರಸ, ರಕ್ತ ಮಾಂಸಾದಿಕ್ರಮದಿಂದ ಪರಿಣತವಾದ ರೇತಸ್ಸಿನಲ್ಲಿರುತ್ತಾನೆ. ಇದು ಪಂಚಾಗ್ನಿವಿದ್ಯಾಪ್ರಕರಣದಲ್ಲಿ ವಿವರಿಸಿದೆ. ಇದನ್ನೇ ಪುರುಷಶರೀರದಲ್ಲಿ ಗರ್ಭವೆಂದು ಹೇಳಿರುವುದು.

**ದೇತತ್ಸರ್ವೇಭ್ಯೋಽಂಗೇಭ್ಯಸ್ತೇಜಃ ಸಂಭೂತಮಾತ್ಮನ್ನ್ಯೇವಾತ್ಮಾನಂ ಬಿಭರ್ತಿ ತದ್ಯದಾ ಸ್ತ್ರಿಯಾಂ ಸಿಂಚತ್ಯಥೈನಜ್ಜನಯತಿ ತದಸ್ಯ ಪ್ರಥಮಂ ಜನ್ಮ ॥**

ತಸ್ಯ ಗರ್ಭಸ್ಯ ಜನ್ಮಪ್ರಕಾರಂ ದರ್ಶಯತಿ—ಪುರುಷೇ ಗರ್ಭತ್ವೇನ ವ್ಯವಸ್ಥಿತಂ ಯದ್ರೇತೋಽಸ್ತಿ ತದೇತತ್ತಸ್ಮಿನ್ಪುರುಷ ಶರೀರ ಆಪಾದಮಸ್ತಕಂ ಸರ್ವೇಭ್ಯೋಽವಯವೇಭ್ಯಃ ಸಾರಭೂತಂ ಸತ್ಸಂಭೂತಂ ನಿರ್ಗತಂ ಭವತಿ । ತಚ್ಚ ಸರ್ವಾವಯವನಿರ್ಗತಂ ರೇತೋಭೂತಂ ಸಾರಮಾತ್ಮಾನಂ ಸ್ವಸ್ಯೈವ ರೂಪಾಂತರ ಭೂತಮಾತ್ಮನ್ಯೇವ ಸ್ವಶರೀರ ಏವಾಸೌ ಪುರುಷೋ ಬಿಭರ್ತಿ ಪೋಷಯತಿ । ತತ್ಪೋಷಿತಂ ರೇತೋಽಗ್ನಿಸಂಪರ್ಕೇಣ ಘೃತಮಿವ ಕಾಮಾಗ್ನಿನಾ ವಿಲೀನಂ ಸದ್ಧೃದಯೇ ಸಮಾಗತ್ಯ ವ್ಯವಸ್ಥಿತಂ ಭವತಿ । ತಾದೃಶಂ ರೇತೋ ಯದರ್ತುಕಾಲೀನೇನ ಗಮನೇನ ಸ್ತ್ರಿಯಾ ಯೋನೌ ಗರ್ಭಾಶಯೇ ಸಿಂಚತಿ, ಅಥ ತದಾನೀಮಯಂ ಪುರುಷ ಏನಜ್ಜೀವಾಂತರಾವಿಷ್ಟಂ ರೇತೋರೂಪಂ ಶರೀರಂ ಜನಯತಿ । ತದೇತದ್ರೇತೋನಿಃಸರಣರೂಪಮಸ್ಯ ರೇತಸ್ಯವಸ್ಥಿತಸ್ಯ ಸಂಸಾರಿಣೋ ಜೀವಸ್ಯ ಪ್ರಥಮಂ ಜನ್ಮೇತ್ಯುಚ್ಯತೇ । "ತಸ್ಯ ತ್ರಯ ಆವಸಥಾಃ" ಇತ್ಯುಕ್ತಾನಾಂ ಮಧ್ಯೇ ಪ್ರಥಮಾದಾವಸಥಾತ್ಪಿತೃಶರೀರರೂಪಾತ್ಸಂಪನ್ನಮಿತಿ ಕೃತ್ವಾ ಪ್ರಥಮಂ ಜನ್ಮ ಭವತಿ ॥

ಪೂರ್ವೋಕ್ತಗರ್ಭದ ಜನ್ಮಪ್ರಕಾರವನ್ನು ವಿವರಿಸುತ್ತಾರೆ. ಪುರುಷಶರೀರದಲ್ಲಿ ಗರ್ಭರೂಪವಾಗಿರುವ ಯಾವ ರೇತಸ್ಸಿದೆಯೋ ಅದು ಆಪಾದಮಸ್ತಕವಾಗಿ ಆ ಪುರುಷಶರೀರದ ಸಕಲಾವಯವಗಳ ಸಾರರೂಪವಾಗಿರುತ್ತದೆ. ಸರ್ವಾವಯವಗಳ ಸಾರವಾದ ಈ ರೇತಸ್ಸು ಆತ್ಮನ ರೂಪಾಂತರವು. ಇದನ್ನು ಪುರುಷನು ತನ್ನ ಶರೀರದಲ್ಲಿ ಸ್ವಸ್ವರೂಪವೆಂದೇ ಧರಿಸಿರುತ್ತಾನೆ. ಈಗ ಪರಿಪೋಷಿತವಾದ ರೇತಸ್ಸು ಅಗ್ನಿಸಂಪರ್ಕದಿಂದ ತುಪ್ಪ ಕರಗುವಂತೆ ಕಾಮಾಗ್ನಿಯಿಂದ ಕರಗಿ ಹೃದಯದಲ್ಲಿ ಬಂದಿರುತ್ತದೆ. ಅದನ್ನು ಋತುಕಾಲದಲ್ಲಿ ಸಂಭೋಗದಿಂದ ಸ್ತ್ರೀಯ ಯೋನಿಯಲ್ಲಿ ಗರ್ಭಾಶಯದಲ್ಲಿ ಇಡುತ್ತಾನೆ. ಆಗಲೇ ಈ ಪುರುಷನು ಜೀವಾಂತರದಿಂದ ಕೂಡಿದ ರೇತೋರೂಪಶರೀರವನ್ನು ಹುಟ್ಟಿಸುತ್ತಾನೆ. ಹೊರಗೆ ಬರುವ ರೇತಸ್ಸಿನಲ್ಲಿರುವ ಸಂಸಾರಿಯಾದ ಜೀವನಿಗೂ ಅದು ಪ್ರಥಮಜನ್ಮವಾಗುತ್ತದೆ. **ತ್ರಯ ಆವಸಥಾಃ** ಎಂದು ಹೇಳಿರುವ ಮೂರು ಸ್ಥಾನಗಳಲ್ಲಿ ಪ್ರಥಮ ... ನ ಪಿತೃಶರೀರದಿಂದ ಸಂಪನ್ನವಾದುದರಿಂದ ಅದೇ ಪ್ರಥಮಜನ್ಮವೆಂದು ತಿಳಿಯಬೇಕು.

**ತತ್‌ಸ್ತ್ರಿಯಾ ಆತ್ಮಭೂಯಂ ಗಚ್ಛತಿ ಯಥಾ ಸ್ವಮಂಗಂ ತಥಾ ತಸ್ಮಾ-ದೇನಾಂ ನ ಹಿನಸ್ತಿ ॥**

ನನು ಸ್ತ್ರೀ ಶರೀರೇ ಪ್ರವಿಷ್ಟಂ ಪರಕೀಯಂ ರೇತಃ ಸ್ತ್ರಿಯಾ ಉಪದ್ರವಕಾರಿಸ್ಯಾಚ್ಛರೀರಲಗ್ನ-ಬಾಣಾಧಿವದಿತ್ಯಾಶಂಕ್ಯಾಹ—ಸ್ತ್ರೀಯೋನೌ ಪ್ರವಿಷ್ಟಂ ತತ್ಪುರುಷರೇತಸ್ತಸ್ಯಾಃ ಸ್ತ್ರಿಯಾ ಆತ್ಮ-ಭೂಯಂ ಸ್ವಶರೀರಭಾವಂ ಗಚ್ಛತಿ । ಯಥಾ ಸ್ವಕೀಯಮಂಗಂ ಸ್ತನಹಸ್ತಾದಿಕಂ ನ ಸ್ವಶರೀರಾತ್ಪೃಥಗ್ಭೂತಂ ತದ್ವತ್ । ತಸ್ಮಾತ್ ಸ್ವಶರೀರತ್ವೇನೈಕೀಭಾವಾತ್ಕಾರಣಾದೇನಾಂ ಸ್ತ್ರಿಯಂ ನ ಹಿನಸ್ತಿ, ಉದರ ಲಗ್ನಬಾಣವದ್ಧಿಂಸಾಂ ನ ಕರೋತಿ ॥

ಶರೀರದಲ್ಲಿ ತಗಲಿದ ಬಾಣಾದಿಗಳಂತೆ ಸ್ತ್ರೀಶರೀರದಲ್ಲಿ ಪ್ರವೇಶಿಸಿದ ಪರಕೀಯ ರೇತಸ್ಸು ಅವಳಿಗೆ ಉಪದ್ರವವನ್ನು ಉಂಟುಮಾಡುವುದಿಲ್ಲವೇ ? ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾರೆ. ಸ್ತ್ರೀಯೋನಿಯಲ್ಲಿ ಪ್ರವೇಶಿಸಿದ ಆ ಪುರುಷನ ರೇತಸ್ಸು ಸ್ತ್ರೀಯ ಶರೀರಭಾವವನ್ನೇ ಹೊಂದುತ್ತದೆ. ಹೇಗೆ ಅವಳ ಸ್ತನಹಸ್ತ ಮುಂತಾದವುಗಳು ಶರೀರದಿಂದ ಬೇರೆಯಾಗಿಲ್ಲವೋ ಹಾಗೆ ಅದೂ ಶರೀರದೊಡನೆ ಐಕ್ಯಹೊಂದಿ ಉದರಕ್ಕೆ ತಗಲಿದ ಬಾಣದಂತೆ ವ್ಯಥೆಯನ್ನುಂಟುಮಾಡುವುದಿಲ್ಲ.

**ಸಾಽಸ್ಯೈತಮಾತ್ಮಾನಮತ್ರ ಗತಂ ಭಾವಯತಿ ಸಾ ಭಾವಯಿತ್ರೀ ಭಾವಯಿತವ್ಯಾ ಭವತಿ ॥**

ತದ್ಗರ್ಭದ್ವಾರೇಣ ಸ್ತ್ರೀಪುರುಷಯೋಃ ಪರಸ್ಪರಮುಪಕಾರ್ಯೋಪಕಾರಕಭಾವಂ ದರ್ಶಯತಿ—ಸಾ ಗರ್ಭಧಾರಿಣೀ ಸ್ತ್ರೀ, ಅತ್ರ ಗತಂ ಸ್ವಶರೀರೇ ಪ್ರವಿಷ್ಟಮಸ್ಯ ಪುರುಷಸ್ಯ ರೇತಃ ಸೇಕ್ತುರೇತಮಾತ್ಮಾನಂ ಪುರುಷರೂಪಂ ಭಾವಯತಿ ಪರಿಪಾಲಯತಿ । ವಿರುದ್ಧಾಶನಾದಿಪರಿತ್ಯಾಗೋಽನುಕೂಲಾನ್ನಾದ್ಯುಪಯೋಗಶ್ಚ ಪರಿಪಾಲನಮ್ । ಯಸ್ಮಾತ್ ಸ್ತ್ರೀ ಗರ್ಭಪರಿಪಾಲನೇನ ಭಾವ-ಯಿತ್ರೀ ಪುರುಷಸ್ಯೈವ ಪಾಲಯಿತ್ರೀ ತಸ್ಮಾತ್ಕಾರಣಾತ್ತೇನ ಪುರುಷೇಣ ಸಾ ಸ್ತ್ರೀ ಭಾವಯಿತವ್ಯಾಽ-ಭೀಷ್ಟಾನ್ನಪಾನವಸ್ತ್ರಾದಿಪ್ರದಾನೇನ ಪಾಲಯಿತವ್ಯಾ ಭವತಿ ॥

ಗರ್ಭದ ಮೂಲಕ ಸ್ತ್ರೀಪುರುಷರಿಗೆ ಪರಸ್ಪರ ಉಪಾಕಾರ್ಯೋಪಕಾರಕಭಾವವನ್ನು ವಿವರಿಸುತ್ತಾರೆ. ಗರ್ಭವನ್ನು ಧರಿಸಿದ ಸ್ತ್ರೀಯು ತನ್ನಲ್ಲಿ ಪ್ರವೇಶಿಸಿದ ಪುರುಷನ ರೇತೋರೂಪ ಆತ್ಮನನ್ನು ಆ ಪುರುಷನೆಂದೇ ಭಾವಿಸುತ್ತಾಳೆ. ಅದಕ್ಕೋಸ್ಕರ ವಿರುದ್ಧವಾದ ಆಹಾರವನ್ನು ಬಿಟ್ಟು ಅದರ ಪರಿಪೋಷಣಕ್ಕೆ ಅನುಕೂಲವಾದ ಆಹಾರವನ್ನೇ ಸ್ವೀಕರಿಸಿ ರಕ್ಷಿಸುತ್ತಾಳೆ. ಹೀಗೆ ಗರ್ಭರಕ್ಷಣೆಯಿಂದ ತನ್ನನ್ನೇ ರಕ್ಷಿಸುವುದರಿಂದ ಪುರುಷನೂ ಅವಳನ್ನು ಅವಳಿಗೆ ಇಷ್ಟವಾದ ಅನ್ನವಸ್ತ್ರಾದಿಗಳಿಂದ ರಕ್ಷಿಸುತ್ತಾನೆ.

**ತಂ ಸ್ತ್ರೀ ಗರ್ಭಂ ಬಿಭರ್ತಿ ಸೋಽಗ್ರ ಏವ ಕುಮಾರಂ ಜನ್ಮನೋಽ-ಗ್ರೇಽಧಿಭಾವಯತಿ ॥**

ಸ್ತ್ರೀಪುರುಷಯೋರುಭಯೋರಪಿ ಪುತ್ರಂ ಪ್ರತ್ಯುಪಕಾರಕತ್ವಂ ದರ್ಶಯತಿ—ತಂ ಪುರುಷ-ರೂಪಂ ಗರ್ಭಂ ಮಾತೃರೂಪಾ ಸ್ತ್ರೀ ಮಹಾಂತಂ ಪ್ರಯಾಸಂ ಸೋಢ್ವಾ ನವ ದಶ ವಾ ಮಾಸಾನ್-ಸ್ವೋದರೇ ಧಾರಯಿತ್ವಾ ಪೋಷಯತಿ । ಸ ಚ ಪಿತಾಽಗ್ರ ಏವ ಪ್ರಸವಾತ್ಪ್ರಾಗೇವ ನಿಷ್ಪನ್ನಂ ಕುಮಾರಂ ಜನ್ಮನೋಗ್ರೇ ಪ್ರಸವಾದೂರ್ಧ್ವಮಧಿಭಾವಯತಿ । ಅಧಿಕತ್ವೇನ ಶಾಸ್ತ್ರೀಯ ಜಾತಕರ್ಮಾದಿನಾ ಸಂಸ್ಕರೋತಿ ॥

ಪುತ್ರನಿಗೆ ತಂದೆತಾಯಿಗಳ ಉಪಕಾರವನ್ನು ವಿವರಿಸುತ್ತಾರೆ. ಆ ಪುರುಷರೂಪಗರ್ಭವನ್ನು ತಾಯಿಯಾದ ಸ್ತ್ರೀಯು ಅತಿಪ್ರಯಾಸವನ್ನು ಸಹಿಸಿ ಒಂಭತ್ತು ಅಥವಾ ಹತ್ತುತಿಂಗಳು ಧರಿಸಿ ಪೋಷಿಸುತ್ತಾಳೆ. ತಂದೆಯು ಪ್ರಸವನಾದೊಡನೆ ಅವನಿಗೆ ಶಾಸ್ತ್ರೀಯವಾದ ಜಾತಕರ್ಮಾದಿಗಳಿಂದ ಸಂಸ್ಕಾರವನ್ನುಂಟುಮಾಡಿ ವಿದ್ಯಾದಿಗಳನ್ನು ಕಲಿಸುತ್ತಾನೆ.

## ಸ ಯತ್ಕುಮಾರಂ ಜನ್ಮನೋಽಗ್ರೇಧಿಭಾವಯತ್ಯಾತ್ಮಾನಮೇವ ತದ್ಭಾ-ವಯತಿ ॥

ಕುಮಾರಸಂಸ್ಕಾರೇಣ ಪಿತುರುಪಯೋಗಂ ದರ್ಶಯತಿ—ಪುತ್ರಸಂಸ್ಕಾರ ಇತಿ ಯದಸ್ತಿ ತೇನ ಪಿತಾ ಸ್ವಸ್ಯೈವ ಸಂಸ್ಕಾರಂ ಕರೋತಿ । ಪುತ್ರಸ್ಯ ಸ್ವದೇಹರೂಪತ್ವಾತ್ । ತಥಾ ಚಾನ್ಯತ್ರ ಶ್ರೂಯತೇ—"ಪತಿರ್ಜಾಯಾಂ ಪ್ರವಿಶತಿ ಗರ್ಭೋ ಭೂತ್ವಾ ಸಮಾತರಮ್ । ತಸ್ಯಾಂ ಪುನರ್ನವೋ ಭೂತ್ವಾ ದಶಮೇ ಮಾಸಿ ಜಾಯತೇ" (ಬೃಹ) ಇತಿ । "ಆತ್ಮಾ ವೈ ಪುತ್ರ ನಾಮಾಸಿ" (ಕೌಷೀ-೧೧) ಇತಿ ಚ ॥

ಕುಮಾರನ ಸಂಸ್ಕಾರದಿಂದ ತಂದೆಗಾಗುವ ಫಲವನ್ನು ವಿವರಿಸುತ್ತಾರೆ. ಪುತ್ರನ ಸಂಸ್ಕಾರವೆಂದರೆ ತಂದೆಯು ತನ್ನ ಸಂಸ್ಕಾರವನ್ನೇ ಮಾಡಿಕೊಳ್ಳುತ್ತಾನೆ. ಏಕೆಂದರೆ ಪುತ್ರನೆಂದರೆ ಬೇರೆಯಲ್ಲ, ತನ್ನ ದೇಹರೂಪವೇ ಪುತ್ರನಾಗಿರುತ್ತಾನೆ. ಇದನ್ನು **ಪತಿರ್ಜಾಯಾಂ ಪ್ರವಿಶತಿ ಗರ್ಭೋ ಭೂತ್ವಾ ಸಮಾತರಮ್ । ತಸ್ಯಾಂ ಪುನರ್ನವೋ ಭೂತ್ವಾ ದಶಮೇ ಮಾಸಿ ಜಾಯತೇ** (ಬೃಹ) ಎಂದೂ, **ಆತ್ಮಾ ವೈ ಪುತ್ರನಾಮಾಸಿ** (ಕೌಷೀ-೧೧) ಇತ್ಯಾದಿ ಶ್ರುತಿಯಲ್ಲಿ ವ್ಯಕ್ತಪಡಿಸಿರುತ್ತಾರೆ.

## ಏಷಾಂ ಲೋಕಾನಾಂ ಸಂತತ್ಯಾ ಏವಂ ಸಂತತಾ ಹೀಮೇ ಲೋಕಾಃ ॥

ನನು ಪುರುಷಸ್ಯೋಪನಯನಾದಿನಾ ಸ್ವಕೀಯಃ ಸಂಸ್ಕಾರಃ ಪೂರ್ವಮೇವ ಸಂಪನ್ನಃ ಕಿಮನೇನ ಪುತ್ರಸಂಸ್ಕಾರೇಣ ಪುತ್ರೋತ್ಪಾದನೇನ ಚೇತ್ಯತ ಆಹ—ಪುತ್ರಪೌತ್ರಪ್ರಪೌತ್ರಾದಯ ಇಮೇ ಜನಾಃ ಲೋಕಾಸ್ತೇಷಾಂ ಲೋಕಾನಾಮವಿಚ್ಛೇದಾಯ ಸಂಸ್ಕೃತಪುತ್ರೋತ್ಪಾದನಮ್ । ಅನೇನ ಪಿತ್ರಾ ಸ್ವೋತ್ಪಾದಿತೇ ಪುತ್ರೇ ಸಂಸ್ಕೃತೇ ಸತಿ ತಥೈವ ಪುತ್ರೋಽಪ್ಯನ್ಯಂ ಪುತ್ರಮುತ್ಪಾದ್ಯ ಸಂಸ್ಕರೋತಿ ಸೋಽಪ್ಯನ್ಯಂ ಪುತ್ರಮಿತ್ಯೇವಮಿಮೇ ಲೋಕಾ ಅವಿಚ್ಛಿನ್ನಾ ಭವಂತಿ । ಅನ್ಯಥಾ ವಿಚ್ಛಿದ್ಯೇರನ್ ॥

ಪುರುಷನಿಗೆ ಉಪನಯನಾದಿಗಳಿಂದ ಸಂಸ್ಕಾರ ಮೊದಲೇ ಆಗಿರುವಾಗ ಈ ಪುತ್ರೋತ್ಪಾದನೆಯ ಮೂಲಕ ಪುತ್ರ ಸಂಸ್ಕಾರದಿಂದ ಪ್ರಯೋಜನವೇನು ? ಎಂದು ಆಶಂಕಿಸಿದರೆ ಅದಕ್ಕೆ ಸಮಾಧಾನ ತೋರಿಸುತ್ತಾರೆ. ಪುತ್ರಪೌತ್ರ (ಮೊಮ್ಮಗ) ಪ್ರಪೌತ್ರ (ಅವನ ಮಗ) ಇತ್ಯಾದಿ ಸಂತತಿಗೆ ಲೋಕವೆಂದು ಹೆಸರು. ಈ ಲೋಕವಿಚ್ಛಿತ್ತಿಯಾಗಬಾರದೆಂದು ಸಂಸ್ಕೃತ ಪುತ್ರೋತ್ಪಾದನೆ ಮಾಡುವುದು. ತಂದೆಯು ಮಗನಿಗೆ ಸಂಸ್ಕಾರಮಾಡಿದರೆ ಪುತ್ರನೂ ತಾನು ಪುತ್ರನನ್ನು ಹುಟ್ಟಿಸಿ ಅವನನ್ನು ಸಂಸ್ಕರಿಸುತ್ತಾನೆ. ಅವನು ತನ್ನ ಮಗನನ್ನು ಸಂಸ್ಕರಿಸುತ್ತಾನೆ. ಹೀಗೆ ಅವಿಚ್ಛಿನ್ನಸಂತತಿ ಬೆಳೆಯುತ್ತದೆ. ಸಂಸ್ಕಾರ ವಿಲ್ಲದಿದ್ದರೆ ಮಧ್ಯದಲ್ಲಿ ವಿಚ್ಛೇದ ಉಂಟಾಗುತ್ತದೆ.

## ತದಸ್ಯ ದ್ವಿತೀಯಂ ಜನ್ಮ ||

**ಮಾತೃಶರೀರಾನ್ನಿರ್ಗಮನಸ್ಯ ಪೂರ್ವೋಕ್ತಜನ್ಮಾಪೇಕ್ಷಯಾ ದ್ವಿತೀಯತ್ವಂ ದರ್ಶಯತಿ—**

ತಾಯಿಯ ಗರ್ಭದಿಂದ ಹೊರಗೆಬರುವುದೇ ಜೀವನ ದ್ವಿತೀಯ ಜನ್ಮವಾಗುತ್ತದೆ.

## ಸೋಽಸ್ಯಾಯಮಾತ್ಮಾ ಪುಣ್ಯೇಭ್ಯಃ ಕರ್ಮಭ್ಯಃ ಪ್ರತಿಧೀಯತೇ ||

**ಜನಕಸ್ಯ ಪುತ್ರಪ್ರಯುಕ್ತಮುಪಯೋಗಂ ದರ್ಶಯತಿ–ಅಸ್ಯ ಪಿತುರ್ದ್ವಾವಾತ್ಮಾನೌ ದೇಹೌ, ತಯೋರ್ಮಧ್ಯೇಽಯಮಾತ್ಮಾ ಪುತ್ರರೂಪೋ ದೇಹಃ ಪುಣ್ಯೇಭ್ಯಃ ಕರ್ಮಭ್ಯಃ ಶಾಸ್ತ್ರೋಕ್ತ-ಕರ್ಮನಿಷ್ಪಾದನಾರ್ಥಂ ಪ್ರತಿಧೀಯತೇ ಸ್ವಸ್ಯ ಪ್ರತಿನಿಧಿತ್ವೇನ ಗೃಹೇ ಸ್ಥಾಪ್ಯತೇ ||**

ತಂದೆಗೆ ಮಗನಿಂದುಂಟಾದ ಪ್ರಯೋಜನವನ್ನು ವಿವರಿಸುತ್ತಾರೆ. ಪಿತೃವಿಗೆ ಎರಡು ಶರೀರಗಳಿರುತ್ತವೆ. ಅವುಗಳಲ್ಲಿ ಪುತ್ರರೂಪದೇಹವನ್ನು ಶಾಸ್ತ್ರೋಕ್ತಕರ್ಮಗಳ ಅನುಷ್ಠಾನಕ್ಕೋಸ್ಕರ ತನ್ನ ಪ್ರತಿನಿಧಿಯಾಗಿ ಮನೆಯಲ್ಲಿ ಇಡುತ್ತಾನೆ.

## ಅಥಾಸ್ಯಾಯಮಿತರ ಆತ್ಮಾ ಕೃತಕೃತ್ಯೋ ವಯೋಗತಃ ಪ್ರೈತಿ ||

**ನನು ಕಿಮನೇನ ಪ್ರತಿನಿಧಿನಾ ಸ್ವಯಮೇವ ಕುತೋ ನ ಕರೋತೀತ್ಯತ ಆಹ—ಅಸ್ಯ ಪಿತು-ರಿತರ ಆತ್ಮಾ ಸ್ಥವಿರೋ ದೇಹಃ ಕೃತಕೃತ್ಯಃ ಕೃತಾನ್ಯೇತಜ್ಜನ್ಮಪ್ರಯುಕ್ತಾನಿ ಕೃತ್ಯಾನಿ ಸರ್ವಾಣಿ ಯೇನಾಸೌ ಕೃತಕೃತ್ಯಃ | ಲೌಕಿಕಾನಾಂ ಕುಟುಂಬಪೋಷಣಾದೀನಾಂ ಶಾಸ್ತ್ರೀಯಾಣಾಮಗ್ನಿಹೋ-ತ್ರಾದೀನಾಂ ಚ ನಿಷ್ಪಾದಿತತ್ವಾತ್ಕೃತಕೃತ್ಯತ್ವಮ್ | ವಯೋಗತೋ ವಯಸಾ ಪೂರ್ವಕರ್ಮಸಂಪಾ-ದಿತೇನಾಯುಷಾ ಹೀನಃ ಪ್ರೈತಿ ಮ್ರಿಯತೇ | ಅತಃ ಪುತ್ರದೇಹೇನೈವ ಪುಣ್ಯಂ ಕರ್ತವ್ಯಂ ನ ತು ಮೃತೇನ ಪಿತೃದೇಹೇನ ಕರ್ತುಂ ಶಕ್ಯಮ್ ||**

ಪುತ್ರರೂಪಪ್ರತಿನಿಧಿಯನ್ನು ಏಕೆಮಾಡಬೇಕು ? ತಾನೇ ಕರ್ಮ ಮಾಡಿದರೆ ಆಗುವುದಿಲ್ಲವೇ ? ಎಂದು ಆಶಂಕಿಸಿದರೆ ಅದಕ್ಕೆ ಸಮಾಧಾನತೋರಿಸುತ್ತಾರೆ. ಪಿತೃವಿದ ಇನ್ನೊಂದು ಶರೀರ ಅಂದರೆ ಸ್ವಕೀಯ ಶರೀರವು ಮುಪ್ಪಾಗಿ ಈ ಜನ್ಮದಲ್ಲಿ ಮಾಡಬೇಕಾದಕಾರ್ಯಗಳನ್ನೂ ಮಾಡಿ ಕೃತಕೃತ್ಯವಾಗಿರುತ್ತದೆ. ಕುಟುಂಬಪೋಷಣಾದಿ ಲೌಕಿಕಕಾರ್ಯಗಳನ್ನೂ, ಅಗ್ನಿ ಹೋತ್ರಾದಿಶಾಸ್ತ್ರೀಯಕಾರ್ಯಗಳನ್ನೂ ನಿರ್ವಹಿಸಿದುದರಿಂದ ಅದು ಕೃತಕೃತ್ಯ. ಪೂರ್ವಕರ್ಮಸಂಪಾದಿತವಾದ ಆಯುಸ್ಸು ಮುಗಿದುದರಿಂದ ಮರಣ ಹೊಂದುತ್ತಾನೆ ಆದುದರಿಂದ ಪುತ್ರದೇಹದಿಂದಲೇ ಪುಣ್ಯಕಾರ್ಯಗಳನ್ನು ಮಾಡಬೇಕು. ಮೃತವಾದ ಪಿತೃದೇಹದಿಂದ ಇದನ್ನು ಮಾಡಲು ಸಾಧ್ಯವಿಲ್ಲ.

ಸ ಇತಃ ಪ್ರಯನ್ನೇವ ಪುನರ್ಜಾಯತೇ ತದಸ್ಯ ತೃತೀಯಂ ಜನ್ಮ ||

ಪೂರ್ವೋಕ್ತ ಜನ್ಮದ್ವಯಮಪೇಕ್ಷ್ಯ ಜನ್ಮಾಂತರಂ ದರ್ಶಯತಿ—ಸ ವೃದ್ಧಃ ಪಿತೇತೋಽಸ್ಮಾಜ್ಜರಠದೇಹಾತ್ಪ್ರಯನ್ನೇವ ನಿರ್ಗಚ್ಛನ್ನೇವ ಸ್ವರ್ಗೇ ನರಕೇ ಮನುಷ್ಯಲೋಕೇ ವಾ ಸ್ವಕರ್ಮಾನುಸಾರೇಣ ಪುನರ್ಜಾಯತೇ ನತ್ವಸ್ಮಾದ್ದೇಹಾನ್ನಿಷ್ಕ್ರಾಂತಸ್ಯ ಜನ್ಮಾಂತರಾಯ ಕಾಲವ್ಯವಧಾನಮಸ್ತಿ | ಅಸ್ಮಿನ್ನೇವ ಶರೀರೇ ಸ್ಥಿತ್ವಾ ಮನಸಾ ದೇಹಾಂತರಂ ಸ್ವೀಕೃತಸ್ಯ ಪಶ್ಚಾದನುಂ ದೇಹಂ ಪರಿತ್ಯಜತಿ | ಯಥಾ ಜಲೂಕಾ ಮುಖೇನ ತೃಣಾಂತರಮವಷ್ಟಭ್ಯ ತತಃ ಪೃಷ್ಠಭಾಗಮುಪಸಂಹರತಿ ತದ್ವತ್ | ತಥಾ ಚ ವಾಜಸನೇಯಿನಃ ಸಮಾಮನಂತಿ—"ತದ್ಯಥಾ ತೃಣಜಲಾಯುಕಾ ತೃಣಸ್ಯಾಂತಂ ಗತ್ವಾನ್ಯಮಾಕ್ರಮಮಾಕ್ರಮ್ಯಾತ್ಮಾನಮುಪಸಂಹರತ್ಯೇವಮೇವಾಯಮಾತ್ಮೇದಂ ಶರೀರಂ ನಿಹತ್ಯಾವಿದ್ಯಾಂ ಗಮಯಿತ್ವಾನ್ಯಮಾಕ್ರಮಮಾಕ್ರಮ್ಯಾತ್ಮಾನಮುಪಸಂಹರತಿ" (ಬೃಹ-೪-೪-೩) ಇತಿ | ತದ್ಯಥೋಕ್ತಂ ಪುನರ್ಜನನರೂಪಮಸ್ಯ ಸಂಸಾರಿಣ ಆತ್ಮನಸ್ತೃತೀಯಂ ಜನ್ಮೇತ್ಯುಚ್ಯತೇ | ಯದ್ಯಪಿ ಪೂರ್ವೋಕ್ತಂ ಜನ್ಮದ್ವಯಂ ಪುತ್ರದೇಹಸ್ಯೇದಂ ತು ದೇಹಾಂತರಸ್ಯ ತಥಾಪಿ ಪಿತೃಪುತ್ರೋಪಾಧ್ಯೋರೇವ ಭಿನ್ನತ್ವಾದುಪಾಧ್ಯುಪಲಕ್ಷಿತಸ್ಯಾತ್ಮನಃ | ಏಕತ್ವಮಭಿಪ್ರೇತ್ಯೈಕಸ್ಯ ಜನ್ಮತ್ರಯಮಿತ್ಯುಪಚರ್ಯತೇ | ಯದ್ವಾ ಪಿತುಃ ಸಕಾಶಾದ್ರೇತೋರೂಪೇಣ ಮಾತುಃ ಸಕಾಶಾತ್ಕುಮಾರರೂಪೇಣ ಚ ಪುತ್ರೇ ಯಜ್ಜನ್ಮದ್ವಯಮುದಾಹೃತಂ ತೇನೈವ ನ್ಯಾಯೇನ ಪಿತುರಪಿ ಸ್ವಕೀಯಮಾತೃ (ತಾ) ಪಿತೃಸಕಾಶಾಜ್ಜನ್ಮದ್ವಯಮರ್ಥಾದುಕ್ತಮೇವೇತ್ಯಭಿಪ್ರೇತ್ಯ ತದಪೇಕ್ಷಯಾ ಪಿತುರಿದಂ ತೃತೀಯಂ ಜನ್ಮ ಪುತ್ರಸ್ಯ ತು ಜನ್ಮದ್ವಯಂ ಸಾಕ್ಷಾದ್ದೃಷ್ಟಂ ಪಿತೃದೃಷ್ಟಾಂತೇನ ತು ಮರಣಾದೂರ್ಧ್ವಂ ತೃತೀಯಂ ಜನ್ಮ ಭವಿಷ್ಯತಿ | ಏವಂ ಸರ್ವಸ್ಯಾಪಿ ಜನ್ಮತ್ರಯಂ ಪುನಃ ಪುನರಾವರ್ತತೇ | ಅನೇನ ಜನ್ಮತ್ರಯೋಪವರ್ಣನೇನ ಸಂಸಾರಾದ್ವಿರಕ್ತಿರುಪಜಾಯತೇ ನ ಹಿ ಮಾತಾಪಿತೃಮಲದ್ವಯರೂಪದೇಹಸ್ಯ ನಿರಂತರಧಾರಣಾದನ್ಯದಧಿಕಂ ಜುಗುಪ್ಸಿತಂ ವೈರಾಗ್ಯಕಾರಣಮುದಾಹರ್ತುಂ ಶಕ್ಯಮ್ ||

ಪೂರ್ವದಲ್ಲಿ ಎರಡು ಜನ್ಮಗಳನ್ನು ಹೇಳಿ ಮೂರನೆಯಜನ್ಮವನ್ನು ವಿವರಿಸುತ್ತಾರೆ. ವೃದ್ಧನಾದ ಪಿತೃವು ಈ ಜೀರ್ಣಶರೀರದಿಂದ ಹೊರಗೆ ಹೊರಟವನೇ ಸ್ವರ್ಗದಲ್ಲಿ ಅಥವಾ ನರಕದಲ್ಲಿ ತನ್ನ ಕರ್ಮಾನುಗುಣವಾಗಿ ಪುನಃ ಹುಟ್ಟುತ್ತಾನೆ ಇನ್ನೊಂದು ಜನ್ಮವನ್ನು ಸ್ವೀಕರಿಸಲು ಕಾಲಾಂತರವ್ಯವಧಾನವಿರುವುದಿಲ್ಲ. ಜಿಗಣೆಯು ಶರೀರವನ್ನುದ್ದವಾಗಿಮಾಡಿಕೊಂಡು ಮುಖದಿಂದ ಇನೊಂದು ಹುಲ್ಲುಕಡ್ಡಿ ಮುಂತಾದವುಗಳನ್ನು ಹಿಡಿದು ಆಮೇಲೆ ಪೃಷ್ಠಭಾಗ ಬಿಡುವಂತೆ ಈ ಶರೀರದಲ್ಲಿರುವಾಗಲೆ ಮನಸ್ಸಿನಿಂದ ದೇಹಾಂತರವನ್ನು ಸ್ವೀಕರಿಸಿ ಆಮೇಲೆ ಈ ಶರೀರವನ್ನು ಬಿಡುತ್ತಾನೆ. ಈ ವಿಷಯ ಬೃಹದಾರಣ್ಯಕದಲ್ಲಿ ವಿಶದವಾಗಿ ವಿವರಿಸಿದೆ. (ಬೃಹ-೪-೪-೩) ಇದೇ ಸಂಸಾರಿಯಾದ ಜೀವನ ಮೂರನೆಯ ಜನ್ಮವಾಗುತ್ತದೆ. ಯದ್ಯಪಿ ಹಿಂದಿನ ಎರಡುಜನ್ಮ ಪುತ್ರದೇಹಕ್ಕೂ, ಮೂರನೆಯಜನ್ಮ ದೇಹಾಂತರಕ್ಕೂ ತೋರುತ್ತದೆ. ಆದರೂ ಪಿತೃಪುತ್ರ ಎಂದು ಎರಡು ಉಪಾಧಿ ಬೇರೆಯಾಗಿದ್ದರೂ ಉಪಾಧಿಯಿಂದ ಉಪಲಕ್ಷಿತನಾದ ಆತ್ಮನು ಒಬ್ಬನೇ ಆದುದರಿಂದ ಮೂರು ಜನ್ಮ ಸಂಗತವಾಗಿದೆ. ಅಥವಾ ತಂದೆಯಿಂದ ರೇತೋರೂಪದಿಂದಲೂ, ತಾಯಿಯಿಂದ ಕುಮಾರರೂಪದಿಂದಲೂ ಪುತ್ರನಿಗೆ

ಯಾವ ಎರಡು ಜನ್ಮ ಹಿಂದೆ ಉದಾಹೃತವಾಗಿದೆಯೋ ಅದೇ ನ್ಯಾಯದಿಂದ ತಂದೆಗೂ ತನ್ನ ಮಾತಾಪಿತೃಗಳಿಂದ ಎರಡು ಜನ್ಮಗಳ ಅರ್ಥಾತ್ ಸಿದ್ಧವಾಗಿ ಮರಣಾನಂತರದ ಜನ್ಮದಿಂದ ಮೂರನೇ ಜನ್ಮ ಸಂಗತವಾಗುತ್ತದೆ. ಹೀಗೆ ಎಲ್ಲಾ ಸಂಸಾರಿಯಾದ ಜೀವಿಗೂ ಈ ಮೂರುಜನ್ಮಗಳು ಪುನಃಪುನಃ ಆವೃತ್ತವಾಗುತ್ತವೆ. ಈರೀತಿಯಾದ ಜನ್ಮವನ್ನು ತಿಳಿಯುವುದರಿಂದ ಸಂಸಾರದಲ್ಲಿ ವಿರಕ್ತಿಯುಂಟಾಗುತ್ತದೆ. ಪುನಃಪುನಃ ಮಲಮೂತ್ರಾದಿಗಳಿಂದ ಕೂಡಿದ ಮಾತಾಪಿತೃಗಳ ಶರೀರದಲ್ಲಿದ್ದು ಬರುವುದೆಂದರೆ ಯಾರಿಗೆ ತಾನೇ ವೈರಾಗ್ಯ ಬರುವುದಿಲ್ಲ. ಇದಕ್ಕಿಂತ ವೈರಾಗ್ಯವನ್ನು ಹುಟ್ಟಿಸುವುದು ಬೇರೆ ಏನಿದೆ? ಎಂದು ವಿಷ್ಣುಪುರಾಣದಲ್ಲಿಯೂ ವಿವರಿಸಿದೆ.

ಅಥ ಏವ ವಿಷ್ಣುಪುರಾಣೆ ಪಠ್ಯತೇ—

'ಸ್ವದೇಹಾಶುಚಿಗಂಧೇದ ನ ವಿರಜ್ಯೇತ ಯಃ ಪುಮಾನ್ ।
ವಿರಾಗಕಾರಣಂ ತಸ್ಯ ಕಿಮನ್ಯದುಪದಿಶ್ಯತೇ ॥' ಇತಿ

**ತದುಕ್ತಮೃಷಿಣಾ ॥**

ತಸ್ಯೈತಸ್ಯ ಜುಗುಪ್ಸಿತಸ್ಯ ಸಂಸಾರಸ್ಯ ಜ್ಞಾನಮಂತರೇಣ ವಿನಾಶಾಭಾವಂ ತತ್ವಜ್ಞಾನೇನ ನಿವೃತ್ತಿಂ ಚ ದ್ಯೋತಯಿತುಂ ಮಂತ್ರಮುದಾಹರತಿ—"ಪುರುಷೇ ಹ ವೈ" (ಐ. ಆ. ೨-ಅ. ೫-ಖಂ. ೧) ಇತ್ಯಾರಭ್ಯ "ತೃತೀಯಂಜನ್ಮ" ಇತ್ಯಂತೇನ ಗ್ರಂಥೇನ ಸಂಸಾರಸ್ಯ ಯತ್ಕಷ್ಟತ್ವಮುಪವರ್ಣಿತಂ ಯಚ್ಚ ಸಂಸಾರನಿವರ್ತಕಂ ತತ್ತ್ವಜ್ಞಾನಮುತ್ತರತ್ರ ವಿವಕ್ಷಿತಂ ತದುಭಯಮಪ್ಯರ್ಥಜಾತಂ ಕೇನಚಿನ್ಮಂತ್ರೇಣಾಭಿಹಿತಮ್ ॥

ಹೇಯವಾದ ಈ ಸಂಸಾರವು ಜ್ಞಾನವಿಲ್ಲದೆ ನಿವೃತ್ತಿಯಾಗಲಾರದು. ಆದುದರಿಂದ ತತ್ವಜ್ಞಾನದಿಂದಲೇ ನಿವೃತ್ತಿಯನ್ನು ತಿಳಿಸಲು ಮಂತ್ರವನ್ನು ಉದಾಹರಿಸುತ್ತಾರೆ. **ಪುರುಷೇಹವೈ** (ಐ. ಆ. ೨-೫-೧) ಎಂದು ಆರಂಭಿಸಿ **ತೃತೀಯಂ ಜನ್ಮ** ಎಂಬ ಗ್ರಂಥದವರೆಗೆ ವರ್ಣಿಸಿದ ಈ ಸಂಸಾರದ ದುಃಖವೂ, ಆ ಸಂಸಾರವನ್ನು ಹೋಗಲಾಡಿಸುವ ತತ್ವಜ್ಞಾನವೂ ಮುಂದೆ ವಿವೃತವಾಗುತ್ತದೆ. ಇವೆರಡರ್ರೂ ಒಂದು ಮಂತ್ರದಲ್ಲಿ ಹೇಳಿರುತ್ತಾರೆ.

**ಗರ್ಭೇ ನು ಸನ್ನನ್ವೇಷಾಮವೇದಮಹಂ ದೇವಾನಾಂ ಜನಿಮಾನಿ ವಿಶ್ವಾ ।**
**ಶತಂ ಮಾಪುರ ಆಯಸೀರರಕ್ಷನ್ನಧಃ ಶ್ಯೇನೋ ಜವಸಾ ನಿರದೀಯಮಿತಿ ॥**

ತಮೇತಂ ಮಂತ್ರಂ ಪಠತಿ—ಅಹಂ ವಾಮದೇವಾಖ್ಯೋ ಮುನಿರ್ಗರ್ಭೇ ನು ಮಾತುರ್ಗರ್ಭೇ ಏವಾವಸ್ಥಿತಃ ಸನ್ನೇಷಾಮಗ್ನಿವಾಯ್ವಾದಿತ್ಯಾದೀನಾಂ ದೇವಾನಾಂ ವಿಶ್ವಾ ಜನಿಮಾನಿ ಸರ್ವಾಣ್ಯಪಿ ಜನ್ಮಾನ್ಯನ್ವವೇದಮನುಕ್ರಮೇಣ ವಿದಿತವಾನಸ್ಮಿ । "ಮುಖಾದ್ವಾಗ್ವಾಚೋಽಗ್ನಿಃ" (ಐ. ಆ. ೨-ಅ. ೪-ಖಂ. ೧) ಇತ್ಯಾದಿಶ್ರುತಿಪ್ರತಿಪಾದಿತಂ ಪರಮಾತ್ಮನಾ ಸಂಪಾದಿತಂ ದೇವಾನಾಂ ಜನ್ಮ ಜ್ಞಾತವಾನಸ್ಮಿ ಔಪನಿಷದಮಾತ್ಮಜ್ಞಾನಂ ಮಮ ಸಂಪನ್ನಮಿತ್ಯರ್ಥಃ । ಅಥ ಏತಸ್ಮಾದಾತ್ಮಜ್ಞಾನೋದಯಾದಧಸ್ತಾನ್ಮಾಂ ವಾಮದೇವಮಾಯಸೀರ್ಲೋಹನಿರ್ಮಿತಶೃಂಖಲಾಸಮಾನಾಃ ಶತಂ ಪುರಃ ಶತಸಂಖ್ಯಾಕಾನಿ ಶರೀರಾಣ್ಯರಕ್ಷನ್ । ಯಥಾ ಕಾರಾಗೃಹೇಽವಸ್ಥಾಪಿತತಸ್ಕರಂ ಪ್ರಬಲಂ ಬಹ್ವ್ಯಃ ಶೃಂಖಲಾಃ ಪಲಾಯನಾದ್ರಕ್ಷಂತಿ ಏವಂ ಶತಸಂಖ್ಯೋ-

ಪಲಕ್ಷಿತಾನ್ಯನಂತಾನಿ ಶರೀರಾಣಿ ಯಥಾಽಹಂ ಮುಕ್ತೋ ನ ಭವಾಮಿ ತಥೈವಾರಕ್ಷನ್ । ಇದಾನೀಂ ಗುರು-ಶಾಸ್ತ್ರಪ್ರಸಾದಾಲ್ಲಬ್ಧತತ್ತ್ವವಿದ್ಯಾಯುಕ್ತೋಽವಿದ್ಯಾಮಯಾತ್ಸಂಸಾರಾಜ್ಞ್ಯೇನ ಇವ ಜಾಲಂ ಭಿತ್ತ್ವಾ ಜವಸಾ ನಿರದೀಯಂ ತ್ವರಯಾ ನಿರ್ಗತೋಽಸ್ಮಿ । ಇತಿಶಬ್ದೋ ಮಂತ್ರಸಮಾಪ್ತ್ಯರ್ಥ ॥

ಪೂರ್ವೋಕ್ತವಾದ ಮಂತ್ರವನ್ನು ಹೇಳುತ್ತಾರೆ. **ಗರ್ಭೇ ನು ಸನ್ನನ್ವೇಷಾಂ** (ಋ. ಸಂ. ೪–೨೭–೧) ಎಂಬುದೇ ಆ ಮಂತ್ರ. ವಾಮದೇವನೆಂಬ ಮುನಿಯಾದ ನಾನು ತಾಯಿಯ ಗರ್ಭದಲ್ಲಿದ್ದವನೇ ಅಗ್ನಿ ವಾಯುಸೂರ್ಯಮುಂತಾದ ದೇವತೆಗಳ ಸಕಲ ಜನ್ಮವನ್ನೂ ಕ್ರಮವಾಗಿ ತಿಳಿದಿರುತ್ತೇನೆ. **ಮುಖಾದ್ವಾಗ್ವಾಚೋಽಗ್ನಿಃ** ಇತ್ಯಾದಿಶ್ರುತಿಯಲ್ಲಿ ಪ್ರತಿಪಾದಿತವಾದ ಪರಮಾತ್ಮನಿಂದುಂಟಾದ ದೇವತೆಗಳ ಜನ್ಮವನ್ನು ತಿಳಿದಿರುತ್ತೇನೆ. ಉಪನಿಷತ್ತಿನಿಂದ ಉಂಟಾದ ಆತ್ಮಜ್ಞಾನವನ್ನು ಗಳಿಸಿರುತ್ತೇನೆ ಎಂದು ತಾತ್ಪರ್ಯ. ಈ ಆತ್ಮಜ್ಞಾನಪ್ರಾಪ್ತವಾಗಬೇಕಾದರೆ ಮೊದಲು ಲೋಹದ ಸಲಾಕೆಗಳುಳ್ಳ ಪಂಜರಕ್ಕೆ ಸಮಾನವಾದ ಶತಸಂಖ್ಯಾಕಗಳಾದ ಶರೀರಗಳು ಬಂಧಿಸಿ ರಕ್ಷಿಸಿದ್ದುವು. ಕಾರಾಗೃಹದಲ್ಲಿ ಕೂಡಿಟ್ಟ ಕಳ್ಳನನ್ನು ಹೇಗೆ ಲೋಹದ ಸಲಾಕೆಗಳು ಪಲಾಯನಮಾಡದಂತೆ ರಕ್ಷಿಸುವವೋ ಅದರಂತೆ ಅನಂತಶರೀರಗಳು ನಾನು ಮುಕ್ತಿಹೊಂದದಂತೆ ತಡೆದಿದ್ದವು. ಈಗ ಗುರುಶಾಸ್ತ್ರಾದಿಗಳಿಂದ ತತ್ತ್ವವಿದ್ಯೆಯನ್ನು ಸಂಪಾದಿಸಿದವನಾಗಿ ಅವಿದ್ಯಾರೂಪಸಂಸಾರದಿಂದ ಗಿಡುಗವು ಬಲೆಯನ್ನು ಕತ್ತರಿಸಿ ಹೊರಗೆ ಹೋಗುವಂತೆ ಬಿಡುಗಡೆ ಹೊಂದಿರುತ್ತೇನೆ. ಇತಿಶಬ್ದವು ಮಂತ್ರಸಮಾಪ್ತಿಯನ್ನು ಸೂಚಿಸುತ್ತದೆ.

**ಗರ್ಭ ಏವೈತಚ್ಛಯಾನೋ ವಾಮದೇವ ಏವಮುವಾಚ ಸ ಏವಂ ವಿದ್ವಾನಸ್ಮಾಚ್ಛರೀರಭೇದಾದೂರ್ಧ್ವಂ ಉತ್ಕ್ರಮ್ಯಾಮುಷ್ಮಿನ್-ಸ್ವರ್ಗೇ ಲೋಕೇ ಸರ್ವಾನ್ಕಾಮಾನಾಪ್ತ್ವಾಽಮೃತಃ ಸಮಭವತ್ಸಮ-ಭವತ್ ॥**

ಅಸ್ಯ ಮಂತ್ರಸ್ಯ ತಾತ್ಪರ್ಯಂ ದರ್ಶಯತಿ—ಅಹಮಿತಿ ಮಂತ್ರೇ ಯೋಽಭಿಹಿತಃ ಸ ವಾಮದೇವೋ ಮಾತೃಗರ್ಭ ಏವ ಶಯಾನಃ ಸನ್ನೇತತ್ಪೂರ್ವೋಕ್ತಮಂತ್ರಾರ್ಥಜಾತಮೇವಮುವಾಚ । ಸ ವಾಮದೇವ ಏವಂ ಮಂತ್ರೋಕ್ತಪ್ರಕಾರೇಣಾತ್ಮತತ್ತ್ವಂ ವಿದ್ವಾನ್ ಪ್ರಾರಬ್ಧಕರ್ಮಣಿ ಕ್ಷೀಣೇ ಸತ್ಯಸ್ಮಾಚ್ಛರೀರಭೇದಾದ್ದೇಹ ವಿನಾಶಾದೂರ್ಧ್ವಮು (ರ್ಧ್ವ ಉ)ತ್ತರಕಾಲೇವಸ್ಥಿತಃ ಸರ್ವಸ್ಮಾತ್ಸಂಸಾರಬಂಧಾದುತ್ಕ್ರಮ್ಯಾಮುಷ್ಮಿನ್ನಿಂದ್ರಿಯಾಗೋಚರೇ ಸ್ವರ್ಗೇ ಸುಷ್ಠು ತತ್ತ್ವಜ್ಞಾನೇನಾರ್ಜಿತೇ ಲೋಕೇ ಸ್ವಪ್ರಕಾಶಕತ್ವೇನಾವಲೋಕ್ಯಮಾನೇ ಸ್ವರೂಪೇ ಸರ್ವಾನ್ಕಾಮಾನ್ ತೈತ್ತಿರೀಯಕೇ ಪ್ರೋಕ್ತಾನ್ಸಾರ್ವಭೌಮಾದಿ ಹಿರಣ್ಯಗರ್ಭಪರ್ಯಂತಗತಾನ್ಸರ್ವಾನಾನಂದಾನಾಪ್ತ್ವಾ ಪರಮಾನಂದಸ್ವರೂಪಬ್ರಹ್ಮಾತ್ಮತ್ವೇನ ಪ್ರಾಪ್ಯಾಮೃತೋ ಮರಣರಹಿತಃ ಸಮಭವತ್ । ಯದ್ಯಪಿ ಗರ್ಭೇ ಗುರು-ಶಾಸ್ತ್ರೋಪದೇಶೋ ನಾಸ್ತಿ ತಥಾಽಪಿ ಜನ್ಮಾಂತರೋಪದೇಶಸ್ಯ ಕೇನಚಿತ್ಪ್ರಬಲಕರ್ಮಣಾ ತದಾನೀಂ ಪ್ರತಿಬದ್ಧಸ್ಯ ಗರ್ಭೇ ಪ್ರತಿಬಂಧಕ್ಷಯಮಪೇಕ್ಷ್ಯ ಜ್ಞಾನೋತ್ಪಾದಕತ್ವಂ ಸಂಭವತಿ। ತಥಾ ಚ ಭಗವತಾ ವ್ಯಾಸೇನ ಸೂತ್ರಿತಮ್—“ಐಹಿಕಮಪ್ಯಪ್ರಸ್ತುತಪ್ರತಿಬಂಧೇ ತದ್ದರ್ಶನಾತ್” (ಬ್ರ–ಸೂ–೩–೪–

**ಪಾ-೪-ಸೂ-೫೧-ಅಧಿ-೧೬) ಇತಿ । ಪ್ರಸ್ತುತಪ್ರತಿಬಂಧಾಭಾವೇ ಸತಿ ಯಸ್ಮಿಙ್ಜನ್ಮನ್ಯುಪದೇಶಸ್ತಸ್ಮಿನ್ನೇವ ಜನ್ಮನಿ ಜ್ಞಾನಂ ಭವತಿ, ಅನ್ಯಥಾ ಜನ್ಮಾಂತರೇ । ಕುತಃ । ವಾಮದೇವೇ ತದ್ದರ್ಶನಾದಿತಿ ಸೂತ್ರಾರ್ಥಃ । ಯಾದ್ಯಪಿ ಮುಕ್ತೌ ಕಾಮಾ ವಿಷಯಾನಂದಾ ನ ಸಂತಿ ತಥಾಽಪಿ ವಿದಯಾನಂದಾನಾಂ ಬ್ರಹ್ಮಾನಂದಲೇಶತ್ವೇನ ತಸ್ಮಿನ್ನಂತರ್ಭಾವಾದ್ಬ್ರಹ್ಮಾನಂದಪ್ರಾಪ್ತ್ಯಾ ಸರ್ವಕಾಮಪ್ರಾಪ್ತಿರುಪಚರ್ಯತೇ। ತತ್ವಜ್ಞಾನಿನೋ ವರ್ತಮಾನದೇಹಪಾತಾದೂರ್ಧ್ವಂ ದೇಹಾಂತರಸಂಬಂಧಸ್ಯಾಭಾವೇನ ದೇಹಪ್ರಾಣವಿಯೋಗರೂಪಸ್ಯ ಮರಣಸ್ಯಾಪ್ರಸಕ್ತತ್ವಾದಮೃತತ್ವಂ ದ್ರಷ್ಟವ್ಯಮ್ । ಸಮಭವದಿತ್ಯಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ॥**

ಪೂರ್ವೋಕ್ತಮಂತ್ರದ ತಾತ್ಪರ್ಯವನ್ನು ವಿವರಿಸುತ್ತಾರೆ. ಅಹಂಶಬ್ದದಿಂದ ಹೇಳಿದ ಆ ವಾಮದೇವಮುನಿಯು ತಾಯಿಯ ಗರ್ಭದಲ್ಲಿಯೇ ಮಲಗಿದ್ದು ಪೂರ್ವೋಕ್ತಮಂತ್ರಾರ್ಥಸಮುದಾಯವನ್ನು ಹೇಳಿದನು. ಮಂತ್ರದಲ್ಲಿ ಹೇಳಿದಂತೆ ಅವನು ಆತ್ಮತತ್ವವನ್ನು ದಿಳಿದು ಪ್ರಾರಬ್ಧಕರ್ಮಗಳು ಕ್ಷೀಣವಾದುದರಿಂದ ದೇಹನಾಶವಾದೊಡನೆ ಸರ್ವಸಂಸಾರಬಂಧನವನ್ನು ಕಳೆದುಕೊಂಡು, ಇಂದ್ರಿಯಕ್ಕೆ ಗೋಚರವಾಗದ ತತ್ತ್ವಜ್ಞಾನದಿಂದ ಗಳಿಸಿದ ಲೋಕದಲ್ಲಿ ತೈತ್ತರೀಯದಲ್ಲಿ ವಿವರಿಸಿದಂತೆ ಸಾರ್ವಭೌಮಾದಿ ಹಿರಣ್ಯಗರ್ಭನವರೆಗಿನ ಸಕಲಾನಂದಗಳನ್ನೂ ಹೊಂದಿ, ಪರಮಾನಂದರೂಪಬ್ರಹ್ಮಾತ್ಮಭಾವದಿಂದ ಮರಣರಹಿತನಾದನು. ಗರ್ಭದಲ್ಲಿ ಗುರುಶಾಸ್ತ್ರೋಪದೇಶಾದಿಗಳು ಇಲ್ಲದಿದ್ದರೂ ಜನ್ಮಾಂತರದಉಪದೇಶವು ಪ್ರಬಲವಾದ ಕರ್ಮದಿಂದ ಅಲ್ಲಿಯವರೆಗೆ ಪ್ರತಿಬದ್ಧವಾಗಿದ್ಧರೂ, ಗರ್ಭದಲ್ಲಿ ಅದು ನಿವೃತ್ತವಾದುದರಿಂದ ಜ್ಞಾನವುಂಟಾಗಲು ತೊಂದರೆಯಿಲ್ಲ. ಇದನ್ನು ಪೂಜ್ಯರಾದ ವ್ಯಾಸರೂ **ಐಹಿಕಮಪ್ಯಪ್ರಸ್ತುತಪ್ರತಿಬಂಧೇ ತದ್ದರ್ಶನಾತ್** (ಬ್ರ. ಸೂ. ೩-೪-೫೧) ಎಂಬ ಸೂತ್ರದಲ್ಲಿ ಹೇಳಿರುತ್ತಾರೆ. ಪ್ರಕೃತಯಾವಪ್ರತಿಬಂಧವೂ ಇಲ್ಲದಿದ್ದರೆ ಆಗ ಯಾವಜನ್ಮದಲ್ಲಿ ಉಪದೇಶವೊ ಆ ಜನ್ಮದಲ್ಲಿಯೇ ಜ್ಞಾನವುಂಟಾಗುತ್ತದೆ. ಪ್ರತಿಬಂಧವಿದ್ದರೆ ಜನ್ಮಾಂತರದಲ್ಲಿ ಹುಟ್ಟುತ್ತದೆ. ವಾಮದೇವರ ವೃತ್ತಾಂತವೇ ಇದಕ್ಕೆ ನಿದರ್ಶನವಾಗಿರುತ್ತದೆ. ಮುಕ್ತಿಯಲ್ಲಿ ಕಾಮಗಳಾಗಲೀ ವಿಷಯಾನಂದವಾಗಲೀ ಇರುವುದಿಲ್ಲ. ಆದರೂ ವಿಷಯಾನಂದಗಳು ಬ್ರಹ್ಮಾನಂದದ ಲೇಪರೂಪಗಳಾದುದರಿಂದ ಬ್ರಹ್ಮಾನಂದದಲ್ಲಿ ಲೀನವಾಗಿರುತ್ತವೆ. ಆದುದರಿಂದ ಬ್ರಹ್ಮಾನಂದಪ್ರಾಪ್ತಿಯಿಂದ ಸರ್ವಕಾಮಪ್ರಾಪ್ತಿಯೆಂದು ಉಪಚಾರದಿಂದ ಹೇಳಿದೆ. ತತ್ತ್ವಜ್ಞಾನಿಗಳಿಗೆ ಇರತಕ್ಕದೇಹವು ಅಳಿದಮೇಲೆ ಇನ್ನೊಂದು ದೇಹಪ್ರಾಪ್ತಿ ಇಲ್ಲದಿರುವುದರಿಂದ ದೇಹಪ್ರಾಣವಿಯೋಗರೂಪಮರಣಕ್ಕೆ ಪ್ರಸಕ್ತಿಇಲ್ಲದಿರುವುದರಿಂದ ಅಮೃತತ್ವ ಪ್ರಾಪ್ತಿಯೆಂದು ತಿಳಿಯಬೇಕು. ಅಧ್ಯಾಯಸಮಾಪ್ತಿಯನ್ನು ತಿಳಿಸಲು ಪದಾವೃತ್ತಿ ಹೇಳಿದೆ.

---

*English Translation*

---

1. Let the women who are with child move away.

2. Verily, from the beginning he (the self) is in man as a germ, which is called seed.

3. This (seed), which is strength gathered from all the limbs of the body, he (the man) bears as telf in his self (body). When he commits the seed to the woman, then he (the father) causes it to be born. That is his first birth.

4. That seed becomes the self of the woman, as if one of her own limbs. Therefore it does not injure her.

5. She nourishes his (her husband's) self (the son) within her. She who nourishes, is to be nourished.

6. The woman bears the germ. He (the father) elevates the child even before the birth, and immediately after.

7. When he thus elevates the child both before and after his birth, he really elevates his own self.

8. For the continuation of these worlds (men). For thus are these worlds continued.

9. This is his second birth.

10. He (the son), being his self, is then placed in his stead for (the performance of) all good works.

11. But his other self (the father), having done all he has to do, and having reached thc full measure of his life, departs.

12. And departing from hence he is born again. That is his third birth.

13. And this has been declared by a Rishi (Rv. IV. 27, 1) :

14. 'While dwelling in the womb, I discovered ali the births of these devas. A hundred iron strongfolds kepi me, but I escaped quickly down like a falcon.'

15. Vamadeva, lying in the womb, has thus declared this.

And having this knowledge he stepped forth, after this dissolution of the body, and having obtained all his desires in that heavenly world, became immortal, yea, he became immortal.

ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ಪಂಚಮಾಧ್ಯಾಯೇ ಪ್ರಥಮಃ ಖಂಡಃ

ಇತಿ ಬಹ್ವೃಚ ಬ್ರಾಹ್ಮಣಾರಣ್ಯಕ ಕಾಂಡೇ ದ್ವಿತೀಯಾರಣ್ಯಕೇ ಪಂಚಮೋಽಧ್ಯಾಯಃ ||

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಐದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು ||

ಇಲ್ಲಿಗೆ ಸಾಯಣಾಚಾರ್ಯ ವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಎರಡನೆಯ ಆರಣ್ಯಕದಲ್ಲಿ
ಐದನೆಯ ಅಧ್ಯಾಯವು ಸಮಾಪ್ತವಾದುದು ||



# ಅಥ ದ್ವಿತೀಯಾರಣ್ಯಕೇ ಷಷ್ಠೇಽಧ್ಯಾಯೇ ಪ್ರಥಮಃ ಖಂಡ

## ಎರಡನೆಯ ಆರಣ್ಯಕದ ಆರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

ಅಧ್ಯಾರೋಪಪ್ರಕರಣೇ—" ತಸ್ಯ ತ್ರಯ ಆವಸಥಾಃ " (ಐ. ಆ. ೨ ಅ. ೪ ಖಂ. ೩) ಇತಿ ವಾಕ್ಯೇನ ಪಿತೃಮಾತೃಸ್ವಶರೀರರೂಪಂ ಸಂಸರಣಾರ್ಥಂ ಸ್ಥಾನತ್ರಯಂ ಯದುಕ್ತಂ ತತ್ಪುನಃ ಪಂಚಮಾಧ್ಯಾಯೇ ವೈರಾಗ್ಯೋತ್ಪತ್ತ್ಯರ್ಥಂ " ಪುರುಷೇ ಹ ವೈ " (ಐ. ಆ. ೨. ಅ. ೫ ಖಂ. ೧) ಇತ್ಯಾದಿನಾ ಪ್ರಪಂಚಿತಮ್ । " ಸ ಜಾತೋ ಭೂತಾನ್ಯಭಿವ್ಯೈಖ್ಯತ್ " (ಐ. ಆ. ೨ ಅ. ೪ ಖಂ. ೧) ಇತ್ಯಾದಿನಾಽಪವಾದಪ್ರಕರಣೇನ ಯತ್ತತ್ತ್ವಜ್ಞಾನಂ ಸಂಗೃಹೀತಂ ಯಚ್ಚ ವಾಮದೇವೋದಾಹರಣೇನ ಜ್ಞಾನಫಲಂ ಸಂಕ್ಷಿಪ್ಯದರ್ಶಿತಂ ತದುಭಯಂ ವಿಶದೀಕರ್ತುಂ ಷಷ್ಠಾಧ್ಯಾಯ ಆರಭ್ಯತೇ । ತತ್ರ " ಆತ್ಮಾ ವೈ ' (ಐ. ಆ. ೨ ಅ. ೪ ಖಂ. ೧) ಇದಮಿತ್ಯಾದ್ಯಧ್ಯಾಯೇನ ಸಾಮಾನ್ಯತಸ್ತತ್ತ್ವಮವಗತ್ಯ " ಪುರುಷೇ ಹ ವೈ " (ಐ. ಆ. ೨. ಅ. ೫ ಖಂ. ೧) ಇತ್ಯಧ್ಯಾಯೋಕ್ತಜನ್ಮಕ್ಲೇಶವಿಚಾರೇಣ ಪರಂ ವೈರಾಗ್ಯಂ ಪ್ರಾಪ್ತಾನಾಂ ಜಿಜ್ಞಾಸೂನಾಂ ವಿಚಾರಂ ದರ್ಶಯತಿ—

**ತಸ್ಯ ತ್ರಯ ಆವಸಥಾಃ** ಎಂದು ನಾಲ್ಕನೇ ಅಧ್ಯಾಯದಲ್ಲಿ ಜೀವನ ಸಂಸರಣಕ್ಕೋಸ್ಕರ ಪಿತೃ ಮಾತೃ ಮತ್ತು ತನ್ನ ಶರೀರ ಹೀಗೆ ಮೂರುಸ್ಥಾನಗಳನ್ನೂ, ಐದನೇ ಅಧ್ಯಾಯದಲ್ಲಿ ವೈರಾಗ್ಯವುಂಟಾಗಲು, **ಪುರುಷೇ ಹ ವೈ** ಇತ್ಯಾದಿ ವಾಕ್ಯಗಳಿಂದ ಜನನದ ರೀತಿಯನ್ನೂ ಹೇಳಿದುದಾಯಿತು. **ಸ ಜಾತೋ ಭೂತಾನಿ** ಎಂದು ಅಪವಾದಪ್ರಕರಣದಿಂದ ಸಂಗ್ರಹವಾಗಿ ಹೇಳಿದ ತತ್ವಜ್ಞಾನವನ್ನೂ, ವಾಮದೇವಮಹರ್ಷಿಯ ದೃಷ್ಟಾಂತದಿಂದ ಸಂಕ್ಷೇಪವಾಗಿ ತಿಳಿಸಿದ ಜ್ಞಾನಫಲವನ್ನೂ ವಿಶದವಾಗಿ ತಿಳಿಸಲು ಆರನೇ ಅಧ್ಯಾಯ ಆರಂಭವಾಗಿದೆ. ಸಾಮಾನ್ಯವಾಗಿ ತತ್ವಜ್ಞಾನವನ್ನು ಹೊಂದಿ, ಜನ್ಮಕ್ಲೇಶಾದಿ ವಿಚಾರದಿಂದ ವೈರಾಗ್ಯವನ್ನು ಪಡೆದ ಜಿಜ್ಞಾಸುಗಳ ವಿಚಾರವನ್ನು ಇನ್ನುಮುಂದೆ ವಿವರಿಸುತ್ತಾರೆ.

### ಕೋಽಯಮಾತ್ಮೇತಿ ವಯಮುಪಾಸ್ಮಹೇ ಕತರಃ ಸ ಆತ್ಮಾ ॥

" ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ " (ಐ. ಆ. ೩. ಅ. ೪ ಖಂ. ೧) ಇತ್ಯಾದಿಶ್ರುತೌ ಕಶ್ಚಿನ್ನಿರುಪಾಧಿಕ ಆತ್ಮಾ ಶ್ರುತಃ । ತಥಾ " ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ " (ಐ. ಆ. ೨ ಅ. ೪ ಖಂ. ೩) ಇತಿ ಶ್ರುತೌ ಕಶ್ಚಿತ್ಸೋಪಾಧಿಕ ಆತ್ಮಾ ಶ್ರುತಃ । ವಯಂ ತು ಪ್ರತಿದಿನಂ ಪ್ರತಿಕ್ಷಣಮಾತ್ಮೇತಿ ಯಮುಪಾಸ್ಮಹೇ ಸ ಕಃ ಸೋಪಾಧಿಕೋ ನಿರುಪಾಧಿಕೋ ವೇತ್ಯರ್ಥಃ । ಉಪಾಸನಂ ನಾಮ ನೈರಂತರ್ಯೇಣ ತಾತ್ಪರ್ಯಪುರಃಸರೋ ವ್ಯವಹಾರಃ । ಅಹಂ

ಗಚ್ಛಾಮ್ಯಹಮಾಗಚ್ಛಾಮಿ ಮಮಾಯಂ ದೇಹೋ ಮಮೇದಂ ಗೃಹಮಿತಿ ನಿರಂತರಮಾದರೇಣಾಽಽ-ತ್ಮವ್ಯವಹಾರೋ ಲೋಕೇ ದೃಶ್ಯತೇ, ಸೋಽಯಮತ್ರೋಪಾಸನತ್ವೇನೋಪಚರ್ಯತೇ । ತಥಾ ಸ ಆತ್ಮಾ ಶ್ರುತೌ " ಆತ್ಮಾ ವೈ (ಐ. ಆ. ೨ ಅ. ೪ ಖಂ. ೧) ಇತ್ಯಾದಿನಾ ಶ್ರುತಃ ಕತರಃ ಸೋಪಾಧಿಕ-ನಿರುಪಾಧಿಕಯೋರ್ಮಧ್ಯೇ ಕತರಃ ಕೋಽಸಾವಿತ್ಯರ್ಥಃ ॥

ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ ಇತ್ಯಾದಿ ಪೂರ್ವೋಕ್ತಶ್ರುತಿಯಲ್ಲಿ ಯಾವ ಉಪಾಧಿಯೂ ಇಲ್ಲದ ಆತ್ಮನನ್ನು ಹೇಳಿದೆ. ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ ಎಂದು ಶ್ರುತಿಯಲ್ಲಿ ಉಪಾಧಿವಿಶಿಷ್ಟನಾದ ಆತ್ಮನನ್ನು ಹೇಳಿದೆ. ಹೀಗಿರುವಾಗ ನಾವು ಪ್ರತಿಕ್ಷಣದಲ್ಲಿಯೂ ಆತ್ಮನೆಂದು ಉಪಾಸಿಸುವನು ಯಾರು? ಉಪಾಧಿಶೂನ್ಯನಾದ ಆತ್ಮನೇ? ಅಥವಾ ಸೋಪಾಧಿಕನಾದ ಆತ್ಮನೇ? ನಾನು ಹೋಗುತ್ತೇನೆ. ನಾನು ಬರುತ್ತೇನೆ. ಇದು ನನ್ನ ದೇಹ, ಇದು ನನ್ನ ಮನೆ ಎಂದು ನಿತ್ಯವೂ ಆಸಕ್ತಿಯಿಂದ ಲೋಕದಲ್ಲಿ ವ್ಯವಹಾರವು ತೋರುತ್ತದೆ. ಇದನ್ನೇ ಇಲ್ಲಿ ಔಪಚಾರಿಕವಾಗಿ ಉಪಾಸನವೆಂದುಹೇಳಿದೆ. ಸೋಪಾಧಿಕನಿರುಪಾಧಿಕರಾದ ಆತ್ಮರಲ್ಲಿ ಆತ್ಮಾ ವೈ ಎಂದು ಶ್ರುತಿ ಪ್ರತಿಪಾದಿತನಾದ ಆತ್ಮನು ಯಾರು? ಎಂದು ತಾತ್ಪರ್ಯ.

**ಯೇನ ವಾ ಪಶ್ಯತಿ ಯೇನ ವಾ ಶೃಣೋತಿ ಯೇನ ವಾ ಗಂಧಾನಾಜಿ-ಘ್ರತಿ ಯೇನ ವಾ ವಾಚಂ ವ್ಯಾಕರೋತಿ ಯೇನ ವಾ ಸ್ವಾದು ಚಾಸ್ವಾದು ಚ ವಿಜಾನಾತಿ ಯದೇತದ್ಧೃದಯಂ ಮನಶ್ಚೈತತ್ಸಂಜ್ಞಾನ ಮಾಜ್ಞಾನಂ ವಿಜ್ಞಾನಂ ಪ್ರಜ್ಞಾನಂ ಮೇಧಾ ದೃಷ್ಟಿರ್ಧೃತಿರ್ಮತಿ ರ್ಮನೀಷಾ ಜೂತಿಃ ಸ್ಮೃತಿಃ ಸಂಕಲ್ಪಃ ಕ್ರತುರಸುಃ ಕಾಮೋ ವಶ ಇತಿ ॥**

ನನು ಕತರಃ ಸ ಆತ್ಮೇತ್ಯಯಂ ವಿಚಾರೋಽಸ್ತು ಶ್ರುತ್ಯೈಕಗಮ್ಯಸ್ಯ ತಸ್ಯ ವಿಚಾರಮಂತರೇ-ಣಾನಿಶ್ಚಯಾತ್ಕೋಽಯಮಾತ್ಮೇತ್ಯಯಂ ತು ವಿಚಾರೋ ನ ಯುಕ್ತಸ್ತಸ್ಯಾಹಂಪ್ರತ್ಯಯಗಮ್ಯತ್ವೇನ ಪ್ರಸಿದ್ಧತ್ವಾದಿತ್ಯಾಶಂಕ್ಯ ವಿಚಾರಹೇತುಮನೇಕಕೋಟ್ಯಾತ್ಮಕಂ ಸಂಶಯಂ ದರ್ಶಯತಿ— ಯದ್ಯ-ಪ್ಯಹಂಪ್ರತ್ಯಯಗಮ್ಯಶ್ಚೈತನ್ಯರೂಪ ಆತ್ಮೇತಿ ಸಾಮಾನ್ಯಾಕಾರೇಣ ಪ್ರಸಿದ್ಧಿರಸ್ತಿ ತಥಾಪಿ ತದ್ವಿಶೇಷೇ ಸಂಶಯೋ ವಿದ್ಯತೇ । ಬಾಹ್ಯಾಂತಃಕರಣೇಷು ಸರ್ವೇಷ್ವಪಿ ಚೈತನ್ಯಂ ಪ್ರಥಕ್ಪೃಥಗಭಿವ್ಯಜ್ಯತೇ ಯಥಾ ಜಲಪಾತ್ರೇಷು ಪ್ರತ್ಯೇಕಂ ಸೂರ್ಯಾದಿಪ್ರತಿಬಿಂಬಸ್ತದ್ವತ್ । ತಥಾ ಸತಿ ಚಕ್ಷುರಿಂದ್ರಿಯಾಭಿ-ವ್ಯಕ್ತಚೈತನ್ಯೇನ ದೇಹೇಂದ್ರಿಯಸಂಘಾತಾಭಿಮಾನೀ ಲೌಕಿಕಃ ಪುರುಷೋ ನೀಲಪೀತಾದಿರೂಪಂ ಪಶ್ಯತಿ । ಅತೋ ಯೇನ ಚಾಕ್ಷುಷಚೈತನ್ಯೇನ ಪಶ್ಯತಿ ಚೈತನ್ಯಂ ತತ್ ಕಿಮಾತ್ಮೇತ್ಯೇಕಾ ಕೋಟಿಃ। ತಥಾ ಯೇನ ಶ್ರೋತ್ರಾಭಿವ್ಯಕ್ತಚೈತನ್ಯೇನ ಶಬ್ದಂ ಶೃಣೋತಿ ತತ್ಕಿಮಾತ್ಮೇತಿ ದ್ವಿತೀಯಾ ಕೋಟಿಃ ಏವಂ ಘ್ರಾಣವಾಗ್ಜಿಹ್ವಾದೀಂದ್ರಿಯಾಭಿವ್ಯಕ್ತಚೈತನ್ಯವಿಶೇಷಾಣಾಮಾತ್ಮತತ್ತ್ವರೂಪಂ ಸಂದೇಹಕೋ-ಟಿತ್ವಂ ದ್ರಷ್ಟವ್ಯಮ್ । ಚೈತನ್ಯಸ್ಯೈವ ರೂಪರಸಾದಿಜ್ಞಾಪಕತ್ವಂ ಕಠವಲ್ಲೀಷ್ವಾಮ್ನಾಯತೇ—

" ಯೇನ ರೂಪಂ ರಸಂ ಗಂಧಂ ಶಬ್ದಾನ್ಸ್ಪರ್ಶಾಂಶ್ಚಮೈಥುನಾನ್ ।
ಏತೇನೈವ ವಿಜಾನಾತಿ "

(ಕಠ-೪।೩॥ ಇತಿ ॥

ಶ್ರೋತ್ರಾದೀಂದ್ರಿಯದ್ವಾರಾ ವಿಷಯಗ್ರಾಹಕತ್ವಮಭಿಪ್ರೇತ್ಯ ತಲವಕಾರೈರಪ್ಯಾಮ್ನಾಯತೇ — " ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ವಾಚೋ ಹ ವಾಕ್ಸ ಉ ಪ್ರಾಣಸ್ಯ ಪ್ರಾಣಶ್ಚಕ್ಷು-ಷಶ್ಚಕ್ಷುಃ " (ಕೇನೋ-೨) ಇತಿ । ವಾಜಸನೇಯಿನೋಽಪಿ ತತ್ತದಿಂದ್ರಿಯಸಾಕ್ಷಿಚೈತನ್ಯೇನ ತತ್ತ-ದಿಂದ್ರಿಯದ್ವಾರಕವಿಷಯಗ್ರಹಣಮಭಿಪ್ರೇತ್ಯ ತತ್ತದಿಂದ್ರಿಯನಾಮ್ನಾ ವ್ಯವಹಾರಮಾಮನಂತಿ— "ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುರುತ ಶ್ರೋತ್ರಸ್ಯ ಶ್ರೋತ್ರಮನ್ನಸ್ಯಾನ್ನಂ ಮನಸೋ ಯನ್ಮನೋ ವಿದುಃ " (ಬೃಹ-೪-೪-೧೮) ಇತಿ । ಬಾಹ್ಯೇಂದ್ರಿಯಾಭಿವ್ಯಕ್ತಚೈತನ್ಯೇಷ್ವಾತ್ಮತತ್ತ್ವ ಸಂಶಯಂ ದರ್ಶಯಿತ್ವಾಂತಃಕರಣದ್ವಯತದ್ವೃತ್ತಿ ವಿಶೇಷಾಭಿವ್ಯಕ್ತ ಚೈತನ್ಯೇಷ್ವಾತ್ಮತತ್ವ ಸಂಶಯಮಭಿಪ್ರೇತ್ಯ ಯದೇತದ್ಧೃದಯಮಿತ್ಯಾದಿನಾ ತತ್ತದುಪಾಧಿಸ್ವರೂಪಮುಪನ್ಯಸ್ಯತೇ—ಹೃದಯಂ ಬುದ್ಧಿಃ, ಸಾ ಚಾತ್ಮಾನಿ ಕರ್ತೃತ್ವಾದಿಧರ್ಮಾರೋಪಸಾಧನತ್ವಾದಂತಃಕರಣಮಿತ್ಯುಚ್ಯತೇ । ತಸ್ಯ ಚ ಬುದ್ಧಿ-ವಿಶಿಷ್ಟಸ್ಯ ಕರ್ತುರಾತ್ಮನೋ ರೂಪಾದಿವಿಷಯಸಂಕಲ್ಪವಿಕಲ್ಪಾದಿಸಾಧನಂ ಮನ ಇತ್ಯುಚ್ಯತೇ । ಬುದ್ಧಿಮನಸೋರ್ದ್ವಯೋರಂತಃಕರಣ ವಿಶೇಷಯೋಃ ಸಮುಚ್ಚಯಾರ್ಥಶ್ಚಕಾರಃ। ಏತದೇವಾಂತಃ-ಕರಣದ್ವೈವಿಧ್ಯಮಭಿಪ್ರೇತ್ಯ ತೈತ್ತರೀಯಕೇ-" ತಸ್ಮಾದ್ವಾ ಏತಸ್ಮಾನ್ಮನೋಮಯಾತ್ । ಅನ್ಯೋಽಂ-ತರ ಆತ್ಮಾ ವಿಜ್ಞಾನಮಯಃ " (ತೈತ್ತ-೨-೪-೧) ಇತಿ ಕೋಶದ್ವಯಮುಪನ್ಯಸ್ತಮ್ । ತಸ್ಯ ಚ ಮನಸೋ ವೃತ್ತಿವಿಶೇಷಾ ಏತತ್ಸಂಜ್ಞಾನಮಿತ್ಯಾದಿನಾ ಪ್ರಪಂಚ್ಯತೇ । ಯನ್ಮನೋಽಸ್ತ್ಯೇತದೇವ ವೃತ್ತಿರೂಪೇಣ ಪರಿಣತಂ ಸತ್ಸಂಜ್ಞಾನಮಿತ್ಯುಚ್ಯತೇ । ಸಮ್ಯಗಿದಂ ವಸ್ತ್ವಿತಿ ಜ್ಞಪ್ತಿಃ ಸಂಜ್ಞಾನಮ್ । ಆಜ್ಞಾನಮಾಜ್ಞಪ್ತಿರೀಶ್ವರಭಾವಃ। ವಿಜ್ಞಾನಮಿದಮಸ್ಮಾದ್ವಿಶಿಷ್ಟಮಿತ್ಯೇವಮಾದಿವಿವೇಕಃ। ಪ್ರಜ್ಞಾನಂ ಗ್ರಂಥಾರ್ಥಾದಾವುನ್ಮೇಷಃ । ಮೇಧಾ ಗ್ರಂಥತದರ್ಥಧಾರಣಾ । ದೃಷ್ಟಿಶ್ಚಕ್ಷುರ್ದ್ವಾರಾ ರೂಪೋಪಲ-ಬ್ಧಿಹೇತುರ್ಮನೋವೃತ್ತಿಃ । ಧೃತಿರ್ಧೈರ್ಯಂ ಪ್ರಾಪ್ತಾಯಾಮಪ್ಯಾಪದಿ ತದ್ವಿಷಯಗಣನಾರಾಹಿ-ತ್ಯಮ್ । ಮತಿರ್ಮನನಂ ರಾಜಕಾರ್ಯಾದ್ಯಾಲೋಚನಮ್ । ಮನೀಷಾ ತತ್ರ ಸ್ವಾತಂತ್ರ್ಯಮ್ । ಜೂತಿರ್ಜವಃ ಪ್ರಾಪ್ತಕಾರ್ಯೇಷು ಮನಸೋ ವ್ಯಗ್ರತಾ । ಯದ್ವಾ ಜೂತಿರ್ಮನಸೋ ರೋಗಾದಿ-ಜನಿತದುಃಖಿತ್ವಮ್। ಸ್ಮೃತಿರನುಭೂತಾರ್ಥವಸ್ತುಸ್ಮರಣಮ್। ಸಂಕಲ್ಪೋಽಸಮೀಚೀನೇಽಪಿ ವಸ್ತುನಿ ಸಮ್ಯಕ್ತ್ವೇನ ಕಲ್ಪನಮ್ । ಕ್ರತುರವಶ್ಯಂ ಕರಿಷ್ಯಾಮೀತ್ಯಧ್ಯವಸಾಯಃ । ಅಸುಃ ಪ್ರಾಣಾದಿ ಜೀವನಕ್ರಿಯಾನಿಮಿತ್ತಾ ವೃತ್ತಿಃ । ಕಾಮೋಽಸಂನಿಹಿತವಿಷಯಾಕಾಂಕ್ಷಾ । ವಶಃ ಸ್ತ್ರೀವ್ಯತಿಕರಾದ್ಯ-ಭಿಲಾಷಃ । ಇತಿಶಬ್ದಃ ಪ್ರದರ್ಶನಾರ್ಥಃ । ಇತ್ಯೇವಮಾದ್ಯಾ ಅನ್ಯೇಽಪಿ ಸಾತ್ವಿಕರಾಜಸತಾಮಸವೃತ್ತಿ-ಭೇದಾ ಬಹವೋ ದ್ರಷ್ಟವ್ಯಾಃ । ಅತ್ರ ಸರ್ವತ್ರ ಕಿಮೇತದ್ವೃತ್ತ್ಯುಪಹಿತಂ ಚೈತನ್ಯಮಾತ್ಮೇತ್ಯೇವಂ ಸಂಶಯಕೋಟಯೋ ಯೋಜನೀಯಾಃ ॥

ಶ್ರುತಿಮಾತ್ರದಿಂದ ತಿಳಿಯಬೇಕಾದ ಆತ್ಮನ ವಿಷಯದಲ್ಲಿ ಆತ್ಮನು ಯಾರು ? ಎಂದು ವಿಚಾರ ಪ್ರಸಕ್ತವಾಗಲಿ. ಲೋಕದಲ್ಲಿ ಅಹಂ (ನಾನು) ಎಂಬ ಜ್ಞಾನದಿಂದ ಆತ್ಮನಪ್ರಸಿದ್ಧಿ ಇರುವಾಗ, ಯಾವಸಂಶಯವೂ ಇಲ್ಲದಿರುವಾಗ ಈ

ಆತ್ಮನು ಯಾರು ? ಎಂಬ ಪ್ರಶ್ನೆ ಅಸಂಗತವಲ್ಲವೇ ? ಅಂದರೆ ಆ ವಿಷಯದಲ್ಲಿ ನಾನಾಸಂಶಯವನ್ನು ತೋರಿಸುತ್ತಾರೆ. ಅಹಂಪ್ರತ್ಯಯದಿಂದ ಚೈತನ್ಯರೂಪ ಆತ್ಮನು ಪ್ರಸಿದ್ಧಿಸಾಮಾನ್ಯರೂಪದಿಂದ ಇದ್ದರೂ ವಿಶೇಷರೂಪದಿಂದ ಸಂಶಯವೇ ತೋರುತ್ತದೆ. ನೀರಿನಪಾತ್ರೆಗಳಲ್ಲಿ ಸೂರ್ಯನ ಪ್ರತಿಬಿಂಬಗಳು ತೋರುವಂತೆ ಚಕ್ಷುರಾದಿಸಕಲಬಾಹ್ಯಾಂತಃಕರಣಗಳಲ್ಲಿ ಚೈತನ್ಯವು ಬೇರೆ ಬೇರೆಯಾಗಿ ಅಭಿವ್ಯಕ್ತವಾಗುತ್ತದೆ. ಚಕ್ಷುರಿಂದ್ರಿಯದಲ್ಲಿ ಅಭಿವ್ಯಕ್ತವಾದ ಚೈತನ್ಯದಿಂದಲೇ ದೇಹೇಂದ್ರಿಯಾದಿ ಸಂಘಾತದಲ್ಲಿ ಅಭಿಮಾನಿಯಾದ ಪುರುಷನು ನೀಲಾದಿರೂಪಗಳನ್ನು ನೋಡುತ್ತಾನೆ. ಆದುದರಿಂದ ಈ ಚಾಕ್ಷುಷ ಚೈತನ್ಯನು ಆತ್ಮನೇ ಎಂದು ಒಂದುರೀತಿಯ ಸಂಶಯ. ಶ್ರೋತ್ರೇಂದ್ರಿಯದಲ್ಲಿ ಅಭಿವ್ಯಕ್ತವಾದ ಚೈತನ್ಯವೇ ಶಬ್ದವನ್ನು ಕೇಳುವುದರಿಂದ ಅದು ಆತ್ಮನೇ ಎಂದು ಎರಡನೆಯ ಸಂಶಯ. ಹೀಗೆಯೇ ಘ್ರಾಣ, ವಾಕ್, ಜಿಹ್ವಾದಿ ಇಂದ್ರಿಯಾಭಿವ್ಯಕ್ತಗಳಾದ ಚೈತನ್ಯ ವಿಶೇಷಗಳು ಆತ್ಮವೇ ಎಂದು ನಾನಾ ಸಂಶಯಗಳು ಬರುತ್ತವೆ. ಚೈತನ್ಯವೇ ರೂಪರಸಾದಿ ಜ್ಞಾಪಕವೆಂದು **ಯೇನ ರೂಪಂ ರಸಂ ಗಂಧಂ ಶಬ್ದಾನ್ ಸ್ಪರ್ಶಾಂಶ್ಚ ಮೈಥುನಾನ್ । ಏತೇನೈವ ವಿಜಾನಾತಿ** (ಕಾಠ-೪-೩) ಎಂಬ ಶ್ರುತಿಯಲ್ಲಿ ಪ್ರಸಿದ್ಧವಾಗಿದೆ. **ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ವಾಚೋ ಹ ವಾಚ್ಸ ಉ ಪ್ರಾಣಸ್ಯ ಪ್ರಾಣಶ್ಚಕ್ಷುಷಶ್ಚಕ್ಷುಃ** ಎಂದು ಕೇನೋಪನಿಷತ್ತಿನಲ್ಲಿಯೂ ಶ್ರೋತ್ರಾದಿ ಇಂದ್ರಿಯಗಳ ಮೂಲಕ ವಿಷಯ ಗ್ರಾಹಕವೆಂದು ವಿವರಿಸಿದೆ. ಆಯಾಯ ಇಂದ್ರಿಯಸಾಕ್ಷಿ ಚೈತನ್ಯದಿಂದ ಆಯಾಯ ಇಂದ್ರಿಯಗಳ ಮೂಲಕ ವಿಷಯಗಳನ್ನು ಗ್ರಹಿಸುವುದರಿಂದ ಆಯಾಯ ಇಂದ್ರಿಯಗಳ ಹೆಸರಿನಿಂದಲೇ ವ್ಯವಹರಿಸುತ್ತಾರೆಂದು ಬೃಹದಾರಣ್ಯಕದಲ್ಲಿ ದೇಳಿರುತ್ತಾರೆ (ಬೃಹ-೪-೪-೧೮). ಬಾಹ್ಯೇಂದ್ರಿಯಗಳಲ್ಲಿ ಅಭಿವ್ಯಕ್ತವಾದ ಚೈತನ್ಯಗಳಲ್ಲಿ ಆತ್ಮಸಂಶಯವನ್ನು ತೋರಿಸಿ ಅಂತಃಕರಣದ್ವಯದ ವೃತ್ತಿವಿಶೇಷಗಳಲ್ಲಿ ಅಭಿವ್ಯಕ್ತವಾದ ಚೈತನ್ಯಗಳಲ್ಲಿಯೂ ಆತ್ಮಸಂಶಯವಿದೆಯೆಂದು ತಿಳಿಸಲು **ಯದೇತದ್ಧೃದಯಂ** ಇತ್ಯಾದಿ ವಾಕ್ಯಗಳಿಂದ ಆಯಾಯ ಉಪಾಧಿಸ್ವರೂಪವನ್ನು ವಿವರಿಸುತ್ತಾರೆ. ಹೃದಯವೆಂದರೆ ಬುದ್ಧಿ. ಇದನ್ನು ಆತ್ಮನಲ್ಲಿ ಕರ್ತೃತ್ವಾದಿಧರ್ಮಾರೋಪಕ್ಕೆ ಸಾಧನವಾದ ಅಂತಃಕರಣವೆಂದು ಕರೆಯುತ್ತಾರೆ. ಅಂತಃಕರಣೋಪಾಧಿವಿಶಿಷ್ಟನಾದ ಕರ್ತೃರೂಪ ಆತ್ಮನಿಗೆ ರೂಪಾದಿವಿಷಯಕ ಸಂಕಲ್ಪವಿಕಲ್ಪಗಳಿಗೆ ಸಾಧನವಾದುದಕ್ಕೆ ಮನಸ್ಸೆಂದು ಹೆಸರು. ಬುದ್ಧಿಮನಸ್ಸೆಂಬ ಈ ಎರಡು ಅಂತಃಕರಣವಿಶೇಷಗಳಿಗೆ **ತಸ್ಮಾದ್ವಾ ಏತಸ್ಮಾನ್ಮನೋಮಯಾತ್ । ಅನ್ಯೋಂತರ ಆತ್ಮಾ ವಿಜ್ಞಾನಮಯಃ** (ತೈತ್ತ-೨-೪-೧) ಎಂದು ಶ್ರುತಿಯಲ್ಲಿ ಕೋಶದ್ವಯವೆಂದು ಹೇಳಿದೆ. ಈ ಮನಸ್ಸಿನ ವೃತ್ತಿ ವಿಶೇಷಗಳನ್ನು ವಿವರಿಸುತ್ತಾರೆ. ಮನಸ್ಸೇ ವೃತ್ತಿರೂಪದಿಂದ ಪರಿಣತವಾಗಿ ಸಂಜ್ಞಾನಂ ಇತ್ಯಾದಿ ನಾಮಗಳನ್ನು ಹೊಂದುತ್ತದೆ. ಈ ವಸ್ತು ಚೆನ್ನಾಗಿದೆಯೆಂದು ತಿಳಿಯುವುದೇ **ಸಂಜ್ಞಾನ**. ಆಜ್ಞೆಮಾಡುವುದು, ಈಶ್ವರಭಾವಕ್ಕೆ **ಆಜ್ಞಾನ**ವೆಂದು ಹೆಸರು. ಇದು ಇದಕ್ಕಿಂತ ವಿಶಿಷ್ಟವಾಗಿದೆ ಎಂಬ ವಿವೇಕಕ್ಕೆ **ವಿಜ್ಞಾನ**ವೆಂದು ಹೆಸರು. ಗ್ರಂಥಾರ್ಥಾದಿಜ್ಞಾನಕ್ಕೆ **ಪ್ರಜ್ಞಾನ**ವೆಂದು ಹೆಸರು. ಗ್ರಂಥ ಮತ್ತು ಅದರ ಅರ್ಥಧಾರಣೆಗೆ **ಮೇಧಾ** ಎಂದು ಹೆಸರು. ಚಕ್ಷುರಿಂದ್ರಿಯದ ಮೂಲಕ ರೂಪ ಪ್ರತ್ಯಕ್ಷಕ್ಕೆ ಕಾರಣವಾದ ಮನೋವೃತ್ತಿಗೆ **ದೃಷ್ಟಿ** ಎಂದು ಹೆಸರು. ಆಪತ್ತುಬಂದರೂ ಧೈರ್ಯಗೆಡದಿರುವುದಕ್ಕೆ **ಧೃತಿ**ಯೆಂದು ಹೆಸರು. ರಾಜಕಾರ್ಯಾದ್ಯಾಲೋಚನಕ್ಕೆ **ಮತಿ**ಯೆಂದೂ ಸ್ವಾತಂತ್ರ್ಯಕ್ಕೆ **ಮನೀಷಾ** ಎಂದೂ ಕಾರ್ಯಾಸಕ್ತಿಗೆ **ಜೂತಿ**ಯೆಂದೂ ಹೆಸರು. ರೋಗಾದಿಗಳಿಂದ ಉಂಟಾದ ದುಃಖಕ್ಕೂ ಜೂತಿಯೆನ್ನುತ್ತಾರೆ. ಅನುಭವಿಸಿದ ವಸ್ತುಸ್ಮರಣೆಗೆ **ಸ್ಮೃತಿ**ಯೆಂದು ಹೆಸರು. ಚನ್ನಾಗಿಲ್ಲದ ವಸ್ತುವನ್ನು ಚನ್ನಾಗಿದೆಯೆಂದು ತಿಳಿಯುವುದು **ಸಂಕಲ್ಪ**. ಮಾಡಿಯೇಮಾಡುತ್ತೇನೆಂಬ ನಿಶ್ಚಯಕ್ಕೆ **ಕ್ರತು**ವೆಂದು ಹೆಸರು. ಪ್ರಾಣಾಪಿಜೀವನಕ್ರಿಯೆಗೆ ಕಾರಣವಾದ ವೃತ್ತಿಗೆ **ಅಸು**ವೆಂದು ಹೆಸರು. ಹತ್ತಿರವಿಲ್ಲದಿರುವ ವಸ್ತುವಿನ ಅಭಿಲಾಷೆಗೆ **ಕಾಮ**ವೆಂದೂ ಸ್ತ್ರೀಸಂಬಂಧವಾದ ಅಭಿಲಾಷೆಗೆ **ವಶ**ವೆಂದೂ ಹೆಸರು. ಹೀಗೆ ಹೇಳಿದವು

ಗಳಲ್ಲದೆ ಇನ್ನೂ ಸಾತ್ವಿಕರಾಜಸತಾಮಸವೃತ್ತಿಭೇದಗಳು ಅನೇಕವಾಗಿವೆಯೆಂದು ತಿಳಿಯಬೇಕು. ಇಲ್ಲಿಯೂ ಆಯಾಯ ವೃತ್ತ್ಯುಪಹಿತಚೈತನ್ಯವು ಆತ್ಮನೇ ? ಎಂದು ಸಂಶಯಬರುತ್ತದೆ.

## ಸರ್ವಾಣ್ಯೇವೈತಾನಿ ಪ್ರಜ್ಞಾನಸ್ಯ ನಾಮಧೇಯಾನಿ ಭವಂತಿ ॥

ಇತ್ಥಂ ಸಂಶಯಮುಪನ್ಯಸ್ಯ ನಿರ್ಣಯಂ ದರ್ಶಯತಿ— “ ಯೇನ ವಾ ಪಶ್ಯತಿ ” (ಐ-ಆ -೨-೪-೯-ಖಂ ೧) ಇತ್ಯಾದಿನಾ “ಕ್ರತುರಸುಃ ಕಾಮೋ ವಶಃ” ಇತ್ಯಂತೇನ ಗ್ರಂಥೇನ ಯಾನ್ಯುಪನ್ಯಸ್ತಾನ್ಯೇತಾನಿ ಸರ್ವಾಣ್ಯಪಿ ತತ್ತದ್‌ವೃತ್ತ್ಯುಪಾಧಿದ್ವಾರೋಪಲಕ್ಷಿತಸ್ಯ ಪ್ರಜ್ಞಾನಸ್ಯ ಶುದ್ಧಚೈತನ್ಯಸ್ಯ ನಾಮಧೇಯಾನಿ ಸಂಪದ್ಯಂತೇ। ಪ್ರಕೃಷ್ಟಂ ಜ್ಞಾನಂ ಪ್ರಜ್ಞಾನಮ್। ಚೈತನ್ಯಂ ಹಿ ಸ್ವತೋ ನಿರ್ಮಲತ್ವಾತ್ಪ್ರಕೃಷ್ಟಮೇವ। ಅಥನೋಪಾಧಿ ಸಂಪರ್ಕವಶಾದಪಕರ್ಷಃ ಪ್ರತೀಯತೇ। ಯದಾ ತೂಪಾಧಿವಿಶಿಷ್ಟತ್ವಂ ಪರಿತ್ಯಜ್ಯ ತತ್ತದುಪಾಧಿರುಪಲಕ್ಷಿತಂ ಶಾಖಾಚಂದ್ರನ್ಯಾಯೇನ ವಿವಿಚ್ಯತೇ। ತದಾನೀಮುಪಾಧಿಕೃತಸ್ಯಾಪಕರ್ಷಸ್ಯಾಭಾವಾತ್ಪ್ರಕರ್ಷ ಏವ ಪರಿಶಿಷ್ಯತೇ। ತಚ್ಚ ಪ್ರಕೃಷ್ಟಂ ಚೈತನ್ಯಂ ಸರ್ವೇಷ್ವಪ್ಯುಕ್ತೋಪಾಧಿಷ್ವನುಗತಮಿತಿ ಕೃತ್ವಾ ತಸ್ಯೈವ ಮುಖ್ಯಮಾತ್ಮತ್ವಮಿತಿ ನಿರ್ಣಯಃ। ಉಪಾಧಿವಿಶಿಷ್ಟಸ್ಯ ನ ಮುಖ್ಯಮಾತ್ಮತ್ವಂ ಶುದ್ಧಚೈತನ್ಯಸ್ಯೈವ ಮುಖ್ಯಾತ್ಮತ್ವಮಿತ್ಯಯಮೇವ ವಿವೇಕೋ ಬೃಹದಾರಣ್ಯಕೇ—“ಸ ಏಷ ಇಹಪ್ರವಿಷ್ಟಃ” (ಬೃಹ-೧-೪-೭) ಇತ್ಯಾದಿನಾ ಪ್ರವಿಷ್ಟಂ ಜೀವಾತ್ಮಾನಂ ಪ್ರಕೃತ್ಯೈವಮಾಮ್ನಾಯತೇ—“ ತಂ ನ ಪಶ್ಯಂತ್ಯಕೃತ್ಸ್ನೋ ಹಿ ಸ ಪ್ರಾಣನ್ನೇವ ಪ್ರಾಣೋ ನಾಮ ಭವತಿ ವದನ್ವಾಕ್ಪಶ್ಯಂಶ್ಚಕ್ಷುಃ ಶೃಣ್ವಞ್ಶ್ರೋತ್ರಂ ಮನ್ವಾನೋ ಮನಸ್ತಾನ್ಯಸ್ಯೈತಾನಿ ಕರ್ಮನಾಮಾನ್ಯೇವ ” (ಬೃಹ ೧-೪-೭) ಇತಿ। ಅಯಮರ್ಥಃ— ದೇಹೇ ನಖಾಗ್ರಪರ್ಯಂತಂ ಪ್ರವಿಷ್ಟಂ ಜ್ಞಾನಕ್ರಿಯಾಶಕ್ತ್ಯುಪಾಧಿವಿಶಿಷ್ಟಃ ಕೃತ್ಸ್ನೋ ನ ಭವತಿ। ತಸ್ಮಾನ್ನ ಮುಖ್ಯಾತ್ಮತ್ವಮ್। ಅಕೃತ್ಸ್ನತ್ವಮೇವ ಕುತ ಇತಿ ಚೇತ್ತದುಚ್ಯತೇ। ಪ್ರಾಣನ್ನೇವ ವದನೇನ ಶ್ವಾಸಂ ಕುರ್ವನ್ನೇವ ಪ್ರಾಣೋಪಾಧಿವಿಶಿಷ್ಟತಯಾ ಪ್ರಾಣನಾಮಕೋ ಭವತಿ, ನ ಚಾಸೌ ವಾಗಾದ್ಯುಪಾಧಿವಿಶಿಷ್ಟೇಷ್ವನುಗಚ್ಛತಿ। ಏವಂ ವಾಗಾದಿಷ್ವಪ್ಯೈಕೈಕೋಪಾಧಿನಾ ವಿಶಿಷ್ಟ ಇತರತ್ರ ನಾನುಗಚ್ಛತಿ। ಅಭಿವದನಕಾಲ ಏವ ವಾಗುಪಾಧಿಕಃ, ರೂಪದರ್ಶನಕಾಲ ಏವ ಚಕ್ಷುರುಪಾಧಿಕಃ, ಏವಮಿತರತ್ರಾಪಿ। ಕಥಂ ತರ್ಹ್ಯಾತ್ಮನಃ ಕೃತ್ಸ್ನತ್ವಮಿತ್ಯಾಕಾಂಕ್ಷಾಯಾಂ ಪ್ರಾಣವಾಗಾದ್ಯುಪಾಧಿವೈಶಿಷ್ಟ್ಯಸ್ಯ ಪರಿತ್ಯಾಗೇ ಸತಿ ಕೃತ್ಸ್ನತ್ವಮಿತ್ಯಯಮರ್ಥೋ ಬೃಹದಾರಣ್ಯಕಏವಾಮ್ನಾತಃ—“ ಆತ್ಮೇತ್ಯೇವೋಪಾಸೀತಾತ್ರ ಹ್ಯೇತೇ ಸರ್ವ ಏಕಂ ಭವಂತಿ ” (ಬೃಹ-೧-೪-೭) ಇತಿ। ಯೇ ವಾಗಾದ್ಯುಪಾಧಿಷು ಚೈತನ್ಯವಿಶೇಷಾಸ್ತೇ ಸರ್ವೇಽಪಿ ನಿರುಪಾಧಿಕ ಆತ್ಮನ್ಯೇವಾಂತರ್ಭವಂತಿ। ಯಥಾ ಜಲಪಾತ್ರಗತಾಃ ಸೂರ್ಯಾಃ ಸರ್ವೇಽಪಿ ತತ್ಕಲ್ಪನಾಧಿಷ್ಠಾನಭೂತೇ ಮುಖ್ಯೇಸೂರ್ಯೇಽಂತರ್ಭವಂತಿ ತದ್ವತ್ ॥

ಪೂರ್ವೋಕ್ತರೀತಿಯಿಂದ ಸಂಶಯಗಳನ್ನು ವಿವರಿಸಿ ಈಗ ನಿರ್ಣಯವನ್ನು ತೋರಿಸುತ್ತಾರೆ. ಯೇನ ವಾ ಪಶ್ಯತಿ ಕ್ರತುರಸುಃ ಕಾಮೋವಶಃ ಎಂಬ ಗ್ರಂಥದವರೆಗೆ ಏನೇನು ಹೇಳಿವೆಯೋ ಅವೆಲ್ಲವೂ ಆಯಾಯ ವೃತ್ತ್ಯುಪಾಧಿಗಳಿಂದ

ಉಪಲಕ್ಷಿತನಾದ ಶುದ್ಧಚೈತನ್ಯರೂಪಿ ಆತ್ಮನ ನಾಮಧೇಯಗಳಾಗುತ್ತವೆ. ಪ್ರಕೃಷ್ಟವಾದ ಜ್ಞಾನವೇ ವಿಜ್ಞಾನ. ಚೈತನ್ಯವು ಸ್ವಾಭಾವಿಕವಾಗಿ ನಿರ್ಮಲವಾದುದರಿಂದ ಪ್ರಕೃಷ್ಟವಾಗಿದೆ. ಕೆಲವು ಅಧನೋಪಾಧಿಗಳ ಸಂಪರ್ಕದಿಂದ ಅಪಕರ್ಷವೂ ತೋರುತ್ತದೆ. ಉಪಾಧಿವೈಶಿಷ್ಟ್ಯವಿಲ್ಲದೆ ಶಾಖಾಚಂದ್ರನ್ಯಾಯದಿಂದ ಉಪಾಧಿಗಳಿಂದ ಉಪಲಕ್ಷಿತವಾಗಿದ್ದರೆ ಆಗ ಉಪಾಧಿಕೃತ ಅಪಕರ್ಷ ಇಲ್ಲದಿರುವುದರಿಂದ ಪ್ರಕರ್ಷಮಾತ್ರವಿರುತ್ತದೆ. ಈ ಪ್ರಕೃಷ್ಟಚೈತನ್ಯವು ಪೂರ್ವೋಕ್ತವಾದ ಸಕಲೋಪಾಧಿಗಳಲ್ಲಿ ಅನುಗತವಾಗಿರುವುದರಿಂದ ಅದೇ ಮುಖ್ಯವಾದ ಆತ್ಮಭಾವವೆಂದು ತಿಳಿಯಬೇಕು. ಉಪಾಧಿವಿಶಿಷ್ಟನಿಗೆ ಮುಖ್ಯಾತ್ಮವಿಲ್ಲ. ಶುದ್ಧಚೈತನ್ಯಕ್ಕೇ ಮುಖ್ಯಾತ್ಮವೆಂಬ ವಿವೇಕವು ಬೃಹದಾರಣ್ಯಕದಲ್ಲಿ—**ಸ ಏಷ ಇಹ ಪ್ರವಿಷ್ಟಃ** ಎಂದು ಜೀವಾತ್ಮನನ್ನು ಉದ್ದೇಶಿಸಿ **ತಂ ನ ಪಶ್ಯಂತ್ಯಕೃತ್ಸ್ನೋ ಹಿ ಸ ಪ್ರಾಣನ್ನೇವ ಪ್ರಾಣೋ ನಾಮ ಭವತಿ** ಎಂದು ವಿವರಿಸಿದೆ (ಬೃಹ–೧–೪–೭). ದೇಹದಲ್ಲಿ ನಖತುದಿಯವರೆಗೆ ಪ್ರವೇಶಿಸಿರುವ ಜ್ಞಾನಕ್ರಿಯಾಶಕ್ತ್ಯುಪಾಧಿಕನಾದ ಆತ್ಮನನ್ನು ವಿವೇಕಿಗಳು ತಮ್ಮ ಆತ್ಮನೆಂದು ತಿಳಿಯುವುದಿಲ್ಲ. ಏಕೆಂದರೆ ಅದನು ಉಪಾಧಿವಿಶಿಷ್ಟನಾದುದರಿಂದ ಪರಿಪೂರ್ಣನಾಗಿರುವುದಿಲ್ಲ. ಆದುದರಿಂದಲೇ ಅವನಿಗೆ ಮುಖ್ಯಾತ್ಮತ್ವವೂ ಇಲ್ಲ. ಮುಖನಾಸಿಕಾದಿಗಳಿಂದ ಶ್ವಾಸವನ್ನು ತೆಗೆದುಕೊಳ್ಳುತ್ತಾ ಅವನು ಪ್ರಾಣೋಪಾಧಿವಿಶಿಷ್ಟನಾಗುವುದರಿಂದ ಪ್ರಾಣನಾಮದಿಂದ ವ್ಯವಹರಿಸಲ್ಪಡುತ್ತಾನೆ. ಆಗ ವಾಗಾದ್ಯುಪಾಧಿವಿಶಿಷ್ಟನಾಗುವುದಿಲ್ಲ. ಹೀಗೆಯೇ ಆಯಾಯ ಉಪಾಧಿಗಳಿಂದ ಕೂಡಿರುವಾಗ ಇತರೋಪಾಧಿಗಳಲ್ಲಿ ಸೇರಿರುವುದಿಲ್ಲ. ಮಾತನಾಡುವಾಗ ವಾಗುಪಾಧಿಕನಾಗಿದ್ದರೆ ಚಕ್ಷುರಿಂದ್ರಿಯೋಪಾಧಿಯಲ್ಲಿರುವುದಿಲ್ಲ. ರೂಪನೋಡುವಾಗ ಮಾತ್ರ ಚಕ್ಷುರುಪಾಧಿಕನಾಗಿರುತ್ತಾನೆ. ಹಾಗಾದರೆ ಯಾವಾಗ ಅವನಿಗೆ ಪೂರ್ಣತ್ವವೆಂದರೆ ಅವನು ವಾಗಾಧಿ ಉಪಾಧಿಗಳಿಂದ ನಿರ್ಮುಕ್ತನಾಗಿರುವಾಗಲೇ ಪೂರ್ಣತ್ವ ಹೊಂದಿರುತ್ತಾನೆಂದು **ಆತ್ಮೇತ್ಯೇವೋಪಾಸೀತಾತ್ರ ಹ್ಯೇತೇ ಸರ್ವ ಏಕಂ ಭವಂತಿ** (ಬೃಹ–೧–೪–೭) ಎಂದು ಶ್ರುತಿಯಲ್ಲಿ ಹೇಳಿದೆ. ಜಲಪಾತ್ರಗಳಲ್ಲಿ ಪ್ರತಿಬಿಂಬಿತಗಳಾದ ಸೂರ್ಯಪ್ರತಿಬಿಂಬಗಳು ಹೇಗೆ ಪಾತ್ರಗಳನ್ನು ಬಿಟ್ಟು ಆಕಾಶಗತಸೂರ್ಯನಲ್ಲಿ ಒಂದಾಗುತ್ತವೆಯೋ ಅದರಂತೆ ವಾಗಾದ್ಯುಪಾಧಿಗಳಲ್ಲಿರುವ ಚೈತನ್ಯವಿಶೇಷಗಳೆಲ್ಲಾ ನಿರುಪಾಧಿಕನಾದ ಆತ್ಮನಲ್ಲಿ ಅಂತರ್ಭಾವ ಹೊಂದುತ್ತವೆ.

**ಏಷ ಬ್ರಹ್ಮೈಷ ಇಂದ್ರ ಏಷ ಪ್ರಜಾಪತಿರೇತೇ ಸರ್ವೇ ದೇವಾ ಇಮಾನಿ ಚ ಪಂಚಮಹಾಭೂತಾನಿ ಪೃಥಿವೀ ವಾಯುರಾಕಾಶ ಆಪೋ ಜ್ಯೋತೀಂಷೀತ್ಯೇತಾನೀಮಾನಿ ಚ ಕ್ಷುದ್ರಮಿಶ್ರಾಣೀವ ಬೀಜಾನೀತರಾಣಿ ಚೇತರಾಣಿ ಚಾಂಡಜಾನಿ ಚ ಜಾರುಜಾನಿ ಚ ಸ್ವೇದಜಾನಿ ಚೋದ್ಭಿಜ್ಜಾನಿ ಚಾಶ್ವಾ ಗಾವಃ ಪುರುಷಾ ಹಸ್ತಿನೋ ಯತ್ಕಿಂಚೇದಂ ಪ್ರಾಣಿಜಂಗಮಂ ಚ ಪತತ್ರಿ ಚ ಯಚ್ಚ ಸ್ಥಾವರಂ ಸರ್ವಂ ತತ್ಪ್ರಜ್ಞಾನೇತ್ರಮ್ ॥**

ತದೇವಂ ಕೋಽಯಮಾತ್ಮೇತ್ಯೇತಸ್ಮಿಂಸ್ತ್ವಂಪದಾರ್ಥವಿಚಾರೇ ನಿರುಪಾಧಿಕಂ ಸಾಕ್ಷಿಚೈತನ್ಯಂ ಪ್ರಜ್ಞಾನಶಬ್ದಾಭಿಧೇಯಮಾತ್ಮೇತಿ ನಿರ್ಣಯೋಽಭಿಹಿತಃ । ಅಥ ಕತರಃ ಸ ಆತ್ಮೇತ್ಯೇತಸ್ಮಿಂಸ್ತತ್ಪದಾರ್ಥವಿಚಾರೇ ನಿರ್ಣಯಂ ದರ್ಶಯತಿ–ಬ್ರಹ್ಮಾದಿಸ್ಥಾವರಾಂತಂ ಯಜ್ಜಗದಸ್ತಿ ತತ್ಸರ್ವಂ ಪ್ರಜ್ಞಾನೇತ್ರಮ್ । ನಿರುಪಾಧಿಕಸ್ವೇನ ಪ್ರಕೃಷ್ಟಾ ಜ್ಞಪ್ತಿಃ ಪ್ರಜ್ಞಾ । ನೀಯತೇ ಸರ್ವಂ ಜಗದನೇ-

ನೇತಿ ಸೃಷ್ಟಿಸ್ಥಿತಿಪ್ರಲಯವ್ಯವಹಾರಾಣಾಂ ಮೂಲಕಾರಣಂ ನೇತ್ರಮ್ । ಪ್ರಜ್ಞೈವ ನೇತ್ರಮ್ । ಪ್ರಜ್ಞೈವ ನೇತ್ರಂ ಯಸ್ಯ ಜಗತಸ್ತತ್ಪ್ರಜ್ಞಾನೇತ್ರಮ್ । ಶೇಷಜಗತೋ ಮೂಲಕಾರಣಭೂತಂ ಯಚ್ಚೈತನ್ಯಂ ತದೇವ ಕತರಃ ಸ ಆತ್ಮೇತ್ಯೇತಸ್ಮಿಂಸ್ತತ್ಪದಾರ್ಥವಿಚಾರೇ ಮುಖ್ಯಾತ್ಮತ್ವೇನ ನಿರ್ಣೇತವ್ಯಮಿತಿ ತಾತ್ಪರ್ಯಾರ್ಥಃ । ಏಷ ಬ್ರಹ್ಮೇತ್ಯನೇನ ಪುಲ್ಲಿಂಗೇನ ಬ್ರಹ್ಮಶಬ್ದೇನ "ಹಿರಣ್ಯಗರ್ಭಃ ಸಮವರ್ತತಾಗ್ರೇ" (ಋ. ಸಂ. ಮಂ. ೧೦ ಸೂ. ೧೨೧ ಋ. ೧) ಇತ್ಯಾದಿಶಾಸ್ತ್ರಪ್ರಸಿದ್ಧಃ ಪ್ರಥಮಶರೀರೀ ವಿವಕ್ಷಿತಃ । ತಸ್ಯ ಶಾಸ್ತ್ರಪ್ರಸಿದ್ಧಿಂ ದ್ಯೋತಯಿತುಮೇತಚ್ಛಬ್ದಃ । ಇಂದ್ರೋ ದೇವರಾಜಃ । ಪ್ರಜಾಪತಿಃ ಪೂರ್ವೋಕ್ತೇಂದ್ರಿಯತದಭಿಮಾನಿದೇವತಾತ್ಮಕೋ ವಿರಾಡ್‌ದೇಹಃ । ಸರ್ವೇ ದೇವಾ ಅಗ್ನಿವಾಯ್ವಾದಯಃ । ಪೃಥಿವ್ಯಾದೀನಿ ಪಂಚಮಹಾಭೂತಾನಿ ಪ್ರಸಿದ್ಧಾನಿ । ಇಮಾನಿ ಪಂಚ ಮಹಾಭೂತಾನೀತ್ಯೇತಸ್ಯ ಪೃಥಿವೀತ್ಯಾದಿಭಿರೇತ್ಯೇತಾನೀತ್ಯಂತಂ ವಿವರಣಂ । ಇಮಾನಿ ಚಾನ್ಯಾನಿ ಕ್ಷುದ್ರೈರಕಲ್ಪೈರ್ಮಶಕಪಿಪೀಲಿಕಾದಿದೇಹೈರ್ಮಿಶ್ರಾಣಿ । ಇವಶಬ್ದೋಽನರ್ಥಕಃ । ಬೀಜಾನಿ ಕಾರಣಾನಿ । ಮನುಷ್ಯಾದಿಪಿಪೀಲಿಕಾಂತಾಃ ಸರ್ವೇ ದೇಹಾಃ ಸ್ವಯಂ ಪಂಚಭೂತಾ ಕಾರ್ಯಭೂತಾಃ ಸಂತಃ ಸಜಾತೀಯದೇಹಾಂತರಹೇತುತ್ವೇನ ಬೀಜಶಬ್ದಾಭಿಧೇಯಾಃ । ತೇಷಾಂ ಬೀಜಾನಾಂ ನಾನಾಜಾತೀಯತ್ವಮಿತರಾಣಿ ಚೇತರಾಣೀತ್ಯನೇನ ಪ್ರತಿಜ್ಞಾಯತೇ । ಪರಸ್ಪರವಿಲಕ್ಷಣಬಹುಭೇದಯುಕ್ತಾನೀತ್ಯರ್ಥಃ । ಅಂಡಜಾನೀತ್ಯಾದಿ ಪ್ರತಿಜ್ಞಾತಮೇವ ನಾನಾತ್ವಂ ಪ್ರಪಂಚ್ಯತೇ । ಪಕ್ಷಿಸರ್ಪಾದೀನ್ಯಂಡಜಾನಿ । ಜಾರುಜಾನಿ ಜರಾಯುಜಾನಿ ಮನುಷ್ಯಗವಾದೀನಿ । ಕ್ರಿಮಿದಂಶಾದೀನಿ ಸ್ವೇದಜಾನಿ । ತರುಗುಲ್ಮಾದೀನ್ಯುದ್ಭಿಜ್ಜಾನಿ । ಯಥೋಕ್ತೇಷ್ವೇವ ಜರಾಯುಜಾನಾಮಶ್ವಾ ಗಾವಃ ಪುರುಷಾ ಹಸ್ತಿನ ಇತ್ಯುದಾಹೃತ್ಯ ಪ್ರದರ್ಶನಮ್। ಉಕ್ತಾನಾಮನುಕ್ತಾನಾಂ ಚ ಸಂಗ್ರಹೋಪಸಂಗ್ರಹಾರ್ಥಂ ಯತ್ಕಿಂಚೇದಂ ಪ್ರಾಣೀತ್ಯಾದಿವಾಕ್ಯಮ್ ॥

ಇದುವರೆಗೆ **ಕೋಽಯಮಾತ್ಮಾ ?** ಎಂದು ತ್ವಂಪದಾರ್ಥವಿಚಾರವುಪ್ರಸಕ್ತವಾದಾಗ ಪ್ರಜ್ಞಾನಶಬ್ದದಿಂದ ವ್ಯವಹರಿಸಲ್ಪಡುವ ನಿರುಪಾಧಿಕವಾದ ಶುದ್ಧಚೈತನ್ಯವೇ ಆತ್ಮವೆಂದು ನಿರ್ಣಯಿಸಲಾಯಿತು. **ಕತರಃ ಸ ಆತ್ಮಾ** ಎಂದು ತತ್ಪದಾರ್ಥವಿಚಾರದಲ್ಲಿ ಈಗ ನಿರ್ಣಯವನ್ನು ತೋರಿಸುತ್ತಾರೆ. ಬ್ರಹ್ಮಾದಿಸ್ಥಾವರದವರೆಗಿರುವ ಜಗತ್ತು ಪ್ರಜ್ಞಾನೇತ್ರವಾಗಿರುತ್ತದೆ. ಯಾವ ಉಪಾಧಿಯೂ ಇಲ್ಲದೆ ಇರುವ ಪ್ರಕೃಷ್ಟವಾದ ಜ್ಞಾನಕ್ಕೆ ಪ್ರಜ್ಞಾ ಎಂದು ಹೆಸರು. ನೀಯತೇ ಸರ್ವಂ ಜಗತ್ ಅನೇನ ಇತಿ ನೇತ್ರಂ. ಸೃಷ್ಟಿಸ್ಥಿತಿಪ್ರಲಯವ್ಯವಹಾರಕ್ಕೆ ಮೂಲಕಾರಣವಾಗಿರುವುದೆಂದರ್ಥ. ಈ ಜಗತ್ತಿಗೆ ಪ್ರಜ್ಞೆಯೇ ನೇತ್ರವಾಗಿರುತ್ತದೆ. **ಕತರಃ ಸ ಆತ್ಮಾ** ಎಂದು ವಿಚಾರಪ್ರಸಕ್ತವಾದಾಗ ಈ ಜಗತ್ತಿನಮೂಲ ಕಾರಣವಾದ ಚೈತನ್ಯವೇ ಮುಖ್ಯಾತ್ಮನೆಂದು ನಿರ್ಣಯಿಸಬೇಕೆಂದು ತಾತ್ಪರ್ಯ **ಏಷಬ್ರಹ್ಮಾ** ಎಂದು ಪುಲ್ಲಿಂಗನಿರ್ದೇಶದಿಂದ ಬ್ರಹ್ಮಪದದಿಂದ **ಹಿರಣ್ಯಗರ್ಭಃ ಸಮವರ್ತತಾಗ್ರೇ** ಎಂದು ಶ್ರುತಿಸಿದ್ಧವಾದ ಮೊದಲನೆಯ ಶರೀರಿಯು ವಿವಕ್ಷಿತವಾಗಿದೆ. **ಇಂದ್ರ**ನೆಂದರೆ ದೇವರಾಜ. ಪ್ರಜಾಪತಿಯೆಂದಿರ ಹಿಂದೆಹೇಳಿದ ಇಂದ್ರಿಯಗಳು ಮತ್ತು ಅವುಗಳ ಅಭಿಮಾನಿಯಾದ ದೇವತಾಸ್ವರೂಪದ ವಿರಾಟ್‌ಶರೀರ. ಸರ್ವದೇವತೆಗಳು ಇಂದ್ರಾಗ್ನಿವಾಯುಮುಂತಾದವರು. ಪೃಥಿವೀ ಅಪ್‌ವಾಯುತೇಜಸ್ಸು ಆಕಾಶ ಇವು ಪಂಚ ಮಹಾಭೂತಗಳು ಅನ್ಯಾನಿ ಅಂದರೆ ಕ್ಷುದ್ರಗಳಾದ ನೊಣ ಇರುವೆ ಮುಂತಾದವುಗಳು. ಬೀಜವೆಂದರೆ ಕಾರಣ. ಮನುಷ್ಯಾದಿ ಇರುವೆಗಳವರೆಗಿರುವ ಸಕಲ ದೇಹಗಳು ಪಂಚಮಹಾಭೂತಗಳ ಕಾರ್ಯಗಳಾಗಿ ಸಜಾತೀಯದೇಹಾಂ

ತರಕ್ಕೆ ಕಾರಣಗಳಾಗುವುದರಿಂದ ಅವುಗಳಿಗೆ ಬೀಜವೆಂದು ಹೆಸರು. ಇವು ಪರಸ್ಪರವೈಲಕ್ಷಣ್ಯದಿಂದ ನಾನಾಭೇದದಿಂದ ಕೂಡಿರುತ್ತವೆ. ಇದನ್ನೇ ಅಂಡಜಾದೀನಿ ಇತ್ಯಾದಿಗಳಿಂದ ವಿವರಿಸುತ್ತಾರೆ. ಪಕ್ಷಿಸರ್ಪಾದಿಗಳು ಆಂಡಜಗಳು. ಮನುಷ್ಯ ಗೋಅಶ್ವಾದಿಗಳು ಜರಾಯುಜಗಳು. ಹೇನು ಮುಂತಾದವುಗಳು ಸ್ವೇದ (ಬೆವರು) ಜಗಳು. ತರುಗುಲ್ಮಾ (ಪೊದೆ) ದಿಗಗಳು ಉದ್ಭಿಜಗಳು ಇದನ್ನೇ ಅಶ್ವಾಃ ಇತ್ಯಾದಿಗಳಿಂದ ಉದಾಹರಿಸುತ್ತಾರೆ. ಹೀಗೆ ಹೇಳಿರುವವುಗಳನ್ನು ಇನ್ನೂ ಹೇಳದೇ ಇರುವವುಗಳನ್ನೂ ಸಂಗ್ರಹಿಸಬೇಕೆಂದು **ಯತ್ಕಿಂಚ** ಎಂಬ ವಾಕ್ಯದಿಂದ ವಿವರಿಸಿರುತ್ತಾರೆ.

**ಪ್ರಜ್ಞಾನೇ ಪ್ರತಿಷ್ಠಿತಂ ಪ್ರಜ್ಞಾನೇತ್ರೋ ಲೋಕಃ ಪ್ರಜ್ಞಾ ಪ್ರತಿಷ್ಠಾ ॥**

**ಯದೇತಜ್ಜಗದುತ್ಪತ್ತಿಸ್ಥಿತಿಲಯಕಾರಣತ್ವಂ ಚೈತನ್ಯಸ್ಯ ಪ್ರಜ್ಞಾನೇತ್ರಪ್ರದೇನ ಸಂಗೃಹ್ಯೋಕ್ತಂ ತದೇವ ವಿವೃಣೋತಿ— ಪ್ರಜ್ಞಾನೇ ನಿರುಪಾಧಿಕ ಚೈತನ್ಯೇ ಪೂರ್ವೋಕ್ತಂ ಸರ್ವಂ ಜಗತ್ಪ್ರತಿಷ್ಠಿತಂ ರಜ್ಜ್ವಾಂ ಸರ್ಪವದಾರೋಪಿತಮ್ । ಅನೇನೋತ್ಪತ್ತಿಹೇತುತ್ವಮುಕ್ತಮ್। ಲೋಕಃ ಸರ್ವಪ್ರಾಣಿಸಮೂಹಃ ಪ್ರಜ್ಞಾನೇತ್ರಃ । ಪ್ರಜ್ಞಾ ಚೈತನ್ಯಮೇವ ನೇತ್ರಂ ವ್ಯವಹಾರಕಾರಣಂ ಯಸ್ಯಾಸೌ ಪಜ್ಞಾನೇತ್ರಃ । ಅನೇನ ಸ್ಥಿತಿಹೇತುತ್ವಮುಕ್ತಮ್ । ಪ್ರಜ್ಞಾ ಚೈತನ್ಯಂ ಪ್ರತಿಷ್ಠಾ ಲಯಸ್ಥಾನಮ್। ಪ್ರತಿತಿಷ್ಠತಿ ವಿಲೀಯತೇಽತ್ರೇತಿ ವ್ಯುತ್ಪತ್ತೇಃ । ಅನೇನ ಸಂಹಾರಹೇತುತ್ವಮುಕ್ತಮ್ । ಏತಾವತಾ ಶಾಖಾಂತರಪ್ರಸಿದ್ಧಂ ಜಗಜ್ಜನ್ಮಸ್ಥಿತಿಲಯಕಾರಣತ್ವಾಖ್ಯಂ ಬ್ರಹ್ಮಣಸ್ತಟಸ್ಥಲಕ್ಷಣಮುಕ್ತಂ ಭವತಿ । ಏವಂ ತು ಲಕ್ಷಣಂ ತೈತ್ತರೀಯಾ ವಿಸ್ಪಷ್ಟಮಾಮನಂತಿ— "ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ಪ್ರಯಂತ್ಯಭಿಸಂವಿಶಂತಿ । ತದ್ವಿಜಿಜ್ಞಾಸಸ್ವ । ತದ್ಬ್ರಹ್ಮ ।" (ತೈ-೩-೧-೧) ಇತಿ ।**

ಜಗದುತ್ಪತ್ತಿಸ್ಥಿತಿಲಯಕ್ಕೆ ಮೂಲಕಾರಣವಾದ ಚೈತನ್ಯವನ್ನು ಪ್ರಜ್ಞಾನೇತ್ರಪದದಿಂದ ಹಿಂದೆ ಸಂಗ್ರಹವಾಗಿ ಹೇಳಿರುವುದನ್ನು ವಿವರಿಸುತ್ತಾರೆ. ಪ್ರಜ್ಞಾನ ಅಂದರೆ ಯಾವ ಉಪಾಧಿಯೂ ಇಲ್ಲದ ಚೈತನ್ಯದಲ್ಲಿ ಪೂರ್ವೋಕ್ತವಾದ ಸಕಲ ಜಗತ್ತೂ ಹಗ್ಗದಲ್ಲಿ ಸರ್ಪದಂತೆ ಆರೋಪಿತವಾಗಿದೆ. ಇದರಿಂದ ಅದು ಉತ್ಪತ್ತಿಹೇತುವೆಂದು ವ್ಯಕ್ತವಾಗುತ್ತದೆ. ಲೋಕ ಅಂದರೆ ಸಕಲ ಪ್ರಾಣಿಸಮೂಹವೂ ಪ್ರಜ್ಞಾನೇತ್ರವಾಗಿರುತ್ತದೆ. ಚೈತನ್ಯವೇ ವ್ಯಪಹಾರಕಾರಣವಾಗಿರುವುದೆಂದರ್ಥ. ಇದರಿಂದ ಸ್ಥಿತಿಕಾರಣತ್ವ ವ್ಯಕ್ತವಾಗುತ್ತದೆ. ಚೈತನ್ಯವೇ ಪ್ರತಿಷ್ಠಾ ಅಂದರೆ ಲಯಸ್ಥಾನವಾಗಿರುತ್ತದೆ. ಪ್ರತಿತಿಷ್ಠತಿ= ವಿಲೀಯತೇ ಅತ್ರ ಇತಿ ಪ್ರತಿಷ್ಠಾ (ಇಲ್ಲಿ ವಿಲೀನವಾಗುತ್ತದೆಯೆಂದರ್ಥ). ಇದರಿಂದ ಸಂಹಾರಕಾರಣವೆಂದು ವ್ಯಕ್ತವಾಗುತ್ತದೆ. ಹೀಗೆ ಶಾಖಾಂತರದಲ್ಲಿ ಪ್ರಸಿದ್ಧವಾದ ಬ್ರಹ್ಮನ ತಟಸ್ಥಲಕ್ಷಣವು ಅಂದರೆ ಜಗಜ್ಜನ್ಮಸ್ಥಿತಿಲಯಕಾರಣತ್ವವನ್ನು ಹೇಳಿದಂತಾಯಿತು. ಇದನ್ನೇ **ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನಜಾತಾನಿ ಜೀವಂತಿ । ಯತ್ಪ್ರಯಂತ್ಯಭಿಸಂವಿಶಂತಿ ತದ್ವಿಜಿಜ್ಞಾಸಸ್ವ । ತದ್ಬ್ರಹ್ಮ ॥** (ತೈ-೩-೧-೧) ಎಂದು ಸ್ಪಷ್ಟವಾಗಿ ತೈತ್ತಿರೀಯದಲ್ಲಿ ಹೇಳಿದೆ.

**ಪ್ರಜ್ಞಾನಂ ಬ್ರಹ್ಮ ॥**

**ತದೇವಂ ವಿಚಾರದ್ವಯೇನ ತತ್ತ್ವಂ ಪದಾರ್ಥೌ ಶೋಧಿತೌ । ಅಥ ಮಹಾವಾಕ್ಯೇನ ತಯೋರೈಕ್ಯಂ ದರ್ಶಯತಿ— "ಸರ್ವಾಣ್ಯೇವೈತಾನಿ ಪ್ರಜ್ಞಾನಸ್ಯ ನಾಮಧೇಯಾನಿ ಭವಂತಿ" (ಐ-ಆ-೨-ಅ-೬-ಖಂ-೧) ಇತಿ ವಾಕ್ಯೇನ ದೇಹೇಂದ್ರಿಯಾದಿಸಾಕ್ಷಿರೂಪಂ ಯತ್ಪ್ರಜ್ಞಾನಂ ತ್ವಂಪ-**

ದಾರ್ಥರೂಪಂ ನಿರ್ಣೀತಂ ತದೇವೈಷ ಬ್ರಹ್ಮೇತ್ಯಾದಿವಾಕ್ಯೇನ ಜಗತ್ಕಾರಣತಯಾ ನಿರ್ಣೀತಂ ಪರಂ ಬ್ರಹ್ಮ । ನ ಚಾನಯೋರೀಷದಪಿ ಭೇದೋಽಸ್ತಿ । ಅಹಂಪ್ರತ್ಯಯ ಗಮ್ಯತ್ವಾಕಾರೇಣ ಯದಾ ವಿವಕ್ಷ್ಯತೇ ತದಾ ಜೀವ ಇತ್ಯುಚ್ಯತೇ । ಯದಾ ತು ಶಾಸ್ತ್ರಪ್ರತಿಪಾದ್ಯತ್ವಾಕಾರೋ ವಿವಕ್ಷಿತಸ್ತ-ದಾನೀಂ ಬ್ರಹ್ಮೇತ್ಯಭಿಧೀಯತೇ। ಅತೋ ವ್ಯವಹಾರಭೇದಮಾತ್ರಂ ನ ತು ತತ್ತ್ವತೋ ಭೇದೋಽಸ್ತಿ। ನ ಚೈವಂ ಸತಿ ಪುನರುಕ್ತಿಪ್ರಸಂಗಃ । ಅಬ್ರಹ್ಮತ್ವಪರೋಕ್ಷತ್ವಯೋರ್ವ್ಯಾವರ್ತಯೋರ್ಭೇದೇನ ಪದದ್ವಯೋಪಯೋಗಾತ್ ॥

ಏತಚ್ಚ ವಾಕ್ಯವೃತ್ತೌ ವಿಸ್ಪಷ್ಟಮಭಿಹಿತಂ—

" ಪ್ರತ್ಯಗ್ಬೋಧೋ ಯ ಆಭಾತಿ ಸೋಽದ್ವಯಾನಂದಲಕ್ಷಣಃ ॥
ಅದ್ವಯಾನಂದರೂಪಶ್ಚ ಪ್ರತ್ಯಗ್ಬೋಧೈಕಲಕ್ಷಣಃ ॥
ಇತ್ಥಮನ್ಯೋನ್ಯತಾದಾತ್ಮ್ಯಪ್ರತಿಪತ್ತಿರ್ಯದಾಭವೇತ್ ।
ಅಬ್ರಹ್ಮತ್ವಂ ತ್ವಮರ್ಥಸ್ಯ ವ್ಯಾವರ್ತೇತ ತದೈವ ಹಿ ॥
ತದರ್ಥಸ್ಯ ಚ ಪಾರೋಕ್ಷ್ಯಂ ಯದ್ಯೇವಂ ಕಿಂ ತತಃ ಶೃಣು ॥
ಪೂರ್ಣಾನಂದೈಕರೂಪೇಣ ಪ್ರತ್ಯಗ್ಬೋಧೋಽವತಿಷ್ಠತೇ " ಇತಿ ॥

ಇತ್ಥಂ ಚತುರ್ಥಾಧ್ಯಾಯೇ—" ಸ ಜಾತೋ ಭೂತಾನ್ಯಭಿವ್ಯೈಖ್ಯತ್ " (ಐ-ಆ-೨-ಅ-೪-ಖಂ-೩) ಇತ್ಯಾದಿನಾಽಪವಾದಪ್ರಕರಣೇನ ಸಂಗ್ರಹೀತಮಾತ್ಮತತ್ತ್ವಮಸ್ಮಿನ್ನಧ್ಯಾಯೇ ತತ್ತ್ವಂಪದಾರ್ಥವಿಚಾರ-ಮುಖೇನ ಪ್ರಪಂಚಿತಮ್ । ಅಥ ತತ್ತ್ವಜ್ಞಾನಫಲಂ ದರ್ಶಯತಿ—

ಪೂರ್ವೋಕ್ತ ಎರಡು ವಿಚಾರಗಳಿಂದ ತತ್, ತ್ವಂ ಪದಾರ್ಥಗಳನ್ನು ಶೋಧಿಸಿ, ನಿಷ್ಕೃಷ್ಟವಾಗಿ ತಿಳಿಸಿ ಈಗ ಮಹಾವಾಕ್ಯದಿಂದ ಅವುಗಳಿಗೆ ಐಕ್ಯವನ್ನು ತೋರಿಸುತ್ತಾರೆ. **ಸರ್ವಾಣ್ಯೇವೈತಾನಿ ಪ್ರಜ್ಞಾನಸ್ಯ ನಾಮಧೇಯಾನಿ ಭವಂತಿ** ಎಂಬ ಪೂರ್ವೋಕ್ತವಾಕ್ಯದಿಂದ ದೇಹೇಂದ್ರಿಯಾದಿಗಳಿಗೆ ಸಾಕ್ಷಿರೂಪವಾಗಿ ಯಾವ ಪ್ರಜ್ಞಾನವನ್ನು ತ್ವಂ ಪದಾರ್ಥವೆಂದು ಹೇಳಿದೆಯೋ ಅದೇ ಜಗತ್ಕಾರಣವೆಂದು ನಿರ್ಣಯಿಸಲ್ಪಟ್ಟ ಪರಬ್ರಹ್ಮವು ಪರಬ್ರಹ್ಮವಸ್ತುವಿಗೂ ಪ್ರಜ್ಞಾನಕ್ಕೂ ಯಾವ ಭೇದವೂ ಇಲ್ಲ. ಇದೇ ಅಹಂ (ನಾನು) ಪ್ರತ್ಯಯರೂಪವಾಗಿ ವಿವಕ್ಷಿತವಾದರೆ ಜೀವನೆಂದು ಕರೆಯಲ್ಪಡುತ್ತಾನೆ. ಶಾಸ್ತ್ರಪ್ರತಿಪಾದ್ಯರೂಪದಿಂದ ವಿವಕ್ಷಿತನಾದರೆ ಬ್ರಹ್ಮನೆಂದು ಹೇಳಲ್ಪಡುತ್ತಾನೆ. ಆದುದರಿಂದ ವ್ಯವಹಾರಭೇದವಲ್ಲದೆ ತಾತ್ವಿಕವಾದ ಭೇದವಿಲ್ಲ. ಎರಡೂ ಒಂದೇ ಪದಾರ್ಥವಾದರೆ ಪೌನರುಕ್ತ್ಯ ಬರುವುದಿಲ್ಲವೇ ಅಂದರೆ ತ್ವಂಪದಾರ್ಥದಲ್ಲಿ ಅಬ್ರಹ್ಮತ್ವವನ್ನೂ, ತತ್ಪದಾರ್ಥವಾದರೆ ಪರೋಕ್ಷತ್ವವನ್ನೂ ವ್ಯಾವೃತ್ತಿಪಡಿಸಲು ಬೇರೆಬೇರೆಯಾಗಿ ಹೇಳಿದೆಯೆಂದು ತಿಳಿಯಬೇಕು. ವಾಕ್ಯವೃತ್ತಿಯಲ್ಲಿ ಈ ವಿಷಯವನ್ನು ಸ್ಪಷ್ಟವಾಗಿ ವಿವರಿಸುತ್ತಾರೆ. ಅಹಂ ಅಹಂ ಎಂಬ ಪ್ರತ್ಯಗ್ಬೋಧವೇನಿದೆಯೋ ಅದೇ ಅದ್ವಯಾನಂದರೂಪವು. ಅದ್ವಯಾನಂದಪರಬ್ರಹ್ಮಸ್ವರೂಪವೇ ಪ್ರತ್ಯಗ್ಬೋಧವು. ಹೀಗೆ ಅನ್ಯೋನ್ಯತಾದಾತ್ಮ್ಯಪ್ರತಿಪತ್ತಿಯಿಂದ ತ್ವಮರ್ಥದಲ್ಲಿರುವ ಅಬ್ರಹ್ಮತ್ವವು (ಬ್ರಹ್ಮಸ್ವರೂಪವಲ್ಲವೆಂಬ ಭಾವವು) ವ್ಯಾವೃತ್ತವಾಗುತ್ತದೆ. ಹಾಗೆಯೇ ತತ್ಪದಾರ್ಥದಲ್ಲಿರುವ ಪರೋಕ್ಷತ್ವವೂ (ಪ್ರತ್ಯಕ್ಷಾನುಭವವಿಲ್ಲದಿರುವುದು) ವ್ಯಾವೃತ್ತವಾಗುತ್ತದೆ. ಆಗ ಪೂರ್ಣಾನಂದೈಕರೂಪದಿಂದ ಪ್ರತ್ಯಗ್ಬೋಧಮಾತ್ರ ಉಳಿಯುತ್ತದೆ. (ನಾನೇ ಪರಬ್ರಹ್ಮಸ್ವರೂಪನು ಎಂಬ ಅನುಭವ)

ಸ ಏತೇನ ಪ್ರಜ್ಞೇನಾತ್ಮನಾಸ್ಮಾಲ್ಲೋಕಾದುತ್ಕ್ರಮ್ಯಾಮುಷ್ಮಿನ್-
ತ್ಸ್ವರ್ಗೇ ಲೋಕೇ ಸರ್ವಾನ್ಕಾಮಾನಾಪ್ತ್ವಾಮೃತಃ ಸಮಭವತ್ಸ-
ಮಭವತ್ ||

ಯಃ ಪುಮಾನ್ " ಪ್ರಜ್ಞಾನಂ ಬ್ರಹ್ಮ " ಇತ್ಯೇವಂ ಜಾನಾತಿ ಸ ಪುಮಾನೇತೇನ ಪ್ರಜ್ಞೇ-ನಾತ್ಮನಾ ಚೈತನ್ಯಸ್ವರೂಪೇಣ ಸ್ವಯಮಾವಿರ್ಭವತಿ । ತದೂರ್ಧ್ವಂ ವಿದೇಹಮುಕ್ತಿಂ ಪ್ರತಿಪದ್ಯತೇ । ತನ್ಮುಕ್ತಿಪ್ರತಿಪಾದಕಮಸ್ಮಾಲ್ಲೋಕಾದಿತ್ಯಾದಿವಾಕ್ಯಂ ಪೂರ್ವಸ್ಮಿನ್ಪಂಚಮಾಧ್ಯಾಯೇ ವ್ಯಾಖ್ಯಾತಂ । ತಸ್ಯ ವಾಕ್ಯಸ್ಯ ಪುನರಪ್ಯತ್ರೋಕ್ತಿರ್ವಿದ್ಯೋಪಸಂಹಾರಾರ್ಥಾ । ಸಮಭವದಿತ್ಯಭ್ಯಾಸೋಽಧ್ಯಾಯ-ಸಮಾಪ್ತ್ಯರ್ಥಃ ||

ನಾಲ್ಕನೇ ಅಧ್ಯಾಯದಲ್ಲಿ ಅಪವಾದಪ್ರಕರಣದಿಂದ ಸಂಗ್ರಹೀತವಾದ ಆತ್ಮತತ್ತ್ವವನ್ನು ಈ ಅಧ್ಯಾಯದಲ್ಲಿ ತತ್, ತ್ವಂಪದಾರ್ಥಗಳ ವಿಚಾರದಿಂದ ವಿಶದಪಡಿಸಿದ್ದಾಯಿತು. ಈಗ ಈತತ್ತ್ವಜ್ಞಾನದ ಫಲವನ್ನು ವಿವರಿಸುತ್ತಾರೆ. ಯಾವ ಪುರುಷನು. ಪ್ರಜ್ಞಾನವೇ ಬ್ರಹ್ಮವೆಂದು ತಿಳಿಯುತ್ತಾನೋ ಅವನು ಪ್ರಜ್ಞಾನಸ್ವರೂಪವಾದ ಆತ್ಮಚೈತನ್ಯ ಸ್ವರೂಪವನ್ನೇ ಹೊಂದುತ್ತಾನೆ. ಆಮೇಲೆ ವಿದೇಹಮುಕ್ತಿಯನ್ನು ಪಡೆಯುತ್ತಾನೆ. ವಿದೇಹಮುಕ್ತಿಪಡೆದಮೇಲೆ ಊರ್ಧ್ವಲೋಕಪ್ರಾಪ್ತಿ ಮುಂತಾದವುಗಳನ್ನು ಐದನೆಯ ಅಧ್ಯಾಯದಲ್ಲಿ ವಿವರಿಸಿದಂತೆಯೇ ತಿಳಿಯಬೇಕು. ಆತ್ಮವಿದ್ಯೆಯ ಉಪಸಂಹಾರಕ್ಕೋಸ್ಕರ ಅದೇವಾಕ್ಯ ಇಲ್ಲಿ ಪುನಃ ಹೇಳಿದೆ. ಅಧ್ಯಾಯಸಮಾಪ್ತಿಯನ್ನು ತಿಳಿಸಲು ಆವೃತ್ತಿ ತೋರಿಸಿದೆ.

---

## *English Translation*

---

1. Let the women go back to their place.

2. Who is he whom we mediate on as the Self ? Which is the Self ?

3. That by which we see (form), that by which we hear (sound), that by which we perceive smells, that by which we utter speech, that by which we distinguish sweet and not sweet, and what comes from the heart and the mind, namely, perception, command, understanding, knowledge, wisdom, seeing,

holding, thinking, considering, readiness (or suffering), remembering, conceiving, willing, breathing, loving, desiriug ?

4. No, all these are various names only of knowledge (the true Self).

5. And that Self, consisting of (Knowledge), is Brahman (m), it is Indra, it is Pragapati, all these Devas, these five great elements, earth, air, ether, water, fire, these and those which are, as it were, small and mixed, and seeds of this kind and that kind, born from eggs, born from the womb, born from heat, born of germs, horses, cows, men, elephants, and whatsover breathes, whether walking or flying, and what is immovable—all that is lead (produced) by knowledge (the Self).

6. It rests on knowledge (the Self). The world is led (produced) by knowledge (the Self). Knowledge is its cause.

7. Knowledge is Brahman.

8. He (Vamadeva), having by this conscious self stepped forth from this world, and having obtained all desires in that heavenly world, became immortal, yea, he became immortal. Thus it is Om.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಾಣ್ಯಕಕಾಂಡಭಾಷ್ಯೇ ದ್ವಿತಿಯಾರಣ್ಯಕೇ
ಷಷ್ಠಾಽಧ್ಯಾಯೇ ಪ್ರಥಮಃ ಖಂಡಃ

ಇತಿ ಬಹ್ವೃಚ ಬ್ರಾಹ್ಮಣಾರಣ್ಯಕ ಕಾಂಡೇ ದ್ವಿತೀಯಾರಣ್ಯಕೇ ಷಷ್ಠೋಽಧ್ಯಾಯಃ ||

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ: ದ್ವಿತೀಯಾರಣ್ಯಕದ
ಆರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು

ಇಲ್ಲಿಗೆ ಸಾಯಣಾಚಾರ್ಯ ವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಎರಡನೆಯ ಆರಣ್ಯಕದಲ್ಲಿ
ಆರನೆಯ ಅಧ್ಯಾಯವು ಸಮಾಪ್ತವಾದುದು ||

———

# ಅಥ ದ್ವಿತೀಯಾರಣ್ಯಕೇ ಸಪ್ತಮಾಧ್ಯಾಯೇ ಪ್ರಥಮಃ ಖಂಡಃ

### ಎರಡನೆಯ ಆರಣ್ಯಕದ ಏಳನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

ವಾಙ್ಮೇ ಮನಸಿ ಪ್ರತಿಷ್ಠಿತಾ ಮನೋ ಮೇ ವಾಚಿ ಪ್ರತಿಷ್ಠಿತಮಾವಿ-
ರಾವೀರ್ಮ ಏಧಿ ವೇದಸ್ಯ ಮ ಆಣೀ ಸ್ಥಃ ಶ್ರುತಂ ಮೇ ಮಾ
ಪ್ರಹಾಸೀರನೇನಾಧೀತೇನಾಹೋರಾತ್ರಾನ್ತ್ಸಂದಧಾಮ್ಯೃತಂ ವದಿ-
ಷ್ಯಾಮಿ ಸತ್ಯಂ ವದಿಷ್ಯಾಮಿ ತನ್ಮಾಮವತು ತದ್ವಕ್ತಾರಮವತ್ವವತು
ಮಾಮವತು ವಕ್ತಾರಮವತು ವಕ್ತಾರಮ್ ||

ಷಷ್ಠೇ ತತ್ತ್ವವಿದ್ಯಾಂ ಪರಿಸಮಾಪ್ಯ ಸಪ್ತಮೇ ಶಾಂತಿಕರಂ ಮಂತ್ರಂ ಪಠತಿ—ಯಥೋಕ್ತ-ತತ್ತ್ವವಿದ್ಯಾಪ್ರತಿಪಾದಕಗ್ರಂಥಪಾಠೇ ಪ್ರವೃತ್ತಾ ಮದೀಯಾ ವಾಕ್ಸರ್ವದಾ ಮನಸಿ ಪ್ರತಿಷ್ಠಿತಾ | ಮನಸಾ ಯದ್ಯಚ್ಛಬ್ದಜಾತಂ ವಿವಕ್ಷಿತಂ ತದೇವ ಪಠತಿ | ಮನಶ್ಚ ಮದೀಯವಾಚಿ ಪ್ರತಿಷ್ಠಿತಮ್ | ಯದ್ಯದ್ವಿದ್ಯಾಪ್ರತಿಪಾದಕತ್ವೇನ ವಕ್ತವ್ಯಂ ಶಬ್ದಜಾತಮಸ್ತಿ ತದೇವ ಮನಸಾ ವಿವಕ್ಷ್ಯತೇ | ಏವ-ಮನ್ಯೋನ್ಯಾನುಗೃಹೀತೇ ವಾಙ್ಮನಸೇ ವಿದ್ಯಾರ್ಥಂ ಗ್ರಂಥಂ ಸಾಕಲ್ಯೇನಾವಧಾರಯಿತುಂ ಶಕ್ನುತಃ | ಮನಸಃ ಸಾವಧಾನತ್ವಾಭಾವೇ ವಾಗಿಂದ್ರಿಯಂ ಸುಪ್ತೋನ್ಮತ್ತಪ್ರಲಾಪಾದಿವದ್ಯತ್ಕಿಂಚಿದಸಂಗತಂ ಬ್ರೂಯಾತ್ | ತಥಾ ಚ ವಾಚಃ ಪಾಟವಾಭಾವೇ ಸತಿ ಗದ್ಗದರೂಪಯಾ ವಾಚಾ ವಿವಕ್ಷಿತಂ ಸರ್ವಂ ಯಥಾವನ್ನೋಚ್ಚಾರ್ಯತೇ | ಅತಸ್ತಯೋರನ್ಯೋನ್ಯಾನುಕೂಲ್ಯಮಸ್ತು ಇತ್ಯೇವಂ ಪ್ರಾರ್ಥ್ಯತೇ | ಆವಿಃ ಶಬ್ದೇನ ಸ್ವಪ್ರಕಾಶಂ ಬ್ರಹ್ಮಚೈತನ್ಯಮುಚ್ಯತೇ | ಪ್ರಜ್ಞಾನಶಬ್ದೇನ ವ್ಯವಹೃತತ್ವಾತ್ತಸ್ಯಾವಿ-ರ್ಭೂತರೂಪತ್ವಮ್ | ತಥಾವಿಧ ಹೇ ಆತ್ಮನ್ಮೇ ಮದರ್ಥಮಾವೀರೇಧಿ | ಅವಿದ್ಯಾವರಣಾಪನಯ-ನೇನ ಪ್ರಕಟೀಭವ | ಹೇ ವಾಙ್ಮನಸೇ ಮೇ ಮದರ್ಥಂ ವೇದಸ್ಯ ಯಥೋಕ್ತತತ್ತ್ವವಿದ್ಯಾಪ್ರತಿ-ಪಾದಕಸ್ಯ ಗ್ರಂಥಸ್ಯಾಽಽಣೀ ಸ್ಥಃ | ವಿದ್ಯಾಯಾ ಆನಯನಸಮರ್ಥೇ ಭವತಮ್ | ಮೇ ಶ್ರುತಂ ಮಯಾ ಶ್ರೋತ್ರೇಣಾವಗತಂ ಗ್ರಂಥಾರ್ಥಜಾತಂ ಮಾ ಪ್ರಹಾಸೀರ್ಮಾ ಪರಿತ್ಯಜತು, ವಿಸ್ಮೃತಂ ಮಾ ಭೂದಿತ್ಯರ್ಥಃ | ಅನೇನಾಧೀತೇನ ವಿಸ್ಮರಣರಹಿತೇನ ಗ್ರಂಥೇನಾಹೋರಾತ್ರಾನ್ಸಂದಧಾಮಿ ಸಂಯೋಜಯಾಮಿ | ಅಹನಿ ರಾತ್ರೌ ಚಾಲಸ್ಯಂ ಪರಿತ್ಯಜ್ಯ ನಿರಂತರಂ ಪಠಾಮೀತ್ಯರ್ಥಃ | ತಸ್ಮಿನ್ಪ-ಠಿತೇಗ್ರಂಥ ಋತಂ ಪರಮಾತ್ಮಭೂತಂ ವಸ್ತು ವದಿಷ್ಯಾಮಿ| ವಿಪರೀತಾರ್ಥವದನಂ ಕದಾಚಿದಪಿ ಮಾ ಭೂದಿತ್ಯರ್ಥಃ | ಋತಂ ಮಾನಸಂ, ಸತ್ಯಂ ವಾಚಿಕಂ, ಮನಸಾ ವಸ್ತುತತ್ತ್ವಂ ವಿಚಾರ್ಯ ವಾಚಾ

**ವದಿಷ್ಯಾಮೀತ್ಯರ್ಥಃ । ತನ್ಮಯಾ ವಕ್ಷ್ಯಮಾಣಂ ಬ್ರಹ್ಮತತ್ತ್ವಂ ಮಾಂ ಶಿಷ್ಯಮವತು ಸಮ್ಯಗ್ಬೋಧೇನ ಪಾಲಯತು । ತಥಾ ತದ್ಬ್ರಹ್ಮತತ್ತ್ವಂ ವಕ್ತಾರಮಾಚಾರ್ಯಮವತು, ಬೋಧಕತ್ವಸಾಮರ್ಥ್ಯಪ್ರದಾನೇನ ಪಾಲಯತು । ಪುನರಪ್ಯವತು ಮಾಮಿತ್ಯಾದ್ಯುಕ್ತಿಃ ಫಲವಿಷಯಾ । ಪೂರ್ವಂ ಸಾಧನಕಾಲೇ ಶಿಷ್ಯಾಚಾರ್ಯಯೋಃ ಪಾಲನಂ ಪ್ರಾರ್ಥಿತಮಿದಾನೀಂ ಫಲಕಾಲೇಽಪಿ ಪ್ರಾರ್ಥ್ಯತೇ । ತತ್ರ ಶಿಷ್ಯಸ್ಯಾವಿದ್ಯಾತತ್ಕಾರ್ಯನಿವೃತ್ತಿಃ ಫಲಮ್ । ಆಚಾರ್ಯಸ್ಯತಾದೃಶಶಿಷ್ಯದರ್ಶನೇನ ವಿದ್ಯಾಸಂಪ್ರದಾಯಪ್ರವೃತ್ತಿಪ್ರಯುಕ್ತಃ ಪರಿತೋಷಃ ಫಲಮ್ । ಅನೇನ ಮಂತ್ರಪಾಠೇನ ವಿದ್ಯೋತ್ಪತ್ತೇಃ ಪುರಾ ವಿದ್ಯಾಪ್ರತಿಬಂಧಕಾ ವಿಘ್ನಾಃ ಪರಿಹ್ರಿಯಂತೇ । ವಿದ್ಯೋತ್ಪತ್ತೇರೂರ್ಧ್ವಮಸಂಭಾವನಾವಿಪರೀತಭಾವನೋತ್ಪಾದಕಾ ವಿಘ್ನಾಃ ಪರಿಹ್ರಿಯಂತೇ । ಅವತು ವಕ್ತಾರಮಿತ್ಯಾಭ್ಯಾಸೋಽಧ್ಯಾಯಸಮಾಪ್ತ್ಯರ್ಥೋ ದ್ವಿತೀಯಾರಣ್ಯಕ ಸಮಾಪ್ತ್ಯರ್ಥಶ್ಚ ॥**

ಆರನೇ ಅಧ್ಯಾಯದಲ್ಲಿ ತತ್ತ್ವವಿದ್ಯೆಯನ್ನು ಪರಿಸಮಾಪ್ತಿಗೊಳಿಸಿ ಈಗ ಏಳನೆಯ ಅಧ್ಯಾಯದಲ್ಲಿ ಶಾಂತಿಪಾಠವನ್ನು ತೋರಿಸುತ್ತಾರೆ. ಪೂರ್ವೋಕ್ತವಾದ ತತ್ತ್ವವಿದ್ಯಾಪ್ರತಿಪಾದಕವಾದ ಗ್ರಂಥಪಾಠದಲ್ಲಿ ಪ್ರವೃತ್ತವಾದ ನನ್ನ ವಾಕ್ಕು (ಮಾತು) ಮನಸ್ಸಿನಲ್ಲಿ ಪ್ರತಿಷ್ಠಿತವಾಗಿದೆ. ಮನಸ್ಸಿನಿಂದ ವಿವಕ್ಷಿತವಾದ ಶಬ್ದವನ್ನೇ ಬಾಯಿಂದ ಹೇಳುತ್ತಾರೆ. ಮನಸ್ಸೂ ಕೂಡಾ ನನ್ನ ವಾಕ್ಕಿನಲ್ಲಿ ಪ್ರತಿಷ್ಠಿತವಾಗಿದೆ. ವಿದ್ಯಾಪ್ರತಿಪಾದಕಶಬ್ದಜಾತವೇನಿದೆಯೋ ಅದನ್ನೇ ಮನಸ್ಸಿನಿಂದ ಯೋಚಿಸುತ್ತಾರೆ. ಹೀಗೆ ಅನ್ಯೋನ್ಯವಾಗಿ ಅನುಗೃಹೀತವಾದ ವಾಕ್ಕೂ ಮನಸ್ಸೂ ಸಂಪೂರ್ಣಗ್ರಂಥಾವಲೋಕನಕ್ಕೆ ಸಮರ್ಥವಾಗುತ್ತವೆ. ಮನಸ್ಸು ಸ್ತಿಮಿತವಾಗದಿದ್ದರೆ ವಾಗಿಂದ್ರಿಯವು ಉನ್ಮತ್ತಪ್ರಲಾಪದಂತೆ ಅಸಂಗತವಾಗಿ ಮಾತನಾಡಬಹುದು. ವಾಕ್ಪಟುತ್ವವಿಲ್ಲದಿದ್ದರೂ ವಿವಕ್ಷಿತವಾದುದೆಲ್ಲವನ್ನೂ ಹೇಳಲಾರನು. ಆದುದರಿಂದ ಅವುಗಳಿಗೆ ಪರಸ್ಪರಾನುಕೂಲ್ಯವುಂಟಾಗಲಿ ಎಂದು ಪ್ರಾರ್ಥಿಸುತ್ತಾರೆ. ಆವಿಃಶಬ್ದದಿಂದ ಸ್ವಪ್ರಕಾಶವಾದ ಬ್ರಹ್ಮಚೈತನ್ಯ ಹೇಳಿದೆ. ಪ್ರಜ್ಞಾನಶಬ್ದದಿಂದ ಅದು ವ್ಯವಹೃತವಾದುದರಿಂದ ಅದು ಆವಿರ್ಭೂತವಾಗಿದೆ ಅಂದರೆ ಪ್ರಕಟವಾಗಿದೆ. ಎಲೇ ಆತ್ಮನೇ ನೀನು ನನಗೋಸ್ಕರ ಅವಿದ್ಯಾ ಆವರಣವನ್ನು ಹೋಗಲಾಡಿಸಿ ಪ್ರಕಟನಾಗು. ವಾಕ್ ಮತ್ತು ಮನಸ್ಸುಗಳೇ ನೀವೂ ನನಗೆ ತತ್ತ್ವವಿದ್ಯೆಯನ್ನೊದಗಿಸಲು ಸಮರ್ಥರಾಗಿರಿ. ಶ್ರೋತ್ರೇಂದ್ರಿಯದಿಂದ ಅವಗತವಾದ ಗ್ರಂಥವು ನನ್ನನ್ನು ಬಿಟ್ಟುಹೋಗದಿರಲಿ, ವಿಸ್ಮೃತಿಯಾಗದಿರಲಿ ಎಂದು ತಾತ್ಪರ್ಯ. ಈ ವಿಸ್ಮೃತಿಯಿಲ್ಲದಿರುವ ಗ್ರಂಥದಿಂದ ಹಗಲೂರಾತ್ರಿಗಳಿಗೆ ಸಂಬಂಧವನ್ನು ಕಲ್ಪಿಸುತ್ತೇನೆ. ಆಲಸ್ಯವನ್ನು ಬಿಟ್ಟು ಹಗೂರಾತ್ರಿ ಓದುತ್ತೇನೆ ಎಂದರ್ಥ. ಈ ಗ್ರಂಥಪಾಠದಲ್ಲಿ ಯಾವಾಗಲೂ ಪರಮಾತ್ಮಭೂತವಸ್ತುವನ್ನೇ ಹೇಳುತ್ತೇನೆ. ವಿಪರೀತಾರ್ಥವನ್ನು ಎಂದೂ ಹೇಳುವುದಿಲ್ಲ ಎಂದರ್ಥ. ಮಾನಸವಾದುದಕ್ಕೆ ಋತವೆಂದೂ ವಾಚಿಕವಾದುದಕ್ಕೆ ಸತ್ಯವೆಂದೂ ಹೆಸರು. ಮನಸ್ಸಿನಿಂದ ವಸ್ತುತತ್ತ್ವವನ್ನು ವಿಚಾರಿಸಿ ಮಾತಿನಿಂದ ಹೇಳುತ್ತೇನೆ ಎಂದು ತಾತ್ಪರ್ಯ. ಆ ಬ್ರಹ್ಮತತ್ತ್ವವು ಶಿಷ್ಯನಾದ ನನ್ನನ್ನು ಉತ್ತಮ ತಿಳಿವಳಿಕೆಯಿಂದ ರಕ್ಷಿಸಲಿ ಮತ್ತು ನನ್ನ ಆಚಾರ್ಯನನ್ನು ಬೋಧಕತ್ವಸಾಮರ್ಥ್ಯವನ್ನು ಕೊಡುವುದರಿಂದ ರಕ್ಷಿಸಲಿ. ಎರಡೇಸಾರಿ ರಕ್ಷಿಸಲಿ ಎಂದು ಫಲವಿಷಯಕವಾಗಿ ಹೇಳಿದೆ. ಹಿಂದೆ ಸಾಧನಕಾಲದಲ್ಲಿ ರಕ್ಷಿಸಲೆಂದು ಹೇಳಿರುವುದು. ಶಿಷ್ಯನಿಗೆ ಅವಿದ್ಯಾ ಮತ್ತು ಅದರ ಕಾರ್ಯನಿವೃತ್ತಿಯೇ ಫಲ. ಆಚಾರ್ಯನಿಗೆ ಆ ರೀತಿಯಾದ ಶಿಷ್ಯನು ದೊರೆತಿರುವುದರಿಂದ ವಿದ್ಯಾಸಂಪ್ರದಾಯಪ್ರಯುಕ್ತವಾದ ಸಂತೋಷವೇ ಫಲ. ಈ ಮಂತ್ರಪಾಠದಿಂದ ವಿದ್ಯೋತ್ಪತ್ತಿಯಾಗಬೇಕಾದರೆ ಮೊದಲು ವಿದ್ಯಾಪ್ರತಿಬಂಧಕಗಳಾದ ವಿಘ್ನಗಳು ನಾಶವಾಗುತ್ತವೆ. ವಿದ್ಯೋತ್ಪತ್ತಿಯಾದಮೇಲೆ ವಿಪರೀತಭಾವನೆಯನ್ನು ಹುಟ್ಟಿಸುವ ವಿಘ್ನಗಳು ನಾಶವಾಗುತ್ತವೆ. ಆವೃತ್ತಿಯಿಂದ ಅಧ್ಯಾಯಸಮಾಪ್ತಿಯೂ ಎರಡನೆಯ ಆರಣ್ಯಕದ ಸಮಾಪ್ತಿಯೂ ಸೂಚಿತವಾಗುತ್ತದೆ.

## *English Translation*

---

1. My speech rests in the mind, my mind rests in speech. Appear to me (thou, the Highest Self) ! You (speech and mind) are the two pins (that hold the wheels) of the Veda. May what I have learnt not forsake me. I join day and night with what I have learnt. I shall speak of the real, I shall speak the true. May this protect me, may this protect the teacher ! May it protect the teacher, yea, the teacher !

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ .ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ
ಸಪ್ತಮಾಧ್ಯಾಯೇ ಪ್ರಥಮಃ ಖಂಡಃ

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಬಹ್ವೃಚ ಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ ಸಪ್ತಮೋಽಧ್ಯಾಯಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಏಳನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಏಳನೆಯ ಅಧ್ಯಾಯವು ಸಮಾಪ್ತವಾದುದು

ಇತಿ ಶ್ರೀಮದ್ವಿದ್ಯಾತೀರ್ಥಮಹೇಶ್ವರಪರಾವತಾರಸ್ಯ ವೈದಿಕಮಾರ್ಗಪ್ರವರ್ತಕಸ್ಯ
ಶ್ರೀ ವೀರಬುಕ್ಕಮಹಾರಾಜಸ್ಯಾಜ್ಞಾಪರಿಪಾಲಕೇನ ಸಾಯಣಮಾತ್ಯೇನ
ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಐತರೇಯಾರಣ್ಯಕಕಾಂಡೇ
ದ್ವಿತೀಯಾರಣ್ಯಕಂ ಸಮಾಪ್ತಮ್ ॥

---

# ಅಥ ತೃತೀಯಾರಣ್ಯಕೇ ಪ್ರಥಮಾಧ್ಯಾಯೇ ಪ್ರಥಮಃ ಖಂಡಃ

## ಮೂರನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಮ್ ॥೧॥
ಪ್ರಾಣವಿದ್ಯಾ ಮಧ್ಯಮಸ್ಯ ಬ್ರಹ್ಮವಿದ್ಯೋತ್ತಮಸ್ಯ ಚ ॥
ಪೂರ್ವತ್ರೋಕ್ತಾಽಧಮಸ್ಯಾಥ ಸಂಹಿತೋಪಾಸ್ತಿರೀರ್ಯತೇ ॥೨॥

ತ್ರಿವಿಧೋ ವಿದ್ಯಾಧಿಕಾರೀ, ಉತ್ತಮೋ ಮಧ್ಯಮೋಽಧಮಶ್ಚ । ಸರ್ವಸ್ಮಾತ್ಸಂಸಾರಾದ್ವಿರಕ್ತ ಏಕಾಗ್ರಚಿತ್ತಃ ಸದ್ಯೋಮುಕ್ತಿಕಾಮ ಉತ್ತಮಸ್ತಂ ಪ್ರತಿ " ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ " (ಐ. ಆ. ೨–ಅ–೪–ಖಂ–೧) ಇತ್ಯಾದಿನಾ ಬ್ರಹ್ಮವಿದ್ಯೋಕ್ತಾ । ಹಿರಣ್ಯಗರ್ಭಪ್ರಾಪ್ತಿದ್ವಾರಾ ಕ್ರಮಮುಕ್ತಿಕಾಮೋ ಮಧ್ಯಮಸ್ತಂ ಪ್ರತಿ " ಉಕ್ಥಮುಕ್ಥಮ್ " (ಐ. ಆ. ೨–ಅ–೪–ಖಂ–೨) ಇತ್ಯಾದಿನಾ ಪ್ರಾಣವಿದ್ಯೋಕ್ತಾ । ಯಸ್ತು ದ್ವಿವಿಧಾಂ ಮುಕ್ತಿಮಕಾಮಯಮಾನಃ ಪ್ರಜಾಪಶ್ವಾದಿಕಮಾಪ್ತುಕಾಮೋಽಧಮಸ್ತಂ ಪ್ರತಿ ಸಂಹಿತೋಪಾಸನಂ ತೃತೀಯಾರಣ್ಯಕೇಽಭಿಧೀಯತೇ । ತತ್ರೋಪಾಸನಂ ಪ್ರತಿಜಾನೀತೇ

ಪ್ರಾಣವಿದ್ಯೆಯು ಮಧ್ಯಮಾಧಿಕಾರಿಗೂ, ಬ್ರಹ್ಮವಿದ್ಯೆಯು ಉತ್ತಮಾಧಿಕಾರಿಗೂ ಹಿಂದಿನ ಆರಣ್ಯಕತಳಲ್ಲಿ ಹೇಳಿ ಈಗ ಅಧಮನಿಗೆ ಸಂಹಿತೋಪಾಸನೆಯನ್ನು ಹೇಳುತ್ತಾರೆ. ಉತ್ತಮ, ಮಧ್ಯಮ, ಅಧಮ ಎಂದು ವಿದ್ಯಾಧಿಕಾರಿಗಳು ಮೂರು ವಿಧವಾಗಿರುತ್ತಾರೆ. ಸಕಲಸಂಸಾರದಿಂದ ವಿರಕ್ತನಾಗಿ, ಏಕಾಗ್ರಚಿತ್ತನಾಗಿ ಮುಕ್ತಿಯನ್ನು ಬಯಸುವವನೇ ಉತ್ತಮಾಧಿಕಾರಿ. ಅವನಿಗೆ **ಆತ್ಮಾ ವಾ ಇದಮೇಕ ಏವಾಗ್ರ ಆಸೀತ್** ಇತ್ಯಾದಿಶ್ರುತಿಯಿಂದ ಬ್ರಹ್ಮವಿದ್ಯೆಯು ಹೇಳಿದೆ. ಹಿರಣ್ಯಗರ್ಭನನ್ನು ಹೊಂದಿ ಅವನಮೂಲಕ ಕ್ರಮಮುಕ್ತಿಯನ್ನು ಬಯಸುವವನು ಮಧ್ಯಮಾಧಿಕಾರಿ. ಅವನಿಗೆ **ಉಕ್ಥಮುಕ್ಥಂ** ಇತ್ಯಾದಿವಾಕ್ಯಗಳಿಂದ ಪ್ರಾಣವಿದ್ಯೆಯನ್ನು ವಿವರಿಸಿದೆ. ಈ ಎರಡುರೀತಿಯಾದ ಮುಕ್ತಿಯನ್ನೂ ಬಯಸದೆ ಲೌಕಿಕ ಪ್ರಜಾಪಶುಮುಂತಾದವುಗಳನ್ನು ಬಯಸುವವನು ಅಧಮಾಧಿಕಾರಿ. ಅವನಿಗೋಸ್ಕರ ಈಗ ತೃತೀಯಾರಣ್ಯಕದಲ್ಲಿ ಸಂಹಿತೋಪಾಸನೆಯನ್ನು ಹೇಳುತ್ತಾರೆ.

### ಅಥಾತಃ ಸಂಹಿತಾಯಾ ಉಪನಿಷತ್ ॥

ಅಥ ಪ್ರಾಣವಿದ್ಯಾಬ್ರಹ್ಮವಿದ್ಯಯೋಃ ಕಥನಾನಂತರಂ ಯತಃ ಕಾರಣಾತ್ಪ್ರಬಲಯಾ ಪಾಪವಾಸನಯಾ ಯುಕ್ತಸ್ಯ ಪಾಪಸಂಬಂಧರಹಿತೋಃ ಪ್ರಾಣಬ್ರಹ್ಮವಿದ್ಯಯೋಶ್ಚಿತ್ತಂ ನ ಪ್ರವಿ–

**ಶತ್ಯತಃ ಕಾರಣಾತ್ಸಂಹಿತಾಯಾಃ ಪಾಠಸಂಬಂಧಿನ್ಯಾ ಉಪನಿಷದ್ವಿದ್ಯೋಚ್ಯತ ಇತಿ ಶೇಷಃ । ಉಪ-ನಿಷಣ್ಣಮಸ್ಯಾಂ ವಿದ್ಯಾಯಾಂ ಪ್ರಜಾಪಶ್ವಾದಿಫಲಮುಪನಿಷತ್ ।**

ಸಂಹಿತೋಪಾಸನಾಪ್ರತಿಜ್ಞೆಯನ್ನು ತೋರಿಸುತ್ತಾರೆ. ಪ್ರಾಣವಿದ್ಯಾಬ್ರಹ್ಮವಿದ್ಯೆಗಳೆರಡನ್ನು ಹೇಳಿದಮೇಲೆ, ಪ್ರಬಲವಾದ ಪಾಠವಾಸನೆ ಇರುವವನಿಗೆ ಪಾಠಸಂಬಂಧವೇ ಇಲ್ಲದಿರುವ ಪೂರ್ವೋಕ್ತವಾದ ಎರಡು ವಿದ್ಯೆಗಳಲ್ಲಿಯೂ ಮನಃಪ್ರವೇಶ ಅಂದರೆ ಆಸಕ್ತಿ ಇಲ್ಲದಿರುವುದರಿಂದ ಅವರಿಗೋಸ್ಕರ ಪಾಠಸಂಬಂಧವುಳ್ಳ ಉಪನಿಷತ್ತನ್ನು ಹೇಳುತ್ತಾರೆ. ಉಪನಿಷಣ್ಣಂ ಅಸ್ಯಾಂ ವಿದ್ಯಾಯಾಂ ಇತಿ ಉಪನಿಷತ್. ಪ್ರಜಾಪಶ್ವಾದಿಫಲಗಳಿಂದ ಕೂಡಿರುವುದೆಂದರ್ಥ.

**ಪೃಥಿವೀ ಪೂರ್ವರೂಪಂ ದ್ಯೌರುತ್ತರರೂಪಂ ವಾಯುಃ ಸಂಹಿತೇತಿ ಮಾಂಡೂಕೇಯ ಆಕಾಶಃ ಸಂಹಿತೇತ್ಯಸ್ಯ ಮಾಕ್ಷವ್ಯೋ ವೇದಯಾಂ ಚಕ್ರೇ, ॥**

**ತಾಮೇತಾಂ ವಿದ್ಯಾಂ ವಿಧತ್ತೇ–" ಅಗ್ನಿಮೀಳೇ " (ಋ. ಸಂ. ಮಂ. ೧–ಸೂ. ೧–ಋ. ೧) ಇತ್ಯತ್ರಾಗ್ನಿಮಿತಿ ಯೋ ಮಕಾರಃ ಸೋಽಯಂ ಸಂಹಿತಾಯಾಃ ಪೂರ್ವರೂಪೋ ವರ್ಣಃ । ಈಳ ಇತ್ಯತ್ರ ಯೋಽಯಮೀಕಾರಃ ಸೋಽಯಂ ಸಂಹಿತಾಯಾ ಉತ್ತರೋವರ್ಣಃ । ದ್ವಯೋರ್ವರ್ಣ-ಯೋರ್ನೈರಂತರ್ಯೇಣೋಚ್ಚಾರಣಂ ಸಂಹಿತಾ " ಪರಃ ಸಂನಿಕರ್ಷಃ ಸಂಹಿತಾ " (ಪಾ–ಸೂ–೧–೧) ಇತಿ ಸೂತ್ರಿತತ್ವಾತ್ । ಏತಾಸು ಪೂರ್ವೋತ್ತರವರ್ಣತತ್ಸಂಹಿತಾಸು ಭೂಲೋಕದ್ಯುಲೋಕ-ವಾಯೂನಾಂ ದೃಷ್ಟಿಃ ಕರ್ತವ್ಯಾ । ಯದ್ಯಪಿ ಪೃಥಿವ್ಯಾದೀನಾಂ ಪ್ರಥಮನಿರ್ದಿಷ್ಟತ್ವಾತ್ಪ್ರತೀಕತ್ವಂ ಪ್ರಾಪ್ತಂ ತಥಾಪಿ " ಏವಮೇತಾಂ ಸಂಹಿತಾಂ ವೇದ " (ಐ. ಆ. ೩–ಅ. ೧–ಖಂ. ೧–) ಇತಿ ಸಂಹಿತಾಯಾ ಉಪಾಸ್ಯತ್ವಶ್ರವಣಾತ್ಪೂರ್ವವರ್ಣಾದೀನಾಂ ಪೃಥಿವ್ಯಾದಿದೃಷ್ಟ್ಯೋಪಾಸನಂ ಗಮ್ಯತೇ । ಯಥಾ ವಿಷ್ಣುದೃಷ್ಟ್ಯಾ ಶಾಲಗ್ರಾಮೋಪಾಸ್ತಿಸ್ತದ್ವತ್ । ಮಂಡೂಕನಾಮ್ನೋ ಮಹರ್ಷೇಃ ಪುತ್ರೋ ಮಾಂಡೂಕೇಯಸ್ತಸ್ಯ ಚ ಮಾಂಡೂಕೇಯಸ್ಯ ಸಂಹಿತಾಯಾಂ ವಾಯು-ದೃಷ್ಟಿರಿತ್ಯೇತನ್ಮತಮ್ । ಮಕ್ಷುನಾಮ್ನಃ ಕಸ್ಯಚಿನ್ಮಹರ್ಷೇಃ ಪುತ್ರೋ ಮಾಕ್ಷವ್ಯಃ । ಸ ಚಾಸ್ಯೋಪಾ-ಸನಸ್ಯ ಸಂಬಂಧಿನ್ಯಾಂ ಸಂಹಿತಾಯಾಮಾಕಾಶದೃಷ್ಟಿ ಕರ್ತವ್ಯೇತಿ ವೇದಯಾಂಚಕ್ರೇ ವಿಜ್ಞಾತವಾನ್ ॥**

ಸಂಹಿತೋಪನಿಷದ್ವಿದ್ಯೆಯನ್ನು ವಿವರಿಸುತ್ತಾರೆ. **ಅಗ್ನಿಮೀಳೆ** (ಋ. ಸಂ. ೧–೧–೧) ಎಂಬಲ್ಲಿ ಅಗ್ನಿಮ್ ಎಂಬ ಶಬ್ದವಿದೆ. ಅಲ್ಲಿ ಯಾವ ಮಕಾರವಿದೆಯೋ ಅದು ಸಂಹಿತೆಯ ಪೂರ್ವರೂಪವಾದ ವರ್ಣ. ಅದರ ಮುಂದಿರುವ ಈಳೇ ಎಂಬಲ್ಲಿ ಯಾವಈಕಾರವಿದೆಯೋ ಅದು ಸಂಹಿತೆಯ ಉತ್ತರವರ್ಣ. **ಪರಃಸಂನಿಕರ್ಷಃಸಂಹಿತಾ** ಎಂಬ ಪಾಣಿನಿಯ ಸೂತ್ರದಲ್ಲಿ ಎರಡುವರ್ಣಗಳ ನೈರಂತರ್ಯ(ಮಧ್ಯೆವ್ಯವಧಾನವಿಲ್ಲದಿರುವ) ಉಚ್ಚಾರಣಕ್ಕೆ ಸಂಹಿತಾ ಎಂದು ಸಂಜ್ಞೆ ಹೇಳಿದೆ. ಈ ಪೂರ್ವೋತ್ತರವರ್ಣಮತ್ತು ಅವುಗಳ ಸಂಹಿತೆಯಲ್ಲಿ ಭೂಲೋಕದ್ಯುಲೋಕವಾಯುದೃಷ್ಟಿಯನ್ನಿಡಬೇಕು. ಇಲ್ಲಿ ಪೃಥಿವ್ಯಾದಿಗಳನ್ನು ಮೊದಲು ಹೇಳಿರುವುದರಿಂದ ಯದ್ಯಪಿ ಅವುಗಳಿಗೆ ಪ್ರತೀಕತ್ವ ತೋರುತ್ತದೆ. ಆದರೂ **ಏವಮೇತಾಂ ಸಂಹಿತಾಂ ವೇದ** ಎಂದು ಸಂಹಿತೆಗೇ ಉಪಾಸ್ಯತ್ವ ತೋರುವುದರಿಂದ ಪೂರ್ವವರ್ಣಾದಿಗಳಿಗೇ ಪೃಥಿವ್ಯಾದಿದೃಷ್ಟಿಯಿಂದ ಉಪಾಸನೆಯೆಂದು ತಿಳಿಯುತ್ತದೆ. ವಿಷ್ಣುದೃಷ್ಟಿಯಿಂದ ಸಾಲಗ್ರಾಮದ ಉಪಾಸನೆ ಲೋಕಪ್ರಸಿದ್ಧವಾಗಿದೆ ಮಂಡೂಕೇಯನು

ಸಂಹಿತೆಯಲ್ಲಿ ವಾಯುವೃಷ್ಟಿ ಇಡಬೇಕೆಂದು ಅಭಿಪ್ರಾಯಪಡುತ್ತಾನೆ. ಮಕ್ಷು ಎಂಬ ಮಹರ್ಷಿಯ ಪುತ್ರನಾದ ಮಾಕ್ಷವ್ಯ ನೆಂಬ ಮುನಿಯು ಈ ಉಪಾಸನಾಸಂಬಂಧಿಯಾದ ಸಂಹಿತೆಯಲ್ಲಿ ಆಕಾಶವೃಷ್ಟಿ ಇಡಬೇಕೆಂದು ತಿಳಿದಿರುತ್ತಾನೆ.

**ಸ ಹಾವಿಪರಿಹೃತೋ ಮೇನೇ ನ ಮೇಽಸ್ಯ ಪುತ್ರೇಣ ಸಮಗಾದಿತಿ ॥**

ಮಾಕ್ಷವ್ಯಸ್ಯ ಮಹರ್ಷೇರಭಿಪ್ರಾಯಂ ದರ್ಶಯತಿ-ಸ ಹ ಸೋಽಪಿ ವಾಯುರವಿಪರಿಹೃತೋ ವಿಶೇಷೇಣ ಪರಿಹೃತೋ ನ ಭವತಿ । ವಾಯೋರಾಕಾಶವರ್ತಿತ್ವೇನಾಽಽಕಾಶ ಏವಾಂತರ್ಭಾವಾತ್। ಆಕಾಶಸ್ತು ನ ವಾಯಾ-ವಂತರ್ಭವತಿ । ವಾಯುಕಾರಣತ್ವಾದಧಿಕರಣವ್ಯಾಪ್ತಿತ್ವಾಚ್ಚ । ಅತೋಽಸ್ಯ ಮಂಡೂಕಸ್ಯ ಪುತ್ರೇಣ ಸಹ ಮೇ ಮಮ ನ ಸಮಗಾತ್ । ದರ್ಶನಂ ನ ಸಂಗತಂ ಮದೀಯಮತಂ ನೈಕವಿಧಂ ಭವತಿ । ಮನ್ಮತೇ ವಾಯೋ-ರಂತರ್ಭಾವೇನ ವಾಯ್ವಾಕಾಶೋಭಯದೃಷ್ಟಿಃ ಸಂಹಿತಾಯಾಂ ಸಿಧ್ಯತಿ । ತನ್ಮತೇ ತ್ವಾಕಾಶಸ್ಯಾನಂತರ್ಭೂತ-ತ್ವಾದ್ವಾಯುಮಾತ್ರದೃಷ್ಟಿರೇವಾತೋ ಮನ್ಮತಮೇವ ಶ್ರೇಷ್ಠಮಿತಿ ಮೇನೇ ನಿಶ್ಚಿತವಾನ್ । ತೇ ತತೋ ವಾಯ್ವಾಕಾಶಯೋ ರ್ವಿಕಲ್ಪೇನ ಧ್ಯಾನಂ ನ ಭವತಿ ಕಿಂತು ವಾಯುಧ್ಯಾನಂ ಪೂರ್ವಪಕ್ಷ ಆಕಾಶಧ್ಯಾನಂ ಸಿದ್ಧಾಂತ ಇತ್ಯರ್ಥಃ ॥

ಮಾಕ್ಷವ್ಯಮಹರ್ಷಿಯ ಅಭಿಪ್ರಾಯವನ್ನು ವಿವರಿಸುತ್ತಾರೆ. ವಾಯುವು ಅಧಿಕವ್ಯಾಪ್ತಿಯುಳ್ಳವನಾಗುವುದಿಲ್ಲ. ಅವನು ಆಕಾಶದಲ್ಲಿರುವುದರಿಂದ ಆಕಾಶದಲ್ಲಿ ಅಂತರ್ಭೂತನಾಗುತ್ತಾನೆ. ಆಕಾಶವಾದರೋ ವಾಯುವಿನಲ್ಲಿ ಅಂತರ್ಭಾವ ಹೊಂದುವುದಿಲ್ಲ. ಆಕಾಶ ವಾಯುಕಾರಣವಾದುದರಿಂದ ಅಧಿಕವ್ಯಾಪ್ತಿಯುಳ್ಳದ್ದಾಗಿರುತ್ತದೆ. ಆದುದರಿಂದ ಮಾಂಡೂಕೇಯನ ಮತವೂ ನನ್ನ ಮತವೂ ಒಂದಾಗುವುದಿಲ್ಲ. ನನ್ನ ಮತದಲ್ಲಿ ವಾಯುವು ಆಕಾಶದಲ್ಲಿ ಅಂತರ್ಭೂತನಾದುದರಿಂದ ಸಂಹಿತೆ ಯಲ್ಲಿ ವಾಯ್ವಾಕಾಶ ಇವೆರಡರ ದೃಷ್ಟಿಯೂ ಸಿದ್ಧವಾಗುತ್ತದೆ. ಮಾಂಡೂಕೇಯನ ಮತದಲ್ಲಿ ಕೇವಲ ವಾಯುವೃಷ್ಟಿ ಇರು ವುದರಿಂದ ತನ್ನ ಮತವೇ ಶ್ರೇಷ್ಠವೆಂದು ನಿಶ್ಚಯಿಸಿರುತ್ತಾನೆ. ಆದುದರಿಂದ ವಿಕಲ್ಪದಿಂದ ವಾಯ್ವಾಕಾಶಗಳ ದೃಷ್ಟಿಯೆಂದು ತಿಳಿಯಬಾರದು. ವಾಯುಧ್ಯಾನವು ಪೂರ್ವಪಕ್ಷವೆಂದೂ, ಆಕಾಶಧ್ಯಾನವು ಸಿದ್ಧಾಂತವೆಂದೂ ತಿಳಿಯಬೇಕು.

**ಸಮಾನೇ ವೈ ತತ್ಪರಿಹೃತೋ ಮೇನ ಇತ್ಯಾಗಸ್ತ್ಯಃ ಸಮಾನಂ ಹ್ಯೇತ-ದ್ಭವತಿ ವಾಯುಶ್ಚಾಕಾಶಶ್ಚೇತಿ ॥**

ಇದಾನೀಂ ಮತಾಂತರಾನುಸಾರೇಣ ತಯೋಸ್ತುಲ್ಯಬಲತ್ವಮಭಿಪ್ರೇತ್ಯ ವಿಕಲ್ಪೇನ ಧ್ಯಾನಂ ದರ್ಶಯತಿ—ಅಗಸ್ತ್ಯಸ್ಯ ಪುತ್ರ ಆಗಸ್ತ್ಯೋ ಮಹರ್ಷಿರಿತ್ಥಂ ಮೇನೇ ನಿಶ್ಚಿತವಾನ್। ಕಥಮಿತಿ ತದುಚ್ಯತೇ— “ಸಮಾನೇ ವೈ ಯದೇತದ್ವಾಯುಃ ಸಂಹಿತೇತಿ ಮಾಂಡೂಕೇಯಸ್ಯ ಮತಂ ಯಚ್ಚಾಕಾಶಃ ಸಂಹಿತೇತಿ ಮಾಕ್ಷವ್ಯಸ್ಯ ಮತಂ ತೇ ಉಭೇ ಅಪಿ ತುಲ್ಯಬಲೇ ಏವ । ವಾಯೋರಾಕಾಶವರ್ತಿತ್ವಮಪ್ರಯೋಜಕಮ್ । ನಹಿ ವಸ್ತೂನಾಂ ಸ್ವಭಾವಾನುಸಾರೇಣ ಕಿಂಚಿದುಪಾಸನಂ ಪ್ರವರ್ತತೇ ಕಿಂತು ವಚನಾನುಸಾರೇಣ । ವಚನಂ ತು ವಾಯುಃ ಸಂಹಿತೇತಿ ಪಕ್ಷೇ ಚ ಸಮಾನಮ್ । ತಸ್ಮಾತ್ಕಾರಣಾತ್ಪರಿಹೃತ ಆಕಾಶಪಕ್ಷೇ ವಾಯೋರನಂತ-ರ್ಭಾವಾದ್ವಾಯುಃ ಪರಿತ್ಯಕ್ತಶ್ಚ । ತಥಾ ಸತಿ ವಾಯುಶ್ಚಾಕಾಶಶ್ಚೇತ್ಯೇತನ್ಮತದ್ವಯಂ ಸಮಾನಮೇವ ಭವತಿ । ತಸ್ಮಾದ್ವಿಕಲ್ಪೇನ ಸಂಹಿತಾಯಾಂ ವಾಯ್ವಾಕಾಶಯೋರ್ದೃಷ್ಟಿಃ ಕರ್ತವ್ಯೇತಿ ತತ್ರ ಮುಖ್ಯಃ ಸಿದ್ಧಾಂತಃ ॥

ಮತಾಂತರದಿಂದ ಅವುಗಳಿಗೆ ಸಮಾನಬಲವಿದೆಯೆಂದು ಅಂಗೀಕರಿಸಿ ವಿಕಲ್ಪದಿಂದ ಧ್ಯಾನವನ್ನು ತೋರಿಸುತ್ತಾರೆ. ಅಗಸ್ತ್ಯಮಹರ್ಷಿಗಳ ಮಗನಾದ ಆಗಸ್ತ್ಯರೆಂಬ ಮಹರ್ಷಿಗಳು ಹೀಗೆ ನಿಶ್ಚಯಿಸಿರುತ್ತಾರೆ. ವಾಯುವೇ ಸಂಹಿತಾ ಎಂಬ ಮಾಂಡೂಕೇಯರ ಮತವೂ, ಆಕಾಶವೇ ಸಂಹಿತಾ ಎಂಬ ಮಾಕ್ಷವ್ಯರ ಮತವೂ ಸಮಾನಬಲವುಳ್ಳದ್ದಾಗಿರುತ್ತವೆ. ವಾಯುವು ಆಕಾಶದಲ್ಲಿರುವುದರಿಂದ ವ್ಯಾಪಕವಲ್ಲವೆಂಬ ಆಕ್ಷೇಪಕ್ಕೆ ಬೆಲೆ ಇಲ್ಲ. ವಸ್ತುಸ್ವಭಾವವನ್ನನುಸರಿಸಿ ಉಪಾಸನೆ ಮಾಡುವುದಲ್ಲ. ಶ್ರುತಿವಚನವನ್ನನುಸರಿಸಿ ಧ್ಯಾನಿಸಬೇಕು. ವಚನವಾದರೋ ಎರಡರಲ್ಲಿಯೂ ಸಮಾನವಾಗಿದೆ. ಆದುದರಿಂದ ಆಕಾಶಪಕ್ಷದಲ್ಲಿ ವಾಯುವಿಗೆ ಅಂತರ್ಭಾವ ಇರುವುದಿಲ್ಲ. ವಾಯ್ವಾಕಾಶಗಳಿಗೆ ಸಮಾನಬಲವಿರುವುದರಿಂದ ವಿಕಲ್ಪದಿಂದ ಧ್ಯಾನವೆಂದು ಸಿದ್ಧವಾಗುತ್ತದೆ. ಆದುದರಿಂದ ಸಂಹಿತೆಯಲ್ಲಿ ವಾಯುಧ್ಯಾನವಾಗಲೀ ಆಕಾಶಧ್ಯಾನವಾಗಲೀ ಮಾಡಬಹುದೆಂದು ಸಿದ್ಧಾಂತ.

**ಇತ್ಯಧಿದೈವತಮಥಾಧ್ಯಾತ್ಮಮ್ ॥**

ಪೂರ್ವೋತ್ತರವರ್ಣತತ್ಸಂಹಿತಾಸು ಪೃಥಿವ್ಯಾದಿಧ್ಯಾನಂ ಯದುಕ್ತಂ ಸೋಽಯಮುಪಾಸನಸ್ಯ ಪೂರ್ವೋ ಭಾಗಃ ವಕ್ಷ್ಯಮಾಣಸ್ತೂತ್ತರೋ ಭಾಗಃ । ತದುಭಯಂ ಬುದ್ಧಿಸೌಕರ್ಯಾಯ ವಿಭಜತೇ—ಇತಿ ಶಬ್ದಃ ಪೂರ್ವೋಕ್ತಂ "ಪೃಥಿವೀ ಪೂರ್ವರೂಪಮ್" ಇತ್ಯಾದಿಕಂ ಪರಾಮೃಶತಿ । ತಚ್ಚಾಧಿದೈವತಂ ಪೃಥಿ-ವ್ಯಾದಿಕಂ ದೈವತಮಧಿಕೃತ್ಯ ವರ್ತಮಾನಮುಪಾಸನಂ । ಅಥಾನಂತರಮಾತ್ಮಾನಂ ವಾಗಾದಿಸಂಘಾತರೂಪ-ಮಧಿಕೃತ್ಯ ವರ್ತತ ಇತ್ಯಧ್ಯಾತ್ಮಮುಪಾಸನಮುಚ್ಯತ ಇತಿ ಶೇಷಃ ॥

ಪೂರ್ವೋತ್ತರವರ್ಣಗಳಲ್ಲಿಯೂ ಸಂಹಿತೆಯಲ್ಲಿಯೂ ಪೃಥಿವ್ಯಾದಿ ಧ್ಯಾನಹೇಳಿರುವುದು ಉಪಾಸನೆಯ ಪೂರ್ವಭಾಗವಾಗುತ್ತವೆ. ಮುಂದೆ ಹೇಳುವುದು ಉತ್ತರಭಾಗ. ಬುದ್ಧಿಸೌಕರ್ಯಕ್ಕೋಸ್ಕರ ಅವೆರಡನ್ನೂ ವಿಭಾಗಿಸುತ್ತಾರೆ. ಇತಿ ಶಬ್ದವು **ಪೃಥಿವೀ ಪೂರ್ವರೂಪಂ** ಇತ್ಯಾದಿಗಳನ್ನು ಪರಾಮರ್ಶಮಾಡುತ್ತದೆ. ಅದು ಅಧಿದೈವತ ಅಂದರೆ ಪೃಥಿವ್ಯಾದಿದೈವತವನ್ನಧಿಕರಿಸಿರುವ ಉಪಾಸನೆ. ಇದಾದಮೇಲೆ ಈಗ ಅಧ್ಯಾತ್ಮ ಅಂದರೆ ವಾಗಾದಿಸಂಘಾತರೂಪವನ್ನಧಿಕರಿಸಿ ಉಪಾಸನೆಯನ್ನು ಹೇಳುತ್ತಾರೆ.

**ವಾಕ್ಪೂರ್ವರೂಪಂ ಮನ ಉತ್ತರರೂಪಂ ಪ್ರಾಣಃ ಸಂಹಿತೇತಿ ಶೂರ-ವೀರೋ ಮಾಂಡೂಕೇಯಃ ॥**

**ತದೇತದುಪಾಸನಂ ವಿಧತ್ತೇ—ಪೂರ್ವವರ್ಣೇ ವಾಗ್ದೃಷ್ಟಿರುತ್ತರವರ್ಣೇ ಮನೋದೃಷ್ಟಿ-ಸ್ತದುಭಯಸಂಶ್ಲೇಷಣೇ ಪ್ರಾಣದೃಷ್ಟಿರಿತ್ಯೇತನ್ಮಾಂಡೂಕೇಯಸ್ಯ ಮತಮ್ । ಸ ಚ ಮಾಂಡೂ-ಕೇಯಃ ಶೂರವೀರಃ । ಉಪಾಸನಾಯಾಂ ನಿರಂತರಂ ಪ್ರವರ್ತಮಾನಾಃ ಶೂರಾಸ್ತೈಃ ಪುರುಷೈ-ರ್ಬಹಿಃ ಪ್ರವರ್ತಮಾನಾನಾಮಿಂದ್ರಿಯಾಣಾಂ ಜಿತತ್ವಾತ್ । ತೇಷು ಶೂರೇಷು ವೀರೋಽತ್ಯಂತ-ಪರಾಕ್ರಮಯುಕ್ತಃ । ಉಪಾಸ್ಯವಸ್ತುಸಾಕ್ಷಾತ್ಕಾರವಾನಿತ್ಯರ್ಥಃ ॥**

ಅಧ್ಯಾತ್ಮ ಉಪಾಸನೆಯನ್ನು ವಿವರಿಸುತ್ತಾರೆ. ಪೂರ್ವವರ್ಣದಲ್ಲಿ ವಾಗ್ದೃಷ್ಟಿಯನ್ನೂ ಉತ್ತರವರ್ಣದಲ್ಲಿ ಮನೋದೃಷ್ಟಿಯನ್ನೂ ಎರಡರ ಸಂಧಿಯಲ್ಲಿ ಪ್ರಾಣದೃಷ್ಟಿಯನ್ನೂ ಇಡಬೇಕೆಂದು ಮಾಂಡೂಕೇಯಋಷಿಯ ಮತ. ಇವನು ಶೂರ

ವೀರನು. ಉಪಾಸನೆಯಲ್ಲಿ ಎಡೆಬಿಡದೆ ಪ್ರವೃತ್ತರಾಗಿರುವವರು ಶೂರರು. ಈ ಶೂರರು ಇಂದ್ರಿಯನಿಗ್ರಹವನ್ನು ಸಂಪಾದಿಸಿರುತ್ತಾರೆ. ಅಂತಹ ಶೂರರಲ್ಲಿ ಈ ಋಷಿಯು ಅತ್ಯಂತ ಪರಾಕ್ರಮಶಾಲಿಯು. ಉಪಾಸ್ಯವಸ್ತುವಿನ ಸಾಕ್ಷಾತ್ಕಾರ ಪಡೆದಿರುವವನು ಎಂದರ್ಥ.

**ಅಥ ಹಾಸ್ಯ ಪುತ್ರ ಆಹ ಜ್ಯೇಷ್ಠೋ ಮನಃ ಪೂರ್ವರೂಪಂ ವಾಗುತ್ತರರೂಪಂ ಮನಸಾ ವಾ ಅಗ್ರೇ ಸಂಕಲ್ಪಯತ್ಯಥ ವಾಚಾ ವ್ಯಾಹರತಿ ತಸ್ಮಾನ್ಮನ ಏವ ಪೂರ್ವರೂಪಂ ವಾಗುತ್ತರರೂಪಂ ಪ್ರಾಣಸ್ತ್ವೇವ ಸಂಹಿತೇತಿ, ||**

ಅತ್ರೈವ ಮತಾಂತರಮಾಹ— ಅಥ ಮಾಂಡೂಕೇಯೋಕ್ತ್ಯನಂತರಮಸ್ಯ ಮಾಡೂಕೇಯಸ್ಯ ಜ್ಯೇಷ್ಠಃ ಪುತ್ರೋ ಮನಸೋ ವಾಚಶ್ಚ ಪೂರ್ವೋಕ್ತವಿಪರ್ಯಯಮಾಹ । ತತ್ರೋಪಪತ್ತಿಂ ಚಾವೋಚತ್, ಲೋಕೇ ವಿವಕ್ಷುಃ ಸರ್ವಃ ಪುರುಷಃ ಇದಮಂ ವಕ್ಷ್ಯಾಮೀತ್ಯೇವಂ ಪ್ರಥಮಂ ಸಂಕಲ್ಪಯತಿ ಪಶ್ಚಾದುಚ್ಚಾರಯತಿ ತಸ್ಮಾದ್ವಸ್ತುತತ್ತ್ವಮನುಸೃತ್ಯ ಪೂರ್ವವರ್ಣೇ ಮನೋದೃಷ್ಟಿ-ರುತ್ತರವರ್ಣೇ ವಾಗ್ದೃಷ್ಟಿಶ್ಚ ಕರ್ತವ್ಯಾ। ಯಾ ತು ವರ್ಣಯೋಃ ಸಂಹಿತಾ ತಾಭ್ಯಾಂ ಪೂರ್ವೋಕ್ತಃ ಪ್ರಾಣ ಏವ ಧ್ಯಾತವ್ಯೋ ನತು ತತ್ರ ಕಶ್ಚಿನ್ಮತಭೇದೋಽಸ್ತೀತ್ಯೇವಂ ಜ್ಯೇಷ್ಠ ಪುತ್ರ ಉಕ್ತವಾನ್ ॥

ಪೂರ್ವೋಕ್ತವಿಷಯದಲ್ಲಿ ಮತಾಂತರವನ್ನು ತೋರಿಸುತ್ತಾರೆ. ಮಾಂಡೂಕೇಯನ ಮತವನ್ನು ಹೇಳಿದ್ದಾಯಿತು. ಈ ಮಾಂಡೂಕೇಯನ ಜ್ಯೇಷ್ಠಪುತ್ರನು ವಾಙ್ಮನಸ್ಸುಗಳಲ್ಲಿ ವ್ಯತ್ಯಾಸವನ್ನು ಹೇಳುತ್ತಾನೆ. ವ್ಯತ್ಯಾಸಕ್ಕೆ ಯುಕ್ತಿಯನ್ನೂ ವಿವರಿಸುತ್ತಾರೆ. ಲೋಕದಲ್ಲಿ ಮಾತನಾಡಲು ಬಯಸುವ ಪುರುಷನು ಹೀಗೆ ಹೇಳುವೆನೆಂದು ಮೊದಲು ಮನಸ್ಸಿನಲ್ಲಿ ಸಂಕಲ್ಪ ಮಾಡಿ ಆಮೇಲೆ ಅದನ್ನು ಉಚ್ಚರಿಸುತ್ತಾನೆ. ಆದುದರಿಂದ ವಸ್ತುತತ್ವವನ್ನು ಆಶ್ರಯಿಸಿ ಪೂರ್ವವರ್ಣದಲ್ಲಿ ಮನೋದೃಷ್ಟಿಯನ್ನೂ ಉತ್ತರವರ್ಣದಲ್ಲಿ ವಾಗ್ದೃಷ್ಟಿಯನ್ನೂ ಮಾಡಬೇಕೆಂದು ತಾತ್ಪರ್ಯ. ಸಂಹಿತೆಯಲ್ಲಿ ಮಾತ್ರ ಪ್ರಾಣದೃಷ್ಟಿಯೊಂದೇ ಅಲ್ಲದೆ ಇನ್ನು ಯಾವ ಮತಭೇದವೂ ಇಲ್ಲವೆಂದು ಆ ಜ್ಯೇಷ್ಠಪುತ್ರನು ಹೇಳಿರುತ್ತಾನೆ.

**ಸಮಾನಮೇನಯೋರತ್ರ ಪಿತುಶ್ಚ ಪುತ್ರಸ್ಯ ಚ, ||**

ಏವಂ ಸತಿ ಸೋಪಪತ್ತಿಕತ್ವಾದಯಮೇವ ಸಿದ್ಧಾಂತ ಇತಿ ಪ್ರತಿಭಾಸತೇ । ತತ್ರ ಶ್ರುತಿರ್ಮ-ತದ್ವಯಸ್ಯ ಸಮಾನತ್ವಮಭಿಪ್ರೇತ್ಯ ವಿಕಲ್ಪಮೇವ ಸಿದ್ಧಾಂತಯತಿ-ನ ಹ್ಯುಪಾಸನಾ ವಸ್ತುತತ್ತ್ವಮ-ಪೇಕ್ಷತೇ ಕಿಂ ತರ್ಹಿ ಯಥಾವಚನಮನುಸ್ರಿಯೇತೇತಿ ನ್ಯಾಯಃ ಪೂರ್ವಮೇವೋಕ್ತಃ । ತಸ್ಮಾದ್ಯಃ ಪಿತಾ ಮಾಂಡೂಕೇಯೋ ಯಶ್ಚತದೀಯೋ ಜ್ಯೇಷ್ಠಃ ಪುತ್ರ ಏನಯೋರುಭಯೋರ್ಮತಂ ಸಮಾನಮ್ । ತಸ್ಮಾನ್ಮನೋದೃಷ್ಟಿವಾಗ್ದೃಷ್ಟ್ಯೋಃ ಪೂರ್ವೋತ್ತರಭಾವಿತ್ವಂ ವಿಕಲ್ಪ್ಯತೇ ॥

ಉಪಪತ್ತಿಯಿರುವುದರಿಂದ ಪೂರ್ವೋಕ್ತರೀತಿಯೇ ಸಿದ್ಧಾಂತವೆಂದು ತೋರುತ್ತದೆ. ಆದರೆ ಶ್ರುತಿಯು ಆ ಎರಡು ಮತಗಳೂ ಸಮಾನವೆಂದು ಅವುಗಳ ವಿಕಲ್ಪಧ್ಯಾನವನ್ನೇ ವಿಧಿಸುತ್ತದೆ. ಹಿಂದೆ ಹೇಳಿದಂತೆ ಉಪಾಸನೆಗೆ ವಸ್ತುತತ್ವಾಪೇಕ್ಷೆ

ಇಲ್ಲ. ಶ್ರುತಿವಚನ ಹೇಗಿದೆಯೋ ಅದರಂತೆ ಅನುಷ್ಠಾನಮಾಡಬೇಕು. ಆದುದರಿಂದ ತಂದೆಮಕ್ಕಳ ಮತಗಳೆರಡೂ ಸಮಾನವಾಗಿರುವುದರಿಂದ ವಿಕಲ್ಪದಿಂದಲೇ ಧ್ಯಾನಿಸಬೇಕು.

**ಸ ಏಷೋಽಶ್ವರಥಃ ಪ್ರಷ್ಟಿವಾಹನೋ ಮನೋವಾಕ್ಪ್ರಾಣಸಂಹತಃ, ||**

**ಅಧಿದೈವತಮಧ್ಯಾತ್ಮಂ ಚ ಯದುಪಾಸನಮುಕ್ತಂ ತತ್ಪ್ರಶಂಸತಿ— ಯಃ ಪೂರ್ವೋಕ್ತ-ಪೃಥಿವ್ಯಾದಿಧ್ಯಾನರೂಪಃ ಫಲಹೇತುಃ ಸ ಏಷೋಽಶ್ವಯುಕ್ತರಥಸಮಾನಃ । ಸ ಚ ಪ್ರಷ್ಟಿವಾಹನಃ ಪಕ್ಷ್ಯೋಃ ಪಾರ್ಶ್ವಯೋರ್ಯುಜ್ಯಮಾನೌ ದ್ವಾವಶ್ವೌ ವಾಹನಂ ಯಸ್ಯ ರಥಸ್ಯ ಸೋಽಯಂ ಪ್ರಷ್ಟಿವಾಹನಃ । ಈಷಯೋರ್ದೀರ್ಘಕಾಷ್ಠಯೋರ್ಮಧ್ಯೇ ಕಂಚಿತ್ಪ್ರಬಲಮಶ್ವಂ ಸಂಯೋಜ್ಯ ತಯೋರೀಷಯೋರ್ಬಹಿರುಭಯೋಃ ಪಾರ್ಶ್ವಯೋರ್ದ್ವಾವಶ್ವೌ ಮಧ್ಯಮಾಶ್ವಸ್ಯಾದಾಂತಸ್ಯ ನಿಯಾಮಕೌ ಸಂಯೋಜ್ಯೇತೇ ಸೋಽಯಮಶ್ವತ್ರಯೋಪೇತೋ ದೇವಾನಾಂ ರಥಃ । ತಥಾ ತೈತ್ತರೀಯಾ ವಾಜಪೇಯಪ್ರಕರಣೇ ಸಮಾಮನಂತಿ— "ಪ್ರಷ್ಟಿವಾಹಿನಂ ಯುನಕ್ತಿ । ಪ್ರಷ್ಟಿವಾಹೀ ವೈ ದೇವರಥಃ । ದೇವರಥಮೇವಾಸ್ಮೈ ಯುವಕ್ತಿ ಇತಿ । ಯಥಾದೇವರಥೋಽಶ್ವತ್ರಯೇಣ ಯುಕ್ತ ಏವಮಯಮುಪಾಸ್ತಿರಥೋ ಮನೋವಾಕ್ಪ್ರಾಣೈಸ್ತ್ರಿಭಿರ್ಧ್ಯೇಯವಿಶೇಷೈಃ ಸಂಯುಕ್ತಃ ತಸ್ಮಾತ್ಪ್ರಷ್ಟಿ ವಾಹಿರಥವತ್ಸಹಸಾ ಫಲಪ್ರಾಪಣೇ ಸಮರ್ಥ ಇತ್ಯರ್ಥಃ ||**

ಪೂರ್ವೋಕ್ತವಾದ ಅಧಿದೈವತ, ಅಧ್ಯಾತ್ಮ ಉಪಾಸನೆಗಳನ್ನು ಪ್ರಶಂಸಿಸುತ್ತಾರೆ. ಹಿಂದೆ ಹೇಳಿದ ಪೃಥಿವ್ಯಾದಿ ಧ್ಯಾನರೂಪವಾದ ಫಲಕಾರಣವು ಕುದುರೆಯಿಂದ ಕೂಡಿದ ರಥಕ್ಕೆ ಸಮಾನವಾಗಿದೆ. ಇದಕ್ಕೆ ಪ್ರಷ್ಟಿವಾಹನವೆಂದು ಹೆಸರು. ಎರಡು ಪಾರ್ಶ್ವಗಳಲ್ಲಿಯೂ ಎರಡು ಕುದುರೆಗಳನ್ನು ಕಟ್ಟಿರುವ ರಥಕ್ಕೆ ಪ್ರಷ್ಟಿವಾಹನವೆನ್ನುತ್ತಾರೆ. ಉದ್ದವಾದ ಎರಡು ಮರಗಳ (ಮೂಕಿ) ಮಧ್ಯದಲ್ಲಿ ಪಳಗದಿರುವ ಪ್ರಬಲವಾದ ಒಂದು ಕುದುರೆಯನ್ನು ಕಟ್ಟಿ ಅದನ್ನು ಪಳಗಿಸಲು ಅದರ ಎರಡು ಬದಿಗಳಲ್ಲಿಯೂ ಪಳಗಿದ ಎರಡು ಕುದುರೆಯನ್ನು ಕಟ್ಟುತ್ತಾರೆ. ಹೀಗೆ ಮೂರು ಕುದುರೆಗಳಿಂದ ಕೂಡಿದ ರಥವು ದೇವರಥವಾಗುತ್ತದೆ. ತೈತ್ತಿರೀಯರೂ ಇದನ್ನು **ಪ್ರಷ್ಟಿವಾಹಿನಂ ಯನಕ್ತಿ । ಪ್ರಷ್ಟಿವಾಹೀ ವೈ ದೇವರಥಃ । ದೇವರಥಮೇವಾಸ್ಮೈ ಯುನಕ್ತಿ ||** ಎಂದು ಸ್ಪಷ್ಟವಾಗಿ ಹೇಳಿರುತ್ತಾರೆ. ದೇವರಥವು ಮೂರು ಕುದುರೆಗಳಿಂದ ಕೂಡಿರುವಂತೆ ಈ ಉಪಾಸನಾ ರಥವು ಮನಸ್ಸು, ವಾಕ್, ಪ್ರಾಣರೂಪ ಎಂಬ ಮೂರು ಧ್ಯೇಯವಿಶೇಷಗಳಿಂದ ಸಂಯೋಜಿತವಾಗಿ ಪ್ರಷ್ಟಿವಾಹಿರಥದಂತೆ ಫಲವನ್ನು ಕೊಡುವುದರಲ್ಲಿ ಸಮರ್ಥವಾಗುತ್ತದೆಂದರ್ಥ.

**ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶು-ಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವಮಾಯುರೇತಿ||**

**ಇದಾನೀಂ ಫಲಂ ದರ್ಶಯತಿ— ಯಃ ಪುಮಾನೇವಮುಕ್ತಪ್ರಕಾರೇಣ ವಿಹಿತಾಂ ಪೃಥಿವೀ ಪೂರ್ವರೂಪಂ ಇತ್ಯಾದಿಕಾಂ ದೇವತಾರೂಪಾಂ ಸಹಿತಾಂ ವೇದೋಪಾಸ್ತೇ । ಯದ್ಯಪಿ ವಿದಿಧಾತುಃ ಪ್ರಮಾಣಜನ್ಯಜ್ಞಾನವಾಚೀ ತಥಾಽಪ್ಯುಪಾಸ್ತಿಕ್ರಿಯಾಮಂತರೇಣ ಫಲಾಸಂಭವಾನ್ಮಾನಸತ್ವ**

ಸಾಮ್ಯೇನ ತಾಂ ಕ್ರಿಯಾಮುಪಲಕ್ಷಯತಿ। ಸ ಉಪಾಸಕಃಪ್ರಜಾದಿಭಿಃ ಸಂಧೀಯತೇ ಸಂಯೋಜ್ಯತೇ।
ಪ್ರಜಾ ಪುತ್ರಪೌತ್ರಾದಿರೂಪಾ। ಪಶವೋ ಗವಾಶ್ವಾದಯಃ। ಯಶೋ ಧನದಾನಾದಿಕೀರ್ತಿಃ।
ಬ್ರಹ್ಮವರ್ಚಸಂ ಶ್ರುತಾಧ್ಯಯನಸಂಪತ್ತಿಃ। ತದೇತತ್ಸರ್ವಂ ಚಿತ್ರನ್ಯಾಯೇನ ಪ್ರತಿಬಂಧಾಭಾವೇ
ಸತ್ಯೈಹಿಕಂ ಫಲಮ್। "ಚಿತ್ರಯಾ ಯಜೇತ ಪಶುಕಾಮಃ" ಇತ್ಯತ್ರ ಪಶುಸಂಪಾದಕದೃಷ್ಟ-
ಪ್ರಯತ್ನಸದ್ಭಾವೇ ಸತಿ ಪಶುಪ್ರಾಪ್ತಿರೈಹಿಕೀ, ಅನ್ಯಥಾಽಽಮುಷ್ಮಿಕೀತಿ ಪೂರ್ವಮೀಮಾಂಸಾಯಾಂ
ನಿರ್ಣೀತಮ್। ತದ್ವದತ್ರಾಪಿ ಪ್ರಜಾದಿಫಲಮೈಹಿಕಮಾಮುಷ್ಮಿಕಂ ಚೇತ್ಯನಿಯತಮ್। ಸ್ವರ್ಗ-
ಸ್ತ್ವಾಮುಷ್ಮಿಕ ಏವ। ಸರ್ವಮಾಯುರೇತೀತ್ಯನೇನಾಪಮೃತ್ಯುರಾಹಿತ್ಯಂ ವಿವಕ್ಷಿತಮ್॥

ಉಪಾಸನಾಫಲವನ್ನು ವಿವರಿಸುತ್ತಾರೆ. ಯಾವ ಪುರುಷನು ಹಿಂದೆ ಹೇಳಿದ ರೀತಿಯನ್ನನುಸರಿಸಿ **ಪೃಥಿವೀ ಪೂರ್ವರೂಪಂ** ಇತ್ಯಾದಿ ದೇವತಾಸಂಹಿತೋಪಾಸನೆಯನ್ನು ಮಾಡುತ್ತಾನೋ ಅವನು ಪ್ರಜಾದಿಸಂಪತ್ತನ್ನು ಹೊಂದುತ್ತಾನೆ. ವಿದಿ ಧಾತುವಿಗೆ ಪ್ರಮಾಣಜನ್ಯಜ್ಞಾನವು ಅರ್ಥವಾದರೂ ಇಲ್ಲಿ ಉಪಾಸನಾಕ್ರಿಯಾರ್ಥವನ್ನೇ ಹೇಳಬೇಕು. ಪ್ರಜಾ ಅಂದರೆ ಪುತ್ರಪೌತ್ರಾದಿರೂಪಸಂಪತ್ತು. ಪಶು ಅಂದರೆ ಹಸು ಕುದುರೆ ಮುಂತಾದವುಗಳು. ಧನಾದಿಕೀರ್ತಿಯೇ ಯಶಸ್ಸು. ಶ್ರುತಾಧ್ಯಯನಸಂಪತ್ತಿಗೆ ಬ್ರಹ್ಮವರ್ಚಸವೆಂದು ಹೆಸರು. ಪ್ರತಿಬಂಧಕಗಳು ಯಾವುದೂ ಇಲ್ಲದಿರುವಾಗ ಇವು ಐಹಿಕಫಲವೆಂದು ತಿಳಿಯಬೇಕು. ಸ್ವರ್ಗವು ಆಮುಷ್ಮಿಕಫಲವಾಗುತ್ತದೆ. ಆಯುಸ್ಸನ್ನು ಹೊಂದುತ್ತಾನೆ ಎಂಬುದರಿಂದ ಅಪಮೃತ್ಯುಗೀಡಾಗುವುದಿಲ್ಲವೆಂದು ತಾತ್ಪರ್ಯ.

**ಇತಿ ತು ಮಾಂಡೂಕೇಯಾನಾಮ್ ॥**

**ಉಕ್ತೋಪಾಸನಾಯಾಃ ಸಾಂಪ್ರದಾಯಿಕತ್ವಂ ದರ್ಶಯತಿ—ಇತ್ಯೇವಮುಕ್ತಾ—"ಪೃಥಿವೀ ಪೂರ್ವರೂಪಮ್"** (ಐ. ಆ. ೩ ಅ. ೧ ಖಂ. ೧) **ಇತ್ಯಾದ್ಯುಪಾಸನಾ ಮಂಡೂಕಾಖ್ಯಸ್ಯ ಮಹರ್ಷೇಃ ಪುತ್ರಾಣಾಂ ಸಂಪ್ರದಾಯಾದ್ಭೂಮಾವಾಗತಾ ॥**

ಪೂರ್ವೋಕ್ತವಾದ ಉಪಾಸನೆಯು ಸಂಪ್ರದಾಯದಿಂದ ಬಂದಿವೆಯೆಂದು ವಿವರಿಸುತ್ತಾರೆ. ಈ ಉಪಾಸನೆಯು ಮಂಡೂಕಮಹರ್ಷಿಯ ಮಕ್ಕಳ ಸಂಪ್ರದಾಯದಿಂದ ಭೂಮಿಯಲ್ಲಿ ಪ್ರಸಿದ್ಧವಾಗಿದೆ.

———

*English Translation*

---

1. Next follows the Upanishad of the Samhita.

2. The former half is the earth, the latter half the heaven, their union the air, thus says Mandukeya ; their union is the ether, thus did Makshavya teach it.

3. That air is not considered independent, therefore I do not agree with his (Manduka's) son.

4. Verily, the two are the same, therefore air is considered independent, thus says Agastya. For it is the same, whether they say air or ether.

5. So far with reference to deities (mythologically; now with referencc to the body (physiologically):

6. The former half is speech, the latter half is mind, their union breath (prana) thus says Suravira Mandukeya.

7. But his eldest son said : The former half is mind, the latter half speech. For we first conceive with the mind indeed, and then we utter with speech. Therefore the former half is indeed mind, the latter half speech, but their union is really breath.

8. Vcrily, it is the same with both, the father (Mandukeya) and the son.

9. This (meditation as here described), joined with mind, speech and breath, is (like) a chariot drawn by two horses and one horse between them (prashtivahana).

10. And he who thus knows this union, becomes united with offspring, cattle, fame, glory of contenance, and the world of Svarga. He lives his full age.

11. Now all this comes from the Mandukeyas.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಾಣ್ಯಕಕಾಂಡಭಾಷ್ಯೇ ತೃತೀಯಾರಣ್ಯಕೇ
ಪ್ರಥಮಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ತೃತೀಯಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು

---

## ಅಥ ತೃತೀಯಾರಣ್ಯಕೇ ಪ್ರಥಮಾಧ್ಯಾಯೇ ದ್ವಿತೀಯಃ ಖಂಡಃ

ಮೂರನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

---

**ಅಥ ಶಾಕಲ್ಯಸ್ಯ ॥**

**ಸಂಪ್ರದಾಯಾಂತರೋಕ್ತಿಪುರಃಸರಮುಪಾಸನಾಂತರಂ ಪ್ರತಿಜಾನೀತೇ—ಮಾಂಡೂಕೇಯಾಭಿಮತೋಪಾಸನಕಥನಾನಂತರಂ ಶಾಕಲ್ಯಸ್ಯಾಭಿಮತೋಪಾಸನಮುಚ್ಯತ ಇತಿ ಶೇಷಃ ॥**

ಸಂಪ್ರದಾಯದಿಂದ ಬಂದಿರುವ ಬೇರೊಂದು ಉಪಾಸನೆಯನ್ನು ತೋರಿಸುತ್ತಾರೆ. ಮಾಂಡೂಕೇಯಋಷಿ ಸಂಮತವಾದ ಉಪಾಸನೆ ಹೇಳಿದ ಮೇಲೆ ಈಗ ಶಾಕಲ್ಯಮಹರ್ಷಿಗಳಿಗೆ ಅಭಿಮತವಾದ ಉಪಾಸನೆಯನ್ನು ಹೇಳುತ್ತಾರೆ.

ಪೃಥಿವೀ ಪೂರ್ವರೂಪಂ ದ್ಯೌರುತ್ತರರೂಪಂ ವೃಷ್ಟಿಃ ಸಂಧಿಃ ಪರ್ಜನ್ಯಃ
ಸಂಧಾತಾ ॥

ತತ್ರೋಪಾಸನೀಯಂ ಸ್ವರೂಪಂ ದರ್ಶಯತಿ—ಪೂರ್ವೋತ್ತರವರ್ಣಯೋರ್ಭೂಲೋಕ-ಧ್ಯಾನಮ್ । ಸಂಧಿರ್ವರ್ಣಯೋಃ ಸಂಹಿತಾ ತತ್ರ ವೃಷ್ಟಿಧ್ಯಾನಮ್ । ಸಂಹಿತಾಯಾ ಹೇತುಃ ಸಂಧಾತಾ । ತದ್ಯಥಾ—" ಇಕೋ ಯಣಚಿ " (ಪಾ. ಸೂ. ಅ. ೬ ಪಾ. ೧ ಸೂ. ೭೭) ಇತಿ ಸೂತ್ರ ಇಕಾರಸ್ಯ ಸ್ಥಾನೇ ಯಕಾರಾದೇಶವಿಧಾವಜ್ಪರತ್ವಂ ನಿಮಿತ್ತಮ್ । ತಾದೃಶೇ ಸಂಧಿನಿಮಿತ್ತೇ ಪರ್ಜನ್ಯ ಧ್ಯಾನಂ ಕರ್ತವ್ಯಮ್ ॥

ಉಪಾಸನಾಸ್ವರೂಪವನ್ನು ವಿವರಿಸುತ್ತಾರೆ. ಪೂರ್ವೋತ್ತರವರ್ಣಗಳಲ್ಲಿ ಕ್ರಮವಾಗಿ ಭೂಲೋಕ, ದ್ಯುಲೋಕ ಧ್ಯಾನಮಾಡಬೇಕು. ವರ್ಣಸಂಧಿಯಲ್ಲಿ ವೃಷ್ಟಿಧ್ಯಾನಮಾಡಬೇಕು. ಸಂಧಿನಿಮಿತ್ತಕ್ಕೆ **ಸಂಧಾತಾ** ಎಂದು ಹೆಸರು. **ಇಕೋಯಣಚಿ** ಇದು ಯಣ್‌ಸಂಧಿಹೇಳುವ ಸೂತ್ರ. ಇಕಾರಸ್ಥಾನದಲ್ಲಿ ಯಕಾರಾದೇಶ ಬರಬೇಕಾದರೆ ಅಚ್ (ಸ್ವರ) ಪರದಲ್ಲಿರಬೇಕೆಂದು ಅಲ್ಲಿ ನಿಮಿತ್ತಹೇಳಿದೆ. ಆರೀತಿಯಾದ ಸಂಧಿನಿಮಿತ್ತದಲ್ಲಿ ಪರ್ಜನ್ಯಧ್ಯಾನಮಾಡಬೇಕು.

## ತದುತಾಪಿ ಯತ್ರೈತದ್ಬಲವದಸೂದ್ಗೃಹ್ಣನ್ಸಂದಧದಹೋರಾತ್ರೇ ವರ್ಷತಿ ॥

ವೃಷ್ಟೇಃ ಸಂಧಿತ್ವಂ ಪರ್ಜನ್ಯಸ್ಯ ಸಂಧಾತೃತ್ವಂ ಚ ಲೋಕವ್ಯವಹಾರೇಣ ವಿಶದಯತಿ— ಉತಾಪೀತಿ ನಿಪಾತಸಮುದಾಯಃ ಸಮುಚ್ಚಯವಾಚೀ ಲೋಕಪ್ರಸಿದ್ಧಿಂ ಸಮುಚ್ಚಿನೋತಿ। ತತ್ರಸ್ಮಿನ್ವೃಷ್ಟಿಃ ಸಂಧಿಃ ಪರ್ಜನ್ಯಃ ಸಂಧಾತೇತ್ಯಸ್ಮಿನ್ನರ್ಥೇ ಲೋಕಪ್ರಸಿದ್ಧಿರಪಿ ವಿದ್ಯತ ಇತ್ಯರ್ಥಃ । ಕಾಽಸೌ ಪ್ರಸಿದ್ಧಿರಿತಿ ಸಾಽಭಿಧೀಯತೇ—ಯತ್ರ ಯದೈತತ್ಪರ್ಜನ್ಯಸ್ವರೂಪಂ ಬಲವದತ್ಯಂತಪ್ರಬಲಂ ಭೂತ್ವಾಽಸೂದ್ಗೃಹ್ಣನ್ನುದ್ಗ್ರಹಣಂ ವೃಷ್ಟ್ಯುಪಸಂಹಾರಮಕುರ್ವನ್ನ (ದ) ಹೋರಾತ್ರೇ ಸಂದಧದ್ರಾತ್ರಾವಹನಿ ಚ ವಿಚ್ಛೇದಾಭಾವಲಕ್ಷಣಂ ಸಂಧಾನಂ ಕುರ್ವದ್ವರ್ಷತಿ ತಾದಾನೀಂ ವೃಷ್ಟೇರ್ದ್ಯುಲೋಕಭೂಲೋಕಸಂಧಿತ್ವಂ ಪರ್ಜನ್ಯಸ್ಯ ಸಂಧಾತೃತ್ವಂ ಚ ವಿಸ್ಪಷ್ಟಂ ಪ್ರತಿಭಾಸತ ಇತಿ ಶೇಷಃ ॥

ವೃಷ್ಟಿಯೇ ಸಂಧಿ, ಪರ್ಜನ್ಯನೇ ಸಂಧಿನಿಮಿತ್ತ (ಸಂಧಾತಾ) ವೆಂಬುದನ್ನು ಲೋಕವ್ಯವಹಾರದಿಂದ ವಿವರಿಸುತ್ತಾರೆ. ಉತ, ಅಪಿ ಎಂಬ ನಿಪಾತಸಮುದಾಯವು ಲೋಕಪ್ರಸಿದ್ಧಿಯನ್ನು ತಿಳಿಸುತ್ತದೆ. ಈ ವಿಷಯದಲ್ಲಿ ಲೋಕಪ್ರಸಿದ್ಧಿಯೂ ಇದೆಯೆಂದರ್ಥ. ಪರ್ಜನ್ಯನು ಅತಿ ಪ್ರಬಲನಾಗಿ ಮಳೆಯನ್ನು ತಡೆಯದೆ ಹಗಲೂರಾತ್ರಿಯೂ ಎಡೆಬಿಡದೆ ಸಂಧಿಸುತ್ತಾ ಮಳೆ ಸುರಿಸುತ್ತಾನೆ. ಆಗ ವೃಷ್ಟಿಗೆ ಭೂಲೋಕದ್ಯುಲೋಕಸಂಧಿತ್ವವೂ, ಪರ್ಜನ್ಯನಿಗೆ ಸಂಧಾತೃತ್ವವೂ (ಸಂಧಿಮಾಡುವುದು) ಸ್ಪಷ್ಟವಾಗಿ ತೋರುತ್ತದೆ.

## ದ್ಯಾವಾಪೃಥಿವ್ಯಾ ಸಮಧಾತಾಮಿತ್ಯುತಾಪ್ಯಾಹುಃ ॥

ನ ಕೇವಲಂ ಪ್ರತಿಭಾಸಃ ಕಿಂತು ಲೌಕಿಕಾನಾಮುಕ್ತಿರಪ್ಯಸ್ತೀತಿ ದರ್ಶಯತಿ—ಅನಯಾ ಪರ್ಜನ್ಯಸಂಪಾದಿತಯಾ ನಿರಂತರತೀವ್ರವೃಷ್ಟ್ಯಾ ದ್ಯೌಶ್ಚ ಪೃಥಿವೀ ಚೇತ್ಯೇತೇ ಉಭೇ ಸಂಧಾನಂ ಪರಸ್ಪರೈಕ್ಯಂ ಪ್ರಾಪ್ತವತ್ಯಾವಿತ್ಯೇವಂ ವಾಕ್ಯಮಪಿ ಲೌಕಿಕಾಃ ಆಹುಃ । ಅತೋಽನುಭವಾಲ್ಲೌಕಿಕೋಕ್ತ್ಯಾ ಚ ವೃಷ್ಟೇಃ ಸಂಧಿಸ್ತ್ವಂ ಪರ್ಜನ್ಯಸ್ಯ ಸಂಧಾತೃತ್ವಂ ಚ ಪ್ರಸಿದ್ಧಮ್ ॥

ತೋರುವುದುಮಾತ್ರವಲ್ಲದೆ ಈ ವಿಷಯದಲ್ಲಿ ಲೌಕಿಕರ ಮಾತೂ ಪ್ರಸಿದ್ಧವಾಗಿದೆಯೆಂದು ತೋರಿಸುತ್ತಾರೆ. ಈ ಪರ್ಜನ್ಯನು ಮಾಡಿರುವ ನಿರಂತರವೃಷ್ಟಿಯಿಂದ ದ್ಯುಲೋಕಭೂಲೋಕಗಳೆರಡೂ ಸಂಧಾನವನ್ನು ಅಂದರೆ ಪರಸ್ಪರೈಕ್ಯವನ್ನು ಹೊಂದಿವೆಯೆಂದು ಲೋಕದ ಜನರೂ ಹೇಳುತ್ತಾರೆ. ಹೀಗೆ ಅನುಭವ ಮತ್ತು ಲೋಕೋಕ್ತಿಯಿಂದ ವೃಷ್ಟಿಯು ಸಂಧಿಯೆಂದೂ, ಪರ್ಜನ್ಯ ಸಂಧಾತೃ ಎಂದೂ ಸಿದ್ಧವಾಗುತ್ತದೆ.

ಇತೀ ನ್ವಧಿದೈವತಮಥಾಧ್ಯಾತ್ಮಮ್ ||

ಬುದ್ಧಿಸೌಕರ್ಯಾರ್ಥಮುಕ್ತವಕ್ಷ್ಯಮಾಣಾವರ್ಥೌ ವಿಭಜ್ಯ ದರ್ಶಯತಿ—ಇತಿ ನೂಕ್ತ-ಪ್ರಕಾರಮೇವ ಪೃಥಿವ್ಯಾದಿಕಮಿತ್ಯರ್ಥಃ ||

ಸುಲಭವಾಗಿ ತಿಳಿಯಲು ಹಿಂದೆ ಹೇಳಿದ ಮುಂದೆ ಹೇಳುವ ವಿಷಯವನ್ನು ವಿಭಾಗಿಸಿ ತೋರಿಸುತ್ತಾರೆ. ಹಿಂದೆ ಹೇಳಿದ ಪೃಥಿವ್ಯಾದಿಗಳು ಅಧಿದೈವತವೆಂದೂ, ಮುಂದೆ ಹೇಳುವುದು ಅಧ್ಯಾತ್ಮವೆಂದೂ ತಿಳಿಯಬೇಕು.

ಪುರುಷೋ ಹ ವಾ ಅಯಂ ಸರ್ವ ಆಂದಂ ದ್ವೇ ಬಿದಲೇ ಭವತ ಇತ್ಯಾಹುಸ್ತಸ್ಯೇದಮೇವ ಪೃಥಿವ್ಯಾ ರೂಪಮಿದಂ ದಿವಸ್ತತ್ರಾಯಮಂತರೇಣಾಽಽಕಾಶೋ ಯಥಾಽಸೌ ದ್ಯಾವಾಪೃಥಿವ್ಯಾವಂತರೇಣಾಽಽಕಾಶಸ್ತ-ಸ್ಮಿನ್ಹಸ್ಮಿನ್ನಾಕಾಶೇ ಪ್ರಾಣ ಆಯತ್ತೋ ಯಥಾಽಮುಷ್ಮಿನ್ನಾಕಾಶೇ ವಾಯುರಾಯತ್ತೋ ಯಥಾಽಮೂನಿ ತ್ರೀಣಿ ಜ್ಯೋತೀಂಷ್ಯೇವ-ಮಿಮಾನಿ ಪುರುಷೇ ತ್ರೀಣಿ ಜ್ಯೋತೀಂಷಿ ||

ಪೃಥಿವ್ಯಾದಿದೇವತಾನಾಮಿವ ಸ್ವಶರೀರಾವಯವಾನಾಮಪಿ ಧ್ಯಾನಂ ದರ್ಶಯತಿ—ಲೋಕೇ ಯಃ ಪುರುಷೋ ವಿದ್ಯತೇ ಸ ಸರ್ವೋಽಪ್ಯಾಂದಮಂಡಸದೃಶಮ್। ವರ್ಣವಿಕಾರಶ್ಛಾಂದಸಃ | ಯಥಾ ಬ್ರಹ್ಮಾಂಡಸ್ಯಾಧಃ ಕಪಾಲಮೂರ್ಧ್ವಂ ಕಪಾಲಂ ಚೇತಿ ದ್ವೇ ಬಿದಲೇ ದ್ವೌ ಪರಸ್ಪರವಿಪರೀತಭಾಗೌ, ತಥಾ ಪುರುಷೇಽಪಿ ಪಾದಾವಾರಭ್ಯಾಧರೋಷ್ಠಪರ್ಯಂತಮೇಕಂ ಬಿದಲಮುತ್ತರೋಷ್ಠಮಾರಭ್ಯ ಮೂರ್ಧಪರ್ಯಂತಮಪರಂ ವಿದಲಂ ಯಥಾ ಭಿನ್ನಸ್ಯ ವೇಣೋರ್ದಲದ್ವಯಂ ತದ್ವತ್ | ಬಿದಲೇ ಇತಿ ಬಕಾರಶ್ಛಾಂದಸಃ | ಇತ್ಯೇವಮಂಡಸಾದೃಶ್ಯಮಭಿಜ್ಞಾಃ ಪುರುಷಾ ಆಹುಃ| ತಸ್ಯ ದಲದ್ವಯೋಪೇತಸ್ಯ ಶರೀರಸ್ಯೇದಮೇವಾಧರೋಷ್ಠಪರ್ಯಂತಂ ಪೃಥಿವ್ಯಾಃ ಸ್ವರೂಪಮ್ | ಇದಂ ತೂತ್ತರೋಷ್ಠಾದಿಕಂ ದಿವಃ ಸ್ವರೂಪಮ್ | ತತ್ರ ತಯೋರಧರೋತ್ತರದಲಯೋರಂತರೇಣ ಮಧ್ಯೇಽಯಮಾಕಾಶೋಽ-ಸ್ಮಾಭಿರ್ಮುಖೇ ದೃಶ್ಯಮಾನಂ ಛಿದ್ರಂ ವರ್ತತೇ, ಯಥಾ ದ್ಯಾವಾಪೃಥಿವ್ಯೋರ್ಮಧ್ಯೇ ಆಕಾಶಸ್ತ-ದ್ವತ್ | ತಸ್ಮಿನ್ಹಸ್ಮಿನ್ಪೂರ್ವೋಕ್ತ ಏವ ದೃಶ್ಯಮಾನೇ ಮುಖಚ್ಛಿದ್ರೇ ಪ್ರಾಣ ಆಶ್ರಿತಃ | ಯಥಾ ಬಾಹ್ಯೇ ಪ್ರಸಿದ್ಧಾಕಾಶೇ ವಾಯುರಾಶ್ರಿತಸ್ತದ್ವತ್ | ಯಥಾ ಚ ಬಾಹ್ಯೇ ಜ್ಯೋತಿಸ್ತ್ರಯಮೇವಂ ಶರೀರೇಽಪಿ ಜ್ಯೋತಿಸ್ತ್ರಯಮಸ್ತಿ | ಅನೇನ ಪ್ರಕಾರೇಣ ಶರೀರಸ್ಯಾಧರೋತ್ತರಭಾಗೌ ಪೃಥಿವೀ-

**ರೂಪೇಣ ದ್ಯುಲೋಕರೂಪೇಣ ಚ ಧ್ಯಾತವ್ಯಾ । ವಾಯುಶ್ಚ ಪ್ರಾಣರೂಪೇಣ ಧ್ಯೇಯಃ । ಜ್ಯೋತಿ- ಸ್ತ್ರಯಂ ಚ ಬಹಿರ್ವದಂತರಪಿ ಧ್ಯೇಯ ಮಿತ್ಯರ್ಥಃ ॥**

ಪೃಥಿವ್ಯಾದಿದೇವತೆಗಳಂತೆ ತನ್ನ ಶರೀರದವಯವಗಳ ಧ್ಯಾನವನ್ನು ತೋರಿಸುತ್ತಾರೆ. ಲೋಕದಲ್ಲಿ ಮನುಷ್ಯನ ಶರೀರವು ಅಂಡಸದೃಶವಾಗಿದೆ. ಬ್ರಂಹ್ಮಾಂಡದ ಅಧಃಕಪಾಲ, ಊರ್ಧ್ವಕಪಾಲವೆಂಬ ಎರಡು ಹೋಳುಗಳು ಪರಸ್ಪರ ವಿಲಕ್ಷಣ ವಾಗಿರುವಂತೆ ಪುರುಷನಲ್ಲಿಯೂ ಪಾದದಿಂದ ಕೆಳತುಟಿಯವರೆಗಿನ ಒಂದುಭಾಗ. ಮೇಲ್ತುಟಿಯಿಂದ ತಲೆಯವರೆಗೆ ಒಂದು ಭಾಗ ಸೀಳಿದ ಬಿದಿರಿನಂತೆ ಇರುತ್ತವೆ. ವಕಾರಕ್ಕೆ ಬಕಾರ ಛಾಂದಸವಾಗಿ ಬಂದಿದೆ. ಹೀಗಿರುವುದರಿಂದ ಅಂಡಸಾದೃಶ್ಯ ವನ್ನು ತಿಳಿದವರು ಹೇಳುತ್ತಾರೆ. ಶರೀರದ ಈ ಎರಡುದಲಗಳಲ್ಲಿ ಕೆಳತುಟಿಯವರೆಗಿರುವ ಭಾಗವು ಪೃಥಿವೀಸ್ವರೂಪವೆಂದು ತಿಳಿಯಬೇಕು. ಅದರ ಮೇಲ್ಭಾಗವು ದ್ಯುಲೋಕಸ್ವರೂಪವು. ಈ ಎರಡುದಲಗಳಮಧ್ಯದಲ್ಲಿ ಮುಖಛಿದ್ರದಲ್ಲಿತೋರುವ ಆಕಾಶವು ದ್ಯಾವಾಪೃಥಿವೀಮಧ್ಯದಲ್ಲಿರುವ ಆಕಾಶವೇ ತಿಳಿಯಬೇಕು. ಈ ಮುಖಛಿದ್ರದಲ್ಲಿಯೇ ಪ್ರಾಣ ಆಶ್ರಯ ಹೊಂದಿದೆ. ಹೊರಗಿನ ಆಕಾಶದಲ್ಲಿ ವಾಯುವಿದ್ದಂತೆ ಇದನ್ನು ತಿಳಿಯಬೇಕು. ಹೊರಗೆ ಮೂರು ಜ್ಯೋತಿಸ್ಸಿದ್ದಂತೆ ಶರೀರದಲ್ಲಿಯೂ ಮೂರು ಜ್ಯೋತಿಸ್ಸಿರುತ್ತವೆ. ಈ ರೀತಿಯಿಂದ ಶರೀರದ ಕೆಳಭಾಗವನ್ನು ಪೃಥಿವೀರೂಪದಿಂದಲೂ, ಮೇಲ್ಭಾಗವನ್ನು ದ್ಯುಲೋಕರೂಪದಿಂದಲೂ ವಾಯುವನ್ನು ಪ್ರಾಣರೂಪದಿಂದಲೂ ಧ್ಯಾನಿಸಬೇಕು. ಹೊರಗಿನ ಜ್ಯೋತಿಸ್ತ್ರಯದಂತೆ ಶರೀರದ ಒಳಗೂ ಅವುಗಳನ್ನು ಧ್ಯಾನಿಸಬೇಕು.

## ಯಥಾಽಸೌ ದಿವ್ಯಾದಿತ್ಯ ಏವಮಿದಂ ಶಿರಸಿ ಚಕ್ಷುರ್ಯಥಾಸಾವಂತರಿಕ್ಷೇ ವಿದ್ಯುದೇವಮಿದಮಾತ್ಮನಿ ಹೃದಯಂ ಯಥಾಯಮಗ್ನಿಃ ಪೃಥಿವ್ಯಾ- ಮೇವಮಿದಮುಪಸ್ಥೇ ರೇತಃ ॥

**ತಚ್ಚ ತ್ರಯಂ ದರ್ಶಯತಿ—ಲೋಕತ್ರಯಗತಾದಿತ್ಯವಿದ್ಯುದಗ್ನಿವಚ್ಚಕ್ಷುರ್ಹೃದಯರೇತಾಂಸಿ ದ್ರಷ್ಟವ್ಯಾನಿ ॥**

ಮೂರು ಜ್ಯೋತಿಗಳನ್ನು ವಿವರಿಸುತ್ತಾರೆ. ದ್ಯುಲೋಕದಲ್ಲಿ ಸೂರ್ಯನಂತೆ ತಲೆಯಲ್ಲಿಕಣ್ಣನ್ನೂ, ಅಂತರಿಕ್ಷದಲ್ಲಿ ಮಿಂಚಿನಂತೆ ಶರೀರದಲ್ಲಿ ಹೃದಯವನ್ನೂ, ಪೃಥಿವಿಯಲ್ಲಿ ಅಗ್ನಿಯಂತೆ ಉಪಸ್ಥದಲ್ಲಿ ರೇತಸ್ಸನ್ನೂ ತಿಳಿಯಬೇಕು.

## ಏವಮು ಹ ಸ್ಮ ಸರ್ವಲೋಕಮಾತ್ಮಾನಮನುವಿಧಾಯಾಽಽಹೇದಮೇವ ಪೃಥಿವ್ಯಾ ರೂಪಮಿದಂ ದಿವಃ ॥

**ಆಧ್ಯಾತ್ಮಿಕಮುಪಾಸನಂ ಪ್ರತಿಪಾದ್ಯೋಪಸಂಹರತಿ—ಉಕ್ತೇನೈವ ಪ್ರಕಾರೇಣ ಲೋಕ- ತ್ರಯಸದೃಶಂ ಪುರುಷಶರೀರಮನುಕ್ರಮೇಣ ಸಂಪಾದ್ಯೇದಮೇವಾಧರೋಷ್ಠಪರ್ಯಂತಂ ಪೃಥಿವ್ಯಾಃ ಸ್ವರೂಪಮಿದಂ ತೂತ್ತರೋಷ್ಠಾದಿಕಂ ದಿವಃ ಸ್ವರೂಪಮಿತ್ಯೇವಂ ಶಾಕಲ್ಯ ಆಹ ॥**

ಆಧ್ಯಾತ್ಮಿಕೋಪಾಸನೆಯನ್ನು ವಿಶದಪಡಿಸಿ ಉಪಸಂಹಾರಮಾಡುತ್ತಾರೆ. ಪೂರ್ವೋಕ್ತರೀತಿಯಿಂದ ಮೂರುಲೋಕ ಸಾದೃಶ್ಯವನ್ನು ಪುರುಷಶರೀರದಲ್ಲಿ ಕಲ್ಪಿಸಿ ಕೆಳತುಟಿಯವರೆಗಿನ ದೇಹಭಾಗವನ್ನು ಪೃಥಿವೀರೂಪವೆಂದೂ, ಮೇಲಿನಭಾಗವನ್ನು ದ್ಯುಲೋಕರೂಪವೆಂದೂ ಶಾಕಲ್ಯರು ಹೇಳುತ್ತಾರೆ.

ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶು-
ಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವ
ಮಾಯುರೇತಿ ||

**ಉಪಾಸನಸ್ಯ ಫಲಂ ದರ್ಶಯತಿ—ಪೂರ್ವವದ್ವ್ಯಾಖ್ಯೇಯಮ್ ||**

ಉಪಾಸನಾಫಲವನ್ನು ವಿವರಿಸುತ್ತಾರೆ. ಹಿಂದಿನಂತೆಯೇ ಅರ್ಥವನ್ನು ತಿಳಿಯಬೇಕು.

———

*English Translation*

———

1. Next comes the meditation as taught by Sakalya.

2. The first half is the earth, the second half heaven, their uniting the rain, the uniter Parganya.

3. And so it is when he (Parganya) rains thus strongly, without ceasing, day and night.

4. Then they say also (in ordinary language), 'Heaven and earth have come together.'

5. So much with regard to the deities ; now with regard to the body :—

6. Every man is indeed like an egg. There are two halves (of him), thus they say : 'This half is the earth, that half heaven.' And there between them is the ether (the space of the mouth), like the ether between heaven and earth. In this ether there (in the mouth) the breath is fixed, as in that other ether the air is fixed. And as there are those three luminaries (in heaven). There are these three luminaries in man.

7. As thete is that sun in heaven, there is this eye in the head. As there is that lightning in the sky, there is this heart in the body ; as there is that fi c on earth. there is this seed in the member.

8. Having thus represented the self (body) as the whole world, Sâkalya said : This half is the earth, that half heaven.

9. He who thus knows this union, becomes united with offspring, cattle, fame, glory of countenance, and the world of Svarga. He lives his full age.

ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ತೃತೀಯಾರಣ್ಯಕೇ
ಪ್ರಥಮಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ತೃತೀಯಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವು ॥



## ಅಥ ತೃತೀಯಾರಣ್ಯಕೇ ಪ್ರಥಮಾಧ್ಯಾಯೇ ತೃತೀಯಃ ಖಂಡಃ

**ಮೂರನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು**



**ಅಥಾತೋ ನಿರ್ಭುಜಪ್ರವಾದಾಃ ॥**

ಉಪಾಸನಾನಂತರಂ ಪ್ರತಿಜಾನೀತೇ— ಅಥ ಕೇವಲಸಂಹಿತೋಪಾಸನೋಕ್ತ್ಯನಂತರಮ್। ಯತಃ ಪಾಠಕಾನಾಂ ಸಂಹಿತಾಪಾಠಾದನಂತರಂ ಪದಕ್ರಂ ತು ಸಂಧಿಸ್ಥಾವತಃ ಕಾರಣಾನ್ನಿರ್ಭುಜಪ್ರವಾದಾಃ ಸಂಹಿತೋಪಾಸಕಾ ಮಹರ್ಷಯಃ ಸಂಹಿತಾಯಾಃ ಪದಸ್ಯ ಕ್ರಮಸ್ಯ ಚ

**ಸಹೋಪಾಸನಂ ಪ್ರಾಹುರಿತಿ ಶೇಷಃ। ನಿರ್ಭುಜಶಬ್ದಃ ಸಂಹಿತಾವಾಚೀತ್ಯಭಿಧೀಯತೇ।ತನ್ನಿರ್ಭುಜಂ ಪ್ರಕರ್ಷೇಣ ವದಂತಿ ಧ್ಯೇಯದೇವತಾಸಹಿತಂ ಕಥಯಂತೀತಿ ನಿರ್ಭುಜಪ್ರವಾದಾಃ ॥**

ಬೇರೊಂದು ಉಪಾಸನೆಯನ್ನು ತೋರಿಸುತ್ತಾರೆ. ಕೇವಲ ಸಂಹಿತೋಪಾಸನೆ ಹೇಳಿದಮೇಲೆ ಸಂಹಿತಾಪಾಠ ವಾದಮೇಲೆ ಪದ ಕ್ರಮುಗಳನ್ನೂ ಪಠಿಸಬೇಕಾದುದರಿಂದ ಸಂಹಿತೋಪಾಸಕರಾದ ಮಹರ್ಷಿಗಳು ಪದ ಕ್ರಮುಗಳೊಡನೆ ಸೇರಿದ ಸಂಹಿತೋಪಾಸನೆಯನ್ನು ಹೇಳುತ್ತಾರೆ. ನಿರ್ಭುಜಶಬ್ದವು ಸಂಹಿತಾವಾಚಕವಾಗಿದೆ. ಆ ನಿರ್ಭುಜವನ್ನು (ಸಂಹಿತೆಯನ್ನು) ಧ್ಯೇಯದೇವತಾಸಹಿತವಾಗಿ ಹೇಳುವುದರಿಂದ ಆ ಮಹರ್ಷಿಗಳಿಗೆ ನಿರ್ಭುಜಪ್ರವಾದರೆಂದು ಹೆಸರು ಬಂದಿದೆ.

ಪೃಥಿವ್ಯಾಯತನಂ ನಿರ್ಭುಜಂ ದಿವ್ಯಾಯತನಂ ಪ್ರತೃಣ್ಣಮಂತರಿಕ್ಷಾ-
ಯತನಮುಭಯಮಂತರೇಣ ॥

**ಉಪಾಸ್ಯವಸ್ತುನಃ ಸ್ವರೂಪಂ ದರ್ಶಯತಿ— ಯಥಾ ನಿರ್ಭುಜಶಬ್ದಃ ಸಂಹಿತಾವಾಚೀ-ತ್ಯಭಿಧಾಸ್ಯತೇ ತಥಾ ಪ್ರತೃಣ್ಣಶಬ್ದಃ ಪದವಾಚೀ, ಉಭಯಮಂತರೇಣೇತ್ಯನೇನ ಕ್ರಮೋ ವಿವಕ್ಷಿತ ಇತ್ಯಪ್ಯಭಿಧಾಸ್ಯತೇ। ತತ್ರ ಯನ್ನಿರ್ಭುಜಂ ಸಂಹಿತಾರೂಪಂ ತತ್ಪೃಥಿವ್ಯಾಯತನಂ ಪೃಥಿವೀ-ಮಾಶ್ರಿತ್ಯ ವರ್ತತೇ ಪೃಥಿವೀರೂಪತ್ವೇನ ಧ್ಯಾಯೇದಿತ್ಯರ್ಥಃ। ತಥಾ ಪದಸ್ಯ ದ್ಯುಲೋಕರೂಪತ್ವಂ ಕ್ರಮಸ್ಯಾಂತರಿಕ್ಷರೂಪತ್ವಂ ಚ ಧ್ಯಾಯೇತ್।**

ಉಪಾಸ್ಯವಸ್ತುಸ್ವರೂಪವನ್ನು ತೋರಿಸುತ್ತಾರೆ. ನಿರ್ಭುಜಶಬ್ದ ಸಂಹಿತಾವಾಚಕವಾದಂತೆ ಪ್ರತೃಣ್ಣಶಬ್ದವು ಪದವಾಚಕವಾಗಿದೆ. ನಿರ್ಭುಜವು ಪೃಥಿವಿಯನ್ನಾಶ್ರಯಿಸಿರುತ್ತದೆ. ಪೃಥಿವೀರೂಪದಿಂದ ಧ್ಯಾನಿಸಬೇಕೆಂದರ್ಥ. ಹಾಗೆಯೇ ಪದವನ್ನು ದ್ಯುಲೋಕಸ್ವರೂಪವೆಂದೂ, ಕ್ರಮವನ್ನು ಅಂತರಿಕ್ಷರೂಪವೆಂದೂ ಧ್ಯಾನಿಸಬೇಕು.

ಅಥ ಯದ್ಯೇನಂ ನಿರ್ಭುಜಂ ಬ್ರುವಂತಮುಪವದೇದಚ್ಯೋಷ್ಠಾಃ ವರಾಭ್ಯಾಂ ಸ್ಥಾನಾಭ್ಯಾಮಿತ್ಯೇನಂ ಬ್ರೂಯತದಥ ಯದ್ಯೇನಂ ಪ್ರತೃಣ್ಣಂ ಬ್ರುವಂತಮುಪವದೇದಚ್ಯೋಷ್ಠಾ ಉತ್ತರಾಭ್ಯಾಂ ಸ್ಥಾನಾಭ್ಯಾಮಿತ್ಯೇನಂ ಬ್ರೂಯಾದಸ್ತ್ವೇವೋಭಯಮಂತರೇಣಾಽಹ ತಸ್ಯ ನಾಸ್ತ್ಯುಪವಾದಃ ॥

ಯಥೋಕ್ತಪೃಥಿವ್ಯಾದಿರೂಪನಿರ್ಭುಜಾದಿಧ್ಯಾನಂ ಪ್ರಶಂಸಿತುಮುಪಾಸಕಸ್ಯ ಸಾಮರ್ಥ್ಯಂ ದರ್ಶಯತಿ— ಅಥ ಉಪಾಸನಾನಂತರಂ ನಿರ್ಭುಜಂ ಬ್ರುವಂತಂ ಸಂಹಿತಾಮಧೀಯಾನಮೇನ-ಮುಪಾಸಕಂ ಯದ್ಯನ್ಯಃ ಕಶ್ಚಿದುಪವದೇದುಪಾಸಕೇನ ಪಠ್ಯಮಾನಾಯಾಂ ಸಂಹಿತಾಯಾಂ ಸ್ವರವರ್ಣಾದಿವೈಕಲ್ಯದೋಷಮುದ್ಭಾವಯೇತ್। ತದಾನೀಮೇದಂ ದೋಷೋದ್ಭಾವಕಮುಯಮು. ಪಾಸಕ ಏವಂ ಬ್ರೂಯಾತ್ ಹೇ ಉಪವಾದಿನ್ನವರಾಭ್ಯಾಮಧೋವರ್ತಿಭ್ಯಾಂ ಸ್ಥಾನಾಭ್ಯಾಂ ಪೃಥಿ-

ವ್ಯಂತರಿಕ್ಷಲೋಕಾಭ್ಯಾಮುಚ್ಯೋಽಷ್ಟಾ ತ್ವಂ ಪ್ರಚ್ಯುತೋಽಸೀತಿ । ಯುಕ್ತಂ ಚೈತದುಪಾಸಕಸ್ಯ ವಚನಮ್ । ಸಂಹಿತಾಯಾಃ ಪೃಥಿವೀರೂಪತ್ವಧ್ಯಾನೇನ ಸರ್ವದೋಷಪರಿಹಾರಾತ್ । ಅತೋ ನಿರ್ದೋಷಾಯಾಂ ಸಂಹಿತಾಯಾಂ ದೋಷಮುದ್ಭಾವಯಿತುಃ ಪೃಥಿವೀಲೋಕಾತ್ತತ್ಸಪಭಾವಿ- ನೋಽತರಿಕ್ಷಲೋಕಾಚ್ಚ ಪ್ರಚ್ಯುತಿರ್ಭವತಿ। ಅಥಶಬ್ದಃ ಪೂರ್ವೋಕ್ತವೈಲಕ್ಷಣ್ಯಾರ್ಥಃ। ಸಂಹಿತಾಯಾಂ ದೋಷಮುಕ್ತ್ವಾ ಪ್ರತ್ಯಣ್ಣಂ ಬ್ರುವಂತಂ ಪದಮಧೀಯಾನಮೇನಮುಪಾಸಕಂ ಯತಿಕಶ್ಚಿದು- ಪವದೇತ್ । ಅಧೀಯಮಾನೇ ಪದೇ ದೋಷೋದ್ಭಾವನಮುಪವಾದಃ । ತದಾನೀಮೇನಮುಪ- ವಾದಿನಂ ಪ್ರತ್ಯುಪಾಸಕ ಉತ್ತರಾಭ್ಯಾಂ ಸ್ಥಾನಾಭ್ಯಾಮಂತರಿಕ್ಷದ್ಯುಲೋಕಾಭ್ಯಾಮುಚ್ಯೋಽಷ್ಟಾ ಪ್ರಚ್ಯುತೋಽಸೀತ್ಯೇವಂ ಬ್ರೂಯಾತ್ । ಯಸ್ತೂಪಾಸಕಂ ಉಭಯಮಂತರೇಣಾಽಽಹ ಕ್ರಮಮ- ಧೀತೇ ತಸ್ಯೋಽಪಾಸಕಸ್ಯೋಽಪವಾದಃ । ಪರೇಣೋದ್ಭಾವಯಿತವ್ಯಃ ಕ್ರಮವಿಷಯೇಂ ದೋಷೋ ನಾಸ್ತ್ಯೇವ । ಸಂಹಿತಾಯಾಂ ಪದೇ ಚ ಭ್ರಾಂತದೃಷ್ಟ್ಯಾ ದೋಷಃ ಸಂಭಾವ್ಯತೇ । ತಥಾ ಹಿ “ ಅಗ್ನಿಮೀಳೇ ” (ಋ-ಸಂ-ಮಂ-೧-ಸೂ-೧-ಋ-೧) ಇತ್ಯಸ್ಯಾಂ ಸಂಹಿತಾಯಾಮುತ್ತರ- ಪದಗತ ಈಕಾರಃ ಸ್ವರಿತಃ । ಏಕಾರಃ ಪ್ರಚಯಃ । ಪದಕಾಲೇ ತು ತದುಭಯಮನುದಾತ್ತಮ್ । ತಥಾ ಸತಿ ಪದವಾಸನಾವಾಸಿತಸ್ಯ ಕಸ್ಯಚಿಚ್ಛ್ರದ್ಧಾಜಡಸ್ಯ ಸಂಹಿತಾಯಾಂ ಸ್ವರಾನ್ಯಥಾತ್ವಭ್ರಾಂತಿ- ರುದಿಯಾತ್ । ತಥಾ ಸಂಹಿತಾವಾಸನಾವಾಸಿತಸ್ಯ ಶ್ರದ್ಧಾಜಡಸ್ಯ ಪದಚ್ಛೇದಕಾಲೇ ಸ್ವರಾನ್ಯಥಾ- ತ್ವಭ್ರಾಂತಿಃ । ಕ್ರಮಕಾಲೇ ತು ನೋಕ್ತಭ್ರಮದ್ವಯಮಸ್ತಿ, ದ್ವಿವಿಧಸ್ವರಸ್ಯ ಪಠ್ಯಮಾನತ್ವಾತ್ । ಅಗ್ನಿಮಿತ್ಯನೇನ ಪೂರ್ವಪದೇನ ಸಹ ಸಂಹಿತಾಯಾಮೀಳ ಇತಿ ಪದೇ ಸ್ವರಿತಪ್ರಚಯೌ ಪಠ್ಯೇತೇ । ಪುರೋಹಿತಮಿತ್ಯನೇನೋತ್ತರಪದೇನ ಸಹ ಸಂಹಿತಾಯಾಮನುದಾತ್ತದ್ವಯಂ ಪಠ್ಯೇತೇ । ತಸ್ಮಾ- ತ್ಕ್ರಮೇ ಸ್ವರಾನ್ಯಥಾತ್ವಭ್ರಮೋ ನೋದೇತಿ । ಕಥಂ ಚಿದನ್ಯಥಾತ್ವೇಽಪಿ ದೇವತಾಧ್ಯಾನೇನ ದೋಷಃ ಸಮಾಧೀಯತೇ । ತಸ್ಮಾದುಪಾಸನಂ ಪ್ರಶಸ್ತಮಿತ್ಯರ್ಥಃ ॥

ಪೃಥಿವ್ಯಾದಿರೂಪ ನಿರ್ಭುಜಧ್ಯಾನವನ್ನು ಪ್ರಶಂಸಿಸಲು ಉಪಾಸಕನ ಸಾಮರ್ಥ್ಯವನ್ನು ತೋರಿಸುತ್ತಾರೆ. ಉಪಾಸನೆ ಯಾದ ಮೇಲೆ ಸಂಹಿತೆಯನ್ನು ಪಠಿಸುವ ಉಪಾಸಕನಿಗೆ ಯಾರಾದರೂ ದೋಷ ಹೇಳಿದರೆ ಅಂದರೆ ಅವನು ಹೇಳುವ ಸಂಹಿತೆಯಲ್ಲಿ ಸ್ವರವರ್ಣಾದಿವೈಕಲ್ಯದೋಷವನ್ನು ಎತ್ತಿ ಹೇಳಿದರೆ ಆಗ ಉಪಾಸಕನು ದೋಷಹೇಳಿದವನಿಗೆ ಹೀಗೆ ಹೇಳು ತ್ತಾನೆ. ದೋಷವಾದಿಯೇ ನೀನು ಕೆಳಗಿರುವ ಅಂತರಿಕ್ಷಭೂಲೋಕಗಳಿಂದ ಪ್ರಚ್ಯುತನಾಗುವಿ. ಸಂಹಿತೆಯನ್ನು ಪೃಥಿವೀರೂಪದಿಂದ ಧ್ಯಾನಿಸುವುದರಿಂದ ಉಪಾಸಕನ ಸರ್ವದೋಷಗಳೂ ನಾಶವಾಗುವುದರಿಂದ ಹೀಗೆ ಹೇಳಲು ಅವನಿಗೆ ಸಾಮರ್ಥ್ಯವಿದೆ. ದೋಷರಹಿತವಾದ ಸಂಹಿತೆಯಲ್ಲಿ ದೋಷೋದ್ಭಾವನೆ ಮಾಡಿದರೆ ಆಗ ಅವನಿಗೆ ಪೃಥಿವೀಲೋಕದಿಂದಲೂ ಅದರ ಸಮೀಪದಲ್ಲಿರುವ ಅಂತರಿಕ್ಷಲೋಕದಿಂದಲೂ ಪ್ರಚ್ಯುತಿ ಆಗುತ್ತದೆ. ಉಪಾಸಕನ ಸಂಹಿತಾಪಾಠದಲ್ಲಿ ದೋಷ ಹೇಳದೆ ಅವನು ಪದಪಾಠಮಾಡುವಾಗ ಯಾರಾದರೂ ದೋಷೋದ್ಭಾವನೆ ಮಾಡಿದರೆ ಆಗ ಉಪಾಸಕನು ಅವನಿಗೆ ಅಂತರಿಕ್ಷದ್ಯುಲೋಕಗಳಿಂದ ಪ್ರಚ್ಯುತನಾಗು ಎಂದು ಹೇಳಬೇಕು. ಉಪಾಸಕನುಕ್ರಮಪಾಠಮಾಡುತ್ತಿರುವಾಗ ಅಪವಾಧ ಕನು ಕ್ರಮವಿಷಯದಲ್ಲಿ ದೋಷೋದ್ಭಾವನೆ ಮಾಡಲಾರನು. ಏಕೆಂದರೆ ಸಂಹಿತೆಯಲ್ಲಿಯೂ, ಪದದಲ್ಲಿಯೂ ಭ್ರಾಂತ ನಾಗಿ ತಪ್ಪುಮಾಡಬಹುದು. ಅಗ್ನಿಮೀಳೇ ಎಂಬಲ್ಲಿ ಸಂಹಿತಾಪಾಠಕಾಲದಲ್ಲಿ ಉತ್ತರಪದದಲ್ಲಿರುವ ಈಕಾರ ಸ್ವರಿತ ವಾಗಿರುತ್ತದೆ. ಏಕಾರ ಪ್ರಚಯ. ಪದಕಾಲದಲ್ಲಿ ಇವೆರಡೂ ಅನುದಾತ್ತವಾಗುತ್ತವೆ. ಆಗ ಪದಪಾಠದಲ್ಲಿಯೇ ಆಸಕ್ತ

ನಾದ ಶ್ರದ್ಧಾಜಡನಿಗೆ ಸಂಹಿತಾಪಾಠದಲ್ಲಿಯೇ ಆಸಕ್ತನಾದ ಶ್ರದ್ಧಾಜಡನಿಗೆ ಪದಚ್ಛೇದಕಾಲದಲ್ಲಿ ಭ್ರಾಂತಿಬರಬಹುದು ಕ್ರಮಪಾಠಕಾಲದಲ್ಲಿ ಎರಡುರೀತಿಯಸ್ವರಕ್ಕೂ ಅವಕಾಶವಿರುವುದರಿಂದ ಯಾಪಸ್ವರವ್ಯತ್ಯಾಸದಭ್ರಾಂತಿಗೆ ಅವಕಾಶವಿಲ್ಲ. ಅಗ್ನಿಂ ಎಂಬ ಪೂರ್ವಪದದೊಡನೆ ಸಂಹಿತೆಯಲ್ಲಿ ಈಳೇ ಎಂಬ ಪದದಲ್ಲಿ ಸ್ವರಿತಪ್ರಚಯಗಳೆರಡನ್ನೂ ಪಠಿಸುತ್ತಾರೆ. ಪುರೋಹಿತಂ ಎಂಬ ಉತ್ತರಪದದೊಡನೆ ಸಂಹಿತೆಯಲ್ಲಿ ಎರಡು ಅನುದಾತ್ತಗಳನ್ನೂ ಪಠಿಸುತ್ತಾರೆ. ಆದುದರಿಂದ ಕ್ರಮದಲ್ಲಿ ಸ್ವರವ್ಯತ್ಯಾಸದ ದೋಷಕ್ಕೆ ಅವಕಾಶವಿಲ್ಲ. ಅಥವಾ ಯಾವುದೋ ರೀತಿಯಿಂದ ತಪ್ಪಾದರೂ ದೇವತಾಧ್ಯಾನ ದಿಂದ ಆ ದೋಷ ಪರಿಹೃತವಾಗುತ್ತದೆ. ಆದುದರಿಂದ ಈ ಉಪಾಸನೆ ಪ್ರಶಸ್ತವಾದುದೆಂದರ್ಥ.

**ಯದ್ಧಿ ಸಂಧಿಂ ವಿವರ್ತಯತಿ ತನ್ನಿರ್ಭುಜಸ್ಯ ರೂಪಮಥ ಯಚ್ಛುದ್ಧೇ ಅಕ್ಷರೇ ಅಭಿವ್ಯಾಹರತಿ ತತ್ಪ್ರತೃಣ್ಣಸ್ಯಾಗ್ರ ಉ ಏವೋಭಯಮಂತ-ರೇಣೋಭಯಂ ವ್ಯಾಪ್ತಂ ಭವತಿ, ||**

**ನಿರ್ಭುಜಾದಿಶಬ್ದಾನಾಂ ವಿವಕ್ಷಿತಾರ್ಥೇ ಲೋಕಪ್ರಸಿದ್ಧ್ಯಭಾವಾಚ್ಛ್ರುತಿರೇವ ತಮರ್ಥಂ ದರ್ಶಯತಿ—ಯದುಚ್ಚಾರಣಂ ಸಂಧಿಂ ಪದಯೋರುಭಯೋರತ್ಯಂತಂ ಸಂನಿಕರ್ಷಂ ವಿವರ್ತಯತಿ ವಿಶೇಷೇಣ ಸಂಪಾದಯತಿ ತದುಚ್ಚಾರಣಂ ನಿರ್ಭುಜಶಬ್ದಾರ್ಥಸ್ಯ ಸ್ವರೂಪಮ್ । ನಿರ್ದಿಷ್ಟೌ ಭುಜಸದೃಶೌ । ಪೂರ್ವೋತ್ತರಶಬ್ದೌ ಯಸ್ಮಿನ್ಸಂಹಿತಾರೂಪ ಉಚ್ಚಾರಣೇ ತದುಚ್ಚಾರಣಂ ನಿರ್ಭುಜಮ್ । ಅಥಶಬ್ದಃ ಪೂರ್ವವೈಲಕ್ಷಣ್ಯಾರ್ಥಃ । ಶುದ್ಧೇ ವಿಕಾರರಹಿತೇ ಪೂರ್ವೋತ್ತರೇ ಉಭೇ ಅಕ್ಷರೇ ಅಭಿವ್ಯಾಹರತಿ ಸ್ಪಷ್ಟಮುಚ್ಚಾರಯತೀತಿ ಯದಸ್ತಿ ತತ್ಪ್ರತೃಣ್ಣಶಬ್ದಾಭಿಧೇಯಸ್ಯ ಪದಚ್ಛೇದಸ್ಯ ಸ್ವರೂಪಮ್ । ತದ್ಯಥಾ—" ಇಷೇ ತ್ವೋರ್ಜೇ ತ್ವಾ " (ತೈ-ಸಂ-೧-೧-೧) ಇತ್ಯತ್ರಿ ಯೋಽಯಮೋಕಾರಃ ಸೋಽಯಂ ಸಂಹಿತಾಸ್ವರೂಪಃ । ಯದಾ ತ್ವಾಕಾರಾಂತಂ ತ್ವೇತಿ ಪದ-ಮೂರ್ಕಾರಾದಿಕಮೂರ್ಜ ಇತ್ಯಾದಿಪದಮುಚ್ಚಾರಯತಿ ತದಾನೀಮಾಕಾರ ಊಕಾರಶ್ಚೇತ್ಯುಭೇ ಅಕ್ಷರೇ ಶುದ್ಧೇ ಭವತಃ । ತದಾನೀಂ ಸಂನಿಕರ್ಷರೂಪಾಯಾಃ ಸಂಹಿತಾಯಾ ವಿಚ್ಛಿನ್ನತ್ವಾತ್ । ವಿಚ್ಛೇದರೂಪಹಿಂಸಾವಾಚಿನಾ ಪ್ರತೃಣ್ಣಶಬ್ದೇನ ವಿಚ್ಛಿನ್ನಂ ಪದಮಭಿಧೀಯತೇ । ಯದೇತತ್ಪ್ರ-ತೃಣ್ಣಸ್ಯ ಸ್ವರೂಪಂ ತದೇತದಗ್ರ ಉ ಪ್ರಥಮ ಭಾವ್ಯೇವ । ಸಿದ್ಧೇ ಪದಸ್ಯ ಸ್ವರೂಪೇ ಪಶ್ಚಾತ್ಸಂಹಿತಾ ಪ್ರವರ್ತತೇ, ಸಂಹಿತಾಯಾಃ ಸಂಧೀಯಮಾನಪದದ್ವಯಧರ್ಮತ್ವೇನ ಪದಪೂರ್ವಕತ್ವಸ್ಯಾವಶ್ಯಂ-ಭಾವಾತ್ । ಯೇನ ಕ್ರಮೇಣ ಸಂಹಿತಾ ಪದಂ ಚೇತ್ಯುಭಯಂ ವ್ಯಾಪ್ತಂ ಭವತಿ ಸೋಽಯಂ ಕ್ರಮ ಉಭಯಮಧ್ಯವರ್ತಿತ್ವಾದುಭಯಮಂತರೇಣೇತ್ಯುಚ್ಯತೇ ||**

ನಿರ್ಭುಜಾದಿಶಬ್ದಗಳಿಗೆ ವಿವಕ್ಷಿತವಾದ ಅರ್ಥದಲ್ಲಿ ಲೋಕಪ್ರಸಿದ್ಧಿ ಇಲ್ಲದಿರುವುದರಿಂದ ಶ್ರುತಿಯೇ ಆ ಅರ್ಥವನ್ನು ವಿವರಿಸುತ್ತದೆ. ಯಾವ ಉಚ್ಚಾರಣೆಯು ಎರಡುಶಬ್ದಗಳ ಅತ್ಯಂತಸಾಮೀಪ್ಯವನ್ನು ಒದಗಿಸಿಕೊಡುವುದೋ ಆ ಉಚ್ಚಾರಣಯೇ **ನಿರ್ಭುಜ** ಶಬ್ದಾರ್ಥಸ್ವರೂಪವಾಗುತ್ತದೆ. ನಿರ್ದಿಷ್ಟೌ ಭುಜಸದೃಶೌಯಸ್ಮಿನ್. ಯಾವ ಸಂಹಿತಾರೂಪ ಉಚ್ಚಾರಣೆಯಲ್ಲಿ ಭುಜಸಮಾನಗಳಾದ ಪೂರ್ವೋತ್ತರಪದಗಳಿರುತ್ತವೆಯೋ ಅದು ನಿರ್ಭುಜ. ವಿಕಾರರಹಿತವಾದ ಪೂರ್ವೋತ್ತರವರ್ಣನೆಗಳನ್ನು ಎಲ್ಲಿ ಸ್ಪಷ್ಟವಾಗಿ ಉಚ್ಚರಿಸುತ್ತಾರೋ ಅದು ಪ್ರತೃಣ್ಣಶಬ್ದವಾಚ್ಯವಾಗುತ್ತದೆ. **ಇಷೇ**

**ತ್ವೋರ್ಜೇ ತ್ವಾ** ಇಲ್ಲಿ ಅಊಸೇರಿ ಓಕಾರವಾಗಿದೆ. ಇದು ಸಂಹಿತಾರೂಪನಿರ್ಭುಜ. ತ್ವಾ ಊರ್ಜೇ ಎಂದು ಬೇರೆಯಾಗಿ ಉಚ್ಚರಿಸಿದರೆ ಆಗ ಆ ಊ ಅಕ್ಷರಗಳು ಶುದ್ಧವಾಗಿರುತ್ತವೆ. ಸಂನಿಕರ್ಷರೂಪಸಂಹಿತಾ ಅಲ್ಲಿ ವಿಚ್ಛಿನ್ನವಾಗಿರುತ್ತದೆ. ವಿಚ್ಛೇದವು ಹಿಂಸಾರ್ಥವನ್ನು ತಿಳಿಸುವುದರಿಂದ ಪ್ರತೃಣ್ಣಶಬ್ದದಿಂದ ವಿಚ್ಛಿನ್ನವಾದ ಪದವೆಂಬ ಅರ್ಥತೋರುತ್ತದೆ. ಪದ ಸ್ವರೂಪಸಿದ್ಧವಾದಮೇಲೆ ಸಂಹಿತಾಪ್ರವೃತ್ತಿ. ಏಕೆಂದರೆ ಸಂಹಿತಾ ಎಂದರೆ ಸೇರಿಹೊಂದುವ ಎರಡುಪದಗಳ ಧರ್ಮರೂಪ ವಾಗಿರುತ್ತದೆ. ಯಾವ ಕ್ರಮದಿಂದ ಸಂಹಿತಾ ಮತ್ತು ಪದಗಳ ಪ್ರವೃತ್ತಿ ಇದೆಯೋ ಅವೆರಡನ್ನೂ ವ್ಯಾಪಿಸಿ ಕ್ರಮ ಇರುತ್ತದೆ. ಆದುದರಿಂದ **ಉಭಯಮಂತರೇಣ** ಎಂಬುದರಿಂದ ಎರಡರ ಮಧ್ಯದಲ್ಲಿರುವುದು ಕ್ರಮವೆಂದು ಹೇಳಿದೆ.

**ಅನ್ನಾದ್ಯಕಾಮೋ ನಿರ್ಭುಜಂ ಬ್ರೂಯಾತ್ಸ್ವರ್ಗಕಾಮಃ ಪ್ರತೃಣ್ಣ-ಮುಭಯಕಾಮ ಉಭಯಮಂತರೇಣ, ||**

**ಪ್ರಕಾರಾಂತರೇಣೋಪಾಸದಪ್ರಶಂಸಾರ್ಥಮುಪಾಸಕಸ್ಯ ಕಾಮ್ಯಂ ಸಂಹಿತಾಧ್ಯಯನಂ ವಿಧತ್ತೇ—ಸಂಹಿತಾಧ್ಯಯನೈರನ್ನಾದ್ಯಾದಿಸಿದ್ಧಿರುಪಾಸಕಸ್ಯ ಭವತೀತ್ಯುಕ್ತೇ ಸತ್ಯುಪಾಸನಮೇವ ಪ್ರಶಸ್ತಂ ಭವತಿ ||**

ಸಂಹಿತಾಧ್ಯಯನವು ಉಪಾಸಕನಿಗೆ ಕಾಮ್ಯಫಲದಾಯಕವೆಂದು ಪ್ರಕಾರಾಂತರದಿಂದ ಉಪಾಸನಾಪ್ರಶಂಸೆಯನ್ನು ತಿಳಿಸುತ್ತಾರೆ. ಸಂಹಿತಾಧ್ಯಯನದಿಂದ ಅನ್ನಾದಿಸಿದ್ಧಿಯನ್ನೂ ಪದಪಾಠದಿಂದ ಸ್ವರ್ಗಪ್ರಾಪ್ತಿಯನ್ನೂ ಕ್ರಮಾಧ್ಯಯನದಿಂದ ಪೂರ್ವೋಕ್ತಫಲದ್ವಯವನ್ನೂ ಉಪಾಸಕನು ಹೊಂದುತ್ತಾನೆ. ಇದರಿಂದ ಉಪಾಸನೆಯು ಪ್ರಶಸ್ತವೆಂದು ವ್ಯಕ್ತವಾಗುತ್ತದೆ.

**ಅಥ ಯದ್ಯೇನಂ ನಿರ್ಭುಜಂ ಬ್ರುವಂತಂ ಪರ ಉಪವದೇತ್ಪೃಥಿವೀಂ ದೇವತಾಮಾರಃ ಪೃಥಿವೀ ತ್ವಾ ದೇವತಾ ರಿಷ್ಯತೀತ್ಯೇನಂ ಬ್ರೂಯಾ-ದಥ ಯದ್ಯೇನಂ ಪ್ರತೃಣ್ಣಂ ಬ್ರುವಂತಂ ಪರ ಉಪವದೇದ್ದಿವಂ ದೇವತಾಮಾರೋ ದ್ಯೌಸ್ತ್ವಾ ದೇವತಾ ರಿಷ್ಯತೀತ್ಯೇನಂ ಬ್ರೂಯಾ ದಥ ಯದ್ಯೇನಮುಭಯಮಂತರೇಣ ಬ್ರುವಂತಂ ಪರ ಉಪವ-ದೇದಂತರಿಕ್ಷಂ ದೇವತಾಮಾರೋಽನ್ತರಿಕ್ಷಂ ತ್ವಾ ದೇವತಾ ರಿಷ್ಯ-ತೀತ್ಯೇನಂ ಬ್ರೂಯಾತ್ ||**

**ಯಥೋಕ್ತಫಲವಿಘ್ನಕಾರಿಣಂ ಶತ್ರುಂ ಶಾಪೇನ ವಿನಾಶಯಿತುಂ ಶಾಪರೂಪಂ ಮಂತ್ರಂ ದರ್ಶಯತಿ—ಅಯಮುಪಾಸಕೋಽನ್ನಾದ್ಯಕಾಮಃ ಸನ್ಯದಾ ಸಂಹಿತಾಮಧೀತೇ ತದಾನೀಂ ಪರಃ ಶತ್ರುರೇತಸ್ಯ ಫಲವಿಘ್ನಾರ್ಥಮೇನಮುಪವದೇದಧೀಯಮಾನಾಯಾಂ ಸಂಹಿತಾಯಾಂ ವಿದ್ಯ-ಮಾನಮವಿದ್ಯಮಾನಂ ವಾ ದೋಷಮುದ್ಭಾವಯೇತ್ತದಾನೀಮುಪಾಸಕಃ ಪೃಥಿವೀಮಿತ್ಯಾದಿ-ಮಂತ್ರೇಣ ತಂ ಶತ್ರುಂ ಶಪೇತ್ | ಮಂತ್ರಸ್ಯ ಚಾಯಮರ್ಥಃ—ಹೇ ಶತ್ರೋ ತ್ವಂ ಸಂಹಿತಾರೂಪಾಂ**

ಪೃಥಿವೀಂ ದೇವತಾಂ ದೂಷಯಿತುಮಾರಃ ಪ್ರಾಪ್ತವಾನಸಿ ಅತಃ ಸಾ ಪೃಥಿವೀ ದೇವತಾ ತ್ವಾಂ ರಿಷ್ಯತಿ ಹಿನಸ್ತೀತಿ । ಏವಮುತ್ತರಯೋರಪಿ ಪರ್ಯಾಯಯೋರ್ಯೋಜ್ಯಮ್ ॥

ಪೂರ್ವೋಕ್ತಫಲವಾಗದಂತೆ ವಿಘ್ನವನ್ನುಂಟುಮಾಡುವ ಶತ್ರುವನ್ನು ನಾಶಮಾಡಲು ಶಾಪರೂಪ ಮಂತ್ರವನ್ನು ತೋರಿಸುತ್ತಾರೆ. ಅನ್ನಾದಿಕಾಮನೆಯಿಂದ ಉಪಾಸಕನು ಸಂಹಿತೆಯನ್ನೋದುತ್ತಿರುವಾಗ ಶತ್ರುವು ಫಲಕ್ಕೆ ವಿಘ್ನವನ್ನುಂಟು ಮಾಡಲು ಸಂಹಿತೆಯಲ್ಲಿ ದೋಷವಿರಲಿ ಇಲ್ಲದಿರಲಿ ಆದರೂ ದೋಷೋದ್ಘಾಟನೆಮಾಡಿದರೆ ಆಗ ಉಪಾಸಕನು **ಪೃಥಿವೀ ದೇವತಾಂ** ಇತ್ಯಾದಿಮಂತ್ರದಿಂದ ಆ ಶತ್ರುವನ್ನು ಶಪಿಸಬೇಕು. ಮಂತ್ರಾರ್ಥವನ್ನು ವಿವರಿಸುತ್ತಾರೆ. ಎಲೈ ಶತ್ರುವೇ, ನೀನು ಸಂಹಿತಾರೂಪವಾದ ಪೃಥಿವೀದೇವತೆಯನ್ನು ನಿಂದಿಸಲು ಬಂದಿರುವಿ. ಆದುದರಿಂದ ಆ ದೇವತೆಯು ನಿನ್ನನ್ನು ನಾಶ ಗೊಳಿಸುತ್ತದೆ. ಹೀಗೆಯೇ ಮುಂದಿನ ಪದಪಾಠಾದಿ ಪರ್ಯಾಯದಲ್ಲಿಯೂ ತಿಳಿಯಬೇಕು.

ಯಥಾ ತು ಕಥಾ ಚ ಬ್ರುವನ್ವಾಽಬ್ರುವಂತಂ ವಾ ಬ್ರೂಯಾದಭ್ಯಾಶ-ಮೇವ ಯತ್ತಥಾ ಸ್ಯಾತ್ ॥

ಅಸ್ಯೋಪಾಸಕಸ್ಯ ಶಪ್ತುಂ ಸಾಮರ್ಥ್ಯಂ ದರ್ಶಯತಿ—ಬ್ರುವನ್ನಿತ್ಯೇತದಪಿ ದ್ವಿತೀಯಾಂ-ತತ್ವೇನ ಪರಿಣೇತವ್ಯಮ್ । ಬ್ರುವಂತಂ ದೋಷಾಭಿಧ್ಯಾಯಿನಮಬ್ರುವಂತಂ ದೋಷೋಕ್ತಿರಹಿತಂ ವಾ ವೈರಿಣಂ ಪ್ರತಿ ಯಥಾ ತು ಕಥಾ ಚ ಯೇನ ಕೇನಾಪಿ ಪ್ರಕಾರೇಣ ಬ್ರೂಯಾದುಪಾಸಕಃ ಶಪೇತ್ । ತದಾನೀಂ ಯದುಪಾಸಕೇನೋಕ್ತಂ ತದಭ್ಯಾಶಮೇವ ಕ್ಷಿಪ್ರಮೇವ ತಥಾ ಸ್ಯಾತ್ । ತೇನೈವ ಪ್ರಕಾರೇಣ ಶತ್ರೌ ಪರ್ಯವಸ್ಯೇತ್ ॥

ಉಪಾಸಕನಿಗೆ ಶಾಪಕೊಡಲು ಸಾಮರ್ಥ್ಯವನ್ನು ತೋರಿಸುತ್ತಾರೆ. ಬ್ರುವನ್‌ಎಂಬ ಪದವನ್ನು ದ್ವಿತೀಯಾಂತ ವಾಗಿ ಪರಿಣಾಮಮಾಡಿಕೊಳ್ಳಬೇಕು. ಶತ್ರುವು ದೋಷವನ್ನು ಹೇಳಲಿ ಅಥವಾ ಹೇಳದಿರಲಿ ಅವನನ್ನು ಉಪಾಸಕನು ಯಾವರೀತಿಯಾಗಿ ಶಪಿಸುವನೋ ಅದರಂತೆಯೇ ಬಹುಜಾಗ್ರತೆಯಾಗಿ ಶತ್ರುವು ವಿಪತ್ತನ್ನು ಹೊಂದುವನು.

ನ ತ್ವೇವಾನ್ಯತ್ಕುಶಲಾದ್ಬ್ರಾಹ್ಮಣಂ ಬ್ರೂಯಾತ್ ॥

ಯದಾ ಶತ್ರುರ್ಬ್ರಾಹ್ಮಣಸ್ತದಾ ವಿಶೇಷಂ ದರ್ಶಯತಿ— ದೋಷೋದ್ಭಾವಕಃ ಶತ್ರು-ರ್ಯದಿ ಬ್ರಾಹ್ಮಣಸ್ತಂ ಪ್ರತಿ ಕುಶಲಾದನ್ಯನ್ನೈವ ಬ್ರೂಯಾತ್, ಮದೀಯಸಂಹಿತಾದೌ ದೋಷೋ-ದ್ಭಾವನಂ ತುಭ್ಯಂ ಹಿತಂ ನ ಭವತ್ಯತೋ ದೋಷೋಕ್ತಿಂ ಪರಿತ್ಯಜ್ಯ ತ್ವಂ ಸುಖೇನ ತಿಷ್ಠೇ-ತ್ಯೇವಂ ಕುಶಲಂ ಬ್ರೂಯಾತ್ । ದೇವತಾ ರಿಷ್ಯತೀತ್ಯೇತಾದೃಶಂ ಶಾಪಂ ನ ಬ್ರೂಯಾತ್ ॥

ಶತ್ರುವು ಬ್ರಾಹ್ಮಣನಾದರೆ ಆಗ ವಿಶೇಷವನ್ನು ತೋರಿಸುತ್ತಾರೆ. ದೋಷವನ್ನು ಹೇಳುವವನು ಬ್ರಾಹ್ಮಣನಾದರೆ ಆಗ ಅವನನ್ನು ಕುರಿತು ಕುಶಲಮಾತನ್ನಲ್ಲದೆ ಬೇರೆ ಏನೂ ಹೇಳಬಾರದು. ನನ್ನ ಸಂಹಿತಾಪಾಠದಲ್ಲಿ ದೋಷವನ್ನು ಹುಡುಕುವುದು ನಿನಗೆ ಹಿತವಲ್ಲ, ಇದನ್ನು ಬಿಟ್ಟುಬಿಡು. ನೀನು ಕುಶಲಿಯಾಗಿರು ಎಂದು ಹೇಳಬೇಕೇ ವಿನಾ ದೇವತೆಯು ನಿನ್ನನ್ನು ನಾಶಮಾಡುತ್ತದೆಂದು ಹಿಂದಿನಂತೆ ಹೇಳಬಾರದು.

ಅತಿದ್ಯುಮ್ನ ಏವ ಬ್ರಾಹ್ಮಣಂ ಬ್ರೂಯಾತ್ ॥

ಕ್ವಚಿದ್ಬ್ರಾಹ್ಮಣೇಽಪಿ ಶಾಪಮಭ್ಯನುಜಾನಾತಿ—ಅತಿಶಯಿತಂ ದ್ಯುಮ್ನಂ ಧನಮತಿದ್ಯುಮ್ನಂ ತಸ್ಮಿನ್ನೇವ ವಿಷಯೇ ವಿಘಾತಕಂ ಶತ್ರುಬ್ರಾಹ್ಮಣಂ ಶಪ್ನೇನ್ನ ತ್ವಲ್ಪೇ ವಿಷಯೇ ॥

ಕೆಲವುಕಡೆ ಬ್ರಾಹ್ಮಣರಿಗೂ ಶಾಪಕೊಡಬಹುದೆಂದು ತೋರಿಸುತ್ತಾರೆ. ಯಾವ ಬ್ರಾಹ್ಮಣನು ಅತಿಶಯಧನಿಂದ ಕೂಡಿದವನಾಗಿ ದೋಷೋದ್ಭೋಷಣಮಾಡುವನೋ ಅಂತಹ ಬ್ರಾಹ್ಮಣನನ್ನು ಶಪಿಸಬಹುದು- ಅಲ್ಪನನ್ನು ಮಾತ್ರ ಶಪಿಸಬಾರದು.

ನಾತಿದ್ಯುಮ್ನೇ ಚನ ಬ್ರಾಹ್ಮಣಂ ಬ್ರೂಯಾನ್ನಮೋ ಅಸ್ತು ಬ್ರಾಹ್ಮಣೇಭ್ಯ ಇತಿ ಹ ಸ್ಮಾಽಽಹ ಶೂರವೀರೋ ಮಾಂಡೂಕೇಯಃ ॥

ಇದಾನೀಂ ಮಾಡೂಕೇಯಸ್ಯ ಮಹರ್ಷೇರ್ಮತಂ ದರ್ಶಯತಿ—ಚನಶಬ್ದೋಽಪ್ಯರ್ಥಃ। ಅತಿದ್ಯುಮ್ನೇಽಪಿ ಮಹಾಧನವಿಷಯೇಽಪಿ ವಿರೋಧಿನಂ ಬ್ರಾಹ್ಮಣಂ ನ ಬ್ರೂಯಾನ್ನ ಶಪೇತ್ಕಿಂತು ಬ್ರಾಹ್ಮಣೇಭ್ಯೋ ನಮೋಽಸ್ತ್ವಿತ್ಯೇತಾವದೇವ ಬ್ರೂಯಾತ್ । ತದೇತನ್ಮಹರ್ಷೇರ್ಮತಮ್ ॥

ಮಾಂಡೂಕೇಯಮಹರ್ಷಿಯ ಮತವನ್ನು ವಿವರಿಸುತ್ತಾರೆ. ಅಧಿಕಧನವುಳ್ಳ ವಿರೋಧಿಬ್ರಾಹ್ಮಣನನ್ನೂ ಶಪಿಸ ಬಾರದು. ದೋಷೋದ್ಭಾವನೆ ಮಾಡಬೇಡಿರಿ. ನಿಮಗೆ ನಮಸ್ಕಾರ ಎಂದು ಹೇಳಬೇಕು. ಇದು ಮಾಂಡೂಕೇಯರ ಮತ.

---

*English Translation*

---

1. Next come the reciters of the Nirbhuga

2. Nirbhuga abides on earth, Pratriuna in heaven, the Ubhaya-mantarena in the sky.

3. Now if any one should chide him who recites the Nirbhuga, let him answer : 'Thou art fallen from the two lower places.' If any one should chide him who recites the Pratrinna, let him answer : 'Thou art fallen from the two higher places.' But he who recites the Ubayamantarena, there is no chiding him.

4. For when he turns out the Snadhi (the union of words), that is the form of Nirbhuga; and when he pronounces two syllables pure (without modification), that is the form of Pratrinna. This comes first. By the Ubhayamantara (what is between the two) both are fulfilled (both the sandhi and the pada).

5. Let him who wishes for proper food say the Nirbhuga ; let him who wishes for Svarga, say the Pratrinna ; let him who wishes for both say the Ubhayamantarena.

6. Now if another man (any enemy) should chide him who says the Nirbhuga, let him say to him : 'Thou hast offended the earth, the deity; the earth, the deity, will strike thee.'

If another man should chide him who says the Pratrinna, let him say to him : 'Thou hast offended heaven, the deity ; heaven, the deity, will strike thee.'

If another man should chide him who says the Ubhayamantarena, let him say to him : 'Thou hast offended the sky, the deity ; the sky, the deity, will strike thee.'

7. And whatever the reciter shall say to one who speaks to him or does not speak to him, depend upon it, it will come to pass.

8. But to a Brahman let him not say anything except what is auspicious.

9. Only he may curse a Brahmana in excessive wealth.

10. Nay, not even in excessive wealth should be curse a Brahmana, but he should say, 'I bow before Brahmanas,'—thus says Suravira Mandukeya.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ತೃತೀಯಾರಣ್ಯಕೇ
ಪ್ರಥಮಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ತೃತೀಯಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವು

---

# ಅಥ ತೃತೀಯಾರಣ್ಯಕೇ ಪ್ರಥಮಾಧ್ಯಾಯೇ ಚತುರ್ಥಃ ಖಂಡಃ

## ಮೂರನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು

---

**ಅಥಾತೋಽನುವ್ಯಾಹಾರಾಃ ||**

ಪುನರಪ್ಯನ್ಯದುಪಾಸನಂ ಪ್ರತಿಜಾನೀತೇ—ಅಥ ನಿರ್ಭುಜಾದಿಧ್ಯಾನಕಥನಾನಂತರಂ ಯತೋ ದೋಷವಾದಿನಃ ಶತ್ರೋಃ ಶಾಪಮಂತರೇಣ ಸ್ವಫಲಸಿದ್ಧಿರ್ನಾಸ್ತಿ । ಅತಃ ಕಾರಣಾದನುವ್ಯಾಹಾರಾಃ ಪರಕೀಯದೋಷೋಕ್ತಿಮನು ಸ್ವಸ್ಯ ವ್ಯಾಹಾರಾಃ ಶಾಪರೂಪಂ ವಚನಂ ಯೇಷಾಂ ಪ್ರಾಣೋ-ಪಾಸಕಾನಾಂ ತೇಽನುವ್ಯಾಹಾರಾ ಮಹರ್ಷಯ ಉಪಾಸನಂ ಪ್ರಾಹುರಿತಿ ಶೇಷಃ ||

ಬೇರೊಂದು ಉಪಾಸನೆಯನ್ನು ಹೇಳಲು ಪ್ರಾರಂಭಿಸುತ್ತಾರೆ. ನಿರ್ಭುಜಾದಿಧ್ಯಾನವನ್ನು ಹೇಳಿದಮೇಲೆ ಮಧ್ಯದಲ್ಲಿ ದೋಷವಾದಿಗೆ ಶಾಪಕೊಡದೆ ತನ್ನ ಫಲಸಿದ್ಧಿಯಾಗಲಾರದೆಂದು ತಿಳಿದಿರುವ ಅನುವ್ಯಾಹಾರರೆಂಬ ಮಹರ್ಷಿಗಳು ಒಂದು ಉಪಾಸನೆಯನ್ನು ಹೇಳುತ್ತಾರೆ. ಪರಕೀಯದೋಷೋಕ್ತಿಯನ್ನನುಸರಿಸಿ ತಮ್ಮ ಪಾಪವಚನವುಳ್ಳ ಪ್ರಾಣೋಪಾಸಕರಿಗೆ ಅನುವ್ಯಾಹಾರರೆಂದು ಕರೆಯುತ್ತಾರೆ.

**ಪ್ರಾಣೋ ವಂಶ ಇತಿ ವಿದ್ಯಾತ್ ॥**

**ತದುಪಾಸನಂ ವಿಧತ್ತೆ–ಯಥಾ ಲೋಕೇ ಪ್ರೌಢೋ ವಂಶೋ ಗೃಹಸ್ಯ ಧಾರಕ ಏವಮಯಂ ದೇಹಗೃಹಸ್ಯ ಧಾರಕತ್ವೇನ ವಂಶಸದೃಶಃ ಪ್ರಾಣವಾಯುಃ ಸಂಹಿತಾಸ್ವರೂಪ ಇತ್ಯೇವಂ ಧ್ಯಾಯೇತ್। ಅತ್ರ ಪ್ರಕರಣವಶಾತ್ಸಂಹಿತೇತಿ ಲಭ್ಯತೇ ॥**

ಉಪಾಸನಾಸ್ವರೂಪವನ್ನು ವಿವರಿಸುತ್ತಾರೆ. ಲೋಕದಲ್ಲಿ ಗಟ್ಟಿಮುಟ್ಟಾದ ವಂಶ ಅಂದರೆ ಬಿದಿರಿನ ಕಂಭವು ಹೇಗೆ ಮನೆಯನ್ನು ಧರಿಸಿರುತ್ತದೆಯೋ ಹಾಗೆ ಈ ದೇಹರೂಪಗೃಹವನ್ನು ಧರಿಸಿರುವ ಪ್ರಾಣವಾಯುವೇ ಸಂಹಿತಾಸ್ವರೂಪವೆಂದು ಧ್ಯಾನಿಸಬೇಕು. ಪ್ರಕರಣದಿಂದ ಸಂಹಿತಾ ಎಂದು ತಿಳಿಯುತ್ತದೆ.

**ಸ ಯ ಏನಂ ಪ್ರಾಣವಂಶಮುಪವದೇಚ್ಛಕ್ನುವನ್ಚೇನ್ಮನ್ಯೇತ ಪ್ರಾಣಂ ವಂಶಂ ಸಮಧಾಷಿಮ್, ಪ್ರಾಣಂ ಮಾ ವಂಶಂ ಸಂದಧತಂ ನ ಶಕ್ನೋಷೀತ್ಯಾಹ ಪ್ರಾಣಸ್ತ್ವಾ ವಂಶೋ ಹಾಸ್ಯತೀತ್ಯೇನಂ ಬ್ರೂಯಾತ್ ॥**

**ಅಸ್ಮಿನ್ಪ್ರಾಣೋಪಾಸನೇ ದೋಷವಾದೀ ಶತ್ರುರುಪಾಸಕೇನ ಶಪ್ತವ್ಯ ಇತ್ಯೇತದ್ದರ್ಶಯತಿ— ಸ ಯೋ ಬ್ರಾಹ್ಮಣೋಽನ್ಯೋ ವಾ ಯಃ ಕೋಽಪಿ ಶತ್ರುರೇನಮುಪಾಸಕಂ ಪ್ರಾಣವಂಶ-ಧ್ಯಾನೇನ ತದಾತ್ಮಕಮುಪವದೇತ್ಪ್ರಾಣಂ ಸಮಾಧಾತುಂ ನ ಶಕ್ನೋಷೀತ್ಯೇವಂ ದೂಷಯೇತ್ ತದಾನೀಮಯಮುಪಾಸಕೋ ದ್ವಿವಿಧಃ ಶಕ್ತೋಽಶಕ್ತಶ್ಚ ತಯೋರ್ಮಧ್ಯೇ ಯದ್ಯಯಂ ಶಕ್ನುವನ್ನೇ ವಾಸ್ಮೀತಿ ಮನ್ಯೇತ ತದಾನೀಂ ಪ್ರಾಣಮಿತ್ಯಾದಿನಾ ಮಂತ್ರೇಣೈನಂ ಶಪೇತ್ । ತಸ್ಯ ಮಂತ್ರಸ್ಯಾಯಮರ್ಥಃ ಅಹಮುಪಾಸಕೋ ವಂಶಸದೃಶಂ ಪ್ರಾಣಂ ಸಮಧಾಂ ಸಮ್ಯಕ್ ಚಿತ್ತೇ ಧಾರಿತವಾನಸ್ಮಿ । ತಥಾ ಸತಿ ಪ್ರಾಣರೂಪೋ ಯೋ ವಂಶಸ್ತಂ ವಂಶಂ ಸಂದಧತಂ ಸಮ್ಯಗ್ಧ್ಯಾನೇನ ಧಾರಯಂತಂ ಮಾಂ ಪ್ರತಿ ನ ಶಕ್ನೋಷಿ ಧಾರಯಿತುಂ ತ್ವಮಿತಿ ಭವಾನಾಹ । ತಸ್ಮಾತ್ತತ್ಕಾರಣಾದ್ವಂಶಸ್ಥಾನೀಯಃ ಪ್ರಾಣಸ್ತ್ವಾಂ ಹಾಸ್ಯತಿ ಪರಿತ್ಯಕ್ಷ್ಯತಿ ತತೋ ಮರಿಷ್ಯಸೀತಿ ॥**

ಪೂರ್ವೋಕ್ತವಾದ ಪ್ರಾಣೋಪಾಸನೆಯಲ್ಲಿ ದೋಷವಾದಿಯಾದ ಶತ್ರುವನ್ನು ಶಪಿಸಬೇಕೆಂದು ತೋರಿಸುತ್ತಾರೆ. ಪ್ರಾಣವಂಶಧ್ಯಾನದಿಂದ ತತ್ಸ್ವರೂಪವನ್ನು ಹೊಂದಿರುವ ಉಪಾಸಕನನ್ನು ಬ್ರಾಹ್ಮಣನಾಗಲೀ ಅಥವಾ ತದಿತರನಾಗಲೀ ಪ್ರಾಣಧಾರಣೆಯಲ್ಲಿ ನೀನು ಶಕ್ತನಲ್ಲವೆಂದು ದೂಷಣೋಕ್ತಿಯನ್ನು ಹೇಳಿದರೆ ಆಗ ವಾಸ್ತವವಾಗಿ ಪ್ರಾಣಧಾರಣಶಕ್ತನಾದ ಉಪಾಸಕನು ಆ ಶತ್ರುವನ್ನು **ಪ್ರಾಣಂ ಮಾ** ಇತ್ಯಾದಿ ಮಂತ್ರದಿಂದ ಶಪಿಸಬೇಕು. ಅಶಕ್ತನಿಗೆ ಬೇರೆ ಮಂತ್ರ ಹೇಳುತ್ತಾನೆ. ಮಂತ್ರದ ಅರ್ಥ—ಉಪಾಸಕನಾದ ನಾನು ವಂಶಸಮಾನವಾದ ಪ್ರಾಣವನ್ನು ಚೆನ್ನಾಗಿ ಮನಸ್ಸಿನಲ್ಲಿ ಧರಿಸಿರುತ್ತೇನೆ. ಹೀಗೆ ಪ್ರಾಣರೂಪವಂಶವನ್ನು ದೃಢಧ್ಯಾನದಿಂದ ಧರಿಸಿರುವ ನನ್ನನ್ನು ಧಾರಣಸಮರ್ಥನಲ್ಲವೆಂದು ನೀನು ನಿಂದಿಸುವಿ. ಆದುದರಿಂದ ವಂಶಸ್ಥಾನೀಯನಾದ ಪ್ರಾಣನು ನಿನ್ನನ್ನು ಬಿಟ್ಟುಹೋಗುವನು. ಅರ್ಥಾತ್ ನೀನು ಮರಣಹೊಂದುವಿ ಎಂದು ತಾತ್ಪರ್ಯ.

**ಅಥ ಚೇದಶಕ್ನುವಂತಂ ಮನ್ಯೇತೆ ಪ್ರಾಣಂ ವಂಶಂ ಸಮಧಿತ್ಸಿಷಂತಂ ನಾಶಕ ಸಂಧಾತುಂ ಪ್ರಾಣಸ್ತ್ವಾ ವಂಶೋ ಹಾಸ್ಯತೀತ್ಯೇನಂ ಬ್ರೂಯಾತ್ ॥**

ಅಶಕ್ತಸ್ಯೋಪಾಸಕಸ್ಯ ಶಾಪಮಂತ್ರೇ ಪಾಠಾಂತರಂ ದರ್ಶಯತಿ–ಯದ್ಯಯ ಮುಪಾಸಕೋ ಧ್ಯಾನೇ ಶಕ್ತಿರಹಿತಮಾತ್ಮಾನಂ ಮನ್ಯೇತ ತದಾನೀಮನೇನ ಮಂತ್ರೇಣ ಶಪೇತ್ । ತಸ್ಯ ಮಂತ್ರಸ್ಯಾಯಮರ್ಥಃ । ಅಹಮುಪಾಸಕೋ ವಂಶಸದೃಶಂ ಪ್ರಾಣಂ ಸಮ್ಯಗ್ಧ್ಯಾನೇನ ಧಾರಯಿತುಮಿಚ್ಛಾಮಿ ತಾದೃಶಮಿಚ್ಛಂತಂ ಮಾಂ ಪ್ರತಿ ಸಂಧಾತುಂ ಸಮ್ಯಗ್ಧ್ಯಾನೇನ ಧಾರಯಿತುಂ ನಾಶಕೋ ನ ಶಕ್ನೋಷೀತ್ಯೇವಂ ಭವಾನಾಹ ತಸ್ಮಾದ್ವಂತರೂಪಃ ಪ್ರಾಣಸ್ತ್ವಾಂ ಪರಿತ್ಯಕ್ಷತೀತಿ ॥

ಅಶಕ್ತನಾದ ಉಪಾಸಕನ ಶಾಪಮಂತ್ರದಲ್ಲಿ ಪಾಠಭೇದವನ್ನು ತೋರಿಸುತ್ತಾರೆ. ಉಪಾಸಕನು ತಾನು ಧ್ಯಾನದಲ್ಲಿ ಇನ್ನೂ ಶಕ್ತನಲ್ಲವೆಂದು ತಿಳಿದಿದ್ದರೆ ಆಗ ಅವನು **ಪ್ರಾಣಂ ವಂಶಂ** ಇತ್ಯಾದಿ ಮಂತ್ರದಿಂದ ಶಪಿಸಬೇಕು. ಆ ಮಂತ್ರದ ಅರ್ಥ—ಉಪಾಸಕನಾದ ನಾನು ವಂಶರೂಪಿ ಪ್ರಾಣನನ್ನು ದೃಢಧ್ಯಾನದಿಂದ ಧಾರಣೆಮಾಡಲು ಇಚ್ಛೆಪಡುತ್ತೇನೆ. ಹೀಗೆ ಇಚ್ಛೆಹೊಂದಿರುವ ನನ್ನನ್ನು ಕುರಿತು ನೀನು ಧಾರಣಸಮರ್ಥನಲ್ಲವೆಂದು ದೂಷಿಸುವುದಾದರೆ ಆಗ ಪ್ರಾಣವಾಯುವು ನಿನ್ನನ್ನು ಬಿಟ್ಟುಹೋಗುವುದು. ಮೃತಿಹೊಂದುವಿಯೆಂದು ತಾತ್ಪರ್ಯ.

**ಯಥಾ ತು ಕಥಾ ಚ ಬ್ರುವನ್ತ್ವಾಽಬ್ರುವಂತಂ ವಾ ಬ್ರೂಯಾದಭ್ಯಾಶಮೇವ ಯತ್ತಥಾ ಸ್ಯಾನ್ನ ತ್ವೇವಾನ್ಯತ್ಕುಶಲಾದ್ಬ್ರಾಹ್ಮಣಂ ಬ್ರೂಯಾದತಿದ್ಯುಮ್ನ ಏವ ಬ್ರಾಹ್ಮಣಂ ಬ್ರೂಯಾನ್ನಾತಿದ್ಯುಮ್ನೋ ಚ ನ ಬ್ರಾಹ್ಮಣಂ ಬ್ರೂಯಾನ್ನಮೋ ಅಸ್ತು ಬ್ರಾಹ್ಮಣೇಭ್ಯ ಇತಿ ಹ ಸ್ಮಾಽಽಹ ಶೂರವೀರೋ ಮಾಂಡೂಕೇಯಃ ॥**

ಪೂರ್ವವದತ್ರೋಪಾಸಕಸ್ಯ ಸಾಮರ್ಥ್ಯಂ ದರ್ಶಯತಿ—ಪೂರ್ವವದ್ವ್ಯಾಖ್ಯೇಯಮ್ ॥

ಮೂರನೆಯ ಕಾಂಡದಲ್ಲಿ ಹೇಳಿದಂತೆ ಉಪಾಸಕನ ಸಾಮರ್ಥ್ಯವನ್ನು ವಿವರಿಸುತ್ತಾರೆ. ಅರ್ಥವನ್ನು ಹಿಂದಿನಂತೆಯೇ ತಿಳಿಯಬೇಕು.

---

*English Translation*

---

1. Next follow the imprecautions.

2. Let him know that breath is the beam (on which the whole house of tho body rests).

3. If any one (a Brahmana or another man) should chide him, who by meditation has become that breath as beam, then, if he thinks himself strong, he says: 'I grasped the breath, the beam, well ; thou dost not prevail against me who have grasped the breath as the beam.' Let him say to him : 'Breath, the beam, will forsake thce.'

4. But if he thinks himself not strong let him say to him: Thou couldst not grasp him who wishes to grasp the breath as the beam. Breath the beam will forsake theee.

5. And whatever the reciter shall say to one who speaks to him or does not speak to him, depend upon it, it will come to pass. But to a Brahmana let him not say anything except what is auspicious. Only he may curse a Brahmana in excessive wealth. Nay, not even in excessive wealth should be curse a Brahmana, but he should say, 'I bow before Brahmanas,'—thus says Suravira Mandukeya.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ತೃತೀಯಾರಣ್ಯಕೇ
ಪ್ರಥಮಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ದ್ವಿತೀಯಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವು

# ಅಥ ತೃತೀಯಾರಣ್ಯಕೇ ಪ್ರಥಮಾಧ್ಯಾಯೇ ಪಂಚಮಃ ಖಂಡಃ

## ಮೂರನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ಐದನೆಯ ಖಂಡವು

———

### ಅಥ ಖಲ್ವಾಹುರ್ನಿರ್ಭುಜವಕ್ತ್ರಾಃ ||

ಉಕ್ತಾಸು ವಕ್ಷ್ಯಮಾಣಾಸು ಚ ಸಂಹಿತೋಪಾಸನಾಸು ಸರ್ವಾಸು ಶ್ರೋತುರ್ಬುದ್ಧಿ-ಸಮಾಧಾನಾರ್ಥಮುಪಾಸ್ಯವಿಷಯಂ ಸಮ್ಯಕ್ಪರಿಶೋಧಯಿತುಂ ಪ್ರಸ್ತೌತಿ—ಅಥ ಕಾಸಾಂ ಚಿತ್ಸಂಹಿ-ತೋಪಾಸನಾನಾಂ ಕಥನಾನಂತರಂ ನಿರ್ಭುಜಶಬ್ದಾಭಿಧೇಯಾ ಸಂಹಿತಾ ವಕ್ತ್ರೇ ಮುಖೇ ಯೇಷಾಂ ಸಂಹಿತೋಪಾಸಕಾನಾಂ ತೇ ಮಹರ್ಷಯೋ ನಿರ್ಭುಜವಕ್ತ್ರಾಸ್ತೇ ಚ ವಿಷಯಶೋಧನಾರ್ಥಂ ವಕ್ಷ್ಯ-ಮಾಣಂ ವಾಕ್ಯಮಾಹುಃ ||

ಪೂರ್ವದಲ್ಲಿ ಹೇಳಿದ ಮತ್ತು ಮುಂದೆ ಹೇಳುವ ಎಲ್ಲಾ ಉಪಾಸನೆಗಳಲ್ಲಿಯೂ ಉಪಾಸಕನಿಗೆ ಬುದ್ಧಿಸ್ಥೈರ್ಯ ಕ್ಕೋಸ್ಕರ ಉಪಾಸ್ಯವಿಷಯವನ್ನು ಪರಿಶೋಧಿಸಲು ಆರಂಭಿಸುತ್ತಾರೆ. ಕೆಲವು ಸಂಹಿತೋಪಾಸನೆಗಳನ್ನು ವಿವರಿಸಿದನಂತರ ನಿರ್ಭುಜವಕ್ತ್ರರೆಂಬ ಮಹರ್ಷಿಗಳು ಹೇಳುತ್ತಾರೆ. ನಿರ್ಭುಜಶಬ್ದದಿಂದ ವಾಚ್ಯವಾದ ಸಂಹಿತೆಯು ಯಾರ ಮುಖದಲ್ಲಿದೆಯೋ ಅವರು ನಿರ್ಭುಜವಕ್ತ್ರರು. ಅದನ್ನು ಚನ್ನಾಗಿ ತಿಳಿದವರೆಂದು ತಾತ್ಪರ್ಯ.

### ಪೂರ್ವಮಕ್ಷರಂ ಪೂರ್ವರೂಪಮುತ್ತರಮುತ್ತರರೂಪಂ ಯೋಽವಕಾಶಃ ಪೂರ್ವರೂಪೋತ್ತರರೂಪೇ ಅಂತರೇಣ ಸಾ ಸಂಹಿತೇತಿ ||

ಸ ಖಲು ತದೀಯಂ ವಾಕ್ಯಂ ದರ್ಶಯತಿ—ಅಸ್ಯಾಃ ಸಂಹಿತೋಪನಿಷದಃ ಪ್ರಾರಂಭೇ "ಪೃಥಿವೀ ಪೂರ್ವರೂಪಂ ದ್ಯೌರುತ್ತರರೂಪಮ್" (ಐ. ಆ. ೩ ಅ. ೧ ಖಂ. ೨) ಇತ್ಯಾದೌ ಪೂರ್ವ ರೂಪಮಿತ್ಯನೇನ ಪೂರ್ವಮಕ್ಷರಂ ವಿವಕ್ಷಿತಮ್ | ಉತ್ತರರೂಪಮಿತ್ಯನೇನೋತ್ತರಮಕ್ಷರಂ ವಿವಕ್ಷಿ-ತಮ್ | ತಯೋರಕ್ಷರಯೋರ್ಮಧ್ಯೇ ಯೋಽವಕಾಶಃ ಸ ಸಂಹಿತಾಶಬ್ದೇನ ವಿವಕ್ಷಿತಮ್ ||

ನಿರ್ಭುಜವಕ್ತ್ರಮಹರ್ಷಿಗಳ ವಾಕ್ಯವನ್ನು ವಿವರಿಸುತ್ತಾರೆ. ಈ ಸಂಹಿತಾರೂಪ ಉಪನಿಷತ್ತಿನ ಪ್ರಾರಂಭದಲ್ಲಿ ಪೃಥಿವೀ ಪೂರ್ವರೂಪಂ ದೌರುತ್ತರರೂಪಂ ಎಂದು ಹೇಳಿದೆ. ಅಲ್ಲಿ ಪೂರ್ವರೂಪಪದದಿಂದ ಪೂರ್ವದ ಅಕ್ಷರವೂ, ಉತ್ತರರೂಪಪದದಿಂದ ಮುಂದಿನ ಅಕ್ಷರವೂ ವಿವಕ್ಷಿತವಾಗಿದೆ. ಈ ಎರಡು ಅಕ್ಷರಗಳ ಮಧ್ಯದಲ್ಲಿ ಇರುವ ಅವಕಾಶಕ್ಕೆ ಂಹಿತಾ ಎಂದು ಹೆಸರು.

ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶು-
ಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವ-
ಮಾಯುರೇತಿ ॥

ಏವಮುಪಾಸ್ಯನಿಶ್ಚಯಾರ್ಥಂ ಪೂರ್ವರೂಪಾದಿಶಬ್ದಾನ್ ವ್ಯಾಖ್ಯಾಯ ಪ್ರರೋಚನಾರ್ಥಂ ಪೂರ್ವಮುಕ್ತಂ (ಐ. ಆ. ೩ ಅ. ೧ ಖಂ. ೨) ತದುಪಾಸನಫಲಮನುಸ್ಮಾರಯತಿ—ತದೇತತ್ತತ್ರೈವ ವ್ಯಾಖ್ಯಾತಮ್ ॥

ಉಪಾಸ್ಯವಸ್ತುವಿನ ನಿಶ್ಚಯಕ್ಕೋಸ್ಕರ ಪೂರ್ವರೂಪಾದಿಶಬ್ದಾರ್ಥಗಳನ್ನು ವಿವರಿಸಿ ಈಗ ಅಲ್ಲಿ ಪ್ರರೋಚನೆಯುಂಟಾಗಲು ಹಿಂದೆ ಹೇಳಿದ (ಐ-ಆ-೩-೧-೨) ಉಪಾಸನಾಫಲವನ್ನು ಪುನಃ ಸ್ಮರಿಸುತ್ತಾರೆ. ಶಬ್ದಾರ್ಥಗಳನ್ನು ಹಿಂದಿನಂತೆಯೇ ತಿಳಿಯಬೇಕು.

ಅಥ ವಯಂ ಬ್ರೂಮೋ ದಿರ್ಭುಜವಕ್ತ್ರಾ ಇತಿ ಹ ಸ್ಮಾಽಽಹ ಹ್ರಸ್ವೋ
ಮಾಂಡೂಕೇಯಃ ಪೂರ್ವಮೇವಾಕ್ಷರಂ ಪೂರ್ವರೂಪಮುತ್ತರ-
ಮುತ್ತರರೂಪಂ ಯೋಽವಕಾಶಃ ಪೂರ್ವರೂಪೋತ್ತರರೂಪೇ
ಅಂತರೇಣ ಯೇನ ಸಂಧಿಂ ವಿವರ್ತಯತಿ ಯೇನ ಸ್ವರಾಸ್ವರಂ
ವಿಜಾನಾತಿ ಯೇನ ಮಾತ್ರಾಮಾತ್ರಾಂ ವಿಭಜತೇ ಸಾ ಸಂಹಿತೇತಿ ॥

ಯೋಽವಕಾಶ ಇತಿ ಯದುಕ್ತಂ ತತ್ರ ಕಂಚಿದ್ವಿಶೇಷಂ ದರ್ಶಯತಿ—ಹ್ರಸ್ವೋ ವಾಮನಃ ಸ್ವಲ್ಪದೇಹಃ । ಸ ಚ ಸ್ವಾಭಿಜ್ಞತ್ವಪ್ರಕಟನಾರ್ಥಂ ವಯಮಿತಿ ಪೂಜಾರೂಪಂ ಬಹುವಚನಂ ಪ್ರಯುಂಕ್ತೇ । ಸ ಚೈವಮಾಹ । ಪೂರ್ವರೂಪೋತ್ತರರೂಪಯೋರ್ಯದ್ವ್ಯಾಖ್ಯಾನಂ ತತ್ತಾದೃಶ-ಮೇವ, ಅವಕಾಶಃ ಸಂಹಿತೇತಿ ಯದುಕ್ತಂ ತತ್ರಾಸ್ತಿ ಕಶ್ಚಿದ್ವಿಶೇಷಃ । ನ ಕೇವಲಮವಕಾಶ-ಮಾತ್ರಂ ಸಂಹಿತೇತಿ ಕಿಂತು ಯೇನಾವಕಾಶೇನ ಸಂಧಿಂ ಪೂರ್ವೋತ್ತರಯೋಃ ಸಂನಿಕರ್ಷಮ-ಭ್ಯೇತಾ ವಿವರ್ತಯತಿ ವಿಶೇಷೇಣ ಸಂಪಾದಯತಿ ಯೇನ ಚಾವಕಾಶೇನ ಸ್ವರಮಸ್ವರಂ ಚ ವಿವಿಚ್ಯ ಜಾನಾತಿ । "ಅಗ್ನಿಮೀಳೇ" (ಋ-ಸಂ-ಮಂ-೧-ಸೂ-೧-ಋ-೧) ಇತ್ಯತ್ರೋತ್ತರಪದೇ ಪದ-ಕಾಲವದನುದಾತ್ತಸ್ವರೋ ನ ಭವತಿ ಕಿಂತು ಸ್ವರಿತಪ್ರಚಯೌ ಸ್ವರಾವಿತ್ಯೇತಾದೃಶೋ ವಿವೇಕಃ । ಯೇನ ಚಾವಕಾಶೇನ ಮಾತ್ರಾಮಮಾತ್ರಾಂ ಚ ವಿಭಜತೇ । "ತವೇತ್ತತ್ಸತ್ಯಮಂಗಿರಃ" (ಋ-ಸಂ ಮಂ-೧-ಸೂ-೧-ಋ ೬) ಇತ್ಯತ್ರ ಪದಕಾಲೇ ವಕಾರಸ್ಯೋಪರಿ ಹ್ರಸ್ವೋಽಕಾರೋ ದೃಶ್ಯತೇ, ಸಂಹಿತಾಕಾಲೇ ಸಾ ಮಾತ್ರಾ ನ ಭವತಿ, ಕಿಂತ್ವೇಕಾರೋ ಮಾತ್ರೇತ್ಯಯಂ ವಿಭಾಗಃ । ಏತೈರ್ವಿ-ಶೇಷೈರ್ವಿಶಿಷ್ಟೋಽವಕಾಶಃ ಸಂಹಿತಾ ನ ತ್ವವಕಾಶಮಾತ್ರಮಿತಿ ॥

ಮಧ್ಯದ ಅವಕಾಶಕ್ಕೆ ಸಂಹಿತಾ ಎಂದು ಹೇಳಿದೆ. ಈ ಅವಕಾಶವಿಷಯದಲ್ಲಿ ಕೆಲವು ವಿಶೇಷವನ್ನು ವಿವರಿಸುತ್ತಾರೆ. ಹ್ರಸ್ವ ಅಂದರೆ ಅಲ್ಪದೇಹವುಳ್ಳವನು. ವಾಮನ ತಾನು ಹೊಸದಾಗಿ ಕಂಡುಹಿಡಿದುದನ್ನು ಪ್ರಕಟಿಸಲು ವಯಂ (ನಾವು) ಎಂದು ಬಹುವಚನನಿರ್ದೇಶ ಮಾಡಿರುತ್ತಾರೆ. ಪೂರ್ವರೂಪ, ಉತ್ತರರೂಪಗಳ ವ್ಯಾಖ್ಯಾನ ನಿರ್ಭುಜವಕ್ತ್ರರು ಹೇಳಿದಂತೆಯೇ ಅವಕಾಶವು ಸಂಹಿತಾ ಎಂದು ಹೇಳಿದುದರಲ್ಲಿ ವಿಶೇಷವಿಷಯವಿದೆ. ಕೇವಲ ಅವಕಾಶ ಮಾತ್ರ ಸಂಹಿತೆಯಲ್ಲ. ಯಾವ ಅವಕಾಶದಿಂದ ಪೂರ್ವೋತ್ತರಗಳ ಸಂಧಿಯನ್ನು ಅಂದರೆ ಅತ್ಯಂತಸಾಮೀಪ್ಯವನ್ನು ಪಠಿಸುವವನು ಚನ್ನಾಗಿ ತಿಳಿಯುತ್ತಾನೋ ಮತ್ತು ಯಾವ ಅವಕಾಶದಿಂದ ಸ್ವರಾಸ್ವರಗಳನ್ನು ಬಿಡಿಸಿ ತಿಳಿಯುತ್ತಾನೋ ಅಂತಹ ಅವಕಾಶವನ್ನು ಸಂಹಿತಾ ಎಂದು ತಿಳಿಯಬೇಕು. **ಅಗ್ನಿಮೀಳೇ** ಎಂಬಲ್ಲಿ ಪದಕಾಲದಲ್ಲಿರುವಂತೆ ಉತ್ತರಪದದಲ್ಲಿ ಅನುದಾತ್ತಸ್ವರ ಬರುವುದಿಲ್ಲ. ಮೊದಲು ಸ್ವರಿತಪ್ರಚಯಸ್ವರಗಳೇ ಇರುತ್ತವೆ. ಈ ಸ್ವರವಿವೇಕಕ್ಕೆ ಕಾರಣವಾಗಿರಬೇಕು. ಯಾವ ಅವಕಾಶದಿಂದ ಮಾತ್ರಮಾತ್ರವಿವೇಕವು ವ್ಯಕ್ತವಾಗುವುದೋ ಅಂತಹ ಅವಕಾಶವೇ ಸಂಹಿತಾ ಆಗುತ್ತದೆ. **ತವೇತ್ತತ್ಸತ್ಯಮಂಗಿರಃ** ಎಂಬಲ್ಲಿ ಪದಪಾಠಕಾಲದಲ್ಲಿ (ತವ) ವಕಾರದಮೇಲೆ ಹ್ರಸ್ವ ಅಕಾರವು ತೋರುತ್ತದೆ. ಸಂಹಿತಾ ಕಾಲದಲ್ಲಿ ಆ ಮಾತ್ರೆ ಇರುವುದಿಲ್ಲ. ಅಂದರೆ ಆಗ ಅಲ್ಲಿ ಏಕಾರರೂಪ ದ್ವಿಮಾತ್ರೆ ಇರುತ್ತದೆ. ಈ ರೀತಿ ವಿಶೇಷಗಳಿಂದ ಕೂಡಿದ ಅವಕಾಶವೇ ಸಂಹಿತಾ ಎಂದು ತಿಳಿಯಬೇಕು.

**ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವಮಾಯುರೇತಿ ॥**

**ಪೂರ್ವವತ್ಫಲಮನುಸ್ಮಾರಯತಿ— ಪೂರ್ವವದ್ವ್ಯಾಖ್ಯೇಯಮ್ ॥**

ಪೂರ್ವದಲ್ಲಿ ಹೇಳಿದಂತೆಯೇ ಪ್ರರೋಚನೆ ಹುಟ್ಟಿಸಲು ಫಲವನ್ನು ಸ್ಮರಿಸುತ್ತಾರೆ. ಹಿಂದಿನಂತೆಯೇ ವ್ಯಾಖ್ಯಾನ ತಿಳಿಯಬೇಕು.

**ಅಥ ಹಾಸ್ಯ ಪುತ್ರ ಆಹ ಮಧ್ಯಮಃ ಪ್ರಾತೀಬೋಧೀಪುತ್ರೋಽಕ್ಷರೇ ಖಲ್ವಿಮೇ ಅವಿಕರ್ಷನ್ನನೇಕೀಕುರ್ವನ್ಯಥಾವರ್ಣಮಾಹ ತದ್ಯಾಸೌ ಮಾತ್ರಾ ಪೂರ್ವರೂಪೋತ್ತರರೂಪೇ ಅಂತರೇಣ ಸಂಧಿವಿಜ್ಞಾಪನೀ ಸಾಮ ತದ್ಭವತಿ ಸಾಮ್ನೈವಾಹಂ ಸಂಹಿತಾಂ ಮನ್ಯ ಇತಿ ॥**

ಮತಾಂತರಂ ದರ್ಶಯತಿ— ಅಸ್ಯ ಹ್ರಸ್ವಮಾಂಡೂಕೇಯಸ್ಯ ಮಧ್ಯಮಃ ಪುತ್ರಃ ಕಶ್ಚಿದಸ್ತಿ, ತಸ್ಯ ಮಾತಾ ಪ್ರಾತೀಭೋಧೀ। ತತ್ಪುತ್ರೋ ಮಹರ್ಷಿರಿಮೇ ಪೂರ್ವೋತ್ತರೇ ಅವಿಕರ್ಷನ್ಪರಸ್ಪರಮತ್ಯಂತ ವಿಶೇಷಮಕುರ್ವನ್ನನೇಕೀಕುರ್ವನ್ನತ್ಯಂತಮೈಕ್ಯಮಪ್ಯಕುರ್ವನ್ಯಥಾವರ್ಣಮಾಹ ತಂ ತಂ ವರ್ಣಮನತಿಕ್ರಮ್ಯೋಚ್ಚಾರಯತಿ। ತವೇದಿತ್ಯತ್ರ ಪೂರ್ವಪದಾಂತ್ಯಮಕಾರಮುತ್ತರಪದಾದಿಮಿಕಾರಂ ಚ ಸಂಹಿತಾಕಾಲೇ ಯದಿ ಪೃಥಗುಚ್ಚಾರಯೇತ್ತದಾನೀಮತ್ಯಂತವಿಶ್ಲೇಷೋ ಭವೇತ್ । ಯದಿ ತ್ವಿಕಾರಮಂತರ್ಭಾವ್ಯ ಕೇವಲಮಕಾರಮುಚ್ಚಾರಯೇತ್ತದಾನೀಮತ್ಯಂತಮೇಕೀಕರಣಂ ಭವತಿ ।

ತದುಭಯಂ ಪರಿತ್ಯಜ್ಯ ಯಥಾಶಾಸ್ತ್ರಮೇಕಾರಮುಚ್ಚಾರಯತಿ । ತತ್ತಥಾ ಸತಿ ಪೂರ್ವರೂಪೋತ್ತರರೂಪಯೋರ್ಮಧ್ಯೇ ಯಾಸೌ ಮಾತ್ರೋಚ್ಚಾರಣವಿಶೇಷರೂಪಾ ಸಂಧಿವಿಜ್ಞಪನೀ ಶಾಸ್ತ್ರೀಯಂ ಸಂಧಿಂ ವಿಜ್ಞಾಪಯತಿ ತತ್ಸಾಮ ಸಮತ್ವಂ ಭವತಿ । ಅತಿದ್ರುತಾತಿವಿಲಂಬಯೋರಭಾವಾತ್ಸಾಮ್ಯೈವ ತತ್ಸಮತ್ವಮೇವ ಸಂಹಿತಾಮಹಂ ಮನ್ಯ ಇತಿ ಮಧ್ಯಮಪುತ್ರಸ್ಯ ಮತಮ್ ॥

ಬೇರೊಂದು ಮತವನ್ನು ವಿವರಿಸುತ್ತಾರೆ. ಹ್ರಸ್ವಮಾಂಡೂಕೇಯ ಮಹರ್ಷಿಗಳಿಗೆ ನಡುವಿನ ಮಗನೊಬ್ಬನಿದ್ದಾನೆ. ಪ್ರಾತೀಬೋಧೀ ಎಂಬುವಳು ಅವನ ತಾಯಿ. ಮಹರ್ಷಿಯಾದ ಅವನು ಪೂರ್ವೋತ್ತರಮಾತ್ರೆಗಳಲ್ಲಿ ಅತ್ಯಂತವಿಶೇಷಾವಕಾಶವನ್ನೂ ಹೇಳಿದೆ, ಅತ್ಯಂತ ಐಕ್ಯವನ್ನೂ ಹೇಳಿವೆ ಆಯಾಯವರ್ಣಗಳನ್ನು ಇದ್ದಂತೆಯೇ ಉಚ್ಚರಿಸುತ್ತಾನೆ. ತವೇತ್ ಎಂಬಲ್ಲಿ (ತವ—ಇತ್) ಪೂರ್ವಪದಾಂತ್ಯದ ಅಕಾರವನ್ನೂ ಉತ್ತರಪದದ ಆದಿಯಾದ ಇಕಾರವನ್ನೂ ಸಂಹಿತಾಕಾಲದಲ್ಲಿ ಬೇರೆಬೇರೆಯಾಗಿ ಉಚ್ಚರಿಸಿದರೆ ಆಗ ಅತ್ಯಂತವಿಶ್ಲೇಷ (ಮಧ್ಯದಲ್ಲಿ ಅವಕಾಶ) ವಾಗುತ್ತದೆ. ಇಕಾರವನ್ನು ಅಂತರ್ಧಾನಮಾಡಿ ಕೇವಲ ಅಕಾರವನ್ನೇ ಉಚ್ಚರಿಸಿದರೆ ಆಗ ಸಂಪೂರ್ಣವಾಗಿ ಏಕೀಕರಣಮಾಡಿದಂತಾಗುತ್ತದೆ. ಆದುದರಿಂದ ಅವೆರಡನ್ನೂ ಬಿಟ್ಟು ಶಾಸ್ತ್ರದಲ್ಲಿದ್ದಂತೆಯೇ ಏಕಾರವನ್ನೇ ಪಠಿಸುತ್ತಾನೆ. ಹೀಗೆ ಉಚ್ಚರಿಸಿದರೆ ಪೂರ್ವೋತ್ತರರೂಪಗಳ ಮಧ್ಯದಲ್ಲಿ ಮಾತ್ರೋಚ್ಚಾರಣ ವಿಶೇಷರೂಪವಾದ ಶಾಸ್ತ್ರೀಯಸಂಧಿಯನ್ನು ತಿಳಿಸಿದಂತಾಗುತ್ತದೆ. ಇದಕ್ಕೆ ಸಾಮವೆಂದು ಹೆಸರು (ಸಮತ್ವ) ಆಗ ಅತಿದ್ರುತವೂ ಇಲ್ಲದ ಅತಿ ವಿಲಂಬವೂ ಇಲ್ಲದ ಸಮತ್ವರೂಪಸಂಹಿತೆಯನ್ನು ನಾನು ಅಂಗೀಕರಿಸಿರುತ್ತೇನೆ ಎಂದು ಆ ಮಧ್ಯಮಪುತ್ರನ ಮತ.

### ತದಪ್ಯೇತದೃಷಿಣೋಕ್ತಮ್ ॥

ಅಸ್ಮಿನ್ನರ್ಥೇ ಕಂಚಿನ್ಮಂತ್ರಮುದಾಹರತಿ— ಸ ಚ ಮಂತ್ರಃ ಸಂಹಿತಾಯಾಮೇವಮಾಮ್ನಾತಃ—" ಮಾ ನಃ ಸ್ತೇನೇಭ್ಯೋ ಯೇ ಅಭಿದ್ರುಹಸ್ಪದೇ ನಿರಾಮಿಣೋ ರಿಪವೋಽನ್ನೇಷು ಜಾಗೃಧುಃ । ಆದೇವಾನಾಮೋಹತೇ ವಿವ್ರಯೋ ಹೃದಿ ಬೃಹಸ್ಪತೇ ನ ಪರಃ ಸಾಮ್ನೋ ವಿದುಃ"। (ಋ-ಸಂ-ಮ-೨-ಸೂ-೨೩-ಋ-೧೬) ಇತಿ । ಹೇ ಬೃಹಸ್ಪತೇ ನೋಽಸ್ಮಾನ್ಮಂತ್ರರೂಪಾನ್-ಸ್ತೇನೇಭ್ಯೋ ವಿದ್ಯಾಚೌರೇಭ್ಯೋ ಮಾ ದಾ ಇತ್ಯಧ್ಯಾಹಾರಃ । ತಾದೃಶೇಭ್ಯೋ ಮಂತ್ರೋಪದೇಶಂ ಮಾ ಕುರ್ವಿತ್ಯರ್ಥಃ । ಕೀದೃಶಾ ವಿದ್ಯಾಚೋರಾ ಇತ್ಯಾಶಂಕ್ಯೋಚ್ಯತೇ—ಯೇ ಶಿಷ್ಯಾ ಅಭಿದ್ರುಹಸ್ಪದೇ ಸರ್ವತೋ ಗುರುದ್ರೋಹಸ್ಯ ಸ್ಥಾನೇ ವರ್ತಮಾನಾ ನಿರಾಮಿಣೋ ಮಾಯಯಾ ಗುರುಮಭಿಮುಖೀಕೃತ್ಯ ವ್ಯವಹಾರೇ ಬಾಹ್ಯೇ ನಿತರಾಂ ರಮಯಂತೀತಿ ನಿರಾಮಿಣಃ । ಏತೇಽನುಕೂಲಾ ಇತ್ಯೇವಂ ಗುರೋರ್ಭ್ರಾಂತಿಂ ಜನಯಂತೀತ್ಯರ್ಥಃ । ತೇ ಚ ಸ್ವಹೃದಯೇ ರಿಪವಃ ಶತ್ರವಃ ಸಂತೋಽನ್ನೇಷು ಭೋಗ್ಯೇಷು ದೃಷ್ಟಾರ್ಥೇಷ್ವೇವ ಜಾಗೃಧುರಭಿಕಾಂಕ್ಷಾಂ ಕುರ್ವಂತಿ । ತಾದೃಶೇಭ್ಯಃ ಸ್ತೇನೇಭ್ಯೋ ಮಂತ್ರಾತ್ಮಕಾನಸ್ಮಾನ್ಮಾ ದೇಹಿ । ಇತಿ ಮಂತ್ರದ್ರಷ್ಟ್ರೃಣಾಂ ವಚನಮೇತತ್ । ತರ್ಹಿ ಕೇಭ್ಯೋ ಮಂತ್ರಾ ದಾತವ್ಯಾ ಇತಿ ಚೇದುಚ್ಯತೇ ಯೇ ಶ್ರದ್ಧಾಲವೋ ವಿಪ್ರಾಯಃ ಸಂಭಜನಕರ್ತಾರಃ ಸಂತೋ ಹೃದಿ ಸ್ವಚಿತ್ತೇ ದೇವಾನಾಮಿಂದ್ರಾದೀನಾಂ ಯಾಗಾದಿರೂಪಂ ಸಂಬಂಧಮಾ ಸಮಂತಾದೋಹತೇ ವಿತರ್ಕಯಂತಿ ಸರ್ವದಾ ಯಾಗಂ ಕರ್ತುಂ ವಿಚಾರಯಂತಿ । ತಾದೃಶೇಭ್ಯೋ ಮಂತ್ರಾನ್ ದೇಹೀತ್ಯರ್ಥಃ । ತೇ ಚ ಸಾಮ್ನಃ ಸಮತ್ವಾದಾ-

ರ್ಜನಾತ್ಪರಃ ಶ್ರೇಯೋಹೇತುರ್ನಾಸ್ತೀತ್ಯೇವಂ ವಿದುರ್ಜಾನಂತಿ । ಅತಸ್ತೇ ಮಂತ್ರೋಪದೇಶ-ಯೋಗ್ಯಾಃ । ಅತ್ರ ಯಥಾ ಶಿಷ್ಯಾಣಾಂ ವ್ಯವಹಾರೇ ಸಮತ್ವಂ ಪ್ರಶಸ್ತಮೇವಂ ಸಂಹಿತಾಯಾ-ಮಪಿ ಸಮಮಾತ್ರೋಚ್ಚಾರಣಂ ಪ್ರಶಸ್ತಮಿತ್ಯರ್ಥಃ ॥

ಪೂರ್ವೋಕ್ತ ವಿಷಯದಲ್ಲಿ ಒಂದು ಮಂತ್ರವನ್ನು ಉದಾಹರಿಸುತ್ತಾರೆ. **ಮಾನಃಸ್ತೇನೇ ಭ್ಯೋ ಯೇ** ಇತ್ಯಾದಿ ಮಂತ್ರ ಸಂಹಿತೆಯಲ್ಲಿ ಹೇಳಿದೆ. (ಋ. ಸಂ. ೨-೨೪-೧೬) ಮಂತ್ರಾರ್ಥವನ್ನು ವಿವರಿಸುತ್ತಾರೆ. ಎಲೈ ಬೃಹಸ್ಪತಿಯೇ ಮಂತ್ರರೂಪವಾದ ನಮ್ಮನ್ನು ವಿದ್ಯಾಚೋರದಲ್ಲಿ ಆಸಕ್ತರಾದ ಕಳ್ಳರಿಗೆ ಕೊಡಬೇಡ. ಅಂತಹರಿಗೆ ಮಂತ್ರೋಪದೇಶವನ್ನು ಮಾಡಬೇಡವೆಂದರ್ಥ. ಆ ಕಳ್ಳರು ಯಾರು ? ಯಾವಶಿಷ್ಯರು ಗುರುದ್ರೋಹದಲ್ಲೇ ಆಸಕ್ತರಾಗಿ ಮಾಯೆಯಿಂದ ಗುರುವನ್ನು ತಮ್ಮವರನ್ನಾಗಿ ಮಾಡಿಕೊಂಡು ವ್ಯವಹಾರದಲ್ಲಿ ಹೊರಗಿನವಿಷಯದಲ್ಲೇ ಆಸಕ್ತರಾಗಿರುತ್ತಾರೆ. ತಾವು ಅನುಕೂಲರಾಗಿದ್ದೇವೆಯೆಂದು ಗುರುವಿಗೆ ತೋರಿಸಿಕೊಳ್ಳುತ್ತಾರೆ. ಆದರೆ ಹೃದಯದಲ್ಲಿ ಅವರು ಶತ್ರುತ್ವವನ್ನಾಚರಿಸುತ್ತಾ ಹೊರಗಿನ ಭೋಗ್ಯಪ್ರಪಂಚದಲ್ಲಿಯೇ ಆಸಕ್ತರಾಗಿರುತ್ತಾರೆ. ಆ ರೀತಿಯ ಕಳ್ಳರಿಗೆ ನಮ್ಮನ್ನು ಕೊಡಬೇಡಿರಿ ಎಂದು ಮಂತ್ರದ್ರಷ್ಟೃಗಳ ವಚನ. ಹಾಗಾದರೆ ಯಾರಿಗೆ ಉಪದೇಶಿಸಬೇಕು ? ಅಂದರೆ ಯಾರು ಶ್ರದ್ಧಾಲುಗಳಾಗಿದ್ದು ಹೃದಯದಲ್ಲಿ ಯಾವಾಗಲೂ ಇಂದ್ರಾದಿಗಳ ಯಾಗಸಂಬಂಧಿಯಾದ ವಿಚಾರವನ್ನೇ ಮಾಡುತ್ತಿರುವರೋ ಅಂತಹರಿಗೆ ಉಪದೇಶಿಸಬೇಕೆಂದು ತಾತ್ಪರ್ಯ. ಆ ಶಿಷ್ಯರು ಸಮತ್ವ ಅಂದರೆ ಸರಳಮಾರ್ಗವೊಂದೇ ಶ್ರೇಯಃಸಾಧನವೆಂದು ತಿಳಿದಿರುತ್ತಾರೆ. ಆದುದರಿಂದ ಅವರು ಮಂತ್ರೋಪದೇಶಕ್ಕೆ ಯೋಗ್ಯರು. ಇಲ್ಲಿ ಹೇಗೆ ಶಿಷ್ಯವ್ಯವಹಾರದಲ್ಲಿ ಸಮತ್ವವು ಪ್ರಶಸ್ತವಾಗಿದೆಯೋ ಅದರಂತೆ ಸಂಹಿತೆಯಲ್ಲಿ ಸಮದಿಂದ ಉಚ್ಚಾರಣವು ಪ್ರಶಸ್ತವೆಂದು ತಾತ್ಪರ್ಯ.

**ಬೃಹಸ್ಪತೇ ನ ಪರಃ ಸಾಮ್ನೋ ವಿದುರಿತಿ ॥**

**ಏತಸ್ಯ ಮಂತ್ರಸ್ಯ ಪ್ರದರ್ಶನಾರ್ಥಂ ಚತುರ್ಥಂ ಪಾದಂ ಪಠತಿ—**

ಪೂರ್ವೋಕ್ತಮಂತ್ರವನ್ನು ತಿಳಿಸಲು ಅದರ ನಾಲ್ಕನೆಯ ಪಾದವನ್ನು ತೋರಿಸುತ್ತಾರೆ.

**ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವ-ಮಾಯುರೇತಿ ॥**

**ಪೂರ್ವವತ್ಫಲವಾಕ್ಯಮನುಸ್ಮಾರಯತಿ—**

ಹಿಂದೆ ಹೇಳಿದಂತೆ ಪ್ರಯೋಜನೆಯುಂಟಾಗಲು ಪೂರ್ವೋಕ್ತವಾದ ಫಲವನ್ನು ತೋರಿಸಿರುತ್ತಾರೆ. ಅರ್ಥ ಹಿಂದೆ ವಿವರಿಸಿದೆ.

*English Translation*

---

1. Now those who repeat the Firbhuga say :

2. 'The former half is the first syllable, the latter half the second syllable, and the space between the first and second halves is the Samhita (union).

3. He who thus knows this Samhita (union), becomes united with offspring, cattle, fame, glory of countenance, and the world of Svarga. He lives his full age.

4. Now Hrasva Mahdukeya say : 'We reciters of Nirbhuga say,' Yes, the farmer half is the first syllable, and the latter half the second syllable, but the Samhita is the space between the first and second halves in so far as by it one turns out the union (sandhi) and knows what is the aceent and what is not, and, distinguishes what is the mora and what is not.

5. He who thus knows this Samhita (union), becomes united with offspring, cattle, fame, glory of countenance, and the world of Svarga. He lives his full age.

6. Now his middle son' the child of his mother Pratibodhi, says 'One pronounces these two syllables letter by letter, without entirely separating them, and without entirely uniting them. Then that mora between the first and second halves, which indicates the union, that is the Saman (evenness, sliding). I therefore hold Saman only to be the Samhita (union).

7. This has also been declared by a Rishi (Rv. II. 23, 16):-

8. 'O Brihaspati, they know nothing higher than Saman.'

9. He who thus knows this Samhita (union), becomes united with offspring, cattle, fame, glory of countenance, and the world of Svarga. He lives his full age.

ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ತೃತೀಯಾರಣ್ಯಕೇ
ಪ್ರಥಮಾಧ್ಯಾಯೇ ಪಂಚಮಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ತೃತೀಯಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವು ॥



## ಅಥ ತೃತೀಯಾರಣ್ಯಕೇ ಪ್ರಥಮಾಧ್ಯಾಯೇ ಷಷ್ಠಃ ಖಂಡಃ

ಮೂರನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

———

### ಬೃಹದ್ರಥಂತರಯೋಃ ರೂಪೇಣ ಸಂಹಿತಾ ಸಂಧೀಯತ ಇತಿ ತಾರ್ಕ್ಷ್ಯಃ

**ಪುನರಪ್ಯುಪಾಸನಾಂತರಂ ವಕ್ತುಂ ಪ್ರಸ್ತೌತಿ—ತರುಕ್ಷ (ತೃಕ್ಷ) ನಾಮಕಸ್ಯ ಪುತ್ರಃ ಕಶ್ಚಿನ್ಮಹರ್ಷಿರೇವಂ ಮನ್ಯತೇ । ಬೃಹನ್ನಾಮಕಂ ಯತ್ಸಾಮ " ತ್ವಾಮಿದ್ಧಿ ಹವಾಮಹೇ " (ಋ. ಸಂ. ಮ. ೬ ಸೂ. ೪೬ ಋ. ೧) ಇತ್ಯಸ್ಯಾಮೃಚ್ಯುತ್ಪನ್ನಮಸ್ತಿ ಯಚ್ಚ ರಥಂತರಾಖ್ಯಂ ಸಾಮ " ಅಭಿತ್ವಾ ಶೂರ ನೋನುಮಃ " (ಋ. ಸಂ. ಮಂ. ೭ ಸೂ. ೩೨ ಋ. ೨೨) ಇತ್ಯಸ್ಯಾಮೃಚ್ಯುತ್ಪನ್ನಂ ತಯೋರುಭಯೋಃ ಸಾಮ್ನೋಃ ಸ್ವರೂಪೇಣ ಸಂಹಿತಾ ಸಂಪದ್ಯತೇ । ಸಾಮದ್ವಯಸಂಬಂಧಿತ್ವೇನ ಸಂಹಿತಾಧ್ಯಾನಂ ಕರ್ತವ್ಯಮಿತ್ಯರ್ಥಃ ॥**

ತಿರುಗಿಯೂ ಒಂದು ಉಪಾಸನೆಯನ್ನು ಹೇಳಲು ಪ್ರಾರಂಭಿಸುತ್ತಾರೆ. ತರುಕ್ಷ (ತೃಕ್ಷ) ಎಂಬ ಮಹರ್ಷಿಯ ಮಗನಾದ ತಾರ್ಕ್ಷ್ಯ ಎಂಬುವನು ಹೀಗೆ ತಿಳಿಯುತ್ತಾನೆ. ತ್ವಾಮಿದ್ಧಿ ಹವಾಮಹೇ (ಋ. ಸಂ. ೬–೪೬–೧) ಎಂಬ

ಋಕ್ಕಿನಿಂದ ಸಂಪನ್ನವಾದ ಬೃಹತ್ಎಂಬ ಸಾಮವೂ, ಅಭಿ ತ್ವಾ ಶೂರ ನೋನುಮಃ (ಋ. ಸಂ. ೭-೩೨-೨೬) ಎಂಬ ಋಕ್ಕಿನಿಂದ ಸಂಪನ್ನವಾದ ರಥಂತರವೆಂಬ ಸಾಮವೂ ಎರಡೂ ಸೇರಿ ಸಂಹಿತಾ ಉಂಟಾಗುತ್ತದೆ. ಈ ಎರಡುಸಾಮ ಸಂಬಂಧಿಯಾದ ಸಂಹಿತಾಧ್ಯಾನಮಾಡಬೇಕೆಂದು ತಾತ್ಪರ್ಯ.

**ವಾಗ್ವೈ ರಥಂತರಸ್ಯ ರೂಪಂ ಪ್ರಾಣೋ ಬೃಹತ ಉಭಾಭ್ಯಾಮು ಖಲು ಸಂಹಿತಾ ಸಂಧೀಯತೇ ವಾಚಾ ಚ ಪ್ರಾಣೇನ ಚ ॥**

ತಮೇವ ವಿವಕ್ಷಿತಂ ಧ್ಯಾನಪ್ರಕಾರಂ ದರ್ಶಯತಿ – ಅತ್ರ ಬೃಹದ್ರಥಂತರಶಬ್ದಾಭ್ಯಾಂ ಸಾಮ-ಗಾನರೂಪೋ ವಾಕ್ಯಾರ್ಥೋ ನ ವಿವಕ್ಷಿತಃ । ಕಿಂ ತರ್ಹಿ ಪ್ರಶಸ್ತತ್ವಸಾಮ್ಯೇನ ತಾಭ್ಯಾಂ ಶಬ್ದಾಭ್ಯಾಂ ವಾಕ್ಪ್ರಾಣಾವುಪಲಕ್ಷ್ಯೇತೇ । ಯಥಾ ಬೃಹದ್ರಥಂತರಸಾಮನೀ ಸೋಮಯಾಗಪ್ರಕೃತಿರೂಪೇಽಗ್ನಿ-ಷ್ಟೋಮೇ ಪೃಷ್ಠಸ್ತೋತ್ರಸ್ಯ ನಿಷ್ಪಾದಕೇ ಸತೀ ಪ್ರಶಸ್ತತ್ವಾಭಿಪ್ರಾಯೇಣ ಸರ್ವತ್ರ ಶ್ರುತಿಭಿರಾದ್ರಿ-ಯೇತೇ ತಥಾ ವಾಕ್ಪ್ರಾಣಾವಪಿ ದೇಹವ್ಯವಹಾರನಿಷ್ಪಾದಕತ್ವೇನ ಪ್ರಶಸ್ತೌ । ತಸ್ಮಾದ್ವಾಗೇವಾತ್ರ ರಥಂ ತರಸ್ಯ ಸ್ವರೂಪತ್ವೇನ ವಿವಕ್ಷಿತಾ । ಪ್ರಾಣೋ ಬೃಹತಃ ಸ್ವರೂಪತ್ವೇನ ವಿವಕ್ಷಿತಃ । ವಾಚಾ ಚ ಪ್ರಾಣೇನ ಚೇತ್ಯೇತಾಭ್ಯಾಮುಭಾಭ್ಯಾಮೇವ ಸಂಹಿತಾ ಸಂಪಾದನೀಯಾ। ವಾಕ್ಪ್ರಾಣರೂಪಾ ಸಂಹಿತೇತ್ಯೇವಂ ಧ್ಯಾಯೇದಿತ್ಯರ್ಥಃ ॥

ಪೂರ್ವೋಕ್ತ ಧ್ಯಾನದರೀತಿಯನ್ನು ವಿವರಿಸುತ್ತಾರೆ. ಇಲ್ಲಿ ಬೃಹದ್ರಥಂತರಶಬ್ದಗಳಿಂದ ಸಾಮಗಾನರೂಪಾರ್ಥವು ಇಲ್ಲಿ ವಿವಕ್ಷಿತವಾದುದಲ್ಲ. ಪ್ರಶಸ್ತತ್ವಸಾಮ್ಯದಿಂದ ಆ ಎರಡು ಶಬ್ದಗಳಿಂದ ವಾಕ್ಪ್ರಾಣಗಳನ್ನು ತೆಗೆದುಕೊಳ್ಳಬೇಕು. ಬೃಹದ್ರಥಂರಸಾಮಗಳು ಸೋಮಯಾಗದಪ್ರಕೃತಿಯಾದ ಅಗ್ನಿಷ್ಟೋಮಯಾಗದ ಪೃಷ್ಠಸ್ತೋತ್ರಸಂಪಾದಕಗಳಾದುದರಿಂದ ಅತಿಪ್ರಶಸ್ತವೆಂದು ಎಲ್ಲಾಕಡೆಯಲ್ಲಿಯೂ ಶ್ರುತಿಯಲ್ಲಿ ಅಂಗೀಕೃತವಾಗಿರುತ್ತವೆ. ಅದರಂತೆ ವಾಕ್ಪ್ರಾಣಗಳೂ ದೇಹ ವ್ಯವಹಾರಸಾಧಕಗಳಾದುದರಿಂದ ಪ್ರಶಸ್ತಗಳಾಗಿರುತ್ತವೆ. ಆದುದರಿಂದ ವಾಕ್ಕೇ ರಥಂತರಸ್ವರೂಪದಿಂದಲೂ, ಪ್ರಾಣವೇ ಬೃಹತ್ಸ್ವರೂಪದಿಂದಲೂ ವಿವಕ್ಷಿತವಾಗಿದೆ. ವಾಕ್ಪ್ರಾಣಗಳಿಂದ ಸಂಹಿತೆಯನ್ನು ಸಂಪಾದಿಸಬೇಕು. ವಾಕ್ಪ್ರಾಣ ರೂಪದಿಂದ ಸಂಹಿತಾಧ್ಯಾನಮಾಡಬೇಕೆಂದು ತಾತ್ಪರ್ಯ.

**ಏತಸ್ಯಾಂ ಹ ಸ್ಮೋಪನಿಷದಿ ಸಂವತ್ಸರಂ ಗಾ ರಕ್ಷಯತೇ ತಾರ್ಕ್ಷ್ಯಃ ॥**

ಉಕ್ತಸಂಹಿತಾಧ್ಯಾನಸ್ಯ ಗುರುಶುಶ್ರೂಷಾಲಭ್ಯತ್ವೇನ ಪ್ರಾಶಸ್ತ್ಯಂ ದರ್ಶಯತಿ–ಯೇಯಮು-ಪನಿಷದ್ವಾಕ್ಪ್ರಾಣರೂಪಸಂಹಿತಾವಿದ್ಯೇ ತಸ್ಯಾಮೇವ ನಿಮಿತ್ತಭೂತಾಯಾಂ ಸತ್ಯಾಮಾಚಾರ್ಯ-ಪ್ರಸಾದಾರ್ಥಂ ಲೌಕಿಕಗೋಪಾಲವತ್ತರು (ತೃಕ್ಷ) ಕ್ಷಸ್ಯ ಪುತ್ರೋ ನಿರಂತರಂ ಸಂವತ್ಸರಮಾಚಾರ್ಯ-ಸಂಬಂಧಿನೀರ್ಗಾ ರಕ್ಷಿತವಾನ್ ॥

ಪೂರ್ವೋಕ್ತಸಂಹಿತಾಧ್ಯಾನವು ಗುರುಶುಶ್ರೂಷೆಯಿಂದ ಲಬ್ಧವಾಗಿದೆಯೆಂದು ಅದರ ಪ್ರಾಶಸ್ತ್ಯವನ್ನು ವಿವರಿಸುತ್ತಾರೆ. ತೃಕ್ಷಮಹರ್ಷಿಯ ಪುತ್ರನು ಈ ಪ್ರಶಸ್ತವಾದ ವಾಕ್ಪ್ರಾಣರೂಪಸಂಹಿತಾವಿದ್ಯೆಯನ್ನು ಹೊಂದಲು ಲೌಕಿಕಗೋಪಾಲಕನಂತೆ ಒಂದುವರ್ಷದವರೆಗೆ ಗುರುಶುಶ್ರೂಷೆಮಾಡುತ್ತಾ ಗುರುಗಳ ಗೋವುಗಳನ್ನು ಕಾಪಾಡುತ್ತಿದ್ದನು.

**ಏತಸ್ಯಾಂ ಹ ಸ್ಮ ಮಾತ್ರಾಯಾಂ ಸಂವತ್ಸರಂ ಗಾ ರಕ್ಷಯತೇ ತಾರ್ಕ್ಷ್ಯಃ ॥**

ನ ಚಾತ್ರ ಪ್ರಯೋಜನಾಂತರಮುದ್ದಿಶ್ಯ ಗೋರಕ್ಷಾಯಾಂ ಕ್ರಿಯಮಾಣಾಯಾಂ ಪ್ರಸಂಗಾದಿಯಂ ವಿದ್ಯಾ ಲಬ್ಧೇತಿ ಶಂಕನೀಯಮಿತ್ಯೇತದ್ದರ್ಶಯತಿ—ಮಾತ್ರಾಶಬ್ದೇನ ಪ್ರಯೋಜನಾಂತರಂ ನಿವಾರ್ಯತೇ । ಏತಸ್ಯಾಂ ಮಾತ್ರಾಯಾಂ ಕೇವಲಾಯಾಂ ವಾಕ್ಪ್ರಾಣವಿದ್ಯಾಯಾಮೇವ ನಿಮಿತ್ತಭೂತಾಯಾಂ ಸತ್ಯಾಂ ಗೋರಕ್ಷಾ ಕೃತಾ। ತಸ್ಮಾದೇತಾವತಾ ಪ್ರಯಾಸೇನ ಲಭ್ಯತ್ವಾದತಿಪ್ರಶಸ್ತೇಯಂ ವಿದ್ಯೇತ್ಯರ್ಥಃ ॥

ಯಾವುದೋ ಒಂದು ಪ್ರಮುಖಪ್ರಯೋಜನಕ್ಕೋಸ್ಕರ ಗೋರಕ್ಷಣೆ ಮಾಡುತ್ತಾ ಇರುವಾಗ ಪೂರ್ವೋಕ್ತ ವಿದ್ಯೆಯು ಪ್ರಾಸಂಗಿಕವಾಗಿ ಲಬ್ಧವಾಗಿರಬಹುದೆಂದು ಶಂಕಿಸಬಾರದೆಂದು ವಿವರಿಸುತ್ತಾರೆ. ಕೇವಲ ಈ ವಾಕ್‌ಪ್ರಾಣ ರೂಪಸಂಹಿತಾವಿದ್ಯೆಯನ್ನು ಪಡೆಯುವುದಕ್ಕೋಸರವೇ ತಾರ್ಕ್ಷ್ಯಋಷಿಯು ಗೋರಕ್ಷಣೆ ಮಾಡಿರುವರು. ಹೀಗೆ ಅತಿ ಪ್ರಯಾಸದಿಂದ ಹೊಂದಿರುವುದರಿಂದ ಈ ವಿದ್ಯೆಯು ಅತಿಪ್ರಶಸ್ತವಾಗಿದೆ ಎಂದು ತಿಳಿಯಬೇಕು.

**ತದಪ್ಯೇತದೃಷಿಣೋಕ್ತಮ್ ॥**

ವಾಕ್ಪ್ರಾಣಯೋರ್ಬೃಹದ್ರಥಂತರರೂಪತ್ವೇನ ಪ್ರಾಶಸ್ತ್ಯಮಭಿಪ್ರೇತ್ಯ ಬೃಹದ್ರಥಂತರಪ್ರತಿಪಾದಕಂ ಮಂತ್ರದ್ವಯಮುದಾಹರತಿ—ತದೇತನ್ಮಂತ್ರದ್ವಯಂ ಸಂಹಿತಾಯಾಮೇವಮಾಮ್ನಾತಮ್॥

"ಪ್ರಥಶ್ಚ ಯಸ್ಯ ಸಪ್ರಥಶ್ಚ ನಾಮಾಽಽನುಷ್ಟುಭಸ್ಯ ಹವಿಷೋ ಹವಿರ್ಯತ್ ।
ಧಾತುರ್ದ್ಯುತಾನಾತ್ಸವಿತುಶ್ಚ ವಿಷ್ಣೋ ರಥಂತರಮಾಜಭಾರಾ ವಸಿಷ್ಠಃ ॥
ಅವಿಂದಂತೇ ಅತಿಹಿತಂ ಯದಾಸೀದ್ಯಜ್ಞಸ್ಯ ಧಾಮ ಪರಮಂ ಗುಹಾಯತ್ ।
ಧಾತುರ್ದ್ಯುತಾನಾತ್ಸವಿತುಶ್ಚ ವಿಷ್ಣೋರ್ಭರದ್ವಾಜೋ ಬೃಹದಾಚಕ್ರೇ ಅಗ್ನೇಃ" ॥

(ಋ. ಸಂ. ಮಂ. ೧೦ ಸೂ. ೧೮೧ ಋ. ೧,೨)

ತದೇತನ್ಮಂತ್ರದ್ವಯಂ ಪ್ರವರ್ಗ್ಯಾಭಿಷ್ಟವೇ ಸೂಕ್ತೇ ಸಮಾಮ್ನಾತಮ್ । ಅನುಷ್ಟುಭಸ್ಯಾನುಷ್ಟುಪ್‌ಛಂದೋಯುಕ್ತೈರ್ಮಂತ್ರೈಃ ಸಂಸ್ತುತಸ್ಯ ಯಸ್ಯ ಪ್ರವರ್ಗ್ಯಹವಿಷೋ ನಾಮ ಘರ್ಮ ಇತ್ಯಾದಿಕಂ ಪ್ರಥಾದಯೋ ಜಾನಂತೀತಿ ಶೇಷಃ । ಪ್ರಥಸಪ್ರಥನಾಮಕಾವುಭಾವೃಷೀ । ಚಕಾರಾವನುಕ್ತಮಹರ್ಷಿಸಮುಚ್ಚಯಾರ್ಥೌ । ತೇ ಸರ್ವೇಽಪಿ ಯಸ್ಯ ಹವಿಷಃ ಪ್ರಸಿದ್ಧಸ್ಯ ನಾಮ ಜಾನಂತಿ। ಯಚ್ಚ ಪ್ರವರ್ಗ್ಯಾರ್ಥಂ ದ್ರವ್ಯಂ ಹವಿಷೋಽಪಿ ಹವಿರ್ಭವತಿ। ಉತ್ತಮಂ ಹವಿರಿತ್ಯರ್ಥಃ। ಯಥಾ ರಾಜ್ಞೋಽಪಿ ರಾಜೇತ್ಯಕ್ರೋತ್ತಮತ್ವಮುಕ್ತಂ ಭವತಿ ತದ್ವತ್ । ತಾದೃಶಂ ಹವಿಃ ಸ್ತೋತುಂ ವಸಿಷ್ಠಾಖ್ಯೋ ಮಹರ್ಷೀ ರಥಂತರಾಖ್ಯಂ ಸಾಮಾಽಽಜಭಾರಾಽಽಹೃತವಾನ್ । ತೇನ ಸಾಮ್ನಾ ತಸ್ಯ ಹವಿಷಃ ಸ್ತುತಿರಪಿ ಕಿಂನಿಮಿತ್ತೇತ್ಯಾಶಂಕ್ಯ ಧಾತ್ರಾದಿದೇವತಾನಿಮಿತ್ತೇತ್ಯುಚ್ಯತೇ। ಧಾತ್ರಾದಿಶಬ್ದೇಷು ಚತುರ್ಥ್ಯರ್ಥೇ ಪಂಚಮೀ। ಧಾತ್ರಾದೀನಾಂ ಪರಿತೋಷಾಯ ಹವಿಃಸ್ತುತಿರಿತ್ಯರ್ಥಃ। ತೇ ಪ್ರಥಾದಯೋ ಮಹರ್ಷಯಃ ಪ್ರವರ್ಗ್ಯರೂಪಂ ಹವಿರತಿಹಿತಂ ಧಾತ್ರಾದಿದೇ-

ವೇಭ್ಯೋಽತಿಶಯೇನೋಪಯುಕ್ತಮಿತ್ಯನೇನಪಿ ಪ್ರಥಾದಯೋ ಜ್ಞಾತವಂತ ಇತ್ಯರ್ಥಃ। ಯದ್ಧ-ವಿರ್ಯಜ್ಞಸ್ಯ ಸೋಮಯಾಗಸ್ಯ ಧಾಮ ಸ್ಥಾನಮಾಸೀತ್। ಸತಿ ಹಿ ಪ್ರವರ್ಗ್ಯೇ ಸೋಮಯಾ-ಗಸ್ತೇಜಸ್ವೀವ ಭಾಸತೇ। ತಸ್ಮಾದಸ್ಯ ಹವಿಷೋ ಧಾಮತ್ವಮ್। ತಥಾ ಯದ್ಧವಿಃ ಪರಮಂ ಗುಹಾಽತ್ಯಂತಂ ಗೋಪ್ಯಂ ಯಜ್ಞಸ್ಯ ಶಿರೋರೂಪತ್ವಾತ್। ತಥಾ ಚಾನ್ಯತ್ರ ಶ್ರೂಯತೇ— "ಶಿರೋ ವಾ ಏತದ್ಯಜ್ಞಸ್ಯ। ಯತ್ಪ್ರವರ್ಗ್ಯಃ"। (ತೈ-ಆ-ಪ್ರ-೫-ಅ-೧೦) ಇತಿ। ಅಗ್ನಿಸಹಿತಾನಾಂ ಧಾತ್ರಾದೀನಾಂ ಪರಿತೋಷಂ ನಿಮಿತ್ತೀಕೃತ್ಯ ತದ್ಧವಿಃ ಸ್ತೋತುಂ ಭರದ್ವಾಜಾಖ್ಯೋ ಮಹರ್ಷಿ-ರ್ಬೃಹದಾಖ್ಯಂ ಸಾಮಾಽಽಚಕ್ರ ಆನೀತವಾನ್। ಸರ್ವೇಷು ಸೋಮಯಾಗೇಷು ಪ್ರಶಸ್ತಂ ಯತ್ಪ್ರ-ವರ್ಗ್ಯಹವಿಸ್ತಾದೃಶಂ ಹವಿಃ ಸ್ತೋತುಂ ವಸಿಷ್ಠಭರದ್ವಾಜೌ ಮಹತಾ ಪ್ರಯಾಸೇನ ರಥಂತರಂ ಬೃಹಚ್ಚ ಸಂಪಾದಿತವಂತೌ। ತದುಭಯಸಾಮರೂಪತ್ವೇನ ಪ್ರಶಸ್ತೌ ವಾಕ್ಪ್ರಾಣೌ। ತಸ್ಮಾದ್ವಾಕ್ಪ್ರಾಣ-ರೂಪತ್ವೇನ ಸಂಹಿತಾಧ್ಯಾನಮುತ್ತಮಮಿತಿ ಮಂತ್ರದ್ವಯೋದಾಹರಣಸ್ಯ ತಾತ್ಪರ್ಯಾರ್ಥಃ॥

ವಿದ್ಯಾಪ್ರಾಶಸ್ತ್ಯವನ್ನು ವಿವರಿಸಿ ಬೃಹದ್ರಥಂತರಪ್ರತಿಪಾದಕಗಳಾದ ಎರಡು ಮಂತ್ರಗಳನ್ನು ತೋರಿಸುತ್ತಾರೆ. **ಪ್ರಥಶ್ಚ ಯಸ್ಯ ಸಪ್ರಥಶ್ಚ** (ಋ. ಸಂ. ೧೦-೧೮೧-೧) **ಅವಿಂದಂತೇ ಅತಿಹಿತಂ** (ಋ. ಸಂ. ೧೦-೧೮೧-೨) ಇತ್ಯಾದಿ ಆ ಎರಡು ಮಂತ್ರಗಳು. ಇವು ಪ್ರವರ್ಗ್ಯಾಭಿಷ್ಟವಸೂಕ್ತದಲ್ಲಿ ಹೇಳಿರುತ್ತಾರೆ. ಮಂತ್ರಾರ್ಥ. ಅನುಷ್ಟುಪ್‌ಛಂದೋಯುಕ್ತ ವಾದ ಮಂತ್ರಗಳಿಂದ ಸ್ತುತಿಸಲ್ಪಟ್ಟ ಪ್ರವರ್ಗ್ಯಹವಿಸ್ಸಿನ ಹೆಸರನ್ನು ಘರ್ಮವೆಂದು ಪ್ರಥಾದಿಗಳು ತಿಳಿದಿರುತ್ತಾರೆ. ಪ್ರಥ, ಸಪ್ರಥರೆಂಬುವರು ಇಬ್ಬರು ಋಷಿಗಳು. ಚಕಾರದಿಂದ ಇನ್ನು ಕೆಲವು ಋಷಿಗಳನ್ನು ತೆಗೆದುಕೊಳ್ಳಬೇಕು. ಅವರೆಲ್ಲರೂ ಆ ಪ್ರಸಿದ್ಧವಾದ ಹವಿಸ್ಸಿನ ಹೆಸರನ್ನು ತಿಳಿದಿರುತ್ತಾರೆ. ಈ ಪ್ರವರ್ಗ್ಯದ್ರವ್ಯವು ಹವಿಸ್ಸಿಗೂ ಹವಿಸ್ಸಾಗಿದೆ. ರಾಜನಿಗೆ ರಾಜನೆಂದಾಗ ಹೇಗೆ ಅತ್ಯುತ್ತಮನೆಂದು ತಿಳಿಯುವುದೋ ಅದರಂತೆ ಹವಿಸ್ಸಿಗೆ ಹವಿಸ್ಸೆಂದರೆ ಅತ್ಯುತ್ತಮವಾದ ಹವಿಸ್ಸೆಂದರ್ಥ ವಾಗುತ್ತದೆ. ಆ ಹವಿಸ್ಸನ್ನು ಸ್ತುತಿಸಲು ವಸಿಷ್ಠಮಹರ್ಷಿಗಳು ರಥಂತರವೆಂಬ ಸಾಮವನ್ನು ಸಂಪಾದಿಸುತ್ತಾರೆ. ಆ ಸಾಮದಿಂದಲೇ ಆ ಹವಿಸ್ಸನ್ನು ಏಕೆ ಸ್ತೋತ್ರಮಾಡಬೇಕು ? ಅಂದರೆ ಧಾತ್ರಾದಿ(ಬ್ರಹ್ಮ) ದೇವತೆಗಳ ಸಂತೋಷಕ್ಕೋಸ್ಕರ ವೆಂದು ಹೇಳುತ್ತಾರೆ. ಧಾತ್ರಾದಿಶಬ್ದಗಳಲ್ಲಿ ಚತುರ್ಥ್ಯರ್ಥದಲ್ಲಿ ಪಂಚಮೀ ಬಂದಿದೆ. ಪ್ರಥಾದಿಮಹರ್ಷಿಗಳು ಪ್ರವರ್ಗ್ಯ ರೂಪವಾದ ಹವಿಸ್ಸು ಧಾತ್ರಾದಿದೇವತೆಗಳಿಗೆ ಅತಿಹಿತವೆಂದೂ ಉಪಯುಕ್ತವೆಂದೂ ತಿಳಿದಿರುತ್ತಾರೆ. ಆ ಹವಿಸ್ಸು ಸೋಮ ಯಾಗದಸ್ಥಾನವಾಗಿದೆ. ಪ್ರವರ್ಗ್ಯವಿದ್ದರೇ ಸೋಮಯಾಗವು ತೇಜಸ್ವಿಯಾಗಿ ಶೋಭಿಸುತ್ತದೆ. ಆದುದರಿಂದ ಸ್ಥಾನವೆಂದು ಹೇಳಿದೆ. ಯಜ್ಞದ ಶಿರೋರೂಪವಾದುದರಿಂದ ಅದು ಅತ್ಯಂತಗೋಪ್ಯವೂ ಆಗಿದೆ. **ಶಿರೋ ವಾ ಏತದ್ಯಜ್ಞಸ್ಯ। ಯತ್ಪ್ರವರ್ಗ್ಯಃ** (ತೈ. ಆ. ೫-೧೦) ಎಂದು ಶ್ರುತ್ಯಂತರದಲ್ಲಿಯೂ ಹೇಳಿದೆ. ಅಗ್ನಿಸಹಿತವಾದ ಧಾತ್ರಾದಿದೇವತೆಗಳ ಸಂತೋಷ ಕ್ಕೋಸ್ಕರ ಆ ಹವಿಸ್ಸನ್ನು ಸ್ತುತಿಸಲು ಭರದ್ವಾಜಮಹರ್ಷಿಗಳು ಬೃಹತ್ ಎಂಬ ಸಾಮವನ್ನು ಅಂಗೀಕರಿಸಿರುತ್ತಾರೆ. ಸಕಲ ಸೋಮಯಾಗಗಳಲ್ಲಿ ಪ್ರವರ್ಗ್ಯವೇ ಪ್ರಶಸ್ತವಾದ ಹವಿಸ್ಸಾಗಿರುತ್ತದೆ. ಅದನ್ನು ಸ್ತುತಿಸಲು ವಸಿಷ್ಠಭರದ್ವಾಜರು ಮಹಾ ಪ್ರಯಾಸದಿಂದ ರಥಂತರ ಮತ್ತು ಬೃಹತ್‌ಸಾಮಗಳನ್ನು ಸಂಪಾದಿಸಿರುತ್ತಾರೆ. ಆ ಎರಡು ಸಾಮರೂಪಗಳಾದುದರಿಂದ ವಾಕ್ ಪ್ರಾಣಗಳು ಅತಿ ಪ್ರಶಸ್ತವಾಗಿರುತ್ತವೆ. ಆದುದರಿಂದ ವಾಕ್‌ಪ್ರಾಣರೂಪವಾದ ಸಂಹಿತಾಧ್ಯಾನವೂ ಅತ್ಯುತ್ತಮ ವೆಂದು ಈ ಎರಡು ಮಂತ್ರಗಳ ತಾತ್ಪರ್ಯ.

ರಥಂತರಮಾಜಭಾರಾ ವಸಿಷ್ಠಃ। ಭರದ್ವಾಜೋ ಬೃಹದಾಚಕ್ರೇಅಗ್ನೇರಿತಿ॥

ತಸ್ಯೈತಸ್ಯ ಮಂತ್ರದ್ವಯಸ್ಯ ಪ್ರತೀಕತ್ವೇನ ಚತುರ್ಥಪಾದೌ ಪಠತಿ—

ಪೂರ್ವೋಕ್ತ ಮಂತ್ರಗಳ ಪ್ರತೀಕರೂಪವಾಗಿ ಅವುಗಳ ನಾಲ್ಕನೆಯ ಪಾದವನ್ನು ಪಠಿಸುತ್ತಾರೆ.

ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶು-
ಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವ-
ಮಾಯುರೇತಿ ॥

ಉಪಾಸನಸ್ಯ ಫಲಂ ದರ್ಶಯತಿ —

ಪೂರ್ವೋಕ್ತವಾದ ಉಪಾಸನೆಯ ಫಲವನ್ನು ವಿವರಿಸುತ್ತಾರೆ. ಪೂರ್ವದಂತೆಯೇ ಅರ್ಥ ತಿಳಿಯಬೇಕು.

ವಾಕ್ಪ್ರಾಣೇನ ಸಂಹಿತೇತಿ ಕೌಂಠರವ್ಯಃ ಪ್ರಾಣಃ ಪವಮಾನೇನ ಪವ-
ಮಾನೋ ವಿಶ್ವೈರ್ದೇವೈರ್ವಿಶ್ವೇ ದೇವಾಃ ಸ್ವರ್ಗೇಣ ಲೋಕೇನ
ಸ್ವರ್ಗೋ ಲೊಕೋ ಬ್ರಹ್ಮಣಾ ಸೈಷಾಽವರಪರಾ ಸಂಹಿತಾ ॥

ಪುನರಪಿ ಗುಣಾಂತರವಿಶಿಷ್ಟತ್ವೇನ ವಾಕ್ಪ್ರಾಣರೂಪಾಯಾಃ ಸಂಹಿತಾಯಾ ಉಪಾಸ-ನಾಂತರಂ ವಿಧತ್ತೇ—ಕುಂಠರವಸ್ಯ ಪುತ್ರೋ ಮಹರ್ಷಿಃ ಸಂಹಿತೋಪಾಸನಾಮೇವಮುಪಾಚ। ಯೇಯಂ ವಾಗಸ್ತಿ ಸಾ ಪ್ರಾಣೇನ ಸಂಹಿತಾ ಸಂಯುಕ್ತಾ, ವಾಚಃ ಪ್ರಾಣೇನ ಪ್ರೇರ್ಯಮಾಣ-ತ್ವಾತ್। ಸ ಚ ಪ್ರಾಣೋ ದೇಹಮಧ್ಯವರ್ತೀ ಪವಮಾನೇನ ಬಾಹ್ಯವಾಯುನಾ ಸಂಹಿತಃ, ಬಾಹ್ಯ-ವಾಯೋಃ ಪ್ರಾಣಾನುಗ್ರಾಹಕತ್ವಾತ್। ಸ ಚ ಪವಮಾನೋ ಬಾಹ್ಯವಾಯುರ್ವಿಶ್ವೈರ್ದೇವೈಃ ಸಂಹಿತಃ। ಸರ್ವೇಷಾಂ ದೇವಾನಾಂ ಬಾಹ್ಯಾಧೀನಕ್ರಿಯೋಪೇತತ್ವಾತ್। ತೇ ಚ ವಿಶ್ವೇದೇವಾಃ ಸ್ವರ್ಗೇಣ ಲೋಕೇನ ಸಂಹಿತಾಃ, ತಲ್ಲೋಕನಿವಾಸಿತ್ವಾತ್। ಸ ಚ ಸ್ವರ್ಗೋ ಲೋಕೋ ಬ್ರಹ್ಮಣಾ ವೇದೇನ ಸಂಹಿತಃ, ವೇದೋಕ್ತಕರ್ಮಾನುಷ್ಠಾನಲಭ್ಯತ್ವಾತ್। ಸೈಷಾ ವಾಗಾದಿಕಾ ಬ್ರಹ್ಮಾಂತಾ ಸಂಹಿತೋಪಾಸಕೈರವರಪರೇತ್ಯುಚ್ಯತೇ। ಅವರೈಃ ಪೂರ್ವಪೂರ್ವಮಭಿಹಿತೈಃ ಪರೈರುತ್ತರೋತ್ತರ-ಮಭಿಹಿತೈಶ್ಚ ಪದಾರ್ಥೈರ್ಯುಕ್ತತ್ವಾತ್। ಏವಂರೂಪಾ ಸಂಹಿತಾ ಧ್ಯಾತವ್ಯಾ ಇತ್ಯಾರ್ಥಃ ॥

ವಾಕ್‌ಪ್ರಾಣರೂಪ ಸಂಹಿತಾ ಉಪಾಸನೆಯನ್ನು ಗುಣಾಂತರದಿಂದ ವಿವರಿಸುತ್ತಾರೆ. ಕುಂಠರವ ಋಷಿಯ ಮಗನು ಕೌಂಠರವ್ಯ. ಇವನು ಸಂಹಿತೋಪಾಸನೆಯನ್ನು ಈ ರೀತಿಯಾಗಿ ಹೇಳುತ್ತಾನೆ. ಪೂರ್ವೋಕ್ತವಾದ ವಾಕ್

ಪ್ರಣಯಸಂಯುಕ್ತವಾಗಿದೆ. ಏಕೆಂದರೆ ಅದು ಪ್ರಾಣದಿಂದ ಪ್ರೇರೇಪಿಸಲ್ಪಟ್ಟರೇ ಪ್ರವೃತ್ತಿಹೊಂದುತ್ತದೆ. ದೇಹ ಮಧ್ಯದಲ್ಲಿರುವ ಆ ಪ್ರಾಣವು ಪವಮಾನ ಅಂದರೆ ಹೊರಗಿನ ವಾಯುವಿನಿಂದ ಸಂಯುಕ್ತವಾಗಿದೆ. ಬಾಹ್ಯವಾಯುವೇ ಪ್ರಾಣಕ್ಕೆ ಅನುಗ್ರಾಹಕವಾಗಿರುತ್ತದೆ ಎಂದರ್ಥ. ಸಕಲದೇವತೆಗಳೂ ಬಾಹ್ಯಾಧೀನಕ್ರಿಯೆಯಿಂದ ಕೂಡಿರುವುದರಿಂದ ಆ ಬಾಹ್ಯವಾಯುವೂ ವಿಶ್ವದೇವತೆಗಳಿಂದ ಸಂಬದ್ಧವಾಗಿರುತ್ತದೆ. ಸ್ವರ್ಗಲೋಕಸಂಯುಕ್ತರಾಗಿರುತ್ತಾರೆ. ವೇದೋಕ್ತ ಕರ್ಮಾನುಷ್ಠಾನದಿಂದ ಹೊಂದಬೇಕಾದುದರಿಂದ ಆ ಸ್ವರ್ಗಲೋಕವು ವೇದಸಂಬದ್ಧವಾಗಿದೆ. ಹೀಗೆ ವಾಗಾದಿಬ್ರಹ್ಮ (ವೇದ) ದವರೆಗಿರುವ ಸಂಹಿತೆಗೆ ಅವರಾಪರಾ ಎಂದು ಕರೆಯುತ್ತಾರೆ. ಅವರುಗಳಿಂದ ಅಂದರೆ ಪೂರ್ವಪೂರ್ವದಲ್ಲಿ ಹೇಳಿರುವವುಗಳಿಂದ, ಪರಗಳಿಂದ ಅಂದರೆ ಉತ್ತರೋತ್ತರವಾಗಿ ಹೇಳಿರುವ ಪದಾರ್ಥಗಳಿಂದ ಕೂಡಿರುವುದರಿಂದ ಅವರಪರಾ ಎಂದು ಹೆಸರು ಬಂದಿದೆ. ಈರೀತಿಯಾದ ಸಂಹಿತಾಧ್ಯಾನವನ್ನು ಮಾಡಬೇಕೆಂದರ್ಥ.

**ಸ ಯೋ ಹೈತಾಮವರಪರಾಂ ಸಂಹಿತಾಂ ವೇದೈವಂ ಹೈವ ಸ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸಂಧೀಯತೇ ಯಥೈಷಾ ಸಂಹಿತಾ, ಇತಿ ||**

ತಸ್ಯ ಧ್ಯಾನಸ್ಯ ಫಲಂ ವಿಧತ್ತೇ—ಏಷಾ ಧ್ಯಾತವ್ಯತ್ವೇನೋಕ್ತಾ ಸಂಹಿತಾ ಬಹುವಿಧಪದಾರ್ಥ-ಪರಂಪರಯೋಪೇತಾ | ಏವಮೇವ ಸ ಉಪಾಸಕಃ ಪ್ರಜಾದಿಪರಂಪರಯಾ ಸಂಯುಜ್ಯತೇ ||

ಪೂರ್ವೋಕ್ತವಾದ ಧ್ಯಾನದ ಫಲವನ್ನು ವಿವರಿಸುತ್ತಾರೆ. ಧ್ಯಾನಯೋಗ್ಯವಾದ ಈ ಸಂಹಿತೆಯು ಬಹುವಿಧ ಪದಾರ್ಥಗಳಿಂದ ಕೂಡಿರುವುದರಿಂದ ಅದರಂತೆ ಉಪಾಸಕನೂ ಪ್ರಜಾದಿಪರಂಪರೆಯಿಂದ ಕೂಡಿರುತ್ತಾನೆ ಎಂದು ತಾತ್ಪರ್ಯ.

**ಸ ಯದಿ ಪರೇಣ ವೋಪಸೃತಃ ಸ್ವೇನ ವಾರ್ಥೇಽನಾಭಿವ್ಯಾಹರೇದ ಭಿವ್ಯಾಹಾರ್ಷನ್ನೇವ ವಿದ್ಯಾದ್ದಿವಂ ಸಂಹಿತಾಽಗನುದ್ವಿದೂಷಾಂ ದೇವಾನಾಮೇವಂ ಭವಿಷ್ಯತೀತಿ ಶಶ್ವತ್ತಥಾ ಸ್ಯಾತ್ ||**

ಯಥೋಕ್ತಪರಂಪರಾರಹಿತೇಽಪ್ಯುಪಾಸನೇ ಪ್ರಜಾದಿಫಲಂ ಸಮಾನಮಿತ್ಯಾಶಂಕ್ಯಾತ್ರ ವಿಶೇಷಂ ದರ್ಶಯತಿ—ಸ ಉಪಾಸಕೋ ಯದಿ ಕದಾಚಿತ್ಪರಕೀಯಪ್ರಯೋಜನೇನ ವಾ ಸ್ವಕೀಯ-ಪ್ರಯೋಜನೇನ ವೋಪಸೃತಃ ಪ್ರೇರಿತಃ ಸನ್ನಭಿವ್ಯಾಹರೇತ್ಸಂಹಿತಾಂ ಪಠೇತ್ತದಾನೀಮಭಿವ್ಯಾಹಾ-ರ್ಷನ್ನೇವ ಸಂಹಿತಾಂ ಪಠಿತುಮಿಚ್ಛನ್ನೇವ ವಿದ್ಯಾದೇವಂ ಮನಸಾ ಸಂಕಲ್ಪಯೇತ್ | ಕಥಮಿತಿ ತದುಚ್ಯತೇ—ಇಯಂ ಮಯೋಪಾಸ್ಯಮಾನಾ ಸಂಹಿತಾ ದಿವಮಗಮತ್ | ದ್ಯುಲೋಕಪರ್ಯಂತಂ ಪದಾರ್ಥಜಾತಂ ಪ್ರಾಪ್ತವತೀ "ವಿಶ್ವೇ ದೇವಾಃ ಸ್ವರ್ಗೇಣ ಲೋಕೇನ ಸ್ವರ್ಗೋ ಲೋಕೋ ಬ್ರಹ್ಮಣಾ" ಇತ್ಯೇವಮುಕ್ತತ್ವಾತ್ | ತಸ್ಮಾತ್ಕಾರಣಾದ್ವಿದುಷಾಂ ಸಂಹಿತೋಪಾಸಕಾನಾಮುತ ಏವ ದೇವಾನಾಂ ದೇವತಾರೂಪಾಣಾಮೇತೇಷಾಂ ಪುರುಷಾಣಾಮೇವಂ ಭವಿಷ್ಯತ್ಯೈಹಿಕಮಾಮುಷ್ಮಿಕಂ

**ನಾಪೇಕ್ಷಿತಂ ಶ್ರೇಯಃ ಸರ್ವದಾ ಭವಿಷ್ಯತೀತ್ಯೇವಂ ಮನಸಾ ಸಂಕಲ್ಪಿತೇ ಸತಿ ಶಶ್ವತ್ತಥಾ ಸ್ಯಾದವಶ್ಯಂ ತತ್ಫಲಂ ಸಿಧ್ಯೇತ್ ।**

ಪೂರ್ವೋಕ್ತಸರಂಪರಾರಹಿತವಾದ ಉಪಾಸನೆಗೂ ಪ್ರಜಾದಿಫಲಸಂಪತ್ತು ಸಮಾನವಾಗಿರುವಾಗ ಇದರ ವಿಶೇಷ ವೇನೆಂದು ಶಂಕಿಸಿದರೆ ಆಗ ಈ ಉಪಾಸನೆಯಲ್ಲಿ ವಿಶೇಷವನ್ನು ತೋರಿಸುತ್ತಾರೆ. ಕೌಂಠರವ್ಯಮತಾನುಸಾರಿಯಾದ ಉಪಾಸಕನು ಎಂದಾದರೂ ಇನ್ನೊಬ್ಬರ ಪ್ರಯೋಜನಕ್ಕಾಗಲೀ ಸ್ವಾರ್ಥಕ್ಕಾಗಲೀ ಪ್ರೇರಿತನಾಗಿ ಸಂಹಿತೆಯನ್ನು ಪಠಿಸು ತ್ತಾನೋ ಅಥವಾ ಪಠಿಸಲು ಮನಸ್ಸಿನಲ್ಲಿಯೇ ಸಂಕಲ್ಪಮಾಡುತ್ತಾನೋ ಆಗ ಅವನು ಇದನ್ನು ಚನ್ನಾಗಿ ತಿಳಿದು ಉಪಾಸಿಸುತ್ತಾನೆ. ಅಂದರೆ ಈ ನನ್ನಿಂದ ಉಪಾಸ್ಯವಾದ ಸಂಹಿತೆಯು ದ್ಯುಲೋಕದವರೆಗಿನ ಪದಾರ್ಥಜಾತವನ್ನು ಹೊಂದಿರುತ್ತದೆ. ಎಂದು ತಿಳಿದಿರುತ್ತಾನೆ. ವಿಶ್ವದೇವತೆಗಳು ಸ್ವರ್ಗದಿಂದಲೂ ಸ್ವರ್ಗವು ಬ್ರಹ್ಮ ಅಂದರೆ ವೇದದಿಂದ ಸಂಬದ್ಧವಾಗಿದೆಯೆಂದು ಹಿಂದೆ ಹೇಳಿದೆ. ಆದುದರಿಂದ ಜ್ಞಾನಿಗಳಾದ ಸಂಹಿತೋಪಾಸಕರು ಅದೇವತಾರೂಪವನ್ನೇ ಹೊಂದಿರು ವುದರಿಂದ ಅವರು ಐಹಿಕ ಅಥವಾ ಆಮುಷ್ಮಿಕ ಫಲವನ್ನು ಅಪೇಕ್ಷಿಸಿದಾಗ ಕೂಡಲೇ ಸಿದ್ಧಿಸುತ್ತದೆ. ಮನಸ್ಸಿನಲ್ಲಿ ಸಂಕಲ್ಪಿಸಿಕೊಂಡರೂ ಕೂಡಲೇ ಆ ಫಲವು ಪ್ರಾಪ್ತವಾಗುತ್ತದೆ.

**ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವ- ಮಾಯುರೇತಿ ॥**

**ಏವಂ ಸತ್ಯಸ್ಯಾ ಉಪಾಸನಾಯಾಃ ಸಂಕಲ್ಪಾಧೀನಮಿದಮೇವ ಫಲಂ ನ ತು ಪೂರ್ವೋಕ್ತ- ಪ್ರಜಾದಿಕಮಿತ್ಯಾಶಂಕ್ಯ ತದುಭಯಸಮುಚ್ಚಯಮಭಿಪ್ರೇತ್ಯ ಪೂರ್ವೋಕ್ತಮೇವ ಪುನಃ ಪಠತಿ—**

ಪೂರ್ವೋಕ್ತವಾದ ಉಪಾಸನೆಗೆ ಸಂಕಲ್ಪಾಧೀನ ಫಲವಾದರೆ ಪೂರ್ವೋಕ್ತಪ್ರಜಾಸಂಪತ್ತಿ ಮುಂತಾದ ಫಲವಿಲ್ಲವೆಂದು ಶಂಕೆ ಬಂದರೆ ಎರಡೂಫಲವಿಲ್ಲವೆಂದು ಹಿಂದೆ ಹೇಳಿದ ಫಲವನ್ನೂ ಪುನಃ ವಿವರಿಸುತ್ತಾರೆ.

**ವಾಕ್ಸಂಹಿತೇತಿ ಪಂಚಾಲಚಂಡಃ ॥**

**ಕೇವಲವಾಗ್ರೂಪೇಣ ಸಂಹಿತಾಯಾ ಉಪಾಸನಾಂತರಂ ವಿಧತ್ತೇ—ಪಂಚಾಲಾಖ್ಯೇ ದೇಶೇ ಸಮುತ್ಪನ್ನಶ್ಚಂಡಸ್ತೇಜಸ್ವೀ ತನ್ನಾಮಕೋ ವಾ ಕಶ್ಚಿನ್ಮಹರ್ಷಿರ್ವಾಗ್ರೂಪೇಣ ಸಂಹಿತಾ ಧ್ಯಾತವ್ಯೇ- ತ್ಯಾಹ ॥**

ಇನ್ನೊಂದು ರೀತಿಯಿಂದ ಕೇವಲ ವಾಗ್ರೂಪವಾದ ಸಂಹಿತೋಪಾಸನೆಯನ್ನು ವಿವರಿಸುತ್ತಾರೆ. ಪಂಚಾಲವೆಂಬ ದೇಶದಲ್ಲಿ ಹುಟ್ಟಿದ ತೇಜಸ್ವಿಯಾದ ಬ್ರಾಹ್ಮಣನು ಪಂಚಾಲಚಂಡನು. ಅಥವಾ ಅವನ ಹೆಸರೇ ಅದು. ಆ ಮಹರ್ಷಿಯು ವಾಗ್ರೂಪದಿಂದ ಸಂಹಿತಾಧ್ಯಾನವನ್ನು ಹೇಳುತ್ತಾರೆ.

ವಾಚಾ ವೈ ವೇದಾಃ ಸಂಧೀಯಂತೇ ವಾಚಾ ಛಂದಾಂಸಿ ವಾಚಾ ಮಿತ್ರಾಣಿ ಸಂದಧತಿ ವಾಚಾ ಸರ್ವಾಣಿ ಭೂತಾನ್ಯಥೋ ವಾಗೇ- ವೇದಂ ಸರ್ವಮಿತಿ ॥

ತದೇತತ್ಸಂಹಿತಾಯಾ ವಾಗ್ರೂಪತ್ವಂ ಸ ಏವ ಮಹರ್ಷಿರುಪಪಾದಯತಿ—ವೇದಾಃ ಸರ್ವೇಽಪಿ ವಾಚೈವ ಸಂಧೀಯಂತೇ ಪಠ್ಯಂತೇ । ಛಂದಾಂಸಿ ಗಾಯತ್ರ್ಯಾದೀನ್ಯಪಿ ವಾಚಾ ಪ್ರಯು- ಜ್ಯಂತೇ । ಮಿತ್ರಾಣಿ ಸ್ನಿಗ್ಧಾಃ ಪುರುಷಾ ವಾಚಾ ಪ್ರಿಯೋಕ್ತ್ಯಾ ಸಂದಧತಿ ಸಂಯುಕ್ತಾ ಭವಂತಿ । ನ ಕೇವಲಂ ಮಿತ್ರಾಣಿ ಕಿಂತು ಸರ್ವೇಽಪಿ ಪ್ರಾಣಿನಃ ಪ್ರಿಯೋಕ್ತ್ಯಾ ಸ್ನಿಗ್ಧಾ ಭವಂತಿ । ಅಪಿ ಚ ವಾಗೇ- ವೇದಂ ಸರ್ವಮೈಹಿಕಮಾಮುಷ್ಮಿಕಂ ಚ ಫಲಜಾತಂ ಸಂಪಾದಯತಿ । ರಾಜಸೇವಾದೌ ಪ್ರಿಯ- ಭಾಷಣೇನ ಧನಲಾಭಾತ್ । ಮಂತ್ರಜಪಾದಿನಾ ಸ್ವರ್ಗಾದಿಸಿದ್ಧೇಶ್ಚ ॥

ಸಂಹಿತೆಗೆ ವಾಗ್ರೂಪತ್ವವನ್ನು ಪಂಚಾಲಚಂಡಮಹರ್ಷಿಯೇ ಉಪಪಾದನೆಮಾಡುತ್ತಾನೆ. ವೇದಗಳೆಲ್ಲವೂ ವಾಗ್ರೂಪದಿಂದಲೇ ಪಠಿಸಲ್ಪಡುತ್ತವೆ. ಗಾಯತ್ರ್ಯಾದಿ ಛಂದಸ್ಸುಗಳೂ ವಾಕ್ಕಿನಿಂದಲೇ ವ್ಯಾಪ್ತವಾಗಿವೆ. ಸ್ನೇಹಿತಜನರು ಪ್ರಿಯವಾದ ಮಾತಿನಿಂದಲೇ ಸೇರುತ್ತಾರೆ. ಕೇವಲ ಮಿತ್ರರಲ್ಲದೆ ಪ್ರಾಣಿಗಳೂ ಕೂಡಾ ಪ್ರಿಯವಚನದಿಂದ ಪ್ರೀತವಾಗುತ್ತವೆ. ಮಾತೇ ಐಹಿಕಾಮುಷ್ಮಿಕಫಲಗಳನ್ನು ಸಂಪಾದಿಸಿ ಕೊಡುತ್ತದೆ. ಪ್ರಿಯಭಾಷಣದಿಂದಲೇ ರಾಜಸೇವಾದಿಗಳಲ್ಲಿ ಧನವನ್ನು ಸಂಪಾದಿಸುತ್ತಾರೆ. ಮಂತ್ರಜಪಾದಿವಾಕ್ಕಿನಿಂದ ಸ್ವರ್ಗಾದಿಸಿದ್ಧಿಯೂ ಆಗುತ್ತದೆ.

ತದ್ಯತ್ರೈತದಧೀತೇ ಮ ಭಾಷತೇ ವಾ ವಾಚಿ ತದಾ ಪ್ರಾಣೋ ಭವತಿ ವಾಕ್ತದಾ ಪ್ರಾಣಂ ರೇಳ್ಹ್ಯಥ ಯತ್ರ ತೂಷ್ಣೀಂ ವಾ ಭವತಿ ಸ್ವಪಿತಿ ವಾ ಪ್ರಾಣೇ ತದಾ ವಾಗ್ಭವತಿ ಪ್ರಾಣಸ್ತದಾ ವಾಚಂ ರೇಳ್ಹಿ ತಾವ- ನ್ಯೋನ್ಯಂ ರೀಳ್ಹೋ ವಾಗ್ವೈ ಮಾತಾ ಪ್ರಾಣಃ ಪುತ್ರಃ ॥

ನನು ವಾಚಃ ಪ್ರಾಣಪ್ರೇರಿತತ್ವಾತ್ಪ್ರಾಣಧ್ಯಾನಮೇವ ಪ್ರಶಸ್ತಮಿತ್ಯಾಶಂಕ್ಯ ವಸ್ತುತತ್ತ್ವ- ವಿಚಾರೇಣ ತಥಾತ್ವೇಽಪಿ ಸಂಹಿತಾಯಾಂ ವಾಚಃ ಪ್ರತ್ಯಾಸತ್ತಿಮನ್ವಯವ್ಯತಿರೇಕಾಭ್ಯಾಂ ದರ್ಶಯತಿ- ತತ್ತಸ್ಯಾಂ ವಾಕ್ಸಂಹಿತಾಯಾಮಿಯಮುಪಪತ್ತಿರುಚ್ಯತ ಇತಿ ಶೇಷಃ । ಯತ್ರ ಯದಾ ಪುಮಾನೇತ- ದ್ವೇದ ವಾಕ್ಯಮಧೀತೇ ಲೌಕಿಕಂ ವಾ ಭಾಷಾಂ ಕಥಯತಿ ತದಾನೀಂ ಪ್ರಾಣೋ ವಾಚ್ಯಂತರ್ಭೂತೋ ಭವತಿ ವಾಚ ಏವ ವ್ಯಾಪಾರ ಉಚ್ಚಾರಣಲಕ್ಷಣೋ ದೃಶ್ಯತೇ ನ ತೂಚ್ಛ್ವಾಸನಿಃಶ್ವಾಸರೂಪಃ ಪ್ರಾಣ ವ್ಯಾಪಾರಃ, ಅತಸ್ತದಾನೀಮಿಯಂ ವಾಕ್ಪ್ರಾಣಂ ರೇಳ್ಹಿ ರೇಢಿ ಗ್ರಸತಿ । ಏತಾವತಾ ಸಂಹಿತಾಪಾಠ- ಕಾಲೇ ವಾಗ್ವ್ಯಾಪಾರರೂಪೋಽನ್ವಯೋಽಭಿಹಿತಃ । ಅಥಶಬ್ದೇನ ವೈಲಕ್ಷಣ್ಯವಾಚಿನಾ ವ್ಯತಿರೇಕ ಉಪ ಕ್ರಮ್ಯತೇ । ಯತ್ರ ಯದಾ ತೂಷ್ಣೀಂ ಸಾ ಭವತಿ ವಾಗ್ವ್ಯಾಪಾರಂ ಪರಿತ್ಯಜ್ಯ ಮೌನೀ ಸನ್ನವತಿಷ್ಠತೇ ಚಕ್ಷುರಾದಿವ್ಯಾಪಾರಮಪಿ ಪರಿತ್ಯಜ್ಯ ಸ್ವಾಪಂ ವಾ ಪ್ರಾಪ್ನೋತಿ ತದಾನೀಮಿಯಂ ವಾಕ್ಪ್ರಾಣೇಂತ- ರ್ಭವತಿ, ವಾಗ್ವ್ಯಾಪಾರೋ ನ ದೃಶ್ಯತೇ ಪ್ರಾಣವ್ಯಾಪಾರಸ್ತು ದೃಶ್ಯತೇ । ತಸ್ಮಾತ್ತದಾನೀಂ ಪ್ರಾಣೋ

**ವಾಚಂ ರೇಳ್ಹಿ ಗ್ರಸತಿ । ನ ಚ ತೂಷ್ಣೀಂಭಾವೇ ಸ್ವಾಪೇ ವಾ ಸಂಹಿತಾಪಾಠೋಽನುಗಚ್ಛತಿ । ತಥಾ ಸತಿ ಯತ್ರ ವಾಗ್ವ್ಯಾಪಾರೋ ನಾಸ್ತಿ ತತ್ರ ಸಂಹಿತಾ ನಾಸ್ತೀತ್ಯೇವಂ ವ್ಯತಿರೇಕಃ ಪ್ರದರ್ಶಿತೋ ಭವತಿ । ತಾವೇತೌ ವಾಕ್ಪ್ರಾಣವನ್ಯೋನ್ಯಂ ರೀಳ್ಹ । ಕಾಲಭೇದೇನ ಗ್ರಸತೋ ಯದ್ಯಪಿ ತಥಾಽಪಿ ವಾಗೇವ ಮಾತಾ ಪ್ರಾಣಃ ಪುತ್ರಃ । ತಸ್ಮಾದ್ವಾಗ್‌ಧ್ಯಾನಂ ಪ್ರಶಸ್ತಮಿತ್ಯರ್ಥಃ ॥**

ವಾಕ್ ಪ್ರಾಣಪ್ರೇರಿತವಾದುದರಿಂದ ವಾಕ್ಕಿಗಿಂತ ಪ್ರಾಣಕ್ಕೇ ಪ್ರಾಶಸ್ತ್ಯ ವಾಸ್ತವನಾಗಿ ಇದ್ದರೂ ಸಂಹಿತೆಗೆ ಅನ್ವಯವ್ಯತಿರೇಕದಿಂದ ವಾಕ್ಸಂಬಂಧವೇ ಅಧಿಕವೆಂದು ವಿವರಿಸುತ್ತಾರೆ. ವಾಕ್ಸಂಹಿತೆಯಲ್ಲಿ ಹೀಗೆ ಉಪಪತ್ತಿ ಹೇಳಬಹುದು. ಯಾವಾಗ ಪುರುಷನು ವೇದವಾಕ್ಯವನ್ನು ಪಠಿಸುತ್ತಾನೋ ಅಥವಾ ಲೋಕವ್ಯವಹಾರದ ಮಾತನ್ನಾಡುತ್ತಾನೋ ಆಗ ಪ್ರಾಣವು ವಾಕ್ಕಿನಲ್ಲಿಯೇ ಸೇರಿಹೋಗಿರುತ್ತದೆ- ಉಚ್ಚಾರಣರೂಪ ವಾಗ್ವ್ಯಾಪಾರವೊಂದೇ ತೋರುವುದಲ್ಲದೆ ಉಚ್ಛ್ವಾಸ ನಿಃಶ್ವಾಸರೂಪ ಪ್ರಾಣವ್ಯಾಪಾರ ತೋರುವುದಿಲ್ಲ. ಆದುದರಿಂದ ಆಗ ಈ ವಾಕ್ ಪ್ರಾಣವನ್ನು ನುಂಗಿರುತ್ತದೆ. ಇದರಿಂದ ಸಂಹಿತಾಪಠನಸಮಯದಲ್ಲಿ ವಾಗ್ವ್ಯಾಪಾರರೂಪ ಅನ್ವಯ ತೋರಿಸಿದಂತಾಯಿತು. ಅಥಶಬ್ದದಿಂದ ವ್ಯತಿರೇಕವನ್ನು ತೋರಿಸಲು ಉಪಕ್ರಮಿಸುತ್ತಾರೆ. ಯಾವಾಗ ವಾಗ್ವ್ಯಾಪಾರವನ್ನು ಬಿಟ್ಟು ಮೌನವಾಗಿರುತ್ತಾನೋ ಮತ್ತು ಚಕ್ಷುರ್ವ್ಯಾಪಾರಾದಿಗಳೂ ಇಲ್ಲದೆ ಮಲಗಿರುತ್ತಾನೋ ಆಗ ಈ ವಾಕ್ ಪ್ರಾಣದಲ್ಲಿ ಲೀನವಾಗಿರುತ್ತದೆ. ಆಗ ಪ್ರಾಣವ್ಯಾಪಾರವೊಂದೇ ತೋರುವುದಲ್ಲದೆ ವಾಗ್ವ್ಯಾಪಾರ ತೋರುವುದಿಲ್ಲ. ಇದರಿಂದ ಪ್ರಾಣವೇ ವಾಕ್ಕನ್ನು ನುಂಗಿರುತ್ತದೆಂದು ತಿಳಿಯುತ್ತದೆ. ಸುಮ್ಮನಿರುವಾಗ ಅಥವಾ ಮಲಗಿರುವಾಗ ಸಂಹಿತಾಪಾಠವಿರುವುದಿಲ್ಲ. ಹೀಗಿರುವಾಗ ವಾಗ್ವ್ಯಾಪಾರವಿಲ್ಲದಿದ್ದರೆ ಸಂಹಿತಾ ಪಠನವೂ ಇಲ್ಲವೆಂದು ವ್ಯತಿರೇಕ ಸಿದ್ಧವಾಗುತ್ತದೆ. ಕಾಲಭೇದದಿಂದ ಈ ವಾಕ್‌ಪ್ರಾಣಗಳು ಅನ್ಯೋನ್ಯವಾಗಿ ನುಂಗಿದರೂ ವಾಕ್ಕೇ ತಾಯಿಯಾಗಿರುತ್ತದೆ. ಪ್ರಾಣನು ಪುತ್ರನು. ಆದುದರಿಂದ ವಾಗ್ಧ್ಯಾನವು ಪ್ರಶಸ್ತವೆಂದರ್ಥ.

**ತದಪ್ಯೇತದೃಷಿಣೋಕ್ತಮ್ ॥**

**ವಾಚೋ ಮಾತೃತ್ವೇ ಪ್ರಾಣಸ್ಯ ಪುತ್ರತ್ವೇ ಚ ಸಂಪಾದಕಂ ಮಂತ್ರಮುದಾಹರತಿ—**

**ಏಕಃ ಸುಪರ್ಣಃ ಸ ಸಮುದ್ರಮಾವಿವೇಶ ಸ ಇದಂ ವಿಶ್ವಂ ಭುವನಂ ವಿಚಷ್ಟೇ। ತಂ ಪಾಕೇನ ಮನಸಾಽಪಶ್ಯಮಂತಿತಸ್ತಂ ಮಾತಾ ರೇಳ್ಹಿ ಸ ಉ ರೇಳ್ಹಿ ಮಾತರಮಿತಿ ॥**

**ತಮೇತಂ ಮಂತ್ರಂ ಪಠತಿ—ಯೋಽಯಮೇಕಃ ಪ್ರಾಣವಾಯುಃ ಸುಪರ್ಣಃ ಪಕ್ಷಿವನ್ನಿರಾಧಾರಸಂಚಾರೀ ಸ ಪ್ರಾಣವಾಯುರ್ಬಾಹ್ಯವಾಯುರೂಪೇಣ ಸಮುದ್ರಂ ಸಮುದ್ರವದ್ವಿಸ್ತೃತಮಂತರಿಕ್ಷಮಾವಿವೇಶ ಪ್ರವಿಷ್ಟವಾನ್ । ಸ ಪ್ರಾಣದೇವ ಇದಂ ವಿಶ್ವಂ ಭುವನಂ ಸರ್ವಮಪಿ ಲೋಕಂ ವಿಚಷ್ಟೇ ವಿಶೇಷೇಣ ಖ್ಯಾಪಯತಿ । ಸತಿ ಹಿ ಪ್ರಾಣೇ ಜೀವಂತಃ ಪುರುಷಾ ಲೋಕಂ ವಿಖ್ಯಾತಂ ಕುರ್ವಂತಿ । ನ ತು ಪ್ರಾಣರಹಿತಾಮೃತಾಃ । ತಂ ತಾದೃಶಂ ಪ್ರಾಣದೇವಮಹಮುಪಾಸಕಃ ಪಾಕೇನ ಮನಸಾ ಪರಿಪಕ್ವೇನ(ಣ)ಜ್ಞಾನೇನಾಂತಿತೋಽಂತಿಕೇ ಸ್ವಹೃದಯೇಽಪಶ್ಯಂ ದೃಷ್ಟವಾನಸ್ಮಿ। ಕೇನ ಪ್ರಕಾ**

**ರೇಣ ತದ್ದರ್ಶನಮಿತಿ ತದುಚ್ಯತೇ—ತಂ ಪ್ರಾಣಂ ಮಾತಾ ರೇಳ್ಹಿ । ಅಧ್ಯಯನಕಾಲೇ ಲೌಕಿಕಭಾಷಾಕಾಲೇ ಚ ವಾಕ್ಪ್ರಾಣಂ ಗ್ರಸತಿ । ಸ ಉ ಸೋಽಪಿ ಪ್ರಾಣೋ ಮಾತರಂ ರೇಳ್ಹಿ ತೂಷ್ಣೀಂಭಾವ-ಕಾಲೇ ಸ್ವಾಪಕಾಲೇ ಚ ವಾಚಂ ಗ್ರಸತಿ । ಇತಿಶಬ್ದೋ ಮಂತ್ರಸಮಾಪ್ತ್ಯರ್ಥಃ ॥**

ವಾಕ್ ತಾಯಿಯೆಂದೂ, ಪ್ರಾಣನು ಪುತ್ರನೆಂದೂ ತಿಳಿಸುವ ಮಂತ್ರವನ್ನು ಉದಾಹರಿಸುತ್ತಾರೆ. ಏಕಃ ಸುಪರ್ಣಃ ಸ ಸಮುದ್ರಮಾವಿವೇಶ (ಋ–ಸಂ–೧೦–೧೧೪–೪) ಎಂಬುದೇ ಆ ಮಂತ್ರ. ಏಕಃ ಯಾವ ಒಂದು ಪ್ರಾಣ ವಾಯುವಿದೆಯೋ ಅದು, ಸುಪರ್ಣಃ ಪಕ್ಷಿಯಂತೆ ಯಾವ ಆಧಾರವೂ ಇಲ್ಲದೆ ಸಂಚರಿಸುತ್ತದೆ. ಸಃ ಆ ಪ್ರಾಣವಾಯುವೇ ಬಾಹ್ಯವಾಯುರೂಪದಿಂದ, ಸಮುದ್ರಂ ಸಮುದ್ರದಂತೆ ವಿಸ್ತೃತವಾದ ಅಂತರಿಕ್ಷವನ್ನು, ಆವಿವೇಶ ಪ್ರವೇಶಿಸಿರುತ್ತದೆ. ಸಃ ಆ ಪ್ರಾಣದೇವನು ಇವಂ ವಿಶ್ವಂ ಭುವನಂ ಈ ಸಕಲಪ್ರಪಂಚವನ್ನೂ, ವಿಚಷ್ಟೇ ವಿಖ್ಯಾತವನ್ನಾಗಿ ಮಾಡುತ್ತಾನೆ. ಪ್ರಾಣವಿದ್ದರೆ ಜನರು ಲೋಕವ್ಯವಹಾರದಿಂದ ಲೋಕವನ್ನು ವಿಖ್ಯಾತವನ್ನಾಗಿ ಮಾಡುತ್ತಾರೆ. ಮರಣಹೊಂದಿದರೆ ಲೋಕವಿದೆಯೆಂದು ಹೇಳುವವರಾರು ? ತಂ ಆ ಪ್ರಾಣದೇವನನ್ನು ಉಪಾಸಕನಾದ ನಾನು, ಪಾಕೇನ ಪರಿಪಕ್ವವಾದ, ಮನಸಾ ಜ್ಞಾನದಿಂದ, ಅಂತಿತಃ ಹತ್ತಿರದಲ್ಲಿ ಅಂದರೆ ಹೃದಯದಲ್ಲಿ, ಅಪಶ್ಯಂ ಸಾಕ್ಷಾತ್ಕರಿಸಿರುತ್ತೇನೆ. ಸಾಕ್ಷಾತ್ಕಾರದ ರೀತಿಯನ್ನು ತೋರಿಸುತ್ತಾರೆ. ತಂ. ಆ ಪ್ರಾಣನನ್ನು, ಮಾತಾ ತಾಯಿಯಾದ ವಾಕ್ಕು, ರೇಳ್ಹಿ ನುಂಗುತ್ತದೆ. ಅಧ್ಯಯನಕಾಲದಲ್ಲಿಯೂ, ಲೌಕಿಕ ಸಂಭಾಷಣೆಯಕಾಲದಲ್ಲಿಯೂ ವಾಕ್ಕಿನಲ್ಲಿ ಪ್ರಾಣಲೀನವಾಗಿರುತ್ತದೆ. ಸ ಉ ಆ ಪ್ರಾಣವೂ, ಮಾತರಂ ರೇಳ್ಹಿ ಸುಮ್ಮನಿರುವಾಗಲೂ ನಿದ್ರಾಕಾಲದಲ್ಲಿಯೂ ವಾಕ್ಕನ್ನು ನುಂಗಿರುತ್ತದೆ ಇತಿಶಬ್ದ ಮಂತ್ರಸಮಾಪ್ತಿಯನ್ನು ತಿಳಿಸುತ್ತದೆ.

ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವ-ಮಾಯುರೇತಿ ॥

**ಉಪಾಸ್ತಿಫಲಂ ದರ್ಶಯತಿ—**

ಉಪಾಸನಾಫಲವನ್ನು ವಿವರಿಸುತ್ತಾರೆ. ಹಿಂದೆ ಪ್ರಖ್ಯಾತವಾಗಿದೆ.

ಅಥಾತಃ ಪ್ರಜಾಪತಿಸಂಹಿತಾ ॥

**ಉಪಾಸನಾಂತರಂ ಪ್ರತಿಜಾನೀತೇ—ಅಥ ಪಂಚಾಲಚಂಡಕೌಂಠರವ್ಯಾದಿಮಹರ್ಷಿಪ್ರಣೀತ-ಸಂಹಿತಾಧ್ಯಾನಕಥನಾನಂತರಂ ಯತಃ ಪ್ರಜಾಪತಿಪ್ರಣೀತಾ ಸಂಹಿತಾ ಕತ್ಸ್ನಕುಟುಂಬವಿಷಯತ್ವಾ-ತ್ಪ್ರಶಸ್ತಾ, ಅತಃ ಕಾರಣಾತ್ಸಾಽಭಿಧೀಯತೇ ॥**

ಇನ್ನೊಂದು ರೀತಿಯಿಂದ ಉಪಾಸನೆಯನ್ನು ಹೇಳಲು ಪ್ರಾರಂಭಿಸುತ್ತಾರೆ. ಪಾಂಚಾಲಚಂಡ, ಕೌಂಠರವ್ಯಾದಿ ಮಹರ್ಷಿಗಳಿಂದ ಪ್ರಣೀತವಾದ ಸಂಹಿತಾಧ್ಯಯನವನ್ನು ಹೇಳಿದ ಮೇಲೆ, ಸಕಲ ಕುಟುಂಬ ವಿಷಯಕವಾದುದರಿಂದ ಅತಿ ಪ್ರಶಸ್ತವಾದ ಪ್ರಜಾಪತಿಯಿಂದ ಹೇಳಿದ ಸಂಹಿತೆಯನ್ನು ಪ್ರಾರಂಭಿಸುತ್ತಾರೆ.

**ಜಾಯಾ ಪೂರ್ವರೂಪಂ ಪತಿರುತ್ತರರೂಪಂ ಪುತ್ರಃ ಸಂಧಿಃ ಪ್ರಜನನಂ ಸಂಧಾನಂ ಸೈಷಾऽದಿತಿಃ ಸಂಹಿತಾ ॥**

ತಾಮೇತಾಂ ಸಂಹಿತಾಂ ದರ್ಶಯತಿ— ಸಂಭೋಗಕಾಲೇऽಧೋವರ್ತಿತ್ವಾಜ್ಜಾಯಾಯಾಃ ಪೂರ್ವವರ್ಣರೂಪತ್ವಮ್ । ಉತ್ತರ ದೇಶವರ್ತಿತ್ವಾತ್ಪತ್ಯುರುತ್ತರವರ್ಣರೂಪತ್ವಮ್ । ಉಭಯಮೇಲನಜತ್ವಾತ್ಪುತ್ರಃ ಸಂಧಿಃ । ಪ್ರಜನನಂ ಪುತ್ರೋತ್ಪಾದನಂ ಸಂಧಾನಂ ಸಂಹಿತಾಯಾ ನಿಮಿತ್ತಮ್ । 'ಇಕೋಯಣಚಿ' (ಪಾ-ಸೂ-ಅ-೬-ಪಾ-೧-ಸೂ-೭೭) ಇತ್ಯಾದಾವಚ್ಪರತ್ವಂ ಯಥಾ ಸಂಧಿಕಾರ್ಯನಿಮಿತ್ತಂ ತದ್ವತ್ । ಯೇಯಂ ಧ್ಯಾತವ್ಯಾ ಸಂಹಿತೋಕ್ತಾ ಸೈಷಾऽದಿತಿರಖಂಡನೀಯಾ, ಜಾಯಾಪತಿಪುತ್ರತದುಪಯುಕ್ತವ್ಯಾಪಾರೈಃ ಕೃತ್ಸ್ನಸ್ಯ ಸಂಸಾರಧರ್ಮಸ್ಯ ಪೂರಿತತ್ವಾತ್ ॥

ಪ್ರಜಾಪತಿ ಸಂಹಿತೆಯನ್ನು ವಿವರಿಸುತ್ತಾರೆ. ಸಂಭೋಗ ಕಾಲದಲ್ಲಿ ಕೆಳಗಿರುವುದರಿಂದ ಪೂರ್ವವರ್ಣವು ಪತ್ನೀ ರೂಪವಾಗುತ್ತದೆ. ಮೇಲಿರುವುದರಿಂದ ಪತಿಯು ಉತ್ತರ ವರ್ಣರೂಪನಾಗಿರುತ್ತಾನೆ. ಇಬ್ಬರ ಸಂಪರ್ಕದಿಂದ ಹುಟ್ಟುವುದರಿಂದ ಪುತ್ರನೇ ಸಂಧಿಯು. ಪುತ್ರೋತ್ಪಾದನೆಯೇ ಸಂಹಿತಾನಿಮಿತ್ತ. ಇಕೋಯಣಚಿ ಎಂಬ ಯಣ್ ಸಂಧಿ ಹೇಳುವ ಸೂತ್ರದಲ್ಲಿ ಸ್ವರಪರದಲ್ಲಿರುವುದು ನಿಮಿತ್ತವೆಂದು ಹೇಳಿದಂತೆ ಇಲ್ಲಿ ನಿಮಿತ್ತವನ್ನು ತಿಳಿಯಬೇಕು. ಹೀಗೆ ಧ್ಯಾನ ಯೋಗ್ಯವಾದ ಸಂಹಿತೆಯು ಅಖಂಡವಾಗಿರುತ್ತದೆ. ಅಂದರೆ ಲೋಕದಲ್ಲಿ ಸಕಲ ಸಂಸಾರ ಧರ್ಮವೂ ಪತಿ ಪತ್ನೀ ಪತ್ರ ಮತ್ತು ಇವರ ವ್ಯಾಪಾರದಿಂದಲೇ ಪರಿಪೂರ್ಣವಾಗಿರುತ್ತದೆಂದು ತಾತ್ಪರ್ಯ.

**ಅದಿತಿರ್ಹೀದಂ ಸರ್ವಂ ಯದಿದಂ ಕಿಂಚ ಪಿತಾ ಚ ಮಾತಾ ಚ ಪುತ್ರಶ್ಚ ಪ್ರಜನನಂ ಚ ॥**

ತಮೇತಮರ್ಥಂ ವಿಸ್ಪಷ್ಟಂ ದರ್ಶಯತಿ—ಪಿತ್ರಾದಿಕಮಪೇಕ್ಷಿತಂ ಲೋಕೇ ಯತ್ಕಿಂಚಿದಸ್ತಿ ತದಿದಂ ಸರ್ವಮದಿತಿರ್ಹ್ಯಖಂಡಮನ್ಯೂನಮಿತ್ಯರ್ಥಃ ॥

ಪೂರ್ವೋಕ್ತವಾದ ಅರ್ಥವನ್ನೇ ವಿವರಿಸುತ್ತಾರೆ. ಲೋಕದಲ್ಲಿ ಪಿತೃಪುತ್ರಾದಿಸಂಸಾರವು ಯಾವಾಗಲೂ ಅನ್ಯೋನ್ಯವಾಗಿರುತ್ತದೆ. ಸಂಸಾರ ವ್ಯಾಪಾರಕ್ಕೆ ವಿಚ್ಛೇದವೇ ಇರುವುದಿಲ್ಲ.

**ತದಪ್ಯೇತದೃಷಿಣೋಕ್ತಮ್ ॥**

ಯಥೇಯಂ ಸಂಹಿತಾ ಪಿತ್ರಾದಿಭಿರಪೇಕ್ಷಿತೈಃ ಪೂರ್ಣತ್ವಾದದಿತಿನಾಮಯುಕ್ತಾ ದೇವಮಾತಾ ಸರ್ವದೇವಪೂರ್ಣತ್ವೇನ ಸಾಮ್ಯೇನ, ಅದಿತಿದೇವತಾಪ್ರತಿಪಾದಕಂ ಮಂತ್ರಂ ಪ್ರಕೃತಸಂಹಿತಾಪ್ರಶಂಸಾರ್ಥಮುದಾಹರತಿ— ಸ ಚ ಮಂತ್ರಃ ಸಂಹಿತಾಯಾಮೇವಮಾಮ್ನಾತಃ—

"ಅದಿತಿರ್ದ್ಯೌರದಿತಿರಂತರಿಕ್ಷಮದಿತಿರ್ಮಾತಾ ಸ ಪಿತಾ ಸ ಪುತ್ರಃ ।
ವಿಶ್ವೇ ದೇವಾ ಅದಿತಿಃ ಪಂಚ ಜನಾ ಅದಿತಿರ್ಜಾತಮದಿತಿರ್ಜನಿತ್ವಮ್"

(ಋ-ಸಂ-ಮಂ-೧-ಸೂ ೮೯ ಋ-೧೦)

ದ್ಯುಲೋಕಾದ್ಯಭಿಮಾನಿದೇವತಾನಾಂ ಸರ್ವಾಸಾಮದಿತಿಕಾರ್ಯತ್ವೇ ಸತಿ ಕಾರಣವ್ಯತಿರೇಕೇಣ ಕಾರ್ಯಾ ಭಾವಾದದಿತೇಃ ಸರ್ವಾತ್ಮಕತ್ವಂ ಯುಕ್ತಮ್ । ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತ್ಯೇತೇ ಪಂಚ ಜನಾಃ । ಯದ್ವಾ ನಿಷಾದಪಂಚಮಾ ಬ್ರಾಹ್ಮಣಾದಿವರ್ಣಾಃ ಪಂಚ ಜನಾಃ । ಕಿಂಚಯಜ್ಜಾತಂ ಪೂರ್ವಮುತ್ಪನ್ನಂ ಯಜ್ಜನಿತ್ವಮಿತಃ ಪರಂ ಜನಯಿತವ್ಯಂ ತತ್ಸರ್ವಮದಿತಿರೇವ । ತಾದೃಗದಿತಿದೇವತಾನಾಮುಸಾಮ್ಯಾದಿಯಂ ಸಂಹಿತಾಪಿ ಪ್ರಶಸ್ತೇತ್ಯರ್ಥಃ ॥

ಪೂರ್ವೋಕ್ತಸಂಹಿತಾಧ್ಯಾನವು ಪಿತ್ರಾದಿಗಳಿಂದ ಪರಿಪೂರ್ಣವಾಗಿ ಅದಿತಿ (ಅಖಂಡ) ಯಾಗಿರುವುದರಿಂದ, ಅದಿತಿಯೆಂಬ ದೇವಮಾತೆಯೂ ಸರ್ವದೇವಪೂರ್ಣಳಾಗಿ ಸಮಾನವಾದುದರಿಂದ, ಉಪಾಸನಾಪ್ರಶಂಸೆಗೋಸ್ಕರ ಅದಿತಿ ದೇವತಾಪ್ರತಿಪಾದಕವಾದ ಮಂತ್ರವನ್ನು ತೋರಿಸುತ್ತಾರೆ. ಅದಿತಿರ್ದ್ಯೌರದಿತಿಃ (ಋ-ಸಂ-೧-೮೯-೧೦) ಎಂಬುದೇ ಆ ಮಂತ್ರ. ದ್ಯುಲೋಕಾದ್ಯಭಿಮಾನಿ-ದೇವತೆಗಳೆಲ್ಲರೂ ಅದಿತಿಕಾರ್ಯವಾದುದರಿಂದ, ಕಾರಣವಿಲ್ಲದೆ ಕಾರ್ಯವಿಲ್ಲದಿರುವುದರಿಂದ ಅದಿತಿಗೆ ಸರ್ವಾತ್ಮಕಭಾವ ಸಂಗತವಾಗಿದೆ. ಗಂಧರ್ವ, ಪಿತೃದೇವತೆಗಳು, ದೇವತೆಗಳು, ಅಸುರರು, ರಾಕ್ಷಸರು ಹೀಗೆ ಪಂಚ ಜನರು. ಅಥವಾ ಬ್ರಾಹ್ಮಣಾ, ಕ್ಷತ್ರಿಯ, ವೈಶ್ಯ, ಶೂದ್ರ, ನಿಷಾದ (ಬೇಡ) ಹೀಗೆ ಐದು ರೀತಿಯಿಂದ ಪಂಚ ಜನರನ್ನು ತಿಳಿಯಬೇಕು. ಪೂರ್ವದಲ್ಲಿ ಉತ್ಪನ್ನವಾದುದು, ಮುಂದೆ ಹುಟ್ಟುವುದು ಎಲ್ಲವೂ ಅದಿತಿರೂಪವೇ. ಹೀಗೆ ಅದಿತಿ ದೇವತಾಸಾಮ್ಯವಿರುವುದರಿಂದ ಈ ಸಂಹಿತೋಪಾಸನೆಯು ಅತಿಪ್ರಶಸ್ತವೆಂದರ್ಥ.

**ಅದಿತಿರ್ಮಾತಾ ಸ ಪಿತಾ ಸ ಪುತ್ರ ಇತಿ ॥**

**ಏತಸ್ಯ ಮಂತ್ರಸ್ಯ ಪ್ರತೀಕತ್ವೇನ ದ್ವಿತೀಯಂ ಪಾದಂ ಪಠತಿ—**

ಪೂರ್ವೋಕ್ತಮಂತ್ರದ ಪ್ರತೀಕರೂಪವಾಗಿ ಅದರ ಎರಡನೆಯ ಪಾದವನ್ನು ತೋರಿಸುತ್ತಾರೆ.

**ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವಮಾಯುರೇತಿ ॥**

**ಉಪಾಸನಸ್ಯ ಫಲಂ ದರ್ಶಯತಿ—**

ಪ್ರಜಾಪತಿಸಂಹಿತೋಪಾಸನೆಯ ಲವನ್ನು ವಿವರಿಸುತ್ತಾರೆ. ಹಿಂದೆ ವ್ಯಾಖ್ಯಾತವಾಗಿದೆ.

---

*English Translation*

---

1. Tarukshya said : The Samhita (union) is formed by means of the Brihat and Rathantara Samans.

2. Verily, the Rathantra Saman is speech, the Brihat Saman is breath. By both. by speech and breath, the Samhita is formed.

3. For this Upanishad for acqulring from his teacher the knowledge of this Samhita of speech and breath) Tarukshya guards (his teacher's) eows a whole year.

4, For it alone Tarukshya guards the cows a whole year.

5. This has also been declared by a Rishi (Rv. X. 181, 1; and Rv. X. 181, 2) :—

6. ' Vasishtha carried hither the Rathantara ; ' ' Bharadvaga brought hither the Brihat of Agni. '

7. He who thus knows this Samhita (uniou), becomos united with offspring, cattle, fame, glory of countenance, and the world of Svarga. He lives his full age.

8. Kauntharavya said ; ' Speech is united with breath, brcath with the Visvedevas witb the heavcnly world, the heavenly world with Brahman. That Samhita is called the gradual Samhita. '

9. He who knows this gradual Samhita (union), becomes united with offspring, cattle, fame, glory of countenance, and the world of Svarga, in exactly the same manner as this Samhita, i.e.; gradually.

10. If that worshippcr, whether, for his own sake or for that of another, recites (the Samhita), let him know when he is going to recite,

that this Samhita went up to heaven, and that it will be even so with those who by knowing it become Devas, May it always be so :

11. He who thus knows this Samhita (union), becomes united with offspring, cattle, fame, glory of countenance, and the world of Svarga. He lives his full age.

12. Pankalakanda said : 'The Samhita (union, composition) is speech.'

13. Verily, by speech the Vedas, by speech the metres are composed. Friends unite through speech, all being unite through spəech ; therefore speech is evetything here.'

14. With regard to this (view of speech being more than breath), it should be borne in mind that when we thus repeat ( Veda) or speak, breath is (absorbed) in speech ; speech swallows breath. And wheu we are silent or sleep, speech is (absorbed) in breath swallows speech. The two swallow each other. Verily, speech is the mother, breath the son.

15. This has been declared also by a Rishi (Rv. X. 114, 4) :—

16. 'There is one bird ; (as wind) he has entered the sky ; (as breath or living soul) he saw this whote world. With my ripe mind I saw him close to me (in the heart) ; the mother (licks or) absorbs him (breath), and he absorbs the mother (speech).

17. He who thus knows this Samhita (union) becomes united with offspring, cattle, fame, glory of conntenance, and the world of Svarga. He lives his full age.

18. Next follows the Pragapati-Samhita.

19. The former half is the wife, the latter half the man ; the result of their union the son ; the act of their union the begetting ; that Samhita is Aditi (indestructible).

20. For Aditi (indestruetible) is all this whatever there is, father mother, son, and begetting.

21. This has also been declared by a Rishi (Rv. I. 189, 10) :—

22. ' Aditi is mother, is father, is son. '

23. He who thus knows this Samhita (union), becomes united with offsprtng, cattle, fame, glory of countenance, and the uorld of Svarga. He lives his full age.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಾಣ್ಯಕಕಾಂಡಭಾಷ್ಯೇ ತೃತೀಯಾರಣ್ಯಕೇ
ಪ್ರಥಮಾಧ್ಯಾಯೇ ಷಷ್ಠಃ ಖಂಡಃ

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಬಹ್ವೃಚ ಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ತೃತೀಯಾರಣ್ಯಕೇ ಪ್ರಥಮೋಽಧ್ಯಾಯಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ತೃತೀಯಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವು

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ತೃತೀಯಾರಣ್ಯಕದ
ಮೊದಲನೆಯ ಅಧ್ಯಾಯವು ಸಮಾಪ್ತವಾದುದು

---

# ಅಥ ತೃತೀಯಾರಣ್ಯಕೇ ದ್ವಿತೀಯಾಧ್ಯಾಯೇ ಪ್ರಥಮಃ ಖಂಡಃ

## ಮೂರನೆಯ ಆರಣ್ಯಕದ ಎರಡನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

ಪ್ರಾಣೋ ವಂಶ ಇತಿ ಸ್ಥವಿರಃ ಶಾಕಲ್ಯಸ್ತದ್ಯಥಾ ಶಾಲಾವಂಶೇ ಸರ್ವೇಽನ್ಯೇ ವಂಶಾಃ ಸಮಾಹಿತಾಃ ಸ್ಯುರೇವಮಸ್ಮಿನ್ಪ್ರಾಣೇ ಚಕ್ಷುಃ ಶ್ರೋತ್ರಂ ಮನೋ ವಾಗಿಂದ್ರಿಯಾಣಿ ಶರೀರಂ ಸರ್ವ ಆತ್ಮಾ ಸಮಾಹಿತಃ ||

**ಪ್ರಥಮೋಽಧ್ಯಾಯೇ ಸಂಹಿತಾಪದಕ್ರಮಾಣಾಂ ನಾನಾವಿಧಂ ಧ್ಯಾನಮುಕ್ತಮ್ । ದ್ವಿತೀಯೇಽಕ್ಷರಾದಿಬಹುವಿಧಧ್ಯಾನಾನ್ಯುಚ್ಯಂತೇ । ತತ್ರಾಽದೌ ತಾವತ್ಸಿಂಹಾವಲೋಕನನ್ಯಾಯೇನ "ಅಥಾತೋಽನುವ್ಯಾಹಾರಾಃ ಪ್ರಾಣೋ ವಂಶ ಇತಿ ವಿದ್ಯಾತ್" (೩-೭-೩-೮-೧-ಖಂ-೪) ಇತ್ಯುಕ್ತಂ ತದೇತದನೂದ್ಯೋಪಪಾದಯತಿ— ಶಕಲಸ್ಯ ಪುತ್ರಃ ಶಾಕಲ್ಯಃ ಸ ತು ಬಾಲೋಽಪಿ ಕಶ್ಚಿದಸ್ತೀತಿ ಸ್ಥವಿರಶಬ್ದೇನ ವಿಶೇಷ್ಯತೇ । ತೇನ ಪ್ರೋಕ್ತಂ ಪ್ರಾಣಸ್ಯ ವಂಶತ್ವಧ್ಯಾನಂ ಸಾಮ್ಯಸದ್ಭಾವಾದುಪಪದ್ಯತೇ । ಯಥಾ ಲೋಕೇ ಶಾಲಾಯಾ ಆಧಾರಭೂತಸ್ತಂಭಾಗ್ರೇಷು ದಂಡಾಯಮಾನಸ್ಥಾಪಿತೇ ಪ್ರೌಢೇ ವಂಶೇ ಸ್ಯೂತಾ ಅನ್ಯೇ ಸರ್ವೇ ವಂಶಾಃ ಸಮ್ಯಕ್ಪ್ರತಿಷ್ಠಿತಾಃ ಸ್ಯುರೇವಮಸ್ಮಿನ್ ಪ್ರಾಣವಾಯೌ ಚಕ್ಷುರಾದಿಕಂ ಶರೀರಾಂತರಮವಯವಜಾತಂ ತತ್ಸಂಘರೂಪಃ ಸರ್ವ ಆತ್ಮಾ ಚ ಸಮ್ಯಗಾಶ್ರಿತಃ ।**

ಮೊದಲನೆಯ ಅಧ್ಯಾಯದಲ್ಲಿ ಸಂಹಿತಾಪದಕ್ರಮಗಳ ನಾನಾರೀತಿಯಾದ ಧ್ಯಾನವನ್ನು ಹೇಳಿದ್ದಾಯಿತು. ಈಗ ಈ ಅಧ್ಯಾಯದಲ್ಲಿ ಅಕ್ಷರಾದಿನಾನಾವಿಧಗಳಾದಧ್ಯಾನವನ್ನು ವಿವರಿಸುತ್ತಾರೆ. ಮೊದಲು ಸಿಂಹಾವಲೋಕನನ್ಯಾಯದಿಂದ ಪೂರ್ವೋಕ್ತವಾದ **ಅಥಾತೋನುವ್ಯಾಹಾರಾಃಪ್ರಾಣೋ ವಂಶ ಇತಿ ವಿದ್ಯಾತ್** ಎಂಬ ಪ್ರಾಣವಂಶಧ್ಯಾನವನ್ನು ಅನುವಾದ ಮಾಡುತ್ತಾರೆ. ಶಕಲನ ಮಗನಿಗೆ ಶಾಕಲ್ಯನೆಂದು ಹೆಸರು. ಬಾಲನೂ ಒಬ್ಬನಿರುವುದರಿಂದ ಇಲ್ಲಿ ಸ್ಥವಿರ (ಮುದುಕ) ನೆಂದು ಹೇಳಿದೆ. ಅವನು ಪ್ರಾಣವಂಶಧ್ಯಾನವನ್ನು ವಿವರಿಸಿರುತ್ತಾನೆ. ಲೋಕದಲ್ಲಿ. ಒಂದುಮನೆಗೆ ಆಧಾರವಾದ ಕಂಭಗಳ ಮೇಲ್ಭಾಗದಲ್ಲಿ ಅಡ್ಡವಾಗಿ ಇಟ್ಟಿರುವ ಗಟ್ಟಿಯಾದ ಒಂದು ಬಿದಿರುಕೋಲಿನಲ್ಲಿ ಹೇಗೆ ಇತರ ಕೋಲುಗಳು ಸಂಬಂಧವಾಗಿರುವವೋ ಅದರಂತೆ ಪ್ರಾಣವಾಯುವಿನಲ್ಲಿ ಚಕ್ಷುರಾದಿಶರೀರದ ಸಕಲಾವಯವಗಳೂ ಆಶ್ರಯಿಸಿರುತ್ತವೆ.

**ತಸ್ಯೈತಸ್ಯಾತ್ಮನಃ ಪ್ರಾಣ ಊಷ್ಮರೂಪಮಸ್ಥೀನಿ ಸ್ಪರ್ಶರೂಪಂ ಮಜ್ಜಾನಃ ಸ್ವರರೂಪಂ ಮಾಂಸಂ ಲೋಹಿತಮಿತ್ಯೇತದನ್ಯಚ್ಚತು-ರ್ಥಮಂತಸ್ಥಾ ರೂಪಮಿತಿ ಹಿ ಸ್ಮಾಹ ಹ್ರಸ್ವೋ ಮಾಂಡೂಕೇಯಃ॥**

ಇತ್ಥಂ ಬುದ್ಧಿಸ್ಥಂ ವಂಶತ್ವಮುಪಪಾದಿತಮ್, ಅಥಾಕ್ಷರಧ್ಯಾನಂ ವಿಧತ್ತೇ—ಯೋಽಯಂ "ಪ್ರಾಣೋ ವಂಶಃ" ಇತಿ ಸ್ತುತಿಪ್ರಸಂಗೇನ ದೇಹೇಂದ್ರಿಯಾದಿಸಂಘಾತರೂಪಃ ಸರ್ವ ಆತ್ಮೋ-ಕ್ತಸ್ತಸ್ಯೈತಸ್ಯ ಸಂಘರೂಪಸ್ಯಾತ್ಮನೋ ಯಃ ಪ್ರಾಣೋಽಸ್ತಿ ತದೇತದೂಷ್ಮಣಾಂ ಸ್ವರೂಪಮ್। ಶಷಸಹಾಖ್ಯಾ ಅಕ್ಷರವಿಶೇಷಾ ಉಷ್ಮಾಣಸ್ತೇಷ್ವಕ್ಷರವಿಶೇಷೇಷು ಪ್ರಾಣದೃಷ್ಟಿಂ ಕುರ್ಯಾತ್। ಮಾತೃಕಾಪಾಠೇ ಕಕಾರಾದಯೋ ಮಕಾರಾಂತಾ ವರ್ಣಾಃ ಸ್ಪರ್ಶಸಂಜ್ಞಕಾಸ್ತೇಷ್ವಸ್ಥಿದೃಷ್ಟಿಃ। ಅಕಾರಾದಯಃ, ಅಕಾರಾಂತಾ ವರ್ಣಾ ಸ್ವರಸಂಜ್ಞಕಾಸ್ತೇಷು ಮಜ್ಜದೃಷ್ಟಿಃ। ಯರಲವಾಶ್ಚ-ತ್ವಾರೋ ವರ್ಣಾ ಅಂತಸ್ಥಾಸಂಜ್ಞಕಾಸ್ತೇಷು ಮಾಂಸಲೋಹಿತರೂಪಂ ಪೂರ್ವೋಕ್ತತ್ರಯಾ-ಪೇಕ್ಷಯಾ ಚತುರ್ಥಮಂಗಮನ್ಯದ್ಧ್ಯಾತವ್ಯಮ್॥

ಹೀಗೆ ಬುದ್ಧಿಸ್ಥವಾದ ವಂಶತ್ವವನ್ನು ಉಪಪಾದನೆಮಾಡಿ ಈಗ ಅಕ್ಷರಧ್ಯಾನವನ್ನು ವಿವರಿಸುತ್ತಾರೆ. ಪ್ರಾಣೋ ವಂಶಃ ಎಂದು ಸ್ತುತಿಪ್ರಸಕ್ತಿಯಿಂದ ದೇಹೇಂದ್ರಿಯಾದಿ ಸಂಘಾತರೂಪವಾದ ಯಾವ ಆತ್ಮನು ಪ್ರಸಕ್ತನಾದನೋ ಅವನ ಪ್ರಾಣವೇ ಊಷ್ಮಸ್ವರೂಪವೆಂದು ತಿಳಿಯಬೇಕು. ಶಷಸಹ ಅಕ್ಷರಗಳಿಗೆ ಊಷ್ಮವೆಂದು ಹೆಸರು. ಆ ಅಕ್ಷರಗಳಲ್ಲಿ ಪ್ರಾಣ ದೃಷ್ಟಿ ಇಡಬೇಕು. ಕಕಾರಾದಿಮಕಾರದವರೆಗಿರುವ ವರ್ಗೀಯ ಇಪ್ಪತ್ತೈದುವರ್ಣಗಳಿಗೆ ಸ್ಪರ್ಶವೆಂದು ಹೆಸರು. ಅವುಗಳಲ್ಲಿ ಅಸ್ಥಿದೃಷ್ಟಿಯನ್ನು(ಮೂಳೆ) ಮಾಡಬೇಕು. ಅಕಾರಾದಿ ಅಃಕಾರದವರೆಗಿನ ಸ್ವರಗಳಲ್ಲಿ ಮಜ್ಜಾದೃಷ್ಟಿ ಇಡಬೇಕು. ಯರ ಲವಗಳಿಗೆ ಅಂತಸ್ಥಗಳೆಂದು ಹೆಸರು. ಅವುಗಳಲ್ಲಿ ನಾಲ್ಕನೆಯಅಂಗವಾದ ಮಾಂಸ, ರಕ್ತರೂಪಧ್ಯಾನವನ್ನು ಮಾಡಬೇಕು.

ತ್ರಯಂ ತ್ವೇವ ನ ಏತತ್ಪ್ರೋಕ್ತಮ್ ॥

ತದೇತಚ್ಚತುರ್ಥಾಂಗಧ್ಯಾನಂ ಮಾಂಡೂಕೇಯ ಉಕ್ತವಾನ್। ಶಾಕಲ್ಯಸ್ಯ ತು ಮತೇ ನ ಚತುರ್ಥಧ್ಯಾನಂ ಕಿಂತು ಪೂರ್ವೋಕ್ತಾಂಗತ್ರಯಧ್ಯಾನಮೇವೇತ್ಯೇತದ್ದರ್ಶಯತಿ—ನೋಽಸ್ಮಾನ್ ಶಿಷ್ಯಾನ್ಪ್ರತಿ ಶಾಕಲ್ಯೇನ ಪ್ರಾಣ ಉಷ್ಮರೂಪಮಿತ್ಯಾದಿ ತ್ರಯಮೇವೋಕ್ತಂ ನ ತು ಮಾಂಸ-ಮಿತ್ಯಾದಿಕಂ ಚತುರ್ಥಮ್। ಏವಂ ಸತಿ ಶಾಕಲ್ಯಮಾಂಡೂಕೇಯಮತದ್ವಯಾನುಸಾರೇಣ ಧ್ಯಾನೇ ವಿಕಲ್ಪೋ ದ್ರಷ್ಟವ್ಯಃ॥

ಪೂರ್ವೋಕ್ತನಾಲ್ಕನೆಯ ಅಂಗರೂಪವಾದ ಧ್ಯಾನವನ್ನು ಮಾಂಡೂಕೇಯನು ಹೇಳಿರುವನು. ಶಾಕಲ್ಯರ ಮತದಲ್ಲಿ ಈ ಧ್ಯಾನ ಹೇಳಿಲ್ಲ. ಪೂರ್ವೋಕ್ತಗಳಾದ ಮೂರೇಧ್ಯಾನಗಳೆಂದು ವಿವರಿಸುತ್ತಾರೆ. ಶಿಷ್ಯರಾದ ನಮ್ಮನ್ನು ಕುರಿತು ಶಾಕಲ್ಯರು ಪ್ರಾಣವೇ ಊಷ್ಮ ಇತ್ಯಾದಿ ಮೂರೇಧ್ಯಾನವನ್ನು ಹೇಳಿರುತ್ತಾರೆ. ಅಂತಸ್ಥವು ಮಾಂಸರಕ್ತವೆಂಬುದನ್ನು ಅವರು ಹೇಳಿಲ್ಲ. ಇದರಿಂದ ಶಾಕಲ್ಯರ ಮತ್ತು ಮಾಂಡೂಕೇಯರ ಮತವನ್ನನುಸರಿಸಿ ಧ್ಯಾನವು ವಿಕಲ್ಪವೆಂದು ತಿಳಿಯುತ್ತದೆ.

ತಸ್ಯೈತಸ್ಯ ತ್ರಯಸ್ಯಾಸ್ಥ್ನಾಂ ಮಜ್ಞಾಂ ಪರ್ವಣಾಮಿತಿ ತ್ರೀಣೀತಃ ಷಷ್ಟಿ ಶತಾನಿ ತ್ರೀಣೀತಸ್ತಾನಿ ಸಪ್ತವಿಂಶತಿಶತಾನಿ ಭವಂತಿ ಸಪ್ತ ಚ ವೈ ಶತಾನಿ ವಿಂಶತಿಶ್ಚ ಸಂವತ್ಸರಸ್ಯಾಹೋರಾತ್ರಾಃ ಸ ಏಷೋಽಹಃ-ಸಂಮಾನಶ್ಚಕ್ಷುರ್ಮಯಃ ಶ್ರೋತ್ರಮಯಶ್ಛಂದೋಮಯೋ ಮನೋ-ಮಯೋ ವಾಙ್ಮಯ ಆತ್ಮಾ ॥

ತತ್ರ ಶಾಕಲ್ಯಮಾಶ್ರಿತ್ಯ ಧ್ಯಾತವ್ಯಂ ಗುಣಾಂತರಂ ವಿಧತ್ತೇ—ಯಾನ್ಯಸ್ಥೀನಿ ಸ್ಪರ್ಶೇಷು ಧ್ಯೇಯತ್ವೇನೋಕ್ತಾನಿ, ಯೇ ಮಜ್ಜಾನಃ ಸ್ವರೇಷು ಧ್ಯೇಯತ್ವೇನೋಕ್ತಾಃ, ಯಾನಿ ಚ ಪರ್ವಾ-ಣ್ಯೂಷ್ಮಸು ಧ್ಯೇಯತ್ವೇನೋಕ್ತಾನಿ, ಯದ್ಯಪ್ಯೂಷ್ಮಸು ಪ್ರಾಣ ಏವ ಧ್ಯೇಯತ್ವೇನೋಕ್ತೋ ನ ತು ಪರ್ವಾಣಿ ತಥಾಪಿ ತಸ್ಯ ಪ್ರಾಣಸ್ಯ ತೇಷು ಪರ್ವಸು ಸಂಚಾರಾದಭೇದವಿವಕ್ಷಾ ದ್ರಷ್ಟವ್ಯಾ। ಅಸ್ಥ್ನಾಂ ಮಜ್ಞಾಂ ಪರ್ವಣಾಮಿತಿ ಯದುಕ್ತಂ ತದೇವ ತಸ್ಯೈತಸ್ಯ ತ್ರಯಸ್ಯೇತಿ ಸಂಗೃಹ್ಯೋ-ಚ್ಯತೇ। ಅಸ್ಥಿಮಜ್ಜಪರ್ವರೂಪಸ್ಯ ತ್ರಯಸ್ಯ ಶಕಲವಿಶೇಷಾಃ ಪುರುಷಶರೀರಸ್ಯೈತೋ ದಕ್ಷಿಣಪಾರ್ಶ್ವೇ ತ್ರೀಣಿ ಶತಾನಿ ಷಷ್ಟಿಶ್ಚ ಭವಂತಿ। ತಾನಿ ಮಿಲಿತ್ವಾ ಸಪ್ತ ಶತಾನಿ ವಿಂಶತಿಶ್ಚ ಸಂಪದ್ಯಂತೇ। ಸಂವತ್ಸರಸ್ಯಾಪ್ಯಹಾನಿ ರಾತ್ರಯಶ್ಚ ಮಿಲಿತ್ವಾ ವಿಂಶತ್ಯಧಿಕಸಪ್ತಶತಸಂಖ್ಯಯಾ ಗಣ್ಯಂತೇ। ಸಂವತ್ಸರಸ್ಯಾಪ್ಯಹಾನಿ ರಾತ್ರಯಶ್ಚ ಮಿಲಿತ್ವಾ ವಿಂಶತ್ಯಧಿಕಸಪ್ತಶತಸಂಖ್ಯಯಾ ಗಣ್ಯಂತೇ। ತಥಾ ಸತಿ ಸ ಏಷ ಪುರುಷೋಽಹಃಸಂಮಾನಃ ಸಂಖ್ಯಯಾ ಸಂವತ್ಸರಗತಾಹೋರಾತ್ರಪರಿಮಿತಃ। ತಥಾ ಚಕ್ಷುಃ ಶ್ರೋತ್ರಾದಿಭಿರುಪೇತತ್ವಾತ್ತತ್ತನ್ಮಯ ಆತ್ಮಾ। ತಮೇತಮಹಃ ಸಮಾನತ್ವಾದಿಗುಣವಿಶಿಷ್ಟ-ಮಾತ್ಮಾನಂ ಧ್ಯಾಯೇದಿತ್ಯರ್ಥಃ।

ಶಾಕಲ್ಯರ ಮತವನ್ನನುಸರಿಸಿ ಧ್ಯಾನಯೋಗ್ಯವಾದ ಗುಣಾಂತರವನ್ನು ವಿವರಿಸುತ್ತಾರೆ. ಯಾವ ಅಸ್ಥಿಗಳನ್ನು ಸ್ಪರ್ಶಾಕ್ಷರಗಳಲ್ಲಿ ಧ್ಯಾನಿಸಬೇಕೆಂದು ಹೇಳಿದೆಯೋ, ಯಾವಮಜ್ಜೆಯನ್ನು ಸ್ವರಾಕ್ಷರಗಳಲ್ಲಿಯೂ, ಪರ್ವಗಳನ್ನು ಊಷ್ಮಾಕ್ಷರಗಳಲ್ಲಿಯೂ ಧ್ಯಾನಿಸಬೇಕೆಂದಿದೆಯೋ ಆ ಮೂರುಧ್ಯಾನವನ್ನು ಸಂಗ್ರಹವಾಗಿ ಇಲ್ಲಿ ಹೇಳಿದೆ. ಊಷ್ಮಾಕ್ಷರಗಳಲ್ಲಿ ಪ್ರಾಣಧ್ಯಾನ ಹಿಂದೆ ಹೇಳಿದ್ದರೂ ಆ ಪ್ರಾಣವು ಪರ್ವ(ಗಂಟುಗಳು) ಭಾಗಗಳಲ್ಲಿ ಸಂಚರಿಸುವುದರಿಂದ ಅಭೇದವಿವಕ್ಷೆಯಿಂದ ಪರ್ವವೆಂದು ಹೇಳಿದೆ. ಈ ಮೂರು ಅಸ್ಥಿಮಜ್ಜಾಪರ್ವಗಳ ತುಂಡುಗಳು ಪುರುಷಶರೀರದ ದಕ್ಷಿಣ(ಬಲ)ಪಾರ್ಶ್ವದಲ್ಲಿ ಮೂರನೂರಅರವತ್ತು ಇವೆ. ಎಡಪಾರ್ಶ್ವದಲ್ಲಿಯೂ ಮೂರನೂರುಅರವತ್ತು ಇವೆ. ಇವು ಒಟ್ಟಿಗೆ ಏಳುನೂರಇಪ್ಪತ್ತು ಆಗುತ್ತವೆ. ಒಂದು ವರ್ಷದ ಹಗಲೂರಾತ್ರಿಗಳೂ ಸೇರಿ ಏಳನೂರಇಪ್ಪತ್ತು ಆಗುತ್ತವೆ. ಇದರಿಂದ ಪುರುಷನು ಸಂಖ್ಯೆಯಿಂದ ದಿನಸಮಾನನಾಗುತ್ತಾನೆ. ನಯನಾದಿಗಳಿಂದ ಕೂಡುವುದರಿಂದ ಆತ್ಮನು ತತ್ತತ್ಸ್ವರೂಪನೂ (ಚಕ್ಷುರೂಪ ಇತ್ಯಾದಿ) ಆಗುತ್ತಾನೆ. ಹೀಗೆ ಅಹಃಸಮಾನತ್ವಾದಿಗುಣಗಳಿಂದ ಕೂಡಿದ ಆತ್ಮನನ್ನ ಧ್ಯಾನಿಸಬೇಕೆಂದರ್ಥ.

ಸ ಯ ಏವಮೇತಮಹಃಸಂಮಾನಂ ಚಕ್ಷುರ್ಮಯಂ ಶ್ರೋತ್ರಮಯಂ ಛಂದೋಮಯಂ ಮನೋಮಯಂ ವಾಙ್ಮಯಮಾತ್ಮಾನಂ

ವೇದಾಹ್ನಾಂ ಸಾಯುಜ್ಯಂ ಸರೂಪತಾಂ ಸಲೋಕತಾಮಶ್ನುತೇ
ಪುತ್ರೀ ಪಶುಮಾನ್ಭವತಿ ಸರ್ವಮಾಯುರೇತಿ ॥

ಉಕ್ತೋಪಾಸನಸ್ಯ ಫಲಂ ದರ್ಶಯತಿ— ಸ ಬ್ರಹ್ಮಾಹ್ನಾಮಹರಭಿಮಾನಿದೇವತಾನಾಂ ಸಾಯುಜ್ಯಂ ತಾದಾತ್ಮ್ಯಂ ಸರೂಪತಾಂ ಪೃಥಕ್ತ್ವೇ ಸತಿ ಸಮಾನರೂಪತ್ವಂ ಸಲೋಕತಾಂ ಸಮಾನ ಲೋಕವಾಸಿತ್ವಮಶ್ನುತೇ ಪ್ರಾಪ್ನೋತಿ । ಭಾವನಾಯಾಮತ್ಯಂತಮುತ್ಕರ್ಷೇ ಸಾಯುಜ್ಯಂ ಮಧ್ಯ-ಮತ್ವೇ ಸಾರೂಪ್ಯಂ ಮಂದತ್ವೇ ಸಾಲೋಕ್ಯಮಿತಿ ವ್ಯವಸ್ಥಾ ದ್ರಷ್ಟವ್ಯಾ । ತದೇತತ್ಸರ್ವಮಾಮು-ಷ್ಮಿಕಂ ಫಲಂ ಪುತ್ರಿತ್ವಾದಿಕಂ ಚೈಹಿಕಂ ದ್ರಷ್ಟವ್ಯಮ್ ॥

ಪೂರ್ವೋಕ್ತವಾದ ಉಪಾಸನೆಯ ಫಲವನ್ನು ವಿವಸಸುತ್ತಾರೆ. ಯಾರು ಆತ್ಮನನ್ನು ಅಹಃಸಮಾಸನೆಂದೂ, ಚಕ್ಷುರಾದಿಮಯನೆಂದು ತಿಳಿದು ಉಪಾಸನೆಮಾಡುವರೋ ಆವರು ಅಹರಭಿಮಾನಿದೇವತೆಗಳ ಸಾಯುಜ್ಯವನ್ನೂ ಅಂದರೆ ತಾದಾತ್ಮ್ಯವನ್ನೂ, ಸಾರೂಪ್ಯವನ್ನೂ (ಬೇರೆಯಾಗಿದ್ದು ಸಮಾನರೂಪಹೊಂದುವುದು) ಸಾಲೋಕ್ಯವನ್ನೂ (ಸಮಾನ ಲೋಕವಾಸಿತ್ವ) ಹೊಂದುತ್ತಾರೆ. ಧ್ಯಾನವು ಅತಿಶಯಉತ್ಕರ್ಷಹೊಂದಿದ್ದರೆ ತಾದಾತ್ಮ್ಯವೂ, ಮಧ್ಯಮರೀತಿಯಾಗಿದ್ದರೆ ಸಾರೂಪ್ಯವೂ, ಮಂದವಾಗಿದ್ದರೆ ಸಾಲೋಕ್ಯವೂ ಲಭಿಸುವುದೆಂದು ತಿಳಿಯಬೇಕು. ಇದು ಆಮುಷ್ಮಿಕಫಲ. ಪುತ್ರಾದಿಗಳು ಐಹಿಕಫಲವೆಂದು ತಿಳಿಯಬೇಕು.

---

*English Translation*

---

1. Sthavira Sakalya said that breath is the beam; and as the other beams rest on the house-beam, thus the eye, the ear, the mind, the speech, the senses, the body, the whole self rests on this breath.

2. Of that self the breathing is like the sibilents, the bones like the mutes, the marrow like the vowels, and the fourth part, flesh, blood, and the rest like the semivowles,—so said Hrasva Mandukeya.

3. To us it was said to be a triad only.

4. Of that triad, viz., bones, marrow, and joints, there are 360 (parts) on thss side (the right), and 360 on that side (the left). They make 720

together, and 720 are the days and nights of the year. Thus that self which consists of sight, hearing metre, mind, and speech is like unto the days.

5. He who thus knows this self, which consists of sight, hearing, metre mind and speech, as like unto the days, obtains union, likeness, or nearness with the days, has sons and cattle, and lives his full age.

ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ತೃತೀಯಾರಣ್ಯಕೇ
ದ್ವಿತೀಯಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ತೃತೀಯಾರಣ್ಯಕದ
ಎರಡನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು ||



# ಅಥ ತೃತೀಯಾರಣ್ಯಕೇ ದ್ವಿತೀಯಾಧ್ಯಾಯೇ ದ್ವಿತೀಯಃ ಖಂಡಃ

**ಮೂರನೆಯ ಆರಣ್ಯಕದ ಎರಡನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು**



**ಅಥ ಕೌಂಠರವ್ಯಃ ||**

ಉಪಾಸನಾಂತರಂ ಪ್ರತಿಜಾನೀತೇ— ಕೌಂಠರವ್ಯನಾಮಾ ಮಹರ್ಷಿಃ ಕಾಂಚಿದುಪಾಸನಾಂ ವಕ್ತೀತಿ ಶೇಷಃ ||

ಬೇರೊಂದು ಉಪವಾಸನೆಯನ್ನು ಹೇಳಲು ಉಪಕ್ರಮಿಸುತ್ತಾರೆ. ಕೌಂಠರವ್ಯನೆಂಬ ಮಹರ್ಷಿಯು ಒಂದು ಉಪಾಸನೆಯನ್ನು ಹೇಳುತ್ತಾರೆ.

**ತ್ರೀಣಿ ಷಷ್ಟಿ ಶತಾನ್ಯಕ್ಷರಾಣಾಂ ತ್ರೀಣಿ ಷಷ್ಟಿ ಶತಾನ್ಯೂಷ್ಮಣಾಂ ತ್ರೀಣಿ ಷಷ್ಟಿ ಶತಾನಿ ಸಂಧೀನಾಮ್ ॥**

ತಾಮುಪಾಸನಾಮಾಹ— ಅಕಾರಾದಯಃ ಸ್ವರಾ ಅಕ್ಷರಶಬ್ದೇನ ವಿವಕ್ಷಿತಾಃ । ಊಷ್ಮ-ಶಬ್ದೇನ ಶಕಾರಾದಿವಾಚಕೇನ ಸರ್ವಾಣಿ ವ್ಯಂಜನಾನಿ ಕಕಾರಾದೀನ್ಯುಪಲಕ್ಷ್ಯಂತೇ । ಸಂಧಿಶಬ್ದೇನ ಸ್ವರಾಣಾಂ ವ್ಯಂಜನಾನಾಂ ಚ ಪರಸ್ಪರಸಂಯೋಗೋಽಭಿಧೀಯತೇ। ಷಷ್ಟೀತ್ಯೇತದತ್ರ ಪೃಥಕ್ಪದಮ್। ತಥಾ ಸತಿ ಸ್ವರಾಣಾಂ ತ್ರೀಣಿ ಶತಾನಿ ಷಷ್ಟ್ಯಾಧಿಕೇತ್ಯುಕ್ತಂ ಭವತಿ । ಏಕಸ್ಯ ಸಂವತ್ಸರಸ್ಯ ಷಷ್ಟ್ಯುತ್ತರಂ ಶತತ್ರಯಂ ದಿವಸಾಃ, ತೇಷು ದಿವಸೇಷೂಚ್ಚಾರ್ಯಮಾಣ ಸ್ವರಾಸ್ತತ್ಸಂಖ್ಯಯೈವ ಗಣ್ಯಂತೇ । ಏವಂ ವ್ಯಂಜನೇಷು ಸ್ವರವ್ಯಂಜನಸಂಯೋಗೇಷ್ವಪಿ ಯೋಜನೀಯಮ್ । ಅಯಂ ನ್ಯಾಯಃ ಪೂರ್ವಸ್ಯಾಮುಪಾಸನಾಯಾಮಪ್ಯೇಕೈಕಪಾರ್ಶ್ವಗತಾಸ್ಥಿಮಜ್ಜಪರ್ವಸು ದ್ರಷ್ಟವ್ಯಃ । ತಥಾ ಸತಿ ತ್ರೀಣೀತಃ ಷಷ್ಟಿಶತಾನಿ ತ್ರೀಣೀತ ಇತ್ಯೇಷಾ ಸಂಖ್ಯೋಪಪದ್ಯತೇ ॥

ಉಪಾಸನಾಸ್ವರೂಪವನ್ನು ವಿವರಿಸುತ್ತಾರೆ. ಇಲ್ಲಿ ಅಕ್ಷರ ಶಬ್ದದಿಂದ ಅಕಾರಾದಿ ಸ್ವರಗಳನ್ನು ತೆಗೆದುಕೊಳ್ಳಬೇಕು. ಶಕಾರಾದಿವಾಚಕ ಊಷ್ಮಶಬ್ದದಿಂದ ಸಕಲ ಕಕಾರಾದಿ ವ್ಯಂಜನಗಳನ್ನು ತೆಗೆದುಕೊಳ್ಳಬೇಕು. ಈ ಸ್ವರ ಮತ್ತು ವ್ಯಂಜನಗಳ ಸಂಯೋಗಕ್ಕೆ ಸಂಧಿಯೆಂದು ಹೆಸರು. ಷಷ್ಟಿ ಎಂಬುದು ಬೇರೆ ಪದ. ಆಗ ಸ್ವರಗಳು ಮೂರುನೂರ ಅರವತ್ತೆಂದು ತಿಳಿಯಬೇಕು. ಒಂದು ಸಂವತ್ಸರಕ್ಕೂ ಮೂರು ನೂರ ಅರವತ್ತು ದಿವಸಗಳಿವೆ. ಆ ದಿವಸಗಳಲ್ಲಿ ಉಚ್ಚರಿಸುವ ಸ್ವರಗಳೂ ಅಷ್ಟೇ ಸಂಖ್ಯೆಯಲ್ಲಿರುತ್ತವೆಂದು ಅಂಗೀಕರಿಸಿದೆ. ಹೀಗೆಯೇ ವ್ಯಂಜನಗಳಲ್ಲಿಯೂ ಸ್ವರ ವ್ಯಂಜನ ಸಂಯೋಗಗಳಲ್ಲಿಯೂ ತಿಳಿಯಬೇಕು. ಈ ನ್ಯಾಯವು ಹಿಂದೆ ಹೇಳಿದ ಉಪಾಸನೆಯಲ್ಲಿ ಒಂದೊಂದು ಪಾರ್ಶ್ವದಲ್ಲಿರುವ ಅಸ್ಥಿಮಜ್ಜಾಪರ್ವಗಳಲ್ಲಿಯೂ ಇದೆಯೆಂದು ಹೇಳಿದೆ.

**ಯಾನ್ಯಕ್ಷರಾಣ್ಯವೋಚಾಮಾಹಾನಿ ತಾನಿ ಯಾನೂಷ್ಮಣೋಽವೋಚಾಮ ರಾತ್ರಯಸ್ತಾ ಯಾನ್ತ್ಸಂಧೀನವೋಚಾಮಾಹೋರಾತ್ರಾಣಾಂ ತೇ ಸಂಧಯ ಇತ್ಯಧಿದೈವತಮ್ ॥**

ಉಪಾಸ್ಯತ್ವೇನಾಭಿಹಿತೇಷ್ವಕ್ಷರೋಷ್ಮಸಂಧಿಷ್ವಹರಾದಿದೃಷ್ಟಿಂ ವಿಧತ್ತೇ— ಕಾಲಾತ್ಮಾನಮ-ಹೋರಾತ್ರತತ್ಸಂಧಿರೂಪಂ ದೈವತಮಧಿಕೃತ್ಯ ವರ್ತತ ಇತ್ಯಧಿದೈವತಮ್ ।

ಉಪಾಸನಾ ವಿಷಯವಾಗಿ ಹೇಳಿದ ಅಕ್ಷರ, ಊಷ್ಮ ಅವುಗಳ ಸಂಧಿಗಳಲ್ಲಿ ದಿವಸಾದಿ ದೃಷ್ಟಿಯನ್ನು ವಿವರಿಸುತ್ತಾರೆ. ಅಕ್ಷರಗಳೇ ಹಗಲು. ಊಷ್ಮಗಳೇ ರಾತ್ರಿ. ಅವುಗಳ ಸಂಧಿಯೇ ಅಹೋರಾತ್ರ ಸಂಧಿಯೆಂದು ತಿಳಿಯಬೇಕು. ಕಾಲ ರೂಪವಾದ ಅಹೋರಾತ್ರ ತತ್ಸಂಧಿರೂಪ ದೈವತವನ್ನಧಿಕರಿಸುವುದರಿಂದ ಇದು ಅಧಿ ದೈವತವಾಗುತ್ತದೆ.

**ಅಥಾಧ್ಯಾತ್ಮಂ ಯಾನ್ಯಕ್ಷರಾಣ್ಯಧಿದೈವತಮವೋಚಾಮಾಸ್ಥೀನಿ ತಾನ್ಯ-ಧ್ಯಾತ್ಮಂ ಯಾನೂಷ್ಮಣೋಽಧಿದೈವತಮವೋಚಾಮ ಮಜ್ಜಾನ-ಸ್ತೇಽಧ್ಯಾತ್ಮಮ್ ॥**

ದೇವತಾವಯವಾನಾಮಹರಾದೀನಾಂ ದೃಷ್ಟಿರ್ಯಥಾಭಿಹಿತಾ ತಥಾ ಪುರುಷಶರೀರಾವಯವಾನಾಮಸ್ಥ್ಯಾದೀನಾಂ ದೃಷ್ಟಿಮಪಿ ವಿಧತ್ತೇ—ಅಥ ದೇವತಾವಯವಾನಾಮಹರಾದೀನಾಂ ದೃಷ್ಟಿವಿಧಾನಾನಂತರಮಧ್ಯಾತ್ಮಮುಪಾಸಕಶರೀರಾವಯವದೃಷ್ಟಿರಪಿ ವಿಧೀಯತೇ। ತತ್ರ ಸ್ವರೇಷ್ವಸ್ಥಿದೃಷ್ಟಿರ್ವ್ಯಂಜನೇಷು ಮಜ್ಜದೃಷ್ಟಿಶ್ಚ ಕರ್ತವ್ಯಾ॥

ದೇವತಾವಯವವಾದ ಅಹಃಾದಿ ದೃಷ್ಟಿಯನ್ನು ವಿಧಿಸಿದಂತೆ ಪುರುಷಶರೀರಾವಯವಗಳಾದ ಅಸ್ಥ್ಯಾದಿಧ್ಯಾನವನು ವಿವರಿಸುತ್ತಾರೆ. ಅಧಿದೈವತವನ್ನು ಹೇಳಿದಮೇಲೆ ಅಧ್ಯಾತ್ಮ ಅಂದರೆ ಉಪಾಸಕನ ಶರೀರಾವಯವ ದೃಷ್ಟಿಯನ್ನು ಹೇಳುತ್ತಾರೆ ಸ್ವರಗಳಲ್ಲಿ ಅಸ್ಥಿ ದೃಷ್ಟಿಯನ್ನೂ, ವ್ಯಂಜನಗಳಲ್ಲಿ ಮಜ್ಜಾ ದೃಷ್ಟಿಯನ್ನೂ ಮಾಡಬೇಕೆಂದರ್ಥ.

ಏಷ ಹ ವೈ ಸಂಪ್ರತಿ ಪ್ರಾಣೋ ಯನ್ಮಜ್ಜೈತದ್ರೇತೋ ನ ಹ ವಾ ಋತೇ ಪ್ರಾಣಾದ್ರೇತಃ ಸಿಚ್ಯತೇ ಯದ್ವಾ ಋತೇ ಪ್ರಾಣಾದ್ರೇತಃ ಸಿಚ್ಯೇತ ಪೂಯೇನ್ನ ಸಂಭವೇತ್ ॥

ತಾಮೇತಾಂ ಮಜ್ಜದೃಷ್ಟಿಂ ಪ್ರಶಂಸತಿ—ಮಜ್ಜೇತಿ ಯದಸ್ತ್ಯೇಷ ಏವ ಸಂಪ್ರತಿ ಪ್ರಾಣಃ ಸಮೀಚೀನೋ ಮುಖ್ಯಃ ಪ್ರಾಣವಾಯುಃ। ತತ್ಕಥಮಿತ್ಯಾಶಂಕ್ಯ ತದೇವ ಸ್ಪಷ್ಟೀ ಕ್ರಿಯತೇ—ಮಜ್ಜಾಕಾರ್ಯಭೂತಮೇತದ್ರೇತ ಉತ್ಪತ್ಸ್ಯಮಾನಜಂತುಪ್ರಾಣತಾದಾತ್ಮ್ಯಂ ಪ್ರಾಪ್ಯ ಪ್ರಾಣರೂಪೇಣ ವರ್ತತೆ। ಅತ ಉತ್ಪಾದಕೇನ ಪಿತ್ರರ್ತುಕಾಲೇ ಜನಿಷ್ಯಮಾಣಜಂತೋಃ ಪ್ರಾಣಾದೃತೇ ಗರ್ಭಾಶಯೇ ರೇತೋ ನ ಸಿಚ್ಯತೇ ಕಿಂತು ತದೀಯಪ್ರಾಣಸಹಿತಮೇವ ರೇತಃ ಸಿಚ್ಯತೇ। ಯದಿ ಕದಾಚಿದುತ್ಪತ್ಸ್ಯಮಾನಜಂತೋಃ ಪ್ರಾಣಾದೃತೇ ಕೇವಲಂ ರೇತಃ ಸಿಚ್ಯೇತ ತದಾನೀಂ ತದ್ರೇತಃ ಪೂಯೇನ್ನಶ್ಯೇನ್ನ ತು ಪುತ್ರರೂಪೇಣ ಸಂಭವೇತ್। ಅತಃ ಪ್ರಾಣಸಹಿತರೇತಃ ಕಾರಣಭೂತಮಜ್ಜಾಧ್ಯಾನಂ ಪ್ರಶಸ್ತಮಿತ್ಯರ್ಥಃ।

ಮಜ್ಜಾ ಧ್ಯಾನವನ್ನು ಪ್ರಶಂಸಿಸುತ್ತಾರೆ. ಶರೀರದಲ್ಲಿರುವ ಮಜ್ಜೆಯೇ ಮುಖ್ಯವಾದ ಪ್ರಾಣವಾಯುವಾಗಿರುತ್ತದೆ. ಇದು ಹೇಗೆ ? ಅಂದರೆ ಮಜ್ಜಾ ಕಾರ್ಯವಾದ ರೇತಸ್ಸು ಮುಂದೆ ಹುಟ್ಟುವ ಪ್ರಾಣಿಯ ಪ್ರಾಣತಾದಾತ್ಮ್ಯವನ್ನು ಹೊಂದಿ. ಪ್ರಾಣರೂಪದಿಂದ ಇರುತ್ತದೆ. ಉತ್ಪಾದಕನಾದ ತಂದೆಯು ಋತು ಕಾಲದಲ್ಲಿ ಮುಂದೆ ಜನ್ಮ ಹೊಂದುವ ಜೀವಿಯ ಪ್ರಾಣದೊಡನೆ ಗರ್ಭಾಶಯದಲ್ಲಿ ರೇತಸ್ಸನ್ನು ಇಡುತ್ತಾನೆ. ಪ್ರಾಣವಿಲ್ಲದ ರೇತಸ್ಸನ್ನು ಸೇಚನಮಾಡಿದರೆ ಆಗ ಅದು ವ್ಯರ್ಥವಾಗುತ್ತದೆ. ಪುತ್ರ ಸಂಭವವಿಲ್ಲ. ಆದುದರಿಂದ ಪ್ರಾಣಸಹಿತವಾದ ರೇತಸ್ಸಿಗೆ ಕಾರಣ ಭೂತವಾದ ಮಜ್ಜಾ ಧ್ಯಾನವು ಪ್ರಶಸ್ತವಾಗಿದೆಯೆಂದು ತಾತ್ಪರ್ಯ.

ಯಾನ್ತ್ಸಂಧೀನಧಿದೈವತಮವೋಚಾಮ ಪರ್ವಾಣಿ ತಾನ್ಯಧ್ಯಾತ್ಮಮ್ ॥

**ಸ್ವರಾಣಾಂ ವ್ಯಂಜನಾನಾಂ ಚ ಸಂಧಿಷು ಶರೀರಾವಯವಸಂಧಿಧ್ಯಾನಂ ವಿಧತ್ತೇ—**

ಸ್ವರ ಮತ್ತು ವ್ಯಂಜನಗಳ ಸಂಧಿಗಳಲ್ಲಿ ಶರೀರಾವಯವಗಳ ಸಂಧಿಧ್ಯಾನವನ್ನು ವಿಧಿಸುತ್ತಾರೆ. ಅಧಿದೈವತವಾದ ಸಂಧಿಯೇ ಅಧ್ಯಾತ್ಮವಾದ ಪರ್ವಭಾಗಗಳೆಂದು ಧ್ಯಾನಿಸಬೇಕು.

ತಸ್ಯೈತಸ್ಯ ತ್ರಯಸ್ಯಾಸ್ಥ್ನಾಂ ಮಜ್ಜ್ನಾಂ ಪರ್ವಣಾಮಿತಿ ಪಂಚೇತಶ್ಚ ತ್ವಾರಿಂಶಚ್ಚ ಶತಾನಿ ಪಂಚೇತಸ್ತದಶೀತಿಸಹಸ್ರಂ ಭವತ್ಯಶೀತಿಸಹಸ್ರಂ ವಾ ಅರ್ಕಲಿನೋ ಬೃಹತೀರಹರಭಿಸಂಪಾದಯಂತಿ ॥

ಯಥೋಕ್ತಮಸ್ಥ್ಯಾದಿಧ್ಯಾನಂ ಸಂಖ್ಯಾದ್ವಾರೇಣ ಪ್ರಶಂಸತಿ—ಅಸ್ಥಿಮಜ್ಜಪರ್ವಣಾಂ ಯದೇ-ತತ್ತ್ರಯಮುಕ್ತಂ ತಸ್ಯೈತಸ್ಯ ತ್ರಯಸ್ಯ ಗಣನಾಯಾಂ ಕೃತಾಯಾಮಶೀತ್ಯಧಿಕಂ ಸಹಸ್ರಂ ಸಂಪದ್ಯತೇ । ತದ್ಯಥಾಽಸ್ಥಿಮಜ್ಜಪರ್ವಣಾಂ ಪ್ರತ್ಯೇಕ ಷಷ್ಟ್ಯಧಿಕಶತತ್ರಯೇ ಸತಿ ತಾನಿ ತ್ರೀಣಿ ಶತತ್ರಯಾಣಿ ಮಿಲಿತ್ವಾಽಶೀತ್ಯಧಿಕಂ ಶತಂ ಭವತಿ । ತದೇವಮಶೀತ್ಯುತ್ತರಂ ಸಹಸ್ರಮ್। ಏತಚ್ಚ ಶರೀರಸ್ಯ ಪಾರ್ಶ್ವ-ದ್ವಯೇ ವಿಭಜ್ಯ ಯೋಜನೀಯಮ್ । ತಥಾ ಯೋಜನಾಯಾಮಿತೋ ದಕ್ಷಿಣಪಾರ್ಶ್ವೇ ಪಂಚ-ಶತಾನಿ ಚತ್ವಾರಿಂಶಚ್ಚ ಭವಂತಿ । ಇತ ಉತ್ತರಪಾರ್ಶ್ವೇಽಪಿ ಪಂಚಶತಾನಿ ಚತ್ವಾರಿಂಶಚ್ಚ ಭವಂತಿ । ಏವಮಶೀತ್ಯಧಿಕಸಹಸ್ರಸಂಪತ್ತೌ ಸತ್ಯಾಂ ತತ್ಸಂಖ್ಯೋಪೇತಾಸ್ಥ್ಯಾದಿಮತಃ ಪುರುಷಸ್ಯಾದಿತ್ಯರೂಪತ್ವಂ ಸಂಪದ್ಯತೇ । ಅರ್ಕೇ ಲೀಯಂತ ಇತ್ಯರ್ಕಲಿನ ಆದಿತ್ಯಸ್ಯ ರಶ್ಮಯಃ, ತೇ ಚಾಶೀತ್ಯಧಿಕಂ ಸಹಸ್ರಂ ಭವಂತಿ। ಅತಃ ಪುರುಷಸ್ಯ ಸಂಖ್ಯಾಸಾಮ್ಯಾದಾದಿತ್ಯರೂಪತ್ವಮ್। ಆದಿತ್ಯಸ್ಯ ರಶ್ಮಿನಾಂ ಸಹಸ್ರಸಂಖ್ಯಾ ಚಾಥರ್ವಣಿಕೈರಾಮ್ನಾಯತೇ—“ಸಹಸ್ರರಶ್ಮಿಃ ಶತಧಾ ವರ್ತಮಾನಃ ಪ್ರಾಣಃ ಪ್ರಜಾನಾಮುದಯ-ತ್ಯೇಷ ಸೂರ್ಯಃ” ಇತಿ ॥ ತೇನ ಚ ಸಹಸ್ರೇಣಾಶೀತಿರಪ್ಯುಪಲಕ್ಷ್ಯತೇ । ಕಿಂಚೈತಾಃ ಅಸ್ಥ್ಯಾದಿಗತಾಃ ಸಂಖ್ಯಾ ಬೃಹತೀಛಂದಸ್ಕಾ ಋಚಃ ಸಂಪಾದ್ಯ ಮಹಾವ್ರತಾಖ್ಯಮಹಃ ಸರ್ವತಃ ಸಂಪಾದಯಂತಿ । ತಸ್ಮಿಂಶ್ಚಾಹನಿ ಬಾರ್ಹತೀ ತೃಚಾಶೀತಿರ್ವಿದ್ಯತೇ । ತಾಶ್ಚ ಬೃಹತೀಛಂದಸ್ಕಾಃ । ಏವಮತ್ರ ಸಂಪಾದ-ನೀಯಾಃ । ಷಟ್‌ತ್ರಿಂಶದಕ್ಷರಾ ತಾವದೇಕಾ ಬೃಹತೀ । ತಥಾ ಸತಿ ಷಷ್ಟ್ಯುತ್ತರಶತತ್ರಯಸಂಖ್ಯಯಾ ದಶ ಬೃಹತ್ಯಃ ಸಂಪದ್ಯಂತೇ । ತಸ್ಯಾಂ ಚ ಸಂಖ್ಯಾಯಾಂ ತ್ರಿಗುಣೀಕೃತಾಯಾಂ ತ್ರಿಂಶದ್ಬೃಹತ್ಯಃ ಸಂಪದ್ಯಂತೇ। ತದೇವಂ ಬೃಹತೀದ್ವಾರೇಣ ಮಹಾವ್ರತಾಖ್ಯಸ್ಯಾಹ್ನಃ ಸಂಪಾದನಾದ್ಯಥೋಕ್ತಸಂಖ್ಯೋ-ಪೇತಮಸ್ಥ್ಯಾದಿಧ್ಯಾನಂ ಪ್ರಶಸ್ತಮಿತ್ಯರ್ಥಃ ॥

ಪೂರ್ವೋಕ್ತವಾದ ಅಸ್ಥ್ಯಾದಿಧ್ಯಾನವನ್ನು ಸಂಖ್ಯಾ ಮೂಲಕ ಪ್ರಶಂಸೆ ಮಾಡುತ್ತಾರೆ. ಶರೀರದಲ್ಲಿರುವ ಅಸ್ಥಿ ಮಜ್ಜಾ ಪರ್ವಗಳನ್ನು ಎಣಿಸಿದಾಗ ಒಂದು ಸಾವಿರದ ಎಂಬತ್ತು ಆಗುತ್ತವೆ. ಮೂರಾದ ಅಸ್ಥಿಮಜ್ಜಾಪರ್ವಗಳು ಪ್ರತ್ಯೇಕವಾಗಿ ಮೂರು ನೂರ ಅರವತ್ತು ಇರುವಾಗ ಮೂರು ನೂರು ಅಂದರೆ ಒಂಭತ್ತುನೂರು ಆಗುತ್ತವೆ. ಅರವತ್ತು ಮೂರಾವೃತ್ತಿ ಯಾದರೆ ಒಂದು ನೂರ ಎಂಬತ್ತು ಆಗುತ್ತವೆ. ಒಟ್ಟಿಗೆ ಸೇರಿಸಿದರೆ ಒಂದು ಸಾವಿರದ ಎಂಬತ್ತು ಆದವು. ಇವುಗಳನ್ನು ಶರೀರದ ಎಡಬಲಪಾರ್ಶ್ವಗಳಲ್ಲಿ ವಿಭಾಗಿಸಿ ಹೇಳಿದರೆ ಒಂದೊಂದು ಪಾರ್ಶ್ವದಲ್ಲಿ ಐದು ನೂರ ನಲವತ್ತು ಆಗುತ್ತವೆ. ಹೀಗೆ

ಸಾವಿರದ ಎಂಬತ್ತು ಸಂಖ್ಯೆಯಿಂದ ಕೂಡಿದ ಪುರುಷನಿಗೆ ಆದಿತ್ಯರೂಪ ಸಂಪನ್ನವಾಗುತ್ತವೆ. ಅರ್ಕೇ ಲೀಯಂತ ಇತಿ ಅರ್ಕಲಿನಃ ಆದಿತ್ಯನಲ್ಲಿ ಲೀನವಾಗುವವುಗಳು ಅಂದರೆ ಸೂರ್ಯರಶ್ಮಿಗಳು. ಅವೂಕೂಡಾ ಸಾವಿರದ ಎಂಬತ್ತು ಇರುತ್ತವೆ. ಹೀಗೆ ಸಂಖ್ಯಾಸಾಮ್ಯವಿರುವುದರಿಂದ ಪುರುಷನಿಗೆ ಆದಿತ್ಯಸ್ವರೂಪ ಹೇಳಿದೆ. ಆಥರ್ವಣಿಕರು ಸೂರ್ಯರಶ್ಮಿಗಳು ಸಾವಿರದ ಎಂಬತ್ತೆಂದು **ಸಹಸ್ರರಶ್ಮಿಃ ಶತಧಾ ವರ್ತಮಾನಃ ಪ್ರಾಣಃ ಪ್ರಜಾನಾಮುದಯತ್ಯೇಷ ಸೂರ್ಯಃ** ಎಂದು ವಿವರಿಸುತ್ತಾರೆ. ಇಲ್ಲಿ ಸಹಸ್ರವೆಂದರೂ ಎಂಬತ್ತಕ್ಕೆ ಉಪಲಕ್ಷಣವೆಂದು ತಿಳಿಯಬೇಕು. ಈ ಅಸ್ಥ್ಯಾದಿಗಳ ಸಂಖ್ಯೆಯು ಬೃಹತೀ ಛಂದಸ್ಸಿನ ಋಕ್ಕುಗಳನ್ನು ಸಂಪಾದಿಸಿ ಮಹಾವ್ರತವೆಂಬ ದಿವಸವನ್ನು ಸಂಪೂರ್ಣಗೊಳಿಸುತ್ತವೆ. ಆ ಹಗಲಿನಲ್ಲಿ ಬಾರ್ಹತೀ ತೃಚಾಶೀತಿಗಳು ವಿಹಿತವಾಗಿವೆ. ಅವು ಬೃಹತೀ ಛಂದಸ್ಸಿನಿಂದ ಕೂಡಿರುತ್ತವೆ. ಇದನ್ನು ಸಂಪಾದಿಸುವ ರೀತಿ ಹೀಗಿದೆ. ಮೂವತ್ತಾರು ಅಕ್ಷರಗಳ ಒಂದು ಬೃಹತೀ ಛಂದಸ್ಸು ಇರುತ್ತದೆ. ಅದು ಮೂರು ನೂರ ಅರವತ್ತು ಸಂಖ್ಯೆಯಿಂದ ಹತ್ತು ಬೃಹತಿಯಾಗಿ ಪರಿಣಮಿಸುತ್ತದೆ. ಅದನ್ನು ಮೂರರಿಂದ ಗುಣಿಸಿದರೆ ಮೂವತ್ತು ಆಗುತ್ತವೆ. ಆಗ ಸಾವಿರದ ಒಂಬತ್ತು ಸಂಖ್ಯೆಯಾಗುತ್ತದೆ. ಹೀಗೆ ಬೃಹತೀಮೂಲಕ ಮಹಾವ್ರತ ದಿನವನ್ನು ಸಾಂಗಗೊಳಿಸುವುದರಿಂದ ಆ ಸಂಖ್ಯೆಯಿಂದ ಕೂಡಿದ ಅಸ್ಥ್ಯಾದಿಧ್ಯಾನವು ಪ್ರಶಸ್ತವೆಂದು ತಾತ್ಪರ್ಯ.

ಸ ಏಷೋಽಕ್ಷರಸಂಮಾನಶ್ಚಕ್ಷುರ್ಮಯಃ ಶ್ರೋತ್ರಮಯಶ್ಛಂದೋ-
ಮಯೋ ಮನೋಮಯೋ ವಾಙ್ಮಯ ಆತ್ಮಾ ॥

ಅಥಾಧ್ಯಾತ್ಮಿಕಪುರುಷಧ್ಯಾನೇ ಗುಣವಿಶೇಷಾನ್ ವಿಧತ್ತೇ—ಯೋಽಯಮಕ್ಷರೋಪಾಸಕಃ ಪುರುಷಃ ಸ ಏಷೋಽಕ್ಷರೈಃ ಸಂಮೀಯತೇ ಸಮಾನಪರಿಮಾಣಃ ಕ್ರಿಯತ ಇತ್ಯಕ್ಷರಸಂಮಾನಃ । ಸ್ವರೇಷು ವ್ಯಂಜನೇಷು ತತ್ಸಂಧಿಷು ಚ ಯೇಯಮಶೀತ್ಯಧಿಕಸಹಸ್ರಸಂಖ್ಯಾ ಸೇಯಮಸ್ಥಿಷು ಮಜ್ಜಸು ಪರ್ವಸ್ವಪ್ಯಸ್ತಿ ತಸ್ಮಾದಯಮಕ್ಷರೈಃ ಸಂಮಾನಃ ಸಮಾನಪರಿಮಾಣಶ್ಚಕ್ಷುಃ ಶ್ರೋತ್ರಾದಿವ್ಯವಹಾರೋ ಪೇತತ್ವಾಚ್ಚಕ್ಷುರಾದಿಮಯಶ್ಛಂದಸಾಮಧ್ಯಯನಾಚ್ಛಂದೋಮಯಸ್ತಾದೃಶ ಆತ್ಮಾಹಮಿತ್ಯೇವಮು-ಪಾಸೀತ ॥

ಆಧ್ಯಾತ್ಮಿಕಪುರುಷಧ್ಯಾನದಲ್ಲಿ ಗುಣವಿಶೇಷವನ್ನು ವಿವರಿಸುತ್ತಾರೆ. ಈ ಅಕ್ಷರೋಪಾಸಕನು ಅಕ್ಷರಗಳಿಂದ ಸಮಾನವಾದ ಪರಿಮಾಣವುಳ್ಳವನು. ಪೂರ್ವೋಕ್ತರೀತಿಯಿಂದ ಅಸ್ಥಿಮಜ್ಜಾಪರ್ವಗಳ ಸಂಖ್ಯೆಯೂ ಅಕ್ಷರಸಂಖ್ಯೆಯೂ ಸಮಾನವಾದುದರಿಂದ ಅಕ್ಷರಸಂಮಾನನಾಗಿರುತ್ತಾನೆ. ಚಕ್ಷುಃಶ್ರೋತ್ರಾದಿಗಳ ವ್ಯವಹಾರದಿಂದ ಕೂಡಿರುವುದರಿಂದ ಚಕ್ಷುರಾದಿಮಯನು. ಛಂದಸ್ಸನ್ನು ಅಧ್ಯಯನಮಾಡುವುದರಿಂದ ಛಂದೋಮಯನು ಈ ರೀತಿಯಾಗಿರುವ ಆತ್ಮನೇ ನಾನೆಂದು ಧ್ಯಾನಿಸಬೇಕು.

ಸ ಯ ಏವಮೇತಮಕ್ಷರಸಂಮಾನಂ ಚಕ್ಷುರ್ಮಯಂ ಶ್ರೋತ್ರಮಯಂ
ಛಂದೋಮಯಂ ಮನೋಮಯಂ ವಾಙ್ಮಯಮಾತ್ಮಾನಂ ವೇದಾ-
ಕ್ಷರಾಣಾಂ ಸಾಯುಜ್ಯಂ ಸರೂಪತಾಂ ಸಲೋಕತಾಮಶ್ನುತೇ ಪುತ್ರೀ
ಪಶುಮಾನ್ಭವತಿ ಸರ್ವಮಾಯುರೇತಿ ॥

ತದುಪಾಸನಸ್ಯ ಫಲಂ ದರ್ಶಯತಿ—ಪೂರ್ವೋಕ್ತಾಹಃಸಂಪಾನೋಪಾಸ್ತಿಫಲವದ್ವ್ಯಾಖ್ಯೇಯಮ್ ॥ (ಐ. ಆ. ೩ ಅ. ೨ ಖಂ. ೧)

ಪೂರ್ವೋಕ್ತವಾದ ಉಪಾಸನೆಗೆ ಫಲವನ್ನು ವಿವರಿಸುತ್ತಾರೆ. ಹಿಂದಿನಂತೆ (ಐ.ಆ-೩-೨-೧) ವ್ಯಾಖ್ಯಾನ ತಿಳಿಯಬೇಕು.

---

*English Translation*

---

1. Next cumes Kauntharavya :

2. There are 360 syllables (vowels), 360 sibilants (consonants), 360 groups.

3. What we called syllables are the days, what we called sibilants are the nights, what we called groups are the junctions of days and nights. So far with regard to the gods (the days).

4, Now with regard to the body. The syllables which we explained mythologically, are physielogically the bones ; the sibilants which we explained mythologically, are physiologically the marrow.

5. Marrow is the real breath (life), for marrow is seed, and without breath (life) seed is uot sown. Qr when it is sown without breath (life, it will decay, it will not grow.

6. The groups which we explained mythologically, are physiologically the joinis.

7. Of shat triad, viz., bones, marrow, and joints, there are 540 (parts) on thir side (the right), and 540 on that side (the left). They make

1080 together, and 1080 ere the rays of the sum. They make the Brihati vereses and the day (of the Mahavrata).

8. Thus that self whieh consists of sight, hearing, metre, mind, and speech is like unio the syllables.

9. He who knows this self which consists of sight, hearing, metre mind, and speech, as like unto syllables, obtains union, likeness, or nearness with the syllables, has sons and cattle, and lives his full age.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ತೃತೀಯಾರಣ್ಯಕೇ
ದ್ವಿತೀಯಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ತೃತೀಯಾರಣ್ಯಕದ
ಎರಡನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವು



## ಅಥ ತೃತೀಯಾರಣ್ಯಕೇ ದ್ವಿತೀಯಾಧ್ಯಾಯೇ ತೃತೀಯಃ ಖಂಡಃ

ಮೂರನೆಯ ಆರಣ್ಯಕದ ಎರಡನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

---

**ಚತ್ವಾರಃ ಪುರುಷಾ ಇತಿ ಬಾಧ್ವಃ ॥**

ಉಪಾಸನಾಂತರಂ ವಿಧತ್ತೇ—ಬಧ್ವಸ್ಯ ಪುತ್ರೋ ಮಹರ್ಷಿರ್ವಕ್ಷ್ಯಮಾಣಾಶ್ಚತ್ವಾರಃ ಪುರುಷ ಉಪಾಸನೀಯಾ ಇತಿ ಮನ್ಯತೇ ॥

ಬೇರೊಂದು ಉಪಾಸನೆಯನ್ನು ವಿಧಿಸುತ್ತಾರೆ. ಬಧ್ವ ಎಂಬ ಮಹರ್ಷಿಯ ಪುತ್ರರಾದ ಬಾಧ್ವರೆಂಬ ಋಷಿಗಳು ಮುಂದೆ ಹೇಳುವ ನಾಲ್ಕು ಪುರುಷರನ್ನು ಧ್ಯಾನಿಸಬೇಕೆಂದು ಹೇಳುತ್ತಾರೆ.

**ಶರೀರಪುರುಷಶ್ಛಂದಃಪುರುಷೋ ವೇದಪುರುಷೋ ಮಹಾಪುರುಷಃ ||**

**ತಾನ್ ಪುರುಷಾನ್ ನಿರ್ದಿಶತಿ—**

ಆ ಪುರುಷರನ್ನು ತಿಳಿಸುತ್ತಾರೆ. ಶರೀರ ಪುರುಷ, ಛಂದಃಪುರುಷ, ವೇದ ಪುರುಷ, ಮಹಾಪುರುಷ ಎಂದು ನಾಲ್ಕು ಪುರುಷರನ್ನು ತಿಳಿಯಬೇಕು.

**ಶರೀರಪುರುಷ ಇತಿ ಯಮವೋಚಾಮ ಸ ಯ ಏವಾಯಂ ದೈಹಿಕ ಆತ್ಮಾ ತಸ್ಯ ಯೋಽಯಮಶರೀರಃ ಪ್ರಜ್ಞಾತ್ಮಾ ಸ ರಸಃ ||**

**ತತ್ರ ಪ್ರಥಮಂ ಪುರುಷಂ ವಿವೃಣೋತಿ—ಬಾಧ್ವನಾಮಕಾ ವಯಂ ಮಹರ್ಷಯೋ ಯಂ ಧ್ಯಾತವ್ಯಂ ದೇವಂ ಶರೀರಪುರುಷನಾಮ್ನಾ ಕಥಿತವಂತಸ್ತಂ ಸ್ಪಷ್ಟೀಕುರ್ಮ ಇತಿ ಶೇಷಃ । ದೇಹ ಏವ ದೈಹಿಕಃ ಸ ಚಾಹಂ ಮನುಷ್ಯ ಇತಿ ಪ್ರತ್ಯಯವೇದ್ಯತ್ವಾದಾತ್ಮಾ । ತಾದೃಶೋ ಯೋಽಸ್ತ್ಯಯಮೇವ ಸ ಪೂರ್ವೋಕ್ತಃ ಶರೀರಪುರುಷಃ । ತಸ್ಯ ಚ ದೇಹರೂಪಸ್ಯ ಪುರುಷಸ್ಯ ಸ್ವಾಮಿತ್ವೇನಾಂತರ್ವರ್ತಮಾನೋ ಯೋಽಯಮಶರೀರೋ ನಾಮ ಶರೀರರಹಿತಃ ಪ್ರಜ್ಞಾತ್ಮಾ ಚಿದ್ರೂಪಃ ಪುರುಷಃ ಸೋಽಯಂ ರಸಃ ಶರೀರಪುರುಷಸ್ಯ ಸಾರಃ ತದುಭಯಂ ಧ್ಯಾಯೇದಿತಿ ತಾತ್ಪರ್ಯಾರ್ಥಃ ||**

ಮೊದಲನೆಯ ಪುರುಷನನ್ನು ವಿವರಿಸುತ್ತಾರೆ. ಬಾಧ್ವ ಎಂಬ ಹೆಸರುಳ್ಳ ಮಹರ್ಷಿಗಳಾದ ನಾವು ಧ್ಯಾನ ಯೋಗ್ಯರೆಂದು ಹೇಳಿದವರಲ್ಲಿ ಶರೀರ ಪುರುಷನು ಯಾರೆಂದು ಸ್ಪಷ್ಟೀಕರಿಸುತ್ತೇವೆ. ದೈಹಿಕ ಆತ್ಮನೇ ಪೂರ್ವೋಕ್ತನಾದ ಶರೀರ ಪುರುಷನೆಂದು ತಿಳಿಯಬೇಕು. ನಾನು ಮನುಷ್ಯನು ಎಂದು ದೇಹವಿಶಿಷ್ಟನನ್ನಾಗಿ ತಿಳಿಯುವುದರಿಂದ ಅವನೇ ಆತ್ಮನು. ಈ ದೇಹರೂಪ ಪುರುಷನಿಗೆ ಸ್ವಾಮಿರೂಪದಿಂದ ಅಶರೀರನಾಗಿ ಒಳಗೆ ಪ್ರಜ್ಞಾತ್ಮಾ ಅಂದರೆ ಚಿದ್ರೂಪನಾಗಿದ್ದ ಪುರುಷನೇ ರಸವು. ಅಂದರೆ ಶರೀರ ಪುರುಷನ ಸಾರವು. ಹೀಗೆ ಇವೆರಡನ್ನೂ ಧ್ಯಾನಿಸಬೇಕೆಂದರ್ಥ.

**ಛಂದಃ ಪುರುಷ ಇತಿ ಯಮವೋಚಾಮಾಕ್ಷರಸಮಾಮ್ನಾಯ ಏವ ತಸ್ಯೈತಸ್ಯಾಕಾರೋ ರಸಃ ||**

**ದ್ವಿತೀಯಂ ವಿವೃಣೋತಿ— " ಅಗ್ನಿಮೀಳೆ ಪುರೋಹಿತಮ್ " (ಋ-ಸಂ. ಮಂ. ೧- ಸೂ. ೧ ಋ. ೧) ಇತ್ಯತ್ರ ಶ್ರೂಯಮಾಣಾನಾಮಕಾರಗಕಾರಳಕಾರಾದೀನಾಮಕ್ಷರಾಣಾಂ ಸಮಾಮ್ನಾಯಃ ಸಮ್ಯಕ್ಪಾಠೋ ಯೋಽಸ್ತಿ ಸ ಏವ ಛಂದಃ ಪುರುಷಶಬ್ದೇನ ವಿವಕ್ಷಿತಃ ತಸ್ಯೈತಸ್ಯ ಛಂದಃ ಪುರುಷಸ್ಯ ಮಧ್ಯೇ ಸಾರೋಽಯಮಕಾರೋ ರಸ ಇತಿ ವೇದಿತವ್ಯಃ । ತಥಾ ಚ ಪೂರ್ವತ್ರಾಽಽಮ್ನಾತಮ್— " ಅಕಾರೋ ವೈ ಸರ್ವಾ ವಾಕ್ಸೈಷಾ ಸ್ಪರ್ಶೋಷ್ಮಭಿರ್ವ್ಯಜ್ಯಮಾನಾ ಬಹ್ವೀ ನಾನಾರೂಪಾ ಭವತಿ "**

ಎರಡನೆಯ ಛಂದಃ ಪುರುಷನನ್ನು ವರ್ಣಿಸುತ್ತಾರೆ. ಅಗ್ನಿಮೀಳೇ ಪುರೋಹಿತಂ ಎಂಬಲ್ಲಿ ತೋರುವ ಅಕಾರ ಗಕಾರ ನಕಾರಾದಿ ಅಕ್ಷರಗಳ ಸಮ್ಯಕ್ಪಾಠವೇನಿದೆಯೋ ಅದಕ್ಕೆ ಛಂದಃಪುರುಷನೆಂದು ಹೆಸರು. ಈ ಛಂದಃ ಪುರುಷನ

ಮಧ್ಯದಲ್ಲಿ ಸಾರಭೂತವಾದ ಅಕಾರವೇ ರಸವೆಂದು ತಿಳಿಯಬೇಕು. ಅಕಾರೋ ವೈ ಸರ್ವಾವಾಕ್ ಸೈಷಾ ಸ್ಪರ್ಶೋಷ್ಮಭಿರ್ವ್ಯಜ್ಯಮಾನಾ ಬಹ್ವೀ ನಾನಾರೂಪಾ ಭವತಿ ಎಂದು ಹಿಂದೆ ಇದನ್ನು ವಿವರಿಸಿರುತ್ತಾರೆ

## ವೇದಪುರುಷ ಇತಿ ಯಮವೋಚಾಮ ಯೇನ ವೇದಾನ್ವೇದ ಋಗ್ವೇದಂ ಯಜುರ್ವೇದಂ ಸಾಮವೇದಂ ತಸ್ಯೈತಸ್ಯ ಬ್ರಹ್ಮಾ ರಸಃ ॥

ತೃತೀಯಂ ವಿವೃಣೋತಿ—ಲೋಕೇ ಕಶ್ಚಿತ್ಪುಮಾನ್ಯೇನ ಮನಸಾ ಸಾವಧಾನೇನ ವೇದಾಂತ ಜ್ಞಾನಾತಿ "ಅಗ್ನಿಮೀಳೇ" (ಋ. ಸಂ. ಮಂ. ೧ ಸೂ. ೧ ಋ. ೧) ಇತ್ಯಾದಿರಯಮೃಗ್ವೇದಸ್ತೇನ ಹೌತ್ರಂ ಕರ್ತವ್ಯಮ್—"ಇಷೇ ತ್ವಾ" (ತೈ. ಸಂ. ೧-೧-೧) ಇತ್ಯಾದಿರ್ಯಜುರ್ವೇದಸ್ತೇನಾಧ್ವರ್ಯವಂ ಕರ್ತವ್ಯಮ್—"ಅಗ್ನ ಆಯಾಹಿ" ಇತಿ ಸಾಮವೇದಸ್ತೇನೌದ್ಗಾತ್ರಂ ಕರ್ತವ್ಯಮಿತ್ಯೇವಮೃಗ್ವೇದಾದಿಜ್ಞಾಪಕಂ ಮಾನಸಂ ಯದವಧಾನಂ ಸೋಽಯಂ ವೇದಪುರುಷತ್ವೇನೋಚ್ಯತೇ। ತಸ್ಯೈತಸ್ಯ ವೇದಪುರುಷಸ್ಯ ಬ್ರಹ್ಮಾ ರಸೋ ಹಿರಣ್ಯಗರ್ಭೋಪಾಸ್ತ್ಯಾ ತದ್ರೂಪತ್ವಮಭಿಮನ್ಯಮಾನಃ ಪುರುಷಃ ಸಾರಭೂತಃ ॥

ಮೂರನೆಯ ವೇದಪುರುಷನನ್ನು ವಿವರಿಸುತ್ತಾರೆ. ಲೋಕದಲ್ಲಿ ಒಬ್ಬ ಪುರುಷನು ಯಾವ ಮನಸ್ಸಿನಿಂದ ಸಾವಧಾನವಾಗಿ ವೇದವನ್ನು ತಿಳಿಯುತ್ತಾನೋ ಆ ರೀತಿ ಯಾವ ಮಾನಸವಾದ ಅವಧಾನಕ್ಕೆ ವೇದ ಪುರುಷನೆಂದು ಹೆಸರು. ಅದು ವೇದತ್ರಯಕ್ಕೆ ಜ್ಞಾಪಕವಾಗಿರುತ್ತದೆ. ಅದರಿಂದ ಅಗ್ನಿಮೀಳೇ ಇತ್ಯಾದಿ ಋಗ್ವೇದದಿಂದ ಹೋತೃವಿನ ಕಾರ್ಯಗಳನ್ನೂ' ಇಷೇತ್ವಾ ಇತ್ಯಾದಿ ಯಜುರ್ವೇದದಿಂದ ಅಧ್ವರ್ಯು ಮಾಡುವ ಕರ್ತವ್ಯಗಳನ್ನೂ, ಅಗ್ನಆಯಾಹಿ ಇತ್ಯಾದಿ ಸಾಮವೇದದಿಂದ ಉದ್ಗಾತೃವಿನ ಕರ್ತವ್ಯಗಳನ್ನೂ, ತಿಳಿಯುತ್ತಾನೆ. ಈ ವೇದ ಪುರುಷನಿಗೆ ಬ್ರಹ್ಮಾ ಅಂದರೆ ಹಿರಣ್ಯಗರ್ಭನೇ ರಸವು. ಹಿರಣ್ಯಗರ್ಭೋಪಾಸನೆಯಿಂದ ತದ್ರೂಪನನ್ನು ಸಂಧಾನ ಪಡೆದ ಪುರುಷನೇ ಸಾರಭೂತನೆಂದರ್ಥ.

## ತಸ್ಮಾದ್ಬ್ರಹ್ಮಾಣಂ ಬ್ರಹ್ಮಿಷ್ಠಂ ಕುರ್ವೀತ ಯೋ ಯಜ್ಞಸ್ಯೋಲ್ಬಣಂ ಪಶ್ಯೇತ್ ॥

ಅತ್ರ ಪ್ರಸಂಗಾದ್ಧೋತ್ರಧ್ವರ್ಯೂದ್ಗಾತೃವ್ಯತಿರಿಕ್ತಸ್ಯ ಬ್ರಹ್ಮಾಖ್ಯಸ್ಯ ಚತುರ್ಥಸ್ಯರ್ತ್ವಿಜಃ ಕಂಚಿದ್ವಿಶೇಷಂ ವಿಧತ್ತೇ—ಯಸ್ಮಾದ್ವೇದತ್ರಯಾಭಿಜ್ಞಾನರೂಪಸ್ಯ ವೇದಪುರುಷಸ್ಯ ಹಿರಣ್ಯಗರ್ಭೋಪಾಸಕೋ ಬ್ರಹ್ಮಾ ರಸಸ್ತಸ್ಮಾದ್ಬ್ರಹ್ಮನಾಮಸಾಮ್ಯಾದ್ಯಾಗೇಽಪಿ ಬ್ರಹ್ಮಾಣಮೃತ್ವಿಜಂ ಬ್ರಹ್ಮಿಷ್ಠಮತಿಶಯೇನ ವೇದತ್ರಯಗತಂ ಕುರ್ವೀತ। ಬ್ರಹ್ಮಾ ಯಜ್ಞಸ್ಯ ಸಂಬಂಧಿನಮುಲ್ಬಣಂ ತೀವ್ರಗುಣಂ ದೋಷಂ ವಾ ದ್ರಷ್ಟುಂ ಸಮರ್ಥಸ್ತಾದೃಶಂ ಕುರ್ವೀತ ॥

ಪ್ರಸಂಗ ಸಂಗತಿಯಿಂದ ಹೋತೃ, ಅಧ್ವರ್ಯು' ಉದ್ಗಾತೃ ಈ ಮೂವರಿಂದ ಬೇರೆಯಾದ ಬ್ರಹ್ಮಾ ಎಂಬ ನಾಲ್ಕನೇ ಋತ್ವಿಜನ ವಿಶೇಷವನ್ನು ವಿವರಿಸುತ್ತಾರೆ. ವೇದತ್ರಯಾಭಿಜ್ಞಾನರೂಪ ವೇದ ಪುರುಷನಿಗೆ ಹಿರಣ್ಯಗರ್ಭೋಪಾಸಕನಾದ ಬ್ರಹ್ಮನು ರಸವೆಂದು ಹೇಳಿದೆ. ಈ ಬ್ರಹ್ಮನಾಮ ಸಾಮ್ಯದಿಂದ ಯಾಗದಲ್ಲಿಯೂ ಬ್ರಹ್ಮನಾದ ಋತ್ವಿಜನನ್ನು ವೇದ

ತ್ರಯದಲ್ಲಿ ಶ್ರೇಷ್ಠನನ್ನಾಗಿ ತಿಳಿಯಬೇಕು. ಅವನನ್ನೇ ಯಜ್ಞಸಂಬಂಧಿಯಾದ ಗುಣದೋಷಗಳ ಪರಿಶೀಲನ ಮಾಡಲು ನಿಯಮಿಸಬೇಕು. ಆ ಕಾರ್ಯದಲ್ಲಿ ಅವನೇ ಸಮರ್ಥನಾಗಿರುತ್ತಾನೆ.

ಮಹಾಪುರುಷ ಇತಿ ಯಜುರ್ವೋಚಾಮ ಸಂವತ್ಸರ ಏವ ಪ್ರಧ್ವಂಸ-
ಯನ್ನನ್ಯಾನಿ ಭೂತಾನ್ಯೈಕ್ಯಾ ಭಾವಯನ್ನನ್ಯಾನಿ ತಸ್ಯೈತಸ್ಯಾಸಾವಾ-
ದಿತ್ಯೋ ರಸಃ॥

ಚತುರ್ಥಂ ವಿವೃಣೋತಿ— ಯೋಽಯಂ ಸಂವತ್ಸರಃ ಕಲಾತ್ಮಾನ್ಯಾನಿ ಭೂತಾನಿ ಕಾನಿ-ಚಿದ್ಗತಾಯುಷ್ಕಾಣಿ ಪ್ರಾಣಿಶರೀರಾಣ್ಯೈಕ್ಯಾ ಪ್ರಧ್ವಂಸಯನ್ ಸ್ವಸ್ವಕಾರಣೇನ ಸಹೈಕ್ಯಂ ಯಥಾ ಪ್ರತಿಪದ್ಯಂತೇ ತಥಾ ವಿನಾಶಯನ್ಭಾವಯನ್ಪುನರನ್ಯಾನಿ ಕಾನಿಚಿನ್ನೂತನ ಶರೀರಾಣ್ಯುತ್ಪಾದಯ-ನ್ವರ್ತತೇ ॥ ಸೋಽಯಂ ಕಾಲಾತ್ಮಾ ಮಹಾಪುರುಷಶಬ್ದೇನ ವಿವಕ್ಷಿತಃ । ತಸ್ಯೈತಸ್ಯ ಮಹಾ-ಪುರುಷಸ್ಯಾಸೌ ಮಂಡಲೇ ದೃಶ್ಯಮಾನ ಆದಿತ್ಯೋ ರಸಃ ಸಾರಃ । ಯಥಾ ಲೋಕೇ ವೃಕ್ಷಃ ಸ್ವನಿಷ್ಠೇನ ರಸೇನ ಪೂರ್ಣಃ ಶೋಭತ ಏವಮೇತೇ ಶರೀರಪುರುಷಾದಯೋ ಯಥೋಕ್ತೈಃ ರಸೈಃ ಪೂರ್ಣಾಃ ಶೋಭಂತೇ ॥

ನಾಲ್ಕನೆಯ ಮಹಾಪುರುಷನನ್ನು ವರ್ಣಿಸುತ್ತಾರೆ. ಯಾವ ಕಾಲರೂಪವಾದ ಸಂವತ್ಸರವಿದೆಯೋ ಅದೇ ಮಹಾ ಪುರುಷ ಶಬ್ದದಿಂದ ವಿವಕ್ಷಿತವಾಗಿದೆ. ಈ ವರ್ಷ ರೂಪ ಕಾಲನು ಕೆಲವು ಪ್ರಾಣಿಶರೀರಗಳನ್ನು ಗತಾಯುಷ್ಕಗಳನ್ನಾಗಿ ಮಾಡಿ ಆಯಾಯ ಕಾರಣಗಳಲ್ಲಿ ಲೀನವಾಗುವಂತೆ ನಾಶಮಾಡುತ್ತಾನೆ. ಇನ್ನು ಕೆಲವು ಶರೀರಗಳನ್ನು ಹುಟ್ಟುವಂತೆ ಮಾಡುತ್ತಿರುತ್ತಾನೆ. ಈ ಮಹಾಪುರುಷನಿಗೆ ಮಂಡಲದಲ್ಲಿ ವಿರಾಜಿಸುವ ಸೂರ್ಯನೇ ಸಾರವು. ಲೋಕದಲ್ಲಿ ಮರವು ತನ್ನಲ್ಲಿರುವ ರಸದಿಂದ ಹೇಗೆ ಸಂಪೂರ್ಣವಾಗಿ ಶೋಭಿಸುವುದೋ ಅದರಂತೆ ಈ ಶರೀರಪುರುಷಾದಿಗಳು ಆಯಾಯ ರಸಗಳಿಂದ ಪರಿ ಪೂರ್ಣರಾಗಿ ಶೋಭಿಸುತ್ತಾರೆ.

ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ ಯಶ್ಚಾಸಾವಾದಿತ್ಯ ಏಕಮೇತದಿತಿ
ವಿದ್ಯಾತ್ತಸ್ಮಾತ್ಪುರುಷಂ ಪುರುಷಂ ಪ್ರತ್ಯಾದಿತ್ಯೋ ಭವತಿ ॥

ಚತುರಃ ಪುರುಷಾಂಸ್ತದ್ರಸಾಂಶ್ಚ ಧ್ಯೇಯತ್ವೇನಾಭಿಧಾಯಾಪರಂ ಕಂಚಿನ್ಮುಖ್ಯಂ ಗುಣಂ ಧ್ಯೇಯತ್ವೇನ ವಿಧತ್ತೇ— ಶರೀರಪುರುಷಸಾರತ್ವೇನೈವಂ ಪ್ರಜ್ಞಾತ್ಮಾ ಜೀವೋಽಭಿಹಿತೋ ಮಹಾ-ಪುರುಷಸಾರತ್ವೇನ ಯೋಽಯಮಾದಿತ್ಯ ಈಶ್ವರೋಽಭಿಹಿತ ಏತದುಭಯಮಪ್ಯೇಕಮೇವ ವಸ್ತ್ವಿತಿ ವಿದ್ಯಾತ್ಸಾಕ್ಷಾತ್ಕಾರಪರ್ಯಂತಮುಪಾಸೀತ । ಯಸ್ಮಾದುಭಯೋರೇಕತ್ವಂ ವಾಸ್ತವಂ ತಸ್ಮಾಲ್ಲೋ-ಕೇಽಪಿ ತಂ ತಂ ಪುರುಷಂ ಪ್ರತಿ ಸಂಮುಖಃ ಸನ್ನಾದಿತ್ಯೋಽನತಿಷ್ಠತೇ । ತಥಾ ಚ ತೈತ್ತಿರೀಯಾ ಆಮನಂತಿ— "ಅಸಾವಾದಿತ್ಯಃ ಸರ್ವಾಃ ಪ್ರಜಾಃ ಪ್ರತ್ಯಙ್ಙುದೇತಿ । ತಸ್ಮಾತ್ಸರ್ವ ಏವ ಮನ್ಯತೇ ಮಾಂ ಪ್ರತ್ಯುದಗಾದಿತಿ ॥

ನಾಲ್ಕು ಪುರುಷರನ್ನೂ ಮತ್ತು ಅವರ ಸಾರಭೂತ ರಸಗಳನ್ನೂ ಧ್ಯಾನಿಸಬೇಕೆಂದು ಹೇಳಿ ಈಗ ಇನ್ನೊಂದು ಮುಖ್ಯಗುಣವನ್ನು ಧ್ಯಾನಕ್ಕೋಸ್ಕರ ವಿವರಿಸುತ್ತಾರೆ. ಶರೀರ ಪುರುಷಸಾರರೂಪವಾಗಿ ಆದಿತ್ಯರೂಪ ಈಶ್ವರನೆಂದು ಹೇಳಿದೆ ಉಪಾಸಕನು ಪ್ರಜಾತ್ಮನಾದ ಜೀವನೂ ಆದಿತ್ಯನೂ ಒಂದೇ ಎಂದು ಸಾಕ್ಷಾತ್ಕಾರವಾಗುವವರಿಗೆ ಧ್ಯಾನಿಸಬೇಕು. ಇವರ ಏಕತ್ವವು ವಾಸ್ತವಾದುದರಿಂದಲೇ ಲೋಕದಲ್ಲಿ ಆಯಾಯ ಪುರುಷನಿಗೆ ಅಭಿಮುಖವಾಗಿಯೇ ಸೂರ್ಯನಿರುತ್ತಾನೆ. **ಅಸಾವಾದಿತ್ಯಃ ಸರ್ವಾಃ ಪ್ರಜಾಃ ಪ್ರತ್ಯಙ್ಙುದೇತಿ । ತಸ್ಮಾತ್ಸರ್ವ ಏವ ಮನ್ಯತೇ ಮಾಂ ಪ್ರತ್ಯುದಗಾತ್** ಎಂದು ಈ ವಿಷಯ ತೈತ್ತರೀಯರು ಸ್ಪಷ್ಟವಾಗಿ ಹೇಳಿರುತ್ತಾರೆ.

**ತದಪ್ಯೇತದೃಷಿಣೋಕ್ತಮ್ ॥**

**ಆದಿತ್ಯಮಂಡಲೇ ಸ್ವಶರೀರೇ ವಸ್ತ್ವೈಕ್ಯಸಂಪಾದಕಂ ಮಂತ್ರಮುದಾಹರತಿ—**

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ। ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತ-ಸ್ಥುಷಶ್ಚೇತಿ ॥**

ತಮೇತಂ ಮಂತ್ರಂ ಪಠತಿ—ಅನೀಕಶಬ್ದೋ ಮುಖವಾಚೀ ಸೈನ್ಯವಾಚೀ ವಾ । ಯದೇತ-ದಾದಿತ್ಯಮಂಡಲಂ ತದೇತದ್ದೇವಾನಾಂ ಮುಖಮ್ । ಸ ಹಿ ಹೇತುತ್ವಾದ್ದೇವಾನಾಂ ಮಧ್ಯೇ ಮುಖ್ಯ ಇತ್ಯರ್ಥಃ । ಸೈನ್ಯಪಕ್ಷೇ ಬಹುವಿಧರಶ್ಮಿಸಮೂಹರೂಪಮಿತಿ ವ್ಯಾಖ್ಯೇಯಮ್ । ತಚ್ಚ ಮಂಡಲಂ ಚಿತ್ರಂ ಚಾಯನೀಯಂ ಪೂಜನೀಯಮ್ । ಯದ್ವಾ ಸರ್ವದಿಕ್ಷು ರಶ್ಮಿಪ್ರಸಾರಣೇನ ಚಿತ್ರಂ ದೇವಾನಾಂ ಮುಖಮಿತ್ಯರ್ಥಃ । ತದೇವ ಚಕ್ಷುರಿತ್ಯಾದಿನಾ ಪ್ರಪಂಚ್ಯತೇ—ಮಿತ್ರವರುಣಾದೀನಾಂ ಚಕ್ಷುಃ ಸ್ಥಾನೀಯಮಿದಂ ಮಂಡಲಮ್ । ಏತದೀಯೇನ ಹಿ ಪ್ರಕಾಶೇನ ಸರ್ವೇ ದೇವಾಃ ಪಶ್ಯಂತಿ । ತಚ್ಚ ಮಂಡಲಂ ಲೋಕತ್ರಯಮಾಪ್ರಾಃ ಸರ್ವತಃ ಪೂರ್ಣಂ ಸದ್ವರ್ತತೇ। ತನ್ಮಂಡಲಸ್ಥಃ ಸೂರ್ಯೋ ಜಗತೋ ಜಂಗಮಸ್ಯ ತಸ್ಥುಷಃ ಸ್ಥಾವರಸ್ಯಾಪಿ ಪ್ರಾಣಿಜಾತಸ್ಯಾತ್ಮಾ ಪ್ರತ್ಯಕ್ಷಸ್ವರೂಪಮಿತಿ ಮಂತ್ರ-ಸ್ಯಾರ್ಥಃ ॥

ಆದ್ಯತ್ಯಮಂಡಲದಲ್ಲಿಯೂ, ತನ್ನ ಶರೀರದಲ್ಲಿಯೂ ಇರುವ ವಸ್ತುವು ಒಂದೇ ಎಂದು ವಿವರಿಸುವ ಮಂತ್ರವನ್ನು ಉದಾಹರಿಸುತ್ತಾರೆ. **ಚಿತ್ರಂ ದೇವಾನಾಂ** (ಋ-ಸಂ-೧-೧೧೫-೧) ಎಂಬುವೇ ಆ ಮಂತ್ರ. ಅದರ ಅರ್ಥವನ್ನು ವಿವರಿಸುತ್ತಾರೆ. ಅನೀಕ ಶಬ್ದಕ್ಕೆ ಮುಖ ಮತ್ತು ಸೈನ್ಯವೆಂದು ಎರಡರ್ಥ. ಈ ಆದಿತ್ಯಮಂಡಲವೇನಿದೆಯೋ ಅದು ದೇವತೆಗಳ ಮುಖವು. ಅದು ವ್ಯವಹಾರಕ್ಕೆ ಸಾಧನವಾದುದರಿಂದ ದೇವತೆಗಳ ಮಧ್ಯದಲ್ಲಿ ಮುಖ್ಯವೆಂದರ್ಥ. ಸೈನ್ಯಪಕ್ಷದಲ್ಲಿ ನಾನಾವಿಧ ರಶ್ಮಿಗಳ ಸಮೂಹ ರೂಪವೆಂದು ಅರ್ಥವಾಗುತ್ತದೆ. ಆ ಸೂರ್ಯ ಮಂಡಲವು ಚಿತ್ರಂ ಅಂದರೆ ಪೂಜಿಸಲು ಯೋಗ್ಯವಾಗಿದೆ. ಅಥವಾ ಸಕಲ ದಿಕ್ಕುಗಳಲ್ಲಿಯೂ ರಶ್ಮಿ ಪ್ರಸರಣದಿಂದ ದೇವತಾಮುಖವು ಚಿತ್ರವಾಗಿದೆಯೆಂದರ್ಥ. ಚಕ್ಷುರ್ಮಿತ್ರಸ್ಯ ಇತ್ಯಾದಿಗಳಿಂದ ವಿವರಿಸುತ್ತಾರೆ. ಮಿತ್ರವರುಣಾದಿಗಳಿಗೆ ಈ ಮಂಡಲವು ಚಕ್ಷುಃಸ್ಥಾನದಲ್ಲಿದೆ. ಇದರ ಪ್ರಕಾಶದಿಂದಲೇ ಸಕಲ ದೇವತೆಗಳು ನೋಡುತ್ತಾರೆ. ಆ ಮಂಡಲವು ಮೂರುಲೋಕಗಳಲ್ಲಿಯೂ ಪರಿಪೂರ್ಣವಾಗಿರುತ್ತದೆ. ಆ ಮಂಡಲದಲ್ಲಿರುವ ಸೂರ್ಯನು ಸ್ಥಾವರಜಂಗಮಗಳಾದ ಪ್ರಾಣಿಜಾತಕ್ಕೆ ಆತ್ಮ ಅಂದರೆ ಪ್ರತ್ಯಕ್ಷರೂಪವಾಗಿರುತ್ತಾನೆ.

ಏತಾಮನುವಿಧಂ ಸಂಹಿತಾಂ ಸಂಧೀಯಮಾನಾಂ ಮನ್ಯ ಇತಿ ಹ ಸ್ಮಾಹ ಬಾಧ್ವಃ ॥

ಯಥೋಕ್ತಪುರುಷಚತುಷ್ಟಯೋಪಾಸಕಸ್ಯ ಬಾಧ್ವಸ್ಯ ವಚನಮುಪಸಂಹರತಿ—ಶರೀರ ಪುರುಷ ಇತ್ಯಾದ್ಯನುಕ್ರಮೇಣೋಕ್ತಾಂ ವಿಧಾಂ ಪ್ರಕಾರಮನುಸೃತ್ಯೇತ್ಯನುವಿಧಂ ತಥಾ ಸಮ್ಯಕ್ ಚಿತ್ತೇ ಧಾರ್ಯಮಾಣಾಂ ಸಂಹಿತಾಂ ಮನ್ಯೇ ಚಿಂತಯಾಮೀತ್ಯೇವಂ ಬಾಧ್ವೋ ಮಹರ್ಷಿರುಕ್ತವಾನ್ ।

ಪೂರ್ವೋಕ್ತಪುರುಷರ ಉಪಾಸಕನಾದ ಬಾಧ್ವನ ಮಾತನ್ನು ಮುಗಿಸುತ್ತಾರೆ. ಶರೀರ ಪುರುಷ ಇತ್ಯಾದಿ ಕ್ರಮಗಳಿಂದ ಹೇಳಿದ ರೀತಿಯನ್ನನುಸರಿಸಿ ದೃಢಚಿತ್ತದಲ್ಲಿ ಧರಿಸಲ್ಪಡುವ ಸಂಹಿತೆಯನ್ನು ನಾನು ಯಾವಾಗಲೂ ಧ್ಯಾನಿಸುತ್ತೇನೆಂದು ಬಾಧ್ವ ಮಹರ್ಷಿಯು ಹೇಳಿರುತ್ತಾನೆ.

ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇ ಮೀಮಾಂಸಂತ ಏತಮಗ್ನಾವಧ್ವರ್ಯವ ಏತಂ ಮಹಾವ್ರತೇ ಛಂದೋಗಾ ಏತಮಸ್ಯಾಮೇತಂ ದಿವ್ಯೇತಂ ವಾಯಾವೇತಮಾಕಾಶ ಏತಮಪ್ಸ್ವೇತಮೋಷಧೀಷ್ವೇತಂ ವನಸ್ಪತಿಷ್ವೇತಂ ಚಂದ್ರಮಸ್ಯೇತಂ ನಕ್ಷತ್ರೇಷ್ವೇತಂ ಸರ್ವೇಷು ಭೂತೇಷ್ವೇತಮೇವ ಬ್ರಹ್ಮೇತ್ಯಾಚಕ್ಷತೇ ॥

ಅಥಾಧ್ಯಾತ್ಮಮಧಿದೈವಂ ಚ ಯೋಽಯಮೇಕಃ ಪರಮಾತ್ಮಾ ಧ್ಯೇಯತ್ವೇನೋಕ್ತಸ್ತಸ್ಯ ಪ್ರಶಂಸಾರ್ಥಂ ಸರ್ವತ್ರ ಧ್ಯೇಯತಾಂ ದರ್ಶಯತಿ— ಬಹ್ವ್ಯ ಋಚೋ ಯಾಗಪ್ರಯೋಗಾರ್ಥಂ ಯೇಷಾಂ ಹೋತೄಣಾಂ ತೇ ಹೋತಾರೋ ಬಹ್ವೃಚಾಃ । ತೇ ಚ ಯಥೋಕ್ತಮಧ್ಯಾತ್ಮಮಧಿದೈವತಮೇಕಮೇವ ಸಂತಂ ಪರಮಾತ್ಮಾನಂ ಮಹತ್ಯುಕ್ಥೇ ಪ್ರೌಢೇ ಶಸ್ತ್ರೇ ಮೀಮಾಂಸಂತೇ ವಿಚಾರಯಂತಿ ಧ್ಯಾಯಂತೀತ್ಯರ್ಥಃ । ಅಧ್ವರ್ಯವಸ್ತ್ವೇತಂ ಪರಮಾತ್ಮಾನಮಿಷ್ಟಕಾಚಯನೇನ ನಿಷ್ಪಾದಿತೇಽಗ್ನಾವುಪಾಸತೇ । ಛಂದೋಗಾಸ್ತು ಮಹಾವ್ರತಾಖ್ಯೇ ಕರ್ಮಣ್ಯೇತಮುಪಾಸತೇ । ಏವಂ ತತ್ತದ್ವೇದಗತಕರ್ಮಾಂಗೇಷು ತ್ರೈಸ್ತ್ರೈಃ ಪರಮಾತ್ಮನ ಉಪಾಸ್ಯತ್ವಮುಕ್ತಮ್ । ತಥಾ ಯಾಗಾದ್ಬಹಿರ್ಭೂತೇಷು ಪೃಥಿವ್ಯಾದಿಷು ಸರ್ವಭೂತಾಂತೇಷು ಪ್ರತೀಕೇಷ್ವೇತಂ ಪರಮಾತ್ಮಾನಂ ತತ್ತತ್ಫಲಕಾಮಾ ಉಪಾಸತೇ । ವೇದಾಂತಾಭಿಜ್ಞಾಸ್ತ್ವೇತಮೇವ ಚಿದಾತ್ಮಾನಂ ಜಗತ್ಕಾರಣಂ ಬ್ರಹ್ಮೇತ್ಯಾಚಕ್ಷತೇ । ತಸ್ಮಾದಾದಿತ್ಯಮಂಡಲೇ ಶರೀರೇ ಚ ವರ್ತಮಾನಸ್ಯೈಕಸ್ಯ ಪರಮಾತ್ಮನ ಉಪಾಸನಂ ಪ್ರಶಸ್ತಮಿತ್ಯರ್ಥಃ ॥

ಅಧ್ಯಾತ್ಮವೂ ಅಧಿದೈವತವೂ ಆದ ಒಬ್ಬನೇ ಪರಮಾತ್ಮನನ್ನು ಧ್ಯಾನಿಸಬೇಕೆಂದು ಹೇಳಿ ಅದರ ಪ್ರಶಂಸೆಗೋಸ್ಕರ ಎಲ್ಲಾ ಕಡೆಯಲ್ಲಿ ಧ್ಯಾನಿಸಬೇಕೆಂದು ವಿವರಿಸುತ್ತಾರೆ. ಬಹ್ವೃಚರೆಂದರೆ ಹೋತೃಗಳು. ಯಾಗಪ್ರಯೋಗಕ್ಕೋಸ್ಕರ ಬಹಳ ಋಕ್ಕುಗಳುಳ್ಳವರು ಎಂದರ್ಥ. ಅವರು ಅಧ್ಯಾತ್ಮವೂ ಅಧಿದೈವತವೂ ಒಂದೇ ಆಗಿರುವ ಪರಮಾತ್ಮನನ್ನು ಪ್ರೌಢವಾದ ಶಸ್ತ್ರದಲ್ಲಿ ಧ್ಯಾನಿಸುತ್ತಾರೆ. ಅಧ್ವರ್ಯುಗಳು ಈ ಪರಮಾತ್ಮನನ್ನು ಶಾಸ್ತ್ರೋಕ್ತರೀತಿಯಿಂದ ಕೂಡಿದ ಇಟ್ಟಿಗೆಯ ಕುಂಡದಲ್ಲಿರುವ

ಅಗ್ನಿಯಲ್ಲಿ ಉಪಾಸಿಸುತ್ತಾರೆ. ಛಂದೋಗರು ಮಹಾವ್ರತವೆಂಬ ಕರ್ಮದಲ್ಲಿ ಉಪಾಸನೆ ಮಾಡುತ್ತಾರೆ. ಹೀಗೆ ಆಯಾಯ ವೇದಗಳ ಕರ್ಮಾಂಗಗಳಲ್ಲಿ ಪರಮಾತ್ಮನ ಧ್ಯಾನವು ಹೇಳಿದೆ. ಇದೂ ಅಲ್ಲದೆ ಯಾಗ ಕರ್ಮಗಳನ್ನು ಬಿಟ್ಟು ಪೃಥಿವ್ಯಾದಿ ಸಕಲ ಭೂತಾಂತದವರೆಗಿನ ಪ್ರತೀಕಗಳಲ್ಲಿ ಆಯಾಯ ಫಲಕಾಮನೆಯಿಂದ ಆ ಪರಮಾತ್ಮನನ್ನು ಧ್ಯಾನಿಸುತ್ತಾರೆ. ವೇದಾಂತಿಗಳು ಈ ಚಿದಾತ್ಮನನ್ನೇ ಜಗತ್ಕಾರಣನಾದ ಬ್ರಹ್ಮನೆಂದು ಹೇಳುತ್ತಾರೆ. ಆದುದರಿಂದ ಆದಿತ್ಯಮಂಡಲದಲ್ಲಿಯೂ ಶರೀರದಲ್ಲಿಯೂ ಒಬ್ಬನೇ ಆಗಿರುವ ಪರಮಾತ್ಮನ ಉಪಾಸನೆಯು ಪ್ರಶಸ್ತವಾಗಿರುತ್ತದೆಯೆಂದರ್ಥ॥

**ಸ ಏಷ ಸಂವತ್ಸರಸಂಮಾನಶ್ಚಕ್ಷುರ್ಮಯಃ ಶ್ರೋತ್ರಮಯಶ್ಛಂದೋಮಯೋ ಮನೋಮಯೋ ವಾಙ್ಮಯ ಆತ್ಮಾ ॥**

ತಸ್ಯ ಧ್ಯಾತವ್ಯಾನ್ ಕಾಂಶ್ಚಿದನ್ಯಾನ್ ಗುಣಾನ್ವಿಧತ್ತೇ—ಸಂವತ್ಸರನಿಷ್ಪಾದಕೇನಾಽಽದಿತ್ಯೇನ ಸಹೈಕತ್ವೇನ ಚಿಂತ್ಯಮಾನತ್ವಾತ್ಸ ಏಷ ಧ್ಯೇಯಃ ಪುರುಷಃ ಸಂವತ್ಸರರೂಪಕಾಲಾತ್ಮಸದೃಶಃ। ಚಕ್ಷುರ್ಮಯತ್ವಾದಿಕಂ ಪೂರ್ವವತ್, ಫಲಮಪ್ಯಹಃಸಂಮಾನಾಕ್ಷರಸಂಮಾನಯೋರಿವ ಸಂವತ್ಸರಸಂಮಾನೇಽಪ್ಯುನ್ನೇತವ್ಯಮ್ ॥

ಧ್ಯಾನಯೋಗ್ಯವಾದ ಕೆಲವು ಗುಣಗಳನ್ನು ವಿವರಿಸುತ್ತಾರೆ. ಸಂವತ್ಸರಕ್ಕೆ ಕಾರಣನಾದ ಆದಿತ್ಯನೊಡನೆ ಐಕ್ಯವನ್ನು ಹೊಂದಿರುವ ಪುರುಷನನ್ನು ಧ್ಯಾನಿಸಬೇಕೆಂದು ಹಿಂದೆ ಹೇಳಿದೆ. ಆ ಪುರುಷನು ಸಂವತ್ಸರರೂಪಕಾಲಾತ್ಮಸದೃಶನು. ಚಕ್ಷುರ್ಮಯಾದಿರೂಪನೆಂದು ಹಿಂದಿನಂತೆ ತಿಳಿಯಬೇಕು. ಫಲವನ್ನೂ ಹಿಂದೆ ಹೇಳಿದಂತೆ ಊಹಿಸಿ ತಿಳಿಯಬೇಕು.

**ಸ ಯ ಏವಮೇತಂ ಸಂವತ್ಸರಸಂಮಾನಂ ಚಕ್ಷುರ್ಮಯಂ ಶ್ರೋತ್ರಮಯಂ ಛಂದೋಮಯಂ ಮನೋಮಯಂ ವಾಙ್ಮಯಮಾತ್ಮಾನಂ ಪರಸ್ಮೈ ಶಂಸತಿ ॥**

ಅಥ ಪ್ರಸಂಗಾದುಪಾಸಕಸ್ಯ ಪರಕೀಯೇ ಯಾಗೇ ಶಂಸನಮುಪವದಿತುಂ ವದತಿ—ಈದೃಶಮಾತ್ಮಾನಂ ವಿದಿತ್ವೋಪಾಸ್ಯ ಯಃ ಕೋಽಪಿ ಪರಾರ್ಥಂ ಶಂಸತೀತ್ಯೇಷೋಽನುವಾದ ಉತ್ತರಾರ್ಥಃ ॥

ಪ್ರಸಂಗಸಂಗತಿಯಿಂದ ಉಪಾಸಕನು ಇತರಯಾಗದಲ್ಲಿ ಇದನ್ನು ಪ್ರಶಂಸಿದರೆ ಆಗ ದೋಷವನ್ನು ಹೇಳಲು ಉಪಕ್ರಮಿಸುತ್ತಾರೆ. ಪೂರ್ವೋಕ್ತನಾದ ಆತ್ಮನನ್ನು ಚನ್ನಾಗಿ ತಿಳಿದು ಯಾರಾದರೂ ಪರಾರ್ಥಕ್ಕೋಸ್ಕರ ಪ್ರಶಂಸೆಮಾಡುವುದಾದರೆ ಎಂದು ಮುಂದಿನ ಖಂಡದಲ್ಲಿ ಅನುವಾದಕ್ಕೋಸ್ಕರ ಹೇಳಿದೆ. ದೋಷೋದ್ಭಾವನೆಯ ಫಲವನ್ನು ಮುಂದಿನ ಖಂಡದಲ್ಲಿ ವಿವರಿಸುತ್ತಾರೆ.

*English Translation*

---

1. Badhva says, there are four persons (to be meditated on and worshipped).

2. The person of the body, the person of the metres, the person of the Veda, and the Great person.

3. What we call the person ef the body is this corporeal self. Its esseuce is the incorporeal conscious self.

4. What we call the person of the metres is this collection of letters (the Veda). Its essence is the vowel a.

5. What we call the pesson of the Veda is (the miud) by which we know the Vedas, the Rig-veda, Yagur-veda, and Sama-veda. Its essence is Brahman (m).

6. Therefore let onc choose a Brahman-priest who is full of Brahman (the Veda), and is able to see any flaw in the sacrifice.

7. What we eall the Great person is the year, which causas some beings to fall together, and causes others to grow up. Its essence is yonder sun.

8. One should know that the incorporeal conscious self eud yonder sun are both one and the same. Therefore the sun appears to every man singly (and differently).

9. This has also been declared by a Rishi (Kv. I. 115, 1) :—

10. The bright face of the gods arose, the eye of Mitra, Varuna and Agni ; it filled heaven and earth and the sky,—the sun is the self of all that rests and moves.

11. ' This I think to be the regular Samhita as conceived by me, ' thus said Badhva.

12. For the Bahvrikas consider him (the self) in the great hymn (mahad uktha), the Adhvaryus in the sacrificial fire, the Khaudogas in tho Mahavrata cermony. Him they ree iu this earth, in heaven, in the ether, in the water, in hcrbs, in trecs, in the moon, in the stars, in all beings. Him alone thoy call Brahman.

13. That self which consists of sight, hearing, metre, mind, and spaech is like unto the year.

14. He who recites to another that self which consists of sight, hearing, metre, mind, and speech, and is like unto the year.

ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ತೃತೀಯಾರಣ್ಯಕೇ
ದ್ವಿತೀಯಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ತೃತೀಯಾರಣ್ಯಕದ
ಎರಡನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವು ॥



# ಅಥ ತೃತೀಯಾರಣ್ಯಕೇ ದ್ವಿತೀಯಾಧ್ಯಾಯೇ ಚತುರ್ಥಃ ಖಂಡಃ

### ಮೂರನೆಯ ಆರಣ್ಯಕದ ಎರಡನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು

---

**ದುಗ್ಧದೋಹಾ ಅಸ್ಯ ವೇದಾ ಭವಂತಿ ನ ತಸ್ಯಾನೂಕ್ತೇ ಭಾಗೋಽಸ್ತಿ ನ ವೇದ ಸುಕೃತಸ್ಯ ಪಂಥಾನಮಿತಿ ॥**

ಇದಾನೀಮನೂದಿತೇಽರ್ಥೇ ಪ್ರತ್ಯವಾಯಂ ದರ್ಶಯತಿ— ಯಃ ಪರಾರ್ಥಂ ಶಂಸತ್ಯಸ್ಯ ವೇದಾ ಗುರುಮುಖಾದಧೀತಾ ದುಗ್ಧದೋಹಾ ಭವತಿ । ದೋಹಃ ಕ್ಷೀರಂ ತಚ್ಚ ಪೂರ್ವಮೇವ ದುಗ್ಧಂ ನಿಃ ಸಾರಿತಮಿತಃ ಪರಂ ದೋಹನೀಯಂ ಕಿಮಪಿ ನಾಸ್ತಿ । ಅಧೀತಾ ವೇದಾ ನಿಷ್ಫಲಾ ಭವಂತೀತ್ಯರ್ಥಃ । ತತೇವ ಸ್ಪಷ್ಟೀಕ್ರಿಯತೇ— ತಸ್ಯ ಪರಾರ್ಥಂ ಶಂಸನಂ ಕೃತವತಃ ಪುರುಷಸ್ಯಾನೂಕ್ತೇ ಗುರೂಪದೇಶಮನು ಪಠಿತೇ ವೇದೇ ಭಾಗಃ ಸೌಭಾಗ್ಯಂ ನಾಸ್ತಿ । ಅಧ್ಯಯನನಿಮಿತ್ತಂ ಸುಕೃತಂ ನ ನಿಷ್ಪದ್ಯತ ಇತ್ಯರ್ಥಃ । ತಥಾ ಸುಕೃತಸ್ಯ ಪಂಥಾನಂ ಪುಣ್ಯಮಾರ್ಗಂ ನ ವೇದ, ಅರ್ಥಜ್ಞಾನಮಪಿ ನ ಸಂಪದ್ಯತ ಇತ್ಯರ್ಥಃ ॥

ಪರಾರ್ಥವಾಗಿ ಪ್ರಶಂಸಿದರೆ ಎಂದು ಪೂರ್ವಖಂಡದಲ್ಲಿ ಅನುವಾದಮಾಡಿದೆ. ಈಗ ಪ್ರತ್ಯವಾಯವನ್ನು ತೋರಿಸುತ್ತಾರೆ. ಯಾವ ಉಪಾಸಕನು ಪರರಿಗೋಸ್ಕರ ಪ್ರಶಂಸೆಮಾಡುವನೋ ಅವನ ಗುರುಮುಖದಿಂದ ಓದಿದ ವೇದಗಳು ದುಗ್ಧದೋಹಗಳಾಗುತ್ತವೆ. ಹಾಲು ಮೊದಲೇ ಕರೆದುದರಿಂದ ಇನ್ನು ಮುಂದೆ ಕರೆಯಬೇಕಾದರೆ ಹಾಲು ಇರುವುದಿಲ್ಲ. ಓದಿದ ವೇದಗಳು ನಿಷ್ಫಲವಾಗುತ್ತವೆಯೆಂದರ್ಥ. ಪರಾರ್ಥವಾಗಿ ಪ್ರಶಂಸೆಮಾಡಿದ ಪುರುಷನ ವೇದದಲ್ಲಿ ಸೌಭಾಗ್ಯವಿರುವುದಿಲ್ಲ. ಅಂದರೆ ಅಧ್ಯಯನ ನಿಮಿತ್ತವಾದ ಯಾವ ಸುಕೃತವೂ ಉಂಟಾಗುವುದಿಲ್ಲ. ಹಾಗೆಯೇ ಯಾವ ಅರ್ಥಜ್ಞಾನವೂ ಆಗುವುದಿಲ್ಲ.

**ತದಪ್ಯೇತದೃಷಿಣೋಕ್ತಮ್ ॥**

ಉಕ್ತೇಽರ್ಥೇ ಸಂವಾದಕಂ ಮಂತ್ರಮುದಾಹರತಿ—

ಪೂರ್ವೋಕ್ತಾರ್ಥದಲ್ಲಿ ಪ್ರತಿಪಾದಕವಾದ ಒಂದು ಮಂತ್ರವನ್ನು ಉದಾಹರಿಸುತ್ತಾರೆ.

**ಯಸ್ತಿತ್ಯಾಜ ಸಚಿವಿದಂ ಸಖಾಯಂ ನ ತಸ್ಯ ವಾಚ್ಯಪಿ ಭಾಗೋ ಅಸ್ತಿ ॥ ಯದೀಂ ಶೃಣೋತ್ಯಲಕಂ ಶೃಣೋತಿ ನ ಹಿ ಪ್ರವೇದ ಸುಕೃತಸ್ಯ ಪಂಥಾಮಿತಿ ॥**

ತಮೇತಂ ಮಂತ್ರ ಪಠತಿ— ಯೋ ಯಂ ವೇದ ಸೋಽಯಂ ಯಥಾಶಾಸ್ತ್ರಮಧ್ಯೈತ್ಯಾಣಾಂ ಪುರುಷಾಣಾಂ ಸಖಾ ಸ್ವಾರ್ಥಬೋಧೇನೋಪಕಾರಿತವಾನ್ । ನ ಕೇವಲಂ ಸಖಾ ಕಿಂ ತು ಸಚಿವಿದಪಿ । ಸಚಿ—

ವಿದಪಿ । ಸಚಿಶಬ್ದ ಸಖಿವಾಚೀ । ಅತ ಏವ ಶಾಖಾಂತರೇ “ಸಖಿವಿದಮ್” (ತೈ-ಆ-ಪ್ರ-೨-೩-೧೫) ಇತಿ ಪಠಂತಿ । ಯೋ ಮಾಣವಕೋಽಧ್ಯೇತಾ ಸೋಽಪಿ ವೇದಸ್ಯ ಸಖಾ ಸಂಪ್ರದಾಯೋಚ್ಛೇದನಿವಾರ-ಕತ್ವೇನ ವೇದಂ ಪ್ರತ್ಯುಪಕಾರಿತ್ವಾತ್, ತಾದೃಶಮುಪಕಾರಿಣಮಧ್ಯೇತಾರಂ ವೇತ್ತೀತಿ ಸಚಿವಿತ್ । ತಮೇ-ತಮಭಿಜ್ಞಂ ಸಖಾಯಂ ಯಃ ಪುಮಾಂಸ್ತಿತ್ಯಾಜ ಪರಾರ್ಥೇ ವಿನಿಯೋಗೇನ ಪರಿತ್ಯಜತಿ ತಸ್ಯ ಪುರುಷಸ್ಯ ವಾಚ್ಯಪಿ ಭಾಗೋ ನಾಸ್ತಿ ಅಧ್ಯಯನನಿಮಿತ್ತಮಪಿ ಸುಕೃತಂ ನ ವಿದ್ಯತೇ । ಯದೀಂ ಶೃಣೋತಿ ಯದಪಿ ವೇದಾರ್ಥಶ್ರವಣಂ ತದಪ್ಯಲಕಂ ಶೃಣೋತ್ಯಲೀಕಶ್ರವಣಮೇವ । ತತ್ರ ಹೇತುರುಚ್ಯತೇ – ಹಿ ಯಸ್ಮಾ-ತ್ಸುಕೃತಸ್ಯ ಪಂಥಾನಂ ನ ವೇದ ಶ್ರದ್ಧಾರಾಹಿತ್ಯಾದನುಷ್ಠಾನಮಾರ್ಗಂ ನ ಜಾನಾತಿ, ತಸ್ಮಾತ್ತದೀಯಂ ಶ್ರವಣಮಪಿ ನಿಷ್ಫಲಮಿತ್ಯರ್ಥಃ ॥

ಆ ಮಂತ್ರವನ್ನು ವಿವರಿಸುತ್ತಾರೆ. **ಯಸ್ತಿತ್ಯಾಜ ಸಚಿವಿದಂ** (ಋ. ಸಂ. ೧೦-೭೧-೬) ಎಂಬುದೇ ಆ ಮಂತ್ರ. ಮಂತ್ರಾರ್ಥವನ್ನು ವಿವರಿಸುತ್ತಾರೆ. ಯಾವ ವೇದವಿದೆಯೋ ಅದು ಶಾಸ್ತ್ರೋಕ್ತರೀತಿಯಿಂದ ಅಧ್ಯಯನ ಮಾಡುವ ಪುರುಷರಿಗೆ ಸ್ವಾರ್ಥಬೋಧದಮೂಲಕ ಉಪಕಾರಿಯಾದುದರಿಂದ ಮಿತ್ರನಾಗಿರುತ್ತದೆ. ಕೇವಲ ಮಿತ್ರನಲ್ಲ. ಮಿತ್ರನನ್ನು ತಿಳಿದವನೂ ಆಗಿರುತ್ತದೆ. ಸಚಿಯೆಂದರೆ ಸ್ನೇಹಿತ. ಆದುದರಿಂದ ಶಾಖಾಂತರದಲ್ಲಿ **ಸಖಿವಿದಮ್** ಎಂದು ಸ್ಪಷ್ಟವಾಗಿಯೇ ಹೇಳಿದೆ. ಯಾವ ಬ್ರಹ್ಮಚಾರಿಯು ವೇದವನ್ನು ಓದುತ್ತಾನೋ ಅವನುವೇದದ ಮಿತ್ರನು. ಏಕೆಂದರೆ ಸಂಪ್ರದಾಯಚ್ಛೇದಮಾಡದೆ ಅದನ್ನು ರಕ್ಷಿಸಿಕೊಂಡು ಬಂದಿರುತ್ತಾನೆ. ಇಂತಹ ಮಿತ್ರನನ್ನು ವೇದವು ತಿಳಿದಿರುತ್ತದೆ. **ಸಚಿವಿತ್** ಈ ರೀತಿಯಾದ ಮಿತ್ರವೇದವನ್ನು ಪರಾರ್ಥಕ್ಕೋಸ್ಕರ ವಿನಿಯೋಗಿಸಿದರೆ ಆ ಪುರುಷನ ಮಾತಿನಲ್ಲಿ ಅಧ್ಯಯನನಿಮಿತ್ತವಾದ ಸುಕೃತವಿರುವುದಿಲ್ಲ. ವೇದಾರ್ಥಶ್ರವಣಮಾಡಿದರೂ ಅದು ವ್ಯರ್ಥಶ್ರವಣವೇ. ಏಕೆಂದರೆ ಶ್ರದ್ಧೆಯಿಲ್ಲದಿರುವುದರಿಂದ ಅನುಷ್ಠಾನಮಾರ್ಗವನ್ನು ಅವನು ಚನ್ನಾಗಿ ತಿಳಿಯದಿರುವುದರಿಂದ ಅವನ ವೇದಾರ್ಥಶ್ರವಣವು ನಿಷ್ಫಲವೆಂದು ತಾತ್ಪರ್ಯ.

**ನ ತಸ್ಯಾನ್ಯೂಕ್ತೇ ಭಾಗೋಽಸ್ತಿ ನ ವೇದ ಸುಕೃತಸ್ಯ ಪಂಥಾನಮಿತ್ಯೇತ-ತ್ತದುಕ್ತಂ ಭವತಿ ॥**

ತೃತೀಯಚತುರ್ಥಪಾದಯೋರಭಿಪ್ರಾಯಂ ದರ್ಶಯತಿ— ಇತ್ಥಂ ಪರಾರ್ಥಶಂಸನೇ ದೋಷ-ಮಭಿಧಾಯ ತತ್ಪ್ರಸಂಗಾಚ್ಚಯನಾದೀನಿ ತ್ರೀಣಿ ನಿಷೇಧತಿ ॥

ಪೂರ್ವೋಕ್ತಮಂತ್ರದ ಮೂರನೆಯ ಮತ್ತು ನಾಲ್ಕನೆಯಪಾದಗಳ ತಾತ್ಪರ್ಯವನ್ನು ತೋರಿಸುತ್ತಾರೆ.

**ತಸ್ಮಾದೇವಂ ವಿದ್ವಾನ್ನ ಪರಸ್ಮಾ ಅಗ್ನಿಂ ಚಿನುಯಾನ್ನ ಪರಸ್ಮೈ ಮಹಾ-ವ್ರತೇನ ಸ್ತುವೀತ ನ ಪರಸ್ಮಾ ಏತದಹಃ ಶಂಸೇತ್ ॥**

ಯಸ್ಮಾತ್ಪರಾರ್ಥಾನುಷ್ಠಾನೇ ಮಹಾನ್ಪ್ರತ್ಯವಾಯೋಽಸ್ತಿ ತಸ್ಮಾದೇವಂ ವಿದ್ವಾನಧ್ವರ್ಯುಃ ಪರಾರ್ಥಂ ಮಹಾವ್ರತಾಂಗಮಗ್ನಿಚಯನಂ ನ ಕುರ್ಯಾತ್ । ಉದ್ಗಾತಾ ಚ ಮಹಾವ್ರತಾಂಗೇನ ಸಾಮ್ನಾ ಪರಾರ್ಥಂ ನ ಸ್ತುವೀತ । ಹೋತಾಽಪ್ಯೇತದಹರ್ಮಹಾವ್ರತಾಖ್ಯೇನಾಹ್ನೋಪಲಕ್ಷಿತಂ ಶಸ್ತ್ರಂ ಪರಾರ್ಥಂ ನ ಶಂಸೇತ್ ॥

ಪರಾರ್ಥವಾಗಿ ಪ್ರಶಂಸಿಸಿದರೆ ದೋಷವನ್ನು ಹೇಳಿ ಆ ಪ್ರಸಂಗದಿಂದ ಚಯನಾದಿಮೂರು ಕರ್ಮಗಳನ್ನೂ ನಿಷೇಧಿಸುತ್ತಾರೆ. ಪರಾರ್ಥಾನುಷ್ಠಾನದಲ್ಲಿ ಅಧಿಕದೋಷವುಂಟಾಗುವಂತೆ ವಿದ್ವಾಂಸನಾದ ಅಧ್ವರ್ಯುವು ಪರಾರ್ಥವಾಗಿ ಮಹಾವ್ರತಾಂಗವಾದ ಅಗ್ನಿಚಯುವನ್ನೂ ಮಾಡಬಾರದು. ಉದ್ಗಾತೃವೂ ಕೂಡಾ ಮಹಾವ್ರತಾಂಗವಾದ ಸಾಮದಿಂದ ಪರಾರ್ಥವಾಗಿ ಗಾನಸ್ತುತಿಮಾಡಬಾರದು. ಹೋತೃವೂ ಈ ಮಹಾವ್ರತಸಂಬಂಧಿಶಸ್ತ್ರವನ್ನು ಪರಾರ್ಥವಾಗಿ ಪಠಿಸಬಾರದು.

ಕಾಮಂ ಪಿತ್ರೇವಾಽಽಚಾರ್ಯಾಯ ವಾ ಶಂಸೇದಾತ್ಮನ ಏವಾಸ್ಯ ತತ್ಕೃತಂ ಭವತಿ ॥

ಕ್ವಚಿಚ್ಛಂಸನಸ್ಯ ಪ್ರತಿಪ್ರಸವಂ ದರ್ಶಯತಿ-- ಇತ್ಥಂ ಪ್ರಸಂಗಾಚ್ಛಂಸನಸ್ಯ ನಿಧಿನಿಷೇ-ಧಾವುದಾಹೃತೌ । ಅಥಾಲ್ಪಾಯುಷಃ ಪರಮಪುರುಷಾರ್ಥಸಾಧನೋಪಾಯಮುಪದೇಷ್ಟುಮಾಯು-ಷೋಽಲ್ಪತ್ವಜ್ಞಾಪಕಾನಿ ಕಾನಿಚಿದರಿಷ್ಟಾನ್ಯುದಾಹರತಿ ॥

ಕೆಲವು ಸ್ಥಳಗಳಲ್ಲಿ ಪಠಿಸಿದರೂ ಪ್ರತಿಪ್ರಸವನ್ನು ಅಂದರೆ ಧೋಷವಿಲ್ಲವೆಂದು ತೋರಿಸುತ್ತಾರೆ. ಪರರು ಅಂದರೆ ತಂದೆ ಅಥವಾ ಆಚಾರ್ಯರುಇವರಿಗೋಸ್ಕರ ಉಪಾಸಕನು ಪಠಿಸಿದರೆ ಆಗ ಯಾವ ದೋಷವೂ ಬರುವುದಿಲ್ಲ. ಏಕೆಂದರೆ ಆದು ಅವನಿಗೋಸ್ಕರ ಪಠಿಸಿದಂತೆಯೇ ಆಗುತ್ತದೆ.

ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ ಯಶ್ಚಾಸಾವಾದಿತ್ಯ ಏಕಮೇತದಿತ್ಯವೋಚಾಮ ತೌ ಯತ್ರ ವಿಹೀಯೇತೇ ಚಂದ್ರಮಾ ಇವಾಽಽದಿತ್ಯೋ ದೃಶ್ಯತೇ ನ ರಶ್ಮಯಃ ಪ್ರಾದುರ್ಭವಂತಿ ಲೋಹಿನೀ ದ್ಯೌರ್ಭವತಿ ಯಥಾ ಮಂಜಿಷ್ಠಾ ವ್ಯಸ್ತಃ ಪಾಯುಃ ಕಾಕಕುಲಾಯಗಂಧಿಕಮಸ್ಯ ಶಿರೋ ವಾಯತಿ ಸಂಪರೇತೋಽಸ್ಯಾಽಽತ್ಮಾ ನ ಚಿರಮಿವ ಜೀವಿಷ್ಯತೀತಿ ವಿದ್ಯಾತ್ ॥

ಅದಿತ್ಯಮಂಡಲೇ ಸ್ವಶರೀರೇ ಚ ತತ್ತ್ವಮೇಕಮೇವೇತಿ ವಯಂ ಯದವೋಚಾಮ ತದೇಕತ್ವಂ ತಿರೋಧಾಯ ತಾವಾದಿತ್ಯಸ್ವಶರೀರಪುರುಷೌ ಯತ್ರ ವಿಹೀಯೇತೇ ಯದಾ ವಿಮುಕ್ತೌ ಭವತಃ। ವಿಯೋಗಸ್ಯ ಲಿಂಗಮುಚ್ಯತೇ-ಚಂದ್ರವದಾದಿತ್ಯಃ ಶೀತರಶ್ಮಿರ್ಭಾಸತೇ ನ ತು ದೃಷ್ಟಿಪ್ರತಿಘಾತಕರಾ ಉಷ್ಣರಶ್ಮಯಃ ಪ್ರಾದುರ್ಭವಂತಿ ತದಿದಮೇಕಮರಿಷ್ಟಮ್। ತಥಾ ಮಂಜಿಷ್ಠಾಸಾಮ್ಯೇನ ದ್ಯೌರ್ಲೋಹಿತಾ ದೃಶ್ಯತೇ। ತದಿದಂ ದ್ವಿತೀಯಮ್। ಪಾಯುದ್ವಾರಂ ಚಾತ್ಯಂತವಿವೃತಂ ಭವತಿ ನ ತು ಸಂಕೋಚಯಿತುಂ ಶಕ್ಯತೇ, ತದಿದಂ ದ್ವಿತೀಯಮ್ । ಪಾಯುದ್ವಾರಂ ಚಾತ್ಯಂತವಿವೃತಂ ಭವತಿ ನ ತು ಸಂಕೋಚಯಿತುಂ ಶಕ್ಯತೇ ತದಿದಂ ತೃತೀಯಂ। ಕಾಕಸ್ಯ ಕುಲಾಯೋ ನೀಡಂ ತತ್ರ ಯಾದೃಶೋ ಗಂಧಸ್ತಾದೃಶದುರ್ಗಂಧೋಪೇತಮಸ್ಯ ಶಿರೋ ಭವತಿ। ತಚ್ಚ ಶಿರಃ ಸ್ವಕೀಯಂ ದುರ್ಗಂಧಂ ವಾಯತಿ ದೂರದೇಶೇ ಪ್ರಸಾರಯತಿ ಏತಚ್ಚತುರ್ಥಮ್ । ಏತೇಷಾಮನ್ಯತಸ್ಮಿನ್ನು(ಮ ಉ)ತ್ಪನ್ನೇ ಸತ್ಯಸ್ಯ ಪುರುಷಸ್ಯಾಽಽತ್ಮಾ ಜೀವಃ ಸಂಪರೇತೋ ಮೃತೋ ನ ತ್ವಿತಃ ಪರಂ ದೀರ್ಘಕಾಲಂ ಜೀವಿಷ್ಯತೀತಿ ನಿಶ್ಚಿನುಯಾತ್॥

ಪ್ರಸಂಗ ಸಂಗತಿಯಿಂದ ಶಂಸನದ ವಿಧಿನಿಷೇಧಗಳನ್ನು ಹೇಳಿದ್ದಾಯಿತು. ಈಗ ಅಲ್ಪಾಯುಷ್ಯವುಳ್ಳವನಿಗೆ ಪರಮ ಪುರುಷಾರ್ಥೋಪಾಯವನ್ನು ಉಪದೇಶಿಸಲು ಅಲ್ಪಾಯುಸ್ಸಿಗೆ ಜ್ಞಾಪಕಗಳಾದ ಕೆಲವು ಅರಿಷ್ಟಗಳನ್ನು ವಿವರಿಸುತ್ತಾರೆ. ಆದಿತ್ಯ ಮಂಡಲದಲ್ಲಿಯೂ ತನ್ನ ಶರೀರದಲ್ಲಿಯೂ ಇರುವ ತತ್ವವೊಂದೇ ಎಂದು ಹಿಂದೆ ಹೇಳಿದೆ. ಆ ಏಕತ್ವವನ್ನು ಮರೆಮಾಚಿ ಆ ಇಬ್ಬರು ಎರಡು ತತ್ವಗಳು ಯಾವಾಗ ಭಿನ್ನಭಿನ್ನರಾಗುತ್ತಾರೋ ಆಗ ಅದನ್ನು ತಿಳಿಸಲು ಕೆಲವು ಅಪಶಕುನಗಳಾಗುತ್ತವೆ. ಆ ಅರಿಷ್ಟಗಳನ್ನು ಕ್ರಮವಾಗಿ ವಿವರಿಸುತ್ತಾರೆ. ಸೂರ್ಯನು ಚಂದ್ರನಂತೆ ಅಂದರೆ ತಂಪಾದ ಕಿರಣವುಳ್ಳವನಾಗಿ ತೋರುವುದು. ಅವನ ಉಷ್ಣರಶ್ಮಿಗಳು ಕಣ್ಣುಕುಕ್ಕದೇ ಇರುವುದು. ಇದು ಒಂದು ಅರಿಷ್ಟ. ಗುಲಗಂಜಿಯಂತೆ ಆಕಾಶವು ಕೆಂಪಾಗಿ ತೋರುವುದು. ಎರಡನೆಯ ಅರಿಷ್ಟ. ಗುದಸ್ಥಾನದ ದ್ವಾರವು ಅತಿಯಾಗಿ ಬಿಡಿಸಿದ್ದು ಮುಚ್ಚಲು ಬಾರದಿರುವುದು ಮೂರನೆಯ ಅರಿಷ್ಟ. ಕಾಗೆಯ ಗೂಡಿನವಾಸನೆಯಂತೆ ಮರಣಹೊಂದುವವನ ತಲೆಯ ವಾಸನೆ ಇರುವುದು. ಆ ತಲೆಯ ಕೆಟ್ಟ ವಾಸನೆ ದೂರ ಪ್ರಸರಿಸುವುದು ನಾಲ್ಕನೆಯ ಅರಿಷ್ಟ. ಇವುಗಳಲ್ಲಿ ಯಾವ ಅರಿಷ್ಟ ಉತ್ಪನ್ನವಾದರೂ ಆ ಪುರುಷನ ಜೀವವು ಮರಣ ಹೊಂದುತ್ತದೆಂದೂ ಅವನು ದೀರ್ಘಕಾಲ ಬದುಕುವುದಿಲ್ಲವೆಂದೂ ತಿಳಿಯಬೇಕು.

**ಸ ಯತ್ಕರಣೀಯಂ ಮನ್ಯೇತ ತತ್ಕುರ್ವೀತಪ್ತ ಯದಂತಿ ಯಚ್ಚ ದೂರಕ ಇತಿ ಸಪ್ತ ಜಪೇದಾದಿತ್ಪ್ರತ್ನಸ್ಯ ರೇತಸ ಇತ್ಯೇಕಾ ಯತ್ರ ಬ್ರಹ್ಮಾ ಪವಮಾನೇತಿ ಷಲುದ್ವಯಂ ತಮಸಸ್ಪರೀತ್ಯೇಕಾ ||**

**ಅಸ್ತ್ವೇವಂ ನಿಶ್ಚಯಃ ಕಿಂ ತತ ಇತ್ಯಾಶಂಕ್ಯಾಽಽಹ–ಅರಿಷ್ಟದರ್ಶನೇನ ಪ್ರತ್ಯಾಸನ್ನಂ ಮರಣಂ ನಿಶ್ಚಿತ್ಯಾವಸ್ಥಿತಃ ಸ ಪುಮಾಲ್ಲೌಕಿಕಂ ವೈದಿಕಂ ವಾ ಕರ್ತವ್ಯಶೇಷಂ ಯಸ್ಮಿನ್ ಧಾರಯತಿ ತದಾನೀಂ ತತ್ಸರ್ವಂ ಸಹಸಾ ಕುರ್ವೀತ। ತಾವದ್ವಿಲಂಬಸಿದ್ಧ್ಯರ್ಥಂ ಯದಂತೀತ್ಯಾದಿಕಾ ವಿಹಿತಾ ಋಚಸ್ತ-ತ್ತತ್ಸಂಖ್ಯಾಕಾಃ ಸರ್ವಾ ಜಪೇತ್ ||**

ಅರಿಷ್ಟದಿಂದ ಮರಣ ನಿಶ್ಚಯವಾದರೆ ಮುಂದೇನು ಮಾಡಬೇಕೆಂದು ವಿವರಿಸುತ್ತಾರೆ. ಅರಿಷ್ಟದರ್ಶನದಿಂದ ಮರಣ ಸನ್ನಿಹಿತವಾಗಿದೆಯೆಂದು ನಿಶ್ಚಯ ಹೊಂದಿದ ಪುರುಷನು ಲೌಕಿಕ ಅಥವಾ ವೈದಿಕ ಕಾರ್ಯಶೇಷಗಳನ್ನು ಏನೇನನ್ನು ಮಾಡ ಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿರುತ್ತಾನೋ ಅವೆಲ್ಲವನ್ನೂ ಜಾಗ್ರತೆಯಾಗಿ ಮಾಡಬೇಕು. ಅಲ್ಲಿಯವರೆಗೆ ಜೀವಿಸಿರಲು **ಯದಂತಿಯಚ್ಚ** (ಋ–ಸಂ–೯–೬೨–೨೧), **ಆದಿತ್ಪ್ರತ್ನಸ್ಯ ರೇತಸಃ** (ಋ–ಸಂ–೮–೬–೩೦), **ಯತ್ರಬ್ರಹ್ಮಾಪವಮಾನಃ** (ಋ–ಸಂ–೯–೧೧೩–೬) **ಉದ್ವಯಂತಮಸಸ್ಪರಿ** (ಋ–ಸಂ–೧–೫೦–೧೦) ಎಂಬ ಋಕ್ಕುಗಳನ್ನು ಜಪಿಸಬೇಕು.

**ಅಥಾಪಿ ಯತ್ರ ಚ್ಛಿದ್ರ ಇವಾಽಽದಿತ್ಯೋ ದೃಶ್ಯತೇ ರಥನಾಬಿರಿವಾಭಿ-ಧ್ಯಾಯೇತ ಚ್ಛಿದ್ರಾಂ ವಾ ಛಾಯಾಂ ಪಶ್ಯೇತ್ತದಪ್ಯೇವಮೇವ ವಿದ್ಯಾತ್||**

**ಅರಿಷ್ಟಾಂತರಂ ದರ್ಶಯತಿ— ಅಥಾಪಿ ಪುನರಪ್ಯನ್ಯದರಿಷ್ಟಮುದಾಹ್ರಿಯತ ಇತಿ ಶೇಷಃ। ಯತ್ರ ಯದಾಽಽದಿತ್ಯಶ್ಛಿದ್ರೋಪೇತ ಇವ ದೃಶ್ಯತೇ ಯಥಾ ರಥಚಕ್ರಸ್ಯ ನಾಭಿಃ ಸಚ್ಛಿದ್ರೋ ಭವತಿ ತದ್ವದಾದಿತ್ಯಸ್ಯ ಮಂಡಲಂ ಸಚ್ಛಿದ್ರಂ ಪ್ರತೀಯೇತ। ಯದ್ವಾ ಸ್ವದೇಹಚ್ಛಾಯಾಂ ಸಚ್ಛಿದ್ರಾಂ**



**ಪಶ್ಯೇತ್ । ತದಪಿ ತದಾನೀಮಪ್ಯೇವಮೇವ ಸಂಪರೇತೋಽಸ್ಯಾಽಽತ್ಮಾ" ಇತ್ಯಾರಭ್ಯ "ಉದ್ವಯಂ ತಮಸಸ್ಪರೀತ್ಯೇಕಾ" ಇತ್ಯಂತೇನ ಗ್ರಂಥೇನೋಕ್ತಪ್ರಕಾರಮೇವ ವಿದ್ಯಾತ್ ॥**

ಇತರ ಅರಿಷ್ಟಗಳನ್ನು ತೋರಿಸುತ್ತಾರೆ. ಯಾವಾಗ ಸೂರ್ಯಮಂಡಲವು ರಥದಚಕ್ರದಂತೆ ಛಿದ್ರಛಿದ್ರವಾಗಿ ತೋರಿದರೆ, ಮತ್ತು ತನ್ನ ಶರೀರದ ನೆರಳೂ ಹಾಗೆಯೇ ಛಿದ್ರಛಿದ್ರವಾಗಿ ತೋರಿದರೆ ಮರಣಸನ್ನಿಹಿತವಾಗಿದೆಯೆಂದು ತಿಳಿಯಬೇಕು. **ಸಂಪರೇತೋಽ ಸ್ಯಾತ್ಮಾ** ಎಂದು ಆರಂಭಿಸಿ **ಉದ್ವಯಂ ತಮಸಸ್ಪರೀತ್ಯೇಕಾ** ಎಂಬ ಗ್ರಂಥದವರೆಗೆ ಹೇಳಿದ ವಿಷಯವನ್ನು ಪ್ರತಿಯೊಂದು ಅರಿಷ್ಟದ ಕೊನೆಯಲ್ಲಿ ತಿಳಿಯಬೇಕು.

**ಅಥಾಪ್ಯಾದರ್ಶೇ ವೋದಕೇ ವಾ ಜಿಹ್ಮಶಿರಸಂ ವಾಽಶಿರಸಂ ವಾಽಽತ್ಮಾನಂ ಪಶ್ಯೇದ್ವಿಪರ್ಯಸ್ತೇ ವಾ ಕನ್ಯಾಕೇ ಜಿಹ್ಮೇನ ವಾ ದೃಶ್ಯೇಯಾತಾಂ ತದಪ್ಯೇವಮೇವ ವಿದ್ಯಾತ್ ॥**

ಅರಿಷ್ಟಾಂತರಂ ದರ್ಶಯತಿ— ಆದರ್ಶೇ ದರ್ಪಣಸ್ತೇನೋದಕೇನ ಚ ಪ್ರತಿಬಿಂಬಯೋಗ್ಯಾನಿ ಸ್ವಚ್ಛಾನಿ ಖಡ್ಗಾದಿದ್ರವ್ಯಾಣ್ಯುಪಲಕ್ಷ್ಯಂತೇ । ತೇಷು ದ್ರವ್ಯೇಷು ಸ್ವಕೀಯಂ ದೇಹಪ್ರತಿಬಿಂಬಂ ಜಿಹ್ಮಶಿರಸಂ ಕುಟಿಲಶಿರಸ್ಕಂ ಪಶ್ಯೇತ್ । ಯದ್ವಾ ಶಿರೋರಹಿತಂ ಪಶ್ಯೇತ್ । ಅಥವಾ ಕನ್ಯಾಕೇ ಕನೀನಿಕೇ ಪ್ರತಿಬಿಂಬಸ್ಯ ಚಕ್ಷುರ್ಗತೇ ಶುಕ್ಲ ಕೃಷ್ಣಮಂಡಲೇ ವಿಪರ್ಯಸ್ತೇ ವಿದ್ಯಮಾನಸಂನಿವೇಶಾದ್ವಿಪರೀತೇ ಶುಕ್ಲಮಂಡಲಮಧ್ಯೇ ಕೃಷ್ಣಮಂಡಲಮಿತ್ಯಸೌ ವಿದ್ಯಮಾನಸಂನಿವೇಶಸ್ತದ್ವಿಪರ್ಯಯಃ । ಕೃಷ್ಣಮಂಡಲಮಧ್ಯೇ ಶುಕ್ಲಮಂಡಲಮ್ । ಯದ್ವಾ ಯಥಾವಸ್ಥಿತಮಾರ್ಜವಂ ಪರಿತ್ಯಜ್ಯ ಜಿಹ್ಮೇನ ವಕ್ರತ್ವೇನ ಕನೀನಿಕೇ ದೃಶ್ಯೇಯಾತಾಮ್ । ತಾನ್ಯೇತಾನಿ ಚತ್ವಾರ್ಯರಿಷ್ಟಾನಿ ॥

ಪ್ರತಿಬಿಂಬವನ್ನು ತೋರಿಸುವ ಸಾಮರ್ಥ್ಯವುಳ್ಳ ಕನ್ನಡಿ, ಸ್ವಚ್ಛವಾದ ಖಡ್ಗಾದಿದ್ರವ್ಯಗಳಲ್ಲಿ ತನ್ನ ಶರೀರದ ಪ್ರತಿಬಿಂಬವನ್ನು ನೋಡುವಾಗ ತಲೆಮಾತ್ರ ಡೊಂಕಾಗಿ ತೋರುವುದು, ಅಥವಾ ತಲೆಮಾತ್ರ ತೋರದಿರುವುದು. ಮತ್ತು ಪ್ರತಿಬಿಂಬದಲ್ಲಿರುವ ಕಣ್ಣಿನಲ್ಲಿ ಕಪ್ಪು ಬಿಳಿಪು ಬಣ್ಣ ವ್ಯತ್ಯಾಸವಾಗಿ ತೋರುವುದು ಅಂದರೆ ಮಧ್ಯದಲ್ಲಿ ಬೆಳ್ಳಗೂ ಬದಿಯಲ್ಲಿ ಕಪ್ಪೂ ತೋರುವುದು. ಹೀಗೆ ನಾಲ್ಕು ಅರಿಷ್ಟಗಳಲ್ಲಿ ಮರಣಸೂಚಕಗಳಾಗಿವೆ.

**ಅಥಾಪಿಧಾಯಾಕ್ಷಿಣೀ ಉಪೇಕ್ಷೇತ ತದ್ಯಥಾ ಬಟರಕಾಣಿ ಸಂಪತಂತೀವ ದೃಶ್ಯಂತೇ ತಾನಿ ಯದಾ ನ ಪಶ್ಯೇತ್ತದಪ್ಯೇವಮೇವ ವಿದ್ಯಾತ್॥**

**ಪುನರಪ್ಯರಿಷ್ಟಾಂತರಂ ದರ್ಶಯತಿ— ಲೋಕೇ ಸರ್ವೋಽಪಿ ಪುರುಷಶ್ಚಕ್ಷುಷೀ ನಿಮೀಲ್ಯ ನೇತ್ರಸ್ಯಾಪಾಂಗಮುಪಷ್ಟಭ್ಯೋಪೇಕ್ಷೇತ, ನೇತ್ರಸಮೀಪಂ ಪಶ್ಯೇತ್ ತತ್ತದಾನೀಮನುಭವಶೋ ಯಥಾ ಭವತಿ ತಥೋದಾಹ್ರಿಯತೇ— ಬಡರಕಾಣಿ ವರ್ತುಲಾನಿ ಸೂಕ್ಷ್ಮಾಣಿ ಶುಕ್ಲವರ್ಣಾನಿ ಕೇಶೋಂ-**

ಡೂಕಶಬ್ದಾಭಿಧೇಯಾನಿ ಸಂಪತಂತೀವ ಸಮ್ಯಗ್‌ನೇತ್ರಾನ್ನಿರ್ಗಚ್ಛಂತೀವ ಸರ್ವೈರ್ದೃಶ್ಯಂತೇ । ತಾನಿ ಬಟರಕಾಣಿ ಯದಾ ನ ಪಶ್ಯೇತ್ತದಾನೀಮುಪ್ಯರಿಷ್ಟಂ ವಿಜ್ಞೇಯಮ್ ॥

ಕಣ್ಣನ್ನು ಮುಚ್ಚಿಕೊಂಡು ಕಡೆಗಣ್ಣಿನ ಕಡೆ ನೋಡುತ್ತಿರುವಾಗ ವರ್ತುಲಾಕಾರವಾದ ಬೆಳ್ಳಗಾದ ಕೇಶೊಂಡಕ ವೆಂಬ ಹೆಸರುಳ್ಳ ಬಿಂದುಗಳು ಕಣ್ಣಿನಿಂದ ಕೆಳಗೆ ಸುರಿಯುವಂತೆ ತೋರಿದರೆ ಅದೂ ಹಿಂದಿನಂತೆ ಅರಿಷ್ಟವೆಂದು ತಿಳಿಯಬೇಕು

ಅಥಾಪ್ಯಪಿಧಾಯ ಕರ್ಣಾ ಉಪಶೃಣೆಯಾತ್ಸ ಏಷೋಽಗ್ನೇರಿವ ಪ್ರಜ್ವ-ಲತೋ ರಥಸ್ಯೇವೋಪಬ್ದಿಸ್ತಂ ಯದಾ ನ ಶೃಣುಯಾತ್ತದಪ್ಯೇವ-ಮೇವ ವಿದ್ಯಾತ್ ॥

ಅರಿಷ್ಟಾಂತರಂ ದರ್ಶಯತಿ–ಸರ್ವೋಽಪಿ ಜನಃ ಸ್ವಕರ್ಣಾವುಭಾವಪ್ಯಂಗುಲಿಭ್ಯಾಂ ದೃಢಮಪಿ-ಧಾಯ ದೇಹಮಧ್ಯೇ ಕಿಂಚಿಚ್ಛಬ್ದಂ ಶೃಣುಯಾತ್ತಸ್ಯ ದೃಷ್ಟಾಂತದ್ವಯಮುಚ್ಯತೇ । ಪ್ರಕ-ರ್ಷೇಣ ಜ್ವಲತೋ ವಹ್ನೇಃ ಪ್ರೌಢಸ್ಯ ಶಬ್ದೋ ಯಾದೃಶೋ ಭವತಿ, ರಥಸ್ಯ ತ್ವರಯಾ ಗಚ್ಛತ ಉಪಬ್ದಿಘೋರ್ಷೋ ಯಾದೃಶೋ ಭವತಿ ಸ ಏಷ ದೇಹಮಧ್ಯೇ ಶ್ರೂಯಮಾಣಃ ಶಬ್ದಸ್ತಾ-ದೃಶಃ । ತಂ ಯದಾ ನ ಶೃಣುಯಾತ್ತದಾನೀಮರಿಷ್ಟಂ ವಿದ್ಯಾತ್ ॥

ಎಲ್ಲರೂ ತಮ್ಮ ಕಿವಿಗಳನ್ನು ಬೆರಳುಗಳಿಂದ ಮುಚ್ಚಿಕೊಂಡಾಗ ದೇಹಮಧ್ಯದಿಂದ ಶಬ್ದವನ್ನು ಕೇಳಿದರೆ ಅಂದರೆ ಆ ಶಬ್ದವು ಧಗಧಗಲುರಿಯುವ ಬೆಂಕಿಯ ಶಬ್ದದಂತಾಗಲೀ, ಶೀಘ್ರವಾಗಿ ಹೋಗುವ ರಥದ ಶಬ್ದದಂತಾಗಲೀ ಇರುವಂತೆ ಕೇಳಿದರೆ ಆಗ ಅದನ್ನು ಅರಿಷ್ಟವೆಂದು ತಿಳಿಯಬೇಕು.

ಅಥಾಪಿ ಯತ್ರ ನೀಲ ಇವಾಗ್ನಿರ್ದೃಶ್ಯತೇ ಯಥಾ ಮಯೂರಗ್ರೀವಾ ಮೇಘೇ ವಾ ವಿದ್ಯುತಂ ಪಶ್ಯೇನ್ಮೇಘೇ ವಾ ವಿದ್ಯುತಂ ನ ಪಶ್ಯೇ-ನ್ಮಹಾಮೇಘೇ ವಾ ಮರೀಚೀರಿವ ಪಶ್ಯೇತ ತದಪ್ಯೇವಮೇವ ವಿದ್ಯಾತ್ ॥

ಅರಿಷ್ಟಾಂತರಂ ದರ್ಶಯತಿ— ಯಥಾ ಮಯೂರಸ್ಯ ಗ್ರೀವಾ ಲೋಕೇಽತಿಶಯೇನ ನೀಲವರ್ಣಾ ತದ್ವತ್ಪ್ರೌಢೋ ವಹ್ನಿರ್ಜ್ವಲನ್ಯದಾ ನೀಲ ಇವ ದೃಶ್ಯತೇ, ತಥಾ ಮೇಘರಹಿತೇ ನಿರ್ಮಲ ಆಕಾಶೇ ಕೇನಾಪ್ಯನ್ಯೇನಾದೃಶ್ಯಮಾನಾಂ ಮಹತೀಂ ವಿದ್ಯುತಂ ಸ್ವಯಂ ನ ಪಶ್ಯೇತ್, ಪಶ್ಯೇತ್ ಮೇಘೇ ವಾ ಪ್ರೌಢೇ ಸರ್ವೈರ್ದೃಶ್ಯಮಾನಾಂ ವಿದ್ಯುತಂ ಸ್ವಯಂ ನ ಪಶ್ಯೇತ್ ಯದ್ವಾ ವರ್ಷರ್ತುಮಧ್ಯೇ ಭೂಮೌ ಸರ್ವತ್ರಾಂಧಕಾರಮಾಪಾದಯನ್‌ಪ್ರೌಢೋ ಮೇಘೋ ಮಧ್ಯಾ-ಹ್ನಾದಿಕಾಲೇ ಕದಾಚಿದ್ಭವತಿ ತಸ್ಮಿನ್ಮೇಘೇ ಭಾಸುರಾ ಮರೀಚೀರಿವ ಪಶ್ಯತಿ, ತಾನ್ಯೇತಾನಿ ಚತ್ವಾ-ರ್ಯರಿಷ್ಟಾನಿ ॥

ನವಿಲಿನ ಕಂಠವು ಲೋಕದಲ್ಲಿ ಅತಿನೀಲವಾಗಿ ತೋರುತ್ತದೆ, ಅದರಂತೆ ಜ್ವಲಿಸುವ ಬೆಂಕಿಯೂ ನೀಲವಾಗಿ ತೋರುವುದು. ಹಾಗೆಯೇ ಮೋಡ ಇಲ್ಲದಿರುವ ಸ್ವಚ್ಛವಾದ ಆಕಾಶದಲ್ಲಿ ಮಿಂಚನ್ನು ನೋಡುವುದು. ಮೋಡದಲ್ಲಿ ಹೊಳೆಯುವ ಮಿಂಚು ಎಲ್ಲರಿಗೂ ತೋರಿದರೂ ತನಗೆ ತೋರದಿರುವುದು. ಮಳೆಗಾಲದಲ್ಲಿ ಕಗ್ಗತ್ತಲೆಯನ್ನುಂಟುಮಾಡುವ ಮೇಘದಲ್ಲಿ ಗ್ರೀಷ್ಮಕಾಲದಂತೆ ಪ್ರಕಾಶಮಾನ ಕಿರಣಗಳನ್ನು ನೋಡುವುದು ಇವು ನಾಲ್ಕು ಅರಿಷ್ಟಗಳೆಂದು ತಿಳಿಯಬೇಕು.

## ಅಥಾಪಿ ಯತ್ರ ಭೂಮಿಂ ಜ್ವಲಂತೀಮಿವ ಪಶ್ಯೇತ ತಪಸ್ಯೇವಮೇವ ವಿದ್ಯಾತ್ ॥

**ಅರಿಷ್ಟಾಂತರಂ ದರ್ಶಯತಿ— ಶುಷ್ಕತೃಣಕಾಷ್ಠಾದಿರಹಿತಾ ಕೇವಲಾ ಮೃತ್ತಿಕೈವ ಪ್ರೌಢ-ಜ್ವಾಲಾಯುಕ್ತಾ ಯದಾ ದೃಶ್ಯತೇ ತದಾನೀಮರಿಷ್ಟಂ ವಿದ್ಯಾತ್ ॥**

ಒಣಗಿದ ಹುಲ್ಲುಕಟ್ಟಿಗೆಯಾವುದೂ ಇಲ್ಲದಿರುವ ಮಣ್ಣು ಅಧಿಕ ಉರಿಯಿಂದ ಕೂಡಿದಂತೆ ತೋರಿದರೆ ಅರಿಷ್ಟವೆಂದು ತಿಳಿಯಬೇಕು.

## ಇತಿ ಪ್ರತ್ಯಕ್ಷದರ್ಶನಾನಿ ॥

**ಉದಾಹೃತಾನ್ಯರಿಷ್ಟಾನ್ಯುಪಸಂಹರತಿ— ಇತ್ಯೇವಂ ಪೂರ್ವಮುಕ್ತಾನಿ " ತಾ ಯತ್ರ ವಿಹೀ-ಯೇತೇ ಚಂದ್ರಮಾ ಇವಾದಿತ್ಯೋ ದೃಶ್ಯತೇ " ಇತ್ಯಾರಭ್ಯ " ಭೂಮಿಂ ಜ್ವಲಂತೀಮಿವ ಪಶ್ಯೇತ" ಇತ್ಯಂತಾನಿ ಜಾಗರಣಾವಸ್ಥಾಯಾಂ ಪ್ರತ್ಯಕ್ಷೇಣ ದೃಶ್ಯಮಾನಾನ್ಯರಿಷ್ಟಾನಿ ವಿಜ್ಞೇಯಾನಿ ॥**

ಹಿಂದೆ ಹೇಳಿದ ಅರಿಷ್ಟಗಳ ಉಪಸಂಹಾರ ತೋರಿಸುತ್ತಾರೆ. ಸೂರ್ಯನು ಚಂದ್ರನಂತೆ ತೋರುವುದು ಎಂದು ಆರಂಭಿಸಿ, ಭೂಮಿಯು ಉರಿಯುವಂತೆ ತೋರುವುದು ಎಂದು ಹೇಳಿರುವವುಗಳನ್ನು ಎಚ್ಚರವಾಗಿರುವಾಗ ಹಗಲಿನಲ್ಲಿ ತಾನಾಗಿ ನೋಡಿದರೆ ಅವುಗಳು ಮರಣ ಸೂಚಕ ಅರಿಷ್ಟಗಳೆಂದು ತಿಳಿಯಬೇಕು.

## ಅಥ ಸ್ವಪ್ನಾಃ ॥

**ವಕ್ಷ್ಯಮಾಣಂ ಪ್ರತಿಜಾನೀತೇ — ಜಾಗರಣಪ್ರತ್ಯಕ್ಷಾರಿಷ್ಟಕಥನಾನಂತರಂ ಸ್ವಪ್ನಗತಾ ಅರಿಷ್ಟವಿಶೇಷಾಃ ಕಥ್ಯಂತ ಇತಿ ಶೇಷಃ ॥**

ಜಾಗರಣ ಕಾಲದಲ್ಲಿ ಪ್ರತ್ಯಕ್ಷವಾದ ಅರಿಷ್ಟಗಳನ್ನು ಹೇಳಿದ ಮೇಲೆ ಈಗ ಸ್ವಪ್ನದಲ್ಲಿ ತೋರುವ ಅರಿಷ್ಟಗಳನ್ನು ಹೇಳುತ್ತಾರೆ.

## ಪುರುಷಂ ಕೃಷ್ಣಂ ಕೃಷ್ಣದಂತಂ ಪಶ್ಯತಿ ಸ ಏನಂ ಹಂತಿ ವರಾಹ ಏನಂ ಹಂತಿ ಮರ್ಕಟ ಏನಮಾಸ್ಕಂದಯತ್ಯಾಶು ವಾಯುರೇನಂ ಪ್ರವ-

ಹತಿಸು ವರ್ಣಂ ಬಾದಿತ್ವಾಪಗಿರತಿ ಮಧ್ವಶ್ನಾತಿ ಬಿಸಾನಿ ಭಕ್ಷಯತ್ಯೇ-
ಕಪುಂಡರೀಕಂ ಧಾರಯತಿ ಖರೈರ್ವರಾಹೈರ್ಯುಕ್ತೈರ್ಯಾತಿ ಕೃಷ್ಣಾಂ
ಧೇನುಂ ಕೃಷ್ಣವತ್ಸಾಂ ನಲದಮಾಲೀ ದಕ್ಷಿಣಾಮುಖೋ ವ್ರಾಜ-
ಯತಿ ||

ದಶಸಂಖ್ಯಾಕಾನಿ ಸ್ವಪ್ನಾರಿಷ್ಟಾನಿ ದರ್ಶಯತಿ— ಸ್ವಪ್ನೇ ಸಾಕಲ್ಯೇನಾತ್ಯಂತಂ ಕೃಷ್ಣ-ವರ್ಣಂ ಪುರುಷದೇಹಂ ಕೃಷ್ಣವರ್ಣೈರ್ದಂತೈರ್ಯುಕ್ತಂ ಪಶ್ಯತಿ। ಸ ಚ ಪುರುಷ ಆಗತ್ಯೈನಂ ಸ್ವಪ್ನದ್ರಷ್ಟಾರಂ ಹಂತಿ ಸ್ವಪ್ನಮಧ್ಯೇ ಮಾರಯತಿ। ತದಿದಮೇಕಮರಿಷ್ಟಮ್। ತಥಾರಣ್ಯಮಧ್ಯೇ ಪ್ರೌಢೋ ವರಾಹ ಆಗತ್ಯ ಮಾರಯತಿ। ತದಿದಂ ದ್ವಿತೀಯಮ್। ಮರ್ಕಟಃ ಕಶ್ಚಿದಾಗತ್ಯೈನಂ ಸ್ವಪ್ನದ್ರಷ್ಟಾರಮಾಸ್ಕಂದಯತಿ ಸಮಂತಾನ್ಮೂರ್ಧಪರ್ಯಂತಮಾರೋಹತಿ। ತದಿದಂ ತೃತೀಯಮ್। ಅತಿಶೀಘ್ರಗಾಮೀ ಪ್ರೌಢೋ ವಾಯುರೇನಂ ಗೃಹೀತ್ವಾ ನಿಮ್ನದೇಶೇ ಜಲವತ್ಪ್ರವಹತಿ। ಏತ-ಚ್ಚತುರ್ಥಮ್। ಸುವರ್ಣನಿರ್ಮಿತಮಾಭರಣಂ ಲಡ್ಡುಕಾದಿವದ್ಭಕ್ಷಯಿತ್ವಾ ಪುನರಪಿ ವಮತಿ। ಏತತ್ಪಂಚಮಮ್। ಮಾಕ್ಷಿಕಂ ಯನ್ಮಧು ತದಾಕಂಠಮಶ್ನಾತಿ। ಏತತ್ ಷಷ್ಠಮ್। ಬಿಸಾನಿ ಪದ್ಮಾದೀನಾಂ ನಾಲಾನಿ ಭಕ್ಷಯತಿ। ಏತತ್ಸಪ್ತಮಮ್। ಏಕಪುಂಡರೀಕಮ್। ರಕ್ತವರ್ಣಮಿತಿ ಸಂಪ್ರದಾಯಃ। ತಚ್ಛಿರಸಿ ಧಾರಯತಿ। ಏತದಷ್ಟಮಮ್। ಯುಕ್ತೈರಶ್ವವತ್ಸಜ್ಜೀಕೃತೈರ್ಗರ್ದ-ಭೈರ್ವರಾಹೈರ್ವಾ ಗ್ರಾಮಾಂತರಂ ಗಚ್ಛತಿ। ಏತನ್ನವಮಮ್। ನಲದಮಾಲೀ ರಕ್ತಕುಸುಮ-ಗ್ರಥಿತಸ್ರಗ್ವೀ ದಕ್ಷಿಣಾದಿಗಭಿಮುಖೋ ಭೂತ್ವಾ ಕಾಂಚಿತ್ಕೃಷ್ಣವತ್ಸೋಪೇತಾಂ ಕೃಷ್ಣಾಂ ಧೇನುಂ ವ್ರಾಜಯತಿ ದೇಶಾಂತರಂ ಪ್ರೇರಯತಿ। ಏತದ್ದಶಮಮ್ ||

ಸ್ವಪ್ನದಲ್ಲಿ ತೋರುವ ಹತ್ತು ಅರಿಷ್ಟಗಳನ್ನು ವಿವರಿಸುತ್ತಾರೆ. ಸ್ವಪ್ನದಲ್ಲಿ ಸಂಪೂರ್ಣ ಕಪ್ಪು ಬಣ್ಣವುಳ್ಳ ಒಬ್ಬ ಪುರುಷನನ್ನು ಕಪ್ಪು ಹಲ್ಲುವುಳ್ಳವನನ್ನಾಗಿ ನೋಡುವುದು. ಅವನು ಸಮೀಪಕ್ಕೆ ಬಂದು ತನ್ನನ್ನು ಹೊಡೆಯುವುದು. ಇದು ಒಂದು ಅರಿಷ್ಟ. ಕಾಡಿನ ಮಧ್ಯದಲ್ಲಿ ಭಯಂಕರವಾದ ಹಂದಿಯು ಬಂದು ತನ್ನನ್ನು ಕೊಲ್ಲುವುದು ಎರಡನೆಯ ಅರಿಷ್ಟ. ಒಂದು ಕೋತಿಯು ಬಂದು ಕಾಲಿನಿಂದ ತಲೆಯವರೆಗೆ ತನ್ನನ್ನು ಹತ್ತುವುದು ಮೂರನೇ ಅರಿಷ್ಟ. ವೇಗವಾದ ಗಾಳಿ ಬಂದು ಎತ್ತಿಕೊಂಡುಹೋಗಿ ನೀರಿನಂತೆ ತಗ್ಗಾದಪ್ರದೇಶಕ್ಕೆ ಎಸೆಯುವದು ನಾಲ್ಕನೆಯ ಅರಿಷ್ಟ. ಚಿನ್ನದಒಡವೆಗಳನ್ನು ಚಕ್ಕುಲಿಯಂತೆ ತಿಂದು ವಾಂತಿಮಾಡುವುದು ಐದನೆಯ ಅರಿಷ್ಟ. ಜೇನುತುಪ್ಪವನ್ನು ಕುತ್ತಿಗೆಯವರೆಗೆ ತಿನ್ನುವುದು ಆರನೆಯ ಅರಿಷ್ಟ. ತಾವರೆಯದಂಟುಗಳನ್ನು ಹಿಂದಿನಂತೆ ತಿನ್ನುವುದು ಏಳನೆಯ ಅರಿಷ್ಟ. ಕೆಂಪುತಾವರೆಯನ್ನು ತಲೆಯಲ್ಲಿ ಧರಿಸುವುದು ಎಂಟನೆಯ ಅರಿಷ್ಟ. ಕತ್ತೆಗಳಿಂದ ಅಥವಾ ಹಂದಿಗಳಿಂದ ಕಟ್ಟಿದ ರಥದಿಂದ ಗ್ರಾಮಾಂತರಕ್ಕೆ ಹೋಗುವುದು ಒಂಬತ್ತನೆಯ ಅರಿಷ್ಟ. ಕೆಂಪುಹೂಮಾಲೆಯನ್ನು ಧರಿಸಿಕೊಂಡು ದಕ್ಷಿಣದಿಕ್ಕಿಗೆ ಅಭಿಮುಖವಾಗಿ ಕಪ್ಪು ಕರುವಿನಿಂದ ಕೂಡಿದ ಕಪ್ಪು ಹಸುವನ್ನು ದೇಶಾಂತರಕ್ಕೆ ಅಟ್ಟಿಕೊಂಡುಹೋಗುವಂತೆ ನೋಡಿದರೆ ಅದು ಹತ್ತನೆಯ ಅರಿಷ್ಟವಾಗುತ್ತದೆ.

**ಸ ಯದ್ಯೇತೇಷಾಂ ಕಿಂಚಿತ್ಪಶ್ಯೇದುಪೋಷ್ಯ ಪಾಯಸಂ ಸ್ಥಾಲೀಪಾಕಂ ಶ್ರಪಯಿತ್ವಾ ರಾತ್ರೀಸೂಕ್ತೇನ ಪ್ರತ್ಯೃಚಂ ಹುತ್ವಾಽನ್ಯೇನಾನ್ನೇನ ಬ್ರಾಹ್ಮಣಾನ್ಭೋಜಯಿತ್ವಾ ಚರುಂ ಸ್ವಯಂ ಪ್ರಾಶ್ನೀಯಾತ್ ॥**

ಏತೈರ್ಜಾಗರಣಸ್ವಪ್ನಗತೈರರಿಷ್ಟೈಃ ಪ್ರತ್ಯಾಸನ್ನಂ ಮರಣಂ ನಿಶ್ಚಿತ್ಯಾನಂತರಂ ಯತ್ಕರ್ತವ್ಯಂ ತದ್ದರ್ಶಯತಿ— ಸ ಪುಮಾನೇತೇಷಾಮರಿಷ್ಟಾನಾಂ ಮಧ್ಯೇ ಯತ್ಕಿಮಪ್ಯರಿಷ್ಟಂ ಯದಾ ಪಶ್ಯೇತ್ತಸ್ಮಿನ್ದಿನೇ ಸ್ವಯಮುಪವಾಸಂ ಕೃತ್ವಾ ಸ್ಥಾಲೀಪಾಕವಿಧಾನೋಪೇತಂ ಪಾಯಸಂ (ಶ್ರಪಯಿತ್ವಾ) "ರಾತ್ರೀ ವ್ಯಖ್ಯದಾಯತೀ" (ಋ-ಸಂ-ಮಂ-೧೦-ಸೂ ೧೨೭ ಋ ೧) ಇತ್ಯಸ್ಮಿನ್ಸೂಕ್ತೇ ಪ್ರತಿಮಂತ್ರಂ ಪಾಯಸಂ ಹುತ್ವಾ ಸ್ವಕಗೃಹೇ ನಿಷ್ಪಾದಿತೇನಾನ್ನೇನ ಯಥಾಶಕ್ತಿ ಬ್ರಾಹ್ಮಣಾನ್ಭೋಜಯಿತ್ವಾ ಪಶ್ಚಾದ್ಧೋಮಶೇಷಂ ಚರುಂಸ್ವಯಂ ಪ್ರಾಶ್ನೀಯಾತ್ । ಏತಾವತಾ ಸಂಪಾದನೀಯಸ್ಯ ಪುರುಷಾರ್ಥಸ್ಯೋಪಸ್ಥಿತೋ ವಿಘ್ನಃ ಪರಿಹೃತೋ ಭವತಿ ॥

ಹೀಗೆ ಜಾಗರಣಸ್ವಪ್ನಗತಗಳಾದ ಅರಿಷ್ಟಗಳಿಂದ ಮರಣ ಸನ್ನಿಹಿತವಾಗಿದೆಯೆಂದು ನಿಶ್ಚಯಿಸಿದ ಮೇಲೆ ಮಾಡಬೇಕಾದ ಕರ್ತವ್ಯವನ್ನು ವಿವರಿಸುತ್ತಾರೆ. ಯಾವ ಪುರುಷನು ಈ ಅರಿಷ್ಟಗಳಮಧ್ಯದಲ್ಲಿ ಯಾವ ಅರಿಷ್ಟವನ್ನು ನೋಡಿದರೂ ಆ ದಿವಸ ಉಪವಾಸವನ್ನಾಚರಿಸಿ ಸ್ಥಾಲೀಪಾಕರೀತಿಯಿಂದ ಪಾಯಸವನ್ನು ಮಾಡಿ ರಾತ್ರೀವ್ಯಖ್ಯದಾಯತೀ ಎಂಬ ಸೂಕ್ತದಲ್ಲಿರುವ ಮಂತ್ರಗಳಿಂದ ಆ ಪಾಯಸವನ್ನು ಹೋಮಮಾಡಿ ತನ್ನಮನೆಯಲ್ಲೇ ಮಾಡಿರುವ ಅನ್ನಾದಿಗಳಿಂದ ಯಥಾಶಕ್ತಿ ಬ್ರಾಹ್ಮಣರಿಗೆ ಭೋಜನಮಾಡಿಸಿ ಆಮೇಲೆ ಹೋಮಶೇಷವನ್ನೂ ತಾನೂ ಊಟಮಾಡಬೇಕು. ಹೀಗೆ ಆಚರಿಸಿದರೆ ಒದಗಿರುವ ವಿಘ್ನಗಳೆಲ್ಲವೂ ಪರಿಹಾರಹೊಂದುತ್ತವೆ.

**ಸ ಯೋಽತೋಽಶ್ರುತೋಽಗತೋಽಮತೋಽನತೋಽದೃಷ್ಟೋಽವಿಜ್ಞಾತೋಽನಾದಿಷ್ಟಃ ಶ್ರೋತಾ ಮಂತಾ ದ್ರಷ್ಟಾಽಽದೇಷ್ಟಾ ಘೋಷ್ಟಾ ವಿಜ್ಞಾತಾ ಪ್ರಜ್ಞಾತಾ ಸರ್ವೇಷಾಂ ಭೂತಾನಾಮಂತರಪುರುಷಃ ಸ ಮ ಆತ್ಮೇತಿ ವಿದ್ಯಾತ್ ॥**

ವಿಘ್ನಂ ಪರಿಹೃತ್ಯ ಪಶ್ಚಾತ್ಸಂಪಾದನೀಯಂ ಪುರುಷಾರ್ಥಂ ದರ್ಶಯತಿ— ಕೃತವಿಘ್ನಪರಿಹಾರಃ ಸ ಪುಮಾನಿತಿ ವಿದ್ಯಾದಿತ್ಯನ್ವಯಃ । ಕಥಂ ವಿದ್ಯಾದಿತ್ಯುಚ್ಯತೇ । ಯಃ ಸರ್ವೇಷಾಂ ಭೂತಾನಾಮಂತರಪುರುಷೋ ಬ್ರಹ್ಮಾದಿಸ್ತಂಭಾಂತಾನಾಂ ಸರ್ವಪ್ರಾಣಿನಾಂ ದೇಹಮಧ್ಯೇ ತತ್ತದ್ದೇಹಸಾಕ್ಷಿತ್ವೇನ ಭಾಸಮಾನಃ ಪರಿಪೂರ್ಣಃ ಪರಮಾತ್ಮಾಸ್ತಿ ಸೋಽಯಂ ಪರಮಾತ್ಮಾ ಮೇ ಮಮ ಮುಮುಕ್ಷೋಃ ಪುರುಷಸ್ಯಾತ್ಮಾ ಸ್ವರೂಪಮಿತ್ಯೇವಂ ವಿದ್ಯಾತ್ । ಪ್ರಮಾಣೇನ ಸಾಕ್ಷಾತ್ಕುರ್ಯಾತ್ । ಕದಶಕ್ತಾವುಪಾಸೀತೇತ್ಯಪಿ ದ್ರಷ್ಟವ್ಯಮ್ । ಅತ ಇತ್ಯಾದಿಭಿಃ ಪದೈಃ ಸರ್ವ ಭೂ-

ತಾಂತರಂ ಪುರುಷಂ ವಿಶಿನಷ್ಟಿ ಅಶೋಽಸ್ಮಾದ್ದೇಹೇಂದ್ರಿಯಾದಿಸಂಘಾತಾದ್ವಿಲಕ್ಷಣ ಇತಿ ಶೇಷಃ। ಅಶ್ರುತ ಇತ್ಯಾದಿಭಿಃ ಸಪ್ತಭಿರ್ವಿಶೇಷಣೈರಿಂದ್ರಿಯಜನ್ಯಕ್ರಿಯಾಕರ್ತೃತ್ವಂ ನಿವಾರಯತಿ। ಅಕಾರಾದಯೋ ವರ್ಣಾಃ ಪದ್ಯೈರುಚ್ಚಾರ್ಯಮಾಣಾ ಉದಾತ್ತಾದಿಸ್ವರಾ ವಾ ಯಥಾ ಶ್ರೋತ್ರೇಂದ್ರಿಯೇಣ ಶ್ರೂಯಂತೇ ನೈವಮಾತ್ಮಾ ಶ್ರೋತ್ರೇಣ ಶ್ರುತಃ। ಯಥಾ ಪಾದೇಂದ್ರಿಯಜನ್ಯಯಾ ಗಮನಕ್ರಿಯಯಾ ಗ್ರಾಮಾಂತರಂ ಗಮ್ಯತೇ ನೈವಮಸೌ ಗತಃ। ಯಥಾ ಚತುರ್ಭುಜಾದ್ಯುಪೇತಾ ವಿಷ್ಣ್ವಾದಿಮೂರ್ತಿರ್ಜಡತ್ವಾನ್ಮನಸಾ ಧ್ಯಾನಕಾಲೇ ಪ್ರಕಾಶ್ಯತೇ ನೈವಮಸೌ ಮತಃ, ಸ್ವಪ್ರಕಾಶತ್ವಾನ್ಮನಸೋಽಮತೋಽ ನ ವಿಸ್ಫಾರಿತಃ। ಯಥಾ ಪುತ್ರಭೃತ್ಯಾದಿ ತತ್ಸ್ವಾಮಿನಾ ನಮ್ಯತೇ ವಶೀಕ್ರಿಯತೇ ನೈವಮಸೌ ನತಃ, ಸ್ವತಂತ್ರತ್ವಾತ್ಕೇನಾಪಿ ನ ವಶೀಕೃತಃ। ಯಥಾ ನೀಲಪೀತಾದಿಕಂ ರೂಪಂ ಚಕ್ಷುಷಾ ದೃಶ್ಯತೇ ನೈವಮಸೌ ದೃಷ್ಟಃ। ಯಥಾ ಮನಸಾ ಸಂದಿಹ್ಯಮಾನಂ ವಸ್ತು ಸ್ಥಾಣುಚೋರಾದಿಕಂ ವಿಜ್ಞಾನಶಬ್ದವಾಚ್ಯಯಾ ಬುದ್ಧ್ಯಾ ನಿಶ್ಚೀಯತೇ ನೈವಮಸೌ ವಿಜ್ಞಾತಃ, ಸಂದೇಹರಹಿತತ್ವಾದ್ಬುದ್ಧ್ಯಾ ನ ನಿಶ್ಚೇತವ್ಯಃ। ಯಥಾ ಜಾತಿಗುಣಾದಿಯುಕ್ತಾ ಗವಾಶ್ವಾದಿಪದಾರ್ಥಾಸ್ತದ್ವಾಚಕೈಃ ಶಬ್ದೈರಾದಿಶ್ಯಂತೇ ನೈವಮಸಾವಾದಿಷ್ಟಃ, ವಾಚ್ಯಾರ್ಥಸ್ಯ ಜಾತ್ಯಾದೇಸ್ತಸ್ಮಿನ್ನಭಾವಾತ್। ಏತೈರ್ವಿಶೇಷಣೈಸ್ಸೈಂದ್ರಿಯಕವ್ಯಾಪಾರವಿಷಯತ್ವಂ ನಿವಾರಿತಮ್। ಕಥಂ ತರ್ಹ್ಯಾತ್ಮಾ ಬೋದ್ಧುಂ ಶಕ್ಯತ ಇತ್ಯಾಶಂಕ್ಯಾತ್ಮನಃ ಕರ್ಮಕಾರಕತ್ವಾಭಾವೇಽಪಿ ತತ್ತದ್ವ್ಯಾಪಾರಕರ್ತೃತ್ವೇನೋಪಲಕ್ಷಯಿತುಂ ಶಕ್ಯತ ಇತ್ಯಭಿಪ್ರೇತ್ಯ ಶ್ರೋತಾ ಮಂತೇತ್ಯಾದಿಸಪ್ತ ವಿಶೇಷಣಾನ್ಯುಚ್ಯಂತೇ। ಆತ್ಮಾ ವಿಷಯೋ ನ ಭವತಿ ವಿಷಯೀ ತು ಭವತ್ಯೇವಾತೋ ವಿಷಯಿತ್ವೇನಾವಗಂತವ್ಯಃ। ಅತ ಏವಾಂತರ್ಯಾಮಿ ಬ್ರಾಹ್ಮಣೇ ವಿಷಯತ್ವನಿಷೇಧಪುರಃಸರಂ ವಿಷಯಿತ್ವಮಾಮ್ನಾಯತೇ-"ಅದೃಷ್ಟೋ ದ್ರಷ್ಟಾಽಶ್ರುತಃ ಶ್ರೋತಾಽಮತೋ ಮಂತಾಽವಿಜ್ಞಾತೋ ವಿಜ್ಞಾತಾ" (ಬೃಹ-೩-೭-೧೩) ಇತಿ। ಅಕ್ಷರಬ್ರಾಹ್ಮಣೇಽಪಿ ತಥೈವಾಽಽಮ್ನಾತಮ್-"ತದ್ವಾ ಏತದಕ್ಷರಂ ಗಾರ್ಗ್ಯದೃಷ್ಟಂ ದ್ರಷ್ಟ್ರಶ್ರುತಂ ಶ್ರೋತ್ರಮತಂ ಮಂತ್ರವಿಜ್ಞಾತಂ ವಿಜ್ಞಾತೃ" (ಬೃಹ-೩-೮-೧೧) ಇತಿ। ಕೌಷಿತಕಿನೋಽಪ್ಯಾಮನಂತಿ-"ನ ವಾಚಂ ವಿಜಿಜ್ಞಾಸೀತ ವಕ್ತಾರಂ ವಿದ್ಯಾತ್" (ಕೌಷೀ೧.೮) ಇತ್ಯಾದಿನಾ। ಪ್ರಶ್ನೋಪನಿಷದ್ಯಪಿ ದರ್ಶನಾದಿಕ್ರಿಯಾಕರ್ತೃತ್ವಮಾಮ್ನಾತಮ್-"ಏಷ ಹಿ ದ್ರಷ್ಟಾ ಸ್ಪ್ರಷ್ಟಾ ಶ್ರೋತಾ ಘ್ರಾತಾ ರಸಯಿತಾ ಮಂತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ ಪುರುಷಃ" (ಪ್ರಶ್ನೋ ೪-೯) ಇತಿ। ತತ್ತದಿಂದ್ರಿಯಾವಭಾಸಕತ್ವೇನ ತತ್ತತ್ಕರ್ತೃತ್ವವ್ಯವಹಾರೋ ನ ತು ಕ್ರಿಯಾಶ್ರಯತ್ವಂ ಕರ್ತೃತ್ವಮಿತ್ಯಭಿಪ್ರೇತ್ಯೋತ್ತರತಾಪನೀಯೇ ಪಠ್ಯತೇ-"ಚಕ್ಷುಷೋ ದ್ರಷ್ಟಾ ಶ್ರೋತ್ರಸ್ಯ ದ್ರಷ್ಟಾ ವಾಚೋ ದ್ರಷ್ಟಾ ಮನಸೋ ದ್ರಷ್ಟಾ ಬುದ್ಧೇರ್ದ್ರಷ್ಟಾ ಪ್ರಾಣಸ್ಯ ದ್ರಷ್ಟಾ ತಮಸೋ ದೃಷ್ಟಾ ಸರ್ವಸ್ಯ ದೃಷ್ಟಾ" (ನೃ-ಉ-೨) ಇತಿ। ಚಕ್ಷುರ್ಭಾಸಕತ್ವಮಪಿ ಭಾಸನಕ್ರಿಯಾಶ್ರಯತ್ವಂ ನ ಭವತಿ ಕಿಂ ತು ಸ್ವಪ್ರಕಾಶಚೈತನ್ಯರೂಪಸ್ಯ ತತ್ತದ್ಭಾನಾನುಕೂಲ್ಯೇನಾವಸ್ಥಾನಂ ಸಾಕ್ಷಿತ್ವಮೇವೇತಿ ತತ್ರೈಽಽಮ್ನಾತಮ್।-"ಚಕ್ಷುಷಃ ಸಾಕ್ಷೀ ಶ್ರೋತ್ರಸ್ಯ ಸಾಕ್ಷೀ ವಾಚಃ ಸಾಕ್ಷೀ ಮನಸಃ ಸಾಕ್ಷೀ ಬುದ್ಧೇ ಸಾಕ್ಷೀ ಪ್ರಾಣಸ್ಯ ಸಾಕ್ಷೀ ಮನಸಃ ಸಾಕ್ಷೀ ಸರ್ವಸ್ಯ ಸಾಕ್ಷೀ" (ನೃ-ಉ-೨) ಇತಿ। ಏವಮ್ "ಅಸಂಗೋ ಹ್ಯಯಂ ಪುರುಷಃ" (ಬೃಹ-೪-೩-೯) ಇತ್ಯಾದೀನ್ಯಪ್ಯುದಾಹರಣೀ-

ಯಾನಿ। ಯದ್ಯಪ್ಯಾದೇಷ್ಟಾ ಘೋಷ್ಟೇತಿ ಪದದ್ವಯೇನ ವಾಗ್ವ್ಯಾಪಾರಕರ್ತೃತ್ವಮೇವಾಭಿಧೀಯತೇ ತಥಾಪಿ ರಾಜಾದಿವದಾಜ್ಞಾಪಯಿತೃತ್ವಮಾದೇಷ್ಟೃತ್ವಂ ಸೈನ್ಯಸ್ಯಾಽಽಹ್ವಯಿತೃಯಾಷ್ಟಿಕವದುಚ್ಚಧ್ವನಿ-ಕರ್ತೃತ್ವಂ ಘೋಷ್ಟೃತ್ವಮಿತಿ ವಿವೇಕಃ। ವಿಜ್ಞಾತೃತ್ವಪ್ರಜ್ಞಾತೃತ್ವೇ ಅಪ್ಯವಾಂತರಭೇದೇನ ವಿವೇಚನೀಯೇ। ದೇಹೇಂದ್ರಿಯಾದಿಭ್ಯಃ ಪ್ರತ್ಯಗಾತ್ಮಾನಂ ವಿವಚ್ಯ ವಿಜ್ಞಾತೃತ್ವಂ ತಸ್ಯ ಚ ವಿವಿಕ್ತಸ್ಯ ಪ್ರಕೃಷ್ಟಬ್ರಹ್ಮರೂಪತ್ವೇನ ಜ್ಞಾತೃತ್ವಂ ಪ್ರಜ್ಞಾತೃತ್ವಮ್। ಸರ್ವೇಷಾಂ ಭೂತಾನಾಮಂತರಪುರುಷ ಇತ್ಯನೇನ ಹಿರಣ್ಯಗರ್ಭಾದ್ಯುಪಾಧಿಪ್ರಯುಕ್ತಮಾತ್ಮನೋ ನಾನಾತ್ವಂ ನಿರಾಕೃತಮ್। ತಾದೃಶಸ್ಯ ಪರಮಾತ್ಮನಃ ಸ ಮ ಆತ್ಮೇತಿ ವಿದ್ಯಾದಿತಿ ವಾಕ್ಯೇನ ಸ್ವಕೀಯಸಂಸಾರಿತ್ವನಿವಾರಣಾಯ ತಾದಾತ್ಮ್ಯ-ಮುಪನ್ಯಸ್ತಮ್। ಈದೃಗ್ವಸ್ತುಸಾಕ್ಷಾತ್ಕಾರೇ ಸತಿ ದೇಹಪಾತಕಾಲ ಏವ ವಿಮುಚ್ಯತೇ। ತಥಾವಿಧವಸ್ತೂಪಾಸನೇ ತು ಬ್ರಹ್ಮಲೋಕಪ್ರಾಪ್ತಿದ್ವಾರಾ ಕ್ರಮೇಣ ವಿಮುಚ್ಯತೇ। ಇತ್ಯೇವ-ಮಾದಿತ್ಯಮಂಡಲಸ್ಥಸ್ವಶರೀರಾಂತರ್ಗತಪುರುಷಸ್ಯೈಕ್ಯಧ್ಯಾನಪ್ರಸಂಗಾಗತಾನ್ಯರಿಷ್ಟದರ್ಶನಾನಿ ತದ್ಯು-ಕ್ತಸ್ಯ ಪರಮಪುರುಷಾರ್ಥಹೇತುಭೂತಾ ಬ್ರಹ್ಮವಿದ್ಯಾ ಚ ಪರಿಸಮಾಪಿತಾ॥

ವಿಘ್ನಗಳನ್ನು ಹೋಗಲಾಡಿಸಿಕೊಂಡಮೇಲೆ ಮುಂದೆ ಸಂಪಾದಿಸಬೇಕಾದ ಪುರುಷಾರ್ಥವನ್ನು ತೋರಿಸುತ್ತಾರೆ. ವಿಘ್ನವನ್ನು ಪರಿಹರಿಸಿಕೊಂಡಮೇಲೆ ಉಪಾಸಕನು ತಿಳಿಯಬೇಕು ಎಂದು ಅನ್ವಯ. ತಿಳಿಯುವ ರೀತಿಯನ್ನು ವಿವರಿಸುತ್ತಾರೆ. ಯಾವನು ಸಕಲ ಭೂತಗಳಲ್ಲಿಯೂ ಅಂತರ್ಯಾಮಿಯಾಗಿದ್ದು ಬ್ರಹ್ಮಾದಿಸ್ತಂಬಪರ್ಯಂತವಿರುವ ಪ್ರಾಣಿಗಳ ಶರೀರದಲ್ಲಿ ಸಾಕ್ಷಿ ರೂಪದಿಂದ ಪ್ರಕಾಶಿಸುತ್ತಾ ಪರಿಪೂರ್ಣನಾಗಿರುವ ಪರಮಾತ್ಮನಿರುವನೋ ಅವನೇ ಮುಮುಕ್ಷುವಾದ ನನ್ನ ಸ್ವರೂಪನೆಂದು ಸತತವಾಗಿ ಧ್ಯಾನಿಸಬೇಕು. ಹೀಗೆ ಚಿಂತಿಸುತ್ತಾ ಪರಮಾತ್ಮ ಸಾಕ್ಷಾತ್ಕಾರವನ್ನು ಪಡೆಯಬೇಕು. ಹೀಗೆ ತಾದಾತ್ಮ್ಯ ಧ್ಯಾನ ದಲ್ಲಿ ಅಶಕ್ತನಾದವನು ಪ್ರತೀಕೋಪಾಸನೆ ಮಾಡಬೇಕು. ಅತಃ ಇತ್ಯಾದಿ ಪದಗಳಿಂದ ಅಂತರ್ಯಾಮಿ ಪುರುಷನ ಲಕ್ಷಣಗಳನು ತೋರಿಸುತ್ತಾರೆ. ಅವನು ಈ ದೇಹೇಂದ್ರಿಯಾದಿ ಸಂಘಾತದಿಂದ ವಿಲಕ್ಷಣವಾಗಿರುತ್ತಾನೆ. ಅಶ್ರುತಃ ಇತ್ಯಾದಿ ಏಳು ವಿಶೇಷಣಗಳಿಂದ ಇಂದ್ರಿಯ ವ್ಯಾಪಾರಕ್ಕೆ ವಿಷಯನಲ್ಲವೆಂದು ವಿವರಿಸುತ್ತಾರೆ. ಅಕಾರಾದಿ ವರ್ಣಗಳನ್ನು ಇತರರು ಉಚ್ಛರಿಸುವಾಗ ಹೇಗೆ ನಮ್ಮ ಶ್ರೋತ್ರೇಂದ್ರಿಯಕ್ಕೆ ಕೇಳುವುದೋ ಅಂದರೆ ವಿಷಯವಾಗುವುದೋ ಅದರಂತೆ ಆತ್ಮನು ಶ್ರುತ ನಾಗುವುದಿಲ್ಲ. ಪಾದರೂಪಕರ್ಮೇಂದ್ರಿಯದಿಂದ ಉಂಟಾದ ಗಮನಕ್ರಿಯೆಯಿಂದ ಗ್ರಾಮಾಂತರವನ್ನು ಹೊಂದುತ್ತಾನೋ ಅದರಂತೆ ಆತ್ಮನನ್ನು ಹೊಂದುವುದಕ್ಕಾಗುವುದಿಲ್ಲ. ಚತುರ್ಭುಜಾದಿಗಳಿಂದ ಕೂಡಿದ ವಿಷ್ಣ್ವಾದ್ಯಾಕೃತಿಗಳು ಧ್ಯಾನಕಾಲದಲ್ಲಿ ಮನಸ್ಸಿನಿಂದ ಪ್ರಕಾಶಿತವಾಗುತ್ತವೆಯೋ ಅದರಂತೆ ಆತ್ಮನು ಮನಃ ಪ್ರಕಾಶ್ಯನೂ ಅಲ್ಲ. ಸ್ವಪ್ರಕಾಶನಾದುದರಿಂದ ಅವನು ಮನೋಗೋಚರನಾಗುವುದಿಲ್ಲವೆಂದರ್ಥ. ಸ್ವಾಮಿಯಿಂದ ಪುತ್ರಭೃತ್ಯಾದಿಗಳು ವಶೀಕರಿಸಲ್ಪಡುವಂತೆ ಇವನು ವಶ್ಯ ನಾಗುವವನಲ್ಲ. ಆತ್ಮನು ಸ್ವತಂತ್ರನಾದುದರಿಂದ ಯಾರಿಗೂ ವಶನಾಗುವುದಿಲ್ಲ. ನೀಲಪೀತಾದಿರೂಪಗಳು ಕಣ್ಣಿನಿಂದ ನೋಡುವಂತೆ ಆತ್ಮನು ಕಣ್ಣಿಗೂ ಗೋಚರನಲ್ಲ. ಮನಸ್ಸಿನಿಂದ ಮೋಟು ಮರವೋ ಚೋರ ಪುರುಷನೋ ಎಂದು ಸಂದೇಹಕ್ಕೆ ಒಳಗಾದ ವಸ್ತುವು ವಿಜ್ಞಾನ ಶಬ್ದವಾಚ್ಯವಾದ ಬುದ್ಧಿಯಿಂದ ದೃಢೀಕರಿಸುವಂತೆ ಆತ್ಮನು ಬುದ್ಧಿಗೂ ಗೋಚರನಾಗುವುದಿಲ್ಲ. ಸಂದೇಹರಹಿತನಾದುದರಿಂದ ಬುದ್ಧಿಗ್ರಾಹ್ಯನಾಗುವುದಿಲ್ಲವೆಂದು ತಾತ್ಪರ್ಯ. ಜಾತಿಗುಣಕ್ರಿಯಾಸಂಜ್ಞೆಯಿಂದ ಕೂಡಿದ ಗೋಶುಕ್ಲಾದಿ ಪದಾರ್ಥಗಳು ವಾಚಕ ಶಬ್ದಗಳಿಂದ ಹೇಗೆ ತೋರಿಸಲ್ಪಡುವುವೋ ಅದರಂತೆ ಆತ್ಮನು ಶಬ್ದಕ್ಕೆ ವಿಷಯ ನಾಗುವುದೂ ಇಲ್ಲ. ಜಾತ್ಯಾದಿರಹಿತನಾದುದರಿಂದ ಶಬ್ದಗೋಚರನಲ್ಲವೆಂದರ್ಥ. ಹೀಗೆ ಇಂದ್ರಿಯ ವ್ಯಾಪಾರಕ್ಕೆ

ಅವಿಷಯನೆಂದು ತಿಳಿಸಿದ್ದಾಯಿತು. ಹಾಗಾದರೆ ಆತ್ಮನನ್ನು ತಿಳಿಯುವುದು ಹೇಗೆ? ಅಂದರೆ ಆಯಾಯ ವ್ಯಾಪಾರ ಕರ್ತೃತ್ವೋಪಲಕ್ಷಿತನನ್ನಾಗಿ ತಿಳಿಯಬಹುದೆಂದು ಶ್ರೋತಾ ಇತ್ಯಾದಿ ಏಳು ವಿಶೇಷಣಗಳಿಂದ ವಿವರಿಸುತ್ತಾರೆ. ಅವನು ವಿಷಯನಾಗದಿದ್ದರೂ ವಿಷಯಿ ಆಗುತ್ತಾನೆ. ವಿಷಯಿತ್ವರೂಪದಿಂದ ತಿಳಿಯಬಹುದು. ಆದುದರಿಂದಲೇ ವಿಷಯತ್ವವನ್ನು ನಿಷೇಧಿಸಿ ವಿಷಯತ್ವವನ್ನು ಅಂತರ್ಯಾಮಿ ಬ್ರಾಹ್ಮಣದಲ್ಲಿ **ಅದೃಷ್ಟೋ ದ್ರಷ್ಟಾ ಅಶ್ರುತಃಶ್ರೋತಾಽಮತೋ ಮಂತಾಽವಿಜ್ಞಾತೋ ವಿಜ್ಞಾತಾ** ಎಂದು ಹೇಳಿದೆ. ಹೀಗೆ ಪ್ರತಿಯೊಂದು ಉಪನಿಷತ್ತುಗಳಲ್ಲಿಯೂ ಈ ವಿಷಯವನ್ನು ವಿಶದವಾಗಿ ಪ್ರತಿಪಾದನ ಮಾಡಿರುತ್ತಾರೆ. ಅಲ್ಲಿ ಆತ್ಮನಿಗೆ ಕರ್ತೃತ್ವ ಹೇಳಿರುವುದು ಕ್ರಿಯಾಶ್ರಯನಾಗಿರುವುದರಿಂದ ಎಂದಲ್ಲ. ಆಯಾಯ ಇಂದ್ರಿಯಗಳಿಗೆ ಭಾಸಕನಾದುದರಿಂದ ಕರ್ತೃ ಎಂದು ವ್ಯವಹರಿಸಿದೆ. ಇದನ್ನು **ಚಕ್ಷುಷೋ ದ್ರಷ್ಟಾ ಶ್ರೋತ್ರಸ್ಯ ದ್ರಷ್ಟಾ** ಇತ್ಯಾದಿ ವಾಕ್ಯಗಳಿಂದ (ನೃ-ಉ-೨) ಶ್ರುತಿಯಲ್ಲಿ ವಿವರಿಸುತ್ತಾರೆ. ಚಕ್ಷುಸ್ಸಿಗೆ ಭಾಸಕನೆಂದರೆ ಭಾಸನಕ್ರಿಯಾಶ್ರಯನೆಂದು ಅರ್ಥವಲ್ಲ. ಸಾಕ್ಷಿತ್ವರೂಪದಿಂದ ಇರುವುದು ಅಂದರೆ ಸ್ವಪ್ರಕಾಶಚೈತನ್ಯ ರೂಪದಿಂದ ಆಯಾಯ ಇಂದ್ರಿಯ ಭಾನಕ್ಕೆ ಅನುಕೂಲವಾಗಿರುವುದು ಎಂವರ್ಥ. ಇದೂ ಕೂಡಾ **ಚಕ್ಷುಷಃ ಸಾಕ್ಷೀ ಶ್ರೋತ್ರಸ್ಯ ಸಾಕ್ಷೀ** ಇತ್ಯಾದಿ ವಾಕ್ಯದಿಂದ ಪೂರ್ವೋಕ್ತಶ್ರುತಿಯಲ್ಲೇ (ನೃ. ಉ-೨) ವಿವರಿಸಿದೆ. ಆತ್ಮನು ಯಾವಾಗಲೂ ಸಂಗರಹಿತನು. ಆದೇಷ್ಟಾ ಘೋಷ್ಟಾ ಪದಗಳಿಗೆ ವಾಗ್ವ್ಯಾಪಾರಕರ್ತೃತ್ವರೂಪ ಅರ್ಥವು ಸಮಾನವಾದರೂ ಅಲ್ಪ ವ್ಯತ್ಯಾಸ ತಿಳಿಯಬೇಕು. ರಾಜಾದಿಗಳಂತೆ ಆಜ್ಞಾಪಿಸುವವನು ಆದೇಷ್ಟಾ ಸೇನಾದಿಗಳನ್ನು ಕರೆಯುವುದಕ್ಕೋಸ್ಕರ ಗಟ್ಟಿಯಾಗಿ ಕೂಗುವವನು ಘೋಷ್ಟಾ. ಹೀಗೆಯೇ ದೇಹೇಂದ್ರಿಯಾದಿಗಳಿಗಿಂತ ಪ್ರತ್ಯಗಾತ್ಮನನ್ನು ಬೇರೆಯಾಗಿ ತಿಳಿಯುವುದು ವಿಜ್ಞಾತೃತ್ವ. ಬೇರೆಯಾಗಿ ತಿಳಿಯುವುದಲ್ಲದೆ ಪ್ರಕೃಷ್ಟಬ್ರಹ್ಮರೂಪದಿಂದ ತಿಳಿಯುವುದು ಪ್ರಜ್ಞಾತೃತ್ವವೆಂದು ವಿವೇಚಿಸಿ ತಿಳಿಯಬೇಕು. ಸರ್ವಭೂತಗಳ ಅಂತರ ಪುರುಷನೆಂದುದರಿಂದ ಹಿರಣ್ಯಗರ್ಭಾದ್ಯುಪಾಧಿಮೂಲಕ ಆತ್ಮನಿಗೆ ನಾನಾತ್ವವಿಲ್ಲವೆಂದು ತಿಳಿಯುತ್ತದೆ. ಇಂತಹ ಪರಮಾತ್ಮನೇ ನನ್ನ ಆತ್ಮನೆಂದು ತಿಳಿಯಬೇಕು ಎಂಬ ವಾಕ್ಯದಿಂದ ಸಂಸಾರತ್ವನಿವಾರಣೆಗೋಸ್ಕರ ತಾದಾತ್ಮ್ಯ ಹೇಳಿದೆ. ಈ ರೀತಿಯಾದ ವಸ್ತು ಸಾಕ್ಷಾತ್ಕಾರವಾಯಿತೆಂದರೆ ದೇಹನಶಿಸಿದೊಡನೆಯೇ ಮುಕ್ತನಾಗುತ್ತಾನೆ. ಆ ವಸ್ತುವಿನ ಉಪಾಸನೆಮಾಡುವುದಾದರೆ ಬ್ರಹ್ಮಲೋಕಪ್ರಾಪ್ತಿಮೂಲಕ ಕ್ರಮ ಮುಕ್ತಿ ಹೊಂದುತ್ತಾನೆ. ಹೀಗೆ ಆದಿತ್ಯ ಮಂಡಲದಲ್ಲಿರುವ ಮತ್ತು ತನ್ನ ಶರೀರದಲ್ಲಿರುವ ಪುರುಷನು ಒಬ್ಬನೇ ಎಂದು ತಿಳಿದು ಧ್ಯಾನಿಸಬೇಕು. ಈ ಧ್ಯಾನಕ್ಕೆ ವಿಘ್ನರೂಪಗಳಾದ ಅರಿಷ್ಟಗಳನ್ನೂ ಹಿಂದೆ ಹೇಳಿದಂತೆ ತಿಳಿದು ಅವುಗಳಿಗೆ ಪರಿಹಾರಮಾಡಿಕ್ಕೊಳ್ಳಬೇಕು. ಈ ರೀತಿ ಪರಮಪುರುಷಾರ್ಥಕ್ಕೆ ಕಾರಣವಾದ ಬ್ರಹ್ಮವಿದ್ಯೆಯನ್ನೂ ತಿಳಿಸಿದುದಾಯಿತು.

---

*English Translation*

---

1. To him the Vedas yield no more milk, he has no luck in what he has learnt (f om his Guru) ; he does not know the path of virtue.

2. This has also been declared by a Rishi (Rv. X. 71, 6) :—

3. 'He who has forsaken the friend (the Veda), that knows his friends in his speech there is no luck. Though he hears, he hears in vain, for he does not know the path of virtue.'

4. Here it is clearly said that he has no luck in what he has learnt, and that he does not know the path of virtue.

5. Therefore let no one who knows this, lay the sacrificial fire (belonging to the Mahavrata) for another, let him not sing the Samans of the Mahavrata for another, let him not recite the Sastras of that day for another.

6. However, let him willingly do this for a father or for an Akarya; for that is done really for himself.

7. We have said thet the incorporeal conscious self and the sun are one. When these two become separated, the sun is seen as if it were the moon no rays spring from it ; the sky is red like madder; the patient cannot retain the wind, his head smells bad like a raven's nest :—let him know then that his self (in the body) is gone, and that he will not live very long.

8. Then whatever he thinks he has to do, let him do it, and let him recite the following hymns , Yad anti yak ka dnrake (Rv. IX. 67, 21–27) ; Ad it pratnasya retasah (Rv. VIII, 6. 30) : Yotra brahma pavamana (Rv. IX 113, 6–11) ; Udvayam tamasas pari (Rv. I. 50, 10).

9. Next, when the sun is seen pierced, and seems like the nave of a cart-wheel, when he sees his own shadow pierced, let him know then that it is so (as stated before, i. e., that he is going to die soon).

10. Next, when he sees himself in a mirror or in the water with a crooked head, or without a head, or when his pupils are seen inverted or not straight, let him know then that it is so.

11. Next, let him cover his eyes and watch, then threads are seen as if falling together. But if he does not see them, let him know then that it is so.

12. Next, let him cover his ears and listen, and there will be a sound as if of a burning fire or of a carriage. But if he does not hear it, let him know then that it is so.

13. Next, when fire looks blue like the neck of a peacock, or when he sees lightning in a cloudless sky, or no lightning in a clouded sky, or when he sees as it were bright rays in a dark cloud, let him know then that it is so.

14. Next, when he sees the ground as if it were burning, let him know that it is so.

15. These are the visible signs (from 7-14).

16. Next come the dreams.

17. If he sees a black man with black teeth, and that man kills him; or a boar kills him; a monkey jumps on him; the wind carries him along quickly; having swallowed gold he spits it out; he eats honey; he chews stalks; he carries a red lotus; he drives with asses and boars; wearings wreath of red flowers (naladas) he drives a black cow with a black calf, facing the south,

18. If a man sees any one of these (dreams), let him fast, and cook a pot of milk, sacrifice it, accompanying each oblation with a verse of the Ratri hymn (Rv. X. 127), and then after having fed the Brahmanas, with other food (prepared at his house) eat himself the (rest of the oblation.

19. Let him know that the person within all beings, not heard here, not reached, not thought, not subdued, not seen, not understood, not classed, but hearing, thinking, seeing, classing, sounding, understanding, knowing, is his self.

ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ತೃತೀಯಾರಣ್ಯಕೇ
ದ್ವಿತೀಯಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ತೃತೀಯಾರಣ್ಯಕದ
ಎರಡನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವು ॥



## ಅಥ ತೃತೀಯಾರಣ್ಯಕೇ ದ್ವಿತೀಯಾಧ್ಯಾಯೇ ಪಂಚಮಃ ಖಂಡಃ

ಮೂರನೆಯ ಆರಣ್ಯಕದ ಎರಡನೆಯ ಅಧ್ಯಾಯದಲ್ಲಿ ಐದನೆಯ ಖಂಡವು

**ಅಥ ಖಲ್ವಿಯಂ ಸರ್ವಸ್ಯೈ ವಾಚ ಉಪನಿಷತ್ಸರ್ವಾ ಹ್ಯೇವೇಮಾಃ ಸರ್ವಸ್ಯೈ ವಾಚ ಉಪನಿಷದ ಇಮಾಂ ತ್ವೇವಾಽಽಚಕ್ಷತೇ ॥**

ಪ್ರಾಸಂಗಿಕಂ ಪರಿಸಮಾಪ್ಯ ಪ್ರಕೃತಾಮೇವೋಪಾಸನಾಂ ಪ್ರಕಾರಾಂತರೇಣ ವಕ್ತುಂ ಪ್ರತಿಜಾನೀತೇ — ಪ್ರಾಸಂಗಿಕಬ್ರಹ್ಮವಿದ್ಯಾಕಥನಾನಂತರ್ಯಾರ್ಥೇಽಥಶಬ್ದಃ । ವಕ್ಷ್ಯಮಾಣೋ-ಪಾಸನಾಯಾಃ ಪ್ರಸಿದ್ಧ್ಯರ್ಥಃ ಖಲುಶಬ್ದಃ । ಇಯಮನಂತರಮೇವ ವಕ್ಷ್ಯಮಾಣೋಪನಿಷದು-ಪಾಸನಾ ಸರ್ವಸ್ಯೈ ವಾಚಃ ಸಂಬಂಧಿನೀ । ಅಕಾರಾದಿಕ್ಷಕಾರಾಂತಾನಾಂ ಮಾತೃಕಾಮಂತ್ರ-ಗತಾನಾಂ ಸರ್ವೇಷಾಂ ವರ್ಣಾನಾಮತ್ರೋಪಾಸನೀಯತ್ವಾತ್ । ಯದ್ಯಪ್ಯಸ್ಮಿನ್ನಾರಣ್ಯಕೇ ಪ್ರೋಕ್ತಾಃ

**ಸರ್ವಾ ಅಪಿ ಸಂಹಿತೋಪಾಸನಾಃ ಕೃತ್ಸ್ನವಾಗ್ವಿಷಯಾ ಏವ ತಥಾಪಿ ತದಭಿಜ್ಞಾಃ ಪುರುಷಾ ಇಮಾಮೇವೋಪನಿಷದಂ ವಕ್ಷ್ಯಮಾಣಾಮುಪಾಸನಾಮೇವ ಸರ್ವೋತ್ಕೃಷ್ಟಾಮಾಚಕ್ಷತೇ ||**

ಪ್ರಸಂಗಸಂಗತಿಯಿಂದ ಪ್ರಾಪ್ತವಾದ ಅರಿಷ್ಟಾದಿಗಳನ್ನು ಹೇಳಿದಮೇಲೆ ಪ್ರಕೃತವಾದ ಉಪಾಸನೆಯನ್ನೇ ಪ್ರಕಾರಾಂತರದಿಂದ ಹೇಳಲು ಪ್ರಾರಂಭಿಸುತ್ತಾರೆ. ಮುಂದೆ ಹೇಳುವ ಉಪಾಸನೆಯ ಪ್ರಸಿದ್ಧಿಯನ್ನು ಸೂಚಿಸಲುಖಲುಶಬ್ದ ಹೇಳಿದೆ. ಈಗ ಹೇಳುವ ಉಪನಿಷದುಪಾಸನೆಯು ಸಕಲವಾಕ್ಸಂಬಂಧಿಯಾಗಿರುತ್ತದೆ. ಏಕೆಂದರೆ ಅಕಾರಾದಿಕ್ಷಕಾರಾಂತದ ವರೆಗಿರುವ ಮಾತೃಕಾಮಂತ್ರದಲ್ಲಿರುವ ಸಕಲವರ್ಣಗಳ ಉಪಾಸನೆಯನ್ನೂ ಹೇಳುತ್ತಾರೆ. ಮೂರನೆಯ ಆರಣ್ಯಕದಲ್ಲಿ ಹೇಳಿರುವ ಉಪಾಸನೆಗಳೆಲ್ಲವೂ ಸಂಪೂರ್ಣವಾಗ್ವಿಷಯವಾಗಿದ್ದರೂ ವಿಂದ್ವಾಂಸರು ಈ ಮುಂದೆ ಹೇಳುವ ಉಪಾಸನೆಯನ್ನೇ ಸರ್ವೋತ್ಕೃಷ್ಟವೆಂದು ಹೇಳುತ್ತಾರೆ.

**ಪೃಥಿವ್ಯಾ ರೂಪಂ ಸ್ಪರ್ಶಾ ಅಂತರಿಕ್ಷಸ್ಯೋಷ್ಮಾಣೋ ದಿವಃ ಸ್ವರಾ ಅಗ್ನೇ ರೂಪಂ ಸ್ಪರ್ಶಾ ವಾಯೋರೂಷ್ಮಾಣ ಆದಿತ್ಯಸ್ಯ ಸ್ವರಾ ಋಗ್ವೇದಸ್ಯ ರೂಪಂ ಸ್ಪರ್ಶಾ ಯಜುರ್ವೇದಸ್ಯೋಷ್ಮಾಣಃ ಸಾಮವೇದಸ್ಯ ಸ್ವರಾಶ್ಚಕ್ಷುಷೋ ರೂಪಂ ಸ್ಪರ್ಶಾಃ ಶ್ರೋತ್ರಸ್ಯೋಷ್ಮಾಣೋ ಮನಸಃ ಸ್ವರಾಃ ಪ್ರಾಣಸ್ಯ ರೂಪಂ ಸ್ಪರ್ಶಾಃ ಅಪಾನಸ್ಯೋಷ್ಮಾಣೋ ವ್ಯಾನಸ್ಯ ಸ್ವರಾಃ ||**

**ಪ್ರತಿಜ್ಞಾತಾಮುಪಾಸನಾಂ ದರ್ಶಯತಿ—ಕಕಾರಾದಯೋ ಮಕಾರಾವಸಾನಾ ವರ್ಗಪಂಚಕನಿಷ್ಠಾ ವರ್ಣಾಃ ಸ್ಪರ್ಶಸಂಜ್ಞಕಾಃ। ಶಷಸಹಾಶ್ಚತ್ವಾರ ಊಷ್ಮಸಂಜ್ಞಕಾಃ। ಅಕಾರಾದಯ ಔಕಾರಾಂತಾಶ್ಚತುರ್ದಶ ಸ್ವರಸಂಜ್ಞಕಾಃ। ಏತೇಷು ಸ್ಪರ್ಶೋಷ್ಮಸ್ವರೇಷು ಪೃಥಿವ್ಯಾದಿಲೋಕದೃಷ್ಟಿರಗ್ನ್ಯಾದಿದೇವತಾದೃಷ್ಟಿರ್ಋಗಾದಿವೇದದೃಷ್ಟಿಶ್ಚಕ್ಷುರಾದೀಂದ್ರಿಯದೃಷ್ಟಿಃ ಪ್ರಾಣಾದಿವಾಯುದೃಷ್ಟಿಶ್ಚ ಕರ್ತವ್ಯಾ||**

ಉಪಾಸನಾರೂಪವನ್ನು ವಿವರಿಸುತ್ತಾರೆ. ಕಕಾರಾದಿ ಮಕಾರದವರೆಗಿರುವ ಇಪ್ಪತ್ತೈದು ವರ್ಗೀಯಾಕ್ಷರಗಳಿಗೆ ಸ್ಪರ್ಶವೆಂದು ಹೆಸರು. ಶಷಸಗಳಿಗೆ ಊಷ್ಮವೆಂದು ಹೆಸರು. ಅಕಾರಾದಿ ಔಕಾರದವರೆಗಿರುವ ಹದಿನಾಲ್ಕುವರ್ಣಗಳಿಗೆ ಸ್ವರಗಳೆಂದು ಹೆಸರು. ಈ ಸ್ಪರ್ಶ, ಊಷ್ಮ, ಸ್ವರಗಳಲ್ಲಿ ಕ್ರಮವಾಗಿ ಪೃಥಿವೀ, ಅಂತರಿಕ್ಷದ್ಯುಲೋಕಧ್ಯಾನವನ್ನೂ ಅಗ್ನಿ, ವಾಯು, ಆದಿತ್ಯದೇವತಾಧ್ಯಾನವನ್ನೂ, ಋಗ್ವೇದ, ಯಜುರ್ವೇದ, ಸಾಮವೇದದೃಷ್ಟಿಯನ್ನೂ, ಚಕ್ಷುಸ್ಸು, ಶ್ರೋತ್ರ, ಮನೋರೂಪ ಇಂದ್ರಿಯದೃಷ್ಟಿಯನ್ನೂ, ಪ್ರಾಣ, ಅಪಾನ, ವ್ಯಾನರೂಪ ವಾಯುಧ್ಯಾನವನ್ನೂ ಮಾಡಬೇಕು.

ಅಥ ಖಲ್ವಿಯಂ ದೈವೀ ವೀಣಾ ಭವತಿ ತದನುಕೃತಿರಸೌ
ಮಾನುಷೀ ವೀಣಾ ಭವತಿ ॥

ಅಸ್ಯಾ ಉಪಾಸನಾಯಾ ಅಂಗತ್ವೇನ ಸ್ವತಂತ್ರತ್ವೇನ ವಾ ವೀಣಾಧ್ಯಾನಂ ವಿಧತ್ತೇ—ಅಥ ಪೃಥಿವ್ಯಾದಿಧ್ಯಾನಕಥನಾನಂತರಮ್ । ಖಲುಶಬ್ದೋ ವೀಣಾಪ್ರಸಿದ್ಧ್ಯರ್ಥಃ। ಇಯಮಸ್ಮಾಭಿರ್ದೃಶ್ಯ-ಮಾನಾ ಶರೀರರೂಪಾ ದೈವೀ ದೇವನಿರ್ಮಿತಾ ಕಾಚಿದ್ವೀಣಾ ವಿದ್ಯತೇ । ನ ಹಿ ದೇವವ್ಯತಿರೇಕೇಣ ಕಶ್ಚಿದಪೀಮಂ ದೇಹಂ ನಿರ್ಮಾತುಂ ಕ್ಷಮತೇ । ಯಾ ತು ಗಾಯಕೈರ್ಧಾರ್ಯಮಾಣಾ ಕಾಷ್ಠಮಯೀ ವೀಣಾ ಸಾ ತು ಮನುಷ್ಯೈರ್ನಿರ್ಮಿತತ್ವಾನ್ಮಾನುಷೀ । ಅಸೌ ಚ ತದನುಕೃತಿರ್ಭವತಿ । ತಾಂ ದೈವೀಂ ವೀಣಾಮನುಸೃತ್ಯ ಕೃತಿರ್ನಿಷ್ಪಾದನಂ ಯಸ್ಯಾಃ ಸಾ ತದನುಕೃತಿಃ ತತ್ಸದೃಶೀತ್ಯರ್ಥಃ ॥

ಪೂರ್ವೋಕ್ತ ಉಪಾಸನೆಯ ಅಂಗರೂಪವಾಗಿ ಅಥವಾ ಸ್ವತಂತ್ರವಾಗಿ ವೀಣಾಧ್ಯಾನವನ್ನು ವಿಧಿಸುತ್ತಾರೆ. ಅಥ ಅಂದರೆ ಪೃಥಿವ್ಯಾದಿಧ್ಯಾನವಿವರಿಸಿದ ಮೇಲೆ ಎಂದರ್ಥ. ಖಲುಶಬ್ದವು ವೀಣಾಪ್ರಸಿದ್ಧಿಯನ್ನು ತಿಳಿಸುತ್ತದೆ. ಈ ನಮ್ಮ ಶರೀರವೆಂಬುದೇ ಒಂದು ದೇವನಿರ್ಮಿತವಾದ ವೀಣೆಯು. ದೇವನಲ್ಲದೆ ಈ ಶರೀರವೀಣೆಯನ್ನು ಇನ್ನಾರೂ ನಿರ್ಮಿಸಲಾರರು. ಗಾಯಕರು ಧರಿಸುವ ಮರದವೀಣೆಯು ಮನುಷ್ಯನಿರ್ಮಿತವಾದುದರಿಂದ ಮಾನುಷೀವೀಣೆಯಾಗುತ್ತದೆ. ದೈವೀ ಶರೀರ ವೀಣೆಯನ್ನನುಸರಿಸಿ ಅದರಂತೆ ಮಾನುಷೀವೀಣಾರಚನೆಯಾಗಿದೆ.

ಯಥಾಽಸ್ಯಾಃ ಶಿರ ಏವಮಮುಷ್ಯಾಃ ಶಿರೋ ಯಥಾಽಸ್ಯಾ ಉದರ-
ಮೇವಮಮುಷ್ಯಾ ಅಮ್ಭಣಂ ಯಥಾಽಸ್ಯೈ ಜಿಹ್ವೈವಮಮುಷ್ಯೈ
ವಾದನಂ ಯಥಾಽಸ್ಯಾಸ್ತನ್ತ್ರಯ ಏವಮಮುಷ್ಯಾ ಅಂಗುಲಯೋ
ಯಥಾಽಸ್ಯಾಃ ಸ್ವರಾ ಏವಮಮುಷ್ಯಾಃ ಸ್ವರಾ ಯಥಾಽಸ್ಯಾಃ ಸ್ಪರ್ಶಾ
ಏವಮಮುಷ್ಯಾಃ ಸ್ಪರ್ಶಾ ಯಥಾ ಹ್ಯೇವೇಯಂ ಶಬ್ದವತೀ ತರ್ದ್ಮ-
ವತ್ಯೇವಮಸೌ ಶಬ್ದವತೀ ತರ್ದ್ಮವತೀ ಯಥಾ ಹ್ಯೇವೇಯಂ ಲೋ-
ಮಶೇನ ಚರ್ಮಣಾಽಪಿಹಿತಾ ಭವತ್ಯೇವಮಸೌ ಲೋಮಶೇನ
ಚರ್ಮಣಾಽಪಿಹಿತಾ ॥

ಶರೀರರೂಪಾಯಾ ದೇವವೀಣಾಯಾಃ ಕಾಷ್ಠನಿರ್ಮಿತಾಯಾಃ ಮಾನುಷವೀಣಾಯಾಶ್ಚ ಸಾದೃಶ್ಯಂ ಧ್ಯಾನಾಯ ದರ್ಶಯತಿ—ಅಸ್ಯಾ ಅಸ್ಮಾಭಿರ್ದೃಶ್ಯಮಾನಾಯಾಃ ಶರೀರರೂಪಾಯಾ ದೈವ್ಯಾ ವೀಣಾಯಾ ಊರ್ಧ್ವಭಾಗೇ ಪ್ರಸಿದ್ಧಂ ಶಿರೋ ಯಥಾ ಭವತಿ ಏವಮಮುಷ್ಯಾ ಉಪಾಸಕ-

**ಶರೀರಾದ್ವ್ಯತಿರಿಕ್ತಾಯಾಃ ಕಾಷ್ಠನಿರ್ಮಿತಾಯಾ ಮಾನುಷ್ಯಾ ವೀಣಾಯಾ ಊರ್ಧ್ವಭಾಗೇ ಶಿರೋ ದ್ರಷ್ಟವ್ಯಮ್ । ಯೋ ಭಾಗೋ ಗಾಯಕಸ್ಯ ವಾಮಾಂಸಮಾಶ್ರಿತ್ಯಾವಸ್ಥಿತಸ್ತತ್ರಾಲಾಬುಖಂಡೋಪೇತತ್ವೇನ ಶಿರಸ ಆಕಾರೋ ದೃಶ್ಯತೇ । ತದಿದಮೇಕಂ ಸಾದೃಶ್ಯಮ್। ಉತ್ತರಾಣ್ಯಪಿ ಸಾದೃಶ್ಯಾನ್ಯೇವಂ ದ್ರಷ್ಟವ್ಯಾನಿ । ಅಸ್ಯಾಃ ಶರೀರವೀಣಾಯಾಃ ಪ್ರಸಿದ್ಧೋದರವದಮುಷ್ಯಾಃ ಕಾಷ್ಠವೀಣಾಯಾ ಅಂಭಣಂ ವೀಣಾದಂಡಮಧ್ಯವರ್ತಿ ಚ್ಛಿದ್ರಮ್ । ಶರೀರವೀಣಾಯಾಮವಸ್ಥಿತಾ ಜಿಹ್ವಾ ಯಥಾ ಸ್ವರೋತ್ಪತ್ತಿಹೇತುಸ್ತಥೈವಾಮುಷ್ಯೈ ಕಾಷ್ಠವೀಣಾಯಾ ಹಸ್ತೇನ ವಾದನಂ ಸ್ವರೋತ್ಪತ್ತಿಹೇತುಃ। ತಂತ್ರಯೋಂಗುಲಯ ಇತಿ ಪದದ್ವಯಂ ವ್ಯತ್ಯಾಸೇನ ಯೋಜನೀಯಮ್ । ಅಸ್ಯಾಃ ಶರೀರವೀಣಾಯಾ ಅಂಗಲಯೋ ಯಥಾ ಬಹುವಿಧಾ ದೀರ್ಘಾವರ್ತಂತೇ ತಥೈವಾಮುಷ್ಯಾಃ ಕಾಷ್ಠವೀಣಾಯಾಸ್ತಂತ್ರಯೋ ದೀರ್ಘತಂತವಃ। ಯಥಾಽಸ್ಯಾಃ ಶರೀರವೀಣಾಯಾ ಸ್ವರಾಃ ಕೋಷ್ಠಾಗ್ನಿಪ್ರೇರಿತವಾಯೋಃ ಸಂಬಂಧಿವಿಶೇಷೇಣೋತ್ಪನ್ನಾಃ ಷಡ್ಜರ್ಷಭಗಾಂಧಾರಾದಯೋ ಯಥಾ ವರ್ತಂತೇ ತಥೈವಾಮುಷ್ಯಾಃ ಕಾಷ್ಠವೀಣಾಯಾಸ್ತತ್ತತ್ಸ್ಥಾನೇಷ್ವಂಗುಲಿಧಾರಣೇನ ಷಡ್ಜಾದಿಸ್ವರಾ ಅವಿರ್ಭವಂತಿ । ಸ್ವರಾಭಿವ್ಯಕ್ತ್ಯರ್ಥಂ ಯಥಾ ಶರೀರಮಧ್ಯೇ ವಾಯೋಃ ಸ್ಪರ್ಶವಿಶೇಷಾಃ ಪ್ರಯತ್ನಾತ್ಸಂಪದ್ಯಂತೇ ತಥಾ ಕಾಷ್ಠವೀಣಾಯಾ ಅಂಗುಲಿಸ್ಪರ್ಶವಿಶೇಷಾಃ ಪ್ರಯತ್ನಸಂಪಾದ್ಯಾಃ। ಯಥಾ ಚೇಯಂ ಶರೀರವೀಣಾ ಶಬ್ದವತೀ ಸ್ವರಾಭಿವ್ಯಕ್ತಿಹೇತು ಭೂತಧ್ವನಿಯುಕ್ತಾ ತರ್ದ್ಮವತೀ ತರ್ದನವತೀ। ಧಮನೀಭಿಃ ಶರೀರಾವಯವಾನಾಂ ದೃಢಬಂದನಂ ತರ್ದನಮ್ । ತಥೈವ ಕಾಷ್ಠವೀಣಾಪಿ ಶಬ್ದವತೀ ಸ್ವರವಿಶೇಷಾಭಿವ್ಯಕ್ತಿ ಹೇತುಭೂತಧ್ವನಿಯುಕ್ತಾ । ತಥಾ ತರ್ದ್ಮವತೀ ತರ್ದನೇನ ತಂತ್ರೀಣಾಂ ದೃಢಬಂದನೇನ ಯುಕ್ತಾ। ಯಥಾ ಚೇಯಂ ಶರೀರವೀಣಾ ಲೋಮಶೇನ ಪ್ರಭೂತಲೋಮಾಧಾರೇಣ ಚರ್ಮಣಾಽಪಿಹಿತಾಽಽಚ್ಛಾದಿತಾ ಭವತಿ ಏವಮಸೌ ಕಾಷ್ಠವೀಣಾಪಿ ಲೋಮಶೇನ ವ್ಯಾಘ್ರಾದಿಚರ್ಮಣಾಽಽಚ್ಛಾದಿತಾ ಭವತಿ ॥**

ಶರೀರರೂಪದೇವವೀಣೆಗೂ, ಮರದಿಂದ ಮಾಡಿದ ಮಾನುಷವೀಣೆಗೂ ಸಾದೃಶ್ಯವನ್ನು ಧ್ಯಾನಕರ್ತೃಕ್ಷರ ವಿವರಿಸುತ್ತಾರೆ. ನಾವು ನೋಡುತ್ತಿರುವ ಶರೀರರೂಪದೇವವೀಣೆಯ ಊರ್ಧ್ವಭಾಗದಲ್ಲಿ ಪ್ರಸಿದ್ಧವಾದ ಶಿರಸ್ಸಿರುತ್ತದೆ. ಅದರಂತೆ ಮರದಿಂದ ನಿರ್ಮಿತವಾದ ಮಾನುಷವೀಣೆಯ ಊರ್ಧ್ವಭಾಗದಲ್ಲಿ ತಲೆ ಇರುತ್ತದೆ. ಗಾಯಕನ ಎಡಭುಜಭಾಗವನ್ನು ಆಶ್ರಯಿಸಿರುವ ಸೋರೆಯಬುರುಡೆಯಿಂದ ಕೂಡಿರುವ ಭಾಗ ಶಿರಸ್ಸಿನಂತೆಯೇ ಇರುತ್ತದೆ. ಇದೊಂದು ಸಾದೃಶ್ಯ ಮುಂದೆಯೂ ಹೀಗೆಯೇ ಸಾದೃಶ್ಯತಿಳಿಯಬೇಕು. ಶರೀರವೀಣೆಯ ಉದರಭಾಗದಂತೆ ಕಾಷ್ಠವೀಣೆಗೂ ಮಧ್ಯಭಾಗದಲ್ಲಿ ಛಿದ್ರಗಳಿರುತ್ತವೆ. ಶರೀರವೀಣೆಯಲ್ಲಿರುವ ನಾಲಿಗೆಯು ಹೇಗೆ ಸ್ವರೋತ್ಪತ್ತಿಗೆ ಕಾರಣವೋ ಅದರಂತೆ ಮರದ ವೀಣೆಯನ್ನು ಕೈಯಿಂದ ಬಾರಿಸುವುದು ಸ್ವರಕ್ಕೆ ಕಾರಣವಾಗುತ್ತದೆ. ಶರೀರವೀಣೆಗೆ ನಾನಾಬೆರಳುಗಳು ಹೇಗೆ ಉದ್ದುದ್ದವಾಗಿವೆಯೋ ಅದರಂತೆ ಮಾನುಷವೀಣೆಗೆ ಉದ್ದುದ್ದವಾದ ತಂತಿಗಳಿರುತ್ತವೆ. ಶರೀರವೀಣೆಯ ಸ್ವರಗಳು ಉದರಾಗ್ನಿಯಿಂದ ಪ್ರೇರೇಪಿತವಾದ ವಾಯುಸಂಬಂಧವಿಶೇಷದಿಂದ ಉಂಟಾಗಿ ಷಡ್ಜಋಷಭಗಾಂಧಾರಾದಿರೂಪದಿಂದ ಪರಿಣತವಾಗುತ್ತವೆಯೋ ಅದರಂತೆ ಕಾಷ್ಠ ವೀಣೆಯ ಆಯಾಯಭಾಗಗಳಲ್ಲಿ ಬೆರಳನ್ನಿಟ್ಟರೆ ಷಡ್ಜಾದಿಸ್ವರಗಳುಂಟಾಗುತ್ತವೆ. ಸ್ವರಗಳುಂಟಾಗಲು ಶರೀರಮಧ್ಯದಲ್ಲಿ ವಾಯುವಿನ ಸ್ಪರ್ಶವು ಹೇಗೆ ಪ್ರಯತ್ನಸಾಧ್ಯವೋ ಹಾಗೆ ಕಾಷ್ಠವೀಣೆಯಲ್ಲಿ ಬೆರಳಿನಸ್ಪರ್ಶವಿಶೇಷವು ಪ್ರಯತ್ನಸಾಧ್ಯ

ವಾಗಿದೆ. ಶರೀರವೀಣೆಯು ಸ್ವರಾಭಿವ್ಯಕ್ತಿಗೆಕಾರಣವಾದ ಧ್ವನಿಯಿಂದ ಕೂಡಿದ್ದು ಸಹಸ್ರಾರುನರಗಳಿಂದ ಅವಯವಗಳ ದೃಢಬಂದನವನ್ನು ಹೊಂದಿರುವುದೋ ಅದರಂತೆ ಕಾಷ್ಠವೀಣೆಯೂ ಧ್ವನಿಯಿಂದ ಕೂಡಿ ತಂತಿಗಳ ದೃಢಬಂದನದಿಂದ ಕೂಡಿರುತ್ತದೆ. ಶರೀರವೀಣೆಯು ರೋಮಾಧಾರವಾದ ಚರ್ಮದಿಂದ ಮುಚ್ಚಿರುವಂತೆ ಕಾಷ್ಠವೀಣೆಯೂ ಹುಲಿಮುಂತಾದವುಗಳ ಚರ್ಮದಿಂದ ಆಚ್ಛಾದಿತವಾಗಿರುತ್ತದೆ.

**ಲೋಮಶೇನ ಹ ಸ್ಮ ವೈ ಚರ್ಮಣಾ ಪುರಾ ವೀಣಾ ಅಪಿದಧತಿ ॥**

ನನ್ವಿದಾನೀಂತನಾಃ ಕಾಷ್ಠವೀಣಾಶ್ಚರ್ಮಣಾ ನ ಬಧ್ಯಂತ ಇತ್ಯಾಶಂಕ್ಯಾಹ—ಇದಾನೀಮತ್ರ ಚರ್ಮಾಪಿಧಾನಾಭಾವೇಽಪಿ ಪೂರ್ವಕಾಲೇ ದೇವಲೋಕಾದೌ ತದ್ವಿದ್ಯತ ಇತಿ ದ್ರಷ್ಟವ್ಯಮ್ ॥

ಈ ಕಾಲದಲ್ಲಿ ಕಾಷ್ಠವೀಣೆಯು ಚರ್ಮದಿಂದ ಕಟ್ಟಲ್ಪಡುವುದಿಲ್ಲವೆಂದು ಶಂಕೆ ಬಂದರೆ ಸಮಾಧಾನ ತೋರಿಸುತ್ತಾರೆ. ಈಗ ಚರ್ಮಾಚ್ಛಾದನೆ ಇಲ್ಲದಿದ್ದರೂ ಪೂರ್ವಕಾಲದಲ್ಲಿ ದೇವಲೋಕಾದಿಗಳಲ್ಲಿ ಅದು ಪ್ರಸಿದ್ಧವಾಗಿತ್ತೆಂದು ತಿಳಿಯಬೇಕು.

**ಸ ಯೋ ಹೈತಾಂ ದೈವೀಂ ವೀಣಾಂ ವೇದ ಶ್ರುತವದನೋ ಭವತಿ ಭೂಮಿಪ್ರಾಽಸ್ಯ ಕೀರ್ತಿರ್ಭವತಿ ಯತ್ರ ಕ್ವಚಾಽಽರ್ಯಾ ವಾಚೋ ಭಾಷಂತೇ ವಿದುರೇನಂ ತತ್ರ ॥**

ವೀಣಾಧ್ಯಾನಸ್ಯ ಫಲಂ ದರ್ಶಯತಿ—ಯಃ ಪುಮಾನ್ಮಾನುಷವೀಣಾಸಾದೃಶ್ಯಾನುಸಂಧಾನಪುರಃಸರಮೇತಾಂ ಶರೀರರೂಪಾಂ ದೈವೀಂ ವೀಣಾಮುಪಾಸ್ತೇ ಸೋಽಯಂ ಶ್ರುತವದನಃ ಸರ್ವಜನಶ್ರೋತ್ರಪ್ರಿಯಂ ವದನಮುಕ್ತಿರ್ಯಸ್ಯಾಸೌ ಶ್ರುತವದನೋ ವಿದ್ವತ್ಸಭಾಯಾಂ ರಾಜಸಭಾಯಾಂ ಚ ಸರ್ವೇಷಾಂ ಪ್ರಿಯತಮೈರ್ವಚನೈರತ್ಯಂತಂ ರಂಜಕೋ ಭವತಿ । ತಥಾಽಸ್ಯ ಕೀರ್ತಿರ್ಭೂಮಿಪ್ರಾ ಭೂಮೇಃ ಪೂರಯಿತ್ರೀ ಭವತಿ । ಸರ್ವಸ್ಯಾಂ ಭೂಮಾವವಿವಾದೇನ ಸರ್ವೇಽಪಿ ಜನಾ ಏನಂ ವಿದ್ಯಾಧಿಕಂ ಮನ್ಯಂತ ಇತ್ಯರ್ಥಃ । ಕಿಂಚ ಯತ್ರ ಕ್ವಚ ಯಸ್ಮಿನ್ಕಸ್ಮಿನ್ನಪಿ ದೇಶೇ ಯಸ್ಮಿನ್ಕಸ್ಮಿನ್ನಪಿ ಗ್ರಾಮವಿಶೇಷೇ ಕೇಚಿದಾರ್ಯಾ ವೇದಶಾಸ್ತ್ರಪಾರಂಗತಾಸ್ತದನುಷ್ಠಾನಪರಾ ಬಹವಃ ಸಭಾಯಾಮುಪವಿಶ್ಯ ಭಾಷಂತೇ ವಿದ್ಯಾಪ್ರಸಂಗಂ ಕುರ್ವಂತಿ ತತ್ರ ತಸ್ಯಾಂ ಸಭಾಯಾಮೇನಂ ವಿದುಃ ಸರ್ವಜ್ಞೋಽಯಮತ್ಯಂತಪಂಡಿತ ಇತ್ಯೇನಮುಪಾಸಕಂ ಸ್ಮರಂತಿ ॥

ವೀಣಾಧ್ಯಾನದ ಫಲವನ್ನು ವಿವರಿಸುತ್ತಾರೆ. ಯಾವ ಉಪಾಸಕನು ಮಾನುಷವೀಣಾಸಾದೃಶ್ಯದ ಅನುಸಂಧಾನದೊಡನೆ ಈ ಶರೀರರೂಪವಾದ ದೈವೀವೀಣೆಯ ಉಪಾಸನೆ ಮಾಡುತ್ತಾನೋ ಅವನು ವಿದ್ವತ್ಸಭೆಯಲ್ಲಿಯೂ, ರಾಜಸಭೆಯಲ್ಲಿಯೂ ಎಲ್ಲರಿಗೂ ಪ್ರಿಯಕರವಾದ ವಚನದಿಂದ ಅತ್ಯಂತವಾಗಿ ರಂಜಕನಾಗುತ್ತಾನೆ. ಇವನ ಕೀರ್ತಿಯು ಭೂಮಿಯಲ್ಲಿ ಎಲ್ಲಾಕಡೆ ಪ್ರಸರಿಸುತ್ತದೆ. ಎಲ್ಲಾ ಜನರೂ ಇವನನ್ನು ವಿದ್ಯಾಧಿಕನನ್ನಾಗಿ ತಿಳಿಯುತ್ತಾರೆ. ಎಲ್ಲಿ ನೋಡಿದರೂ ಸಜ್ಜನರೂ ಆರ್ಯರೂ, ಅನುಷ್ಠಾನಪರರೂ ಇವನನ್ನು ಮಹಾಪಂಡಿತನೆಂದು ಸ್ಮರಿಸುತ್ತಾರೆ.

ಅಥಾತೋ ವಾಗ್ರಸೋ ಯಸ್ಯಾಂ ಸಂಸದ್ಯಧೀಯಾನೋ ವಾ ಭಾಷ-
ಮಾಣೋ ವಾ ನ ವಿರುರುಚುಷೇತ ತತ್ರೈತಾಮೃಚಂ ಜಪೇತ್॥

ವೀಣಾಧ್ಯಾನಫಲೋಕ್ತಿಪ್ರಸಂಗೇನ ವಿದ್ವತ್ಸಭಾರಂಜನಹೇತುಂ ಮಂತ್ರವಿಶೇಷಂ ವಿಧತ್ತೇ— ಅಥ ವೀಣೋಪಾಸ್ತಿಕಥನಾನಂತರಂ ಯತಃ ಕಾರಣಾತ್ಫಲೋಕ್ತಿಪ್ರಸಂಗೇನ ಸಭಾರಂಜನಹೇತು-ರ್ಮಂತ್ರೋ ಬುದ್ಧಿಸ್ಥೋಽತಃ ಕಾರಣಾದ್ವಾಗ್ರಸೋ ವಾಚಃ ಸಾರಭೂತೋ ಮಂತ್ರೋಽಭಿಧೀಯತ ಇತಿ ಶೇಷಃ। ಯಸ್ಯಾಂ ಸಂಸದಿ ವಿದ್ವತ್ಸಭಾಯಾಮಧೀಯಾನೋ ವೇದಶಾಸ್ತ್ರಗೋಷ್ಠೀಂ ಕುರ್ವಾಣಃ ಪುರುಷೋ ರಾಜಸಭಾಯಾಂ ವಾ ಲೌಕಿಕಾನ್ಯುಚಿತವಾಕ್ಯಾನಿ ಭಾಷಮಾಣೋ ವಾ ನ ವಿರುರುಚುಷೇತ ವಿಶೇಷೇಣ ರುಚಿಕರಃ ಸರ್ವಜನಾನಾಂ ರಂಜಕೋ ಯದಿ ನ ಭವೇತ್ತತ್ರ ತಸ್ಯಾಂ ಸಭಾಯಾಂ ರಂಜಕತ್ವಸಿದ್ಧ್ಯರ್ಥಮೇತಾಂ ವಕ್ಷ್ಯಮಾಣಮೃಚಂ ಜಪೇತ್ತನ್ಮಂತ್ರಪುರಶ್ಚ-ರಣಾದಿಕಂ ಕುರ್ಯಾತ್॥

ವೀಣಾಧ್ಯಾನದ ಫಲಪ್ರಸಂಗದಿಂದ ವಿದ್ವತ್ಸಭಾರಂಜನಕ್ಕೆ ಕಾರಣವಾದ ಮಂತ್ರವಿಶೇಷವನ್ನು ವಿವರಿಸುತ್ತಾರೆ. ಅಥ ಅಂದರೆ ವೀಣೋಪಾಸನೆ ವಿವರಿಸಿದಮೇಲೆ ಯಾವ ಕಾರಣದಿಂದ ಫಲೋಕ್ತಿಪ್ರಸಂಗದಿಂದ ಸಭಾರಂಜನಕ್ಕೆ ಕಾರಣವಾದ ಮಂತ್ರವು ಬುದ್ಧಿಸ್ಥವಾಗಿದೆಯೋ ಆ ಕಾರಣದಿಂದ ವಾಕ್ಸಾರಭೂತವಾದ ಮಂತ್ರವು ಹೇಳಲ್ಪಡುತ್ತದೆ ಎಂದರ್ಥ. ವಿದ್ವತ್ಸಭೆಯಲ್ಲಿ ವೇದಶಾಸ್ತ್ರಗೋಷ್ಠಿಯನ್ನು ಮಾಡುತ್ತಿರುವ ಪುರುಷನು ಅಥವಾ ರಾಜಸಭೆಯಲ್ಲಿ ಲೌಕಿಕವಾದ ಉಚಿತಸಂಭಾಷಣೆ ಮಾಡುವವನು ವಿಶೇಷವಾಗಿ ಸಕಲಜನಮನೋರಂಜಕನಾಗದಿದ್ದರೆ ಆಗ ರಂಜಕತ್ವಸಿದ್ಧಿಗೋಸ್ಕರ ಮುಂದೆ ಹೇಳುವ ಮಂತ್ರವನ್ನು ಜಪಿಸಬೇಕು. ಮಂತ್ರಪುರಶ್ಚರಣಾದಿಗಳನ್ನು ಮಾಡಬೇಕೆಂದರ್ಥ.

ಓಷ್ಠಾಪಿಧಾನಾ ನ ಕುಲೀದಂತೈಃ ಪರಿವೃತಾ ಪವಿಃ। ಸರ್ವಸ್ಯೈ ವಾಚ
ಈಶಾನಾ ಚಾರು ಮಾಮಿಹ ವಾದಯೇದಿತಿ ವಾಗ್ರಸಃ॥

ತಾಮೇತಾಮೃಚಂ ದರ್ಶಯತಿ—ಸರ್ವಸ್ಯೈ ವಾಚೋ ವೇದಶಾಸ್ತ್ರಲೌಕಿಕೋಕ್ತಿರೂಪಸ್ಯ ಸರ್ವಸ್ಯಾಪಿ ವಚನಜಾತಸ್ಯೇಶಾನಾ ಸ್ವಾಮಿರೂಪಾ ವಾಗ್ದೇವತಾ ಮಾಂ ಸಭಾರಂಜಕೋಕ್ತಿಕಾಮ-ಮಿಹಾಸ್ಯಾಂ ವಿದ್ವತ್ಸಭಾಯಾಂ ರಾಜಸಭಾಯಾಂ ವಾ ಚಾರು ಶೋಭನಂ ಸರ್ವರಂಜಕಂ ಯಥಾ ಭವತಿ ತಥಾ ವಾದಯೇತ್। ಸಂಭಾಷಕೋಕ್ತಿಂ ಪ್ರೇರಯತು। ಕೀದೃಶೀ ವಾಗ್ದೇವತಾ, ಓಷ್ಠಾಪಿಧಾನಾ ನ। ಉಪಮಾರ್ಥೋ ನಕಾರಃ। ಓಷ್ಠದ್ವಯಮಪಿಧಾನಂ ವಸ್ತ್ರವದಾಚ್ಛಾದನಂ ಯಸ್ಯಾ ಜಿಹ್ವಾದಿಸ್ಥಾನಗತಾಯಾ ವಾಗ್ದೇವತಾಯಾಃ ಸೇಯಮೋಷ್ಠಾಪಿಧಾನಾ। ಓಷ್ಠಯೋ-ರಾಚ್ಛಾದಕವಸ್ತ್ರಸಾದೃಶ್ಯಮೇವ ನ ತು ಮುಖ್ಯಮಾಚ್ಛಾದಕತ್ವಮಿತ್ಯಭಿಪ್ರೇತ್ಯೋಪಮಾರ್ಥೋ ನಕಾರಃ ಪಠಿತಃ। ಕುಲೀದಂತೈರ್ವಜ್ರವದ್ಘನೀಭೂತೈರಂತರಾಲಚ್ಛಿದ್ರರಹಿತೈರ್ದಂತೈಃ ಪರಿವೃತಾ ಪರಿತೋ ವೇಷ್ಟಿತಾ ವಾಗ್ದೇವತಾ। ದಂತಾನಾಂ ವಿರಲತ್ವೇ ಸತ್ಯುಚ್ಚಾರ್ಯಮಾಣಾ ವರ್ಣಾ

ಆಭಾಸಾ ಭವಂತಿ । ಪವಿರ್ವಜ್ರವತ್ತೀಕ್ಷ್ಣಶಬ್ದೋಚ್ಚಾರಣೇಽತ್ಯಂತಂ ಪಟ್ವೀ ದೇವತೇತ್ಯರ್ಥಃ । ಅಥವೌಷ್ಠ್ಯೇತ್ಯಾದಿವಿಶೇಷಣೈರ್ದೇವತಾ ನ ಪ್ರಶಸ್ಯತೇ, ಕಿಂ ತು ಸ್ವಕೀಯವಾಚಿ ದೋಷ ಉದ್ಭಾವ್ಯತೇ । ಅಸ್ಮಿನ್ಪಕ್ಷೇ ನಕಾರೋ ನಿಷೇಧಾರ್ಥಃ । ಯೇಯಂ ಮದೀಯಾ ವಾಕ್ಸೇಯಮೋಷ್ಠಾಭ್ಯಾಂ ಬಹಿರಾಚ್ಛಾದಿತಾಂತಃ ಕುಲೀದಂತೈಃ ಪರಿವೃತಾ ವೇಷ್ಟಿತಾತೋ ಬಹಿರ್ನಿರ್ಗತಾ ಸಭಾಂ ರಂಜಯಿತುಂ ನ ಪವಿರ್ನಾತ್ಯಂತಂ ಪಟುರತಃ ಕಾರಣಾದ್ವಾಗ್ದೇವತೇ ಸರ್ವಸ್ಯಾ ಇತ್ಯಾದಿನಾ ತ್ವಾಮಹಂ ಪ್ರಾರ್ಥಯೇ । ಇತ್ಯೇವಮುಕ್ತೋ ಯೋ ಮಂತ್ರಃ ಸೋಽಯಂ ವಾಗ್ರಸಃ ಸರ್ವಸ್ಯಾ ವಾಚಃ ಸಾರಭೂತೋಽವಗಂತವ್ಯಃ ॥

ಸಭಾರಂಜಕಸಾಧಕಮಂತ್ರವನ್ನು ತೋರಿಸುತ್ತಾರೆ. ಸರ್ವಸ್ಯೈ ವಾಚಃ= ವೇದಶಾಸ್ತ್ರಲೌಕಿಕೋಕ್ತಿರೂಪವಾದ ಎಲ್ಲಾಮಾತುಗಳಿಗೂ, ಈಶಾನಾ= ಸ್ವಾಮಿರೂಪಳಾದ ವಾಗ್ದೇವತೆಯು, ಮಾಂ= ಸಭೆಯನ್ನು ರಂಜಿಸಬೇಕೆಂದು ಇಚ್ಛೆಪಡುವ ನನ್ನನ್ನು, ಇಹ= ಈ ವಿದ್ವತ್ಸಭೆಯಲ್ಲಾಗಲೀ, ರಾಜಸಭೆಯಲ್ಲಾಗಲೀ, ಚಾರು= ಮನೋಹರವಾಗಿ ರಂಜಕವಾಗುವಂತೆ, ವಾದಯೇತ್= ಮಾತುಗಳನ್ನು ಪ್ರೇರೇಪಿಸಲಿ. ವಾಗ್ದೇವತೆಯ ಸ್ವರೂಪವನ್ನು ವಿವರಿಸುತ್ತಾರೆ. ಓಷ್ಠಾಪಿಧಾನಾ ನ= ಯಾವ ನಾಲಿಗೆಯಲ್ಲಿರುವ ವಾಗ್ದೇವತೆಗೆ ಎರಡುತುಟಿಗಳು ವಸ್ತ್ರದಂತೆ ಆಚ್ಛಾದಕವಾಗಿವೆಯೋ, ನಕಾರ ಉಪಮಾರ್ಥದಲ್ಲಿವೆ. ಆಚ್ಛಾದಕವಸ್ತ್ರಸಾದೃಶ್ಯವು ತುಟಿಗಿದೆ. ಕುಲೀದಂತೈಃ= ಒಳಗೆ ಟೊಳ್ಳಿಲ್ಲದೆ ವಜ್ರದಂತೆ ಘನವಾಗಿರುವ ಹಲ್ಲುಗಳಿಂದ, ಪರಿವೃತಾ= ಸುತ್ತಲೂ ಆವೃತವಾಗಿದೆ. ದಂತಗಳು ವಿರಳಗಳಾಗಿದ್ದರೆ ಉಚ್ಚರಿಸುವ ವರ್ಣಗಳು ಆಭಾಸವಾಗುತ್ತವೆ ಪವಿಃ= ವಜ್ರದಂತೆ ಕಠಿಣಶಬ್ದೋಚ್ಚಾರಣೆಯಲ್ಲಿಯೂ ಅತಿ ಪಟುವಾಗಿರುತ್ತದೆ. ಅಥವಾ ಓಷ್ಠಾಪಿಧಾನಾ ಎಂಬುದು ವಾಗ್ದೇವತಾಪ್ರಾಶಸ್ತ್ಯವನ್ನು ಹೇಳುವುದಿಲ್ಲ. ತನ್ನ ಮಾತಿನಲ್ಲಿಯೇ ದೋಷವನ್ನು ವ್ಯಕ್ತಪಡಿಸುತ್ತದೆ. ಆಗ ಆದೋಷ ಉಂಟಾಗಬಾರದೆಂದು ನ ಎಂಬುದಕ್ಕೆ ನಿಷೇಧಾರ್ಥ ಹೇಳಬೇಕು. ಈ ನನ್ನಮಾತು ಹೊರಗೆ ಒಂದು ಸಭಾರಂಜನೆ ಮಾಡಲು ಅಸಮರ್ಥವಾಗಿದೆ. ಆದುದರಿಂದ ವಾಗ್ದೇವತೆಯೇ ನಿನ್ನನ್ನು ಪ್ರಾರ್ಥಿಸುತ್ತೇನೆ ಎಂದು ಹಿಂದಿನಂತೆಯೇ ಅರ್ಥ ತಿಳಿಯಬೇಕು. ಹೀಗೆ ಈ ಮಂತ್ರವು ಸಕಲವಾಕ್ಕಿನಸಾರಭೂತವಾದುದೆಂದು ತಿಳಿಯಬೇಕು.

———

## *English Translation*

1. Now next the Upanishad of the whole speech.

True all these are Upanishads of the whole speech, but this they call so (chiefly).

2. The mute consonants represent the earth, the sibilants the sky, the vowels heaven

The mute consonants represent Agni (fire), thc sibilants air, the vowels the sun.

The mute consonants represent the Rig-veda, the sibilants the Yagur-veda, the vowels the Sama-veda.

The mute consonants represent the eye, the sibilants the ear, the vowels the mind,

The mute consonants represent the up-breathing, the sibilants the down-breathing, the vowels the back-breathing.

3. Next comes this divine lute (the human body, made by the gods). The lute made by man is an imitatian of it.

4. As there is a head of this, so there is a head of that (lute, made by man), As there is a stomach of this, so there is the cavity (in the board) of that. As there is a tongue of this, so there is tongue in that. As there are fingers of this so there are strings of that. As there are vowels of this, so there are tones of that. As there are consonants of this, so there are touches of that. As this is endowed with sound and firmiy strung. As this is covered with a hairy skin, so that is covered with ahairy skin.

5. Verily, in former times they covered a lute with a hairy skin.

6. He who knows )his lute made by the Devas (and meditates on it), is willingly listended to, his glory fills the earth, and wherever they speak Aryan languages, there they know him.

7. Next follows the verse, called vagrasa, the essence of speech. When a man reciting or speaking in an assembly does not please, let him say this verse :

8. ‘May the queen of all speech, who is covered, as it were, by the lips, surrounded by teeth, as if by spears, who is a thnnderbolt, help me to speak well.’ This is the vagrasa, the essence of speech.

ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ತೃತೀಯಾರಣ್ಯಕೇ
ದ್ವಿತೀಯಾಧ್ಯಾಯೇ ಪಂಚಮಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ತೃತೀಯಾರಣ್ಯಕದ
ಎರಡನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವು ||



## ಅಥ ತೃತೀಯಾರಣ್ಯಕೇ ದ್ವಿತೀಯಾಧ್ಯಾಯೇ ಷಷ್ಠಃ ಖಂಡಃ

ಮೂರನೆಯ ಆರಣ್ಯಕದ ಎರಡನೆಯ ಅಧ್ಯಾಯದಲ್ಲಿ ಆರನೆಯ ಖಂಡವು

---

**ಅಥ ಹಾಸ್ಮಾ ಏತತ್ಕೃಷ್ಣಹಾರಿತೋ ವಾಗ್ಬ್ರಾಹ್ಮಣಮಿವೋಪೋದಾ-ಹರತಿ ||**

ಉಪಾಸನಾಂತರಂ ವಿಧಾತುಂ ಪ್ರಜಾಪತಿವೃತ್ತಾಂತಮವತಾರಯತಿ—ಅಥ ಯಥೋಕ್ತ-ಸರ್ವಸಂಹಿತೋಪಾಸ್ತಿಕಥನಾನಂತರಂ ನ್ಯೂನಾತಿರಿಕ್ತದೋಷಸನಿರಾಕರಣಾರ್ಥಂ ಕಿಂಚಿತ್ಸಂಹಿತಾ-ವಿಷಯಮುಪಾಸನಮುಚ್ಯತ ಇತಿ ಶೇಷಃ | ಯಥಾ ಪ್ರಧಾನಯಾಗೇಷ್ವನುಷ್ಠಿತೇಷು ಪಶ್ಚಾತ್-ಸ್ವಿಷ್ಟಕೃದನುಷ್ಠೀಯತೇ ತದ್ವದಿದಂ ದ್ರಷ್ಟವ್ಯಮ್| ಹರಿತಸ್ಯ ಪುತ್ರೋ ಹಾರೀತಃ ಸ ಚ ಕೃಷ್ಣವರ್ಣ-ಸ್ತಾದೃಶಃ ಕಶ್ಚಿನ್ಮಹರ್ಷಿರಸ್ಮೈ ಸ್ವಪುತ್ರಾಯ ಶಿಷ್ಯಾಯ ವೈತದ್ವಕ್ಷ್ಯಮಾಣಂ ವಾಗ್ಬ್ರಾಹ್ಮಣಂ ವಾಗ್ರೂಪಸಂಹಿತೋಪಾಸ್ತಿವಿಶೇಷ ವಿಧಾಯಕಂ ಬ್ರಾಹ್ಮಣವಾಕ್ಯಮುಪೋದಾಹರತಿ | ರಹಸ್ಯತ್ವೇನ ಸಮೀಪಮಾಗತ್ಯ ಕರ್ಣೇ ಕಥಯತಿ | ಇವಶಬ್ದೋಽವಧಾರಣಾರ್ಥೋಽನರ್ಥಕೋ ವಾ | ಸಂಹಿತಾ-ವಿಷಯಮೇವ ಬ್ರಾಹ್ಮಣಂ ನ ತ್ವನ್ಯದಿತ್ಯರ್ಥಃ ||

ಬೇರೊಂದು ಉಪಾಸನೆಯನ್ನು ಹೇಳಲು ಮೊದಲು ಪ್ರಜಾಪತಿವೃತ್ತಾಂತವನ್ನು ಹೇಳುತ್ತಾರೆ. ಅಥ ಅಂದರೆ ಸರ್ವಸಂಹಿತೋಪಾಸನೆಯನ್ನು ಹೇಳಿದಮೇಲೆ ನ್ಯೂನಾತಿರಿಕ್ತದೋಷಗಳನ್ನು ಸರಿಪಡಿಸಲು ಕೆಲವು ಸಂಹಿತಾವಿಷಯ ಉಪಾಸನೆಯನ್ನು ಹೇಳುತ್ತಾರೆ ಎಂದರ್ಥ. ಪ್ರಧಾನಯಾಗಾನುಷ್ಠಾನವಾದಮೇಲೆ ದೋಷಪ್ರಾಯಶ್ಚಿತ್ತಕ್ಕೋಸ್ಕರ ಸ್ವಿಷ್ಟ ಕೃದ್ಧೋಮಾನುಷ್ಠಾನದಂತೆ ತಿಳಿಯಬೇಕು. ಹರಿತಋಷಿಯ ಪುತ್ರನು ಹಾರೀತನು. ಅವನು ಅತಿಕಷ್ಟಾದ ಮಹರ್ಷಿಯು ಅವನು ತನ್ನಪುತ್ರನಿಗೆ ಅಥವಾ ಶಿಷ್ಯನಿಗೆ ಮುಂದೆ ಹೇಳುವ ವಾಗ್ರೂಪಸಂಹಿತೋಪಾಸನಾವಿಶೇಷವನ್ನು ಹೇಳುವ ಬ್ರಾಹ್ಮಣ ವಾಕ್ಯವನ್ನು ರಹಸ್ಯವಾದುದರಿಂದ ಸಮೀಪಕ್ಕೆ ಕರೆದು ಕಿವಿಯಲ್ಲಿ ಹೇಳುತ್ತಾನೆ. ಈ ಬ್ರಾಹ್ಮಣವಾಕ್ಯವು ಸಂಹಿತಾ ವಿಷಯವಲ್ಲದೆ ಬೇರೆಯಲ್ಲವೆಂದು ತಾತ್ಪರ್ಯ.

**ಪ್ರಜಾಪತಿಃ ಪ್ರಜಾಃ ಸೃಷ್ಟ್ವಾ ವ್ಯಸ್ರಂಸತ ಸಂವತ್ಸರಃ ಸ ಚ್ಛಂದೋಭಿ-ರಾತ್ಮಾನಂ ಸಮುದಧಾದ್ಯಚ್ಛಂದೋಭಿರಾತ್ಮಾನಂ ಸಮುದಧಾತ್ತಸ್ಮಾ-ತ್ಸಂಹಿತಾ ॥**

ಪ್ರತಿಜ್ಞಾತಂ ಪ್ರಜಾಪತಿವೃತ್ತಾಂತಪ್ರತಿಪಾದಕಂ ಬ್ರಾಹ್ಮಣಂ ದರ್ಶಯತಿ— ಸಂವತ್ಸರಃ ಪ್ರಜಾಪತಿಃ ಕಾಲಾತ್ಮಕಃ ಪರಮೇಶ್ವರೋ ದೇವತಿರ್ಯಙ್ಮನುಷ್ಯರೂಪಾಃ ಪ್ರಜಾಃ ಸೃಷ್ಟ್ವಾ ವ್ಯಸ್ರಂಸತ ಶ್ರಮೇಣ ವಿಸ್ರಸ್ತಾವಯವೋಽಭೂತ್ । ಸಪುನಶ್ಛಂದೋಭಿರ್ವೇದೈರಾತ್ಮಾನಂ ಸರ್ವಾ-ವಯವಸಂಘಾತರೂಪಂ ಸ್ವಶರೀರಂ ಸಮುದಧಾತ್ಸಮ್ಯಗ್ಧಾರಿತವಾನ್ವೇದೋಕ್ತಮಂತ್ರಪಾಠಸಾಮ-ರ್ಥ್ಯೇನ ಸ್ವಾವಯವಪಾಟವಂ ಸಂಪಾದಿತವಾನಿತ್ಯರ್ಥಃ ॥ ಯಸ್ಮಾದಯಂ ಛಂದೋಭಿಃ ಸ್ವಶರೀರಂ ಸಮಾಹಿತವಾಂಸ್ತಸ್ಮಾತ್ಸಮಾಧಾನಹೇತುತ್ವಾಚ್ಛಂದಃ ಪಾಠಃ ಸಂಹಿತೇತ್ಯುಚ್ಯತೇ ॥

ಪ್ರಜಾಪತಿಪ್ರತಿಪಾದಕವಾದ ಬ್ರಾಹ್ಮಣಮಂತ್ರವನ್ನು ತೋರಿಸುತ್ತಾರೆ. ಕಾಲಾತ್ಮಕನಾದ ಪರಮೇಶ್ವರನು ದೇವತಿರ್ಯಙ್ಮನುಷ್ಯರೂಪನಾನಾಪ್ರಜೆಗಳನ್ನು ಸೃಷ್ಟಿಮಾಡಿ ಆಯಾಸದಿಂದ ಶಿಥಿಲವಾದ ಅವಯವವುಳ್ಳವನಾದನು. ಅವನು ಪುನಃ ವೇದೋಕ್ತವಾದ ಮಂತ್ರಪಾಠದಿಂದ ಉಂಟಾದ ಸಾಮರ್ಥ್ಯದಿಂದ ತನ್ನ ಅವಯವ ಪಾಟವವನ್ನು ಹೊಂದಿದನು. ಈ ವೇದಗಳಿಂದಲೇ ಅವನು ತನ್ನಶರೀರವನ್ನು ದೃಢಪಡಿಸಿಕೊಂಡಿರುವುದರಿಂದ ವೇದವು ಸಮಾಧಾನಹೇತುವಾದುದರಿಂದ ವೇದಪಾಠಕ್ಕೆ ಸಂಹಿತಾ ಎಂದು ಹೆಸರು ಬಂದಿದೆ.

**ತಸ್ಮೈ ವಾ ಏತಸ್ಯೈ ಸಂಹಿತಾಯೈ ಣಕಾರೋ ಬಲಂ ಷಕಾರಃ ಪ್ರಾಣ ಆತ್ಮಾ ॥**

ಇತ್ಥಂ ನಿರ್ವಚನೇನ ಸಂಹಿತಾಂ ಪ್ರಶಸ್ಯ ತತ್ರೋಪಾಸನವಿಶೇಷಂ ವಿಧತ್ತೇ— ಯೇಯಂ ವೈದಿಕಶಬ್ದಾನಾಮವಿಚ್ಛಿನ್ನಪಾಠರೂಪಾ ಸಂಹಿತಾ ತಸ್ಯಾಃ ಸಂಹಿತಾಯಾಃ ಣಕಾರಸ್ಟವರ್ಗಪಂ-ಚಮೋ ಬಲಮಿತಿ ಧ್ಯಾಯೇತ್ । ಕಾದಯೋ ಮಾವಸಾನಾಃ ಸ್ಪರ್ಶನಾಮಕಾಃ ಪಂಚ ವರ್ಗಾ ಯೇ ಸಂತಿ ತೇಷು ಮಧ್ಯಮ ವರ್ಗಸ್ಥತ್ವಾದ್ಬಲತ್ವಂ ಯುಕ್ತಮ್ । " ಸ್ಪೃಷ್ಟಂ ಕರಣಂ ಸ್ಪರ್ಶಾ-ನಾಮ್ " ಇತಿ ಲಕ್ಷಣಾನುಸಾರೇಣ ದೃಢಪ್ರಯತ್ನನಿಷ್ಪಾದ್ಯಾಃ ಸ್ಪರ್ಶವರ್ಣಾಃ । ತಥೈವೋಷ್ಮ-

**ಸ್ವಂತರ್ಭೂತಸ್ಯ ಷಕಾರಸ್ಯ ಪ್ರಾಣತ್ವಧ್ಯಾನಂ ಯುಕ್ತಮ್ । " ಯ ಊಷ್ಮಾಣಃ ಸ ಪ್ರಾಣಃ ' (ಐ-ಆ-೩-ಅ-೨-ಖಂ ೧) ಇತ್ಯೇವಮುಪಾಸನಾಂತರೇ ಪೂರ್ವಮಭಿಹಿತತ್ವಾತ್ । ಪ್ರಾಣತ್ವಾ-ದೇವ ಜೀವಾತ್ಮತ್ವಮಪಿ ಸಂಭವತಿ । ಪ್ರಾಣಧಾರೀ ಹಿ ಜೀವಾತ್ಮಾ ॥**

ಹೀಗೆ ಸಂಹಿತೆಯನ್ನು ಪ್ರಶಂಸೆಮಾಡಿ ಈಗ ಉಪಾಸನಾವಿಶೇಷವನ್ನು ವಿವರಿಸುತ್ತಾರೆ. ವೈದಿಕಶಬ್ದಗಳ ಅವಿಚ್ಛಿನ್ನ ಪಾಠರೂಪವಾದ ಸಂಹಿತೆಗೆ ಟವರ್ಗದಐದನೆಯ ವರ್ಣವಾದ ಣಕಾರವು ಬಲವೆಂದು ಧ್ಯಾನಿಸಬೇಕು. ಕಕಾರಾದಿ ಐದು ವರ್ಗೀಯಾಕ್ಷರಗಳಲ್ಲಿ ಇದು ಮಧ್ಯಮವರ್ಗದಲ್ಲಿರುವುದರಿಂದ ಇದಕ್ಕೆ ಬಲತ್ವಯುಕ್ತವಾಗಿದೆ. ಸ್ಪರ್ಶಾಕ್ಷರಗಳಿಗೆ ಸ್ಪಷ್ಟ ಪ್ರಯತ್ನಹೇಳಿರುವುದರಿಂದ ದೃಢಪ್ರಯತ್ನದಿಂದ ಸ್ಪರ್ಶಾಕ್ಷರಗಳು ನಿಷ್ಪನ್ನವಾಗಿರುತ್ತವೆ. ಊಷ್ಮಾ ಕ್ಷರಗಳಲ್ಲಿರುವ ಷಕಾರವನ್ನು ಪ್ರಾಣವೆಂದು ಧ್ಯಾನಿಸಬೇಕು. **ಯಉಷ್ಮಾಣಃ ಸ ಪ್ರಾಣಃ** ಎಂದು ಹಿಂದೆ ಕೆಲವು ಉಪಾಸನೆಗಳಲ್ಲಿ ಹೇಳಿದೆ. ಅದು ಪ್ರಾಣವಾದುದರಿಂದಲೇ ಅದಕ್ಕೆ ಜೀವಾತ್ಮತ್ವವೂ ಸಂಗತವಾಗಿದೆ. ಪ್ರಾಣಧರಿಸಿರುವವನೇ ಜೀವಾತ್ಮನು.

ಸ ಯೋ ಹೈತೌ ಣಕಾರಷಕಾರಾವನುಸಂಹಿತಮೃಚೋ ವೇದ ಸಬಲಾಂ ಸಪ್ರಾಣಾಂ ಸಂಹಿತಾಂ ವೇದಾಽಽಯುಷ್ಯಮಿತಿ ವಿದ್ಯಾತ್ ॥

**ಯಥೋಕ್ತಣಕಾರಧ್ಯಾನಂ ಪ್ರಶಂಸತಿ-ಯಃ ಕಶ್ಚಿತ್ಸಂಹಿತೋಪಾಸಕ ಏತೌ ಣಕಾರಷಕಾರೌ ಬಲಪ್ರಾಣತ್ವೇನ ಧ್ಯಾತವ್ಯಾವನುಸಂಹಿತಂ ಯಾ ಯಾ ಸಂಹಿತಾ ತಾ ಸರ್ವಾಮನುಗತಾವಿತಿ ಧ್ಯಾಯನ್ನೃಚೋ ವೇದ, ಋಗ್ರೂಪಾನ್ಮಂತ್ರಾನ್ಪಠೇತ್ । ಸ ಪುಮಾನ್ಸ್ವೇನೋಪಾಸ್ಯಾಂ ಸಂಹಿತಾಂ ಬಲಸಂಹಿತಾಂ ಪ್ರಾಣಸಂಹಿತಾಂ ಚೋಪಾಸ್ತೇ । ಅನ್ಯಥೋಪಾಸ್ಯಮಾನಾ ಸಂಹಿತಾ ದುರ್ಬಲಾ ಪ್ರಾಣರಹಿತಾ ಚ ಪ್ರಸಜ್ಯೇತ । ತಸ್ಮಾತ್ಸಂಹಿತಾಯಾ ಆಯುಷ್ಯಸ್ಥಾನ(ತ್ವ)ಮಿತಿ ನಿಶ್ಚಿನುಯಾತ್ ॥**

ಪೂರ್ವೋಕ್ತವಾದ ಣಕಾರಷಕಾರ ಧ್ಯಾನವನ್ನು ಪ್ರಶಂಸಿಸುತ್ತಾರೆ. ಯಾವ ಸಂಹಿತೋಪಾಸಕನು ಈ ಣಕಾರ ಷಕಾರಗಳನ್ನು ಬಲಪ್ರಾಣರೂಪವಾಗಿ ಧ್ಯಾನಿಸುತ್ತಾ ಇವು ಸಂಪೂರ್ಣ ಸಂಹಿತೆಯಲ್ಲಿ ಅನುಗತವಾಗಿವೆಯೆಂದು ತಿಳಿದು ಋಗ್ರೂಪವಮಂತ್ರಗಳನ್ನು ಪಠಿಸುತ್ತಾನೋ ಅವನು ತನ್ನಿಂದ ಉಪಾಸಿಸಲ್ಪಡುವ ಸಂಹಿತೆಯನ್ನು ಬಲಸಹಿತವಾಗಿಯೂ, ಪ್ರಾಣಸಹಿತವಾಗಿಯೂ ಉಪಾಸನೆಮಾಡುತ್ತಾನೆ. ಹೀಗೆ ತಿಳಿಯದೆ ಉಪಾಸಿಸಿದರೆ ಆಗ ಸಂಹಿತೆಯು ದುರ್ಬಲವೂ ಪ್ರಾಣ ರಹಿತವೂ ಆದೀತು. ಆದುದರಿಂದ ಸಂಹಿತೆಯು ಆಯುಷ್ಯಸಂಪಾದಕವೆಂದು ತಿಳಿದಿರಬೇಕು.

ಸ ಯದಿ ವಿಚಿಕಿತ್ಸೇತ್ಸಣಕಾರಂ ಬ್ರವಾಣೀ೩ ಅಣಕಾರಾ೩ ಇತಿ ಸಣ-ಕಾರಮೇವ ಬ್ರೂಯಾತ್ಸಷಕಾರಂ ಬ್ರವಾಣೀ೩ ಅಷಕಾರಾ೩ ಇತಿ ಸಕಾರಮೇವ ಬ್ರೂಯಾತ್ ॥

**ಇದಾನೀಂ ಗುರುಶಿಷ್ಯಯೋಃ ಪ್ರಶ್ನೋತ್ತರಮುಖೇನ(ಣ)ಣಕಾರಷಕಾರಧ್ಯಾನಂ ದೃಢಯತಿ-ಪೂರ್ವಗ್ರಂಥೇ ಣಕಾರಷಕಾರಧ್ಯಾನರಹಿತಾನಿ ಸಂಹಿತೋಪಾಸನಾನ್ಯುಕ್ತಾನಿ ಅತ್ರ ತು ತದ್ಯುಕ್ತ-ಧ್ಯಾನಮುಚ್ಯತೇ । ಅತಃ ಕಿಂ ಪ್ರಶಸ್ತಮಿತಿ ಸಂದಿಹಾನಃ ಶಿಷ್ಯೋ ಗುರುಂ ಪ್ರತಿ ಪೃಚ್ಛತಿ । ಹೇ ಗುರೋ ಯೋಽಹಮುಪಾಸಕಃ ಸೋಽಹಂ ಣಕಾರಧ್ಯಾನಸಹಿತಂ ಯಥಾ ಭವತಿ ತಥಾ ಕಿಂ ಸಂಹಿ-**

**ತಾಮುಚ್ಚಾರಯಾಮಿ ಧ್ಯಾಯಾಮಿ ಕಿಂ ವಾ ತದ್ರಾಹಿತ್ಯೇನ । ಸ ಣಕಾರಂ ಬ್ರವಾಣೀ೩ಁ । ಅಣಕಾರಾ೩ಁ ಇತ್ಯೇತತ್ಸಾನುನಾಸಿಕಂ ಪ್ಲುತಿದ್ವಯಂ ವಿಚಾರಾರ್ಥಮ್। ಣಕಾರಧ್ಯಾನಸಹಿತಾಯಾಃ ಸಂಹಿತಾಯಾಃ ಪ್ರಶಸ್ತತ್ವಾತ್ತತ್ಸಂಹಿತಂ ಯಥಾ ಭವತಿ ತಥಾ ಸಂಹಿತಾಂ ಬ್ರೂಹೀತ್ಯೇವಂ ಗುರುಃ ಪ್ರತ್ಯುತ್ತರಂ ಬ್ರೂಯಾತ್ । ಏವಂ ಷಕಾರೇಽಪಿ ಯೋಜನೀಯಮ್ ॥**

ಗುರುಶಿಷ್ಯರ ಪ್ರಶ್ನೋತ್ತರ ಮುಖದಿಂದ ಣಕಾರ ಷಕಾರ ಧ್ಯಾನವನ್ನು ದೃಢಪಡಿಸುತ್ತಾರೆ. ಹಿಂದಿನ ಕಾಂಡದಲ್ಲಿ ಣಕಾರ ಷಕಾರ ಧ್ಯಾನರಹಿತವಾದ ಸಂಹಿತೋಪಾಸನೆ ಹೇಳಿದೆ. ಇಲ್ಲಿ ಅದನ್ನೂ ಸೇರಿಸಿ ಹೇಳಿದೆ. ಇವುಗಳಲ್ಲಿ ಯಾವುದು ಪ್ರಶಸ್ತವೆಂದು ತಿಳಿಯದೆ ಸಂದೇಹದಿಂದ ಶಿಷ್ಯನು ಗುರುವನ್ನು ಕುರಿತು ಹೇಳುತ್ತಾನೆ. ಗುರುವೇ ಸಂಹಿತೋಪಾಸಕನಾದ ನಾನು ಣಕಾರ ಷಕಾರ ಧ್ಯಾನಸಹಿತವಾಗಿ ಧ್ಯಾನಿಸಲೇ ಅಥವಾ ಅವುಗಳನ್ನು ಬಿಟ್ಟು ಧ್ಯಾನಿಸಲೇ ? ವಿಚಾರ ತಿಳಿಸಲು ಪ್ಲುತಿ ಹೇಳಿದೆ. ಣಕಾರ ಷಕಾರ ಸಹಿತವಾದ ಸಂಹಿತೋಪಾಸನೆ ಪ್ರಶಸ್ತವಾದುದರಿಂದ ಅವುಗಳನ್ನು ಸೇರಿಸಿಯೇ ಸಂಹಿತೋಪಾಸನೆ ಮಾಡು ಎಂದು ಗುರುವಿನ ಉತ್ತರ.

ತೇ ಯದ್ವಯಮನುಸಂಹಿತಮೃಚೋಽಧೀಮಹೇ ಯಚ್ಚ ಮಾಂಡೂ-
ಕೇಯೀ ಯಮಧ್ಯಾಯಂ ಪ್ರಬ್ರೂಮಸ್ತೇನ ನೋ ಣಕಾರಷಕಾರಾ-
ವುಪಾಪ್ತಾವಿತಿ ಹ ಸ್ಮಾಽಹ ಹ್ರಸ್ವೋ ಮಾಂಡೂಕೇಯಃ ॥

**ಉಕ್ತಾರ್ಥಸ್ಯ ಸಾಂಪ್ರದಾಯಿಕತ್ವಂ ದರ್ಶಯಿತುಂ ಮಾಂಡೂಕೇಯಸ್ಯ ವಚನಮುದಾಹರತಿ—ತಾಂ ತಾಂ ಸಂಹಿತಾಂ ಧ್ಯಾತವ್ಯಾಮನುಪ್ರಾಪ್ಯ ವರ್ತತ ಇತಿ ಣಕಾರ ಷಕಾರಧ್ಯಾನಮನುಸಂಹಿತಮಿತ್ಯುಚ್ಯತೇ । ತಚ್ಚಾನುಸಂಹಿತಮನುಸಂದಧಾನಾಸ್ತೇ ಪ್ರಸಿದ್ಧಾ ವಯಂ ಹ್ರಸ್ವದೇಹಾ ಮಾಂಡೂಕೇಯನಾಮಕಾ ಉಪಾಸಕಾ ಋಚೋಽಧೀಮಹೇ ಸಂಹಿತಾಂ ಪಠಾಮ ಇತಿ ಯದಸ್ತಿ । ಕಿಂಚ ಮಾಂಡೂಕೇಯೀಯಂ ಶೂರವೀರೇಣ ಮಾಂಡೂಕೇಯೇನ ಪ್ರೋಕ್ತಂ ನಿರ್ಭುಜಾದಿಧ್ಯಾನಸ್ಯ ಪ್ರಾಣವಂಶಧ್ಯಾನಸ್ಯ ಚ ಪ್ರತಿಪಾದಕಂ ಪೂರ್ವೋಕ್ತಮಧ್ಯಾಯಂ ಗ್ರಂಥವಿಶೇಷಂ ಪ್ರಬ್ರೂಮಃ ಪ್ರಕೃಷ್ಟಧ್ಯಾನಸಂಹಿತಂ ಯಥಾ ಭವತಿ ತಥಾ ಪಠಾಮ ಇತಿ ಚ ಯದಸ್ತಿ ತೇನೋಭಯೇನ ಸರ್ವಸಂಹಿತಾಧ್ಯಾನೇನ ವಿಶೇಷತೋ ನಿರ್ಭುಜಪ್ರಾಣವಂಶಧ್ಯಾನೇನ ಚ ನೋಽಸ್ಮಾಕಂ ಹ್ರಸ್ವಾನಾಂ ಮಾಂಡೂಕೇಯಾನಾಂ ಣಕಾರಷಕಾರೌ ಬಲಪ್ರಾಣರೂಪಾವಾಯುಷೋ ವಾ ಹೇತೂ ಉಪಾಪ್ತೌ ಸಮೀಪ್ಯೇನ ಪ್ರಾಪ್ತಾವಿತ್ಯೇವಂ ಮಾಂಡೂಕೇಯಸ್ಯ ವಚನಮ್ ॥**

ಪೂರ್ವೋಕ್ತವಿಷಯವು ಸಂಪ್ರದಾಯದಿಂದ ಬಂದಿದೆಯೆಂದು ತಿಳಿಸಲು ಮಾಂಡೂಕೇಯ ಋಷಿಯ ವಚನವನ್ನು ಉದಾಹರಿಸುತ್ತಾರೆ. ಪ್ರಸಿದ್ಧರಾದ ಹ್ರಸ್ವದೇಹವುಳ್ಳ ಮಾಂಡೂಕೇಯ ಎಂಬ ಹೆಸರುಳ್ಳ ಉಪಾಸಕರಾದ ನಾವು ಣಕಾರ ಷಕಾರ ಧ್ಯಾನವನ್ನು ಅನುಸಂಧಾನಮಾಡುತ್ತಾ ಋಙ್ಮಂತ್ರಗಳನ್ನು ಪಠಿಸುತ್ತೇವೆ. ಇದೂ ಅಲ್ಲದೆ ಮಂಡೂಕ ಮಹರ್ಷಿ ಪುತ್ರನಾದ ಶೂರವೀರನಿಂದ ಹೇಳಿದ ನಿರ್ಭುಜಾದಿಧ್ಯಾನ ಪ್ರತಿಪಾದಕವಾದ, ಪ್ರಾಣವಂಶಧ್ಯಾನಪ್ರತಿಪಾದಕವಾದ ಪೂರ್ವೋಕ್ತ ಗ್ರಂಥ ವಿಶೇಷವನ್ನೂ ತಿಳಿದು ಪ್ರಕೃಷ್ಟಧ್ಯಾನದಿಂದ ಪಠಿಸುತ್ತೇವೆ. ಈ ಎರಡು ರೀತಿ ಧ್ಯಾನದಿಂದ ಅದರಲ್ಲಿಯೂ ವಿಶೇಷವಾಗಿ

ನಿರ್ಭುಜ ಪ್ರಾಣವಂಶ ಧ್ಯಾನದಿಂದ ಹ್ರಸ್ವಕಾಯವುಳ್ಳ ಮಾಂಡೂಕೇಯರಾದ ನಾವು ಆಯುಸ್ಸಿಗೆ ಕಾರಣವಾದ ಬಲಪ್ರಾಣಗಳನ್ನು ಹೊಂದಿರುತ್ತೇವೆ. ಎಂದು ಮಾಂಡೂಕೇಯರ ವಚನ.

**ಅಥ ಯದ್ವಯಮನುಸಂಹಿತಮೃಚೋಽಧೀಮಹೇ ಯಚ್ಚ ಮಾಂಡೂಕೇಯೀಯಮಧ್ಯಾಯಂ ಪ್ರಬ್ರೂಮಸ್ತೇನ ನೋ ಣಕಾರಷಕಾರವುಪಾಪ್ತಾವಿತಿ ಹ ಸ್ಮಾಽಽಹ ಸ್ಥವಿರಃ ಶಾಕಲ್ಯಃ ॥**

ತದ್ವಚ್ಛಾಕಲ್ಯವಚನಮುಪ್ಯುದಾಹರತಿ—ಹ್ರಸ್ವಮಾಂಡೂಕೇಯವಾಕ್ಯವದ್ವ್ಯಾಖ್ಯೇಯಮ್ । ತದಿದಂ ಣಕಾರಷಕಾರಧ್ಯಾನಂ ಸರ್ವೇಷು ಯಾಗೇಷು ಸ್ವಿಷ್ಟಕೃದ್ಧೋಮ ಇವ ಸರ್ವಾಸು ಸಂಹಿತೋಪಾಸನಾಸ್ವನುಸಂಧೇಯಮಿತಿ ತಾತ್ಪರ್ಯಾರ್ಥಃ ॥

ಶಾಕಲ್ಯರ ವಚನವನ್ನು ಉದಾಹರಿಸುತ್ತಾರೆ. ಮಾಂಡೂಕೇಯರ ವಚನದಂತೆ ಅರ್ಥ ತಿಳಿಯಬೇಕು. ಈ ಣಕಾರ ಷಕಾರ ಧ್ಯಾನವು ಸಕಲ ಯಾಗಗಳಲ್ಲಿ ಸ್ವಿಷ್ಟಕೃದ್ಧೋಮವಿದ್ದಂತೆ ಸಕಲ ಸಂಹಿತೋಪಾಸನೆಗಳಲ್ಲಿಯೂ ಅನುಸಂಧಾನ ಮಾಡಬೇಕೆಂದು ತಾತ್ಪರ್ಯ.

**ಏತದ್ಧ ಸ್ಮ ವೈ ತದ್ವಿದ್ವಾಂಸ ಆಹುರ್ಋಷಯಃ ಕಾವಷೇಯಾಃ ಕಿಮರ್ಥಾ ವಯಮಧ್ಯೇಷ್ಯಾಮಹೇ ಕಿಮರ್ಥಾ ವಯಂ ಯಕ್ಷ್ಯಾಮಹೇ ವಾಚಿ ಹಿ ಪ್ರಾಣಂ ಜುಹುಮಃ ಪ್ರಾಣೇ ವಾ ವಾಚಂ ಯೋ ಹ್ಯೇವ ಪ್ರಭವಃ ಸ ಏವಾಪ್ಯಯಃ ॥**

ನನು ಸಾಕ್ಷಾತ್ಕಾರಪರ್ಯಂತಾಸು ಸರ್ವಾಸೂಪಾಸನಾಸು ನೈರಂತರ್ಯೇಣೋಪಾಸನೀಯತ್ವಾನ್ನಿತ್ಯನೈಮಿತ್ತಿಕಕರ್ಮಾನುಷ್ಠಾನಲೋಪೇ ಪ್ರತ್ಯವಾಯಃ ಸ್ಯಾದಿತ್ಯಾಶಂಕ್ಯೋಪಾಸಕವ್ಯತಿರಿಕ್ತವಿಷಯಂ ತತ್ಪ್ರತ್ಯವಾಯಶಾಸ್ತ್ರಮುಪಾಸಕಸ್ಯ ತೂಪಾಸನಮೇವ ಸರ್ವಕರ್ಮಫಲಪ್ರಾಪಕಮಿತ್ಯೇತದ್ದರ್ಶಯತಿ— ಕವಷಸ್ಯ ಪುತ್ರಾಃ ಕಾವಷೇಯಾ ಬಹವಸ್ತೇಷಾಂ ಮಧ್ಯೇ ಕೇಚಿತ್ತದೇತದ್ವಿದ್ವಾಂಸಃ ಪೂರ್ವೋಕ್ತಸಂಹಿತಾಸ್ವರೂಪಮುಪಾಸೀನಾ ಅನ್ಯೇ ಕೇಚಿಚ್ಛಾಸ್ತ್ರಾಂತರಪ್ರಸಿದ್ಧಂ ತದೇತತ್ಸಗುಣಂ ಬ್ರಹ್ಮೋಪಾಸೀನಾ ಅಪರೇ ತು ತದೇತತ್ಸರ್ವವೇದಾಂತಪ್ರಸಿದ್ಧಂ ಬ್ರಹ್ಮತತ್ತ್ವಂ ಸಾಕ್ಷಾತ್ಕೃತವಂತಸ್ತೇ ಚ ಸರ್ವೇ ಮಿಲಿತ್ವಾ ಪರಸ್ಪರಮಿದಮಾಹುಃ । ವಯಂ ಸರ್ವೇ ಯಥೋಕ್ತೋಪಾಸನೇನ ಬ್ರಹ್ಮಜ್ಞಾನೇನ ಚ ಕೃತಕೃತ್ಯಾಃ ಸಂತಃ ಇತಃ ಪರಂ ಕಿಂ ಪ್ರಯೋಜನಮುದ್ದಿಶ್ಯ ಬ್ರಹ್ಮಯಜ್ಞಾಧ್ಯಯನಾದಿಕಂ ವಾ ಜ್ಯೋತಿಷ್ಟೋಮಾದಿಯಾಗಾನ್ವಾ ಕರಿಷ್ಯಾಮಃ । ಸರ್ವಸ್ಯಾಪಿ ಪುರುಷಾರ್ಥಸ್ಯ ಸಂಪನ್ನತ್ವಾನ್ನಾಸ್ತ್ಯಸ್ಮಾಕಮಧ್ಯಯನಯಾಗಾಭ್ಯಾಂ ಪ್ರಯೋಜನಮಿತ್ಯರ್ಥಃ । ಅಥಾಪಿ ಶ್ರದ್ಧಾಜಡಾನಾಂ ಪರಿತೋಷಾಯ ಯದ್ಯನುಷ್ಠಾನಮಪೇಕ್ಷ್ಯೇತ ತಥಾಽಪಿ ಸಾಯಂ ಪ್ರಾತಃಕಾಲೀನಾಗ್ನಿಹೋತ್ರದ್ವಯವದಸ್ಮಾಕಂ ಸ್ವತಃಸಿದ್ಧಂ ಹೋಮದ್ವಯಂ ಸರ್ವದಾ ಪ್ರವರ್ತತೇ । ತದ್ಯಥಾ ಕಾಲನಿಸ್ತಾರಾರ್ಥಂ ಯದಾ ವೇದಮಧೀಮಹೇ ಲೌಕಿಕಂ ವಾ ವೃತ್ತಾಂತಂ ಭಾಷಾಮಹೇ ತದಾನೀಮಸ್ಮದೀಯಾನಾಂ ವಾಚಿ ವಹ್ನಿಸ್ಥಾನೀಯಾಯಾಂ ಪ್ರಾಣರೂಪಂ ಹೋಮದ್ರವ್ಯಂ ಜುಹುಮಃ । ಅಥವಾ

ಯದಾ ತೂಷ್ಣೀಂ ಭವಾಮೋ ನಿದ್ರಾಂ ಕುರ್ಮಹೇ ತದಾನೀಂ ಪ್ರಾಣಾಖ್ಯೇ ವಹ್ನೌ ಚ ವಾಗ್ರೂಪಂ ಹೋಮದ್ರವ್ಯಂ ಜುಹುಮಃ । ತದೇತದ್ಧೋಮತ್ವಮುಪಪದ್ಯತೇ । ವಾಕ್ಪ್ರಾಣಯೋರನ್ಯತರೋ ಯಃ ಪದಾರ್ಥ ಇತರಸ್ಯೋದ್ಭವ ಉತ್ಪತ್ತಿಹೇತುಃ ಸ ಏವ ಕಾಲಾಂತರೇ ತಸ್ಯಾಪ್ಯಯೋ ಲಯಹೇತುರ್ಭವತಿ । ವಾಚ ಉಪರಮೇಣ ಹಿ ಪ್ರಾಣವೃತ್ತಿರುದ್ಭವತಿ ತಸ್ಯಾ ಏವ ವಾಚಃ ಪ್ರವೃತ್ತೌ ಪ್ರಾಣವೃತ್ತಿರ್ಲೀಯತೇ । ಏವಂ ಪ್ರಾಣಸ್ಯೋಪರಮೇಣ ವಾಗ್ವೃತ್ತಿರುದ್ಭವತಿ ತಥಾ ಪ್ರಾಣಸ್ಯ ಪ್ರವೃತ್ತೌ ವಾಗ್ವೃತ್ತಿರ್ಲೀಯತೇ । ಸೋಽಯಂ ನಿರಂತರಂ ಪರ್ಯಾಯೇಣಾನ್ಯೋನ್ಯಸ್ಮಿನ್ವಿಲಯೋ ಹುತದ್ರವ್ಯಾದರ್ಶನಹೇತುತ್ವಾದ್ಧೋಮ ಇತ್ಯುಚ್ಯತೇ । ಅತಃ ಶ್ರದ್ಧಾಜಡಾನ್ಪ್ರತಿ ನಿತ್ಯಸಿದ್ಧೋ ಹೋಮೋಽಸ್ತೀತಿ ಪ್ರತಿಪಾದನೀಯಮ್ । ವಿವೇಕಿನಂ ಪ್ರತಿ ತು ನಾಸ್ತ್ಯೇವ ಕರ್ತವ್ಯಾಂತರಮಿತಿ ಬೋಧನೀಯಮಿತ್ಯರ್ಥಃ । ಕೌಷೀತಕಿನಃ — "ತಥಾ ತಸ್ಯ ಸಾಯಂತನಂ ಪ್ರಾತಸ್ತನಮ್" (ಕೌ) ಇತ್ಯಾದಿನಾ ಯಥೋಕ್ತಪರಸ್ಪರಹೋಮಯೋರ್ಧ್ಯೇಯತ್ವಮಾಮನಂತಿ । ತದ್ವದತ್ರಾಪಿ ಹೋಮಧ್ಯಾನಂ ವಾ ದ್ರಷ್ಟವ್ಯಮ್ ॥

ಸಾಕ್ಷಾತ್ಕಾರವಾಗುವವರೆಗೆ ಎಡೆಬಿಡದೆ ಪೂರ್ವೋಕ್ತಗಳಾದ ಉಪಾಸನೆಯನ್ನು ಮಾಡುವುದಾದರೆ ಆಗ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನ ಮಾಡುವುದು ಯಾವಾಗ? ಅವುಗಳನ್ನು ಅನುಷ್ಠಾನ ಮಾಡದಿದ್ದರೆ ಪ್ರತ್ಯವಾಯ ಬರುವುದಿಲ್ಲವೇ? ಎಂದರೆ ಉಪಾಸಕನನ್ನು ಬಿಟ್ಟು ಇತರರಿಗೆ ಆ ದೋಷವೆಂದೂ, ಉಪಾಸಕನಿಗೆ ಅವನ ಉಪಾಸನೆಯೇ ಸಕಲ ಕರ್ಮಗಳ ಫಲವನ್ನು ಕೊಡುತ್ತದೆಂದೂ ವಿವರಿಸುತ್ತಾರೆ. ಕವಷ ಋಷಿಯ ಪುತ್ರರಿಗೆ ಕಾವಷೇಯರೆಂದು ಹೆಸರು. ಅವರು ಅನೇಕರು ಅವರಲ್ಲಿ ಕೆಲವರು ಪೂರ್ವೋಕ್ತವಾದ ಸಂಹಿತೆಯ ಉಪಾಸಕರು. ಕೆಲವರು ಶಾಸ್ತ್ರಾಂತರಸಿದ್ಧವಾದ ಸಗುಣ ಬ್ರಹ್ಮನನ್ನು ಉಪಾಸಿಸಿದರು. ಇನ್ನು ಕೆಲವರು ವೇದಾಂತ ಪ್ರಸಿದ್ಧವಾದ ಬ್ರಹ್ಮತತ್ತ್ವವನ್ನು ಸಾಕ್ಷಾತ್ಕರಿಸಿಕೊಂಡವರು. ಇವರೆಲ್ಲರೂ ಸೇರಿ ಪರಸ್ಪರವಾಗಿ ಹೀಗೆ ಹೇಳಿದರು. ನಾವೆಲ್ಲರೂ ಉಪಾಸನೆಯಿಂದ, ಬ್ರಹ್ಮಜ್ಞಾನದಿಂದ ಕೃತಕೃತ್ಯರಾಗಿರುತ್ತೇವೆ. ಇನ್ನುಮುಂದೆ ಯಾವ ಫಲಕ್ಕೋಸ್ಕರ ನಾವು ಬ್ರಹ್ಮಯಜ್ಞ, ಅಧ್ಯಯನಾದಿಗಳನ್ನೂ, ಜ್ಯೋತಿಷ್ಟೋಮಾದಿಯಾಗಗಳನ್ನು ಮಾಡಬೇಕು ? ಸಕಲ ಪುರುಷಾರ್ಥವನ್ನು ಹೊಂದಿರುವ ನಮಗೆ ಇವುಗಳಿಂದ ಯಾವ ಪ್ರಯೋಜನವೂ ಇಲ್ಲವೆಂದರ್ಥ. ಅವರೂ ಶ್ರದ್ಧಾಜಡರ ಸಂತೋಷಕ್ಕೋಸ್ಕರ ಕರ್ಮಾನುಷ್ಠಾನ ಮಾಡಬೇಕೆಂದರೆ ಆಗಲೂ ಸಾಯಂಕಾಲ ಪ್ರಾತಃಕಾಲದಲ್ಲಿ ಮಾಡುವ ಅಗ್ನಿಹೋತ್ರದಂತೆ ನಮಗೆ ಸ್ವತಃಸಿದ್ಧವಾದ ಎರಡು ಹೋಮಗಳು ಇರುತ್ತವೆ. ಕಾಲಯಾಪನೆಗೆ ವೇದಾಧ್ಯಯನ ಮಾಡುತ್ತಲಿರಲಿ ಅಥವಾ ಲೌಕಿಕ ವೃತ್ತಾಂತವನ್ನು ಮಾತನಾಡುತ್ತಿದ್ದರೆ ಆಗ ನಮ್ಮ ಅಗ್ನಿಸ್ಥಾನದಲ್ಲಿರುವ ವಾಕ್ಕಿನಲ್ಲಿ ಪ್ರಾಣರೂಪ ಹೋಮದ್ರವ್ಯವನ್ನು ಹೋಮಮಾಡುತ್ತೇವೆ. ಸುಮ್ಮನಿರುವಾಗ ಅಥವಾ ನಿದ್ರಿಸುವಾಗ ಪ್ರಾಣವೆಂಬ ವಹ್ನಿಯಲ್ಲಿ ವಾಗ್ರೂಪ ಹೋಮದ್ರವ್ಯವನ್ನು ಹೋಮಮಾಡುತ್ತೇವೆ. ವಾಕ್ಪ್ರಾಣಗಳಲ್ಲಿ ಒಂದು ಕಾಲದಲ್ಲಿ ಒಂದಕ್ಕೆ ಒಂದು ಉತ್ಪತ್ತಿಕಾರಣವಾದರೆ, ಕಾಲಾಂತರದಲ್ಲಿ ಅದೇ ಅದಕ್ಕೆ ಲಯ ಹೇತುವಾಗುತ್ತದೆ. ವಾಕ್ ಉಪಶಮನ ಹೊಂದಿದಾಗ ಪ್ರಾಣವೃತ್ತಿ ಉದ್ಭವಿಸುತ್ತದೆ. ವಾಕ್ಪ್ರವೃತ್ತಿಯಿರುವಾಗ ಪ್ರಾಣವೃತ್ತಿ ಲಯ ಹೊಂದುತ್ತದೆ. ಪ್ರಾಣ ಉಪಶಮನ ಹೊಂದಿರುವಾಗ ವಾಗ್ವೃತ್ತಿ ಉದ್ಭವಿಸುತ್ತದೆ. ಪ್ರಾಣಪ್ರವೃತ್ತಿಯಿರುವಾಗ ವಾಕ್ ಲಯ ಹೊಂದುತ್ತದೆ. ಹೀಗೆ ಯಾವಾಗಲೂ ಪರ್ಯಾಯದಿಂದ ಒಂದರಲ್ಲಿ ಒಂದು ವಿಲಯ ಹೊಂದುವುದರಿಂದ ಹುತದ್ರವ್ಯವು ಅದರ್ಶನ ಹೊಂದುವಂತೆ ತೋರದಿರುವುದರಿಂದ ಹೋಮವೆಂಬುದು ಸಂಗತವಾಗಿದೆ. ಇದು ಶ್ರದ್ಧಾಜಡನನ್ನು ಕುರಿತು ಹೇಳಿದುದು. ವಿವೇಕಿಗಾದರೋ ಯಾವ ಅನುಷ್ಠಾನಾಪೇಕ್ಷೆಯೂ ಇಲ್ಲವೆಂದು ತಾತ್ಪರ್ಯ. ಕೌಷೀತಕಿಗಳು **ತಥಾ ತಸ್ಯ ಸಾಯಂತನಂ ಪ್ರಾತಸ್ತನಂ** ಇತ್ಯಾದಿಗಳಿಂದ ಪೂರ್ವೋಕ್ತ ಪರಸ್ಪರ ಹೋಮವನ್ನು ಧ್ಯಾನಿಸಬೇಕೆಂದು ಹೇಳಿರುತ್ತಾರೆ. ಅದರಂತೆ ಹೋಮಧ್ಯಾನ ಮಾಡಬೇಕೆಂದು ತಾತ್ಪರ್ಯ.

ತಾ ಏತಾಃ ಸಂಹಿತಾ ನಾನಂತೇವಾಸಿನೇ ಪ್ರಬ್ರೂಯೊನ್ನಾಸಂವತ್ಸರ-
ವಾಸಿನೇ ನಾಪ್ರವಕ್ತ್ರ ಇತ್ಯಾಚಾರ್ಯಾ ಅಚಾರ್ಯಾಃ ॥

ಇದಾನೀಂ ಸಂಹಿತಾವಿದ್ಯಾಯಾಃ ಸಂಪ್ರಧಾನವಿಧಿರುಚ್ಯತೇ—ತಾ " ಅಥಾತಃ ಸಂಹಿತಾಯಾ ಉಪನಿಷತ್ " (೧-ಆ-೩-ಅ-೧-ಖಂ-೧) ಇತ್ಯಾರಭ್ಯ ಪ್ರೋಕ್ತಾ ಏತಾ ಣಕಾರಷಕಾರಧ್ಯಾನಪರ್ಯಂತಾಃ ಸಂಹಿತೋಪಾಸನಾ ಅನಂತೇವಾಸಿನೇ ಶಾಸ್ತ್ರೋಕ್ತಲಕ್ಷಣರಹಿತಾಯ ನೋಪದಿಶೇತ್ । ಸತ್ಸ್ವಪಿ ಶಿಷ್ಯಲಕ್ಷಣೇಷು ಗುರುಸಮೀಪೇ ಸಂವತ್ಸರನಿವಾಸಾತ್ಪೂರ್ವಂ ನ ಬ್ರೂಯಾತ್ । ಉಕ್ತಗುಣದ್ವಯಸಂಪತ್ತಾವಪಿ ಯಃ ಪುಮಾನ್‌ಪ್ರವಕ್ತಾ ನ ಭವತಿ ಶಿಷ್ಯಾನ್‌ಬೋಧಯಿತುಂ ಸಾಮರ್ಥ್ಯಾಭಾವಾದಾಲಸ್ಯಾದ್ವಾ ಪ್ರವಚನಂ ಶಿಷ್ಯೋಪದೇಶಂ ನ ಕರೋತಿ ತಾದೃಶಾಯ ಚ ನ ಬ್ರೂಯಾತ್। ಕಿಂತು ಶಿಷ್ಯಲಕ್ಷಣಸಂಪನ್ನಾಯ ಸಂವತ್ಸರಂ ಗುರುಸೇವಿನೇ ಶಿಷ್ಯೋಪದೇಶಕ್ಷಮಾಯ ಪುರುಷಾಯ ಬ್ರೂಯಾದಿತ್ಯೇವಮಾಚಾರ್ಯಲಕ್ಷಣ ಸಂಪನ್ನಾ ಮಹಾಂತ ಆಚಕ್ಷತೇ ॥

" ಆಚಿನೋತಿ ಚ ಶಾಸ್ತ್ರಾರ್ಥಮಾಚಾರೇ ಸ್ಥಾಪಯತ್ಯಪಿ ।
ಸ್ವಯಮಾಚರತೇ ಯಸ್ಮಾದಾಚಾರ್ಯಸ್ತೇನ ಕೀರ್ತ್ಯತೇ " ॥

ಆಚಾರ್ಯಲಕ್ಷಣಂ ತ್ವೇವಂ ಸ್ಮರ್ಯತೇ—ನಿರುಕ್ತಕಾರೋಽಪ್ಯಾಹ–" ಆಚಾರ್ಯಃ ಕಸ್ಮಾದಾಚಾರ್ಯ ಆಚಾರಂ ಗ್ರಾಹಯತ್ಯಾಚಿನೋತ್ಯರ್ಥಾನಾಚಿನೋತಿ ಬುದ್ಧಿಮಿತಿ ವಾ " ಇತಿ॥ ಅಭ್ಯಾಸೋಽಧ್ಯಾಯ ಸಮಾಪ್ತ್ಯರ್ಥಸ್ತೃತೀಯಾರಣ್ಯಕ ಸಮಾಪ್ತ್ಯರ್ಥಶ್ಚ ॥

ಪೂರ್ವೋಕ್ತಸಂಹಿತೋಪಾಸನವಿದ್ಯೆಯನ್ನು ಯಾರಿಗೆ ಉಪದೇಶಿಸಬೇಕೆಂದು ವಿವರಿಸುತ್ತಾರೆ. **ಅಥಾತಃ ಸಂಹಿತಾಯಾ ಉಪನಿಷತ್** ಎಂದು ಆರಂಭಿಸಿ ಣಕಾರಷಕಾರಧ್ಯಾನದವರೆಗಿನ ಉಪಾಸನಾವಿದ್ಯೆಯನ್ನು ಶಾಸ್ತ್ರೋಕ್ತಶಿಷ್ಯಲಕ್ಷಣವಿಲ್ಲದವನಿಗೆ ಉಪದೇಶಿಸಬಾರದು. ಶಿಷ್ಯಲಕ್ಷಣದಿಂದ ಕೂಡಿದ್ದರೂ ಗುರುಕುಲದಲ್ಲಿ ಒಂದುವರ್ಷವಾಸಮಾಡದಿರುವವನಿಗೆ ಉಪದೇಶಿಸಬಾರದು. ಶಿಷ್ಯಲಕ್ಷಣವೂ ಇದ್ದು ಒಂದುವರ್ಷಗುರುಶುಶ್ರೂಷೆಯನ್ನು ಮಾಡಿದ್ದರೂ ಉಪದಿಷ್ಟವಾದುದನ್ನು ಇತರರಿಗೆ ಉಪದೇಶಮಾಡುವ ಸಾಮರ್ಥ್ಯವಿಲ್ಲದವನಿಗೆ ಉಪದೇಶಿಸಬಾರದು. ಪೂರ್ವೋಕ್ತ ಮೂರುಲಕ್ಷಣದಿಂದ ಕೂಡಿದವನಿಗೆ ಮಾತ್ರ ಉಪದೇಶಿಸಬೇಕೆಂದು ಆಚಾರ್ಯಲಕ್ಷಣಸಂಪನ್ನರಾದ ಮಹಾತ್ಮರು ಹೇಳುತ್ತಾರೆ. ಆಚಾರ್ಯಲಕ್ಷಣಸ್ಮೃತಿಯಲ್ಲಿ ಹೀಗೆ ಹೇಳಿದೆ. ಯಾರು ಶಾಸ್ತ್ರಾರ್ಥವನ್ನು ಚನ್ನಾಗಿ ಸಂಗ್ರಹಿಸಿ, ಇತರರನ್ನು ಉಪದೇಶದಿಂದ ಆಚಾರವಂತರನ್ನಾಗಿ ಮಾಡುತ್ತಾ, ತಾವೂ ಸದಾಚಾರಸಂಪನ್ನರಾಗಿರುತ್ತಾರೋ ಅವರೇ ಆಚಾರ್ಯರು. ಯಾಸ್ಕರೂ ಕೂಡಾ **ಆಚಾರ್ಯಃ ಕಸ್ಮಾದಾಚಾರ್ಯ ಆಚಾರಂ ಗ್ರಾಹಯತ್ಯಾಚಿನೋತ್ಯರ್ಥಾನಾಚಿನೋತಿ ಬುದ್ಧಿಮಿತಿ ವಾ** ಎಂದು ಆಚಾರ್ಯಲಕ್ಷಣ ವಿವರಿಸಿರುತ್ತಾರೆ. ಕಡೆಯ ಶಬ್ದವನ್ನು ಎರಡಾವರ್ತಿ ಪಠಿಸಿರುವುದು. ಅಧ್ಯಾಯಸಮಾಪ್ತಿಯನ್ನೂ ಮೂರನೆಯ ಆರಣ್ಯಕದ ಸಮಾಪ್ತಿಯನ್ನು ತಿಳಿಸುತ್ತದೆ.

---

*English Translation*

---

1. Next Krishna Harita confided this Brahmana concering speech to him (his pupil).

2. Pragapati, the year, after having sent forth all creatures, burst He put himself togethee again by means of khandas (Vedas). Because he put himself tegether again by means of khandas, therefore (the text of the Veda) is called Samhita (pnt together).

3. Of that Samhita the letter n is the strength, the letter sh the breath and self (atman).

4. He who knows the Rik verse and the letters n and sh for every Samhita, he knows the Samhita with strength and breath. Let him know that this is the life of the Samhita.

5. If the pupil asks, 'Shall I say it with the letter n or without it?' let the theacher say, 'With the letter n'. And if he asks, 'Shall I say it with the letter sh or without it?' let the teacher say, with the letter sh.'

6. Hrasva Mandukeya said: 'If we here recite the verses according to the Samhita (attending to the necessary changes of n and s into n and sh), and if we say the adhyaya of Mandukeya (Ait, Ar. III, 1), then the letters n and sh (strength and breath) have by this been obtained for us.

7. Sthavira Sakalya said: 'If we recite the verses according to the Samhita, and if we say the adhyaya of Mandukeya, then the letters n and sh have by this been obtained for us.'

8. Here the Rishis, the Kavasheyas, knowing this, said: 'Why should we repeat (the Veda), why should we sacrifice? We offer as a sacrifice breath in speech, or speech in breath. What is the beginning (of one), that is the end (of the other).

9. Let no one tell these Samhitas (Ait Ar. III, 1–III, 2) to one who is not a resident pupil, who has not been with his teacher at least one year, and who is not himself to become an instructor. Thus say the teachers$_3$ yea, thus say the teachers.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ತೃತೀಯಾರಣ್ಯಕೇ
ದ್ವಿತೀಯಾಧ್ಯಾಯೇ ಷಷ್ಠಃ ಖಂಡಃ

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಬಹ್ವೃಚ ಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ದ್ವಿತೀಯಾರಣ್ಯಕೇ ದ್ವಿತೀಯೋಽಧ್ಯಾಯಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ತೃತೀಯಾರಣ್ಯಕದ
ಎರಡನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವು

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ತೃತೀಯಾರಣ್ಯಕದ
ದ್ವಿತೀಯಾಧ್ಯಾಯವು ಸಮಾಪ್ತವಾದುದು

ಇತಿ ಶ್ರೀಮದ್ವಿದ್ಯಾತೀರ್ಥಮಹೇಶ್ವರಪರಾವತಾರಸ್ಯ ವೈದಿಕಮಾರ್ಗಪ್ರವರ್ತಕಸ್ಯ
ಶ್ರೀ ವೀರಬುಕ್ಕಮಹಾರಾಜಸ್ಯಾಜ್ಞಾ ಪರಿಪಾಲಕೇನ ಸಾಯಣಾಮಾತ್ಯೇನ
ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಐತರೇಯರಣ್ಯಕಕಾಂಡೇ
ತೃತೀಯಾರಣ್ಯಕಂ ಸಮಾಪ್ತಮ್ ॥



# ಅಥ ಚತುರ್ಥಾರಣ್ಯಕೇ ಪ್ರಥಮಾಧ್ಯಾಯೇ ಪ್ರಥಮಃ ಖಂಡಃ

## ನಾಲ್ಕನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಮ್ ॥
ಕಥಿತೋಪನಿಷತ್ಸರ್ವಾ ಮಹಾನಾಮ್ನ್ಯಾಖ್ಯಮಂತ್ರಕಾಃ ।
ಅರಣ್ಯಾಧ್ಯಯನಾರ್ಥಾ ವೈ ಪ್ರೋಚ್ಯಂತೇಽಥ ಚತುರ್ಥಕೇ ॥ ೧ ॥

ತೇಷಾಂಚ ಮಂತ್ರಾಣಾಂ ವಿನಿಯೋಗ ಆಶ್ವಲಾಯನಸೂತ್ರೇ ದ್ರಷ್ಟವ್ಯಃ। ಸ ಚಾಶ್ವಲಾಯನಃ ಸಪ್ತಮಾಧ್ಯಾಯೇ ಷಷ್ಠ್ಯಸ್ಯ ಷಡಹಸ್ಯ ಪಂಚಮೇಽಹನಿ ಮಾಧ್ಯಂದಿನೇ ಸವನೇ ಮರುತ್ವತೀಯಶಸ್ತ್ರಸ್ಯ ಕ್ಲೃಪ್ತೇರೂರ್ಧ್ವಂ ನಿಷ್ಕೇವಲ್ಯಸ್ಯ ಶಸ್ತ್ರಸ್ಯ ಕ್ಲೃಪ್ತಿಂ ಕುರ್ವನ್ನೇವಮಾಹ-"ಶಾಕ್ವರಂ ಚೇತ್ಪೃಷ್ಠಂ ಮಹಾನಾಮ್ನ್ಯಃ ಸ್ತೋತ್ರಿಯಸ್ತಾ ಅಧ್ಯರ್ಧಕಾರಂ ನವ ಪ್ರಕೃತ್ಯಾ ತಿಸ್ರೋ ಭವಂತಿ ತಾಭಿಃ ಪುರೀಷಪದಾನ್ಯುಪಸಂತನುಯಾತ್ಪಂಚಾಕ್ಷರಶಃ ಪೂರ್ವಾಣಿ ಪಂಚ ಸರ್ವಾಣಿ ವಾ ಯಥಾನಿಶಾಂತಮ್" ಇತಿ। ಅಸ್ಯ ಸೂತ್ರವಾಕ್ಯಸ್ಯಾಯಮರ್ಥಃ—ಶಾಕ್ವರನಾಮಕಂ ಸಾಮವೇದಪ್ರಸಿದ್ಧಂ ಕಿಂಚಿತ್ಸಾಮಾಸ್ತಿ ತದ್ಯದ್ಯುದ್ಗಾತಾರಃ ಪೃಷ್ಠಸ್ತೋತ್ರರೂಪೇಣ ಗಾಯೇಯುಸ್ತದಾನೀಂ ಮಹಾನಾಮ್ನೀಸಂಜ್ಞಯಾ ವ್ಯವಹ್ರಿಯಮಾಣಾ "ವಿದಾ ಮಘವನ್" (ಐ-ಆ-೪-೧-೧-ಖಂ-೧) ಇತ್ಯಾದ್ಯಾ ನವಸಂಖ್ಯಾಕಾ ಋಚೋ ಯಾಃ ಸಂತಿ ತಾಃ ಸರ್ವಾ ಮಿಲಿತ್ವಾ ಸ್ತೋತ್ರಸಂಬಂಧಿತಯಾ ಸ್ತೋತ್ರಿಯಸ್ತೃಚಾ ಇತ್ಯಭಿಧೀಯಂತೇ। ತಿಸೃಭಿಸ್ತಿಸೃಭಿರ್ಋಗ್ಭಿರ್ನಿರ್ಮಿಲಿತಾಭಿರೇಕೈಕಸ್ಯಾಮೃಚಿ ನಿಷ್ಪಾದಿತಾಯಾಂ ಸತ್ಯಾಂ ಪ್ರಕೃತ್ಯಾ ಸ್ವಭಾವತೋ ನವಸಂಖ್ಯಾಕಾ ಅಪಿ ಸಂಪಾದನೇನ ತಿಸ್ರ ಋಚೋ ಭವಂತಿ। ತಾದೃಶೀಸ್ತಾ ಋಚೋಽಧ್ಯರ್ಧಕಾರಂ ಶಂಸೇತ್। ಅಧಿಕಮರ್ಧಂ ಯಸ್ಯಾ ಋಚಃ ಸೇಯಮೃಗಧ್ಯರ್ಧಾ ತಾಮಧ್ಯರ್ಧಾಂ ಕೃತ್ವಾ ಶಂಸೇತ್। ಸಮಾಮ್ನಾತಕ್ರಮೇಣಾರ್ಧತ್ರಯಂ ಪಠಿತ್ವಾ ತತ್ರಾವಸಾಯ ಪುನರರ್ಧತ್ರಯಂ ಪಠಿತ್ವಾ ತದಂತೇ ಪ್ರಣವಂ ಕುರ್ಯಾತ್। ಅನೇನ ಪ್ರಕಾರೇಣ ನವಸಂಖ್ಯಾಕಾಃ ಸಮಾಮ್ನಾತಾ ಋಚಃ ಶಸ್ತ್ವಾ ತಾಭಿರ್ನವಭಿರ್ಋಗ್ಭಿಃ ಸಹ ಪುರೀಷಪದಾನಿ ಸಂಯೋಜಯೇತ್। ಅಂತಿಮೇನ ಪ್ರಣವೇನ ಸಹ ಪಠೇತ್। "ಏವಾ ಹ್ಯೇವ" ಇತ್ಯಾದಯೋ ನವ ಮಂತ್ರಾಃ ಫಲಪೂರ್ತಿಹೇತುತ್ವಾತ್ಪುರೀಷಪದಾನೀತ್ಯುಚ್ಯಂತೇ। ತೇಷು ನವಸ್ವಾದ್ಯಾನಿ ಪಂಚಸಂಖ್ಯಾಕಾನಿ ಪುರೀಷಪದಾನಿ ಪಂಚಾಕ್ಷರಶಃ ಶಂಸೇತ್। ತದ್ಯಥಾ—"ಏವ ಹ್ಯೇವಾ" ಇತಿ ಪಂಚಾಕ್ಷರಾಣಿ ಪಠಿತ್ವಾ ಸಕೃದವಸಾಯ ಪಶ್ಚಾತ್ "ಏವಾ ಹ್ಯಗ್ನೇ" ಇತ್ಯೇತಾನಿ ಪಂಚಾಕ್ಷರಾಣಿ ದೃಶ್ಯಂತೇ ತಥಾಪಿ ಹಿ ಶಬ್ದಮೇವಶಬ್ದಂ ಚ ವಿಶ್ಲಿಷ್ಟಂ ಕೃತ್ವಾ ಕುರ್ಯಾತ್। ತಥೋತ್ತರತ್ರಾಪಿ ಹಿ ಶಬ್ದಮಗ್ನಿಶಬ್ದಂ ಚ

**ಸಂಧಿರಹಿತಂ ಕೃತ್ವಾ ಪಂಚಾಕ್ಷರತ್ವಂ ದ್ರಷ್ಟವ್ಯಮ್ । ಅನೇನ ಪ್ರಕಾರೇಣ ಪಂಚ ಮಂತ್ರಾನ್ಪಠಿತ್ವಾ ಪಶ್ಚಾತ್ “ ಏವಾ ಹಿ ಶಕ್ರ ” ಇತ್ಯಾದೀಂಶ್ಚತುರೋ ಮಂತ್ರಾನ್ಮಧ್ಯೇ ವಿಚ್ಛೇದಮಕೃತ್ವಾ ಪಠೇತ್ । ಯದ್ವಾ ಸರ್ವಾನಪಿ ನವ ಮಂತ್ರಾನೇತಾನ್ಯಥಾನಿಶಾಂತಂ ಯಥಾಸಮಾಮ್ನಾಯಮಧ್ಯಯನಪಾಠ- ಕ್ರಮೇಣೈವ ಪಠೇತ್ । ನ ತು ಮಂತ್ರಸ್ಯ ಮಧ್ಯೇಽವಸಾನಂ ಕರ್ತವ್ಯಮಿತಿ । ಸೋಽಯಂ ಸೂತ್ರೋಕ್ತೋ ಮಂತ್ರಾಣಾಂ ವಿನಿಯೋಗಃ ॥**

ಉಪನಿಷತ್ಸಂಹಿತೆಯನ್ನು ಹೇಳಿದುದಾಯಿತು. ಈಗ ನಾಲ್ಕನೆಯ ಅರಣ್ಯಕದಲ್ಲಿ ಅರಣ್ಯದಲ್ಲಿ ಅಧ್ಯಯನಕ್ಕೋಸ್ಕರ ಮಹಾನಾಮ್ನೀ ಎಂಬ ಹೆಸರುಳ್ಳ ಮಂತ್ರಗಳನ್ನು ಹೇಳುತ್ತಾರೆ. ॥೨॥ ಈ ಮಂತ್ರಗಳ ವಿನಿಯೋಗವನ್ನು ಆಶ್ವಲಾಯನ ಸೂತ್ರದಲ್ಲಿ ತಿಳಿಯಬೇಕು. ಆಶ್ವಲಾಯನರು ನಿಷ್ಕೇವಲ್ಯಶಸ್ತ್ರಕ್ಲಪ್ತಿಯನ್ನು ಮಾಡುತ್ತಾ ಹೀಗೆ ಹೇಳಿರುತ್ತಾರೆ. **ಶಾಕ್ವರಂ ಚೇತ್ಪೃಷ್ಠಂ ಮಹಾನಾಮ್ನ್ಯಃ ಸ್ತೋತ್ರಿಯಸ್ತಾ ಅಧ್ಯರ್ಧಕಾರಂ ನವ ಪ್ರಕೃತ್ಯಾ ತಿಸ್ರೋ ಭವಂತಿ ತಾಭಿಃ ಪುರೀಷ ಪದಾನ್ಯುಪಸಂತನುಯಾತ್ಪಂಚಾಕ್ಷರಶಃ ಪೂರ್ವಾಣಿ ಪಂಚ ಸರ್ವಾಣಿ ವಾ ಯಥಾನಿಶಾಂತಮ್** ॥ ಇದರ ಅರ್ಥ. ಶಾಕ್ವರವೆಂಬ ಸಾಮವೇದ ಪ್ರಸಿದ್ಧವಾದ ಒಂದು ಸಾಮವಿದೆ. ಅದನ್ನು ಉದ್ಗಾತೃಗಳು ಪೃಷ್ಠಸ್ತೋತ್ರರೂಪದಿಂದ ಗಾನ ಮಾಡಿದರೆ ಆಗ ಅದು ಮಹಾನಾಮ್ನೀ ಸಂಜ್ಞೆಯಿಂದ ವ್ಯವಹರಿಸಲ್ಪಡುವುದಾಗಿ, ವಿದಾಮಘರ್ವ ಇತ್ಯಾದಿ ಒಂಬತ್ತು ಋಕ್ಕುಗಳನ್ನು ಸೇರಿಸಿ ಸ್ತೋತ್ರ ಸಂಬಂಧಿಯಾದುದರಿಂದ ಸ್ತೋತ್ರಿಯಸ್ತೃಚಗಳೆಂದು ಕರೆಯಲ್ಪಡುತ್ತವೆ. ಇವು ಸ್ವಭಾವದಿಂದ ಒಂಬತ್ತಾಗಿದ್ದರೂ ಮೂರು ಮೂರರ ಒಂದೊಂದು ಗುಂಪನ್ನಾಗಿ ಮಾಡಿಕೊಳ್ಳುವುದರಿಂದ ಮೂರು ಸಮುದಾಯ ಋಕ್ಕುಗಳಾಗುತ್ತವೆ. ಅವುಗಳನ್ನು ಅಧ್ಯರ್ಧಕಾರವಾಗಿ ಪಠಿಸಬೇಕು. ಅಂದರೆ ಅರ್ಧ ಅಧಿಕವಾಗಿರುವ ಋಕ್ಕಿಗೆ ಅಧ್ಯರ್ಧವೆಂದು ಹೆಸರು. ಕ್ರಮವಾಗಿ ಮೂರರಲ್ಲಿಯೂ ಅರ್ಧವನ್ನು ಪಠಿಸಿ ಮುಗಿಸಿ ಆಮೇಲೆ ಕ್ರಮವಾಗಿ ಮೂರರ ಅರ್ಧವನ್ನು ಪಠಿಸಿದ ಮೇಲೆ ಕೊನೆಯಲ್ಲಿ ಪ್ರಣವವನ್ನು ಹೇಳಬೇಕು. ಈ ರೀತಿಯಿಂದ ಒಂಬತ್ತು ಋಕ್ಕುಗಳನ್ನೂ ಪಠಿಸಿದ ಮೇಲೆ ಆ ಒಂಬತ್ತು ಋಕ್ಕುಗಳೊಡನೆ ಪುರೀಷಪದಗಳನ್ನು ಸೇರಿಸಬೇಕು. ಅಂದರೆ ಕೊನೆಯಲ್ಲಿ ಉಚ್ಚರಿಸುವ ಪ್ರಣವದೊಡನೆ ಪಠಿಸಬೇಕು. **ಏವಾ ಹ್ಯೇವ** ಇತ್ಯಾದಿ ಒಂಬತ್ತು ಮಂತ್ರಗಳಿಗೆ ಫಲಪೂರ್ತಿಗೆ ಕಾರಣವಾದುದರಿಂದ ಪುರೀಷ ಪದಗಳೆಂದು ಹೆಸರು. ಆ ಒಂಬತ್ತರಲ್ಲಿ ಮೊದಲಿನ ಐದು ಪುರೀಷ ಪದಗಳನ್ನು ಐದೈದು ಅಕ್ಷರಗಳಿಂದ ಪಠಿಸಬೇಕು. **ಏವಾಹ್ಯೇವ** ಎಂದು ಐದು ಅಕ್ಷರಗಳನ್ನು ಪಠಿಸಿ ಒಂದು ಬಾರಿ ಮುಗಿಸಿದಮೇಲೆ **ಏವಾ ಹ್ಯಗ್ನೇ** ಎಂದು ಐದು ಅಕ್ಷರಗಳನ್ನು ಪಠಿಸಬೇಕು. ಯದ್ಯಪಿ ಎರಡರಲ್ಲಿಯೂ ನಾಲ್ಕೇ ಅಕ್ಷರಗಳಿರುವುದು, ಆದರೂ ಹಿ, ಏವ ಎಂದು ಬೇರೆಯಾಗಿ ಮಾಡಿಕೊಂಡು ಐದೆಂದು ಕಲ್ಪಿಸಬೇಕು. ಮುಂದಿನದರಲ್ಲಿಯೂ ಏವ, ಹಿ, ಅಗ್ನೇ ಎಂದು ಸಂಧಿ ಮಾಡದೇ ಉಚ್ಚರಿಸುವುದರಿಂದ ಐದು ಅಕ್ಷರ ಗಳಾಗುತ್ತವೆ. ಈ ರೀತಿಯಿಂದ ಐದು ಮಂತ್ರಗಳನ್ನು ಪಠಿಸಿದ ಮೇಲೆ **ಏವಾ** ಹಿ ಶಕ್ರ ಇತ್ಯಾದಿ ನಾಲ್ಕು ಮಂತ್ರಗಳನ್ನು ಮಧ್ಯದಲ್ಲಿ ವಿಚ್ಛೇದ ಮಾಡದೆ ಪಠಿಸಬೇಕು. ಅಥವಾ ಒಂಬತ್ತು ಮಂತ್ರಗಳನ್ನು ಸಾಯಂಕಾಲದವರೆಗೆ ಅಧ್ಯಯನ ರೀತಿಯನ್ನನುಸರಿಸಿಯೇ ಪಠಿಸಬೇಕು. ಮಧ್ಯದಲ್ಲಿ ಎಲ್ಲಿಯೂ ನಿಲ್ಲಿಸಬಾರದು. ಹೀಗೆ ಸೂತ್ರದಲ್ಲಿ ಹೇಳಿದಂತೆ ಮಂತ್ರಗಳ ವಿನಿಯೋಗವನ್ನು ತಿಳಿಯಬೇಕು.

**ವಿದಾ ಮಘವನ್ವಿದಾ ಗಾತುಮನು ಶಂಸಿಷೋ ದಿಶಃ । ಶಿಕ್ಷಾ ಶಚೀನಾಂ ಪತೇ ಪೂರ್ವೀಣಾಂ ಪುರೂವಸೋ ॥**

ತತ್ರ ನವಸ್ವೃಕ್ಷುಪ್ರಥಮಾಮೃಚಮಾಹ—ಹೇ ಮಘವನ್ನಿಂದ್ರ ವಿದ ವೇತ್ಸಿ । ಅತ್ರ ವೇದ-ನಸ್ಯ ಕರ್ಮಕಾರಸ್ಯ ಕಸ್ಯಚಿದ್ವಿಶೇಷಸ್ಯಾನುಪಪಾದನಾತ್ಸಾಮಾನ್ಯಾಕಾರೇಣ ಸರ್ವಂ ಜಾನಾಸೀತ್ಯಯ-ಮರ್ಥೋ ಲಭ್ಯತೇ । ಯಸ್ಮಾತ್ಸರ್ವಜ್ಞಸ್ತ್ವಂ ತಸ್ಮಾದ್ಗಾತುಂ ಯಜಮಾನೇನ ಗಂತವ್ಯಮಾರ್ಗಂ ವಿದ ವೇತ್ಸಿ ಜಾನಾಸಿ । ತತೋ ಯಜಮಾನಸ್ಯ ಸಮೀಚೀನೇನ ಮಾರ್ಗೇಣ ಸ್ವರ್ಗಂ ಗಂತು ದಿಶೋ ಮಾರ್ಗೋಪಯುಕ್ತಾನ್ದಿಗ್ವಿಶೇಷಾನನುಶಂಸಿಷೋಽನುಕ್ರಮೇಣ ಶಂಸೋಪದಿಶ । ಕಿಂಚ ಪೂರ್ವೀ-ಣಾಂ ಪೂರ್ವಸಿದ್ಧಾನಾಂ ಶಚೀನಾಂ ಶಕ್ತಿನಾಂ ಪತೇ ಹೇ ಪಾಲಕ ಪುರು ಪ್ರಭೂತಂ ವಸು ಧನಂ ಯಸ್ಯಾಸೌ ಪುರೂವಸುಸ್ತತ್ಸಂಬೋಧನಂ ಹೇ ಪುರೂವಸೋ ಶಿಕ್ಷ ಯಜಮಾನಸ್ಯ ಹಿತೋಪದೇಶಂ ಕುರು । ಸರ್ವಶಕ್ತಿಮತ್ತ್ವೇನ ಪ್ರಭೂತಧನತ್ವೇನ ಚ ಹೇ ಇಂದ್ರ ತ್ವಂ ಯಜಮಾನಂ ಸಮೀಚೀನೇ ಕರ್ಮಣಿ ಪ್ರವರ್ತಯಿತುಂ ತತ್ಫಲಂ ದಾತುಂ ಚ ಪ್ರಭವಸೀತ್ಯರ್ಥಃ ॥

ಒಂಬತ್ತು ಋಕ್ಕುಗಳಲ್ಲಿ ಮೊದಲನೆಯ ಋಕ್ಕನ್ನು ವಿವರಿಸುತ್ತಾರೆ. ಹೇ ಮಘವನ್ ಎಲೈ ಇಂದ್ರನೇ, ವಿದ ತಿಳಿಯುವಿ. ಇಲ್ಲಿ ವೇದನಕ್ಕೆ ಕರ್ಮ ಹೇಳದಿರುವುದರಿಂದ ಸಕಲವನ್ನೂ ತಿಳಿದಿರುವಿ ಎಂದು ಅರ್ಥವಾಗುತ್ತದೆ. ಯಾವ ಕಾರಣದಿಂದ ನೀನು ಸರ್ವಜ್ಞನಾಗಿರುವೆಯೋ ಆ ಕಾರಣದಿಂದ ಗಾತುಂ ಯಜಮಾನನಿಂದ ಹೊಂದಬೇಕಾದ ಮಾರ್ಗವನು ವಿದ ತಿಳಿದಿರುವಿ. ಆದುದರಿಂದ ಯಜಮಾನನಿಗೆ ಉತ್ತಮ ಮಾರ್ಗದಿಂದ ಸ್ವರ್ಗಕ್ಕೆ ಹೋಗಲು, ದಿಶಃ ಮಾರ್ಗಕ್ಕೆ ಉಪಯುಕ್ತವಾದ ದಿಕ್ಕುಗಳನ್ನು, ಅನುಶಂಸಿಷಃ ಕ್ರಮವಾಗಿ ಉಪದೇಶಿಸು. ಮತ್ತು ಪೂರ್ವೀಣಾಂ ಪೂರ್ವಸಿದ್ಧವಾದ, ಶಚೀನಾಂ ಶಕ್ತಿಗಳಿಗೆ, ಪತೇ ಪಾಲಕನಾದ, ಪುರೂವಸೋ ಅಧಿಕಧನಸಂಪತ್ತುಳ್ಳವನೇ, ಶಿಕ್ಷ ಯಜಮಾನನಿಗೆ ಹಿತೋಪದೇಶವನ್ನು ಮಾಡು. ಸರ್ವಶಕ್ತಿವಂತನಾದುದರಿಂದಲೂ, ಅಧಿಕ ಧನವಂತನಾದುದರಿಂದಲೂ ಇಂದ್ರನೇ ನೀನ್ನು ಯಜಮಾನನಿಗೆ ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡಲೂ, ಆ ಕರ್ಮ ಫಲವನ್ನು ಕೊಡುವುದರಲ್ಲಿಯೂ ಸಮರ್ಥನೆಂದರ್ಥ.

**ಆಭಿಷ್ಟ್ವಮಭಿಷ್ಟಿಭಿಃ ಪ್ರಚೇತನ ಪ್ರಚೇತಯ । ಇಂದ್ರ ದ್ಯುಮ್ನಾಯ**
**ನ ಇಷ ಏವಾ ಹಿ ಶಕ್ರಃ ॥**

ದ್ವಿತೀಯಾಮೃಚಮಾಹ—ಪ್ರಕೃಷ್ಟಾ ಚೇತನಾ ಬುದ್ಧಿರ್ಯಸ್ಯಾಸೌ ಪ್ರಚೇತನಃ । ಹೇ ಪ್ರಚೇತನಾಽಽಭಿರ್ಯಜಮಾನೇನ ಕ್ರಿಯಮಾಣಾಭಿರಭಿಷ್ಟಿಭಿಸ್ತವಾಭೀಷ್ಟಾಭಿಃ ಸ್ತುತಿಭಿಃ ಪ್ರಚೇತಯ ಪ್ರಕರ್ಷೇಣ ಯಜಮಾನಸೇವಾಂ ಜಾನೀಹಿ । ಹೇ ಇಂದ್ರ ತ್ವಂ ನೋಽಸ್ಮಾಕಂ ದ್ಯುಮ್ನಾಯ ಧನ-ಲಾಭಾಯೇಷೇಽನ್ನಲಾಭಾಯ ಚ ಶಕ್ರಃ ಶಕ್ತಿಮಾನೇವ ಹಿ । ತಸ್ಮಾತ್ಪ್ರಚೇತಯಾನುಗೃಹಾಣೇ-ತ್ಯರ್ಥಃ ॥

ಎರಡನೆಯ ಮಂತ್ರವನ್ನು ವಿವರಿಸುತ್ತಾರೆ. ಹೇ ಪ್ರಚೇತನ ಪ್ರಕೃಷ್ಟವಾದ ಬುದ್ಧಿಯುಳ್ಳ ಇಂದ್ರನೇ, ಆಭಿ ಯಜಮಾನನಿಂದ ಮಾಡಿದ, ಅಭಿಷ್ಟಿಭಿಃ ನಿನಗೆ ಇಷ್ಟವಾದ ಸ್ತುತಿಗಳಿಂದ, ಪ್ರಚೇತನ ಚನ್ನಾಗಿ ಯಜಮಾನನ ಸೇವೆಯನ್ನು ತಿಳಿ. ಹೇ ಇಂದ್ರ ಎಲೈ ಇಂದ್ರನೇ, ನೀನು, ನಃ ನಮಗೆ, ದ್ಯುಮ್ನಾಯ ಧನಲಾಭಕ್ಕೋಸ್ಕರ, ಇಷೇ ಅನ್ನಲಾಭಕ್ಕೋಸ್ಕರವೂ, ಶಕ್ರಃ ಹಿ ಸಮರ್ಥನಾಗಿರುವಿ. ಆದುದರಿಂದ ಅನುಗ್ರಹಿಸು ಎಂದು ತಾತ್ಪರ್ಯ.

**ರಾಯೇ ವಾಜಾಯ ವಜ್ರಿವಃ ಶವಿಷ್ಠ ವಜ್ರಿನ್ನೃಂಜಸೇ । ಮಂಹಿಷ್ಠ ವಜ್ರಿನ್ನೃಂಜಸ ಆಯಾಹಿ ಪಿಬ ಮತ್ಸ್ವ ॥**

**ತೃತೀಯಾಮೃಚಮಾಹ—ಹೇ ವಜ್ರಿವೋ ವಜ್ರಯುಕ್ತೇಂದ್ರ ರಾಯೇ ಧನಲಾಭಾಯ ವಾಜಾಯಾನ್ನಲಾಭಾಯ ಚ ಪ್ರಸನ್ನೋ ಭವೇತಿ ಶೇಷಃ । ಹೇ ಶವಿಷ್ಠಾತಿಶಯೇನ ಬಲವನ್ವಜ್ರಿನ್ವಜ್ರಯುಕ್ತೇಂದ್ರ, ಋಂಜಸೇ ವರ್ಜಯಸ್ಯನಿಷ್ಟಂ ಪರಿಹರಸೀತ್ಯರ್ಥಃ । ಹೇ ಮಂಹಿಷ್ಠಾತಿಶಯೇನ ಪೂಜ್ಯ ವಜ್ರಿನ್‌ವಜ್ರಯುಕ್ತೇಂದ್ರ ಋಂಜಸೇ ಸರ್ವಥಾ ತ್ವಮನಿಷ್ಟಂ ಪರಿಹರಸಿ । ತಸ್ಮಾತ್ಕಾರಣಾದಾಯಾಹ್ಯಸ್ಮಿನ್ಕರ್ಮಣ್ಯಾಗಚ್ಛ । ಆಗತ್ಯ ಚ ಸೋಮಂ ಪಿಬ । ಪೀತ್ವಾ ಚ ಮತ್ಸ್ವ ಹೃಷ್ಟೋ ಭವ॥**

ಮೂರನೆಯ ಮಂತ್ರವನ್ನು ವಿವರಿಸುತ್ತಾರೆ. ಹೇ ವಜ್ರಿವಃ ವಜ್ರಾಯುಧದಿಂದಕೂಡಿದ ಇಂದ್ರನೇ, ರಾಯೇ ಧನಸಂಪತ್ತಿಗೋಸ್ಕರವೂ, ವಾಜಾಯಃ ಅನ್ನಲಾಭಕ್ಕೋಸ್ಕರವೂ, ಪ್ರಸನ್ನನಾಗು ಎಂದರ್ಥ. ಹೇ ಶವಿಷ್ಠಃ ಅತಿಶಯಬಲಶಾಲಿಯೇ, ವಜ್ರಿನ್ ವಜ್ರಾಯುಧವುಳ್ಳವನೇ, ಋಂಜಸಿ ಅನಿಷ್ಟವನ್ನು ಪರಿಹರಿಸುವಿ. ಹೇ ಮಂಹಿಷ್ಠ ಅತ್ಯಂತ ಪೂಜ್ಯನೇ, ವಜ್ರಿನ್ ವಜ್ರಯುಕ್ತನೇ, ಋಂಜಸೇ ಸರ್ವಪ್ರಕಾರದಿಂದಲೂ ನೀನು ನಮ್ಮ ಅನಿಷ್ಟವನ್ನು ಪರಿಹರಿಸುವಿ. ಆ ಕಾರಣದಿಂದ, ಆಯಾಹಿ ಈ ನಮ್ಮ ಯಜ್ಞದಲ್ಲಿ ಬಾ. ಬಂದು ಸೋಮರಸವನ್ನು, ಪಿಬ ಪಾನಮಾಡು. ಕುಡಿದು, ಮತ್ಸ್ವ ಸಂತೋಷಭರಿತನಾಗು.

**ವಿದಾ ರಾಯಃ ಸುವೀರ್ಯಂ ಭುವೋ ವಾಜಾನಾಂ ಪತಿರ್ವಶಾँ ಅನು। ಮಂಹಿಂಷ್ಠಾ ವಜ್ರಿನ್ನೃಂಜಸೇ ಯಃ ಶವಿಷ್ಠಃ ಶೂರಾಣಾಮ್ ॥**

**ಚತುರ್ಥೀಮೃಚಮಾಹ–ಹೇ ಇಂದ್ರ ರಾಯೋ ಧನಸ್ಯ ಸುವೀರ್ಯಂ ಶೋಭನಸಾಮರ್ಥ್ಯಂ ವಿದ ವೇತ್ಸಿ ಜಾನಾಸಿ, ಅತೋ ಧನಸಾರಾಭಿಜ್ಞತ್ವಾದ್ಭುವೋ ಭೂಲೋಕಸ್ಯ ವಾಜಾನಾಂ ತತ್ರತ್ಯಾನಾಮನ್ನಾನಾಂ ಚ ಪತಿಃ ಪಾಲಕಸ್ತ್ವಂ ವಶಾँ ಅನು ವಶ್ಯಾಂಸ್ತ್ವದಧೀನಾನ್ಯಜಮಾನಾನನುಗೃಹಾಣ । ಹೇ ಮಂಹಿಷ್ಠಾತಿಶಯೇನ ಪೂಜ್ಯ ವಜ್ರಿನ್ವಜ್ರಯುಕ್ತೇಂದ್ರ ಯಸ್ತ್ವಂ ಶೂರಾಣಾಂ ಮಧ್ಯೇ ಶವಿಷ್ಠೋಽತಿಶಯೇನ ಬಲವಾಂಸ್ತಾದೃಶಸ್ತ್ವಮೃಞ್ಜಸೇಽನಿಷ್ಟಂ ವರ್ಜಯಸಿ। ಯದ್ವಾಽಭೀಷ್ಟಂ ಸಾಧಯಸಿ । " ಋಞ್ಜತಿಃ ಪ್ರಸಾಧನಕರ್ಮಾ " ಇತಿ ನಿರುಕ್ತೇಽಭಿಧಾನಾತ್ ॥**

ನಾಲ್ಕನೆಯ ಮಂತ್ರವನ್ನು ವಿವರಿಸುತ್ತಾರೆ. ಎಲೈ ಇಂದ್ರನೇ ನೀನು ರಾಯಃ ಧನದ, ಸುವೀರ್ಯಂ ಶೋಭನಸಾಮರ್ಥ್ಯವನ್ನು, ವಿದ ತಿಳಿದಿರುವಿ. ಧನಸಾರವನ್ನು ತಿಳಿದಿರುವುದರಿಂದ, ಭುವಃ ಭೂಲೋಕಕ್ಕೂ, ವಾಜಾನಾಂ ಅಲ್ಲಿರುವ ಅನ್ನಾದಿ ಆಹಾರಗಳಿಗೂ ಪತಿಃ ಪಾಲಕನಾಗಿ, ವಶಾಂ ಅನು ನಿನ್ನ ಅಧೀನನಾದ ಯಜಮಾನನನ್ನು ಅನುಗ್ರಹಿಸು. ಹೇ ಮಂಹಿಷ್ಠ ಅತ್ಯಂತಪೂಜ್ಯನೇ, ವಜ್ರಿನ್ ವಜ್ರಯುಕ್ತಇಂದ್ರನೇ, ಯಃ ಯಾವನೀನು, ಶೂರರಮಧ್ಯದಲ್ಲಿ ಶವಿಷ್ಠಃ ಅತ್ಯಂತಬಲಶಾಲಿಯಾಗಿರುವಿ. ಈ ರೀತಿಯಾದ ನೀನು, ಋಂಜಸೇ ಅನಿಷ್ಟವನ್ನು ಪರಿಹರಿಸುವಿ. ಅಥವಾ ಅಭೀಷ್ಟವನ್ನು ಒದಗಿಸಿಕೊಡುವಿ ಋಂಜತಿಃ ಪ್ರಸಾಧನಕರ್ಮಾ ಎಂದು ನಿರುಕ್ತದಲ್ಲಿ ಹೇಳಿದೆ.

ಯೋ ಮಂಹಿಷ್ಠೋ ಮಘೋನಾಂ ಚಿಕಿತ್ವೋ ಅಭಿ ನೋ ನಯ |
ಇಂದ್ರೋ ವಿದೇ ತಮು ಸ್ತುಷೇ ವಶೀ ಹಿ ಶಕ್ರಃ ||

**ಪಂಚಮೀಮೃಚಮಾಹ—ಹೇ ಚಿಕಿತ್ವೋಽಸ್ಮತ್ಸೇವಾಭಿಜ್ಞೇಂದ್ರ ಯಸ್ತ್ವಂ ಮಘೋನಾಂ ಧನವತಾಂ ಮಧ್ಯೇ ಮಂಹಿಷ್ಠೋಽತಿಶಯೇನ ಪೂಜ್ಯಸ್ತಾದೃಶಸ್ತ್ವಂ ನೋಽಸ್ಮಾನಭಿನಯ ಸರ್ವತೋ ಧನಂ ಪ್ರಾಪಯ | ಇಂದ್ರಃ ಪರಮೈಶ್ವರ್ಯಯುಕ್ತಸ್ತ್ವಂ ವಿದೇ ವೇತ್ಸಿ ಜಾನಾಸಿ | ಅತ-ಸ್ತಮು ತಮಪಿ ಯಜಮಾನಂ ಸ್ತುಷೇ ಸ್ತೌಷಿ ಸಮ್ಯಗ್ಘವಿರ್ದತ್ತವಾನಿತಿ ಪ್ರಶಂಸಸಿ | ತ್ವಂ ತು ವಶೀ ಸರ್ವವಸ್ತುವಿಷಯವಶೀಕಾರವಾನ್ | ಅತ ಏವ ಶಕ್ರಃ ಶಕ್ತಿಮಾನ್ಹಿ | ತಸ್ಮಾತ್ತ್ವಯೈತದ್ಯಜಮಾನಾ-ನುಗ್ರಹಣಂ ಯುಕ್ತಮಿತ್ಯರ್ಥಃ ||**

ಐದನೆಯ ಮಂತ್ರವನ್ನು ವಿವರಿಸುತ್ತಾರೆ. ಹೇ ಚಿಕಿತ್ವೋ = ನಮ್ಮ ಸೇವೆಯನ್ನು ತಿಳಿದಿರುವ ಇಂದ್ರನೇ, ಯಃ =ಯಾವ ನೀನು, ಮಘೋನಾಂ = ಧನವಂತರಮಧ್ಯದಲ್ಲಿ, ಮಂಹಿಷ್ಠಃ =ಅತ್ಯಂತಪೂಜ್ಯನಾಗಿರುವೆಯೋ, ಆ ನೀನು ನಃ =ನಮ್ಮಗಳಿಗೆ, ಅಭಿನಯ =ಎಲ್ಲಾ ಕಡೆಯಿಂದ ಧನವನ್ನು ಕೊಡಿಸು. ಇಂದ್ರಃ =ಪರಮೈಶ್ವರ್ಯದಿಂದ ಕೂಡಿದ ನೀನು, ವಿದೇ =ಚನ್ನಾಗಿ ಎಲ್ಲವನ್ನೂ ತಿಳಿದಿರುವಿ. ಆದುದರಿಂದ, ತಮು =ಆ ಯಜಮಾನನನ್ನು, ಸ್ತುಷೇ =ಚನ್ನಾಗಿ ಹವಿಸ್ಸನ್ನು ಕೊಟ್ಟಿರುವನೆಂದು ಪ್ರಶಂಸಿಸುವಿ. ನೀನಾದರೋ, ವಶೀ =ಸಕಲವಸ್ತು ವಿಷಯಕನಾದ ವಶೀಕರಣವುಳ್ಳವನು. ಆದುದರಿಂದ, ಶಕ್ರಃ =ಶಕ್ತಿಮಂತನು. ಆದುದರಿಂದ ನೀನು ಯಜಮಾನನಿಗೆ ಅನುಗ್ರಹಿಸುವುದು ಯುಕ್ತವಾಗಿದೆ.

ತಮೂತಯೇ ಹವಾಮಹೇ ಜೇತಾರಮಪರಾಜಿತಮ್ | ಸ ನಃ ಪರ್ಷ
ದತಿ ದ್ವಿಷಃ ಕ್ರತುಶ್ಛಂದ ಋತಂ ಬೃಹತ್ ||

**ಷಷ್ಠೀಮೃಚಮಾಹ—ತಮಿಂದ್ರಮೂತಯೇಽಸ್ಮದ್ರಕ್ಷಾರ್ಥಂ ಹವಾಮಹ ಆಹ್ವಯಾಮಃ | ಕೀದೃಶಂ ಸರ್ವತ್ರ ಯುದ್ಧೇಷು ಜೇತಾರಂ ಕ್ವಾಪ್ಯಪರಾಜಿತಮ್ | ಸ ತಾದೃಶ ಇಂದ್ರೋ ನೋಽ-ಸ್ಮಾಕಂ ದ್ವಿಷಃ ಶತ್ರೂನತಿಪರ್ಷದತಿಶಯೇನ ವಿನಾಶಯತು | ಯೋಽಯಂ ಕ್ರತುರಸ್ಮಾಭಿರನುಷ್ಠೀ-ಯಮಾನೋ ಯದಪಿ ಚ್ಛಂದೋ ಗಾಯತ್ರ್ಯಾದಿಕಮಸ್ಮಾಭಿಃ ಪ್ರಯುಜ್ಯಮಾನಂ ಯದಪ್ಯೃತ್ಯಂ ಕರ್ಮಫಲಂ ತತ್ಸರ್ವಂ ಬೃಹತ್ಸಮೃದ್ಧಮಿತಿ ಶೇಷಃ ||**

ಆರನೆಯ ಮಂತ್ರವನ್ನು ತಿಳಿಸುತ್ತಾರೆ ತಂ= ಆ ಇಂದ್ರನನ್ನು, ಊತಯೇ= ನಮ್ಮ ರಕ್ಷಣೆಗೋಸ್ಕರ, ಹವಾಮಹೇ= ಕರೆಯುತ್ತೇವೆ. ಜೇತಾರಂ= ಯುದ್ಧಗಳಲ್ಲಿ ಎಂದೂಪರಾಜಯ ಹೊಂದದಿರುವವನನ್ನು ಕರೆಯುತ್ತೇವೆ. ಸಃ= ಅರೀತಿಯ ಇಂದ್ರನು, ನಃ = ನಮ್ಮ, ದ್ವಿಷಃ = ಶತ್ರುಗಳನ್ನು, ಅತಿಪರ್ಷತ್ = ಅತಿಶಯವಾಗಿ ನಾಶಪಡಿಸಲಿ. ಯಾವ ಈ, ಕ್ರತುಃ = ನಮ್ಮಿಂದ ಅನುಷ್ಠಾನಮಾಡುವ ಕರ್ಮವೂ, ಛಂದಃ = ನಮ್ಮಿಂದ ಪ್ರಯೋಗಿಸಲ್ಪಡುವ ಗಾಯತ್ರ್ಯಾದಿ ಛಂದಸ್ಸೂ, ಋತಂ = ಕರ್ಮಫಲವೂ ಇವೆಲ್ಲವೂ, ಬೃಹತ್ = ಸಮೃದ್ಧವಾಗಿರುತ್ತದೆ.

ಇಂದ್ರಂ ಧನಸ್ಯ ಸಾತಯೇ ಹವಾಮಹೇ ಜೇತಾರಮಪರಾಜಿತಮ್ |
ಸ ನಃ ಪರ್ಷದತಿ ದ್ವಿಷಃ ಸ ನಃ ಪರ್ಷದತಿ ಸ್ರಿಧಃ ||

ಸಪ್ತಮೀಮೃಚಮಾಹ—ಧನಸ್ಯ ಸಾತಯೇ ಲಾಭಾಯ ಜಯೋಪೇತಂ ಪರಾಜಯರಹಿತ-ಮಿಂದ್ರಂ ಹವಾಮಹ ಆಹ್ವಯಾಮಃ । ಸ ಚೇಂದ್ರೋಽಸ್ಮಾಕಂ ಶತ್ರೂನತಿಶಯೇನ ವಿನಾಶಯತು । ಸರ್ವತ್ರ ಹಿ ವೇದೇಷು "ಯೋಽಸ್ಮಾನ್ದ್ವೇಷ್ಟಿ ಯಂ ಚ ವಯಂ ದ್ವಿಷ್ಮಃ" (ಕೌಷೀ-೮) ಇತ್ಯಾದೌ ದ್ವೇಷ್ಯಾಣಾಂ ದ್ವೇಷ್ಟೄಣಾಂ ವಿನಾಶಃ ಪ್ರಾರ್ಥ್ಯತೇ ॥

ಏಳನೆಯ ಋಕ್ಕನ್ನು ವಿವರಿಸುತ್ತಾರೆ. ಧನಸ್ಯಸಾತಯೇ—ಧನಲಾಭಕ್ಕೋಸ್ಕರ, ಜೇತಾರಂಅಪರಾಜಿತಂ, ಇಂದ್ರಂ—ಜಯದಿಂದಕೂಡಿದ, ಪರಾಜಯರಹಿತನಾದ ಇಂದ್ರನನ್ನು, ಹವಾಮಹೇ—ಕರೆಯುತ್ತೇವೆ. ಸಃ— ಆ ಇಂದ್ರನು ನಃ— ನಮ್ಮ, ದ್ವಿಷಃ— ಶತ್ರುಗಳನ್ನು, ಅತಿಪರ್ಷತ್— ಸಂಪೂರ್ಣವಾಗಿ ನಾಶಮಾಡಲಿ. ಇನ್ನುಕೆಲವರು ತಾವಾಗಿ ದ್ವೇಷವನ್ನು ಮಾಡುವುದಿಲ್ಲ. ಆದರೂ ನಮ್ಮಿಂದ ಸ್ರಿಧಃ— ದ್ವೇಷಿಸಲ್ಪಡುತ್ತಾರೆ. ಅವರನ್ನೂ ಅತಿಶಯವಾಗಿ ನಾಶಮಾಡು ಯೋಽಸ್ಮಾನ್ದ್ವೇಷ್ಟಿ। ಯಂ ಚ ವಯಂ ದ್ವಿಷ್ಮಃ (ಕೌಷೀ-೨-೮) ಇತ್ಯಾದಿ ಶ್ರುತಿಗಳಲ್ಲಿ ದ್ವೇಷಮಾಡುವವರು ಮತ್ತು ದ್ವೇಷ್ಯರ ನಾಶವು ಪ್ರಾರ್ಥಿಸಿದೆ.

ಪೂರ್ವಸ್ಯ ಯತ್ತೇ ಅದ್ರಿವಃ ಸುಮ್ನ ಆಧೇಹಿ ನೋ । ವಸೋ ಪೂರ್ತಿಃ ಶವಿಷ್ಠ ಶಸ್ಯತ ಈಶೇ ಹಿ ಶಕ್ರಃ ॥

ಅಷ್ಟಮೀಮೃಚಮಾಹ—ಹೇಽದ್ರಿವೋಽದ್ರಯಃ ಪರ್ವತಾ ಅಸ್ಯ ಸಂತೀತ್ಯದ್ರಿವಾನ್ । ಇಂದ್ರೋ ಹಿ ಪರ್ವತಾನ್ಭಿನತ್ತಿ, ಅತಃ ಪರ್ವತೇಂದ್ರಯೋರ್ಭೇದ್ಯಭೇದಕತ್ವಲಕ್ಷಣಃ ಸಂಬಂಧಃ । ಯದ್ವಾಽದ್ರಿದಾರಣಂ ತದ್ಯುಕ್ತ ಹೇ ಇಂದ್ರ ಪೂರ್ವಸ್ಯಾಸ್ಮದುತ್ಪತ್ತೇಃ ಪೂರ್ವಸಿದ್ಧಸ್ಯ ತೇ ತವ ಯದ್ಧನಮಸ್ತಿ ಹೇ ವಸೋ ನಿವಾಸಹೇತೋ ಇಂದ್ರ ತಸ್ಮಿನ್ಸುಮ್ನೇ ಧನೇ ನೋಽಸ್ಮಾನಾಧೇಹಿ ಸ್ಥಾಪಯ । ಹೇ ಶವಿಷ್ಠಾತಿಶಯೇನ ಬಲಯುಕ್ತ ಪೂರ್ತಿಸ್ತ್ವದೀಯಧನಪೂರಣಂ ಶಸ್ಯತೇ ಸರ್ವೈ-ರ್ಯಜಮಾನೈಃ ಪ್ರಶಸ್ಯತೇ । ಪ್ರಶಂಸಾಪ್ರಕಾರ ಏವ ಪ್ರಶಸ್ಯತೇ—ಶಕ್ರಃ ಶಕ್ತಿಮಾನಿಂದ್ರ ಈಶೇ ಹಿ ಸರ್ವಸ್ಮಾದ್ರಕ್ಷಣಸ್ಯೇಷ್ಟೇ ಖಲು ಸೇಯಂ ಪ್ರಶಂಸಾ ॥

ಎಂಟನೆಯ ಮಂತ್ರವನ್ನು ವಿವರಿಸುತ್ತಾರೆ. ಹೇ ಅದ್ರಿವಃ— ಪರ್ವತಸಂಬಂಧಿಯೇ, ಇಂದ್ರನು ಪರ್ವತಗಳನ್ನು ಭೇದಿಸುವನು. ಆದುದರಿಂದ ಅವರಿಗೆ ಭೇದ್ಯಭೇದಕಭಾವಸಂಬಂಧವಿರುತ್ತದೆ. ಅಥವಾ ಅದ್ರಿ ಅಂದರೆ ಆದರ. ಆದರಾತಿಶಯವುಳ್ಳವನು ಎಂದರ್ಥ. ಪೂರ್ವಸ್ಯ— ನಾವುಹುಟ್ಟುವುದಕ್ಕೆ ಮೊದಲೇ ಇರುವ, ತೇ— ನಿನ್ನಯಾವ ಧನವಿದೆಯೋ, ಹೇ ವಸೋ— ಎಲೈ ನಿವಾಸಕಾರಣನೇ, ಆ ಸುಮ್ನೇ— ಧನದಲ್ಲಿ, ನಃ— ನಮ್ಮನ್ನು, ಆಧೇಹಿ— ಸ್ಥಾಪಿಸು. ಹೇಶವಿಷ್ಠ— ಅತಿಶಯಬಲಶಾಲಿಯೇ, ಪೂರ್ತಿಃ—ನಿನ್ನಧನಪೂರ್ತಿಯು, ಶಸ್ಯತೇ— ಎಲ್ಲಾ ಯಜಮಾನರಿಂದ ಪ್ರಶಂಸಿಸಲ್ಪಡುತ್ತದೆ. ಪ್ರಶಂಸಾರೀತಿಯನ್ನು ವಿವರಿಸುತ್ತಾನೆ. ಶಕ್ರಃ— ಶಕ್ತಿಮಂತನಾದ ಇಂದ್ರನೇ, ಈಶೇ ಹಿ— ನಮ್ಮೆಲ್ಲರರಕ್ಷಣದಲ್ಲಿ ಸಮರ್ಥನಾಗಿರುವಿ.

ನೂನಂ ತಂ ನವ್ಯಂ ಸಂನ್ಯಸೇ ಪ್ರಭೋ ಜನಸ್ಯ ವೃತ್ರಹನ್ । ಸಮ-
ನ್ಯೇಷು ಬ್ರವಾವಹೈ ಶೂರೋ ಯೋ ಗೋಷು ಗಚ್ಛತಿ ಸಖಾ
ಸುಶೇವೋ ಅದ್ವಯಾಃ॥

ನವಮೀಮೃಚಮಾಹ—ಹೇ ವೃತ್ರಹನ್ ವೃತ್ರಘಾತಿನ್ಜನಸ್ಯ ಪ್ರಭೋ ಸರ್ವಸ್ಯ ಜಂತೋಃ ಸ್ವಾಮಿನ್ನವ್ಯಂ ನೂತನಂ ವಲೀಪಲಿತಾದಿವಿಲಕ್ಷಣೇನ ಪುರಾಣತ್ವೇನ ವರ್ಜಿತಮಿಂದ್ರಂ ತಂ ತ್ವಾಂ ನೂನಮವಶ್ಯಂ ಸಂನ್ಯಸೇ ಸಮ್ಯಙ್ನಿತರಂ ಪ್ರಕ್ಷಿಪಾಮಿ। ಅಸ್ಮಿನ್ಕರ್ಮಣಿ ಹವಿಷೋ ಭೋಕ್ತೃತ್ವೇನ ಸ್ಥಾಪಯಾಮಿ। ತ್ವಂ ಚಾಹಂ ಚೇತ್ಯಾವಾಮುಭಾವನ್ಯೇಷು ಪರಸ್ಪರಂ ಸಮ್ಯಕ್ಪ್ರಬ್ರವಾವಹೈ। ಇತರೇಷು ಯಜಮಾನೇಷ್ವಹಂ ಗತ್ವಾ ಪ್ರಭೂತಫಲಪ್ರದೋಽಯಮಿಂದ್ರ ಇತ್ಯೇವಂ ಪ್ರಬ್ರವೀಮಿ। ಇತರೇಷು ದೇವೇಷು ತ್ವಂ ಗತ್ವಾ ಸಮ್ಯಗನುಷ್ಠಾತಾಽಯಂ ಯಜಮಾನ ಇತಿ ಪ್ರಬ್ರೂಹಿ । ಯೋ ಯಜಮಾನೋಽಸ್ತಿ ಸೋಽಯಂ ದಕ್ಷಿಣಾರೂಪೇಣ ದಾತವ್ಯಾಸು ಗೋಷು ಶೂರೋ ಗಚ್ಛತಿ। ಉದಾರಃ ಸನ್ಪ್ರವರ್ತತೇ । ಇತ್ಯೇವಂ ಮದೀಯಂ ಗುಣಂ ತ್ವಂ ಪ್ರಬ್ರೂಹಿ । ಇಂದ್ರೋಽಯಂ ಸಖಾ ಸಖಿವದತ್ಯಂತಂ ಸ್ನಿಗ್ಧಃ। ಸುಶೇವಃ ಸುಷ್ಠು ಸೇವಿತುಂ ಶಕ್ಯಃ। ಅದ್ವಯಾ ಏತತ್ಸದೃಶೋ ದ್ವಿತೀಯೋ ದೇವೋ ನಾಸ್ತೀತ್ಯೇವಮಹಂ ಬ್ರವೀಮಿ ॥

ಒಂಬತ್ತನೆಯ ಮಂತ್ರವನ್ನು ವಿವರಿಸುತ್ತಾರೆ. ಹೇ ವೃತ್ರಹನ್=ವೃತ್ರಾಸುರನನ್ನು ಸಂಹರಿಸಿದವನೇ, ಜನಸ್ಯ ಪ್ರಭೋ=ಸಕಲ ಪ್ರಾಣಿಗಳಿಗೆ ಸ್ವಾಮಿಯೇ, ನವ್ಯಂ = ನೂತನವಾದ ಶರೀರವುಳ್ಳ, ಸುಕ್ಕು ಮುಂತಾದ ವೃದ್ಧಲಕ್ಷಣ ವಿಲ್ಲದ, ತಂ = ಆ ನಿನ್ನನ್ನು, ನೂನಂ= ನಿಶ್ಚಯವಾಗಿಯೂ, ಸಂನ್ಯಸೇ = ಈ ಕಾರ್ಯದಲ್ಲಿ ಹವಿಸ್ಸನ್ನು ಭೋಗಿಸಲು ಸ್ಥಾಪಿಸಿರುತ್ತೇನೆ. ನೀನೂ ನಾನೂ, ಅನ್ಯೇಷು = ಪರಸ್ಪರವಾಗಿ ಇತರರಲ್ಲಿ ಸಂ = ಚನ್ನಾಗಿ, ಬ್ರವಾವಹೈ = ಹೇಳೋಣ. ಇತರ ಯಜಮಾನರಲ್ಲಿ ನಾನು ಹೋಗಿ ಈ ಇಂದ್ರನು ಅಧಿಕ ಫಲವನ್ನು ಕೊಡುವವನೆಂದು ಹೇಳುವೆನು. ಇತರ ದೇವತೆಗಳಲ್ಲಿ ನೀನು ಹೋಗಿ ಈ ಯಜಮಾನನು ಚನ್ನಾಗಿ ಅನುಷ್ಠಾನ ಮಾಡುವವನೆಂದು ಹೇಳು. ಯಾವ ಯಜಮಾನನಿರುವನೋ ಅವನು ದಕ್ಷಿಣಾರೂಪದಿಂದ ಕೊಡಬೇಕಾದ, ಗೋಷು ಶೂರೋ ಗಚ್ಛತಿ = ಗೋ ಮುಂತಾದವುಗಳಲ್ಲಿ ಉದಾರವಾಗಿ ನಡೆದು ಕೊಳ್ಳುತ್ತಾನೆ ಎಂದು ನೀನು ಹೇಳು. ಈ ಇಂದ್ರನು, ಸಖಾ = ಮಿತ್ರನಂತೆ ಅತ್ಯಂತ ಸ್ನೇಹಪರನಾಗಿರುತ್ತಾನೆ. ಸುಶೇವಃ = ಚನ್ನಾಗಿ ಸೇವಿಸಲು ಶಕ್ಯನು. ಅದ್ವಯಾಃ = ಇವನಿಗೆ ಸಮಾನನಾದವನು ಬೇರೆ ದೇವನಿಲ್ಲವೆಂದು ನಾನು ಹೇಳುತ್ತೇನೆ.

ಏವಾ ಹ್ಯೇವೈಷಾ ಹ್ಯಗ್ನಾ೩ಇ ॥

ತದೇವಮೃಚೋ ನವ ವ್ಯಾಖ್ಯಾತಾಃ । ಅಥ ನವ ಪುರೀಷಪದಾನಿ ವ್ಯಾಖ್ಯೇಯಾನಿ । ತತ್ರ ಪ್ರಥಮಂ ಪದಮಾಹ—“ಇಣ್ ಗತೌ” (ಅದಾ-ಗ-ಪ) ಇತ್ಯಸ್ಮಾದ್ಧಾತೋರಾಙ್ಪೂರ್ವಾನ್ನಿಷ್ಪನ್ನ ಏವಶಬ್ದ ಆಗಮನವಾಚೀ। ಹೇಽಗ್ನೇ ಏವಾ ಹ್ಯೇವ ವರ್ಧಾ ಸಮಾಗಚ್ಛ। ದ್ವಿರುಕ್ತಿಃ ಪ್ಲುತಿಶ್ಚಾಽಽದರಾರ್ಥಾ । ಏಕಾರಸ್ಯ ಸ್ಥಾನೇ ಪ್ಲುತಿರಿಕಾರೋತ್ತರಾ ವ್ಯಾಕರಣೇ ವಿಹಿತಾ ॥

ಒಂಭತ್ತು ಮಂತ್ರಗಳ ಅರ್ಥವನ್ನು ವಿವರಿಸಿದುದಾಯಿತು. ಇನ್ನು ಒಂಬತ್ತು ಪುರೀಷ ಪದಗಳ ಅರ್ಥವನ್ನು ಹೇಳಬೇಕು. ಅವುಗಳಲ್ಲಿ ಮೊದಲನೆಯ ಪದವನ್ನು ವಿವರಿಸುತ್ತಾರೆ. ಇಣ್ = ಗತೌ ಎಂಬ ಧಾತುವಿನಿಂದ ಆಜ ಉಪಸರ್ಗದಿಂದ ಕೂಡಿ ಏವ ಎಂಬ ಶಬ್ದವಾಗಿದೆ. ಬರುವುದು ಎಂಬರ್ಥವನ್ನು ಕೊಡುತ್ತದೆ. ಹೇ ಅಗ್ನೇ ಏವಾಹ್ಯೇವ=ಸರ್ವಪ್ರಕಾರದಿಂದಲೂ ಬನ್ನಿರಿ. ದ್ವಿರುಕ್ತಿ ಮತ್ತು ಪ್ಲುತಿಯು ಆದರಾತಿಶಯ ತಿಳಿಸಲು ಹೇಳಿದೆ. ಏಕಾರದ ಮೇಲೆ ಪ್ಲುತಿ ಬಂದರೆ ಅದು ಇಕಾರ ಶಿರಸ್ಕವಾಗಿರುತ್ತದೆಂದು ವ್ಯಾಕರಣದಲ್ಲಿ ಹೇಳಿದೆ.

ಏವಾ ಹ್ಯೇವೈವಾ ಹೀ೩ಂದ್ರಮ್ । ಏವಾ ಹ್ಯೇವೈವಾ ಹಿ ವಿಷ್ಣಾ೩ ಉ ।
ಏವಾ ಹ್ಯೇವೈವಾ ಹಿ ಪೂಷ೩ನ್ । ಏವಾ ಹ್ಯೇವೈವಾ ಹಿ ದೇವಾಃ೩॥

**ಅನಂತರಾಣಿ ಚತ್ವಾರಿ ಪದನ್ಯಾಹ—ಪ್ರಥಮಪದವದ್ವ್ಯಾಖ್ಯೇಯಮ್ ॥**

ಮುಂದಿನ ನಾಲ್ಕು ಪುರೀಷಪದಗಳನ್ನು ವಿವರಿಸುತ್ತಾರೆ. ಆಯಾಯ ದೇವತೆಗಳನ್ನು ಕರೆಯುವುದು ಹಿಂದಿನಂತೆಯೇ ಅರ್ಥ ತಿಳಿಯಬೇಕು.

ಏವಾ ಹಿ ಶಕ್ರೋ ವಶೀ ಹಿ ಶಕ್ರೋ ವಶಾ ಅನು ॥

**ಷಷ್ಠಂ ಪದಮಾಹ—ಶಕ್ರಃ ಶಕ್ತಿಮಾನಿಂದ್ರ ಏವಾ ಹಿ, ಆಗತಃ ಖಲು । ಸ ಚ ಶಕ್ರೋ ವಶೀಹಿಸರ್ವವಸ್ತು ವಶೀಕಾರವಾನ್ಖಲು । ತಾದೃಶೋ ದೇವೋ ವಶಾ ಅನು ಸ್ವಸ್ಯ ವಶ್ಯಾನ್ಯಜಮಾನಾನನುಗೃಹ್ಣಾತು ॥**

ಆರನೆಯ ಪದವನ್ನು ವಿವರಿಸುತ್ತಾರೆ. ಶಕ್ರಃ =ಶಕ್ತಿಮಂತನಾದ ಇಂದ್ರನು, ಏವಾಹಿ =ಬಂದಿರುವನಷ್ಟೇ. ಅವನು ವಶೀಹಿ =ಸಕಲವಸ್ತುಗಳ ವಶೀಕಾರವುಳ್ಳವನು. ಆ ಇಂದ್ರನು ವಶಾಂ ಅನು =ವಶ್ಯರಾದ ಯಜಮಾನರನ್ನು ಅನುಗ್ರಹಿಸಲಿ.

ಆ ಯೋ ಮನ್ಯಾಯ ಮನ್ಯವ ಉಪೋ ಮನ್ಯಾಯ ಮನ್ಯವೇ ॥

**ಸಪ್ತಮಂ ಪದಮಾಹ—ಯ ಇಂದ್ರೋ ಮನ್ಯಾಯ ಮನ್ಯವೇ ಮಂತವ್ಯಮಸ್ಮದ್ಧಿತಂ ಮಂತುಮಾ ಯಜ್ಞೇ ಸಮಾಗಚ್ಛತಿ ಸ ಇಂದ್ರೋ ಮನ್ಯಾಯ ಮಂತವ್ಯಮಸ್ಮದ್ಧಿತಂ ಮನ್ಯವೇ ಮಂತುಮುಪೋ ಅಸ್ಮತ್ಸಮೀಪ ಏವ ತಿಷ್ಠತು ॥**

ಏಳನೆಯ ಪದವನ್ನು ವಿವರಿಸುತ್ತಾರೆ. ಯಾವ ಇಂದ್ರನು ನಮ್ಮ ಹಿತವನ್ನು ತಿಳಿದು ನಮ್ಮ ಯಜ್ಞಕ್ಕೆ ಬರುತ್ತಾನೋ ಅವನು ನಮ್ಮ ಹಿತಕ್ಕೋಸ್ಕರ ನಮ್ಮ ಸಮೀಪದಲ್ಲಿಯೇ ಇರಲಿ ಎಂದರ್ಥ.

ಉಪೇಹಿ ವಿಶ್ವಥ ॥

**ಅಷ್ಟಮಂ ಪದಮಾಹ—ಹೇ ವಿಶ್ವಥ ವಿಶ್ವಸ್ಯ ಧಾರಕೇಂದ್ರೋಪೇಹ್ಯಸ್ಮತ್ಸಮೀಪೇ ಪ್ರಾಪ್ನುಹಿ ॥**

ಎಂಟನೆಯ ಪದವನ್ನು ವಿವರಿಸುತ್ತಾರೆ. ಎಲೈ ವಿಶ್ವಧಾರಕನಾದ ಇಂದ್ರನೇ ನಮ್ಮ ಸಮೀಪಕ್ಕೆ ದಯಮಾಡು.

**ವಿದಾ ಮಘವನ್ವಿದೋಽಷವ್ ॥**

ನವಮಂ ಪದಮಾಹ–ಹೇ ಮಘವನ್ಧನವನ್ನಿಂದ್ರ ವಿದ ವೇತ್ಥ ಸರ್ವಂ ಜಾನಾಸಿ । ಅತೋಽ-ಸ್ಮದ್ಧಿತಂ ವಿದ ವಿದ್ಧಿ ಜಾನೀಹಿ ಚಿತ್ತೇಽವಧಾರಯ ಓಂ, ಅಸ್ತು ಶ್ರೇಯೋಽಸ್ಮಾಕಮಿತಿ ಶೇಷಃ । ತದಿದಂ ನವಸಂಖ್ಯಾಕಾನಾಮೃಚಾಂ ಪುರೀಷಪದಾನಾಂ ಚ ಪ್ರತಿಪಾದಕಂ ಗ್ರಂಥಜಾತಂ ಯದ್ಯಪಿ ಕರ್ಮಕಾಂಡೇ ಪಠಿತುಂ ಯುಕ್ತಂ ತಥಾಽಪ್ಯರಣ್ಯ ಏವಾಧ್ಯೇತವ್ಯಮಿತ್ಯಭಿಪ್ರೇತ್ಯ ಚತುರ್ಥಾ-ರಣ್ಯಕತ್ವೇನಾತ್ರ ಪಠಿತಮ್ ॥

ಒಂಬತ್ತನೆಯ ಪದಾರ್ಥವನ್ನು ವಿವರಿಸುತ್ತಾರೆ. ಹೇಮಘವನ್ =ಧನವಂತನಾದ ಇಂದ್ರನೇ, ವಿದ =ಸಕಲವನ್ನೂ ತಿಳಿದಿರುವಿ. ಆದುದರಿಂದ ನಮ್ಮ ಹಿತವನ್ನೂ ವಿದ =ತಿಳಿದಿರುವಿ. ಮನಸ್ಸಿನಲ್ಲಿಯೇ ನಿಶ್ಚಯಿಸು. ಓಂ ಅಸ್ತು ನಮಗೆ ಶ್ರೇಯಸ್ಸಾಗಲಿ. ಈ ಒಂಬತ್ತು ಋಕ್ಕುಗಳನ್ನೂ ಒಂಬತ್ತು ಪುರೀಷಪದಗಳನ್ನೂ ವಿವರಿಸುವ ಗ್ರಂಥಜಾತವು ಕರ್ಮಕಾಂಡದಲ್ಲಿ ಹೇಳಲು ಯುಕ್ತವಾಗಿದ್ದರೂ, ಇದನ್ನು ಅರಣ್ಯದಲ್ಲಿಯೇ ಅಧ್ಯಯನಮಾಡಬೇಕಾದುದರಿಂದ ನಾಲ್ಕನೆಯ ಆರಣ್ಯಕದಲ್ಲಿ ಹೇಳಿದೆ.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಚತುರ್ಥಾರಣ್ಯಕೇ ಪ್ರಥಮಾಧ್ಯಾಯೇ ಪ್ರಥಮಃ ಖಂಡಃ**

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಬಹ್ವೃಚ ಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಚತುರ್ಥಾರಣ್ಯಕೇ ಪ್ರಥಮೋಽಧ್ಯಾಯಃ**

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಚತುರ್ಥಾರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಚತುರ್ಥಾರಣ್ಯಕದ ಪ್ರಥಮಾಧ್ಯಾಯವು ಸಮಾಪ್ತವಾದುದು

**ಇತಿ ಶ್ರೀಮದ್ವಿದ್ಯಾತೀರ್ಥಮಹೇಶ್ವರಪರಾವತಾರಸ್ಯ ವೈದಿಕಮಾರ್ಗಪ್ರವರ್ತಕಸ್ಯ ಶ್ರೀ ವೀರಬುಕ್ಕಮಹಾರಾಜಸ್ಯಾಜ್ಞಾ ಪರಿಪಾಲಕೇನ ಸಾಯಣಾಮಾತ್ಯೇನ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಐತರೇಯರಣ್ಯಕಕಾಂಡೇ ಚತುರ್ಥಾರಣ್ಯಕಂ ಸಮಾಪ್ತಮ್ ॥**



## ಅಥ ಪಂಚಮಾರಣ್ಯಕೇ ಪ್ರಥಮಾಧ್ಯಾಯೇ ಪ್ರಥಮಃ ಖಂಡಃ

### ಐದನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ॥
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಮ್ ॥೧॥

ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಮ್ ॥೨॥

ಐತರೇಯಬ್ರಾಹ್ಮಣೇಽಸ್ತಿ ಕಾಂಡಮಾರಣ್ಯಕಾಭಿಧಮ್ ॥
ಮಹಾವ್ರತಪ್ರಯೋಗೋಽಸ್ಮಿನ್ಪಂಚಮಾರಣ್ಯಕೋದಿತಃ ॥೩॥

೧-೨ ವ್ಯಾಖ್ಯಾತವಾಗಿವೆ. ಐತರೇಯ ಬ್ರಾಹ್ಮಣದಲ್ಲಿ ಇನ್ನು ಒಂದು ಆರಣ್ಯಕ ಕಾಂಡ ಉಳಿದಿದೆ. ಈ ಐದನೆಯ ಆರಣ್ಯಕದಲ್ಲಿ ಮಹಾವ್ರತಪ್ರಯೋಗವನ್ನು ವಿವರಿಸುತ್ತಾರೆ.

### ಮಹಾವ್ರತಸ್ಯ ಪಂಚವಿಂಶತಿಂ ಸಾಮಿಧೇನ್ಯಃ ॥

ತ್ರಿವಿಧಂ ಮಹಾವ್ರತಾಖ್ಯಂ ಕರ್ಮ, ಏಕಾಹರೂಪಂ ಮಹಾನಾಮ್ನ್ಯವಯವರೂಪಂ ಸತ್ರಾವಯವರೂಪಂ ಚೇತಿ । ತಸ್ಯ ತ್ರಿವಿಧಸ್ಯಾಪಿ ಹೌತ್ರಪ್ರಯೋಗಂ ವಕ್ತುಮುಪಕ್ರಮತೇ— ನನು ಪ್ರಥಮಾರಣ್ಯಕೇಽಪಿ—"ಅಥ ಮಹಾವ್ರತಮಿಂದ್ರೋ ವೈ ವೃತ್ರಂ ಹತ್ವಾ" (ಐ-ಆ-೧-ಅ ೧-ಖಂ-೧) ಇತ್ಯಾದಿನಾ ಮಹಾವ್ರತಪ್ರಯೋಗೋಽಭಿಹಿತಃ, ಪಂಚಮೇಽಪಿ ತಸ್ಯೈವಾಭಿಧಾನೇ ಪುನರುಕ್ತಿಃ ಸ್ಯಾತ್ । ನಾಯಂ ದೋಷಃ । ಸೂತ್ರಬ್ರಾಹ್ಮಣರೂಪೇಣ ತಯೋರ್ವಿಭೇದಾತ್ । ಪಂಚಮಾರಣ್ಯಕಮೃಷಿಪ್ರೋಕ್ತಂ ಸೂತ್ರಮ್ । ಪ್ರಥಮಾರಣ್ಯಕಂ ತ್ವಪೌರುಷೇಯಂ ಬ್ರಾಹ್ಮಣಮ್ ಅತ ಏವ ತತ್ರಾರ್ಥವಾದಪ್ರಪಂಚೇನ ಸಹಿತಾ ವಿಧಯಃ ಶ್ರೂಯಂತೇ। ಪಂಚಮೇ ತು ನ ಕೋಽಪ್ಯರ್ಥವಾದೋಽಸ್ತಿ । ಶಾಖಾಂತರಗತಾಶ್ಚ ಮಂತ್ರಾ ಬಹವಃ ಉಪಲಭ್ಯಂತೇ । ತಸ್ಮಾತ್ "ಅಥೈತಸ್ಯ ಸಮಾಮ್ನಾಯಸ್ಯ" (ಶ್ರೌ-ಸೂ-ಅ-೧-ಖಂ-೧) ಇತ್ಯಾದಿದ್ವಾದಶಾಧ್ಯಾಯೀವತ್ "ಮಹಾವ್ರತಸ್ಯ ಪಂಚವಿಂಶತಿಮ್" ಇತ್ಯಾದಿ ಪಂಚಮಾರಣ್ಯಕಂ ಸೂತ್ರಮೇವ। ಅರಣ್ಯ ಏವೈತದಧ್ಯೇಯಮಿತ್ಯಭಿಪ್ರೇತ್ಯಾಧ್ಯೇತಾರೋಽರಣ್ಯಕಾಂಡೇಽಂತರ್ಭಾವ್ಯಾಧೀಯತೇ। ಏತಸ್ಮಿನ್ಪಂಚಮಾರಣ್ಯಕೇ ಸೂತ್ರಕಾರೇಣ ವಿಧೀಯಮಾನಂ ಮಹಾವ್ರತಾಖ್ಯಂ ಕರ್ಮ ಗವಾಮಯನೇ ಸೂತ್ರೇ ಸಮುತ್ಪನ್ನಮ್। ಅತ ಏವಾಧ್ವರ್ಯುಶಾಖಾಯಾಮ್-"ಗಾವೋ ವಾ ಏತತ್ಸತ್ರಮಾಸತ" ಇತ್ಯಾದಿಕೇ ಗವಾಮಯನಪ್ರಕ-

ರಣೇ ದೇವಾನಾಂ ವಾ ಅಂತಂ ಜಗ್ಮುಷಾಮ್ " ಇತ್ಯಾದಿಕೇನಾನುವಾಕತ್ರಯೇಣ ಮಹಾವ್ರತಂ ಸಮಾಮ್ನಾತಮ್। ನನು ತಸ್ಯಾಮೇವ ಶಾಖಾಯಾಂ ಗ್ರಂಥಾಂತರೇ-"ಪ್ರಜಾಪತಿಃ ಪ್ರಜಾಃ ಸೃಷ್ಟ್ವಾ ವೃತ್ತೋಽಶಯತ್" ಇತ್ಯನುವಾಕೇವ ತದಾಮ್ನಾತಮಿತಿ ಚೇದಾಮ್ನಾಯತಾಂ ನಾಮ ತಸ್ಯಾಪ್ಯನು ವಾಕ್ಯಸ್ಯಗವಾಮಯನಪ್ರಕರಣಗತತ್ವಾತ್। "ನವೈತಾನ್ಯಹಾನಿ ಭವಂತಿ" ಇತ್ಯಾದಿಕೇ ಗವಾಮಯನ-ಪ್ರತಿಪಾದಕೇಽನುವಾಕಪಂಚಕೇ—"ಪ್ರಜಾಪತಿಃಪ್ರಜಾಃ ಸೃಷ್ಟ್ವಾ" ಇತ್ಯಾದ್ಯನುವಾಕಃ ಪಂಚಮತ್ವೇ-ನಾಮ್ನಾತಃ। ಉದ್ಗಾತೃವೇದೇಪಿ "ಗಾವೋ ವೈ" ಇತ್ಯಾರಭ್ಯ ಸಮಾಮ್ನಾತೇ ಗವಾಮಯನ-ಪ್ರಕರಣೇ—"ಪ್ರಜಾಪತಿಃ ಪ್ರಜಾ ಅಸೃಜತ" ಇತ್ಯಾದಿನಾ ಮಹಾವ್ರತಾಖ್ಯಮೇಕಮಹರಾಮ್ನಾತಮ್। ತಚ್ಚ ಸತ್ರಸ್ಯೋಪಾಂತ್ಯಮಹಃ, ಉದಯನೀಯಾಖ್ಯಾದಂತಿಮಾದಹ್ನಃ ಸಮನಂತರಪೂರ್ವಭಾ-ವಿತ್ವಾತ್। ತಥಾ ಚಾಪಸ್ತಂಬಃ—"ಸಂತಿಷ್ಠತೇ ಮಹಾವ್ರತಮ್" ಇತ್ಯೇದಹಃ ಸಮಾಪ್ಯಾನಂತರಂ ವ್ಯಾಖ್ಯಾತ ಉದಯನೀಯ ಇತ್ಯುದಯನೀಯಾಖ್ಯಂ ಚರಮಮಹಃ ಪ್ರೋವಾಚ। ತಸ್ಮಾತ್ಸತ್ರೇ ಸಮುತ್ಪನ್ನಸ್ಯ ಮಹಾವ್ರತಸ್ಯ ವಚನಬಲಾತ್ಸತ್ರಾದ್ಬಹಿರಪ್ಯೇಕಾಹರೂಪೇಣಾಹೀನಗತತ್ವೇನ ಚ ಪೃಥಕ್ಪ್ರಯೋಗೋ ಭವತಿ। ಯಥಾ ರಾಜಸೂಯೋತ್ಪನ್ನಾಯಾ ಅವೇಷ್ಟೇರ್ವಚನಾತ್ಪೃಥಗಪಿ ಪ್ರಯೋಗಃ, ಯಥಾ ವಾ ರಾಜಸೂಯೋತ್ಪನ್ನಾನಾಂ ಚಾತುರ್ಮಾಸ್ಯಾನಾಮ್—"ಅಕ್ಷಯ್ಯಂ ಹ ವೈ ಚಾತುರ್ಮಾಸ್ಯಯಾಜಿನಃ ಸುಕೃತಂ ಭವತಿ'' ಇತಿವಚನೇನ ಪೃಥಕ್ಪ್ರಯೋಗಸ್ತದ್ವತಮ್। ಏಕಾಹತ್ವಪಕ್ಷೇ ಸ್ವಾತಂತ್ರ್ಯಮ್। ಅಹೀನತ್ವಪಕ್ಷೇ ತು ಪೌಂಡರೀಕನಾಮ್ನ ಏಕಾದಶರಾತ್ರಸ್ಯೇದಂ ದಶಮಮಹರ್ಭವತಿ। ತಥಾ ಚಾಪಸ್ತಂಬಃ—"ಅಥೈಕೇಷಾಮಭ್ಯಾಸಾಯ ಪಂಚಾಹಸ್ತ್ವಾ-ರಥಂತರೋಗಾ ಮಹಾವ್ರತಂ ವಿಶ್ವಜಿತ್ಸರ್ವಪೃಷ್ಠೋಽತಿರಾತ್ರಃ" ಇತಿ ಪೌಂಡರೀಕಾಹಃಕ್ಲೃಪ್ತಿ-ಮುಕ್ತವಾನ್। ಅಥ ಸತ್ರೇ ಸಮುತ್ಪನ್ನಂ ಮಹಾವ್ರತಂ ಪ್ರಕೃತಿಃ। ಏಕಾಹರೂಪಮಹೀನ ರೂಪಂ ಚ ವಿಕೃತಿಃ। ಅತಃ ಸತ್ರಗತಸ್ಯ ಮಹಾವ್ರತಸ್ಯ ಪ್ರಾಧಾನ್ಯೇನ ಪ್ರಯೋಗ ಇಹೋಪದಿಶ್ಯತೇ। ನನು ತಸ್ಯಾಪಿ ಮಹಾವ್ರತಸ್ಯ ಪರಂಪರಯಾಗ್ನಿಷ್ಟೋಮವಿಕೃತಿತ್ವೇನ ಸೋಮಯಾಗರೂಪತ್ವಮ್, ಸೋಮಯಾಗೇ ಚ ಸ್ತೋತ್ರಶಸ್ತ್ರಾದಿವತ್ಸಾಮಿಧೇನೀನಾಮಂಗತ್ವಭಾವಾತ್ '' ಪಂಚವಿಂಶತಿಂ ಸಾಮಿಧೇನೀಃ" ಇತಿ ವಿಧಾನಮಯುಕ್ತಮಿತಿ ಚೇತ್। ನಾಯಂ ದೋಷಃ। ಸೋಮಸ್ಯ ಸಾಮಿ-ಧೇನ್ಯಪೇಕ್ಷಾರಾಹಿತ್ಯೇಽಪಿ ತದಂಗಭೂತಸ್ಯ ಸವನೀಯಪಶೋಸ್ತದಪೇಕ್ಷತ್ವಾತ್—"ಅನರ್ಥಕ್ಯಾ-ತ್ತದಂಗೇಷು " (ಮೀ-ಸೂ-ಅ-೩-ಪಾ-೧-ಸೂ-೧೮-ಅಧಿ-೯) ಇತಿ ನ್ಯಾಯೇನ ಪ್ರಧಾನೇನಾನ್ವ-ಯ ರಹಿತತ್ವೇಽಪಿ ತದಂಗಾನ್ವಯೋಪಪತ್ತೇಃ। ಅತೋಽಂಗದ್ವಾರಾ ಸಾಮಿಧೇನೀನಾಂ ಮಹಾವ್ರತ-ಸಂಬಂಧಾನ್ಮಹಾವ್ರತಸ್ಯೇತಿ ಸಂಬಂಧವಾಚಿನೀ ಷಷ್ಠೀ ಯುಜ್ಯತೇ॥ ಪಂಚವಿಂಶತಿಮಿತಿ ದ್ವಿತೀಯಾ ಪ್ರಥಮಾತ್ವೇನ ಪರಿಣೇತವ್ಯಾ। ಸಾಮಿಧೇನ್ಯಭಿಧಾ ಋಚಃ ಪಂಚವಿಂಶತಿಸಂಖ್ಯಾಕಾ ಇತ್ಯರ್ಥಃ। ಸಮ್ಯಗಿಧ್ಯತೇ ಜ್ವಾಲ್ಯತೇಽಗ್ನಿರ್ಯಾಭಿರ್ಋಗ್ಭಿಸ್ತಾಃ ಸಾಮಿಧೇನ್ಯಃ। ತಥಾಚೋಕ್ತಮ್—"ಋಕ್ಸಾ-ಮಿಧೇನೀ ಧಾಯ್ಯಾ ಚ ಯಾ ಸ್ಯಾದಗ್ನಿಸಮಿಂಧನೇ" (ಅಮ-ಕೊ-ಬ್ರ-ವ-ಶ್ಲೋ ೨೨) ಇತಿ। ಸವನೀಯಸ್ಯ ಪಶೋಃ ಪ್ರೋಕ್ಷಣಾದೂರ್ಧ್ವಮಧ್ವರ್ಯುಣಾ ಪ್ರೇಷಿತೋ ಹೋತಾ ಸಾಮಿಧೇ-ನೀರನುಬ್ರೂಯಾತ್। ತಥಾಚಾಽಽಪಸ್ತಂಬ ಆಹ—" ಉಪರಿಷ್ಟಾದಧಸ್ತಾತ್ಸರ್ವತಶ್ಚ ಪ್ರೋಕ್ಷ್ಯ ವೇದಂ ನಿಧಾಯ ಸಾಮಿಧೇನೀಭ್ಯಃ ಪ್ರತಿಪದ್ಯತೇ " ಇತಿ ॥

ಏಕಾಹರೂಪ, ಮಹಾನಾಮ್ನ್ಯವಯವರೂಪ, ಸತ್ರಾವಯವರೂಪವೆಂದು ಮಹಾವ್ರತವೆಂಬ ಕರ್ಮ ಮೂರುರೀತಿಯಾಗಿ ರುತ್ತದೆ. ಇಲ್ಲಿ ಉಂಟಾಗುವ ಆಕ್ಷೇಪವನ್ನು ತೋರಿಸುತ್ತಾನೆ. **ಅಥ ಮಹಾವ್ರತಮಿಂದ್ರೋ ವೈ ದೇವತಾ** ಇತ್ಯಾದಿ ವಾಕ್ಯಗಳಿಂದ ಪ್ರಥಮಾರಣ್ಯಕದಲ್ಲಿಯೂ ಈ ಮಹಾವ್ರತಪ್ರಯೋಗವು ಹೇಳಿದೆ. ಐದನೆಯ ಆರಣ್ಯಕದಲ್ಲಿಯೂ ಹೇಳಿದರೆ ಪೌನರುಕ್ತ್ಯ ಬರುವುದಿಲ್ಲವೇ ? ಎಂದು ಶಂಕೆ ಬರುತ್ತದೆ. ಆದರೆ ಈ ದೋಷಕ್ಕೆ ಅವಕಾಶವಿಲ್ಲ. ಸೂತ್ರ ಬ್ರಾಹ್ಮಣರೂಪದಿಂದ ಅವುಗಳಿಗೆ ಭೇದವಿದೆ. ಪಂಚಮಾರಣ್ಯಕವು ಋಷಿಪ್ರೋಕ್ತವಾದುದರಿಂದ ಸೂತ್ರರೂಪವೂ, ಪ್ರಥಮಾರಣ್ಯಕವು ಅಪೌರುಷೇಯವಾದ ಬ್ರಾಹ್ಮಣವೂ ಆಗಿರುತ್ತದೆ. ಬ್ರಾಹ್ಮಣವಾದುದರಿಂದಲೇ ಅಲ್ಲಿ ಅರ್ಥವಾದದ ವಿವರದೊಡನೆ ವಿಧಿಗಳು ತೋರುತ್ತವೆ. ಐದನೆಯದರಲ್ಲಿ ಯಾವ ಅರ್ಥವಾದವೂ ಇಲ್ಲ. ಇತರಶಾಖೆಗಳ ಅನೇಕಮಂತ್ರಗಳೂ ಇಲ್ಲಿ ಉದಾಹೃತವಾಗಿವೆ. ಇದು ಅರಣ್ಯದಲ್ಲಿಯೇ ಅಧ್ಯಯನಮಾಡಬೇಕಾದುದರಿಂದ ಆಧ್ಯಯನಮಾಡುವವರು ಅರಣ್ಯಕಾಂಡದಲ್ಲಿ ಸೇರಿಸಿ ಪಠಿಸುತ್ತಾರೆ. ಈ ಪಂಚಮಾರಣ್ಯಕದಲ್ಲಿ ಸೂತ್ರಕಾರರು ವಿಧಿಸುವ ಮಹಾವ್ರತವೆಂಬ ಕರ್ಮವು ಗವಾಮಯನವೆಂಬ ಸತ್ರದಿಂದ ಉತ್ಪನ್ನವಾಗಿದೆ. ಆದುದರಿಂದಲೇ ಅಧ್ವರ್ಯುಶಾಖೆಯಲ್ಲಿ **ಗಾವೋ ವಾ ಏತತ್ಸತ್ರಮಾಸತ** ಎಂಬ ಗವಾಮಯನಪ್ರಕರಣದಲ್ಲಿ **ದೇವಾನಾಂ ವಾ ಅಂತಂ ಜಗ್ಮುಷಾಂ** ಇತ್ಯಾದಿ ಮೂರು ಅನುವಾಕಗಳಿಂದ ಮಹಾವ್ರತಕರ್ಮ ಹೇಳಿದೆ. **ನವೈತಾನ್ಯಹಾನಿ ಭವಂತಿ** ಇತ್ಯಾದಿ ಗವಾಮಯನಪ್ರತಿಪಾದಕ ಅನುವಾಕಗಳಲ್ಲಿ **ಪ್ರಜಾಪತಿಃ ಪ್ರಜಾಃ ಸೃಷ್ಟ್ವಾ** ಇತ್ಯಾದ್ಯನುವಾಕವು ಐದನೆಯದಾಗಿ ಹೇಳಿದೆ. ಉದ್ಗಾತೃವೇದದಲ್ಲಿಯೂ **ಗಾವೋವೈ** ಎಂದು ಆರಂಭಿಸಿ ಹೇಳಿದ ಗವಾಮಯನಪ್ರಕರಣದಲ್ಲಿ **ಪ್ರಜಾಪತಿಃ ಪ್ರಜಾಃ ಅಸೃಜತ** ಇತ್ಯಾದಿವಾಕ್ಯಗಳಿಂದ ಮಹಾವ್ರತವೆಂಬ ಹಗಲು ಹೇಳಿದೆ. ಅದು ಸತ್ರದ ಕೊನೆಯದಿನ ಹಿಂದಿನದಿನವಾಗುತ್ತದೆ. ಉದಯನೀಯವೆಂಬುದು ಕೊನೆಯ ದಿನ. ಅದರ ಪೂರ್ವದ ದಿನ ಉಪಾಂತ್ಯವಾಗುತ್ತದೆ. ಆಪಸ್ತಂಬರೂ ಕೂಡಾ **ಸಂತಿಷ್ಠತೇ ಮಹಾವ್ರತಂ** ಎಂದು ಈ ಮಹಾವ್ರತವನ್ನು ಸಮಾಪ್ತಗೊಳಿಸಿದ ಮೇಲೆ ಉದನೀಯವು ವ್ಯಾಖ್ಯಾತವಾಗಿದೆ ಎಂದುದರಿಂದ ಮಹಾವ್ರತವು ಉಪಾಂತ್ಯವೆಂದೂ ಉದಯನೀಯವು ಕೊನೆಯ ಹಗಲೆಂದೂ ಹೇಳಿರುತ್ತಾರೆ. ಆದುದರಿಂದ ಸತ್ರದಲ್ಲಿ ಉಂಟಾದ ಮಹಾವ್ರತಕ್ಕೆ ವಚನದಿಂದ ಸತ್ರದಿಂದ ಹೊರಗೂ ಒಂದು ಹಗಲಿನ ರೂಪದಿಂದ ಅಹೀನ ಸಂಬಂಧಿಯಾಗಿ ಪೃಥಕ್ಪ್ರಯೋಗವು ಸಿದ್ಧವಾಗುತ್ತದೆ. ಏಕಾಹವೆಂದು ಸ್ವೀಕರಿಸಿದರೆ ಸ್ವಾತಂತ್ರ್ಯವೂ, ಅಹೀನತ್ವಪಕ್ಷದಲ್ಲಿ ಪೌಂಡರೀಕವೆಂಬ ಏಕಾದಶ ರಾತ್ರಕ್ಕೆ ಇದು ಹತ್ತನೆಯ ಹಗಲಾಗುತ್ತದೆ. ಸತ್ರದಲ್ಲಿ ಸಮುತ್ಪನ್ನನಾದ ಮಹಾವ್ರತವು ಪ್ರಕೃತಿಯಾಗಿಯೂ, ಏಕಾಹರೂಪ ಅಥವಾ ಅಹೀನ ರೂಪವಾದರೆ ವಿಕೃತಿಯಾಗಿಯೂ ತಿಳಿಯಬೇಕು. ಆದುದರಿಂದ ಸತ್ರದಲ್ಲಿರುವ ಮಹಾವ್ರತದ ಪ್ರಧಾನ ಪ್ರಯೋಗವನ್ನು ಇಲ್ಲಿ ಉಪದೇಶಿಸುತ್ತಾರೆ. ಈ ಮಹಾವ್ರತವು ಪರಂಪರೆಯಿಂದ ಅಗ್ನಿಷ್ಟೋಮವಿಕೃತಿಯಾಗುವುದರಿಂದ ಸೋಮಯಾಗತ್ವ ಸಂಭವಿಸುವುದರಿಂದ, ಸೋಮಯಾಗದಲ್ಲಿ ಸ್ತೋತ್ರ ಶಸ್ತ್ರಾದಿಗಳಂತೆ ಸಾಮಿಧೇನಿಗಳಿಗೆ ಅಂಗತ್ವವಿಲ್ಲದಿರುವುದರಿಂದ ಇಲ್ಲಿ ಸಾಮಿಧೇನೀವಿಧಾನ ಅಯುಕ್ತವಲ್ಲವೇ? ಎಂದು ಶಂಕಿಸಬಾರದು. ಸೋಮಕ್ಕೆ ಸಾಮಿಧೇನಿಯ ಅಪೇಕ್ಷೆ ಇಲ್ಲದಿದ್ದರೂ ಅದರ ಅಂಗವಾದ ಸವನೀಯಪಶುವಿಗೆ ಸಾಮಿಧೇನ್ಯಪೇಕ್ಷೆ ಇದ್ದೇ ಇರುತ್ತದೆ. **ಅನರ್ಥಾಕ್ಯಾತ್ತದಂಗೇಷು** ಎಂಬ ಸೂತ್ರವನ್ನನುಸರಿಸಿ ಪ್ರಧಾನದಲ್ಲಿ ಸಂಭವಿಸದಿದ್ದರೂ ಅಂಗದಲ್ಲಿ ಸಾರ್ಥಕ್ಯ ಉಪಪನ್ನವಾಗುತ್ತದೆ. ಆದುದರಿಂದ ಅಂಗದ ಮೂಲಕ ಸಾಮಿಧೇನಿಗಳಿಗೆ ಮಹಾವ್ರತ ಸಂಬಂಧವಿರುವುದರಿಂದ ಮಹಾವ್ರತಸ್ಯ ಎಂದು ಸಂಬಂಧ ಸೂಚಕವಾದ ಷಷ್ಠೀವಿಭಕ್ತಿಯುಕ್ತವಾಗಿದೆ. ಪಂಚವಿಂಶತಿಂ ಎಂಬ ದ್ವಿತೀಯಾ ವಿಭಕ್ತಿಯನ್ನು ಪ್ರಥಮಾಂತವಾಗಿ ವಿಪರಿಣಾಮ ಮಾಡಿಕೊಳ್ಳಬೇಕು. ಸಾಮಿಧೇನೀ ಎಂಬ ಹೆಸರುಳ್ಳ ಋಕ್ಕುಗಳು ಇಪ್ಪತ್ತೈದು ಎಂದು ತಿಳಿಯಬೇಕು. ಯಾವ ಋಕ್ಕುಗಳಿಂದ ಅಗ್ನಿಯು ಚನ್ನಾಗಿ ಜ್ವಲಿತವಾಗುತ್ತದೋ ಆ ಋಕ್ಕುಗಳಿಗೆ ಸಾಮಿಧೇನೀ

ಎಂದು ಹೆಸರು. ಅನುಕ್ರಾಂತನೂ ಇದನ್ನೇ ಋಕ್ಸಾಮಿಧೇನೀ **ಧಾಯ್ಯಾಶ್ಚ ಯೊ ಸ್ಯಾದಗ್ನಿಸಮಿಂದನೇ** ಎಂದು ವಿವರಿಸಿರುತ್ತಾನೆ. ಸವನೀಯ ಪಶುವಿಗೆ ಪ್ರೋಕ್ಷಣವಾದ ಮೇಲೆ ಅಧ್ವರ್ಯುವಿನಿಂದ ಪ್ರೇರಿತನಾದ ಹೋತೃವು ಈ ಸಾಮಿಧೇನೀ ಋಕ್ಕುಗಳನ್ನು ಪಠಿಸಬೇಕು. ಆಪಸ್ತಂಬರೂ **ಉಪರಿಷ್ಟಾದಧಸ್ತಾತ್ಸರ್ವತಶ್ಚ ಪ್ರೋಕ್ಷ್ಯ ವೇದಂ ನಿಧಾಯ ಸಾಮಿಧೇನೀಭ್ಯಃ ಪ್ರತಿಪದ್ಯತೇ** ಎಂದು ವಿವರಿಸುತ್ತಾರೆ.

## ಏಕವಿಂಶತೌ ಪ್ರಾಗುಪೋತ್ತಮಾಯಾಃ ಸಮಿಧಾಗ್ನಿಮಿತಿ ಚತಸ್ರಃ ||

ತಾಸು ಸಾಮಿಧೇನೀಷು ಪಂಚವಿಂಶತಿಸಂಖ್ಯಾಪೂರಣಪ್ರಕಾರಂ ದರ್ಶಯತಿ—ಮೂಲಪ್ರಕೃತೌ ದರ್ಶಪೂರ್ಣಮಾಸೇಷ್ಟೌ " ಪ್ರ ವೋ ವಾಜಾಃ " (ಋ-ಸಂ-ಮಂ-೩ ಸೂ ೨೭ ಋ-೧) ಇತ್ಯಾದ್ಯಾ ಋಚಃ ಏಕಾದಶಸಂಖ್ಯಾಕಾಃ ಸಾಮಿಧೇನೀರೂಪಾಃ ಶಾಖಾಂತರ ಏಕಸ್ಮಿಂಶ್ಚಿದನುವಾಕೇ ಸಮಾಮ್ನಾತಾಃ । ಬಹ್ವೃಚಾನಾಂ ತು ತತ್ರ ತತ್ರಾಮ್ನಾತಾಃ । ತಾಸಾಮೇಕಾದಶಾನಾಂ ಮಧ್ಯೇ " ತ್ರಿಃ ಪ್ರಥಮಾಮನ್ವಾಹ ತಿರುತ್ತಮಾಮ್ '' ಇತಿ ವಚನಾನುಸಾರೇಣಾವೃತ್ತೌ ಸತ್ಯಾಂ ಪಂಚದಶ ಸಂಪದ್ಯಂತೇ । ತಾಶ್ಚಾತಿದೇಶಪರಂಪರಯಾ ಗವಾಮಯನಗತೇ ವಿಷುವನ್ನಾಮಕೇ ಮಧ್ಯಮೇಽಹ್ನಿ ಸವನೀಯಪಶೌ ಪ್ರಾಪ್ತಾಃ । ತಾಸಾಂ ನೋ ಅಧ್ವರೇ " (ಋ. ಸಂ. ಮಂ. ೩ ಸೂ. ೨೭ ಋ. ೪) '' ಸಮಿದ್ಧೋ ಅಗ್ನ ಆಹುತಃ (ಋ. ಸಂ. ಮಂ. ೫ ಸೂ. ೨೮ ಋ. ೫) ಇತ್ಯನಯೋರ್ಋಚೋರಂತರಾಲೇ " ಪೃಥುಪಾಜಾ ಅಮರ್ತ್ಯಃ (ಋ-ಸಂ-ಮಂ-೩-ಸೂ-೨೭-ಋ-೫) ಇತ್ಯಾದಿಕಾ ಷಡೃಚಃ ಪ್ರಕ್ಷೇಪಣೀಯಾಃ । ತಥಾ ಚಾಶ್ವಲಾಯನ ಆಹ—'' ಪೃಥುಪಾಜಾ ಅಮರ್ತ್ಯಃ " ಇತಿ ಷಡ್ಧಾಯ್ಯಾಃ ಸಾಮಿಧೇನೀನಾಮ್ " ಇತಿ ಸೇಯಮೇಕವಿಂಶತಿರ್ವಿಷುವದಹರ್ಗತಾ ಮಹಾವ್ರತೇ ಚೋದಕೇನ ಪ್ರಾಪ್ತಾ । ತಸ್ಯಾಮೇಕವಿಂಶತೌ ಯೇಯಮುಪೋತ್ತಮಾ— " ಸಮಿದ್ಧೋ ಅಗ್ನ ಆಹುತ" ಇತ್ಯೇವಂರೂಪಾ ತಸ್ಯಾಃ ಪೂರ್ವಮ್—" ಸಮಿಧಾಗ್ನಿಂ ದುವಸ್ಯತ " (ಋ-ಸಂ-ಮಂ-೮-ಸೂ ೪೪-ಋ-೧) ಇತ್ಯಾದ್ಯಾಶ್ಚತಸ್ರ ಋಚಃ ಪ್ರಕ್ಷೇಪಣೀಯಾಃ ॥ ತಥಾ ಚ ಸತಿ ಪಂಚವಿಂಶತಿಸಂಖ್ಯಾ ಪೂರ್ಯತೇ ॥

ಸಾಮಿಧೇನೀ ಋಕ್ಕುಗಳು ಇಪ್ಪತ್ತೈದಾಗುವ ರೀತಿಯನ್ನು ತೋರಿಸುತ್ತಾರೆ. ಮೂಲ ಪ್ರಕೃತಿಯಾದ ದರ್ಶಪೂರ್ಣಮಾಸ ಇಷ್ಟಿಯಲ್ಲಿ **ಪ್ರವೋಜಾತಾಃ** (ಋ. ಸಂ ೩-೨೭-೧) ಇತ್ಯಾದಿ ಹನ್ನೊಂದು ಸಾಮಿಧೇನಿರೂಪಗಳಾದ ಋಕ್ಕುಗಳು ಶಾಖಾಂತರದಲ್ಲಿ ಒಂದು ಅನುವಾಕದಲ್ಲಿ ಹೇಳಿವೆ. ಋಗ್ವೇದಿಗಳಲ್ಲಿಯೂ ಅಲ್ಲಲ್ಲಿ ಹೇಳಿವೆ. ಆ ಹನ್ನೊಂದರ ಮಧ್ಯದಲ್ಲಿ **ತ್ರಿಃ ಪ್ರಥಮಾಮನ್ವಾಹ ತ್ರಿರುತ್ತಮಾಂ** ಎಂಬ ವಚನವನ್ನನುಸರಿಸಿ ಆವೃತ್ತಿ ಮಾಡಿದಾಗ ಅವು ಹದಿನೈದಾಗುತ್ತವೆ. ಅವು ಅತಿದೇಶದಿಂದ ಗವಾಮಯನದಲ್ಲಿರುವ ವಿಷುವನ್ನಾಮಕ ಮಧ್ಯಮ ದಿವಸದಲ್ಲಿ ಸವನೀಯ ಪಶುವಿನಲ್ಲಿ ಪ್ರಾಪ್ತವಾಗುತ್ತವೆ. ಆ ಹದಿನೈದರ ಮಧ್ಯದಲ್ಲಿ **ಸಮಿಧ್ಯಮಾನೋ ಅಧ್ವರೇ** (ಋ. ಸಂ-೩-೨೭-೪) **ಸಮಿದ್ಧೋ ಅಗ್ನ ಆಹುತಃ** (ಋ-ಸಂ. ೫-೨೮-೫) ಎಂಬ ಎರಡು ಋಕ್ಕುಗಳ ಮಧ್ಯದಲ್ಲಿ **ಪೃಥುಪಾಜಾ ಅಮರ್ತ್ಯಃ** (ಋ. ಸಂ-೩-೨೭-೫) ಇತ್ಯಾದಿ ಆರು ಋಕ್ಕುಗಳನ್ನು ಸೇರಿಸಬೇಕು. ಆಶ್ವಲಾಯನರೂ ಇದನ್ನೇ **ಪೃಥುಪಾಜಾ ಅಮರ್ತ್ಯ ಇತಿ ಷಡ್ಧಾಯ್ಯಾಃ ಸಾಮಿಧೇನೀನಾಂ** ಎಂದು ಹೇಳಿರುತ್ತಾರೆ. ಈ ಇಪ್ಪತ್ತೊಂದು ಋಕ್ಕುಗಳು ವಿಷುವದಹಸ್ಸಿನಲ್ಲಿದ್ದು ಮಹಾವ್ರತದಲ್ಲಿ ಚೋದಕದಿಂದ ಪ್ರಾಪ್ತವಾಗಿವೆ. ಈ ಇಪ್ಪತ್ತೊಂದರಲ್ಲಿ ಅತ್ಯಂತ ಹಿಂದಿನ ಋಕ್ಕಾದ **ಸಮಿದ್ಧೋ ಅಗ್ನ ಆಹುತಃ**

ಎಂಬುದರ ಪೂರ್ವದಲ್ಲಿ ಸಮಿಧಾಗ್ನಿಂ ದುವಸ್ಯತ (ಋ. ಸಂ. ೮-೪೪-೧) ಇತ್ಯಾದಿ ನಾಲ್ಕು ಋಕ್ಕುಗಳನ್ನು ಸೇರಿಸಬೇಕು. ಹೀಗೆ ಸೇರಿಸಿದರೆ ಇಪ್ಪತ್ತೈದು ಸಾಮಿಧೇನೀ ಋಕ್ಕುಗಳಾಗುತ್ತವೆ.

## ವೈಶ್ವಕರ್ಮಣ ಋಷಭ ಉಪಾಲಂಭನೀಯ ಉಪಾಂಶು ॥

ತಾ ಏತಾಃ ಸಾಮಿಧೇನ್ಯೋ ಯಸ್ಯ ಪಶೋರಂಗಂ ತಮಿಮಂ ದರ್ಶಯತಿ—ವಿಶ್ವಕರ್ಮಾ ದೇವತಾ ಯಸ್ಯಾಸೌ ವೈಶ್ವಕರ್ಮಣ ಋಷಭಃ ಸಮರ್ಥ ಉಪಸಮೀಪ ಆಲಂಭನೀಯಃ । ಐತರೇಯಿಣಾಮಯಂ ಪಶುಃ ಸಮುಚ್ಚೀಯತೇ । ಇತರಶಾಖಿನಾಂ ತು ವಿಕಲ್ಪಃ । ತದೈತಾಃ ಸಾಮಿಧೇನ್ಯೋ ನ ಭವಂತಿ । ಸಪ್ತದಶೇಷ್ಟಿಪಶ್ವಾಧಾನಮಿತಿ ಸಪ್ತದಶೈವ ಸಾಮಿಧೇನ್ಯೋ ಭವಂತಿ । ತಸ್ಮಿನ್ಪಶೌ ಯಾಜ್ಯಾದಿಮಂತ್ರಾ ಉಪಾಂಶು ಯಥಾ ಭವಂತಿ ತಥಾ ಪ್ರಯೋಕ್ತವ್ಯಾಃ । ಉಪಾಂಶುರೂಪಸ್ಯೋಚ್ಚಾರಣಸ್ಯ ಲಕ್ಷಣಂ ಪ್ರಾತಿಶಾಖ್ಯೇಽಭಿಹಿತಮ್—ಕರಣವದಶಬ್ದಂ ಮನಃ ಪ್ರಯೋಗಮುಪಾಂಶು " ಇತಿ । ಕರಣವದೋಷ್ಠವ್ಯಾಪಾರಯುಕ್ತಂ ನ ತು ಮನಃ ಪ್ರಯೋಗಮಾತ್ರಮ್ । ತಚ್ಚ ಪರೈರಶ್ರವಣಾದಶಬ್ದಮ್ ॥

ಪೂರ್ವೋಕ್ತಗಳಾದ ಸಾಮಿಧೇನೀ ಋಕ್ಕುಗಳು ಯಾವ ಪಶುವಿಗೆ ಅಂಗವೆಂದು ವಿವರಿಸುತ್ತಾರೆ. ವಿಶ್ವಕರ್ಮ ದೇವತಾಕವಾದ ಪಶುವಿಗೆ ವೈಶ್ವಕರ್ಮಣ ಎಂದು ಹೆಸರು. ಅದರ ಸಮೀಪದಲ್ಲಿ ಉಪಾಂಶು ಎಂದರೆ ಮೆಲ್ಲನೆ ಪ್ರಯೋಗಿಸಬೇಕು. ಐತರೆಯರಿಗೆ ಮಾತ್ರ ಪಶುವೆಂದು ಸಮುಚ್ಚಿತವಾಗುತ್ತದೆ. ಇತರ ಶಾಖೆಯವರಿಗೆ ಇದು ವಿಕಲ್ಪ. ಅವರಲ್ಲಿ ಕೇವಲ ಹದಿನೇಳು ಸಾಮಿಧೇನಿಗಳು ಮಾತ್ರ ಇರುತ್ತವೆ. ಉಪಾಂಶಮಂತ್ರೋಚ್ಚಾರಣ ಲಕ್ಷಣವು ಪ್ರತಿ ಶಾಖೆಯಲ್ಲಿ **ಕರಣವದಶಬ್ದಂ ಮನಃ ಪ್ರಯೋಗಮುಪಾಂಶು** ಎಂದು ವಿವರಿಸಿದೆ. ಶಬ್ದವಾಗದೆ ತುಟಿಮಾತ್ರ ಅಲ್ಲಾಡುವಂತೆ ಮನಸ್ಸಿನಲ್ಲಿಯೇ ಉಚ್ಚರಿಸುವುದೆಂದರ್ಥ.

## ಆಜ್ಯಪ್ರಉಗೇ ವಿಶ್ವಜಿತಃ ॥

ಅತಃ ಪ್ರಾತಃಸವನೇ ಹೋತುಃ ಶಸ್ತ್ರಂ ದರ್ಶಯತಿ—ಯದೇತದಾಜ್ಯನಾಮಕಂ ಪ್ರಾತಃಸವನೇ ಹೋತುಃ ಶಸ್ತ್ರಂ ಯಚ್ಚ ಪ್ರಉಗನಾಮಕಂ ತದುಭಯಂ ವಿಶ್ವಜಿನ್ನಾಮ್ನಿ ಏಕಾಹಾದಸ್ಮಿನ್ಮಹಾವ್ರತೇಽತಿದಿಶೇತ್ । ಸ ಚ ವಿಶ್ವಜಿದಾಖ್ಯ ಏಕಾಹೋಽಗ್ನಿಷ್ಟೋಮಸ್ಯ ವಿಕೃತಿಃ । ಅಗ್ನಿಷ್ಟೋಮೇ ಹ್ಯೃತುಗ್ರಹಭಕ್ಷಣಾದೂರ್ಧ್ವಂ ; ಹೋತಾ ನಿವಿತ್ಪದಾನ್ಯುಚ್ಚಾರ್ಯ " ಪ್ರ ವೋ ದೇವಾಯ " (ಋ-ಸಂ-ಮಂ-೩-ಸೂ-೧೩-ಋ-೧) ಇತ್ಯಾದಿಕಮಾಜ್ಯನಾಮಕಂ ಶಸ್ತ್ರಂ ಶಂಸೇತ್ । ತಥಾ ಚಾಶ್ವಲಾಯನ ಆಹ—" ಉತ್ತಮೇನ ಪದೇನ ಪ್ರ ವೋ ದೇವಾಯೇತ್ಯಾಜ್ಯಮುಪಸಂತನುಯಾತ್' ಇತಿ " ವೈಶ್ವದೇವಗ್ರಹಣಾದೂರ್ಧ್ವಂ ' ವಾಯುರಗ್ರೇಗಾಃ ' ಇತ್ಯಾದಿಕಂ ಪ್ರಉಗನಾಮಕಂ ಶಸ್ತ್ರಂ ಶಂಸೇತ್ । ತದಪ್ಯಾಶ್ವಲಾಯನೇನೋಕ್ತಮ್—" ವಾಯುರಗ್ರೇಗಾ ಯಜ್ಞಪ್ರೀರಿತಿ ಸಪ್ತಾನಾಂ ಪುರೋರುಚಾಂ ತಸ್ಯಾಸ್ತಸ್ಯಾಃ ಉಪರಿಷ್ಟಾತ್ತೃಚಂ ತೃಚಂ ಶಂಸೇದ್ವಾಯವಾಯಾಹಿ ದರ್ಶತೇತಿ ಸಪ್ತ ತೃಚಾ ದ್ವಿತೀಯಾಂ ಪ್ರಉಗೇ [ತ್ರಿಃ ' ಇತಿ ॥ ತದಿದಂ ಶಸ್ತ್ರದ್ವಯಂ ವಿಶ್ವಜಿತಿ ಚೋದಕೇನ ಪ್ರಾಪ್ತಮ್ । ತತ್ರ ತದಾಜ್ಯಮುಪೋದ್ಯಾನ್ಯದಾಜ್ಯಂ ಸೂತ್ರೇಣ ವಿಹಿತಮ್—" ವಿಶ್ವಜಿತೋಽಗ್ನಿಂ

**ನರ ಇತ್ಯಾಜ್ಯಮ್ " ಇತಿ ॥ ಪ್ರಉಗಂ ತು ಪ್ರಾಕೃತಮೇವ । ತದಿದಂ ವಿಶ್ವಜಿದ್ಗತಮುಭಯಂ ಮಹಾವ್ರತೇ ಶಂಸನೀಯಮ್ ॥**

ಪ್ರಾತಃಸವನದಲ್ಲಿ ಹೋತೃಶಸ್ತ್ರವನ್ನು ವಿವರಿಸುತ್ತಾರೆ. ಆಜ್ಯವೆಂಬ ಪ್ರಾತಃಸವನದಲ್ಲಿ ಹೋತೃವಿನ ಯಾವ ಶಸ್ತ್ರವಿದೆಯೋ ಅದೂ ಮತ್ತು ಪ್ರಉಗವೆಂಬ ಶಸ್ತ್ರವೂ ವಿಶ್ವಜಿದೆಂಬ ಏಕಾಹದಿಂದ ಮಹಾವ್ರತದಲ್ಲಿ ಅತಿದಿಷ್ಟವಾಗುತ್ತದೆ. ವಿಶ್ವಜಿದೆಂಬ ಏಕಾಹವು ಅಗ್ನಿಷ್ಟೋಮದ ವಿಕೃತಿಯಾಗಿರುತ್ತದೆ. ಅಗ್ನಿಷ್ಟೋಮದಲ್ಲಿ ಋತುಗ್ರಹಭಕ್ಷಣವಾದಮೇಲೆ ಹೋತೃವು ನಿವಿತ್ಪದಗಳನ್ನು ಪಠಿಸಿದಮೇಲೆ **ಪ್ರ ವೋ ದೇವಾಯ** (ಋ. ಸಂ. ೩-೧೩-೧) ಇತ್ಯಾದಿ ಆಜ್ಯವೆಂಬ ಹೆಸರುಳ್ಳ ಶಸ್ತ್ರವನ್ನು ಪಠಿಸಬೇಕು. ಇದನ್ನು ಆಶ್ವಲಾಯನರೂ **ಉತ್ತಮೇನ ಪದೇನ ಪ್ರವೋ ದೇವಾಯೇತ್ಯಾಜ್ಯಮುಪಸಂತನುಯಾತ್** ಎಂದು ಹೇಳಿರುತ್ತಾರೆ. ವೈಶ್ವದೇವಗ್ರಹಣವಾದಮೇಲೆ **ವಾಯುರಗ್ರೇಗಾಃ** ಇತ್ಯಾದಿ ಪ್ರಉಗವೆಂಬ ಹೆಸರುಳ್ಳ ಶಸ್ತ್ರವನ್ನು ಪಠಿಸಬೇಕು. ಇದನ್ನೂ ಆಶ್ವಲಾಯನರು ವಾಯುರಗ್ರೇಗಾಃ ಇತ್ಯಾದಿ ವಾಕ್ಯಗಳಿಂದ ವಿವರಿಸಿರುತ್ತಾರೆ. ಈ ಎರಡು ಶಸ್ತ್ರಗಳು ವಿಶ್ವಜಿದೇಕಾಹದಲ್ಲಿ ಚೋದಕದಿಂದ ಪ್ರಾಪ್ತವಾಗಿವೆ. ಆದರೆ **ವಿಶ್ವಜಿತೋಽಗ್ನಿಂ ನರ ಇತ್ಯಾಜ್ಯಂ** ಎಂಬ ಸೂತ್ರ ವಚನದಿಂದ ಪೂರ್ವೋಕ್ತವಾದ ಆಜ್ಯದ ಸ್ಥಾನದಲ್ಲಿ ಬೇರೆ ಆಜ್ಯಮಂತ್ರ ಹೇಳಿದೆ. ಪ್ರಉಗಮಾತ್ರ ಹಿಂದೆ ಹೇಳಿರುವುದೇ. ಹೀಗೆ ವಿಶ್ವಜಿತಿನಲ್ಲಿ ಪ್ರಾಪ್ತವಾದುದು ಅತಿದೇಶದಿಂದ ಮಹಾವ್ರತದಲ್ಲಿಯೂ ಪಠಿಸಬೇಕು.

## ಹೋತ್ರಾಶ್ಚತುರ್ವಿಂಶಾತ್ ॥

ಮೈತ್ರಾವರುಣಾದೀನಾಂ ಶಸ್ತ್ರವಿಶೇಷಾನ್ದರ್ಶಯತಿ—ಮೈತ್ರಾವರುಣೋ ಬ್ರಾಹ್ಮಣಾಚ್ಛಂಸ್ಯಚ್ಛಾವಾಕಶ್ಚೇತಿ ತ್ರಯೋ ಹೋತ್ರಕಾಸ್ತೈಃ ಶಂಸನೀಯಾಃ ಶಸ್ತ್ರವಿಶೇಷಾ ಹೋತ್ರಾಸ್ತ (ಸ್ತೇ) ತ್ರ ಚತುರ್ವಿಶನ್ನಾ (ನಾ) ಮಕಾದೇಕಾಹಾದತಿದೇಷ್ಟವ್ಯಾಃ। ಮೂಲಪ್ರಕೃತೌ ತ್ವಗ್ನಿಷ್ಟೋಮಂ ಮೈತ್ರಾವರುಣಸ್ಯ "ಆನೋ ಮಿತ್ರಾ ವರುಣಾ" (ಋ-ಸಂ-ಮಂ-೩-ಸೂ-೬೨-ಋ-೧೬) ಇತ್ಯಾದಿಕಂ ಶಸ್ತ್ರಮ್ । ಬ್ರಾಹ್ಮಣಾಚ್ಛಂಸಿನಸ್ತು-"ಆಯಾಹಿ ಸುಷುಮಾ ಹಿ ತೇ" (ಋ-ಸಂ-ಮಂ-೮-ಸೂ-೧೭-ಋ-೧) ಇತ್ಯಾದಿಕಂ ಶಸ್ತ್ರಮ್, ಅಚ್ಛಾವಾಕಸ್ಯ "ಇಂದ್ರಾಗ್ನೀ ಆಗತಮ್" (ಋ-ಸಂ-ಮಂ-೩-ಸೂ-೧೨-ಋ-೧) ಇತ್ಯಾದಿಕಮ್ । ಚತುರ್ವಿಂಶೇ ತು ತಾನಿ ತ್ರೀಣ್ಯಪೋದ್ಯಾನ್ಯಾನಿ ವಿಹಿತಾನಿ—"ತಾನಃ ಶಕ್ತಂ ಪಾರ್ಥಿವಸ್ಯ" (ಋ-ಸಂ-ಮಂ-೩-ಸೂ-೬೮-ಋ೩) ಇತ್ಯಾದಿಕಂ ಮೈತ್ರಾವರುಣಸ್ಯ । "ಸುರೂಪಕೃತ್ನುಮೂತಯೇ" (ಋ-ಸಂ-ಮ-೧-ಸೂ-೪-ಋ-೧) ಇತ್ಯಾದಿಕಂ ಬ್ರಾಹ್ಮಣಾಚ್ಛಂಸಿನಃ, "ಆ ಸು ತೇ ಸಿಂಚತ ಶ್ರಿಯಮ್" (ಋ-ಸಂ-ಮಂ೮-ಸೂ-೭೨-ಋ-೧೨) ಇತ್ಯಚ್ಛಾವಾಕಸ್ಯ । ತ ಏತೇ ಶಸ್ತ್ರವಿಶೇಷಾ ಹೋತ್ರಶಬ್ದಾಭಿಧೇಯಾ ಮಹಾವ್ರತೇ ಪಠನೀಯಾಃ ॥

ಮೈತ್ರಾವರುಣಾದಿ ಶಸ್ತ್ರವಿಶೇಷಗಳನ್ನು ತೋರಿಸುತ್ತಾರೆ. ಮೈತ್ರಾವರುಣ, ಬ್ರಾಹ್ಮಣಾಚ್ಛಂಸೀ, ಅಚ್ಛಾವಾಕ ಎಂದು ಮೂರು ಹೋತ್ರಕರು. ಇವರಿಂದ ಪಠಿಸಬೇಕಾದ ಶಸ್ತ್ರಕ್ಕೆ ಹೋತ್ರ ಎಂದು ಹೆಸರು. ಈ ಶಸ್ತ್ರವಿಶೇಷಗಳು ಚತುರ್ವಿಂಶವೆಂಬ ಏಕಾಹದಿಂದ ಅತಿದಿಷ್ಟವಾಗುತ್ತವೆ. ಮೂಲಪ್ರಕೃತಿಯಾದ ಅಗ್ನಿಷ್ಟೋಮಯಾಗದಲ್ಲಿ ಮೈತ್ರಾವರುಣನಿಗೆ **ಆ ನೋ ಮಿತ್ರಾವರುಣಾ** (ಋ. ಸಂ. ೩-೬೨-೧೬) ಎಂಬ ಶಸ್ತ್ರಹೇಳಿದೆ. ಬ್ರಾಹ್ಮಣಾಚ್ಛಸಿಂಗೆ **ಆಯಾಹಿ ಸುಷುಮಾ ಹಿತೇ** (ಋ. ಸಂ. ೮-೧೭-೧) ಎಂಬಶಸ್ತ್ರವೂ, ಅಚ್ಛಾವಾಕನಿಗೆ **ಇಂದ್ರಾಗ್ನೀ ಆಗತಂ** (ಋ. ಸಂ. ೩-೧೨-೧) ಎಂಬ

ಶಸ್ತ್ರವೂ ಹೇಳಿದೆ. ಆದರೆ ಚತುರ್ವಿಂಶಾಹದಲ್ಲಿ ಇವುಗಳನ್ನು ಬಿಟ್ಟು ಇವುಗಳ ಸ್ಥಾನದಲ್ಲಿ ಮೈತ್ರಾವರುಣನಿಗೆ **ಶಾಸಃ ಶಕ್ತಂ ಪಾರ್ಥಿವಸ್ಯ** (ಋ. ಸಂ. ೫-೬೮-೩) ಇತ್ಯಾದಿ, ಬ್ರಾಹ್ಮಣಾಚ್ಛಂಸಿಗೆ **ಸುರೂಪಕೃತ್ನುಮೂತಯೇ** (ಋ. ಸಂ. ೧-೪-೧) ಇತ್ಯಾದಿ, ಅಚ್ಛಾವಾಕನಿಗೆ **ಆ ಸು ತೇ ಸಿಂಚತ ಶ್ರಿಯಂ** (ಋ. ಸಂ. ೮-೭೨-೧೩) ಎಂದೂ ಬೇರೆ ಹೇಳಿದೆ. ಹೋತ್ರವೆಂಬಸಂಜ್ಞೆ ಇರುವ ಈ ಶಸ್ತ್ರವಿಶೇಷಗಳನ್ನು ಮಹಾವ್ರತದಲ್ಲಿಯೂ ಪಠಿಸಬೇಕು.

**ಈಂಖಯಂತೀರಪಸ್ಯುವ ಇತಿ ಚ ಬ್ರಾಹ್ಮಣಾಚ್ಛಂಸ್ಯಾವಪೇತ ಪ್ರಾತಃ ಸವನೇ ತೀವ್ರಸ್ಯಾಭಿವಯಸೋ ಅಸ್ಯ ಪಾಹೀತಿ ಮಾಧ್ಯಂದಿನಃ ॥**

ಅಥ ಚತುರ್ವಿಂಶಾಖ್ಯಾದೇಕಾಹಾದಪ್ಯಧಿಕಂ ವಿಶೇಷಂ ಮಹಾವ್ರತೇ ದರ್ಶಯತಿ— ಅತ್ರ ಪ್ರಾತಃ ಸವನೇ ಸ ಏವ ಬ್ರಾಹ್ಮಣಾಚ್ಛಂಸೀ ಪೂರ್ವೋಕ್ತಮ್—"ಸುರೂಪಕೃತ್ನುಮ್" ಇತ್ಯಾದಿಕಂ ಪಠಿತ್ವಾ ಪಶ್ಚಾತ್ "ಈಂಖಯಂತೀಃ" (ಋ-ಸಂ-ಮಂ-೧೦-ಸೂ-೧೫೩-ಋ-೧) ಇತ್ಯಾದಿಕಮಪಿ ಪಂಚರ್ಚಮಾವಪೇತ। ತಥಾ ಮಾಧ್ಯಂದಿನೇ ಸವನೇ ಸ ಏವ ಬ್ರಾಹ್ಮಣಾಚ್ಛಂಸೀ ಚತುರ್ವಿಂಶಾದತಿದೇಶೇನ ಪ್ರಾಪ್ತಮ್-"ಆ ನೋ ವಿಶ್ವಾ ಸುಹವ್ಯಃ" (ಋ-ಸಂ-ಮಂ-೮-ಸೂ-೯೦ ಋ-೧) ಇತ್ಯಾದಿಕಂ ಪಠಿತ್ವಾ ಪಶ್ಚಾತ್ "ತೀವ್ರಸ್ಯಾಭಿವಯಸಃ" (ಋ-ಸಂ-ಸಂ-೧೦-ಸೂ-೧೬೦-ಸೂ-೧) ಇತ್ಯಾದಿಕಂ ಪಂಚರ್ಚಂ ಪಠೇತ್। ಅತ್ರೋಭಯತ್ರ ಸೂಕ್ತಪ್ರತೀಕಾಭಿಪ್ರಾಯೇಣ ಪಂಚರ್ಚಮಿತಿ ಕೈಶ್ಚಿದ್ವ್ಯಾಖ್ಯಾತಮ್। ಅನ್ಯೇ ತು "ಋಚಂ ಪಾದಗ್ರಹಣೇ" ಇತಿಪರಿಭಾಷಾನುಸಾರೇಣೈಕೈಕಾಮೃಚಂ ಪಠೇದಿತಿ ವ್ಯಾಚಕ್ಷತೇ ॥

ಚತುರ್ವಿಂಶವೆಂಬ ಏಕಾಹಕ್ಕಿಂತಲೂ ಅಧಿಕವಿಶೇಷವನ್ನು ಈ ಮಹಾವ್ರತದಲ್ಲಿ ವಿವರಿಸುತ್ತಾರೆ. ಪ್ರಾತಃಸವನದಲ್ಲಿ ಅದೇ ಬ್ರಾಹ್ಮಣಾಚ್ಛಂಸಿಯು ಹಿಂದೆ ಹೇಳಿದ **ಸುರೂಪಕೃತ್ನುಂ** ಇತ್ಯಾದಿಶಸ್ತ್ರವನ್ನು ಪಠಿಸಿದಮೇಲೆ **ಈಂಖಯಂತೀರಪಸ್ಯುವಃ** (ಋ-ಸಂ-೧೦-೧೫೩-೧) ಇತ್ಯಾದಿ ಐದು ಋಕ್ಕುಗಳನ್ನು ಸೇರಿಸಿಕೊಂಡು ಪಠಿಸಬೇಕು. ಹಾಗೆಯೇ ಮಾಧ್ಯಂದಿನಸವನದಲ್ಲಿಯೂ ಅವನು ಚತುರ್ವಿಂಶವೆಂಬ ಏಕಾಹದಿಂದ ಪ್ರಾಪ್ತವಾದ **ಆ ನೋ ವಿಶ್ವಾ ಸುಹವ್ಯಃ** (ಋ-ಸಂ-೮-೯೦-೧) ಇತ್ಯಾದಿಶಸ್ತ್ರವನ್ನು ಪಠಿಸಿದಮೇಲೆ **ತೀವ್ರಸ್ಯಾಭಿವಯಸಃ** (ಋ-ಸಂ-ಮಂ-೧೦-೧೬೦-೧) ಇತ್ಯಾದಿ ಐದು ಋಕ್ಕುಗಳೆಂದು ಹೇಳುತ್ತಾರೆ. ಇನ್ನು ಕೆಲವರು **ಋಚಂ ಪಾದಗ್ರಹಣೇ** ಎಂಬ ಪರಿಭಾಷೆಯನ್ನನುಸರಿಸಿ ಒಂದೊಂದೇ ಋಕ್ಕನ್ನು ಪಠಿಸಬೇಕೆಂದು ಹೇಳುತ್ತಾರೆ.

ತ್ರಿಕದ್ರುಕೇಷು ಮಹಿಷೋ ಯವಾಶಿರಮಿತಿ ಸ್ತೋತ್ರಿಯ ಐಂದ್ರಯಾಹ್ಯುಪ ನಃ ಪರಾವತ ಇಂದ್ರಾಯ ಹಿ ದ್ಯಾಽಸುರೋ ಅನಮ್ನತ ಪ್ರೋಷ್ವಸ್ಮೈ ಪುರೋರಥಮಿತ್ಯತೋಽನುರೂಪಃ ॥

ಅಸ್ಮಿನ್ನೇವ ಶಸ್ತ್ರೇ ಬ್ರಾಹ್ಮಣಾಂತರಾನುಸಾರೇಣ ಕಂಚಿದ್ವಿಶೇಷಂ ದರ್ಶಯತಿ—ಸ್ತೋತ್ರಸಂಬಂಧೀ ಸ್ತೋತ್ರಿಯಸ್ತೃಚಃ। "ಏಕಂ ಸಾಮ ತೃಚೇ ಕ್ರಿಯತೇ ಸ್ತೋತ್ರಿಯಮ್" ಇತಿ ಸಾಮಗೈರಾಮ್ನಾನಾತ್ತೃಚಸ್ಯ ಸ್ತೋತ್ರಿಯಮ್। 'ತ್ರಿಕದ್ರುಕೇಷು' (ಋ. ಸಂ. ಮ. ೨-ಸೂ. ೨೨-ಋ. ೧) ಇತ್ಯಾದಿಕಸ್ತೃಚಃ ಶಸ್ತ್ರಸ್ಯಾದೌ ಪ್ರಯೋಕ್ತವ್ಯಃ। ಅನು ಪಶ್ಚಾದ್ರೂಪ್ಯತೇ ಪಠ್ಯತ ಇತಿ ದ್ವಿತೀಯೋಽನುರೂಪಸ್ತೃಚಃ।

ತಸ್ಮಿನ್ ‘ ಐಂದ್ರ ಯಾಹಿ ’ (ಋ. ಸ. ಮಂ. ೧– ಸೂ. ೧೩೦– ಋ. ೧) ಇತ್ಯೃಕ್ಪ್ರಥಮಾ । ‘ ಇಂದ್ರಾಯ ಹಿ ದ್ಯೌಃ ’ (ಋ. ಸಂ. ಮಂ. ೧೦– ಸೂ. ೧೨೭ ಋ. ೧) ಇತಿ ದ್ವಿತೀಯಾ । ‘ ಪ್ರೋಷ್ವಸ್ಮೈ ’ (ಋ. ಸಂ. ಮಂ. ೧೦– ಸೂ. ೧೩೩– ಋ. ೧) ಇತಿ ತೃತೀಯಾ । ತಾವೇತೌ ದ್ವೌ ತೃಚೌ ಶಸ್ತ್ರಸ್ಯಾದೌ ಪಠೇದಿತ್ಯರ್ಥಃ ॥

ಪೂರ್ವೋಕ್ತಶಸ್ತ್ರದಲ್ಲಿ ಬ್ರಾಹ್ಮಣಾಂತರಾನುಸಾರವಾಗಿ ಒಂದು ವಿಶೇಷವನ್ನು ತೋರಿಸುತ್ತಾರೆ. ಸ್ತೋತ್ರಸಂಬಂಧಿಯಾದ ತೃಚಕ್ಕೆ ಸ್ತೋತ್ರಿಯವೆಂದು ಹೆಸರು. ಇದನ್ನು **ಏಕಂ ಸಾಮ ತೃಚೇ ಕ್ರಿಯತೇ ಸ್ತೋತ್ರಿಯಂ** ಎಂದು ಸಾಮಗರು ಹೇಳಿರುತ್ತಾರೆ. **ತ್ರಿಕದ್ರುಕೇಷು** (ಋ–ಸಂ–೨–೨೨–೧), **ಐಂದ್ರ ಯಾಹಿ** (ಋ–ಸಂ–೧–೧೩೦–೧) **ಇಂದ್ರಾಯ ಹಿ ದ್ಯೌಃ** (ಋ–ಸಂ–೧–೧೩೧–೧) ಹೀಗೆ ಈ ತೃಚವನ್ನು ಶಸ್ತ್ರದ ಆದಿಯಲ್ಲಿ ಪ್ರಯೋಗಿಸಬೇಕು. ಆಮೇಲೆ ಪಠಿಸಲ್ಪಡುವುದು ಅನುರೂಪವೆಂಬ ತೃಚವು. ಇದರಲ್ಲಿ **ಐಂದ್ರಯಾಹಿ** ಎಂಬುದು ಮೊದಲನೆಯದು. **ಇಂದ್ರಾಯ ಹಿದ್ಯೌಃ** ಎಂಬುದು ಎರಡನೆಯದು. **ಪ್ರೋಷ್ವಸ್ಮೈ** (ಋ-ಸಂ-೧೦-೧೩೩-೧) ಎಂಬುದು ಮೂರನೆಯದು. **ಹೀಗೆ ಈ ಎರಡು ತೃಚಗಳನ್ನು ಶಸ್ತ್ರದ ಆದಿಯಲ್ಲಿ ಪಠಿಸಬೇಕು.**

**ಚತುರ್ವಿಂಶಾನ್ಮರುತ್ವತೀಯಸ್ಯಾತಾನೋಽಸತ್ಸು ಮೇ ಜರಿತಃ ಸಾಭಿವೇಗಃ ಪಿಬಾ ಸೋಮಮಭಿ ಯಮುಗ್ರ ತರ್ದಃ ಕಯಾ ಶುಭಾ ಸವಯಸಃ ಸನೀಳಾ ಮರುತ್ವಾꣳ ಇಂದ್ರ ವೃಷಭೋ ರಣಾಯ ॥**

ಅಥ ಮಾಧ್ಯಂದಿನೇ ಸವನೇ ಹೋತುಃ ಶಸ್ತ್ರೇ ಮರುತ್ವತೀಯೇ ವಿಶೇಷಂ ದರ್ಶಯತಿ— ತ್ರಿಷು ಮರುತ್ವತೀಯಗ್ರಹೇಷು ಮಧ್ಯೇ ತೃತೀಯಸ್ಯ ಹೋಮಾತ್ಪೂರ್ವಂ ಪಠನೀಯಂ ಮರುತ್ವತೀಯಂ ಶಸ್ತ್ರಂ ತದ್ಯನ್ಮೂಲಪ್ರಕೃತೌ ‘ ಆ ತ್ವಾ ರಥಮ್ ’ (ಋ. ಸಂ. ಮಂ. ೮– ಸೂ ೬೮– ಋ. ೧) ಇತ್ಯಾದಿಕಂ ತಸ್ಯ ವಿಶ್ವಜಿತ್ಯತಿದಿಷ್ಟಸ್ಯ ಸಂತ್ಯನ್ಯೇ ವಿಶೇಷಾಸ್ತೈರ್ವಿಶೇಷೈಃ ಸಹ ತನ್ಮರುತ್ವತೀಯಂ ಮಹಾವ್ರತೇಽತಿದೇಷ್ಟವ್ಯಮ್ । ತಸ್ಯ ಚಾತಿದಿಷ್ಟಸ್ಯ ಮರುತ್ವತೀಯಸ್ಯ ಚತುರ್ವಿಂಶತ್ಯತ್ರಾಽಽಸ್ಥಿತಾನ್ಮರುತ್ವತೀಯಾದಾತಾನಃ ಪುನರಪಿ ವಿಸ್ತಾರೋ ಭವತಿ । ತಸ್ಮಿನ್ವಿಸ್ತಾರೇ ಪ್ರಥಮಂ ‘ ಅಸತ್ಸು ಮೇ ಜರಿತಃ ’ (ಋ. ಸಂ. ಮಂ ೧೦– ಸೂ ೨೭– ಋ. ೧) ಇತ್ಯೇಕಂ ಸೂಕ್ತಮ್ । ‘ ಪಿಬಾ ಸೋಮಮಭಿಯಮ್ ’ (ಋ. ಸಂ. ಮಂ ೬ ಸೂ–೧೮ ಋ. ೧) ಇತಿ ದ್ವಿತೀಯಮ್ । ‘ ಕಯಾ ಶುಭಾ ’ (ಋ. ಸಂ. ಮ. ೧ ಸೂ ೧೬೫. ಋ. ೧) ಇತಿ ತೃತೀಯಮ್ । ‘ ಮರುತ್ವಾꣳ ಇಂದ್ರ ’ (ಋ. ಸಂ. ಮ ೩ ಸೂ. ೪೭. ಋ. ೧) ಇತಿ ಚತುರ್ಥಂ ಸೋಽಯಮಧಿಕೋ ವಿಸ್ತಾರಃ ॥

ಮಧ್ಯಂದಿನಸವನದಲ್ಲಿ ಹೋತೃವಿನ ಮರುತ್ವತೀಯಶಸ್ತ್ರದಲ್ಲಿ ವಿಶೇಷವನ್ನು ತೋರಿಸುತ್ತಾರೆ. ಮೂರು ಮರುತ್ವತೀಯಗ್ರಹಗಳಲ್ಲಿ ಮೂರನೆಯಮರುತ್ವತೀಯಶಸ್ತ್ರವನ್ನು ಹೋಮಕ್ಕಿಂತಮೊದಲು ಪಠಿಸಬೇಕು. ಮೂಲಪ್ರಕೃತಿಯಲ್ಲಿ ಹೇಳಿರುವ **ಆ ತ್ವಾ ರಥಂ** (ಋ–ಸಂ–೮–೬೮–೧) ಎಂಬ ಮರುತ್ವತೀಯಶಸ್ತ್ರದಲ್ಲಿ ವಿಶ್ವಜಿದೇಕಾಹದಲ್ಲಿ ಅತಿದಿಷ್ಟವಾದ ಯಾದ ವಿಶೇಷಗಳಿವೆಯೋ ಅವುಗಳನ್ನು ಸೇರಿಸಿ ಅದನ್ನು ಮಹಾವ್ರತದಲ್ಲಿಯೂ ಅತಿ ದೇಶಮಾಡಿಕೊಳ್ಳಬೇಕು. ಆ ಅತಿದಿಷ್ಟವಾದ ಮರುತ್ವತೀಯಶಸ್ತ್ರಕ್ಕೆ ಚತುರ್ವಿಂಶ ಏಕಾಹದಲ್ಲಿ ಹೇಳಿರುವ ಮರುತ್ವತೀಯಕ್ಕಿಂತ ತಿರುಗಿಯೂ ವಿಸ್ತಾರವಾಗಿ ಹೇಳಿದೆ. ಆ ವಿಸ್ತಾರದಲ್ಲಿ **ಅಸತ್ಸು ಮೇ ಜರಿತಃ** ಋ-ಸಂ-೧೦-೨೭-೧) ಎಂಬುದು ಮೊದಲನೆಯ ಒಂದು ಸೂಕ್ತ.

ಪಿಬಾ ಸೋಮಮಭಿ ಯಂ (ಋ-ಸಂ-೬-೧೮-೧) ಎಂಬುದು ಎರಡನೆಯ ಸೂಕ್ತ. ಕಯಾ ಶುಭಾ (ಋ-ಸಂ-೧-೧೬೫-೧) ಎಂಬುದು ಮೂರನೆಯ ಸೂಕ್ತ. ಮರುತ್ವಾँ ಇಂದ್ರ (ಋ-ಸಂ-೩-೪೭-೧) ಎಂಬುದು ನಾಲ್ಕನೆಯ ಸೂಕ್ತ. ಹೀಗೆ ಅಧಿಕವಾದ ವಿಸ್ತಾರ ತಿಳಿಯಬೇಕು.

**ಜನಿಷ್ಠಾ ಉಗ್ರಃ ಸಹಸೇ ತುರಾಯೇತಿ ಮರುತ್ವತೀಯಂ ॥**

ತತ ಊರ್ಧ್ವಂ ಪ್ರಾಕೃತೇನೈವ ಸೂಕ್ತೇನ ಶಸ್ತ್ರಸ್ಯ ಸಮಾಪ್ತಿಂ ದರ್ಶಯತಿ— ಯಥಾ ಪ್ರಕೃತೌ ' ಜನಿಷ್ಠಾಃ ' (ಋ. ಸಂ. ಮಂ. ೧೦- ಸೂ. ೭೩. ಋ. ೧) ಇತ್ಯನೇನ ಸೂಕ್ತೇನ ಶಸ್ತ್ರಂ ಸಮಾಪಿತಂ ತಥಾಽತ್ರಾಪಿ ತೇನೈವ ಮರುತ್ವತೀಯಂ ಶಸ್ತ್ರಂ ಸಮಾಪನೀಯಮ್॥

ಕೊನೆಯಲ್ಲಿ ಪ್ರಾಕೃತಸೂಕ್ತದಿಂದಲೇ ಶಸ್ತ್ರಸಮಾಪ್ತಿಯನ್ನು ತೋರಿಸುತ್ತಾರೆ. ಪ್ರಕೃತಿಯಲ್ಲಿ ಜನಿಷ್ಠಾಃ (ಋ-ಸಂ-೧೦-೭೩-೧) ಎಂಬ ಸೂಕ್ತದಿಂದ ಶಸ್ತ್ರವು ಸಮಾಪ್ತಿಹೊಂದಿದಂತೆ ಇಲ್ಲಿಯೂ ಅದೇ ಸೂಕ್ತದಿಂದ ಮರುತ್ವತೀಯಶಸ್ತ್ರವನ್ನು ಸಮಾಪ್ತಿಗೊಳಿಸಬೇಕು.

**ಸಂಸ್ಥಿತೇ ಮರುತ್ವತೀಯೇ ಹೋತಾ ವಿಸಂಸ್ಥಿತಸಂಚರೇಣ ನಿಷ್ಕ್ರಮ್ಯಾಗ್ನೀಧ್ರೀಯೇ ತಿಸ್ರ ಆಜ್ಯಾಹುತೀರ್ಜುಹೋತ್ಯೌದುಂಬರೇಣ ಸ್ರುವೇಣ ॥**

ತತ್ಸಮಾಪ್ತೇರೂರ್ಧ್ವಂ ಹೋತೃಕರ್ತೃಕಂ ಹೋಮಂ ವಿಧತ್ತೇ— ಸಂಸ್ಥಿತೇ ಸಮಾಪ್ತೇ। ಸಮ್ಯಕ್ಚರಂತ್ಯನೇನೇತಿ ಸಂಚರೋ ಮಾರ್ಗಃ। ಸ ಚ ದ್ವಿವಿಧಃ, ಸಂಸ್ಥಿತಸಂಚರೋ ವಿಸಂಸ್ಥಿತಸಂಚರಶ್ಚೇತಿ। ಸವನೇ ಸಮಾಪ್ತೇ ಸದಸಃ ಪಶ್ಚಿಮದ್ವಾರೇಣ ನಿರ್ಗಚ್ಛತಿ ಸೋಽಯಂ ಸಂಸ್ಥಿತಸಂಚರಃ। ಅಸಮಾಪ್ತೇತು ಪ್ರಾಗ್ದ್ವಾರೇಣ (ನಿರ್ಗಚ್ಛತಿ) ಸೋಽಯಂ ವಿಸಂಸ್ಥಿತಸಂಚರಃ। ತೇನ ನಿಷ್ಕ್ರಮ್ಯೋದಙ್ಮುಖೋ ಗತ್ವಾಽಗ್ನೀಧ್ರೀಯೇ ಧಿಷ್ಣ್ಯೇ ಜುಹುಯಾತ್।

ಶಸ್ತ್ರ ಸಮಾಪ್ತಿಗೊಳಿಸಿದಮೇಲೆ ಹೋತೃಮಾಡಬೇಕಾದ ಹೋಮವನ್ನು ವಿವರಿಸುತ್ತಾರೆ. ಸಂಸ್ಥಿತೇ ಅಂದರೆ ಸಮಾಪ್ತವಾದಮೇಲೆ ಎಂದರ್ಥ. ಸಂಚರವೆಂದರೆ ಮಾರ್ಗ. ಸಂಸ್ಥಿತಸಂಚರ, ವಿಸಂಸ್ಥಿತಸಂಚರವೆಂದು ಎರಡುಮಾರ್ಗಗಳಿವೆ. ಸವನಮುಗಿದ ಮೇಲೆ ಯಜ್ಞಶಾಲೆಯಿಂದ ಪಶ್ಚಿಮದ್ವಾರದಿಂದ ಹೊರಗೆ ಹೋಗುತ್ತಾರೆ. ಅದು ಸಂಸ್ಥಿತಸಂಚವೆಂದು ಹೆಸರು. ಸವನಮುಗಿಯದಿರುವಾಗ ಪೂರ್ವದ್ವಾರದಿಂದ ಹೋಗುತ್ತಾರೆ. ಅದಕ್ಕೆ ವಿಸಂಸ್ಥಿತಸಂಚಾರವೆಂದು ಹೆಸರು. ಆದರಿಂದ ಹೊರಗೆ ಹೋಗಿ ಉತ್ತರಾಭಿಮುಖನಾಗಿ ಅಗ್ನೀಧ್ರೀಯಧಿಷ್ಣ್ಯದಲ್ಲಿ ಉದುಂಬರ ಸ್ರುವದಿಂದ ಮೂರು ಆಜ್ಯಾಹುತಿಗಳನ್ನು ಹೋಮಮಾಡಬೇಕು.

**ಅನು ಮಾಮಿಂದ್ರೋ ಅನು ಮಾಂ ಬೃಹಸ್ಪತಿರನು ಸೋಮೋ ಅನು ವಾಗ್ದೇವ್ಯಾವೀತ್। ಅನು ಮಾಂ ಮಿತ್ರಾವರುಣಾ ವಿಹಾವತಾಮನು ದ್ಯಾವಾಪೃಥಿವೀ ಪೂರ್ವಹೂತೌ ॥**

ತತ್ರ ಪ್ರಥಮಾಹುತೇರ್ಮಂತ್ರಮಾಹ ಇಂದ್ರೋ ದೇವ ಇಹ ಕರ್ಮಣಿ ಮಾಮನುಗಮ್ಯಾವೀತ್, ಅವತು। ಏವಂ ಬೃಹಸ್ಪತಿ ಸೋಮ ಸರಸ್ವತೀಮಿತ್ರಾವರುಣದ್ಯಾವಾಪೃಥಿವ್ಯೋ ಮಾಮವಂತು। ಪೂರ್ವಹೂತೌ ತದೇತನ್ಮಿತ್ರಾವರುಣಯೋರ್ವಿಶೇಷಣಮ್। ಯದ್ವಾ ಲಿಂಗವ್ಯತ್ಯಯೇನ ದ್ಯಾವಾ ಪೃಥಿವ್ಯೋರ್ವಿಶೇಷಣಮ್॥

ಮೊದಲನೆಯ ಆಹುತಿಯ ಮಂತ್ರವನ್ನು ವಿವರಿಸುತ್ತಾರೆ. ಇಂದ್ರದೇವನು ಈ ಕರ್ಮದಲ್ಲಿ ನನ್ನನ್ನನುಸರಿಸಿ ಬಂದು ರಕ್ಷಿಸಲಿ. ಹೀಗೆಯೇ ಬೃಹಸ್ಪತಿ ಸೋಮ ಸರಸ್ವತೀ ಮಿತ್ರಾವರುಣದ್ಯಾವಾಪೃಥಿವೀಗಳು ನನ್ನನ್ನು ರಕ್ಷಿಸಲಿ. ಪೂರ್ವಹೂತೌ ಎಂಬುದು ಮಿತ್ರಾವರುಣರಿಗೆ ವಿಶೇಷಣ. ಲಿಂಗವ್ಯತ್ಯಾಸದಿಂದ ದ್ಯಾವಾಪೃಥಿವೀಗಾದರೂ ವಿಶೇಷವಾಗುತ್ತದೆ.

ಆದಿತ್ಯಾ ಮಾ ವಿಶ್ವೇ ಅವಂತು ದೇವಾಃ ಸಪ್ತ ರಾಜಾನೋ ಯ ಉದಾಭಿಷಿಕ್ತಾಃ। ವಾಯುಃ ಪೂಷಾ ವರುಣಃ ಸೋಮೋ ಅಗ್ನಿಃ ಸೂರ್ಯೋ ನಕ್ಷತ್ರೈರವತ್ವಿಹ ಮಾಽನು॥

ದ್ವಿತೀಯಾಹುತೇರ್ಮಂತ್ರಮಾಹ—ಅದಿತೇಃ ಪುತ್ರಾ ಆದಿತ್ಯಾಸ್ತೇ ಚಾಷ್ಟಸಂಖ್ಯಾಕಾಃ। "ಅಷ್ಟೌ ಪುತ್ರಾಸೋ ಅದಿತೇಃ" (ಋ-ಸಂ-ಮಂ-೧೦ ಸೂ ೭೨ ಋ ೮) (ತೈ-ಆ-ಪ್ರ೧-ಅ-೧೩) ಇತಿ ಶ್ರುತ್ಯಂತರಾತ್। ತದನುಕ್ರಮಣಂ ಚ ತತ್ರೈವಾಮ್ನಾಯತೇ—"ತಾನನುಕ್ರಮಿಷ್ಯಾಮಃ। ಮಿತ್ರಶ್ಚ ವರುಣಶ್ಚ। ಧಾತಾ ಚಾರ್ಯಮಾ ಚ। ಅಂಶಶ್ಚ ಭಗಶ್ಚ। ಇಂದ್ರಶ್ಚ ವಿವಸ್ವಾಂಶ್ಚೇತ್ಯೇತೇ" (ತೈ-ಆ-ಪ್ರ-೧. ಅ-೧೩) ಇತಿ। ತ ಏವಂ ವಿಶ್ವೇ ಸರ್ವೇಽಪಿ ದೇವಾ ಮಾಮವಂತು। ಯ ಉದಯೇ ಚಾನ್ಯೇ ದ್ಯುಲೋಕಪ್ರಕಾಶನಾರ್ಥಮಭಿಷಿಕ್ತಾಃ ಸಪ್ತಸಂಖ್ಯಾಕಾ ಆರೋಗಾದಿನಾಮಕಾ ರಾಜಾನಃ ಸಂತಿ ತೇಽಪಿ ಮಾಮವಂತು। ಆರೋಗಾದಯೋಽಪಿ ಶ್ರುತ್ಯಂತರೇ ಸಮಾಮ್ನಾತಾಃ- "ಆರೋಗೋ ಭ್ರಾಜಃ ಪಟರಃ ಪತಂಗಃ। ಸ್ವರ್ಣರೋ ಜ್ಯೋತಿಷೀಮಾನುವಿಭಾಸಃ। ತೇ ಅಸ್ಮೈ ಸರ್ವೇ ದಿವಮಾತಪಂತಿ" (ತೈ-ಆ-ಪ್ರ-೧-ಅ-೭) ಇತಿ। ತಥಾ ವಾಯುರಿಹ ಕರ್ಮಣಿ ಮಾಮನುಗಮ್ಯಾವತು। ಏವಂ ಪೂಷಾದಿಷ್ವಪಿ ಯೋಜನೀಮ್

ಎರಡನೆಯ ಆಹುತಿಯ ಮಂತ್ರವನ್ನು ವಿವರಿಸುತ್ತಾರೆ. ಅದಿತಿಯ ಪುತ್ರರು ಆದಿತ್ಯರು. ಇವರು ಎಂಟುಜನರು ಅಷ್ಟೌ ಪುತ್ರಾಸೋ ಅದಿತೇಃ (ಋ. ಸಂ. ೧೦-೭೨-೮) (ತೈ. ಆ. ಪ್ರ. ೧-೧೩) ಎಂದು ಶ್ರುತಿಯಲ್ಲಿ ಹೇಳಿದೆ. ಅಲ್ಲಿಯೇ ಕ್ರಮವಾಗಿ ಮಿತ್ರ, ವರುಣ, ಧಾತಾ, ಅರ್ಯಮಾ, ಅಂಶ, ಭಗ, ಇಂದ್ರ, ವಿವಸ್ವಾನ್ ಎಂದು ಆ ಎಂಟುಜನರನ್ನು ಹೇಳಿದೆ. ಆ ದೇವತೆಗಳೆಲ್ಲಾ ನನ್ನನ್ನು ರಕ್ಷಿಸಲಿ. ಉದಯಕಾಲದಲ್ಲಿ ದ್ಯುಲೋಕಪ್ರಕಾಶಕ್ಕೋಸ್ಕರ ಅಭಿಷಿಕ್ತರಾದ ಏಳು ಆರೋಗಾದಿ ಹೆಸರುಳ್ಳ ರಾಜರುಗಳು ನನ್ನನ್ನು ಕಾಪಾಡಲಿ. ಆರೋಗ, ಭ್ರಾಜ, ಪಟರ, ಪತಂಗ, ಸ್ವರ್ಣರ, ಜ್ಯೋತಿಷೀಮಾನ್, ವಿಭಾಸ ಎಂದು ಆರೋಗಾದಿಗಳನ್ನು ಶ್ರುತಿಯಲ್ಲಿಯೇ (ತೈ. ಆ. ೧-೭) ವಿವರಿಸಿರುತ್ತಾರೆ. ಹಾಗೆಯೇ ವಾಯುವೂ, ಪೂಷ, ವರುಣ, ಸೋಮ, ಅಗ್ನಿ, ಸೂರ್ಯರೂ ನಕ್ಷತ್ರಗಳೊಡನೆ ಬಂದು ನನ್ನನ್ನು ರಕ್ಷಿಸಲಿ.

ಪಿತರೋ ಮಾ ವಿಶ್ವಮಿದಂ ಚ ಭೂತಂ ಪೃಶ್ನಿಮಾತರೋ ಮರುತಃ ಸ್ವರ್ಕಾಃ । ಯೇ ಅಗ್ನಿಜಿಹ್ವಾ ಉತ ವಾ ಯಜತ್ರಾಸ್ತೇ ನೋ ದೇವಾಃ ಸುಹವಾಃ ಶರ್ಮ ಯಚ್ಛತೇತಿ ॥

ತೃತೀಯಾಹುತೇರ್ಮಂತ್ರಮಾಹ—ಯೇ ಪಿತರೋಽಗ್ನಿಷ್ವಾತ್ತಾದಯಸ್ತೇ ಮಾಮವಂತ್ವಿತಿ ಶೇಷಃ । ನ ಕೇವಲಂ ಮಾಮೇವ, ಕಿಂತ್ವಿದಂ ವಿಶ್ವಂ ಪ್ರಾಣಿಜಾತಂ ಚಾವಂತು । ಪೃಶ್ನಿರ್ಮಾತಾ ಯೇಷಾಂ ಮರುತಾಂ ತೇ ಪೃಶ್ನಿಮಾತರಃ । ತಥಾ ಚ ಮಾರುತಸೂಕ್ತೇ ಸಮಾಮ್ನಾತಮ್–"ಪೃಶ್ನೇಃ ಪುತ್ರಾ ಉಪಮಾಸೋ ರಭಿಷ್ಠಾಃ" (ಋ–ಸಂ–ಮಂ–೫–ಸೂ ೫೮ ಋ–೫) ಇತಿ । ತಥಾ ಇತಿ । ತಥಾ ಬ್ರಾಹ್ಮಣಾಂತರಮ್—"ಪೃಶ್ನಿಯೇರ್ ವೈಷ ಯಶೋ ಮರುತೋ ಹುತಾಃ" ಇತಿ । ಪೃಶ್ನಿಗೋರ್ಮೂರ್ತಿದೇವತಾ । ತದಪ್ಯನ್ಯತ್ರಾಮ್ನಾತಮ್—"ಅಂಗಿರಸೋ ವೈ ಸತ್ರಮಾಸತ । ತೇಷಾಂ ಪೃಶ್ನಿರ್ಘರ್ಮಧುಗಾಸೀತ್" ಇತಿ । ತೇ ಚ ಮರುತಃ ಸ್ವರ್ಕಾಃ ಸುಷ್ಠ್ವರ್ಚನೀಯಾಃ ತೇ ಹಿ ಪ್ರಿಯಂಗುಚರ್ವಾದಿಭಿರರ್ಚ್ಯಂತೇ ॥ ಪೃಶ್ನಯೇ ದುಗ್ಧೇ ಪ್ರೈಯಂಗವಂ ಚರುಂ ನಿರ್ವಪೇನ್ಮರುದ್ಭ್ಯಃ" ಇತಿ ಶ್ರುತೇಃ । ತಾದೃಶಾ ಮರುತೋ ಮಾಮವಂತು । ಅಗ್ನಿರೇವ ಜಿಹ್ವಾ ಯೇಷಾಂ ತೇಽಗ್ನಿಜಿಹ್ವಾಃ । ಅಗ್ನೌ ಹುತಂ ಹವಿರ್ಭಕ್ಷಯಂತೀತ್ಯರ್ಥಃ । ತಾದೃಶಾ ದೇವಾ ಯೇ ಸಂತಿ । ಉತ ವಾಽಪಿ ಚೇತ್ಯರ್ಥಃ । ಯಜತ್ರಾ ಯಜನೀಯಾಃ ಪೀಠಾದೌ ಗಂಧಪುಷ್ಪಾದಿಭಿರರ್ಚನೀಯಃ । ಸಮರ್ಪಿತಂ ನೈವೇದ್ಯಂ ಭಕ್ಷಯಂತಿ ತಾದೃಶ್ಯಾಶ್ಚ ಯೇ ಸಂತಿ । ಉಭಯವಿಧಾ ಅಪಿ ದೇವಾ ಅನ್ಯತ್ರ ಸ್ಪಷ್ಟಮಾಮ್ನಾಯಂತೇ ಹುತಾದೋ ವಾ ಅನ್ಯೇ ದೇವಾ ಅಹುತಾದಯೋಽನ್ಯೇ ' ಇತಿ । ತಾದೃಶಾ ದೇವಾ ಯೂಯಂ ಸುಹವಾಃ ಸುಖೇನಾಹ್ವಾತುಂ ಶಕ್ಯಾಃ ಸಂತೋ ನೋಽಸ್ಮಭ್ಯಂ ಶರ್ಮ ಸುಖಂ ಯಚ್ಛತ । ಇತಿಶಬ್ದೋ ಮಂತ್ರತ್ರಯಸಮಾಪ್ತ್ಯರ್ಥ ॥

ಮೂರನೆಯ ಆಹುತಿಯ ಮಂತ್ರವನ್ನು ವಿವರಿಸುತ್ತಾರೆ. ಅಗ್ನಿಷ್ವಾತ್ತಾದಿಪಿತೃದೇವತೆಗಳು ನನ್ನನ್ನು ರಕ್ಷಿಸಲಿ. ನನ್ನನ್ನು ಮಾತ್ರವಲ್ಲದೆ ಈ ಸಕಲಪ್ರಪಂಚದ ಪ್ರಾಣಿಸಮುದಾಯವನ್ನೂ ರಕ್ಷಿಸಲಿ. ಪೃಶ್ನಿ ಎಂಬವಳೇ ತಾಯಿಯಾಗಿ ಯಾವ ಮರುದ್ದೇವತೆಗಳಿಗೆ ಇದ್ದಳೋ ಅವರು ಪೃಶ್ನಿಮಾತೃಗಳು. ಪೃಶ್ನೇಃ ಪುತ್ರಾ ಉಪಮಾಸೊರಭಿಷ್ಠಾಃ ಎಂದು ಈ ವಿಷಯ ಶ್ರುತಿಯಲ್ಲಿ ಹೇಳಿದೆ. ಗೋಮೂರ್ತಿದೇವತೆಗೆ ಪೃಶ್ನಿ ಎಂದು ಹೆಸರು. ಇದೂ ಅಂಗಿರಸೋ ವೈ ಸತ್ರಮಾಸತ । ತೇಷಾಂ ಪೃಶ್ನಿರ್ಘರ್ಮಧುಗಾಸೀತ್ ಎಂದು ಶ್ರುತ್ಯಂತರದಲ್ಲಿ ಹೇಳಿದೆ. ಆ ಮರುದ್ದೇವತೆಗಳು ಪ್ರಿಯಂಗುಚರ್ವಾದಿಗಳಿಂದ ಪೂಜಿಸಲ್ಪಡುವುದರಿಂದ ಚನ್ನಾಗಿ ಅರ್ಚಿಸಲು ಯೋಗ್ಯರು. ಅವರು ನಮ್ಮನ್ನು ರಕ್ಷಿಸಲಿ. ಅಗ್ನಿಯೇ ನಾಲಿಗೆಯಾಗಿರುವದೇವತೆಗಳು ಅಂದರೆ ಅಗ್ನಿಯಲ್ಲಿ ಹೋಮಿಸಿದ ಹವಿಸ್ಸನ್ನು ಭಕ್ಷಿಸುವ ದೇವತೆಗಳು, ಮತ್ತು ಪೀಠಾದಿಗಳಲ್ಲಿ ಗಂಧಪುಷ್ಪಾದಿಗಳಿಂದ ಪೂಜಿಸಲ್ಪಡುವ ದೇವತೆಗಳೂ ನನ್ನನ್ನು ರಕ್ಷಿಸಲಿ. ಹುತಾದರು, ಅಹುತಾದರೆಂಬ ಎರಡು ರೀತಿಯ ದೇವತೆಗಳು ಶ್ರುತಿಯಲ್ಲಿ ಹೇಳಿವೆ. ಆ ರೀತಿಯಾದ ದೇವತೆಗಳು ಕರೆಯಲು ಸುಲಭರಾಗಿರುತ್ತಾರೆ. ಅವರು ನಮಗೆ ಸುಖವನ್ನು ಕೊಡಲಿ. ಇತಿ ಎಂಬುದು ಮಂತ್ರಸಮಾಪ್ತಿಯನ್ನು ತಿಳಿಸುತ್ತದೆ.

ದಕ್ಷಿಣೇ ಮಾರ್ಜಾಲೀಯೇ ದಶ ಸ್ರುಚ್ಯುತ್ತಮಾಂ ಚತುರ್ಗೃ-
ಹೀತಂ ಪೂರ್ವಮವದಾಯೋತ್ತರತೋಽಗ್ನೇರುಪನಿಧಾಯ ವಿಹರಣ-
ಪ್ರಭೃತಿ ಮಧ್ಯಂ ದಿನೇ ಮಾರ್ಜಾಲೀಯೋ ಜಾಗರಿತೋ ಭವತಿ
ತಸ್ಮಿನ್ಪರಿವೃತೇ ಜುಹೋತಿ ಪ್ರಾಗ್ದ್ವಾರೇ ವೋದಗ್ದ್ವಾರೇ ವಾ
ಪ್ರಾಗುದಗ್ದ್ವಾರೇ ವಾ ||

ಹೋಮಾಂತರಂ ವಿಧತ್ತೇ—ಸದೋಹವಿರ್ಧಾನಯೋರ್ಮಧ್ಯೇ ಯೋಽಯಂ ದಕ್ಷಿಣೋತ್ತರಾಯತಃ ಸಂಚರಸ್ತಸ್ಯೋತ್ತರಭಾಗೇ ಯಥಾಗ್ನೀಧ್ರೀಯೋ ಧಿಷ್ಣ್ಯಸ್ತಥಾ ದಕ್ಷಿಣಭಾಗೇ ಮಾರ್ಜಾಲೀಯನಾಮಕೋ ಧಿಷ್ಣ್ಯಃ । ತಸ್ಮಿನ್ದಶಸಂಖ್ಯಾಕಾ ಅಜ್ಯಾಹುತೀರ್ಜುಹೋತೀತ್ಯನುವರ್ತತೇ । ತತ್ರಾಯಂ ಪ್ರಯೋಗಪ್ರಕಾರಃ । ಉತ್ತಮಾಂ ದಶಮಾಮಾಹುತಿಮುದ್ದಿಶ್ಯ ಸ್ರುತಿ ಜುಹ್ವಾಂ ಚತುರ್ಗೃಹೀತಮಾಜ್ಯಂ ಪ್ರಥಮಮವದಾಯ ತದಾಜ್ಯವಿಶಿಷ್ಟಾಂ ತಾಂ ಸ್ರುಚಂ ಮಾರ್ಜಾಲೀಯಸ್ಯಾಗ್ನೇರುತ್ತರಭಾಗೇ ಸ್ಥಾಪಯಿತ್ವಾ ದಶಮಾಹುತೇಃ ಪೂರ್ವಭಾವಿನೀರ್ನವಾಹುತೀಃ ಸ್ರುವೇಣ ತಸ್ಮಿನ್ಮಾರ್ಜಾಲೀಯೇ ಜುಹುಯಾತ್ । ಸ ಚ ಮಾರ್ಜಾಲೀಯಃ ಪರಿವೃತಃ ಪರಿತಃ ಕಟಾದಿಭಿರಾಚ್ಛಾದಿತೋ ಭವತಿ। ತತ್ರ ಹೋಮಾರ್ಥಂ ಪ್ರವೇಶದ್ವಾರಂ ಪ್ರಾಚ್ಯಾಮುದೀಚ್ಯಾಮೈಶಾನ್ಯಾಂ ವೇತಿ ತ್ರಿಧಾ ವಿಕಲ್ಪಿತಮ್ । ಯದ್ಯಪ್ಯೇತದ್ಧೋಮಕಾಲಾತ್ಪೂರ್ವಂ ಮಾರ್ಜಾಲೀಯೇ ವಿಕೃತಸ್ಯಾಗ್ನೇಶ್ಚಿರಕಾಲಂ ವ್ಯವಧಾನಮಸ್ತಿ ತಥಾಪಿ ಮಾಧ್ಯಂದಿನೇ ಸವನೇ ವಿಹರಣಕಾಲಮಾರಭ್ಯ ಮಾರ್ಜಾಲೀಯಧಿಷ್ಣ್ಯಗತೋಽಗ್ನಿರ್ಯಥಾ ನ ಶಾಮ್ಯತಿ ತಥಾ ಜಾಗರಿತಃ ಕಾಷ್ಠಪ್ರಕ್ಷೇಪೇಣ ಪುನಃ ಪುನಃ ಪ್ರಜ್ವಾಲಿತೋ ಭವತಿ ||

ಬೇರೊಂದು ಹೋಮವನ್ನು ವಿವರಿಸುತ್ತಾರೆ. ಸದಸ್ಸು ಹವಿರ್ಧಾನಗಳ ಮಧ್ಯದಲ್ಲಿ ದಕ್ಷಿಣೋತ್ತರವಾಗಿ ಒಂದು ದೀರ್ಘವಾದ ಮಾರ್ಗವಿರುತ್ತದೆ. ಅದರ ಉತ್ತರ ಭಾಗದಲ್ಲಿ ಹೇಗೆ ಆಗ್ನೀಧ್ರಸಂಬಂಧಿಯಾದ ದಿಷ್ಣ್ಯವಿದೆಯೋ ಅದರಂತೆ ದಕ್ಷಿಣ ಭಾಗದಲ್ಲಿ ಮಾರ್ಜಾಲೀಯವೆಂಬ ದಿಷ್ಣ್ಯವಿರುತ್ತದೆ. ಅಲ್ಲಿ ಹತ್ತು ಆಜ್ಯಾಹುತಿಗಳನ್ನು ಹೋಮಮಾಡುತ್ತಾರೆ. ಪ್ರಯೋಗರೀತಿಯನ್ನು ವಿವರಿಸುತ್ತಾರೆ. ಹತ್ತನೆಯ ಆಹುತಿಗೋಸ್ಕರ ಜುಹುವಿನಲ್ಲಿ ನಾಲ್ಕು ಸಾರಿ ಹಾಕಿದ ಆಜ್ಯವನ್ನು ಅವದಾನಮಾಡಿ ಅಜ್ಯವಿಶಿಷ್ಟವಾದ ಆ ಸ್ರುಕ್ಕನ್ನು ಮಾರ್ಜಾಲೀಯದ ಅಗ್ನಿಯ ಉತ್ತರ ಭಾಗದಲ್ಲಿ ಇಟ್ಟು ಮೊದಲಿನ ಒಂಬತ್ತು ಆಹುತಿಗಳನ್ನು ಸ್ರುವದಿಂದ ಆ ಮಾರ್ಜಾಲೀಯದಲ್ಲಿ ಹೋಮಮಾಡಬೇಕು. ಆ ಮಾರ್ಜಾಲೀಯ ಕುಂಡವು ಸುತ್ತಲೂ ಚಾಪೆ ಮುಂತಾದವುಗಳಿಂದ ಮುಚ್ಚಿರುತ್ತದೆ. ಹೋಮಕ್ಕೋಸ್ಕರ ಹೋಗುವ ದ್ವಾರವು ಪೂರ್ವದಲ್ಲಾಗಲೀ, ಉತ್ತರದಲ್ಲಾಗಲೀ, ಈಶಾನ್ಯದಿಕ್ಕಿನಲ್ಲಾಗಲೀ ಇರಬೇಕೆಂದು ಮೂರು ರೀತಿ ವಿಕಲ್ಪವಿದೆ. ಈ ಮಾರ್ಜಾಲೀಯದಲ್ಲಿ ಹೋಮಕಾಲಕ್ಕೆ ಮೊದಲೇ ಅಗ್ನಿಯು ಜ್ವಲಿಸಿ ಬಹುಕಾಲವಾದುದರಿಂದ ಶಾಂತವಾಗಿದ್ದರೂ ಮಾಧ್ಯಂದಿನಸವನದಲ್ಲಿ ಅಗ್ನಿಜ್ವಾಲೆಯಾದ ಕಾಲದಿಂದ ಅದು ಶಾಂತವಾಗದಿರಲು ಆಗಾಗ ಕಟ್ಟಿಗೆ ಹಾಕಿ ಜ್ವಲಿಸುತ್ತಿರುವಂತೆ ಮಾಡುತ್ತಿರಬೇಕು.

ಅಗ್ನಿರಿವಾನಾಧೃಷ್ಯಃ ಪೃಥಿವೀವ ಸುಷದಾ ಭೂಯಾಸಮ್ ||

**ತಸ್ಮಿನ್ಹೋಮೇ ಪ್ರಥಮಮಂತ್ರಮಾಹ ಯಥಾಽಗ್ನಿಸ್ತೀವ್ರತ್ವಾನ್ನ ಕೇನಾಪಿ ತಿರಸ್ಕರ್ತುಂ ಶಕ್ಯ ಏವಮಹಮಪ್ಯತಿರಸ್ಕಾರ್ಯೋ ಭೂಯಾಸಮ್ । ಯಥಾ ಚ ಪೃಥಿವೀ ಸುಷ್ಠು ಸ್ಥೈರ್ಯೇಣಾ-ವತಿಷ್ಠತ ಏವಮಹಮಪಿ ಭೂಯಾಸಮ್ । ಶೋಭನಂ ಸದೋಽವಸ್ಥಾನಂ ಯಸ್ಯ ಮಮ ಸೋಽಹಂ ಸುಷದಾಃ ||**

ಪೂರ್ವೋಕ್ತ ಹೋಮದಲ್ಲಿ ಮೊದಲನೆಯ ಮಂತ್ರವನ್ನು ವಿವರಿಸುತ್ತಾರೆ. ಹೇಗೆ ಅಗ್ನಿಯು ತೀವ್ರವಾಗಿ ಉರಿಯುವುದರಿಂದ ಯಾರಿಂದಲೂ ತಿರಸ್ಕರಿಸಲು ಅಶಕ್ಯನೋ ಅದರಂತೆ ನಾನೂ ಯಾರಿಂದಲೂ ತಿರಸ್ಕರಿಸದಂತೆ ಆಗಲಿ. ಪೃಥಿವಿಯು ಸ್ಥೈರ್ಯದಿಂದ ಇರುವಂತೆ ನಾನೂ ಸ್ಥಿರವಾಗಿರುವಂತೆ ಆಗಲಿ. ಶೋಭನವಾದ ಸ್ಥಾನವುಳ್ಳವನು ಆಗಲಿ.

ಅಂತರಿಕ್ಷಮಿವಾನಾಪ್ಯಂ ದ್ಯೌರಿವಾನಾಧೃಷ್ಯೋ ಭೂಯಾಸಮ್ ||

**ದ್ವಿತೀಯಂ ಮಂತ್ರಮಾಹ—ಯಥಾಂತರಿಕ್ಷಂ ಪಾದಚಾರಿಣಾ ವಿರೋಧಿನಾ ಶತ್ರುಣಾ ಪ್ರಾಪ್ತುಂ ನ ಶಕ್ಯಂ ಯಥಾ ಚ ದ್ಯುಲೋಕೋ ಮಾನುಷೇಣ ಶತ್ರುಣಾ ತಿರಸ್ಕರ್ತುಮಶಕ್ಯ ಏವ-ಮಹಮಪಿ ಶತ್ರುಭಿರಪ್ರಾಪ್ತೋಽನಾಧೃಷ್ಯಶ್ಚ ಭೂಯಾಸಮ್ ||**

ಎರಡನೆಯ ಮಂತ್ರವನ್ನು ವಿವರಿಸುತ್ತಾರೆ. ಆಕಾಶವು ಹೇಗೆ ಪಾದಚಾರಿ ಶತ್ರುವಿನಿಂದ ಹೊಂದಲು ಅಶಕ್ಯವೋ, ಹೇಗೆ ದ್ಯುಲೋಕವು ಮಾನುಷ ಶತ್ರುವಿನಿಂದ ತಿರಸ್ಕರಿಸಲು ಅಶ್ಯಕವೋ ಅದರಂತೆ ನಾನೂ ಶತ್ರುವಿವಶ್ಯನಾಗದೆ ಪ್ರತೀಕಾರ ಸಾಧ್ಯನು ಆಗಲಿ.

ಸೂರ್ಯ ಇವಾಪ್ರತಿಧೃಷ್ಯಶ್ಚಂದ್ರಮಾ ಇವ ಪುನರ್ಭೂರ್ಭೂಯಾಸಮ್ ||

**ತೃತೀಯಂ ಮಂತ್ರಮಾಹ—ಯಥಾ ಸೂರ್ಯಃ ಸ್ವಸ್ಮಾದಪ್ಯಧಿಕಸ್ಯ ತೇಜಸ್ವಿನಃ ಪ್ರತಿಕೂಲ-ಸ್ಯಾಭಾವಾದತಿರಸ್ಕಾರ್ಯಃ ಯಥಾ ವಾ ಚಂದ್ರಮಾಃ ಕೃಷ್ಣಪಕ್ಷೇ ಕ್ಷೀಣೋಽಪಿ ಶುಕ್ಲಪಕ್ಷೇ ಪುನಃ ಪ್ರಾದುರ್ಭವತಿ ಏವಮಹಮಪಿ ತ್ರೈಸತಿರಸ್ಕಾರ್ಯ ಏವ ಭೂಯಾಸಮ್ । ಕೇನಾಪಿ ನಿಮಿತ್ತೇನ ಕದಾಚಿತ್ಸತ್ಯಪಿ ತಿರಸ್ಕಾರೇ ತತ್ಪರಿಹಾರೇಣ ಪುನರಪ್ಯೂರ್ಜಿತೋ ಭೂಯಾಸಮ್ ||**

ಮೂರನೆಯ ಮಂತ್ರವನ್ನು ವಿವರಿಸುತ್ತಾರೆ. ಸೂರ್ಯನು ತನಗಿಂತ ಅಧಿಕ ತೇಜಸ್ವಿ ಯಾರೂ ಇಲ್ಲದಿರುವುದರಿಂದ ಅತಿರಸ್ಕಾರ್ಯನಾಗಿರುವನೋ, ಹೇಗೆ ಚಂದ್ರನು ಕೃಷ್ಣಪಕ್ಷದಲ್ಲಿ ಕ್ಷೀಣನಾದರೂ, ಶುಕ್ಲಪಕ್ಷದಲ್ಲಿ ಪುನಃ ಅಭಿವೃದ್ಧಿ ಹೊಂದುವನೋ ಅದರಂತೆ ನಾನು ಯಾರಿಂದಲೂ ತಿರಸ್ಕಾರ ಹೊಂದದಿರುವಂತೆ ಆಗಲಿ. ಎಂದಾದರೂ ಎಲ್ಲಿಯಾದರೂ ಸ್ವಲ್ಪ ತಿರಸ್ಕಾರವಾದರೂ ತಿರುಗಿ ಚಂದ್ರನಂತೆ ಊರ್ಜಿತನು ಆಗುವಂತಾಗಲಿ.

ಮನ ಇವಾಪೂರ್ವಂ ವಾಯುರಿವ ಶ್ಲೋಕಭೂರ್ಭೂಯಾಸಮ್ ||

ಚತುರ್ಥಂ ಮಂತ್ರಮಾಹ—ಯಥಾ ಮನ ಉತ್ತರೋತ್ತರಮಭಿವೃದ್ಧಿಕಾಂಕ್ಷಯಾ ಪ್ರಯುತಮಾನಂ ಸತ್ತತ್ತತ್ಫಲಪ್ರಾಪ್ತ್ಯಾ ನೂತನಂ ರೂಪಂ ಪ್ರತಿಪದ್ಯತೇ, ಏವಮಹಮಪ್ಯುತ್ತರೋತ್ತರಾಭಿವೃದ್ಧ್ಯಾ ನೂತನೋ ಭೂಯಾಸಮ್ । ಶ್ಲೋಕಃ ಸಂಘಃ । ಯಥಾ ವಾಯುರಾಷಾಢಾದಿಮಾಸೇ ಸಮುದ್ರತೀರಾದಿದೇಶೇ ವಾ ಸ್ವಯಮುತ್ತರೋತ್ತರಾಭಿವೃದ್ಧ್ಯಾ ಸಂಘರೂಪೋ ಭವತಿ, ಏವಮಹಮಪಿ ಪುತ್ರಪೌತ್ರಾದಿಸಂಘರೂಪೇಣೋಽಸ್ಪನ್ನೋ ಭೂಯಾಸಮ್ ॥

ನಾಲ್ಕನೆಯ ಮಂತ್ರವನ್ನು ವಿವರಿಸುತ್ತಾರೆ. ಮನಸ್ಸು ಉತ್ತರೋತ್ತರಾಭಿವೃದ್ಧಿ ಇಚ್ಛೆಯಿಂದ ಪ್ರಯತ್ನಿಸುತ್ತಾ ಆಯಾಯ ಫಲಪ್ರಾಪ್ತಿಯಿಂದ, ಹೇಗೆ ನೂತನರೂಪ ಹೊಂದುವುದೋ ಅದರಂತೆ ಉತ್ತರೋತ್ತರಾಭಿವೃದ್ಧಿಯಿಂದ ನಾನು ನೂತನನು ಆಗುತ್ತಿರಲಿ. ವಾಯುವು ಆಷಾಢಾದಿಮಾಸದಲ್ಲಿ, ಸಮುದ್ರ ತೀರದಲ್ಲಾಗಲೀ ಉತ್ತರೋತ್ತರಾಭಿವೃದ್ಧಿಯಿಂದ ಸಂಘರೂಪವಾಗುತ್ತದೋ ಅದರಂತೆ ನಾನೂ ಪುತ್ರಪೌತ್ರಾದಿ ಸಂಘರೂಪದಿಂದಿರುವವನಾಗಲಿ.

## ಅಹರಿವ ಸ್ವಂ ರಾತ್ರಿರಿವ ಪ್ರಿಯೋ ಭೂಯಾಸಮ್ ॥

**ಪಂಚಮಂ ಮಂತ್ರಮಾಹ-ಅಹರ್ಯಥಾ ಪ್ರಕಾಶೇನಾಂಧಕಾರಂ ನಿವರ್ತ್ಯ ವಾಣಿಜ್ಯಸೇವಾದಿನಾ ಸ್ವಂ ಧನಂ ಸಂಪಾದಯತಿ, ಏವಮಹಮಪಿ ಧನಸಂಪಾದಕೋ ಭೂಯಾಸಮ್ । ಯಥಾ ಚ ರಾತ್ರಿರ್ವಿಶ್ರಾಮಾದಿ ಸುಖಹೇತುತಯಾ ಪ್ರಿಯಾ, ಏವಮಹಮಪಿ ಸರ್ವೇಷಾಂ ಪ್ರಿಯೋ ಭೂಯಾಸಮ್ ॥**

ಐದನೆಯ ಮಂತ್ರವನ್ನು ವಿವರಿಸುತ್ತಾರೆ. ಹಗಲು ಪ್ರಕಾಶದಿಂದ ಕತ್ತಲೆಯನ್ನು ಹೋಗಲಾಡಿಸಿ ವಾಣಿಜ್ಯಾದಿಗಳಿಂದ ಧನವನ್ನು ಸಂಪಾದಿಸುವುದೋ ಅದರಂತೆ ನಾನೂ ಧನಸಂಪಾದಕನಾಗಲಿ. ಹೇಗೆ ರಾತ್ರಿಯು ವಿಶ್ರಾಂತಿ ಸುಖಕ್ಕೆ ಕಾರಣವಾದುದರಿಂದ ಪ್ರಿಯವಾಗಿದೆಯೋ ಅದರಂತೆ ನಾನು ಎಲ್ಲರ ಪ್ರೀತಿಪಾತ್ರನಾಗಲಿ.

## ಗಾವ ಇವ ಪುನರ್ಭೂರ್ವೋ ಮಿಥುನಮಿವ ಮರೀಚಯೋ ಭೂಯಾಸಮ್ ॥

**ಷಷ್ಠಂ ಮಂತ್ರಮಾಹ—ಯಥಾ ಗಾವಃ ಸಂವತ್ಸರೇ ವತ್ಸರೂಪೇಣ ಪುನರುತ್ಪತ್ತಿಮುತ್ಯ ಏವಮಹಮಪಿ ಪುತ್ರಾದಿರೂಪೇಣ ಪುನಃ ಪುನರ್ಭೂರ್ಯಾಸಮ್ । ಯಥಾ ಚೋಮಾಮಹೇಶ್ವರ ಲಕ್ಷ್ಮೀನಾರಾಯಣಾದಿ ಮಿಥುನಂ ತೇಜಸ್ವಿತ್ವೇನ ಪ್ರಸಿದ್ಧಮಹಮಪಿ ಮರೀಚಯೋ ಮರೀಚಮಾಂಸ್ತೇಜಸ್ವೀ ಭೂಯಾಸಮ್ ॥**

ಆರನೆಯ ಮಂತ್ರವನ್ನು ವಿವರಿಸುತ್ತಾರೆ. ಹೇಗೆ ಹಸುಗಳು ವರ್ಷವರ್ಷಗಳಲ್ಲಿಯೂ ಕರು ಹಾಕುವುದರ ಮೂಲಕ ಪುನರುತ್ಪತ್ತಿಯನ್ನು ಹೊಂದುತ್ತವೆಯೋ ಅದರಂತೆ ನಾನೂ ಪುತ್ರಾದಿರೂಪದಿಂದ ಪುನಃಪುನಃ ಹುಟ್ಟುವಂತಾಗಲಿ. ಹೇಗೆ ಉಮಾಮಹೇಶ್ವರ, ಲಕ್ಷ್ಮೀನಾರಾಯಣಾದಿಮಿಥುನವು ತೇಜಸ್ವಿಯಾಗಿ ಪ್ರಸಿದ್ಧವಾಗಿದೆಯೋ ಅದರಂತೆ ನಾನು ತೇಜಸ್ವಿಯಾಗಿ ಬೆಳಗುವಂತಾಗಲಿ.

## ಆಪ ಇವ ರಸ ಓಷಧಯ ಇವ ರೂಪಂ ಭೂಯಾಸಮ್ ॥

**ಸಪ್ತಮಂ ಮಂತ್ರಮಾಹ—ಆಪೋ ಯಥಾ ರಸವತ್ಯ ಏವಮಹಂ ರಸೋ ಮಧುರಾಮ್ಲಾದಿರಸಸಂಪನ್ನೋ ಭೂಯಾಸಮ್ । ಓಷಧಯೋ ಯಥಾ ಪಕ್ವಾಃ ಸತ್ಯೋ ರಮಣೀಯರೂಪಯುಕ್ತಾ ದೃಶ್ಯಂತೇ, ಏವಮಹಮಪಿ ರೂಪಂ ಪುಷ್ಟಿಕಾಂತ್ಯಾದಿರಮಣೀಯರೂಪಯುಕ್ತೋ ಭೂಯಾಸಮ್ ॥**

ಏಳನೆಯ ಮಂತ್ರವನ್ನು ವಿವರಿಸುತ್ತಾರೆ. ನೀರು ರಸವತ್ತಾಗಿರುವಂತೆ ನಾನು ಮಧುರಾದಿರಸಸಂಪನ್ನನಾಗುವಂತಾಗಲಿ. ಓಷಧಿಗಳು ಪಕ್ವವಾಗಿ ಹೇಗೆ ರಮಣೀಯರೂಪದಿಂದ ಕೂಡಿರುತ್ತವೆಯೋ ಅದರಂತೆ ನಾನೂ ಪುಷ್ಟಿಕಾಂತ್ಯಾದಿರೂಪಯುಕ್ತನಾಗಿ ಬೆಳಗುವಂತಾಗಲಿ.

## ಅನ್ನಮಿವ ವಿಭು ಯಜ್ಞ ಇವ ಪ್ರಭುರ್ಭೂಯಾಸಮ್ ॥

**ಅಷ್ಟಮಂ ಮಂತ್ರಮಾಹ—ಅನ್ನಂ ಯಥಾ ಭಕ್ಷ್ಯಭೋಜ್ಯಲೇಹ್ಯಚೋಷ್ಯರೂಪೇಣ ವಿವಿಧಂ ಭವತಿ, ಏವಮಿಹಾಪಿ ವಿಭುರ್ಧನವಿದ್ಯಾಸಂಪತ್ಯಾ ವಿವಿಧೋ ಭೂಯಾಸಮ್ । ಯಥಾ ಯಜ್ಞೋ ಜ್ಯೋತಿಷ್ಟೋಮಾದಿಃ ಸ್ವರ್ಗಾದಿ ಫಲಪ್ರದಾನೇ ಸಮರ್ಥ ಏವಮಹಮಪಿ ಪ್ರಭುಃ ಪುತ್ರಪೌತ್ರಭೃತ್ಯಾದಿಪೋಷಣೇ ಸಮರ್ಥೋ ಭೂಯಾಸಮ್ ॥**

ಎಂಟನೆಯ ಮಂತ್ರವನ್ನು ವಿವರಿಸುತ್ತಾರೆ. ಅನ್ನವು ಹೇಗೆ ಭಕ್ಷ್ಯಭೋಜ್ಯಲೇಹ್ಯ ಚೋಷ್ಯರೂಪದಿಂದ ನಾನಾ ರೀತಿಯಾಗಿರುತ್ತದೆಯೋ ಅದರಂತೆ ನಾನಾ ಧನವಿದ್ಯಾದಿಸಂಪತ್ತಿನಿಂದ ನಾನಾವಿಧವಾಗಿರುವಂತಾಗಲಿ. ಹೇಗೆ ಜ್ಯೋತಿಷ್ಟೋಮಾದಿಯಜ್ಞವು ಸ್ವರ್ಗಾದಿಫಲವನ್ನು ಕೊಡುವುದರಲ್ಲಿ ಸಮರ್ಥವಾಗಿವೆಯೋ ಅದರಂತೆ ನಾನೂ ಪುತ್ರಪೌತ್ರಭೃತ್ಯಾದಿಗಳ ರಕ್ಷಣೆಯಲ್ಲಿ ಸಮರ್ಥನಾಗುವಂತಾಗಲಿ.

## ಬ್ರಹ್ಮೇವ ಲೋಕೇ ಕ್ಷತ್ರಮಿವ ಶ್ರಿಯಾಂ ಭೂಯಾಸಮ್ ॥

**ನವಮಂ ಮಂತ್ರಮಾಹ—ಯಥಾ ಬ್ರಹ್ಮ ಬ್ರಾಹ್ಮಣೋ ಲೋಕೇ ಶ್ರೇಷ್ಠ ಏವಮಹಮಪಿ ಶ್ರೇಷ್ಠೋ ಭೂಯಾಸಮ್ । ಯಥಾ ಕ್ಷತ್ರಂ ರಾಜ್ಯಂ ಗಜಾಶ್ವಾದಿಶ್ರಿಯಾಮಧಿಪತಿಃ, ಏವಮಹಮಪಿ ಸರ್ವಸಂಪದಾಮಧಿಪತಿರ್ಭೂಯಾಸಮ್ ॥**

ಒಂಬತ್ತನೆಯ ಮಂತ್ರವನ್ನು ವಿವರಿಸುತ್ತಾರೆ. ಹೇಗೆ ಲೋಕದಲ್ಲಿ ಬ್ರಾಹ್ಮಣನು ಶ್ರೇಷ್ಠನೋ ಅದರಂತೆ ನಾನೂ ಶ್ರೇಷ್ಠನಾಗಲಿ. ಹೇಗೆ ಕ್ಷತ್ರಿಯರಾಜನು ಗಜಾಶ್ವಾದಿಸಂಪತ್ತಿಗೆ ಅಧಿಪತಿಯೋ ಅದರಂತೆ ನಾನೂ ಸಕಲಸಂಪತ್ತಿಗೆ ಸ್ವಾಮಿಯಾಗುವಂತಾಗಲಿ.

## ಯದಗ್ನ ಏಷಾ ಸಮಿತಿರ್ಭವಾತೀತಿ ॥

**ಅಥ ಸ್ರುಚಿ ಚತುರ್ಗೃಹೀತೇನಾಜ್ಯೇನ ಹೋತುರ್ಮಂತ್ರಸ್ಯ ಪ್ರತೀಕಂ ದರ್ಶಯತಿ—ಸೋಽಯಂ ಮಂತ್ರಃ ಸಂಹಿತಾಗ್ರಂಥೇ ದ್ರಷ್ಟವ್ಯಃ। ಇತಿಶಬ್ದೋ ದಶಾಹುತಿಮಂತ್ರ ಸಮಾಪ್ತ್ಯರ್ಥಃ॥**

ಹಿಂದೆ ಹೇಳಿದಂತೆ ಸ್ರುಕ್ಕಿನಲ್ಲಿ ಚತುರ್ಗೃಹೀತಾಜ್ಯದಿಂದ ಹೋತೃವು ಪಠಿಸಬೇಕಾದ ಮಂತ್ರಪ್ರತೀಕವನ್ನು ತೋರಿಸುತ್ತಾರೆ. ಯದಗ್ನ ಏಷಾ (ಋ. ಸಂ. ೧೦-೧೧-೮) ಎಂಬ ಈ ಮಂತ್ರವನ್ನು ಸಂಹಿತಾಗ್ರಂಥದಲ್ಲಿ ನೋಡಬೇಕು. ಇತಿ ಶಬ್ದವು ದಶಾಹುತಿಸಮಾಪ್ತಿಯನ್ನು ಸೂಚಿಸುತ್ತದೆ.

## ಅತ್ರ ವಿಭಜಾಥ ವೀಥೇತಿ ತ್ರೀಣ್ಯನನ್ವೃಚಮ್ ॥

ಅಸ್ಮಿನ್ದಶಮೇ ಮಂತ್ರೇ ಶಾಖಾಂತರಗತಸ್ಯ ಪಾಠಸ್ಯಾನುಪಾದೇಯತಾಂ ದರ್ಶಯತಿ— "ಯದಗ್ನ ಏಷಾ" (ಋ. ಸಂ. ಮಂ-೧೦-ಸೂ-೧೧-ಋ-೮) ಇತ್ಯಸ್ಯಾಮೃಚಿ ತ್ರೀಣಿ ಪದಾನಿ ಶಾಖಾಂತರೇಽನ್ಯಥಾ ಪಠಿತಾನಿ । ತಾನ್ಯನನ್ವೃಚಮೃಗನುಸಾರೀಣಿ ನ ಭವಂತಿ । ಕಾನಿ ತಾನಿ ಪದಾನೀತ್ಯಾಶಂಕ್ಯ ಪ್ರದರ್ಶ್ಯಂತೇ—ಅತ್ರೇತ್ಯೇಕಂ ವಿಭಜಾಥೇತಿ ದ್ವಿತೀಯಂ ವೀಥೇತಿ ತೃತೀಯಂ । ತಸ್ಯಾಮೃಚಿ "ರತ್ನಾ ಚ ಯದ್ವಿಭಜಾಸಿ ಸ್ವಧಾವಃ" ಇತಿ ತೃತೀಯಃ ಪಾದಃ, ತಸ್ಯ ಚಾಯಮರ್ಥಃ— ಹೇ ಸ್ವಧಾವೋಽನ್ನವನ್ನಗ್ನೇ ರತ್ನಾ ಚ ಯದ್ರತ್ನಾನ್ಯಪಿ ಯಾನಿ ವಿಭಜಾಸಿ ಪೃಥಕ್ಕರೋಷೀತಿ । ತಸ್ಮಿನ್ಪಾದೇ ರತ್ನಾಮನುವಾದದ್ಯೋತನಾಯ ಯಚ್ಛಬ್ದೋಽಪೇಕ್ಷಿತಃ । ಅಗ್ನೇರೇಕಸ್ಯ ಸಂಬೋಧ್ಯಮಾನತ್ವಾದ್ವಿಭಜಾಸೀತ್ಯೇಕವಚನಮಪೇಕ್ಷಿತಂ, ಅತಸ್ತದುಭಯಮೃಗನುಸಾರಿ । ಶಾಖಾಂತರೇ ತು ತದುಭಯಂ ಪರಿತ್ಯಜ್ಯಾತ್ರ ವಿಭಜಾಥೇತಿ ಪದದ್ವಯಂ ಪಠಿತಮ್ । ತದ್ದ್ವಯಮೃಗನುಸಾರಿ ನ ಭವತಿ, ಯಥೋಕ್ತಾನುವಾದಾಭಾವಾತ್, ಬಹುವಚನಾನ್ವಿತತ್ವಾಚ್ಚ । ತಥಾ ಚತುರ್ಥಪಾದ ಏವಮಾಮ್ನಾಯತೇ— "ಭಾಗಂ ನೋ ಅತ್ರ ವಸುಮಂತಂ ವೀತಾತ್" ಇತಿ । ತಸ್ಯಾಮರ್ಥಃ — "ಹೇಽಗ್ನೇಽತ್ರಾಸ್ಮಿನ್ಕರ್ಮಣಿ ನೋಽಸ್ಮಾಕಂ ವಸುಮಂತಂ ಭಾಗಂ ಬಹುಧನೋಪೇತಂಭಾಗಂ ವೀತಾದ್ವಿಶೇಷೇಣ ಪ್ರಾಪ್ನುಹಿ ಸಂಪಾದಯೇತಿ । ತಸ್ಮಿನ್ನಪಿ ಪಾದೇ ಶಾಖಾಂತರೀಯಾ ವೀಥೇತಿ ಪಠಂತಿ, ತದಪಿ ಪೂರ್ವಪದಯುಕ್ತಮ್ । ಸಂತಿ ಹಿ ಭೇ(ವೇ)ದೇ ತತ್ರ ತತ್ರ ಶಾಖಾಂತರಪಾಠದೂಷಣಾನಿ ಬಹೂನಿ। ತಥಾ ಹಿ—"ಬೃಹಸ್ಪತಿರ್ನೋ ಹವಿಷಾ ವೃಧಾತು" ಇತ್ಯಸ್ಮಿನ್ಮಂತ್ರೇ ಹವಿಷಾ ವಿಧೇರಿತಿ ಶಾಖಾಂತರಪಾಠಃ । ಸ ಚ ಯಜ್ಞೇ ನೈಷ್ಫಲ್ಯೇನ ದುಷ್ಟ ಇತ್ಯಭಿಪ್ರೇತ್ಯ ಬ್ರಾಹ್ಮಣೇ ಸಮಾಮ್ನಾಯತೇ— "ಯದ್ಬ್ರೂಯಾದ್ವಿಧೇರಿತಿ ಯಜ್ಞಸ್ಥಾಣುಮೃಚ್ಛೇದ್ವೃಧಾತ್ವಿತ್ಯಾಹ ಯಜ್ಞಸ್ಥಾಣುಮೇವ ಪರಿವೃಣಕ್ತಿ" ಇತಿ। ಏವಂ "ಯದ್ಬ್ರೂಯಾತ್ಸೂಪಾವಸಾನೇ" ಇತ್ಯಾದಿಕಮುದಾಹಾರ್ಯಮ್॥

ಹತ್ತನೆಯ ಮಂತ್ರದಲ್ಲಿ ಶಾಖಾಂತರದಲ್ಲಿ ಹೇಳಿದ ಪಾಠವನ್ನು ಅಂಗೀಕರಿಸಬಾರದೆಂದು ವಿವರಿಸುತ್ತಾರೆ- ಯದಗ್ನ ಏಷಾ (ಋ-ಸಂ-೧೦-೧೧-೮) ಎಂಬ ಹತ್ತನೆಯ ಮಂತ್ರದಲ್ಲಿ ಮೂರು ಪದಗಳನ್ನು ಇತರ ಶಾಖೆಯವರು ಬೇರೆಯಾಗಿ ಪಠಿಸುತ್ತಾರೆ. ಅವು ಋಗನುಸಾರಿಯಾಗದಿರುವುದರಿಂದ ಗ್ರಾಹ್ಯವಿಲ್ಲ. ಅತ್ರ, ವಿಭಜಾಥ, ವೀಥ ಎಂದು ಆ ಮೂರು ಪದಗಳು. **ರತ್ನಾ ಚ ಯದ್ವಿಭಜಾಸಿ ಸ್ವಭಾವಃ** ಎಂದು ಆ ಋಕ್ಕಿನ ಮೂರನೆಯ ಪಾದ. ಅದರ ಅರ್ಥ. ಹೇ ಸ್ವಧಾವಃ=ಅನ್ನವಂತನಾದ ಅಗ್ನಿಯೇ, ರತ್ನಾ ಚಯತ್=ಯಾವ ರತ್ನಗಳನ್ನು, ವಿಭಜಾಸಿ=ಬೇರೆಯಾಗಿ ಮಾಡುವೆಯೋ. ಇಲ್ಲಿ ರತ್ನಗಳ ಅನುವಾದವನ್ನು ವ್ಯಕ್ತಪಡಿಸಲು ಯತ್ ಎಂದು ಹೇಳಿದೆ. ಅಗ್ನಿಯು ಒಬ್ಬನೇ ಆದುದರಿಂದ ವಿಭಜಾಸಿ ಎಂದು ಕ್ರಿಯಾಪದವೂ ಏಕವಚನವಾಗಿ ಹೇಳಿದೆ. ಇವು ಋಗನುಸಾರಿಯಾಗಿವೆ. ಶಾಖಾಂತರದಲ್ಲಿ ಹೇಳಿದ ವಿಭಜಾತ ಎಂಬ ಪದವು ಇಲ್ಲಿ ಅರ್ಥಸಾಮಂಜಸ್ಯವಿಲ್ಲದಿರುವುದರಿಂದ ಋಗನುಸಾರಿಯಾಗುವುದಿಲ್ಲ. (ಬಹುವಚನ ಕೂಡುವುದಿಲ್ಲ.) **ಭಾಗಂ ನೋ ಅತ್ರ**

**ವಸುಮಂತಂ ವೀತಾತ್** ಎಂದು ಮಂತ್ರದ ನಾಲ್ಕನೆಯ ಪಾದ. ಎಲೈ ಅಗ್ನಿಯೇ ನೀನು ಈ ನಮ್ಮ ಕರ್ಮದಲ್ಲಿ ನಮಗೆ ಬಹುಧನದಿಂದ ಕೂಡಿದ ಭಾಗವನ್ನು ಸಂಪಾದಿಸಿಕೊಡು ಎಂದರ್ಥ. ಇಲ್ಲಿ ಇತರ ಶಾಖೆಯವರು ವೀಥ ಎಂದು ಪಠಿಸುತ್ತಾರೆ. ಬಹುವಚನವು ಇಲ್ಲಿ ಅಸಂಗತವಾದುದರಿಂದ ಋಗನು ಸಾರಿಯಾಗುವುದಿಲ್ಲ. ಹೀಗೆಯೇ ಕೆಲವು ಸ್ಥಳಗಳಲ್ಲಿ ಶಾಖಾಂತರದ ಪಾಠವು ಸಂಗತವಾಗದಿರುವುದರಿಂದ ಅವುಗಳನ್ನು ಅಂಗೀಕರಿಸಬಾರದು.

ಅತ್ರ ತಿಷ್ಠನ್ನಾದಿತ್ಯಮುಪತಿಷ್ಠತೇ ಪರ್ಯಾವೃತೇ ಪ್ರದಕ್ಷಿಣಮಾವೃತ್ಯೈ-
ತೈಶ್ಚೈವಾಸ್ವಾಹಾಕಾರೈರೇಹ್ಯೇವಾ ೩ ಇದಂ ಮಧೂ ೩ ಇದಂ ಮಧು
ಇಮಂ ತೀವ್ರಸುತಂ ಪಿಬಾ ೩ ಇದಂ ಮಧೂ ೩ ಇದಂ ಮಧ್ವಿತಿ ಚ||

**ಮಾರ್ಜಾಲೀಯಹೋಮಾದೂರ್ಧ್ವಮುಪಸ್ಥಾನಂ ವಿಧತ್ತೇ—ಅತ್ರ ಮಾರ್ಜಾಲೀಯಸ್ಯ ಸಮೀಪೇ ತಿಷ್ಠನ್‌ಪ್ರಾಙ್ಮುಖ ಆದಿತ್ಯಮುಪತಿಷ್ಠೇತ। ಯದಾ ತ್ವಾದಿತ್ಯಃ ಪಶ್ಚಿಮಾಯಾಂ ಧಿಶಿ ಪರ್ಯಾವೃತ್ತಸ್ತದಾ ಸ್ವಯಮಪಿ ಪ್ರದಕ್ಷಿಣಾಂ ಯಥಾ ಭವತಿ ತಥಾ ಪರ್ಯಾವೃತ್ಯ ಪಶ್ಚಿಮಾಭಿ-ಮುಖ ಏತೈಃ ಪೂರ್ವೋಕ್ತೈಃ " ಅಗ್ನಿರಿವಾನಾದೃಷ್ಯಃ " ಇತ್ಯಾದಿಭಿರ್ದಶಭಿರ್ಮಂತ್ರೈರ್ಹೋಮಾ-ರ್ಥಾಪಾದಿತಸ್ವಾಹಾಕಾರರಹಿತೈರುಪತಿಷ್ಠೇತ। ಪ್ರಾಙ್ಮುಖೋಪಸ್ಥಾನೇಽಪ್ಯೇತ ಏವ ಮಂತ್ರಾಃ। ವಕ್ಷ್ಯಮಾಣಮಂತ್ರಾಂತರೇಣ ಸಹ ಸಮುಚ್ಚಯಾರ್ಥಶ್ಚಕಾರಃ। ಶಚ್ಚ ಮಂತ್ರಾಂತರಂ—" ಏಹ್ಯೇವ ಇತ್ಯಾದಿಕವಮ್। ಹೇ ಆದಿತ್ಯೈಹ್ಯೇಪಾಸ್ಮಾನ್ಪ್ರತಿ ಸರ್ವಥೈವಾಗಚ್ಛ। ದೂರಾದಾಹ್ವಾನಾರ್ಥಾ ಪ್ಲುತಿಃ ಆಗಮನಪ್ರಯೋಜನಮುಚ್ಯತೇ—ಇದಮಸ್ಮಾಭಿರ್ದೀಯಮಾನಂ ಹವಿರ್ಮಧು ಮಧುರಂ। ಪ್ಲುತಿರ್ದ್ವಿರುಕ್ತಿಶ್ಚೇತ್ಯುಭಯಮಾದರಾರ್ಥಂ। ತದೇವ ಹವಿಃ ಪುನರ್ವಿಶೇಷಾಕಾರೇಣ ನಿರ್ದಿಶ್ಯತೇ-ಇಮಂ ಪುರತೋ ವರ್ತಮಾನಂ ತೀವ್ರಸುತಂ ತೀವ್ರೇಣ ಬಹುಮಂತ್ರಸೂಕ್ತಪ್ರಯೋಗೇಣಾಭಿಷುತಂ ಸೋಮರಸಂ ಪಿಬ। ಪ್ಲುತಿಃ ಪೂರ್ವವಾಕ್ಯಾವೃತ್ತಿಶ್ಚೇತ್ಯೇತದತ್ಯಂತಮಾದರಾರ್ಥಂ। ಇತಿಶಬ್ದೋ ಮಂತ್ರಸಮಾಪ್ತ್ಯರ್ಥಃ। ಚಶಬ್ದಃ ಪೂರ್ವಮಂತ್ರೈಃ ಸಹ ಸಮುಚ್ಚಯಾರ್ಥಃ ||**

ಮಾರ್ಜಾಲೀಯ ಹೋಮವಾದ ಮೇಲೆ ಮುಂದಿನ ಉಪಸ್ಥಾನವನ್ನು ವಿವರಿಸುತ್ತಾರೆ. ಮಾರ್ಜಾಲೀಯದ ಸಮೀಪದಲ್ಲಿ ಪೂರ್ವಾಭಿಮುಖನಾಗಿದ್ದು ಸೂರ್ಯೋಪಸ್ಥಾನವನ್ನು ಮಾಡಬೇಕು. ಸೂರ್ಯನು ಪಶ್ಚಿಮ ದಿಕ್ಕಿನಲ್ಲಿ ತಿರುಗಿದ್ದರೆ ಆಗ ತಾನೂ ಪ್ರದಕ್ಷಿಣಾಕಾರವಾಗಿ ತಿರುಗಿ ಪಶ್ಚಿಮಾಭಿಮುಖವಾಗಿ ಪೂರ್ವೋಕ್ತವಾದ **ಅಗ್ನಿರಿವಾನಾಧೃಷ್ಯಃ** ಇತ್ಯಾದಿ ಹತ್ತು ಮಂತ್ರಗಳಿಂದ ಸ್ವಾಹಾಕಾರವಿಲ್ಲದೆ ಪ್ರಾರ್ಥಿಸಬೇಕು. ಪೂರ್ವಾಭಿಮುಖನಾಗಿದ್ದು ಉಪಾಸನೆಮಾಡುವಾಗಲೂ ಇದೇ ಮಂತ್ರಗಳು. **ಏಹ್ಯೇವ** ಮುಂದಿನ ಮಂತ್ರಗಳೊಡನೆ ಸಮುಚ್ಚಯ ತಿಳಿಸಲು ಚಕಾರ ಹೇಳಿದೆ. ಹೇ ಆದಿತ್ಯ=ಎಲೈ ಸೂರ್ಯನೇ, ಏಹ್ಯೇವ=ನಮ್ಮಲ್ಲಿಗೆ ನಿಶ್ಚಯವಾಗಿಯೂ ಬಾ. ದೂರದಿಂದ ಕರೆಯುವಾಗ ಪ್ಲುತ ಬರುತ್ತದೆ. ಇದಂ=ಈ ನಮ್ಮಿಂದ ಕೊಡುವ ಹವಿಸ್ಸು. ಮಧು=ಅತಿಮಧುರವಾಗಿರುತ್ತದೆ. ಆದರಾತಿಶಯ ತಿಳಿಸಲು ಪ್ಲುತಿ, ದ್ವಿರುಕ್ತಿ ಹೇಳಿದೆ. ಇಮಂ=ಈ ಮುಂದಿರುವ, ತೀವ್ರಸುತಂ=ಬಹುಮಂತ್ರ ಪ್ರಯೋಗದಿಂದ ಹಿಂಡಿರುವ ಸೋಮರಸವನ್ನು, ಪಿಬ=ಕುಡಿ. ಇತಿಶಬ್ದ ಮಂತ್ರ ಸಮಾಪ್ತಿಯನ್ನು ತಿಳಿಸುತ್ತದೆ.

ಪ್ರೇಷ್ಯಾಃ ಸಂಶಾಸ್ತಿ ಪೂರ್ಣಕುಂಭಾಸ್ತಿಸ್ರೋಽವಯವಾಃ ಷಳುತ್ತಮಾಃ ॥

ಆದಿತ್ಯೋಪಸ್ಥಾನಾದೂರ್ಧ್ವಂ ದಾಸೀವಿಷಯಂ ಪ್ರೈಷಂ ವಿಧತ್ತೇ-ವಕ್ಷ್ಯಮಾಣಕರ್ಮಾರ್ಥಂ ಯಾ ದಾಸ್ಯಾಃ ಪ್ರೇಷಣೀಯಾಸ್ತಾ ದಾಸೀಃ ಪ್ರೇಷಯೇತ್ । ತಾಶ್ಚ ದಾಸ್ಯ ಉದಕಪೂರ್ಣಕುಂಭ-ಯುಕ್ತಾ ಭವಂತಿ । ತಾಸಾಂ ದಾಸೀನಾಂ ತ್ರಿತ್ವಮಧಮಃ ಪಕ್ಷಃ । ಷಟ್‌ಸಂಖ್ಯೋತ್ತಮಃ ಪಕ್ಷಃ ॥

ಆದಿತ್ಯೋಪಸ್ಥಾನವಾದಮೇಲೆ ದಾಸೀ ವಿಷಯಕವಾದ ಪ್ರೈಷವನ್ನು ವಿಧಿಸುತ್ತಾರೆ. ಮುಂದಿನಕರ್ಮಾನುಷ್ಠಾನ ಕ್ಕೋಸ್ಕರ ಯಾವ ದಾಸಿಯರನ್ನು ಕಳುಹಿಸಬೇಕಾಗಿದೆಯೋ ಅವರನ್ನು ಕಳುಹಿಸಬೇಕು. ಆ ದಾಸಿಯರು ನೀರುತುಂಬಿದ ಕಲಶವನ್ನು ಹಿಡಿದಿರಬೇಕು. ಅವರು ಮೂವರಿರಬೇಕೆಂದು ಅಧಮಪಕ್ಷ. ಆರುಜನರಿರಬೇಕೆಂದು ಉತ್ತಮಪಕ್ಷ

ಇಮಂ ಧಿಷ್ಣ್ಯಮುದಕುಂಭಂ ಚ ತ್ರಿಃ ಪ್ರದಕ್ಷಿಣಂ ಪರಿವ್ರಜಾಥ ದಕ್ಷಿಣೈಃ ಪಾಣಿಭಿರ್ದಕ್ಷಿಣಾನೂರೂನಾಘ್ನಾನ ಏಹ್ಯೇವಾ೩ ಇದಂ ಮಧು ಇದಂ ಮಧ್ವಿತಿ ವದತ್ಯಃ ॥

ತಾಸಾಂ ಪ್ರೇಷಣೇ ಮಂತ್ರಮಾಹ—

ಹೇ ದಾಸ್ಯ ಇಮಂ ಮಾರ್ಜಾಲೀಯಾಖ್ಯಂ ಧಿಷ್ಣ್ಯಂ ತತ್ರ ಸ್ಥಾಪಿತಮೇಕಮುದಕುಂಭಂ ಚ ತ್ರಿವಾರಂ ಪ್ರದಕ್ಷಿಣೇ ಕುರುತ । ಕಿಂ ಕುರ್ವತ್ಯಃ ಪ್ರದಕ್ಷಿಣೀಕರಣಕಾಲೇ ಸ್ವಸ್ವಶಿರಸ್ಯವಸ್ಥಿತಾನು-ದಕುಂಭಾನ್ವಾಮಹಸ್ತೈರವಷ್ಟಭ್ಯ ದಕ್ಷಿಣೈಃ ಪಾಣಿಭಿಃ ಸ್ವಕೀಯಾನೂರೂಂಸ್ತಾಡಯಂತ್ಯಃ । ಪುನರಪಿ ಕಿಂ ಕುರ್ವತ್ಯಃ, ತಸ್ಮಿನ್ಕಾಲ ಏಹೀತ್ಯಾದಿ ಮಂತ್ರಭಾಗಂ ವದತ್ಯಃ ಪಠಂತ್ಯಃ । ಅಯಂ ಚ ಭಾಗೋ ಹೋತುರಾದಿತ್ಯೋಪಸ್ಥಾನೇ ವ್ಯಾಖ್ಯಾತಃ । ಅಯಂ ಚೋಕ್ತೋ ಮಂತ್ರಾರ್ಥರೂಪಃ ಪ್ರಯೋಗ-ಸ್ತೈತ್ತಿರೀಯೈರ್ವಿಸ್ಪಷ್ಟಮಾಮ್ನಾತಃ—"ಉದಕುಂಭಾನಧಿನಿಧಾಯ ದಾಸ್ಯೋ ಮಾರ್ಜಾಲೀಯಂ ಪರಿನೃತ್ಯಂತಿ ಪದೋ ನಿಘ್ನತೀರಿದಂ ಮಧು ಗಾಯಂತ್ಯಃ" ॥

ದಾಸಿಯರನ್ನು ಕಳುಹಿಸುವಾಗ ಪಠಿಸಬೇಕಾದಮಂತ್ರಗಳನ್ನು ವಿವರಿಸುತ್ತಾರೆ. ಎಲೈ ದಾಸಿಯರಾ ಇಮಂ = ಈ ಮಾರ್ಜಾಲೀಯವೆಂಬ ಧಿಷ್ಣ್ಯವನ್ನೂ, ಅಲ್ಲಿ ಸ್ಥಾಪಿತವಾದ ಪೂರ್ಣಕುಂಭವನ್ನೂ ಮೂರುಬಾರಿ ಪ್ರದಕ್ಷಿಣೆಮಾಡಿರಿ. ಪ್ರದಕ್ಷಿಣೆಮಾಡುವರೀತಿಯನ್ನು ವಿವರಿಸುತ್ತಾರೆ. ತಮ್ಮ ತಲೆಯಲ್ಲಿರುವ ಪೂರ್ಣಕುಂಭವನ್ನು ಎಡಗೈಯಿಂದ ಹಿಡಿದು ಕೊಂಡು, ದಕ್ಷಿಣೈಃ ಪಾಣಿಭಿಃ = ಬಲಗೈಯಿಂದ ತಮ್ಮ ಊರೂನಾಘ್ನಾನಾ = ತೊಡೆಗಳನ್ನು, ಹೊಡೆಯುತ್ತಾ ಏಹಿ ಇತ್ಯಾದಿ ಮಂತ್ರಭಾಗವನ್ನು ಪಠಿಸುತ್ತಾ (ಮಂತ್ರಾರ್ಥವು ಆದಿತ್ಯೋಪಸ್ಥಾನದಲ್ಲಿ ವ್ಯಾಖ್ಯಾತವಾಗಿದೆ.) ಪ್ರದಕ್ಷಿಣೆಮಾಡಬೇಕು.

ತೈತ್ತರೀಯರೂ ಈ ಮಂತ್ರಾರ್ಥರೂಪಪ್ರಯೋಗವನ್ನು ಉದಕುಂಭಾನಧಿ ನಿಧಾಯ ದಾಸ್ಯೋ ಮಾರ್ಜಾಲೀಯಂ ಪರಿನೃತ್ಯಂತಿ ಪದೋ ನಿಘ್ನತೀರಿದಂ ಮಧು ಗಾಯಂತ್ಯಃ ಎಂದು ಹೇಳುತ್ತಾರೆ.

ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪಂಚಮಾರಣ್ಯಕೇ
ಪ್ರಥಮಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪಂಚಮಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು ॥



## ಅಥ ಪಂಚಮಾರಣ್ಯಕೇ ಪ್ರಥಮಾಧ್ಯಾಯೇ ದ್ವಿತೀಯಃ ಖಂಡಃ

**ಐದನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು**

---

ಉಪಾಕೃತೇ ಸ್ತೋತ್ರೇ ತ್ರೈಧಂ ನಿನಯಾಥಾಗ್ನೀಧ್ರೇತ್ತರೇ ಚ ಮಾರ್ಜಾಲೀಯೇ ಶೇಷಮಂತರ್ವೇದಿ ॥

**ಹೇ ದಾಸ್ಯೋ ಯೂಯಮೇತಾವತ್ಕೃತ್ವಾ ತತ ಊರ್ಧ್ವಮಧ್ವರ್ಯುಣಾ ಸಾಮಗಾನ್ಪ್ರತಿ ಸ್ತೋತ್ರೇಽನುಜ್ಞಾಪಿತೇ ಸತಿ ಸ್ವಸ್ವಕುಂಭಸ್ಥಿತಮುದಕಂ ತ್ರೇಧಾ ವಿಭಜ್ಯ ಪ್ರದೇಶತ್ರಯೇ ಸಿಂಚತ । ಅಯಂ ದಕ್ಷಿಣೋ ಮಾರ್ಜಾಲೀಯ ಏಕಃ ಪ್ರದೇಶಃ । ಉತ್ತರೋ ಮಾರ್ಜಾಲೀಯೋ ದ್ವಿತೀಯಃ ಪ್ರದೇಶಃ । ಉತ್ತರಮಾರ್ಜಾಲೀಯೋ ನಾಮಾಗ್ನೀಧ್ರೀಯೋ ಧಿಷ್ಣ್ಯಃ । ತಯೋರುಭಯತ ಸಿಕ್ತಸ್ಯೋದಕಸ್ಯಾವಶಿಷ್ಟಂ ಭಾಗಂ ವೇದಿಮಧ್ಯೇ ಸಿಂಚತ । ಇತಿಶಬ್ದ ಇಮಂ ಧಿಷ್ಣ್ಯಮಿತ್ಯಾದಿ ಮಂತ್ರಸಮಾಪ್ತ್ಯರ್ಥಃ । ಅನೇನ ಮಂತ್ರೇಣ ದಾಸೀಃ ಪ್ರೇಷಿತವತೋ ಹೋತುರುತ್ತರವೇದಿಸ್ಥಾನೀಯಸ್ಯ ಚಿತ್ಯಾಗ್ನೇರವಯವೋಪಸ್ಥಾನಂ ವಿಧಾತವ್ಯಮ್ ॥**

ಎಲೈ ದಾಸಿಯರೇ ನೀವು ಈ ರೀತಿಮಾಡಿ ಆಮೇಲೆ ಅಧ್ವರ್ಯುವು ಸಾಮಗರಿಗೆ ಸ್ತೋತ್ರಮಾಡಲು ಅನುಜ್ಞಾ ಕೊಟ್ಟಮೇಲೆ ನಿಮ್ಮನಿಮ್ಮ ಕುಂಭದಲ್ಲಿರುವ ನೀರನ್ನು ಮೂರು ವಿಭಾಗಮಾಡಿಕೊಂಡು ಮುಂದೆ ಹೇಳುವ ಮೂರುಸ್ಥಳದಲ್ಲಿ ಚುಮುಕಿಸಿರಿ. ದಕ್ಷಿಣದಲ್ಲಿರುವ ಮಾರ್ಜಾಲೀಯಪ್ರದೇಶ ಒಂದು ಉತ್ತರಮಾರ್ಜಾಲೀಯಪ್ರದೇಶ ಎರಡನೆಯಪ್ರದೇಶ. ಅರ್ಥಾತ್ ಇದು ಆಗ್ನೀಧ್ರಿಯಧಿಷ್ಣ್ಯವಾಗುತ್ತದೆ. ಈ ಎರಡುಪ್ರದೇಶಗಳಲ್ಲಿ ಅಭಿಷೇಚಿಸಿದಮೇಲೆ ಉಳಿದಭಾಗವನ್ನು ವೇದಿ ಮಧ್ಯದಲ್ಲಿ ಷೇಚಿಸಿರಿ. ಇತಿಶಬ್ದವು ಧಿಷ್ಣ್ಯಂಇತ್ಯಾದಿ ಮಂತ್ರಸಮಾಪ್ತಿಯನ್ನು ತಿಳಿಸುತ್ತದೆ. ಈ ಮಂತ್ರದಿಂದ ದಾಸಿಯರನ್ನು ಕಳುಹಿಸಿದ ಹೋತೃವು ಉತ್ತರವೇದಿಸ್ಥಾನದಲ್ಲಿರುವ ಚಿತ್ಯಾಗ್ನಿಯ ಅವಯವೋಪಸ್ಥಾನವನ್ನು ಮಾಡಬೇಕು.

**ಪ್ರದಕ್ಷಿಣಮಗ್ನಿಂ ನಿಷ್ಕ್ರಮ್ಯಾಗ್ರೇಣ ಯೂಪಂ ಪುರಸ್ತಾತ್ಪ್ರತ್ಯಙ್ಮುಖ-ಸ್ತಿಷ್ಠನ್ನಗ್ನೇಃ ಶಿರ ಉಪತಿಷ್ಠತೇ ನಮಸ್ತೇ ಗಾಯತ್ರಾಯ ಯತ್ತೇ-ಶಿರ ಇತಿ ॥**

ತತ್ರ ಶಿರಸ ಉಪಸ್ಥಾನಂ ವಿಧತ್ತೇ—ಮಾರ್ಜಾಲೀಯಮಗ್ನಿಂ ಪ್ರದಕ್ಷಿಣಂ ಕುರ್ವನ್ನಿಷ್ಕ್ರ-ಮ್ಯಾಗ್ನಿಚಿತ್ಯಾಂ ಪ್ರದಕ್ಷಿಣೇನ ಗತ್ವಾ ಯೂಪಸ್ಯ ಪೂರ್ವಭಾಗೇ ಚಿತ್ಯಾಗ್ನೇಃ ಪುರಸ್ತಾತ್ಸ್ವಯಂ ಪ್ರತ್ಯಙ್ಮುಖಸ್ತಿಷ್ಠನ್ನಮಸ್ತ ಇತ್ಯಾದಿಮಂತ್ರೇಣ ತಸ್ಯಾಗ್ನೇಃ ಶಿರೋಭಾಗಮುಪತಿಷ್ಠೇತ । ಹೇ ಅಗ್ನೇ ತೇ ತವ ಗಾಯತ್ರಂ ಸಾಮ ಶಿರೋರೂಪೇಣ ವರ್ತತೇ ತಸ್ಮೈ ಗಾಯತ್ರರೂಪಾಯ ಶಿರಸೇ ತ್ವದೀ-ಯಾಯ ನಮೋಽಸ್ತು । ಗಾಯತ್ರಸಾಮ್ನಃ ಶಿರೋರೂಪತ್ವಮಧ್ವರ್ಯುಣಾ ತದುಪಸ್ಥಾನಾದವ-ಗಂತವ್ಯಮ್ । ತಥಾ ಚಾನ್ಯತ್ರಾಽಽಮ್ನಾಯತೇ—"ಗಾಯತ್ರೇಣ ಪುರಸ್ತಾದುಪತಿಷ್ಠತೇ" ಇತಿ । ನಮಸ್ತ ಇತ್ಯಾದಿಮಂತ್ರಸಮಾಪ್ತ್ಯರ್ಥ ಇತಿಶಬ್ದಃ ॥

ಮೊದಲು ಶಿರಸ್ಸಿನ ಉಪಸ್ಥಾನವನ್ನು ವಿವರಿಸುತ್ತಾರೆ- ಮಾರ್ಜಾಲೀಯದ ಅಗ್ನಿಗೆ ಪ್ರದಕ್ಷಿಣೆಮಾಡುತಾ ಹೊರಗೆ ಹೊರಟು ಅಗ್ನಿಚಿತ್ಯದ ಬಲಭಾಗದಿಂದಹೋಗಿ ಯೂಪಸ್ತಂಬದ ಪೂರ್ವಭಾಗದಲ್ಲಿ ಚಿತ್ಯಾಗ್ನಿಯ ಎದುರು ತಾನು ಪಶ್ಚಿಮಾಭಿಮುಖವಾಗಿ ನಿಂತುಕೊಂಡು ನಮಸ್ತೇ ಇತ್ಯಾದಿಮಂತ್ರದಿಂದ ಆ ಅಗ್ನಿಯ ಶಿರೋಭಾಗವನ್ನು ಪೂಜಿಸಬೇಕು ಎಲೈ ಅಗ್ನಿಯೇ ಗಾಯತ್ರವೆಂಬ ಸಾಮವು ನಿನ್ನ ಶಿರೋರೂಪವಾಗಿರುತ್ತದೆ. ಆ ಗಾಯತ್ರರೂಪವಾದ ನಿನ್ನ ಶಿರಸ್ಸಿಗೆ ನಮಸ್ಕಾರವು. ಅಧ್ವರ್ಯುವು ಹಾಗೆ ಉಪಸ್ಥಾನಮಾಡಿರುವುದರಿಂದ ಗಾಯತ್ರಸಾಮವೇ ಶಿರಸ್ಸೆಂದು ತಿಳಿಯಬೇಕು. ನಮಸ್ತ ಇತ್ಯಾದಿಮಂತ್ರಸಮಾಪ್ತಿ ಇತಿಶಬ್ದದಿಂದ ವ್ಯಕ್ತವಾಗುತ್ತದೆ.

**ತೇನೈವ ಯಥೇತಂ ಪ್ರತ್ಯೇತ್ಯ ದಕ್ಷಿಣಮುದಙ್ಮುಖಃ ಪಕ್ಷಂ ನಮಸ್ತೇ ರಾಥಂತರಾಯ ಯಸ್ತೇ ದಕ್ಷಿಣಃ ಪಕ್ಷ ಇತಿ ॥**

ದಕ್ಷಿಣಪಕ್ಷಸ್ಯೋಪಸ್ಥಾನಂ ವಿಧತ್ತೇ— ಯೇನ ಮಾರ್ಗೇಣ ಪೂರ್ವಸ್ಯಾಂ ದಿಶಿ ಗತಸ್ತೇನೈವ ಮಾರ್ಗೇಣ ಪ್ರತಿನಿವೃತ್ಯ ದಕ್ಷಿಣಸ್ಯಾಂ ದಿಶಿ ಸ್ವಯಮುದಙ್ಮುಖಸ್ತಿಷ್ಠಂಶ್ಚಿತ್ಯಾಗ್ನೇರ್ದಕ್ಷಿಣಂ ಪಕ್ಷಂ ಮಂತ್ರೇಣೋಪತಿಷ್ಠೇತ। ತೇನೈವೇತ್ಯಸ್ಯ ವ್ಯಾಖ್ಯಾನಂ ಯಥೇತಮಿತಿ, ಯಥಾಗತಂ ತಥೈವೇತ್ಯರ್ಥಃ। ದಕ್ಷಿಣಪಕ್ಷಸ್ಯ ರಥಂತರಸಾಮಸಂಬಂಧೋಽಧ್ವರ್ಯೂಪಸ್ಥಾನಾದವಗಂತವ್ಯಃ । ತಥಾ ಚ ತದುಪ-ಸ್ಥಾನಮಾಮ್ನಾಯ್—" ಬೃಹದ್ರಥಂತರಾಭ್ಯಾಂ ಪಕ್ಷೌ " ॥

ಅಗ್ನಿಯ ದಕ್ಷಿಣಪಕ್ಷದ ಉಪಸ್ಥಾನವನ್ನು ವಿವರಿಸುತ್ತಾರೆ. ಯಾವಮಾರ್ಗದಿಂದ ಪೂರ್ವದಿಕ್ಕಿನಲ್ಲಿ ಹೋದನೋ ಅದೇ ಮಾರ್ಗದಿಂದ ಹಿಂದಿರುಗಿ ದಕ್ಷಿಣದಿಕ್ಕಿನಲ್ಲಿ ಉತ್ತರಾಭಿಮುಖವಾಗಿ ನಿಂತು ಚಿತ್ಯಾಗ್ನಿಯ ದಕ್ಷಿಣಪಕ್ಷವನ್ನು ಮಂತ್ರ ದಿಂದ ಉಪಾಸಿಸಬೇಕು. ದಕ್ಷಿಣಪಕ್ಷಕ್ಕೆ ರಥಂತರಸಾಮಸಂಬಂಧವು ಹಿಂದಿನಂತೆ ಅಧ್ವರ್ಯೂಪಸ್ಥಾನದಿಂದ ತಿಳಿಯಬೇಕು. ಇದನ್ನೇ ಬೃಹದ್ರಥಂತರಾಭ್ಯಾಂ ಪಕ್ಷೌ ಎಂಬ ಉಪಸ್ಥಾನವಾಕ್ಯದಿಂದ ಹೇಳಿರುತ್ತಾರೆ.

**ಅಪರೇಣಾಗ್ನಿಪುಚ್ಛಮತಿಕ್ರಮ್ಯ ಪ್ರಾಙ್ಮುಖ ಉತ್ತರಂ ನಮಸ್ತೇ ಬೃಹತೇ ಯಸ್ತ ಉತ್ತರಃ ಪಕ್ಷ ಇತಿ ॥**

ಉತ್ತರಪಕ್ಷಸ್ಯೋಪಸ್ಥಾನಂ ವಿಧತ್ತೆ—ಪಶ್ಚಿಮದಿಗವಸ್ಥಿತಂ ಯದಗ್ನಿಪುಚ್ಛಂ ತಸ್ಯ ಪಶ್ಚಿಮ-ಭಾಗೇನ ತತ್ಪುಚ್ಛಮತಿಕ್ರಮ್ಯೋತ್ತರಪಕ್ಷಸ್ಯ ಪಶ್ಚಿಮಾಯಾಂ ದಿಶಿ ಪ್ರಾಙ್ಮುಖೋಽವಸ್ಥಾಯೋತ್ತರಂ ಪಕ್ಷಂ ಮಂತ್ರೇಣೋಪತಿಷ್ಠೇತ। ತಸ್ಯ ಪಕ್ಷಸ್ಯ ಬೃಹತ್ಸಾಮರೂಪತ್ವಂ ಪೂರ್ವವದ್ದ್ರಷ್ಟವ್ಯಂ॥

ಉತ್ತರಪಕ್ಷದ ಉಪಸ್ಥಾನವನ್ನು ವಿವರಿಸುತ್ತಾರೆ. ಪಶ್ಚಿಮದಿಕ್ಕಿನಲ್ಲಿರುವ ಅಗ್ನಿಪುಚ್ಛದ ಪಶ್ಚಿಮಭಾಗದಿಂದ ಅದನ್ನು ಅತಿಕ್ರಮಿಸಿ ಉತ್ತರಪಕ್ಷದ ಪಶ್ಚಿಮದಿಕ್ಕಿನಲ್ಲಿ ಪೂರ್ವಾಭಿಮುಖವಾಗಿದ್ದು ಉತ್ತರಪಕ್ಷವನ್ನು ಮಂತ್ರದಿಂದ ಉಪಾಸಿಸಬೇಕು. ಇದಕ್ಕೆ ಬೃಹತ್ಸಾಮರೂಪತ್ವವು ಹಿಂದಿನಂತೆ ತಿಳಿಯಬೇಕು.

**ಪಶ್ಚಾತ್ಪ್ರಾಙ್ಪುಚ್ಛಂ ನಮಸ್ತೇ ಭದ್ರಾಯ ಯತ್ತೇ ಪುಚ್ಛಂ ಯಾ ತೇ ಪ್ರತಿಷ್ಠೇತಿ ॥**

ಪುಚ್ಛಸ್ಯೋಪಸ್ಥಾನಂ ವಿಧತ್ತೇ—ಚಿತ್ಯಾಗ್ನೇಃ ಪಶ್ಚಿಮದಿಶಿ ಪ್ರಾಙ್ಮುಖೋಽವಸ್ಥಾಯ ಮಂತ್ರೇಣ ಪುಚ್ಛಮುಪತಿಷ್ಠೇತ। ಭದ್ರಸಾಮ್ನಃ ಪುಚ್ಛರೂಪತ್ವಮುಪನಿಷದಿ ಪಂಚವಿಧೋಪಾಸ-ನಾಯಾಮನುಕ್ರಮಣಾದವಗಮ್ಯತೇ। ತತ್ರ ಪಂಚಾವಯವಾ ಏವಮನುಕ್ರಮ್ಯಂತೇ—"ಗಾಯತ್ರಂ ರಥಂತರಂ ಬೃಹದ್ಭದ್ರಂ ರಾಜನಮಿತಿ ಸಾಮತಃ" (ಐ. ಆ. ೨-ಅ. ೩-ಖಂ. ೪) ಇತಿ। "ಶಿರೋ ದಕ್ಷಿಣಃ ಪಕ್ಷ ಉತ್ತರ ಪಕ್ಷಃ ಪುಚ್ಛಮಾತ್ಮೇತ್ಯಾಖ್ಯಾನಂ" (ಐ. ಆ. ೨-ಅ. ೩ ಖಂ. ೪) ಇತಿ (ಚ)। ಯತ್ತೇ ಪುಚ್ಛಂ ಯಾ ತೇ ಪ್ರತಿಷ್ಠೇತಿ ಪುಚ್ಛಸ್ಯೈವ ಪ್ರತಿಷ್ಠಾತ್ವಮುಕ್ತಂ। ಪ್ರತಿತಿಷ್ಠತ್ಯವಯವ-ಸಂಪೂರ್ತಿರ್ಭವತ್ಯನಯೇತಿ ಪ್ರತಿಷ್ಠಾ ॥

ಅಗ್ನಿಪುಚ್ಛೋಪಸ್ಥಾನವನ್ನು ವಿವರಿಸುತ್ತಾರೆ. ಚಿತ್ಯಾಗ್ನಿಯ ಪಶ್ಚಿಮ ದಿಕ್ಕಿನಲ್ಲಿ ಪೂರ್ವಾಭಿಮುಖನಾಗಿದ್ದು ಮಂತ್ರದಿಂದ ಪುಚ್ಛೋಪಸ್ಥಾನವನ್ನು ಮಾಡಬೇಕು. ಇದು ಭದ್ರಸಾಮರೂಪವೆಂದು ಉಪನಿಷತ್ತಿನಲ್ಲಿ ಹೇಳಿದ ಪಂಚ ವಿಧೋಪಾಸನೆಯಿಂದ ವ್ಯಕ್ತವಾಗುತ್ತದೆ. ಗಾಯತ್ರಂ ರಥಂತರಂ ಬೃಹದ್ಭದ್ರಂ ರಾಜನಮಿತಿ ಸಾಮತಃ(ಐ-ಆ-೨-೩-೪) ಎಂದು ಪಂಚಾವಯವಾನುಕ್ರಮ ಹೇಳಿದೆ. ಶಿರೋ ದಕ್ಷಿಣಃ ಪಕ್ಷ ಉತ್ತರಃ ಪಕ್ಷಃ ಪುಚ್ಛಮಾತ್ಮೇತ್ಯಾಖ್ಯಾನಂ (ಐ-ಆ-೨-೩-೪) ಎಂದು ಕ್ರಮವಾಗಿ ತಿಳಿಯಬೇಕು. ಅವಯವಸಂಪೂರ್ತಿ ಇದರಿಂದ ಆಗುವುದರಿಂದ ಪುಚ್ಛವೇ ಪ್ರತಿಷ್ಠಾ ಎಂದು ತಿಳಿಯಬೇಕು.

**ದಕ್ಷಿಣತಃ ಪುಚ್ಛಸ್ಯಾಽಽತ್ಮಾನಂ ನಮಸ್ತೇ ರಾಜನಾಯ ಯಸ್ತ ಆತ್ಮೇತಿ ॥**

ಚಿತ್ಯಾಗ್ನೇರ್ಮಧ್ಯಶರೀರಸ್ಯೋಪಸ್ಥಾನಂ ವಿಧತ್ತೇ—ಪುಚ್ಛಸ್ಯ ದಕ್ಷಿಣಭಾಗೇ ಪ್ರಾಙ್ಮುಖಃ ಸ್ಥಿತ್ವಾ ಮಧ್ಯದೇಹಮುಪತಿಷ್ಠೇತ। ಆತ್ಮಶಬ್ದೋ ಮಧ್ಯದೇಹಭಾಗಂ ಬ್ರೂತೇ। "ಮಧ್ಯಂ ಹ್ಯೇಷಾ-ಮಂಗಾನಾಮಾತ್ಮಾ" (ಐ. ಆ. ೨-ಅ. ೩-ಖಂ. ೫) ಇತಿ ಶ್ರುತೇಃ। ರಾಜನಸಾಮ್ನೋ ಮಧ್ಯ-ದೇಹರೂಪತ್ವಂ ಪೂರ್ವವದ್ದ್ರಷ್ಟವ್ಯಮ್ ॥

ಚಿತ್ಯಾಗ್ನಿಯ ಮಧ್ಯಶರೀರದ ಉಪಸ್ಥಾನವನ್ನು ವಿವರಿಸುತ್ತಾರೆ. ಪುಚ್ಛದ ದಕ್ಷಿಣ ಭಾಗದಲ್ಲಿ ಪೂರ್ವಾಭಿಮುಖವಾಗಿ ಇದ್ದು ಮಧ್ಯ ದೇಹವನ್ನು ಉಪಾಸಿಸಬೇಕು. ಹಿಂದೆ ಹೇಳಿದ ಆತ್ಮಶಬ್ದವೇ ಮಧ್ಯಭಾಗವನ್ನು ತಿಳಿಸುತ್ತದೆ. ಶ್ರುತಿಯಲ್ಲಿಯೂ **ಮಧ್ಯಂ ಹ್ಯೇಷಾಮಂಗಾನಾಮಾತ್ಮಾ** ಎಂದು ಹೇಳಿದೆ. ಇದು ರಾಜನಸಾಮರೂಪವೆಂದು ತಿಳಿಯಬೇಕು.

**ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪಂಚಮಾರಣ್ಯಕೇ ಪ್ರಥಮಾಧ್ಯಾಯೇ ದ್ವಿತೀಯಃ ಖಂಡಃ**

**ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪಂಚಮಾರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವು ॥**

---

# ಅಥ ಪಂಚಮಾರಣ್ಯಕೇ ಪ್ರಥಮಾಧ್ಯಾಯೇ ತೃತೀಯಃ ಖಂಡಃ

**ಐದನೆಯ ಆರಣ್ಯದ ಮೊದಲನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು**

---

**ಯಥೇದಂ ಸದಃ ಪ್ರಸರ್ಪತಿ ॥**

ಚಿತ್ಯಾಗ್ನ್ಯುಪಸ್ಥಾನಾಂತರಂ ಹೋತುಃ ಸದಃಪ್ರವೇಶಂ ವಿಧತ್ತೇ— ಪೂರ್ವಂ ಚಿತ್ಯಾಗ್ನಿಸಮೀಪೇ ಮಾರ್ಜಾಲೀಯಾದ್ಯೇನ ಪ್ರಕಾರೇಣ ಗತಂ ತಸ್ಮಿನ್ನೇವ ಮಾರ್ಗೇ ಪ್ರತ್ಯಾವೃತ್ಯ ಮಾರ್ಜಾಲೀಯಂ ವಾಮಭಾಗೇಽವಸ್ಥಾಪ್ಯ ಸದಃ ಪ್ರವಿಶೇತ್ ॥

ಚಿತ್ಯಾಗ್ನಿಯ ಉಪಸ್ಥಾನವಾದ ಮೇಲೆ ಹೋತೃವಿಗೆ ಸದಃ ಪ್ರವೇಶವನ್ನು ವಿಧಿಸುತ್ತಾರೆ. ಪೂರ್ವದಲ್ಲಿ ಚಿತ್ಯಾಗ್ನಿಸಮೀಪದಲ್ಲಿರುವ ಮಾರ್ಜಾಲೀಯದಿಂದ ಯಾವ ರೀತಿಯಾಗಿ ಹೋಗಿರುವನೋ ಅದೇ ಮಾರ್ಗದಿಂದ ಹಿಂದಿರುಗಿ ಬಂದು ಮಾರ್ಜಾಲೀಯವನ್ನು ಎಡಭಾಗದಲ್ಲಿ ಬಿಟ್ಟು ಸದಸ್ಸನ್ನು ಪ್ರವೇಶಿಸಬೇಕು.

**ಪುರಸ್ತಾತ್ಪ್ರೇಙ್ಖ ಉಪಕ್ಲೃಪ್ತೋ ಭವತಿ ॥**

ದೋಲಾಕಲ್ಪನಂ ವಿಧತ್ತೇ— ಹೋತುಃ ಸದಃಪ್ರವೇಶಾತ್ಪೂರ್ವಸ್ಮಿನ್ನೇವ ಕಾಲೇ ಪ್ರೇಙ್ಖೋ ದೋಲಾಽಧ್ವರ್ಯುಭಿಃ ಸಂಪಾದನೀಯಾ ಭವತಿ ॥

ದೋಲಾಕಲ್ಪನವನ್ನು ವಿವರಿಸುತ್ತಾರೆ. ಹೋತೃವು ಸದಸ್ಸಿಗೆ ಪ್ರವೇಶಿಸಬೇಕಾದರೆ ಮೊದಲೇ ಅಧ್ವರ್ಯುಗಳು ಪ್ರೇಂಖವನ್ನು ಅಂದರೆ ತೊಟ್ಟಲನ್ನು ಸಂಪಾದಿಸಿರಬೇಕು.

**ಸ್ಥೂಣೇ ರಜ್ಜೂ ವೀವಧ ಇತ್ಯೇತತ್ಪ್ರಕ್ಷಾಲ್ಯ ತೀರ್ಥೇನ ಪ್ರಪಾದ್ಯೋತ್ತ-ರೇಣಾಽಽಗ್ನೀಧ್ರೀಯಂ ಪರಿವ್ರಜ್ಯ ಪೂರ್ವಯಾ ದ್ವಾರಾ ಸದಃ ಸರ್ವಾನ್ಧಿಷ್ಣ್ಯಾನುತ್ತರೇಣ ॥**

ದೋಲಾಸಾಧನಾನಾಂ ಸ್ಥೂಣಾದೀನಾಂ ಸದಸ್ಯಾನಯನಂ ವಿಧತ್ತೇ— ಸ್ಥೂಣೇ ದ್ವೌ ಸ್ತಂಭೌ, ರಜ್ಜೂದ್ವಯಂ ಫಲಕಬಂಧನಕ್ಷಮಂ, ವೀವಧಃ ಸ್ತಂಭಯೋರುಪರಿ ತಿರ್ಯಗವಸ್ಥಾಪನೀಯಃ ಕಾಷ್ಠವಿಶೇಷಃ, ಏತತ್ತ್ರಿತಯಂ ಮಲಾಪನಯನಾಯ ಪ್ರಕ್ಷಾಲ್ಯ ತೀರ್ಥಶಬ್ದವಾಚ್ಯೇನ ಮಾರ್ಗೇಣ ನಯೇತ್ । ಉತ್ಕರ-ಚಾತ್ವಾಲಯೋರ್ಮಧ್ಯದೇಶಸ್ತೀರ್ಥಮ್, " ಏತತ್ತೀರ್ಥಮಿತ್ಯಾಚಕ್ಷತೇ " ಇತಿ ಪರಿಭಾಷಿತತ್ವಾತ್ । ತತ ಆಗ್ನೀಧ್ರೀಯಧಿಷ್ಣ್ಯವಾಮಭಾಗೇಽವಸ್ಥಾಪ್ಯೋತ್ತರಭಾಗೇ ತತ್ಸರ್ವಮಾನೀಯ ಪೂರ್ವದ್ವಾರೇಣ ಸದಃಪ್ರವೇಶ್ಯ ಸದಸೋ ಮಧ್ಯೇ ಸರ್ವಾನ್ಧಿಷ್ಣ್ಯಾನ್ ವಾಮಭಾಗೇ ಕೃತ್ವಾ ತೇಷಾಮುತ್ತರದೇಶೇನಾನೀಯ ಹೋತ್ರೀಯ-ಧಿಷ್ಣ್ಯಸ್ಯ ಪಶ್ಚಾದ್ಭಾಗೇಽವಸ್ಥಾಪಯೇತ್ ।

ದೋಲಾಸಾಧನಗಳಾದ ಸಲಾಕೆ ಮುಂತಾದವುಗಳನ್ನು ಸದಸ್ಸಿಗೆತರುವುದನ್ನು ವಿವರಿಸುತ್ತಾರೆ. ಎರಡು ಕಂಬಗಳು ಹಲಗೆಯನ್ನು ಕಟ್ಟಲು ಉಚಿತವಾದ ಎರಡು ಹಗ್ಗಗಳು, ಎರಡು ಕಂಬಗಳಮೇಲೆ ಅಡ್ಡವಾಗಿ ಇಡುವ ಒಂದು ಮರ. ಈ ಮೂರನ್ನೂ ಕಶ್ಮಲವನ್ನು ಹೋಗಲಾಡಿಸಲು ಚನ್ನಾಗಿ ತೊಳೆದು ತೀರ್ಥವೆಂಬ ಮಾರ್ಗದಿಂದ ಒಯ್ಯಬೇಕು. **ಏತ ತ್ತೀರ್ಥಮಿತ್ಯಾಚಕ್ಷತೇ** ಎಂಬ ಪರಿಭಾಷೆಯಿಂದ ಉತ್ಕರಚಾತ್ವಾಲಗಳ ಮಧ್ಯದೇಶಕ್ಕೆ ತೀರ್ಥವೆಂಬ ಹೆಸರು. ಆಮೇಲೆ ಅವುಗಳನ್ನು ಅಗ್ನೀಧ್ರೀಯಸ್ಥಾನದ ವಾಮಭಾಗದಲ್ಲಿ ಒಂದುಸಾರಿ ಇಟ್ಟು ಆಮೇಲೆ ಉತ್ತರಭಾಗದಲ್ಲಿ ಎಲ್ಲವನ್ನೂ ಒಯ್ದು ಪೂರ್ವದ್ವಾರದಿಂದ ಸದಸ್ಸಿಗೆ ತಂದು ಸದಸ್ಸಿನ ಮಧ್ಯದಲ್ಲಿ ಎಲ್ಲಾಧಿಷ್ಣ್ಯಗಳನ್ನು ವಾಮ ಭಾಗದಲ್ಲಿರುವಂತೆ ಮಾಡಿ ಅವುಗಳನ್ನು ಉತ್ತರಪ್ರದೇಶದಿಂದ ಒಯ್ದು ಹೋತ್ರೀಯಧಿಷ್ಣ್ಯದ ಹಿಂಭಾಗದಲ್ಲಿ ಇಡಬೇಕು.

**ಔದುಂಬರಾಣಿ ಕಾಷ್ಠಾನಿ ಪ್ರೇಂಖಸ್ಯ ಭವಂತಿ ಪಾಲಾಶಾನಿ ಮಿಶ್ರಾಣಿ ವಾ॥**

ತತ್ರ ಕಾಷ್ಠಾನಾಂ ವೃಕ್ಷವಿಶೇಷಂ ವಿಧತ್ತೇ— ಸ್ಪಷ್ಟೋಽರ್ಥಃ ॥

ದೋಲಾರಚನೆಗೆ ಬೇಕಾದ ಕಾಷ್ಠವನ್ನು ಯಾವ ಮರದಿಂದ ಮಾಡಬೇಕೆಂದು ವಿವರಿಸುತ್ತಾರೆ. ಕೆಲವರು ಓದುಂಬರದ ಮರದಿಂದ ಮಾಡಬೇಕೆಂದೂ, ಇನ್ನು ಕೆಲವರು ಪಲಾಶದಿಂದ ಮಾಡಬೇಕೆಂದೂ, ಕೆಲವರು ಇವೆರಡರ ಮಿಶ್ರಣದಿಂದ ರಚಿಸಬೇಕೆಂದೂ ಹೇಳುತ್ತಾರೆ.

**ತ್ರೀಣಿ ಫಲಕಾನ್ಯುಭಯತಸ್ತಷ್ಟಾನಿ ದ್ವೇ ವಾ ಸೂಚ್ಯಶ್ಯ ತಾವತ್ಯಃ ॥**

ದೋಲಾಯಾಂ ಹೋತುರಾರೋಹಣಾಯ ಫಲಕಾನಿ ವಿಧತ್ತೇ—ಅಧಸ್ತಾದುಪರಿಷ್ಟಾಚ್ಚ ಫಲಕಾನಾಂ ಸಮ್ಯಕ್ತಕ್ಷಣಂ ಕರ್ತವ್ಯಮ್ । ತಾನಿ ಫಲಕಾನಿ ತ್ರೀಣೀತ್ಯೇಕಃ ಪಕ್ಷಃ । ದ್ವೇ ಇತಿ ಪಕ್ಷಾಂತರಮ್ । ಸೂಚ್ಯಃ ಫಲಕಸಂಧಾನಹೇತವಃ ಸೂಕ್ಷ್ಮಾಗ್ರಾಃ ಕಾಷ್ಠವಿಶೇಷಾಃ । ತಾಶ್ಚ ಫಲಕವತ್ತಿಸ್ರೋ ದ್ವೇ ವಾ ॥

ತೊಟ್ಟಿಲಿನಲ್ಲಿ ಹೋತೃವು ಹತ್ತಲು ಹಲಗೆಗಳನ್ನು ವಿವರಿಸುತ್ತಾರೆ. ಹಲಗೆಗಳ ಎರಡು ಬದಿಗಳಿಲ್ಲಿಯೂ ಚನ್ನಾಗಿ ಕೆತ್ತಿ ನುಣುಪಾಗಿಮಾಡಬೇಕು. ಅಂತಹ ಹಲಗೆಗಳು ಮೂರು ಇರಬೇಕೆಂದು ಒಂದು ಪಕ್ಷ. ಇನ್ನು ಕೆಲವರು ಎರಡಿರಬೇಕೆಂದು ಹೇಳುತ್ತಾರೆ. ಈ ಹಲಗೆಗಳನ್ನು ಸೇರಿಸುವುದಕ್ಕೋಸ್ಕರ ಚೂಪಾದ ತುದಿಯುಳ್ಳ ಕೀರುಗಳೂ ಹಿಂದಿನಂತೆ ಮೂರು ಅಥವಾ ಎರಡು ಇರಬೇಕು.

**ಇಷುಮಾತ್ರಃ ಪ್ರಾಙ್ಪ್ರೇಙ್ಖ್ಯೋ ನಿಮುಷ್ಟಿಕಸ್ತಿರ್ಯಙುದಗಗ್ರಃ ಪ್ರಾಗಗ್ರಾಭ್ಯಾಂ ಸೂಚೀಭ್ಯಾಂ ಸಮುತಃ ॥**

ಫಲಕಸಂಧಾನೇನ ನಿಷ್ಪನ್ನಸ್ಯ ಸ್ವರೂಪಂ ವಿಶದಯತಿ— ಪ್ರೇಙ್ಖಸ್ಯ (ಪ್ರಾಙ್) ಪಾಕ್‌ಪಶ್ಚಿಮ-ವಿಸ್ತಾರೋ ಪ್ರಾಣಮಾತ್ರಃ । ತಿರ್ಯಙ್‌ದಕ್ಷಿಣೋತ್ತರವಿಸ್ತಾರೋ ನಿಮುಷ್ಟಿನ್ಯೂನಬಾಣಮಾತ್ರಃ । ಸ ಚ ಪ್ರಾಗಗ್ರಾಭ್ಯಾಂ ಸೂಚೀಶಬ್ದಾಭಿಧೇಯಾಭ್ಯಾಂ ಫಲಕಸಂಧಾನಹೇತುಭ್ಯಾಂ ಸಮುತಃ ಸಂಯುಕ್ತಃ ಕಾರ್ಯಃ ।

ಹಲಗೆಗಳನ್ನು ಜೋಡಿಸಿದಾಗ ಆಗುವ ಸ್ವರೂಪವನ್ನು ವಿವರಿಸುತ್ತಾರೆ. ಪ್ರೇಂಖದ ಪೂರ್ವಪಶ್ಚಿಮವಿಸ್ತಾರ ಪ್ರಾಣಮಾತ್ರವಿರಬೇಕು. ಅಡ್ಡ ದಕ್ಷಿಣೋತ್ತರವಿಸ್ತಾರವು ಒಂದು ಮುಷ್ಟಿಗೆ ಕಡಿಮೆಯಾದ ಬಾಣಪರಿಮಾಣವಿರಬೇಕು. ಅದನ್ನು ಉತ್ತರದಲ್ಲಿ ಅಗ್ರವಿರುವಂತೆಯೂ, ದಕ್ಷಿಣದಲ್ಲಿ ಬುಡವಿರುವಂತೆಯೂ ಸ್ಥಾಪಿಸಬೇಕು. ಅದರ ಬುಡ ಮತ್ತು ತುದಿಗಳಲ್ಲಿ ಸೂಚೀ ಎಂಬ ಕೀಲುಗಳಿಂದ ಚನ್ನಾಗಿಸೇರಿಸಬೇಕು.

**ದಕ್ಷಿಣೋತ್ತರೇ ಸ್ಥೂಣೇ ನಿಖಾಯಾಭಿತೋ ಹೋತೃಷದನಂ ವೀವಧಮುತ್ಯಾದಧಾತ್ಯಾಸ್ಯಸಂಮಿತಂ ಕರ್ತುಃ ॥**

ದೋಲಾಯಾಃ ಸ್ಥಾಪನಪ್ರಕಾರಂ ವಿಧತ್ತೇ— ಹೋತಾ ಸೀದತಿ ಯಸ್ಮಿನ್ಧಿಷ್ಣ್ಯೇ ಸ್ಥಾನೇ ತದ್ಧೋತೃಷದನಂ ತಸ್ಯ ದಕ್ಷಿಣೋತ್ತರಯೋಃ ಸ್ತಂಭದ್ವಯಂ ನಿಖನೇತ್ । ತಯೋಃ ಸ್ತಂಭಯೋರುಪರಿ ಚತುರರತ್ನಿಮಾತ್ರಂ ವೀವಧನಾಮಕಂ ತಿರ್ಯಕ್ಕಾಷ್ಠಂ ಸ್ಥಾಪಯೇತ್ । ತಚ್ಚ ಕಾಷ್ಠಂ ಕರ್ತುರ್ಯ-ಜಮಾನಸ್ಯೋತ್ಥಿತಸ್ಯ ಮುಖಸಂಮಿತಂ ಯಥಾ ಭವತಿ ತಥಾ ಸ್ತಂಭಸ್ಯ ನಿಖಾತಮಾಗಾದೂರ್ಧ್ವಂ ಯಜಮಾನಮುಖಪರಿಮಿತೇ ಸ್ತಂಭಾಗ್ರೇ ಸ್ಥಾಪಯೇತ್ ॥

ಡೋಲಾಸ್ಥಾಪನರೀತಿಯನ್ನು ವಿವರಿಸುತ್ತಾರೆ. ಹೋತೃ ಯಾವಸ್ಥಾನದಲ್ಲಿ ಕುಳಿತಿರುವನೋ ಅದಕ್ಕೆ ಹೋತೃಷದನವೆಂದು ಹೆಸರು. ಅದರ ದಕ್ಷಿಣೋತ್ತರಸ್ಥಾನದಲ್ಲಿ ಎರಡು ಕಂಬಗಳನ್ನು ನೆಡಬೇಕು. ಆ ಎರಡುಕಂಬಗಳಮೇಲೆ ನಾಲ್ಕು ಅರತ್ನಿ(ಮೊಳ) ಪ್ರಮಾಣದ ಅಡ್ಡಮರವನ್ನು ಇಡಬೇಕು. ಕಂಬಗಳು ಎತ್ತಿದಮುಖವುಳ್ಳ ಯಜಮಾನನ ಪರಿಮಾಣದಷ್ಟು ಎತ್ತರವಾಗಿರಬೇಕು.

ಕುಷ್ಠಾಸು ಚ್ಛಿದ್ರಾಣಿ ಪ್ರೇಙ್ಖಸ್ಯ ಭವಂತಿ ರಜ್ಜುಭ್ಯಾಮೂರ್ಧ್ವಮುದ್ವ-
ಯತಿ ದಕ್ಷಿಣತೋ ದಕ್ಷಿಣಯೋತ್ತರತಃ ಸವ್ಯಯಾ ದಾರ್ಭ್ಯೇ
ತ್ರಿಗುಣೇ ಸ್ಯಾತಾಂ ಸವ್ಯದಕ್ಷಿಣೇ ಪಂಚವ್ಯಾಯಾಮೇ ದ್ವಿಗುಣೇ
ವೀವಧೇ ತ್ರಿಃ ಪ್ರದಕ್ಷಿಣಂ ಪರ್ಯಸ್ಯೋರ್ಧ್ವಗ್ರಂಥಿಂ ನಿಷ್ಟರ್ಕ್ಯಂ
ಬಧ್ನಾತಿ ||

ತತ್ರ ಫಲಕಬಂಧನಪ್ರಕಾರಂ ದರ್ಶಯತಿ— ಕುಷ್ಠಾಃ ಫಲಕಸ್ಯ ಚತ್ವಾರಃ ಕೋಣವಿ-ಶೇಷಾಃ | ಪ್ರೇಙ್ಖಸ್ಯ ಫಲಕಸ್ಯ ತೇಷು ಚತುರ್ಷು ಕೋಣೇಷು ಚ್ಛಿದ್ರಾಣಿ ಕುರ್ಯಾತ್ | ದಕ್ಷಿಣಚ್ಛಿದ್ರದ್ವಯೋಃ ರಜ್ಜ್ವಾ ದ್ವಿಗುಣೀಕೃತಾಯಾ ಏಕಸ್ಯಾ ಅಗ್ರದ್ವಯಂ ಸ್ಯೂತ್ವಾ ತಾಂ ರಜ್ಜು-ಮೂರ್ಧ್ವಮುನ್ನಮಯೇತ್ | ಏವಮುತ್ತರಚ್ಛಿದ್ರದ್ವಯೇ ರಜ್ಜ್ವಂತರಂ ದ್ರಷ್ಟವ್ಯಮ್ | ತತ್ರ ದಕ್ಷಿಣರಜ್ಜುಃ ಪ್ರದಕ್ಷಿಣಾವೃತ್ಯಾ ಕಾರ್ಯಾ | ಉತ್ತರರಜ್ಜುಃ ಸವ್ಯಾವೃತ್ಯಾ ಕಾರ್ಯಾ | ತೇ ಚ ರಜ್ಜೂ ದರ್ಭಮಯ್ಯೌ ತ್ರೈಗುಣ್ಯಯುಕ್ತೇ ಸವ್ಯದಕ್ಷಿಣಾವೃತ್ತೌ ಪಂಚವ್ಯಾಯಾಮದೀರ್ಘೇ ಕೃತ್ವಾ ದ್ವಿಗುಣೇ ಯಥಾ ಭವತಿ ತಥಾ ಬಧ್ನೀಯಾತ್ | ಪಂಚವ್ಯಾಯಾಮಾ ರಜ್ಜುರ್ದ್ವಿಗುಣೀಕೃತಾ ಸಾರ್ಧದ್ವಿ-ಯಾಮಾ ಭವತಿ | ತಸ್ಯಾಶ್ಚ ಮಧ್ಯಭಾಗೇ ಬಾಣಮಾತ್ರಂ ಫಲಕಸ್ಯಾಧಸ್ತಾದುಪಕ್ಷಣೀಮ್ | ಅವಶಿಷ್ಟೋಂಶಶ್ಛಿದ್ರದ್ವಯಾದೂರ್ಧ್ವಮುನ್ನೀತ ಉಪರಿತನೇ ವೀವಧೇ ತದಗ್ರಮೇಕೈಕಂ ತ್ರಿಃ ಪ್ರದಕ್ಷಿಣೀಕೃತ್ಯಾಗ್ರದ್ವಯೇನ ಸಂಯುಕ್ತೇನೋರ್ಧ್ವಗ್ರಂಥಿಃ ಕರ್ತವ್ಯಃ | ಸ ಚ ನಿಷ್ಟರ್ಕ್ಯಃ | ಶಿಖಾಬಂಧನವತ್ಸಹಸಾ ಮೋಚಿತುಂ (ಮೋಚಯಿತುಂ) ಶಕ್ಯತ್ವಂ ನಿಷ್ಟರ್ಕ್ಯತ್ವಂ ||

ಅಲ್ಲಿ ಹಲಗೆಗಳನ್ನು ಕಟ್ಟುವರೀತಿಯನ್ನು ವಿವರಿಸುತ್ತಾರೆ. ಕುಷ್ಠಾಃ ಅಂದರೆ ಹಲಗೆಯ ನಾಲ್ಕು ಕೋಣಗಳು. ಪ್ರೇಂಖದ ಹಲಗೆಯ ಆ ನಾಲ್ಕುಕೋಣಗಳಲ್ಲಿ ರಂಧ್ರಗಳನ್ನು ಮಾಡಬೇಕು. ದಕ್ಷಿಣದ ಎರಡು ತೂತುಗಳಲ್ಲಿ ಎರಡಾಗಿ ಹೊಸೆದು ಒಂದು ಹಗ್ಗವನ್ನು ಪೋಣಿಸಿ ಮೇಲಕ್ಕೆ ಎಳೆಯಬೇಕು. ಹಾಗೆಯೇ ಉತ್ತರದ ಎರಡುರಂಧ್ರಗಳಲ್ಲಿಯೂ ಮಾಡಬೇಕು. ಅಲ್ಲಿ ದಕ್ಷಿಣದ ಹಗ್ಗವು ಪ್ರದಕ್ಷಿಣಾಕಾರವಾಗಿಯೂ, ಉತ್ತರದ ಹಗ್ಗವು ಸವ್ಯ (ಅಪ್ರದಕ್ಷಿಣ)ವಾಗಿಯೂ ಹೊಸೆದಿರಬೇಕು. ಅವುಗಳು ದರ್ಭೆಯಿಂದ ಮಾಡಿರುವುದಲ್ಲದೆ ಮೂರುಎಳೆಯಿಂದಕೂಡಿದ್ದು ಸವ್ಯದಕ್ಷಿಣಾವೃತ್ತಿಯಿಂದ ಸೇರಿ ಐದುಮಾರುಉದ್ದವಿದ್ದು ಎರಡುಚಿಡಿಯಾಗಿಮಾಡಿ ಕಟ್ಟಬೇಕು. ಇಚ್ಚಿಡಿಯಾದಾಗ ಎರಡೂವರೆಮೂರು ಆಗುತ್ತದೆ. ಅದರ ಮಧ್ಯಭಾಗದತ ಬಾಣಪರಿಮಾಣದಷ್ಟು ಹಲಗೆಯ ಹಿಂಬದಿಯಲ್ಲಿರುವಂತೆಯೂ, ಉಳಿದ ಭಾಗವನ್ನು ರಂಧ್ರಗಳಿಂದ ಮೇಲಕ್ಕೆ ಎಳೆದು ಮೇಲಿನ ಅಡ್ಡೆಮರದಲ್ಲಿ ಅದರ ತುದಿಯನ್ನು ಜಡೆಯಂತೆ ಪ್ರದಕ್ಷಿಣಾಕಾರವಾಗಿ ಹೆಣೆದು ಕಟ್ಟಿ ಮೇಲೆ ಗಂಟು ಇರುವಂತೆ ಮಾಡಬೇಕು. ಜುಟ್ಟನ್ನು ಕಟ್ಟಿದಂತೆ ಆ ಗಂಟು ಬೇಗ ಬಿಚ್ಚುವಂತಿದ್ದು ಶಿಥಿಲವಾಗಿರಬೇಕು. (ಒಯ್‌ಗಂಟು)

ಶಾಖಾಭಿರ್ಬೃಸೀಭಿರ್ವಾ ಪರ್ಯೃಷಂತ್ಯಪ್ರಕಂಪಿ ||

ನಿಖಾತಯೋಃ ಸ್ತಂಭಯೋರ್ದೃಢೀಕರಣಂ ವಿಧತ್ತೇ—ಯಥಾ ಸ್ತಂಭಸ್ಯ ಕಂಪೋ ನ ಭವತಿ ತಥಾ ಪರ್ಯೃಷಂತಿ ಸ್ತಂಭಮೂಲಸ್ಯ ಪರಿತಸ್ತಸ್ಮಿನ್ನವಟೇ ಪಾಂಸುಂ ಪ್ರಕ್ಷಿಪಂತಿ | ಹಸ್ತೇನ

ಪ್ರಕ್ಷೇಪಣಂ ನ ಕರ್ತವ್ಯಂ ಕಿಂ ತು ವೃಕ್ಷಶಾಖಾಭಿರ್ಬೃಸೀಭಿರ್ವಾ ಪಾಂಸೂನ್ಪ್ರಯುರ್ಹೇತ್ । ಅಲ್ಪ-ಕಟವಿಶೇಷಾ ಬೃಸ್ಯಃ ॥

ಹೂತಿರುವ ಎರಡು ಮರಗಳನ್ನು ಚನ್ನಾಗಿ ನಿಂತಿರುವಂತೆ ಮಾಡುವ ರೀತಿಯನ್ನು ವಿವರಿಸುತ್ತಾರೆ ಕಂಬಗಳು ಅಲುಗಾಡಬಾರದೆಂದು ಆ ಕಂಬಗಳ ಬುಡದಲ್ಲಿರುವ ಹಳ್ಳಕ್ಕೆ ಧೂಳುಮಣ್ಣನ್ನು ತುಂಬುತ್ತಾರೆ. ಆದರೆ ಕೈಯಿಂದತಳ್ಳ ಬಾರದು. ಮರದಕೊಂಬೆಗಳಿಂದ ಅಥವಾ ಬೃಸಿಗಳಿಂದ ಮಣ್ಣನ್ನು ತುಂಬ ಬೇಕು. ತಪಸ್ವಿಗಳು ಕುಳಿತುಕೊಳ್ಳುವ ಚಿಕ್ಕಚಾಪೆ ಆಸನಕ್ಕೆ ಬೃಸೀ ಎಂದು ಹೆಸರು. ಆದನ್ನು ಬಿದಿರಿನಿಂದ ಅಥವಾ ಹುಲ್ಲು ಬಳ್ಳಿ ಮೊದಲಾದುವುಗಳಿಂದ ಮಾಡುತ್ತಾರೆ.

**ಚತುರಂಗುಲೇನೈಷ ವಿಭೂಮಃ ಪ್ರೇಙ್ಖಃ ಸ್ಯಾನ್ಮುಷ್ಟಿಮಾತ್ರೇಣ ವಾ ॥**

ಫಲಕಭೂಮ್ಯೋರ್ಮಧ್ಯೇ ವ್ಯವಧಾನಪ್ರಮಾಣಂ ದರ್ಶಯತಿ — ಭೂಮೇರ್ವಿಶ್ಲಿಷ್ಟೋ ವಿಭೂಮೋಽಂಗುಲಿಚತುಷ್ಟಯಮಿತ್ಯೇಕಃ ಪಕ್ಷಃ । ತಸ್ಯೋಪರ್ಯೂರ್ಧ್ವಾಂಗುಷ್ಠಾಯುಕ್ತಾ ಮುಷ್ಟಿರ್ಭವತಿ ತಾವದ್ವ್ಯವಧಾನಮಿತ್ಯಪರಃ ಪಕ್ಷಃ ॥

ಹಲಗೆಗಳು ಮತ್ತು ಭೂಮಿಗೆ ಎಷ್ಟು ವ್ಯವಧಾನವಿರಬೇಕೆಂದು ವಿವರಿಸುತ್ತಾರೆ. ಭೂಮಿಯಿಂದ ನಾಲ್ಕು ಅಂಗಲಿ ಮೇಲೆ ಹಲಗೆ ಇರಬೇಕೆಂದು ಕೆಲವರ ಮತ. ಇನ್ನು ಕೆಲವರು ಮೇಲಕ್ಕೆ ಎತ್ತಿದ ಅಂಗುಷ್ಟವುಳ್ಳ ಮುಷ್ಟಿಯ ಪ್ರಮಾಣದಷ್ಟು ಬಿಟ್ಟಿರಬೇಕೆಂದು ಹೇಳುತ್ತಾರೆ.

**ದಕ್ಷಿಣತ ಉದಾಹಿತತರಃ ಸಮೋ ವಾ ॥**

ದಕ್ಷಿಣಭಾಗೇ ಫಲಕಸ್ಯೌನ್ನತ್ಯಂ ವಿಕಲ್ಪೇನ ವಿಧತ್ತೇ—ಹೋತೃಧಿಷ್ಣ್ಯಸ್ಯ ಪಶ್ಚಾದ್ಭಾಗೇ ಲಂಬಮಾನಸ್ಯ ಫಲಕಸ್ಯ ಚ ವ್ಯವಧಾನೇ ಪ್ರಮಾಣಂ ದರ್ಶಯತಿ—

ದಕ್ಷಿಣಭಾಗದಲ್ಲಿ ಹಲಗೆಯ ಎತ್ತರಪ್ರಮಾಣವನ್ನು ವಿಕಲ್ಪದಿಂದ ವಿಧಿಸುತ್ತಾರೆ,

**ಪದಮಾತ್ರೇ ಧಿಷ್ಣ್ಯಾತ್ ॥**

ಧಿಷ್ಣ್ಯಾತ್ಪಶ್ಚಿಮಭಾಗೇ ಪದಮಾತ್ರೇ ಫಲಕಮವತಿಷ್ಠತ ಇತಿ ಶೇಷಃ ॥

ಹೋತೃಧಿಷ್ಣ್ಯ (ಸ್ಥಾನ) ದ ಹಿಂಭಾಗದಲ್ಲಿ ಜೋತಾಡುವ ಹಲಗೆಯ ವ್ಯವಧಾನದಲ್ಲಿ ಪ್ರಮಾಣವನ್ನು ವಿವರಿಸುತ್ತಾರೆ. ಧಿಷ್ಣ್ಯದ ಪಶ್ಚಿಮಭಾಗದಲ್ಲಿ ಒಂದುಮೊಳ ಪ್ರಮಾಣಬಿಟ್ಟು ಹಲಗೆ ಇರುತ್ತದೆ.

ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪಂಚಮಾರಣ್ಯಕೇ
ಪ್ರಥಮಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪಂಚಮಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವು ॥

---

## ಅಥ ಪಂಚಮಾರಣ್ಯಕೇ ಪ್ರಥಮಾಧ್ಯಾಯೇ ಚತುರ್ಥಃ ಖಂಡಃ

### ಐದನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು

---

**ನಿಷ್ಠಿತೇ ಪ್ರೇಙ್ಖೇ ಹೋತಾ ವಾಣಮೌದುಂಬರಂ ಶತತಂತುಮುಭಾ-
ಭ್ಯಾಂ ಪರಿಗೃಹ್ಯೋತ್ತರತಃ ಉಪೋಹತೇ ಯಥಾ ವೀಣಾಮ್ ॥**

ಅಥ ಹೋತುರ್ವಾಣಧಾರಣಂ ವಿಧತ್ತೇ—ಯಥೋಕ್ತಪ್ರಕಾರೇಣಾಧ್ವರ್ಯುಭಿರುಪಕಲ್ಪಿತೇ ಕ್ಲೃಪ್ತೇ ಪ್ರೇಙ್ಖೇ ಸಮಾಪ್ತೇ ಸತಿ ತತೋ ಹೋತಾ ಚಿತ್ಯಾಗ್ನಿದೇಶಾದಾರಭ್ಯ ಸದಃ ಪ್ರವಿಶ್ಯ ಪಶ್ಚಾ-ದಾಸೀನಾ ಔದುಂಬರಂ ಶತತಂತುಂ ವಾಣಮುಭಾಭ್ಯಾಂ ಹಸ್ತಾಭ್ಯಾಮಾದಾಯೋತ್ತರಪಾರ್ಶ್ವೇ ವೀಣಾವದ್ಧಾರಯೇತ್ । ಯಥಾ ಲೋಕೇ ಕಾಂಡವೀಣಾ ದ್ವಿತ್ರಾದಿತಂತುಯುಕ್ತಾ ತಥಾ ವಿಸ್ತೃತ-ಫಲಕಸಂಪಾದಿತಾ ಶತತಂತುಬಂಧನಪರ್ಯಾಪ್ತಾ ಮಹತೀ ವೀಣಾ ವಾಣಶಬ್ದೇನೋಚ್ಯತೇ ॥

ಹೋತೃವಿಗೆ ಬಾಣಧಾರಣವನ್ನು ವಿಧಿಸುತ್ತಾರೆ. ಪೂರ್ವೋಕ್ತಕ್ರಮದಿಂದ ಅಧ್ವರ್ಯುವು ಪ್ರೇಂಖ (ತೊಟ್ಟಿಲು) ವನ್ನು ಮಾಡಿ ಮುಗಿಸಿದ ಮೇಲೆ ಹೋತೃವು ಚಿತ್ಯಾಗ್ನಿಪ್ರದೇಶದಿಂದ ಸದಸ್ಸಿಗೆ ಪ್ರವೇಶಿಸಿ ಕುಳಿತುಕೊಂಡು ಉದುಂಬರದಿಂದ ಮಾಡಿದ ಶತತಂತುವಿರುವ ವೀಣೆಯನ್ನು ಎರಡು ಕೈಗಳಿಂದ ತೆಗೆದುಕೊಂಡು ಎಡಭಾಗದಲ್ಲಿ ಧರಿಸಬೇಕು.

ಲೋಕದಲ್ಲಿ ಒಂದೆರಡುತಂತಿಗಳಿಂದ ಕೂಡಿದ ಸೋರೆಬುರುಡೆಯ ತಂಬೂರಿಯಂತೆ ವಿಸ್ತೃತವಾದ ಹಲಗೆಯಿಂದ ರಚಿತವಾದ ಶತತಂತುಬಂಧನಕ್ಕೆ ಯುಕ್ತವಾದ ದೊಡ್ಡವೀಣೆಗೆ ಬಾಣವೆಂದು ಹೆಸರು.

ಸಪ್ತಭಿಶ್ಛಂದೋಭಿಶ್ಚತುರುತ್ತರೈಃ ಸ್ಥಾನಾನ್ಯಸ್ಯೋರ್ಧ್ವಮುದ್ಗೃಹ್ಣೀ-
ಯಾದ್ದಶಭಿರ್ವಾ ||

ವಾಮಭಾಗೇ ಧಾರಿತಸ್ಯ ಬಾ (ವಾ)ಣಸ್ಯ ಮಂತ್ರೈಃ ಸ್ವರಥಸ್ಥಾನಕಲ್ಪನಂ ವಿಧತ್ತೇ—ಗಾಯತ್ರ್ಯುಷ್ಣಿಗನುಷ್ಟು ಬ್ಬೃಹತೀಪಂಕ್ತಿತ್ರಿಷ್ಟುಬ್ ಜಗತ್ಯಃ ಸಪ್ತ ಛಂದಾಂಸಿ । ವಿರಾಡ್ದ್ವಿಪದಾಽಽಚ್ಛಂದಃ ಕಿಂಚಿದನ್ಯಚ್ಛಂದೋಂತರಮಿತ್ಯೇತಾನಿ ಚತ್ವಾರ್ಯುತ್ತರಾಣಿ ಚ್ಛಂದಾಂಸಿ । ತಥಾವಿಧಚ್ಛಂದಃಪ್ರತಿಪಾದಕೈರ್ಮಂತ್ರೈರ್ಬಾ(ವಾ)ಣಸ್ಯಾಧೋಭಾಗಮಾರಭ್ಯೋತ್ತರಮೂರ್ಧ್ವಂ ಸ್ವರಸ್ಥಾನಾನಿ ಕೇನಚಿಲ್ಲಾಞ್ಛನೇನೋಪಕಲ್ಪಯೇತ್ ಅಂತಿಮಚ್ಛಂದೋಂತರಪರಿತ್ಯಾಗೇನ ದಶಭಿರ್ವೇತಿ ಪಕ್ಷಾಂತರಮ್ ||

ಎಡಭಾಗದಲ್ಲಿ ಧರಿಸಿದ ಬಾಣಕ್ಕೆ ಮಂತ್ರಗಳಿಂದ ಸ್ವರಸ್ಥಾನಕಲ್ಪನವನ್ನು ವಿಧಿಸುತ್ತಾರೆ. ಗಾಯತ್ರೀ, ಉಷ್ಣಿಕ್ ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತೀ ಏಳು ಛಂದಸ್ಸುಗಳು. ವಿರಾಟ್, ದ್ವಿಪದ, ಅತಿಚ್ಛಂದ ಇನ್ನೊಂದು ಯಾವುದಾದರೂ ಛಂದಸ್ಸು ಹೀಗೆ ನಾಲ್ಕು ಮುಂದಿನ ಛಂದಸ್ಸುಗಳು. ಈ ಹನ್ನೊಂದು ಛಂದಃ ಪ್ರತಿಪಾದಕಮಂತ್ರಗಳಿಂದ ಬಾಣದ ಕೆಳಭಾಗವನ್ನಾರಂಭಿಸಿ ಉತ್ತರೋತ್ತರವಾಗಿ ಮೇಲ್ಭಾಗದಲ್ಲಿ ಸ್ವರಸ್ಥಾನಗಳನ್ನು ಯಾವುದರಿಂದಲಾದರೂ ಗುರುತಿಸಬೇಕು. ಯಾವುದಾದರೂ ಇನ್ನೊಂದು ಛಂದಸ್ಸು ಎಂಬುದನ್ನು ಬಿಟ್ಟು ಹತ್ತು ಛಂದಸ್ಸುಗಳೆಂದು ಮತಾಂತರವಿದೆ.

ಗಾಯತ್ರೇಣ ತ್ವಾ ಛಂದಸೋದೂಹಾಮ್ಯೌಷ್ಣಿಹೇನ ತ್ವಾಽನುಷ್ಟುಭೇ-
ನ ತ್ವಾ ಬಾರ್ಹತೇನ ತ್ವಾ ಪಾಙ್ಕ್ತೇನ ತ್ವಾ ತ್ರೈಷ್ಟುಭೇನ ತ್ವಾ
ಜಾಗತೇನ ತ್ವಾ ವೈರಾಜೇನ ತ್ವಾ ದ್ವೈಪದೇನ ತ್ವಾಽತಿಚ್ಛಂದಸಾ
ತ್ವೇತಿ ||

ಇದಾನೀಂ ಕ್ರಮೇಣ ಚ್ಛಂದೋಮಂತ್ರಾನಾಹ—ಹೇ ಬಾ(ವಾ)ಣ ತ್ವಾಂ ಗಾಯತ್ರಾಖ್ಯೇನ (ಣ) ಚ್ಛಂದಸೋದೂಹಾಮಿ ಪರಿಜ್ಞಾತಸ್ವರಸ್ಥಾನವಿಶೇಷಯುಕ್ತಂ ಕರೋಮಿ । ಏವಮುತ್ತರೇಷ್ವಪಿ ಮಂತ್ರೇಷು ಚ್ಛಂದಸೋದೂಹಾಮೀತ್ಯೇತಂ ಭಾಗಮನುಷಜ್ಯ ಯೋಜನೀಯಮ್ । ಇತಿಶಬ್ದೋ ಮಂತ್ರಸಮಾಪ್ತ್ಯರ್ಥಃ ||

ಈಗ ಕ್ರಮದಿಂದ ಛಂದೋಮಂತ್ರಗಳನ್ನು ವಿವರಿಸುತ್ತಾರೆ. ಎಲೈ ಬಾಣವೇ ನಿನ್ನನ್ನು ಗಾಯತ್ರವೆಂಬ ಛಂದಸ್ಸಿನಿಂದ ಸ್ವರಸ್ಥಾನವಿಶೇಷದಿಂದ ಕೂಡಿದ್ದನ್ನಾಗಿ ಮಾಡುತ್ತೇನೆ. ಹೀಗೆಯೇ ಮುಂದಿನ ಛಂದಸ್ಸುಗಳಿಂದಲೂ ಹೇಳಬೇಕು. ಇತಿ ಶಬ್ದ ಮಂತ್ರ ಸಮಾಪ್ತಿಯನ್ನು ತಿಳಿಸುತ್ತದೆ.

ಛಂದಾಂಸ್ಯನುಕ್ರಮ್ಯ ಸ್ಥಾನಾನಾಮನುಪರಿಕ್ರಮಣಮೌದುಂಬರ್ಯಾಽಽ-
ರ್ದ್ರಯೊ ಶಾಖಯಾ ಸಪಲಾಶಯಾ ಮೂಲದೇಶೇನ ಘಾಣಂ ತ್ರಿ-
ರೂರ್ಧ್ವಮುಲ್ಲಿಖತಿ ॥

ಧ್ವನ್ಯುತ್ಪಾದನಾಯ ತಂತೂನಾಮುನ್ಮಾರ್ಜನಂ ವಿಧತ್ತೇ—ಯಥೋಕ್ತಚ್ಛಂದೋವಾಚಕ ಮಂತ್ರಾನನುಕ್ರಮೇಣ ಪಠಿತ್ವಾ ತೈರ್ಮಂತ್ರೈಃ ಸ್ವರಸ್ಥಾನವಿಶೇಷಾಣಾಮನುಕ್ರಮೇಣೋಪಕಲ್ಪನಂ ಸಂಪಾದ್ಯ ತತಃ ಪರ್ಣಯುಕ್ತಯಾ ಕಯಾಚಿದಾರ್ದ್ರೋದುಂಬರಶಾಖಯಾ ತಂ ವಾಣಂ ತ್ರಿವಾರ-ಮೂರ್ಧ್ವಮುನ್ಮೃಜ್ಯಾತ್ । ಯೋಽಯಮುದುಂಬರಶಾಖಾ ತಸ್ಯಾ ಅಗ್ರೇಣೋನ್ಮಾರ್ಜನಂ ನ ಕುರ್ಯಾತ್ಕಿಂ ತು ಮೂಲದೇಶೇನ ಕುರ್ಯಾತ್ ॥

ಧ್ವನಿಹುಟ್ಟಿಸಲು ತಂತಿಗಳ ಉಜ್ಜುವಿಕೆಯನ್ನು ವಿಧಿಸುತ್ತಾರೆ. ಪೂರ್ವೋಕ್ತಛಂದೋವಾಚಕಮಂತ್ರಗಳನ್ನು ಕ್ರಮವಾಗಿ ಪಠಿಸಿ ಆಯಾಯ ಮಂತ್ರಗಳಿಂದ ಸ್ವರಸ್ಥಾನ ವಿಶೇಷಗಳನ್ನು ಕಲ್ಪಿಸಿ ಆಮೇಲೆ ಎಲೆಯಿಂದ ಕೂಡಿದ ಒಂದು ಉದುಂಬರದ ಚಿಕ್ಕ ಕೊಂಬೆಯಿಂದ ಆ ಬಾಣವನ್ನು ಮೂರುಸಾರಿ ಮೇಲಕ್ಕೆ ಉಜ್ಜಬೇಕು. ಆ ಕೊಂಬೆಯ ತುದಿಯಿಂದ ಉಜ್ಜಬಾರದು. ಮೂಲ ಪ್ರವೇಶದಂದಲೇ ಉಜ್ಜಬೇಕು.

ಪ್ರಾಣಾಯ ತ್ವಾಽಪಾನಾಯ ತ್ವಾ ವ್ಯಾನಾಯ ತ್ವೋಲ್ಲಿಖಾಮೀತಿ ॥

ಉನ್ಮಾರ್ಜನತ್ರಯಾರ್ಥಂ ಮಂತ್ರತ್ರಯಂ ದರ್ಶಯತಿ—ಹೇ ವಾಣ ತ್ವಾಮಸ್ಮತ್ಪ್ರಾಣವೃತ್ತಿ-ರಕ್ಷಣಾರ್ಥಮುನ್ಮೃಜಾಮಿ । ಏವಮುತ್ತರತ್ರಾಪಿ ಪೂರ್ವಯೋರ್ಮಂತ್ರಯೋರುಲ್ಲಿಖಾಮೀತ್ಯನುಷ-ಜ್ಯತೇ । ಇತಿಶಬ್ದ ಈದೃಶೇ ಸ್ಥಾನೇ ಸರ್ವತ್ರ ಮಂತ್ರಸಮಾಪ್ತ್ಯರ್ಥಃ ॥

ಮೂರು ಸಾರಿ ಉಜ್ಜಲು ಮೂರು ಮಂತ್ರಗಳನ್ನು ತೋರಿಸುತ್ತಾರೆ. ಎಲೈ ಬಾಣವೇ ನಿನ್ನನ್ನು ನಮ್ಮ ಪ್ರಾಣ ವೃತ್ತಿರಕ್ಷಣೆಗೋಸ್ಕರ ಉಜ್ಜುತ್ತೇನೆ. ಹೀಗೆಯೇ ಅಪಾನಾದಿಗಳಲ್ಲಿಯೂ ಕಲ್ಪಿಸಬೇಕು. ಇತಿ ಶಬ್ದ ಮಂತ್ರಸಮಾಪ್ತಿಯನ್ನು ತಿಳಿಸುತ್ತದೆ.

ಅನ್ಯೇಭ್ಯೋಽಪಿ ಕಾಮೇಭ್ಯಃ ಪುನರಪಿ ನ ತ್ವೋಲ್ಲಿಖಾಮೀತಿ ಬ್ರೂಯಾತ್ ॥

ಶಾಖಾಂತರಾಭಿಮತಂ ಮಂತ್ರಪ್ರಯೋಗಂ ನಿಷೇಧತಿ—ಶಾಖಾಂತರೇ ಹಿ ಪ್ರಾಣಾದಿರಕ್ಷಾ-ರ್ಥೋಲ್ಲೇಖನಾದೂರ್ಧ್ವಂ ಕಾಮಾಂತರಸಿದ್ಧ್ಯರ್ಥಂ ಪುನರಪ್ಯುಲ್ಲಿಖಾಮೀತಿ ಮಂತ್ರಪ್ರಯೋ-ಗೋಽಭ್ಯುಪಗತಃ, ತತ್ತು ನ ಕುರ್ಯಾತ್ । ಪ್ರಾಣಾದಿಮಂತ್ರತ್ರಯೇಣೈವಾಶೇಷಕಾಮಾನಾಂ ಸಿದ್ಧೇಃ ॥

ಶಾಖಾಂತರಾಭಿಮತವಾದ ಮಂತ್ರಪ್ರಯೋಗವನ್ನು ನಿಷೇಧಿಸುತ್ತಾರೆ. ಇತರ ಶಾಖೆಯಲ್ಲಿ ಪ್ರಾಣಾದಿರಕ್ಷಣೆ ಗೋಸ್ಕರ ಉಜ್ಜಿದ ಮೇಲೆ ಇತರ ಕಾಮನಾಸಿದ್ಧಿಗೋಸ್ಕರ ತಿರುಗಿಯೂ ಉಜ್ಜುತ್ತೇನೆ ಎಂದು ಮಂತ್ರ ಪ್ರಯೋಗವು

ಅಂಗೀಕೃತವಾಗಿದೆ. ಪ್ರಾಣಾದಿಮಂತ್ರತ್ರಯದಿಂದಲೇ ಸಕಲೇಷ್ಟಾರ್ಥಗಳೂ ಸಿದ್ಧಿಸುವಾಗ ಪುನಃ ಮಂತ್ರ ಪ್ರಯೋಗದಿಂದ ಉಜ್ಜಬಾರದು.

**ಅಥೈನಂ ಸಶಾಖಂ ಛಂದೋಗೇಭ್ಯಃ ಪ್ರಯಚ್ಛತಿ ॥**

ವಾಣಸ್ಯ ದಾನಂ ವಿಧತ್ತೇ—ವಾಣದಾನಾದೂರ್ಧ್ವಂ ಪ್ರೇಂಖಮಾರುರುಕ್ಷೋರ್ಹೋತುಃ ಪ್ರಥಮಂ ಮಂತ್ರೈಃ ಪ್ರೇಂಖಸ್ಯ ಚಾಲನಂ ವಿಧತ್ತೇ ॥

ಬಾಣದಾನವನ್ನು ವಿಧಿಸುತ್ತಾರೆ. ಆಮೇಲೆ ಆ ಬಾಣವನ್ನು ಕೊಂಬೆ ಸಹಿತವಾಗಿ ಸಾಮವೇದಿಗಳಿಗೆ ದಾನ ಮಾಡಬೇಕು.

**ಭೂತೇಭ್ಯಸ್ತ್ವೇತಿ ಪಶ್ಚಾರ್ಧೇ ಫಲಕೇ ಪಾಣೀ ಪ್ರತಿಷ್ಠಾಪಯತಿ ಪ್ರಾಣಮನು ಪ್ರೇಂಖಸ್ವೇತಿ ಪ್ರಾಂಚಂ ಪ್ರೇಂಖಂ ಪ್ರಣಯತಿ ವ್ಯಾನಮನ್ವೀಂಖಸ್ವೇತಿ ತಿರ್ಯಂಚಮಪಾನಮನ್ವೀಂಖಸ್ವೇತ್ಯಭ್ಯಾತ್ಮಮ್ ॥**

ಅಸೌ ಹೋತಾ ಪ್ರೇಂಖಸ್ಯಾಪರಫಲಕೇ ಭೂತೇಭ್ಯಸ್ತ್ವೇತಿ ಪಾಣಿದ್ವಯಂ ಪ್ರತಿಷ್ಠಾಪಯತಿ । ಹೇ ಪ್ರೇಂಖ ಸರ್ವಭೂತೋಪಕಾರಾರ್ಥಂ ತ್ವಾಂ ಪಾಣಿಭ್ಯಾಂ ಸ್ಪೃಶಾಮೀತಿ ಶೇಷಃ । ತತಃ ಪ್ರಾಣಮನು ಪ್ರೇಂಖಸ್ವೇತಿ ಮಂತ್ರೇಣ ತಂ ಪ್ರೇಂಖಂ ಪೂರ್ವದಿಗ್ಗಾಮಿತ್ವೇನ ಚಾಲಯೇತ್ । ಹೇ ಪ್ರೇಂಖ ತ್ವಮಸ್ಮದೀಯಂ ಪ್ರಾಣಮನುಸೃತ್ಯ ಪ್ರಕರ್ಷೇಣ ಚಲಿತೋ ಭವ । ಯಥಾ ಪ್ರಾಣಃ ಪುರಸ್ತಾದ್ಗಚ್ಛತಿ ತಥಾ ತ್ವಮಪಿ ಪೂರ್ವಸ್ಯಾಂ ದಿಶಿ ಗಚ್ಛೇತ್ಯರ್ಥಃ । ತತೋ ವ್ಯಾನಮನ್ವೀಂಖಸ್ವೇತಿ ಮಂತ್ರೇಣ ಪ್ರೇಂಖಂ ತಿರ್ಯಂಚಂ ದಕ್ಷಿಣೋತ್ತರದಿಗನುಸಾರೇಣ ಚಾಲಯೇತ್ । ಹೇ ಪ್ರೇಂಖಂ ತ್ವಮಸ್ಮದೀಯಂ ವ್ಯಾನಮನುಸೃತ್ಯ ದಕ್ಷಿಣೋತ್ತರದಿಶೋರ್ವಿಶೇಷೇಣ ಚಲಿತೋ ಭವ । ತತೋಽಪಾನಮನ್ವೀಂಖಸ್ವೇತಿ ಮಂತ್ರೇಣ ಸ್ವಾತ್ಮಾಭಿಮುಖ್ಯೇನ ಚಾಲಯೇತ್ । ಹೇ ಪ್ರೇಂಖ ತ್ವಮಸ್ಮದೀಯಮಪಾನವಾಯುಮಂತಃಸಂಚಾರಿಣಮನುಸೃತ್ಯಾಸ್ಮದಾಭಿಮುಖ್ಯೇನ ಚಲಿತೋ ಭವ ॥

ಬಾಣದಾನಮಾಡಿದಮೇಲೆ ಪ್ರೇಂಖವನ್ನು ಏರಲು ಬಯಸುವ ಹೋತೃವು ಮೊದಲು ಮಂತ್ರಗಳಿಂದ ಪ್ರೇಂಖದ ಚಾಲನನ್ನು ಮಾಡಬೇಕೆಂದು ವಿಧಿಸುತ್ತಾರೆ. ಈ ಹೋತೃವು ಪ್ರೇಂಖದ ಒಂದು ಹಲಗೆಯಲ್ಲಿ **ಭೂತೇಭ್ಯಸ್ತ್ವಾ** ಎಂಬಮಂತ್ರದಿಂದ ಎರಡು ಕೈಗಳನ್ನು ಇಡುತ್ತಾನೆ. ಎಲೈ ಪ್ರೇಂಖವೇ ಸಕಲ ಪ್ರಾಣಿಗಳ ಉಪಕಾರಕ್ಕೋಸ್ಕರ ನಿನ್ನನ್ನು ಕೈಯಿಂದ ಮುಟ್ಟುತ್ತೇನೆ. ಆ ಮೇಲೆ **ಪ್ರಾಣಮನು ಪ್ರೇಂಖಸ್ವ** ಎಂಬ ಮಂತ್ರದಿಂದ ಅದನ್ನು ಪೂರ್ವದಿಕ್ಕಿಗೆ ಹೋಗುವಂತೆ ತಳ್ಳಬೇಕು. ಎಲೈ ಪ್ರೇಂಖವೇ ನೀನು ನಮ್ಮ ಪ್ರಾಣವನ್ನನುಸರಿಸಿ ಅಧಿಕವಾಗಿ ಚಲಿಸು. ಪ್ರಾಣವು ಹೇಗೆ ಮುಂದೆ ಚಲಿಸುವುದೋ ಅದರಂತೆ ನೀನು ಪೂರ್ವದಿಕ್ಕಿಗೆ ಹೋಗು ಎಂದರ್ಥ. ಆಮೇಲೆ **ವ್ಯಾನಮನ್ವೀಂಖಸ್ವ** ಎಂಬ ಮಂತ್ರದಿಂದ ಪ್ರೇಂಖವನ್ನು ಅಡ್ಡವಾಗಿ ಅಂದರೆ ದಕ್ಷಿಣೋತ್ತರದಿಗನುಸಾರವಾಗಿ ಅಲುಗಾಡಿಸಬೇಕು. ಎಲೈ ಪ್ರೇಂಖವೇ ನೀನು ನಮ್ಮ ವ್ಯಾನವಾಯುವನ್ನನುಸರಿಸಿ ದಕ್ಷಿಣೋತ್ತರದಿಕ್ಕುಗಳಲ್ಲಿ ವಿಶೇಷವಾಗಿ ಚಲಿಸು. ಆಮೇಲೆ **ಅಪಾನಮನ್ವೀಂಖಸ್ವ** ಎಂಬ

ಮಂತ್ರದಿಂದ ತನಗೆ ಅಭಿಮುಖವಾಗಿ ಅಲುಗಾಡಿಸಬೇಕು. ಎಲೈ ಪ್ರೇಂಖವೇ ನೀನು ನಮ್ಮ ಅಪಾನವಾಯುವನ್ನನುಸರಿಸಿ ನಮಗಭಿಮುಖವಾಗಿ ಚಲಿಸು ಎಂದರ್ಥ.

**ಭೂರ್ಭುವಃ ಸ್ವರಿತಿ ಜಪತಿ ॥**

**ತ್ರಿವಿಧಚಾಲನಾದೂರ್ಧ್ವಂ ವ್ಯಾಹೃತಿಜಪಂ ವಿಧತ್ತೇ—ಪ್ರೇಂಖಸ್ಯ ದಾರ್ಢ್ಯಪರೀಕ್ಷಾರ್ಥಂ ಯದೇತಚ್ಚಾಲನತ್ರಯಂ ಕೃತಂ ತೇನ ಪೃಥಿವ್ಯಾದಿಲೋಕತ್ರಯಂ ದೃಢಂ ಭವತ್ವಿತ್ಯರ್ಥಃ ॥**

ಮೂರು ರೀತಿ ಅಲುಗಾಡಿಸಿದ ಮೇಲೆ ವ್ಯಾಹೃತಿ ಜಪವನ್ನು ವಿಧಿಸುತ್ತಾರೆ. ಪ್ರೇಂಖವು ಗಟ್ಟಿಯಾಗಿದೆಯೋ ಇಲ್ಲವೇ ಎಂದು ಪರೀಕ್ಷಿಸಲು ಮೂರುರೀತಿಯಾಗಿ ಅಲುಗಾಡಿಸುವುದರಿಂದ ಪೃಥಿವ್ಯಾದಿ ಮೂರು ಲೋಕಗಳೂ ದೃಢವಾಗಲಿ ಎಂದರ್ಥ.

**ಪ್ರಾಣಾಯ ತ್ವೇತಿ ಪ್ರಾಂಚಮೇವ ವ್ಯಾನಾಯ ತ್ವೇತಿ ತಿರ್ಯಂಚಮ-ಪಾನಾಯ ತ್ವೇತ್ಯಭ್ಯಾತ್ಮಮ್ ॥**

**ಜಪಾದೂರ್ಧ್ವಂ ಪುನರಪಿ ತ್ರೇಧಾ ಚಾಲನಂ ವಿಧತ್ತೇ—ಹೇ ಪ್ರೇಂಖ ತ್ವಾಮಸ್ಮದೀಯ ಪ್ರಾಣಾದಿತ್ರಯಪರಿರಕ್ಷಾರ್ಥಂ ಚಾಲಯಿತ್ವಾ ದಾರ್ಢ್ಯಂ ಪಶ್ಯಾಮೀತಿ ಶೇಷಃ । ಅತ್ರ ಮಂತ್ರವಿಶೇಷ ಏವ ನ ತು ಕ್ರಿಯಾವಿಶೇಷ ಇತಿ ದ್ಯೋತನಾರ್ಥಮೇವಕಾರಃ ॥**

ಜಪವಾದ ಮೇಲೆ ತಿರುಗಿಯೂ ಮೂರು ಸಾರಿ ಚಾಲನವನ್ನು ವಿಧಿಸುತ್ತಾರೆ. ಎಲೈ ಪ್ರೇಂಖವೇ ನಿನ್ನನ್ನು ನಮ್ಮ ಪ್ರಾಣಾದಿತ್ರಯ ರಕ್ಷಣೆಗೋಸ್ಕರ ಅಲುಗಾಡಿಸಿ ದಾರ್ಢ್ಯವನ್ನು ನೋಡುತ್ತೇನೆ. ಇಲ್ಲಿ ಮಂತ್ರವಿಶೇಷವಲ್ಲದೆ ಕ್ರಿಯಾವಿಶೇಷ ವಿಲ್ಲವೆಂದು ಏವಕಾರದಿಂದ ತಿಳಿಯುತ್ತದೆ.

**ವಸವಸ್ತ್ವಾ ಗಾಯತ್ರೇಣ ಚ್ಛಂದಸಾಽಽರೋಹಂತು ತಾನನ್ವಾರೋಹಾ-ಮೀತಿ ಪಶ್ಚಾರ್ಧೇ ಫಲಕೇಽರತ್ನೀ ಪ್ರತಿಷ್ಠಾಪಯತಿ ॥**

**ಪ್ರೇಂಖಸ್ಯ ದಾರ್ಢ್ಯಪರೀಕ್ಷಣಾದೂರ್ಧ್ವಂ ಸಮಾರೋಹಣಪ್ರಕಾರಂ ವಿವಕ್ಷುರಾದೌ ಕೂರ್ಪರಾದ್ಯರತ್ನಿಸ್ಥಾಪನಂ ವಿಧತ್ತೇ—ವಸವಸ್ತ್ವೇತ್ಯಾದಿಃ ಸ್ಥಾನಮಂತ್ರಃ । ಹೇ ಪ್ರೇಂಖ ತ್ವಾಮ-ಷ್ಟಸಂಖ್ಯಾಕಾ ವಸವೋ ದೇವಾ ಗಾಯತ್ರಚ್ಛಂದೋರೂಪೇಣ ಸಾಧನೇನ ಪ್ರಥಮಮಾರೋಹಂತು। ತಾನ್ವಸೂನನುಸೃತ್ಯ ಪಶ್ಚಾದಾರೋಹಾಮಿ ॥**

ಪ್ರೇಂಖದ ದಾರ್ಢ್ಯಪರೀಕ್ಷೆಯಾದಮೇಲೆ ಏರುವ ರೀತಿಯನ್ನು ಹೇಳಲು ಮೊದಲು ಕೂರ್ಪರಾದ್ಯರತ್ನಿಸ್ಥಾಪನವನ್ನು ವಿವರಿಸುತ್ತಾರೆ. ವಸವಸ್ತ್ವಾ ಇತ್ಯಾದಿ ಸ್ಥಾಪನಮಂತ್ರ. ಎಲೈ ಪ್ರೇಂಖವೇ ನಿನ್ನನ್ನು ಎಂಟು ಜನ ವಸುದೇವತೆಗಳು ಗಾಯತ್ರಛಂದೋರೂಪಸಾಧನದಿಂದ ಮೊದಲು ಏರಲಿ. ಆ ವಸುಗಳನ್ನನುಸರಿಸಿ ನಾನು ಆಮೇಲೆ ಏರುತ್ತೇನೆ ಕೂರ್ಪರ=ಮೊಳಕೈ. ಅರತ್ನಿ=ಹಿಡಿ ಸೇರಿದ ಮೊಳಕೈ.

ಅಥ ಪೂರ್ವಂ ಫಲಕಂ ನಾನಾಪಾಣಿಭ್ಯಾಮಭಿಪದ್ಯೇತ ಯಥಾ ಹಿ ಸ್ರಪ್ಸ್ಯನ್ ||

ಅರತ್ನಿಸ್ಥಾಪನಾನಂತರ ಮೂರ್ಧ್ವಾಂಗುಲಿಭ್ಯಾಂ ಪಾಣಿಭ್ಯಾಂ ಪೂರ್ವಫಲಕಸ್ಪರ್ಶನಂ ವಿಧತ್ತೇ—ಲೋಕೇ ಸರ್ಪಣಂ ಕರಿಷ್ಯನ್ಸನ್ನಗಃ ಶಿರ ಉನ್ನಮಯತಿ, ತಥಾಯಂ ಪಾಣೀ ಉನ್ನತೌ ಕೃತ್ವಾ ತಾಭ್ಯಾಮಭಿಸ್ಪೃಶೇದಿತ್ಯರ್ಥಃ ||

ಅರತ್ನಿಸ್ಥಾಪನವಾದಮೇಲೆ ಬಿಡಿಸಿದ ಬೆರಳುಗಳುಳ್ಳ ಕೈಗಳಿಂದ ಪೂರ್ವದಹಲಗೆಯ ಸ್ಪರ್ಶನವನ್ನು ವಿಧಿಸುತ್ತಾರೆ. ಲೋಕದಲ್ಲಿ ಹರಿಯುತ್ತಾ ಸರ್ಪವು ಹೆಡೆಯನ್ನು ಎತ್ತುತ್ತದೆ. ಹಾಗೆ ಈ ಕೈಗಳನ್ನು ಎತ್ತಿಹಿಡಿದು ಅವುಗಳಿಂದ ಮುಟ್ಟಬೇಕು.

ಮಧ್ಯಮಂ ಛುಬುಕೇನೋಪಸ್ಪೃಶೇದ್ದ್ವಯೋರ್ವಾ ಸಂಧಿಮ್ ||

ಕರ್ಪರಾಭ್ಯಾಂ ಪಶ್ಚಿಮಫಲಕಮಗ್ರಾಭ್ಯಾಂ ಪೂರ್ವಂ ಫಲಕಂ ಚ ಸ್ಪೃಷ್ಟವತೋ ಮುಖಸ್ಯಾಧೋಭಾಗೇನ ಚ್ಛುಬುಕನಾಮ್ನಾ ಮಧ್ಯಮಫಲಕಸ್ಪರ್ಶನಂ ವಿಧತ್ತೇ—ಫಲಕಸ್ಯ ತ್ರಯಪಕ್ಷೇ ಮಧ್ಯಮಸ್ಪರ್ಶಃ | ದ್ವಯಪಕ್ಷೇ ಸಂಧಿಸ್ಪರ್ಶಃ ||

ಮೊಳಕೈಯಿಂದ ಪಶ್ಚಿಮದ ಹಲಗೆಯನ್ನೂ, ಕೈತುದಿಯಿಂದ ಪೂರ್ವದಹಲಗೆಯನ್ನೂ ಮುಟ್ಟಿದಮೇಲೆ ಮುಖದ ಕೆಳಭಾಗವಾದ ಗಲ್ಲದಿಂದ ಮಧ್ಯದಹಲಗೆಯನ್ನು ಮುಟ್ಟಬೇಕೆಂದು ವಿಧಿಸುತ್ತಾರೆ. ಮೂರು ಹಲಗೆಗಳು ಎಂಬ ಪಕ್ಷದಲ್ಲಿ ಮಧ್ಯದ ಹಲಗೆಯನ್ನು ಮುಟ್ಟಬೇಕು. ಎರಡು ಹಲಗೆಗಳು ಎಂಬ ಮತಾಂತರದಲ್ಲಿ ಎರಡು ಹಲಗೆಗಳ ಸಂಧಿಯನ್ನು ಮುಟ್ಟಬೇಕೆಂದು ತಾತ್ಪರ್ಯ.

ರುದ್ರಾಸ್ತ್ವಾ ತ್ರೈಷ್ಟುಭೇನ ಚ್ಛಂದಸಾಽಽರೋಹಂತು ತಾನನ್ವಾರೋರೋಹಾಮೀತಿ ದಕ್ಷಿಣಂ ಸಕ್ಥ್ಯತಿಹರತ್ಯಾದಿತ್ಯಾಸ್ತ್ವಾ ಜಾಗತೇನ ಚ್ಛಂದಸಾಽಽರೋಹಂತು ತಾನನ್ವಾರೋಹಾಮೀತಿ ಸವ್ಯಂ ವಿಶ್ವೇ ತ್ವಾ ದೇವಾ ಆನುಷ್ಟುಭೇನ ಚ್ಛಂದಸಾಽಽರೋಹಂತು ತಾನನ್ವಾರೋಹಾಮೀತಿ ಸಮಾರೋಹತಿ ||

ಅಥ ಮಂತ್ರತ್ರಯೇಣ ಕ್ರಮಾದ್ದಕ್ಷಿಣವಾಮಸಕ್ಥಿಭ್ಯಾಂ ಕೃತ್ಸ್ನಶರೀರೇಣ ಚ ಪ್ರೇಂಖಾರೋಹಣಂ ವಿಧತ್ತೇ—

ಆಮೇಲೆ ಮೂರುಮಂತ್ರಗಳಿಂದ ಕ್ರಮವಾಗಿ ಬಲತೊಡೆ ಮತ್ತು ಸಂಪೂರ್ಣಶರೀರದಿಂದ ಪ್ರೇಂಖಾರೋಹಣವನ್ನು ವಿಧಿಸುತ್ತಾರೆ. ರುದ್ರದೇವತೆಗಳು ತ್ರೈಷ್ಟುಭಛಂದಸ್ಸಿನಿಂದ ನಿನ್ನನ್ನು ಏರಲಿ. ಅವರನ್ನನುಸರಿಸಿ ನಾನು ಬಲತೊಡೆಯಿಂದ ಏರುತ್ತೇನೆ. ಆದಿತ್ಯರು ನಿನ್ನನ್ನು ಜಾಗತಛಂದಸ್ಸಿನಿಂದ ಏರಲಿ. ಅವರನ್ನನುಸರಿಸಿ ಎಡತೊಡೆಯಿಂದ

ಏರುತ್ತೇನೆ. ವಿಶ್ವೇದೇವತೆಗಳು ಅನುಷ್ಟುಭ್‌ಛಂದಸ್ಸಿನಿಂದ ನಿನ್ನನ್ನು ಏರಲಿ. ಅವರನ್ನನುಸರಿಸಿ ನಾನು ನಿನ್ನನ್ನು ಎರುತ್ತೇನೆ.

ಪಶ್ಚಾತ್‌ಸ್ವಸ್ಯ ದಿಷ್ಣ್ಯಸ್ಯ ದಕ್ಷಿಣಂ ಪಾದಂ ಪ್ರಾಂಚಂ ಪ್ರತಿಷ್ಠಾಪಯು-
ತ್ಯಥ ಸವ್ಯಂ ಯದೇತರಃ ಶ್ರಾಮ್ಯೇದಥೇತರಂ ಯದೇತರೋಽ-
ಥೇತರಂ ನೋಭೌ ವಿಭೂಮೌ ಕುರ್ಯಾತ್ ||

ಉಕ್ತಪ್ರಕಾರೇಣ ಪ್ರೇಂಖಮನ್ವಾರೂಢಸ್ಯ ಭೂಮೌ ಪಾದಸ್ಥಾಪನ ಪ್ರಕಾರಂ ವಿಧತ್ತೇ— ಸ್ವಕೀಯಧಿಷ್ಣ್ಯಸ್ಯ ಪಶ್ಚಾದಭಿಗೇ ಪ್ರಥಮಂ ದಕ್ಷಿಣಪಾದಃ ಪ್ರಾಗಗ್ರಃ ಸ್ಥಾಪನೀಯಃ । ತತಃ ಸವ್ಯಃ ಪಾದಃ ಸ್ಥಾಪನೀಯಃ । ಯದಾ ದಕ್ಷಿಣಸ್ಯ ಪಾದಸ್ಯ ಶ್ರಮಸ್ತದಾನೀಂ ಸವ್ಯಂ ಸ್ಥಾಪಯೇತ್ । ಯದಾ ತು ಸವ್ಯಸ್ಯ ಶ್ರಮಸ್ತದಾ ದಕ್ಷಿಣಮಿತ್ಯೇವಂ ಪರ್ಯಾಯೇಣ ತಯೋಃ ಸ್ಥಾಪನಂ ನ ತ್ವೇಕದಾ ದ್ವೌ ಪಾದೌ ಭೂಮಿಸ್ಪರ್ಶಸಹಿತೌ ಕುರ್ಯಾತ್ ||

ಪೂರ್ವೋಕ್ತರೀತಿಯಿಂದ ಪ್ರೇಂಖವನ್ನು ಏರಿದನೇಲೆ ಭೂಮಿಯಲ್ಲಿ ಕಾಲಿಡುವ ರೀತಿಯನ್ನು ವಿಧಿಸುತ್ತಾರೆ. ಹೋತೃವು ತನ್ನಸ್ಥಾನದ ಹಿಂಭಾಗದಲ್ಲಿ ಮೊದಲು ಬಲಗಾಲಿನ ಪಾದವನ್ನು ತುದಿನೊದಲಾಗಿ ಇಡಬೇಕು. ಆ ಮೇಲೆ ಎಡಪಾದವನ್ನಿಡಬೇಕು. ಅಂದರೆ ಬಲಪಾದಕ್ಕೆ ಶ್ರಮವಾದಾಗ ಎಡಪಾದವನ್ನೂ, ಎಡಪಾದಕ್ಕೆ ಶ್ರಮವಾದಾಗ ಬಲ ಪಾದವನ್ನೂ ಇಡಬೇಕಲ್ಲದೆ ಒಂದೇ ಬಾರಿ ಎರಡನ್ನೂ ಇಡಬಾರದು.

ಕೂರ್ಚಾನ್‌ಹೋತ್ರಕಾಃ ಸಮಾರೋಹಂತಿ ಬ್ರಹ್ಮಾ ಚೌದುಂಬರೀ-
ಮಾಸಂದೀಮುದ್ಗಾತಾ ||

ಇತರೇಷಾಮೃತ್ವಿಜಾಂ ತತ್ತದಾರೋಹಣಂ ವಿಧತ್ತೇ— ಪ್ರಶಾಸ್ತಾ ಬ್ರಾಹ್ಮಣಾಚ್ಛಂಸೀ ಪೋತಾ ನೇಷ್ಟಾಽಽಗ್ನೀಧ್ರೋಽಚ್ಛಾವಾಕಶ್ಚೇತಿ ಹೋತ್ರಕಾ ದರ್ಭಮಯಾನ್ಕೂರ್ಚಾನಾರೋ-ಹೇಯುಃ । ತಥಾ ಬ್ರಹ್ಮಾಪಿ ಕೂರ್ಚಮಾರೋಹೇತ್ । ಉದ್ಗಾತೋದುಂಬರನಿರ್ಮಿತಾಮಾ-ಸಂದೀಮಾರೋಹೇತ್ ||

ಹೋತೃವು ಪ್ರೇಂಖವನ್ನೇರಿದಮೇಲೆ ಇತರ ಋತ್ವಿಜರ ಆರೋಹಣವನ್ನು ವಿವರಿಸುತ್ತಾರೆ. ಪ್ರಶಾಸ್ತಾ, ಬ್ರಾಹ್ಮಣಾಚ್ಛಂಸೀ, ಪೋತಾ, ಆಗ್ನೀಧ್ರ, ಅಚ್ಛಾವಾಕ ಇವರಿಗೆ ಹೋತ್ರಕರೆಂದು ಹೆಸರು. ಇವರು ದರ್ಭದಕೂರ್ಚರೂಪ ಆಸನವನ್ನು ಏರಬೇಕು. ಹಾಗೆಯೇ ಬ್ರಹ್ಮನೂ ಕೂರ್ಚಾಸನವನ್ನು ಸ್ವೀಕರಿಸಬೇಕು. ಉದ್ಗಾತೃ ಉದುಂಬರದಿಂದ ಮಾಡಿದ ಕುರ್ಚಿಯಲ್ಲಿ ಕುಳಿತುಕೊಳ್ಳಬೇಕು.

ಯದಿ ಕಸ್ಮೈಚಿದವಶ್ಯಕರ್ಮಿಣೋ ಜಿಗಮಿಷೇದಾದಿಶ್ಯ ಪಾಲಂ ಪ್ರಾಜ
ವರುಹ್ಯ ಚರಿತ್ವಾ ತಮರ್ಥಮೇವಾಜಪಯಾ ವೃತಾಽಽರೋಹೇತ್ ||

ಪ್ರೇಂಖಾದಿಷ್ವಾರೂಢಾನಾಂ ಹೋತೃಹೋತ್ರಕಬ್ರಹ್ಮೋದ್ಗಾತ್ರ್ಯಾಣಾಂ ಶೌಚಾಚಮನಾ-ದ್ಯರ್ಥಂ ಗಮನೇ ಕಂಚಿದ್ವಿಶೇಷಮಾಹ—ಕರ್ಮಶಬ್ದ ಆಚಮನಾದಿಕ್ರಿಯಾಮಾಚಷ್ಟೇ । ತದರ್ಥಂ ಯೋ ಜಿಗಮಿಷುಃ ಸೋಽಯಂ ಪಾಲನಾದಿಶ್ಯ ಪಾಲಕಂ ಯಮಾನನನುಜ್ಞಾಪ್ಯ ಸ್ವಾಸ-ನಾತ್ಪ್ರೇಂಖಾದೇಃ ಪ್ರಾಙ್ಮುಖೋಽವರುಹ್ಯ ಯದರ್ಥಂ ನಿರ್ಗಚ್ಛತಿ ತಮರ್ಥಂ ಚರಿತ್ವಾ ಸಮಾ-ಗತ್ಯ ಪೂರ್ವೋಕ್ತೇನೈವ ಪ್ರಕಾರೇಣ ಸ್ವಂ ಸ್ವಮಾಸನಮಾರೋಹೇತ್ । ತತ್ರ ಹೋತುರೇತಾ-ವಾನ್ವಿಶೇಷಃ । ಅಜಪಯಾ ವೃತಾ ಭೂರ್ಭುವಃ ಸ್ವರತ್ಯೇತಜ್ಜಪಶೂನ್ಯೇನೇತರೇಣ ಸರ್ವೇಣ ಪ್ರಕಾರೇಣೇತಿ ॥

ಪ್ರೇಂಖಾದಿಗಳನ್ನು ಏರಿದ ಹೋತೃಹೋತ್ರಕ ಬ್ರಹ್ಮಉದ್ಗಾತೃಗಳಿಗೆ ಶೌಚಾಚಮನಾದಿಗಳಿಗೋಸ್ಕರ ಹೊರಗೆ ಹೋದಾಗ ವಿಶೇಷನಿಯಮವನ್ನು ತೋರಿಸುತ್ತಾರೆ. ಕರ್ಮಶಬ್ದಕ್ಕೆ ಶೌಚಾಚಮನಾದಿಕ್ರಿಯವೆಂದು ಅರ್ಥ. ಶೌಚಾದಿಗಳಿಗೋಸ್ಕರ ಹೋಗಬೇಕಾದರೆ ಯಜಮಾನನಿಗೆ ತಿಳಿಸಿ ಅವನ ಅನುಮತಿ ಪಡೆದು ಪ್ರೇಂಖಾದಿಗಳಿಂದ ಪೂರ್ವಾಭಿಮುಖವಾಗಿ ಇಳಿದು ಯಾವಕಾರ್ಯಕ್ಕೆ ಹೋಗಿರುವನೋ ಆ ಕಾರ್ಯವನ್ನು ಮುಗಿಸಿ ತಿರುಗಿ ಬಂದು ಹಿಂದೆ ಹೇಳಿದರೀತಿಯಿಂದಲೇ ತಮ್ಮ ತಮ್ಮ ಆಸನವನ್ನು ಏರಬೇಕು. ಹೋತೃವಿಗೆ ಮಾತ್ರ ಭೂರ್ಭುವಃಸ್ವಃ ಇತ್ಯಾದಿ ಜಪಪೂರ್ವಕವಿಧಿಯೂ ಇತರರಿಗೆ ಜಪವಿಲ್ಲದ ವಿಧಿಯೂ ಹೇಳಿದೆ. ಇತರಕಾರ್ಯಗಳು ಉಭಯಸಮಾನವಾಗಿದೆ.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪಂಚಮಾರಣ್ಯಕೇ
ಪ್ರಥಮಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪಂಚಮಾರಣ್ಯಕದ
ಮೊದಲನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವು



# ಅಥ ಪಂಚಮಾರಣ್ಯಕೇ ಪ್ರಥಮಾಧ್ಯಾಯೇ ಪಂಚಮಃ ಖಂಡಃ

## ಐದನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲ ಐದನೆಯ ಖಂಡವು

---

ಪ್ರಸ್ತೋತಾರಂ ಸಂಶಾಸ್ತಿ ಪಂಚವಿಂಶಸ್ಯ ಸ್ತೋಮಸ್ಯ ತಿಸೃಷ್ವರ್ಧ-
ತೃತೀಯಾಸ್ವರ್ಧ ತ್ರಯೋದಶಾಸು ವಾ ಪರಿಶಿಷ್ಟಾಸು ಪ್ರಥಮಂ
ಪ್ರತಿಹಾರಂ ಪ್ರಬ್ರೂಯಾದಿತಿ ॥

ಪ್ರೇಂಖಮಾರೂಢಸ್ಯ ಹೋತುಃ ಕರ್ತವ್ಯಾಂತರಂ ವಿಧತ್ತೇ—ಯಃ ಪ್ರಸ್ತೋತಾ ಸಾಮ್ನಃ ಪ್ರಸ್ತಾವಭಾಗಂ ಗಾಯತಿ ತಂ ಪ್ರಸ್ತೋತಾರಂ ಪ್ರತ್ಯಸೌ ಹೋತಾ ಪಂಚವಿಂಶಸ್ಯೇತ್ಯಾದಿವಾಕ್ಯಂ ಪ್ರಬ್ರೂಯಾತ್। ರಾಜನಾಖ್ಯಸ್ಯ ಸಾಮ್ನ ಆಧಾರಭೂತತೃಚಾವೃತ್ತ್ಯಾ ಯಃ ಪಂಚವಿಂಶಃ ಸ್ತೋಮಃ ಸಂಪಾದ್ಯತೇ ತಸ್ಮಿನ್‌ಸ್ತೋಮೇ ಪ್ರಥಮಾಂ ಸ್ತೋತ್ರೀಯಾಮಾರಭ್ಯೈಕವಿಂಶಸ್ತೋತ್ರೀಯಾಸು ಗೀತಾಸು ಪರಿಶಿಷ್ಟಾಸು ತ್ರಯೋವಿಂಶಸ್ತೋತ್ರಿಯಾಮಾರಭ್ಯ ತಿಸೃಷು ಪರಿಶಿಷ್ಟಾಸು ಸತೀಷು ಮಧ್ಯವರ್ತಿನೀನೀ ಯೇಯಂ ದ್ವಾವಿಂಶಸ್ತೋತ್ರೀಯಾ ತಸ್ಯಾಃ ಪ್ರತಿಹಾರಭಾಗಃ ಪಂಚವಾರಮಾವರ್ತನೀಯಃ— "ಪಂಚಕೃತ್ವಃ ಪ್ರತಿಹರತಿ" ಇತಿ ಶ್ರುತೇಃ। ತತ್ರ ಯಃ ಪ್ರಥಮಃ ಪ್ರತಿಹಾರಸ್ತಂ ಪ್ರತಿಹಾರಂ ಹೇ ಪ್ರಸ್ತೋತರ್ಮದಗ್ರೇ ಕಥಯ, ಅಯಂ ಪ್ರಥಮಃ ಪ್ರತಿಹಾರೋ ವರ್ತತ ಇತಿ। ಪ್ರತಿಹರ್ತುರನುಸ್ಮೀಯಮಾನಂ ಪ್ರಥಮಂ ಪ್ರಥಿಹಾರಂ ಪ್ರತಿ ಮಾಂ ಸ್ಮಾರಯೇತ್ಯರ್ಥಃ। ತಿಸೃಷ್ವವಶಿಷ್ಟಾಸ್ವೇಕಃ ಪಕ್ಷಃ। ಅರ್ಧತೃತೀಯಾಸ್ವವಶಿಷ್ಟಾಸ್ವಿತಿ ದ್ವಿತೀಯಃ ಪಕ್ಷಃ। ಅರ್ಧತ್ರಯೋದಶಾಸ್ವವಶಿಷ್ಟಾಸ್ವಿತಿ ತೃತೀಯಃ ಪಕ್ಷಃ। ಅಂತಿಮಾಂ ಸ್ತೋತ್ರೀಯಾ-ಮಾರಭ್ಯಾವರೋಹಪ್ರಕಾರೇಣ ಯಾ ತೃತೀಯಾ ತಸ್ಯಾ ಉತ್ತರಾರ್ಧಃ ಯಾಸು ತಿಸೃಷ್ವವಸ್ಥಿತಂ ತಾಸ್ತಿಸ್ರೋಽರ್ಧತೃತೀಯಾ। ಅನೇನೈವ ನ್ಯಾಯೇನ ತ್ರಯೋದಶ್ಯಾ ಉತ್ತರಾರ್ಧಂ ಯಾಸು ತ್ರಯೋದಶಸು ವರ್ತತೇ ತಾ ಅರ್ಧತ್ರಯೋದಶಾಃ। ಇತಿಶಬ್ದಃ ಪ್ರಸ್ತೋತಾರಂ ಪ್ರತಿ ಹೋತ್ರಾ ಪ್ರಯುಕ್ತಸ್ಯ ಪ್ರೈಷವಾಕ್ಯಸ್ಯ ಸಮಾಪ್ತ್ಯರ್ಥಃ ॥

ಪ್ರೇಂಖವನ್ನು ಏರಿದ ಹೋತೃವಿಗೆ ಇತರ ಕಾರ್ಯಗಳನ್ನು ವಿವರಿಸುತ್ತಾರೆ. ಸಾಮದ ಪ್ರಸ್ತಾವ ಭಾಗವನ್ನು ಗಾನ ಮಾಡುವವನಿಗೆ ಪ್ರಸ್ತೋತಾ ಎಂದು ಹೆಸರು. ಪ್ರಸ್ತೋತೃವನ್ನು ಕುರಿತು ಹೋತೃವು ಪಂಚವಿಂಶಸ್ಯ ಇತ್ಯಾದಿ ವಾಕ್ಯಗಳನ್ನು ಹೇಳಬೇಕು. ರಾಜನವೆಂಬ ಸಾಮದ ಆಧಾರಭೂತವಾದ ತೃಚಗಳ ಆವೃತ್ತಿಯಿಂದ ಪಂಚವಿಂಶಸ್ತೋಮ ಸಂಪಾದನವು ಹಿಂದೆ ಹೇಳಿದೆ. ಅವುಗಳಲ್ಲಿ ಪ್ರಥಮ ಸ್ತೋತ್ರೀಯವನ್ನಾರಂಭಿಸಿ ಇಪ್ಪತ್ತೊಂದು ಸ್ತೋತ್ರೀಯಗಳು ಆದಮೇಲೆ ಉಳಿದ ಇಪ್ಪತ್ತಮೂರರಿಂದ ಮೂರು ಸ್ತೋತ್ರಿಗಳು ಉಳಿದಿರುವಾಗ ಮಧ್ಯದ ಇಪ್ಪತ್ತೆರಡನೆಯ ಸ್ತೋತ್ರೀಯದ ಪ್ರತಿಹಾರ

ಭಾಗವನ್ನು ಐದು ಸಾರಿ ಆವೃತ್ತಿಮಾಡಬೇಕು. **ಪಂಚಕೃತ್ವಃ ಪ್ರತಿಹರತಿ** ಎಂದು ಇದನ್ನು ಇತರ ಶ್ರುತಿಯಲ್ಲಿಯೂ ಹೇಳಿರುತ್ತಾರೆ. ಅದರಲ್ಲಿ ಯಾವ ಮೊದಲಿನ ಪ್ರತಿಹಾರವಿದೆಯೋ ಆ ಪ್ರತಿಹಾರವನ್ನು ಎಲೈ ಪ್ರಸ್ತೋತ್ರವೇ ನನ್ನ ಮುಂದೆ ಹೇಳು. ಪ್ರತಿಹರ್ತೃ ಅನುಷ್ಠಾನ ಮಾಡಬೇಕಾದ ಪ್ರಥಮ ಪ್ರತಿಹಾರದ ವಿಷಯದಲ್ಲಿ ನನ್ನನ್ನು ಜ್ಞಾಪಿಸು ಎಂದರ್ಥ. ಇಲ್ಲಿ ಮೂರು ಸ್ತೋತ್ರೀಯಗಳು ಉಳಿದಿರುವಾಗ, ಎಂದು ಒಂದು ಪಕ್ಷ. ಅರ್ಧ ತೃತೀಯ ಉಳಿದಿರುವಾಗ ಎಂದು ಎರಡನೆಯ ಪಕ್ಷ ಅರ್ಧ ತ್ರಯೋದಶ (ಹದಿಮೂರು) ಉಳಿದಿರುವಾಗ ಎಂದು ಮೂರನೆಯ ಪಕ್ಷವಿದೆ. ಕೊನೆಯ ಸ್ತೋತ್ರೀಯ ವನ್ನಾರಂಭಿಸಿ ಅವರೋಹ ಕ್ರಮದಿಂದ ಅಂದರೆ ಇಪ್ಪತ್ತೈದು, ಇಪ್ಪತ್ತನಾಲ್ಕು ಇತ್ಯಾದಿ ಕ್ರಮದಿಂದ ಯಾವದು ಮೂರನೆಯ ದಾಗುವುದೋ ಅದರ ಉತ್ತರಾರ್ಧವು ಯಾವ ಮೂರರಲ್ಲಿ ಇರುವುದೋ ಆ ಮೂರಕ್ಕೆ ಅರ್ಧ ತೃತೀಯವೆಂದು ಹೆಸರು. ಇದೇ ನ್ಯಾಯದಿಂದ ಹದಿಮೂರನೆಯ ಸ್ತೋತ್ರೀಯದ ಯಾವ ಉತ್ತರಾರ್ಧವು ಯಾವ ಹದಿಮೂರರಲ್ಲಿ ಇದೆಯೋ ಅವು ಅರ್ಧ ತ್ರಯೋದಶಗಳು. ಇತಿ ಶಬ್ದವು ಪ್ರೈಷವಾಕ್ಯಸಮಾಪ್ತಿಯನ್ನು ತಿಳಿಸುತ್ತದೆ.

ಽರ್ಧತ್ರಯೋದಶಾಸು ಪ್ರವಾಚಯತೇತಿ ಜಾತೂಕರ್ಣ್ಯಃ ||

**ಪ್ರೈಷವಾಕ್ಯೇ ಶಾಖಾಂತರಪಾಠಮಾಶ್ರಿತ್ಯ ಮತಾಂತರಂ ದರ್ಶಯತಿ—ಅರ್ಧತ್ರಯೋದ-ಶಾಸ್ವಿತ್ಯೇಷ ಏವ ಜಾತೂಕರ್ಣ್ಯಾಖ್ಯಸ್ಯ ಮುನೇರಭಿಪ್ರೇತಃ । ತಥಾ ಪ್ರಬ್ರೂತಾದಿತ್ಯಸ್ಮಿನ್ನೇವಾರ್ಥೇ ಪಾಠೋಽಭಿಪ್ರೇತಃ ||**

ಪ್ರೈಷವಾಕ್ಯದಲ್ಲಿ ಇತರಶಾಖೆಯ ಪಾಠವನ್ನಾಶ್ರಯಿಸಿ ಮತಾಂತರವನ್ನು ತೋರಿಸುತ್ತಾರೆ. ಅರ್ಧತ್ರಯೋದಶ ಸ್ತೋತ್ರೀಯಗಳಲ್ಲಿ ಎಂದು ಯಾವ ಮೂರನೆಯಪಕ್ಷವಿದೆಯೋ ಅದು ಜಾತೂಕರ್ಣ್ಯನೆಂಬ ಮುನಿಯ ಮತವು. ಅವರು ಪ್ರಬ್ರೂತ ಎಂಬ ಧಾತುವಿಗೆ ಬದಲಾಗಿ ಪ್ರವಾಚಯತ ಎಂದು ಪಠಿಸುತ್ತಾರೆ.

ಪ್ರೋಕ್ತೇ ಜಪತಿ ||

**ಪ್ರೈಷವಾಕ್ಯಾದೂರ್ಧ್ವಂ ಹೋತುರ್ಜಪಂ ವಿಧತ್ತೇ–ಪ್ರಸ್ತೋತ್ರಾ ಪ್ರಥಮಪ್ರತಿಹಾರಕಾಲೇ ಪ್ರೋ'ಕ್ತೇ ಸತಿ ಹೋತಾ ವಕ್ಷ್ಯಮಾಣಮಂತ್ರಂ ಜಪೇತ್ ||**

ಪ್ರೈಷವಾಕ್ಯವಾದಮೇಲೆ ಹೋತೃವಿಗೆ ಜಪವನ್ನು ವಿಧಿಸುತ್ತಾರೆ. ಪ್ರಸ್ತೋತೃವಿಗೆ ಪ್ರಥಮಪ್ರತಿಹಾರಕಾಲ ವನ್ನು ಹೇಳಿದಮೇಲೆ ಹೋತೃವು ಮುಂದೆ ಹೇಳುವ ಮಂತ್ರವನ್ನು ಜಪಿಸಬೇಕು.

ಸುಪರ್ಣೋಽಸಿ ಗರುತ್ಮಾನ್‌ಪ್ರೇಮಾಂ ವಾಚಂ ವದಿಷ್ಯಾಮಿ ಬಹು ವದಿಷ್ಯಂತೀಂ ಬಹು ಪತಿಷ್ಯಂತೀ ಬಹು ಕರಿಷ್ಯಂತೀಂ ಬಹು ಸನಿಷ್ಯಂತೀಂ ಬಹೋರ್ಭೂಯಃ ಕರಿಷ್ಯಂತೀಂ ಸ್ವರ್ಗಚ್ಛಂತೀಂ ಸ್ವರ್ವದಿಷ್ಯಂತೀಂ ಸ್ವಃ ಪತಿಷ್ಯಂತೀಂ ಸ್ವಃ ಕರಿಷ್ಯಂತೀಂ ಸ್ವಃ ಸನಿಷ್ಯಂತೀಂ ಸ್ವರಿಮಂ ಯಜ್ಞಂ ವಕ್ಷ್ಯಂತೀಂ ಸ್ವರ್ಮಾಂ ಯಜ-ಮಾನಂ ವಕ್ಷ್ಯಂತೀಮಿತಿ ||

೩೪) ಎಂಬ ಋಕ್ಕನ್ನು ತೆಗೆದು ಹಾಕಿ ಉಳಿದ ಮೂವತ್ತಮೂರು ಋಕ್ಕುಗಳನ್ನು ಮಾತ್ರ ಪಠಿಸಬೇಕು. ಆಮೇಲೆ ಪ್ರಕೃತಾನಿ (ಋ-ಸಂ-೮-೩೨-೧) ಇತ್ಯಾದಿ ಮೂವತ್ತು ಋಕ್ಕುಗಳುಳ್ಳ ಸೂಕ್ತವನ್ನು ಪಠಿಸಬೇಕು. ಆ ಮೇಲೆ ಆ ತೂ ನ ಇಂದ್ರ (ಋ-ಸಂ-೮-೮೧-೧) ಇತ್ಯಾದಿ ಒಂಬತ್ತು ಋಕ್ಕುಗಳುಳ್ಳ ಸೂಕ್ತ. ಆಮೇಲೆ ಆ ಪ್ರದ್ರವ (ಋ-ಸಂ-೮-೮೨-೧) ಇತ್ಯಾದಿ ಒಂಬತ್ತು ಋಕ್ಕಿನ ಸೂಕ್ತ. ಇವೆರಡನ್ನೂ ಪಠಿಸಬೇಕು. ಆಮೇಲೆ ಸೂದದೋಹಸಮಂತ್ರವನ್ನು ಪಠಿಸಬೇಕು. ಸೂದದೋಹಸ ಸೂಕ್ತದ ಹಿಂದಿನ ಮಂತ್ರಗಳು ಇನ್ನೂರ ನಲವತ್ತನಾಲ್ಕು ಋಕ್ಕುಗಳಾಗುತ್ತವೆ. ಇವುಗಳಿಂದ ತೃಚಾಶೀತಿ ಯಾಗುತ್ತದೆ.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪಂಚಮಾರಣ್ಯಕೇ
ದ್ವಿತೀಯಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪಂಚಮಾರಣ್ಯಕದ
ಎರಡನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವು



# ಅಥ ಪಂಚಮಾರಣ್ಯಕೇ ದ್ವಿತೀಯಾಧ್ಯಾಯೇ ಚತುರ್ಥಃ ಖಂಡಃ

## ಐದನೆಯ ಆರಣ್ಯಕದ ಎರಡನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು

---

ಬಾರ್ಹತಿ ತೃಚಾಶೀತಿಃ ||

ಗಾಯತ್ರ್ಯಾಸ್ತೃಚಾಶೀತೇರೂರ್ಧ್ವಂ ಶಂಸನೀಯಂ ಭಾಗಂ ದರ್ಶಯತಿ—ಬೃಹತಿಛಂದೋಯುಕ್ತಾ ಕಾಚಿತ್ತೃಚಾಶೀತಿಃ ಪಠನೀಯಾ ||

ಪೂರ್ವೋಕ್ತವಾದ ಗಾಯತ್ರ ಛಂದಸ್ಸಿನ ತೃಚಾಶೀತಿ ಪಠನವಾದ ಮೇಲೆ ಮುಂದಿನ ಪಠಿಸಬೇಕಾದ ಭಾಗವನ್ನು ತೋರಿಸುತ್ತಾರೆ. ಬೃಹತೀ ಛಂದಸ್ಸಿನಿಂದ ಕೂಡಿದ ತೃಚಾಶೀತಿಯನ್ನು ಪಠಿಸಬೇಕೆಂದು ತಾತ್ಪರ್ಯ.

ಮಾ ಚಿದನ್ಯದ್ವಿಶಂಸತ್ಯೇಕಯಾ ನ ತ್ರಿಂಶತ್ಪಿಬಾ ಸುತಸ್ಯ ರಸಿನ ಇತಿ ವಿಂಶತೇಃ ಸಪ್ತಮೀಂ ಚಾಷ್ಟಮೀಂ ಚೋದ್ಧರತಿ ಯದಿಂದ್ರ ಪ್ರಾಗಪಾಗುದಗಿತಿ ಚತುರ್ದಶ ವಯಂ ಘ ತ್ವಾ ಸುತಾವಂತಶ್ಚನೇತ್ಯೇತಸ್ಯ ದ್ವಿಪದಾಂ ಚೋದ್ಧರತಿ ರಾಥಂತರಂ ಚ ಪ್ರಗಾಥಮಥ ಹಾಸ್ಯ ನ ಕಿಃ ಸುದಾಸೋ ರಥಮಿತ್ಯೇತಂ ಪ್ರಗಾಥಮುದ್ಧೃತ್ಯ ತ್ವಾಮಿದಾ ಹ್ಯೋನರ ಇತ್ಯೇತಂ ಪ್ರಗಾಥಂ ಪ್ರತ್ಯವದಧಾತ್ಯಭಿ ಪ್ರ ವಃ ಸುರಾಧಸಮಿತಿ ಷಡ್ವಾಲಖಿಲ್ಯಾನಾಂ ಸೂಕ್ತಾನಿ ಯಃ ಸತ್ರಾಹಾ ವಿಚರ್ಷಣಿರಿತಿ ಶೇಷೋಽಯಂ ತೇ ಅಸ್ತು ಹರ್ಯತ ಇತಿ ಸೂಕ್ತೇ ಉಭಯಂ ಶೃಣವಚ್ಚ ನ ಇತಿ ಸಪ್ತಮೀಂ ಚಾಷ್ಟಮೀಂ ಚೋದ್ಧರತಿ ತರೋಭಿರ್ವೋ ವಿದದ್ವಸುಮಿತ್ಯುತ್ತಮಾಮುದ್ಧರತಿ ಯೋ ರಾಜಾ ಚರ್ಷಣೀನಾಮಿತ್ಯೇಕಾದಶ ತಂ ವೋ ದಸ್ಮಮೃತೀಷಹಮಾ ನೋ ವಿಶ್ವಾ ಸುಹವ್ಯೋ ಯಾ ಇಂದ್ರ ಭುಜ ಆಭರ ಇತಿ ನವ ಸೂದದೋಹಾಃ ||

ತತ್ರತ್ಯಾ ಋಚೋ ವಿವಿಚ್ಯ ದರ್ಶಯತಿ—" ಮಾ ಚಿದನ್ಯತ್ " ಇತ್ಯಾದಿಕಂ ಚತುಸ್ತ್ರಿಂಶದ್ಭಿರ್ಋಗ್ಭಿರುಪೇತಂ ಸೂಕ್ತಂ ತಸ್ಯ ಸೂಕ್ತಸ್ಯಾಪಸಾರಭಾಗಸ್ತ್ವಾಃ " ಸ್ತುಹಿ ಸ್ತುಹಿ " (ಋ. ಸಂ. ಮ

೮-ಸೂ-1 ಋ-೩೦) ಇತ್ಯಾದಿಕಾಃ ಪಂಚ ಪರಿತ್ಯಜ್ಯ "ಸ್ತೋಮಾಸೋ ಅವೃತ್ಸತ" (ಋ. ಸಂ-
ಮಂ. ೮ ಸೂ. ೧ ಋ. ೨೮) ಇತ್ಯಂತಮೇವೈಕೋನತ್ರಿಂಶದ್ಭಿರ್ಋಗ್ಭಿರುಪೇತಂ ಪಠೇತ್ । "ಪಿಬಾ
ಸುತಸ್ಯ" ಇತ್ಯೇತಸ್ಮಿಂಶ್ಚತುರ್ವಿಂಶದ್ಭಿರ್ಋಗ್ಭಿ [ತಿಭಿ] ರುಪೇತೇ ಸೂಕ್ತೇ ವಿಂಶತಿಸಂಖ್ಯಾಯಾ
ಊರ್ಧ್ವಂ "ಯಂ ಮೇ ದುಃ" [ಋ. ಸಂ. ಮಂ. ೮ ಸೂ. ೩ ಋ. ೨೧] ಇತ್ಯಾದ್ಯಾಶ್ಚತಸ್ರ
ಋಚಃ ಪರಿತ್ಯಜೇತ್ । ಅವಶಿಷ್ಟಾಯಾಂ ವಿಂಶತಾವಪಿ "ಅಭಿ ತ್ವಾ ಪೂರ್ವಪೀತಯೇ' [ಋ. ಸಂ.
ಮಂ. ೮ ಸೂ. ೩ ಋ. ೭] ಇತ್ಯೇತಾಂ ಸಪ್ತಮೀಂ । "ಅಸ್ಯೇದಿಂದ್ರೋ ವಾವೃಧೇ" [ಋ. ಸಂ-
ಮಂ. ೮ ಸೂ. ೩ ಋ. ೮] ಇತ್ಯೇತಾಮಷ್ಟಮೀಂಚ ಪರಿತ್ಯಜ್ಯಾವಶಿಷ್ಟಾಭಿರಷ್ಟಾದಶಭಿರ್ಋಗ್ಭಿರು-
ಪೇತಂ ಸೂಕ್ತಮ್ । ತತ್ರಾಂತಿಮಾಃ "ಪ್ರ ಪೂಷಣಂ" [ಋ. ಸಂ. ಮಂ. ೮ ಸೂ. ೪ ಋ ೧೫]
ಇತ್ಯಾದಿಕಾಃ ಸಪ್ತ ಪರಿತ್ಯಜ್ಯ "ವಹಂತು ಸವನೇ ದುಪ" [ಋ. ಸಂ. ಮಂ. ೮ ಸೂ. ೪ ಋ. ೧೪]
ಇತ್ಯಂತಮೇವ ಚತುರ್ದಶಭಿರ್ಋಗ್ಭಿರುಪೇತಂ ಪಠೇತ್ । "ವಯಂ ಘ ತ್ವಾ" ಇತಿ ಸೂಕ್ತಮೇ-
ಕೋನವಿಂಶತಿಭಿರ್ಋಗ್ಭಿಃ ಸಮೇತಂ [ತಸ್ಮಿನ್ಸೂಕ್ತೇ] "ನ ಹಿ ಷಸ್ತವ" [ಋ. ಸಂ. ಮಂ. ೮-
ಸೂ. ೩೩ ಋ. ೧] ಇತ್ಯಾದಿಕಾಶ್ಚತಸ್ರಃ ಪರಿತ್ಯಜ್ಯ "ಮದಾಯ ದ್ಯುಕ್ಷ ಸೋಮಪಾಃ" [ಋ. ಸಂ-
ಮಂ. ೮ ಸೂ. ೩೩ ಋ. ೧೫] ಇತ್ಯಂತಮೇವ ಪಂಚದಶಭಿರ್ಋಗ್ಭಿರುಪೇತಂ ತತ್ಸೂಕ್ತಂ ಪಠೇತ್ ।
"ಮೋ ಷು ತ್ವಾ" ಇತ್ಯಾದಿಕಂ ಸಪ್ತವಿಂಸತಿಭಿರ್ಋಗ್ಭಿರುಪೇತಂ ತಸ್ಮಿನ್ಸೂಕ್ತೇ 'ರಾಯಸ್ಕಾಮಃ'
[ಋ. ಸಂ. ಮಂ. ೭ ಸೂ. ೩೨ ಋ. ೩] ಇತ್ಯೇತಾಂ ದ್ವಿಪದಾಮೃಚಮುದ್ಧರೇತ್ ॥ ತಥಾ ರಥಂತರ
ಸಾಮಸಂಬಂಧಿಪ್ರಗಾಥಂ—"ಅಭಿ ತ್ವಾ ಶೂರ" (ಋ. ಸಂ. ಮಂ. ೭ ಸೂ-೩೨ ಋ. ೨೨) ಇತ್ಯಾ
ದಿಕಮೃಗ್ದ್ವಯಮುದ್ಧರೇತ್ ॥ ತತೋಽವಶಿಷ್ಟಂ ಚತುರ್ವಿಂಶತಿಭಿರ್ಋಗ್ಭಿರುಪೇತಂ ತತ್ಸೂಕ್ತಂ
ಪಠೇತ್ । ತತ್ರಾಪಿ "ನ ಕಿಃ ಸುದಾಸಃ" ಇತ್ಯೇತಂ ಪ್ರಗಾಥಮುದ್ಧೃತ್ಯ ತಸ್ಯ ಸ್ಥಾನೇ "ತ್ವಾಮಿದಾ
ಹ್ಯೋನರಃ' ಇತ್ಯೇತಂ ಪ್ರಗಾಥಂ ಪ್ರಕ್ಷಿಪ್ಯ ಪಠೇತ್ । 'ಅಭಿ ಪ್ರ ವಃ' (ಋ. ಸಂ. ಮಂ. ೮ ವಾಲ-
ಸೂ. ೧) ಇತ್ಯಾದಿಕಾನಿವಾಲಖಿಲ್ಯಾನಂ ಸಂಹಿತಾಯಾಮಾಮ್ನಾತಾನಿ ಷಟ್‌ಪಂಚಾಶದ್ಭಿರ್ಋಗ್ಭಿರು-
ಪೇತಾನಿ ಷಟ್‌ಸೂಕ್ತಾನಿ ಪಠೇತ್ । "ತ್ವಾಮಿದ್ಧಿ ಹ ವಾ ಮಹೇ' ಇತ್ಯಾದಿಕಂ ಚತುರ್ದಶಭಿರ್ಋ-
ಗ್ಭಿರುಪೇತಂ ಸೂಕ್ತಂ ತಸ್ಮಿನ್ನಾದಿತ ಆರಭ್ಯ ದ್ವೇ ಋಚೌ ಪರಿತ್ಯಜ್ಯ "ಯಃ ಸತ್ರಾಹಾ" ಇತ್ಯಾ-
ದಿಕಂ ದ್ವಾದಶಭಿರ್ಋಗ್ಭಿರುಪೇತಂ ಸೂಕ್ತಶೇಷಂ ಪಠೇತ್ । ಅಯಂ ತೇ ಅಸ್ತು" ಇತಿ ಪಂಚರ್ಚ-
ಮೇಕಂ ಸೂಕ್ತಂ । 'ಆ ಮಂದ್ರೈಃ (ಋ. ಸಂ. ಮಂ- ೩ ಸೂ. ೪೫ ಋ-೧) ಇತಿ ಪಂಚರ್ಚಂ
ದ್ವಿತೀಯಂ ಸೂಕ್ತಂ ತೇ ಉಭೇ ಸೂಕ್ತೇ ಪಠೇತ್ । "ಉಭಯಂ ಶೃಣವಚ್ಚ ನಃ" ಇತ್ಯಾದಿಕ-
ಮಷ್ಟಾದಶರ್ಚಂ ಸೂಕ್ತಂ ತಸ್ಯ ಮಧ್ಯೇ "ತ್ವಂ ಹ್ಯೇಹಿ" (ಋ. ಸಂ. ಮಂ. ೮ ಸೂ. ೬೧ ಋ. ೭)
ಇತ್ಯಾದಿಕಾಂ ಸಪ್ತಮೀಂ । ತ್ವಂ ಪುರೂ ಸಹಸ್ರಾಣಿ' (ಋ. ಸಂ. ಮಂ. ೮ ಸೂ. ೬೧ ಋ. ೯)
ಇತ್ಯಾದಿಕಾಮಷ್ಟಮೀಂ ಚೋದ್ಧೃತ್ಯಾವಶಿಷ್ಟಂ ಷೋಡಶರ್ಚಂ ಸೂಕ್ತಂ ಪಠೇತ್ । ತರೋಭಿರ್ವಃ"
ಇತ್ಯಾದಿಕಂ ಪಂಚದಶರ್ಚಂ ಸೂಕ್ತಂ ತಸ್ಮಿನ್ನುತ್ತಮಾಂ । 'ಸೋಮ ಇದ್ವಃ (ಋ. ಸಂ. ಮಂ. ೮
ಸೂ. ೬೬ ಋ. ೧೫) ಇತ್ಯಾದಿಕಾಮುದ್ಧೃತ್ಯಾವಶಿಷ್ಟಂ ಚತುರ್ದಶರ್ಚಂ ಪಠೇತ್ । ಯೋ ರಾಜಾ
ಚರ್ಷಣೀನಾಂ" ಇತ್ಯೇತತ್ಪಂಚದಶರ್ಚಂ ಸೂಕ್ತಂ (ತಸ್ಮಿನ್ಸೂಕ್ತೆ) 'ಸ್ವಂ ನ ಇಂದ್ರಾಽಽಸಾಮ್"

(ಋ. ಸಂ. ಮಂ. ೮ ಸೂ. ೭೦ ಋ. ೧೨) ಇತ್ಯಾದಿಕಾಶ್ಚತಸ್ರ ಋಚಃ ಪರಿತ್ಯಜ್ಯಾವಶಿಷ್ಟಮೇಕಾದ-ಶರ್ಚಂ ಪಠೇತ್ । ' ತಂ ವೋ ದಸ್ಮಮ್ ' ಇತ್ಯಾದಿಕಂ ಷಡೃಚಂ ಸೂಕ್ತಂ ಪಠೇತ್ । ಆ ನೋ ವಿಶ್ವಾಸು ' ಇತ್ಯಾದಿಕಮಪಿ ಷಡೃಚಂ ಸೂಕ್ತಂ ಪಠೇತ್ । 'ಯಾ ಇಂದ್ರ' ಇತ್ಯಾದಿಕಂ ಪಂಚ-ದಶರ್ಚಂ ಸೂಕ್ತಂ ತಸ್ಯಾವಸಾನಭಾಗಸ್ಥಾಃ ' ವಿಶ್ವಾಃ ಪೃತನಾಃ ' (ಋ-ಸಂ-ಮಂ-೮-ಸೂ-೯೨-ಋ-೧೦) ಇತ್ಯಾದಿಕಾಃ ಷಡೃಚಃ ಪರಿತ್ಯಜ್ಯ " ನ ತ್ವಾ ದೇವಾಸ ಆಶತ " (ಋ-ಸಂ-ಮಂ-೮-ಸೂ-೯೨ ಋ-೯) ಇತ್ಯಂತಂ ನವರ್ಚಂ ಪಠೇತ್ । ತತಃ ಸೂದದೋಹಸಂ ಪಠೇತ್ । ಏವಂ ಸತಿ ಸೂದದೋಹಸಃ ಪ್ರಾಚೀನಾ ಬಾರ್ಹತೀ ತೃಚಾಶೀತಿಃ ಸಂಪದ್ಯತೇ ॥

ತೃಚಾಶೀತಿ ಋಕ್ಕುಗಳನ್ನು ವಿವರಿಸುತ್ತಾರೆ. **ಮೋಚಿದನ್ಯತ್** (ಋ-ಸಂ-೮-೧-೧) ಇತ್ಯಾದಿ ಮೂವತ್ತನಾಲ್ಕು ಋಕ್ಕಿನ ಸೂಕ್ತದಲ್ಲಿ ಕೊನೆಯಲ್ಲಿರುವ **ಸ್ತುಹಿ ಸ್ತುಹಿ** (ಋ-ಸಂ-೮-೧-೩೦) ಇತ್ಯಾದಿ ಐದು ಋಕ್ಕುಗಳನ್ನು ಬಿಟ್ಟು, **ಸ್ತೋಮಸೋ ಅವೃಕ್ಷತ** (ಋ-ಸಂ-೮-೧-೨೯) ಎಂಬ ಋಕ್ಕಿನವರೆಗಿನ ಇಪ್ಪತ್ತೊಂಬತ್ತು ಋಕ್ಕುಗಳನ್ನು ಪಠಿಸಬೇಕು. **ಪಿಬಾಸುತಸ್ಯ** (ಋ-ಸಂ-೮-೩-೧) ಎಂಬ ಇಪ್ಪತ್ತನಾಲ್ಕು ಋಕ್ಕಿನ ಸೂಕ್ತದಲ್ಲಿ ಮೂವತ್ತರ ಮೇಲಿನ **ಯಂ ಮೇ ದುಃ** (ಋ-ಸಂ-೩-೩೧) ಇತ್ಯಾದಿ ನಾಲ್ಕು ಋಕ್ಕುಗಳನ್ನು ಬಿಡಬೇಕು. ಉಳಿದಮೂವತ್ತರಲ್ಲಿಯೂ **ಅಭಿ ತ್ವಾ ಪೂರ್ವಪೀತಯೇ** ( ಋ-ಸಂ-೮-೩-೭ ) ಎಂಬ ಏಳನೆಯ, **ಅಸ್ಯೇದಿಂದ್ರೋ ವಾವೃಧೇ** ( ಋ-ಸಂ-೮-೩-೮ ) ಎಂಬ ಎಂಟನೆಯ ಋಕ್ಕುಗಳನ್ನು ಬಿಟ್ಟು ಉಳಿದ ಹದಿನೆಂಟು ಋಕ್ಕುಗಳನ್ನು ಮಾತ್ರ ಪಠಿಸಬೇಕು. **ಯದಿಂದ್ರ ಪ್ರಾಗಪಾದುದಕ್** (ಋ-ಸಂ-೮-೪-೧) ಇತ್ಯಾದಿ ಇಪ್ಪತ್ತೊಂದು ಋಕ್ಕುಗಳಿಂದ ಕೂಡಿದ ಸೂಕ್ತದಲ್ಲಿ ಕೊನೆಯ **ಪ್ರಪೂಷಣಂ** (ಋ-ಸಂ-೮-೪-೧೫) ಇತ್ಯಾದಿ ಎಳು ಋಕ್ಕುಗಳನ್ನು ಬಿಟ್ಟು **ವಹಂತು ಸವನೇ ದುಪ** (ಋ-ಸಂ-೮-೪-೧೪) ಎಂಬ ಋಕ್ಕಿನವರೆಗಿನ ಹದಿನಾಲ್ಕು ಪಠಿಸಬೇಕು. **ವಯಂ ಘ ತ್ವಾ** (ಋ-ಸಂ-೮-೩೩-೧) ಎಂಬ ಹತ್ತೊಂಹತ್ತು ಋಕ್ಕುಳ್ಳಸೂಕ್ತದಲ್ಲಿ **ನ ಹಿ ಷಸ್ತವ** (ಋ-ಸಂ-೮-೩೩-೧) ಇತ್ಯಾದಿ ನಾಲ್ಕು ಋಕ್ಕುಗಳನ್ನು ಬಿಟ್ಟು ಹದಿನೈದು ಋಕ್ಕುಗಳನ್ನು ಮಾತ್ರ ಪಠಿಸಬೇಕು. **ಮೋ ಷು ತ್ವಾ** (ಋ-ಸಂ ೭-೩೨-೧) ಇತ್ಯಾದಿ ಇಪ್ಪತ್ತೇಳು ಋಕ್ಕಿನ ಸೂಕ್ತದಲ್ಲಿ **ರಾಯಸ್ಕಾಮಃ** (ಋ-ಸಂ-೭-೩೨-೧) ಎಂಬ ದ್ವಿಪದ ಋಕ್ಕನ್ನು ತೆಗೆದುಹಾಕಬೇಕು. ಹಾಗೆ ರಥಂತರ ಸಾಮಸಂಬಂಧಿ ಪ್ರಗಾಥವಾದ **ಅಭಿ ತ್ವಾ ಶೂರ** (ಋ-ಸಂ-೭-೩೨-೨೨) ಇತ್ಯಾದಿ ಎರಡು ಋಕ್ಕುಗಳನ್ನೂ ತೆಗೆಯಬೇಕು. ಉಳಿದ ಇಪ್ಪತ್ತನಾಲ್ಕು ಋಕ್ಕಿನ ಸೂಕ್ತವನ್ನು ಪಠಿಸಬೇಕು. ಅದರಲ್ಲಿಯೂ **ನಕಿಃ ಸುದಾಸಃ** (ಋ-ಸಂ-೭-೩೨-೧೦) ಎಂಬ ಪ್ರಗಾಥವನ್ನು ತೆಗೆದು ಅದರ ಸ್ಥಾನದಲ್ಲಿ **ತ್ವಾಮಿದಾ ಹ್ಯೋನರಃ** (ಋ-ಸಂ-೮-೯೯-೧) ಎಂಬ ಪ್ರಗಾತವನ್ನು ಸೇರಿಸಿ ಪಠಿಸಬೇಕು. **ಅಭಿಪ್ರವಃ** (ಋ-ಸಂ-೮-೧) ಇತ್ಯಾದಿ ವಾಲ ಖಿಲ್ಯ ಸಂಹಿತೆಯಲ್ಲಿ ಹೇಳಿದ ಐವತ್ತಾರು ಋಕ್ಕುಗಳಿಂದ ಕೂಡಿದ ಆರು ಸೂಕ್ತಗಳನ್ನು ಆಮೇಲೆ ಪಠಿಸಬೇಕು ಅವುಗಳಲ್ಲಿ **ತ್ವಾಮಿದ್ಧಿ ಹವಾಮಹೇ** ಎಂಬ ಹದಿನಾಲ್ಕು ಋಕ್ಕಿನ ಸೂಕ್ತದಲ್ಲಿ ಆದಿಯ ಎರಡು ಋಕ್ಕುಗಳನ್ನು ಬಿಟ್ಟು, **ಯಃ ಸತ್ರಾಹಾ** (ಋ-ಸಂ-೬-೪೬-೩) ಎಂಬ ಹನ್ನೆರಡು ಋಕ್ಕಿನ ಸೂಕ್ತದೊಡನೆ ಸೇರಿಸಿ ಪಠಿಸಬೇಕು. **ಅಯಂ ತೇ ಅಸ್ತು** (ಋ-ಸಂ-೩-೪೪-೧) ಎಂಬ ಐದು ಋಕ್ಕಿನ ಸೂಕ್ತವನ್ನೂ, **ಆ ಮಂದ್ರೈಃ** (ಋ-ಸಂ-೩-೪೫-೧) ಎಂಬ ಐದು ಋಕ್ಕಿನ ಎರಡನೆಯ ಸೂಕ್ತವನ್ನೂ ಪಠಿಸಬೇಕು. **ಉಭಯಂ ಶೃಣವಚ್ಚನಃ** (ಋ-ಸಂ-೮-೬೧-೧) ಎಂಬ ಹದಿನೆಂಟು ಋಕ್ಕಿನ ಸೂಕ್ತದಲ್ಲಿ **ತ್ವಂ ಹ್ಯೇ ಹಿ** (ಋ-ಸಂ-೮-೬೧-೭) ಎಂಬ ಏಳನೆಯ ಋಕ್ಕನ್ನೂ, ' ತ್ವಂ ಪುರೂ

ಸಹಸ್ರಾಣಿ ' (ಋ-ಸಂ-೮-೬೧-೮) ಎಂಬ ಎಂಟನೆಯ ಋಕ್ಕನ್ನೂ ತೆಗೆದುಹಾಕಿ ಉಳಿದ ಹದಿನಾರು ಋಕ್ಕಿನ ಸೂಕ್ತವನ್ನು ಪಠಿಸಬೇಕು. **ತರೋಭಿರ್ವಃ** (ಋ-ಸಂ-೮-೬೬-೧) ಇತ್ಯಾದಿ ಹದಿನೈದು ಋಕ್ಕಿನ ಸೂಕ್ತದಲ್ಲಿ **ಸೋಮ ಇದ್ವಃ** [ಋ-ಸಂ-೮-೬೬-೧೫] ಎಂಬ ಕೊನೆಯ ಋಕ್ಕನ್ನು ತೆಗೆದುಹಾಕಿ ಉಳಿದ ಹದಿನಾಲ್ಕು ಋಕ್ಕುಗಳನ್ನು ಪಠಿಸಬೇಕು. **ಯೋ ರಾಜಾ ಚರ್ಷಣೀನಾಂ** [ಋ-ಸಂ-೮-೭೦-೧] ಎಂಬ ಹದಿನೈದು ಋಕ್ಕಿನ ಸೂಕ್ತದಲ್ಲಿ **ತ್ವಂ ನ ಇಂದ್ರಾಸಾಂ** [ಋ-ಸಂ-೮-೭೦-೧೨] ಇತ್ಯಾದಿ ನಾಲ್ಕು ಋಕ್ಕುಗಳನ್ನು ಬಿಟ್ಟು ಉಳಿದ ಹನ್ನೊಂದು ಋಕ್ಕುಗಳನ್ನು ಮಾತ್ರ ಪಠಿಸಬೇಕು. **ತಂ ವೋ ದಸ್ಮಂ** [ಋ-ಸಂ-೮-೮೮-೧] ಇತ್ಯಾದಿ ಆರು ಋಕ್ಕಿನ ಸೂಕ್ತವನ್ನೂ ಪಠಿಸಬೇಕು. **ಆ ನೋ ವಿಶ್ವಾಸು** [ಋ-ಸಂ-೮-೯೦-೧] ಎಂಬ ಆರು ಋಕ್ಕಿನ ಸೂಕ್ತವನ್ನೂ ಪಠಿಸಬೇಕು. **ಯಾ ಇಂದ್ರ ಭುಜ** [ಋ-ಸಂ ೮-೯೭-೧] ಎಂಬ ಹದಿನೈದು ಋಕ್ಕಿನ ಸೂಕ್ತದ ಕೊನೆಯ **ವಿಶ್ವಾಃ ಪೃತನಾಃ** [ಋ-ಸಂ-೮-೯೭-೧೦] ಇತ್ಯಾದಿ ಆರು ಋಕ್ಕುಗಳನ್ನು ಬಿಟ್ಟು, **ನ ತ್ವಾ ದೇವಾಸ ಆಶತ** [ಋ-ಸಂ-೮-೯೭-೯] ಎಂಬ ಋಕ್ಕಿನವರೆಗಿನ ಒಂಬತ್ತು ಋಕ್ಕುಗಳನ್ನು ಪಠಿಸಬೇಕು. ಆ ಮೇಲೆ ಸೂದದೋಹಸ ಮಂತ್ರಗಳನ್ನು ಪಠಿಸಬೇಕು. ಇಲ್ಲಿಯೂ ಸೂದದೋಹಸದ ಹಿಂದಿನ ಋಕ್ಕುಗಳು ಸೇರಿ ತೃಚಾಶೀತಿಯಾಗುತ್ತದೆ.

**ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ**
**ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪಂಚಮಾರಣ್ಯಕೇ**
**ದ್ವಿತೀಯಾಧ್ಯಾಯೇ ಚತುರ್ಥಃ ಖಂಡಃ**

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪಂಚಮಾರಣ್ಯಕದ
ಎರಡನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವು ||

---

# ಅಥ ಪಂಚಮಾರಣ್ಯಕೇ ದ್ವಿತೀಯಾಧ್ಯಾಯೇ ಪಂಚಮಃ ಖಂಡಃ

**ಐದನೆಯ ಆರಣ್ಯಕದ ಮೊದಲನೆಯ ಅಧ್ಯಾಯದಲ್ಲಿ ಐದನೆಯ ಖಂಡವು**

•

---

ಔಷ್ಣಿಹೀ ತೃಚಾಶೀತಿಃ ||

**ಬಾರ್ಹತ್ಯಾಸ್ತೃಚಾಶೀತೇರೂರ್ಧ್ವಂ ಶಂಸನೀಯಭಾಗಂ ದರ್ಶಯತಿ— ಉಷ್ಣಿಕ್‌ಛಂದೋ-ಯುಕ್ತಾ ಕಾಽಪಿ ತೃಚಾಶೀತಿಃ ಪಠನೀಯಾ ||**

ಬಾರ್ಹತೀ ತೃ ಚಾಶೀತಿ ಪಠನವಾದಮೇಲೆ ಮುಂದೆ ಪಠಿಸಬೇಕಾದ ಭಾಗವನ್ನು ತೋರಿಸುತ್ತಾರೆ. ಆಮೇಲೆ ಉಷ್ಣಿಕ್‌ಛಂದಸ್ಸಿನಿಂದ ಕೂಡಿದ ಒಂದು ತೃಚಾಶೀತಿಯನ್ನು ಪಠಿಸಬೇಕು.

ಯ ಇಂದ್ರ ಸೋಮಪಾತಮ ಇತಿ ಸೂಕ್ತೇ ತ್ವಮಭಿ ಪ್ರಗಾಯತೇ-
ತ್ಯುತ್ತಮಾಮುದ್ಧರತೀಂದ್ರಾಯ ಸಾಮ ಗಾಯತ ಸಖಾಯ ಆಶೀ-
ಷಾಮಹೀತಿ ತಿಸ್ರ ಉತ್ತಮಾ ಉದ್ಧರತಿ ಯ ಏಕ ಇದ್ವಿದಯತ
ಆಯಾಹ್ಯದ್ರಿಭಿಃ ಸುತಂ ಯಸ್ಯ ತ್ಯಚ್ಛಂಬರಂ ಮದ ಇತಿ ತ್ರಯ-
ಸ್ತೃಚಾ ಗಾಯತ್ರ್ಯಃ ಸಂಪದೋಷ್ಣಿಹಃ ಸಪ್ತ ಸಪ್ತ ಗಾಯತ್ರ್ಯಃ
ಷಟ್‌ಷಳುಷ್ಣಿಹೋ ಭವಂತಿ ಯದಿಂದ್ರಾಹಂ ಯಥಾ ತ್ವಂ ಪ್ರ
ಸಂಮ್ರಾಜಂ ಚರ್ಷಣೀನಾಮಿತಿ ಸೂಕ್ತೇ ಉತ್ತರಸ್ಯೋತ್ತಮೇ
ಉದ್ಧರತಿ ವಾರ್ತ್ರಹತ್ಯಾಯ ಶವಸ ಇತ್ಯುತ್ತಮಾಮುದ್ಧರತಿ ಸುರೂಪ
ಕೃತ್ನುಮೂತಯ ಇತಿ ತ್ರೀಣ್ಯೈಂದ್ರಸಾನಸಿಂ ರಯಿಮಿತಿ ಸೂಕ್ತೇ
ಆನಯತ್ಪರಾವತ ಇತಿ ತಿಸ್ರ ಉತ್ತಮಾ ಉದ್ಧರತಿ ರೇವತೀರ್ನಃ
ಸಧಮಾದ ಇತಿ ತಿಸ್ರಃ ಸೂದದೋಹಾಃ ||

ತತ್ರತ್ಯಾ ಋಚೋ ವಿವಿಚ ದರ್ಶಯತಿ — " ಯ ಇಂದ್ರ " ಇತ್ಯೇ. ತತ್ತ್ರಯಸ್ತ್ರಿಂಶದೃಚಮೇಕಂ ಸೂಕ್ತಮ್ । " ಇಂದ್ರಃ ಸುತೇಷು " (ಋ. ಸಂ. ಮಂ-೮-ಸೂ-೧೩-ಋ-೧) ಇತೀದಮಪಿ ತ್ರಯಸ್ತ್ರಿಂಶದೃಚಂ ಸೂಕ್ತಂ ತೇ ಉಭೇ ಸೂಕ್ತೇ ಪಠೇತ್ । ' ತಮ್ವಭಿ ' ಇತ್ಯಾದಿಕೇ ಸೂಕ್ತೇ ಚರಮಾಮ್ " ಅರಂ ಕ್ಷಯಾಯ " (ಋ. ಸಂ. ಮಂ-೮-ಸೂ-೧೫-ಋ-೧೩) ಇತ್ಯಾದಿಕಾಮೃಚಮುದ್ಧೃತ್ಯ " ಅಸ್ಮಾಕೇಭಿರ್ನೃಭಿರತ್ರಾ ಸ್ವರ್ಜಯ " (ಋ. ಸಂ. ಮಂ-೮-ಸೂ-೧೫-ಋ-೧೨) ಇತ್ಯೇತದಂತಂ ದ್ವಾದಶರ್ಚಂ ಸೂಕ್ತಂ ಪಠೇತ್ । " ಇಂದ್ರಾಯ ಸಾಮ " ಇತ್ಯಾ-ದಿಕಂ ದ್ವಾದಶರ್ಚಂ ಸೂಕ್ತಂ ತದಪಿ ಪಠೇತ್ । ' ಸಖಾಯಃ ' ಇತ್ಯಾದಿಕಂ ತ್ರಿಂಶದೃಚಂ ಸೂಕ್ತಂ ತಸ್ಮಿನ್ನಂತಿಮಾ " ಯಥಾ ವರೋ " (ಋ. ಸಂ. ಮಂ-೮-ಸೂ-೨೪-ಋ-೨೮) ಇತ್ಯಾದಿಕಾಸ್ತಿಸ್ರ ಋಚ ಉದ್ಧೃತ್ಯ "ವಧರ್ದಾಸಸ್ಯ ತುವಿನೃಮ್ಣ ನೀನಮಃ " (ಋ. ಸಂ. ಮಂ-೮-ಸೂ-೨೪-ಋ-೨೭) ಇತ್ಯಂತಂ ಸಪ್ತವಿಂಶತ್ಯೃಚಂ ಸೂಕ್ತಂ ಪಠೇತ್ । ' ಯ ಏಕಃ' ಇತ್ಯಾದಿರೇಕಸ್ತೃಚಃ 'ಆಯಾಹಿ' ಇತ್ಯಾದಿರ್ದ್ವಿತೀಯಸ್ತೃಚಃ । " ಯಸ್ಯತ್ಯತ್ " ಇತ್ಯಾದಿಸ್ತೃಚಃ । ತ ಏತೇ ತ್ರಯಸ್ತೃಚಾಃ ಪಠನೀಯಾಃ । ಇತ ಊರ್ಧ್ವಂ ಗಾಯತ್ರೀಛಂದಸ್ಕಾ ಋಚಃ ಪಠನೀಯಾಃ । ತಾಶ್ಚ ಗಾಯತ್ರ್ಯಃ ಉಷ್ಣಿಕ್ತ್ವೇನ ಸಂಪಾದನೀಯಾಃ । ತತ್ಸಂಪಾದನಂ ಕಥಮಿತಿ (ತದುಚ್ಯತೇ) । ಸಪ್ತ ಗಾಯತ್ರ್ಯೋ

ಮಿಲಿತ್ವಾ ಷಳು(ಡು)ಷ್ಣಿಹಃ ಸಂಪದ್ಯಂತೇ । ಸಪ್ತಮ್ಯಾಂ ಗಾಯತ್ರ್ಯಾಮಕ್ಷರಚತುಷ್ಕಾಣಿ ಷಡ್-ವಿದ್ಯಂತೇ । ತೇಷ್ವೇಕೈಕಂ ಚತುಷ್ಕಮೇಕೈಕಸ್ಯಾಂ ಗಾಯತ್ರ್ಯಾಂ ಯೋಜನೀಯಮ್ । ತತೋಽಷ್ಟಾವಿಂಶತ್ಯಕ್ಷರತ್ವಾದುಷ್ಣಿಗೇವ ಸಂಪದ್ಯತೇ । ಏವಂ ಸಪ್ತಸು ಗಾಯತ್ರೀಷು ಷಳು(ಡು)ಷ್ಣಿಹಃ ಸಂಪನ್ನಾ ಭವಂತಿ । ಸರ್ವಾಸ್ವಪಿ ಗಾಯತ್ರೀಷ್ವೇವಮುಷ್ಣಿಕ್ತ್ವಂ ಸಂಪಾದನೀಯಮ್ । ಸಪ್ತ ಸಪ್ತ ಗಾಯತ್ರ್ಯಃ ಷಟ್‌ಷಳುಷ್ಣಿಹೋ ಭವಂತಿ " ಇತಿ ವೀಪ್ಸಾ ಪಠಿತಾ । " ಯದಿಂದ್ರಾಹಮ್ " ಇತ್ಯಾದಿಕಂ ಪಂಚದಶರ್ಚಂ ಗಾಯತ್ರೀಛಂದಸ್ಕಂ ಸೂಕ್ತಂ ಪಠೇತ್ । ' ಪ್ರಸಮ್ರಾಜಮ್ ' ಇತ್ಯಾ-ದಿಕಂ ದ್ವಾದಶರ್ಚಂ ಸೂಕ್ತಮ್, " ಆಯಾಹಿ ಸುಷುಮಾ ಹಿ ತೇ " (ಋ. ಸಂ. ಮಂ-೮-ಸೂ-೧೭-ಋ-೧) ಇತಿ ಪಂಚದಶರ್ಚಂ ಸೂಕ್ತಮ್, ತೇ ಉಭೇ ಗಾಯತ್ರೀಛಂದಸ್ಕೇ ಸೂಕ್ತೇ ಪಠನೀಯೇ । ತತ್ರೋತ್ತರಸೂಕ್ತಸ್ಯೋತ್ತಮೇಽನ್ವೇ ' ವಾಸ್ತೋಷ್ಪತೇ ' (ಋ. ಸಂ. ಮಂ-೮-ಸೂ-೧೭-ಋ-೧೪) ಇತ್ಯಾದಿಕೇ ಉದ್ಧೃತ್ಯಾವಶಿಷ್ಟಂ ತ್ರಯೋದಶರ್ಚಂ ' ಸ್ವಸ್ತಿದ್ಧಧ್ರು ಆ ಮನಃ ' (ಋ-ಸಂ-ಮಂ.೮-ಸೂ.೧೭.ಋ.೧೫) ಇತ್ಯೇತದಂತಮೇವ ಪಠನೀಯಮ್ । " ವಾರ್ತ್ರಹತ್ಯಾಯ " ಇತ್ಯಾದಿಕಾಮೇ-ಕಾದಶರ್ಚಂ ಗಾಯತ್ರೀಛಂದಸ್ಕಂ ಸೂಕ್ತಂ ತತ್ರೋತ್ತಮಾಮ್—' ಅರ್ವಾವತೋ ನಃ ' ಋ-ಸಂ-ಮಂ-೩-ಸೂ-೩೭-ಋ-೧೧) ಇತ್ಯೇತಾಮೃಚಮುದ್ಧೃತ್ಯ ' ಉತ್ತೇ ಶುಷ್ಮಂ ತುರಾಮಸಿ' (ಋ-ಸಂ-ಮಂ-೩-ಸೂ-೩೭-ಋ-೧) ಇತ್ಯಂತಮೇವ ದಶರ್ಚಂ ಪಠೇತ್ । ' ಸುರೂಪಕೃತ್ನುಮ್' ಇತ್ಯಾದಿಕಂ ಗಾಯತ್ರೀಛಂದಸ್ಕಂ ದಶರ್ಚಂ ತಚ್ಚ ದ್ವಿತೀಯಂ ಸೂಕ್ತಮ್, "ಯುಂಜಂತಿಬ್ರಧ್ನಮ್" (ಋ.ಸಂ. ಮಂ-೧-ಸೂ-೬-ಋ-೧) ಇತ್ಯಾದಿಕಮಪಿ ಗಾಯತ್ರೀಛಂದಸ್ಕಂ ತತ್ತೃತೀಯಂ ಸೂಕ್ತಮ್, ತಾನ್ಯೇ-ತಾನಿ ತ್ರೀಣಿ ಸೂಕ್ತಾನಿ ಪಠೇತ್ । " ಐಂದ್ರ ಸಾನಸಿಮ್ " ಇತಿ ಗಾಯತ್ರೀಛಂದಸ್ಕಂ ದಶರ್ಚ-ಮೇಕಂ ಸೂಕ್ತಮ್ । " ಇಂದ್ರೇ ಹಿ ಮತ್ಸ್ಯಂಧಸಃ " (ಋ. ಸಂ. ಮಂ-೧-ಸೂ-೯-ಋ-೧) ಇತ್ಯೇತದಪಿ ಗಾಯತ್ರೀಛಂದಸ್ಕಂ ದಶರ್ಚಂ ದ್ವಿತೀಯಂ ಸೂಕ್ತಮ್ ಏತೇ ಉಭೇ ಪಠೇತ್ । "ಯ ಆನಯತ್" ಇತ್ಯಾದಿಕಂ ತ್ರಯಸ್ತ್ರಿಂಶದೃಚಂ ಗಾಯತ್ರೀಛಂದಸ್ಕಂ ಸೂಕ್ತಂ ತಸ್ಮಿನ್ನುತ್ತಮಾಃ " ಅಧಿಬೃಬುಃ " (ಋ-ಸಂ-ಮಂ-೬-ಸೂ-೪೫-ಋ-೩೧) ಇತ್ಯಾದಿಕಸ್ತಿಸ್ರ ಋಚಃ ಉದ್ಧೃತ್ಯ ' ಅಸ್ಮಾ ನಾಮ್ನೇ ಮಹೇ ಹಿನು ' (ಋ-ಸಂ-ಮಂ.೬-ಸೂ-೪೫-ಋ-೩೦) ಇತ್ಯಂತಂ ತ್ರಿಂಶ-ದೃಚಂ ಸೂಕ್ತಂ ಪಠೇತ್ । " ರೇವತೀರ್ನಃ " ಇತ್ಯಾದಿಕಾ ಗಾಯತ್ರೀಛಂದಸ್ಕಾಸ್ತಿಸ್ರ ಋಚಃ ಪಠೇತ್ । " ಯದಿಂದ್ರಾಹಮ್ " ಇತ್ಯಾರಭ್ಯ " ರೇವತೀರ್ನಃ " ಇತಿ ತೃಚಂತಾಸ್ತ್ರಯಸ್ತ್ರಿಂಶದ-ಧಿಕಾ (ಕ) ಶತಸಂಖ್ಯಾ ಗಾಯತ್ರ್ಯೋಽತ್ರ ಪಠನೀಯಾಃ, ತಾಸ್ಚ ಪೂರ್ವೋಕ್ತಪ್ರಕಾರೇಣ ಸಪ್ತಸು ಸಪ್ತಸು ಷಟ್‌ಷಳು(ಡು)ಷ್ಣಿಹಃ ಸಂಪದ್ಯಂತೇ । ತಥಾ ಸತಿ ಚತುರ್ದಶಾಧಿಕ ಶತಸಂಖ್ಯಾಕಾ ಉಷ್ಣಿಹಃ ಸಂಪನ್ನಾಃ । " ಯ ಇಂದ್ರ ಸೋಮಪಾತಮಃ " ಇತ್ಯಾದ್ಯಾಸು ಸ್ವತಃ ಸಿದ್ಧಾ ಉಷ್ಣಿಹಃ ಷಡ್ವಿಂಶ-ತ್ಯಧಿಕಾಃ ಶತಸಂಖ್ಯಾಕಾಃ । ತಾಸಾಂ ಸರ್ವಾಸಾಂ ಮೇಲನಾದೌಷ್ಣಿಹೀ ತೃಚಾಶೀತಿಃ ಸಂಪದ್ಯತೇ । ತಾಂ ಪಠಿತ್ವಾಽಂತೇ ಸೂದದೋಹಸಂ ಪಠೇತ್ ॥

ತೃಚಾಶೀತಿಯಲ್ಲಿರುವ ಋಕ್ಕುಗಳನ್ನು ವಿವರಿಸುತ್ತಾರೆ. **ಯ ಇಂದ್ರ** (ಋ. ಸಂ. ೮-೧೨-೧) ಎಂಬ, ಮತ್ತು **ಇಂದ್ರಃ ಸುತೇಷು** (ಋ. ಸಂ. ೮-೧೩-೧) ಎಂಬ ಮೂವತ್ತುಮೂರು ಋಕ್ಕುಗಳುಳ್ಳ ಎರಡು ಸೂಕ್ತಗಳನ್ನು ಪಠಿಸಬೇಕು. **ತಮ್ವಭಿಪ್ರಗಾಯತ** (ಋ. ಸಂ. ೮-೧೫-೧) ಎಂಬ ಸೂಕ್ತದಲ್ಲಿ ಕೊನೆಯ **ಅರಂ ಕ್ಷಯಾಯ** (ಋ. ಸಂ. ಎಂಬ ಒಂದು ಋಕ್ಕನ್ನು ತೆಗೆದುಹಾಕಿ **ಅಸ್ಮಾಕೇಭಿರ್ನೃಭಿರತ್ರಾಸ್ವರ್ಜಯ** (ಋ. ಸಂ. ೮-೧೫-೧೨) ಎಂಬ ಋಕ್ಕಿನವರೆಗಿರುವ ಹನ್ನೆರಡು ಋಕ್ಕುಗಳನ್ನು ಪಠಿಸಬೇಕು. **ಇಂದ್ರಾಯ ಸಾಮ** (ಋ. ಸಂ. ೮-೯೮-೧) ಹನ್ನೆರಡು ಋಕ್ಕಿನಸೂಕ್ತವನ್ನು ಪಠಿಸಬೇಕು. **ಸಖಾಯಃ** (ಋ. ಸಂ. ೮-೨೪-೧ ಎಂಬ ಮೂವತ್ತುಋಕ್ಕಿನಸೂಕ್ತದಲ್ಲಿ ಕೊನೆಯ **ಯಥಾವರೋ** (ಋ. ಸಂ. ೮-೨೪-೨೮) ಇತ್ಯಾದಿ ಮೂರು ಋಕ್ಕುಗಳನ್ನು ತೆಗೆದುಹಾಕಿ.ಇಪ್ಪತ್ತೇಳು ಋಕ್ಕುಗಳನ್ನು ಮಾತ್ರ ಪಠಿಸಬೇಕು **ಯ ಏಕಃ** (೧-೮೪-೭) ಎಂಬ ಒಂದು ತೃಚ, **ಆಯಾಹಿ** (ಋ. ಸಂ. ೫-೪೦-೧) ಎಂಬ ಎರಡನೆಯ ತೃಚ, **ಯಸ್ಯತ್ಯತ್** ಋ. ಸಂ. ೬-೪-೪-೧)ಮೂರನೆಯ ತೃಚ, ಹೀಗೆ ಈ ಮೂರು ತೃಚಗಳನ್ನು ಪಠಿಸಬೇಕು. ಇದಾದ ಮೇಲೆ ಗಾಯತ್ರೀ ಛಂದಸ್ಸಿನ ಋಕ್ಕುಗಳನ್ನು ಪಠಿಸಬೇಕು. ಆದರೆ ಗಾಯತ್ರೀ ಛಂದಸ್ಸನ್ನು **ಉಷ್ಣಿಕ್** ರೂಪವಾಗಿ ಪರಿವರ್ತನಗೊಳಿಸಬೇಕು. ಅದು ಹೇಗೆಂದರೆ ಏಳು ಗಾಯತ್ರೀ ಛಂದಸ್ಕಗಳು ಆರು ಉಷ್ಣಿಕ್‌ಛಂದಸ್ಸಾಗುತ್ತವೆ. ಏಳನೆಯ ಗಾಯತ್ರಿಯಲ್ಲಿ ನಾಲ್ಕು ಅಕ್ಷರಗಳಗುಂಪು ಆರು ಇರುತ್ತದೆ. ಅವುಗಳಲ್ಲಿ ಒಂದೊಂದು ಗುಂಪನ್ನು ಒಂದೊಂದು ಗಾಯತ್ರಿಗೆ ಸೇರಿಸಬೇಕು. ಆಗ ಇಪ್ಪತ್ತೆಂಟು ಅಕ್ಷರಗಳಾಗುವುದರಿಂದ ಉಷ್ಣಿಕ್‌ಛಂದಸ್ಸಾಗುತ್ತವೆ. ಆಗ ಏಳು ಗಾಯತ್ರೀ ಛಂದಸ್ಸುಗಳು ಆರು ಉಷ್ಣಿಕ್ ಆಗುತ್ತವೆ. ಎಲ್ಲಾ ಗಾಯತ್ರೀ ಛಂದಸ್ಸಿನಲ್ಲಿಯೂ ಹೀಗೆಯೇ ಉಷ್ಣಿಗನ್ನು ಕಲಿಸುವ ರೀತಿ ತಿಳಿಯಬೇಕು. **ಯದಿಂದಾಹಂ** (ಋ-ಸಂ-೮-೧೪-೧) ಎಂಬ ಹದಿನೈದು ಋಕ್ಕುಗಳುಳ್ಳ ಗಾಯತ್ರೀ ಛಂದಸ್ಕವಾದ ಸೂಕ್ತವನ್ನು ಪಠಿಸಬೇಕು. **ಪ್ರಸಮ್ರಾಜಂ** (ಋ. ಸಂ. ೮-೧೬-೧) ಎಂಬ ಹನ್ನೆರಡು ಋಕ್ಕಿನ ಸೂಕ್ತ, **ಆಯಾಹಿ ಸುಷಮಾ ಹಿತೇ** (ಋ. ಸಂ. ೮-೧೭-೧) ಎಂಬ ಹದಿನೈದು ಸೂಕ್ತ. ಹೀಗೆ ಗಾಯತ್ರೀ ಛಂದಸ್ಕವಾದ ಇವೆರಡನ್ನೂ ಪಠಿಸಬೇಕು. ಅಲ್ಲಿ ಎರಡನೆಯ ಸೂಕ್ತದಲ್ಲಿ ಕೊನೆಯ ಎರಡು **ವಾಸ್ತೋಷ್ಪತೇ** (ಋ-ಸಂ-೮-೧೯-೧೪) ಇತ್ಯಾದಿ ಋಕ್ಕುಗಳನ್ನು ತೆಗೆದು ಹಾಕಿ ಉಳಿದ ಹದಿಮೂರು ಋಕ್ಕುಗಳನ್ನು ಮಾತ್ರ ಪಠಿಸಬೇಕು. **ವಾರ್ತ್ರಹತ್ಯಾಯ** (ಋ. ಸಂ. ೩-೩೭-೪) ಇತ್ಯಾದಿ ಹನ್ನೊಂದು ಋಕ್ಕಿನ ಗಾಯತ್ರೀ ಛಂದಸ್ಕ ಸೂಕ್ತದಲ್ಲಿ ಕೊನೆಯ **ಅರ್ವಾವತೋನಃ** (ಋ. ಸಂ. ೩-೩೭-೧೧) ಎಂಬ ಋಕ್ಕನ್ನು ತೆಗೆದು ಹಾಕಿ **ಉತ್ತೇ ಶುಷ್ಮಂ ತುರಾವಸಿ** (ಋ. ಸಂ. ೩-೩೭-೧) ಎಂಬ ಋಕ್ಕಿನವರೆಗಿನ ಹತ್ತು ಋಕ್ಕುಗಳನ್ನು ಮಾತ್ರ ಪಠಿಸಬೇಕು. **ಸುರೂಪಕೃತ್ನುಂ** (ಋ. ಸಂ. ೧-೪-೧) ಇತ್ಯಾದಿ ಗಾಯತ್ರೀ ಛಂದಸ್ಸಿನ ಹತ್ತು ಋಕ್ಕಿನ ಒಂದು ಸೂಕ್ತ. **ಆ ತ್ವೇತಾ ನಿಷೀದತ** (ಋ-ಸಂ-೧-೫-೧) ಎಂಬ ಗಾಯತ್ರೀ ಛಂದಸ್ಸಿನ ಹತ್ತು ಋಕ್ಕುಗಳ ಎರಡನೆಯ ಸೂಕ್ತ, **ಯುಂಜಂತಿ ಬ್ರಧ್ನಂ** (ಋ. ಸಂ. ೧-೬-೧) ಎಂಬ ಗಾಯತ್ರೀ ಛಂದಸ್ಸಿನ ಮೂರನೆಯ ಸೂಕ್ತ. ಈ ಮೂರು ಸೂಕ್ತಗಳನ್ನೂ ಪಠಿಸಬೇಕು. **ಐಂದ್ರಸಾನಸಿಂ** (ಋ. ಸಂ. ೧-೮-೧) ಎಂಬ ಗಾಯತ್ರೀ ಛಂದಸ್ಸಿನ ಹತ್ತು ಋಕ್ಕಿನ ಸೂಕ್ತ. **ಇಂದ್ರೇ ಹಿ ಮತ್ಸ್ಯಂಧಸಃ** (ಋ. ಸಂ. ೧-೯-೧) ಎಂಬ ಗಾಯತ್ರೀ ಛಂದಸ್ಸಿನ ಹತ್ತು ಋಕ್ಕಿನ ಎರಡನೆಯ ಸೂಕ್ತ. ಇವೆರಡನ್ನೂ ಪಠಿಸಬೇಕು. **ಯ ಆನಯತ್** (ಋ.ಸಂ. ೬-೪೫-೧) ಇತ್ಯಾದಿ ಮೂವತ್ತುಮೂರು ಋಕ್ಕುಗಳ ಗಾಯತ್ರೀ ಛಂದಸ್ಕವಾದ ಸೂಕ್ತದಲ್ಲಿ ಕೊನೆಯ **ಅಧಿಬೃವುಃ** (ಋ-ಸಂ-೬-೪೫-೩೧) ಇತ್ಯಾದಿ ಮೂರು ಮೂರು ಋಕ್ಕುಗಳನ್ನು ತೆಗೆದು ಹಾಕಿ ಮೂವತ್ತು ಋಕ್ಕುಗಳನ್ನು ಮಾತ್ರ ಪಠಿಸಬೇಕು. **ರೇವತೀರ್ನಃ** [ಋ-ಸಂ-೧-೩೦-೧೩] ಇತ್ಯಾದಿ ಗಾಯತ್ರೀಛಂದಸ್ಕಗಳಾದ ಮೂರು ಋಕ್ಕುಗಳನ್ನು ಪಠಿಸಬೇಕು. **ಯದಿಂದ್ರಾಹಂ** ಎಂದು ಆರಂಭಿಸಿ **ರೇವತೀರ್ನಃ** ಎಂಬ ಒಂದು ನೂರುತೃಚಂತದವರೆಗೆ ಮೂವತ್ತುಮೂರು ಗಾಯತ್ರೀ ಛಂದಸ್ಕ ಋಕ್ಕುಗಳಾಗುತ್ತವೆ ಅವುಗಳನ್ನು ಹಿಂದೆ ಹೇಳಿದಂತೆ

ಏಳು ಏಳು ಗಾಯತ್ರೀ ಛಂದಸ್ಕಳಲ್ಲಿ ಆರು ಆರು ಉಷ್ಣಿಕ್ ಆಗಿ ಕಲ್ಪಿಸಬೇಕು. ಆಗ ಒಂದುನೂರು ಹದನಾಲ್ಕು ಉಷ್ಣಿಕ್ ಗಳಾಗುತ್ತವೆ. ಯ ಇಂದ್ರಸೋಮಪಾತಮಃ ಇತ್ಯಾದಿಗಳಲ್ಲಿ ಸ್ವತಃ ಸಿದ್ಧವಾದ ಒಂದುನೂರ ಇಪ್ಪತ್ತಾರು ಉಷ್ಣಿಕ್‌ಛಂದ್ಕಸ್ಕ ಋಕ್ಕುಗಳಿವೆ. ಒಟ್ಟಿಗೆ ಸೇರಿಸಿದಾಗ ಉಷ್ಣಿಕ್ ಸಂಬಂಧಿ ತೃಚಾಶೀತಿಯಾಗುತ್ತದೆ. ಇವುಗಳನ್ನು ಪಠಿಸಿದಮೇಲೆ ಸೂದದೋಹ ಸಸೂಕ್ತವನ್ನು ಪಠಿಸಬೇಕು.

**ಇತ್ಯೇತಾಸ್ತಿಸ್ರಸ್ತೃಚಾಶೀತಯಃ ಸರ್ವಾ ಅರ್ಧರ್ಚ್ಯಾಃ ||**

**ತೃಚಾಶೀತಿಶಂಸನೇ ಕಂಚಿದ್ವಿಶೇಷಂ ವಿಧತ್ತೇ— ಇತ್ಯೇವಂ ಪೂರ್ವಮುಕ್ತಾ ಗಾಯತ್ರೀ ಬೃಹತ್ಯುಷ್ಣಿಕ್‌ಛಂದಸ್ಕಾಸ್ತೃಚಾಶೀತಯೋ ಯಾಃ ಸಂತಿ ತಾಃ ಸರ್ವಾ ಅರ್ಧರ್ಚ್ಯಾ ಅರ್ಧ (ರ್ಚಃ) ಮರ್ಹಂತಿ । ಪ್ರಥಮೇಽರ್ಧರ್ಚೇಽವಸಾಯ ಪಶ್ಚಾದುತ್ತರಮರ್ಧರ್ಚಂ ಪಠೇದಿತ್ಯರ್ಥಃ ||**

ತೃಚಾಶೀತಿಯನ್ನು ಪಠಿಸುವಾಗ ಒಂದು ವಿಶೇಷವನ್ನು ವಿಧಿಸುತ್ತಾರೆ. ಪೂರ್ವೋಕ್ತವಾದ ಗಾಯತ್ರೀ ಬೃಹತೀ ಉಷ್ಣಿಕ್ ಛಂದಸ್ಕಗಳಾದ ಮೂರು ತೃಚಾಶೀತಿಗಳನ್ನು ಅರ್ಧರ್ಚಗಳಾಗಿ ಪಠಿಸಬೇಕು. ಅಂದರೆ ಅರ್ದಋಕ್ಕನ್ನು ಹೇಳಿ ಮುಗಿಸಿ ಪುನಃ ಉತ್ತರದ ಅರ್ಧರ್ಚವನ್ನು ಪಠಿಸಬೇಕು.

**ಅನ್ನಮಶೀತಯಃ ||**

**ಅಶೀತಿಷ್ವನ್ನಬುದ್ಧಿಮಭಿಪ್ರೇತ್ಯಾನ್ನರೂಪೇಣ ತಾಃ ಪ್ರಶಂಸತಿ— ಯಾ ಉಕ್ತಾ ಅಶೀತ-ಯಸ್ತಾ ಪಕ್ಷ್ಯಾಕಾರಸ್ಯ ಶಸ್ತ್ರಸ್ಯಾನ್ನಸ್ಥನೀಯಾಃ। ತಥಾತ್ವೇನ ಮನಸಿ ತಾ ಭಾವಯೇದಿತ್ಯರ್ಥಃ ||**

ಪೂರ್ವೋಕ್ತಗಳಾದ ಅಶೀತಿಗಳಲ್ಲಿ ಅನ್ನಬುದ್ಧಿಯನ್ನಂಗೀಕರಿಸಿ ಅನ್ನರೂಪದಿಂದ ಅವುಗಳನ್ನು ಸ್ತುತಿಸುತ್ತಾರೆ. ಪೂರ್ವೋಕ್ತ ಅಶೀತಿಗಳು ಪಕ್ಷ್ಯಾಕಾರಶಸ್ತ್ರದ ಅನ್ನರೂಪವಾಗಿರುತ್ತವೆ. ಆರೀತಿ ಮನಸ್ಸಿನಲ್ಲಿ ಭಾವಿಸಬೇಕೆಂದು ತಾತ್ಪರ್ಯ.

**ಉದರಂ ವಶಃ ||**

**ವಕ್ಷ್ಯಮಾಣಸ್ಯ ವಶನಾಮ್ನಃ ಋಕ್ಸಮೂಹಸ್ಯೋದರತ್ವಾನುಸ್ಮರಣಮಭಿಪ್ರೇತ್ಯ ಪ್ರಶಂಸತಿ— ವಶಾಖ್ಯ ಋಕ್ಸಂಘಃ ಪಕ್ಷ್ಯಾಕಾರಸ್ಯ ಶಸ್ತ್ರಸ್ಯೋದರಮ್ । ತಥಾತ್ವೇನ ಭಾವಯೇದಿತ್ಯರ್ಥಃ ||**

ಮುಂದೆ ಹೇಳುವ ವಶವೆಂಬ ಋಕ್ಸಮೂಹವನ್ನು ಉದರದೃಷ್ಟಿಯಿಂದ ಸ್ತುತಿಸುತ್ತಾರೆ. ವಶವೆಂಬ ಋಕ್ಸಮುದಾಯವು ಪಕ್ಷ್ಯಾಕಾರವಾದ ಶಸ್ತ್ರದ ಉದರವೆಂದು ಭಾವಿಸಬೇಕು.

**ತ್ವಾಽವತಃ ಪುರೂವಸವಿತಿ ವಶಃ ಸನಿತಃ ಸು ಸನಿತರಿತ್ಯೇತದಂತೋದದೀ-ರೇಕ್ಣ ಇತಿ ದ್ವಿಪದಾ ನೂನಮಥೇತ್ಯೇಕಪದಾ ತಾ ಅಸ್ಯ ಸೂದದೋ-ಹಸ ಇತ್ಯೇತದಂತಃ ಸೂದದೋಹಾಃ ಸೂದದೋಹಾಃ ||**

ವಶನಾಮಕಮೃಕ್ಸಂಘಂ ವಿಧತ್ತೇ— " ತ್ವಾವತಃ " ಇತ್ಯಾದಿಕಂ ತ್ರಯಸ್ತ್ರಿಂಶದೃಚಂ ಸೂಕ್ತಮ್। ತಸ್ಮಿನ್ಸೂಕ್ತೇ 'ಸನಿತಃ ಸು ಸನಿತಃ' ಇತ್ಯೃಕ್, ಏಷಾ ವಿಂಶತಿತಮಾ। ತದಂತಾನಾಂ ವಿಂಶತಿಸಂಖ್ಯಾಕಾನಾಮೃಚಾಂ ಸಮೂಹೋ ವಶನಾಮಕಃ । ತನ್ಮಧ್ಯೇ " ದದೀರೇಕ್ಣಃ " ಇತಿ ಕಾಚಿದೃಕ್ಪಠಿತಾ, ಸಾ ದ್ವಿಪದಾ ದ್ರಷ್ಟವ್ಯಾ । 'ನೂನಮಥ' ಇತ್ಯಕ್ಷರಚತುಷ್ಟಯಾತ್ಮಿಕಾ ಕಾಚಿದೃಗೇಕಪದಾ । ಏತದು ಭಯಂ ಮಂತ್ರಬುದ್ಧಿಭ್ರಮವ್ಯಾವೃತ್ತಯೇ ವಿಶೇಷ್ಯತೇ । ಅಧ್ಯ ಯನ-ಕಾಲೇ ವಶಾಖ್ಯ ಋಕ್ಸಂಘಃ " ಸನಿತಃ ಸು ಸನಿತಃ" ಇತ್ಯೇತಾಮೃಚಂ ಪಠಿತ್ವಾ ಸ ಏಕ-ವಿಂಶತ್ಯೃಗಾತ್ಮಕೋ ವಶಃ ಪ್ರಯೋಕ್ತವ್ಯಃ । ಅಂತೇ ಪಠಿತಾಯಾಃ ಸೂದದೋಹಸಃ ಪುನ-ರ್ದ್ವಿರಾವೃತ್ತಿರಧ್ಯಾಯಸಮಾಪ್ತಿದ್ಯೋತನಾರ್ಥಾ ॥

ವಶವೆಂಬ ಋಕ್ಸಮುದಾಯವನ್ನು ವಿವರಿಸುತ್ತಾರೆ. ತ್ವಾವತಃ (ಋ-ಸಂ-೮-೪೬-೧) ಇತ್ಯಾದಿ ಮೂವತ್ತ ಮೂರು ಋಕ್ಕುಗಳ ಸೂಕ್ತದಲ್ಲಿ ಸನಿತಃ ಸುಸನಿತಃ [ಋ-ಸಂ-೮-೪೬-೨೦] ಎಂಬುದು ಇಪ್ಪತ್ತನೆಯ ಋಕ್ಕು, ಈ ಇಪ್ಪತ್ತು ಋಕ್ಕುಗಳವರೆಗಿರುವ ಋಕ್ಸಮುದಾಯಕ್ಕೆ ವಶವೆಂದು ಹೆಸರು. ಅವುಗಳ ಮಧ್ಯದಲ್ಲಿ ದದೀರೇಕ್ಣಃ ಎಂಬ ಒಂದು ಋಕ್ ದ್ವಿಪದವೆಂದು ತಿಳಿಯಬೇಕು. ನನೂಮಥ ಎಂಬ ನಾಲ್ಕು ಅಕ್ಷರಗಳ ಒಂದು ಋಕ್ ಏಕಪದವಾಗಿರುತ್ತದೆ. ಇವು ಮಂತ್ರವಲ್ಲವೆಂಬ ಭ್ರಾಂತಿಬರಬಾರದೆಂದು ವಿಶೇಷವಾಗಿ ಹೇಳಿದೆ. ಅಧ್ಯಯನಕಾಲದಲ್ಲಿ ಸನಿತಃ ಸು ಸನಿತಃ ಎಂಬ ಋಕ್ಕಿನವರೆಗೆ ಇಪ್ಪತ್ತು ಆದರೂ, ಪ್ರಯೋಗಕಾಲದಲ್ಲಿ ತಾ ಅಸ್ಯ ಸೂದದೋಹಸಃ ಎಂಬ ಋಕ್ಕನ್ನೂ ಸೇರಿಸಿ ಇಪ್ಪತ್ತೊಂದು ಋಕ್ಕುಗಳು ವಶನಾಮಕವಾಗುತ್ತವೆ. ಸೂದದೋಹಸಃ ಎಂಬ ಪದಾವೃತ್ತಿ ಅಧ್ಯಾಯ ಸಮಾಪ್ತಿಯನ್ನು ತಿಳಿಸುತ್ತದೆ.

ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪಂಚಮಾರಣ್ಯಕೇ
ದ್ವಿತೀಯಾಧ್ಯಾಯೇ ಪಂಚಮಃ ಖಂಡಃ

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಬಹ್ವೃಚ ಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪಂಚಮಾರಣ್ಯಕೇ ದ್ವಿತೀಯೋಽಧ್ಯಾಯಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪಂಚಮಾರಣ್ಯಕದ
ಎರಡನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವು ॥

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪಂಚಮಾರಣ್ಯಕದ
ದ್ವಿತೀಯಾಧ್ಯಾಯವು ಸಮಾಪ್ತವಾದುದು



## ಅಥ ಪಂಚಮಾರಣ್ಯಕೇ ತೃತೀಯಾಧ್ಯಾಯೇ ಪ್ರಥಮಃ ಖಂಡಃ

### ಐದನೆಯ ಆರಣ್ಯಕದ ಮೂರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

---

ಊರು ||

ಪಕ್ಷಿರೂಪಸ್ಯ ಶಸ್ತ್ರಸ್ಯೋರುಭಾಗಂ (ವಕ್ತುಂ) ಪ್ರತಿಜಾನೀತೇ — ಯಾವೂರೂ ತಾ ತಥ್ಯೇತೇ ಇತಿ ಶೇಷಃ ||

ಇಂದ್ರಾಗ್ನೀ ಯುವಂ ಸು ನ ಇತ್ಯೇತಸ್ಯಾರ್ಧರ್ಚಾನ್ನ್ಯಾಯತ್ರೀಕಾರಮುತ್ತರಮುತ್ತರಸ್ಯಾನುಷ್ಟುಪ್ಕಾರಂ ಪ್ರಾಗುತ್ತಮಾಯಾಃ ಪ್ರ ವೋ ಮಹೇ ಮಂದಮಾನಾಯಾಂಧಸ ಇತಿ ನಿವಿದ್ಧಾನಂ ವನೇನ ವಾಯೋ ನ್ಯಧಾಯಿ ಚಾಕನ್ಸ್ಯೋ ಜಾತ ಏವ ಪ್ರಥಮೋ ಮನಸ್ವಾನಿತಿ ತೇ ಅಂತರೇಣಾಽಽಯಾಹ್ಯರ್ವಾಙುಪವಂಧು ರೇಷ್ಠಾ ವಿಧುಂ ದದ್ರಾಣಂ ಸಮನೇ ಬಹೂನಾಮಿತ್ಯೇತದಾವಪನಂ ದಶತೀನಾಮೈಂದ್ರೀಣಾಂ ತ್ರಿಷ್ಟುಪ್ಜಗತೀನಾಂ ಬೃಹತೀಸಂಪನ್ನಾನಾಂ ಯಾವತೀರಾವಪೇರಂಸ್ತಾವಂತ್ಯೂರ್ಧ್ವಮಾಯುಷೋ ವರ್ಷಾಣಿ ಜಿಜೀವಿಷೇತ್ಸಂವತ್ಸರಾತ್ಸಂವತ್ಸರಾದ್ದಶತೋ ನವಾ ತ್ಯಮೂ ಷು ವಾಜಿನಂ ದೇವಜೂತಮಿಂದ್ರೋ ವಿಶ್ವಂ ವಿರಾಜತೀತ್ಯೇಕಪದೇಂದ್ರಂ ವಿಶ್ವಾ ಅವೀವೃಧನ್ನಿತ್ಯಾನುಷ್ಟುಭಂ ತಸ್ಯ ಪ್ರಥಮಾಯಾಃ ಪೂರ್ವಮರ್ಧರ್ಚಂ ಶಸ್ತ್ವೋತ್ತರೇಣಾರ್ಧರ್ಚೇನೋತ್ತರಸ್ಯಾಃ ಪೂರ್ವಮರ್ಧರ್ಚಂ ವ್ಯತಿಷಜತಿ ಪಾದೈಃ ಪಾದಾನನುಷ್ಟುಪ್ಕಾರಂ ಪ್ರಾಗುತ್ತಮಾಯಾಃ ಪೂರ್ವಸ್ಮಾತ್ಪೂರ್ವಸ್ಮಾದರ್ಧರ್ಚಾದುತ್ತರಮುತ್ತರಮರ್ಧರ್ಚಂ ವ್ಯತಿಷಜತಿ ಪ್ರಕೃತ್ಯಾ ಶೇಷಃ ಪಿಬಾ ಸೋಮಮಿಂದ್ರ ಮಂದತು ತ್ವೇತಿ

ಷಡ್ಯೋನಿಷ್ಟ ಇಂದ್ರ ಸದನೇ ಅಕಾರೀತ್ಯೇತಸ್ಯ ಚತಸ್ರಃ ಶಸ್ತ್ವೋ-
ತ್ತಮಾಮುಪಸಂತತ್ಯೋಪೋತ್ತಮಯಾ ಪರಿದಧಾತಿ ||

ಪ್ರತಿಜ್ಞಾತಮರ್ಥಮಾಹ— " ಇಂದ್ರಾಗ್ನೀ ಯುವಂ ಸು ನಃ " ಇತ್ಯಾದಿಕಂ ಸೂಕ್ತಂ ದ್ವಾದಶರ್ಚಮ್ । ಅತ್ರ " ನ ಹಿ ವಾಮ್ " (ಋ-ಸಂ-ಮ-೮-ಸೂ-೪೦-ಋ-೨) ಇತ್ಯೇಷಾ ದ್ವಿತೀಯಾ ಶಕ್ವರೀಛಂದಸ್ಕಾ। " ಏವೇಂದ್ರಾಗ್ನಿಭ್ಯಾಮ್ " (ಋ-ಸಂ-ಮಂ ೮-ಸೂ-೪೦-ಋ-೧೨) ಇತ್ಯೇಷೋತ್ತಮಾ ತ್ರಿಷ್ಟುಪ್‌ಛಂದಸ್ಕಾ । ಅವಶಿಷ್ಟಾ ದಶರ್ಚಃ ಪ್ರತ್ಯೇಕಂ ಷಟ್ಪದಾ ಮಹಾಪಂಕ್ತಿ-ಚ್ಛಂದಸ್ಕಾಃ। ತಾಸು ದಶಸು ಪಾದತ್ರಯಾತ್ಮಕಮೇಕೈಕಮರ್ಧರ್ಚಂ ಗಾಯತ್ರೀಂ ಕೃತ್ವಾ ಶಂಸೇತ್। ಪಾದದ್ವಯೇಽವಸಾಯ ತೃತೀಯಪಾದೇ ಪ್ರಣವೋ ಗಾಯತ್ರೀಕರಣಮ್ । ಯೇಯಂ ಶಕ್ವರೀ ದ್ವಿತೀಯಾ ತಸ್ಯಾ ಅಪಿ ಪಾದತ್ರಯಾತ್ಮಕಂ ಪೂರ್ವಾರ್ಧಂ ಗಾಯತ್ರೀಸಮಯೇನೈವ ಶಂಸೇತ್। ಉತ್ತರಾರ್ಧಂ ತು ಪಾದಚತುಷ್ಟಯಾತ್ಮಕಮನುಷ್ಟುಭಂ ಕೃತ್ವಾ ಶಂಸೇತ್ । ದ್ವಿತೀಯಪಾದೇಽ-ವಸಾಯ ಚತುರ್ಥಪಾದೇ ಪ್ರಣವಪ್ರಯೋಗೋಽನುಷ್ಟುಪ್‌ಕರಣಮ್। ಏವಮುತ್ತಮಾಯಾಸ್ತ್ರಿ-ಷ್ಟುಭಃ ಪ್ರಾಚೀನಾ ಏಕಾದಶಸಂಖ್ಯಾಕಾ ಋಚಃ ಶಸ್ತ್ವಾ ತ್ರಿಷ್ಟುಭಮುತ್ತಮಾಂ ವಿಶೇಷೋ-ಕ್ತ್ಯಭಾವಾತ್ಸಾಮಾನ್ಯಪ್ರಾಪ್ತಿಮನುಸೃತ್ಯ ಶಂಸೇತ್। ಪ್ರಾಕ್ಛಂದಾಂಸಿ ತ್ರೈಷ್ಟುಭಾದಿತ್ಯನೇನ ಸೂತ್ರ-ವಾಕ್ಯೇನ ತ್ರಿಷ್ಟುಭೋಽರ್ವಾಚೀನಾನಾಂ ಗಾಯತ್ರ್ಯಾದೀನಾಮರ್ಧರ್ಚಶಂಸನವಿಧಾನಾತ್ತ್ರಿಷ್ಟುಭಃ ಪಾದಶಂಸನಂ ಸಾಮಾನ್ಯತಃ ಪ್ರಾಪ್ತಮ್ । ಏಕಸ್ಮಿನ್ಪಾದೇಽವಸಾಯೋತ್ತರಸ್ಮಿನ್ಪಾದೇ ಪ್ರಣವಪ್ರ-ಯೋಗಃ ಪಾದಶಂಸನಮ್ । ತೇನ ಕ್ರಮೇಣೋತ್ತಮಾಂ ಶಂಸೇತ್ । ತತಃ 'ಪ್ರ ವೋ ಮಹೇ' ಇತ್ಯಾದಿಕಂ ನಿವಿದ್ಧಾನಸಂಜ್ಞಕಂ ಸೂಕ್ತಂ ಶಂಸೇತ್ । ನಿವಿತ್ಸಂಜ್ಞಕಾನೀಂದ್ರೋ ದೇವ ಇತ್ಯಾ-ದೀನಿ ಪದಾನಿ ಶಂಸನಕಾಲೇ ಯಸ್ಮಿನ್ಸೂಕ್ತೇ ಧೀಯಂತೇ ಪ್ರಕ್ಷಿಪ್ಯಂತೇ ತತ್ಸೂಕ್ತಂ ನಿವಿದ್ಧಾ-ನಮ್ । ' ವನೇನ ವಾಯೋ ' ಇತ್ಯೇತದಷ್ಟರ್ಚಂ ಸೂಕ್ತಂ ಶಂಸೇತ್ । "ಯೋ ಜಾತ ಏವ" ಇತಿ ಪಂಚದಶರ್ಚಂ ಸೂಕ್ತಂ ಪಠೇತ್ । ಯದ್ಯಾಯುಷ್ಕಾಮಃ ಸ್ಯಾತ್ತದಾನೀಮನಯೋಃ ಸೂಕ್ತಯೋರ್ಮಧ್ಯೇ " ಆಯಾಹ್ಯರ್ವಾಙ್ " ಇತ್ಯಷ್ಟರ್ಚಂ ಸೂಕ್ತಂ ' ವಿಧುಂ ದದ್ರಾಣಮ್ ' ಇತ್ಯೇಕಾಮೃಚಂ ಚ ಪ್ರಕ್ಷಿಪೇತ್। ಅನೇನ ಪ್ರಕ್ಷೇಪೇಣ ಕಿಯದಾಯುರಧಿಕಂ ಭವತೀತಿ ತದು-ಚ್ಯತೇ । ದಶಸಂಖ್ಯಾಕಾನಾಂ ಮಂಡಲಾನಾಂ ಸಮೂಹರೂಪತ್ವಾಚ್ಛಾಕಲ್ಯಸಂಹಿತಾ ದಶ (ತೀ) ಶಬ್ದೇನೋಚ್ಯತೇ । ತಸ್ಯಾಂ ಸಂಹಿತಾಯಾಮುತ್ಪನ್ನಾ ಋಚೋದಶತ್ಯಃ, ತಾಸ್ವಪಿ ದಶತೀಷ್ವಿಂ-ದ್ರದೇವತಾಕಾಸ್ತ್ರಿಷ್ಟುಪ್‌ಛಂದಸ್ಕಾ ಜಗತೀಛಂದಸ್ಕಾ ವಾ ಸ್ವಬುದ್ಧಿಕೌಶಲೇನಾಕ್ಷರಸಂಖ್ಯಯಾ ಗಣಯಿತ್ವಾ ಬೃಹತ್ಯಃ ಸಂಪಾದ್ಯಂತೇ। ತಥಾವಿಧಾನಾಂ ಬೃಹತೀನಾಂ ಯಾವತೀನಾಮವಾಪೋ ಭವತಿ ತಾವಂತಿ ವರ್ಷಾಣ್ಯಯಂ ಪುಮಾನ್ಪೂ (ಮಾನಾಯುಷಃ) ರ್ವಪ್ರಸಿದ್ಧಾದೂರ್ಧ್ವಂ ಜೀವಿತು-ಮಿಚ್ಛೇತ್। ಪ್ರಕ್ಷೇಪಕಾಲೇ ಯಾವಂತಃ ಸಂವತ್ಸರಾ ಅಧಿಕಜೀವನಾಯಾಪೇಕ್ಷಿತಾಸ್ತೇಷು ಸಂವ-ತ್ಸರೇಷ್ವೇಕೈಕಸ್ಮಾತ್ಸಂವತ್ಸರಾನ್ನಿಮಿತ್ತಭೂತಾದ್ದಶತೋ ದಶ ಬೃಹತೀನಾಂ ಸಮೂಹಾನಾವಪೇತ್।

ನ ವೇತಿ ಪಕ್ಷಾಂತರಮ್ । ಏಕೈಕಸಂಪನ್ನಿರ್ದಿಷ್ಟಮೇಕೈಕಾ ಬೃಹತೀತಿ ತಸ್ಯಾಭಿಪ್ರಾಯಃ । ಏವಂ ಚ ಸತಿ ಪ್ರಕೃತೇ ತ್ರಿಷ್ಟುಪ್‌ಛಂದಸ್ಕಾನಾಂ ನವಾನಾಂ ಪ್ರಕ್ಷಿಪ್ತತ್ವಾದಕ್ಷರಗಣನಯಾ ತಾ ಏಕಾದಶ ಬೃಹತ್ಯಃ ಸಂಪದ್ಯಂತೇ। ತತಸ್ತಾವದಾಯುರ್ವರ್ಧತೇ। ‘ ತ್ಯಮೂ ಷು ’ ಇತಿ ತೃಚಾತ್ಮಕಂ ಸೂಕ್ತಂ ಪಠೇತ್ । ತತ ಊರ್ಧ್ವಮ್ ‘ ಇಂದೋ ವಿಶ್ವಂ ವಿರಾಜತಿ ’ ಇತ್ಯೇತಾಮೇಕಪದಾಮೃಚಂ ಶಾಖಾಂತರಗತಾಂ ಪಠೇತ್ । ‘ ಇಂದ್ರಂ ವಿಶ್ವಾಃ ’ ಇತ್ಯಷ್ಟರ್ಚಮನುಷ್ಟುಪ್‌ಛಂದಸ್ಕಂ ಸೂಕ್ತಂ ತಚ್ಚ ವ್ಯತಿಷಂಗೇಣ ಶಂಸೇತ್ । ಕೋಽಸೌ ವ್ಯತಿಷಂಗಪ್ರಕಾರಃ ಸೋಽಯಮಭಿಧೀಯತೇ—‘ಪ್ರಥಮಾಯಾಃ ಪೂರ್ವಾರ್ಧಂ (ಪೂರ್ವಮರ್ಧರ್ಚಂ) ಯಥಾಪಾಠಂ ಸಪ್ತೋತ್ತರೇಣಾರ್ಧರ್ಚೇನ ಸಹ ದ್ವಿತೀಯಸ್ಯಾ ಋಚಃ ಪೂರ್ವಮರ್ಧರ್ಚಂ ವ್ಯತಿಷಜೇತ್। ಏವಮುತ್ತರಾಯಾಃ । ತತ್ರ ಪಾದೈಃ ಪಾದಾ ಅನುಷಂಜನೀಯಾಃ । ಪ್ರಾಚೀನಾಸು ಸಪ್ತಸ್ವೃಕ್ಷು ಪರಸ್ಪರಂ ವ್ಯತಿಷಂಗಂ ಕೃತ್ವಾ ತೇನೈವ ವ್ಯತಿಷಂಗೇಣಾನುಷ್ಟುಭಂ ಕೃತ್ವಾ ಶಂಸೇತ್ । ಏವಂ ಚ ಸತಿ ಪ್ರಥಮಾಯಾಮೃಚ್ಯಧ್ಯಯನಕ್ರಮೇಣೈವ ಪಾದತ್ರಯಂ ಪಠಿತ್ವಾ ದ್ವಿತೀಯಸ್ಯಾ ಋಚಃ ಪ್ರಥಮಪಾದಮಾಕೃಷ್ಯ ಚತುರ್ಥಪಾದತ್ವೇನ ಯೋಜಯೇತ್ । ಸೇಯಮೇಕಾಽನುಷ್ಟುಪ್ । ತತಃ ಪ್ರಥಮಾಯಾಮೃಚಿ ಚತುರ್ಥಪಾದಂ ದ್ವಿತೀಯಸ್ಯಾಂ ದ್ವಿತೀಯಪಾದಂ ಚ ಸಂಯೋಜ್ಯ ಪ್ರಥಮಮರ್ಧರ್ಚಂ ಕುರ್ಯಾತ್ । ತತೋ ದ್ವಿತೀಯಸ್ಯಾಂ ತೃತೀಯಪಾದಂ ತೃತೀಯಸ್ಯಾಂ ಪ್ರಥಮಪಾದಂ ಚ ಸಂಯೋಜ್ಯ ದ್ವಿತೀಯಮರ್ಧರ್ಚಂ ಕುರ್ಯಾತ್ । ಸೇಯಂ ದ್ವಿತೀಯಾಽನುಷ್ಟುಪ್ । ಏವಮುತ್ತರತ್ರಾಪ್ಯೇಕೈಕಪಾದಾಂತರಿತತ್ವೇನ ದ್ವೌ ದ್ವೌ ಪಾದೌ ಸಂಯೋಜ್ಯಾರ್ಧರ್ಚಾನ್ ಕೃತ್ವಾ ದ್ವಾಭ್ಯಾಂ ದ್ವಾಭ್ಯಾಮರ್ಧರ್ಚಾಭ್ಯಾಮೇಕೈಕಾಽನುಷ್ಟುಪ್‌ಸಂಪಾದನೀಯಾ । ಉತ್ತಮಾಯಾಃ ಪ್ರಾಗೇವಂ ಸಂಪಾದಿತಾತ್ಪೂರ್ವಸ್ಮಾತ್ಪೂರ್ವಸ್ಮಾದರ್ಧರ್ಚಾದೂರ್ಧ್ವಂ ಸಂಪಾದಿತಮುತ್ತರಮುತ್ತರಮರ್ಧರ್ಚಂ ಸಂಯೋಜಯೇತ್। ತಾ ಏತಾಃ ಪರಸ್ಪರವ್ಯತಿಷಕ್ತಾಃ ಸಪ್ತಾನುಷ್ಟುಭಃ ಪಠಿತ್ವಾ ತತ ಊರ್ಧ್ವಂ ಪ್ರಕೃತ್ಯಾ ಯಥಾಮ್ನಾತಪಾಠೇನೈವ ಶೇಷಃ ಶಸ್ತ್ರಸ್ಯಾಂತಿಮೋ ಭಾಗ ಏಕಾರ್ಧರ್ಚಃ ಪಠನೀಯಃ । ಏವಂ ಸತಿ ಸೂಕ್ತಸ್ಯಾಽಽದ್ಯಂತಯೋರರ್ಧರ್ಚಯೋರ್ಯಥಾಮ್ನಾತಪಾಠಃ, ಮಧ್ಯಗತಾನಾಂ ಚತುರ್ದಶಾನಾಮರ್ಧರ್ಚಾನಾಂ ವ್ಯತಿಷಂಗಪಾಠ ಇತ್ಯುಕ್ತಂ ಭವತಿ। ‘ ಪಿಬಾ ಸೋಮಮ್ ’ ಇತಿ ನವರ್ಚಂ ಸೂಕ್ತಂ ತತ್ರಾಂತಿಮಾಸ್ತಿಸ್ರಃ ಪರಿತ್ಯಜ್ಯಾಽಽದೌ ಷಡೃಚಃ ಪಠೇತ್ । ‘ ಯೋನಿಷ್ಟ ಇಂದ್ರ ’ ಇತಿ ಷಡೃಚಂ ಸೂಕ್ತಂ ತತ್ರಾಽಽದೌ ಚತಸ್ರಃ ಪಠಿತ್ವಾ ತದನಂತರಂ ಷಷ್ಠೀಂ ಪಠೇತ್ । ಪಠಿತ್ವಾ ಚ ತತಃ ಪೂರ್ವಭಾವಿನ್ಯಾ ‘ ಏಷ ಸ್ತೋಮ ’ (ಋ-ಸಂ-ಮಂ-೭-ಸೂ-೨೪-ಋ-೫) ಇತ್ಯನಯಾ ಪಂಚಮ್ಯಾ ಪರಿದಧಾತಿ ನಿಷ್ಕೇವಲ್ಯಶಸ್ತ್ರಂ ಸಮಾಪಯೇತ್ ॥

ಪಕ್ಷಿರೂಪ ಶಸ್ತ್ರಭಾಗದ ಊರು [ತೊಡೆ]ಭಾಗವನ್ನು ವಿವರಿಸುತ್ತಾರೆ. ಊರುಭಾಗಸ್ಥಾನದ ಋಕ್ಕುಗಳನ್ನು ವಿವರಿಸುತ್ತಾರೆ. ಇಂದ್ರಾಗ್ನೀಯುವಮಸುನಃ [ಋ. ಸಂ. ೮-೪೦-೨] ಇತ್ಯಾದಿ ಹನ್ನೆರಡು ಋಕ್ಕುಗಳ ಸೂಕ್ತ. ಅವುಗಳಲ್ಲಿ ನ ಹಿ ವಾಂ [ಋ. ಸಂ. ೮-೪೦-೨] ಎಂಬ ಎರಡನೆಯ ಋಕ್ಕು ಶಕ್ವರೀಛಂದಸ್ಕವಾಗಿದೆ. **ಏವೇಂದ್ರಾಗ್ನಿಭ್ಯಾಂ**

[ಋ. ಸಂ. ೮-೪೦-೧೨] ಎಂಬ ಕೊನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವಾಗಿದೆ. ಉಳಿದ ಹತ್ತು ಋಕ್ಕುಗಳು ಪ್ರತ್ಯೇಕವಾಗಿ ಷಟ್ಪದಗಳಾಗಿ ಮಹಾಪಂಕ್ತಿ ಛಂದಸ್ಕಗಳಾಗಿರುತ್ತವೆ. ಈ ಹತ್ತರಲ್ಲಿ ಮೂರುಪಾದಗಳ ಒಂದು ಅರ್ಧರ್ಚವನ್ನು ಗಾಯತ್ರೀಯನ್ನಾಗಿ ಕಲ್ಪಿಸಿಕೊಂಡು ಪಠಿಸಬೇಕು. ಎರಡು ಪಾದಗಳನ್ನು ಮುಗಿಸಿ ಮೂರನೆಯಪಾದದಲ್ಲಿ ಪ್ರಣವ ಹೇಳುವುದೇ ಗಾಯತ್ರೀಕಲ್ಪನೆ. ಎರಡನೆಯ ಶಕ್ವರೀಛಂದಸ್ಕಋಕ್ಕನಲ್ಲಿಯೂ ಪೂರ್ವಾರ್ಧದ ಮೂರುಪಾದಗಳನ್ನು ಗಾಯತ್ರಿಯಿಂದಲೇ ಪಠಿಸಬೇಕು. ಉತ್ತರಾರ್ಧವು ನಾಲ್ಕುಪಾದಗಳಿರುವುದರಿಂದ ಅನುಷ್ಟಭನ್ನಾಗಿ ಕಲ್ಪಿಸಿ ಪಠಿಸಬೇಕು. ಎರಡುಪಾದಮುಗಿಸಿ, ನಾಲ್ಕನೇಪಾದದಲ್ಲಿ ಪ್ರಣವಪ್ರಯೋಗಮಾಡುವುದೇ ಅನುಷ್ಟುಪ್‌ಕಲ್ಪನೆ. ಹೀಗೆ ಕೊನೆಯ ತ್ರಿಷ್ಟುಬ್ ಋಕ್ಕಿನ ಹಿಂದಿನ ಹನ್ನೊಂದು ಋಕ್ಕುಗಳನ್ನು ಪಠಿಸಿ, ತ್ರಿಷ್ಟುಭಿನಲ್ಲಿ ವಿಶೇಷವಚನವಿಲ್ಲದಿರುವುದರಿಂದ ಸಾಮಾನ್ಯರೀತಿಯಿಂದಲೇ ಪಠಿಸಬೇಕು. ತ್ರಿಷ್ಟುಭಿನ ಹಿಂದಿನ ಹನ್ನೊಂದು ಋಕ್ಕುಗಳಲ್ಲಿಯೂ ಗಾಯತ್ರ್ಯಾದಿ ಅರ್ಧರ್ಚದಪಾಠಹೇಳಿರುವುದರಿಂದ ತ್ರಿಷ್ಟುಭಿಗೆ ಪಾದಶಂಸನವು ಸಾಮಾನ್ಯಪ್ರಾಪ್ತವಾಗಿದೆ. ಒಂದುಪಾದಮುಗಿಸಿದಮೇಲೆ ಮುಂದಿನಪಾದದಲ್ಲಿ ಪ್ರಣವಪ್ರಯೋಗಕ್ಕೇ ಪಾದಶಂಸನವೆಂದು ಹೆಸರು. ಈ ಕ್ರಮದಿಂದ ಕೊನೆಯ ತ್ರಿಷ್ಟುಭನ್ನು ಪಠಿಸಬೇಕು. ಆಮೇಲೆ **ಪ್ರ ವೋ ಮಹೇ** (ಋ ಸಂ. ೧೦-೫೦-೧) ಇತ್ಯಾದಿ ನಿವಿದ್ಧಾನಸಂಜ್ಞೆಯುಳ್ಳ ಏಳು ಋಕ್ಕಿನ ಸೂಕ್ತವನ್ನು ಪಠಿಸಬೇಕು. ಪಠನಕಾಲದಲ್ಲಿ ಯಾವ ಸೂಕ್ತದಲ್ಲಿ ಇಂದ್ರ, ದೇಃ ಇತ್ಯಾದಿಪದಗಳು ಪ್ರಕ್ಷಿಪ್ತವಾಗುತ್ತವೋ ಆ ಸೂಕ್ತಕ್ಕೆ ನಿವಿದ್ಧಾನವೆಂದು ಹೆಸರು. ಆಮೇಲೆ **ವನೇಸವಾಯೋ** (ಋ-ಸಂ-೧೦-೨೦-೧) ಎಂಬ ಎಂಟು ಋಕ್ಕಿನ ಸೂಕ್ತವನ್ನು ಪಠಿಸಬೇಕು ಆಮೇಲೆ **ಯೋ ಜಾತ ಏವ** (ಋ-ಸಂ-೨-೧೨-೧) ಎಂಬ ಹದಿನೈದು ಋಕ್ಕಿನ ಸೂಕ್ತವನ್ನು ಪಠಿಸಬೇಕು. ಅಧಿಕ ಆಯಸ್ಸನ್ನು ಬಯಸುವವನಾದರೆ ಆಗ ಈ ಎರಡು ಸೂಕ್ತಗಳ ಮಧ್ಯದಲ್ಲಿ **ಆಯಾಹ್ಯರ್ವಾಜ್** (ಋ-ಸಂ-೩-೪೩-೧) ಎಂಬ ಎಂಟು ಋಕ್ಕಿನ ಸೂಕ್ತವನ್ನೂ, **ವಿಧುಂ ದದ್ರಾಣಂ** (ಋ-ಸಂ-೧೦-೫೭-೫) ಎಂಬ ಒಂದು ಋಕ್ಕನ್ನೂ ಸೇರಿಸಿಕೊಳ್ಳಬೇಕು. ಹೀಗೆ ಸೇರಿಸುವುದರಿಂದ ಅಧಿಕವಾಗುವ ಆಯುಸ್ಸನ್ನು ವಿವರಿಸುತ್ತಾರೆ. ಹತ್ತು ಮಂಡಲಸಮೂಹರೂಪನಾದುದರಿಂದ ಶಾಕಲ್ಯಸಂಹಿತೆಗೆ ದಶ [ತೀ] ಎಂಬ ಹೆಸರು. ಆ ಸಂಹಿತೆಯಲ್ಲಿರುವ ಋಕ್ಕಿಗೆ ದಶತ್ಯ ಎಂದು ಹೆಸರು ಈ ದಶತೀಗಳಲ್ಲಿಯೂ ಇಂದ್ರದೇವತಾಕವಾದ ತ್ರಿಷ್ಟುಪ್‌ಛಂದಸ್ಕ ಋಕ್ಕುಗಳಾಗಲೀ, ಜಗತೀಛಂದಸ್ಕಋಕ್ಕುಗಳಾಗಲೀ ತನ್ನ ಬುದ್ಧಿಕೌಶಲದಿಂದ ಅಕ್ಷರಗಣನೆಯಿಂದ ಬೃಹತಿಗಳನ್ನಾಗಿ ಕಲ್ಪಿಸಿಕೊಳ್ಳಬೇಕು. ಈರೀತಿಯಾಗಿ ಎಷ್ಟು ಬೃಹತೀಸಂಪಾದನೆಯಾಗುವುದೋ ಅಷ್ಟು ಆಯುಸ್ಸು ಅಧಿಕವಾಗುತ್ತದೆ. ಪ್ರಕೃತ ಒಂಬತ್ತು ತ್ರಿಷ್ಟುಪ್‌ಛಂದಸ್ಕಗಳ ಪ್ರಕ್ಷೇಪವಿರುವುದರಿಂದ ಅಕ್ಷರಗಣನೆಯಿಂದ ಅವು ಹನ್ನೊಂದು ಬೃಹತೀಛಂದಸ್ಸು ಆಗುತ್ತವೆ. ಆಗ ಹನ್ನೊಂದು ವರ್ಷಗಳು ನಿಯಮಿತವಾದ ಆಯುಸ್ಸಿಗಿಂತ ಹೆಚ್ಚಾಗುತ್ತವೆಯೆಂದು ತಾತ್ಪರ್ಯ. ಆಮೇಲೆ **ತ್ಯಮೂಷು** (ಋ-ಸಂ-೧೦-೧೭೮-೧) ಎಂಬ ತೃಚಸೂಕ್ತವನ್ನು ಪಠಿಸಬೇಕು. ಆ ಮೇಲೆ **ಇಂದ್ರೋ ವಿಶ್ವಂ ವಿರಾಜತಿ** ಎಂಬ ಏಕ ಪದವುಳ್ಳ ಇತರ ಶಾಖೆಯಲ್ಲಿ ಹೇಳಿದ ಋಕ್ಕನ್ನು ಪಠಿಸಬೇಕು. **ಇಂದ್ರಂ ವಿಶ್ವಾಃ** [ಋ-ಸಂ-೧-೧೧-೧] ಎಂಬ ಎಂಟು ಋಕ್ಕಿನ ಅನುಷ್ಟುಪ್‌ಛಂದಸ್ಕವಾದ ಸೂಕ್ತವನ್ನು ವ್ಯತಿಷಂಗದಿಂದ ಪಠಿಸಬೇಕು. ವ್ಯತಿಷಂಗವೆಂದರೆ ಪ್ರಥಮ ಋಕ್ಕಿನ ಪೂರ್ವಾರ್ಧವನ್ನು ಇದ್ದಂತೆಯೇ ಪಠಿಸಿ, ಮುಂದಿನ ಅರ್ಧರ್ಚವನ್ನು ಎರಡನೆಯ ಋಕ್ಕಿನ ಪೂರ್ವದ ಅರ್ಧರ್ಚದೊಡನೆ ಸೇರಿಸಿ ಪಠಿಸಬೇಕು. ಹೀಗೆ ಉತ್ತರದ ಅರ್ಧರ್ಚವನ್ನೂ ಮುಂದೆ ಸೇರಿಸಿ ಪಠಿಸಬೇಕು. ಅಲ್ಲಿ ಪಾದದೊಡನೆ ಪಾದಗಳನ್ನು ಸೇರಿಸಬೇಕು. ಹಿಂದಿನ ಏಳು ಋಕ್ಕುಗಳಲ್ಲಿಯೂ ಹೀಗೆ ಸಂಬಂಧವನ್ನು ಕಲ್ಪಿಸಿ ಅಸಂಬಂಧದಿಂದಲೇ ಅನುಷ್ಟುಪ್‌ಛಂದಸ್ಸನ್ನು ಮಾಡಿಕೊಂಡು ಪಠಿಸಬೇಕು. ಅಂದರೆ ಪ್ರಥಮ ಋಕ್ಕಿನಲ್ಲಿ ಅಧ್ಯಯನಕ್ರಮದಿಂದ ಮೂರು ಪಾದಗಳನ್ನು ಮಾಡಿ, ಎರಡನೆಯ ಋಕ್ಕಿನ ಪ್ರಥಮ ಪಾದವನ್ನು ಸೆಳೆದು ನಾಲ್ಕನೆಯ ಪದವನ್ನಾಗಿ ಕಲ್ಪಿಸಬೇಕು. ಆಗ ಒಂದು ಅನುಷ್ಟುಪ್ ಆಗುತ್ತದೆ. ಆಮೇಲೆ

ಪ್ರಥಮ ಋಕ್ಕಿನ ನಾಲ್ಕನೇ ಪಾದವನ್ನೂ, ಎರಡನೆಯ ಋಕ್ಕಿನ ಎರಡನೆಯ ಪಾದವನ್ನೂ ಸೇರಿಸಿ ಮೊದಲನೆಯ ಅರ್ಧರ್ಚವನ್ನು ಮಾಡಬೇಕು. ಆಮೇಲೆ ಎರಡನೆಯ ಋಕ್ಕಿನ ಮೂರನೆಯ ಪಾದವನ್ನೂ, ಮೂರನೆಯ ಋಕ್ಕಿನ ಪ್ರಥಮ ಪಾದವನ್ನೂ ಸೇರಿಸಿ ಎರಡನೆಯ ಅರ್ಧರ್ಚವನ್ನು ಮಾಡಬೇಕು. ಇದು ಎರಡನೆಯ ಅನುಷ್ಟುಪ್ ಆಗುತ್ತದೆ. ಮುಂದೆಯೂ, ಹೀಗೆಯೇ ಒಂದೊಂದು ಪಾದವನ್ನು ಬಿಟ್ಟು ಎರಡೆರಡು ಪಾದಗಳನ್ನು ಸೇರಿಸಿ ಅರ್ಧರ್ಚವನ್ನು ಮಾಡಿ ಎರಡು ಅರ್ಧರ್ಚ ಗಳಿಂದ ಒಂದೊಂದು ಅನುಷ್ಟುಭನ್ನು ಕಲ್ಪಿಸಬೇಕು. ಹೀಗೆ ಏಳು ಅನುಷ್ಟುಭನ್ನು ಪಠಿಸಿ ಆಮೇಲೆ ಪಾಠಕ್ರಮದಿಂದಲೇ ಕೊನೆಯ ಒಂದು ಅರ್ಧರ್ಚವನ್ನು ಪಠಿಸಬೇಕು. ಆಗ ಸೂಕ್ತದ ಆದಿ ಅಂತ್ಯಗಳಲ್ಲಿ ಕ್ರಮಪಾಠವೂ, ಮಧ್ಯದ ಹದಿನಾಲ್ಕು ಅರ್ಧರ್ಚಗಳ ವ್ಯತಿಷಂಗಪಾಠವೂ ಸಿದ್ಧವಾಗುತ್ತದೆ. ಇದಾದ ಮೇಲೆ **ಪಿಬಾಸೋಮಂ** (ಋ. ಸಂ. ೭-೨೨-೧) ಎಂಬ ಒಂಬತ್ತು ಋಕ್ಕಿನ ಸೂಕ್ತದಲ್ಲಿ ಕೊನೆಯ ಮೂರು ಋಕ್ಕುಗಳನ್ನು ಬಿಟ್ಟು ಉಳಿದ ಆರು ಋಕ್ಕುಗಳನ್ನು ಪಠಿಸಬೇಕು. **ಯೋನಿಷ್ಟ ಇಂದ್ರ** [ಋ. ಸಂ. ೭-೨೪-೧] ಎಂಬ ಆರು ಋಕ್ಕಿನ ಸೂಕ್ತದಲ್ಲಿ ಮೊದಲಿನ ನಾಲ್ಕು ಋಕ್ಕುಗಳನ್ನು ಪಠಿಸಿ ಆಮೇಲೆ ಆರನೆಯ ಋಕ್ಕನ್ನು ಪಠಿಸಬೇಕು. ಆಮೇಲೆ ಹಿಂದಿನ **ಏಷಸ್ತೋಮಃ** (ಋ. ಸಂ. ೭-೨೪-೫) ಎಂಬ ಐದನೆಯ ಋಕ್ಕಿನಿಂದ ನಿಷ್ಕೇವಲ್ಯ ಶಸ್ತ್ರವನ್ನು ಮುಗಿಸಬೇಕು.

## ಪರಿಹಿತ ಉಕ್ಥ ಉಕ್ಥಸಂಪದಂ ಜಪತಿ ॥

ಅಥ ಹೋತುರ್ಜಪಂ ವಿಧತ್ತೇ—ಪ್ರಕೃತಿಭೂತೇಽಗ್ನಿಷ್ಟೋಮೇ ಹೋತೇ ನಿಷ್ಕೇವಲ್ಯಶಸ್ತ್ರಾ-ದೂರ್ಧ್ವಮ್ 'ಉಕ್ಥಂ ವಾಚೀಂದ್ರಾಯೋಪಶೃಣ್ವತೇ ತ್ವಾ' ಇತಿ ಮಂತ್ರಂ ಜಪತಿ। ತತ್ರೋಕ್ಥಂ ವಾಚೀಂದ್ರಾಯೇತ್ಯೇತಾವಾನುಕ್ಥಸಂಪದ್ಭಾಗಃ। ಉಪಶೃಣ್ವತೇ ತ್ವೇ ತ್ಯೇತಾವಾನುಕ್ಥವೀರ್ಯಭಾಗಃ। ಉಕ್ಥ-ಶಬ್ದಃ ಶಸ್ತ್ರವಾಚೀ। ತಥಾ ಸತ್ಯತ್ರ ನಿಷ್ಕೇವಲ್ಯಾಖ್ಯ ಉಕ್ಥೇ ಸಮಾಪ್ತೇ ಸತ್ಯುಕ್ಥಸಂಪದ್ಭಾಗಂ ಹೋತಾ ಜಪೇತ್। ಉಕ್ಥಂ ವಾಚೀಂದ್ರಾಯೇತ್ಯೇತಾವದೇವ ಜಪೇದಿತ್ಯರ್ಥಃ ॥

ಶಸ್ತ್ರಸಮಾಪ್ತಿಯಾದಮೇಲೆ ಹೋತೃಜಪವನ್ನು ವಿಧಿಸುತ್ತಾರೆ. ಪ್ರಕೃತಿಯಾಗವಾದ ಅಗ್ನಿಷ್ಟೋಮದಲ್ಲಿ ಹೋತೃವು ನಿಷ್ಕೇವಲ್ಯಶಸ್ತ್ರದ ಮೇಲೆ **ಉಕ್ಥಂ ವಾಚೀಂದ್ರಾಯೋಪಶೃಣ್ವತೇ ತ್ವಾ** ಎಂಬ ಮಂತ್ರವನ್ನು ಜಪಿಸುತ್ತಾನೆ. ಅಲ್ಲಿ **ಉಕ್ಥಂ ವಾಚೀಂದ್ರಾಯ** ಎಂಬುದು ಶಸ್ತ್ರದ ಸಂಪದ್ಭಾಗವೂ, **ಉಪಶೃಣ್ವತೇ ತ್ವಾ** ಎಂಬುದು ಉಕ್ಥದ ವೀರ್ಯ ಭಾಗವೂ ಆಗಿರುತ್ತದೆ. ಉಕ್ಥವೆಂದರೆ ಶಸ್ತ್ರ. ಇಲ್ಲಿ ನಿಷ್ಕೇವಲ್ಯವೆಂಬ ಶಸ್ತ್ರ ಸಮಾಪ್ತವಾದಾಗ ಉಕ್ಥಸಂಪದ್ಭಾಗವನ್ನು ಹೋತೃವು ಜಪಿಸಬೇಕು. ಅಂದರೆ ಉಕ್ಥಂ ವಾಚೀಂದ್ರಾಯ ಎಂಬುದನ್ನು ಮಾತ್ರ ಜಪಿಸಬೇಕು.

## ಉಕ್ಥವೀರ್ಯಸ್ಯ ಸ್ಥಾನ ಉಕ್ಥದೋಹಃ ॥

ವೀರ್ಯಭಾಗೇ ಪ್ರತಿನಿಧಿಂ ವಿಧತ್ತೇ—ಯೋಽಯಮುಕ್ಥವೀರ್ಯಭಾಗ ಉಪಶೃಣ್ವತೇ ತ್ವೇತ್ಯೇವಂ-ರೂಪಸ್ತತ್ಸ್ಥಾನ ಉಕ್ಥದೋಹಾಖ್ಯೋ ಮಂತ್ರಃ ಪಠನೀಯಃ। ಶಾಖಾಂತರಗತೋ ಮೂರ್ಧಾಲೋಕಾನಾ-ಮಿತ್ಯಾರಭ್ಯ ಯಜ್ಞಸಮೃದ್ಧಿಂ ಮೇ ಧುಕ್ಷ್ವೇತ್ಯಂತೋ ಮಂತ್ರಸಮೂಹ ಉಕ್ಥದೋಹಸಂಜ್ಞಕಃ ॥

ಉಕ್ಥವೀರ್ಯಭಾಗದಲ್ಲಿ ಪ್ರತಿನಿಧಿಮಂತ್ರವನ್ನು ತೋರಿಸುತ್ತಾರೆ. ವೀರ್ಯಭಾಗವಾದ ಉಪಶೃಣ್ವತೇ ತ್ವಾ ಎಂಬುದರಸ್ಥಾನದಲ್ಲಿ ಉಕ್ಥದೋಹವೆಂಬ ಮಂತ್ರವನ್ನು ಪಠಿಸಬೇಕು. ಇತರಶಾಖೆಯಲ್ಲಿ ಮೂರ್ಧಾಲೋಕಾನಾಂ ಎಂದು ಆರಂಭಿಸಿ ಯಜ್ಞಸಮೃದ್ಧಿಂ ಮೇ ಧುಕ್ಷ್ವ ಎಂಬ ಮಂತ್ರದವರೆಗಿರುವ ಮಂತ್ರಸಮೂಹಕ್ಕೆ ಉಕ್ಥದೋಹವೆಂದು ಹೆಸರು.

**ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ**
**ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪಂಚಮಾರಣ್ಯಕೇ**
**ತೃತೀಯಾಧ್ಯಾಯೇ ಪ್ರಥಮಃ ಖಂಡಃ**

**ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ**
**ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪಂಚಮಾರಣ್ಯಕದ**
**ಮೂರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು ॥**

---

## ಅಥ ಪಂಚಮಾರಣ್ಯಕೇ ತೃತೀಯಾಧ್ಯಾಯೇ ದ್ವಿತೀಯಃ ಖಂಡಃ

**ಐದನೆಯ ಆರಣ್ಯಕದ ಮೂರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು**

---

ಮೂರ್ಧಾ ಲೋಕಾನಾಮಸಿ ವಾಚೋ ರಸಸ್ತೇಜಃ ಪ್ರಾಣಸ್ಯಾಽಽಯತನಂ ಮನಸಃ ಸಂವೇಶಶ್ಚಕ್ಷುಷಃ ಸಂಭವಃ ಶ್ರೋತ್ರಸ್ಯ ಪ್ರತಿಷ್ಠಾ ಹೃದಯಸ್ಯ ಸರ್ವಮ್ । ಇಂದ್ರಃ ಕರ್ಮಾಕ್ಷಿತಮಮೃತಂ ವ್ಯೋಮ । ಋತಂ ಸತ್ಯಂ ವಿಜಿಗ್ಯಾನಂ ವಿವಾಚನಮಂತೋ ವಾಚೋ ವಿಭುಃ ಸರ್ವಸ್ಮಾದುತ್ತರಂ ಜ್ಯೋತಿರೂಧರಪ್ರತಿವಾದಃ ಪೂರ್ವಂ ಸರ್ವಂ ವಾಕ್ಪಂಣಾಗರ್ವಾಕ್ಸಮ್ರು ಸಲಿಲಂ ಧೇನು ಪಿನ್ವತಿ। ಚಕ್ಷುಃ ಶ್ರೋತ್ರಂ ಪ್ರಾಣಃ ಸತ್ಯಸಂಮಿತಂ ವಾಕ್ಪ್ರಭೂತಂ ಮನಸೋ ವಿಭೂತಂ ಹೃದಯೋಗ್ರಂ ಬ್ರಾಹ್ಮಣಭರ್ತೃಮನ್ನಶುಭೇ ವರ್ಷಪವಿತ್ರಂ

ಗೋಭಗಂ ಪೃಥಿವ್ಯಪರಂ ವರುಣವಾಯ್ವಿತಮಂ ತಪಸ್ತನ್ವಿಂದ್ರ-
ಜ್ಯೇಷ್ಠಂ ಸಹಸ್ರಧಾರಮಯುತಾಕ್ಷರಮಮೃತಂ ದುಹಾನ್ ॥

ತಸ್ಮಿನ್ನುಕ್ಥದೋಹೇ ಪ್ರಥಮಂ ಮಂತ್ರಮಾಹ—ನಿಷ್ಕೇವಲ್ಯನಾಮಕ ಹೇ ಉಕ್ಥ ತ್ವಂ ಪೃಥಿವ್ಯಾದಿಲೋಕಾನಾಂ ಸರ್ವೇಷಾಂ ಮೂರ್ಧಾ ಶಿರಃಸ್ಥಾನೀಯೋಽಸಿ । ವಾಗಿಂದ್ರಿಯಸ್ಯ ಸಾರಭೂತಮಸಿ । ಪ್ರಾಣಸ್ಯ ತೇಜಃ ಶಕ್ತಿರೂಪಮಸಿ । ಮನಸ ಆಯತನಮಾಶ್ರಯೋಽಸಿ । ಚಕ್ಷುರಿಂದ್ರಿಯಸ್ಯ ಸಂವೇಶಃ ಸ್ವವಿಷಯೇ ಪ್ರವೇಶನಸಾಮರ್ಥ್ಯಮಸಿ । ಶ್ರೋತ್ರೇಂದ್ರಿಯಸ್ಯ ಸಂಭವಃ ಶಬ್ದಗ್ರಹಣಾಯೋತ್ಪನ್ನವೃತ್ತಿರೂಪಮಸಿ । ಹೃದಯಸ್ಯಾಷ್ಟದಲಸ್ಯ ಪ್ರತಿಷ್ಠಾಽಽಧಾರಭೂತೋ ದೇಹೋಽಸಿ । ನಿಷ್ಕೇವಲ್ಯ ನೈತಾವದೇವ ತ್ವಂ ಕಿಂ ತು ಜಗತಿ ಯದ್ವಿದ್ಯತೇ ತತ್ಸರ್ವಂ ತ್ವಮಸಿ । ಇಂದ್ರ ಇತ್ಯಾರಭ್ಯ ದುಹಾನಮಿತ್ಯಂತೇನ ಗ್ರಂಥೇನ ತದೇವ ಸರ್ವಂ ಪ್ರತ್ಯೇಕಮುದಾಹೃತ್ಯ ಪ್ರದರ್ಶ್ಯತೇ । ಇಂದ್ರ ಸಹಸ್ರಾಕ್ಷಃ । ಕರ್ಮ ದರ್ಶಪೂರ್ಣಮಾಸಾದಿಕಮ್ । ಅಕ್ಷರಮಕಾರಾದಿಕಂ । ಅಮೃತಂ ಪೀಯೂಷಮ್ । ವ್ಯೋಮಾಽಽಕಾಶಃ । ಋತಂ ಮನಸಾ ಯಥಾವಸ್ತು ಚಿಂತನಮ್ । ಸತ್ಯಂ ವಾಚಾ ಯಥಾವಸ್ತ್ವಭಿಧಾನಂ । ವಿಜಿಗ್ಯಾನಂ ವಿಜಯಶೀಲಂ ರಾಜಾದಿಕಂ । ವಿವಾಚನಂ ವಿಶೇಷೇಣ ವಕ್ತುಂ ಸಮರ್ಥಮ್ । ವಾಚಃ ಶಬ್ದಕಾಲಸ್ಯಾತಃ ಪರ್ಯವಸಾನಭೂಮಿಃ । ಸ ಚಾಂತೋ ವಿಭುರ್ವಕ್ತವ್ಯಸ್ಯಾರ್ಥಾಭಿವಾದನೇ ಸಮರ್ಥಃ । ಸರ್ವಸ್ಮಾತ್ ಪ್ರಕಾಶಜಾತಾದುತ್ತರಂ ಜ್ಯೋತಿರಾದಿತ್ಯರೂಪಮ್ । ಊಧೋ ಗವಾಂ ಸ್ತನಸಮೂಹಃ । ಅಪ್ರತಿವಾದೋ ವಿದ್ವತ್ಕಥಾಯಾಂ ಪ್ರತಿವಾದ್ಯುಕ್ತಿರಾಹಿತ್ಯಮ್ । ಯಸ್ಯ ಯಸ್ಯ ವಸ್ತುನೋ ಯದ್ಯತ್ಪೂರ್ವಂ ಕಾರಣರೂಪಂ ತತ್ಸರ್ವರೂಪಂ । ಪರಾಗರ್ವಾಗುತ್ತಮಾಧಮರೂಪಾ ಯಾ ವಾಗಸ್ತಿ ತದ್ರೂಪಂ । ಸಪ್ರು ನಾನಾವಿಧವಿಪ್ರುಡ್ಭಿಃ ಸಹಿತಂ ಸಲಿಲಂ ವೃಷ್ಟ್ಯುದಕಂ ಧೇನು ಪಿನ್ವತಿ' ಯಥಾಧೇನುಃ ಕ್ಷೀರಪ್ರದಾನೇನ ಪ್ರೀಣಯತಿ ತದ್ವದ್ವೃಷ್ಟ್ಯುದಕಂ ಸಸ್ಯನಿಷ್ಪಾದನೇನ ಪ್ರೀಣಯತಿ । ಚಕ್ಷುಃಶ್ರೋತ್ರಪ್ರಾಣಾ ಇಂದ್ರಿಯವಾಯುರೂಪಾಃ । ಲೋಕೇ ಯದ್ವ್ಯವಹಾರಜಾತಂ ಸತ್ಯ ಸಂಮಿತಮನೃತೋಕ್ತಿರಹಿತಂ ವಾಕ್ಯಭೂತಂ ಶಬ್ದೈಃ ಸಂಪೂರ್ಣಂ ಮನಸೋ ವಿಭೂತಮರ್ಥಪರ್ಯಾಲೋಚಕಸ್ಯ ಮನಃಸಂಬಂಧಿ ಭೂತ್ವಾ ವಿಶೇಷೇಣ ವ್ಯವಸ್ಥಿತಂ ತಾದೃಶಂ ವಾಗ್ವ್ಯವಹಾರಜಾತಂ ಸರ್ವಮ್ । ಹೃದಯೋಗ್ರಂ ಹೃದಯೇ ಮನಸಿ ರಜ್ಯಮಾನಂ ಯುದ್ಧಾದಿಕಮುಗ್ರಂ ಕರ್ಮ । ಬ್ರಾಹ್ಮಣಭರ್ತೃಂ ಬ್ರಾಹ್ಮಣಾ ಭರ್ತಾರಃ ಪೋಷಕಾ ಯಸ್ಯಾಧ್ಯಯನಾದೇಸ್ತದ್ಬ್ರಾಹ್ಮಣಭರ್ತೃಕಮ್ । ಅನ್ನಶುಭೇ ಅನ್ನಂ ವ್ರೀಹಿಯವಾದಿಕಂ ಶುಭಂ ವಿವಾಹಾದಿಕಮ್ । ವರ್ಷಪವಿತ್ರಂ ವೃಷ್ಟ್ಯುದಕೇನ ಪ್ರಕ್ಷಾಲಿತತಯಾ ಶುದ್ಧಂ ಭೂಪ್ರದೇಶಜಾತಮ್ । ಗೋಭಗಂ ಗವಾಂ ಸಂಬಂಧಿ ಶುದ್ಧಿಹೇತುತ್ವಾದಿರೂಪಂ ಸೌಭಾಗ್ಯಜಾತಮ್ । ಪೃಥಿವ್ಯಪರಂ ಪೃಥಿವ್ಯಾಂ ನಿಖನ್ಯಮಾನಂ ಯೂಪಸ್ಯ ಮೂಲಮ್ । ವರುಣವಾಯ್ವಿತಮಂ ವೃಷ್ಟ್ಯಧಿಪತಿನಾ ವರುಣೇನ ತತ್ಸಹಕಾರಿಣಾ ವಾಯುನಾ ಚಾತಿಶಯೇನೇತಂ ಪ್ರಾಪ್ತಂ । ಇತತಮಮಿತ್ಯಸ್ಮಿನ್ನರ್ಥೇ ತಕಾರ ಏಕೋ ಲುಪ್ತಃ । ತಪಸ್ತನು ತಪಸಾ ಕೃಶಂ ಮುನಿಶರೀರಜಾತಂ । ತದೇವ ವೃಷ್ಟಿವಾಯೂಪದ್ರವಸಹಿಷ್ಣುತ್ವಾದ್ವರುಣ-

ವಾಯುಭ್ಯಾಮತಿಶಯೇನ ಪ್ರಾಪ್ತಮಿತ್ಯುಚ್ಯತೇ । ಇಂದ್ರಜ್ಯೇಷ್ಠಂ । ತದೇವ ಮುನಿಶರೀರಜಾತ-ಮಿಂದ್ರಾದಪ್ಯಧಿಕಂ ಹಿರಣ್ಯಗರ್ಭಾದಿಪದಸಾಧಕತ್ವಾತ್ । ಸಹಸ್ರಧಾರಮಯುತಾಕ್ಷರಂ। ಅಮೃತಂ ದುಹಾನಮ್ । ಯದಾ ಯಜ್ಞೇಷು ದೇವಾರ್ಥಂ ಗೌರ್ದುಹ್ಯತೇ ತದಾ ತಸ್ಯ ಕ್ಷೀರಸ್ಯ ಧಾರಾ ದೇವಾನಾಮಗ್ರೇ ಸಹಸ್ರಸಂಖ್ಯಾಕಾಃ ಸಂಪದ್ಯಂತೇ । ಅತ ಏವ ದೋಹನಪ್ರಕರಣೇ—" ವಸೂನಾಂ ಪವಿತ್ರಮಸಿ ಸಹಸ್ರಧಾರಂ ' ಇತಿ ಮಂತ್ರಾ ಆಮ್ನಾತಾಃ। ತತ್ರ ದೋಹನಪ್ರಕರಣೇ ಸಮಾಮ್ನಾತೇಷು ಯಾನ್ಯಕ್ಷರಾಣಿ ವಿದ್ಯಂತೇ ತಾನ್ಯಯುತಸಂಖ್ಯಾಕಾನಿ ಬಹುಲಾನೀತ್ಯರ್ಥಃ । ಬಹುಧಾರಾಭಿರ್ಬಹ್ವ-ಕ್ಷರೈಶ್ಚೋಪೇತಂ ಯದಮೃತಂ ಕ್ಷೀರಂ ತದ್ದುಹಾನಂ ಗೋಕುಲಮ್ । ಇತ್ಥಂ ಸರ್ವಮುದಾಹೃತ್ಯ ಪ್ರದರ್ಶಿತಮ್ ॥

ಮೊದಲನೆಯಖಂಡದಲ್ಲಿ ಹೇಳಿದ ಉಕ್ಥದೋಹದಲ್ಲಿ ಮೊದಲನೆಯ ಮಂತ್ರವನ್ನು ವಿವರಿಸುತ್ತಾರೆ. ಎಲೈ ನಿಷ್ಕೇವಲ್ಯವೆಂಬ ಶಸ್ತ್ರವೇ ನೀನು ಪೃಥಿವ್ಯಾದಿ ಸಕಲಲೋಕಗಳ ಶಿರಸ್ಸಿನಂತಿರುವಿ. ವಾಗಿಂದ್ರಿಯದ ಸಾರವಾಗಿರುವಿ. ಪ್ರಾಣಕ್ಕೆ ಶಕ್ತಿರೂಪನಾಗಿರುವಿ. ಮನಸ್ಸಿಗೆ ಆಶ್ರಯನಾಗಿರುವಿ. ಚಕ್ಷುರಿಂದ್ರಿಯಕ್ಕೆ ಸಾಮರ್ಥ್ಯದಾಯಕನಾಗಿರುವಿ. ಶ್ರವಣೇಂದ್ರಿಯಕ್ಕೆ ಶಬ್ದಗ್ರಹಣಕ್ಕೋಸ್ಕರ ಉಂಟಾದ ವೃತ್ತಿರೂಪನಾಗಿರುವಿ. ಅಷ್ಟದಲ ಹೃದಯಕ್ಕೆ ಆಧಾರನಾದ ಶರೀರನಾಗಿರುವಿ. ಜಗತ್ತಿನಲ್ಲಿ ಏನೇನಿವೆಯೋ ಅವೆಲ್ಲವೂ ನೀನೇ ಆಗಿರುವಿ. ಇಂದ್ರ ಎಂದು ಆರಂಭಿಸಿ ದುಹಾನಂ ಎಂಬ ಗ್ರಂಥದವರೆಗೆ ಪ್ರತ್ಯೇಕವಾಗಿ ಉದಾಹರಿಸಿ ತೋರಿಸಿರುತ್ತಾರೆ. ಸಹಸ್ರಾಕ್ಷನೆಂದು ಪ್ರಸಿದ್ಧನಾದವನೇ ಇಂದ್ರನು. ಕರ್ಮವೆಂದರೆ ದರ್ಶಪೂರ್ಣಮಾಸಾದಿಗಳು. ಅಕ್ಷರ—ಅಕಾರಾದಿಗಳು. ಅಮೃತ ದೇವಲೋಕದಲ್ಲಿರುವುದು. ವ್ಯೋಮ—ಆಕಾಶ. ಋತಂ—ಮನಸ್ಸಿನಿಂದ ವಸ್ತುವನ್ನು ಇದ್ದಂತೆ ಚಿಂತಿಸುವುದು. ಸತ್ಯಂ—ವಸ್ತುವಿದ್ದಂತೆ ಹೇಳುವುದು. ವಿಜಿಗ್ಯಾನಂ—ವಿಜಯ ಹೊಂದಿದ ರಾಜಸಮುದಾಯ. ವಿವಾಚನಂ—ವಿಶೇಷವಾಗಿ ಹೇಳಲು ಸಮರ್ಥವಾದುದು. ವಾಚಃಅಂತ—ಶಬ್ದಕಾಲದ ಪರ್ಯವಸಾನಸ್ಥಾನ. ವಿಭುಃ—ಅರ್ಥಹೇಳುವುದರಲ್ಲಿ ಸಮರ್ಥನು. ಸರ್ವಸ್ಮಾದುತ್ತರಂ ಜ್ಯೋತಿಃ—ಎಲ್ಲಾಪ್ರಕಾಶದ ಕೊನೆ ಅಂದರೆ ಆದಿತ್ಯರೂಪ. ಊಧಃ—ಹಸುಗಳಕೆಚ್ಚಲು. ಅಪ್ರತಿವಾದ—ವಿದ್ವತ್ಕಥೆಯಲ್ಲಿ ಪ್ರತಿವಾದಿಯಮಾತಿಲ್ಲದಿರುವಿಕೆ. ಪೂರ್ವಂ ಸರ್ವಂ—ಸಕಲವಸ್ತುಗಳ ಕಾರಣರೂಪಗಳು. ಪರಾಗರ್ವಾಗ್‌ವಾಕ್—ಉತ್ತಮಾಧಮರೂಪವಾದ ವಾಕ್. ಸಪ್ರ ಸಲಿಲಂ ಧೇನು ಪಿನ್ವತಿ—ಹಸುವು ಹಾಲನ್ನುಕೊಡುವುದರಿಂದ ಹೇಗೆ ಸಂತೋಷಪಡಿಸುವುದೋ ಅದರಂತೆ ನಾನಾಧಾರೆಯುಳ್ಳ ಮಳೆಯನೀರು ಸಸ್ಯನಿಷ್ಪಾದನದಿಂದ ಸಂತೋಷಗೊಳಿಸುವುದು. ಚಕ್ಷುಃಶ್ರೋತ್ರಪ್ರಾಣಾಃ—ಇಂದ್ರಿಯವಾಯರೂಪಗಳು. ಲೋಕದ ವ್ಯವಹಾರವೆಲ್ಲವೂ ಸತ್ಯಸಂಮಿತಃ—ಅನ್ಯಥೋಕ್ತಿರಹಿತವಾಗಿ, ವಾಕ್ಪ್ರಭೂತಃ—ಶಬ್ದಗಳಿಂದ ಸಂಪೂರ್ಣವಾಗಿ, ಮನಸೋ ವಿಭೂತಃ—ಅರ್ಥವನ್ನು ಚಿಂತಿಸುವವನ ಮನಃಸಂಬಂಧಿಯಾಗಿ, ವಿಶೇಷವಾಗಿ ವ್ಯವಸ್ಥಿತವಾದ ಸಕಲವಾಗ್ವ್ಯವಹಾರಗಳು. ಹೃದಯೋಗ್ರಂ—ಮನಸ್ಸಿನಲ್ಲಿಯೇ ಯೋಚಿಸುವ ಯುದ್ಧಾದಿಕರ್ಮ. ಬ್ರಾಹ್ಮಣಭರ್ತೃಂ—ಅಧ್ಯಯನಾದಿಗಳಿಗೆ ಪೋಷಕರಾದ ಬ್ರಾಹ್ಮಣರು. ಅನ್ನಶುಭೇ—ವ್ರೀಹ್ಯಾದಿಗಳು ಮತ್ತು ವಿವಾಹಾದಿಕರ್ಮ. ವರ್ಷಪವಿತ್ರಂ—ಮಳೆನೀರಿನಿಂದ ಶುದ್ಧವಾದ ಭೂ ಪ್ರದೇಶಗಳು. ಗೋಭಗಂ—ಗೋಸಂಬಂಧಿ ಶುದ್ಧಿಕಾರಣವಾದ ಸೌಭಾಗ್ಯ. ಪೃಥಿವ್ಯುಪರಂ—ಭೂಮಿಯಲ್ಲಿ ಹೂಳಿರುವ ಯೂಪದ ಮೂಲ. ವರುಣವಾಯ್ವಿತಮಂ—ಮಳೆಗೆ ಯಜಮಾನನಾದ ವರುಣನಿಂದಲೂ, ಅವನಿಗೆ ಸಹಾಯಕನಾದ ವಾಯುವಿನಿಂದಲೂ, ಅತಿಶಯವಾಗಿ ಹೊಂದಿರುವುದು. ಇತತಮಂ ಎಂಬುದೆ ಒಂದು ತಕಾರಲೋಪಹೊಂದಿದೆ. ತಪಸ್ತನು—ತಪಸ್ಸಿನಿಂದ ಕೃಶವಾದ ಮುನಿಶರೀರಸಮೂಹ... ಮುನಿಶರೀರವು ಮಳೆ

ಗಾಳಿಗಳ ಉಪದ್ರವವನ್ನು ಸಹಿಸುವುದರಿಂದ ವರುಣವಾಯುಗಳಿಂದ ಪ್ರಾಪ್ತವಾಗಿರುತ್ತದೆ. ಇಂದ್ರಜ್ಯೇಷ್ಠಂ - ಅದೇ ಮುನಿ ಶರೀರಜಾತವು ಹಿರಣ್ಯಗರ್ಭಾದಿಪದಸಾಧಕವಾದುದರಿಂದ ಇಂದ್ರಾದಿಗಳಿಗಿಂತಲೂ ಅಧಿಕವಾಗಿರುತ್ತದೆ. ಸಹಸ್ರಧಾರಂ— ಅಯುತಾಕ್ಷರವುಳ್ಳದ್ದು. ಅಮೃತಂ ದುಹಾನಂ—ಯಜ್ಞಗಳಲ್ಲಿ ದೇವತೆಗಳಿಗೋಸ್ಕರ ಹಸುವಿನ ಹಾಲುಕರೆಯುವಾಗ ಹಾಲಿನ ಧಾರೆಯು ದೇವತೆಗಳ ಎದುರು ಸಹಸ್ರಸಂಖ್ಯೆಯಿಂದ ಕೂಡಿರುತ್ತದೆ. ಆದುದರಿಂದಲೇ **ವಸೂನಾಂ ಪವಿತ್ರಮಸಿ ಸಹಸ್ರಧಾರಂ** ಎಂದು ಶ್ರುತಿಯಲ್ಲಿಯೂ ಹೇಳಿದೆ. ದೋಹನಪ್ರಕರಣದಲ್ಲಿ ಹೇಳಿದ ಅಕ್ಷರಗಳು ಅಯುತಸಂಖ್ಯಾಕಗಳು ಅಂದರೆ ಬಹಳನೆಂದು ತಾತ್ಪರ್ಯ. ಬಹುಧಾರೆಯಿಂದಲೂ ಬಹ್ವಕ್ಷರಗಳಿಂದಲೂ ಕೂಡಿದ ಅಮೃತಸಮಾನ ಕ್ಷೀರವನ್ನು ಕರೆಯುವ ಗೋಕುಲವೆಂದರ್ಥ. ಹೀಗೆ ಇವೆಲ್ಲವೂ ಉಕ್ಥರೂಪವೇ ಆಗಿರುತ್ತವೆ.

ಏತಾಸ್ತ ಉಕ್ಥ ಭೂತಯ ಏತಾ ವಾಚೋ ವಿಭೂತಯಃ । ತಾಭಿರ್ನ
ಇಹ ಧುಕ್ಷ್ವಾಮೃತಸ್ಯ ಶ್ರಿಯಂ ಮಹೀಮ್॥

ಅಥ ದ್ವಿತೀಯಂ ಮಂತ್ರಮಾಹ—ಹೇ ಉಕ್ಥ ಹೇ ನಿಷ್ಕೇವಲ್ಯಶಸ್ತ್ರ ಮೂರ್ಧಾ ಲೋಕಾನಾಮಿತ್ಯಾದಿನಾ ಸರ್ವಮಿಂದ್ರ ಇತ್ಯಾದಿನಾ (ಚ) ತ್ವಯಾ ಪೂರ್ವಮಭಿಹಿತಾ ಏತಾಃ ಸರ್ವಾಸ್ತೇ ತವ ಭೂತಯ ಐಶ್ವರ್ಯಾಣಿ। ನ ಕೇವಲಂ ತೈಃ ಶಬ್ದೈಃ ಪ್ರತಿಪಾದ್ಯಾನಾಮರ್ಥಾನಾಮೇವ ವಿಭೂತಿತ್ವಂ ಕಿಂತ್ವೇತಾ ವಾಚಃ ಶಬ್ದಾ ಅಪಿ ತವ ವಿಭೂತಯಃ। ತಾಭಿರ್ವಿಭೂತಿಭಿಃ ಸರ್ವಾಭಿರ್ನೋ ಮದರ್ಥಮಿಹಾಸ್ಮಿನ್ಕರ್ಮಣ್ಯಮೃತಸ್ಯ ವಿನಾಶರಹಿತಸ್ಯ ಸ್ವರ್ಗಸಂಬಂಧಿನೀಂ ಮಹೀಂ ಶ್ರಿಯಂ ಪ್ರೌಢಾಂ ಸಂಪದಂ ಧುಕ್ಷ್ವ ಸಂಪಾದಯ ॥

ಎರಡನೆಯ ಮಂತ್ರವನ್ನು ವಿವರಿಸುತ್ತಾರೆ. ಹೇ ಉಕ್ಥ = ನಿಷ್ಕೇವಲ್ಯ ಶಸ್ತ್ರವೇ, ಏತಾಃ = ಹಿಂದೆ ಹೇಳಿದ ಸಕಲವೂ, ತೇ = ನಿನ್ನ, ಭೂತಯಃ = ಐಶ್ವರ್ಯಗಳೇ. ಕೇವಲ ಆಯಾಯ ಶಬ್ದ ಪ್ರತಿಪಾದ್ಯಗಳಾದ ಅರ್ಥಗಳು ಮಾತ್ರ ನಿನ್ನ ವಿಭೂತಿಯಲ್ಲದೆ, ವಾಚಃ ವಿಭೂತಯಃ = ಅವನ್ನು ಹೇಳುವ ಶಬ್ದಗಳೂ ನಿನ್ನ ವಿಭೂತಿಗಳೇ. ತಾಭಿಃ = ಆ ಸಕಲೈಶ್ವರ್ಯಗಳಿಂದ, ಮೇ = ನನಗೋಸ್ಕರ, ಇಹ = ಈ ಕರ್ಮದಲ್ಲಿ, ಅಮೃತಸ್ಯ = ವಿನಾಶರಹಿತವಾದ, ಸ್ವರ್ಗ ಸಂಬಂಧಿಯಾದ ಮಹೀಂ ಶ್ರಿಯಂ = ಅಧಿಕ ಸಂಪತ್ತನ್ನು, ಧುಕ್ಷ್ವ = ಸಂಪಾದಿಸಿಕೊಡು.

ಪ್ರಜಾಪತಿರಿದಂ ಬ್ರಹ್ಮ ವೇದಾನಾಂ ಸಸೃಜೇ ರಸಮ್ । ತೇನಾಹಂ ವಿಶ್ವ-
ಮಾಪ್ಯಾಸಂ ಸರ್ವಾನ್ಕಾಮಾನ್ದುಹಾಂ ಮಹತ್॥

ತೃತೀಯಂ ಮಂತ್ರಮಾಹ— ಪುರಾ ಪ್ರಜಾಪತಿರ್ವೇದಾನಾಂ ರಸಂ ಸಾರಭೂತಮಿದಂ ಬ್ರಹ್ಮ ಪ್ರೌಢಂ ಮಹಾವ್ರತಂ ನಿಷ್ಕೇವಲ್ಯಂ ವಾ ಸೃಷ್ಟವಾನ್। ತೇನ ಕರ್ಮಣಾ ಶಸ್ತ್ರೇಣ ವಾಽಹಂ ಹೋತಾ ವಿಶ್ವಂ ಸರ್ವಂ ಫಲಮಾಪ್ಯಾಸಮ್। ಪ್ರಾಪ್ತೋ ಭೂಯಾಸಮ್ । ತಥಾ ಸರ್ವಾನ್ಕಾಮಾನ್ ಭೋಗಾನ್ಮಹದತಿಶಯೇನ ದುಹಾಂ ಸಂಪಾದಯಾಮಿ ॥

ಮೂರನೆಯ ಮಂತ್ರವನ್ನು ವಿವರಿಸುತ್ತಾರೆ. ಪೂರ್ವ ಕಾಲದಲ್ಲಿ ಪ್ರಜಾಪತಿಯು ವೇದಸಾರಭೂತವಾದ ಈ ಮಹಾ ಮಂತ್ರವನ್ನೂ, ನಿಷ್ಕೇವಲ್ಯ ಶಸ್ತ್ರವನ್ನೂ ಸೃಷ್ಟಿಸಿರುವನು. ಆ ಕ್ರಮದಿಂದ ಅಥವಾ ಶಸ್ತ್ರದಿಂದ ಹೋತೃ ಆದ ನಾನು ಸಕಲ ಫಲವನ್ನೂ ಪಡೆಯುತ್ತೇನೆ. ಹಾಗೆಯೇ ಸಕಲ ಭೋಗಗಳನ್ನೂ ಅಧಿಕವಾಗಿ ಸಂಪಾದಿಸುತ್ತೇನೆ.

**ಭೂರ್ಭುವಃ ಸ್ವಸ್ತ್ರಯೋ ವೇದೋಽಸಿ । ಬ್ರಹ್ಮ ಪ್ರಜಾಂ ಮೇ ಧುಕ್ಷ್ವ ॥**

**ಚತುರ್ಥಂ ಮಂತ್ರಮಾಹ—ಹೇ ಭೂರಾದಯಸ್ತ್ರಯೋ ಲೋಕಾ ಯಶ್ಚ ವೇದೋ ಹೇ ಉಕ್ಥ ತತ್ಸರ್ವಂ ತ್ವಮಸಿ । ಮಹ್ಯಂ ಬ್ರಹ್ಮ ವೇದಂ ಪ್ರಜಾಂ ಚ ಪುತ್ರಾದಿಕಾಂ ಧುಕ್ಷ್ವ ಸಂಪಾದಯ॥**

ನಾಲ್ಕನೆಯ ಮಂತ್ರವನ್ನು ವಿವರಿಸುತ್ತಾರೆ. ಯಾವ ಭೂಮ್ಯಾದಿ ಮೂರು ಲೋಕಗಳಿವೆಯೋ, ಯಾವ ವೇದ ವಿದೆಯೋ ಎಲೈ ಶಸ್ತ್ರವೇ ಅವೆಲ್ಲವೂ ನೀನೇ ಆಗಿರುವಿ. ನನಗೋಸ್ಕರ ವೇದವನ್ನೂ, ಪುತ್ರಾದಿ ಸಂಪತ್ತನ್ನೂ ಒದಗಿಸಿ ಕೊಡು.

**ಆಯುಃ ಪ್ರಾಣಂ ಮೇ ಧುಕ್ಷ್ವ । ಪಶೂನ್ವಿಶಂ ಮೇ ಧುಕ್ಷ್ವ । ಶ್ರಿಯಂ ಯಶೋ ಮೇ ಧುಕ್ಷ್ವ ।ಲೋಕಂ ಬ್ರಹ್ಮವರ್ಚಸಮುಭಯಂ ಯಜ್ಞ ಸಮೃದ್ಧಿಂ ಮೇ ಧುಕ್ಷ್ವ ॥**

**ಪಂಚಮಷಷ್ಠಸಪ್ತಮಾಷ್ಟಮಾನ್ಮಂತ್ರಾನಾಹ–ವಿಶಂ ಧನಸಂಪಾದಿನೀಂ ಪ್ರಜಾಮ್ ಲೋಕಂ ಸ್ವರ್ಗಾಖ್ಯಮ್ । ಸ್ಪಷ್ಟಮನ್ಯತ್ ॥**

ಐದು, ಆರು, ಏಳು, ಎಂಟನೆಯ ಮಂತ್ರಗಳನ್ನು ವಿವರಿಸುತ್ತಾರೆ. ವಿಶಂ = ಧನಸಂಪಾದಿಸುವ ಪ್ರಜೆಗಳು. ಲೋಕ = ಸ್ವರ್ಗ. ಉಳಿದವುಗೆಳೆಲ್ಲವೂ ಸ್ಪಷ್ಟಾರ್ಥಕಗಳಾಗಿವೆ.

**ಇತಿ ವಾಚಯತ್ಯಧ್ವರ್ಯುರ್ಮಬುದ್ಧಂ ಚೇದಸ್ಯ ಭವತಿ ॥**

ಮೂರ್ಧಾ ಲೋಕಾನಾಮಿತ್ಯಾದಿಕಮುಕ್ಥದೋಹಾಖ್ಯಂ ಮಂತ್ರಸಂಘಂ ಹೋತಾ ಪ್ರಥಮಂ ಸ್ವಯಂ ಜಪಿತ್ವಾ ಪಶ್ಚಾದಧ್ವರ್ಯುಂ ವಾಚಯೇದಿತಿ ವಿಧತ್ತೇ—ಅಸ್ಯಾಧ್ವರ್ಯೋರಿದಂ ಮಂತ್ರಸ್ವರೂಪಮಬುದ್ಧಂ ಚೇದನವಗತಂ ಯದಿ ಭವತಿ ತದಾ ಹೋತಾ ಪಾಠಯೇತ್ । ಅವಗತತ್ವೇ ಸ್ವಯಮೇವ ಜಪೇದಿತ್ಯರ್ಥಃ ॥

**ಮೂರ್ಧಾ ಲೋಕಾನಾಂ** ಇತ್ಯಾದಿ ಉಕ್ಥದೋಹವೆಂಬ ಮಂತ್ರ ಸಂಘವನ್ನು ಹೋತೃವು ಮೊದಲು ತಾನು ಜಪಿಸಿ ಆಮೇಲೆ ಅಧ್ವರ್ಯುವಿನಿಂದ ಹೇಳಿಸಬೇಕೆಂದು ವಿಧಿಸುತ್ತಾರೆ. ಅಧ್ವರ್ಯುವು ಈ ಮಂತ್ರ ಸ್ವರೂಪವನ್ನು ತಿಳಿಯದಿದ್ದರೆ ಆಗ ಹೋತೃವು ಅವನಿಗೆ ಹೇಳಬೇಕು. ತಿಳಿದಿದ್ದರೆ ತಾನಾಗಿ ಜಪಿಸಬೇಕು.

ಓಮುಕ್ಥಶಾ ಯಜ ಸೋಮಸ್ಯೇತೀಜ್ಯಾಯೈ ಸಂಪ್ರೇಷಿತೋ ಯೇ ಯಜಾಮಹ ಇತ್ಯಾಗೂರ್ಯ ನಿತ್ಯಯೈವ ಯಜತಿ ವ್ಯವಾನ್ಯೇವಾನುವಷಟ್ಕರೋತಿ ॥

ತಸ್ಮಾಜ್ಜಪಾದೂರ್ಧ್ವಂ ಹೋತುಃ ಕರ್ತವ್ಯಂ ವಿಧತ್ತೇ—ಯದಾಽಧ್ವರ್ಯುರೋಮುಕ್ಥಶಾ ಇತ್ಯಾದಿಪ್ರೈಷಮಂತ್ರಂ ಪಠತಿ ತದಾನೀಂ ಹೋತಾ ಯಾಗಾರ್ಥಂ ಸಂಪ್ರೇಷಿತಃ ಸನ್ನಾದೌ ಯೇ ಯಜಾಮಹ ಇತ್ಯುಚ್ಚಾರ್ಯ ನಿತ್ಯಯೈವ ಪ್ರಕೃತಿಗತಯಾ 'ಪಿಬಾ ಸೋಮಮಿಂದ್ರ' (ಋ. ಸಂ. ಮಂ. ೭–ಸೂ.೨೨) ಋ. ೧) ಇತ್ಯನಯೈವ ಯಜೇತ್ । ತಾಮೇವ ಯಾಜ್ಯಾಂ ಪಠೇದಿತ್ಯರ್ಥಃ । ತತ ಉಚ್ಛ್ವಾಸಮಕೃತ್ವೈವಾನುವಷಟ್ಕಾರಂ ಕುರ್ಯಾತ್। ಸೋಮಸ್ಯಾಗ್ನೇ ವೀಹೀತ್ಯೇತಂ ಪ್ರಾಕೃತಮೇವಾನುವಷಟ್ಕಾರಮಂತ್ರಂ ಪಠೇತ್ ।

ಉಕ್ಥದೋಹಮಂತ್ರ ಜಪವಾದಮೇಲೆ ಹೋತೃಮಾಡಬೇಕಾದ ಕಾರ್ಯವನ್ನು ವಿವರಿಸುತ್ತಾರೆ. ಯಾವಾಗಲೂ ಅಧ್ವರ್ಯುವು **ಓಮುಕ್ಥಶಾ** ಇತ್ಯಾದಿ ಪ್ರೈಷಮಂತ್ರವನ್ನು ಪಠಿಸುತ್ತಾನೋ ಆಗ ಹೋತೃವು **ಯೇ ಯಜಮಾಹೇ** ಎಂದು ಹೇಳಿ, ಪ್ರಕೃತಿಯಿಂದ ಪ್ರಾಪ್ತವಾದ **ಪಿಬಾ ಸೋಮಮಿಂದ್ರ** (ಋ. ಸಂ. ೭-೨೨-೧) ಎಂಬ ಋಕ್ಕಿನಿಂದ ಯಾಗ ಮಾಡಬೇಕು. ಅದೇ ಯಾಜ್ಯಾಮಂತ್ರವನ್ನು ಪಠಿಸಬೇಕೆಂದು ತಾತ್ಪರ್ಯ. ಆಮೇಲೆ ಉಸಿರು ಬಿಡದೇ ಸೋಮಸ್ಯಾಗ್ನೇ ವೀಹಿ ಎಂಬ ವಷಟ್ಕಾರ ಮಂತ್ರವನ್ನು ಪಠಿಸಬೇಕು.

ಉಕ್ತಂ ವಷಟ್ಕಾರಾನುಮಂತ್ರಣಮ್ ॥

ಅನುಮಂತ್ರಣೇ ವಿಶೇಷಾಭಾವಂ ದರ್ಶಯತಿ—ಪ್ರಕೃತೌ ವಾಗೋಜ ಇತ್ಯಾದಿಕಂ ಯದನುಮಂತ್ರಣಮುಕ್ತಂ ತದೇವಾತ್ರಾಪಿ ದ್ರಷ್ಟವ್ಯಮ್ ॥

ಅನುಮಂತ್ರಣದಲ್ಲಿ ಯಾವ ವಿಶೇಷವೂ ಇಲ್ಲವೆಂದು ವಿವರಿಸುತ್ತಾರೆ. ಪ್ರಕೃತಿಯಾಗದಲ್ಲಿ ಹೇಳಿದ ವಾಗೋಜ ಇತ್ಯಾದ್ಯನುಮಂತ್ರಣವನ್ನೇ ಇಲ್ಲಿಯೂ ಹೇಳಬೇಕು.

ಆಹರತ್ಯಧ್ವರ್ಯುರುಕ್ಥಪಾತ್ರಮತಿಗ್ರಾಹ್ಯಾಂಶ್ಚಮಸಾಂಶ್ಚ ॥

ಅಧ್ವರ್ಯೋಃ ಕರ್ತವ್ಯಂ ಹೋತ್ರಾಽಪೇಕ್ಷಣೀಯಂ ದರ್ಶಯತಿ—ಭಕ್ಷಣಾರ್ಥಮುಕ್ಥಪಾತ್ರಾತಿಗ್ರಾಹ್ಯೇಷು ಚಮಸೇಷು ಚ ಯಃ ಸೋಮರಸೋಽವಶೇಷಿತಸ್ತಮಧ್ವರ್ಯುರ್ಹೋತಾರಂ ಪ್ರತ್ಯಾನಯೇತ್॥

ಅಧ್ವರ್ಯುವು ಹೋತೃವಿಗೆ ಮಾಡಬೇಕಾದ ಕಾರ್ಯವನ್ನು ವಿವರಿಸುತ್ತಾರೆ. ಭಕ್ಷಣಕ್ಕೋಸ್ಕರ ಉಕ್ಥಪಾತ್ರ ಅತಿ ಗ್ರಾಹ್ಯ ಚಮಸಗಳಲ್ಲಿ ಉಳಿದಿರುವ ಸೋಮರಸವನ್ನು ಅಧ್ವರ್ಯುವು ಹೋತೃವಿಗೆ ಕೊಡಬೇಕು.

ಭಕ್ಷಂ ಪ್ರತಿಖ್ಯಾಯ ಹೋತಾ ಪ್ರಾಙ್ಪ್ರೇಂಖಾದವರೋಹತಿ ॥

ಹೋತುಃ ಕರ್ತವ್ಯಂ ವಿಧತ್ತೇ—ಅಧ್ವರ್ಯುಣಾ ಸಮಾಹೃತಂ ಭಕ್ಷಂ ಜ್ಞಾತ್ವಾ ಪ್ರಾಙ್ಮುಖೋ ಭೂತ್ವಾ (ಹೋತಾ) ಪ್ರೇಂಖಾದವರೋಹೇತ್ ॥

ಹೋತೃ ಮಾಡಬೇಕಾದ ಕಾರ್ಯವನ್ನು ವಿವರಿಸುತ್ತಾನೆ. ಅಧ್ವರ್ಯುವು ತಂದಿರುವ ಭಕ್ಷವನ್ನು ತಿಳಿದು ಹೋತೃವು ಪೂರ್ವಾಭಿಮುಖವಾಗಿ ಪ್ರೇಂಖದಿಂದ ಇಳಿಯಬೇಕು.

**ಅಥೈತಂ ಪ್ರೇಂಖಂ ಪ್ರತ್ಯಂಚಮನುವಬಧ್ನಂತಿ ಯಥಾ ಶಂಸಿತಾರಂ ಭಕ್ಷಯಿಷ್ಯಂತಂ ನೋಪಹನಿಷ್ಯಸೀತಿ ॥**

ಅಧ್ವರ್ಯೂಣಾಂ ಕೃತ್ಯಂ ವಿಧತ್ತೇ—ಶಂಸಿತಾ ಹೋತಾ ಪ್ರೇಂಖಸ್ಯ ಸ್ಥಾನೇ ಸ್ವಯಮುಪವಿಶ್ಯ ಸೋಮಂ ಭಕ್ಷಯಿಷ್ಯತಿ ತದಾನೀಂ ತಸ್ಯ ಹೋತುಃ ಪ್ರೇಂಖೇನೋ(ಣೋ)ಪಪಾತೋ ಮಾ ಭೂದಿತ್ಯಭಿಪ್ರೇತ್ಯ ತಂ ಪ್ರೇಂಖಂ ಪಶ್ಚಾನ್ನೀತ್ವೋಪರಿ ಬಧ್ನೀಯುಃ ॥

ಅಧ್ವರ್ಯು ಮಾಡಬೇಕಾದ ಕರ್ತವ್ಯವನ್ನು ವಿವರಿಸುತ್ತಾರೆ. ಹೋತೃವು ಪ್ರೇಂಖಸ್ಥಾನದಲ್ಲಿ ಕುಳಿತು ಸೋಮ ಪಾನಮಾಡುವಾಗ ಪ್ರೇಂಖದಿಂದ ಬೀಳಬಾರದೆಂದು ಅದನ್ನು ಹಿಂದೆ ಎಳೆದು ಕಟ್ಟಬೇಕು.

**ಪ್ರೇಂಖಸ್ಯ ಹ್ಯಾಯತನಮಾಸೀನೋ ಹೋತಾ ಭಕ್ಷಯತಿ ॥**

ಭಕ್ಷಣಸ್ಥಾನಂ ವಿಧತ್ತೇ—

ಸೋಮಭಕ್ಷಣಸ್ಥಾನವನ್ನು ವಿಧಿಸುತ್ತಾರೆ. ಪ್ರೇಂಖ ಸ್ಥಾನದಲ್ಲಿದ್ದು ಹೋತೃವು ಸೋಮರಸ ಪಾನ ಮಾಡಬೇಕು.

**ಅಥೈತದುಕ್ಥಪಾತ್ರಂ ಹೋತ್ರೋಪಸೃಷ್ಟೇನ ಜಪೇನ ಭಕ್ಷಯತಿ । ವಾಗ್ದೇವೀ ಸೋಮಸ್ಯ ತೃಪ್ಯತು । ಸೋಮೋ ಮೇ ರಾಜಾಽಽಯುಃಪ್ರಾಣಾಯ ವರ್ಷತು । ಸ ಮೇ ಪ್ರಾಣಃ ಸರ್ವಮಾಯುರ್ದುಹಾಂ ಮಹತ್ ॥**

ಸಮಂತ್ರಕಂ ಭಕ್ಷಣಂ ವಿಧತ್ತೇ—ಉಪಸೃಷ್ಟೇನೇತರಾನುಜ್ಞಾಪೂರ್ವಕೇಣ ವಾಗ್ದೇವೀತ್ಯಾದಿಮಂತ್ರಜಪೇನ ಯುಕ್ತ ಉಕ್ಥಪಾತ್ರಗತಂ ಸೋಮಂ ಭಕ್ಷಯೇತ್ । ಸೋಮಸ್ಯ ರಸೇನ ವಾಗ್ದೇವತಾ ತೃಪ್ತಾ ಭವತು । ಸ ಚ ಸೋಮೋಽಸ್ಮಾಕಂ ರಾಜಾ ಸನ್ನಾಯುರ್ಹೇತುಭೂತಪ್ರಾಣಾರ್ಥಂ ವೃಷ್ಟಿಂ ಜನಯತು । ಸ ಚ ಪ್ರಾಣೋ ಮಮ ಸರ್ವಮಾಯುರ್ಮಹತ್ಸಂಪೂರ್ಣಂ ಯಥಾ ಭವತಿ ತಥಾ ದುಹಾಂ ಸಂಪಾದಯತು ॥

ಮಂತ್ರಪೂರ್ವಕವಾಗಿ ಭಕ್ಷಣವನ್ನು ವಿಧಿಸುತ್ತಾರೆ. ಇತರಾನುಜ್ಞಾಪೂರ್ವಕವಾಗಿ ವಾಗ್ದೇವೀತ್ಯಾದಿ ಮಂತ್ರ ಜಪದಿಂದ ಉಕ್ಥಪಾತ್ರದಲ್ಲಿರುವ ಸೋಮರಸವನ್ನು ಪಾನ ಮಾಡಬೇಕು. ಸೋಮರಸದಿಂದ ವಾಗ್ದೇವತೆಯು ತೃಪ್ತಿ ಹೊಂದಲಿ. ನಮ್ಮ ರಾಜನಾದ ಸೋಮನು ಆಯುಸ್ಸಿಗೆ ಕಾರಣವಾದ ಪ್ರಾಣಕ್ಕೋಸ್ಕರ ಮಳೆಯನ್ನುಂಟುಮಾಡಲಿ. ಆ ಪ್ರಾಣವು ನನಗೆ ಸಂಪೂರ್ಣ ಆಯುಸ್ಸನ್ನು ಕೊಡಲಿ.

ಉತ್ತಮೂದಾಭಿಪ್ಲವಿಕಾತ್ತೃತೀಯಸವನಮುಸ್ಯದ್ವೈಶ್ವದೇವಾನ್ನಿವಿದ್ಧಾ-
ನಾದಸ್ಯ ವಾಮಸ್ಯ ಪಲಿತಸ್ಯ ಹೋತುರಿತಿ ಸಲಿಲಸ್ಯ ದೈರ್ಘತಮಸ
ಏಕಚತ್ವಾರಿಂಶತಮಾನೋಭದ್ರೀಯಂ ಚ ತಸ್ಯ ಸ್ಥಾನ ಏಕಾಹಿಕೌ
ವೈಶ್ಯದೇವಸ್ಯ ಪ್ರತಿಪದನುಚರೌ ॥

ಅಥ ತೃತೀಯಸವನೇ ವಿಶೇಷಂ ವಿಧತ್ತೆ—ಅಭಿಪ್ಲವನಾಮಕೇ ಷಳ (ಡ) ಹೇ ಯದು-ತ್ತಮಂ ಷಷ್ಠಮಹಸ್ತಸ್ಮಾದಹ್ನೋಽಸ್ಮಿನ್ಮಹಾವ್ರತನಾಮಕೇಽಹ್ನಿ ತೃತೀಯಸವನಮತಿದೇಷ್ಟವ್ಯಮ್ । ವಿಶ್ವೇಷಾಂ ದೇವಾನಾಂ ಸ್ತುತಿವಾಚಕಾನಿ ನಿವಿತ್ಪದಾನಿ ಯಸ್ಮಿನ್ನಾನೋ ಭದ್ರೀಯಸೂಕ್ತೇ ಪಠಿಷ್ಯಂತೇ ತಸ್ಮಾತ್ಸೂಕ್ತಂ ವೈಶ್ವದೇವಂ ನಿವಿದ್ಧಾನಂ ತಸ್ಮಾದಸ್ಯತ್ಪೂರ್ವಭಾವಿ ಸರ್ವಮಾಭಿಪ್ಲವಿಕವದ್ಯುಜ್ಯ (ವತ್ಪ್ರಯುಜ್ಯ) ತಸ್ಯ ನಿವಿದ್ಧಾನಸೂಕ್ತಸ್ಯ ಸ್ಥಾನೇ "ಅಸ್ಯ ವಾಮಸ್ಯ" ಇತ್ಯೇತದಾನೋಭದ್ರೀಯಂ ಚೇತ್ಯೇತದುಭಯಂ ಪಠನೀಯಂ । "ಅಸ್ಯ ವಾಮಸ್ಯ' ಇತಿ ಸೂಕ್ತಂ ದ್ವಿಪಂಚಾದಶದೃಚಂ ತಸ್ಮಿ-ನ್ನಂತಿಮಾ ಏಕಾದಶ ಪರಿತ್ಯಜ್ಯಾವಶಿಷ್ಟಮೇಕಚತ್ವಾರಿಂಶತ್ಸಂಖ್ಯಾಕಮೃಕ್ಸಮೂಹಂ ಪಠೇತ್ । ಸ ಚ ಸಮೂಹಃ ಸಲಿಲಸ್ಯ ಸಂಬಂಧೀ "ಗೌರೀರ್ಮಿಮಾಯ ಸಲಿಲಾನಿ ತಕ್ಷತೀ" (ಋ. ಸಂ. ಮಂ. ೧-ಸೂ. ೧೬೪ ಋ. ೧) ಇತಿ ತತ್ರತ್ಯಾಯಾಮೃಚ್ಯಭಿದಾನಾತ್ । ದೀರ್ಘತಮಾ ನಾಮ ಕಶ್ಚಿದೃಷಿಸ್ತೇನ ದೃಷ್ಟಃ "ವೇದಿಷದೇ ಪ್ರಿಯಧಾಮಾಯ" (ಋ. ಸಂ. ಮಂ. ೧ ಸೂ. ೩೦ ಋ. ೧) ಇತ್ಯಾದಿಕೋ ಬಹೂನಾಂ ಸೂಕ್ತಾನಾಂ ಸಂಘೋ ದೀರ್ಘ (ದೈರ್ಘ) ತಮಸಃ । ತಸ್ಮಿನ್ಸಂಘೇ "ಅಸ್ಯ ವಾಮಸ್ಯ" ಇತ್ಯೇತದಪಿ ಸೂಕ್ತಮವಸ್ಥಿತಮ್ । ತಸ್ಯ ಸೂಕ್ತಸ್ಯಾತ್ರ ಸಲಿಲಸಂಬಂಧೋ ದೀರ್ಘತಮಃಸಂಬಂಧಾ-ನುಸ್ಮರಣಾರ್ಥಮಭಿಹಿತಃ । ಚೋದಕಪ್ರಾಪ್ತಸ್ಯ ವೈಶ್ವದೇವನಿವಿದ್ಧಾನಸ್ಯ ಸ್ಥಾನೇ "ಅಸ್ಯ ವಾಮಸ್ಯ" "ಆ ನೋ ಭದ್ರಾಃ" ಇತಿ ದ್ವಯಂ ಪಠೇತ್ । ಇತ್ಯೇತಾವಾನತ್ರ ವಿಶೇಷಃ । ಏಕಾಹೇ ವಿಶ್ವಜಿನ್ನಾ-ಮಕೇ ಭವಾವೈಕಾಹಿಕೌ ಯೌ ಪ್ರತಿಪದನುಚರೌ ವೈಶ್ವದೇವಸ್ಯ ವಿಹಿತೌ ತಾವೇವಾತ್ರ ಮಹಾ-ವ್ರತೇಽಪಿ ವೈಶ್ವದೇವಶಸ್ತ್ರಸ್ಯ ಪ್ರತಿಪದನುಚರೌ ಕರ್ತವ್ಯೌ । ಪ್ರಾರಂಭೇ ಪಠನೀಯಸ್ತೃಚಃ ಪ್ರತಿಪತ್ ತದನಂತರಭಾವೀ ತೃಚೋಽನುಚರಃ । "ತತ್ಸವಿತುರ್ವೃಣೀಮಹೇ" (ಋ. ಸಂ. ಮಂ. ೩ ಸೂ. ೬೨ ಋ. ೧) ಇತ್ಯೇಷ ತೃಚಃ ಪ್ರತಿಪತ್ । "ಅದ್ಯಾ ನೋ ದೇವ ಸವಿತಃ" (ಋ. ಸಂ. ಮಂ. ೩ ಸೂ-೬೨ ಋ. ೪) ಇತ್ಯಯಂ ತೃಚೋಽನುಚರ ಇತ್ಯರ್ಥಃ ॥

ಮೂರನೆಯ ಸವನದಲ್ಲಿ ವಿಶೇಷವನ್ನು ವಿವರಿಸುತ್ತಾರೆ. ಅಭಿಪ್ಲವವೆಂಬ ಷಡಹದಲ್ಲಿ ಕೊನೆಯ ಆರನೆಯ ದಿನದ ತೃತೀಯ ಸವನವು ಈ ಮಹಾವ್ರತದ ಹಗಲಿನಲ್ಲಿ ಅತಿದಿಷ್ಟವಾಗುತ್ತದೆ. ಆ ನೋಭದ್ರೀಯ ಸೂಕ್ತದಲ್ಲಿ ವಿಶ್ವೇದೇವತೆಗಳ ಸ್ತುತಿವಾಚಕಗಳಾದ ನಿವಿತ್ಪದಗಳಿರುವುದರಿಂದ ಅದಕ್ಕೆ ವೈಶ್ವದೇವ ನಿವಿದ್ಧಾನವೆಂದು ಹೆಸರು. ಅದರ ಹಿಂದಿನ ಕಾರ್ಯವೆಲ್ಲವೂ ಆಭಿಪ್ಲವಿಕದಂತೆಯೇ ತಿಳಿಯಬೇಕು. ನಿವಿದ್ಧಾನ ಸೂಕ್ತದ ಸ್ಥಾನದಲ್ಲಿ **ಅಸ್ಯ ವಾಮಸ್ಯ** (ಋ. ಸಂ. ೧-೧೬೪-೧) ಎಂಬ ಸೂಕ್ತವನ್ನೂ ಆನೋಭದ್ರೀಯ ಸೂಕ್ತವನ್ನೂ ಪಠಿಸಬೇಕು. ಅಸ್ಯ ವಾಮಸ್ಯ ಸೂಕ್ತವು ಐವತ್ತೆರಡು ಋಕ್ಕುಗಳುಳ್ಳವು. ಆದರಲ್ಲಿ ಕೊನೆಯ ಹನ್ನೊಂದು ಋಕ್ಕುಗಳನ್ನು ಬಿಟ್ಟ ಉಳಿದ ನಲವತ್ತೊಂದು ಋಕ್ಕುಗಳನ್ನು ಪಠಿಸಬೇಕು. **ಗೌರೀರ್ಮಿಮಾಯ** ಸಲಿಲಾನಿ (ಋ. ಸಂ. ೧-೧೬೪-೧) ಎಂಬಲ್ಲಿ ಹೇಳಿರುವುದರಿಂದ ಅದು ಸಲಿಲಸಂಬಂಧಿಯಾಗಿರುತ್ತದೆ.

ದೀರ್ಘತಮಸ್ಸೆಂಬ ಋಷಿಯಿಂದ ದೃಷ್ಟವಾದ **ವೇದಿಷದೇ ಪ್ರಿಯಧಾಮಾಯ** (ಋ. ಸಂ. ೧–೧೪೦–೧) ಇತ್ಯಾದಿ ಬಹು ಸೂಕ್ತಸಂಘಕ್ಕೆ ದೀ (ದೈ) ರ್ಘತಮಸವೆಂದು ಹೆಸರು. ಆ ಸಂಘದಲ್ಲಿ ಅಸ್ಯ ವಾಮಸ್ಯ ಎಂಬ ಸೂಕ್ತವೂ ಸೇರಿದೆ. ಅದಕ್ಕೆ ಹಿಂದೆ ಸಲಿಲಸಂಬಂಧ ಹೇಳಿರುವುದು ದೀರ್ಘತಮಃ ಸಂಬಂಧದ ಸ್ಮರಣೆಗೋಸ್ಕರವೇ. ಹೀಗೆ ಚೋದಕಪ್ರಾಪ್ತವಾದ ವೈಶ್ವ ದೇವನಿವಿದ್ಧಾನದ ಸ್ಥಾನದಲ್ಲಿ ಎರಡು ಸೂಕ್ತಗಳನ್ನು ಪಠಿಸಬೇಕು. ಅಲ್ಲಿ ಕೆಲವು ವಿಶೇಷನಿಯಮವಿರುತ್ತದೆ. ವಿಶ್ವಜಿನ್ನಾಮಕ ಏಕಾಹದಲ್ಲಿರುವ ಪ್ರತಿಪದನುಚರಗಳು ಮಹಾವ್ರತದಲ್ಲಿಯೂ ವೈಶ್ವದೇವಶಸ್ತ್ರದ ಪ್ರತಿಪದನುಚರಗಳಾಗಿರುತ್ತವೆ. ಆರಂಭದಲ್ಲಿ ಪಠಿಸಬೇಕಾದ ತೃಚಕ್ಕೆ ಪ್ರತಿಪದವೆಂದೂ, ಅದಾದಮೇಲೆ ಪಠಿಸುವ ತೃಚಕ್ಕೆ ಅನುಚರನೆಂದೂ ಹೆಸರು. ಪ್ರಕೃತ **ತತ್ಸವಿತುರ್ವೃಣೀಮಹೇ** (ಋ. ಸಂ. ೫–೮೨–೧) ಎಂಬ ತೃಚವು ಪ್ರತಿಪದವಾಗಿರುತ್ತದೆ. **ಅದ್ಯಾನೋ ದೇವ ಸವಿತಃ** (ಋ. ಸಂ. ೫–೮೨–೪) ಎಂಬ ತೃಚವು ಅನುಚರವಾಗಿರುತ್ತದೆ.

**ಚ್ಯವೇತ ಚೇದ್ಯಜ್ಞಾಯಜ್ಞೀಯಮಗ್ನೇ ತವ ಶ್ರವೋ ವಯ ಇತಿ ಷಟ್-**
**ಸ್ತೋತ್ರಿಯಾನುರೂಪೌ ಯದೀಲಾಂದಂ ಭೂಯಸೀಷು ಚೇತ್-**
**ಸ್ತುವೀರನ್ನಾಽಗಿಂ ನ ಸ್ವವೃಕ್ತಿಭಿರಿತಿ ತಾವತೀರನುರೂಪಃ ||**

ಅಥಾಽಽಗ್ನಿಮಾರುತಶಸ್ತ್ರೇ ವಿಶೇಷಂ ವಿಧತ್ತೇ— ಯಜ್ಞಾಯಜ್ಞೀಯಮಿತ್ಯೇಕಂ ಸಾಮ। ಇಲಾಂದಮಿತ್ಯಪರಂ ಸಾಮ। ತೇ ಉಭೇ ಸಾಮನೀ ಮಹಾವ್ರತೇ ಛಂದೋಗೈರ್ವಿಕಲ್ಪೇನ ಪ್ರಯುಜ್ಯೇತೇ। ತತ್ರ ಯದಾ ಯಜ್ಞಾಯಜ್ಞೀಯಂ ಪ್ರಯುಕ್ತಂ ತದಾನೀಂ ಬಹ್ವೃಚೈರಾ-ಗ್ನಿಮಾರುತಶಸ್ತ್ರಕ್ಲೃಪ್ತಿರೇವಂ ಕ್ರಿಯತೇ। "ವೈಶ್ವಾನರಾಯ ಧಿಷಣಾಮ್" (ಋ-ಸಂ-ಮಂ-೩-ಸೂ-೨-ಋ-೧) ಇತ್ಯೇಕಂ ಸೂಕ್ತಮ್। "ಶಂನಃಕರತಿ" (ಋ-ಸಂ-ಮಂ-೧-ಸೂ-೪೨-ಋ-೬) ಇತ್ಯೃಗೇಕಾ। "ಪ್ರಯುಜ್ಯವಃ" (ಋ-ಸಂ-ಮಂ-೫-ಸೂ ೫೫-ಋ-೧) ಇತ್ಯೇಕಂ। 'ಯಜ್ಞಾ-ಯಜ್ಞಾ ವಃ' (ಋ-ಸಂ-ಮಂ-೬-೪೮-ಋ-೧) ಇತ್ಯೇಕಃ ಪ್ರಗಾಥಃ। 'ದೇವೋವಃ' (ಋ-ಸಂ ಮಂ-೭-ಸೂ-೧೬-ಋ-೧೧) ಇತ್ಯಪರಃ "ಜಾತವೇದಸೇ" (ಋ-ಸಂ-ಮಂ-೧-ಸೂ-೯೯-ಋ-೧) ಇತ್ಯೃಗೇಕಾ। 'ಆಪೋ ಹಿ ಷ್ಠಾ' (ಋ-ಸಂ-ಮಂ-೧೦-ಸೂ-೯-ಋ-೧) ಇತ್ಯಾದಿಃ ಪ್ರಾಕೃತಃ ಶಸ್ತ್ರಶೇಷ ಇತಿ। ಯದಾ ತು ಸಾಮಗೈರ್ಯಜ್ಞಾಯಜ್ಞೀಯಂ ಸಾಮ ಪರಿತ್ಯಜ್ಯ ತಸ್ಯ ಸ್ಥಾನ ಇಲಾಂದನಾಮಕಂ ಸಾಮ ಗೀಯತೇ ತಸ್ಮಿನ್ಪಕ್ಷೇ ಪೂರ್ವೋಕ್ತಂ ಪ್ರಗಾಥದ್ವಯಂ ಪರಿತ್ಯಜ್ಯ ತಸ್ಯ ಸ್ಥಾನೇ 'ಅಗ್ನೇ ತವ' ಇತ್ಯಾದಯಃ ಷಡೃಚಃ ಪಠನೀಯಾಃ। ತತ್ರಾಽಽದ್ಯಸ್ತೃಚಃ 'ಇರ-ಜ್ಯನ್' (ಋ-ಸಂ-ಮಂ-೧೦-ಸೂ-೧೪೦-ಋ-೪) ಇತ್ಯಾದಿಕೋ ದ್ವಿದೀಯಸ್ತೃಚೋಽನುರೂಪಃ। ತತ್ರೇಲಾಂದಂ ಸಾಮ ಪ್ರಥಮತೃಚೇ ಗೀಯತ ಇತ್ಯೇಕಃ ಪಕ್ಷಃ। ತೃಚದ್ವಯೇಽಪಿ ಗೀಯತ ಇತ್ಯಪರಃ ಪಕ್ಷಃ। ಏಕತೃಚಗಾನಪಕ್ಷೇ ಸ್ತೋತ್ರಿಯಾನುರೂಪಾವುಕ್ತೌ। ಭೂಯಸೀಷು ತೃಚ-ದ್ವಯಗತಾಸು ಸರ್ವಾಸ್ವಪ್ಯೃಕ್ಷು ಯದಿ ಸಾಮಗಾಃ ಸ್ತುವೀರಂಸ್ತದಾನೀಂ ಸ್ತೋತ್ರಿಯಾಣಾ-ಮೃಚಾಂ ಷಟ್ಸಂಖ್ಯೋಪೇತತ್ವಾದನುರೂಪೇಽಪಿ 'ಅಗ್ನಿಂ ನ ಸ್ವವೃಕ್ತಿಭಿಃ' (ಋ-ಸಂ-ಮಂ-೧೦-ಸೂ-೨೧-ಋ-೧) ಇತ್ಯಾದ್ಯಾಸ್ತಾವತೀಃ ಷಟ್ಸಂಖ್ಯಾಕಾ ಋಚಃ ಶಂಸೇತ್। ಸ ಏತಾ-ವಾನಗ್ನಿಮಾರುತಶಸ್ತ್ರೇ ವಿಶೇಷಃ ||

ಅಗ್ನಿಮಾರುತ ಶಸ್ತ್ರದಲ್ಲಿ ವಿಶೇಷವನ್ನು ವಿವರಿಸುತ್ತಾರೆ. **ಯಜ್ಞಾಯಜ್ಞೀಯಂ** ಎಂಬುದೊಂದು ಸಾಮ. **ಇಲಾಂದಂ** ಎಂಬುದು ಇನ್ನೊಂದು ಸಾಮ. ಮಹಾವ್ರತದಲ್ಲಿ ಛಂದೋಗರು ಇವೆರಡು ಸಾಮಗಳನ್ನು ವಿಕಲ್ಪದಿಂದ ಸ್ತುತಿಸುತ್ತಾರೆ. ಯಜ್ಞಾಯಜ್ಞೀಯವನ್ನು ಸ್ತುತಿಸುವುದಾದರೆ ಆಗ ಅಗ್ನಿಮಾರುತ ಶಸ್ತ್ರಕ್ಲಪ್ತಿಯನ್ನು ಹೀಗೆ ಮಾಡುತ್ತಾರೆ. **ವೈಶ್ವಾನರಾಯ ಧಿಷಣಾಂ** (ಋ. ಸಂ. ೩-೨-೧) ಎಂದು ಒಂದು ಸೂಕ್ತ. **ಶಂ ನಃ ಕರತಿ** (ಋ. ಸಂ. ೧-೪೩-೬) ಎಂದು ಒಂದು ಋಕ್ಕು. **ಪ್ರಯಜ್ಯವಃ** (ಋ. ಸಂ. ೫-೫೫-೧) ಎಂಬ ಒಂದು ಸೂಕ್ತ. **ಯಜ್ಞಾಯಜ್ಞಾವಃ** (ಋ. ಸಂ. ೬-೪೮-೧) ಎಂಬ ಒಂದು ಪಗಾಥ. **ದೇವೋವಃ** (ಋ. ಸಂ. ೭-೧೭-೧೧) ಎಂದು ಒಂದು ಪ್ರಗಾಥ, **ಜಾತವೇದಸೇ** (ಋ. ಸಂ. ೧-೯೯-೧) ಎಂಬ ಒಂದು ಋಕ್ಕೂ, **ಆ ಪೋ ಹಿ ಷ್ಠ** (ಋ. ಸಂ. ೧೦-೯-೧) ಇತ್ಯಾದಿ ಪ್ರಾಕೃತ ಶಸ್ತ್ರಶೇಷ. ಇವುಗಳಿಂದ ಅಗ್ನಿಮಾರುತ ಶಸ್ತ್ರ ಕ್ಲಪ್ತಿಯಾಗುತ್ತದೆ. ಯಜ್ಞಾಯಜ್ಞೀಯ ಸ್ಥಾನದಲ್ಲಿ ಇಲಾಂದ ಸಾಮವನ್ನು ಗಾನಮಾಡುವುದಾದರೆ ಆಗ ಪೂರ್ವೋಕ್ತ ಎರಡು ಪ್ರಗಾಥವನ್ನು ಬಿಟ್ಟು ಅವುಗಳ ಸ್ಥಾನದಲ್ಲಿ **ಅಗ್ನೇತವ** (ಋ. ಸಂ. ೧೦-೧೪೦-೧) ಇತ್ಯಾದಿ ಆರು ಋಕ್ಕುಗಳನ್ನು ಪಠಿಸಬೇಕು. ಅವುಗಳಲ್ಲಿ ಮೊದಲಿನ ತೃಚವು ಸ್ತೋತ್ರಿಯವಾಗಿರುತ್ತದೆ. **ಇರಜ್ಯನ್** (ಋ. ಸಂ. ೧೦-೧೪೦-೪) ಇತ್ಯಾದಿ ತೃಚವು ಅನುರೂಪವಾಗಿರುತ್ತದೆ. ಅವುಗಳಲ್ಲಿ ಇಲಾಂದ ಸಾಮವನ್ನು ಮೊದಲನೆಯ ತೃಚದಲ್ಲಿ ಗಾನಮಾಡುವುದು ಒಂದು ಪಕ್ಷ. ಎರಡು ತೃಚದಲ್ಲಿಯೂ ಗಾನಮಾಡುವುದು ಇನ್ನೊಂದು ಪಕ್ಷ. ಏಕತೃಚಗಾನ ಪಕ್ಷದಲ್ಲಿ ಹಿಂದೆ ಎರಡು ಪ್ರಗಾಥಗಳನ್ನು ಹೇಳಿದೆ. ತೃಚದ್ವಯ ಗಾನಪಕ್ಷದಲ್ಲಿ ಸ್ತೋತ್ರಿಯ ಋಕ್ಕುಗಳು ಆರಾದುದರಿಂದ ಅನುರೂಪದಲ್ಲಿಯೂ, **ಅಗ್ನಿಂ ನ ಸ್ವವೃಕ್ತಿಭಿಃ** (ಋ. ಸಂ. ೧೦-೨೧-೧) ಇತ್ಯಾದಿ ಆರು ಋಕ್ಕುಗಳನ್ನು ಪಠಿಸಬೇಕು. ಹೀಗೆ ಅಗ್ನಿಮಾರುತ ಶಸ್ತ್ರದಲ್ಲಿ ವಿಶೇಷ ತಿಳಿಯಬೇಕು.

ಸಂಪನ್ನಂ ಮಹಾವ್ರತಂ ಸಂತಿಷ್ಠತ ಇದಮಹರಗ್ನಿಷ್ಟೋಮೋ ಯಥಾ-
ಕಾಲಮವಭೃಥಂ ಪ್ರೇಂಖಂ ಹರೇಯುಃ ಸಂದಹೇಯುರ್ಬೃಸೀಃ ॥

**ಆರಣ್ಯಕಾದೌ ಯ ಉಪಕ್ರಾಂತೋ ಮಹಾವ್ರತಪ್ರಯೋಗಸ್ತಮಿಮಮುಪಸಂಹರತಿ— ಮಹಾವ್ರತವಿಷಯಂ ಯದ್ಧೋತ್ರಂ ತತ್ಸಂಪೂರ್ಣಮ್ । ಇದಂ ಮಹಾವ್ರತಾಖ್ಯಮಹಶ್ಚ ಸಮಾಪ್ತಮ್ । ತಚ್ಚಾಹರಗ್ನಿಷ್ಟೋಮಸಂಸ್ಥಂ ತಸ್ಯಾವಭೃಥಕಾಲೇ ಪ್ರೇಂಖಂ ಹೋಮಪಾತ್ರೈಃ ಸಹ ಜಲಸಮೀಪೇ ಹರೇಯುಃ । ಯಾಶ್ಚ ಬೃಸ್ಯ ಇತರೇಷಾಮಾಸನಾರ್ಥಂ ನಿರ್ಮಿತಾಸ್ತಾಃ ಸರ್ವಾ ಬೃಸೀರ್ವೇದಿದಹನಕಾಲೇ ದಹೇಯುಃ ।**

ಆರಣ್ಯಕದ ಆದಿಯಲ್ಲಿ ಉಪಕ್ರಮಿಸಿದ ಮಹಾವ್ರತಪ್ರಯೋಗದ ಉಪಸಂಹಾರವನ್ನು ತೋರಿಸುತ್ತಾರೆ. ಮಹಾವ್ರತವಿಷಯಕವಾದ ಹೋತ್ರಪ್ರಯೋಗವು ಸಮಾಪ್ತವಾಗಿದೆ. ಈ ಮಹಾವ್ರತದ ದಿನವೂ ಸಮಾಪ್ತವಾಗಿದೆ. ಈ ಅಹಸ್ಸು ಅಗ್ನಿಷ್ಟೋಮಸಂಬಂಧಿಯಾದುದರಿಂದ ಅವಭೃಥಕಾಲದಲ್ಲಿ ಪ್ರೇಂಖವನ್ನು ಹೋಮಪಾತ್ರಗಳೊಡನೆ ಜಲಸಮೀಪಕ್ಕೆ ಒಯ್ಯಬೇಕು. ಉಳಿದಿರುವ ಬೃಸೀ ಅಂದರೆ ಋತ್ವಿಜರ ಆಸನಗಳನ್ನು ವೇದಿದಹನಕಾಲದಲ್ಲಿ ಸುಡಬೇಕು.

**ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ**
**ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪಂಚಮಾರಣ್ಯಕೇ**
**ತೃತೀಯಾಧ್ಯಾಯೇ ದ್ವಿತೀಯಃ ಖಂಡಃ**

**ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ**
**ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪಂಚಮಾರಣ್ಯಕದ**
**ಮೂರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವು ॥**

# ಅಥ ಪಂಚಮಾರಣ್ಯಕೇ ತೃತೀಯಾಧ್ಯಾಯೇ ತೃತೀಯಃ ಖಂಡಃ

## ಐದನೆಯ ಆರಣ್ಯಕದ ಮೂರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

---

ನಾದೀಕ್ಷಿತೋ ಮಹಾವ್ರತಂ ಶಂಸೇನ್ನಾನಗ್ನಾ ನ ಪರಸ್ಮೈ ನಾಸಂವತ್ಸರ ಇತ್ಯೇಕೇ ಕಾಮಂ ಪಿತ್ರೇ ವಾಽಽಚಾರ್ಯಾಯ ವಾ ಶಂಸೇದಾತ್ಮನೋ ಹೈವಾಸ್ಯ ತಚ್ಛಸ್ತಂ ಭವತಿ ||

ಅಥ ಮಹಾವ್ರತಶಂಸನೇ ನಿಯಮವಿಶೇಷಾನ್ದರ್ಶಯತಿ—ಏಕಾಹೀನಸತ್ರರೂಪೈಸ್ತ್ರಿವಿಧೋ (ಘಂ) ಮಹಾವ್ರತ ಇ (ತಮಿ) ತ್ಯುಕ್ತಮ್ | ತತ್ರ ಸತ್ರರೂಪೇ ಮಹಾವ್ರತೇ ಹೋತುರಪಿ ಯಜಮಾನತ್ವಾತ್ಸಿದ್ಧೈವ ದೀಕ್ಷಾ | ಏಕಾಹಾಹೀನಯೋಸ್ತು ಹೋತಾ ನ ಯಜಮಾನಃ, ಕಿಂ ತ್ವನ್ಯ ಏವ | ಸ ಏವ ದ್ವಿವಿಧಃ | ಸ್ವಾರ್ಥೇಽಗ್ನಿಷ್ಟೋಮಾದಾ ದೀಕ್ಷಿತ ಏಕಃ | ಸೋಮಯಾಗರಾಹಿತ್ಯಾ-ದದೀಕ್ಷಿತೋಽಪರಃ | ತಯೋರ್ಮಧ್ಯೇ ದೀಕ್ಷಿತ ಏಕಃ ಪರಕೀಯೇ ಮಹಾವ್ರತ ಕರ್ಮಣಿ ಶಂಸನಂ ಕುರ್ಯಾತ್ | ನ ತ್ವದೀಕ್ಷಿತಃ | ತಚ್ಚ ಪರಕೀಯಂ ಮಹಾವ್ರತಂ ದ್ವಿವಿಧಂ ಚಿತ್ಯಾಗ್ನಿಸಹಿತಂ ತದ್ರ-ಹಿತಂ ವಾ (ಚ) | ತಯೋರ್ಮಧ್ಯೇ ಚಿತ್ಯಾಗ್ನಿಸಹಿತೇ ಮಹಾವ್ರತ ಪ್ರಯೋಗೇ ಶಂಸನಂ ಮುಖ್ಯಂ ನ ತ್ವನಗ್ನಾ ಚಿತ್ಯಾಗ್ನಿರಹಿತೇ | ಪರಸ್ಮೈ ಪಿತ್ರಾಚಾರ್ಯವ್ಯತಿರಿಕ್ತಯಜಮಾನಾರ್ಥಂ ಶಂಸನಂ ನ ಕುರ್ಯಾತ್ | ಅಸಂವತ್ಸರೇ ಸಂವತ್ಸರಸತ್ರವ್ಯತಿರಿಕ್ತೇ ಕ್ರತೌ ಕ್ವಾಪಿ ನ ಶಂಸೇದಿತ್ಯೇಕೇಷಾಂ ಪಕ್ಷಃ ಪಿತ್ರಾಚಾರ್ಯಯೋಃ ಸ್ವಸ್ಮಾದನ್ಯತ್ವೇಽಪಿ ದೇಹಪ್ರದಾನೇನ ವಿದ್ಯಾಪ್ರದಾನೇನ ಚೋಪಕಾರಿತ್ವಾತ್ತ-ಯೋರರ್ಥೇ ಯಚ್ಛಂಸನಂ ತತ್ಸ್ವಾರ್ಥಮೇವ ಭವತಿ | ಅತೋ ನ ತತ್ರ ನಿಷೇಧಃ ||

ಮಹಾವ್ರತಶಂಸನದಲ್ಲಿ ಕೆಲವು ನಿಯಮವಿಶೇಷಗಳನ್ನು ತೋರಿಸುತ್ತಾರೆ. ಏಕಾಹ, ಅಹೀನ, ಸತ್ರವೆಂದು ಮಹ ವ್ರತವು ಮೂರು ವಿಧವೆಂದು ಹಿಂದೆ ಹೇಳಿದೆ. ಸತ್ರರೂಪ ಮಹಾವ್ರತದಲ್ಲಿ ಹೋತೃವೂ ಯಜಮಾನನಾಗುವುದರಿಂದ ಅವನಿಗೆ ದೀಕ್ಷೆಯು ಸಿದ್ಧವೇ ಆಗಿದೆ. ಏಕಾಹ, ಅಹೀನಗಳಲ್ಲಿ ಮಾತ್ರ ಹೋತೃವು ಯಜಮಾನನಾಗುವುದಿಲ್ಲ. ಇತರರೇ ಆಗಿರುತ್ತಾರೆ. ಇತರರೂ ಎರಡು ರೀತಿಯಾಗಿರುತ್ತಾರೆ. ಸ್ವಾರ್ಥದಿಂದ ಮಾಡುವ ಅಗ್ನಿಷ್ಟೋಮಾದಿಗಳಲ್ಲಿ ದೀಕ್ಷಿತನಾದ ವನು ಒಬ್ಬ ಯಜಮಾನ. ಸೋಮಯಾಗವಿಲ್ಲದಿರುವುದರಿಂದ ಅದೀಕ್ಷಿತನಾದ ಯಜಮಾನನು ಇನ್ನೊಬ್ಬನು. ಅವರಲ್ಲಿ ದೀಕ್ಷಿತನಾದವನೇ ಪರಕೀಯ ಮಹಾವ್ರತಕರ್ಮದಲ್ಲಿ ಸ್ತುತಿಸಬೇಕು. ಅದೀಕ್ಷಿತನಾದವನು ಸ್ತುತಿಸಬಾರದು. ಚಿತ್ಯಾಗ್ನಿ ಸಹಿತವಾದುದು, ಚಿತ್ಯಾಗ್ನಿರಹಿತವಾದುದೆಂದು ಪರಕೀಯ ಮಹಾವ್ರತವು ಎರಡು ರೀತಿಯಾಗಿರುತ್ತವೆ. ಅವೆರಡರಲ್ಲಿ ಚಿತಾಗ್ನಿಸಹಿತವಾದ ಮಹಾವ್ರತಪ್ರಯೋಗದಲ್ಲಿ ಶಂಸನವು ಮುಖ್ಯವಾಗಿರುತ್ತದೆ. ಬೇರೆಯವರು ಅಂದರೆ ಪಿತೃ, ಆಚಾರ್ಯ, ವ್ಯತಿರಿಕ್ತರಾದ ಯಜಮಾನರಿಗೋಸ್ಕರ ಸ್ತುತಿಸಬಾರದು. ಸಂವತ್ಸರಸತ್ರವ್ಯತಿರಿಕ್ತಕ್ರತುವಿನಲ್ಲಿ ಎಲ್ಲಿಯೂ ಸ್ತುತಿಸಬಾರದೆಂದ

ಕೆಲವರ ಪಕ್ಷ. ಪಿತ್ರಾಚಾರ್ಯರು ಬೇರೆಯವರಾದರೂ ದೇಹ ಮತ್ತು ವಿದ್ಯಾದಾನದಿಂದ ಉಪಕಾರಮಾಡಿರುವುದರಿಂದ ಅವರಿಗೋಸ್ಕರಮಾಡತಕ್ಕ ಸ್ತುತಿಯು ಸ್ವಾರ್ಥಸ್ತುತಿಯೇ ಆಗುತ್ತದೆ. ಆದುದರಿಂದ ಅಲ್ಲಿ ನಿಷೇಧವಿಲ್ಲ.

**ಹೋತೃಶಸ್ತ್ರೇಷೂಕ್ಥಶಾ ಯಜ ಸೋಮಸ್ಯೇತ್ಯೇಕಃ ಪ್ರೈಷಃ ಸ ನಾರಾಶಂಸೇಷ್ವನಾರಾಶಂಸೇಷು ವಾ ಹೋತ್ರಕಾಣಾಮುಕ್ಥ-ಶಾ ಯಜ ಸೋಮಾನಾಮಿತಿ ॥**

ಶಂಸನೇ ನಿಯಮಾನಭಿಧಾಯ ಗ್ರಂಥಾಧ್ಯಾಪನೇ ತದಿದಮಿತ್ಯಾದಿನಾ ನಿಯಮಾನಭಿ-ಧಾಸ್ಯತಿ । ಅತ್ರ ಕೇಚಿದ್ವಾಕ್ಯಾಂತರಮಧೀಯತೇ—ತಸ್ಯೈತಸ್ಯಾಧಿಕಸ್ಯ ವಾಕ್ಯಸ್ಯಾಯಮರ್ಥಃ । ಯಾನಿ ಹೋತುಃ ಶಸ್ತ್ರಾಣಿ ನಾರಾಶಂಸಾಖ್ಯ ಚಮಸಸಹಿತಾನಿ ತದ್ರಹಿತಾನಿ ಚ ತೇಷು ಸರ್ವೇಷ್ವಪ್ಯು-ಕ್ಥಶಾ ಯಜ ಸೋಮಸ್ಯೇತ್ಯಯಮೇಕ ಏವಾಧ್ವರ್ಯೋಃ ಪ್ರೈಷಮಂತ್ರಪಾಠಃ । ಹೋತ್ರಕಾಣಾಂ ಶಸ್ತ್ರೇಷೂಕ್ಥಶಾ ಯಜ ಸೋಮಾನಾಮಿತ್ಯಧ್ಯಾಹೃತ್ಯ ಬಹುವಚನಾಂತಃ ಪ್ರೈಷೋ ದ್ರಷ್ಟವ್ಯಃ । ಸೋಽಯಮರ್ಥಃ ಪ್ರಕೃತಿತ ಏವ ಪ್ರಾಪ್ತ ಇತಿ ಮತ್ವಾ ಕೇಚಿದೇತದ್ವಾಕ್ಯಂ ನಾಧೀಯತೇ । ಅಪರೇ ತ್ವಧ್ಯಾಹಾರಂ ಪರಿತ್ಯಜ್ಯ ಸೋಮಸ್ಯೇತ್ಯೇಕವಚನಾಂತಮೇವ ಪ್ರೈಷಮನುವರ್ತ್ಯ ಹೋತ್ರಕಾಣಾಂ ಶಸ್ತ್ರೇಷು ವಿಶೇಷವಿಧಾನಾರ್ಥಮಿತ್ಯಭಿಪ್ರಾಯೇಣೈತದ್ವಾಕ್ಯಂ ಪಠಂತಿ ॥

ಸ್ತುತಿಯಲ್ಲಿ ನಿಯಮಗಳನ್ನು ಹೇಳಿ ಗ್ರಂಥಾಧ್ಯಾಪನದಲ್ಲಿ ಕೆಲವು ನಿಯಮಗಳನ್ನು ಹೇಳಿ ವಿವರಿಸುತ್ತಾರೆ. ಮೊದಲು ಈ ವಿಷಯದಲ್ಲಿ ಕೆಲವು ವಾಕ್ಯಗಳನ್ನು ವಿವರಿಸುತ್ತಾರೆ. ಹೋತೃವಿನ ಸಕಲಶಸ್ತ್ರಗಳಲ್ಲಿಯೂ **ಉಕ್ಥಶಾ ಯಜ ಸೋಮಸ್ಯ** ಎಂದು ಅಧ್ವರ್ಯುವಿನ ಪ್ರೈಷಮಂತ್ರಪಾಠವು ಒಂದೇ ಆಗಿರುತ್ತದೆ. ಹೋತ್ರಕರ ಶಸ್ತ್ರಗಳಲ್ಲಿ **ಉಕ್ಥಶಾ ಯಜ ಸೋಮಾನಾಂ** ಎಂದು ಅಧ್ಯಾಹಾರಮಾಡಿಕೊಂಡು ಬಹುವಚನಾಂತವಾಗಿ ಪ್ರೈಷಮಂತ್ರವನ್ನು ತಿಳಿಯಬೇಕು. ಕೆಲವರು ಈ ಅರ್ಥವು ಪ್ರಕೃತಿಯಿಂದಲೇ ಪ್ರಾಪ್ತವಾದುದರಿಂದ ಈ ವಾಕ್ಯವನ್ನು ಹೇಳುವುದಿಲ್ಲ. ಇನ್ನು ಕೆಲವರು ಅಧ್ಯಾಹಾರಮಾಡದೆ ಸೋಮಸ್ಯ ಎಂಬ ಏಕವಚನಾಂತವಾದ ಪ್ರೈಷವನ್ನೇ ಅನುವೃತ್ತಿಮಾಡಿಕೊಂಡು ಶಸ್ತ್ರಗಳಲ್ಲಿ ವಿಶೇಷವಿಧಾನಕ್ಕೋಸ್ಕರ ಈ ವಾಕ್ಯವನ್ನು ಪಠಿಸುತ್ತಾರೆ.

**ತದಿದಮುಹರ್ನಾನಂತೇವಾಸಿನೇ ಪ್ರಬ್ರೂಯಾನ್ನಾಸಂವತ್ಸರವಾಸಿನೇ ನೋ ಏವಾಸಂವತ್ಸರವಾಸಿನೇ ನಾಬ್ರಹ್ಮಚಾರಿಣೇ ನಾಸಬ್ರಹ್ಮ-ಚಾರಿಣೇ ನೋ ಏವಾಸಬ್ರಹ್ಮಚಾರಿಣೇ ನಾನಭಿಪ್ರಾಪ್ತಾಯೈತಂ ದೇಶಮ್ ॥**

ಇದಾನೀಮಧ್ಯಾಪನನಿಯಮಾನ್ದರ್ಶಯತಿ—ಅಧ್ಯಾಪಕಸ್ಯ ಗುರೋರಂತೇ ಸಮೀಪೇ ವಸ್ತುಂ ಶೀಲಮಸ್ಯೇತ್ಯಂತೇವಾಸೀ । ತನ್ನಿಯಮಾಶ್ಚ ಸ್ಮೃತಿಷು ದರ್ಶಿತಾಃ—“ಗುರುರನುಗಂತ-ವ್ಯೋಽಭಿವಾದ್ಯಶ್ಚ” ಇತಿ ಗೌತಮಸ್ಮೃತಿಃ । “ಆಹೂತಶ್ಚಾಪ್ಯಧೀಯೀತ ಲಬ್ಧಂ ಚಾಸ್ಮೈ ನಿವೇ-ದಯೇತ್” ಇತಿ ಯಾಜ್ಞವಲ್ಕ್ಯಃ । “ಅಕ್ರೋಧನೋಽನಸೂಯಃ ಸರ್ವಂ ಲಾಭಂ

ಚಾಽಹರನ್ಗುರವೇ, ಸಾಯಂ ಪ್ರಾತರಮತ್ರೇಣ ಭಿಕ್ಷಾಚರ್ಯಾಂ ಚರೇದ್ಭಿಕ್ಷಮಾಣೋಽನ್ಯತ್ರಾಪಪಾತ್ರೇಭ್ಯೋಽಭಶಸ್ತಾಚ್ಚ " ಇತ್ಯಾಪಸ್ತಂಬಃ । ಏತೈರ್ನಿಯಮೈರುಪೇತೋಽಂತೇವಾಸೀ, ತದ್ವಿರಹಿತೋಽನಂತೇವಾಸೀ ತಾದೃಶಾಯ ನಿಯಮರಹಿತಾಯ ತದಿದಂ ಮಹಾವ್ರತಪ್ರತಿಪಾದಕಂ ವಾಕ್ಯಂ ನ ಬ್ರೂಯಾತ್ । ನಿಯಮವಾನಪಿ ಯ ಆಚಾರ್ಯಸಮೀಪೇ ಸಂವತ್ಸರಂ ಶುಶ್ರೂಷಾಂ ಕೃತ್ವಾ ನ ತಿಷ್ಠೇತ್ತಾದೃಶಾಯಾಪಿ ನ ಬ್ರೂಯಾತ್ । ನಿಯತಿಮವಲೋಕ್ಯ ದಾಕ್ಷಿಣ್ಯೇನ ಸಂವತ್ಸರ-ವಾಸಾಭಾವೇಽಪಿ ಕದಾಚಿತ್ಸ ಗ್ರಂಥಃ ಪ್ರೋಚ್ಯೇತ ಇತ್ಯಾಶಂಕ್ಯ ನೋ ಏವೇತಿ ಪುನರ್ನಿಷೇಧತಿ। ಅಷ್ಟ-ವಿಧಸ್ತ್ರೀಸಂಗರಹಿತೋ ಬ್ರಹ್ಮಚಾರೀ ॥

ತಥಾ ಚ ಸ್ಮರ್ಯತೇ—

ಶ್ರವಣಂ ಕೀರ್ತನಂ ಕೇಲಿಃ ಪ್ರೇಕ್ಷಣಂ ಗುಹ್ಯಭಾಷಣಮ್ ।
ಸಂಕಲ್ಪೋಽಧ್ಯವಸಾಯಶ್ಚ ಕ್ರಿಯಾನಿರ್ವೃತ್ತಿರೇವ ಚ ।
ಏತನ್ಮೈಥುನಮಷ್ಟಾಂಗಂ ವದಂತಿ ಬ್ರಹ್ಮವಾದಿನಃ ॥
ವಿಪರೀತಂ ಬ್ರಹ್ಮಚರ್ಯಮೇತದೇವಾಷ್ಟಲಕ್ಷಣಮ್ ॥

ತಥಾವಿಧಬ್ರಹ್ಮಚರ್ಯರಹಿತಾಯ ನ ಬ್ರೂಯಾತ್ । ಉಕ್ತವಿಧೈರ್ಬ್ರಹ್ಮಚಾರಿಭಿಃ ಸಹ ವಸತೀತಿ ಸಬ್ರಹ್ಮಚಾರೀ । ಯದ್ವೈಕಸ್ಮಾದಾಚಾರ್ಯಾತ್ಸಹಾಧ್ಯೇತಾರಃ ಸಬ್ರಹ್ಮಚಾರಿಣಃ । ತದ್ವಿಪರೀತೈಃ ಸಹ ವಸತೀತ್ಯಸಬ್ರಹ್ಮ ಚಾರೀ ತಾದೃಶಾಯ ನ ಬ್ರೂಯಾತ್ । ಸಹವಾಸಿನಾಂ ಬ್ರಹ್ಮಚರ್ಯಾ-ಭಾವೇಽಪಿ ತಸ್ಯ ಬ್ರಹ್ಮಚರ್ಯಸದ್ಭಾವಮಾತ್ರೇಣ ಯೋಗ್ಯತಾಮಾಶಂಕ್ಯ ' ಸಂಸರ್ಗಜಾ ದೋಷ-ಗುಣಾ ಭವಂತಿ ' ಇತಿ ನ್ಯಾಯೇನ ಸ್ವಕೀಯಬ್ರಹ್ಮಚರ್ಯಸ್ಯಾಪಿ ಕಥಂಚಿಚ್ಛೈಥಿಲ್ಯಂ ಸಂಭವೇದಿತ್ಯಭಿಪ್ರೇತ್ಯ ನೋ ಏವೇತಿ ಪುನರ್ನಿಷೇಧತಿ । ಆಚಾರ್ಯೋ ಯಸ್ಮಿನ್ದೇಶೇ ನಿವಸತ್ಯೇತಂ ದೇಶ-ಮನಭಿಪ್ರಾಪ್ತಾಯ ನ ಬ್ರೂಯಾತ್ । ಧನದಾಕ್ಷಿಣ್ಯಾದಿನಿಮಿತ್ತೇನ ಸ್ವಯಂ ತದ್ಗೃಹೇ ಗತ್ವಾ ನ ಕಥಯೇದಿತ್ಯರ್ಥಃ ॥

ಅಧ್ಯಯನನಿಯಮವನ್ನು ತೋರಿಸುತ್ತಾರೆ. ಗುರುವಿನ ಸಮೀಪದಲ್ಲಿ ಅಧ್ಯಯನಮಾಡುವವನಿಗೆ ಅಂತೇವಾಸೀ ಎಂದು ಹೆಸರು. ಅಧ್ಯಯನನಿಯಮಗಳು ನಾನಾಸ್ಮೃತಿಗಳಲ್ಲಿ ವಿವೃತವಾಗಿವೆ. ಗುರುವನ್ನೇ ಅನುಸರಿಸಬೇಕು. ವಂದಿಸಬೇಕು. ಗೌತಮಸ್ಮೃತಿಯಲ್ಲಿ ಹೇಳಿದೆ. ಓದುತ್ತಿರುವಾಗ ತಾನು ಏನು ಹೊಂದಿದರೂ ಗುರುವಿಗೇ ಕೊಡಬೇಕೆಂದು ಯಾಜ್ಞವಲ್ಕ್ಯರ ಮತ. ಸಿಟ್ಟುಮಾಡದೆ, ಆಸೂಯೆಗೊಳ್ಳದೆ, ಸಕಲಲಾಭವನ್ನೂ ಗುರುವಿಗೆ ಸಮರ್ಪಿಸಿ, ಸಾಯಂಕಾಲ ಪ್ರಾತಃಕಾಲಗಳಲ್ಲಿ ಪಾತ್ರೆಹಿಡಿದು ಭಿಕ್ಷೆ ಎತ್ತಬೇಕು. ಅಯೋಗ್ಯರಿಂದ ಭಿಕ್ಷೆಹೊಂದಬಾರದು ಎಂದು ಆಪಸ್ತಂಬರ ಮತ. ಈ ಎಲ್ಲಾನಿಯಮಗಳಿಂದ ಕೂಡಿರುವವನೇ ಅಂತೇವಾಸೀ. ಈ ಗುಣಗಳಿಲ್ಲದವನು ಅನಂತೇವಾಸೀ ಇಂತಹನಿಗೆ ಮಹಾವ್ರತಪ್ರತಿಪಾದಕವಾಕ್ಯವನ್ನು ಹೇಳಬಾರದು. ನಿಯಮವಂತನಾದರೂ ಒಂದುವರ್ಷ ಗುರುಶುಶ್ರೂಷೆ ಮಾಡದಿರುವವನಿಗೆ ಉಪದೇಶಿಸಬಾರದು. ಅವನ ಸ್ವಭಾವದಿಂದ ಸಂತುಷ್ಟನಾಗಿ ಒಂದುವರ್ಷಸೇವೆಮಾಡದಿದ್ದರೂ ಹೇಳಬಹುದೆಂದು ನಿಷೇಧಿಸಲು ನೋ ಏವ ಎಂದು ಪುನಃ ನಿಷೇಧಮಾಡಿರುತ್ತಾರೆ. ಎಂಟು ರೀತಿಯಿಂದ ಸ್ತ್ರೀಸಂಗಮಾಡದಿರುವವನೇ ಬ್ರಹ್ಮಚಾರಿ. ಶ್ರವಣ, ಕೀರ್ತನ, ಕೇಳಿ, ನೋಡುವುದು, ಗುಹ್ಯಭಾಷಣ, ಸಂಕಲ್ಪ, ನಿಶ್ಚಯ, ಕ್ರಿಯಾನಿರ್ವೃತ್ತಿ, ಹೀಗೆ ಎಂಟುರೀತಿ ಮೈಥುನವನ್ನು

ಹೇಳಿರುತ್ತಾರೆ. ಇದು ಇಲ್ಲದಿರುವವನೇ ಬ್ರಹ್ಮಚಾರಿ. ಈರೀತಿ ಬ್ರಹ್ಮಚರ್ಯ ಇಲ್ಲದವನಿಗೆ ಹೇಳಬಾರದು. ಬ್ರಹ್ಮಚಾರಿಗಳೊಡನೆ ವಾಸಿಸುವವನು ಸಬ್ರಹ್ಮಚಾರೀ ಅಥವಾ ಒಬ್ಬನೇಗುರುವಿನಲ್ಲಿ ಓದುತ್ತಿದ್ದವರು ಸಬ್ರಹ್ಮಚಾರಿಗಳು. ಇದಕ್ಕೆ ವಿರುದ್ಧರಾದವರು ಅಸಬ್ರಹ್ಮಚಾರಿಗಳು ಅವರಿಗೂ ಹೇಳಬಾರದು. ಇತರರು ಬ್ರಹ್ಮಚರ್ಯಇಲ್ಲದವರಾಗಿ ತಾನು ಬ್ರಹ್ಮಚಾರಿಯಾಗಿ ಇದ್ದರೂ ಅವರ ಸಹವಾಸದಿಂದ ತಾನೂ ಶಿಥಿಲಬ್ರಹ್ಮಚರ್ಯವುಳ್ಳವನಾಗಬಹುದೆಂದು ಸೋ೯ವ ಎಂದು ಪುನಃ ನಿಷೇಧಹೇಳಿದೆ. ಆಚಾರ್ಯನಿದ್ದಸ್ಥಳಕ್ಕೆ ಬಾರದಿರುವವನಿಗೆ ಉಪದೇಶಿಸಬಾರದು. ಧನದಾಕ್ಷಿಣ್ಯದಿಂದ ಶಿಷ್ಯನಮನೆಗೆ ಹೋಗಿ ಹೇಳಬಾರದೆಂದು ತಾತ್ಪರ್ಯ.

## ನ ಭೂಯಃ ಸಕೃದ್ಗದನಾದ್ದ್ವಿರ್ಗದನಾದ್ವಾ ದ್ವಯ್ಯೇವ

ಬಹುಕೃತ್ವೋಽಧ್ಯಾಪನಂ ನಿಷೇಧತಿ—ಏಕಸ್ಮಿನ್ಪರ್ಯಾಯೇ ಶಿಷ್ಯಾಣಾಮಧ್ಯಾಪನಂ ಸಕೃದ್ಗದನಮ್ । ಪರ್ಯಾಯದ್ವಯೇಽಧ್ಯಾಪನಂ ದ್ವಿರ್ಗದನಮ್ । ತತೋ ಭೂಯೋ ನ ಪ್ರಬ್ರೂಯಾತ್ । ತೃತೀಯಚತುರ್ಥಾದಿಪರ್ಯಾಯಪ್ರಾಪ್ತಾನ್ ಶಿಷ್ಯಾನ್ನಾಧ್ಯಾಪಯೇತ್ । ಕಿಂ ತು ದ್ವಯ್ಯೇವ ದ್ವಿಧೈವಾಧ್ಯಾಪನಪ್ರವೃತ್ತಿಃ ಕಾರ್ಯಾ ನ ತು ತತೋಽಧಿಕಾ । ಅತ್ಯಂತರಹಸ್ಯತ್ವೇನ ಗೋಪನೀಯತ್ವಾತ್ ॥

ಅನೇಕ ಬಾರಿ ಅಧ್ಯಾಪನವನ್ನು ನಿಷೇಧಿಸುತ್ತಾರೆ. ಒಂದು ಶಿಷ್ಯಪರ್ಯಾಯದಲ್ಲಿ ಅಧ್ಯಾಪನಮಾಡುವುದಕ್ಕೆ ಸಕೃದ್ಗದನವೆಂದು ಹೆಸರು. ಎರಡು ಪರ್ಯಾಯದಲ್ಲಿ ಅಧ್ಯಾಪನಕ್ಕೆ ದ್ವಿರ್ಗದನವೆಂದು ಹೆಸರು. ಎರಡು ಪರ್ಯಾಯಕ್ಕಿಂತ ಹೆಚ್ಚಿಗೆ ಹೇಳಬಾರದು. ಇದು ಅತ್ಯಂತರಹಸ್ಯವಾದುದರಿಂದ ಮುಚ್ಚಿಡಬೇಕಾದುದರಿಂದ ಮೂರನೇ ನಾಲ್ಕನೇ ಪರ್ಯಾಯದವರಿಗೆ ಹೇಳಲೇಬಾರದೆಂದು ತಾತ್ಪರ್ಯ.

## ಏಕ ಏಕಸ್ಮೈ ಪ್ರಬ್ರೂಯಾದಿತಿ ಹ ಸ್ಮಾಽಽಹ ಜಾತೂಕರ್ಣ್ಯಃ ॥

ತಸ್ಮಿನ್ನೇವ ಗೋಪನೇ ಮತಾಂತರಮಾಹ—ಜಾತೂಕರ್ಣ್ಯನಾಮಕಸ್ತು ಮುನಿರ್ದ್ವಿರಧ್ಯಾಪನಂ ನ ಸಹತೇ । ಏಕಸ್ಮಿನ್ನಧ್ಯಾಪನೇ ಶಿಷ್ಯಬಾಹುಲ್ಯಂ ನ ಸಹತೇ, ಕಿಂತು ಸಂಪ್ರದಾಯವಿಚ್ಛೇದನಿವಾರಣಾರ್ಥಮೇಕ ಆಚಾರ್ಯ ಏಕಸ್ಮೈ ಶಿಷ್ಯಾಯ ಬ್ರೂಯಾದಿತ್ಯೇತಾವದೇವಾಭ್ಯುಪಗಚ್ಛತಿ ॥

ರಕ್ಷಿಸುವ ವಿಷಯದಲ್ಲಿ ಮತಾಂತರವನ್ನು ತೋರಿಸುತ್ತಾರೆ. ಜಾತೂಕರ್ಣ್ಯನೆಂಬ ಮುನಿಯು ಎರಡು ಸಾರಿ ಅಧ್ಯಾಪನವನ್ನೂ ನಿಷೇಧಿಸುತ್ತಾರೆ. ಅದೂ ಅಲ್ಲದೆ ಶಿಷ್ಯಬಾಹುಲ್ಯವನ್ನೂ ಸಹಿಸುವುದಿಲ್ಲ. ಒಬ್ಬ ಗುರುವು ಒಬ್ಬ ಶಿಷ್ಯನಿಗೆ ಉಪದೇಶಿಸಬೇಕೆಂದು ಅವರ ಮತ.

## ನ ವತ್ಸೇ ಚ ನ ತೃತೀಯ ಇತಿ ॥

ಶಿಷ್ಯಾಣಾಂ ಚಾಲ್ಪವಾರ್ಧಕಯೋರ್ವಯಸೋಸ್ತದಧ್ಯಾಪನಂ ನಿಷೇಧತಿ—ಇತಿಶಬ್ದಃ ಶಿಷ್ಯಪ್ರಯುಕ್ತನಿಷೇಧಸಮಾಪ್ತ್ಯರ್ಥಃ ॥

ಶಿಷ್ಯರೂ ಕೂಡ ಅತಿ ಚಿಕ್ಕವಯಸ್ಸಿನವರೂ ಅತಿವೃದ್ಧರೂ ಆಗಿದ್ದರೆ ಅವರಿಗೆ ಉಪದೇಶಿಸಬಾರದು.

ನ ತಿಷ್ಠಂಸ್ತಿಷ್ಠತೇ ನ ವ್ರಜನ್ವ್ರಜತೇ ನ ಶಯಾನಃ ಶಯಾನಾಯ ನೋ-
ಪರ್ಯಾಸೀನ ಉಪರ್ಯಾಸೀನಾಯಾಥ ಏವಾಽಽಸೀನೋಽಥ ಆಸೀ-
ನಾಯ ॥

ಶಿಷ್ಯಾಚಾರ್ಯೋಭಯಪ್ರಯುಕ್ತಾನ್ನಿಷೇಧಾನ್ದರ್ಶಯತಿ — ತಿಷ್ಠನ್ನಾಚಾರ್ಯಸ್ತಿಷ್ಠತೇ ಶಿಷ್ಯಾಯ ನ ಬ್ರೂಯಾತ್ । ಏವಮುತ್ತರತ್ರಾಪಿ ದ್ರಷ್ಟವ್ಯಮ್ । ಉಪರಿ ಮಂಚಕಾದೌ । ಆಚಾರ್ಯಃ ಸ್ವಯಮಥ ಏವ ಭೂಮಾವೇವಾಽಽಸೀನೋ ಭೂಮಿಷ್ಠಾಯೈವ ಬ್ರೂಯಾತ್ ॥

ಶಿಷ್ಯಾಚಾರ್ಯರಿಬ್ಬರಿಗೂ ಅನ್ವಯವಾಗುವ ಕೆಲವು ನಿಷೇಧಗಳನ್ನು ವಿವರಿಸುತ್ತಾರೆ- ನಿಂತಿರುವ ಗುರುವು ನಿಂತಿರುವ ಶಿಷ್ಯನಿಗೆ ಉಪದೇಶಿಸಬಾರದು. ಹೀಗೆಯೇ ನಡೆಯುತ್ತಿರುವಾಗ, ಮಲಗಿರುವಾಗ, ಮಂಚಾದಿಯಲ್ಲಿ ಕುಳಿತಿರುವಾಗ ಹೇಳಬಾರದು. ಭೂಮಿಯಲ್ಲಿ ಕುಳಿತಿರುವ ಗುರುವು ಅಂತಹ ಶಿಷ್ಯನಿಗೆ ಹೇಳಬೇಕು.

ನಾವಷ್ಟಬ್ಧೋ ನ ಪ್ರತಿಸ್ತಬ್ಧೋ ನಾತಿವೀತೋ ನಾಂಕಂ ಕೃತ್ವೋರ್ಧ್ವ-
ಜ್ಞುರನಪಶ್ರಿತೋಽಧೀಯೀತ ನ ಮಾಂಸಂ ಭುಕ್ತ್ವಾ ನ ಲೋಹಿತಂ
ದೃಷ್ಟ್ವಾ ನ ಗತಾಸುಂ ನಾವ್ರತ್ಯಮಾಕ್ರಮ್ಯ ನಾಕ್ತ್ವಾ ನಾಭ್ಯಜ್ಯ
ನೋನ್ಮರ್ದನಂ ಕಾರಯಿತ್ವಾ ನ ನಾಪಿತೇನ ಕಾರಯಿತ್ವಾ ನ
ಸ್ನಾತ್ವಾ ನ ವರ್ಣಕೇ ನಾನುಲಿಪ್ಯ ನ ಸ್ರಜಮುಪಿನಹ್ಯ ನ ಸ್ತ್ರಿಯಮು
ಪಗಮ್ಯ ನೋಲ್ಲಿಖ್ಯ ನಾವಲಿಖ್ಯ ॥

ಪುನರಪಿ ಶಿಷ್ಯನಿಯಮಾನ್ದರ್ಶಯತಿ—ಪೃಷ್ಠಭಾಗೇ ಕುಡ್ಯಾದ್ಯಾಶ್ರಯಣಮವಷ್ಟಂಭಃ । ಪುರೋಭಾಗೇ ಹಸ್ತಯೋರ್ದಂಡಾದ್ಯಾಧಾರಾಶ್ರಯಣಂ ಪ್ರತಿಸ್ತಂಭನಂ । ವಸ್ತ್ರೇಣ ಸರ್ವಾಂಗಾಪಿಧಾನಮತಿವೀತಿ (ತ) ತ್ವಂ । ಪದ್ಮಾಸನಾದಿಕಮಂಕಕರಣಂ । ಏತತ್ಸರ್ವಂ ಪರಿತ್ಯಜ್ಯ ಜಾನುದ್ವಯಮೂರ್ಧ್ವಂ ಕೃತ್ವಾ ಯೋಗಪಟ್ಟವಸ್ತ್ರಾದ್ಯಾಶ್ರಯರಹಿತೋ ಗ್ರಂಥಮಧೀಯೀತ । ಮಾಂಸಭೋಜನಲೋಹಿತದರ್ಶನಮೃತಪ್ರಾಣಿದರ್ಶನೋಚ್ಛಿಷ್ಟಾದ್ಯಾಕ್ರಮಣನೇತ್ರಾಂಜನದೇಹಾಭ್ಯಂಗ—ಶರೀರಮರ್ದನನಖನಿಕೃಂತನಾದ್ಯುಷ್ಣೋದಕಸ್ನಾನಚಂದನಕುಂಕುಮಾದ್ಯನುಲೇಪನಪುಷ್ಪಮಾಲಾ-ಧಾರಣಸ್ತ್ರೀಸಂಗಮಲಿಪ್ಯಕ್ಷರಾದ್ಯುಲ್ಲೇಖನಾವಲೇಖನಾನಿ ಕೃತ್ವಾ ನಾಧೀಯೀತ ॥

ತಿರುಗಿಯೂ ಕೆಲವು ಶಿಷ್ಯನಿಯಮವನ್ನು ವಿವರಿಸುತ್ತಾರೆ. ಶಿಷ್ಯನು ಗೋಡೆ ಮುಂತಾದವುಗಳಿಗೆ ಒರಗಿ ಕೂತಿರಬಾರದು. ಮುಂದೆ ದಂಡ ಕಂಬ ಮುಂತಾದವುಗಳನ್ನು ಆಶ್ರಯಿಸಬಾರದು. ಶರೀರವನ್ನು ಸಂಪೂರ್ಣವಾಗಿ ವಸ್ತ್ರಾದಿಗಳಿಂದ ಮುಚ್ಚಿರಬಾರದು. ಪದ್ಮಾಸನಾದಿಗಳನ್ನು ಹಾಕಿರಬಾರದು ಯೋಗಪಟ್ಟವಸ್ತ್ರಾದ್ಯಾಶ್ರಯವೂ ಇರಬಾರದು. ಮೊಣಕಾಲುಗಂಟುಗಳನ್ನು ಮುಂದೆ ಮಾಡಿ ಕುಳಿತು ಗ್ರಂಥಾಧ್ಯಯನ ಮಾಡಬೇಕು. ಮಾಂಸಭೋಜನೆ, ರಕ್ತಾದಿಯನ್ನು

ನೋಡುವುದು, ಮೃತಪ್ರಾಣಿಯನ್ನು ನೋಡುವುದು, ಎಂಜಲು ತುಳಿಯುವುದು, ದಾಟುವುದು, ಕಣ್ಣಿಗೆ ಕಾಡಿಗೆ ಹಚ್ಚಿರುವುದು, ಅಭ್ಯಂಗಸ್ನಾನ, ಶರೀರಮರ್ದನ, ಉಗುರುಕತ್ತರಿಸಿಕೊಳ್ಳುವುದು, ಬಿಸಿನೀರುಸ್ನಾನ, ಗಂಧಾದಿಲೇಪನ, ಪುಷ್ಪಧಾರಣ, ಸ್ತ್ರೀಸಂಗ, ಲಿಪ್ಯಕ್ಷರ ಬರೆಯುವುದು ಮುಂತಾದವುಗಳನ್ನು ಮಾಡುತ್ತಾ ಓದಬಾರದು. ಇವೆಲ್ಲವನ್ನೂ ಬಿಟ್ಟಿರಬೇಕು.

ನೇದಮೇಕಸ್ಮಿನ್ನಹನಿ ಸಮಾಪಯೇದಿತಿ ಹ ಸ್ಮಾಽಽಹ ಜಾತೂಕರ್ಣ್ಯಃ ಸಮಾಪಯೇದಿತಿ ಗಾಲವೋ ಯದನ್ಯತ್ಪ್ರಾಕ್ತೃಚಾಶೀತಿಭ್ಯಃ ಸಮಾಪಯೇದೇವೇತ್ಯಾಗ್ನಿವೇಶ್ಯಾಗ್ನಿವೇಶ್ಯಾಯನೋಽನ್ಯಮನ್ಯಸ್ಮಿನ್ದೇಶೇ ಶಮಯಮಾನ

ಸಮಾಪ್ತೌ ಮತಭೇದಂ ದರ್ಶಯತಿ–ಇದಂ ಮಹಾವ್ರತಾಧ್ಯಯನಂ ಯಸ್ಮಿನ್ದಿನೇಽಪಕ್ರಾಂತಂ ತಸ್ಮಿನ್ನೇವ ಸಮಾಪ್ತಂ ನ ಕುರ್ಯಾದಿತಿ ಜಾತೂಕರ್ಣ್ಯಸ್ಯ ಮತಂ। ಗಾಲವಸ್ಯ ತು ಕುರ್ಯಾದಿತಿ ಮತಂ। ಅಗ್ನಿವೇಶ್ಯಾಯನಸ್ಯ ಸು ಕಿಯದೇವ ಸಮಾಪಯೇದಿತಿ ಮತಂ। ಗಾಯತ್ರ್ಯಾದಿಭ್ಯಸ್ತೃಚಾಶೀತಿಭ್ಯಃ ಪ್ರಾಚೀನಮಾಜ್ಯಪ್ರಉಗಾದಿಕಂ ಯದಸ್ತಿ ತದೇವೈಕಸ್ಮಿನ್ದಿನೇ ಸಮಾಪಯೇತ್। ಇತರಭಾಗಂ ತು ದಿನಾಂತರೇ ಸಮಾಪಯೇತ್। ಯಥೈವೋತ್ತರಭಾಗಸ್ಯಾನ್ಯಸ್ಮಿನ್ದಿನೇ ಸಮಾಪನಂ ತಥೈವಾನ್ಯಮುತ್ತರಭಾಗಮನ್ಯಸ್ಮಿನ್ದೇಶೇ ಶಮಯಮಾನಃ ಸಮಾಪಯನ್ನವತಿಷ್ಠೇತ। ಇತಿಶಬ್ದೋ ಮತದ್ವಯಸಮಾಪ್ತ್ಯರ್ಥಃ ॥

ಸಮಾಪ್ತಿ ವಿಷಯದಲ್ಲಿ ಮತ ಭೇದವನ್ನು ವಿವರಿಸುತ್ತಾರೆ. ಈ ಮಹಾವ್ರತಾಧ್ಯಯನವು ಯಾವ ದಿನದಲ್ಲಿ ಆರಂಭವಾಗಿದೆಯೋ ಅದೇ ದಿನದಲ್ಲಿ ಸಮಾಪ್ತಿಗೊಳಿಸಬಾರದೆಂದು ಜಾತೂಕರ್ಣ್ಯರ ಮತ. ಅದೇ ದಿವಸ ಮುಗಿಸಬೇಕೆಂದು ಗಾಲವರ ಮತ. ಸ್ವಲ್ಪ ಭಾಗ ಮಾತ್ರ ಮುಗಿಸಬೇಕೆಂದು ಅಗ್ನಿವೇಶ್ಯಾಯನರ ಮತ. ಗಾಯತ್ರ್ಯಾದಿ ತೃಚಾಶೀತಿಗಳಿಗಿಂತ ಹಿಂದಿನ ಆಜ್ಯಪ್ರಉಗಾದಿಗಳನ್ನು ಒಂದು ದಿವಸದಲ್ಲಿಯೂ, ಇತರ ಭಾಗಗಳನ್ನು ಬೇರೆ ದಿನಗಳಲ್ಲಿಯೂ ಮುಗಿಸಬೇಕು. ಉತ್ತರ ಭಾಗವನ್ನು ಮುಂದಿನ ದಿವಸದಲ್ಲಿ ಸಮಾಪ್ತಿಗೊಳಿಸುವಂತೆ ಆ ಉತ್ತರ ಭಾಗವನ್ನು ಬೇರೆ ಪ್ರದೇಶದಲ್ಲಿಯೇ ಸಮಾಪ್ತಿಗೊಳಿಸಬೇಕು. ಇತಿ ಶಬ್ದವು ಮತದ್ವಯ ಸಮಾಪ್ತಿ ತಿಳಿಸುತ್ತದೆ.

ಯತ್ರೇದಮಧೀಯೀತ ನ ತತ್ರಾನ್ಯದಧೀಯೀತ ಯತ್ರ ತ್ವನ್ಯದಧೀಯೀತ ಕಾಮಮಿದಂ ತತ್ರಾಧೀಯಿತ॥

ದೇಶವಿಷಯೇ ಪುನರನ್ಯಂ ವಿಶೇಷಂ ದರ್ಶಯತಿ—ಇದಂ ಮಹಾವ್ರತಪ್ರತಿಪಾದಕಂ ಮಂತ್ರಜಾತಂ ಯಸ್ಮಿನ್ದೇಶೇಽಧೀತಂ ತಸ್ಮಿನ್ದೇಶೇ ಸ್ಥಿತ್ವಾ ಗ್ರಂಥಾಂತರಾಧ್ಯಯನಂ ಸ ಕುರ್ಯಾತ್। ಯಸ್ಮಿಂಸ್ತು ದೇಶೇ ಗ್ರಂಥಾಂತರಮಧೀತಂ ತಸ್ಮಿನ್ದೇಶೇ ಸ್ವೇಚ್ಛಯೇದಮಧ್ಯೇತುಂ ಶಕ್ಯಮ್ ॥

ದೇಶ ವಿಷಯದಲ್ಲಿ ಇನ್ನೊಂದು ವಿಶೇಷವನ್ನು ತೋರಿಸುತ್ತಾರೆ. ಈ ಮಹಾವ್ರತಾಧ್ಯಯನವನ್ನು ಯಾವ ದೇಶದಲ್ಲಿದ್ದು ಮಾಡಿರುತ್ತಾನೋ ಅಲ್ಲಿ ಇತರ ಗ್ರಂಥಾಧ್ಯಯನವನ್ನು ಮಾಡಬಾರದು. ಯಾವ ದೇಶದಲ್ಲಿ ಇತರ ಗ್ರಂಥಾಧ್ಯಯನ ಮಾಡಿರುತ್ತಾನೋ ಅಲ್ಲಿ ಸ್ವೇಚ್ಛೆಯಿಂದ ಇದನ್ನು ಅಧ್ಯಯನ ಮಾಡಬಹುದು.

**ನೇದಮನಧೀಯನ್‌ಸ್ನಾತಕೋ ಭವತಿ ಯದ್ಯಪ್ಯನ್ಯದ್ಬಹ್ವಧೀಯಾ-ನ್ನೈವೇದಮನಧೀಯನ್‌ಸ್ನಾತಕೋ ಭವತಿ ॥**

**ಶಾಖಾಂತರೇ ವೇದಮಧೀತ್ಯ ಸ್ನಾಯಾದಿತಿ ಸ್ನಾನಾಖ್ಯಂ ಯತ್ಕರ್ಮ ವಿಹಿತಂ ತಸ್ಮಾ-ತ್ಪ್ರಾಗೇವ ಮಹಾವ್ರತಾಧ್ಯಯನಂ ವಿಧತ್ತೇ—ಕೃತ್ಸ್ನಮಪಿ ವೇದಮಧೀತ್ಯ ಸ್ನಾಯಾದಿತಿ ಮುಖ್ಯಃ ಕಲ್ಪಃ । ಯದಾ ತು ವೇದೈಕದೇಶಮಧೀಯೀತೇತ್ಯನುಕಲ್ಪ ಆಶ್ರೀಯೇತ ತದಾನೀಂ ಯದ್ಯಪಿ ಮಹಾವ್ರತಾದನ್ಯದ್ದರ್ಶಪೂರ್ಣಮಾಸಾದಿಕಂ ಬಹುಗ್ರಂಥಜಾತಮಧೀತಂ ತಥಾಽಪಿ ಮಹಾವ್ರತಾಧ್ಯ-ಯನಮಕೃತ್ವಾ ತತ್‌ಸ್ನಾನಂ ನ ಕುರ್ಯಾತ್ ॥**

ಸಂಪೂರ್ಣ ವೇದಾಧ್ಯಯನವಾದ ಮೇಲೆ ಶಾಖಾಂತರದಲ್ಲಿ ಸ್ನಾನಕರ್ಮ ಹೇಳಿದೆ. ಈ ಸ್ನಾನ ಕರ್ಮಕ್ಕಿಂತ ಮೊದಲೇ ಮಹಾವ್ರತಾಧ್ಯಯನ ಮಾಡಬೇಕೆಂದು ವಿಧಿಸುತ್ತಾರೆ. ಸಂಪೂರ್ಣ ವೇದಾಧ್ಯಯನವಾದ ಮೇಲೇ ಸ್ನಾನಕರ್ಮ ವೆಂದು ಮುಖ್ಯಕಲ್ಪ. ವೇದೈಕದೇಶವೆಂಬ ಪಕ್ಷದಲ್ಲಿಯೂ ಮಹಾವ್ರತಾಧ್ಯಯನವಾದ ಮೇಲೇ ಸ್ನಾನವನ್ನು ಮಾಡಬೇಕು.

**ನಾಸ್ಮಾದಧೀತಾತ್ಪ್ರಮಾದ್ಯೇದ್ಯದ್ಯಪ್ಯನ್ಯಸ್ಮಾತ್ಪ್ರಮಾದ್ಯೇನ್ನೈವಾಸ್ಮಾತ್ಪ್ರಮಾ ದ್ಯೇತ್ ॥**

**ಅಧೀತಸ್ಯ ಮಹಾವ್ರತಗ್ರಂಥಸ್ಯ ವಿಸ್ಮೃತಿಂ ನಿಷೇಧತಿ—ಪ್ರಜ್ಞಾಮಾಂದ್ಯಾದಿದೋಷೇಣ ಯದ್ಯಪ್ಯನ್ಯಸ್ಮಾದ್ದರ್ಶಪೂರ್ಣಮಾಸಾದಿಗ್ರಂಥಾತ್ಪ್ರಮಾದ್ಯೇದ್ಗ್ರಂಥವಿಸ್ಮೃತಿಂ ಪ್ರಾಪ್ನುಯಾತ್ತಥಾಪಿ ಪ್ರಯತ್ನೇನ ಪುನಃ ಪುನರಾವೃತ್ತ್ಯಾಽಸ್ಮಾನ್ಮಹಾವ್ರತಗ್ರಂಥಾನ್ನೈವ ಪ್ರಮಾದ್ಯೇತ್ ॥**

ಮಹಾವ್ರತಾಧ್ಯಯನವಾದ ಮೇಲೆ ಅದನ್ನು ಮರೆಯಬಾರದೆಂದು ನಿಷೇಧಿಸುತ್ತಾರೆ. ಪ್ರಜ್ಞಾಮಾಂದ್ಯಾದಿ ದೋಷದಿಂದ ಇತರ ದರ್ಶಪೂರ್ಣ ಮಾಸಾದಿ ಗ್ರಂಥವನ್ನು ಮರೆತುಬಿಟ್ಟರೂ ಈ ಮಹಾವ್ರತ ಗ್ರಂಥವನ್ನು ಮಾತ್ರ ಎಂದೂ ಮರೆಯಬಾರದು. ಪುನಃ ಪುನಃ ಆವೃತ್ತಿಮಾಡುತ್ತಿರಬೇಕು.

**ನೋ ಏವಾಸ್ಮಾತ್ಪ್ರಮಾದ್ಯೇತ್ ॥**

**ಅತ್ರ ಕೇಚಿದಿದಂ ವಾಕ್ಯಾಂತರಮಪಿ ಪಠಂತಿ—ಆದರಾತಿಶಯಾರ್ಥಂ ತದ್ವಾಕ್ಯಂ ದ್ರಷ್ಟವ್ಯಂ**

ಪೂರ್ವೋಕ್ತವಿಷಯದಲ್ಲಿ ಕೆಲವು ವಾಕ್ಯಗಳನ್ನು ತೋರಿಸುತ್ತಾರೆ. ಆದರಾತಿಶಯವನ್ನು ತಿಳಿಸಲು ಈ ನಿಷೇಧ ವಾಕ್ಯ ಹೇಳಿದೆ.

**ಅಸ್ಮಾಚ್ಚೇನ್ನ ಪ್ರಮಾದ್ಯೇದಲಮಾತ್ಮನ ಇತಿ ವಿದ್ಯಾತ್ ||**

ಮಂದಪ್ರಜ್ಞಸ್ಯ ವೇದಭಾಗವಿಸ್ಮೃತಿದೋಷೋಽಸ್ಯೇತದ್ವಿಸ್ಮೃತ್ಯಭಾವೇನ ಪರಿಹ್ರಿಯತ ಇತಿ ದರ್ಶಯತಿ—ಆತ್ಮನಃ ಪುರುಷಾರ್ಥಾಯ ಮಹಾವ್ರತವಿಸ್ಮೃತ್ಯಭಾವ ಏವಾಲಮಿತಿ ನಿಶ್ಚಿನುಯಾತ್||

ಮಂದಮತಿಗೆ ವೇದಭಾಗವಿಸ್ಮೃತಿಯಿಂದುಂಟಾದ ದೋಷವು ಈ ಮಹಾವ್ರತವನ್ನು ಮರೆಯದಿದ್ದಗೆ ಪರಿಹೃತವಾಗುವುದೆಂದು ತೋರಿಸುತ್ತಾರೆ. ತನ್ನ ಪುರುಷಾರ್ಥಲಾಭಕ್ಕೆ ಮಹಾವ್ರತವನ್ನು ಮರೆಯದಿರುವುದೊಂದೇ ಸಾಕೆಂದು ನಿಶ್ಚಯಿಸಬೇಕು.

**ಅಲಂ ಸತ್ಯಂ ವಿದ್ಯಾತ್ ||**

ತತ್ರಾನ್ಯದ್ವಾಕ್ಯಂ ಕೇಚಿತ್ಪಠಂತಿ—ಮಹಾವ್ರತಮೇವ ಪುರುಷಾರ್ಥಾಯಾಲಮಿತಿ ಯದುಕ್ತಂ ತತ್ಸತ್ಯಂ ಪ್ರಾಮಾಣಿಕಂ ನ ತತ್ರ ಶಂಕಿತವ್ಯಮಿತಿ ನಿಶ್ಚಿನುಯಾತ್ ||

ಪೂರ್ವೋಕ್ತವಿಷಯದಲ್ಲಿ ಕಲವರು ಒಂದು ವಾಕ್ಯವನ್ನು ಹೇಳುತ್ತಾರೆ. ಈ ಮಹಾವ್ರತವೇ ಸಕಲ ಪುರುಷಾರ್ಥಗಳನ್ನು ಒದಗಿಸಿಕೊಡುವುದೆಂಬುದು ಸತ್ಯವಾಗಿದೆ. ಈ ವಿಷಯದಲ್ಲಿ ಸಂಶಯಪಡಬೇಕಾಗಿಲ್ಲವೆಂದು ತಾತ್ಪರ್ಯ.

**ನೇದಂವಿದನಿದಂವಿದಾ ಸಮುದ್ದಿಶೇನ್ನ ಸಹಭುಂಜೀತ ನ ಸಧಮಾದೀ ಸ್ಯಾತ್ ||**

ಇದಮಪಿ ವಾಕ್ಯಾಂತರಮಾದರಾರ್ಥಮ್ । ಅವಿಸ್ಮೃತಗ್ರಂಥಸ್ಯ ಪುನರನ್ಯಂ ನಿಯಮಂ ವಿಧತ್ತೇ—ಇದಂ ಮಹಾವ್ರತಗ್ರಂಥಜಾತಂ ವೇತ್ತೀತೀದಂವಿತ್ । ತಾದೃಶಃ ಪುಮಾನನಿದಂವಿದಾ ತದ್‌ಗ್ರಂಥಜ್ಞಾನರಹಿತೇನ ಪುರುಷೇಣ ಸಹ ನ ಸಮುದ್ದಿಶೇತ್ । ತಸ್ಯ ಪುರತೋ ಗ್ರಂಥಮೇತಂ ನ ಪಠೇದಿತ್ಯರ್ಥಃ। ತಾದೃಶೇನ ಮಹಾವ್ರತಾನಭಿಜ್ಞೇನ ಪುರುಷೇಣ ಸಹೈಕಸ್ಯಾಂ ಪಂಕ್ತೌ ನ ಭುಂಜೀತ ಸಧಮಾದೀ ತೇನ ಸಾರ್ಧಂ ಹರ್ಷಾದಿ ವಿನೋದವಾನಪಿ ನ ಸ್ಯಾತ್ '

ಗ್ರಂಥವನ್ನು ಮರೆಯದಿರುವವನಿಗೆ ತಿರುಗಿ ಇನ್ನೊಂದು ನಿಯಮವನ್ನು ತೋರಿಸುತ್ತಾರೆ. ಮಹಾವ್ರತಗ್ರಂಥಜಾತವನ್ನು ತಿಳಿದವನು ಇದಂವಿತ್. ಈ ಪುರುಷನು ಈ ಗ್ರಂಥಜಾತವನ್ನು ಅರಿಯದವನೆದುರು ಈ ಗ್ರಂಥವನ್ನು ಪಠಿಸಬಾರದು ಮತ್ತು ಅವನೊಡನೆ ಒಂದು ಪಂಕ್ತಿಯಲ್ಲಿ ಕುಳಿತು ಊಟ ಕೂಡಾ ಮಾಡಬಾರದು. ಅವನೊಡನೆ ಹರ್ಷಾದಿ ವಿನೋದವನ್ನೂ ಕೂಡ ಮಾಡಬಾರದು.

**ಅಥಾತಃ ಸ್ವಾಧ್ಯಾಯಧರ್ಮಂ ವ್ಯಾಖ್ಯಾಸ್ಯಾಮ ಉಪ ಪುರಾಣೇ ನಾಽಽಸೀತೇ ಕಕ್ಷೋದಕೇ । ಪೂರ್ವಾಹ್ಣೇ ನ ಸಂಭಿನ್ನಾಸು ಚ್ಛಾಯಾಸ್ವಪರಾಹ್ಣೇ ಸಾಧ್ಯೂಹ್ಯೇ ಮೇಘೇಽಪರ್ತೌ ವರ್ಷೇ ತ್ರಿರಾತ್ರಂ**

ವೈದಿಕೇನಾಧ್ಯಾಯೇನಾಂತರಿಯಾನ್ನಾಸ್ಮಿನ್ಕಥಾಂ ವದೇತ ನಾಸ್ಯ
ರಾತ್ರ್ಯಾ ಚ ನ ಚ ಕೀರ್ತಯಿಷೇತ್ ॥

ಯಥೋಕ್ತಮುಪಾವ್ರತಾಧ್ಯಯನನಿಯಮಪ್ರಸಂಗೇನ ಕೃತ್ಸ್ನವೇದಾಧ್ಯಯನನಿಯಮ-ಮಪಿ ದರ್ಶಯತಿ—ವೇದೈಕದೇಶಸ್ಯ ಮಹಾವ್ರತಸ್ಯ ನಿಯಮಕಥನಾನಂತರ್ಯಮಥಶಬ್ದೇನೋ-ಚ್ಯತೇ । ಏಕದೇಶನಿಯಮೇನ ಕೃತ್ಸ್ನನಿಯಮಸ್ಯ ಬುದ್ಧಿಸ್ಥತ್ವಾದಾನಂತರ್ಯಂ ಯುಕ್ತಂ । ಅತಃ ಶಬ್ದೋ ಹೇತ್ವರ್ಥಃ । ಯಸ್ಮಾನ್ನಿಯಮೇನಾಧೀತಃ ಸ್ವಾಧ್ಯಾಯಃ ಫಲಪ್ರದಸ್ತಸ್ಮಾದಿತ್ಯರ್ಥಃ । ಸ್ವಸ್ವಾಧ್ಯಾಯಃ ಸ್ವಾಧ್ಯಾಯಃ ಸ್ವಶಾಖಾ, ತಸ್ಯ ಧರ್ಮೋ ನಿಷಿದ್ಧಕಾಲಾಧ್ಯಯನವರ್ಜನಂ । ತದ್ಧರ್ಮಂ ವಿಸ್ಪಷ್ಟಂ ಸಾಕಲ್ಯೇನ ಕಥಯಿಷ್ಯಾಮಃ । ಉಪಪುರಾಣ ಇತ್ಯಾದಿವಾಕ್ಯೇನ ಪೌಷ್ಯಾಃ ಪೌರ್ಣಮಾಸ್ಯಾ ಉಪರಿತನಃ ಕಾಲ ಉಪಲಕ್ಷ್ಯತೇ । ತಥಾ ಹಿ—ಪುರಾಣೇ ಕಕ್ಷೋದಕ ಉಪಾಪೀತೇ ಸತಿ ನಾಧಿಯೀತೇತಿ ವಾಕ್ಯಯೋಜನಾ । ಕಕ್ಷಶಬ್ದೇನ ಲತಾದಿಪುಂಜಮಭಿಧೀಯತೇ । ತಸ್ಯ ಮೂಲೇ ವೃಷ್ಟಿಕಾಲಸಂಪಾದಿತಮುದಕಂ ದ್ರವತ್ವರೂಪೇಣ ಕಂಚಿತ್ಕಾಲಮನುವೃತ್ತಂ ಸತ್ಪೌಷಾದಿಮಾಸೇಷು ಪ್ರಾಯೇಣ ಶುಷ್ಯತಿ । ತದಿದಮತ್ರಾಭಿಧೀಯತೇ । ಪುರಾಣೇ ಪೂರ್ವಸಂಪಾದಿತೇ ಕಕ್ಷೋದಕ ಉಪಾಪೀತೇ ಲತಾದಿಮೂಲಸಮೀಪೇ ವಿಲೀನೇ ಶುಷ್ಕೇ ಸತಿ ನಾಧೀಯೀತ ॥

ತಥಾ ಚ ಮನುನಾ ಸ್ಮರ್ಯತೇ—

ಶ್ರಾವಣ್ಯಾಂ ಪೌರ್ಣಮಾಸ್ಯಾಂ ಚ ಚೋಪಾಕೃತ್ಯ ಯಥಾವಿಧಿ ।
ಯುಕ್ತಶ್ಛಂದಾಂಸ್ಯಧೀಯೀತ ಮಾಸಾನ್ವಿಪ್ರೋರ್ಧಪಂಚಮಾನ್ ॥

ಆಪಸ್ತಂಬೋಽಪ್ಯಾಹ–"ಶ್ರಾವಣ್ಯಾಂ ಪೌರ್ಣಮಾಸ್ಯಾಮಧ್ಯಾಯಮುಪಾಕೃತ್ಯ ಮಾಸಂ ಪ್ರದೋಷೇ ನಾಧೀಯೀತ ತೈಷ್ಯಾಂ ಪೌರ್ಣಮಾಸ್ಯಾಂ ರೋಹಿಣ್ಯಾಂ ವಾ ವಿರಮೇದರ್ಧಪಂಚಮಾಂಶ್ಚತುರೋ ಮಾಸಾನಿತ್ಯೇಕೇ" ಇತಿ । ಶ್ರಾವಣೀಪೌಷ್ಯೋಃ ಪೌರ್ಣಮಾಸ್ಯೋರ್ಮಧ್ಯಕಾಲೇಽಪಿ ಪ್ರತಿದಿನಂ ಪೂರ್ವಾಹ್ಣೇ ಚ ಶರೀರವೃಕ್ಷಾದಿಚ್ಛಾಯಾಸು ಸಂಭಿನ್ನಾಸು ಮಿಲಿತಾಸು ಸತೀಷು ನಾಧೀಯೀತ । ಪ್ರಾತಃಕಾಲೇ ಸೂರ್ಯೋದಯೇ ಸತಿ ಚ್ಛಾಯಾಸು ಪೃಥಕ್ಪೃಥಗಭಿವ್ಯಕ್ತಾಸು ಪ್ರಾರಭೇತ । ಸಾಯಂಕಾಲೇ ಸೂರ್ಯಾಸ್ತಮಯಾತ್ಪೂರ್ವಂ ಛಾಯಾಸು ವಿವಿಕ್ತಾಸು ಸತೀಷ್ವೇವಾಧ್ಯಯನಂ ಪರಿತ್ಯಜೇತ್ । ಯದಾ ಮೇಘೋಽಧ್ಯೂಹ್ಯ ಆಧಿಕ್ಯೇನ ಪ್ರಸೃತಃ ಸಾಂದ್ರೋ ಭವತಿ ತದಾ ನಾಧೀಯೀತ। ಅಪರ್ತಾವಿತ್ಯತ್ರಾಪಶಬ್ದೋ ವರ್ಜನಾರ್ಥಃ । ಸ್ವಕೀಯಮೃತುಂ ಶ್ರಾವಣಭಾದ್ರ-ಪದಮಾಸದ್ವಯರೂಪಂ ವರ್ಜಯಿತ್ವಾ ಪ್ರವೃತ್ತೋಽಪರ್ತುಃ । ತಾದೃಶೇ ವರ್ಷೇ ಪ್ರವೃತ್ತೇ ಸತ್ಯಕಾಲವೃಷ್ಟಿಂ ನಿಮಿತ್ತೀಕೃತ್ಯ ತ್ರಿರಾತ್ರಂ ವೈದಿಕೇನಾಧ್ಯಾಯೇನ ವೇದಪಾಠೇನಾಂತರಿಯಾತ್ । ತಿಸೃಷು ರಾತ್ರಿಷು ವೇದಪಾಠಸ್ಯಾಂತರಾಯಃ ಕರ್ತವ್ಯಃ। ವೈದಿಕೇನೇತಿ ವಿಶೇಷಣಾದಾರ್ಷಾಣಾಂ

ವ್ಯಾಕರಣಾದೀನಾಮಂಗಾನಾಮಧ್ಯಯನಮಭ್ಯನುಜ್ಞಾಯತೇ । ಅತ್ರ ಸ್ಮೃತಿಕಾರಾಃ ಆರ್ದ್ರಾದಿಜ್ಯೇಷ್ಠಾಂತಸ್ಯ ತ್ರಯೋದಶನಕ್ಷತ್ರಪರಿಮಿತಸ್ಯ ಕಾಲಸ್ಯ ವೃಷ್ಟಿಕಾಲತ್ವಮಭ್ಯುಪೇತ್ಯ ತತೋಽನ್ಯತ್ರವೃಷ್ಟೌ ಸತ್ಯಾಮಕಾಲವೃಷ್ಟಿನಿಮಿತ್ತಂ ತ್ರಿರಾತ್ರಾಧ್ಯಯನವರ್ಜನಮಿಚ್ಛಂತಿ । ಅಸ್ಮಿನ್ನಧೀಯಮಾನೇ ಸ್ವಾಧ್ಯಾಯೇ ಕಥಾಂ (ನ) ವದೇತ ಲೌಕಿಕವಾರ್ತಾಂ ನ ಕುರ್ಯಾತ್। ಯದ್ವಾಽಸ್ಮಿನ್ಪ್ರಕೃತೇ ಮಹಾವ್ರತಾಧ್ಯಯನಕಾಲೇ ಲೌಕಿಕವಾರ್ತಾಂ ಪರಿತ್ಯಜೇತ್ । ಕಿಂಚಾಸ್ಯ ಮಹಾವ್ರತಸ್ಯ ಪಾಠಂ ರಾತ್ರೌ ನ ಕುರ್ಯಾತ್। ಕಿಂಚ ಮಹಾವ್ರತಾಭಿಜ್ಞೋಽಹಮಿತ್ಯೇವಂ ಜನಮಧ್ಯೇ ಕೀರ್ತಿಮಪಿ ನೇಚ್ಛೇತ್। ಮಹಾವ್ರತಸ್ಯ ಗೋಪ್ಯತ್ವಾತ್ತದ್ವಿಷಯಾಭಿಜ್ಞಾನಮಪಿ ನ ಪ್ರಕಟಯೇತ್ ॥

ಮಹಾವ್ರತಾಧ್ಯಯನ ನಿಯಮಪ್ರಸಂಗದಿಂದ ಈ ಸಕಲ ವೇದಾಧ್ಯಯನ ನಿಯಮವನ್ನು ತೋರಿಸುತ್ತಾರೆ. ವೇದದ ಏಕದೇಶನಿಯಮದಿಂದ ಸಂಪೂರ್ಣನಿಯಮವು ಬುದ್ಧಿಸ್ಥವಾದುದರಿಂದ ಅವನ್ನು ಹೇಳುತ್ತಾರೆ ಎಂದರ್ಥ. ನಿಯಮಪೂರ್ವಕವಾಗಿ ಸ್ವಾಧ್ಯಾಯ ಮಾಡಿದರೇ ಆಗ ಅದು ಫಲದಾಯಕವಾಗುತ್ತದೆ. ತನ್ನ ಅಧ್ಯಾಯವೇ ಸ್ವಾಧ್ಯಾಯ ಅಂದರೆ ಸ್ವಶಾಖಾಧ್ಯಾಯನ ಆದರ ಧರ್ಮವೆಂದರೆ ನಿಷಿದ್ಧ ಕಾಲಾದಿಗಳಲ್ಲಿ ಅಧ್ಯಯನಮಾಡದಿರುವುದು. ಆ ಧರ್ಮವನ್ನೇ ಸ್ಪಷ್ಟವಾಗಿ ಇಲ್ಲಿ ವಿವರಿಸುತ್ತಾರೆ. ಉಪಪುರಾಣೇ ಇತ್ಯಾದಿ ವಾಕ್ಯದಿಂದ ಪುಷ್ಯಮಾಸದ ಪೂರ್ಣಿಮೆಯ ಮೇಲಿನ ಕಾಲವು ಉಪಲಕ್ಷಿತವಾಗಿದೆ. ಪುರಾಣೇ ಕಕ್ಷ್ಣೋದಕ ಉಪಾಪೀತೇ ನಾಧೀಯೀತ ಎಂದು ಒಂದು ವಾಕ್ಯ. ಕಕ್ಷ ಅಂದರೆ ಲತಾ ಸಮುದಾಯ. ಅದರ ಬುಡದಲ್ಲಿ ದ್ರವರೂಪದಿಂದ ಕೆಲವು ಕಾಲದವರೆಗೆ ಸಂಗ್ರಹೀತವಾದ ಮಳೆಯ ನೀರು. ಪುಷ್ಯ ಮಾಸದಲ್ಲಿ ಸಾಮಾನ್ಯವಾಗಿ ಒಣಗುತ್ತದೆ. ಪೂರ್ವ ಸಂಪಾದಿತವಾದ ನೀರು ಒಣಗುವ ಕಾಲದಲ್ಲಿ ಓದಬಾರದು ಎಂದರೆ ಅರ್ಥಾತ್ ಪುಷ್ಯ ಮಾಸದ ಮೇಲೆ ಅಧ್ಯಯನ ಮಾಡಬಾರದು ಎಂದರ್ಥವಾಗುತ್ತದೆ. ಮನುವು ಕೂಡ ಶ್ರಾವಣ ಪೂರ್ಣಿಮೆಯಲ್ಲಿ ಶಾಸ್ತ್ರೋಕ್ತ ರೀತಿಯಿಂದ ಉಪಾಕರ್ಮ ಮಾಡಿಕೊಂಡು ನಿಯಮ ಬದ್ಧನಾಗಿ ಮುಂದಿನ ಐದೂವರೆ ತಿಂಗಳು ಅಧ್ಯಯನ ಮಾಡಬೇಕೆಂದು ಹೇಳಿರುತ್ತಾನೆ. ಆಪಸ್ತಂಬರೂ ಇದೇ ರೀತಿಯಾಗಿ ಹೇಳಿರುತ್ತಾರೆ. ಆದುದರಿಂದ ಶ್ರಾವಣ ಪುಷ್ಯ ಪೂರ್ಣಿಮಿಯ ಮಧ್ಯಕಾಲವೇ ಅಧ್ಯಯನ ಕಾಲವೆಂದು ಸಿದ್ಧವಾಗುತ್ತದೆ. ಅದರಲ್ಲಿಯೂ ಬೆಳಿಗ್ಗೆ ಶರೀರ ವೃಕ್ಷಾದಿ ನೆರಳು ಮಿಶ್ರಿತವಾಗಿರುವಾಗ ಓದಬಾರದು. ಅಂದರೆ ಸೂರ್ಯೋದಯವಾದ ಮೇಲೆ ನೆರಳು ಬೇರೆ ಬೇರೆಯಾಗಿ ತೋರುವಾಗ ಮಾತ್ರ ಓದಬೇಕು. ಎಂದರ್ಥ. ಮತ್ತು ಮೋಡಗಳು ಆಕಾಶದಲ್ಲಿ ಅಧಿಕವಾಗಿ ಪ್ರಸರಿಸಿ ಬೆಳಕು ಕಡಿಮೆಯಾದ ಸಮಯದಲ್ಲಿ ಓದಬಾರದು. ಅಪರ್ತು ಎಂಬಲ್ಲಿ ಅಪ ಎಂಬುದು ವರ್ಜನಾರ್ಥಕವಾಗಿದೆ. ತನ್ನ ಋತು ಅಂದರೆ ಶ್ರಾವಣ ಭಾದ್ರಪದ ಈ ಎರಡು ತಿಂಗಳನ್ನು ಬಿಟ್ಟು ಉಳಿದ ಮಳೆ ಕಾಲದಲ್ಲಿ ಅಂದರೆ ಅಕಾಲ ವೃಷ್ಟಿಯಾದಾಗ ಮೂರು ರಾತ್ರಿ ವೇದ ಪಾಠವನ್ನು ನಿಲ್ಲಿಸಬೇಕು. ವೈದಿಕಾಧ್ಯಯನವೆಂದುದರಿಂದ ವೇದಾಂಗಗಳಾದ ವ್ಯಾಕರಣಾದಿಗಳನ್ನು ಪಠಿಸಬಹುದೆಂದು ಅರ್ಥವಾಗುತ್ತದೆ. ಸ್ಮೃತಿಕಾರರೂ ಕೂಡಾ ಆರ್ದ್ರಾದಿ ಜ್ಯೇಷ್ಠದವರೆಗಿನ ಹದಿಮೂರು ನಕ್ಷತ್ರಗಳ ಕಾಲವನ್ನು ವೃಷ್ಟಿಕಾಲವೆಂದು ಪರಿಗಣಿಸಿ ಇನ್ನು ಬೇರೆ ಕಾಲದಲ್ಲಿ ಅಕಾಲ ವೃಷ್ಟಿಯಾದರೆ ಆಗ ತ್ರಿರಾತ್ರಾಧ್ಯಯನ ನಿಷೇಧವನ್ನು ಹೇಳಿರುತ್ತಾರೆ. ಸ್ವಾಧ್ಯಾಯ ಕಾಲದಲ್ಲಿ ಲೌಕಿಕ ವ್ಯವಹಾರವನ್ನು ಮಾಡಬಾರದು. ಅಥವಾ ಈ ಮಹಾವ್ರತಾಧ್ಯಯನ ಕಾಲದಲ್ಲಿ ಲೌಕಿಕ ವಾರ್ತೆಯನ್ನು ಹೇಳಬಾರದು ಎಂದರ್ಥ. ಈ ಮಹಾವ್ರತ ಪಾಠವನ್ನು ರಾತ್ರಿಯಲ್ಲಿ ಮಾಡಬಾರದು. ತಾನು ಮಹಾವ್ರತವನ್ನು ತಿಳಿದವನೆಂದು ಜನರ ಮಧ್ಯದಲ್ಲಿ ಹೇಳಿಕೊಳ್ಳಬಾರದು. ಈ ಮಹಾವ್ರತವು ಅತಿ ಗೋಪ್ಯವಾದುದರಿಂದ ಇದರ ಯಾವ ವಿಷಯವನ್ನೂ ಪ್ರಕಟಿಸಬಾರದು.

ತದಿತಿ ವಾ ಏತಸ್ಯ ಮಹತೋ ಭೂತಸ್ಯ ನಾಮ ಭವತಿ ಯೋಽಸ್ಯೈ
ತದೇವಂ ನಾಮ ವೇದ ಬ್ರಹ್ಮ ಭವತಿ ಬ್ರಹ್ಮ ಭವತಿ ॥

**ಉಕ್ತನಿಯಮೇನಾಧ್ಯಯನೇ ಫಲಮಾಹ—ಇತಿ ವೈ ಪೂರ್ವೋಕ್ತೇನೈವ ನಿಯಮೇನಾಧೀತಂ ತತ್ ಕೃತ್ಸ್ನಸ್ವಾಧ್ಯಾಯವಾಕ್ಯಂ ಮಹಾವ್ರತವಾಕ್ಯಂ ವೈತಸ್ಯ ಪ್ರಕೃತಸ್ಯ ಕೃತ್ಸ್ನವೇದಪ್ರತಿಪಾದ್ಯಸ್ಯ ಮಹತಃ ಸರ್ವಗತಸ್ಯ ಭೂತಸ್ಯ ನಿತ್ಯಸಿದ್ಧಸ್ಯ ಪರಮಾತ್ಮನೋ ನಾಮ ಭವತಿ । ಕೃತ್ಸ್ನಸ್ಯ ವೇದಸ್ಯ ಪರಮಾತ್ಮಪ್ರತಿಪಾದಕತ್ವಾತ್ತನ್ನಾಮತ್ವಂ ಯುಕ್ತಮ್ । ತತ್ಪ್ರತಿಪಾದಕತ್ವಂ ಚ ಕಠೈರಾಮ್ನಾಯತೇ—"ಸರ್ವೇ ವೇದಾ ಯತ್ಪದಮಾಮನಂತಿ" ಇತಿ । ವಿದಂತ್ಯನೇನ ಪರಮಾತ್ಮಾನಮಿತಿ ವ್ಯುತ್ಪತ್ತ್ಯಾ ವೇದಶಬ್ದೋಽಪಿ ತತ್ಪ್ರತಿಪಾದಕಮೇವ ಗ್ರಂಥಮಾಚಷ್ಟೇ । ಅತಃ ಕೃತ್ಸ್ನವೇದಸ್ಯ ಪರಮಾತ್ಮನಾಮತ್ವೇನಾತ್ಯಂತರಹಸ್ಯಮಂತ್ರರೂಪತ್ವಾದ್ಬಹುವಿಧನಿಯಮಪುರಃಸರಮಧ್ಯಯನಂ ಯುಕ್ತಮ್ । ಯಃ ಪುಮಾನೇತತ್ಸ್ವಾಧ್ಯಾಯವಾಕ್ಯಂ ಸರ್ವಮೇವಮುಕ್ತೇನಾಸ್ಯ ಪರಮಾತ್ಮನೋ ನಾಮೇತಿ ವೇದ ವಿದಿತ್ವಾ ಚ ನಿಯಮೇನೈವಾಧೀತೇ ಸ ಪುಮಾನಧೀತವೇದಮುಖೇನ ಪರಮಾತ್ಮಾನಂ ವಿದಿತ್ವಾ ಸ್ವಸ್ಯ ಬ್ರಹ್ಮತ್ವಾವಧಾರಕಾಜ್ಞಾನನಿವೃತ್ತ್ಯಾ ಸ ಬ್ರಹ್ಮ ಭವತಿ । ವಾಕ್ಯಾಭ್ಯಾಸಸ್ತೃತೀಯಾಧ್ಯಾಯಸಮಾಪ್ತ್ಯರ್ಥಃ ಪಂಚಮಾರಣ್ಯಕಸಮಾಪ್ತ್ಯರ್ಥಃ ಕೃತ್ಸ್ನಾರಣ್ಯಕಕಾಂಡಸಮಾಪ್ತ್ಯರ್ಥಶ್ಚ ॥**

ಪೂರ್ವೋಕ್ತನಿಯಮದಿಂದ ಅಧ್ಯಯನಮಾಡಿದಾಗ ಉಂಟಾಗುವ ಫಲವನ್ನು ವಿವರಿಸುತ್ತಾರೆ. ಪೂರ್ವೋಕ್ತ ನಿಯಮದಿಂದ ಓದಿದ ಸಕಲವೇದಗಳಾಗಲೀ ಅಥವಾ ಮಹಾವ್ರತವಾಕ್ಯವಾಗಲೀ ಇವೆಲ್ಲವೂ ವೇದಪ್ರತಿಪಾದ್ಯನಾದ ಸಕಲ ಭೂತಗಳ ಅಂತರ್ಯಾಮಿಯಾದ ಪರಮಾತ್ಮನ ನಾಮವಾಗುತ್ತವೆ. ಸರ್ವೇವೇದಾ ಯತ್ಪದಮಾಮನಂತಿ ಎಂದು ಕಠದಲ್ಲಿ ಹೇಳಿದಂತೆ ವೇದಗಳೆಲ್ಲವೂ ಪರಮಾತ್ಮನನ್ನೇ ಪ್ರತಿಪಾದಿಸುವುದರಿಂದ ವೇದವು ಈಶ್ವರನ ನಾಮವೆಂಬುದು ಯುಕ್ತವಾಗಿದೆ ವಿದಂತಿ ಅನೇನ ಪರಮಾತ್ಮಾನಂ ಎಂಬ ವ್ಯುತ್ಪತ್ತಿಯಿಂದ ವೇದವೆಂದರೆ ಪರಮಾತ್ಮಪ್ರತಿಪಾದಕವೆಂದರ್ಥ. ಸಕಲ ವೇದವೂ ಪರಮಾತ್ಮನಾಮವಾಗಿ ಅತ್ಯಂತರಹಸ್ಯ ಮಂತ್ರರೂಪವಾಗಿರುವುದರಿಂದ ಅದನ್ನು ನಿಯಮಪೂರ್ವಕವಾಗಿಯೇ ಪಠಿಸಬೇಕು. ಯಾವ ಪುರುಷನು ಈ ವೇದವಾಕ್ಯಗಳನ್ನು ಪರಮಾತ್ಮನಾಮವೆಂದು ತಿಳಿದು ನಿಯಮಪೂರ್ವಕವಾಗಿ ಅಧ್ಯಯನಮಾಡುತ್ತಾನೋ ಅವನು ಅಧ್ಯಯನಮಾಡಿದ ಆ ವೇದಮೂಲಕವಾಗಿಯೇ ಪರಮಾತ್ಮನನ್ನೂ ತಿಳಿದು ತನ್ನಲ್ಲಿರುವ ಅಜ್ಞಾನವನ್ನೂ ಕಳೆದುಕೊಂಡು ಬ್ರಹ್ಮಸ್ವರೂಪವನ್ನೇ ಹೊಂದುತ್ತಾನೆ. ವಾಕ್ಯಾಭ್ಯಾಸವು ಅಧ್ಯಾಯಸಮಾಪ್ತಿಯನ್ನೂ ಐದನೆಯ ಆರಣ್ಯಕದ ಸಮಾಪ್ತಿಯನ್ನೂ ತಿಳಿಸುತ್ತದೆ. ಮತ್ತು ಸಂಪೂರ್ಣ ಆರಣ್ಯಕದಗ್ರಂಥದ ಸಮಾಪ್ತಿಯನ್ನೂ ತಿಳಿಸುತ್ತದೆ.

## ಅಥ ಶಾಂತಿಃ

**ಓಂ ಉದಿತಃ ಶುಕ್ರಿಯಂ ದಧೇ ॥ ತಮಹಮಾತ್ಮನಿದಧೇ । ಅನುಮಾಮೈತ್ವಿಂದ್ರಿಯಮ್ । ಮಯಿ ಶ್ರೀರ್ಮಯಿ ಯಶಃ । ಸರ್ವಃ ಸಪ್ರಾಣಃ ಸಬಲಃ । ಉತ್ತಿಷ್ಠಾಮ್ಯನು ಶ್ರೀಃ । ಉತ್ತಿ-**

ಷ್ಟ್ವನು ಮಾಽಽಯಂತು ದೇವತಾಃ। ಅದಬ್ಧಂ ಚಕ್ಷುರಿಷಿತಂ ಮನಃ। ಸೂರ್ಯೋ ಜ್ಯೋತಿಷಾಂ ಶ್ರೇಷ್ಠೋ ದೀಕ್ಷೇ ಮಾ ಮಾ ಹಿಂಸೀಃ। ತಚ್ಚಕ್ಷುರ್ದೇವಹಿತಂ ಶುಕ್ರಮುಚ್ಚರತ್। ಪಶ್ಯೇಮ ಶರದಃ ಶತಂ ಜೀವೇಮ ಶರದಃ ಶತಮ್। ತ್ವಮಗ್ನೇ ಪ್ರತಪಾ ಅಸಿ ದೇವ ಆ ಮರ್ತ್ಯೇಷ್ವಾ। ತ್ವಂ ಯಜ್ಞೇಷ್ವೀಡ್ಯಃ। ಆವದಂಸ್ತ್ವಂ ಶಕುನೇ ಭದ್ರಮಾವದ ತೂಷ್ಣೀಮಾಸೀನಃ ಸುಮತಿಂ ಚಿಕಿದ್ಧಿ ನಃ। ಯದುತ್ಪತನ್ವದಸಿ ಕರ್ಕರಿರ್ಯಥಾ ಬೃಹದ್ವದೇಮ ವಿದಥೇ ಸುವೀರಾಃ। ಶತಧಾರ-ಮುತ್ಸಮಕ್ಷೀಯಮಾಣಂ ವಿಪಶ್ಚಿತಂ ಪಿತರಂ ವಕ್ತ್ವಾನಾಮ್। ಮೇಳಿಂ ಮದಂತಂ ಪಿತ್ರೋ-ರುಪಸ್ಥೇ ತಂ ರೋದಸೀ ಪಿಪೃತಂ ಸತ್ಯವಾಚಮ್। ವಾಙ್ಮೇ ಮನಸಿ ಪ್ರತಿಷ್ಠಿತಾ ಮನೋ ಮೇ ವಾಚಿ ಪ್ರತಿಷ್ಠಿತಮಾವಿರಾವೀರ್ಮ ಏಧಿ ವೇದಸ್ಯ ಮ ಆಣೀಸ್ಥಃ ಶ್ರುತಂ ಮೇ ಮಾ ಪ್ರಹಾಸೀರ-ನೇನಾಧೀತೇನ। ಅಹೋರಾತ್ರಾನ್ಸಂದಧಾಮ್ಯೃತಂ ವದಿಷ್ಯಾಮಿ ಸತ್ಯಂ ವದಿಷ್ಯಾಮಿ ತನ್ಮಾಮ-ವತು ತದ್ವಕ್ತಾರಮವತ್ವವತು ಮಾಮವತು ವಕ್ತಾರಮವತು ವಕ್ತಾರಮ್ ॥

ಓಂ ಶಾಂತಿಃ ಶಾಂತಿಃ ಶಾಂತಿಃ ॥

ಇತಿ ಶ್ರೀಮತ್ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪಂಚಮಾರಣ್ಯಕೇ
ತೃತೀಯಾಧ್ಯಾಯೇ ತೃತೀಯಃ ಖಂಡಃ

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಬಹ್ವೃಚ ಬ್ರಾಹ್ಮಣಾರಣ್ಯಕಕಾಂಡಭಾಷ್ಯೇ ಪಂಚಮಾರಣ್ಯಕೇ ತೃತೀಯೋಽಧ್ಯಾಯಃ

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪಂಚಮಾರಣ್ಯಕದ
ಮೂರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವು ॥

ಇಲ್ಲಿಗೆ ಸಾಯಣಾಚಾರ್ಯವಿರಚಿತವಾದ ವೇದಾರ್ಥಪ್ರಕಾಶವೆಂಬ
ಐತರೇಯಬ್ರಾಹ್ಮಣಾರಣ್ಯಕಭಾಷ್ಯದ ಪಂಚಮಾರಣ್ಯಕದ
ತೃತೀಯಾಧ್ಯಾಯವು ಸಮಾಪ್ತವಾದುದು

ಇತಿ ಶ್ರೀಮದ್ವಿದ್ಯಾತೀರ್ಥಮಹೇಶ್ವರಪರಾವತಾರಸ್ಯ ವೈದಿಕಮಾರ್ಗಪ್ರವರ್ತಕಸ್ಯ
ಶ್ರೀ ವೀರಬುಕ್ಕಮಹಾರಾಜಸ್ಯಾಜ್ಞಾ ಪರಿಪಾಲಕೇನ ಸಾಯಣಾಮಾತ್ಯೇನ
ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಐತರೇಯಾರಣ್ಯಕಕಾಂಡೇ
ಪಂಚಮಾರಣ್ಯಕಂ ಸಮಾಪ್ತಮ್ ॥

